ವಿಷಯದಲ್ಲಲ್ಲವೆ, ಎಲ್ಲರೂ ಮತ್ತೊಂದು ವಿಷಯವನ್ನು ಅಧ್ಯಾಸಮಾಡುತ್ತಾರೆ? ಆದರೆ 'ನೀನು' ಎಂಬ ಪ್ರತ್ಯಯದ (ಸಂಬಂಧ) ವಿಲ್ಲದ (ಕಾರಣ) ಪ್ರತ್ಯಗಾತ್ಮನು ವಿಷಯನಲ್ಲವೆಂದೂ ಹೇಳುತ್ತಿರುವೆಯಲ್ಲ!

(ಪರಿಹಾರ):—ಹೇಳುತ್ತೇವೆ, (ಕೇಳು). ಒಂದನೆಯದಾಗಿ ಈ (ಆತ್ಮನು) ನಿಯಮದಿಂದ ವಿಷಯನಾಗಿರುವದಿಲ್ಲ. ಏಕೆಂದರೆ ಇವನು ನಾನು ಎಂಬ ಪ್ರತ್ಯಯಕ್ಕೆ ವಿಷಯವಾಗಿರುತ್ತಾನೆ.[1] ಇದಲ್ಲದೆ ಅಪರೋಕ್ಷನಾಗಿರುವದರಿಂದ ಪ್ರತ್ಯಗಾತ್ಮನು ಪ್ರಸಿದ್ಧನಾಗಿರುವನು.[2] ಎದುರಿಗಿರುವ ವಿಷಯದಲ್ಲಿಯೇ ಮತ್ತೊಂದು ವಿಷಯವನ್ನು ಅಧ್ಯಾಸಮಾಡಬೇಕು ಎಂದೇ ನಿಯಮವು ಇರುವದೂ ಇಲ್ಲ ಆಕಾಶವು ಅಪ್ರತ್ಯಕ್ಷವಾಗಿದ್ದರೂ ಅವಿವೇಕಿಗಳು (ಅದರಲ್ಲಿ) ತಲವು ಮಲಿನವಾಗಿರುವದು ಮುಂತಾದ (ಧರ್ಮ)ವನ್ನು ಅಧ್ಯಾಸಮಾಡುತ್ತಾರಲ್ಲವೆ? ಇದರಂತೆ ಪ್ರತ್ಯಗಾತ್ಮನಲ್ಲಿಯೂ ಅನಾತ್ಮವನ್ನು ಅಧ್ಯಾಸಮಾಡುತ್ತಾರೆಂಬುದು ವಿರುದ್ಧವಲ್ಲ.

## ವಿದ್ಯಾವಿದ್ಯೆಗಳ ವಿಂಗಡ

(ಭಾಷ್ಯ)

೪. ತಮೇತಮ್ ಏವಂಲಕ್ಷಣಮ್ ಅಧ್ಯಾಸಂ ಪಣ್ಡಿತಾ ಅವಿದ್ಯೇತಿ ಮನ್ಯನ್ತೇ। ತದ್ವಿವೇಕೇನ ಚ ವಸ್ತುಸ್ವರೂಪಾವಧಾರಣಂ ವಿದ್ಯಾಮ್ ಆಹುಃ। ತತ್ರ ಏವಂ ಸತಿ ಯತ್ರ ಯದಧ್ಯಾಸಃ ತತ್ಕೃತೇನ ದೋಷೇಣ ಗುಣೇನ ವಾ ಅಣುಮಾತ್ರೇಣಾಪಿ ಸ ನ ಸಂಬಧ್ಯತೇ ॥

(ಭಾಷ್ಯಾರ್ಥ)

ಇಂಥ ಲಕ್ಷಣವುಳ್ಳ ಈ ಅಧ್ಯಾಸವನ್ನು ಪಂಡಿತರು[3] **ಅವಿದ್ಯೆ** ಎನ್ನುತ್ತಾರೆ;

---

1 ವ್ಯವಹಾರದಲ್ಲಿ ಆತ್ಮನು ನಾನೆಂಬ ಅರಿವಿಗೆ ಗೋಚರನಾಗಿಯೇ ತೋರುತ್ತಾನೆ ಎಂದರ್ಥ. ಆತ್ಮನು ಯಾವಾಗಲೂ ಹೀಗೆಯೇ ತೋರಬೇಕೆಂಬ ನಿಯಮವಿಲ್ಲ; ಇದು ಅವನ ಸ್ವರೂಪವಲ್ಲ.

2 ಅಧಿಷ್ಠಾನವೂ ಆರೋಪಿತವೂ ಪ್ರಸಿದ್ಧವಾಗಿದ್ದರೆ ಅಧ್ಯಾಸವಾಗುವದಕ್ಕೆ ಸಾಕು; ಅವೆರಡೂ ವಿಷಯವಾಗಿರಬೇಕು, ಪ್ರತ್ಯಕ್ಷವಾಗಿರಬೇಕು-ಎಂಬ ನಿರ್ಬಂಧವೇನೂ ಇಲ್ಲ ಎಂದು ಭಾವ. ಆತ್ಮನು ಪ್ರಸಿದ್ಧನಾಗಿರುತ್ತಾನೆ ಎಂಬ ಭಾಷ್ಯದ ಅಭಿಪ್ರಾಯವಿದು. ಜ್ಞೇಯವನ್ನು ಜ್ಞಾತೃವಿನಲ್ಲಿ ಅಧ್ಯಾಸಮಾಡಬಹುದೆ?-ಎಂಬ ಆಕ್ಷೇಪಕ್ಕೆ ಉತ್ತರವನ್ನು ಗೀ ೧೩ನೆಯ ಅಧ್ಯಾಯ ಭಾ. ಭಾ. ೨೧೭ರಲ್ಲಿ ಹೇಳಿದೆ. ಅವಿಷಯದಲ್ಲಿ ಅಧ್ಯಾಸ ಹೇಗೆ?–ಎಂಬುದರ ಜೊತೆಗೆ ಅವಿಷಯವನ್ನು ಅಧ್ಯಾಸಮಾಡಬಹುದೆ?–ಎಂದೂ ಆಕ್ಷೇಪವನ್ನು ಕಲ್ಪಿಸಬೇಕು.

3 ತತ್ತ್ವಜ್ಞಾನಿಗಳು.

ಅದನ್ನು ವಿವೇಚನೆಮಾಡಿ[1] ವಸ್ತುಸ್ವರೂಪವನ್ನು ಗೊತ್ತುಪಡಿಸುವದನ್ನು ವಿದ್ಯೆ ಎಂದು ಕರೆಯುತ್ತಾರೆ.[2] ಇದು ಹೀಗಿರುವದರಿಂದ ಯಾವದರಲ್ಲಿ ಯಾವದನ್ನು ಅಧ್ಯಾಸಮಾಡುತ್ತಾರೋ ಅದರಿಂದಾದ ದೋಷವಾಗಲಿ ಗುಣವಾಗಲಿ ಅದಕ್ಕೆ ಎಳ್ಳಷ್ಟೂ ಸಂಬಂಧಿಸಿರುವದಿಲ್ಲ[3]

## ವ್ಯವಹಾರವು ಅವಿದ್ಯಾಕವೆಂಬುದು ಹೇಗೆ?

(ಭಾಷ್ಯ)

೫. ತಮ್ ಏತಮ್ ಅವಿದ್ಯಾಖ್ಯಮ್ ಆತ್ಮಾನಾತ್ಮನೋರಿತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣಪ್ರಮೇಯವ್ಯವಹಾರಾ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ । ಸರ್ವಾಣಿ ಚ ಶಾಸ್ತ್ರಾಣಿ ವಿಧಿಪ್ರತಿಷೇಧಮೋಕ್ಷಪರಾಣಿ । ಕಥಂ ಪುನಃ ಅವಿದ್ಯಾವದ್ವಿಷಯಾಣಿ ಪ್ರತ್ಯಕ್ಷಾದೀನಿ ಪ್ರಮಾಣಾನಿ ಶಾಸ್ತ್ರಾಣಿ ಚ ಇತಿ ? ಉಚ್ಯತೇ। ದೇಹೇನ್ದ್ರಿಯಾದಿಷು ಅಹಂಮಮಾಭಿಮಾನರಹಿತಸ್ಯ ಪ್ರಮಾತೃತ್ವಾನುಪಪತ್ತೌ ಪ್ರಮಾಣಪ್ರವೃತ್ತ್ಯನುಪಪತ್ತೇಃ। ನ ಹಿ ಇನ್ದ್ರಿಯಾಣಿ ಅನುಪಾದಾಯ ಪ್ರತ್ಯಕ್ಷಾದಿ ವ್ಯವಹಾರಃ ಸಮ್ಭವತಿ । ನ ಚ ಅಧಿಷ್ಠಾನಮನ್ತರೇಣ ಇನ್ದ್ರಿಯಾಣಾಂ ವ್ಯವಹಾರಃ ಸಂಭವತಿ। ನ ಚ ಅನಧ್ಯಸ್ತಾತ್ಮಭಾವೇನ ದೇಹೇನ ಕಶ್ಚಿತ್ ವ್ಯಾಪ್ರಿಯತೇ । ನ ಚ ಏತಸ್ಮಿನ್ ಸರ್ವಸ್ಮಿನ್ ಅಸತಿ ಅಸಙ್ಗಸ್ಯ ಆತ್ಮನಃ ಪ್ರಮಾತೃತ್ವಮ್ ಉಪಪದ್ಯತೇ । ನ ಚ ಪ್ರಮಾತೃತ್ವಮ್ ಅನ್ತರೇಣ ಪ್ರಮಾಣಪ್ರವೃತ್ತಿರಸ್ತಿ । ತಸ್ಮಾತ್ ಅವಿದ್ಯಾವದ್ವಿಷಯಾಣ್ಯೇವ ಪ್ರತ್ಯಕ್ಷಾದೀನಿ ಪ್ರಮಾಣಾನಿ ಶಾಸ್ತ್ರಾಣಿ ಚ ॥

(ಭಾಷ್ಯಾರ್ಥ)

**ಆ ಈ ಅವಿದ್ಯೆಯೆಂಬ ಆತ್ಮಾನಾತ್ಮಗಳ ಪರಸ್ಪರಾಧ್ಯಾಸವನ್ನು ಮೂಲವಾಗಿಟ್ಟುಕೊಂಡು ಎಲ್ಲಾ ಲೌಕಿಕಪ್ರಮಾಣಪ್ರಮೇಯವ್ಯವಹಾರಗಳೂ**

---

1 ಇದು ಸರಿಯಾದ ತಿಳಿವಳಿಕೆಯಲ್ಲವೆಂದು ವಿವೇಚನೆಮಾಡಿ; ಅಥವಾ ಅದರಿಂದ ವಿಂಗಡಿಸಿ, ಆತ್ಮನನ್ನೂ ಅನಾತ್ಮವನ್ನೂ ವಿಂಗಡಿಸಿ ಅರಿತುಕೊಂಡು ಎಂಬರ್ಥ. ತತ್ ಎಂಬ ಮಾತಿಗೆ ಬುದ್ಧಿಸ್ಥವಾದ ಆತ್ಮಾನಾತ್ಮಗಳೆಂದು ಅರ್ಥವನ್ನು ಮಾಡಿದರೆ ಆತ್ಮನನ್ನು ಸತ್ಯವೆಂದೂ ಅನಾತ್ಮನನ್ನು ಮಿಥ್ಯೆಯೆಂದೂ ವಿವೇಚಿಸಿ ಎಂದೂ ಅಭಿಪ್ರಾಯವನ್ನು ಕಲ್ಪಿಸಬಹುದು. ಗೀ. ಭಾ. ೧೩–೨೬ (ಭಾ. ಭಾ ೨೮೩)ನ್ನು ನೋಡಿ.

2 ವಿದ್ಯೆ, ಅವಿದ್ಯೆ-ಇವುಗಳ ವಿಷಯಕ್ಕೆ ಪೀಠಿಕೆಯನ್ನು ನೋಡಿ.

3 ಅಧ್ಯಸ್ತವಾದದ್ದು ಕಲ್ಪನೆಯಿಂದ ತೋರುವ ಹುಸಿತೋರಿಕೆಯಾದ್ದರಿಂದ ಅಧ್ಯಸ್ತಾತ್ಮನ ಗುಣವು ಅನಾತ್ಮಕ್ಕೆ ಬರುವದಿಲ್ಲ, ಅಧ್ಯಸ್ತವಾದ ಅನಾತ್ಮದ ದೋಷವು ಆತ್ಮನಿಗೂ ಅಂಟುವದಿಲ್ಲ-ಎಂದರ್ಥ.

**ವೈದಿಕ(ಪ್ರಮಾಣಪ್ರಮೇಯವ್ಯವಹಾರಗಳೂ)[1] ಹೊರಟಿರುತ್ತವೆ. ವಿಧಿ ಪ್ರತಿಷೇಧ(ಪರವಾಗಿಯೂ) ಮೋಕ್ಷಪರವಾಗಿಯೂ ಇರುವ ಸಕಲ ಶಾಸ್ತ್ರಗಳೂ[2] (ಈ ಅವಿದ್ಯೆಯೆಂಬ ಅಧ್ಯಾಸವನ್ನು ಮೂಲವಾಗಿಟ್ಟುಕೊಂಡೇ ಹೊರಟಿರುತ್ತವೆ.**

(ಆಕ್ಷೇಪ)— ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳೂ ಶಾಸ್ತ್ರಗಳೂ **ಅವಿದ್ಯಾವಂತರ ವಿಷಯುವಾಗಿರುವವೆಂಬುದು ಹೇಗೆ?**

(ಪರಿಹಾರ)!— ಹೇಳುತ್ತೇವೆ, (ಕೇಳು). ಏಕೆಂದರೆ **ದೇಹ, ಇಂದ್ರಿಯಗಳು-ಮುಂತಾದವುಗಳಲ್ಲಿ 'ನಾನು', 'ನನ್ನದು'-ಎಂಬ ಅಭಿಮಾನವಿಲ್ಲದಾತನು ಪ್ರಮಾತೃವಾಗಲಾರನಾದ್ದರಿಂದ[3] (ಅವನ) ಪ್ರಮಾಣಗಳು ಪ್ರವರ್ತಿಸುವದು ಆಗಲಾರದು.** ಹೇಗೆಂದರೆ, ಇಂದ್ರಿಯಗಳನ್ನಿಟ್ಟುಕೊಳ್ಳದೆ ಪ್ರತ್ಯಕ್ಷವೇ ಮುಂತಾದವುಗಳ[4] ವ್ಯವಹಾರವು ಆಗುವಂತಿಲ್ಲ. (ತಮಗೆ) ಅಧಿಷ್ಠಾನವಾದ[5] (ದೇಹ)ವಿಲ್ಲದೆ ಇಂದ್ರಿಯಗಳ ವ್ಯಾಪಾರವೂ ಆಗುವಂತಿಲ್ಲ, ಮತ್ತು ತಾನು ಎಂದು ಅಧ್ಯಾಸಮಾಡಿಕೊಳ್ಳದೆ ಇರುವ ದೇಹದಿಂದ ಯಾವನೂ ಕೆಲಸಮಾಡಲಾರನು. ಇದಿಷ್ಟೂ ಆಗದಿದ್ದರೆ ಅಸಂಗನಾದ ಆತ್ಮನಿಗೆ ಪ್ರಮಾತೃತ್ವವು ಹೊಂದುವದೂ ಇಲ್ಲ. ಪ್ರಮಾತೃತ್ವವಿಲ್ಲದೆ ಪ್ರಮಾಣಗಳು ಪ್ರವರ್ತಿಸುವ ಹಾಗೂ ಇಲ್ಲ. ಆದ್ದರಿಂದ ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳೂ ಶಾಸ್ತ್ರಗಳೂ ಅವಿದ್ಯಾವಂತರ ವಿಷಯುವಾದವುಗಳೇ.

---

1 ಇದು ಪ್ರಮಾಣ, ಇದರಿಂದ ಇದನ್ನು ಅರಿಯಬೇಕು-ಎಂಬ ವ್ಯವಹಾರವು ಲೌಕಿಕವಾಗಲಿ ವೈದಿಕವಾಗಲಿ ಅವಿದ್ಯಾಪುರಸ್ಸರವಾಗಿಯೇ ಆಗುತ್ತವೆ ಎಂದರ್ಥ. ಗೀ. ಭಾ. ೨-೬೯, ಛಾ ಭಾ. ೧೨೬ನ್ನೂ ಮಾಂ. ಕಾ. ಭಾ. ೨-೩೨ನ್ನೂ ನೋಡಿ.

2 ಇದನ್ನು ಮಾಡಬೇಕು, ಇದನ್ನು ಪಡೆಯಬೇಕು, ಇದನ್ನು ಮಾಡಬಾರದು, ಮಾಡಿದರೆ ದುಃಖವಾಗುತ್ತದೆ-ಎಂಬ ಕರ್ಮಕಾಂಡದ ಶಾಸ್ತ್ರವೂ ಜ್ಞಾನವನ್ನು ಸಂಪಾದಿಸಿ ಬ್ರಹ್ಮವನ್ನು ಸೇರಿ ಮುಕ್ತನಾಗಬೇಕು ಎಂದು ಉಪದೇಶಿಸುವ ಜ್ಞಾನಕಾಂಡರೂಪವಾದ ಶಾಸ್ತ್ರವೂ ಅವಿದ್ಯೆಯನ್ನಿಟ್ಟುಕೊಂಡೇ ಹೊರಟಿರುವವು.

3 ಪ್ರಮಾತೃ ಎಂದರೇ ಎಚ್ಚರದಲ್ಲಿ ಕಾಣುವ ದೇಹವು ತಾನು, ಇಂದ್ರಿಯಗಳು ತನ್ನವು ಎಂಬ ಅಭಿಮಾನವಿರುವವನು. ಇದನ್ನು ಮುಂದಿನ ವಾಕ್ಯಗಳಲ್ಲಿ ವಿವರಿಸಿದೆ.

4 ಚಾರ್ವಾಕರು ಪ್ರತ್ಯಕ್ಷಮಾತ್ರವನ್ನೂ, ಬೌದ್ಧರು ಪ್ರತ್ಯಕ್ಷಾನುಮಾನಗಳನ್ನೂ, ನೈಯಾಯಿಕರು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ-ಎಂಬಿವನ್ನೂ ಪೂರ್ವಮೀಮಾಂಸಕರು ಇವುಗಳ ಜೊತೆಗೆ ಅರ್ಥಾಪತ್ತಿ, ಅನುಪಲಬ್ಧಿ-ಎಂಬಿವುಗಳನ್ನೂ ಪ್ರಮಾಣವೆಂದು ಒಪ್ಪುತ್ತಾರೆ. ವೇದಾಂತಿಗಳು ಇವೆಲ್ಲವೂ ಅವಿದ್ಯಾಪುರಃಸರವೆನ್ನುತ್ತಾರೆ.

5 ಆಶ್ರಯವಾದ ಎಂದರ್ಥ.

# ಲೌಕಿಕವ್ಯವಹಾರವು ಅವಿದ್ಯಕವೆಂಬುದಕ್ಕೆ ವಿಶೇಷಯುಕ್ತಿ

(ಭಾಷ್ಯ)

೬. ಪಶ್ವಾದಿಭಿಶ್ಚ ಅವಿಶೇಷಾತ್। ಯಥಾ ಹಿ ಪಶ್ವಾದಯಃ ಶಬ್ದಾದಿಭಿಃ ಶ್ರೋತ್ರಾದೀನಾಂ ಸಂಬನ್ಧೇ ಸತಿ ಶಬ್ದಾದಿವಿಜ್ಞಾನೇ ಪ್ರತಿಕೂಲೇ ಜಾತೇ ತತೋ ನಿವರ್ತನ್ತೇ, ಅನುಕೂಲೇ ಚ ಪ್ರವರ್ತನ್ತೇ । ಯಥಾ ದಣ್ಡೋದ್ಯತಕರಂ ಪುರುಷಮ್ ಅಭಿಮುಖಮ್ ಉಪಲಭ್ಯ ಮಾಂ ಹನ್ತುಮ್ ಅಯಮ್ ಇಚ್ಛತಿ ಇತಿ ಪಲಾಯಿತುಮ್ ಆರಭನ್ತೇ । ಹರಿತತೃಣಪೂರ್ಣಪಾಣಿಮ್ ಉಪಲಭ್ಯ ತಂ ಪ್ರತಿ ಅಭಿಮುಖೀಭವನ್ತಿ । ಏವಂ ಪುರುಷಾ ಅಪಿ ವ್ಯುತ್ಪನ್ನಚಿತ್ತಾಃ ಕ್ರೂರದೃಷ್ಟೀನ್ ಖಡ್ಗೋದ್ಯತಕರಾನ್ ಬಲವತಃ ಉಪಲಭ್ಯ ತತೋ ನಿವರ್ತನ್ತೇ, ತದ್ವಿಪರೀತಾನ್ ಪ್ರತಿ ಪ್ರವರ್ತನ್ತೇ। ಅತಃ ಸಮಾನಃ ಪಶ್ವಾದಿಭಿಃ ಪುರುಷಾಣಾಂ ಪ್ರಮಾಣಪ್ರಮೇಯ ವ್ಯವಹಾರಃ।ಪಶ್ವಾದೀನಾಂ ಚ ಪ್ರಸಿದ್ಧಃ ಅವಿವೇಕಪುರಃಸರಃ ಪ್ರತ್ಯಕ್ಷಾದಿವ್ಯವಹಾರಃ । ತತ್ಸಾಮಾನ್ಯದರ್ಶನಾತ್ ವ್ಯುತ್ಪತ್ತಿಮತಾಮಪಿ ಪುರುಷಾಣಾಂ ಪ್ರತ್ಯಕ್ಷಾದಿವ್ಯವ ಹಾರಃ ತತ್ಕಾಲಃ ಸಮಾನಃ ಇತಿ ನಿಶ್ಚೀಯತೇ ॥

(ಭಾಷ್ಯಾರ್ಥ)

ಪಶ್ವಾದಿಗಳಿಗಿಂತ (ಯಾವ) ವಿಶೇಷವೂ ಇಲ್ಲದ್ದರಿಂದಲೂ (ಹೀಗೆಂದು ತಿಳಿಯ ಬೇಕಾಗಿದೆ). ಪಶುಗಳೇ ಮುಂತಾದ (ಪ್ರಾಣಿಗಳು) ಶ್ರೋತ್ರವೇ ಮುಂತಾದ (ಇಂದ್ರಿಯಗಳಿಗೆ) ಶಬ್ದವೇ ಮುಂತಾದ (ವಿಷಯುಗಳ) ಸಂಬಂಧವುಂಟಾದಾಗ ಶಬ್ದಾದಿ ಗಳ ಅರಿವು (ತಮಗೆ) ಪ್ರತಿಕೂಲವಾದರೆ ಅತ್ತಕಡೆಯಿಂದ ಹಿಂಜರಿಯುತ್ತವೆ, ಅನುಕೂಲವಾದರೆ ಮುನ್ನಡೆಯುತ್ತವೆ. ಹೇಗೆಂದರೆ, (ಒಬ್ಬ) ಮನುಷ್ಯನು ದೊಣ್ಣೆ ಯನ್ನು ಕೈಯಲ್ಲಿ ಎತ್ತಿ ಹಿಡಿದುಕೊಂಡು (ತಮ್ಮ) ಎದುರಿಗೆ ಬರುವದನ್ನು ಕಂಡರೆ ಇವನು ನನ್ನನ್ನು ಹೊಡೆಯಬೇಕೆಂದಿರುವನು ಎಂದು ಓಡುವದಕ್ಕೆ ಮೊದಲು ಮಾಡುತ್ತವೆ, ಹಸುರು ಹುಲ್ಲನ್ನು ಕೈತುಂಬ ಹಿಡಿದುಕೊಂಡಿರುವವನನ್ನು ಕಂಡರೆ ಅವನ ಕಡೆಗೆ ಮುನ್ನಡೆಯುತ್ತವೆ ಹೀಗೆಯೇ ವಿವೇಕ(ಯುತವಾದ) ಚಿತ್ತವುಳ್ಳ ಪುರುಷರು ಕೂಡ ಕ್ರೂರವಾದ ಕಣ್ಣಿನಿಂದೊಡಗೂಡಿ ಕೂಗುತ್ತಾ ಕತ್ತಿಯನ್ನು ಕೈಯಲ್ಲಿ ಎತ್ತಿ ಹಿಡಿದುಕೊಂಡಿರುವ ಬಲಿಷ್ಠರನ್ನು ಕಂಡರೆ ಆಕಡೆಯಿಂದ ಹಿಂಜರಿಯು ತ್ತಾರೆ; ಹಾಗಿಲ್ಲದೆ (ಸೌಮ್ಯವಾಗಿ ಒಳ್ಳೆಯಮಾತನ್ನಾಡುತ್ತಿರುವವರನ್ನು ಕಂಡರೆ) ಅವರ ಕಡೆಗೆ ಮುನ್ನಡೆಯುತ್ತಾರೆ. ಆದ್ದರಿಂದ ಪಶ್ವಾದಿಗಳಿಗೂ ಮನುಷ್ಯರಿಗೂ

ಪ್ರಮಾಣಪ್ರಮೇಯವ್ಯವಹಾರವು[1] ಸಮಾನವಾಗಿರುತ್ತದೆ (ಎಂದಾಯಿತು). ಪಶ್ವಾದಿಗಳಿಗಂತೂ ಪ್ರತ್ಯಕ್ಷವೇ ಮುಂತಾದವುಗಳ ವ್ಯವಹಾರವು ಅವಿವೇಕದಿಂದಲೇ (ಆಗುವದೆಂಬುದು) ಪ್ರಸಿದ್ಧವಾಗಿರುತ್ತದೆ. ಅದಕ್ಕೆ ಸಮಾನವಾಗಿರುವದು ಕಂಡುಬರುವದರಿಂದ ವಿವೇಕವುಳ್ಳ ಪುರುಷರ ಪ್ರತ್ಯಕ್ಷಾದಿವ್ಯವಹಾರವೂ ಆ ಕಾಲಕ್ಕೆ ಅದರಂತೆಯೇ[2] (ಇರುವದೆಂದು) ನಿಶ್ಚಯವಾಗುತ್ತದೆ.

## ಶಾಸ್ತ್ರೀಯವ್ಯವಹಾರವೂ ಅವಿದ್ಯಕವೆಂಬುದಕ್ಕೆ ಕಾರಣ

(ಭಾಷ್ಯ)

೭. ಶಾಸ್ತ್ರೀಯೇ ತು ವ್ಯವಹಾರೇ ಯದ್ಯಪಿ ಬುದ್ಧಿಪೂರ್ವಕಾರೀ ನ ಅವಿದಿತ್ವಾ ಆತ್ಮನಃ ಪರಲೋಕಸಮ್ಬನ್ಧಮ್ ಅಧಿಕ್ರಿಯತೇ, ತಥಾಪಿ ನ ವೇದಾನ್ತವೇದ್ಯಮ್ ಅಶನಾಯಾದ್ಯತೀತಮ್ ಅಪೇತಬ್ರಹ್ಮಕ್ಷತ್ರಾದಿಭೇದಮ್ ಅಸಂಸಾರಿ ಆತ್ಮತತ್ತ್ವಮ್ ಅಧಿಕಾರೇ ಅಪೇಕ್ಷ್ಯತೇ । ಅನುಪಯೋಗಾತ್, ಅಧಿಕಾರವಿರೋಧಾಚ್ಚ । ಪ್ರಾಕ್ಚ ತಥಾಭೂತಾತ್ಮವಿಜ್ಞಾನಾತ್ ಪ್ರವರ್ತಮಾನಂ ಶಾಸ್ತ್ರಮ್ ಅವಿದ್ಯಾವದ್ವಿಷಯತ್ವಂ ನಾತಿವರ್ತತೇ । ತಥಾ ಹಿ "ಬ್ರಾಹ್ಮಣೋ ಯಜೇತ" (?) ಇತ್ಯಾದೀನಿ ಶಾಸ್ತ್ರಾಣಿ ಆತ್ಮನಿ ವರ್ಣಾಶ್ರಮವಯೋಽವಸ್ಥಾದಿವಿಶೇಷಾಧ್ಯಾಸಮ್ ಆಶ್ರಿತ್ಯ ಪ್ರವರ್ತನ್ತೇ ॥

(ಭಾಷ್ಯಾರ್ಥ)

(ಇನ್ನು) ಶಾಸ್ತ್ರದ ವ್ಯವಹಾರದಲ್ಲಿಯೋ ಎಂದರೆ, ಬುದ್ಧಿಪೂರ್ವಕವಾಗಿ (ಕರ್ಮ)ವನ್ನು ಮಾಡುವಾತನು ತನಗೆ ಪರಲೋಕದ ಸಂಬಂಧ(ವಿದೆ ಎಂಬು)ದನ್ನು ತಿಳಿದುಕೊಳ್ಳದೆ (ಕರ್ಮಕ್ಕೆ) ಅಧಿಕಾರಿಯಾಗಲಾರನೆಂಬುದು ನಿಜ, ಆದರೂ

---

1 ಭಾ. ಭಾ. ೧ರಲ್ಲಿ ಹೇಳಿರುವ ಲೋಕವ್ಯವಹಾರವು ಈ ಪ್ರಮಾಣಪ್ರಮೇಯವ್ಯವಹಾರವೇ ಆಗಿರುತ್ತದೆ. ಲೋಕವ್ಯವಹಾರವೆಂದರೆ ಮನುಷ್ಯನೆಂಬ ಅಭಿಮಾನವೆಂದು ವ್ಯಾಖ್ಯಾನಕಾರರು ಮಾಡಿರುವ ಅರ್ಥಕ್ಕೆ ಭಾಷ್ಯದಲ್ಲಿ ಆಧಾರವಿಲ್ಲ.

2 ವ್ಯವಹಾರದ ಕಾಲಕ್ಕೆ ಪಶುಗಳಂತೆಯೇ ಬೇಕಾದದ್ದರ ಕಡೆಗೆ ಮುನ್ನಡೆಯುವದು, ಬೇಡದ್ದನ್ನು ಬಿಟ್ಟು ಹಿಂಜರಿಯುವದು–ಇವನ್ನೇ ಅವರೂ ಅನುಸರಿಸುತ್ತಾರೆ ಆಮೇಲೆ 'ನಾವು ಭ್ರಾಂತರಾಗಿದ್ದೆವು' ಎಂದು ತಿಳಿಯುತ್ತಾರಾದವರೂ ವ್ಯವಹಾರವು ಅವಿದ್ಯಕವೆಂಬುದಕ್ಕೆ ಅದು ಸಾಧಕವಾಗಿಯೇ ಇರುತ್ತದೆ.

ವೇದಾಂತವೇದ್ಯವಾಗಿಯೂ[1] ಹಸಿವು ಮುಂತಾದವುಗಳನ್ನು ಮೀರಿರುವದಾಗಿಯೂ,[2] ಬ್ರಾಹ್ಮಣ್ಯ, ಕ್ಷತ್ರಿಯತ್ವ—ಮುಂತಾದ ಭೇದಗಳು[3] ಇಲ್ಲದ್ದಾಗಿಯೂ ಸಂಸಾರಿಯಲ್ಲದ್ದಾಗಿಯೂ ಇರುವ ಆತ್ಮತತ್ತ್ವವನ್ನು (ಅರಿತಿರುವದು ಆ ಕರ್ಮವ್ಯವಹಾರದ) ಅಧಿಕಾರಕ್ಕೆ ಬೇಕಾಗಿರುವದಿಲ್ಲ. ಏಕೆಂದರೆ (ಆ ಜ್ಞಾನದಿಂದ ಕರ್ಮಿಗೆ) ಉಪಯೋಗವೂ ಇರುವದಿಲ್ಲ, (ಕರ್ಮದ) ಅಧಿಕಾರಕ್ಕೆ (ಅದು) ವಿರುದ್ಧವೂ ಆಗಿರುತ್ತದೆ.[4] ಅಂಥ ಆತ್ಮವಿಜ್ಞಾನವು (ಉಂಟಾಗುವದಕ್ಕೆ) ಮೊದಲೇ ಹೊರಟಿರುವ ಶಾಸ್ತ್ರವು ಅಜ್ಞಾನಿಯ ವಿಷಯವಾಗದೆ ಹೋಗಲಾರದು.[5] ಆದ್ದರಿಂದಲೇ "ಬ್ರಾಹ್ಮಣನು ಯಾಗಮಾಡಬೇಕು" (?) ಎಂಬುದೇ ಮುಂತಾದ ಶಾಸ್ತ್ರಗಳು ಆತ್ಮನಲ್ಲಿ ಆಯಾ ವರ್ಣ, ಆಶ್ರಮ, ವಯಸ್ಸು, ಅವಸ್ಥೆ-ಮುಂತಾದವುಗಳ ಅಧ್ಯಾಸವನ್ನು ಆಶ್ರಯಿಸಿಕೊಂಡು ಹೊರಟಿರುತ್ತವೆ.

## ಅಧ್ಯಾಸದ ಪ್ರಕಾರಗಳು

೮. ಅಧ್ಯಾಸೋ ನಾಮ ಅತಸ್ಮಿನ್ ತದ್ಬುದ್ಧಿಃ ಇತಿ ಅವೋಚಾಮ । ತದ್ಯಥಾ-ಪುತ್ರಭಾರ್ಯಾದಿಷು ವಿಕಲೇಷು ಸಕಲೇಷು ವಾ ಅಹಮೇವ ವಿಕಲಃ ಸಕಲೋ ವಾ ಇತಿ ಬಾಹ್ಯಧರ್ಮಾನ್ ಆತ್ಮನಿ ಅಧ್ಯಸ್ಯತಿ । ತಥಾ ದೇಹಧರ್ಮಾನ್-

---

1 ಉಪನಿಷತ್ತುಗಳಿಂದ ಮಾತ್ರವೇ ತಿಳಿದುಬರುವದಾಗಿಯೂ. ಬೃ. ೩-೯-೨೬.

2 ಹಸಿವು, ಬಾಯಾರಿಕೆ, ಮುಪ್ಪು, ಸಾವು, ಶೋಕ, ಮೋಹ-ಇವುಗಳ ಸಂಬಂಧವಿಲ್ಲದ್ದಾಗಿಯೂ. ಬೃ. ೩-೫-೧.

3 ಬ್ರಹ್ಮ, ಕ್ಷತ್ರ, ಲೋಕ, ದೇವತೆಗಳು, ಭೂತಗಳು, ಮುಂತಾದವು. ಬೃ. ೨-೪-೬

4 ನಾನು ಅಕರ್ತೃ, ಬ್ರಹ್ಮಕ್ಷತ್ರಾದಿಭೇದಗಳಿಲ್ಲದವನು, ಹಸಿವು ಮುಂತಾದ ಸಂಸಾರಿಧರ್ಮಗಳಿಲ್ಲದವನು ಎಂಬ ತಿಳಿವಳಿಕೆಯು ಯಾವ ಕರ್ಮಕ್ಕೂ ಬೇಕಾಗುವದಿಲ್ಲ, ಎಲ್ಲಾ ಕರ್ಮಕ್ಕೂ ಕರ್ತೃತ್ವಾದಿಗಳು ಬೇಕಾಗಿರುವದರಿಂದ ಇದು ಕರ್ಮದ ಅಧಿಕಾರಕ್ಕೆ ವಿರುದ್ಧವಾದದ್ದೂ ಆಗಿರುತ್ತದೆ.

5 ಆದ್ದರಿಂದ ಕರ್ಮಕಾಂಡದ ಜ್ಞಾನವನ್ನು ಬಯಸುವ ಶಾಸ್ತ್ರೀಯವ್ಯವಹಾರವೂ ಅವಿದ್ಯಾವಂತರಿಗೇ ಹೇಳಿದ್ದು. ಮೋಕ್ಷಕ್ಕೆ ಸಾಧನವನ್ನು ಹೇಳುವ ಜ್ಞಾನವಾಕ್ಯಗಳೂ ಪ್ರಮಾತೃಪ್ರಮಾಣಮೇಯವೆಂಬ ವಿಭಾಗವನ್ನು ಇಟ್ಟುಕೊಂಡೇ ಹೊರಡುವದರಿಂದ ಅವಿದ್ಯಾವಂತರಿಗೇ ಸರಿ. ಆದರೆ ಅವುಗಳ ಅರ್ಥವನ್ನು ತಿಳಿದುಕೊಂಡವರಿಗೆ ಪ್ರಮಾತೃತ್ವವೇ ಮಿಥ್ಯೆಯೆಂದು ತಿಳಿದುಬಿಡುವದರಿಂದ ಆ ಜ್ಞಾನವಾದ ಬಳಿಕ ಮತ್ತೆ ಪ್ರಮಾತೃತ್ವವಾಗಲಿ ಕರ್ತೃತ್ವವಾಗಲಿ ಇರುವದಿಲ್ಲ. ಆದ್ದರಿಂದ ಆ ಬಳಿಕ ಅರಿತುಕೊಳ್ಳತಕ್ಕದ್ದಾಗಲಿ ಮಾಡತಕ್ಕದ್ದಾಗಲಿ ಉಳಿದಿರುವದಿಲ್ಲ. ಗೀ. ಭಾ. ೨-೨೧, ಭಾ. ಭಾ. ೩ನ್ನು ನೋಡಿರಿ.

'ಸ್ಥೂಲೋಽಹಮ್' 'ಕೃಶೋಽಹಮ್', ಗೌರೋಽಹಮ್', 'ತಿಷ್ಠಾಮಿ', 'ಗಚ್ಛಾಮಿ' 'ಲಙ್ಘಯಾಮಿ ಚ' ಇತಿ । ತಥಾ ಇನ್ದ್ರಿಯಧರ್ಮಾನ್–'ಮೂಕಃ', 'ಕಾಣಃ', 'ಕ್ಲೀಬಃ','ಬಧಿರಃ', 'ಅನ್ಧೋಽಹಮ್' ಇತಿ । ತಥಾ ಅನ್ತಃಕರಣಧರ್ಮಾನ್ ಕಾಮ ಸಙ್ಕಲ್ಪವಿಚಿಕಿತ್ಸಾಧ್ಯವಸಾಯಾದೀನ್ । ಏವಮ್ ಅಹಂಪ್ರತ್ಯಯಿನಮ್ ಅಶೇಷ ಸ್ವಪ್ರಚಾರಸಾಕ್ಷಿಣಿ ಪ್ರತ್ಯಗಾತ್ಮನಿ ಅಧ್ಯಸ್ಯ ತಂ ಚ ಪ್ರತ್ಯಗಾತ್ಮಾನಂ ಸರ್ವಸಾಕ್ಷಿಣಂ ತದ್ವಿಪರ್ಯಯೇಣ ಅನ್ತಃಕರಣಾದಿಷು ಅಧ್ಯಸ್ಯತಿ ॥

(ಭಾಷ್ಯಾರ್ಥ)

'ಅಧ್ಯಾಸ' ಎಂದರೆ ಅದಲ್ಲದ್ದರಲ್ಲಿ ಅದು ಎಂಬ ತಿಳಿವಳಿಕೆ ಎಂದು (ಹಿಂದೆಯೇ) ಹೇಳಿರುತ್ತೇವೆ[1] ಅದು ಹೇಗೆಂದರೆ. ಹೆಂಡತಿ, ಮಕ್ಕಳು, ಮುಂತಾದವರು ಬಡವಾದರೆ ಅಥವಾ ವ್ಯೈಗೂಡಿಕೊಂಡರೆ 'ನಾನೇ ಬಡವಾದೆನು', 'ವ್ಯೈಗೂಡಿಕೊಂಡೆನು' ಎಂದು ಹೊರಗಿನ (ವಸ್ತುಗಳ) ಧರ್ಮಗಳನ್ನು ತನ್ನಲ್ಲಿ ಅಧ್ಯಾಸಮಾಡಿಕೊಳ್ಳುತ್ತಾನೆ, ಹಾಗೆಯೇ 'ನಾನು ದಪ್ಪವಾಗಿರುವೆನು', 'ನಾನು ಬಡಕಲಾಗಿರುವೆನು', 'ನಾನು ಬೆಳ್ಳಗಿರುವೆನು', 'ನಿಂತಿದೇನೆ', 'ನಡೆಯುತ್ತಿದೇನೆ', 'ನೆಗೆಯುತ್ತಿದೇನೆ' ಎಂದು ದೇಹದ ಧರ್ಮಗಳನ್ನು (ಅಧ್ಯಾಸಮಾಡಿಕೊಂಡಿರುತ್ತಾನೆ), ಇದರಂತೆ (ನಾನು) 'ಮೂಕನು', 'ಒಕ್ಕಣ್ಣನು', 'ನಪುಂಸಕನು', 'ಕಿವುಡನು', 'ನಾನು ಕುರುಡನು', ಎಂದು ಇಂದ್ರಿಯಗಳ ಧರ್ಮಗಳನ್ನು (ಅಧ್ಯಾಸಮಾಡಿಕೊಳ್ಳುತ್ತಾನೆ), ಇದರಂತೆ ಬಯಸುವದು,ಸಂಕಲ್ಪಿಸುವದು, ಸಂಶಯಪಡುವದು, ನಿಶ್ಚಯಿಸುವದು–ಮುಂತಾದ ಅಂತಃಕರಣದ ಧರ್ಮಗಳನ್ನು(ಅಧ್ಯಾಸಮಾಡಿಕೊಳ್ಳುತ್ತಾನೆ). ಹೀಗೆ ಅಹಂಪ್ರತ್ಯಯಿ(ಯಾದ ಅಂತಃಕರಣ)ವನ್ನು[2] ತನ್ನ ಹರಿದಾಟಗಳಿಗೆಲ್ಲ[3] ಸಾಕ್ಷಿಯಾಗಿರುವ ಒಳಗಿನ ಆತ್ಮನಲ್ಲಿ ಅಧ್ಯಾಸಮಾಡಿ ಇದಕ್ಕೆ ವಿಪರೀತವಾಗಿ ಆ ಸರ್ವ

---

1 ಹಿಂದೆ(ಭಾ ಭಾ. ೨ರಲ್ಲಿ)ಹೇಳಿರುವ 'ಸ್ಮೃತಿರೂಪಃ ಪರತ್ರಪೂರ್ವದೃಷ್ಟಾವಭಾಸಃ' 'ಅನ್ಯಸ್ಯ ಅನ್ಯಧರ್ಮಾವಭಾಸತಾ' ಎಂಬ ವಾಕ್ಯಗಳ ಅರ್ಥವು ಇವೇ ಎಂದು ಭಾವ. ಭಾಷ್ಯಕ್ಕೆ ಜ್ಞಾನಾಧ್ಯಾಸದಲ್ಲಿಯೇ ತಾತ್ಪರ್ಯವೆಂಬುದಕ್ಕೆ ಇದು ನಿಸ್ಸಂದಿಗ್ಧವಾದ ಗಮಕವಾಗಿರುತ್ತದೆ.

2 ನಾನೆಂಬ ಪ್ರತ್ಯಯಕ್ಕೆ ಆಶ್ರಯನೂ ವಿಷಯನೂ ಆಗಿರುವ ಜೀವನಿಗೆ ಮುಖ್ಯವಾದ ಉಪಾಧಿ ಅಂತಃಕರಣವು ; ಆದ್ದರಿಂದ ಇಲ್ಲಿ 'ಅಹಂಪ್ರತ್ಯಯಿ' ಎಂಬ ಮಾತಿಗೆ ಅಂತಃಕರಣವೆಂದು ಅರ್ಥವನ್ನು ಮಾಡಿದೆ

3 ವೃತ್ತಿಗಳಿಗೆಲ್ಲ. ಪ್ರಚಾರವೆಂಬ ಮಾತಿಗೆ ಭಾಷ್ಯದಲ್ಲಿ ವೃತ್ತಿ ಎಂದರ್ಥ ಗೀ. ಬಾ. ಬಾ. ೪೦೭. ೪೦೮.

ಸಾಕ್ಷಿಯಾದ ಪ್ರತ್ಯಗಾತ್ಮನನ್ನೂ ಅಂತಃಕರಣವೇ ಮುಂತಾದವುಗಳಲ್ಲಿ ಅಧ್ಯಾಸ ಮಾಡುತ್ತಾನೆ.

## ಅವಿದ್ಯಾನಾಶಕ್ಕಾಗಿ ವೇದಾಂತಪ್ರವೃತ್ತಿ

(ಭಾಷ್ಯ)

೯. ಏವಮ್ ಅಯಮ್ ಅನಾದಿರನನ್ತಃ ನೈಸರ್ಗಿಕೋಽಧ್ಯಾಸಃ ಮಿಥ್ಯಾಪ್ರತ್ಯಯರೂಪಃ ಕರ್ತೃತ್ವಭೋಕ್ತೃತ್ವಪ್ರವರ್ತಕಃ ಸಕಲಲೋಕಪ್ರತ್ಯಕ್ಷಃ । ಅಸ್ಯ ಅನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾನ್ತಾ ಆರಭ್ಯನ್ತೇ । ಯಥಾ ಚ ಅಯಮರ್ಥಃ ಸರ್ವೇಷಾಂ ವೇದಾನ್ತಾನಾಮ್, ತಥಾ ವಯಮ್ ಅಸ್ಯಾಂ ಶಾರೀರಕಮೀಮಾಂಸಾಯಾಂ ಪ್ರದರ್ಶಯಿಷ್ಯಾಮಃ ॥

(ಭಾಷ್ಯಾರ್ಥ)

**ಹೀಗೆ ಮೊದಲಿಲ್ಲದೆ ಕೊನೆಯಿಲ್ಲದೆ[1] ಸ್ವಾಭಾವಿಕವಾಗಿರುವ ತಪ್ಪು ತಿಳಿವಿನ ರೂಪವಾಗಿರುವ[2] ಈ ಅಧ್ಯಾಸವು ಕರ್ತೃತ್ವಭೋಕ್ತೃತ್ವಗಳನ್ನು ಉಂಟುಮಾಡುತ್ತಿರುವದು ಎಲ್ಲಾ ಜನರಿಗೂ ಪ್ರತ್ಯಕ್ಷವಾಗಿರುತ್ತದೆ.[3] ಅನರ್ಥಕ್ಕೆ ಕಾರಣವಾಗಿರುವ ಈ (ಅಧ್ಯಾಸವನ್ನು) ನಾಶಗೊಳಿಸುವದಕ್ಕೆ ಆತ್ಮೈಕತ್ವವಿದ್ಯೆಯು[4] (ಜನರಿಗೆ) ದೊರಕಲೆಂದು ವೇದಾಂತಗಳೆಲ್ಲ[5]**

---

1 ಈ ಅಧ್ಯಾಸಕ್ಕೆ ಕಾಲದೃಷ್ಟಿಯಿಂದ ಮೊದಲಾಗಲಿ ಕೊನೆಯಾಗಲಿ ಇರುವದಿಲ್ಲ ಏಕೆಂದರೆ ನಾನು ಯಾವಾಗಲೂ ಪ್ರಮಾತೃವು ಎಂದೇ ನಮಗೆ ತೋರುತ್ತಿರುತ್ತದೆ. ಜ್ಞಾನದಿಂದ ಆಗುವ ಬಾಧೆಯ ರೂಪವಾದ ಅಂತವು ಅಧ್ಯಾಸಕ್ಕೆ ಇದ್ದೇ ಇದೆ

2 ಅವಿದ್ಯಾ, ಮಿಥ್ಯಾಜ್ಞಾನ, ಮಿಥ್ಯಾಪ್ರತ್ಯಯ-ಇವೆಲ್ಲ ಆತ್ಮನ ವಿಷಯದ ತಪ್ಪು ತಿಳಿವಳಿಕೆಯೆಂಬರ್ಥದ ಶಬ್ದಗಳು.

3 ಅನುಭವದಲ್ಲಿರುತ್ತದೆ.

4 'ಆತ್ಮನೊಬ್ಬನೇ ಪರಮಾರ್ಥವು, ಇದೆಲ್ಲವೂ ನಾನೂ ಪರಮಾತ್ಮನೇ' ಎಂಬ ತಿಳಿವಳಿಕೆ.

5 ಉಪನಿಷತ್ತುಗಳು ಆತ್ಮೈಕತ್ವವಿದ್ಯೆಯನ್ನೇ ಮುಖ್ಯವಾಗಿ ಹೇಳುತ್ತವೆ, ಉಪಾಸನಾದಿಗಳನ್ನು ಪರಮತಾತ್ಪರ್ಯದಿಂದ ಹೇಳುವದಿಲ್ಲ-ಎಂದು ಭಾವ. ಉಪನಿಷತ್ತಿನಲ್ಲಿ ಉಪಾಸನೆಯೇ ಮುಂತಾದ ರೂಪದ ಬ್ರಹ್ಮವಿದ್ಯೆಯನ್ನು ವಿಧಿಸಿದೆ, ಆ ವಿದ್ಯೆಯೇ ಮುಕ್ತಿಗೆ ಸಾಧನ ಎಂದು ಹೇಳುವ ವಾದಗಳನ್ನು ಭಾಷ್ಯಕಾರರು ಇಲ್ಲಿ ಮುಂದೆ ಖಂಡಿಸಿರುತ್ತಾರೆ. **ಪೀಠಿಕೆಯನ್ನು ನೋಡಿ.**

ಹೊರಟಿರುತ್ತವೆ. ಸರ್ವವೇದಾಂತಗಳಿಗೂ ಇದೇ ಅರ್ಥವೆಂಬುದು ಹೇಗೆಂಬುದನ್ನು ನಾವು ಈ ಶಾರೀರಕಮೀಮಾಂಸೆಯಲ್ಲಿ[1] ತೋರಿಸಿ ಕೊಡುವೆವು.

---

1 ಈ ಶಾಸ್ತ್ರಕ್ಕೆ "ಶಾರೀರಕಮೀಮಾಂಸಾ" (ಶಾರೀರಾತ್ಮನಾದ ಜೀವನ ತತ್ತ್ವವನ್ನು ವಿಚಾರಮಾಡುವ ಶಾಸ್ತ್ರ) ಎಂದು ಹೆಸರು. ಮುಂದಿನ ಪ್ರಘಟ್ಟದಲ್ಲಿ ಇದನ್ನು 'ವೇದಾಂತ ಮೀಮಾಂಸಾಶಾಸ್ತ್ರ' ವೆಂದು ಕರೆದಿದೆ. ಉಪನಿಷದ್ವಾಕ್ಯಗಳನ್ನು ವಿಚಾರಮಾಡಿ ಅರ್ಥವನ್ನು ನಿರ್ಣಯಿಸುವ ಶಾಸ್ತ್ರ ಎಂದು ಆ ಮಾತಿನ ಅರ್ಥ. ವೇದಾಂತಗಳಿಗೆ ಎಂದರೆ ಉಪನಿಷತ್ತುಗಳಿಗೆ ತಾತ್ಪರ್ಯವೆಂಬುದನ್ನು ಈ ಸೂತ್ರರೂಪವಾದ ಗ್ರಂಥದಲ್ಲಿ ನಿರ್ಣಯಿಸಿರುತ್ತದೆ. ಇದರ ಭಾಷ್ಯದಲ್ಲಿ ನಾವು ಇದನ್ನು ಸ್ಪಷ್ಟಪಡಿಸುವೆವು-ಎಂದು ಭಾವ.

# ಒಂದನೆಯ ಅಧ್ಯಾಯ

## ಒಂದನೆಯ ಪಾದ

### ೧. ಜಿಜ್ಞಾಸಾಧಿಕರಣ[1]

(ಅಧಿಕಾರಿಯು ಮುಕ್ತಿಗಾಗಿ ಬ್ರಹ್ಮವಿಚಾರವನ್ನು ಮಾಡಬೇಕು)

(ಭಾಷ್ಯ)

೧೦. ವೇದಾನ್ತಮೀಮಾಂಸಾಶಾಸ್ತ್ರಸ್ಯ ವ್ಯಾಚಿಖ್ಯಾಸಿತಸ್ಯ ಇದಮ್ ಆದಿಮಂ ಸೂತ್ರಮ್—

(ಭಾಷ್ಯಾರ್ಥ)

(ನಾವು) ವ್ಯಾಖ್ಯಾನಮಾಡಬೇಕೆಂದಿರುವ **ವೇದಾಂತಮೀಮಾಂಸಾ ಶಾಸ್ತ್ರಕ್ಕೆ**[2] ಇದು ಮೊದಲನೆಯ ಸೂತ್ರವು —

**ಅಥಾತೋ ಬ್ರಹ್ಮಜಿಜ್ಞಾಸಾ ॥೧॥**

೧ (ಸಾಧನಚತುಷ್ಟಯವನ್ನು ಸಂಪಾದಿಸಿಕೊಂಡ)ಮೇಲೆ, ಬ್ರಹ್ಮಜ್ಞಾನದಿಂದಲೇ ಪರಪುರುಷಾರ್ಥವು ದೊರೆಯುತ್ತದೆ). ಆದಕಾರಣ, ಬ್ರಹ್ಮಜಿಜ್ಞಾಸೆಯನ್ನು (ಮಾಡಬೇಕು).

## ಅಥಶಬ್ದದ ಅರ್ಥ

(ಭಾಷ್ಯ)

೧೧ ತತ್ರ ಅಥ ಶಬ್ದಃ ಆನನ್ತರ್ಯಾರ್ಥಃ ಪರಿಗೃಹ್ಯತೇ ನ ಅಧಿಕಾರಾರ್ಥಃ। ಬ್ರಹ್ಮಜಿಜ್ಞಾಸಾಯಾಃ ಅನಧಿಕಾರ್ಯತ್ವಾತ್ । ಮಙ್ಗಲಸ್ಯ ಚ ವಾಕ್ಯಾರ್ಥೇ

---

1 ಅಧಿಕರಣವೆಂದರೆ ಯಾವದನ್ನು ಕುರಿತು ವಿಚಾರಮಾಡಿ ನಿರ್ಣಯಿಸಲಾಗುವದೋ ಅದನ್ನು ತಿಳಿಸುವ ಗ್ರಂಥಭಾಗ. ಒಂದೊಂದು ಅಧಿಕರಣಕ್ಕೆ ಒಂದು ಅಥವಾ ಹೆಚ್ಚು ಸೂತ್ರಗಳಿರಬಹುದು.

2 ಈ ಗ್ರಂಥಕ್ಕೆ 'ಬ್ರಹ್ಮಸೂತ್ರಗಳು' ಎಂದು ಹೆಸರಿಟ್ಟಿರುವದು ಲೋಕರೂಢಿಯನ್ನು ಅನುಸರಿಸಿ. ಆಚಾರ್ಯರು 'ಶಾರೀರಕಮೀಮಾಂಸಾ', 'ವೇದಾನ್ತಮೀಮಾಂಸಾ' ಎಂಬ ಹೆಸರುಗಳಿಂದಲೇ ಈ ಶಾಸ್ತ್ರವನ್ನು ಕರೆದಿರುತ್ತಾರೆ. ಪೀಠಿಕೆಯನ್ನು ನೋಡಿ.

ಸಮನ್ವಯಾಭಾವಾತ್। ಅರ್ಥಾನ್ತರಪ್ರಯುಕ್ತ ಏವ ಹಿ ಅಥಶಬ್ದಃ ಶ್ರುತ್ಯಾ ಮಙ್ಗಲ ಪ್ರಯೋಜನೋ ಭವತಿ । ಪೂರ್ವಪ್ರಕೃತಾಪೇಕ್ಷಾಯಾಶ್ಚ ಫಲತಃ ಆನನ್ತರ್ಯಾ ವ್ಯತಿರೇಕಾತ್ । ಸತಿ ಚ ಆನನ್ತರ್ಯಾರ್ಥತ್ವೇ ಯಥಾ ಧರ್ಮಜಿಜ್ಞಾಸಾ ಪೂರ್ವ ವೃತ್ತಂ ವೇದಾಧ್ಯಯನಂ ನಿಯಮೇನ ಅಪೇಕ್ಷತೇ ಏವಂ ಬ್ರಹ್ಮಜಿಜ್ಞಾಸಾಪಿ ಯತ್ ಪೂರ್ವವೃತ್ತಂ ನಿಯಮೇನ ಅಪೇಕ್ಷತೇ ತದ್ ವಕ್ತವ್ಯಮ್। ಸ್ವಾಧ್ಯಾಯಾನನ್ತರ್ಯಂ ತು ಸಮಾನಮ್ ॥

(ಭಾಷ್ಯಾರ್ಥ)

ಇಲ್ಲಿ ಅಥ ಎಂಬ ಮಾತನ್ನು ಆಮೇಲೆ ಎಂಬರ್ಥದಲ್ಲಿ ತೆಗೆದುಕೊಳ್ಳಬೇಕೇ ಹೊರತು 'ಪ್ರಾರಂಭ' ಎಂಬರ್ಥದಲ್ಲಿ (ತೆಗೆದುಕೊಳ್ಳ)ಬಾರದು ; ಏಕೆಂದರೆ ಬ್ರಹ್ಮ ಜಿಜ್ಞಾಸೆಯು ಇಲ್ಲಿ ಆರಂಭಿಸತಕ್ಕದ್ದಾಗಿರುವದಿಲ್ಲ.[1] 'ಮಂಗಲ' (ಎಂಬರ್ಥ)ವು ವಾಕ್ಯದ ಅರ್ಥದಲ್ಲಿ ಸಮನ್ವಯವಾಗುವದಿಲ್ಲ[2]ವಾದ್ದರಿಂದ (ಆ ಅರ್ಥವನ್ನೂ ಇಟ್ಟು ಕೊಳ್ಳುವದಕ್ಕಿಲ್ಲ), ಬೇರೊಂದು ಅರ್ಥದಲ್ಲಿ ಪ್ರಯೋಗಮಾಡಿರುವ ಅಥಶಬ್ದವೇ ಕಿವಿಗೆ ಬೀಳುವದರಿಂದ ಮಂಗಲವೆಂಬ ಪ್ರಯೋಜನವನ್ನು ಉಂಟುಮಾಡುತ್ತದೆ ಯಲ್ಲವೆ ?[3] ಪೂರ್ವದಲ್ಲಿ ಪ್ರಕೃತವಾಗಿರುವದಾದಮೇಲೆ (ಎಂಬರ್ಥವೂ) ಫಲದಲ್ಲಿ ಆನಂತರ್ಯ(ವೆಂಬ ಅರ್ಥಕ್ಕಿಂತ)ಬೇರೆಯಾಗಿರುವದಿಲ್ಲ.[4]

(ಕೇಳುವವನು):— ಹೀಗೆ ಆನಂತರ್ಯವೇ (ಅಥಶಬ್ದದ ಅರ್ಥವೆಂದಾದ) ಮೇಲೆ ಧರ್ಮಜಿಜ್ಞಾಸೆಗೆ ಮೊದಲು ನಡೆದಿರಬೇಕಾದ ವೇದಾಧ್ಯಯನವು ಹೇಗೆ ಅವಶ್ಯವಾಗಿ ಬೇಕಾಗಿರುವದೋ[5] ಅದರಂತೆ ಬ್ರಹ್ಮಜಿಜ್ಞಾಸೆಗೂ ಮೊದಲೇ ಆಗಿರ

---

1 ಬ್ರಹ್ಮಜಿಜ್ಞಾಸೆಯನ್ನು ಆರಂಭಿಸಿ ಅದರ ವಿಷಯವಾಗಿ ಏನಾದರೂ ಹೇಳಬೇಕೆಂದು ಈ ಶಾಸ್ತ್ರವು ಹೊರಟಿರುವದಿಲ್ಲ, ಬ್ರಹ್ಮವನ್ನು ಕುರಿತು ಹೇಳುವದಕ್ಕೆ ಹೊರಟಿರುತ್ತದೆ.

2 'ಮಂಗಲವು, ಆದ್ದರಿಂದ ಬ್ರಹ್ಮಜಿಜ್ಞಾಸೆ' ಎಂದು ವಾಕ್ಯವನ್ನು ಮಾಡಿ ಅನ್ವಯಿ ಸುವದಕ್ಕೆ ಬರುವದಿಲ್ಲ. ಏಕೆಂದರೆ ಆಗ ಮಂಗಲಕ್ಕೂ ವಾಕ್ಯಾರ್ಥವಾದ ಜಿಜ್ಞಾಸೆಗೂ ಸಂಬಂಧ ವಿರುವದಿಲ್ಲವಾದ್ದರಿಂದ ಒಟ್ಟುಗೂಡಿ ಒಂದು ವಾಕ್ಯವಾಗುವದಿಲ್ಲ.

3 ಅಥಶಬ್ದವನ್ನು ಯಾವ ಅರ್ಥದಲ್ಲಿ ಉಪಯೋಗಿಸಿದರೂ ಗ್ರಂಥದಲ್ಲಿ ಪ್ರಾರಂಭ ದಲ್ಲಿದ್ದರೆ ಅದು ಮಂಗಲವೇ ಆಗುತ್ತದೆ ಎಂದರ್ಥ.

4 'ಹಿಂದೆ ಪ್ರಕೃತವಾಗಿರುವ ಧರ್ಮಜಿಜ್ಞಾಸೆಯಾದ ಬಳಿಕ' ಎಂದು ಒಬ್ಬ ವೃತ್ತಿ ಕಾರರು ಅಥಶಬ್ದಕ್ಕೆ ಅರ್ಥವನ್ನು ಮಾಡಿದ್ದರು. ಅವರೂ ಆಮೇಲೆ ಎಂಬ ಅರ್ಥವನ್ನು ಒಪ್ಪಿದಂತೆಯೇ ಆಗಿರುತ್ತದೆ.

5 ಇದನ್ನು ಜೈಮಿನಿಗಳ ಪೂರ್ವಮೀಮಾಂಸಾಸೂತ್ರದ ಭಾಷ್ಯದಲ್ಲಿ ಶಬರ ಸ್ವಾಮಿಗಳು ತಿಳಿಸಿರುತ್ತಾರೆ.

ಬೇಕಾದದ್ದು ಯಾವದು ಅವಶ್ಯವಾಗಿ ಬೇಕಾಗುವದೋ, ಅದನ್ನು ಹೇಳತಕ್ಕದ್ದು (ಅಗತ್ಯ). ವೇದಾಧ್ಯಯನವಾದ ಬಳಿಕವೇ ಆಗಬೇಕೆಂಬುದಂತೂ (ಎರಡು ಜಿಜ್ಞಾಸೆಗಳಿಗೂ) ಸಮಾನವಾಗಿರುತ್ತದೆ.[1]

(ಭಾಷ್ಯ)

೧೨. ನನು ಇಹ ಕರ್ಮಾವಬೋಧಾನನ್ತರ್ಯಂ ವಿಶೇಷಃ । ನ । ಧರ್ಮಜಿಜ್ಞಾಸಾಯಾಃ ಪ್ರಾಗಪಿ ಅಧೀತವೇದಾನ್ತಸ್ಯ ಬ್ರಹ್ಮಜಿಜ್ಞಾಸೋಪಪತ್ತೇಃ । ಯಥಾ ಚ ಹೃದಯಾದ್ಯವದಾನಾನಾಮ್ ಆನನ್ತರ್ಯನಿಯಮಃ, ಕ್ರಮಸ್ಯ ವಿವಕ್ಷಿತತ್ವಾತ್, ನ ತಥಾ ಇಹ ಕ್ರಮೋ ವಿವಕ್ಷಿತಃ । ಶೇಷಶೇಷಿತ್ವೇ ಅಧಿಕೃತಾಧಿಕಾರೇ ವಾ ಪ್ರಮಾಣಾಭಾವಾತ್ । ಧರ್ಮಬ್ರಹ್ಮಜಿಜ್ಞಾಸಯೋಃ ಫಲಜಿಜ್ಞಾಸ್ಯಭೇದಾಚ್ಚ ಅಭ್ಯುದಯಫಲಂ ಧರ್ಮಜ್ಞಾನಮ್, ತಚ್ಚ ಅನುಷ್ಠಾನಾಪೇಕ್ಷಮ್ । ನಿಃಶ್ರೇಯಸಫಲಂ ತು ಬ್ರಹ್ಮವಿಜ್ಞಾನಮ್, ನ ಚ ಅನುಷ್ಠಾನಾನ್ತರಾಪೇಕ್ಷಮ್ । ಭವ್ಯಶ್ಚ ಧರ್ಮೋ ಜಿಜ್ಞಾಸ್ಯಃ ನ ಜ್ಞಾನಕಾಲೇ ಅಸ್ತಿ । ಪುರುಷವ್ಯಾಪಾರತನ್ತ್ರತ್ವಾತ್ । ಇಹ ತು ಭೂತಂ ಬ್ರಹ್ಮ ಜಿಜ್ಞಾಸ್ಯಮ್ ನಿತ್ಯತ್ವಾತ್ ನ ಪುರುಷವ್ಯಾಪಾರತನ್ತ್ರಮ್ । ಚೋದನಾಪ್ರವೃತ್ತಿಭೇದಾಚ್ಚ । ಯಾ ಹಿ ಚೋದನಾ ಧರ್ಮಸ್ಯ ಲಕ್ಷಣಮ್, ಸಾ ಸ್ವವಿಷಯೇ ನಿಯುಞ್ಜಾನೈವ ಪುರುಷಮ್ ಅವಬೋಧಯತಿ । ಬ್ರಹ್ಮಚೋದನಾ ತು ಪುರುಷಮ್ ಅವಬೋಧಯತ್ಯೇವ ಕೇವಲಮ್ । ಅವಬೋಧಸ್ಯ ಚೋದನಾಜನ್ಯತ್ವಾತ್ ನ ಪುರುಷೋಽವಬೋಧೇ ನಿಯುಜ್ಯತೇ । ಯಥಾ ಅಕ್ಷಾರ್ಥಸಂನಿಕರ್ಷೇಣ ಅರ್ಥಾವಬೋಧೇ, ತದ್ವತ್ । ತಸ್ಮಾತ್ ಕಿಮಪಿ ವಕ್ತವ್ಯಂ ಯದನನ್ತರಂ ಬ್ರಹ್ಮಜಿಜ್ಞಾಸಾ ಉಪದಿಶ್ಯತೇ ಇತಿ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಇಲ್ಲಿ ಕರ್ಮಜ್ಞಾನವನ್ನು ಪಡೆದುಕೊಂಡಮೇಲೆ (ಜಿಜ್ಞಾಸೆಯನ್ನು ಮಾಡಬೇಕು) ಎಂಬ ವಿಶೇಷ(ವನ್ನು ಇಟ್ಟುಕೊಳ್ಳಬಹುದಲ್ಲ[2])!

1 ಆದ್ದರಿಂದ ಅದನ್ನು ಇಲ್ಲಿ ಅಥಶಬ್ದದಿಂದ ಹೇಳಿಲ್ಲ.

2 ಈ ಪೂರ್ವಪಕ್ಷಿಯು 'ಪೂರ್ವಪ್ರಕೃತಾಪೇಕ್ಷೆ' ಎಂಬ ಅರ್ಥವನ್ನು ಹೇಳುವ ವೃತ್ತಿಯನ್ನು ಅವಲಂಬಿಸುವವನು ಎಂದು ಇಟ್ಟುಕೊಳ್ಳಬಹುದು. ಧರ್ಮಜಿಜ್ಞಾಸೆಗೆ ವೇದಾಧ್ಯಯನವು ಮೊದಲು ಆಗಿರಬೇಕು; ಬ್ರಹ್ಮಜಿಜ್ಞಾಸೆಗೆ ಅಧ್ಯಯನದ ಜೊತೆಗೆ ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳ ಜ್ಞಾನವೂ ಆಗಿರಬೇಕು ಎಂಬ ವಿಶೇಷವನ್ನು ಕಲ್ಪಿಸಬಹುದಲ್ಲ !—ಎಂದು ಪೂರ್ವಪಕ್ಷಿ ಕೇಳುತ್ತಿದಾನೆ.

(ಸಿದ್ಧಾಂತಿ).— ಕೂಡದು. ಏಕೆಂದರೆ (೧) ವೇದಾಂತವನ್ನು ಅಧ್ಯಯನ ಮಾಡಿದವನು ಧರ್ಮಜಿಜ್ಞಾಸೆಯನ್ನು ಮಾಡುವದಕ್ಕೂ ಮೊದಲೇ ಬ್ರಹ್ಮಜಿಜ್ಞಾಸೆಯನ್ನು (ಮಾಡ)ಬಹುದಾಗಿದೆ. (ಯಾಗದಲ್ಲಿ) ಹೃದಯವೇ ಮುಂತಾದ[1] (ಪಶುವಿನ ಅವಯವಗಳನ್ನು) ಕತ್ತರಿಸುವಲ್ಲಿ (ಒಂದಾಗುತ್ತಲೂ ಇನ್ನೊಂದನ್ನು ಕತ್ತರಿಸಬೇಕೆಂಬ) ಕ್ರಮವನ್ನು ಹೇಳುವದರಲ್ಲಿ ತಾತ್ಪರ್ಯವಿರುವದರಿಂದ[2] ಹೇಗೆ ಆನಂತರ್ಯದ ನಿಯಮವುಂಟೋ, ಹಾಗೆ ಇಲ್ಲಿ ಕ್ರಮವನ್ನು ಹೇಳುವದರಲ್ಲಿ ತಾತ್ಪರ್ಯವಿಲ್ಲ. ಏಕೆಂದರೆ (ಇವೆರಡಕ್ಕೂ) ಅಂಗಾಂಗಿಭಾವವಿದೆ ಎಂಬುದಕ್ಕೇ ಆಗಲಿ, (ಒಂದರಲ್ಲಿ) ಅಧಿಕೃತನಾದವನಿಗೇ ಇನ್ನೊಂದರಲ್ಲಿ ಅಧಿಕಾರವೆಂಬುದಕ್ಕೇ ಆಗಲಿ, ಪ್ರಮಾಣವಿರುವದಿಲ್ಲ.[3] (೨) ಧರ್ಮ (ಜಿಜ್ಞಾಸೆ), ಬ್ರಹ್ಮಜಿಜ್ಞಾಸೆ-(ಇವುಗಳೆರಡಕ್ಕೂ) ಫಲವೂ ಜಿಜ್ಞಾಸ್ಯವೂ (ಬೇರೆ)ಬೇರೆಯಾಗಿರುವದರಿಂದಲೂ (ಪೂರ್ವಪಕ್ಷವು ಸರಿಯಲ್ಲ). ಹೇಗೆಂದರೆ, ಧರ್ಮಜ್ಞಾನಕ್ಕೆ ಫಲವು ಅಭ್ಯುದಯವು, ಮತ್ತು ಅದಕ್ಕೆ ಅನುಷ್ಠಾನವು ಬೇಕು. ಬ್ರಹ್ಮಜ್ಞಾನಕ್ಕಾದರೋ ನಿಃಶ್ರೇಯಸವು ಫಲವು, ಅದಕ್ಕೆ (ಮತ್ತೆ) ಯಾವ ಅನುಷ್ಠಾನವೂ ಬೇಕಾಗಿರುವದಿಲ್ಲ.[4] ಇದಲ್ಲದೆ (ಮೊದಲನೆಯ) ಜಿಜ್ಞಾಸೆಗೆ ವಿಷಯವಾದ ಧರ್ಮವು ಮುಂದೆ ಉಂಟಾಗತಕ್ಕದ್ದು, ಜ್ಞಾನಕಾಲದಲ್ಲಿರುವದಿಲ್ಲ. ಏಕೆಂದರೆ (ಅದು) ಪುರುಷನ ವ್ಯಾಪಾರಕ್ಕೆ ಅಧೀನವಾಗಿರುತ್ತದೆ. ಆದರೆ ಇಲ್ಲಿ ಜಿಜ್ಞಾಸೆಗೆ ವಿಷಯವಾದ ಬ್ರಹ್ಮವು ಈಗ ಇದ್ದುಕೊಂಡಿರುವದು, ಅದು ನಿತ್ಯವಾಗಿರುವದರಿಂದ ಪುರುಷನ ವ್ಯಾಪಾರಕ್ಕೆ ಅಧೀನವಾಗಿರುವದಲ್ಲ.[5] (೩) (ಈ ಎರಡು ಜಿಜ್ಞಾಸೆಗಳ ಸಂಬಂಧವಾದ) ಚೋದನೆಗಳ ಪ್ರವೃತ್ತಿಯೂ ಬೇರೆಬೇರೆ

---

1 ಹೃದಯ, ನಾಲಗೆ, ಎದೆ—ಈ ಅವಯವಗಳನ್ನು. ತೈ. ಸಂ. ೬-೩-೧೦-೧೦ ರಲ್ಲಿ ಈ ಅವಯವಗಳ ಅವದಾನವು (ಕತ್ತರಿಸುವದು) ಉಕ್ತವಾಗಿದೆ

2 'ಅಥ' (ಆ ಬಳಿಕ) ಎಂಬ ಮಾತು ಅವದಾನಮಂತ್ರದಲ್ಲಿ ಕ್ರಮವನ್ನು ತಿಳಿಸುತ್ತದೆ.

3 ಪ್ರಯಾಜಯಾಗಗಳು ದರ್ಶಪೂರ್ಣಮಾಸಗಳಿಗೆ ಅಂಗವಾಗಿರುವದರಿಂದ ಅವನ್ನು ಮೊದಲು ಮಾಡಿ ಆಮೇಲೆ ದರ್ಶಪೂರ್ಣಮಾಸಗಳನ್ನು ಮಾಡಬೇಕು ದರ್ಶಪೂರ್ಣಮಾಸಗಳನ್ನು ಮಾಡುವ ಸಂದರ್ಭದಲ್ಲಿ ಚಮಸವೆಂಬ ಪಾತ್ರೆಯಲ್ಲಿ ನೀರು ತುಂಬಬೇಕಾಗುವದು ; ಆದರೆ ಪಶುಕಾಮನಾದವನು (ಹಾಲುಕರೆಯುವ) ಗೋದೋಹನಪಾತ್ರೆಯಲ್ಲಿ ತುಂಬಬೇಕು ಎಂಬ ವಚನವಿದೆ. ಈ ಎರಡನೆಯ ವಚನವು ದರ್ಶಪೂರ್ಣಮಾಸಗಳಿಗೆ ಅಧಿಕಾರಿಯಾದವನಿಗೆ ಅನ್ವಯಿಸುತ್ತದೆ ಎಂಬುದು ಸ್ಪಷ್ಟ. ಹೀಗೆ ಕರ್ಮಜ್ಞಾನವು ಬ್ರಹ್ಮಜ್ಞಾನಕ್ಕೆ ಅಂಗವಲ್ಲ, ಕರ್ಮದಲ್ಲಿ ಅಧಿಕೃತನಾದವನಿಗೇ ಜ್ಞಾನದಲ್ಲಿ ಅಧಿಕಾರ ಎಂಬ ನಿಯಮವೂ ಇಲ್ಲ. ಆದ್ದರಿಂದ ಇಲ್ಲಿ ಅಥಶಬ್ದವು ಕ್ರಮವನ್ನು ಹೇಳುತ್ತದೆ ಎಂಬುದಕ್ಕೆ ಪ್ರಮಾಣವಿಲ್ಲ.

4 ಗೀ. ಭಾ. ೨-೨೦ (ಭಾ. ಭಾ. ೩೯), ಮುಂ. ಭಾ. ೧-೧-೬ (ಭಾ. ಭಾ. ೧೮.)

5 ಧರ್ಮವು ಭವ್ಯ, ಪುರುಷನ ಕರ್ಮದ ಫಲವಾಗಿ ಮುಂದೆ ಬರತಕ್ಕದ್ದು ; ಬ್ರಹ್ಮವು ಭೂತ, ಈಗಲೇ ಇರತಕ್ಕದ್ದು, ಕರ್ಮದಿಂದ ಆಗತಕ್ಕದ್ದಲ್ಲ.

ಯಾಗಿರುವದರಿಂದಲೂ (ಪೂರ್ವಪಕ್ಷವು ಸರಿಯಲ್ಲ. ಹೇಗೆಂದರೆ), ಧರ್ಮಕ್ಕೆ ಲಕ್ಷಣವಾಗಿರುವ ಚೋದನೆಯಿರುವದಲ್ಲ[1], ಅದು ತನ್ನ ವಿಷಯ(ವಾದ ಕರ್ಮ)ದಲ್ಲಿ ಪುರುಷನನ್ನು ಕಟ್ಟುಮಾಡಿ (ತೊಡಗಿ) ಸುತ್ತಲೇ[2] ತಿಳಿಸುತ್ತದೆ ಆದರೆ ಬ್ರಹ್ಮ ಚೋದನೆಯು ಪುರುಷನಿಗೆ (ಸುಮ್ಮನೆ) ಜ್ಞಾನವನ್ನು ಮಾತ್ರ ಉಂಟುಮಾಡುತ್ತದೆ. (ಈ) ಜ್ಞಾನವು ಚೋದನೆಯಿಂದ(ಲೇ) ಉಂಟಾಗುವದರಿಂದ[3] (ಅದು) ಪುರುಷನನ್ನು ಜ್ಞಾನ(ವನ್ನುಂಟುಮಾಡಿಕೊಳ್ಳೆಂದು) ಕಟ್ಟುಮಾಡುವದಿಲ್ಲ. ಇಂದ್ರಿಯಕ್ಕೂ ವಿಷಯಕ್ಕೂ ಆಗುವ ಸಂಬಂಧದಿಂದ (ಉಂಟಾಗುವ) ಜ್ಞಾನದಲ್ಲಿ ಹೇಗೆ (ಇಂದ್ರಿಯವು ಮನುಷ್ಯನನ್ನು ಕಟ್ಟುಮಾಡುವದಿಲ್ಲವೋ) ಹಾಗೆಯೇ (ಇದು).

(ಕೇಳುವವನು)—ಆದ್ದರಿಂದ ಯಾವದರ ಅನಂತರ (ಈ) ಬ್ರಹ್ಮಜಿಜ್ಞಾಸೆಯನ್ನು (ಮಾಡಬೇಕೆಂದು) ಉಪದೇಶಮಾಡಿರುತ್ತದೆಯೋ (ಅಂಥದ್ದು) ಯಾವದಾದ (ರೊಂದ)ನ್ನು ಹೇಳಬೇಕು.

(ಭಾಷ್ಯ)

೧೩. ಉಚ್ಯತೇ। ನಿತ್ಯಾನಿತ್ಯವಸ್ತುವಿವೇಕಃ, ಇಹಾಮುತ್ರಾರ್ಥಭೋಗವಿರಾಗಃ, ಶಮದಮಾದಿಸಾಧನಸಂಪತ್, ಮುಮುಕ್ಷುತ್ವಂ ಚ। ತೇಷು ಹಿ ಸತ್ಸು ಪ್ರಾಗಪಿ ಧರ್ಮಜಿಜ್ಞಾಸಾಯಾಃ ಊರ್ಧ್ವಂ ಚ ಶಕ್ಯತೇ ಬಹ್ಮ ಜಿಜ್ಞಾಸಿತುಂ ಜ್ಞಾತುಂ ಚ ನ ವಿಪರ್ಯಯೇ। ತಸ್ಮಾತ್ ಅಥಶಬ್ದೇನ ಯಥೋಕ್ತಸಾಧನಸಂಪತ್ತ್ಯಾನನ್ತರ್ಯಮ್ ಉಪದಿಶ್ಯತೇ ॥

(ಸಿದ್ಧಾಂತಿ):—ಹೇಳುತ್ತೇವೆ, (ಕೇಳು). ನಿತ್ಯಾನಿತ್ಯವಸ್ತುವಿವೇಕ,[4] ಈ

---

1. 'ಚೋದನಾಲಕ್ಷಣೋಽರ್ಥೋ ಧರ್ಮಃ' ಎಂಬ ಜೈ. ಸೂ. (೧-೧-೧)ವನ್ನೂ ಅದರ ಶಾಬರಭಾಷ್ಯವನ್ನೂ ನೋಡಿ. ಚೋದನೆ ಎಂದರೆ ವೈದಿಕವಾಕ್ಯವು, ಲಕ್ಷಣವೆಂದರೆ ಪ್ರಮಾಣವು.

2. ಕರ್ಮದಲ್ಲಿ ತೊಡಗಿಸುತ್ತಲೇ ಎಂದರ್ಥ. ಕರ್ಮವಾಕ್ಯವು ಕರ್ಮದಲ್ಲಿ ತೊಡಗಿಸುವದೆಂಬುದೂ ಮುಖ್ಯಾರ್ಥವಲ್ಲಲ್ಲ, ಏಕೆಂದರೆ ಆ ವಾಕ್ಯವು ಇಂಥ ಫಲಕ್ಕೆ ಇಂಥದ್ದು ಸಾಧನವೆಂದು ತಿಳಿಸುತ್ತದೆ. ಅಷ್ಟೆ.

3. ವಾಕ್ಯದಿಂದಲೇ ಜ್ಞಾನವು ಆಗಿಬಿಡುವದರಿಂದ ಎಂದರ್ಥ. "ಚೋದನ್ಯಾಜನ್ಯತ್ವಾತ್'' ಎಂದಿರುವ ಅಚ್ಚಿನ ಪಾಠವು ಸರಿಯಲ್ಲ.

4. ನಿತ್ಯವಾದ ವಸ್ತು ಕರ್ಮದಿಂದ ಉಂಟಾಗುವದಲ್ಲ ಎಂಬ ವಿವೇಕ–ಎಂದಿಷ್ಟೇ ಅರ್ಥವನ್ನು ಮಾಡಿಕೊಂಡರೆ ಸಾಕು, ಇಂಥದ್ದೇ ಆ ನಿತ್ಯವಾದ ವಸ್ತು ಎಂಬ ವಿಶೇಷಜ್ಞಾನವೆಂಬ ಅರ್ಥವೇನೂ ಇಲ್ಲ. ಏಕೆಂದರೆ ಆ ಜ್ಞಾನವೇ ಇಲ್ಲಿ ವಾಕ್ಯವಿಚಾರದಿಂದ ಆಗಬೇಕಾಗಿರುತದೆ.

(ಭಾಷ್ಯಾರ್ಥ)

ಲೋಕದ ಮತ್ತು ಪರ(ಲೋಕದ) ವಸ್ತುಗಳ ಭೋಗದಲ್ಲಿ ವಿರಕ್ತಿ, ಶಮ, ದಮ, ಮುಂತಾದ ಸಾಧನಗಳ ಸಂಪತ್ತು, ಮೋಕ್ಷದಲ್ಲಿ ಇಚ್ಛೆಯುಳ್ಳವನಾಗಿರುವದು-(ಇವುಗಳುಂಟಾದ ಮೇಲೆ ಎಂಬುದು ಅಥಶಬ್ದದ ಅರ್ಥವು). ಏಕೆಂದರೆ ಇವುಗಳು ಇದ್ದರೆ ಧರ್ಮಜಿಜ್ಞಾಸೆಗೆ ಮುಂಚೆಯೂ ಆಮೇಲೂ ಬ್ರಹ್ಮವನ್ನು ಕುರಿತು ವಿಚಾರವನ್ನು ಮಾಡುವದಕ್ಕೂ ತಿಳಿದುಕೊಳ್ಳುವದಕ್ಕೂ ಆಗುತ್ತದೆಯೇ ಹೊರತು ಇಲ್ಲದಿದ್ದರೆ ಆಗುವದಿಲ್ಲ.[1] ಆದ್ದರಿಂದ 'ಈ ಮೇಲೆ ಹೇಳಿದ ಸಾಧನಸಂಪತ್ತಿಯುಂಟಾದಮೇಲೆ' ಎಂಬುದನ್ನು ಅಥಶಬ್ದದಿಂದ ಹೇಳಿರುತ್ತದೆ.

## ಅತಃಶಬ್ದದ ಅರ್ಥ

೧೪. ಅತಃಶಬ್ದೋ ಹೇತ್ವರ್ಥಃ। ಯಸ್ಮಾತ್ ವೇದ ಏವ ಅಗ್ನಿಹೋತ್ರಾದೀನಾಂ ಶ್ರೇಯಃಸಾಧನಾನಾಮ್ ಅನಿತ್ಯಫಲತಾಂ ದರ್ಶಯತಿ-"ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಜಿತೋ[2] ಲೋಕಃ ಕ್ಷೀಯತೇ" (ಛಾಂ. ೮-೧-೬) ಇತ್ಯಾದಿಃ। ತಥಾ ಬ್ರಹ್ಮವಿಜ್ಞಾನಾದಪಿ ಪರಂ ಪುರುಷಾರ್ಥಂ ದರ್ಶಯತಿ-'ಬ್ರಹ್ಮವಿದಾಪ್ನೋತಿ ಪರಮ್' (ತೈ. ೨-೧) ಇತ್ಯಾದಿಃ ತಸ್ಮಾತ್ ಯಥೋಕ್ತಸಾಧನಸಮ್ಪತ್ತ್ಯನನ್ತರಂ ಬ್ರಹ್ಮಜಿಜ್ಞಾಸಾ ಕರ್ತವ್ಯಾ ॥

(ಭಾಷ್ಯಾರ್ಥ)

'ಅತಃ' ಎಂಬ ಮಾತು ಹೇತುವನ್ನು ಹೇಳುವದು. "ಹೇಗೆ ಇಲ್ಲಿ ಕರ್ಮದಿಂದ ಸಂಪಾದಿಸಿಕೊಂಡ ಭೋಗವು ಕ್ಷಯವಾಗುವದೋ ಹಾಗೆಯೇ (ಅಲ್ಲಿ ಪುಣ್ಯದಿಂದ ಸಂಪಾದಿಸಿಕೊಂಡ ಭೋಗವೂ ಕ್ಷಯವಾಗುತ್ತದೆ" (ಛಾಂ. ೮-೧-೬) ಎಂಬುದೇ ಮುಂತಾದ ವೇದವೇ ಅಗ್ನಿಹೋತ್ರವೇ ಮುಂತಾದ ಶ್ರೇಯಃಸಾಧನಗಳ[3] ಫಲವು ಅನಿತ್ಯವೆಂದು ತಿಳಿಸುತ್ತದೆ, ಹಾಗೂ "ಬ್ರಹ್ಮವನ್ನು ಅರಿತುಕೊಂಡವನು ಹೆಚ್ಚಿನ (ಪುರುಷಾರ್ಥವನ್ನು) ಪಡೆಯುವನು" (ತೈ.೨-೧) ಎಂದು ಮುಂತಾಗಿರುವ (ವೇದವೇ) ಬ್ರಹ್ಮವಿಜ್ಞಾನದಿಂದ ಪರಮಪುರುಷಾರ್ಥ(ವು ದೊರಕುವದೆಂದೂ) ತಿಳಿಸುತ್ತದೆ.

---

1. ಧರ್ಮಜಿಜ್ಞಾಸೆಯಲ್ಲಿರುವ ನ್ಯಾಯಗಳು ಈ ಬ್ರಹ್ಮಜಿಜ್ಞಾಸಾಶಾಸ್ತ್ರಕ್ಕೂ ಬೇಕೆಂಬುದೇನೂ ಈ ಅಭಿಪ್ರಾಯಕ್ಕೆ ಬಾಧಕವಲ್ಲ. ಪೀಠಿಕೆಯನ್ನು ನೋಡಿ.

2. 'ಕರ್ಮಚಿತೋ' 'ಪುಣ್ಯಚಿತೋ' ಎಂಬ ಪಾಠಾಂತರ, 'ಜಿತಃ' ಎಂಬ ಪಾಠವೇ ಮೇಲೆಂದು ತೋರುತ್ತದೆ.

3. ಪುರುಷಾರ್ಥಕ್ಕೆ ಸಾಧನವಾಗಿರುವ ಕರ್ಮಗಳು.

ಅಲ್ಲವೆ? ಆದಕಾರಣ ಮೇಲೆ ಹೇಳಿದ ಸಾಧನವನ್ನು ಸಂಪಾದಿಸಿಕೊಂಡ ಬಳಿಕ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು (ಎಂದು ವಾಕ್ಯಾರ್ಥ).[1]

## ಬ್ರಹ್ಮಜಿಜ್ಞಾಸಾ ಎಂಬುದರ ವಿವರಣೆ

(ಭಾಷ್ಯ)

೧೫. ಬ್ರಹ್ಮಣೋ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ । ಬ್ರಹ್ಮ ಚ ವಕ್ಷ್ಯಮಾಣ ಲಕ್ಷಣಮ್ "ಜನ್ಮಾದ್ಯಸ್ಯ ಯತಃ" (೧-೧-೨) ಇತಿ । ಅತ ಏವ ನ ಬ್ರಹ್ಮಶಬ್ದಸ್ಯ ಜಾತ್ಯಾದ್ಯರ್ಥಾನ್ತರಮ್ ಆಶಙ್ಕಿತವ್ಯಮ್ ॥

(ಭಾಷ್ಯಾರ್ಥ)

'ಬ್ರಹ್ಮಜಿಜ್ಞಾಸೆ' ಎಂದರೆ ಬ್ರಹ್ಮದ[2] ಜಿಜ್ಞಾಸೆಯು ಬ್ರಹ್ಮ ಎಂದರೆ 'ಜನ್ಮಾದ್ಯಸ್ಯ ಯತಃ" (೧-೧-೨) ಎಂದು ಮುಂದಿನ (ಸೂತ್ರದಲ್ಲಿ) ಹೇಳುವ ಲಕ್ಷಣವುಳ್ಳದ್ದು. ಆದ್ದರಿಂದಲೇ ಬ್ರಹ್ಮಶಬ್ದಕ್ಕೆ ಜಾತಿಯೇ ಮುಂತಾದ ಅರ್ಥಗಳೂ ಉಂಟಲ್ಲ!— ಎಂದು ಶಂಕಿಸಕೂಡದು.

## 'ಬ್ರಹ್ಮದ' ಎಂಬಲ್ಲಿ ಕರ್ಮಾರ್ಥಕಷಷ್ಠಿಯನ್ನೇ ಗ್ರಹಿಸಬೇಕು

(ಭಾಷ್ಯ)

೧೬. 'ಬ್ರಹ್ಮಣಃ' ಇತಿ ಕರ್ಮಣಿ ಷಷ್ಠೀ ನ ಶೇಷೇ । ಜಿಜ್ಞಾಸ್ಯಾಪೇಕ್ಷತ್ವಾತ್ ಜಿಜ್ಞಾಸಾಯಾಃ, ಜಿಜ್ಞಾಸ್ಯಾನ್ತರಾನಿರ್ದೇಶಾಚ್ಚ । ನನು ಶೇಷಷಷ್ಠೀಪರಿಗ್ರಹೇಽಪಿ ಬ್ರಹ್ಮಣೋ ಜಿಜ್ಞಾಸಾಕರ್ಮತ್ವಂ ನ ವಿರುಧ್ಯತೇ।ಸಂಬನ್ಧಸಾಮಾನ್ಯಸ್ಯ ವಿಶೇಷನಿಷ್ಠತ್ವಾತ್ । ಏವಮಪಿ ಪ್ರತ್ಯಕ್ಷಂ ಬ್ರಹ್ಮಣಃ ಕರ್ಮತ್ವಮ್ ಉತ್ಸೃಜ್ಯ ಸಾಮಾನ್ಯದ್ವಾರೇಣ ಪರೋಕ್ಷಂ ಕರ್ಮತ್ವಂ ಕಲ್ಪಯತೋ ವ್ಯರ್ಥಃ ಪ್ರಯಾಸಃ ಸ್ಯಾತ್ । ನ ವ್ಯರ್ಥಃ, ಬ್ರಹ್ಮಾಶ್ರಿತಾಶೇಷವಿಚಾರಪ್ರತಿಜ್ಞಾನಾರ್ಥತ್ವಾತ್ ಇತಿ

---

1. ಸಾಧನಚತುಷ್ಟಯವು ಉಂಟಾದಬಳಿಕ ಬ್ರಹ್ಮಜಿಜ್ಞಾಸೆಯನ್ನೇ ಮಾಡಬೇಕೆಂಬುದೇಕೆ? ಧರ್ಮಜಜ್ಞಾಸೆಯಾಗಬಾರದೇಕೆ ?—ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳಿದೆ ಎಂದು ಭಾವ.

2. 'ಬ್ರಹ್ಮಣೇ ಜಿಜ್ಞಾಸಾ' (ಬ್ರಹ್ಮಕ್ಕಾಗಿ ಜಿಜ್ಞಾಸೆ) ಎಂಬ ವೃತ್ತಿಕಾರರ ವಿಗ್ರಹವಾಕ್ಯವು ವ್ಯಾಕರಣಕ್ಕೆ ಅಷ್ಟು ಸಮ್ಮತವಲ್ಲವೆಂದು ಭಾವ. **ವೃತ್ತಿಕಾರರ ವಿಷಯಕ್ಕೆ ಪೀಠಿಕೆಯನ್ನು** ನೋಡಿ.

3. ಬ್ರಾಹ್ಮಣ ಜಾತಿ, ಜೀವ, ಚತುರ್ಮುಖಬ್ರಹ್ಮ, ವೇದ—ಎಂಬ ಅರ್ಥವನ್ನು ಶಂಕಿಸಿ ಒಬ್ಬ ವೃತ್ತಿಕಾರರು ಪರಿಹಾರವನ್ನು ಹೇಳಿದ್ದರಂತೆ, ಅದು ಬೇಕಿಲ್ಲವೆಂದು ಭಾವ.

ಚೇತ್ । ನ । ಪ್ರಧಾನಪರಿಗ್ರಹೇ ತದಪೇಕ್ಷಿತಾನಾಮ್ ಅರ್ಥಾಕ್ಷಿಪ್ತತ್ವಾತ್ । ಬ್ರಹ್ಮ ಹಿ ಜ್ಞಾನೇನ ಆಪ್ತುಮಿಷ್ಟತಮತ್ವಾತ್ ಪ್ರಧಾನಮ್ । ತಸ್ಮಿನ್ ಪ್ರಧಾನೇ ಜಿಜ್ಞಾಸಾ ಕರ್ಮಣಿ ಪರಿಗೃಹೀತೇ ಯೈರ್ಜಿಜ್ಞಾಸಿತೈರ್ವಿನಾ ಬ್ರಹ್ಮ ಜಿಜ್ಞಾಸಿತಂ ನ ಭವತಿ ತಾನಿ ಅರ್ಥಾಕ್ಷಿಪ್ತಾನ್ಯೇವ ಇತಿ ನ ಪೃಥಕ್ ಸೂತ್ರಯಿತವ್ಯಾನಿ । ಯಥಾ 'ರಾಜಾಸೌ ಗಚ್ಛತಿ' ಇತ್ಯುಕ್ತೇ ಸಪರಿವಾರಸ್ಯ ರಾಜ್ಞೋ ಗಮನಮ್ ಉಕ್ತಂ ಭವತಿ, ತದ್ವತ್ ॥

(ಭಾಷ್ಯಾರ್ಥ)

'ಬ್ರಹ್ಮದ' ಎಂಬಲ್ಲಿ ಕರ್ಮವನ್ನು ಹೇಳುವದಕ್ಕೆ ಷಷ್ಠೀವಿಭಕ್ತಿಯು ಬಂದಿದೆ(ಯೇ ಹೊರತು) ಶೇಷವನ್ನು ಹೇಳುವದಕ್ಕೆ ಬಂದಿಲ್ಲ.[1] ಏಕೆಂದರೆ ಜಿಜ್ಞಾಸೆಗೆ ಜಿಜ್ಞಾಸ್ಯ (ವಾದದ್ದು) ಬೇಕಾಗಿರುತ್ತದೆ, (ಈ ಸೂತ್ರದಲ್ಲಿ) ಬೇರೊಂದು ಜಿಜ್ಞಾಸ್ಯವನ್ನು ಹೇಳಿಯೂ ಇಲ್ಲ.

(ಪೂರ್ವಪಕ್ಷಿ)—ಶೇಷಷಷ್ಠಿಯನ್ನು ಇಟ್ಟುಕೊಂಡರೂ ಬ್ರಹ್ಮವು ಜಿಜ್ಞಾಸೆಗೆ ಕರ್ಮವೆಂಬುದಕ್ಕೆ ವಿರೋಧವೇನೂ ಆಗುವದಿಲ್ಲವಲ್ಲ! ಸಾಮಾನ್ಯವಾದ ಸಂಬಂಧವು ವಿಶೇಷದಲ್ಲಿ ಕೊನೆಗಾಣಬೇಕಲ್ಲವೆ?[2]

(ಸಿದ್ಧಾಂತಿ) — ಹೀಗೆಂದು ಒಪ್ಪಿದರೂ ಪ್ರತ್ಯಕ್ಷವಾಗಿರುವ[3] ಬ್ರಹ್ಮದ ಕರ್ಮತ್ವವನ್ನು ಬಿಟ್ಟು ಸಾಮಾನ್ಯ(ಸಂಬಂಧದ) ಮೂಲಕವಾಗಿ (ಅದಕ್ಕೆ) ಪರೋಕ್ಷವಾದ[4] ಕರ್ಮತ್ವವನ್ನು ಕಲ್ಪಿಸುವವನಿಗೆ ವ್ಯರ್ಥವಾಗಿ ಪ್ರಯಾಸವಾಗುವದಲ್ಲ!

(ಪೂರ್ವಪಕ್ಷಿ).—ವ್ಯರ್ಥವಲ್ಲ. ಏಕೆಂದರೆ ಬ್ರಹ್ಮವನ್ನು ಆಶ್ರಯಿಸಿರುವದನ್ನೆಲ್ಲ ವಿಚಾರಮಾಡುತ್ತೇವೆಂದು ಪ್ರತಿಜ್ಞೆಮಾಡಿ (ದಂತಾಗುವ) ದಕ್ಕೆ (ಅದು ಬೇಕಾಗುತ್ತದೆ.)

---

1. ಶೇಷವೆಂದರೆ ಕಾರಕವನ್ನು ಹೇಳದೆ ಉಳಿದ ಸಂಬಂಧಗಳನ್ನು ಹೇಳುವ ಅರ್ಥ. ಒಬ್ಬ **ವೃತ್ತಿಕಾರರು** ಶೇಷಷಷ್ಠಿಯನ್ನು ಒಪ್ಪಿದ್ದರು.

2. ಶೇಷಷಷ್ಠಿಯು ಸಂಬಂಧವನ್ನು ಹೇಳುತ್ತದೆ; ಸಾಮಾನ್ಯವಾಗಿ 'ಸಂಬಂಧ'ವೆಂದು ಹೇಳಿದರೆ ಆ ಸಂಬಂಧವು ಯಾವದು?_ಎಂಬ ವಿಶೇಷಾಕಾಂಕ್ಷೆಯುಂಟಾಗಿಯೇ ತೀರುವದು. ಅದು ಕರ್ಮತ್ವವೆಂದು ತಿಳಿಸಿದಲ್ಲದೆ ಪೂರ್ತಿಯಾಗುವದಿಲ್ಲ ಆದ್ದರಿಂದ ನಿಮ್ಮ ಅಭಿಪ್ರಾಯವು ಶೇಷಷಷ್ಠಿಯನ್ನು ಅಂಗೀಕರಿಸಿದಾಗಲೂ ಬರುವದಲ್ಲ'_ಎಂದು ಭಾವ.

3. ಶಬ್ದದಿಂದ ನೇರಾಗಿ ತಿಳಿದುಬರುವ.

4. ಕರ್ಮತ್ವವನ್ನು ಶಬ್ದವು ಹೇಳುತ್ತದೆ ಎಂಬುದನ್ನು ಬಿಟ್ಟು ಅರ್ಥವಶದಿಂದ ಅದನ್ನು ಕಲ್ಪಿಸುವದರಿಂದ ನಿಮ್ಮ ಮತದಲ್ಲಿ ಕರ್ಮತ್ವವು ಪರೋಕ್ಷವಾಯಿತು ಎಂದು ಭಾವ.

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಮುಖ್ಯವಾದದ್ದನ್ನು ತೆಗೆದುಕೊಂಡರೆ ಅದಕ್ಕೆ ಬೇಕಾದವುಗಳನ್ನು ಅರ್ಥದಿಂದಲೇ ತೆಗೆದುಕೊಂಡಂತೆ ಆಗುತ್ತದೆ. ಹೇಗೆಂದರೆ (ಇಲ್ಲಿ) ಬ್ರಹ್ಮವು ಜ್ಞಾನದಿಂದ ಹೊಂದುವದಕ್ಕೆ ಇಷ್ಟತಮವಾಗಿರುವದರಿಂದ (ಅದೇ) ಮುಖ್ಯವಾದದ್ದು ; ಆ ಮುಖ್ಯವಾದ ಜಿಜ್ಞಾಸಾಕರ್ಮವನ್ನು ತೆಗೆದುಕೊಂಡರೆ, (ಯಾವ) ಯಾವವುಗಳನ್ನು ಜಿಜ್ಞಾಸೆಮಾಡಿದ ಹೊರತು ಬ್ರಹ್ಮವನ್ನು ಜಿಜ್ಞಾಸೆ ಮಾಡಿದಂತೆ ಆಗುವದಿಲ್ಲವೋ, ಅವುಗಳನ್ನು ಅರ್ಥದಿಂದ ತೆಗೆದುಕೊಂಡಂತೆಯೇ (ಆಗುತ್ತದೆ)ಯಾದ್ದರಿಂದ (ಅವನ್ನು) ಬೇರೆಯಾಗಿ ಸೂತ್ರದಿಂದ ತಿಳಿಸಬೇಕಾದದ್ದಿರುವದಿಲ್ಲ.[1] 'ಅಗೊ, ಅರಸನು ಹೋಗುತ್ತಿದಾನೆ' ಎಂದರೆ ಪರಿವಾರದೊಡನೆಯೇ ಅರಸು ಹೋಗುತ್ತಿರುವನೆಂದು ಹೇಳಿದಂತೆ ಆಗುವದಿಲ್ಲವೆ ? ಅದರಂತೆಯೇ (ಇದು).

(ಭಾಷ್ಯ)

೧೭. ಶ್ರುತ್ಯನುಗಮಾಚ್ಚ । "ಯತೋ ವಾ ಇಮಾನಿ ಭೂತಾನಿ ಜಾಯನ್ತೇ" (ತೈ ೩-೧) ಇತ್ಯಾದ್ಯಾಃ ಶ್ರುತಯಃ "ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ" (ತೈ. ೩-೧) ಇತಿ ಪ್ರತ್ಯಕ್ಷಮೇವ ಬ್ರಹ್ಮಣೋ ಜಿಜ್ಞಾಸಾಕರ್ಮತ್ವಂ ದರ್ಶಯನ್ತಿ ! ತಚ್ಚ ಕರ್ಮಣಿಷಷ್ಠೀಪರಿಗ್ರಹೇ ಸೂತ್ರೇಣ ಅನುಗತಂ ಭವತಿ । ತಸ್ಮಾತ್ 'ಬ್ರಹ್ಮಣಃ' ಇತಿ ಕರ್ಮಣಿ ಷಷ್ಠೀ ॥

(ಭಾಷ್ಯಾರ್ಥ)

ಶ್ರುತಿಯನ್ನು ಅನುಸರಿಸಿದಂತೆ ಆಗುವದರಿಂದಲೂ (ಇದು ಕರ್ಮವನ್ನು ಹೇಳುವ ಷಷ್ಠಿ ಎನ್ನುವದೇ ಯುಕ್ತವು). "ಯಾವದರಿಂದಲೇ ಈ ಭೂತಗಳು ಉಂಟಾಗುತ್ತಿವೆಯೋ" (ತೈ. ೩-೧) ಮುಂತಾದ ಶ್ರುತಿಗಳು "ಅದನ್ನು ಜಿಜ್ಞಾಸೆ ಮಾಡು, ಅದು ಬ್ರಹ್ಮವು" (ತೈ.೩-೧) ಎಂದು ಪ್ರತ್ಯಕ್ಷವಾಗಿಯೇ ಬ್ರಹ್ಮವು ಜಿಜ್ಞಾಸೆಗೆ ಕರ್ಮವೆಂದು ಹೇಳುತ್ತಿವೆ. (ಈ) ಷಷ್ಠಿಯು ಕರ್ಮವೆಂಬ ಅರ್ಥದಲ್ಲಿ (ಪ್ರಯುಕ್ತವಾಗಿದೆ) ಎಂದಿಟ್ಟುಕೊಂಡರೆ ಅದನ್ನೂ ಸೂತ್ರವು ಅನುಸರಿಸಿದಂತೆ ಆಗುವದು. ಆದ್ದರಿಂದ 'ಬ್ರಹ್ಮದ' ಎಂಬುದು ಕರ್ಮವೆಂಬ (ಅರ್ಥ)ದಲ್ಲಿ (ಪ್ರಯುಕ್ತ ವಾಗಿರುವ) ಷಷ್ಠೀ (ವಿಭಕ್ತಿಯು).

---

1. ಆದ್ದರಿಂದ ಅದಕ್ಕಾಗಿ ಶೇಷಷಷ್ಠಿಯನ್ನು ಕಲ್ಪಿಸುವದು ವ್ಯರ್ಥಪ್ರಯಾಸವೇ ಸರಿ ಎಂದು ಭಾವ.

## ಜಿಜ್ಞಾಸೆ ಎಂಬುದರ ವಿವರ

(ಭಾಷ್ಯ)

೧೮. ಜ್ಞಾತುಮ್ ಇಚ್ಛಾ ಜಿಜ್ಞಾಸಾ। ಅವಗತಿಪರ್ಯನ್ತಂ ಜ್ಞಾನಂ ಸನ್ವಾಚ್ಯಾಯಾ ಇಚ್ಛಾಯಾಃ ಕರ್ಮ। ಫಲವಿಷಯತ್ವಾತ್ ಇಚ್ಛಾಯಾಃ।ಜ್ಞಾನೇನ ಹಿ ಪ್ರಮಾಣೇನ ಅವಗನ್ತುಮ್ ಇಷ್ಟಂ ಬ್ರಹ್ಮ। ಬ್ರಹ್ಮಾವಗತಿ ರ್ಹಿ ಪುರುಷಾರ್ಥಃ। ನಿಃಶೇಷಸಂಸಾರಬೀಜಾವಿದ್ಯಾದ್ಯನರ್ಥನಿಬರ್ಹಣಾತ್। ತಸ್ಮಾತ್ ಬ್ರಹ್ಮ ವಿಜಿಜ್ಞಾಸಿತವ್ಯಮ್ ॥

(ಭಾಷ್ಯಾರ್ಥ)

ಜಿಜ್ಞಾಸೆ ಎಂದರೆ ಅರಿತುಕೊಳ್ಳಬೇಕೆಂಬ ಇಚ್ಛೆ. ಅರಿವಿನಲ್ಲಿ ಕೊನೆಗಾಣುವ ಜ್ಞಾನವು ಸನ್(ಪ್ರತ್ಯಯಕ್ಕೆ)ವಾಚ್ಯವಾದ ಇಚ್ಛೆಗೆ ಕರ್ಮವು[1]. ಏಕೆಂದರೆ ಇಚ್ಛೆಯು ಫಲದ ವಿಷಯದಲ್ಲಿ (ಉಂಟಾಗುತ್ತದೆ)[2]. ಜ್ಞಾನವೆಂಬ ಪ್ರಮಾಣದಿಂದ ಬ್ರಹ್ಮವನ್ನು ಅರಿತುಕೊಳ್ಳಬೇಕೆಂದೇ (ನಾವು) ಇಚ್ಛಿಸುವದು, ಏಕೆಂದರೆ ಬ್ರಹ್ಮದ ಅರಿವು ಸಂಸಾರಕ್ಕೆ ಬೀಜವಾಗಿರುವ[3] ಅವಿದ್ಯೆಯೇ ಮುಂತಾದ ಅನರ್ಥಗಳನ್ನು ಸ್ವಲ್ಪವೂ ಉಳಿಯದಂತೆ ನಾಶಗೊಳಿಸುವದರಿಂದ (ಅದೇ) ಪುರುಷಾರ್ಥವು. ಆದ್ದರಿಂದ ಬ್ರಹ್ಮವನ್ನು ಅರಿಯಲು ಇಚ್ಛೆ ಮಾಡಬೇಕು.[4]

## ಬ್ರಹ್ಮಸ್ವರೂಪವು ಪ್ರಸಿದ್ಧವಾಗಿದ್ದರೂ ಜಿಜ್ಞಾಸ್ಯ

(ಭಾಷ್ಯ)

೧೯. ತತ್ ಪುನರ್ಬ್ರಹ್ಮ ಪ್ರಸಿದ್ಧಮ್ ಅಪ್ರಸಿದ್ಧಂ ವಾ ಸ್ಯಾತ್। ಯದಿ

---

1. ಜಿಜ್ಞಾಸಾ ಎಂಬಲ್ಲಿ 'ಸಾ' ಎಂದಿರುವ ಪ್ರತ್ಯಯಕ್ಕೆ ಸನ್ ಎಂದು ಸಂಸ್ಕೃತ ವ್ಯಾಕರಣದ ಹೆಸರು, ಆ ಪ್ರತ್ಯಯಕ್ಕೆ ಅರ್ಥವು ಇಚ್ಛೆ ಇಚ್ಛಿಸುವದು ಯಾವದನ್ನ? ಎಂದರೆ ಜ್ಞಾನವೆಂಬ ಪ್ರಮಾಣವನ್ನಲ್ಲ, ಅದರಿಂದುಂಟಾಗುವ ಅವಗತಿ (ಅರಿವು) ಎಂಬ ಫಲವನ್ನ. ಇದನ್ನು ಪ್ರಮಿತಿ ಎಂದು ಕರೆಯುತ್ತಾರೆ

2. ಆದ್ದರಿಂದ 'ಜ್ಞಾನಕ್ಕಾಗಿ ಇಚ್ಛೆ' ಎಂಬಲ್ಲಿ ಜ್ಞಾನವೆಂದರೆ ಕರಣವಲ್ಲ, ಫಲ.

3. ಅವಿದ್ಯೆ, ಕಾಮ, ಕರ್ಮ–ಇವು ಸಂಸಾರಕ್ಕೆ ಬೀಜ ಎಂದರೆ ಕಾರಣ.

4. ಬ್ರಹ್ಮದ ಅರಿವೆಂಬ ಜ್ಞಾನವು ಆತ್ಮಾನಾತ್ಮರ ಅಧ್ಯಾಸವೆಂಬ ಅಜ್ಞಾನವನ್ನು ನಾಶಗೊಳಿಸಿ, ಅಜ್ಞಾನದ ಕಾರ್ಯವಾದ ಅನರ್ಥಗಳನ್ನೆಲ್ಲ ನಾಶಗೊಳಿಸುವದರಿಂದ ಜಿಜ್ಞಾಸೆಯನ್ನು ಮಾಡಬೇಕು ಎಂದರ್ಥ. ಉಪೋದ್ಘಾತದಲ್ಲಿ ಅವಿದ್ಯೆಯನ್ನು ವಿಚಾರಮಾಡಿರುವದು ಸಂಸಾರವೆಲ್ಲವೂ ಅವಿದ್ಯಾತ್ಮಕವೆಂದು ತಿಳಿಸುವದಕ್ಕೆ.

ಪ್ರಸಿದ್ಧಮ್, ನ ಜಿಜ್ಞಾಸಿತವ್ಯಮ್। ಅಥ ಅಪ್ರಸಿದ್ಧಮ್, ನೈವ ಶಕ್ಯಂ ಜಿಜ್ಞಾಸಿತುಮ್ ಇತಿ। ಉಚ್ಯತೇ। ಅಸ್ತಿ ತಾವದ್ ಬ್ರಹ್ಮ ನಿತ್ಯಶುದ್ಧಬುದ್ಧಮುಕ್ತಸ್ವಭಾವಮ್, ಸರ್ವಜ್ಞಮ್, ಸರ್ವಶಕ್ತಿಸಮನ್ವಿತಮ್। ಬ್ರಹ್ಮಶಬ್ದಸ್ಯ ಹಿ ವ್ಯುತ್ಪಾದ್ಯಮಾನಸ್ಯ, ನಿತ್ಯಶುದ್ಧತ್ವಾದಯಃ ಅರ್ಥಾಃ ಪ್ರತೀಯನ್ತೇ। ಬೃಹತೇ ರ್ಧಾತೋಃ ಅರ್ಥಾನುಗಮಾತ್। ಸರ್ವಸ್ಯ ಆತ್ಮತ್ವಾಚ್ಚ ಬ್ರಹ್ಮಾಸ್ತಿತ್ವಪ್ರಸಿದ್ಧಿಃ। ಸರ್ವೋ ಹಿ ಆತ್ಮಾಸ್ತಿತ್ವಂ ಪ್ರತ್ಯೇತಿ ನ ನಾಹಮಸ್ಮಿ ಇತಿ। ಯದಿ ಹಿ ನಾತ್ಮಾಸ್ತಿತ್ವಪ್ರಸಿದ್ಧಿಃ ಸ್ಯಾತ್ ಸರ್ವೋ ಲೋಕೋ ನಾಹಮಸ್ಮಿ ಇತಿ ಪ್ರತೀಯಾತ್। ಆತ್ಮಾ ಚ ಬ್ರಹ್ಮ ॥

(ಭಾಷ್ಯಾರ್ಥ)

(ಆಕ್ಷೇಪ).– ಈ ಬ್ರಹ್ಮವು (ಈಗ) ಪ್ರಸಿದ್ಧವಾಗಿರುವದೊ, ಇಲ್ಲವೊ? ಪ್ರಸಿದ್ಧವಾಗಿದ್ದರೆ ಜಿಜ್ಞಾಸೆಮಾಡಬೇಕಾದದ್ದಿಲ್ಲ, ಹಾಗಿಲ್ಲದೆ (ಅದು) ಅಪ್ರಸಿದ್ಧವಾಗಿದ್ದರೆ ಜಿಜ್ಞಾಸೆಮಾಡಲು ಶಕ್ಯವೇ ಅಲ್ಲವಲ್ಲ[1]!

(ಪರಿಹಾರ) ಹೇಳುತ್ತೇವೆ, (ಕೇಳು). ಮೊದಲನೆಯದಾಗಿ ನಿತ್ಯಶುದ್ಧಬುದ್ಧಮುಕ್ತಸ್ವಭಾವವುಳ್ಳ ಸರ್ವಜ್ಞವೂ ಸರ್ವಶಕ್ತಿಗಳಿಂದೊಡಗೂಡಿದ್ದೂ ಆಗಿರುವ ಬ್ರಹ್ಮವು ಇರುವದು ಪ್ರಸಿದ್ಧವಾಗಿದೆ. ಏಕೆಂದರೆ ಬೃಹ್ ಎಂಬ ಧಾತುವಿನ ಅರ್ಥವನ್ನು ಅನುಸರಿಸಿ "ಬ್ರಹ್ಮ" ಎಂಬ ಶಬ್ದದ ವ್ಯುತ್ಪತ್ತಿಯನ್ನು ಮಾಡಿದರೆ[2] ನಿತ್ಯಶುದ್ಧತ್ವವೇ ಮುಂತಾದ ಅರ್ಥಗಳು ತೋರುತ್ತವೆ. ಎಲ್ಲರ ಆತ್ಮನಾಗಿರುವದರಿಂದಲೂ[3]

---

1. ಸಂದಿಗ್ಧವೂ ಸಪ್ರಯೋಜನವೂ ಆಗಿದ್ದರೆ ಅದನ್ನು ವಿಚಾರಮಾಡುವದು ಯುಕ್ತ. ಆದರೆ ಎಲ್ಲರಿಗೂ ಗೊತ್ತೇ ಇರುವ ವಸ್ತುವನ್ನು ವಿಚಾರಮಾಡುವದು ವ್ಯರ್ಥ, ಯಾರಿಗೂ ಗೊತ್ತಿಲ್ಲದ ಅತ್ಯಂತ ಅಪ್ರಸಿದ್ಧವಾದ ವಿಷಯವನ್ನು ವಿಚಾರಮಾಡುವದು ಯಾರಿಂದಲೂ ಆಗದು ಎಂದು ಪೂರ್ವಪಕ್ಷಿಯ ಭಾವ, ಧರ್ಮಜಿಜ್ಞಾಸೆಯ ವಿಷಯದಲ್ಲಿ ಇದೇ ಬಗೆಯ ಶಂಕೆಯನ್ನು ಹಾಕಿಕೊಂಡು ಪೂರ್ವಮೀಮಾಂಸದ ಮೊದಲನೆಯ ಸೂತ್ರದ ಭಾಷ್ಯದಲ್ಲಿ ಬರೆದಿರುವ ಪರಿಹಾರವನ್ನು ಇದಕ್ಕೆ ಹೋಲಿಸಿರಿ

2. ಬ್ರಹ್ಮವು ಅಪ್ರಸಿದ್ಧ ಎಂದರೆ ಬ್ರಹ್ಮಶಬ್ದಕ್ಕೆ ಅರ್ಥವೇ ಇಲ್ಲ ಎಂದಭಿಪ್ರಾಯವೊ, ಅಥವಾ ಅಂಥ ಪದಾರ್ಥವು ಯಾರ ಅನುಭವದಲ್ಲಿಯೂ ಇಲ್ಲ ಎಂದಭಿಪ್ರಾಯವೊ?–ಎಂದು ವಿಕಲ್ಪಿಸಿ ಮೊದಲನೆಯ ವಿಕಲ್ಪಕ್ಕೆ ಇಲ್ಲಿ ಉತ್ತರವನ್ನು ಹೇಳಿರುತ್ತವೆ ಬ್ರಹ್ಮವೆಂಬ ಮಾತು ವೇದದಲ್ಲಿದೆಯಾದರೂ ಅದಕ್ಕೆ ವ್ಯಾಕರಣಾದಿಗಳಿಂದ ಸಿದ್ಧಮಾಡಬಹುದಾದ ಅರ್ಥವಿದೆ. ಅದು ಅಪ್ರಸಿದ್ಧವಾದದ್ದನ್ನು ತಿಳಿಸುವ ಶಬ್ದವಲ್ಲ.

3. ಬ್ರಹ್ಮವು ಎಲ್ಲರ ಆತ್ಮನೆಂದು ತಿಳಿಸುವದಕ್ಕೆ ಅದನ್ನು ಆತ್ಮನೆಂದೇ ಶ್ರುತಿಯಲ್ಲಿ ಕರೆದಿದೆ. ಆತ್ಮನು ಅತ್ಯಂತ ಪ್ರಸಿದ್ಧನಾಗಿರುತ್ತಾನೆ. ಆದ್ದರಿಂದಲೂ ಬ್ರಹ್ಮವು ಅಪ್ರಸಿದ್ಧವೆಂದು ಶಂಕಿಸುವದಕ್ಕೆ ಕಾರಣವಿಲ್ಲ ಎಂದು ಭಾವ.

ಬ್ರಹ್ಮವು ಇರುವದೆಂದು ಪ್ರಸಿದ್ಧವಾಗಿರುತ್ತದೆ. ಯಾವನೇ ಆಗಲಿ, ತಾನು ಇದೇನೆಂದು ತಿಳಿದುಕೊಂಡಿರುವನೇ ಹೊರತು 'ನಾನಿರುವದಿಲ್ಲ' ಎಂದು(ತಿಳಿದುಕೊಂಡಿರು)ವದಿಲ್ಲ ಆತ್ಮನು ಇರುವದು ಪ್ರಸಿದ್ಧವಾಗಿಲ್ಲದಿದ್ದರೆ ಪ್ರತಿಯೊಬ್ಬ ಮನುಷ್ಯನೂ 'ನಾನು ಇರುವದಿಲ್ಲ' ಎಂದು ತಿಳಿದುಕೊಳ್ಳಬಹುದಾಗಿತ್ತು.[1] (ಆದರೆ ಹಾಗಿರುವದಿಲ್ಲ) ಆತ್ಮನೇ ಬ್ರಹ್ಮವು (ಆದ್ದರಿಂದ ಬ್ರಹ್ಮವು ಇರುವದೆಂದು ಪ್ರಸಿದ್ಧವಾಗಿರುತ್ತದೆ)

(ಭಾಷ್ಯ)

೨೦. ಯದಿ ತರ್ಹಿ ಲೋಕೇ ಬ್ರಹ್ಮ ಆತ್ಮತ್ವೇನ ಪ್ರಸಿದ್ಧಮ್ ಅಸ್ತಿ ತತಃ ಜ್ಞಾತಮೇವ ಇತಿ ಅಜಿಜ್ಞಾಸ್ಯತ್ವಂ ಪುನರಾಪನ್ನಮ್। ನ। ತದ್ವಿಶೇಷಂ ಪ್ರತಿ ವಿಪ್ರತಿಪತ್ತೇಃ। ದೇಹಮಾತ್ರಂ ಚೈತನ್ಯವಿಶಿಷ್ಟಮ್ ಆತ್ಮಾ ಇತಿ ಪ್ರಾಕೃತಾ ಜನಾಃ ಲೌಕಾಯತಿಕಾಶ್ಚ ಪ್ರತಿಪನ್ನಾಃ। ಇನ್ದ್ರಿಯಾಣ್ಯೇವ ಚೇತನಾನಿ ಆತ್ಮಾ ಇತ್ಯಪರೇ। ಮನ ಇತ್ಯನ್ಯೇ। ವಿಜ್ಞಾನಮಾತ್ರಂ ಕ್ಷಣಿಕಮ್ ಇತ್ಯೇಕೇ। ಶೂನ್ಯಮ್ ಇತ್ಯಪರೇ। ಅಸ್ತಿ ದೇಹಾದಿವ್ಯತಿರಿಕ್ತಃ ಸಂಸಾರೀ ಕರ್ತಾ ಭೋಕ್ತಾ ಇತ್ಯಪರೇ। ಭೋಕ್ತೈವ ಕೇವಲಂ ನ ಕರ್ತಾ ಇತ್ಯೇಕೇ। ಅಸ್ತಿ ತದ್ವ್ಯತಿರಿಕ್ತ ಈಶ್ವರಃ ಸರ್ವಜ್ಞಃ ಸರ್ವಶಕ್ತಿಃ ಇತಿ, ಕೇಚಿತ್। ಆತ್ಮಾ ಸ ಭೋಕ್ತುಃ ಇತ್ಯಪರೇ। ಏವಂ ಬಹವೋ ವಿಪ್ರತಿಪನ್ನಾಃ ಯುಕ್ತಿವಾಕ್ಯತದಾಭಾಸಸಮಾಶ್ರಯಾಃ ಸನ್ತಃ। ತತ್ರ ಅವಿಚಾರ್ಯ ಯತ್ಕಿಂಚಿತ್ ಪ್ರತಿಪದ್ಯಮಾನಃ ನಿಃಶ್ರೇಯಸಾತ್ ಪ್ರತಿಹನ್ಯೇತ। ಅನರ್ಥಂ ಚ ಇಯಾತ್। ತಸ್ಮಾತ್ ಬ್ರಹ್ಮಜಿಜ್ಞಾಸೋಪನ್ಯಾಸಮುಖೇನ ವೇದಾನ್ತವಾಕ್ಯಮೀಮಾಂಸಾ ತದವಿರೋಧಿತರ್ಕೋಪಕರಣಾ ನಿಃಶ್ರೇಯಸಪ್ರಯೋಜನಾ ಪ್ರಸ್ತೂಯತೇ ॥

(ಭಾಷ್ಯಾರ್ಥ)

(ಆಕ್ಷೇಪ):—ಹಾಗಾದರೆ ಲೋಕದಲ್ಲಿ ಬ್ರಹ್ಮವು ಆತ್ಮರೂಪದಿಂದ ಪ್ರಸಿದ್ಧವಾಗಿದೆಯಾದರೆ ತಿಳಿದೇ ಇದೆಯೆಂದಾಯಿತಾಗಿ (ಅದನ್ನು) ಜಿಜ್ಞಾಸೆಮಾಡಬೇಕಾದದ್ದಿಲ್ಲವೆಂಬ (ಪಕ್ಷವೇ) ಮತ್ತೆ ಬಂದಿತಲ್ಲ!

(ಪರಿಹಾರ): ಹಾಗಲ್ಲ. ಏಕೆಂದರೆ ಆ (ಆತ್ಮನ) ವಿಶೇಷಸ್ವರೂಪದ ವಿಷಯದಲ್ಲಿ ವಿರುದ್ಧವಾದ ಅಭಿಪ್ರಾಯಗಳಿರುತ್ತವೆ. ಚೈತನ್ಯದಿಂದ ಕೂಡಿದ ದೇಹವೇ ಆತ್ಮನು ಎಂದು ಸಾಮಾನ್ಯಜನರೂ ಲೋಕಾಯತಿಕರೂ ತಿಳಿದುಕೊಂಡಿರುವರು. ಚೇತನವಾಗಿರುವ ಇಂದ್ರಿಯಗಳೇ ಆತ್ಮನೆಂದು ಮತ್ತೆ ಕೆಲವರು (ತಿಳಿದಿರುವರು). ಮನಸ್ಸೆಂದು ಕೆಲವರು, ಕ್ಷಣಿಕವಾದ ಬರಿಯ ವಿಜ್ಞಾನವೆಂದು ಕೆಲವರು,

---

1. ಆತ್ಮಪ್ರಸಿದ್ಧಿಯಿಲ್ಲದಿದ್ದರೆ ನಾನಿಲ್ಲ ಎಂದು ತಿಳಿದುಕೊಳ್ಳುವದಕ್ಕೂ ಬರಬೇಕಾಗಿತ್ತು ಎಂದರ್ಥ.

ಶೂನ್ಯವೆಂದು ಮತ್ತೆ ಕೆಲವರು, ದೇಹವೇ ಮುಂತಾದವುಗಳಿಗಿಂತ ಬೇರೆಯಾಗಿರುವ ಕರ್ತೃವೂ ಭೋಕ್ತೃವೂ ಆದ ಸಂಸಾರಿಯು ಇರುವನೆಂದು ಮತ್ತೆ ಕೆಲವರು (ತಿಳಿದಿರುತ್ತಾರೆ). ಅವನು ಬರಿಯ ಭೋಕ್ತೃವೇ ಹೊರತು ಕರ್ತೃವಲ್ಲ ಎಂದು ಕೆಲವರು (ತಿಳಿದಿರುವರು), ಅವನಿಗಿಂತ ಬೇರೆಯಾಗಿರುವ ಸರ್ವಜ್ಞನೂ ಸರ್ವ ಶಕ್ತನೂ ಆದ ಈಶ್ವರನು ಇರುತ್ತಾನೆ ಎಂದು ಕೆಲವರು (ಅಭಿಪ್ರಾಯಪಡುತ್ತಾರೆ). ಅವನು ಭೋಕ್ತೃವಾದ (ಜೀವನ) ಆತ್ಮನೇ ಎಂದು ಇನ್ನೂ ಕೆಲವರು (ಅಭಿಪ್ರಾಯ ಪಡುತ್ತಾರೆ)[1]. ಹೀಗೆ ಯುಕ್ತಿಗಳನ್ನೂ ವಾಕ್ಯಗಳನ್ನೂ ಇವುಗಳ ಆಭಾಸಗಳನ್ನೂ [2] ಆಶ್ರಯಿಸಿದವರಾಗಿ ಅನೇಕರು ವಿರುದ್ಧವಾದ (ಬಗೆಬಗೆಯ ಅಭಿಪ್ರಾಯಗಳನ್ನು ಪಡುತ್ತಿರುವರು). ಹೀಗಿರುವಲ್ಲಿ ವಿಚಾರವನ್ನು ಮಾಡದೆ ಇವುಗಳಲ್ಲಿ ಯಾವದೋ ಒಂದನ್ನು ನಂಬಿದವನು ಹೆಚ್ಚಿನ ಶ್ರೇಯಸ್ಸಾದ (ಮುಕ್ತಿಯನ್ನು) ಕಳೆದುಕೊಳ್ಳ ಬೇಕಾದೀತು, ಅನರ್ಥವನ್ನೂ ಹೊಂದಬೇಕಾದೀತು.[3] ಆದ್ದರಿಂದ (ಈ ಮೊದಲನೆಯ ಸೂತ್ರದಲ್ಲಿ) "ಬ್ರಹ್ಮವನ್ನು ಜಿಜ್ಞಾಸೆಮಾಡಬೇಕು" ಎಂದು ಹೇಳುವದರ ಮೂಲಕ ವಾಗಿ ಮುಕ್ತಿಯೆಂಬ ಪ್ರಯೋಜನವುಳ್ಳ **ವೇದಾಂತವಾಕ್ಯಮೀಮಾಂಸೆಯನ್ನು** [4] ಅದಕ್ಕೆ ವಿರೋಧವಿಲ್ಲದ ತರ್ಕವನ್ನು ಉಪಕರಣವಾಗಿಟ್ಟುಕೊಂಡು [5] ಪ್ರಾರಂಭಿ ಸಿರುತ್ತದೆ

## ೨ ಜನ್ಮಾದ್ಯಧಿಕರಣ

(ಬ್ರಹ್ಮದ ಲಕ್ಷಣ)

(ಭಾಷ್ಯ)

೨೧. ಬ್ರಹ್ಮ ಜಿಜ್ಞಾಸಿತವ್ಯಮ್ ಇತ್ಯುಕ್ತಮ್ । ಕಿಂಲಕ್ಷಣಂ ಪುನ ಸ್ತದ್ಬ್ರಹ್ಮ ಇತಿ ? ಅತ ಆಹ ಭಗವಾನ್ ಸೂತ್ರಕಾರಃ—

---

1. ಇದೇ ಆಚಾರ್ಯರಿಗೆ ಸಮ್ಮತವಾದ ಅಭಿಪ್ರಾಯ.

2. ಕೆಲವು ಸರಿಯಾದ ಯುಕ್ತಿಗಳು, ತತ್ಪರವಾದ ಪ್ರಬಲವಾಕ್ಯಗಳು, ಮತ್ತೆ ಕೆಲವು ದುಷ್ಟವಾದ ಯುಕ್ತಿಗಳು, ದುರ್ಬಲವಾದ ಅತತ್ಪರವಾಕ್ಯಗಳು. ಇವುಗಳಲ್ಲಿ ಯಾವವು ಸರಿ ಯಾದವು, ಯಾವವು ಪ್ರಮಾಣ ?–ಎಂಬುದನ್ನು ವಿಚಾರಮಾಡಿದಲ್ಲದೆ ಗೊತ್ತಾಗುವ ಹಾಗಿಲ್ಲ.

3. ತಪ್ಪನ್ನು ಸರಿ ಎಂದು ತಿಳಿದುಕೊಂಡು ಅದರಂತೆ ಅನುಷ್ಠಾನವನ್ನು ಮಾಡಿದರೆ ಪುರುಷಾರ್ಥವು ದೊರಕುವದೂ ಇಲ್ಲ, ಅನರ್ಥವೂ ಉಂಟಾಗುತ್ತದೆ.

4 ಬ್ರಹ್ಮವು ನಮ್ಮೆಲ್ಲರ ಆತ್ಮನು ಎಂಬುದು ವೇದಾಂತವಾಕ್ಯಗಳ ಉಪದೇಶವು. ಆದ್ದರಿಂದ ಬ್ರಹ್ಮವನ್ನು ಅರಿತುಕೊಳ್ಳುವ ಇಚ್ಛೆಯನ್ನು ಮಾಡಬೇಕು ಎಂದು ಹೇಳಿದ್ದರಿಂದ ವೇದಾಂತವಾಕ್ಯಗಳ ಸರಿಯಾದ ಅರ್ಥವನ್ನು ವಿಚಾರಮಾಡಿ ನಿಶ್ಚಯಿಸಿಕೊಳ್ಳಬೇಕು ಎಂದು ಹೇಳಿದ-ತೆ ಆಯಿತು. ಈ ವಿಚಾರವನ್ನು ಈ ಶಾಸ್ತ್ರದಲ್ಲಿ ಮಾಡಿರುವದರಿಂದ ಈ ಮೀಮಾಂಸಾ ಶಾಸ್ತ್ರವನ್ನು ಅದಕ್ಕಾಗಿ ಪ್ರಾರಂಭಿಸಿದೆ ಎಂದು ಪ್ರತಿಜ್ಞೆಮಾಡಿದಂತೆಯೂ ಆಯಿತು ಎಂದರ್ಥ.

5. ವಾಕ್ಯಮೀಮಾಂಸೆಯು ಕರಣವು, ಅದಕ್ಕೆ ಅನುಕೂಲವಾದ ತರ್ಕವು ಉಪಕರಣವು.

(ಭಾಷ್ಯಾರ್ಥ)

ಬ್ರಹ್ಮವನ್ನು ಜಿಜ್ಞಾಸೆಮಾಡತಕ್ಕದ್ದೆಂದು (ಹಿಂದಿನ ಸೂತ್ರದಲ್ಲಿ) ಹೇಳಿದೆಯಷ್ಟೆ; ಆ ಬ್ರಹ್ಮದ ಲಕ್ಷಣವೇನು?-ಎಂದರೆ ಪೂಜ್ಯರಾದ ಸೂತ್ರಕಾರರು ಹೇಳುತ್ತಾರೆ :—

**ಜನ್ಮಾದ್ಯಸ್ಯ ಯತಃ ॥ ೨ ॥**

೨. ಈ ಜಗತ್ತಿನ ಹುಟ್ಟು ಮುಂತಾದದ್ದು ಪತರಿಂದ ಆಗುವದೋ (ಅದು ಬ್ರಹ್ಮವು).

## ಜನ್ಮಾದಿ ಎಂಬುದರ ವಿವರ

(ಭಾಷ್ಯ)

೨೨. ಜನ್ಮ ಉತ್ಪತ್ತಿಃ ಆದಿಃ ಅಸ್ಯ ಇತಿ ತದ್ಗುಣಸಂವಿಜ್ಞಾನೋ ಬಹುವ್ರೀಹಿಃ। ಜನ್ಮಸ್ಥಿತಿಭಙ್ಗಂ ಸಮಾಸಾರ್ಥಃ। ಜನ್ಮನಶ್ಚ ಆದಿತ್ವಂ ಶ್ರುತಿನಿರ್ದೇಶಾಪೇಕ್ಷಂ ವಸ್ತುವೃತ್ತಾಪೇಕ್ಷಂ ಚ। ಶ್ರುತಿನಿರ್ದೇಶಸ್ತಾವತ್ "ಯತೋ ವಾ ಇಮಾನಿ ಭೂತಾನಿ ಜಾಯನ್ತೇ" (ತೈ ೩-೧) ಇತ್ಯಸ್ಮಿನ್ ವಾಕ್ಯೇ ಜನ್ಮಸ್ಥಿತಿಪ್ರಲಯಾನಾಂ ಕ್ರಮದರ್ಶನಾತ್। ವಸ್ತುವೃತ್ತಮಪಿ ಜನ್ಮನಾ ಲಬ್ಧಸತ್ತಾಕಸ್ಯ ಧರ್ಮಿಣಃ ಸ್ಥಿತಿಪ್ರಲಯಸಂಭವಾತ್ ॥

(ಭಾಷ್ಯಾರ್ಥ)

ಜನ್ಮವು ಎಂದರೆ ಉತ್ಪತ್ತಿಯು ಈ (ಸಮುದಾಯಕ್ಕೆ) ಆದಿ (ಯಾಗಿರುವದರಿಂದ ಇದು ಜನ್ಮಾದಿ) ಎಂದು ತದ್ಗುಣಸಂವಿಜ್ಞಾನಬಹುವ್ರೀಹಿ[1] (ಸಮಾಸವಿದು. ಈ) ಸಮಾಸಕ್ಕೆ ಜನ್ಮಸ್ಥಿತಿಲಯ(ಗಳ ಒಟ್ಟು) ಎಂದು ಅರ್ಥ. (ಹುಟ್ಟುವದು, ಇರುವದು, ಅಡಗುವದು–ಇವುಗಳಲ್ಲಿ) ಹುಟ್ಟುವದೇ ಮೊದಲು ಎಂಬುದು ಶ್ರುತಿಯಲ್ಲಿ ಹೇಳಿರುವದನ್ನೂ ಅನುಸರಿಸುತ್ತದೆ, ವಸ್ತುಸ್ವಭಾವವನ್ನೂ ಅನುಸರಿಸಿರುತ್ತದೆ.

---

1. ವಿಶೇಷ್ಯದಲ್ಲಿ ಒಂದು ಭಾಗವನ್ನೇ ಅದಕ್ಕೆ ವಿಶೇಷಣವಾಗಿ ಗ್ರಹಿಸುವ ಸಮಾಸವು. ಉದಾಹರಣೆಗೆ ಲಂಬಕರ್ಣ (ಉದ್ದಕಿವಿಯವನು) ಎಂಬಲ್ಲಿ ಉದ್ದನೆಯ ಕಿವಿಯು ವಿಶೇಷ್ಯದಲ್ಲಿ ಒಂದು ಭಾಗವಾಗಿದ್ದು ಅದಕ್ಕೆ ವಿಶೇಷಣವಾಗಿರುತ್ತದೆ. ಆದ್ದರಿಂದ ಲಂಬಕರ್ಣ ಎಂಬುದು ತದ್ಗುಣಸಂವಿಜ್ಞಾನಬಹುವ್ರೀಹಿ ಆದರೆ 'ಚಿತ್ರಗು' (ಹಂಡೆಹಸುಗಳುಳ್ಳವನು) ಎಂಬಲ್ಲಿ ಹಸುವು ವಿಶೇಷ್ಯದ ಭಾಗವಲ್ಲ; ಆದ್ದರಿಂದ ಅದು ಅತದ್ಗುಣಸಂವಿಜ್ಞಾನಬಹುವ್ರೀಹಿ.

ಮೊದಲನೆಯದಾಗಿ ಶ್ರುತಿಯಲ್ಲಿ ಹೇಳಿರುವದು (ಹೇಗೆಂದರೆ), "ಈ ಭೂತಗಳು ಯಾವದರಿಂದಲೇ ಹುಟ್ಟುತ್ತವೆಯೋ (ಯಾವದರಿಂದ ಹುಟ್ಟಿದವು ಜೀವಿಸಿರುವವೋ, ಯಾವದರ ಕಡೆಗೆ ಹೋಗಿ ಸೇರಿಕೊಳ್ಳುವವೋ ಅದು ಬ್ರಹ್ಮವು)" (ತೈ. ೩-೧) ಎಂಬ ವಾಕ್ಯದಲ್ಲಿ[1] ಜನ್ಮ, ಸ್ಥಿತಿ, ಪ್ರಲಯ-ಇವುಗಳನ್ನು ಕ್ರಮವಾಗಿ ಹೇಳಿರುತ್ತದೆ. (ಇನ್ನು) ವಸ್ತುಸ್ವಭಾವ(ವನ್ನು ನೋಡಿದರೆ) ಅದೂ (ಹೀಗೆಯೇ ಇದೆ), ಏಕೆಂದರೆ ಧರ್ಮಿಯಾದ ವಸ್ತುವು ಹುಟ್ಟಿ ಇರವನ್ನು ಪಡೆದುಕೊಂಡಮೇಲೆಯೇ ಅದಕ್ಕೆ ಸ್ಥಿತಿ, ಪ್ರಲಯ-ಇವು ಸಂಭವಿಸುತ್ತವೆ.

## ಅಸ್ಯ ಎಂಬುದರ ಅರ್ಥ

(ಭಾಷ್ಯ)

೨೩. 'ಅಸ್ಯ' ಇತಿ ಪ್ರತ್ಯಕ್ಷಾದಿಸಂನಿಧಾಪಿತಸ್ಯ ಧರ್ಮಿಣಃ ಇದಮಾ ನಿರ್ದೇಶಃ । ಷಷ್ಠೀ ಜನ್ಮಾದಿಧರ್ಮಸಂಬನ್ಧಾರ್ಥಾ ॥

(ಭಾಷ್ಯಾರ್ಥ)

'ಅಸ್ಯ' (ಇದಕ್ಕೆ) ಎಂಬಲ್ಲಿ ಪ್ರತ್ಯಕ್ಷವೇ ಮುಂತಾದ (ಪ್ರಮಾಣಗಳಿಂದ) ತಿಳಿದುಬರುವ (ಪ್ರಪಂಚವೆಂಬ) ವಸ್ತುವನ್ನು 'ಇದು' ಎಂಬ (ಶಬ್ದ)ದಿಂದ ತಿಳಿಸಿರುತ್ತದೆ[2] ಷಷ್ಠೀ (ವಿಭಕ್ತಿಯು ಧರ್ಮಿಯಾದ ಪ್ರಪಂಚಕ್ಕೆ) ಹುಟ್ಟು ಮುಂತಾದ ಧರ್ಮಗಳ ಸಂಬಂಧ(ವನ್ನು ತಿಳಿಸುವ)ದಕ್ಕೆ (ಬಂದಿದೆ).

## ಯತಃ ಎಂಬುದರ ಅರ್ಥ

(ಭಾಷ್ಯ)

೨೪. 'ಯತಃ' ಇತಿ ಕಾರಣನಿರ್ದೇಶಃ । ಅಸ್ಯ ಜಗತಃ ನಾಮರೂಪಾಭ್ಯಾಂ ವ್ಯಾಕೃತಸ್ಯ ಅನೇಕಕರ್ತೃಭೋಕ್ತೃಸಂಯುಕ್ತಸ್ಯ ಪ್ರತಿನಿಯತದೇಶಕಾಲನಿಮಿತ್ತಾಶ್ರಯಸ್ಯ ಮನಸಾಪ್ಯಚಿನ್ತ್ಯರಚನಾರೂಪಸ್ಯ ಜನ್ಮಸ್ಥಿತಿಭಙ್ಗಂ ಯತಃ ಸರ್ವಜ್ಞಾತ್ ಸರ್ವಶಕ್ತೇಃ ಕಾರಣಾತ್ ಭವತಿ 'ತದ್ ಬ್ರಹ್ಮ' ಇತಿ ವಾಕ್ಯಶೇಷಃ ॥

---

1. ಈ ಬಗೆಯ ವಾಕ್ಯಗಳಲ್ಲೆಲ್ಲ ಜಗತ್ತಿನ ಜನ್ಮವನ್ನೇ ಮೊದಲು ಹೇಳಿದೆ.

2. ಪ್ರತ್ಯಕ್ಷ, ಅನುಮಾನ, ಆಪ್ತವಾಕ್ಯ-ಇಂಥ ಪ್ರಮಾಣಗಳು ನಮಗೆ ಪ್ರಪಂಚವನ್ನು ತಿಳಿಸುವದರಿಂದ ಅದನ್ನು 'ಇದು' ಎಂದು ಕರೆದಿದೆ ಎಂದರ್ಥ. ಪ್ರಪಂಚವನ್ನು ಶ್ರುತಿಯಲ್ಲಿ ಇದು ಎಂದು ಕರೆಯುವ ರೂಢಿಯಿದೆ.

(ಭಾಷ್ಯಾರ್ಥ)

'ಯತಃ' (ಏತರಿಂದ) ಎಂಬ (ಮಾತು) ಕಾರಣವನ್ನು[1] ತಿಳಿಸುತ್ತದೆ. ನಾಮರೂಪಗಳಿಂದ ಬಿಡಿಬಿಡಿಯಾಗಿರುವದಾಗಿಯೂ[2] ಅನೇಕಕರ್ತೃಭೋಕ್ತೃಗಳಿಂದೊಡಗೂಡಿರುವದಾಗಿಯೂ ಗೊತ್ತಾದ ದೇಶ, ಕಾಲ, ನಿಮಿತ್ತ-ಇವುಗಳನ್ನನುಸರಿಸಿ ಆಗುವ ಕ್ರಿಯಾಫಲಗಳಿಗೆ ಆಶ್ರಯವಾಗಿರುವದಾಗಿಯೂ ಮನಸ್ಸಿನಿಂದಕೂಡ ಊಹಿಸುವದಕ್ಕೆ ಆಗದ ರಚನೆಯ ಸ್ವರೂಪವುಳ್ಳದ್ದಾಗಿಯೂ ಇರುವ ಈ ಜಗತ್ತಿಗೆ ಹುಟ್ಟು, ಇರವು, ಅಳಿವು-ಇವುಗಳು ಸರ್ವಜ್ಞವೂ ಸರ್ವಶಕ್ತವೂ ಆಗಿರುವ ಕಾರಣದಿಂದ[3] ಆಗುವವೋ 'ಅದು ಬ್ರಹ್ಮವು' ಎಂದು ವಾಕ್ಯಕ್ಕೆ ಸೇರಿಸಿಕೊಳ್ಳಬೇಕು.

## ಇಲ್ಲಿ ಷಡ್ಭಾವವಿಕಾರಗಳನ್ನು ಹೇಳಿಲ್ಲ

(ಭಾಷ್ಯ)

೨೫. ಅನ್ಯೇಷಾಮಪಿ ಭಾವವಿಕಾರಾಣಾಂ ತ್ರಿಷ್ವೇವ ಅನ್ತರ್ಭಾವಃ ಇತಿ ಜನ್ಮಸ್ಥಿತಿನಾಶಾನಾಂ ಇಹ ಗ್ರಹಣಮ್ । ಯಾಸ್ಕಪರಿಪಠಿತಾನಾಂ ತು 'ಜಾಯತೇ,' 'ಅಸ್ತಿ'-(ನಿ. ೧-೧-೩, ೪) ಇತ್ಯಾದೀನಾಂ ಗ್ರಹಣೇ ತೇಷಾಂ ಜಗತಃ ಸ್ಥಿತಿಕಾಲೇ ಸಂಭಾವ್ಯಮಾನತ್ವಾತ್ ಮೂಲಕಾರಣಾತ್ ಉತ್ಪತ್ತಿಸ್ಥಿತಿನಾಶಾಃ ಜಗತೋ ನ ಗೃಹೀತಾಃ ಸ್ಯುಃ ಇತಿ ಆಶಙ್ಕ್ಯೇತ ತನ್ಮಾ ಶಙ್ಕಿ ಇತಿ ಯಾ ಉತ್ಪತ್ತಿಃ ಬ್ರಹ್ಮಣಃ, ತತ್ರೈವ ಸ್ಥಿತಿಃ ಪ್ರಲಯಶ್ಚ ತ ಏವ ಗೃಹ್ಯನ್ತೇ ॥

(ಭಾಷ್ಯಾರ್ಥ)

ಉಳಿದ ವಸ್ತುವಿಕಾರಗಳೂ (ಈ) ಮೂರರಲ್ಲಿಯೇ ಅಡಕವಾಗಿವೆಯಾಗಿ ಹುಟ್ಟುವದು, ಇರುವದು, ನಾಶವಾಗುವದು-ಇವುಗಳನ್ನೇ ಇಲ್ಲಿ ತೆಗೆದುಕೊಂಡಿರು

---

1. ನಿಮಿತ್ತ, ಉಪಾದಾನ-ಎಂಬ ಎರಡುಬಗೆಯ ಕಾರಣವೂ ಬ್ರಹ್ಮವೇ. ಇದು ಮುಂದೆ (೧-೪-೨೩ ರಿಂದ ೨೭ರ ವರೆಗೆ) ಸ್ಪಷ್ಟವಾಗುವದು.

2. ಹೀಗೆ ಬಿಡಿಬಿಡಿಯಾಗಿರುವ ಪ್ರಪಂಚಕ್ಕೆ ವ್ಯಾಕೃತಪ್ರಪಂಚ ಎಂದು ವೇದಾಂತಿಗಳ ಹೆಸರು.

3. ಹುಟ್ಟಿದ ಜಗತ್ತಿನಲ್ಲಿರುವ ವಸ್ತುಗಳಿಗೆ ತೋರುವ ಕಾರ್ಯಕಾರಣಭಾವವು ಬೇರೆ ಇದೆ. ಆದರೆ ಇಲ್ಲಿ ಇಡಿಯ ಜಗತ್ತಿಗೇ ಕಾರಣವಾಗಿರುವ ಬ್ರಹ್ಮವನ್ನು ಹೇಳುವದಕ್ಕೆ ಹೊರಟಿದೆ. ಬ್ರಹ್ಮಕ್ಕೂ ಜಗತ್ತಿಗೂ ಇರುವ ಕಾರ್ಯಕಾರಣಭಾವವು ವ್ಯವಹಾರದ ವಸ್ತುಗಳಿಗಿರುವಂತೆ ಕಾಲಕೃತವಾದದ್ದಲ್ಲ. ಮುಂದಿನ ೨೫ನೆಯ ಪ್ರಘಟ್ಟವನ್ನು ನೋಡಿರಿ.

ತ್ತದೆ. ಯಾಸ್ಕರು ಹೇಳಿರುವ 'ಹುಟ್ಟುತ್ತದೆ', 'ಇರುತ್ತದೆ' (ನಿ. ೧-೧-೩, ೪) ಮುಂತಾದವುಗಳನ್ನೇ ತೆಗೆದುಕೊಂಡರೆ ಅವುಗಳು ಜಗತ್ತಿನ ಸ್ಥಿತಿಯ ಕಾಲದಲ್ಲಿಯೇ ಉಂಟಾಗಬಹುದಾದ್ದರಿಂದ ಮೂಲಕಾರಣ[1](ವಾದ ಬ್ರಹ್ಮ)ದಿಂದ ಜಗತ್ತಿಗೆ (ಉಂಟಾಗುವ) ಉತ್ಪತ್ತಿ, ಸ್ಥಿತಿ, ನಾಶ-ಇವುಗಳನ್ನು ತೆಗೆದುಕೊಂಡಿರಲಾರರು ಎಂದು ಶಂಕಿಸಬಹುದಾಗುವದು ಹಾಗೆ ಶಂಕಿಸದೆ ಇರಲೆಂದು ಬ್ರಹ್ಮದಿಂದ (ಜಗತ್ತಿಗೆ ಉಂಟಾಗುವ) ಉತ್ಪತ್ತಿಯಿದೆಯಲ್ಲ, ಮತ್ತು ಅದರಲ್ಲಿಯೇ ಇದ್ದುಕೊಂಡಿರುವಿಕೆ, (ಅದರಲ್ಲಿಯೇ) ನಾಶವಾಗುವಿಕೆ-(ಎಂಬಿವುಗಳಿವೆಯಲ್ಲ), ಅವನ್ನೇ[2] (ಸೂತ್ರದಲ್ಲಿ) ತೆಗೆದುಕೊಂಡಿರುತ್ತದೆ (ಎಂದು ಅರ್ಥಮಾಡಬೇಕು).

## ಒಟ್ಟು ಸೂತ್ರದ ಅರ್ಥ

(ಭಾಷ್ಯ)

೨೬. ನ ಯಥೋಕ್ತವಿಶೇಷಣಸ್ಯ ಜಗತಃ ಯಥೋಕ್ತವಿಶೇಷಣಮ್ ಈಶ್ವರಂ ಮುಕ್ತ್ವಾ ಅನ್ಯತಃ ಪ್ರಧಾನಾತ್ ಅಚೇತನಾತ್, ಅಣುಭ್ಯಃ, ಅಭಾವಾತ್ ಸಂಸಾರಿಣೋ ವಾ ಉತ್ಪತ್ತ್ಯಾದಿ ಸಂಭಾವಯಿತುಂ ಶಕ್ಯಮ್ । ನ ಚ ಸ್ವಭಾವತಃ। ವಿಶಿಷ್ಟದೇಶಕಾಲನಿಮಿತ್ತಾನಾಮ್ ಇಹ ಉಪಾದಾನಾತ್ ॥

(ಭಾಷ್ಯಾರ್ಥ)

ಮೇಲೆ ಹೇಳಿದ ವಿಶೇಷಣಗಳುಳ್ಳ[3] ಜಗತ್ತಿಗೆ ಮೇಲೆ ಹೇಳಿರುವ ವಿಶೇಷಣಗಳುಳ್ಳ ಈಶ್ವರನನ್ನು[4] ಬಿಟ್ಟರೆ ಮತ್ತೊಂದರಿಂದ ಎಂದರೆ ಅಚೇತನವಾದ ಪ್ರಧಾನದಿಂದಲಾಗಲಿ[5] ಅಣುಗಳಿಂದಲಾಗಲಿ[6] ಅಭಾವದಿಂದಲಾಗಲಿ[7] ಸಂಸಾರಿ(ಯಾದ ಜೀವ)

---

1. ಬ್ರಹ್ಮವು ನಿರ್ವಿಕಾರವಾಗಿಯೇ ಇದ್ದರೂ ಅವಿದ್ಯೆಯಿಂದ ಜಗತ್ಕಾರಣವೆನಿಸುತ್ತದೆ. ಇದು ಮುಂದೆ ಭಾಷ್ಯದಲ್ಲಿ ಸ್ಪಷ್ಟವಾಗುವದು.

2. ಶ್ರುತಿಯಲ್ಲಿ ಹೇಳಿರುವ ಜಗತ್ತಿನ ಉತ್ಪತ್ತ್ಯಾದಿಗಳನ್ನೇ ಎಂದರ್ಥ.

3. ಭಾ. ಭಾ. ೨೪ರಲ್ಲಿ ಹೇಳಿರುವ ವಿಶೇಷಣಗಳುಳ್ಳ.

4. ನಿತ್ಯಶುದ್ಧಬುದ್ಧಮುಕ್ತಸ್ವಭಾವನೂ ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನೇ ಜಗತ್ತಿಗೆ ಕಾರಣವು. ಬ್ರಹ್ಮವೆಂದರೂ ಈಶ್ವರನೆಂದರೂ ಒಂದೇ. ಪೀಠಿಕೆಯನ್ನು ನೋಡಿ.

5. ಸಾಂಖ್ಯರು ಪ್ರಧಾನವೆಂಬ ಮೂಲಪ್ರಕೃತಿಯು ಪರಿಣಾಮವಾಗಿ ಜಗತ್ತಾಗಿದೆ ಎನ್ನುವರು.

6. ಪರಮಾಣುಗಳು ಜಗತ್ತಿಗೆ ಸಮವಾಯಿಕಾರಣವೆಂದೂ ಈಶ್ವರನು ನಿಮಿತ್ತಕಾರಣನೆಂದೂ ವೈಶೇಷಿಕರು ಹೇಳಿರುತ್ತಾರೆ. ಸಾಂಖ್ಯವೈಶೇಷಿಕರ ಮತಗಳನ್ನು ಮುಂದೆ ಈ ಶಾಸ್ತ್ರದಲ್ಲಿ ಖಂಡಿಸಲಾಗುವದು.

7. ಜಗತ್ತೆಲ್ಲವೂ ಶೂನ್ಯವು, ನಿಸ್ಸಾರವಾದದ್ದು-ಎಂಬುದು ಬೌದ್ಧರ ಒಂದು ಪಂಗಡದವರ ಮತವು

ನಿಂದಲಾಗಲಿ[1] ಉತ್ಪತ್ತಿಯೇ ಮುಂತಾದದ್ದು (ಆಗಿರಬಹುದೆಂದು) ಇಟ್ಟುಕೊಳ್ಳುವದು ಆಗುವಹಾಗಿಲ್ಲ. ಸ್ವಭಾವದಿಂದಲೂ (ಇವು ಆಗುವಹಾಗಿಲ್ಲ). ಏಕೆಂದರೆ (ಆಯಾ) ಗೊತ್ತಾದ ದೇಶಕಾಲನಿಮಿತ್ತಗಳು ಇಲ್ಲಿ ಬೇಕಾಗಿರುತ್ತವೆ.[2]

## ಈ ಸೂತ್ರವು ವೇದಾಂತವಾಕ್ಯವನ್ನು ಹೇಳುತ್ತದೆ, ಅನುಮಾನವನ್ನಲ್ಲ

(ಭಾಷ್ಯ)

೨೭. ಏತದೇವ ಅನುಮಾನಂ ಸಂಸಾರಿವ್ಯತಿರಿಕ್ತೇಶ್ವರಾಸ್ತಿತ್ವಾದಿಸಾಧನಂ ಮನ್ಯನ್ತೇ ಈಶ್ವರಕಾರಣಿನಃ । ನನು ಇಹಾಪಿ ತದೇವ ಉಪನ್ಯಸ್ತಂ ಜನ್ಮಾದಿ ಸೂತ್ರೇ। ನ। ವೇದಾನ್ತವಾಕ್ಯಕುಸುಮಗ್ರಥನಾರ್ಥತ್ವಾತ್ ಸೂತ್ರಾಣಾಮ್ । ವೇದಾನ್ತ ವಾಕ್ಯಾನಿ ಹಿ ಸೂತ್ರೈಃ ಉದಾಹೃತ್ಯ ವಿಚಾರ್ಯನ್ತೇ। ವಾಕ್ಯಾರ್ಥವಿಚಾರಣಾ ಧ್ಯವಸಾನನಿರ್ವೃತ್ತಾ ಹಿ ಬಹ್ಮಾವಗತಿಃ ನ ಅನುಮಾನಾದಿಪ್ರಮಾಣಾನ್ತರನಿರ್ವೃತ್ತಾ॥

(ಭಾಷ್ಯಾರ್ಥ)

ಇದೇ ಅನುಮಾನ(ವೇ) ಸಂಸಾರಿ (ಜೀವರು)ಗಳಿಗಿಂತ ಬೇರೆಯಾಗಿರುವ ಈಶ್ವರನು ಇದ್ದಾನೆ ಎಂಬುದೇ ಮುಂತಾದದ್ದಕ್ಕೆ ಸಾಧಕವಾಗಿರುವದೆಂದು[3] **ಈಶ್ವರ (ನಿಮಿತ್ತ) ಕಾರಣವಾದಿಗಳು**[4] ಅಭಿಪ್ರಾಯಪಟ್ಟಿರುತ್ತಾರೆ,

(ಪ್ರಶ್ನೆ):—(ಈ) ಜನ್ಮಾದಿಸೂತ್ರದಲ್ಲಿಯೂ ಆ (ಅನುಮಾನ)ವನ್ನೇ ಅಲ್ಲವೆ, ಹೇಳಿರುವದು ?

(ಉತ್ತರ):—ಅಲ್ಲ, ಏಕೆಂದರೆ (ಈ) ಸೂತ್ರಗಳು ವೇದಾಂತವಾಕ್ಯಗಳೆಂಬ

---

1. ಹಿರಣ್ಯಗರ್ಭನೆಂಬ ಜೀವನೇ ಜಗತ್ತಿಗೆ ಕಾರಣವು. ಎಂಬವರ ಮತವನ್ನು ತಳ್ಳಿ ಹಾಕುವದಕ್ಕಾಗಿ ಈ ವಿಶೇಷಣವನ್ನು ಉಪಯೋಗಿಸಿದೆ

2. ಇಂಥ ಕ್ರಿಯೆಗೆ ಇಂಥ ಫಲವು ಆಗಬೇಕಾದರೆ ಇಂಥಿಂಥ ಗೊತ್ತಾದ ದೇಶಕಾಲ ನಿಮಿತ್ತಗಳು ಬೇಕೆಂಬ ನಿಯಮವು ಜಗತ್ತಿನಲ್ಲಿ ಕಾಣಬರುವದರಿಂದ ಜಗತ್ತು ಕಾರಣವನ್ನು ಬಯಸದೆ ಸ್ವಭಾವದಿಂದಲೇ ಹೀಗಿದ್ದುಕೊಂಡಿರುವದೆನ್ನುವದು ಸರಿಯಾಗಲಾರದು ಎಂದು ಭಾವ.

3. 'ಮುಂತಾದದ್ದಕ್ಕೆ' ಎಂದರೆ ಅವನು ಸರ್ವಜ್ಞನು, ಸರ್ವಶಕ್ತನು, ಜಗತ್ಕಾರಣನು_ ಎಂಬುದಕ್ಕೆ ಎಂದರ್ಥ. ಜಗತ್ತನ್ನು ಸೃಷ್ಟಿಸುವದಕ್ಕೆ ಸರ್ವಜ್ಞನಾದ ಕರ್ತೃವಿರಬೇಕು ಎಂಬುದು ಅನುಮಾನಪ್ರಮಾಣವು ಎಂದು ತಾರ್ಕಿಕರು ಹೇಳಿರುತ್ತಾರೆ_ಎಂದರ್ಥ. ನಾವು ಶ್ರುತಿಯನ್ನನು ಸರಿಸಿ ಹೇಳಿರುವ ಸಂಭಾವನಾಯುಕ್ತಿಯನ್ನೇ ಅವರು ಸ್ವತಂತ್ರಪ್ರಮಾಣವೆನ್ನುತ್ತಾರೆ ಎಂದು ಭಾವ.

4. ಶ್ರುತಿಗಿಂತ ತರ್ಕಕ್ಕೆ ಹೆಚ್ಚಿನ ಸ್ಥಾನವನ್ನು ಕೊಡುವವರು ಎಂದರ್ಥ.

ಹೂಗಳನ್ನು (ಮಾಲಿಕೆಯಾಗಿ) ಕಟ್ಟುವದಕ್ಕೆ (ಬಂದಿರುತ್ತವೆ). ವೇದಾಂತವಾಕ್ಯಗಳನ್ನೇ ಅಲ್ಲವೆ, ಸೂತ್ರಗಳಲ್ಲಿ ಉದಾಹರಿಸಿ (ಅವುಗಳ ತಾತ್ಪರ್ಯವನ್ನು ಕುರಿತು) ವಿಚಾರಮಾಡಿರುತ್ತದೆ? ಬ್ರಹ್ಮದ ಅರಿವೆಂಬುದು ವಾಕ್ಯಗಳ ಅರ್ಥವನ್ನು ವಿಚಾರಮಾಡಿ ನಿಶ್ಚಯಿಸಿಕೊಳ್ಳುವದರಿಂದ ಆಗುವದೇ ಹೊರತು ಅನುಮಾನವೇ ಮುಂತಾದ ಬೇರೆಯ ಪ್ರಮಾಣಗಳಿಂದ ಆಗತಕ್ಕದ್ದಲ್ಲ.[1]

(ಭಾಷ್ಯ)

೨೮. ಸತ್ಸು ತು ವೇದಾನ್ತವಾಕ್ಯೇಷು ಜಗತೋ ಜನ್ಮಾದಿಕಾರಣವಾದಿಷು ತದರ್ಥಗ್ರಹಣದಾರ್ಢ್ಯಾಯ ಅನುಮಾನಮಪಿ ವೇದಾನ್ತವಾಕ್ಯಾವಿರೋಧಿ ಪ್ರಮಾಣಂ ಭವತ್ ನ ನಿವಾರ್ಯತೇ। ಶ್ರುತ್ಯೈವ ಚ ಸಹಾಯತ್ವೇನ ತರ್ಕಸ್ಯ ಅಭ್ಯುಪೇತತ್ವಾತ್। ತಥಾ ಹಿ "ಶ್ರೋತವ್ಯೋ ಮನ್ತವ್ಯಃ" (ಬೃ ೨-೪-೫)ಇತಿ ಶ್ರುತಿಃ, "ಪಣ್ಡಿತೋ ಮೇಧಾವೀ ಗನ್ಧಾರಾನೇವೋಪಸಂಪದ್ಯೇತೈವಮೇವೇಹಾಚಾರ್ಯವಾನ್ ಪುರುಷೋ ವೇದ" (ಛಾಂ. ೬-೧೪-೨) ಇತಿ ಚ ಪುರುಷಬುದ್ಧಿಸಾಹಾಯ್ಯಮ್ ಆತ್ಮನೋ ದರ್ಶಯತಿ। ನ ಧರ್ಮಜಿಜ್ಞಾಸಾಯಾಮಿವ ಶ್ರುತ್ಯಾದಯ ಏವ ಪ್ರಮಾಣಂ ಬ್ರಹ್ಮಜಿಜ್ಞಾಸಾಯಾಮ್, ಕಿಂತು ಶ್ರುತ್ಯಾದಯಃ ಅನುಭವಾದಯಶ್ಚ ಯಥಾಸಂಭವಮ್ ಇಹ ಪ್ರಮಾಣಮ್। ಅನುಭವಾವಸಾನತ್ವಾತ್ ಭೂತವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ। ಕರ್ತವ್ಯೇ ಹಿ ವಿಷಯೇ ನಾನುಭವಾಪೇಕ್ಷಾ ಅಸ್ತಿ ಇತಿ ಶ್ರುತ್ಯಾದೀನಾಮೇವ ಪ್ರಾಮಾಣ್ಯಂ ಸ್ಯಾತ್। ಪುರುಷಾಧೀನಾತ್ಮಲಾಭತ್ವಾಚ್ಚ ಕರ್ತವ್ಯಸ್ಯ ಕರ್ತುಮ್ ಅಕರ್ತುಮ್ ಅನ್ಯಥಾ ವಾ ಕರ್ತುಂ ಶಕ್ಯಂ ಲೌಕಿಕಂ ವೈದಿಕಂ ಚ ಕರ್ಮ। ಯಥಾ ಅಶ್ವೇನ ಗಚ್ಛತಿ, ಪದ್ಭ್ಯಾಮ್ ಅನ್ಯಥಾ ವಾ ನ ವಾ ಗಚ್ಛತಿ ಇತಿ। ತಥಾ "ಅತಿರಾತ್ರೇ ಷೋಡಶಿನಂ ಗೃಹ್ಣಾತಿ" (?) "ನಾತಿರಾತ್ರೇ ಷೋಡಶಿನಂ ಗೃಹ್ಣಾತಿ" (?) "ಉದಿತೇ ಜುಹೋತಿ" (?) ಅನುದಿತೇ ಜುಹೋತಿ" (?) ಇತಿ। ವಿಧಿಪ್ರತಿಷೇಧಾಶ್ಚ ಅತ್ರ ಅರ್ಥವನ್ತಃ ಸ್ಯುಃ। ವಿಕಲ್ಪೋತ್ಸರ್ಗಾಪವಾದಾಶ್ಚ। ನ ತು ವಸ್ತು 'ಏವಮ್', 'ನೈವಮ್' 'ಅಸ್ತಿ', 'ನಾಸ್ತಿ' ಇತಿ ವಾ ವಿಕಲ್ಪ್ಯತೇ। ವಿಕಲ್ಪನಾಸ್ತು ಪುರುಷಬುದ್ಧ್ಯಪೇಕ್ಷಾಃ ನ ವಸ್ತುಯಾಥಾತ್ಮ್ಯಜ್ಞಾನಂ ಪುರುಷಬುದ್ಧ್ಯಪೇಕ್ಷಮ್ ಕಿಂ ತರ್ಹಿ ವಸ್ತುತನ್ತ್ರಮೇವ ತತ್। ನ ಹಿ ಸ್ಥಾಣೌ ಏಕಸ್ಮಿನ್ ಸ್ಥಾಣುರ್ವಾ ಪುರುಷಃ, ಅನ್ಯೋ ವಾ-ಇತಿ ತತ್ತ್ವಜ್ಞಾನಂ ಭವತಿ। ತತ್ರ ಪುರುಷಃ ಅನ್ಯೋ ವಾ ಇತಿ ಮಿಥ್ಯಾಜ್ಞಾನಮ್। ಸ್ಥಾಣುರೇವ ಇತಿ ತತ್ತ್ವಜ್ಞಾನಮ್। ವಸ್ತುತನ್ತ್ರತ್ವಾತ್। ಏವಂ ಭೂತವಸ್ತುವಿಷಯಾಣಾಂ ಪ್ರಾಮಾಣ್ಯಂ ವಸ್ತುತನ್ತ್ರಮ್। ತತ್ರ ಏವಂ ಸತಿ ಬ್ರಹ್ಮ

1. ವಾಕ್ಯಪ್ರಾಮಾಣ್ಯದ ವಿಷಯಕ್ಕೆ ಪೀಠಿಕೆಯನ್ನು ನೋಡಿ.

ಜ್ಞಾನಮಪಿ ವಸ್ತುತನ್ತ್ರಮೇವ । ಭೂತವಸ್ತುವಿಷಯತ್ವಾತ್ ॥

(ಭಾಷ್ಯಾರ್ಥ)

ಆದರೆ ಜಗತ್ತಿನ ಜನ್ಮವೇ ಮುಂತಾದದ್ದಕ್ಕೆ ಕಾರಣ(ವೆಂಥ)ದ್ದೆಂದು ಹೇಳುವ ವೇದಾಂತವಾಕ್ಯಗಳು (ಬ್ರಹ್ಮಕ್ಕೆ ಪ್ರಮಾಣ)ವಾಗಿರುವಲ್ಲಿ ಅವುಗಳ ಅರ್ಥವನ್ನು ಗ್ರಹಿಸಿದ್ದು ಗಟ್ಟಿಯಾಗುವದಕ್ಕೆ[1] ವೇದಾಂತವಾಕ್ಯಗಳಿಗೆ ವಿರೋಧವಲ್ಲದ ಅನುಮಾನವೂ[2] ಪ್ರಮಾಣವಾಗುವ(ದಾದರೆ ಅದನ್ನು ನಾವು) ಬೇಡವೆನ್ನುವದಿಲ್ಲ. ಏಕೆಂದರೆ ಶ್ರುತಿಯೇ ತರ್ಕವನ್ನು (ತನಗೆ) ಸಹಾಯವಾಗಿ ಅಂಗೀಕರಿಸಿರುತ್ತದೆ. ಹೇಗೆಂದರೆ "(ಆತ್ಮನನ್ನು ಕುರಿತು) ಶ್ರವಣಮಾಡಬೇಕು, ಮನನಮಾಡಬೇಕು" (ಬೃ. ೨-೪-೫) ಎಂಬ ಶ್ರುತಿಯೂ "ಪಂಡಿತನೂ ಜಾಣನೂ ಆದವನು ಹೇಗೆ ಗಂಧಾರ ದೇಶವನ್ನೇ ಸೇರುವನೋ, ಇದರಂತೆಯೇ ಇಲ್ಲಿ ಆಚಾರ್ಯನನ್ನುಳ್ಳ ಪುರುಷನು ತಿಳಿದುಕೊಳ್ಳುತ್ತಾನೆ" (ಛಾಂ. ೬-೧೪-೨) ಎಂಬ ಶ್ರುತಿಯೂ ತನಗೆ ಪುರುಷ ಬುದ್ಧಿಯ ಸಹಾಯವೂ[3] ಬೇಕೆಂದು ತೋರುತ್ತದೆ. **ಧರ್ಮಜಿಜ್ಞಾಸೆಯಲ್ಲಿ ಹೇಗೆ ಶ್ರುತ್ಯಾದಿಗಳೇ ಪ್ರಮಾಣವೋ, ಬ್ರಹ್ಮಜಿಜ್ಞಾಸೆಯಲ್ಲಿ ಹಾಗಲ್ಲ, ಮತ್ತೇನೆಂದರೆ ಶ್ರುತ್ಯಾದಿಗಳೂ[4] ಅನುಭವಾದಿಗಳೂ[5] ಯಥಾಸಂಭವವಾಗಿ[6] ಇಲ್ಲಿ ಪ್ರಮಾಣವಾಗಿರುವವು. ಏಕೆಂದರೆ ಬ್ರಹ್ಮಜ್ಞಾನವು ಅನುಭವದಲ್ಲಿ ಕೊನೆಗಾಣತಕ್ಕದ್ದು, ಮತ್ತು ಇದಕ್ಕೆ ಭೂತವಸ್ತುವೇ[7] ವಿಷಯ**ವಾಗಿರುತ್ತದೆ. ಕರ್ತವ್ಯವೇ ವಿಷಯವಾಗಿದ್ದರೆ ಅದಕ್ಕೆ ಅನುಭವವೇನೂ ಬೇಕಿಲ್ಲ

---

1. ಸಂದೇಹವೂ ತಪ್ಪುತಿಳಿವಳಿಕೆಯೂ ಹೋಗಿ ನಿಶ್ಚಯವಾದ ತಿಳಿವಳಿಕೆಯು ನಿಲ್ಲುವದಕ್ಕೆ.

2. ತರ್ಕವೂ ಎಂದರ್ಥ, ಸ್ವತಂತ್ರವಾಗಿ ಅನುಮಾನವೂ ಪ್ರಮಾಣವೆಂದಲ್ಲ

3. ಶ್ರುತಿಯಲ್ಲಿರುವ ತರ್ಕವಲ್ಲದೆ ಅದಕ್ಕೆ ಅನುಸಾರಿಯಾದ ಲೌಕಿಕತರ್ಕವೂ ಮನನಕ್ಕೆ ಬೇಕು.

4. ಶ್ರುತಿಸ್ಮೃತ್ಯಾದಿಗಳೂ.

5. ಅನುಭವ, ತರ್ಕ—ಮುಂತಾದವೂ.

6. ಉಪಾಸನೆಯು ಕರ್ತವ್ಯವೇ ಆಗಿರುವದರಿಂದ ಅದಕ್ಕೆ ಶ್ರುತ್ಯಾದಿಗಳೇ ಮುಖ್ಯ ಪ್ರಮಾಣವು. ಬ್ರಹ್ಮಜ್ಞಾನವು ವಸ್ತುವಿಷಯವಾದ್ದರಿಂದ ಅನುಭವಾದಿಗಳೂ ಪ್ರಮಾಣವು.

7. ಇರುವ ವಸ್ತುವೇ, ಇನ್ನು ಮಾಡಬೇಕಾದ ಕರ್ಮವಲ್ಲ.

ವಾದ್ದರಿಂದ ಶ್ರುತ್ಯಾದಿಗಳೇ ಪ್ರಮಾಣವಾಗಿರುವು. ಕರ್ತವ್ಯವು ಪುರುಷನಿಗೆ ಅಧೀನವಾಗಿ ಹುಟ್ಟತಕ್ಕದ್ದಾದ್ದರಿಂದಲೂ (ಹೀಗೆ). ಲೌಕಿಕ (ಕರ್ಮವೂ) ವೈದಿಕಕರ್ಮವೂ ಮಾಡುವದಕ್ಕೂ ಬಿಡುವದಕ್ಕೂ ಅಥವಾ ಬೇರೊಂದು ಬಗೆಯಾಗಿ ಮಾಡುವದಕ್ಕೂ ಆಗುತ್ತದೆ. ಉದಾಹರಣೆಗೆ, (ಹೋಗುವದೆಂಬುದು ಕರ್ತವ್ಯವಾಗಿದ್ದರೆ) ಕುದುರೆಯಮೇಲಾದರೂ ಹೋಗಬಹುದು, ಕಾಲಿಂದಲಾದರೂ ಅಥವಾ ಬೇರೊಂದು ರೀತಿಯಲ್ಲಾದರೂ ಹೋಗಬಹುದು, ಅಥವಾ ಹೋಗದೆಯೇ ಇದ್ದರೂ ಇರಬಹುದು. ಇದರಂತೆ (ವೈದಿಕಕರ್ತವ್ಯದಲ್ಲಿಯೂ ಇರುವದು ಹೇಗೆಂದರೆ.) "ಅತಿರಾತ್ರವೆಂಬ ಯಾಗ)ದಲ್ಲಿ ಷೋಡಶಿ (ಎಂಬ ಪಾತ್ರೆ)ಯನ್ನು ಗ್ರಹಣಮಾಡಬೇಕು" (?) "ಅತಿರಾತ್ರದಲ್ಲಿ ಷೋಡಶಿಯನ್ನು ಗ್ರಹಣಮಾಡಬಾರದು" (?) "ಉದಯವಾಗುವದಕ್ಕೆ ಮುಂಚೆಯೇ ಹೋಮಮಾಡಬೇಕು." (?) ಆದ್ದರಿಂದ ವಿಧಿಪ್ರತಿಷೇಧಗಳು ಈ (ಕರ್ತವ್ಯವಿಷಯ)ದಲ್ಲಿ ಸಾರ್ಥಕವಾಗಿರುವವು; ವಿಕಲ್ಪ, ಸಾಮಾನ್ಯವಚನ, ಅಪವಾದ[1]–ಇವುಗಳೂ (ಸಾರ್ಥಕವಾಗಿರುವವು). ಆದರೆ (ಸಿದ್ಧ)ವಸ್ತುವನ್ನು 'ಹೀಗೆ, ಹೀಗಲ್ಲ' ಎಂದಾಗಲಿ, 'ಇದೆ, ಇಲ್ಲ' ಎಂದಾಗಲಿ ವಿಕಲ್ಪನೆಮಾಡುವದಕ್ಕಾಗಲಾರದು ವಿಕಲ್ಪನೆಗಳಾದರೋ ಪುರುಷನ ಬುದ್ಧಿಯನ್ನು ಅನುಸರಿಸಿರುತ್ತವೆ. ವಸ್ತುವಿನ ತತ್ತ್ವದ ಜ್ಞಾನವು ಪುರುಷನ ಬುದ್ಧಿಯನ್ನನುಸರಿಸಿ (ಉಂಟಾಗುವ)ದಿಲ್ಲ, ಮತ್ತೇನೆಂದರೆ ವಸ್ತುವಿಗೆ ಅಧೀನವಾಗಿಯೇ ಅದು (ಉಂಟಾಗುವದು). ಹೇಗೆಂದರೆ ಒಂದೇ ಮೋಟುಮರದಲ್ಲಿ '(ಇದು)' ಮೋಟುಮರವೋ, ಪುರುಷನೋ, ಮತ್ತೆ ಯಾವದಾದರೂ ಒಂದೋ (ಆಗಿರಬೇಕು)' ಎಂದು (ತಿಳಿಯುವದು) ತತ್ವಜ್ಞಾನವಾಗಲಾರದು. ಇವುಗಳಲ್ಲಿ ಪುರುಷನೆಂದಾಗಲಿ ಮತ್ತೊಂದೆಂದಾಗಲಿ (ತಿಳಿಯುವದು) ಮಿಥ್ಯಾಜ್ಞಾನವು, ಮೋಟುಮರವೇ ಎಂದು (ತಿಳಿಯುವದು) ತತ್ತ್ವಜ್ಞಾನವು, ಏಕೆಂದರೆ (ಅದು) ವಸ್ತುವಿಗಧೀನವಾಗಿರುತ್ತದೆ. ಇಲ್ಲಿ ಹೀಗಿರುವದರಿಂದ ಬ್ರಹ್ಮಜ್ಞಾನವೂ ವಸ್ತುವಿಗಧೀನವಾಗಿಯೇ ಇರುತ್ತದೆ (ಎನ್ನಬೇಕು). ಏಕೆಂದರೆ (ಇದಕ್ಕೆ) ಭೂತವಸ್ತುವೇ ವಿಷಯವಾಗಿರುತ್ತದೆ.

---

1. ವಿಕಲ್ಪವೆಂದರೆ ಹಾಗೂ ಆಗಬಹುದು, ಹೀಗೂ ಆಗಬಹುದು–ಎನ್ನುವದು ಸಾಮಾನ್ಯವಚನ ಎಂದರೆ 'ಯಾವ ಪ್ರಾಣಿಯನ್ನೂ ಕೊಲ್ಲಕೂಡದು' ಎಂಬಂತೆ ಸಾಮಾನ್ಯವಾಗಿ ತಿಳಿಸುವ ವಾಕ್ಯ ಅಪವಾದವೆಂದರೆ 'ಪಶುವನ್ನು ಯಜ್ಞದಲ್ಲ ಬಲಿಕೊಡಬೇಕು' ಎಂಬಂತೆ ಅದಕ್ಕೆ ಹೊಂದುವ ವಿಶೇಷಸ್ಥಲವನ್ನು ತಿಳಿಸುವ ವಚನವು.

## ಬ್ರಹ್ಮವು ಕೇವಲವೇದಾಂತವಾಕ್ಯಗಮ್ಯ

(ಭಾಷ್ಯ)

೨೯. ನನು ಭೂತವಸ್ತುತ್ವೇ ಬ್ರಹ್ಮಣಃ ಪ್ರಮಾಣಾನ್ತರವಿಷಯತ್ವಮೇವ ಇತಿ ವೇದಾನ್ತವಾಕ್ಯವಿಚಾರಣಾ ಅನರ್ಥಿಕೈವ ಪ್ರಾಪ್ತಾ । ನ। ಇನ್ದ್ರಿಯಾವಿಷಯತ್ವೇನ ಸಂಬನ್ಧಗ್ರಹಣಾತ್ । ಸ್ವಭಾವತೋ ವಿಷಯವಿಷಯಾಣಿ ಇನ್ದ್ರಿಯಾಣಿ ನ ಬ್ರಹ್ಮವಿಷಯಾಣಿ। ಸತಿ ಹಿ ಇನ್ದ್ರಿಯವಿಷಯತ್ವೇ ಬ್ರಹ್ಮಣಃ ಇದಂ ಬ್ರಹ್ಮಣಾ ಸಂಬದ್ಧಂ ಕಾರ್ಯಮ್ ಇತಿ ಗೃಹ್ಯೇತ। ಕಾರ್ಯಮಾತ್ರಮೇವ ತು ಗೃಹ್ಯಮಾಣಂ ಕಿಂ ಬ್ರಹ್ಮಣಾ ಸಂಬದ್ಧಮ್, ಕಿಮನ್ಯೇನ ಕೇನಚಿದ್ವಾ ಸಂಬದ್ಧಮ್ ಇತಿ ನ ಶಕ್ಯಂ ನಿಶ್ಚೇತುಮ್। ತಸ್ಮಾತ್ ಜನ್ಮಾದಿಸೂತ್ರಂ ನಾನುಮಾನೋಪನ್ಯಾಸಾರ್ಥಮ್, ಕಿಂ ತರ್ಹಿ ವೇದಾನ್ತವಾಕ್ಯಪ್ರದರ್ಶನಾರ್ಥಮ್ ॥

(ಭಾಷ್ಯಾರ್ಥ)

(ಆಕ್ಷೇಪ):—ಬ್ರಹ್ಮವು ಭೂತವಸ್ತುವಾದರೆ ಬೇರೆಯ ಪ್ರಮಾಣಗಳಿಗೆ ವಿಷಯವೇ ಆಗಬೇಕಾಗಿರುವದರಿಂದ ವೇದಾಂತವಾಕ್ಯಗಳನ್ನು ವಿಚಾರಮಾಡುವದು, ವ್ಯರ್ಥವೇ ಆಯಿತಲ್ಲ !

(ಪರಿಹಾರ) - ಹಾಗಲ್ಲ. ಏಕೆಂದರೆ (ಬ್ರಹ್ಮವು) ಇಂದ್ರಿಯಗಳಿಗೆ ವಿಷಯವಲ್ಲವಾದ್ದರಿಂದ (ಅದಕ್ಕೂ ಜಗತ್ತಿಗೂ) ಸಂಬಂಧವು ಗೊತ್ತಾಗುವಂತೆ ಇಲ್ಲ. ಇಂದ್ರಿಯಗಳು ಸ್ವಭಾವದಿಂದ ವಿಷಯಗಳನ್ನೇ ವಿಷಯೀಕರಿಸುತ್ತವೆ, ಬ್ರಹ್ಮವನ್ನು ವಿಷಯೀಕರಿಸುವದಿಲ್ಲ ಬ್ರಹ್ಮವು ಇಂದ್ರಿಯಗಳಿಗೆ ವಿಷಯವಾಗಿದ್ದರೆ, ಈ (ಜಗತ್ತು) ಬ್ರಹ್ಮಕ್ಕೆ ಸಂಬಂಧಪಟ್ಟ ಕಾರ್ಯವೆಂದು ಗೊತ್ತಾಗುತ್ತಿತ್ತು. ಆದರೆ ಕಾರ್ಯವಾದ (ಜಗತ್ತು) ಮಾತ್ರ ಗೋಚರವಾಗುತ್ತಿರುವದರಿಂದ (ಅದು) ಬ್ರಹ್ಮಕ್ಕೆ ಸಂಬಂಧಪಟ್ಟಿದೆಯೋ, ಅಥವಾ ಬೇರೆ ಯಾವದಕ್ಕಾದರೂ ಸಂಬಂಧಪಟ್ಟದ್ದೋ ಎಂದು ನಿಶ್ಚಯಿಸುವದಕ್ಕೆ ಬರುವದಿಲ್ಲ. ಆದ್ದರಿಂದ (ಈ) ಜನ್ಮಾದಿಸೂತ್ರವು ಅನುಮಾನವನ್ನು ಹೇಳುವದಕ್ಕೆ (ಬಂದಿಲ್ಲ), ಮತ್ತೇನೆಂದರೆ ವೇದಾಂತವಾಕ್ಯವನ್ನು ತಿಳಿಸುವದಕ್ಕಾಗಿಯೇ (ಬಂದಿದೆ).

## ಈ ಸೂತ್ರಕ್ಕೆ ವಿಷಯವಾಕ್ಯ

(ಭಾಷ್ಯ)

೩೦. ಕಿಂ ಪುನಸ್ತದ್ವೇದಾನ್ತವಾಕ್ಯಂ ಯತ್ ಸೂತ್ರೇಣ ಇಹ ಲಿಲಕ್ಷಯಿ

ಷಿತಮ್? "ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ ।" ಇತ್ಯುಪಕ್ರಮ್ಯ ಆಹ–"ಯತೋ ವಾ ಇಮಾನಿ ಭೂತಾನಿ ಜಾಯನ್ತೇ । ಯೇನ ಜಾತಾನಿ ಜೀವನ್ತಿ । ಯತ್ ಪ್ರಯನ್ತ್ಯಭಿಸಂವಿಶನ್ತಿ । ತದ್ವಿಜಿಜ್ಞಾಸಸ್ವ । ತದ್ ಬ್ರಹ್ಮೇತಿ ।" (ತೈ. ೩-೧)[1] । ತಸ್ಯ ಚ ನಿರ್ಣಯವಾಕ್ಯಮ್ "ಆನನ್ದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ । ಆನನ್ದೇನ ಜಾತಾನಿ ಜೀವನ್ತಿ । ಆನನ್ದಂ ಪ್ರಯನ್ತ್ಯಭಿಸಂವಿಶನ್ತೀತಿ ॥"[1] ಅನ್ಯಾನ್ಯಪಿ ಏವಂಜಾತೀಯಕಾನಿ ವಾಕ್ಯಾನಿ ನಿತ್ಯ ಶುದ್ಧಬುದ್ಧಮುಕ್ತಸ್ವಭಾವಸರ್ವಜ್ಞಸ್ವರೂಪಕಾರಣವಿಷಯಾಣಿ ಉದಾಹರ್ತವ್ಯಾನಿ ॥

(ಭಾಷ್ಯಾರ್ಥ)

(ಪ್ರಶ್ನೆ):—ಹಾಗಾದರೆ ಈ ಸೂತ್ರದಲ್ಲಿ ತಿಳಿಸಬೇಕೆಂದಿರುವ ಆ ವೇದಾಂತ ವಾಕ್ಯವು ಯಾವದು?

(ಉತ್ತರ):—"ವಾರುಣಿ ಭೃಗು(ವಿದ್ವ)ನಷ್ಟೆ. (ಆತನು) ತಂದೆಯಾದ ವರುಣನ ಬಳಿಗೆ ಬಂದು "ಪೂಜ್ಯನೆ, ಬ್ರಹ್ಮವನ್ನು ಹೇಳಿಕೊಡು" ಎಂದು (ಕೇಳಿ ಕೊಂಡನು) ಎಂದು ಪ್ರಾರಂಭಿಸಿ (ಶ್ರುತಿಯು) ಹೀಗೆಂದಿರುತ್ತದೆ· "ಯಾವದರಿಂದಲೇ ಈ ಭೂತಗಳು ಹುಟ್ಟುವವೋ ಹುಟ್ಟಿದವುಗಳಾಗಿ ಯಾವದರಿಂದ ಬದುಕಿರುವವೋ, ಯಾವದರ ಬಳಿಗೆ ಹೋಗಿ ಒಳಹೊಗುತ್ತವೆಯೋ, ಅದನ್ನು ತಿಳಿಯಲೆಳಸುವನಾಗು. ಅದೇ ಬ್ರಹ್ಮವು'' ಮತ್ತು ಇದರ **ನಿರ್ಣಯವಾಕ್ಯವು**[2]: "ಆನಂದದಿಂದಲೇ ಈ ಭೂತಗಳು ಹುಟ್ಟುತ್ತವೆ, ಹುಟ್ಟಿ ಆನಂದದಿಂದಲೇ ಬದುಕಿರುವವು, ಆನಂದದ ಬಳಿಗೆ ಹೋಗಿ (ಅದನ್ನೇ) ಒಳಹೊಗುತ್ತವೆ" ನಿತ್ಯಶುದ್ಧಬುದ್ಧಮುಕ್ತಸ್ವಭಾವವುಳ್ಳದ್ದಾಗಿಯೂ ಸರ್ವಜ್ಞವಾಗಿಯೂ ಇರುವ ಸ್ವರೂಪವುಳ್ಳ ಬ್ರಹ್ಮವೇ ಜಗತ್ತಿನ) ಕಾರಣವೆಂದು ಹೇಳುವ ಇದೇ ಜಾತಿಯ ಬೇರೆಯ ವಾಕ್ಯಗಳನ್ನು[3] (ಈ ಸೂತ್ರಕ್ಕೆ ವಿಷಯ ವಾಕ್ಯಗಳಾಗಿ) ಉದಾಹರಿಸಬಹುದು.

---

1. ಇವೆರಡು ಕಡೆಗಳಲ್ಲಿ ಒಂದು ಇತಿ ಇದ್ದರೆ ಚೆನ್ನಾಗಿತ್ತೆಂದು ಕಾಣುತ್ತದೆ.

2. ಬ್ರಹ್ಮಸ್ವರೂಪವನ್ನು ತಿಳಿಸುವ, ವರುಣನ ಉತ್ತರರೂಪವಾದ ವಾಕ್ಯವು.

3. ಬ್ರಹ್ಮಕ್ಕೆ ಜಗತ್ಕಾರಣತ್ವವನ್ನು ತಿಳಿಸುವ ವೇದಾಂತವಾಕ್ಯಗಳೆಲ್ಲ ಇಲ್ಲಿ ವಿಷಯ ವಾಕ್ಯಗಳೇ.

## ೩. ಶಾಸ್ತ್ರಯೋನಿತ್ವಾಧಿಕರಣ

(ಬ್ರಹ್ಮವು ಸರ್ವಜ್ಞವು; ಬ್ರಹ್ಮಕ್ಕೆ ಶಾಸ್ತ್ರವೇ ಪ್ರಮಾಣವು)

(ಭಾಷ್ಯ)

೩೧. ಜಗತ್ಕಾರಣತ್ವಪ್ರದರ್ಶನೇನ ಸರ್ವಜ್ಞಂ ಬ್ರಹ್ಮ ಇತಿ ಉಪಕ್ಷಿಪ್ತಮ್। ತದೇವ ದೃಢಯನ್ ಆಹ–

(ಭಾಷ್ಯಾರ್ಥ)

ಜಗತ್ತಿಗೆ ಕಾರಣವೆಂದು ಹೇಳಿದ್ದರಿಂದ ಬ್ರಹ್ಮವು ಸರ್ವಜ್ಞವೆಂದು ಸೂಚಿಸಿದಂತಾಯಿತು. ಅದನ್ನೇ ಗಟ್ಟಿಗೊಳಿಸುವದಕ್ಕಾಗಿ (ಈ ಮಾತನ್ನು) ಹೇಳಿರುತ್ತಾರೆ:—

**ಶಾಸ್ತ್ರಯೋನಿತ್ವಾತ್ ॥ ೩ ॥**

೨. ಶಾಸ್ತ್ರಕ್ಕೆ ಕಾರಣವಾಗಿರುವದರಿಂದ (ಬ್ರಹ್ಮವು ಸರ್ವಜ್ಞವು).

### ಬ್ರಹ್ಮವು ವೇದಕ್ಕೆ ಕಾರಣವು

(ಭಾಷ್ಯ)

೩೨. ಮಹತಃ ಋಗ್ವೇದಾದೇಃ ಶಾಸ್ತ್ರಸ್ಯ ಅನೇಕವಿದ್ಯಾಸ್ಥಾನೋಪಬೃಂಹಿತಸ್ಯ ಪ್ರದೀಪವತ್ ಸರ್ವಾರ್ಥಾವದ್ಯೋತಿನಃ ಸರ್ವಜ್ಞಕಲ್ಪಸ್ಯ ಯೋನಿಃ ಕಾರಣಂ ಬ್ರಹ್ಮ। ನ ಹಿ ಈದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿಲಕ್ಷಣಸ್ಯ ಸರ್ವಜ್ಞಗುಣಾನ್ವಿತಸ್ಯ ಸರ್ವಜ್ಞಾತ್ ಅನ್ಯತಃ ಸಂಭವೋಽಸ್ತಿ। ಯದ್ಯದ್ವಿಸ್ತರಾರ್ಥಂ ಶಾಸ್ತ್ರಂ ಯಸ್ಮಾತ್ ಪುರುಷವಿಶೇಷಾತ್ ಸಂಭವತಿ, ಯಥಾ ವ್ಯಾಕರಣಾದಿ ಪಾಣಿನ್ಯಾದೇಃ ಜ್ಞೇಯೈಕದೇಶಾರ್ಥಮಪಿ, ಸ ತತೋಽಪಿ ಅಧಿಕತರವಿಜ್ಞಾನಃ ಇತಿ ಪ್ರಸಿದ್ಧಂ ಲೋಕೇ। ಕಿಮು ವಕ್ತವ್ಯಮ್ ಅನೇಕಶಾಖಾಭೇದಭಿನ್ನಸ್ಯ ದೇವತಿರ್ಯಙ್ಮನುಷ್ಯವರ್ಣಾಶ್ರಮಾದಿಪ್ರವಿಭಾಗಹೇತೋಃ ಋಗ್ವೇದಾದ್ಯಾಖ್ಯಸ್ಯಸರ್ವಜ್ಞಾನಾಕರಸ್ಯ ಅಪ್ರಯತ್ನೇನೈವ ಲೀಲಾನ್ಯಾಯೇನ ಪುರುಷನಿಃಶ್ವಾಸವದ್ ಯಸ್ಮಾತ್ ಮಹತೋ ಭೂತಯೋನೇಃ ಸಂಭವಃ, "ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದಃ" (ಬೃ. ೨-೪-೧೦) ಇತ್ಯಾದಿಶ್ರುತೇಃ, ತಸ್ಯ ಮಹತೋ ಭೂತಸ್ಯ ನಿರತಿಶಯಂ ಸರ್ವಜ್ಞತ್ವಂ ಸರ್ವಶಕ್ತಿಮತ್ತ್ವಂ ಚ ಇತಿ ॥

(ಭಾಷ್ಯಾರ್ಥ)

ಅನೇಕ ವಿದ್ಯಾಸ್ಥಾನಗಳಿಂದ[1] ವಿಸ್ತರಿಸಲ್ಪಟ್ಟಿರುವದಾಗಿಯೂ ದೊಡ್ಡ

1. ಪುರಾಣಗಳು, ನ್ಯಾಯ, ಮೀಮಾಂಸ, ಧರ್ಮಶಾಸ್ತ್ರಗಳು, ವೇದಾಂಗಗಳು— ಇವೆಲ್ಲ ವೇದಾರ್ಥವನ್ನು ವಿಸ್ತರಿಸುವ ವಿದ್ಯಾಸ್ಥಾನಗಳೇ.

ದೀಪದಂತೆ ಎಲ್ಲಾ ವಿಷಯಗಳನ್ನೂ ಬೆಳಗುತ್ತಿರುವದಾಗಿಯೂ ಸರ್ವಜ್ಞನಂತಿರುವದಾಗಿಯೂ ಇರುವ ಋಗ್ವೇದವೇ ಮುಂತಾದ ಮಹಾಶಾಸ್ತ್ರಕ್ಕೆ[1] ಬ್ರಹ್ಮವು 'ಯೋನಿ' ಎಂದರೆ ಕಾರಣವಾಗಿರುವದು. ಇಂಥ ಸರ್ವಜ್ಞಗುಣದಿಂದ ಕೂಡಿಕೊಂಡಿರುವ[2] ಋಗ್ವೇದಾದಿರೂಪವಾದ ಶಾಸ್ತ್ರಕ್ಕೆ, ಸರ್ವಜ್ಞನಿಂದಲ್ಲದೆ, ಮತ್ತೆ ಯಾವದರಿಂದಲೂ ಉತ್ಪತ್ತಿಯುಂಟಾಗಲೇ ಆರದು[3]. ಏಕೆಂದರೆ ತಿಳಿಯತಕ್ಕದ್ದರಲ್ಲಿ ಒಂದಂಶವನ್ನು ತಿಳಿಸುವ ವ್ಯಾಕರಣವೇ ಮುಂತಾದ ಶಾಸ್ತ್ರವು ಪಾಣಿನಿಯೇ ಮುಂತಾದವರಿಂದಾಗಿರುವಂತೆ, ಯಾವಯಾವ ವಿಸ್ತರಾರ್ಥವಾದ ಶಾಸ್ತ್ರವು ಯಾವಯಾವ ಪುರುಷನಿಂದ ಆಗಿರುವದೋ ಅವನು ಅದಕ್ಕಿಂತಲೂ ಹೆಚ್ಚು ವಿಜ್ಞಾನವುಳ್ಳವನೆಂದು ಲೋಕದಲ್ಲಿ ಪ್ರಸಿದ್ಧ(ನಾಗಿರುತ್ತದೆ). ಹೀಗಿರುವಲ್ಲಿ ಅನೇಕ ಶಾಖಾಭೇದಗಳಿಂದ[4] ಬಗೆಬಗೆಯಾಗಿರುವದಾಗಿಯೂ ದೇವತೆಗಳು, ಕೀಳುಪ್ರಾಣಿಗಳು, ಮನುಷ್ಯರು, ವರ್ಣಾಶ್ರಮಗಳು–ಎಂಬುದೇ ಮುಂತಾದ ವಿಭಾಗಗಳಿಗೆ ಕಾರಣವಾಗಿಯೂ[5] ಇರುವ ಋಗ್ವೇದವೇ ಮುಂತಾದ ಹೆಸರಿನ, ಸರ್ವಜ್ಞಾನಕ್ಕೂ ಗನಿಯಂತಿರುವ (ಶಾಸ್ತ್ರವು) ಯಾವ ಪ್ರಯತ್ನವೂ ಇಲ್ಲದೆ ಲೀಲಾನ್ಯಾಯದಿಂದ ಮನುಷ್ಯನು ಉಸಿರುಬಿಟ್ಟಂತೆ[6] ಯಾವ ಮಹಾಭೂತವಾದ (ಬ್ರಹ್ಮವೆಂಬ) ಯೋನಿಯಿಂದ ಉಂಟಾಗಿರುವದೋ–"ಈ ಮಹಾಭೂತದ ನಿಃಶ್ವಾಸವೇ ಈ ಋಗ್ವೇದವು (ಬೃ ೨-೪-೧೦)–ಎಂದು ಮುಂತಾಗಿರುವ ಶ್ರುತಿಯೇ (ಇದಕ್ಕೆ ಪ್ರಮಾಣವು)–ಆ ಮಹಾಭೂತವಾದ (ಬ್ರಹ್ಮದಲ್ಲಿ) ಮಿಗಿಲಿಲ್ಲದ ಸರ್ವಜ್ಞತ್ವವೂ ಸರ್ವಶಕ್ತಿತ್ವವೂ ಇವೆಯೆಂಬುದನ್ನು ಹೇಳುವದೇನಿದೆ ?

---

1. ಅನೇಕ ವಿಷಯಗಳನ್ನು ಮತ್ತೊಂದರ ಬಯಕೆಯಿಲ್ಲದೆ ತಿಳಿಸುವದರಿಂದ ವೇದವು ಮಹಾಶಾಸ್ತ್ರವು.

2. ಕಾರ್ಯದಲ್ಲಿ ಕಾರಣಗುಣವು ಕೂಡಿಕೊಂಡಿರುತ್ತದೆ ಎಂದು ತಿಳಿಸುವದಕ್ಕೆ ಈ ವಿಶೇಷಣ.

3. ವೇದವು ಆತ್ಮರೂಪವಾಗಿ ನಿತ್ಯವಾಗಿದ್ದರೂ ಅಭಿವ್ಯಕ್ತವಾಗುತ್ತದೆ ಎಂದು ಭಾವ

4. ಋಗ್ವೇದದಲ್ಲಿ ೨೧ ಶಾಖೆಗಳು, ಯಜುರ್ವೇದದಲ್ಲಿ ೧೦೯, ಸಾಮವೇದದಲ್ಲಿ ೧೦೦೦, ಅಥರ್ವವೇದದಲ್ಲಿ ೫೦–ಎಂದು ಹೇಳುತ್ತಾರೆ.

5. ಇಂಥ ವರ್ಣದಲ್ಲಿ ಇಂಥ ಆಶ್ರಮದವರು ಇಂಥ ಕರ್ಮವನ್ನು ಮಾಡಿದರೆ ದೇವತೆಗಳ, ತಿರ್ಯಗ್ಜಂತುಗಳ, ಅಥವಾ ಮನುಷ್ಯರ ಜನ್ಮವು ಬರುವದು–ಎಂದು ವಿವರಿಸುವದಾಗಿಯೂ.

6. ವೇದವನ್ನು ಯಾವನೊಬ್ಬ ಪುರುಷನೂ ಪ್ರಯತ್ನದಿಂದ ಕಾವ್ಯಾದಿಗಳನ್ನು ರಚಿಸುವಂತೆ ರಚಿಸಿಲ್ಲವೆಂದು ಭಾವ.

## ಬ್ರಹ್ಮಕ್ಕೆ ಶಾಸ್ತ್ರವೇ ಪ್ರಮಾಣವು

(ಭಾಷ್ಯ)

೩೩. ಅಥವಾ ಯಥೋಕ್ತಮ್ ಋಗ್ವೇದಾದಿಶಾಸ್ತ್ರಂ ಯೋನಿಃ ಕಾರಣಂ ಪ್ರಮಾಣಮ್ ಅಸ್ಯ ಬ್ರಹ್ಮಣಃ ಯಥಾವತ್ಸ್ವರೂಪಾಧಿಗಮೇ । ಶಾಸ್ತ್ರಾದೇವ ಪ್ರಮಾಣಾತ್ ಜಗತೋ ಜನ್ಮಾದಿಕಾರಣಂ ಬ್ರಹ್ಮ ಅಧಿಗಮ್ಯತೇ ಇತ್ಯಭಿಪ್ರಾಯಃ । ಶಾಸ್ತ್ರಮ್ ಉದಾಹೃತಂ ಪೂರ್ವಸೂತ್ರೇ "ಯತೋ ವಾ ಇಮಾನಿ ಭೂತಾನಿ ಜಾಯನ್ತೇ" (ತೈ. ೩-೧) ಇತ್ಯಾದಿ ॥[1]

(ಭಾಷ್ಯಾರ್ಥ)

ಅಥವಾ (ಈ ಸೂತ್ರಕ್ಕೆ ಮತ್ತೊಂದು ಬಗೆಯಲ್ಲಿಯೂ ಅರ್ಥಮಾಡಬಹುದು). ಮೇಲೆ ಹೇಳಿದಂಥ ಋಗ್ವೇದವೇ ಮುಂತಾದ ಶಾಸ್ತ್ರವು ಈ ಬ್ರಹ್ಮದ ನಿಜವಾದ ಸ್ವರೂಪವನ್ನು ಅರಿತುಕೊಳ್ಳುವದಕ್ಕೆ ಯೋನಿಯು, ಎಂದರೆ ಕಾರಣವು ಪ್ರಮಾಣವು ಶಾಸ್ತ್ರವೆಂಬ ಪ್ರಮಾಣದಿಂದಲೇ[1] ಜಗತ್ತಿನ ಜನ್ಮಾದಿಗಳಿಗೆ ಕಾರಣವಾಗಿರುವ ಬ್ರಹ್ಮವನ್ನು ಅರಿಯಲಾಗುತ್ತದೆ ಎಂದು ಅಭಿಪ್ರಾಯವು (ಆ) ಶಾಸ್ತ್ರವನ್ನು ಹಿಂದಿನ ಸೂತ್ರದಲ್ಲಿ ಉದಾಹರಿಸಿರುತ್ತದೆ "ಯಾವದರಿಂದ ಈ ಭೂತಗಳು ಹುಟ್ಟುತ್ತವೆಯೋ" (ತೈ. ೩-೧) ಮುಂತಾದದ್ದೇ (ಆ ಶಾಸ್ತ್ರವು).

(ಭಾಷ್ಯ)

೩೪ ಕಿಮರ್ಥಂ ತರ್ಹಿ ಇದಂ ಸೂತ್ರಮ್, ಯಾವತಾ ಪೂರ್ವಸೂತ್ರೇ ಏವ ಏವಂಜಾತೀಯಕಂ ಶಾಸ್ತ್ರಮ್ ಉದಾಹರತಾ ಶಾಸ್ತ್ರಯೋನಿತ್ವಂ ಬ್ರಹ್ಮಣೋ ದರ್ಶಿತಮ್ ? ಉಚ್ಯತೇ । ತತ್ರ ಪೂರ್ವಸೂತ್ರಾಕ್ಷರೇಣ ಸ್ಪಷ್ಟಂ ಶಾಸ್ತ್ರಸ್ಯ ಅನುಪಾದಾನಾತ್ ಜನ್ಮಾದಿ ಕೇವಲಮ್ ಅನುಮಾನಮ್ ಉಪನ್ಯಸ್ತಮ್ ಇತ್ಯಾಶಙ್ಕ್ಯೇತ। ತಾಮ್ ಆಶಙ್ಕಾಂ ನಿವರ್ತಯಿತುಮ್ ಇದಂ ಸೂತ್ರಂ ಪ್ರವವೃತೇ 'ಶಾಸ್ತ್ರಯೋನಿತ್ವಾತ್' ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):—ಹಾಗಾದರೆ ಈ ಸೂತ್ರವು ಏತಕ್ಕೆ? ಹಿಂದಿನ ಸೂತ್ರದಲ್ಲಿಯೇ ಈ ಬಗೆಯ ಶಾಸ್ತ್ರವನ್ನು ಉಪದೇಶಿಸಿರುವ (ಸೂತ್ರಕಾರರು) ಬ್ರಹ್ಮಕ್ಕೆ ಶಾಸ್ತ್ರವೇ ಪ್ರಮಾಣವೆಂದು ತಿಳಿಸಿಬಿಟ್ಟಿರುತ್ತಾರಲ್ಲ!

---

1. ಪ್ರತ್ಯಕ್ಷಾದಿಪ್ರಮಾಣಗಳಿಂದಲ್ಲ. ಇಲ್ಲಿ ಅನುಭವವನ್ನಾಗಲಿ ತದನುಸಾರಿಯಾದ ತರ್ಕವನ್ನಾಗಲಿ ತಿರಸ್ಕರಿಸಿಲ್ಲ.

(ಸಮಾಧಾನ):-- ಹೇಳುತ್ತೇವೆ, (ಕೇಳು). ಇಲ್ಲಿ ಹಿಂದಿನ ಸೂತ್ರದ ಅಕ್ಷರದಿಂದಲೇ ಸ್ಪಷ್ಟವಾಗಿ ಶಾಸ್ತ್ರವನ್ನು ತೆಗೆದುಕೊಂಡು (ಹೇಳಿ)ಲ್ಲವಾದ್ದರಿಂದ (ಜಗತ್ತಿನ) ಜನ್ಮಾದಿ (ಎಂದು) ಬರಿಯ ಅನುಮಾನವನ್ನೇ (ಅಲ್ಲಿ) ಹೇಳಿದೆ ಎಂದು (ಯಾರಾದರೂ) ಶಂಕೆಯನ್ನು ಮಾಡಬಹುದು. ಆ ಶಂಕೆಯನ್ನು ತೊಲಗಿಸುವದಕ್ಕಾಗಿ 'ಶಾಸ್ತ್ರಯೋನಿತ್ವಾತ್' ಎಂಬ ಈ ಸೂತ್ರವು ಹೊರಟಿರುತ್ತದೆ.

## ೪. ಸಮನ್ವಯಾಧಿಕರಣ

(ಉಪನಿಷದ್ವಾಕ್ಯಗಳು ಬ್ರಹ್ಮವನ್ನು ನೇರಾಗಿ ಹೇಳುತ್ತವೆ)

### ೧. ಶಾಸ್ತ್ರವು ವಸ್ತುಪರವಲ್ಲ ಎಂಬ ಪೂರ್ವಪಕ್ಷ

(ಭಾಷ್ಯ)

೩೫. ಕಥಂ ಪುನರ್ಬ್ರಹ್ಮಣಃ ಶಾಸ್ತ್ರಪ್ರಮಾಣಕತ್ವಮುಚ್ಯತೇ, ಯಾವತಾ "ಆಮ್ನಾಯಸ್ಯ ಕ್ರಿಯಾರ್ಥತ್ವಾತ್ ಆನರ್ಥಕ್ಯಮತದರ್ಥಾನಾಮ್" (ಜೈ. ಸೂ. ೧-೨-೧) ಇತಿ ಕ್ರಿಯಾಪರತ್ವಂ ಶಾಸ್ತ್ರಸ್ಯ ಪ್ರದರ್ಶಿತಮ್ । ಅತಃ ವೇದಾನ್ತಾನಾಮಾನರ್ಥಕ್ಯಮ್ । ಅಕ್ರಿಯಾರ್ಥತ್ವಾತ್ । ಕರ್ತೃದೇವತಾದಿಪ್ರಕಾಶನಾರ್ಥತ್ವೇನ ವಾ ಕ್ರಿಯಾವಿಧಿಶೇಷತ್ವಮ್ । ಉಪಾಸನಾದಿಕ್ರಿಯಾನ್ತರವಿಧಾನಾರ್ಥತ್ವಂ ವಾ । ನ ಹಿ ಪರಿನಿಷ್ಠಿತವಸ್ತುಪ್ರತಿಪಾದನಂ ಸಂಭವತಿ । ಪ್ರತ್ಯಕ್ಷಾದಿವಿಷಯತ್ವಾತ್ ಪರಿನಿಷ್ಠಿತವಸ್ತುನಃ । ತತ್ಪ್ರತಿಪಾದನೇ ಚ ಹೇಯೋಪಾದೇಯರಹಿತೇ ಪುರುಷಾರ್ಥಾಭಾವಾತ್ । ಅತ ಏವ "ಸೋಽರೋದೀತ್" (ತೈ. ಸಂ. ೧-೫-೧-೧) ಇತ್ಯೇವಮಾದೀನಾಮ್ ಆನರ್ಥಕ್ಯಂ ಮಾ ಭೂತ್ ಇತಿ "ವಿಧಿನಾ ತ್ವೇಕವಾಕ್ಯತ್ವಾತ್ ಸ್ತುತ್ಯರ್ಥೇನ ವಿಧೀನಾಂ ಸ್ಯುಃ" (ಜೈ. ಸೂ ೧-೨-೭) ಇತಿ ಸ್ತಾವಕತ್ವೇನ ಅರ್ಥವತ್ತ್ವಮ್ ಉಕ್ತಮ್ । ಮನ್ತ್ರಾಣಾಂ ಚ "ಇಷೇ ತ್ವಾ" (ತೈ. ಸಂ. ೧-೧-೧-೧) ಇತ್ಯಾದೀನಾಂ ಕ್ರಿಯಾತತ್ಸಾಧನಾಭಿಧಾಯಿತ್ವೇನ ಕರ್ಮಸಮವಾಯಿತ್ವಮ್ ಉಕ್ತಮ್ । ನ ಕ್ವಚಿದಪಿ ವೇದವಾಕ್ಯಾನಾಂ ವಿಧಿಸಂಸ್ಪರ್ಶಮನ್ತರೇಣ ಅರ್ಥವತ್ತಾ ದೃಷ್ಟಾ ಉಪಪನ್ನಾ ವಾ । ನ ಚ ಪರಿನಿಷ್ಠಿತೇ ವಸ್ತುಸ್ವರೂಪೇ ವಿಧಿಃ ಸಂಭವತಿ । ಕ್ರಿಯಾವಿಷಯತ್ವಾತ್ ವಿಧೇಃ । ತಸ್ಮಾತ್ ಕರ್ಮಾಪೇಕ್ಷಿತಕರ್ತೃಸ್ವರೂಪದೇವತಾದಿಪ್ರಕಾಶನೇನ ಕ್ರಿಯಾವಿಧಿಶೇಷತ್ವಂ ವೇದಾನ್ತಾನಾಮ್ । ಅಥ ಪ್ರಕರಣಾನ್ತರಭಯಾತ್ ನೈತತ್ ಅಭ್ಯುಪಗಮ್ಯತೇ, ತಥಾಪಿ ಸ್ವವಾಕ್ಯಗತೋಪಾಸನಾದಿಕರ್ಮಪರತ್ವಮ್ ॥

(ಭಾಷ್ಯಾರ್ಥ)

(ಆಕ್ಷೇಪ): ಬ್ರಹ್ಮಕ್ಕೆ ಶಾಸ್ತ್ರವು ಪ್ರಮಾಣವೆಂದು ಹೇಗೆತಾನೆ ಹೇಳು. ಶ್ರೀರಿ ? "ಶಾಸ್ತ್ರವು ಕ್ರಿಯೆಯನ್ನು ಹೇಳುವದಕ್ಕೆ ಹೊರಟಿರುವದರಿಂದ ಆ (ಕ್ರಿಯೆ. ಯನ್ನು) ಹೇಳದ (ವಾಕ್ಯಗಳು) ವ್ಯರ್ಥ" (ಜೈ.ಸೂ. ೧-೨-೧) ಎಂದು[1] (ಪೂರ್ವ ಪಕ್ಷವನ್ನು ಮಾಡಿ) ಶಾಸ್ತ್ರಕ್ಕೆ ಕ್ರಿಯೆಯಲ್ಲಿಯೇ ತಾತ್ಪರ್ಯ(ವಿರುವ)ದೆಂದು (ಪೂರ್ವ ಮೀಮಾಂಸಾಶಾಸ್ತ್ರದಲ್ಲಿ) ತೋರಿಸಿಕೊಟ್ಟಿದೆಯಲ್ಲವೆ ? ಆದ್ದರಿಂದ ವೇದಾಂತಗಳು ನಿರರ್ಥಕ(ವೆಂದಾಯಿತು), ಏಕೆಂದರೆ (ಅವುಗಳಿಗೆ) ಕ್ರಿಯೆಯಲ್ಲಿ ತಾತ್ಪರ್ಯವಿರುವ ದಿಲ್ಲ.[2] ಕರ್ತೃ, ದೇವತೆ-ಮುಂತಾದ (ಕರ್ಮಕ್ಕೆ ಬೇಕಾದ ವಸ್ತುಗಳನ್ನು) ತಿಳಿಸುವ ಮೂಲಕ (ಇವು) ಕ್ರಿಯೆಯನ್ನು ವಿಧಿಸುವ (ವಾಕ್ಯ)ಗಳಿಗೆ ಅಂಗವಾಗಿರುತ್ತವೆ ಎಂದಾದರೂ (ಹೇಳಬೇಕು).[3] ಅಥವಾ ಉಪಾಸನೆಯೇ ಮುಂತಾದ[4] ಬೇರೆಯ ಕ್ರಿಯೆ(ಯೊಂದ)ನ್ನು ವಿಧಿಸುವದಕ್ಕೆ (ಅವು ಬಂದಿವೆ) ಎಂದಾದರೂ (ಹೇಳಬಹುದು) ಪರಿನಿಷ್ಠಿತವಸ್ತುವನ್ನು[5] (ವೇದವಾಕ್ಯವು) ಹೇಳುತ್ತದೆ ಎಂಬುದು ಆಗುವಹಾಗಿಲ್ಲ ಏಕೆಂದರೆ ಪರಿನಿಷ್ಠಿತವಸ್ತುವು ಪ್ರತ್ಯಕ್ಷವೇ ಮುಂತಾದ (ಲೌಕಿಕಪ್ರಮಾಣಗಳಿಗೇ) ವಿಷಯವಾಗಿರುತ್ತದೆ.[6] ಮತ್ತು ಬಿಡತಕ್ಕದ್ದಾಗಲಿ ತೆಗೆದುಕೊಳ್ಳತಕ್ಕದ್ದಾಗಲಿ ಇಲ್ಲದ್ದ

---

1. ಇದು ಪೂವಪಕ್ಷವಾದರೂ ಕ್ರಿಯೆಗೆ ಸಂಬಂಧಪಡದೆ ಇದ್ದರೆ ವಾಕ್ಯಕ್ಕೆ ಆನರ್ಥಕ್ಯ ವುಂಟೆಂಬ ಅಂಶದಲ್ಲಿ ಸಿದ್ಧಾಂತವೇ ಎಂದು ಭಾವ.

2. ಕ್ರಿಯೆಯಲ್ಲಿ ತಾತ್ಪರ್ಯವಿಲ್ಲವೆಂಬ ಪಕ್ಷದಲ್ಲಿ ಅವುಗಳಿಗೆ ವಿಶೇಷವಾದ ಅರ್ಥ ವೇನೂ ಇರುವದಿಲ್ಲ, ಅವುಗಳನ್ನು ಅಧ್ಯಯನಮಾಡುವದರಿಂದ ಪುಣ್ಯಬರುವದೆಂದಿಟ್ಟು ಕೊಳ್ಳಬಹುದು—ಎಂಬ ಭಾವವೂ ಇದರಲ್ಲಿ ಅಡಗಿರುತ್ತದೆ.

3. ಕರ್ತೃ, ದೇವತೆ—ಇವು ಭೂತವಸ್ತುಗಳಾದರೂ ಕ್ರಿಯೆಗೆ ಅಂಗವಾಗಿ ಅವನ್ನು ಹೇಳಿದರೆ ವಾಕ್ಯಕ್ಕೆ ಆನರ್ಥಕ್ಯವು ಬರುವದಿಲ್ಲ ಎಂದು ಭಾವ.

4. ಮುಂತಾದ ಎಂದರೆ ಉಪನಿಷತ್ತಿನಲ್ಲಿಯೇ ಹೇಳಿರುವ ಕೆಲವು ಕರ್ಮಗಳನ್ನು ಗ್ರಹಿಸಬಹುದು. ಇಲ್ಲಿ ಅನೇಕ ವಿಕಲ್ಪಗಳನ್ನು ಹೇಳಿರುವದು ಹೇಗಾದರೂ ಕ್ರಿಯೆಗೆ ಸಂಬಂಧ ವಿಲ್ಲದೆ ಬರಿಯ ಭೂತವಸ್ತುವನ್ನು ತಾತ್ಪರ್ಯದಿಂದ ತಿಳಿಸುವದೆಂಬುದು ಹೊಂದುವದಿಲ್ಲ ಎಂದು ನಿರ್ಧರಿಸುವದಕ್ಕಾಗಿ. ಇವೆಲ್ಲ ಒಬ್ಬನೇ ಪೂರ್ವಪಕ್ಷಿಯ ಮತಗಳಲ್ಲ.

5. ಭೂತವಸ್ತುವನ್ನು, ಸಿದ್ಧವಸ್ತುವನ್ನು.

6. ಭಾ. ಭಾ ೨೯ರಲ್ಲಿ ಈ ಶಂಕೆಗೆ ಸಮಾಧಾನವನ್ನು ಹೇಳಿಯೇ ಇದೆಯಾದರೂ ಅಲ್ಲಿ ಬ್ರಹ್ಮವು ಪ್ರಮಾಣಾಂತರಗೋಚರವಲ್ಲವೆಂಬುದನ್ನು ಯುಕ್ತಿಯಿಂದ ತೋರಿಸಿತ್ತು. ಇಲ್ಲಿ ವೇದವಾಕ್ಯವು ಪರಿನಿಷ್ಠಿತವಸ್ತುವನ್ನೂ ಹೇಳಬಹುದೆಂಬುದನ್ನು ತಿಳಿಸುವದಕ್ಕೆ ಹೊರಟದೆ.

ರಿಂದ ಅದನ್ನು ಹೇಳಿದರೆ ಪುರುಷಾರ್ಥವೂ ಇರುವದಿಲ್ಲ.[1] ಆದ್ದರಿಂದಲೇ "ಅವನು ಅತ್ತನು" (ತೈ.ಸಂ. ೧-೫-೧-೧) ಮುಂತಾದ ವಾಕ್ಯಗಳು ನಿರರ್ಥಕವಾಗದೆ ಇರಲೆಂದು "ಆದರೆ ವಿಧಿಯೊಡನೆ ಒಂದು ವಾಕ್ಯವಾಗುವದರಿಂದ[2] ವಿಧಿಗಳನ್ನು ಹೊಗಳುವದರಿಂದ (ಇವು ಸಾರ್ಥಕ)ವಾಗಿರುವವು" (ಜೈ. ಸೂ. ೧-೨-೭) ಎಂದು (ಕರ್ಮವಿಧಿಗಳನ್ನು) ಹೊಗಳುವದರಿಂದ (ಅವುಗಳಿಗೆ) ಸಾರ್ಥಕ್ಯವನ್ನು (ಮೀಮಾಂಸಾಶಾಸ್ತ್ರದಲ್ಲಿ) ಹೇಳಿರುತ್ತದೆ. "ಬಲಕ್ಕೋಸ್ಕರ ನಿನ್ನನ್ನು (ಕತ್ತರಿಸುತ್ತೇನೆ)" (ತೈ. ಸಂ. ೧-೧-೧-೧) ಮುಂತಾದ ಮಂತ್ರಗಳು ಕ್ರಿಯೆಯನ್ನೂ ಅದರ ಸಾಧನವನ್ನೂ ಹೇಳುವದರಿಂದ ಕರ್ಮಕ್ಕೆ ಸಂಬಂಧಪಟ್ಟಿವೆ ಎಂದೂ (ಆ ಮೀಮಾಂಸೆಯಲ್ಲಿ) ಹೇಳಿರುತ್ತದೆ[3]. **ವಿಧಿಯ ಸೋಂಕೇ ಇಲ್ಲದೆ ವೇದವಾಕ್ಯಗಳಿಗೆ ಪ್ರಯೋಜನವಿರುವದೆಂಬುದು ಎಲ್ಲಿಯೂ** ಕಂಡುಬಂದಿರುವದೂ ಇಲ್ಲ, **ಯುಕ್ತವೂ ಅಗುವದಿಲ್ಲ**[4] **ಪರಿನಿಷ್ಠಿತವಾದ ವಸ್ತುವಿನ ವಿಷಯದಲ್ಲಿ ವಿಧಿಯು ಹೊಂದುವದೂ ಇಲ್ಲ; ಏಕೆಂದರೆ, ವಿಧಿಯು ಕ್ರಿಯೆಯ ವಿಷಯವಾಗಿರುತ್ತದೆ**[5].

ಆದ್ದರಿಂದ ಕರ್ಮಕ್ಕೆ ಬೇಕಾಗಿರುವ ಕರ್ತೃವಿನ ಸ್ವರೂಪ, ದೇವತೆ-ಮುಂತಾದದ್ದನ್ನು ತಿಳಿಸಿಕೊಡುವದರ ಮೂಲಕ ವೇದಾಂತ (ವಚನ)ಗಳು ಕ್ರಿಯಾವಿಧಿಗೆ ಅಂಗವಾಗಿರುತ್ತವೆ (ಎಂದು ಒಪ್ಪಬೇಕು) ಇನ್ನು(ಇದು) ಬೇರೊಂದು ಪ್ರಕರಣವಾಗಿರುವದಲ್ಲ[6]!-ಎಂಬ ಅಂಜಿಕೆಯಿಂದ ಹೀಗೆಂದು ಒಪ್ಪಿಕೊಳ್ಳುವದಕ್ಕಾಗುವದಿಲ್ಲವೆಂದರೆ, ಆಗಲೂ (ಉಪನಿಷತ್ತುಗಳು) ತಮ್ಮ ವಾಕ್ಯದಲ್ಲಿರುವ ಉಪಾ

---

1 ಕ್ರಿಯೆಯನ್ನು ಹೇಳುವ ವಾಕ್ಯಕ್ಕೆ ಇಂಥ ಪುರುಷಾರ್ಥವಿದೆ, ಪುರುಷಾರ್ಥವಿಲ್ಲದ ವಾಕ್ಯವು ಪ್ರಮಾಣವಾಗಲಾರದು, ಆದ್ದರಿಂದ ಅಪ್ರಾಮಾಣ್ಯವು ಬರದೆ ಇರುವದಕ್ಕಾಗಿ ಇಲ್ಲಿಯೂ ಕ್ರಿಯೆಯನ್ನೇ ವಿಧಿಸಿದೆ ಎಂಬುದು ಯುಕ್ತ ಎಂದು ಭಾವ

2. 'ಸೋಽರೋದೀತ್' ಮುಂತಾದ ಅರ್ಥವಾದಗಳು ತಾವೇ ಬೇರೊಂದು ಅರ್ಥವನ್ನು ಹೇಳಲಾರವು, ವಿಧಿಯೊಡನೆ ಸೇರಿಕೊಂಡು ಒಂದೇ ಅರ್ಥವನ್ನು ಹೇಳುತ್ತವೆ ಎಂದರ್ಥ.

3. ಮಂತ್ರದಿಂದ ಆಯಾ ಪದಾರ್ಥವನ್ನು ಸ್ಮರಿಸಿಕೊಂಡು ಕರ್ಮದಲ್ಲಿ ಅವನ್ನು ಉಪಯೋಗಿಸಿದರೆ ಫಲ, ಆದ್ದರಿಂದ ಮಂತ್ರವು ಕ್ರಿಯೆಯನ್ನೂ ಅದರ ಸಾಧನವನ್ನೂ ತಿಳಿಸುತ್ತದೆ ಎಂದು ಪೂರ್ವಮೀಮಾಂಸದಲ್ಲಿ ನಿರ್ಣಯಿಸಿದೆ.

4. ಕರ್ಮಕಾಂಡದ ವಾಕ್ಯದಲ್ಲಿ ಎಲ್ಲಿಯೂ ಹೀಗಿರುವದಿಲ್ಲ, ವೇದಾಂತವಾಕ್ಯದಲ್ಲಿ ಹೀಗೆ ಇರುವದೆಂದು ಕಲ್ಪಿಸಿದರೂ ನಿಷ್ಪ್ರಯೋಜನವಾಗುತ್ತದೆ ಎಂದರ್ಥ.

5. ವಿಧಿಯು ಬೇಕಾದರೆ ಬ್ರಹ್ಮವನ್ನೇ ಇಲ್ಲಿ ವಿಧಿಸಿದೆ ಎನ್ನಬಹುದಲ್ಲ!-ಎಂಬ ಶಂಕೆಗೆ ಪರಿಹಾರವಿದು.

6. ಹಿಂದಿನ ಕರ್ಮಕಾಂಡದಲ್ಲಿ ಹೇಳಿರುವ ಕರ್ಮಕ್ಕೆ ಇಲ್ಲಿರುವ ಆತ್ಮಜ್ಞಾನವು ಅಂಗವಾದೀತೆ?-ಎಂದು ಸಿದ್ಧಾಂತಿಯು ಕೇಳಿಯಾನೆಂದು ಪೂರ್ವಪಕ್ಷಿಯು ಈ ಮಾತನ್ನಾಡಿದ್ದಾನೆ.

ಸನೆಯೇ ಮುಂತಾದ ಕರ್ಮಗಳನ್ನು (ಹೇಳುವದರಲ್ಲಿ) ತಾತ್ಪರ್ಯವುಳ್ಳವು (ಎಂದು ಒಪ್ಪಬೇಕು).

## ಸಿದ್ಧಾಂತ: ಬ್ರಹ್ಮದಲ್ಲಿಯೇ ವೇದಾಂತ ಸಮನ್ವಯ

(ಭಾಷ್ಯ)

೩೬. ತಸ್ಮಾತ್ ನ ಬ್ರಹ್ಮಣಃ ಶಾಸ್ತ್ರಯೋನಿತ್ವಮ್ ಇತಿ ಪ್ರಾಪ್ತೇ ಉಚ್ಯತೇ—

(ಭಾಷ್ಯಾರ್ಥ)

ಆದ್ದರಿಂದ ಬ್ರಹ್ಮವು ಶಾಸ್ತ್ರಯೋನಿ (ಎಂದು ಹೇಳಿದ್ದು) ಸರಿಯಲ್ಲ ಎಂದು (ಪೂರ್ವಪಕ್ಷವು) ಬಂದೊದಗಲಾಗಿ(ಅದಕ್ಕೆ ಈ ಪರಿಹಾರವನ್ನು) ಹೇಳಲಾಗುತ್ತದೆ :

**ತತ್ತು ಸಮನ್ವಯಾತ್ ॥ ೪ ॥**

೪ ಆದರೆ ಆ (ಬ್ರಹ್ಮವು ಶಾಸ್ತ್ರಯೋನಿಯು); ಏಕೆಂದರೆ ಸಮನ್ವಯುಪದೆ.

(ಭಾಷ್ಯ)

೩೭. ತುಶಬ್ದಃ ಪೂರ್ವಪಕ್ಷವ್ಯಾವೃತ್ತ್ಯರ್ಥಃ । ತದ್ ಬ್ರಹ್ಮ ಸರ್ವಜ್ಞಂ ಸರ್ವಶಕ್ತಿ ಜಗದುತ್ಪತ್ತಿಸ್ಥಿತಿಲಯಕಾರಣಂ ವೇದಾನ್ತಶಾಸ್ತ್ರಾದೇವಾವಗಮ್ಯತೇ । ಕಥಮ್ ? ಸಮನ್ವಯಾತ್ । ಸರ್ವೇಷು ಹಿ ವೇದಾನ್ತೇಷು ವಾಕ್ಯಾನಿ ತಾತ್ಪರ್ಯೇಣ ಏತಸ್ಯಾರ್ಥಸ್ಯ ಪ್ರತಿಪಾದಕತ್ವೇನ ಸಮನುಗತಾನಿ–"ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ ೬-೨-೧), "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್" (ಐ. ೧-೧-೧), "ತದೇತದ್ಬ್ರಹ್ಮಾಪೂರ್ವಮನಪರಮನನ್ತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂಃ" (ಬೃ. ೨-೫-೧೯), "ಬ್ರಹ್ಮೈವೇದಮಮೃತಂ ಪುರಸ್ತಾತ್" (ಮುಂ. ೨-೨-೧೧) ಇತ್ಯಾದೀನಿ । ನ ಚ ತದ್ಗತಾನಾಂ ಪದಾನಾಂ ಬ್ರಹ್ಮಸ್ವರೂಪವಿಷಯೇ ನಿಶ್ಚಿತೇ ಸಮನ್ವಯೇಽವಗಮ್ಯಮಾನೇ ಅರ್ಥಾನ್ತರಕಲ್ಪನಾ ಯುಕ್ತಾ । ಶ್ರುತಹಾನ್ಯಶ್ರುತಕಲ್ಪನಾಪ್ರಸಙ್ಗಾತ್ ॥

(ಭಾಷ್ಯಾರ್ಥ)

(ಇಲ್ಲಿರುವ) 'ತು' (ಆದರೆ) ಎಂಬ ಮಾತು ಪೂರ್ವಪಕ್ಷವನ್ನು ತಿರಸ್ಕರಿಸುವದಕ್ಕಾಗಿ (ಬಂದಿರುತ್ತದೆ). 'ಅದು' ಎಂದರೆ ಸರ್ವಜ್ಞವೂ ಸರ್ವಶಕ್ತಿಗಳುಳ್ಳದ್ದೂ

ಜಗತ್ತಿನ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣವೂ ಆಗಿರುವ ಬ್ರಹ್ಮವು ವೇದಾಂತಶಾಸ್ತ್ರದಿಂದಲೇ ತಿಳಿದುಬರತಕ್ಕದ್ದಾಗಿದೆ. ಅದು ಹೇಗೆ ?-ಎಂದರೆ (ವೇದಾಂತವಾಕ್ಯಗಳ) **ಸಮನ್ವಯ**(ವಿರುವದ)ರಿಂದ. **ಎಲ್ಲಾ ವೇದಾಂತಗಳಲ್ಲಿಯೂ ವಾಕ್ಯಗಳು**, ಎಂದರೆ "ಎಲೆ ಸೋಮ್ಯನೆ, ಇದು ಮೊದಲು ಎರಡನೆಯದಿಲ್ಲದ ಸತ್ತೊಂದೇ ಆಗಿದ್ದಿತು" (ಛಾಂ. ೬-೨-೧). "ಇದು ಮೊದಲು ಆತ್ಮನೊಬ್ಬನೇ ಆಗಿದ್ದಿತು" (ಐ. ೧-೧-೧) "ಆ ಈ ಬ್ರಹ್ಮವು ಹಿಂದಿಲ್ಲದ್ದು, ಮುಂದಿಲ್ಲದ್ದು, ಒಳಗಿಲ್ಲದ್ದು, ಹೊರಗಿಲ್ಲದ್ದು; ಸರ್ವವನ್ನೂ ಅನುಭವಿಸುತ್ತಿರುವ ಈ ಆತ್ಮನೇ ಬ್ರಹ್ಮವು" (ಬೃ. ೨-೫-೧೯), "ಮುಂದುಗಡೆ ಇರುವ ಇದು ಅಮೃತವಾದ ಬ್ರಹ್ಮವೇ" "(ಮುಂ. ೨-೨-೧೧) ಇವೇ ಮುಂತಾದವು, **ಈ ಅರ್ಥವನ್ನು ತಾತ್ಪರ್ಯದಿಂದ ಹೇಳುವದರಿಂದಲೇ ಸಮನ್ವಯವಾಗುತ್ತವೆ**[1] ಈ (ವಾಕ್ಯ)ಗಳಲ್ಲಿರುವ **ಪದಗಳು**[2] **ಬ್ರಹ್ಮಸ್ವರೂಪದ ವಿಷಯದಲ್ಲಿಯೇ ನಿಶ್ಚಯವಾಗಿ ಸಮನ್ವಯವಾಗುತ್ತವೆ** ಎಂದು ಗೊತ್ತಾಗಿದ್ದರೂ (ಇದಕ್ಕೆ) ಬೇರೊಂದು ಅರ್ಥವನ್ನು[3] ಕಲ್ಪಿಸುವದು ಯುಕ್ತವಲ್ಲ, ಏಕೆಂದರೆ (ಹಾಗೆ ಮಾಡಿದರೆ) ಶ್ರುತಿಯಲ್ಲಿ ಹೇಳಿರುವದನ್ನು ಬಿಟ್ಟು ಹೇಳದಿರುವದನ್ನು ಕಲ್ಪಿಸಿಕೊಂಡಂತಾದೀತು[4].

## ಪೂರ್ವಪಕ್ಷೋಕ್ತಿಗಳ ತಿರಸ್ಕಾರ

(ಭಾಷ್ಯ)

೩೮. ನ ಚ ತೇಷಾಂ ಕರ್ತೃಸ್ವರೂಪಪ್ರತಿಪಾದನಪರತಾ ಅವಸೀಯತೇ । "ತತ್ಕೇನ ಕಂ ಪಶ್ಯೇತ್ (ಬೃ. ೨-೪-೧೩) ಇತ್ಯಾದಿಕ್ರಿಯಾಕಾರಕಫಲನಿರಾಕರಣ

---

1. ವೇದಾನ್ತವಾಕ್ಯಗಳು ಆತ್ಮಾಭಿನ್ನಬ್ರಹ್ಮವನ್ನೇ ತಾತ್ಪರ್ಯದಿಂದ ಹೇಳುತ್ತವೆ. ಎಂಬುದು ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಉಪಕ್ರಮಾದಿಗಳಿಂದ ನಿಶ್ಚಯವಾಗುತ್ತವೆ.

2. ಇಲ್ಲಿ ಉದಾಹರಿಸಿರುವ ವಾಕ್ಯಗಳಲ್ಲಿ ಪದಗಳು ಬ್ರಹ್ಮದಲ್ಲಿಯೇ ಅನ್ವಯವಾಗುತ್ತವೆ. ಉಪನಿಷತ್ತಿನ ವಾಕ್ಯಗಳು ಬ್ರಹ್ಮವನ್ನೇ ಹೇಳುವಂತೆ ಪ್ರಧಾನವಾಕ್ಯಗಳಲ್ಲಿರುವ ಪದಗಳೂ ಸಮನ್ವಯದಿಂದ ಬ್ರಹ್ಮವನ್ನೇ ತಿಳಿಸುತ್ತವೆ.

3. ಕ್ರಿಯೆ, ಕರ್ತೃ, ದೇವತೆ,ಉಪಾಸನೆ–ಮುಂತಾದ ಪೂರ್ವಪಕ್ಷಿಸಮ್ಮತವಾದ ಅರ್ಥವನ್ನು.

4. ಶ್ರುತಿಯಲ್ಲಿ ಹೇಳಿರುವದನ್ನು ಬಿಟ್ಟು ಅದರಲ್ಲಿ ಹೇಳದೆ ಇರುವದನ್ನು ವೇದಾರ್ಥವೆಂದು ಕಲ್ಪಿಸುವದು ತಪ್ಪೆಂದು ಮೀಮಾಂಸಕರೇ ಒಪ್ಪಿದುತ್ತಾರೆ. ಆದ್ದರಿಂದ ಸಮನ್ವಯದಿಂದ ಶ್ರುತ್ಯರ್ಥವೆಂದು ಗೊತ್ತಾದದ್ದನ್ನೇ ಶ್ರುತ್ಯರ್ಥವೆಂದು ಹೇಳುವದು ಯುಕ್ತ.

ಶ್ರುತೇಃ । ನ ಚ ಪರಿನಿಷ್ಠಿತವಸ್ತುಸ್ವರೂಪತ್ವೇಽಪಿ ಪ್ರತ್ಯಕ್ಷಾದಿವಿಷಯತ್ವಂ ಬ್ರಹ್ಮಣಃ । "ತತ್ತ್ವಮಸಿ" (ಛಾಂ. ೬-೮-೭) ಇತಿ ಬ್ರಹ್ಮಾತ್ಮಭಾವಸ್ಯ ಶಾಸ್ತ್ರಮನ್ತರೇಣಾನವಗಮ್ಯಮಾನತ್ವಾತ್ । ಯತ್ ತು ಹೇಯೋಪಾದೇಯರಹಿತತ್ವಾತ್ ಉಪದೇಶಾನರ್ಥಕ್ಯಮಿತಿ । ನೈಷ ದೋಷಃ । ಹೇಯೋಪಾದೇಯಶೂನ್ಯಬ್ರಹ್ಮಾತ್ಮತಾವಗಮಾದೇವ ಸರ್ವಕ್ಲೇಶಪ್ರಹಾಣಾತ್ ಪುರುಷಾರ್ಥಸಿದ್ಧೇಃ । ದೇವತಾದಿಪ್ರತಿಪಾದನಸ್ಯ ತು ಸ್ವವಾಕ್ಯಗತೋಪಾಸನಾರ್ಥತ್ವೇಽಪಿ ನ ಕಶ್ಚಿದ್ವಿರೋಧಃ । ನ ತು ತಥಾ ಬ್ರಹ್ಮಣ ಉಪಾಸನಾವಿಧಿಶೇಷತ್ವಂ ಸಂಭವತಿ । ಏಕತ್ವೇ ಹೇಯೋಪಾದೇಯಶೂನ್ಯತಯಾ ಕ್ರಿಯಾಕಾರಕಾದಿದ್ವೈತವಿಜ್ಞಾನೋಪಮರ್ದೋಪಪತ್ತೇಃ । ನ ಹಿ ಏಕತ್ವವಿಜ್ಞಾನೇನ ಉನ್ಮಥಿತಸ್ಯ ದ್ವೈತವಿಜ್ಞಾನಸ್ಯ ಪುನಃ ಸಂಭವೋಽಸ್ತಿ, ಯೇನ ಉಪಾಸನಾವಿಧಿಶೇಷತ್ವಂ ಬ್ರಹ್ಮಣಃ ಪ್ರತಿಪದ್ಯೇತ । ಯದ್ಯಪಿ ಅನ್ಯತ್ರ ವೇದವಾಕ್ಯಾನಾಂ ವಿಧಿಸಂಸ್ಪರ್ಶಮನ್ತರೇಣ ಪ್ರಮಾಣತ್ವಂ ನ ದೃಷ್ಟಮ್, ತಥಾಪಿ ಆತ್ಮವಿಜ್ಞಾನಸ್ಯ ಫಲಪರ್ಯನ್ತತ್ವಾತ್ ನ ತದ್ವಿಷಯಸ್ಯ ಶಾಸ್ತ್ರಸ್ಯ ಪ್ರಾಮಾಣ್ಯಂ ಶಕ್ಯಂ ಪ್ರತ್ಯಾಖ್ಯಾತುಮ್ । ನ ಚ ಅನುಮಾನಗಮ್ಯಂ ಶಾಸ್ತ್ರಪ್ರಾಮಾಣ್ಯಮ್, ಯೇನ ಅನ್ಯತ್ರ ದೃಷ್ಟಂ ನಿದರ್ಶನಮ್ ಅಪೇಕ್ಷೇತ । ತಸ್ಮಾತ್ ಸಿದ್ಧಂ ಬ್ರಹ್ಮಣಃ ಶಾಸ್ತ್ರಪ್ರಮಾಣಕತ್ವಮ್ ॥

(ಭಾಷ್ಯಾರ್ಥ)

ಆ (ವಾಕ್ಯಗಳು) ಕರ್ತೃವಿನ ಸ್ವರೂಪವನ್ನು ಹೇಳುವದರಲ್ಲಿ ತಾತ್ಪರ್ಯವುಳ್ಳವುಗಳೆಂದು ನಿಶ್ಚಯಿಸುವದಕ್ಕೂ ಆಗುವದಿಲ್ಲ. ಏಕೆಂದರೆ ಶ್ರುತಿಯಲ್ಲಿ "ಅಲ್ಲಿ ಏತರಿಂದ ಯಾರನ್ನು ನೋಡಿಯಾನು ?" (ಬೃ. ೨-೪-೧೩) ಎಂದು ಮುಂತಾಗಿ ಕ್ರಿಯಾಕಾರಕಫಲಗಳನ್ನು ನಿರಾಕರಿಸಿರುತ್ತದೆ[1].

ಬ್ರಹ್ಮವು ಸಿದ್ಧವಸ್ತುವಿನ ರೂಪವುಳ್ಳದ್ದಾದರೂ ಪ್ರತ್ಯಕ್ಷಾದಿ(ಪ್ರಮಾಣ)ಗಳಿಗೆ ವಿಷಯವಲ್ಲ. ಏಕೆಂದರೆ "ಅದೇ ನೀನಾಗಿರುವೆ" (ಛಾಂ ೬-೮-೭) ಎಂಬ (ಶ್ರುತಿಯಲ್ಲಿ ಹೇಳಿರುವ) ಬ್ರಹ್ಮಾತ್ಮಭಾವವನ್ನು ಶಾಸ್ತ್ರವಿಲ್ಲದೆ ತಿಳಿಯುವದಕ್ಕೆ ಆಗುವದಿಲ್ಲ.[2]

---

1. ಬ್ರಹ್ಮಜ್ಞಾನದಲ್ಲಿ ಯಾವ ಕಾರಕವಾಗಲಿ ಕ್ರಿಯೆಯಾಗಲಿ ಇರುವದಿಲ್ಲವೆಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿರುವದರಿಂದ ಬ್ರಹ್ಮವಾಕ್ಯಗಳಲ್ಲಿ ಕರ್ಮಕ್ಕೆ ಬೇಕಾದ ಕರ್ತೃ, ದೇವತೆ-ಮುಂತಾದ ಕಾರಕಗಳು ಉಕ್ತವಾಗಿವೆ ಎಂಬುದು ಸರಿಯಲ್ಲ.

2. ನಾನು ಎಂಬ ರೂಪದ ಕರ್ತೃಸ್ವರೂಪವು ಅಹಂಪ್ರತ್ಯಯಕ್ಕೆ ಗೋಚರವೆಂದಿಟ್ಟುಕೊಂಡರೂ ಬ್ರಹ್ಮಾತ್ಮವು ಶಾಸ್ತ್ರದಿಂದಲೇ ತಿಳಿಯಬರುವ ಸಾಕ್ಷಿರೂಪವಾಗಿರುತ್ತದೆ ಎಂದು ಭಾವ. ನಿಜವಾಗಿ ಅಹಂಪ್ರತ್ಯಯಗೋಚರನಾದ ಆತ್ಮನೂ ಶಾಸ್ತ್ರವಿಲ್ಲದೆ ಸಿದ್ಧನಾಗುವದಿಲ್ಲವೆಂದು ಬೃ. ಭಾ. ಅವತರಣಿಕೆಯಲ್ಲಿ ಹೇಳಿದೆ.

ಇನ್ನು ಬಿಡತಕ್ಕದ್ದು ಅಥವಾ ತೆಗೆದುಕೊಳ್ಳತಕ್ಕದ್ದು(ಯಾವದೂ)ಇಲ್ಲದ್ದರಿಂ (ಸಿದ್ಧವಸ್ತುವಿನ) ಉಪದೇಶವು ವ್ಯರ್ಥವು ಎಂದು (ಪೂರ್ವಪಕ್ಷಿಯು ಹೇಳಿದ್ದನಷ್ಟೆ ಇದೇನೂ (ಸಿದ್ಧಾಂತದಲ್ಲಿ) ದೋಷ(ವನ್ನು ಹೇಳಿದಂ)ತಲ್ಲ. ಏಕೆಂದರೆ ಬಿಡತಕ್ಕದ ಗಲಿ ತೆಗೆದುಕೊಳ್ಳತಕ್ಕದ್ದಾಗಲಿ ಇಲ್ಲದ ಬ್ರಹ್ಮಾತ್ಮಜ್ಞಾನದಿಂದಲೇ ಕ್ಲೇಶಗಳೆಲ್ಲಾ ಹೋಗಿಬಿಡುವದರಿಂದ [1] ಪುರುಷಾರ್ಥವು ಸಿದ್ಧಿಸುತ್ತದೆ. ದೇವತೆಯೇ ಮುಂತಾ ದದ್ದನ್ನು ಹೇಳಿರುವದು ಆಯಾ ವಾಕ್ಯದಲ್ಲಿರುವ ಉಪಾಸನೆಗಾಗಿ ಎಂದು ಇಟ್ಟು ಕೊಂಡರೂ [2] ಏನೋ ವಿರೋಧವಿಲ್ಲ. ಆದರೆ ಬ್ರಹ್ಮವು (ಮಾತ್ರ) ಹಾಗೆ ಉಪಾ ಸನಾವಿಧಿಗೆ ಅಂಗವಾಗುವಂತೆ ಇಲ್ಲ [3] ಏಕೆಂದರೆ ಬ್ರಹ್ಮವು ಒಂದೇ ಆಗಿರುವ ರಿಂದ [4] (ಅದರಲ್ಲಿ) ಬಿಡತಕ್ಕದ್ದಾಗಲಿ ತೆಗೆದುಕೊಳ್ಳತಕ್ಕದ್ದಾಗಲಿ (ಯಾವದೂ ಇರುವದಿಲ್ಲವಾಗಿ (ಜ್ಞಾನದಿಂದ) ಕ್ರಿಯೆ, ಕಾರಕ–ಮುಂತಾದ ದ್ವೈತಜ್ಞಾನ ಹುಟ್ಟಡಗಿಹೋಗುವದೆಂಬುದು ಯುಕ್ತವಾಗಿದೆ. ಏಕತ್ವವಿಜ್ಞಾನದಿಂದ ನಾ ವಾದ ದ್ವೈತಜ್ಞಾನವು ಮತ್ತೆ ಹುಟ್ಟುವ ಸಂಭವವೇ ಇಲ್ಲ, ಹಾ (ಹುಟ್ಟುವಹಾಗಿದ್ದ)ರಲ್ಲವೆ, ಬ್ರಹ್ಮವು ಉಪಾಸನೆಯ ವಿಧಿಗೆ ಅಂಗವೆಂ ತಿಳಿದುಕೊಳ್ಳುವವಕ್ಕಾಗುವದು ?

ಮಿಕ್ಕ ಕಡೆಯಲ್ಲಿ ವೇದವಾಕ್ಯಗಳು ವಿಧಿಯ ಸೋಂಕಿಲ್ಲದೆ ಪ್ರಮಾಣವಾಗಿ ವದನ್ನು ನಾವು ಕಂಡಿಲ್ಲವಾದರೂ ಆತ್ಮಜ್ಞಾನವು ಫಲದಲ್ಲಿ ಕೊನೆಗಾಣುತ್ತಿ ವದರಿಂದ [5] ಅದರ ವಿಷಯವಾದ ಶಾಸ್ತ್ರವು ಪ್ರಮಾಣವೆಂಬುದನ್ನು ನಿ ಕರಿಸುವದಕ್ಕೆ ಆಗುವದಿಲ್ಲ. ಇದಲ್ಲದೆ ಶಾಸ್ತ್ರದ ಪ್ರಾಮಾಣ್ಯವೆಂಬುದು ಅ ಮಾನದಿಂದ ಗೊತ್ತುಪಡಿಸಬೇಕಾದದ್ದಲ್ಲ[6]; ಹಾಗಿದ್ದರೆ ಮತ್ತೊಂದು ಕ

---

1. ಇದನ್ನು ತೊಲಗಿಸಿಕೊಳ್ಳಬೇಕು, ಇದನ್ನು ಸಂಪಾದಿಸಿಕೊಳ್ಳಬೇಕು—ಎಂ ಬುದ್ಧಿಯಿರುವಲ್ಲಿಯೇ ಅವಿದ್ಯಾದಿಕ್ಲೇಶಗಳಿರುವವು.

2. ಉಪನಿಷತ್ತಿನಲ್ಲಿ ಪ್ರಾಣಾದ್ಯುಪಾಸನೆಗಳೂ ಇವೆಯಾದರೂ ಬ್ರಹ್ಮಾತ್ಮಸ್ವರೂ ವನ್ನೇ ತಾತ್ಪರ್ಯದಿಂದ ಇಲ್ಲಿ ಹೇಳಿದೆ ಎಂಬ ಪಕ್ಷಕ್ಕೇನೂ ಅದರಿಂದ ಹಾನಿಯಿಲ್ಲ.

3. ಉಪಾಸನೆಗೆ ಅಂಗವಾಗಿಯೇ ಬ್ರಹ್ಮವನ್ನಿಟ್ಟುಕೊಳ್ಳಬೇಕೆಂಬ ಪಕ್ಷವನ್ನು ಮಾ ಇಲ್ಲ ಖಂಡಿಸಿರುತ್ತದೆ. ಉಪಾಸನಾವಾಕ್ಯಗಳಲ್ಲಿರುವ ಬ್ರಹ್ಮಸ್ವರೂಪವೆಲ್ಲವೂ ಪರಮಾ ವಾಗಿರುವದಿಲ್ಲ, ಬ್ರಹ್ಮಸ್ವರೂಪವನ್ನು ತಿಳಿಸುವ ವಾಕ್ಯಗಳಿಗೆ ವಿರುದ್ಧವಾಗದಂಥ ಸ್ವರೂಪ ಉಪಾಸನಾವಾಕ್ಯಗಳಲ್ಲಿದ್ದರೂ ಯಥಾರ್ಥವೆಂದೇ ಗ್ರಹಿಸಬೇಕು. ಮುಂದೆ ೩-೨-೧ ಭಾಷ್ಯವನ್ನು ನೋಡಿರಿ.

4. ಅದ್ವಿತೀಯನಾಗಿರುವದರಿಂದ.

5. ಇಲ್ಲಿಯೇ ಅಪರೋಕ್ಷವಾಗಿ ಆಗಿಬಿಡುವದರಿಂದ ಎಂದರ್ಥ. ಯಥಾರ್ಥವ ಅನುಭವವನ್ನುಂಟುಮಾಡುವ ಶಾಸ್ತ್ರವು ಪ್ರಮಾಣವಲ್ಲವೆಂದು ಹೇಳುವದುಸಾಹಸವು ಎಂದು ಭಾ

6. ಶಾಸ್ತ್ರವು ಸ್ವತಃ ಪ್ರಮಾಣವಾಗಿರುತ್ತದೆ; ಅದನ್ನು ಮತ್ತೊಂದರಿಂದ ಪ್ರಮಾ

ನೋಡಿದ ಉದಾಹರಣೆಯು (ಆದಕ್ಕೆ) ಬೇಕಾಗುತ್ತಿತ್ತು.[1]

ಆದ್ದರಿಂದ ಬ್ರಹ್ಮವು ಶಾಸ್ತ್ರಪ್ರಮಾಣಕವು ಎಂದು ಸಿದ್ಧವಾಯಿತು.

## ೨. ಬ್ರಹ್ಮವು ಪ್ರತಿಪತ್ತಿವಿಧಿಗೆ ಶೇಷವಾಗಿಯೇ ಶಾಸ್ತ್ರ ಪ್ರಮಾಣಕ ಎಂಬ ಪೂರ್ವಪಕ್ಷ

(ಭಾಷ್ಯ)

೩೯. ಅತ್ರ ಅಪರೇ ಪ್ರತ್ಯವತಿಷ್ಠನ್ತೇ–ಯದ್ಯಪಿ ಶಾಸ್ತ್ರಪ್ರಮಾಣಕಂ ಬ್ರಹ್ಮ, ತಥಾಪಿ ಪ್ರತಿಪತ್ತಿವಿಧಿವಿಷಯತಯೈವ ಶಾಸ್ತ್ರೇಣ ಬ್ರಹ್ಮ ಸಮರ್ಪ್ಯತೇ। ಯಥಾ ಯೂಪಾಹವನೀಯಾದೀನಿ ಅಲೌಕಿಕಾನ್ಯಪಿ ವಿಧಿಶೇಷತಯಾ ಶಾಸ್ತ್ರೇಣ ಸಮರ್ಪ್ಯನ್ತೇ, ತದ್ವತ್। ಕುತ ಏತತ್? ಪ್ರವೃತ್ತಿನಿವೃತ್ತಿಪ್ರಯೋಜನತ್ವಾತ್ ಶಾಸ್ತ್ರಸ್ಯ। ತಥಾ ಹಿ ಶಾಸ್ತ್ರತಾತ್ಪರ್ಯವಿದಃ ಆಹುಃ ''ದೃಷ್ಟೋ ಹಿ ತಸ್ಯಾರ್ಥಃ ಕರ್ಮಾವಬೋಧನಮ್''(ಶಾ ಭಾ ೧-೧-೧) ಇತಿ। "ಚೋದನೇತಿ ಕ್ರಿಯಾಯಾಃ ಪ್ರವರ್ತಕಂ ವಚನಮ್'' (ಶಾ ಭಾ. ೧–೧–೨) "ತಸ್ಯ ಜ್ಞಾನಮುಪದೇಶಃ ..." (ಶಾ. ಭಾ. ೧-೧-೫), ''ತದ್ಭೂತಾನಾಂ ಕ್ರಿಯಾರ್ಥೇನ ಸಮಾಮ್ನಾಯಃ. .." (ಜೈ. ಸೂ. ೧-೧-೨೫), "ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್...." (ಜೈ. ಸೂ. ೧-೨-೧) ಇತಿ ಚ। ಅತಃ ಪುರುಷಂ ಕ್ವಚಿತ್ ವಿಷಯವಿಶೇಷೇ ಪ್ರವರ್ತಯತ್ ಕುತಶ್ಚಿತ್ ವಿಷಯವಿಶೇಷಾತ್ ನಿವರ್ತಯಚ್ಚ ಅರ್ಥವತ್ ಶಾಸ್ತ್ರಮ್। ತಚ್ಛೇಷತಯಾ ಚ ಅನ್ಯತ್ ಉಪಯುಕ್ತಮ್। ತತ್ಸಾಮಾನ್ಯಾತ್ ವೇದಾನ್ತಾನಾಮಪಿ ತಥೈವ ಅರ್ಥವತ್ತ್ವಂ ಸ್ಯಾತ್। ಸತಿ ಚ ವಿಧಿಪರತ್ವೇ ಯಥಾ ಸ್ವರ್ಗಾದಿಕಾಮಸ್ಯ ಅಗ್ನಿಹೋತ್ರಾದಿಸಾಧನಂ ವಿಧೀಯತೇ ಏವಮ್ ಅಮೃತಕಾಮಸ್ಯ ಬ್ರಹ್ಮಜ್ಞಾನಂ ವಿಧೀಯತೇ ಇತಿ ಯುಕ್ತಮ್ ||

(ಭಾಷ್ಯಾರ್ಥ)

ಇಲ್ಲಿ ಮತ್ತೆ ಕೆಲವರು[2] (ಈ ರೀತಿಯಲ್ಲಿ ಸಿದ್ಧಾಂತವನ್ನು)ಎದುರಿಸಿರುತ್ತಾರೆ. ಬ್ರಹ್ಮವು ಶಾಸ್ತ್ರಪ್ರಮಾಣಕವೆಂಬುದು ಸರಿಯೇ[3], ಆದರೂ ಪ್ರತಿಪತ್ತಿವಿಧಿಗೆ ವಿಷಯ

---

1. ಅನುಮಾನಕ್ಕೆ ದೃಷ್ಟಾಂತವು ಅವಶ್ಯವಾಗಿ ಬೇಕಾಗುವದು, ಆದರೆ ಇದು ಅನುಮಾನವಲ್ಲ.

2. ಶಂಕರಾಚಾರ್ಯರಿಗಿಂತ ಹಿಂದೆಯೇ ಸೂತ್ರಕ್ಕೆ ವೃತ್ತಿಯನ್ನು ಬರೆದಿದ್ದ ವೇದಾಂತಿಗಳು. ಪೀಠಿಕೆಯನ್ನು ನೋಡಿ.

3. ಹಿಂದೆ ಹೇಳಿರುವ ಪೂರ್ವಪಕ್ಷಿಗಳು ಇದನ್ನು ಒಪ್ಪಿಲ್ಲ, ಶಾಸ್ತ್ರವು ಕೇವಲ ಕ್ರಿಯೆಯನ್ನೇ ಹೇಳುವದೆಂದು ಅವರು ಅಂದಿದ್ದಾರೆ.

ವಾಗಿಯೇ[1] ಶಾಸ್ತ್ರವು ಬ್ರಹ್ಮವನ್ನು ತಿಳಿಸಿಕೊಡುತ್ತದೆ. ಹೇಗೆ **ಯೂಪ ಆಹವನೀಯ**–ಮುಂತಾದವು ಲೋಕಪ್ರಸಿದ್ಧವಲ್ಲದವುಗಳಾದಾಗ್ಯೂ[2] (ಅವುಗಳನ್ನು) ವಿಧಿಗೆ ಅಂಗವಾಗಿಯೇ ಶಾಸ್ತ್ರವು ತಿಳಿಸುವದೋ ಹಾಗೇ (ಬ್ರಹ್ಮವನ್ನೂ ವಿಧಿಶೇಷವಾಗಿಯೇ ತಿಳಿಸುತ್ತದೆ)

(ಸಿದ್ಧಾಂತಿ):—ಹೀಗೆಂದು ಏತಕ್ಕೆ ತಿಳಿಯಬೇಕು !

(ಪೂರ್ವಪಕ್ಷಿ):—ಏಕೆಂದರೆ ಶಾಸ್ತ್ರಕ್ಕೆ ಪ್ರವೃತ್ತಿನಿವೃತ್ತಿಗಳೇ ಪ್ರಯೋಜನವಾಗಿರುತ್ತವೆ.[3] ಆದ್ದರಿಂದಲೇ ಶಾಸ್ತ್ರತಾತ್ಪರ್ಯವನ್ನು ಬಲ್ಲವರು[4] "ಈ (ವೇದಕ್ಕೆ) ಕರ್ಮವನ್ನು ತಿಳಿಸುವದೆಂಬ ಪ್ರಯೋಜನವು ಕಂಡುಬಂದಿದೆಯಲ್ಲವೆ?'' (ಶಾ. ಭಾ. ೧ ೧-೧) ಎಂದು ಹೇಳಿರುತ್ತಾರೆ. "ಚೋದನೆ ಎಂದರೆ ಕ್ರಿಯೆಯನ್ನು ಮಾಡಿಸುವ ವಚನವು'' (ಶಾ.ಭಾ. ೧-೧-೨), ''ಆ (ಧರ್ಮವನ್ನು) ತಿಳಿಸುವದಕ್ಕೆ ಕಾರಣವಾದದ್ದು ವೇದವಾಕ್ಯವು'' (ಜೈ.ಸೂ ೧-೧-೫), "ಆ (ಪದಾರ್ಥಗಳನ್ನು) ತಿಳಿಸುವ (ಮಾತುಗಳನ್ನು) ಕ್ರಿಯೆಯನ್ನು ಹೇಳುವ ಮಾತಿಗೆ ಸೇರಿಸಿ (ಹೇಳಿಕೊಳ್ಳಬೇಕು") (ಜೈ. ಸೂ. ೧–೧–೨೫), "ಶಾಸ್ತ್ರಕ್ಕೆ ಕ್ರಿಯೆಯೇ ಪ್ರಯೋಜನವಾದ್ದರಿಂದ ಆ (ಕ್ರಿಯೆಯಲ್ಲಿ) ತಾತ್ಪರ್ಯವಿಲ್ಲದ ವಾಕ್ಯಗಳು ವ್ಯರ್ಥ'' (ಜೈ. ಸೂ. ೧-೨-೧) ಎಂದೂ (ಹೇಳಿರುತ್ತಾರೆ). ಆದ್ದರಿಂದ ಮನುಷ್ಯನನ್ನು ಯಾವದಾದರೊಂದು ವಿಷಯದಲ್ಲಿ ತೊಡಗಿಸುವದರಿಂದಲಾಗಲಿ ಯಾವದಾದರೊಂದು ವಿಷಯದಿಂದ ಹಿಂತಿರುಗಿಸುವದರಿಂದಲಾಗಲಿ ಶಾಸ್ತ್ರಕ್ಕೆ ಸಾರ್ಥಕ್ಯವುಂಟಾಗುತ್ತದೆ, ಮತ್ತು ಅದಕೆ ಅಂಗವಾಗಿ ಮಿಕ್ಕದ್ದು[5] ಉಪಯುಕ್ತವಾಗಿರುತ್ತದೆ. ಅದಕ್ಕೆ ಸಮಾನವಾಗಿರುವದರಿಂದ ವೇದಾಂತ(ವಾಕ್ಯ)ಗಳಿಗೂ ಹೀಗೆಯೇ ಸಾರ್ಥಕ್ಯವಾಗಬೇಕು.[6] ಹೀಗೆ

---

1. ಉಪಾಸನಾವಿಧಿಗೆ ಶೇಷವಾಗಿಯೇ ಎಂದರ್ಥ. "ಪ್ರತಿಪತ್ತಿಯ ವಿಧಿ ಎಂದರೆ ನಿಯೋಗವು, ಅದಕ್ಕೆ ವಿಷಯವಾದ ಪ್ರತಿಪತ್ತಿಗೆ ಅವಚ್ಛೇದಕವಾಗಿರುವದರಿಂದ ಬ್ರಹ್ಮವು ವಿಷಯ" ಎಂದು ಆ||

2. ಯೂಪ ಎಂಬುದು ಯಜ್ಞಪಶುವನ್ನು ಕಟ್ಟುವ ಕಂಬವೆಂದಾಗಲಿ ಆಹವನೀಯವೆಂಬುದು ಒಂದಾನೊಂದು ಕರ್ಮಸಂಸ್ಕಾರದಿಂದ ಕೂಡಿದ ಅಗ್ನಿಯೆಂದಾಗಲಿ ಲೋಕಪ್ರಸಿದ್ಧವಾಗಿಲ್ಲ. ಆದರೂ ಅದನ್ನು ವೇದವು ಕ್ರಿಯೆಗೆ ಅಂಗವಾಗಿಯೇ ತಿಳಿಸಿಕೊಟ್ಟಿರುತ್ತದೆ.

3. ಶಾಸ್ತ್ರವೆಂದರೆ ಮಾಡು ಎಂದೋ ಬಿಡು ಎಂದೋ ಶಾಸನಮಾಡಬೇಕು. ಇಲ್ಲದಿದ್ದರೆ ಅದು ಶಾಸ್ತ್ರವೇ ಅಲ್ಲ ಎಂದು ಭಾವ.

4. ಮೀಮಾಂಸಕರು; ಶಬರಸ್ವಾಮಿಗಳೂ ಜೈಮಿನಿಗಳೂ.

5. ಜೈ.ಸೂ. ೩-೧-೨ರಲ್ಲಿ ಶೇಷವೆಂಬುದರ ಅರ್ಥವನ್ನು ನೋಡಿ.

6. ಉಪನಿಷತ್ತುಗಳೂ ಶಾಸ್ತ್ರವಾಗಿರುವದರಿಂದ ಪ್ರವೃತ್ತಿನಿವೃತ್ತಿತಚ್ಛೇಷಗಳನ್ನೇ ಹೇಳಬೇಕು, ಬರಿಯ ವಸ್ತುವನ್ನು ತಿಳಿಸಬಾರದು ಎಂದರ್ಥ.

(ವೇದಾಂತವಾಕ್ಯಗಳು) ವಿಧಿಪರವೆಂದಾದರೆ, ಹೇಗೆ ಸ್ವರ್ಗವೇ ಮುಂತಾದವನ್ನು ಬಯಸುವವರಿಗೆ ಅಗ್ನಿಹೋತ್ರವೇ ಮುಂತಾದ ಸಾಧನವನ್ನು (ವೇದದಲ್ಲಿ) ವಿಧಿಸಿರುತ್ತದೆಯೋ ಹಾಗೆ ಅಮೃತತ್ವವನ್ನು[1] ಬಯಸುವವರಿಗೆ ಬ್ರಹ್ಮಜ್ಞಾನವನ್ನು ವಿಧಿಸಿರುತ್ತದೆ ಎಂಬುದೇ ಯುಕ್ತ(ವಾಗುವದು).

(ಭಾಷ್ಯ)

೪೦. ನನ್ವಿಹ ಜಿಜ್ಞಾಸ್ಯವೈಲಕ್ಷಣ್ಯಮ್ ಉಕ್ತಮ್—ಕರ್ಮಕಾಣ್ಡೇ ಭವ್ಯೋ ಧರ್ಮೋ ಜಿಜ್ಞಾಸ್ಯಃ, ಇಹ ತು ಭೂತಂ ನಿತ್ಯನಿರ್ವೃತ್ತಂ ಬ್ರಹ್ಮ ಜಿಜ್ಞಾಸ್ಯಮ್ ಇತಿ। ತತ್ರ ಧರ್ಮಜ್ಞಾನಫಲಾತ್ ಅನುಷ್ಠಾನಾಪೇಕ್ಷಾತ್ ವಿಲಕ್ಷಣಂ ಬ್ರಹ್ಮಜ್ಞಾನಫಲಂ ಭವಿತುಮರ್ಹತಿ। ನಾರ್ಹತ್ಯೇವಂ ಭವಿತುಮ್। ಕಾರ್ಯವಿಧಿಪ್ರಯುಕ್ತಸ್ಯೈವ ಬ್ರಹ್ಮಣಃ ಪ್ರತಿಪಾದ್ಯಮಾನತ್ವಾತ್ "ಆತ್ಮಾ ವಾ ಅರೇ ದ್ರಷ್ಟವ್ಯಃ" (ಬೃ. ೨-೪-೫) ಇತಿ। "ಯ ಆತ್ಮಾಪಹತಪಾಪ್ಮಾ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" (ಛಾಂ ೮-೭-೧), "ಆತ್ಮೇತ್ಯೇವೋಪಾಸೀತ" (ಬೃ ೧-೪-೭), "ಆತ್ಮಾನಮೇವ ಲೋಕಮುಪಾಸೀತ" (ಬೃ. ೧-೪-೧೫),"ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨ ೯) ಇತ್ಯಾದಿವಿಧಾನೇಷು ಸತ್ಸು ಕೋಽಸಾವಾತ್ಮಾ? ಕಿಂ ತದ್ಬ್ರಹ್ಮ?- ಇತ್ಯಾಕಾಙ್ಕ್ಷಾಯಾಂ ತತ್ಸ್ವರೂಪಸಮರ್ಪಣೇನ ಸರ್ವೇ ವೇದಾನ್ತಾ ಉಪಯುಕ್ತಾಃ "ನಿತ್ಯಃ ಸರ್ವಜ್ಞಃ, ಸರ್ವಗತಃ ನಿತ್ಯತೃಪ್ತಃ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ", "ವಿಜ್ಞಾನಮಾನನ್ದಂ ಬ್ರಹ್ಮ" (ಬೃ ೩-೯-೨೮) ಇತ್ಯೇವಮಾದಾಯಃ। ತದುಪಾಸನಾಚ್ಚ ಶಾಸ್ತ್ರದೃಷ್ಟೋ ಮೋಕ್ಷಃ ಫಲಂ ಭವಿಷ್ಯತೀತಿ ॥

(ಭಾಷ್ಯಾರ್ಥ)

(ಸಿದ್ಧಾಂತಿ):—ಕರ್ಮಕಾಂಡದಲ್ಲಿ ಜಿಜ್ಞಾಸ್ಯವಾಗಿರುವದು ಭವ್ಯವಾದ ಧರ್ಮವು, ಆದರೆ ಇಲ್ಲಿ ಜಿಜ್ಞಾಸ್ಯವಾಗಿರುವದು ಭೂತವಾಗಿರುವ, ನಿತ್ಯವಾಗಿ (ತಾನೇ) ಇದ್ದುಕೊಂಡಿರುವ, ಬ್ರಹ್ಮವು-ಎಂದು ಇಲ್ಲಿ ಜಿಜ್ಞಾಸ್ಯವು ಬೇರೆಯ ಸ್ವರೂಪವಾಗಿರುವದೆಂದು ಹಿಂದೆ[2] ಹೇಳಿದ್ದೆವಲ್ಲ! ಇವುಗಳಲ್ಲಿ ಅನುಷ್ಠಾನವನ್ನು ಬಯಸುವ ಧರ್ಮಜ್ಞಾನದ ಫಲಕ್ಕಿಂತ ಬ್ರಹ್ಮಜ್ಞಾನದ ಫಲವು ಬೇರೆಯ ಬಗೆಯದಾಗಿರಬೇಕಲ್ಲವೆ[3]?

1. ಪೂರ್ವಪಕ್ಷಿಯು ಹೇಳುವ ಅಮೃತತ್ವವು ಅಥವಾ ಮೋಕ್ಷವು ಸ್ವರ್ಗದಂತೆ ಕಾಲಾಂತರದಲ್ಲಿ ಆಗತಕ್ಕದ್ದು. ಜ್ಞಾನಸಮಕಾಲದಲ್ಲಿಯೇ ಆಗುವದೆಂದು ಆಚಾರ್ಯರು ಹೇಳಿರುವ ಅಮೃತತ್ವವು ಅವನಿಗೆ ಒಪ್ಪಿಲ್ಲ.

2. ಭಾ. ಭಾ. ೧೨ರಲ್ಲಿ

3. ಧರ್ಮಜ್ಞಾನದ ಫಲವು ಕಾಲಾಂತರದಲ್ಲಿ ದೇಶಾಂತರದಲ್ಲಿ ಆಗುವದಾದರೂ ಜ್ಞಾನದ ಫಲವು ಇಲ್ಲಿಯೇ ಈಗಲೇ ಆಗಬಹುದಲ್ಲವೆ?—ಎಂದು ಪ್ರಶ್ನೆ.

(ಪೂರ್ವಪಕ್ಷಿ):—ಹೀಗಿರಬೇಕಾದದ್ದಿಲ್ಲ. ಏಕೆಂದರೆ "ಎಲೆ (ಮೈತ್ರೇಯಿ), ಆತ್ಮನನ್ನೇ ಕಾಣತಕ್ಕದ್ದು" (ಬೃ ೨-೪-೫) ಎಂದು ಕಾರ್ಯವಿಧಿಗೋಸ್ಕರವಾಗಿಯೇ ಬ್ರಹ್ಮವನ್ನು (ಇಲ್ಲಿ) ಹೇಳಿರುತ್ತದೆ.[1] "ಯಾವನು ಪಾಪದ ಹೊಡೆತವಿಲ್ಲದ ಆತ್ಮನೋ.. ಅವನನ್ನು ಹುಡುಕತಕ್ಕದ್ದು, ಅವನನ್ನು ಅರಿತುಕೊಳ್ಳತಕ್ಕದ್ದು" (ಛಾಂ. ೮-೭-೧), "ಆತ್ಮನೆಂದೇ ಉಪಾಸನೆಮಾಡಬೇಕು" (ಛಾಂ. ೧-೪-೭) "ಆತ್ಮನೆಂಬ ಲೋಕವನ್ನೇ ಉಪಾಸನೆಮಾಡಬೇಕು" (ಬೃ ೧-೪-೧೫), "ಬ್ರಹ್ಮವನ್ನು ಅರಿಯುತ್ತಾನಾದರೆ ಬ್ರಹ್ಮವೇ ಆಗುತ್ತಾನೆ" (ಮುಂ. ೩-೨-೯) ಇವೇ ಮುಂತಾದ ವಿಧಿಗಳಿರುವಲ್ಲಿ[2] 'ಆ ಆತ್ಮನು ಯಾರು?' 'ಆ ಬ್ರಹ್ಮವೆಂಬುದು ಯಾವದು?' ಎಂದು ಆಕಾಂಕ್ಷೆಯುಂಟಾಗಲಾಗಿ "ನಿತ್ಯನೂ[3] ಸರ್ವಗತನೂ ನಿತ್ಯತೃಪ್ತನೂ ನಿತ್ಯಶುದ್ಧಬುದ್ಧಮುಕ್ತಸ್ವಭಾವನೂ (ಆಗಿರುವವನು ಆತ್ಮನು)", "ವಿಜ್ಞಾನವೂ ಆನಂದವೂ (ಆಗಿರುವದು) ಬ್ರಹ್ಮವು" (ಬೃ. ೩-೯-೨೮) ಎಂಬುದೇ ಮುಂತಾದ ಎಲ್ಲಾ ವೇದಾಂತಗಳೂ ಆ (ಆತ್ಮನ ಅಥವಾ ಬ್ರಹ್ಮದ) ಸ್ವರೂಪವನ್ನು ತಿಳಿಸುವದರಲ್ಲಿ ಉಪಯುಕ್ತವಾಗಿರುತ್ತವೆ.[4] ಆ (ಆತ್ಮನ ಅಥವಾ ಬ್ರಹ್ಮದ) ಉಪಾಸನೆಯಿಂದ ಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ಮೋಕ್ಷವೆಂಬ ಅದೃಷ್ಟಫಲವು[5] ಉಂಟಾಗುವದು.

(ಭಾಷ್ಯ)

೪೧. ಕರ್ತವ್ಯವಿಧ್ಯನನುಪ್ರವೇಶೇ ವಸ್ತುಮಾತ್ರಕಥನೇ ಹಾನೋಪಾ

---

1. 'ಆತ್ಮನನ್ನು ಕಾಣಬೇಕು' ಎಂದು ಆತ್ಮದರ್ಶನವನ್ನು ವಿಧಿಸಿದೆ, ಆ ವಿಧಿಗೆ ಆತ್ಮನನ್ನು ಅಂಗವಾಗಿ ಹೇಳಿರುತ್ತದೆಯೇ ಹೊರತು ಸ್ವತಂತ್ರವಾಗಿ ಹೇಳಿಲ್ಲ ಎಂದರ್ಥ.

2. ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ಇವೆಲ್ಲ ವಿಧಿಗಳೇ. ಅವನು ಕೊನೆಯಲ್ಲಿ ಉದಾಹರಿಸಿರುವ ಮುಂಡಕಶ್ರುತಿಯಲ್ಲಿ "ಬ್ರಹ್ಮಸ್ವರೂಪವನ್ನು ಪಡೆಯುವ ಕಾಮವುಳ್ಳವನು ಬ್ರಹ್ಮವನ್ನು ಉಪಾಸನೆ ಮಾಡಬೇಕು" ಎಂದು ವಿಧಿಯನ್ನು ಕಲ್ಪಿಸಿರುತ್ತಾನೆ. ಫಲೋಕ್ತಿಬಲದಿಂದ ಹೀಗೆ ವಿಧಿಯನ್ನು ಮೀಮಾಂಸಕರು ಕಲ್ಪಿಸುವದುಂಟು. ಶಾ ಭ. ೪-೩-೧೮ರಲ್ಲಿ ರಾತ್ರಿಸತ್ರವಿಚಾರವನ್ನು ನೋಡಿರಿ.

3. ಇಲ್ಲಿ ಕೊಟ್ಟಿರುವ ವಿಶೇಷಣಗಳು ಬೇರೆಬೇರೆಯ ಶ್ರುತಿಗಳನ್ನು ಸೂಚಿಸುತ್ತವೆ.

4. ಆದ್ದರಿಂದ ಬ್ರಹ್ಮವನ್ನು ತಿಳಿಸುವ ವಾಕ್ಯಗಳು ಸ್ವತಂತ್ರವಾಗಿ ಅದನ್ನು ತಿಳಿಸುವವೆನ್ನುವದಕ್ಕಿಂತ ಉಪಾಸನೆಗೆ ಬೇಕಾದ ವಿಷಯವೆಂದೇ ತಿಳಿಸುತ್ತವೆ ಎಂದು ಹೇಳುವದು ಯುಕ್ತ ಎಂದು ಭಾವ.

5. ಈಗ ಅಬ್ರಹ್ಮವಾಗಿದ್ದು ಉಪಾಸನೆಯಿಂದ ಶರೀರಪಾತಾನಂತರದಲ್ಲಿ ಬ್ರಹ್ಮವಾಗುವನು ಎಂದರ್ಥ. ಶಾಸ್ತ್ರವು ದೃಷ್ಟಾರ್ಥವನ್ನು ಬೋಧಿಸಬಾರದು ಎಂಬ ಭಾವವು ಇದರಲ್ಲಿ ಅಡಗಿರುತ್ತದೆ.

ದಾನಾಸಂಭವಾತ್ 'ಸಪ್ತದ್ವೀಪಾ ವಸುಮತೀ', 'ರಾಜಾಸೌ ಗಚ್ಛತಿ' ಇತ್ಯಾದಿ ವಾಕ್ಯವತ್ ವೇದಾನ್ತವಾಕ್ಯಾನಾಮ್ ಆನರ್ಥಕ್ಯಮೇವ ಸ್ಯಾತ್ । ನನು ವಸ್ತುಮಾತ್ರಕಥನೇಽಪಿ 'ರಜ್ಜುರಿಯಂ ನಾಯಂ ಸರ್ಪಃ' ಇತ್ಯಾದೌ ಭ್ರಾನ್ತಿಜನಿತಭೀತಿನಿವರ್ತನೇನ ಅರ್ಥವತ್ತ್ವಂ ದೃಷ್ಟಮ್। ತಥಾ ಇಹಾಪಿ ಅಸಂಸಾರಿತ್ವಭ್ರಾನ್ತಿನಿವರ್ತನೇನ ಅರ್ಥವತ್ತ್ವಂ ಸ್ಯಾತ್ । ಸ್ಯಾದೇತದೇವಂ ಯದಿ ರಜ್ಜುಸ್ವರೂಪಶ್ರವಣೇ ಇವ ಸರ್ಪಭ್ರಾನ್ತಿಃ ಸಂಸಾರಿತ್ವಭ್ರಾನ್ತಿಃ ಬ್ರಹ್ಮಸ್ವರೂಪಶ್ರವಣಮಾತ್ರೇಣ ನಿವರ್ತೇತ । ನ ತು ನಿವರ್ತತೇ। ಶ್ರುತಬ್ರಹ್ಮಣೋಽಪಿ ಯಥಾಪೂರ್ವಂ ಸುಖದುಃಖಾದಿಸಂಸಾರಿಧರ್ಮದರ್ಶನಾತ್। "ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (ಬೃ. ೨-೪-೫) ಇತಿ ಚ ಶ್ರವಣೋತ್ತರಕಾಲಯೋರ್ಮನನನಿದಿಧ್ಯಾಸನಯೋಃ ವಿಧಿದರ್ಶನಾತ್ । ತಸ್ಮಾತ್ ಪ್ರತಿಪತ್ತಿವಿಧಿವಿಷಯತಯೈವ ಶಾಸ್ತ್ರಪ್ರಮಾಣಕಂ ಬ್ರಹ್ಮ ಅಭ್ಯುಪಗನ್ತವ್ಯಮ್ ಇತಿ॥

(ಭಾಷ್ಯಾರ್ಥ)

(ಉಪಾಸನೆಯೇ ಮುಂತಾದ ಯಾವ) ಕರ್ತವ್ಯದ ವಿಧಿಯನ್ನೂ ಸೇರಿಸಿಕೊಳ್ಳದೆ ಬರಿಯ ವಸ್ತುವನ್ನೇ (ವೇದಾಂತವಾಕ್ಯವು) ಹೇಳುವದಾದರೆ[1] (ಆಗ) ಬಿಡತಕ್ಕದ್ದಾಗಲಿ ತೆಗೆದುಕೊಳ್ಳತಕ್ಕದ್ದಾಗಲಿ ಯಾವದೂ ಇರಲಾರದಾದ್ದರಿಂದ "ಭೂಮಿಯಲ್ಲಿ ಏಳು[2] ದ್ವೀಪಗಳುಂಟು" 'ಆಗೊ, ರಾಜನು ಹೋಗುತ್ತಿದಾನೆ'– ಮುಂತಾದ ವಾಕ್ಯಗಳಂತೆ ವೇದಾಂತವಾಕ್ಯಗಳು ನಿಷ್ಪ್ರಯೋಜನವೆಂದೇ ಆಗಬೇಕಾದೀತು[3]

(ಸಿದ್ಧಾಂತ).—'ಇದು ಹಗ್ಗವೇ, ಇದು ಹಾವಲ್ಲ' ಎಂದು ಮುಂತಾದ (ವಾಕ್ಯ)ದಲ್ಲಿ ಬರಿಯ ವಸ್ತುವನ್ನೇ ಹೇಳಿದಾಗ್ಯೂ ಭ್ರಾಂತಿಯಿಂದುಂಟಾಗಿದ್ದ ಹೆದರಿಕೆಯನ್ನು ತೊಲಗಿಸುವದರಿಂದ (ಅಂಥಾ ವಾಕ್ಯಕ್ಕೆ) ಪ್ರಯೋಜನವಿರುವದು

---

1 ಕರ್ತವ್ಯವಿಧೇಃ ಅನನುಪ್ರವೇಶೇ 'ಎಂದು ಸಮಾಸವನ್ನು ಬಿಡಿಸಿಕೊಂಡು ಅರ್ಥ ಮಾಡಿದೆ. 'ಕರ್ತವ್ಯವಿಧೌ (ಬ್ರಹ್ಮಣಃ) ಅನನುಪ್ರವೇಶೇ' ಎಂದು ಬಿಡಿಸಿದರೆ ಬ್ರಹ್ಮವನ್ನು ಕರ್ತವ್ಯವಿಧಿಯಲ್ಲಿ ಸೇರಿಸಿಕೊಳ್ಳದೆ' ಎಂದು ಕನ್ನಡಿಸಬೇಕಾಗುವದು ಒಟ್ಟು ಅರ್ಥವೇನೋ ಎರಡು ಕಡೆಯಲ್ಲಿಯೂ ಒಂದೇ.

2. ಜಂಬು, ಪ್ಲಕ್ಷ, ಶಾಲ್ಮಲಿ–ಮುಂತಾಗಿ ಏಳು ದ್ವೀಪಗಳು ಪೃಥ್ವಿಯ ಭಾಗಗಳೆಂದು ಪುರಾಣಿಕರ ವರ್ಣನೆ.

3. ಈ ಆಕ್ಷೇಪವನ್ನು ಹಿಂದಿನ ಪೂರ್ವಪಕ್ಷದಲ್ಲಿಯೂ (ಭಾ. ಭಾ. ೩೭ರಲ್ಲಿ) ತೆಗೆದು ಪರಿಹಾರಮಾಡಿತ್ತು. ಈಗ ಶ್ರವಣಮಾತ್ರದಿಂದ ಅವಿದ್ಯಾನಿವರ್ತಕಜ್ಞಾನವಾಗುವದೇ ಇಲ್ಲ ಎಂಬ ಹೆಚ್ಚಿಗೆಯ ಶಂಕೆಯನ್ನು ಮಾಡುವದಕ್ಕಾಗಿ ಇದನ್ನು ಮತ್ತೆ ತಂದಿದೆ.

ಕಂಡಿದೆ. ಆದರಂತೆ ಇಲ್ಲಿಯೂ ಅಸಂಸಾರಿಯಾದ ಆತ್ಮವಸ್ತುವನ್ನು ತಿಳಿಸುವ (ವಾಕ್ಯ)ವು (ಆತ್ಮನು) ಸಂಸಾರಿ ಎಂಬ ಭ್ರಾಂತಿಯನ್ನು ತೊಲಗಿಸುವದರಿಂದ (ಅದು) ಸಪ್ರಯೋಜನವಾಗಬಹುದಲ್ಲ !

(ಪೂರ್ವಪಕ್ಷಿ) :—ಹಗ್ಗದ ಸ್ವರೂಪವನ್ನು ಕೇಳಿದೊಡನೆ ಹಾವಿನ ಭ್ರಾಂತಿ (ತೊಲಗುವ) ಹಾಗೆ ಬ್ರಹ್ಮಸ್ವರೂಪವನ್ನು ಕೇಳಿದಮಾತ್ರದಿಂದ (ತಾನು) ಸಂಸಾರಿ ಎಂಬ ಭ್ರಾಂತಿಯು ತೊಲಗುವಹಾಗಿದ್ದರೆ ಹೀಗೂ ಆಗಬಹುದಾಗಿತ್ತು. ಆದರೆ (ಅದು ಹಾಗೆ) ತೊಲಗುವದಿಲ್ಲ, ಏಕೆಂದರೆ ಬ್ರಹ್ಮದ ವಿಷಯವನ್ನು) ಕೇಳಿದವನಿಗೂ ಮೊದಲಿನಂತೆ ಸುಖ, ದುಃಖ-ಮುಂತಾದ ಸಂಸಾರಿಧರ್ಮಗಳು ಕಾಣುತ್ತಿರುತ್ತವೆ. ಇದಲ್ಲದೆ " (ಆತ್ಮನನ್ನು) ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನ ಮಾಡಬೇಕು" [1](ಬೃ. ೨-೪ ೫)ಎಂದು ಶ್ರವಣಮಾಡಿದಮೇಲೂ ಮನನನಿದಿಧ್ಯಾಸನ ಗಳನ್ನು ವಿಧಿಸಿರುವದು [2] ಕಂಡುಬರುತ್ತದೆ. ಆದ್ದರಿಂದ ಪ್ರತಿಪತ್ತಿವಿಧಿಗೆ ವಿಷಯ ವಾಗಿಯೇ ಬ್ರಹ್ಮವು ಶಾಸ್ತ್ರಪ್ರಮಾಣಕವಾಗಿರುತ್ತದೆ ಎಂದು (ನೀವೂ) ಒಪ್ಪಬೇಕು [3]

## ಸಿದ್ಧಾಂತ: ಕರ್ಮಫಲಕ್ಕಿಂತ ಜ್ಞಾನಫಲವು ವಿಲಕ್ಷಣವಾಗಿದೆ

(ಭಾಷ್ಯ)

೪೨. ಅತ್ರಾಭಿಧೀಯತೇ—ನ । ಕರ್ಮಬ್ರಹ್ಮವಿದ್ಯಾಫಲಯೋರ್ವೈಲಕ್ಷಣ್ಯಾತ್ । ಶಾರೀರಂ ವಾಚಕಂ ಮಾನಸಂ ಚ ಕರ್ಮ ಶ್ರುತಿಸ್ಮೃತಿಸಿದ್ಧಂ ಧರ್ಮಾಖ್ಯಮ್, ಯದ್ವಿಷಯಾ ಜಿಜ್ಞಾಸಾ "ಅಥಾತೋ ಧರ್ಮಜಿಜ್ಞಾಸಾ" (ಜೈ ಸೂ ೧-೧-೧) ಇತಿ ಸೂತ್ರಿತಾ । ಅಧರ್ಮೋಽಪಿ ಹಿಂಸಾದಿಃ ಪ್ರತಿಷೇಧಚೋದನಾ

---

1 ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ನಿದಿಧ್ಯಾಸನವೆಂದರೆ ಉಪಾಸನೆ. ಶ್ರವಣಮಾತ್ರ ದಿಂದಲೇ ಪುರುಷಾರ್ಥವುಂಟಾಗುವಂತಿದ್ದರೆ ನಿದಿಧ್ಯಾಸನವನ್ನೂ ಶ್ರುತಿಯಲ್ಲಿ ಹೇಳುತ್ತಿರಲಿಲ್ಲ ಎಂದು ಅವನ ಅಭಿಪ್ರಾಯ.

2. ಶ್ರವಣಾದಿವಿಧಿಗಳಿಗೆ ಅಂಗವಾಗಿಯೇ ಬ್ರಹ್ಮವನ್ನು ತಿಳಿಸಿದೆ ಎಂಬುದನ್ನು ಒತ್ತಿ ಹೇಳುವದಕ್ಕಾಗಿ 'ವಿಧಿಸಿರುವದು' ಎಂಬ ಮಾತನ್ನು ಪೂರ್ವಪಕ್ಷಿಯು ಮತ್ತೆ ಉಪಯೋಗಿಸಿರು ತ್ತಾನೆ.

3. ಇಲ್ಲಿರುವ ಪೂರ್ವಪಕ್ಷವು ಉಪಾಸನಾವಿಧಿಯನ್ನು ಹಿಡಿದು ಬಂದಿರುತ್ತದೆ ಯಾದರೂ ಪ್ರಸಂಖ್ಯಾನ, ಪ್ರಪಂಚವಿಲಯ-ಮುಂತಾದವನ್ನು ಶಾಸ್ತ್ರದಲ್ಲಿ ವಿಧಿಸಿದೆ ಎಂದು ಹೇಳುವ ಪೂರ್ವಪಕ್ಷಿಗಳೂ ಆಚಾರ್ಯರಿಗಿಂತ ಪೂರ್ವದಲ್ಲಿರುತ್ತಿದ್ದರು. ಅವರಿಗೆಲ್ಲ ಈ ಅಧಿಕರಣವೇ ಉತ್ತರವೆಂದು ಆಚಾರ್ಯರ ಅಭಿಪ್ರಾಯ. ಪೀಠಿಕೆಯನ್ನು ನೋಡಿ.

ಲಕ್ಷಣತ್ವಾತ್ ಜಿಜ್ಞಾಸ್ಯಃ ಪರಿಹಾರಾಯ।ತಯೋಃ ಚೋದನಾಲಕ್ಷಣಯೋಃ ಅರ್ಥಾನರ್ಥಯೋಃ ಧರ್ಮಾಧರ್ಮಯೋಃ ಫಲೇ ಪ್ರತ್ಯಕ್ಷೇ ಸುಖದುಃಖೇ ಶರೀರವಾಙ್ಮನೋಭಿರೇವೋಪಭುಜ್ಯಮಾನೇ ವಿಷಯೇನ್ದ್ರಿಯಸಂಯೋಗಜನ್ಯೇ ಬ್ರಹ್ಮಾದಿಷು ಸ್ಥಾವರಾನ್ತೇಷು ಪ್ರಸಿದ್ಧೇ। ಮನುಷ್ಯತ್ವಾತ್ [1]ಆರಭ್ಯ ಬ್ರಹ್ಮಾನ್ತೇಷು ದೇಹವತ್ಸು ಸುಖತಾರತಮ್ಯಮ್ ಅನುಶ್ರೂಯತೇ । ತತಶ್ಚ ತದ್ಧೇತೋರ್ಧರ್ಮಸ್ಯ ತಾರತಮ್ಯಂ ಗಮ್ಯತೇ । ಧರ್ಮತಾರತಮ್ಯಾತ್ ಅಧಿಕಾರಿತಾರತಮ್ಯಮ್ । ಪ್ರಸಿದ್ಧಂ ಚ ಅರ್ಥಿತ್ವಸಾಮರ್ಥ್ಯಾದಿಕೃತಮ್ ಅಧಿಕಾರಿತಾರತಮ್ಯಮ್ । ತಥಾ ಚ ಯಾಗಾದ್ಯನುಷ್ಠಾಯಿನಾಮೇವ ವಿದ್ಯಾಸಮಾಧಿವಿಶೇಷಾತ್ ಉತ್ತರೇಣ ಪಥಾ ಗಮನಮ್, ಕೇವಲೈಃ ಇಷ್ಟಾಪೂರ್ತದತ್ತಸಾಧನೈಃ ಧೂಮಾದಿಕ್ರಮೇಣ ದಕ್ಷಿಣೇನ ಪಥಾ ಗಮನಮ್, ತತ್ರಾಪಿ ಸುಖತಾರತಮ್ಯಂ ತತ್ಸಾಧನತಾರತಮ್ಯಂ ಚ ಶಾಸ್ತ್ರಾತ್ "ಯಾವತ್ಸಂಪಾತಮುಷಿತ್ವಾ" (ಛಾಂ. ೫-೧೦-೫) ಇತ್ಯಸ್ಮಾತ್ ಗಮ್ಯತೇ । ತಥಾ ಮನುಷ್ಯಾದಿಷು ನಾರಕಸ್ಥಾವರಾನ್ತೇಷು ಸುಖಲವಃ ಚೋದನಾಲಕ್ಷಣಧರ್ಮಸಾಧ್ಯ ಏವ ಇತಿ ಗಮ್ಯತೇ ತಾರತಮ್ಯೇನ ವರ್ತಮಾನಃ । ತಥಾ ಊರ್ಧ್ವಗತೇಷು ಅಧೋಗತೇಷು ಚ ದೇಹವತ್ಸು ದುಃಖತಾರತಮ್ಯದರ್ಶನಾತ್ ತದ್ಧೇತೋರಧರ್ಮಸ್ಯ ಪ್ರತಿಷೇಧಚೋದನಾಲಕ್ಷಣಸ್ಯ ತದನುಷ್ಠಾಯಿನಾಂ ಚ ತಾರತಮ್ಯಂ ಗಮ್ಯತೇ । ಏವಮ್ ಅವಿದ್ಯಾದಿದೋಷವತಾಂ ಧರ್ಮಾಧರ್ಮತಾರತಮ್ಯನಿಮಿತ್ತಂ ಶರೀರೋಪಾದಾನಪೂರ್ವಕಂ ಸುಖದುಃಖತಾರತಮ್ಯಮ್ ಅನಿತ್ಯಂ ಸಂಸಾರರೂಪಂ ಶ್ರುತಿಸ್ಮೃತಿನ್ಯಾಯಪ್ರಸಿದ್ಧಮ್। ತಥಾ ಚ ಶ್ರುತಿಃ—"ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ" (ಛಾಂ ೮-೧೨-೧) ಇತಿ ಯಥಾವರ್ಣಿತಂ ಸಂಸಾರರೂಪಮ್ ಅನುವದತಿ। "ಅಶರೀರಂ ವಾವ ಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ" (ಛಾಂ. ೮-೧೨-೧) ಇತಿ ಪ್ರಿಯಾಪ್ರಿಯಸ್ಪರ್ಶನಪ್ರತಿಷೇಧಾತ್ ಚೋದನಾಲಕ್ಷಣಧರ್ಮಕಾರ್ಯತ್ವಂ ಮೋಕ್ಷಾಖ್ಯಸ್ಯ ಅಶರೀರತ್ವಸ್ಯ ಪ್ರತಿಷಿಧ್ಯತೇ ಇತಿ ಗಮ್ಯತೇ । ಧರ್ಮಕಾರ್ಯತ್ವೇ ಹಿ ಪ್ರಿಯಾಪ್ರಿಯಸ್ಪರ್ಶನಪ್ರತಿಷೇಧೋ ನೋಪಪದ್ಯತೇ । ಅಶರೀರತ್ವಮೇವ ಧರ್ಮಕಾರ್ಯಮ್ ಇತಿ ಚೇತ್ । ನ। ತಸ್ಯ ಸ್ವಾಭಾವಿಕತ್ವಾತ್ । "ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್! ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ" (ಕ. ೧-೨-೨೨), "ಅಪ್ರಾಣೋ ಹ್ಯಮನಾಃ ಶುಭ್ರಃ" (ಮುಂ. ೨-೧-೨), "ಅಸಙ್ಗೋ

---

1. ' ಮನುಷ್ಯಾತ್ ' ಎಂದಿದ್ದರೆ ಸಾಕಾಗಿತ್ತೆಂದು ತೋರುವದು , ಅಚ್ಚಿನ ಪುಸ್ತಕಗಳಲ್ಲಿ ' ಮನುಷ್ಯತ್ವಾತ್ ' ಎಂದೇ ಇದೆ

ಹ್ಯಯಂ ಪುರುಷಃ" (ಬೃ. ೪-೩-೧೫) ಇತ್ಯಾದಿಶ್ರುತಿಭ್ಯಃ । ಅತ ಏವ ಅನುಷ್ಠೇಯ ಕರ್ಮಫಲವಿಲಕ್ಷಣಂ ಮೋಕ್ಷಾಖ್ಯಮ್ ಅಶರೀರತ್ವಂ ನಿತ್ಯಮ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಈ (ಪೂರ್ವಪಕ್ಷದ ವಿಷಯ)ದಲ್ಲಿ (ಈಗ ಸಮಾಧಾನವನ್ನು) ಹೇಳುತ್ತೇವೆ. (ಇದುವರೆಗೆ ಹೇಳಿದ್ದು ಸರಿ)ಯಲ್ಲ; ಏಕೆಂದರೆ ಕರ್ಮ, ಬ್ರಹ್ಮವಿದ್ಯೆ (ಇವೆರಡರ) ಫಲಗಳು (ಒಂದಕ್ಕೊಂದು) ವಿಲಕ್ಷಣವಾಗಿರುತ್ತವೆ.[1] (ಹೇಗೆಂದರೆ) ಶರೀರದ್ದು, ವಾಕ್ಕಿನದು, ಮತ್ತು ಮನಸ್ಸಿನದು[2]-ಎಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವ ಕರ್ಮಕ್ಕೆ ಧರ್ಮವೆಂದು ಹೆಸರು, ಅದರ ವಿಷಯದ ಜಿಜ್ಞಾಸೆಯನ್ನು "ಅಥಾತೋ ಧರ್ಮಜಿಜ್ಞಾಸಾ" (ಇನ್ನು ಆದ್ದರಿಂದ ಧರ್ಮಜಿಜ್ಞಾಸೆಯನ್ನು ಮಾಡಬೇಕು) ಎಂಬ (ಜೈ ಸೂ, ೧-೧-೧ ಮೀಮಾಂಸಾ) ಸೂತ್ರದಲ್ಲಿ ಹೇಳಿರುತ್ತದೆ ಹಿಂಸೆಯೇ ಮುಂತಾದ ಅಧರ್ಮವೂ ಪ್ರತಿಷೇಧಚೋದನಾಲಕ್ಷಣವಾಗಿರುವದರಿಂದ[3] ಬಿಟ್ಟುಬಿಡುವದಕ್ಕಾಗಿ (ಪೂರ್ವಮೀಮಾಂಸಾಶಾಸ್ತ್ರದಲ್ಲಿ) ಜಿಜ್ಞಾಸೆಮಾಡತಕ್ಕದ್ದೇ[4]. (ಹೀಗೆ) ಚೋದನಾಲಕ್ಷಣವಾಗಿರುವ ಅರ್ಥ(ರೂಪವಾಗಿಯೂ) ಅನರ್ಥ(ರೂಪವಾಗಿಯೂ) ಇರುವ (ಆ) ಧರ್ಮಾಧರ್ಮಗಳಿಗೆ ಫಲಗಳಾಗಿರುವ ಸುಖದುಃಖಗಳು ಪ್ರತ್ಯಕ್ಷವಾಗಿರುತ್ತವೆ, (ಇವು) ಶರೀರವಾಙ್ಮನಸ್ಸುಗಳಿಂದಲೇ[5] ಅನುಭವಿಸಲ್ಪಡುತ್ತಿರುವವು, ವಿಷಯೇಂದ್ರಿಯಗಳ ಸಂಯೋಗದಿಂದ ಹುಟ್ಟುತ್ತಿರುವವು, ಬ್ರಹ್ಮನಿಂದ ಹಿಡಿದು ಸ್ಥಾವರಾಂತವಾದ (ಪ್ರಾಣಿಗಳಲ್ಲೆಲ್ಲ) ಪ್ರಸಿದ್ಧವಾಗಿರುವವು. ಮನುಷ್ಯನನ್ನು

---

1. ಭಾ. ಭಾ. ೧೨ ರಲ್ಲಿ ಇದನ್ನು ಸಂಗ್ರಹವಾಗಿ ತಿಳಿಸಿತ್ತು, ಈಗ ವಿಸ್ತರಿಸಿ ಹೇಳಲಾಗುತ್ತಿದೆ.

2 ಕರ್ಮಕಾಂಡದಲ್ಲಿಯೇ ದೇವತಾಧ್ಯಾನವೇ ಮುಂತಾದವನ್ನು ಹೇಳಿರುತ್ತದೆಯಾದ್ದರಿಂದ ಅದನ್ನು ಹೇಳುವದು ಈ ಶಾಸ್ತ್ರದ ಮುಖ್ಯೋದ್ದೇಶವಲ್ಲವೆಂದು ಭಾವ. ಇದು ಮುಂದೆ ಸ್ಪಷ್ಟವಾಗುವದು.

3. ಪ್ರತಿಷೇಧರೂಪವಾದ ವೇದವಾಕ್ಯವೆಂಬ ಪ್ರಮಾಣದಿಂದ ತಿಳಿಯಬರುವದರಿಂದ ಎಂದರ್ಥ. ಚೋದನಾಲಕ್ಷಣೋಽರ್ಥೋ ಧರ್ಮಃ (ಜೈ ಸೂ. ೧-೧-೨) ಎಂಬ ಸೂತ್ರವನ್ನು ಈ ವಿಶೇಷಣದಿಂದ ಸೂಚಿಸಿರುತ್ತದೆ.

4. ಧರ್ಮವನ್ನು ಜಿಜ್ಞಾಸೆಮಾಡುತ್ತೇವೆಂದು ಪ್ರತಿಜ್ಞೆಮಾಡಿರುವದು ಅಧರ್ಮಜಿಜ್ಞಾಸೆಗೂ ಉಪಲಕ್ಷಣ ಎಂದು ಭಾವ

5. ಆಯಾ ಕಾರಣದಿಂದ ಮಾಡಿದ ಕರ್ಮದ ಫಲವು ಆಯಾ ಕರಣಗಳಿಂದಲೇ ಉಪಭುಕ್ತವಾಗುವದೆಂದು ಮನುಸ್ಮೃತಿ, ಮೋಕ್ಷಧರ್ಮ-ಮುಂತಾದವುಗಳಲ್ಲಿ ವರ್ಣಿತವಾಗಿದೆ.

ಮೊದಲುಗೊಂಡು ಬ್ರಹ್ಮನವರೆಗಿನ ದೇಹಧಾರಿಗಳಲ್ಲಿ ಸುಖವು ತಾರತಮ್ಯದಿಂದ (ಇರುವದೆಂದು) ಶ್ರುತಿಯಲ್ಲಿ ಹೇಳಿರುತ್ತದೆ.[1] ಇದರಿಂದ ಆ (ತಾರತಮ್ಯಕ್ಕೆ) ಕಾರಣವಾದ ಧರ್ಮವೂ (ಜೀವರಲ್ಲಿ) ತಾರತಮ್ಯ(ದಿಂದ ಇರಬೇಕೆಂದು) ನಿಶ್ಚಯವಾಗುತ್ತದೆ.[2] ಧರ್ಮತಾರತಮ್ಯದಿಂದ ಅಧಿಕಾರಿಗಳ ತಾರತಮ್ಯವೂ (ಇರಬೇಕೆಂದು ಗೊತ್ತಾಗುತ್ತದೆ). ಅರ್ಥಿತ್ವ, ಸಾಮರ್ಥ್ಯ,—ಮುಂತಾದವುಗಳಿಂದ[3] ಅಧಿಕಾರಿಗಳಲ್ಲಿ ತಾರತಮ್ಯವುಂಟಾಗುವದೆಂಬುದು ಪ್ರಸಿದ್ಧವೂ ಆಗಿರುತ್ತದೆ[4] ಮತ್ತು ಇದರಂತೆ ಯಾಗಾದಿಗಳನ್ನು ಮಾಡುವವರಲ್ಲಿಯೇ ಉಪಾಸನೆಯಿಂದ (ಚಿತ್ತ) ಸಮಾಧಾನವನ್ನು ಹೊಂದಿರುವ ವಿಶೇಷ (ಕಾರಣ)ದಿಂದ **ಉತ್ತರಾಯಣಮಾರ್ಗದಿಂದ**[5] ಗತಿಯಾಗುವದೆಂದೂ ಬರಿಯ ಇಷ್ಟಾಪೂರ್ತಗಳು[6], ದಾನಗಳು—ಇವುಗಳನ್ನು ಮಾಡಿದವರಿಗೆ ಧೂಮಾದಿಕ್ರಮದಲ್ಲಿ **ದಕ್ಷಿಣಮಾರ್ಗದಿಂದ** ಗತಿಯಾಗುವದೆಂದೂ ಅದರಲ್ಲಿಯೂ ಸುಖತಾರತಮ್ಯವೂ ಅದರ ಸಾಧನಗಳ ತಾರತಮ್ಯವೂ ಉಂಟೆಂದೂ "ಯಾವತ್ಸಂಪಾತಮುಷಿತ್ವಾ' (ಕರ್ಮಗಳ ಕ್ಷಯವಾಗುವವರೆಗೂ ಆ ಚಂದ್ರಮಂಡಲದಲ್ಲಿ ಇದ್ದು ಛಾಂ. ೫-೧೦-೫) ಎಂಬ ಶಾಸ್ತ್ರದಿಂದ ತಿಳಿಯಬರುತ್ತದೆ. ಇದರಂತೆ ಮನುಷ್ಯನಿಂದ ಹಿಡಿದು ನರಕದಲ್ಲಿರುವವರ[7] ಮತ್ತು ಸ್ಥಾವರಪ್ರಾಣಿಗಳವರೆಗೂ ತಾರತಮ್ಯದಿಂದ ಇದ್ದುಕೊಂಡಿರುವ ಸುಖಲೇಶವು ಚೋದನಾಲಕ್ಷಣವಾದ ಧರ್ಮದಿಂದಲೇ ಆಗಿರುವದು ಎಂದು ಗೊತ್ತಾಗುತ್ತದೆ ಹೀಗೆಯೇ ಮೇಲಿನ (ಗತಿ

---

1. ತೈ. ೨-೮

2. ಧರ್ಮದಿಂದಲೇ ಸುಖವಾಗುವದರಿಂದ ಸುಖತಾರತಮ್ಯಕ್ಕೆ ತಕ್ಕಂತೆ ಧರ್ಮತಾರತಮ್ಯವೂ ಇರಬೇಕೆಂದು ಊಹಿಸಬಹುದಾಗಿದೆ ಎಂದು ಭಾವ

3 ಕರ್ಮದ ಫಲವನ್ನು ಬಯಸುವದು, ಕರ್ಮವನ್ನು ಮಾಡುವ ಶಕ್ತಿಯಿರುವದು, ಶಾಸ್ತ್ರದಲ್ಲಿ ಅಧಿಕಾರವನ್ನು ಅಲ್ಲಗಳೆಯದಿರುವದು—ಮುಂತಾದ.

4 ಜೈ. ಸೂ. ೬-೧-೨ ರಿಂದ ೪೨ರ ವರೆಗಿನ ಸೂತ್ರಗಳ ಶಾಬರಭಾಷ್ಯದಲ್ಲಿ ಅಧಿಕಾರದ ಚರ್ಚೆಯಿದೆ.

5. ಛಾಂ. ೫-೧೦-೧, ೨, ೩, ಪ್ರ ೧-೯, ೧೦, ಬೃ. ೬-೨-೧೪, ೧೫, ೧೬; ಗೀ. ೮-೨೪, ೨೫—ಇವುಗಳಲ್ಲಿ ಉತ್ತರಮಾರ್ಗ, ದಕ್ಷಿಣಮಾರ್ಗ-ಇವೆರಡನ್ನೂ ವರ್ಣಿಸಿದೆ. ಬ್ರ. ಸೂ. ೪-೩-೧ ರಿಂದ ೬ನೆಯ ಸೂತ್ರದವರೆಗೆ ಅವುಗಳ ವಿಚಾರದ ಸಂಶಯವನ್ನು ಪರಿಹರಿಸಿರುತ್ತದೆ.

6. ಇಷ್ಟವೆಂದರೆ ಅಗ್ನಿಹೋತ್ರಾದಿಕರ್ಮ, ಪೂರ್ತವೆಂದರೆ ಭಾವಿಯನ್ನು ತೋಡಿಸುವದೇ ಮುಂತಾದ ಕರ್ಮ, ದತ್ತವೆಂದರೆ ದಾನಮಾಡುವದು, ಶರಣುಹೊಕ್ಕವರನ್ನು ಕಾಪಾಡುವದು ಮುಂತಾದದ್ದು

7. ಸೂ. ಭಾ ೩-೧-೧೫ನ್ನು ನೋಡಿ.

ಯನ್ನು ಪಡೆಯುವ ಮತ್ತು) ಕೆಳಗಿನ ಗತಿಯನ್ನು ಪಡೆಯುವ ದೇಹಿಗಳಲ್ಲಿ ದುಃಖ ತಾರತಮ್ಯವು ಕಂಡುಬರುವದರಿಂದ ಅವಕ್ಕೆ ಕಾರಣವಾಗಿರುವ ಪ್ರತಿಷೇಧಚೋದನಾ ಲಕ್ಷಣವಾದ ಅಧರ್ಮದ ಮತ್ತು ಅದನ್ನು ಮಾಡುವವರ ತಾರತಮ್ಯವೂ (ಉಂಟೆಂದು) ಗೊತ್ತಾಗುತ್ತದೆ. ಹೀಗೆ ಅವಿದ್ಯೆಯೇ ಮುಂತಾದ[1] ದೋಷವುಳ್ಳವರಿಗೆ ಧರ್ಮಾಧರ್ಮಗಳ ತಾರತಮ್ಯದ ನಿಮಿತ್ತದಿಂದ ಶರೀರವನ್ನು ಸ್ವೀಕರಿಸುವ ಮೂಲಕ ಸಂಸಾರರೂಪವಾಗಿರುವ ಅನಿತ್ಯ[2] ಸುಖದುಃಖಗಳ ತಾರತಮ್ಯವು (ಉಂಟಾಗುವದೆಂಬುದು) ಶ್ರುತಿಸ್ಮೃತಿಗಳಿಂದಲೂ ಯುಕ್ತಿಯಿಂದಲೂ ಸಿದ್ಧವಾಗಿರುತ್ತದೆ. ಆದ್ದರಿಂದಲೇ ಶ್ರುತಿಯಲ್ಲಿ "ಶರೀರವುಳ್ಳವನಾಗಿರುವವನಿಗೆ ಪ್ರಿಯಾಪ್ರಿಯಗಳ ನಾಶವೇ ಇಲ್ಲ" (ಛಾಂ. ೮-೧೨-೧) ಎಂದು (ನಾವು) ವರ್ಣಿಸಿರುವ ಸಂಸಾರಸ್ವರೂಪವನ್ನು ಅನುವಾದಮಾಡಿರುತ್ತದೆ[3]

"ಅಶರೀರನಾಗಿರುವವನನ್ನು ಪ್ರಿಯಾಪ್ರಿಯಗಳು ಸೋಕುವದಿಲ್ಲ" (ಛಾಂ. ೮-೧೨-೧) ಎಂದು ಪ್ರಿಯಾಪ್ರಿಯಗಳು (ಮುಕ್ತನನ್ನು) ಸೋಕುವದು (ಕೂಡ) ಇಲ್ಲವೆಂದಿರುವದರಿಂದ ಮೋಕ್ಷವೆಂಬ ಅಶರೀರತ್ವವು ಚೋದನಾ ಲಕ್ಷಣವಾದ ಧರ್ಮದ ಕಾರ್ಯವಲ್ಲವೆಂದು ಹೇಳಿದೆ ಎಂದು ಗೊತ್ತಾಗುತ್ತದೆ ಏಕೆಂದರೆ (ಮುಕ್ತಿಯು) ಧರ್ಮದ ಕಾರ್ಯವಾಗಿದ್ದರೆ ಪ್ರಿಯಾಪ್ರಿಯಗಳು (ಅದನ್ನು) ಸೋಕುವದಿಲ್ಲವೆಂದು ಹೇಳುವದು ಯುಕ್ತವಾಗುತ್ತಿರಲಿಲ್ಲ[4]. (ಈ) ಅಶರೀರತ್ವವೇ ಧರ್ಮದ ಕಾರ್ಯ (ವಲ್ಲವೆ?) ಎಂದರೆ ಅಲ್ಲ; ಏಕೆಂದರೆ (ಆತ್ಮನಿಗೆ) ಸ್ವಾಭಾವಿಕವಾಗಿರುತ್ತದೆ[5]. "ಅಶರೀರನಾಗಿಯೂ ಅನಿತ್ಯವಾದ ಶರೀರಗಳಲ್ಲಿ (ನಿತ್ಯನಾಗಿ) ಇರುವವನಾಗಿಯೂ ದೊಡ್ಡವನಾಗಿಯೂ ವ್ಯಾಪಿಯಾಗಿಯೂ ಇರುವ ಆತ್ಮನನ್ನು ತಿಳಿದುಕೊಂಡ ಜಾಣನು ಶೋಕಿಸುವದಿಲ್ಲ." (ಕ-೧-೨-೨೨) "(ಈತನು) ಪ್ರಾಣವಿಲ್ಲದವನು, ಮನಸ್ಸಿಲ್ಲದವನು, ಶುಭ್ರನು" (ಮುಂ. ೨-೧-೨)

---

1. ಅವಿದ್ಯೆ, ರಾಗ, ದ್ವೇಷ, ಭಯ, ಮೋಹ-ಮುಂತಾದವುಗಳು, ಸೂ. ಭಾ. ೧-೩-೨. ಅಥವಾ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ-ಇವು; ಯೋ. ಸೂ. ೨-೩.

2. ಸುಖದುಃಖಗಳು ಬಂದುಹೋಗುವ ಸ್ವಭಾವದವಾದ್ದರಿಂದ ಅನಿತ್ಯ, ಮೋಕ್ಷವು ಇವುಗಳಿಗಿಂತ ವಿಲಕ್ಷಣವಾಗಿರುವದರಿಂದ ನಿತ್ಯ. ಛಾ. ೮-೧೨-೧, ಮುಂ-೧-೨-೬, ೧-೨-೧೨; ಗೀ. ೨-೧೪.

3. ಪ್ರತ್ಯಕ್ಷಾನುಮಾನಗಳಿಂದ ಸಿದ್ಧವಾಗಿರುವದನ್ನೇ ಹೇಳಿ ಗಟ್ಟಿಗೊಳಿಸಿರುತ್ತದೆ.

4. ಏಕೆಂದರೆ ಪ್ರಿಯಾಪ್ರಿಯಗಳೇ ಧರ್ಮದ ಕಾರ್ಯವಾಗಿವೆ.

5. ಸ್ವರೂಪವಾಗಿರುತ್ತದೆ.

“ಈ ಪುರುಷನು ಅಸಂಗನಲ್ಲವೆ ?” (ಬೃ. ೪-೩-೧೫)–ಇವೇ ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ). ಆದ್ದರಿಂದಲೇ ಮಾಡಬೇಕಾದ ಕರ್ಮದ ಫಲಕ್ಕಿಂತ ವಿಲಕ್ಷಣವಾಗಿರುವ ಈ ಮೋಕ್ಷವೆಂಬ ಹೆಸರಿನ ಅಶರೀರತ್ವವು ನಿತ್ಯವೆಂದು[1] ಸಿದ್ಧ(ವಾಯಿತು )

## ಕೂಟಸ್ಥನಿತ್ಯವಾದ ಮೋಕ್ಷವು ಕರ್ತವ್ಯಶೇಷವಾಗಲಾರದು

(ಭಾಷ್ಯ)

೪೩ ತತ್ರ ಕಿಂಚಿತ್ ಪರಿಣಾಮಿನಿತ್ಯಮ್ ಯಸ್ಮಿನ್ ವಿಕ್ರಿಯಮಾಣೇಽಪಿ ತದೇವೇದಮ್ ಇತಿ ಬುದ್ಧಿಃ ನ ವಿಹನ್ಯತೇ । ಯಥಾ ಪೃಥಿವ್ಯಾದಿ ಜಗನ್ನಿತ್ಯತ್ವವಾದಿನಾಮ್ । ಯಥಾ ಚ ಸಾಂಖ್ಯಾನಾಂ ಗುಣಾಃ । ಇದಂ ತು ಪಾರಮಾರ್ಥಿಕಂ ಕೂಟಸ್ಥನಿತ್ಯಮ್ ವ್ಯೋಮವತ್ ಸರ್ವವ್ಯಾಪಿ, ಸರ್ವವಿಕ್ರಿಯಾರಹಿತಮ್, ನಿತ್ಯತೃಪ್ತಮ್, ನಿರವಯವಮ್, ಸ್ವಯಂಜ್ಯೋತಿಃಸ್ವಭಾವಮ್ । ಯತ್ರ ಧರ್ಮಾಧರ್ಮೌ ಸಹ ಕಾರ್ಯೇಣ ಕಾಲತ್ರಯಂ ಚ ನೋಪಾವರ್ತೇತೇ । ತದೇತತ್ ಅಶರೀರತ್ವಂ ಮೋಕ್ಷಾಖ್ಯಮ್। “ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ” (ಕ ೨-೧-೧೪) ಇತ್ಯಾದಿ ಶ್ರುತಿಭ್ಯಃ । ಅತಃ ತದ್ ಬ್ರಹ್ಮ ಯಸ್ಯ ಇಯಂ ಜಿಜ್ಞಾಸಾ ಪ್ರಸ್ತುತಾ । ತತ್ ಯದಿ ಕರ್ತವ್ಯಶೇಷತ್ವೇನೋಪದಿಶ್ಯೇತ, ತೇನ ಚ ಕರ್ತವ್ಯೇನ ಸಾಧ್ಯಶ್ಚೇತ್ ಮೋಕ್ಷೋಽಭ್ಯುಪಗಮ್ಯೇತ, ಅನಿತ್ಯ ಏವ ಸ್ಯಾತ್ । ತತ್ರ ಏವಂ ಸತಿ ಯಥೋಕ್ತ-ಕರ್ಮಫಲೇಷ್ವೇವ ತಾರತಮ್ಯಾವಸ್ಥಿತೇಷು ಅನಿತ್ಯೇಷು ಕಶ್ಚಿತ್ ಅತಿಶಯೋ ಮೋಕ್ಷಃ ಇತಿ ಪ್ರಸಜ್ಯೇತ । ನಿತ್ಯಶ್ಚ ಮೋಕ್ಷಃ ಸರ್ವೈಃ ಮೋಕ್ಷವಾದಿಭಿಃ ಅಭ್ಯುಪಗಮ್ಯತೇ । ಅತಃ ನ ಕರ್ತವ್ಯಶೇಷತ್ವೇನ ಬ್ರಹ್ಮೋಪದೇಶೋ ಯುಕ್ತಃ ॥

(ಭಾಷ್ಯಾರ್ಥ)

ಇಂಥ (ನಿತ್ಯವಸ್ತುಗಳ)ಲ್ಲಿ ಒಂದೊಂದು (ವಸ್ತು) ಪರಿಣಾಮಿನಿತ್ಯವಾಗಿರುತ್ತದೆ. ಅದು ಮಾರ್ಪಟ್ಟರೂ ಅದೇ ಇದು ಎಂಬ ಬುದ್ಧಿಯು ನಾಶವಾಗುವದಿಲ್ಲ. ಹೇಗೆ ಜಗತ್ತು ನಿತ್ಯವೆಂಬ ವಾದಿಗಳ (ಮತದಲ್ಲಿ) ಪೃಥಿವಿ[2] ಮುಂತಾದದ್ದು (ಪರಿಣಾಮಿನಿತ್ಯವೋ), ಮತ್ತು ಹೇಗೆ ಸಾಂಖ್ಯರ (ಮತದಲ್ಲಿ ಸತ್ತ್ವಾದಿ) ಗುಣ

---

1. ಕಾಲಾತೀತವಾಗಿರುವದರಿಂದ ಅನಿತ್ಯವಲ್ಲವೆಂದು. ಎಂದರ್ಥ.

2. ಪೃಥಿವಿ ಮುಂತಾದವು ಮಾರ್ಪಡುತ್ತಲೇ ಇದ್ದರೂ ಅವು ಎಂದಿಗೂ ನಾಶವಾಗುವದಿಲ್ಲ ಎಂದು ಜಗನ್ನಿತ್ಯತ್ವವಾದಿಗಳ ಮತ.

ಗಳು[1] (ಪರಿಣಾಮಿನಿತ್ಯವೋ ಹಾಗಿರುವದು) ಆದರೆ ಈ (ಅಶರೀರತ್ವ)ವಾದರೋ ಪರಮಾರ್ಥವಾಗಿರುವದು, ಕೂಟಸ್ಥನಿತ್ಯವು,[2] ಆಕಾಶದಂತೆ ಸರ್ವವ್ಯಾಪಿ, ಯಾವ ವಿಕಾರವೂ ಇಲ್ಲದ್ದು[3], ಯಾವಾಗಲೂ ತೃಪ್ತವಾಗಿರುವಂಥದ್ದು[4], ಅವಯುವಗಳಿಲ್ಲದ್ದು, ತಾನೇ ಬೆಳಗುವ ಸ್ವಭಾವವುಳ್ಳದ್ದು; ಇದರಲ್ಲಿ ಧರ್ಮಾಧರ್ಮಗಳು ತಮ್ಮ ಕಾರ್ಯದೊಡನೆ ಕಾಲತ್ರಯದಲ್ಲಿಯೂ ಇರುವದಿಲ್ಲ[5] ಆ ಇದೇ ಮೋಕ್ಷವೆಂಬ ಹೆಸರಿನ ಅಶರೀರತ್ವವು. "ಧರ್ಮಕ್ಕಿಂತ ಬೇರೆಯಾಗಿ, ಅಧರ್ಮಕ್ಕಿಂತ ಬೇರೆಯಾಗಿ ಈ ಕೃತಾಕೃತಕ್ಕಿಂತಲೂ ಬೇರೆಯಾಗಿ, ಹಿಂದಿನ ಕಾಲದಲ್ಲಿದ್ದದ್ದಕ್ಕಿಂತಲೂ ಮುಂದಿನ ಕಾಲದಲ್ಲಿರುವದಕ್ಕಿಂಲೂ (ಬೇರೆಯಾಗಿರುವ ಯಾವ ತತ್ತ್ವವನ್ನು ಬಲ್ಲೆಯೋ ಅದನ್ನು ಹೇಳು)" (ಕ ೨-೧-೧೪) ಎಂಬುದೇ ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗಿರುತ್ತದೆ).

ಆದ್ದರಿಂದ ಯಾವದರ (ವಿಷಯಕ್ಕೆ) ಈ ಜಿಜ್ಞಾಸೆಯು ಪ್ರಾರಂಭವಾಗಿರುವದೋ ಆ ಬ್ರಹ್ಮವೇ ಇದು[6] ಇದನ್ನು (ಉಪಾಸನೆಯೇ ಮುಂತಾದ) ಕರ್ತವ್ಯಕ್ಕೆ ಶೇಷವಾಗಿ ಉಪದೇಶಮಾಡಿದರೆ, ಮತ್ತು ಮೋಕ್ಷವು ಆ ಕರ್ತವ್ಯದಿಂದ ಸಾಧಿಸಿಕೊಳ್ಳಬೇಕಾದದ್ದೆಂದು ಅಂಗೀಕರಿಸಿದರೆ[7] (ಅದು) ಅನಿತ್ಯವೇ ಆಗುವದು ಅದು ಹೀಗಾಗುವ ಪಕ್ಷದಲ್ಲಿ ತಾರತಮ್ಯದಿಂದ ಇದ್ದುಕೊಂಡಿರುವವಾಗಿಯೂ ಅನಿತ್ಯವಾಗಿಯೂ ಇರುವ ಮೇಲೆ ಹೇಳಿದ ಕರ್ಮಫಲಗಳಲ್ಲಿಯೇ ಒಂದಾನೊಂದು ಬಗೆ

---

1. ಗುಣಗಳು ಕ್ಷಣಕ್ಷಣಕ್ಕೂ ಮಾರ್ಪಡುತ್ತಿರುವವಾದರೂ ನಿತ್ಯವಾಗಿರುವವು ಎಂದು ಸಾಂಖ್ಯರ ಮತ.

2 ಪರಿಣಾಮವೇ ಆಗದೆ ನಿತ್ಯವಾಗಿರುವದು.

3. ಬ್ರಹ್ಮವು ನಿಜವಾಗಿ ಪರಿಣಾಮವಾಗುವದೆಂಬುದು ಸರಿಯಲ್ಲ. ಸೂ. ಭಾ. ೨-೧-೨೭

4. ಇದರಲ್ಲಿ ಯಾವದೊಂದರ ಕೊರತೆಯೂ ಇರುವದಿಲ್ಲ.

5. ಬ್ರಹ್ಮದಲ್ಲಿ ಕಾಲವಿಲ್ಲ, ಆದ್ದರಿಂದ ಧರ್ಮಾಧರ್ಮಗಳ ಕಾರ್ಯವಾದ ಉಚ್ಚ ನೀಚಗತಿಗಳೂ ಅದಕ್ಕಿಲ್ಲ.

6 ಈ ಬ್ರಹ್ಮವು ಸ್ವತಂತ್ರವಾಗಿಯೇ ಶಾಸ್ತ್ರಪ್ರಮಾಣಕವು, ಏಕೆಂದರೆ ಇದರಲ್ಲಿಯೇ ವೇದಾಂತವಾಕ್ಯಗಳು ಸಮನ್ವಯವಾಗುತ್ತವೆ—ಎಂದು ಸೂತ್ರವನ್ನು ವಿವರಿಸಿದಂತೆ ಆಯಿತು

7. ಕೂಟಸ್ಥನಿತ್ಯವಾದ ಬ್ರಹ್ಮವು ಕ್ರಿಯೆಗೆ ಶೇಷವೆಂಬುದೇ ವಿರುದ್ಧವಾದ ಮಾತು. ಅದು ಕ್ರಿಯಾಶೇಷವೆಂದೊಪ್ಪಿದರೂ ಮೋಕ್ಷವು ಕ್ರಿಯಾಫಲವಾದರೆ ಅನಿತ್ಯವಾಗುವದೆಂಬ ದೋಷವು ಗಂಟುಬೀಳುತ್ತದೆ.

ಎಂದಾಗುವದು. ಆದರೆ ಮೋಕ್ಷವು ನಿತ್ಯವೆಂದು ಮೋಕ್ಷವಾದಿಗಳೆಲ್ಲರೂ ಒಪ್ಪಿರ್ರುತ್ತಾರೆ[1] ಆದ್ದರಿಂದ ಕರ್ತವ್ಯಕ್ಕೆ ಶೇಷವಾಗಿ ಬ್ರಹ್ಮವನ್ನು ಉಪದೇಶ(ಮಾಡಿದೆ) ಎಂಬುದು ಸರಿಯಲ್ಲ.

## ಬ್ರಹ್ಮಜ್ಞಾನವಾದ ಮೇಲೆ ಕರ್ತವ್ಯವು ಉಳಿಯುವದಿಲ್ಲ

(ಭಾಷ್ಯ)

೪೪. ಅಪಿ ಚ ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨-೯) "ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ" (ಮುಂ. ೨-೨-೮), "ಆನನ್ದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ" (ತೈ. ೨-೯), ಅಭಯಂ ವೈ ಜನಕ ಪ್ರಾಪ್ತೋಽಸಿ" (ಬೃ. ೪-೨-೪), "ತದಾತ್ಮಾನಮೇವಾವೇದಹಂ ಬ್ರಹ್ಮಾಸ್ಮೀತಿ ತಸ್ಮಾತ್ ತತ್ಸರ್ವಮಭವತ್" (ಬೃ. ೧-೪-೧೦), "ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭) ಇತ್ಯೇವಮಾದ್ಯಾಃ ಶ್ರುತಯಃ ಬ್ರಹ್ಮವಿದ್ಯಾನನ್ತರಂ ಮೋಕ್ಷಂ ದರ್ಶಯನ್ತ್ಯಃ ಮಧ್ಯೇ ಕಾರ್ಯಾನ್ತರಂ ವಾರಯನ್ತಿ । ತಥಾ "ತದ್ಧೈತತ್ ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚ" (ಬೃ. ೧-೪-೧೦) ಇತಿ ಬ್ರಹ್ಮದರ್ಶನಸರ್ವಾತ್ಮಭಾವಯೋರ್ಮಧ್ಯೇ ಕರ್ತವ್ಯಾನ್ತರವಾರಣಾಯ ಉದಾಹಾರ್ಯಮ್ । ಯಥಾ 'ತಿಷ್ಠನ್ ಗಾಯತಿ' ಇತಿ ತಿಷ್ಠತಿಗಾಯತ್ಯೋರ್ಮಧ್ಯೇ ತತ್ಕರ್ತೃಕಂ ಕಾರ್ಯಾನ್ತರಂ ನಾಸ್ತಿ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಇದಲ್ಲದೆ "ಬ್ರಹ್ಮವನ್ನು ಅರಿತುಕೊಳ್ಳುತ್ತಾನಾದರೆ ಬ್ರಹ್ಮವೇ ಆಗುತ್ತಾನೆ" (ಮುಂ.೩-೨-೯), "ಆ ಕಾರ್ಯಕಾರಣರೂಪನಾದ (ಆತ್ಮನನ್ನು) ಕಂಡುಕೊಂಡರೆ ಈತನ ಕರ್ಮಗಳೂ ಸವೆದುಹೋಗುವವು'' (ಮುಂ. ೨-೨-೮), ಬ್ರಹ್ಮದ ಆನಂದವನ್ನು ಅರಿತುಕೊಂಡವನು ಏತಕ್ಕೂ ಅಂಜುವದಿಲ್ಲ"(ತೈ. ೨-೯), "ಜನಕನೆ, ಅಭಯವನ್ನೇ ಹೊಂದಿರುತ್ತೀಯೆ" (ಬೃ. ೪-೨-೪), "ಅದು 'ನಾನು ಬ್ರಹ್ಮವಾಗಿರುವೆನು' ಎಂದು ತನ್ನನ್ನೇ ಅರಿತುಕೊಂಡಿತು, ಅದರಿಂದ ಅದು ಸರ್ವವೂ ಆಯಿತು" (ಬೃ. ೧-೪-೧೦), " ಏಕತ್ವವನ್ನು ಕಂಡುಕೊಂಡವನಿಗೆ ಅಲ್ಲಿ ಎಂಥ ಮೋಹವು, ಎಂಥ ಶೋಕವು ?"( ಈ. ೭ )–ಇವೇ ಮುಂತಾದ ಶ್ರುತಿಗಳು ಬ್ರಹ್ಮವನ್ನರಿತ ಕೂಡಲೆ[2]

---

1. ಮೋಕ್ಷವೂ ಇಂತಿಷ್ಟುಕಾಲದವರೆಗೆ ಮಾತ್ರ ಇರುವದು ಎಂಬ ಆರ್ಯಸಮಾಜದ ಮತವು ಯಾವ ವೇದಾಂತಗಳಿಗೂ ಒಪ್ಪಿಗೆಯಿಲ್ಲ.

2. ಇದೇ ಆಚಾರ್ಯರಿಗೆ ಸಮ್ಮತವಾದ ಸದ್ಯೋಮುಕ್ತಿವಾದವು.

**ಮೋಕ್ಷವೆಂದು ತಿಳಿಸುವದರಿಂದ ನಡುವೆ[1] ಮಾಡತಕ್ಕದ್ದು ಇನ್ನೇನೂ ಇರುವದಿಲ್ಲವೆಂದು ಹೇಳುತ್ತಿವೆ.** ಹೀಗೆಯೇ "ಆ ಇದನ್ನು ಕಂಡುಕೊಂಡ ವಾಮದೇವನೆಂಬ ಋಷಿಯು 'ನಾನೇ ಮನುವಾಗಿದ್ದೆನು, ಸೂರ್ಯನೂ ಆಗಿದ್ದೆನು, ಎಂದು ಅರಿತುಕೊಂಡನು" (ಬೃ. ೧-೪-೧೦) ಎಂಬ (ಶ್ರುತಿಯನ್ನೂ) ಬ್ರಹ್ಮದರ್ಶನಕ್ಕೂ ಸರ್ವಾತ್ಮಭಾವಕ್ಕೂ ನಡುವೆ ಮತ್ತೇನೂ ಮಾಡತಕ್ಕದ್ದು ಇಲ್ಲವೆಂದು ತಿಳಿಸುವದಕ್ಕೆ (ಬಂದದ್ದೆಂದು) ಉದಾಹರಿಸಬಹುದು[2] 'ನಿಂತುಕೊಂಡು ಹಾಡುತ್ತಿದಾನೆ' ಎಂಬಲ್ಲಿ ನಿಲ್ಲೋಣ, ಹಾಡೋಣ-ಎಂಬೀ ಎರಡು ಕ್ರಿಯೆಗಳ ನಡುವೆ ಅವುಗಳ ಕರ್ತೃವಾದವನು ಮಾಡಬೇಕಾದದ್ದು ಮತ್ತೆ ಯಾವದೂ ಇಲ್ಲವೆಂದು ಹೇಗೆ ಗೊತ್ತಾಗುತ್ತದೆಯೋ (ಹಾಗೆಯೇ ಕಂಡುಕೊಂಡು ಅರಿತುಕೊಂಡನು ಎಂಬ ವಾಕ್ಯದಲ್ಲಿಯೂ ಕಾರ್ಯಾಂತರವಿಲ್ಲವೆಂದು ಗೊತ್ತಾಗುತ್ತದೆ.)[3]

## ಬ್ರಹ್ಮವಿದ್ಯೆಗೆ ಮೋಕ್ಷಪ್ರತಿಬಂಧನಿವೃತ್ತಿಯೇ ಫಲ

೨೫. "ತ್ವಂ ಹಿ ನಃ ಪಿತಾ ಯೋಽಸ್ಮಾಕಮವಿದ್ಯಾಯಾಃ ಪರಂ ಪಾರಂ ತಾರಯಸಿ" (ಪ್ರ ೬-೮), "ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾನ್ ಶೋಕಸ್ಯ ಪಾರಂ ತಾರಯತು" (ಛಾಂ. ೭-೧-೩), "ತಸ್ಮೈ ಮೃದಿತಕಷಾಯಾಯ ತಮಸಃ ಪಾರಂ ದರ್ಶಯತಿ ಭಗವಾನ್ ಸನತ್ಕುಮಾರಃ" (ಛಾಂ. ೭-೨೬-೨) ಇತಿ ಚೈವಮಾದ್ಯಾಃ ಶ್ರುತಯಃ ಮೋಕ್ಷಪ್ರತಿಬನ್ಧನಿವೃತ್ತಿಮಾತ್ರಮೇವ ಆತ್ಮಜ್ಞಾನಸ್ಯ ಫಲಂ ದರ್ಶಯನ್ತಿ । ತಥಾ ಚ ಆಚಾರ್ಯ ಪ್ರಣೀತಂ ನ್ಯಾಯೋಪಬೃಂಹಿತಂ ಸೂತ್ರಮ್-

---

1. ಜ್ಞಾನಕ್ಕೂ ಮೋಕ್ಷಕ್ಕೂ ನಡುವೆ ಎಂದರ್ಥ. ಜ್ಞಾನವಾದ ಬಳಿಕ ಉಪಾಸನೆ ಚಿತ್ತನಿರೋಧ, ವಾಕ್ಯಜ್ಞಾನಾಭ್ಯಾಸ-ಮುಂತಾದವುಗಳನ್ನು ಮಾಡುವದು ಉಳಿದಿರುತ್ತದೆ ಎಂಬ ಮತಗಳನ್ನು ಖಂಡಿಸುವದಕ್ಕೆ ಈ ಮಾತನ್ನು ಪಯೋಗಿಸಿದೆ. ಪೀಠಿಕೆಯನ್ನು ನೋಡಿ.

2. ಬ್ರಹ್ಮಜ್ಞಾನದಿಂದ ಸರ್ವಾತ್ಮಭಾವವು ಬರುತ್ತದೆ ಎಂಬುದನ್ನು ಸ್ಪಷ್ಟಪಡಿಸುವದಕ್ಕಾಗಿ ಈ ವಾಮದೇವವಾಕ್ಯವು ಬಂದಿರುತ್ತದೆ

3. 'ಪಶ್ಯನ್ ಪ್ರತಿಪೇದೇ' 'ತಿಷ್ಠನ್ ಗಾಯತಿ' ಈ ಪ್ರಯೋಗಗಳಲ್ಲಿರುವ 'ಪಶ್ಯನ್' 'ತಿಷ್ಠನ್' ಎಂಬಿವು ವರ್ತಮಾನಕಾಲವನ್ನು ತಿಳಿಸುವ ಕೃದಂತಗಳು, ಇವು ಕಂಡುಕೊಳ್ಳುವದು ಮತ್ತು ಅರಿತುಕೊಳ್ಳುವದು, ನಿಂತಿರುವದು ಮತ್ತು ಹಾಡುವದು-ಎಂಬ ಎರಡೆರಡು ಕ್ರಿಯೆಗಳೂ ಏಕಕಾಲದಲ್ಲಿಯೇ ನಡೆಯುವವು ಎಂಬುದನ್ನು ತಿಳಿಸುವವು; ದೃಷ್ಟ್ವಾ, 'ಸ್ಥಿತ್ವಾ' ಎಂಬ ಕೃದಂತಗಳಂತೆ ಒಂದು ಕ್ರಿಯೆಯಾದ ಬಳಿಕ ಮತ್ತೊಂದು ಆಗುವದೆಂಬುದನ್ನು ತಿಳಿಸುವದಿಲ್ಲ.

“ದುಃಖಜನ್ಮಪ್ರವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾಯೇ ತದನನ್ತರಾಪಾಯಾದಪವರ್ಗಃ” (ನ್ಯಾ. ಸೂ. ೧-೧-೨) ಇತಿ । ಮಿಥ್ಯಾಜ್ಞಾನಾಪಾಯಶ್ಚ ಬ್ರಹ್ಮಾತ್ಮೈಕತ್ವವಿಜ್ಞಾನಾತ್ ಭವತಿ ॥

(ಭಾಷ್ಯಾರ್ಥ)

“ನೀನೇ ನಮ್ಮ ತಂದೆಯು, ಏಕೆಂದರೆ ನೀನು ನಮ್ಮಗಳನ್ನು **ಅವಿದ್ಯೆಯ** ಆಚೆಯ ದಡವನ್ನು (ಸೇರುವಂತೆ) ದಾಟಿಸಿರುತ್ತೀಯೆ” (ಪ್ರ. ೬-೮), “ಆತ್ಮನನ್ನು ಅರಿತುಕೊಂಡವನು ಶೋಕವನ್ನು ದಾಟುತ್ತಾನೆಂದು ಪೂಜ್ಯರಾದ ತಮ್ಮಂಥವರಿಂದ ಕೇಳಿರುತ್ತೇನೆ, ಅಷ್ಟೇ, ಪೂಜ್ಯರೆ, ಆ ನಾನು ಶೋಕಪಡುತ್ತಿದ್ದೇನೆ, ಆದ್ದರಿಂದ ಆ ನನ್ನನ್ನು ಪೂಜ್ಯರಾದ ತಾವು ಶೋಕದ (ಆಚೆಯ) ದಂಡೆಯನ್ನು (ಸೇರುವಂತೆ) ದಾಟಿಸಬೇಕು.” (ಛಾಂ. ೭-೧-೩), “ಕಷಾಯವನ್ನು ನಾಶಪಡಿಸಿಕೊಂಡಿರುವ ಆತನಿಗೆ ಪೂಜ್ಯನಾದ ಸನತ್ಕುಮಾರನು ತಮಸ್ಸಿನ ಆಚೆಯ ದಡವನ್ನು ತೋರಿಸಿಕೊಡುತ್ತಾನೆ” (ಛಾಂ. ೭-೨೬-೨)-ಇವೇ ಮುಂತಾದ ಶ್ರುತಿಗಳು ಮೋಕ್ಷಕ್ಕೆ ಅಡ್ಡಿಯನ್ನು ಕಳೆಯುವದೊಂದೇ[1] ಆತ್ಮಜ್ಞಾನದ ಫಲವೆಂದು ತಿಳಿಸುತ್ತವೆ. ಇದಕ್ಕೆ (ತಕ್ಕಂತೆ) ಆಚಾರ್ಯ (ಗೌತಮ)ರು ರಚಿಸಿರುವ ಯುಕ್ತಿಯ ಬೆಂಬಲವುಳ್ಳ ಒಂದು **ಸೂತ್ರವೂ** ಇದೆ “ದುಃಖ, ಜನ್ಮ, ಪ್ರವೃತ್ತಿ, ದೋಷ, ಮಿಥ್ಯಾಜ್ಞಾನ-ಇವುಗಳಲ್ಲಿ ಮುಂದುಮುಂದಿನದು ನಾಶವಾದರೆ ಅದರ (ಹಿಂದು) ಹಿಂದಿನದು ಹೋಗುವದರಿಂದ **ಅಪವರ್ಗ**ವಾಗುವದು[2] ” (ನ್ಯಾ. ಸೂ ೧-೧-೨) ಎಂಬುದು (ಆ ಸೂತ್ರವು. ಇಲ್ಲಿ ಮೂಲಕಾರಣವಾಗಿ) ಹೇಳಿರುವ **ಮಿಥ್ಯಾಜ್ಞಾನದ ನಾಶವು** ಬ್ರಹ್ಮವೂ ಆತ್ಮನೂ ಒಂದೇ ಎಂಬ ವಿಜ್ಞಾನದಿಂದ(ಲೇ) ಆಗುವದು[3]

---

1. ಅವಿದ್ಯೆಯೊಂದೇ ನಿತ್ಯಸಿದ್ಧವಾಗಿರುವ ಮೋಕ್ಷಕ್ಕೆ ಅಡ್ಡಿಯು. ಈ ಪ್ರಸಂಗದಲ್ಲಿ ‘ಅವಿದ್ಯೆ,’ ‘ಶೋಕ’, ‘ತಮಸ್ಸು’ ‘ಮಿಥ್ಯಾಜ್ಞಾನ’ ಈ ಶಬ್ದಗಳು ಅಧ್ಯಾಸರೂಪವಾದ ಅವಿದ್ಯೆಯನ್ನೇ ತಿಳಿಸುತ್ತವೆ ಎಂಬುದನ್ನು ಲಕ್ಷಿಸಬೇಕು

2. ದುಃಖಗಳಿಂದ ಬಿಡುಗಡೆಯಾಗುವದು ಎಂದರ್ಥ.

3. ಮಿಥ್ಯಾಜ್ಞಾನವು ಹೋದರೆ ಮುಕ್ತಿ ಎಂಬಿಷ್ಟಕ್ಕೆ ಮಾತ್ರ ನ್ಯಾಯಸೂತ್ರದ ಸಮ್ಮತಿಯನ್ನು ತೆಗೆದುಕೊಂಡಿದೆ. ನ್ಯಾಯಸೂತ್ರದಲ್ಲಿ ಪ್ರಮಾಣವೇ ಮುಂತಾದ ಹದಿನಾರು ಪದಾರ್ಥಗಳ ಜ್ಞಾನದಿಂದ ಮುಕ್ತಿಯಾಗುವದೆಂದು ಹೇಳಿರುವದು ಶ್ರುತಿಗೂ ಯುಕ್ತಿಗೂ ವಿರುದ್ಧವಾದ್ದರಿಂದ ನಾವು ಒಪ್ಪುವದಿಲ್ಲ ಎಂದು ಭಾವ.

## ಬ್ರಹ್ಮಾತ್ಮೈಕ್ಯಜ್ಞಾನವು ಸಂಪದಾದಿಗಳಂತಲ್ಲ

(ಭಾಷ್ಯ)

೪೬. ನ ಚ ಇದಂ ಬ್ರಹಾತ್ಮೈಕತ್ವವಿಜ್ಞಾನಂ ಸಂಪದ್ರೂಪಮ್। ಯಥಾ "ಅನನ್ತಂ ವೈ ಮನೋಽನನ್ತಾ ವಿಶ್ವೇದೇವಾ ಅನನ್ತಮೇವ ಸ ತೇನ ಲೋಕಂ ಜಯತಿ" (ಬೃ. ೩-೧-೯) ಇತಿ। ನ ಚ ಅಧ್ಯಾಸರೂಪಮ್। ಯಥಾ "ಮನೋ ಬ್ರಹ್ಮೇತ್ಯುಪಾಸೀತ" (ಛಾಂ ೩-೧೮-೧), "ಆದಿತ್ಯೋ ಬ್ರಹ್ಮೇತ್ಯಾದೇಶಃ" (ಛಾಂ. ೩-೧೯-೧) ಇತಿ ಚ ಮನಆದಿತ್ಯಾದಿಷು ಬ್ರಹ್ಮದೃಷ್ಟ್ಯಧ್ಯಾಸಃ। ನಾಪಿ ವಿಶಿಷ್ಟಕ್ರಿಯಾಯೋಗನಿಮಿತ್ತಮ್, "ವಾಯುರ್ವಾವ ಸಂವರ್ಗಃ" (ಛಾಂ. ೪-೩-೧) "ಪ್ರಾಣೋ ವಾವ ಸಂವರ್ಗಃ" (ಛಾಂ. ೪-೩-೩) ಇತಿವತ್। ನಾಪಿ ಆಜ್ಯಾವೇಕ್ಷಣಾದಿಕರ್ಮವತ್ ಕರ್ಮಾಙ್ಗಸಂಸ್ಕಾರರೂಪಮ್। ಸಂಪದಾದಿರೂಪೇ ಹಿ ಬ್ರಹ್ಮಾತ್ಮೈಕತ್ವವಿಜ್ಞಾನೇ ಅಭ್ಯುಪಗಮ್ಯಮಾನೇ "ತತ್ತ್ವಮಸಿ" (ಛಾಂ, ೬-೮-೭), "ಅಹಂ ಬ್ರಹ್ಮಾಸ್ಮಿ" (ಬೃ ೧-೪-೧೦), "ಅಯಮಾತ್ಮಾ ಬ್ರಹ್ಮ" (ಬೃ. ೨-೫-೧೯) ಇತ್ಯೇವಮಾದೀನಾಂ ವಾಕ್ಯಾನಾಂ ಬ್ರಹ್ಮಾತ್ಮೈಕತ್ವವಸ್ತುಪ್ರತಿಪಾದನಪರಃ ಪದಸಮನ್ವಯಃ ಪೀಡ್ಯೇತ। "ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ" (ಮುಂ. ೨-೨-೮) ಇತಿ ಚೈವಮಾದೀನ್ಯವಿದ್ಯಾನಿವೃತ್ತಿಫಲಶ್ರವಣಾನಿ ಉಪರುಧ್ಯೇರನ್। "ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨-೯) ಇತಿ ಚೈವಮಾದೀನಿ ತದ್ಭಾವಾಪತ್ತಿವಚನಾನಿ ಸಂಪದಾದಿಪಕ್ಷೇ ನ ಸಾಮಞ್ಜಸ್ಯೇನ ಉಪಪದ್ಯೇರನ್। ತಸ್ಮಾತ್ ನ ಸಂಪದಾದಿರೂಪಂ ಬ್ರಹ್ಮಾತ್ಮೈಕತ್ವವಿಜ್ಞಾನಮ್ ॥

(ಭಾಷ್ಯಾರ್ಥ)

ಈ ಬ್ರಹ್ಮಾತ್ಮೈಕತ್ವವಿಜ್ಞಾನವು "ಮನಸ್ಸು ಅನಂತವಾಗಿದೆಯಷ್ಟೆ, ವಿಶ್ವೇದೇವತೆಗಳು ಅನಂತವಾಗಿರುವರು. (ಆದ್ದರಿಂದ ಮನಸ್ಸನ್ನು ವಿಶ್ವೇದೇವತೆಗಳೆಂದು ಉಪಾಸನೆ ಮಾಡುವವನು) ಅದರಿಂದ ಅನಂತವಾದ ಲೋಕವನ್ನೇ ಗೆದ್ದುಕೊಳ್ಳುತ್ತಾನೆ" (ಬೃ. ೩-೧-೯) ಎಂಬಲ್ಲಿರುವಂತೆ **ಸಂಪದ್ರೂಪವಾದದ್ದಲ್ಲ**[1] "ಮನಸ್ಸನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು" (ಛಾಂ. ೩-೧೮-೧) ಎಂದೂ[2],

---

1. ಅಲ್ಪವಸ್ತುವೊಂದನ್ನು ಯಾವದಾದರೊಂದು ಗುಣದ ಸಾದೃಶ್ಯದಿಂದ ಉತ್ಕೃಷ್ಟವಸ್ತುವೆಂದು ಧ್ಯಾನಮಾಡುವದು '**ಸಂಪತ್ತು**'

2. ಇಲ್ಲಿ ಒಂದು ಇತಿಯು ಮೂಲದಲ್ಲಿರಬೇಕೆಂದು ತೋರುತ್ತದೆ.

"ಆದಿತ್ಯನು ಬ್ರಹ್ಮವು ಎಂಬುದು ಉಪದೇಶವು" (ಛಾಂ. ೩-೧೯-೧) ಎಂದೂ ಮನಸ್ಸು, ಆದಿತ್ಯ-ಮುಂತಾದವುಗಳಲ್ಲಿ ಬ್ರಹ್ಮದೃಷ್ಟಿಯನ್ನು ಅಧ್ಯಾಸಮಾಡಿರುವಂತೆ[1] **ಅಧ್ಯಾಸವನ್ನು (ಮಾಡುವ) ರೂಪದ್ದೂ ಅಲ್ಲ**[2]. "ವಾಯುವೇ ಸಂವರ್ಗವು" (ಛಾಂ. ೪-೩-೧), "ಪ್ರಾಣವೇ ಸಂವರ್ಗವು" (ಛಾಂ. ೪-೩-೩) ಎಂಬಂತೆ **ಅಸಾಧಾರಣವಾದ ಕ್ರಿಯೆಯ ಸಂಬಂಧದಿಂದ (ಹೇಳಿದ ಧ್ಯಾನವೂ) ಅಲ್ಲ**[3]. ಆಜ್ಯವನ್ನು ನೋಡುವದೇ ಮುಂತಾದ ಕರ್ಮಗಳ ಹಾಗೆ ಕರ್ಮಕ್ಕೆ ಅಂಗವಾಗಿರುವ (ವಸ್ತುವಿಗೆ) ಸಂಸ್ಕಾರವುಂಟಾಗಲೆಂದು (ಮಾಡುವ) ರೂಪದ್ದೂ **ಅಲ್ಲ**[4]. ಏಕೆಂದರೆ ಬ್ರಹ್ಮಾತ್ಮೈಕತ್ವದ ಅರಿವು ಸಂಪದಾದಿಗಳ ರೂಪದ್ದು ಎಂದು ಇಟ್ಟುಕೊಂಡರೆ "ಅದು ನೀನಾಗಿರುವೆ" (ಛಾಂ ೬-೮-೭) "ನಾನು ಬ್ರಹ್ಮವಾಗಿರುವೆನು" (ಬೃ ೧-೪-೧೦), "ಈ ಆತ್ಮನು ಬ್ರಹ್ಮವು" (ಬೃ ೨-೫-೧೯)-ಇವೇ ಮುಂತಾದ ವಾಕ್ಯಗಳಲ್ಲಿ (ಕಾಣಬರುವ) ಬ್ರಹ್ಮಾತ್ಮೈಕತ್ವವೆಂಬ ವಸ್ತುವನ್ನು ಹೇಳುವದರಲ್ಲಿ ತಾತ್ಪರ್ಯವುಳ್ಳ ಪದಸಮನ್ವಯಕ್ಕೆ ಬಾಧೆಯಾಗುವದು[5] ಅವಿದ್ಯಾನಿವೃತ್ತಿಯೇ (ಬ್ರಹ್ಮವಿದ್ಯೆಗೆ) **ಫಲವೆಂದು** ಹೇಳುವ "ಹೃದಯದ ಗಂಟು ಬಿಚ್ಚಿಕೊಳ್ಳುತ್ತದೆ, ಸಂಶಯಗಳೆಲ್ಲ ಕತ್ತರಿಸಿಹೋಗುತ್ತವೆ" (ಮುಂ ೨-೨-೮) ಎಂಬುದೇ ಮುಂತಾದ (ಶ್ರುತಿಗಳಿಗೆ)

---

1. ಆದೃಷ್ಟಿಯಿಂದ ಉಪಾಸನೆಮಾಡಬೇಕೆಂದು ಹೇಳಿರುವಂತೆ ಎಂದರ್ಥ. ಶ್ರುತಿಯಲ್ಲಿ ಹೇಳಿರುವ ಈ ದೃಷ್ಟಿಯು ಆತ್ಮಾನಾತ್ಮರ ಅನ್ಯೋನ್ಯಾಧ್ಯಾಸದಂತೆ ಭ್ರಾಂತಿಯಲ್ಲ

2 ಆತ್ಮನಲ್ಲಿ ಬ್ರಹ್ಮದೃಷ್ಟಿಯನ್ನಿಡುವ ಉಪಾಸನೆಯಲ್ಲ

3. ಪ್ರಾಣವು ಗಾಢನಿದ್ರೆಯಲ್ಲಿ ವಾಗಾದಿಗಳನ್ನೂ ವಾಯುವು ಪ್ರಲಯದಲ್ಲಿ ಅಗ್ನ್ಯಾದಿಗಳನ್ನೂ ತನ್ನಲ್ಲಿ ಅಡಗಿಸಿಕೊಳ್ಳುತ್ತದೆ ಎಂಬ ಸಂವರ್ಗ (ಅಡಗಿಸಿಕೊಳ್ಳುವ)ಕ್ರಿಯೆಯ ಸಂಬಂಧದಿಂದ ಪ್ರಾಣವನ್ನೂ ವಾಯುವನ್ನೂ ಒಂದೆಂದು ಧ್ಯಾನಿಸಬೇಕೆಂದು (ಛಾಂ. ೪-೩-೪) ಶ್ರುತಿಯಲ್ಲಿ ಹೇಳಿರುವ ಉಪಾಸನೆಯ ಜಾತಿಯದಲ್ಲ

4. ಉಪಾಂಶುಯಾಗವೇ ಮುಂತಾದವುಗಳಲ್ಲಿ ಉಪಯೋಗಿಸುವ ತುಪ್ಪವನ್ನು ಪತ್ನಿಯು ನೋಡುವದರಿಂದಲೇ ಅದರಲ್ಲಿ ಒಂದು ಸಂಸ್ಕಾರವಾಗುತ್ತದೆ. ಆತ್ಮನನ್ನು ಬ್ರಹ್ಮವೆಂದು ಉಪಾಸನೆ ಮಾಡಿದರೆ ಆತ್ಮನಲ್ಲಿ ಹಾಗೆಯೇ ಒಂದು ಸಂಸ್ಕಾರವುಂಟಾಗುವದೆಂದು ಹೇಳುವದಕ್ಕೆ ಬರುವದಿಲ್ಲ, ಆತ್ಮನಲ್ಲಿ ಯಾವ ಸಂಸ್ಕಾರವೂ ಆಗುವದಾಗಿಲ್ಲ.

5. ಬ್ರಹ್ಮಜ್ಞಾನವು ಸಂಪದಾದಿರೂಪದ ಉಪಾಸನೆಯಲ್ಲ, ಏಕೆಂದರೆ ವೇದಾಂತವಾಕ್ಯಗಳ ಪದಸಮನ್ವಯವು ಬ್ರಹ್ಮಾತ್ಮೈಕತ್ವದಲ್ಲಿಯೇ ಆಗುತ್ತದೆ ಎಂದು ಸೂತ್ರಾರ್ಥವನ್ನು ಹೇಳಿದಂತೆ ಆಯಿತು.

ವಿರುದ್ಧವಾಗುವದು. (ಜೀವನು) ಆ (ಬ್ರಹ್ಮದ) ಸ್ವರೂಪವನ್ನೇ ಪಡೆಯುತ್ತಾನೆಂದು ಹೇಳುವ "ಬ್ರಹ್ಮವನ್ನು ಅರಿಯುತ್ತಾನಾದರೆ ಬ್ರಹ್ಮವೇ ಆಗುವನು" (ಮುಂ. ೩-೨-೯) ಎಂಬುದೇ ಮುಂತಾದ (ಶ್ರುತಿಗಳು) ಸಂಪದಾದಿಗಳ (ಸ್ವರೂಪವಾದ ಉಪಾಸನೆಯನ್ನೂ ಇಲ್ಲಿ ಹೇಳಿದೆ) ಎಂಬ ಪಕ್ಷದಲ್ಲಿ ಸಮಂಜಸವಾಗಿ ಹೊಂದುವದೂ ಇಲ್ಲ[1]. ಆದ್ದರಿಂದ ಬ್ರಹ್ಮಾತ್ಮೈಕತ್ವಜ್ಞಾನವು ಸಂಪದಾದಿಗಳ ರೂಪವುಳ್ಳದ್ದಲ್ಲ.

## ಬ್ರಹ್ಮವು ಯಾವ ಕ್ರಿಯೆಗೂ ವಿಷಯವಲ್ಲ

(ಭಾಷ್ಯ)

೪೭ ಅತಃ ನ ಪುರುಷವ್ಯಾಪಾರತನ್ತ್ರಾ ಬ್ರಹ್ಮವಿದ್ಯಾ । ಕಿಂ ತರ್ಹಿ ಪ್ರತ್ಯಕ್ಷಾದಿಪ್ರಮಾಣವಿಷಯವಸ್ತುಜ್ಞಾನವತ್ ವಸ್ತುತನ್ತ್ರಾ । ಏವಂಭೂತಸ್ಯ ಬ್ರಹ್ಮಣಃ ತಜ್ಜ್ಞಾನಸ್ಯ ಚ ನ ಕಯಾಚಿತ್ ಯುಕ್ತ್ಯಾ ಶಕ್ಯಃ ಕಾರ್ಯಾನುಪ್ರವೇಶಃ ಕಲ್ಪಯಿತುಮ್ । ನ ಚ ವಿದಿಕ್ರಿಯಾಕರ್ಮತ್ವೇನ ಕಾರ್ಯಾನುಪ್ರವೇಶೋ ಬ್ರಹ್ಮಣಃ । "ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ" (ಕೇ ೧-೩) ಇತಿ ವಿದಿಕ್ರಿಯಾಕರ್ಮತ್ವಪ್ರತಿಷೇಧಾತ್, "ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್" (ಬೃ. ೨-೪-೧೩) ಇತಿ ಚ । ತಥಾ ಉಪಾಸ್ತಿಕ್ರಿಯಾಕರ್ಮತ್ವಪ್ರತಿಷೇಧೋಽಪಿ ಭವತಿ-"ಯದ್ವಾಚಾನಭ್ಯುದಿತಂ ಯೇನ ವಾಗಭ್ಯುದ್ಯತೇ" (ಕೇ ೧-೪) ಇತ್ಯವಿಷಯತ್ವಂ ಬ್ರಹ್ಮಣ ಉಪನ್ಯಸ್ಯ "ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ" (ಕೇ. ೧-೪) ಇತಿ । ಅವಿಷಯತ್ವೇ ಬ್ರಹ್ಮಣಃ ಶಾಸ್ತ್ರಯೋನಿತ್ವಾನುಪಪತ್ತಿಃ ಇತಿ ಚೇತ್ । ನ । ಅವಿದ್ಯಾಕಲ್ಪಿತಭೇದನಿವೃತ್ತಿಪರತ್ವಾತ್ ಶಾಸ್ತ್ರಸ್ಯ । ನ ಹಿ ಶಾಸ್ತ್ರಮ್ ಇದಂತಯಾ ವಿಷಯಭೂತಂ ಬ್ರಹ್ಮ ಪ್ರತಿಪಿಪಾದಯಿಷತಿ । ಕಿಂ ತರ್ಹಿ ಪ್ರತ್ಯಗಾತ್ಮತ್ವೇನ ಅವಿಷಯತಯಾ ಪ್ರತಿಪಾದಯತ್ ಅವಿದ್ಯಾಕಲ್ಪಿತಂ ವೇದ್ಯವೇದಿತೃವೇದನಾದಿಭೇದಮ್ ಅಪನಯತಿ । ತಥಾ ಚ ಶಾಸ್ತ್ರಮ್ "ಯಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನ ವೇದ ಸಃ । ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್" (ಕೇ. ೨-೩) "ನ ದೃಷ್ಟೇರ್ದ್ರಷ್ಟಾರಂ ಪಶ್ಯೇಃ ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ" (ಬೃ. ೩-೪-೨) ಇತಿ ಚೈವಮಾದಿ । ಅತಃ ಅವಿದ್ಯಾಕಲ್ಪಿತಸಂಸಾರಿತ್ವನಿವರ್ತನೇನ ನಿತ್ಯಮುಕ್ತಾತ್ಮಸ್ವರೂಪಸಮರ್ಪಣಾತ್ ನ ಮೋಕ್ಷಸ್ಯ ಅನಿತ್ಯತ್ವದೋಷಃ ॥

---

1. ಏಕೆಂದರೆ ಸಂಪದಾದಿವಾದಿಗಳ ಮತದಲ್ಲಿ ಜ್ಞಾನಮಾತ್ರದಿಂದ ಬ್ರಹ್ಮಪ್ರಾಪ್ತಿಯಾಗುವದಿಲ್ಲ; ವಾಕ್ಯಜ್ಞಾನವಾದ ಬಳಿಕ ಉಪಾಸನೆಯನ್ನು ಮಾಡಬೇಕೆಂದು ಅವರು ಹೇಳುತ್ತಾರೆ.

(ಭಾಷ್ಯ)

ಆದಕಾರಣ ಬ್ರಹ್ಮವಿದ್ಯೆಯು ಪುರುಷವ್ಯಾಪಾರಕ್ಕೆ ಅಧೀನವಾದದ್ದಲ್ಲ, ಮತ್ತೇನೆಂದರೆ ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳ ವಿಷಯವಾಗಿರುವ ವಸ್ತುಗಳ ಜ್ಞಾನದಂತೆ ವಸ್ತುವಿಗಧೀನವಾಗಿರುತ್ತದೆ. ಹೀಗಿರುವದರಿಂದ ಬ್ರಹ್ಮವಾಗಲಿ ಅದರ ಜ್ಞಾನವಾಗಲಿ ಕಾರ್ಯದಲ್ಲಿ ಸೇರಿರುವದೆಂದು ಯಾವ ಯುಕ್ತಿಯಿಂದಲೂ ಕಲ್ಪಿಸುವದಕ್ಕೆ ಆಗಲಾರದು[1]. ಬ್ರಹ್ಮವು ಅರಿಯುವ ದೆಂಬ ಕ್ರಿಯೆಗೆ ವಿಷಯವಾಗಿರುವದರಿಂದ ಕಾರ್ಯದಲ್ಲಿ ಸೇರಿರುವದೆಂದು ಹೇಳುವ ದಕ್ಕೂ ಆಗುವ ಹಾಗಿಲ್ಲ, ಏಕೆಂದರೆ "ಅದು ಅರಿತದ್ದಕ್ಕಿಂತಲೂ ಬೇರೆಯೇ ಅರಿಯಲ್ಪಡದ್ದಕ್ಕಿಂತಲೂ ಬೇರೆ" (ಕೇ. ೧-೩) ಎಂದೂ "ಯಾವದರಿಂದ ಇದೆಲ್ಲವನ್ನೂ ಅರಿತುಕೊಳ್ಳುತ್ತಾರೋ, ಅದನ್ನು ಏತರಿಂದ ಅರಿತುಕೊಂಡಾನು?" (ಬೃ. ೨-೪-೧೪) ಎಂದೂ (ಬ್ರಹ್ಮವು) ಅರಿಯುವ ಕ್ರಿಯೆಗೆ[2] ಕರ್ಮವಲ್ಲ ವೆಂದು (ಶಾಸ್ತ್ರದಲ್ಲಿ) ಹೇಳಿರುತ್ತದೆ. ಇದರಂತೆ ಉಪಾಸನೆ ಎಂಬ ಕ್ರಿಯೆಗೆ (ಅದು) ಕರ್ಮವೆಂಬುದರ ನಿಷೇಧವೂ (ಶ್ರುತಿಯಲ್ಲಿ)ರುತ್ತದೆ (ಹೇಗೆಂದರೆ) "ಯಾವದನ್ನು ವಾಕ್ಕಿನಿಂದ ಹೇಳುವದಾಗುವದಿಲ್ಲವೋ ಯಾವದರಿಂದ ವಾಕ್ಕು ಹೇಳಲ್ಪಡುವದೋ" ಎಂದು ಬ್ರಹ್ಮವು (ವಾಗಾದಿಗಳಿಗೆ) ವಿಷಯವಲ್ಲವೆಂದು ಹೇಳಿ "ಅದೇ ಬ್ರಹ್ಮವೆಂದು ನೀನು ಅರಿತುಕೊ, 'ಇದು' ಎಂದು ಯಾವದನ್ನು ಉಪಾಸನೆಮಾಡುವರೋ ಅದು (ಬ್ರಹ್ಮ)ವಲ್ಲ" (ಕೇ. ೧-೪) ಎಂದು (ಹೇಳಿದೆ)

(ಆಕ್ಷೇಪ): — ಬ್ರಹ್ಮವು (ಏತಕ್ಕೂ) ವಿಷಯವಲ್ಲದಿದ್ದರೆ (ಅದಕ್ಕೆ) ಶಾಸ್ತ್ರವು ಪ್ರಮಾಣ(ವೆಂದು ಸೂತ್ರದಲ್ಲಿ ಹೇಳಿರುವದು) ಹೊಂದುವದಿಲ್ಲವಲ್ಲ!

(ಪರಿಹಾರ). ಹಾಗಲ್ಲ. ಏಕೆಂದರೆ ಶಾಸ್ತ್ರಕ್ಕೆ ಅವಿದ್ಯೆಯಿಂದ ಕಲ್ಪಿತವಾಗಿರುವ ಭೇದವನ್ನು ಕಳೆಯುವದರಲ್ಲಿ ತಾತ್ಪರ್ಯವಿರುತ್ತದೆ ಶಾಸ್ತ್ರವು ಬ್ರಹ್ಮವನ್ನು ಇದು ಎಂದು ವಿಷಯವಾಗಿರುವದೆಂದು ತಿಳಿಸುವದಕ್ಕೆ ಹೊರಟಿಲ್ಲ; ಮತ್ತೇ ನೆಂದರೆ (ಅದು) ನಮ್ಮೊಳಗಿನ ಆತ್ಮನೇ ಆಗಿರುವದರಿಂದ ವಿಷಯವಲ್ಲ ವೆಂದು ತಿಳಿಸಿ ಅವಿದ್ಯಾಕಲ್ಪಿತವಾದ ವೇದ್ಯ (ಅರಿಯಲ್ಪಡತಕ್ಕದ್ದು), ವೇದಿತೃ

---

1. ಬ್ರಹ್ಮವಾಗಲಿ ಬ್ರಹ್ಮಜ್ಞಾನವಾಗಲಿ ಸ್ವರ್ಗದಂತೆ ಕ್ರಿಯೆಯಿಂದ ಉಂಟುಮಾಡಿ ಕೊಳ್ಳತಕ್ಕದ್ದಲ್ಲ.

2. ಅರಿಯುವದೆಂಬುದು ಕ್ರಿಯೆಯೆಂದು ಇಲ್ಲಿ ಒಪ್ಪಿಕೊಂಡಿದೆ. ಮುಂದೆ ಭಾ. ಭಾ. ೫೧ರಲ್ಲಿ ಜ್ಞಾನಕ್ಕೂ ವಿಧಿಸಬಹುದಾದ ಕ್ರಿಯೆಗೂ ಇರುವ ತಾರತಮ್ಯವನ್ನು ಸ್ಪಷ್ಟಪಡಿಸಿದೆ.

(ಅರಿಯುವವನು), ವೇದನ (ಅರಿವು)-ಮುಂತಾದ ಭೇದವನ್ನು ಕಳೆಯುತ್ತದೆ. ಆದ್ದರಿಂದಲೇ "ಯಾವನಿಗೆ (ಅದು) ತಿಳಿಯದಿರುವದೋ ಅವನಿಗೆ ತಿಳಿದಿರುವದು, ಯಾವನಿಗೆ ತಿಳಿದಿರುವದೋ ಅವನು ಅರಿಯನು. ಅರಿಯುವವರಿಗೆ ತಿಳಿದಿಲ್ಲ. ಅರಿಯದವರಿಗೆ ತಿಳಿದಿರುತ್ತದೆ" (ಕೇ ೨-೩) "ನೋಟವನ್ನು ನೋಡುವಾತನನ್ನು (ನೀನು) ನೋಡಲಾರೆ, ಅರಿವನ್ನು ಅರಿಯುವಾತನನ್ನು ನೀನು ಅರಿತುಕೊಳ್ಳಲಾರೆ" (ಬೃ. ೩-೪-೨) ಎಂದು ಮುಂತಾಗಿ[1] ಶಾಸ್ತ್ರವು (ಹೇಳುತ್ತದೆ). ಆದ್ದರಿಂದ ಅವಿದ್ಯೆಯಿಂದ ಕಲ್ಪಿತವಾದ ಸಂಸಾರಿತ್ವವನ್ನು ತೆಗೆದುಹಾಕಿ[2] ಯಾವಾಗಲೂ ಮುಕ್ತನಾಗಿಯೇ ಇರುವ ಆತ್ಮನ ಸ್ವರೂಪವನ್ನು ತಿಳಿಸಿಕೊಡುವದರಿಂದ ಮೋಕ್ಷವು ಅನಿತ್ಯವೆಂಬ ದೋಷವು (ಬರುವ)ದಿಲ್ಲ[3]

## ಮೋಕ್ಷವು ಉತ್ಪಾದ್ಯಾದಿವಿಲಕ್ಷಣವಾಗಿರುವದರಿಂದ ಕಾರ್ಯವಲ್ಲ

(ಭಾಷ್ಯ)

೪೮. ಯಸ್ಯ ತು ಉತ್ಪಾದ್ಯೋ ಮೋಕ್ಷಃ ತಸ್ಯ ಮಾನಸಂ ವಾಚಿಕಂ ಕಾಯಿಕಂ ವಾ ಕಾರ್ಯಮ್ ಅಪೇಕ್ಷತೇ ಇತಿ ಯುಕ್ತಮ್ । ತಥಾ ವಿಕಾರ್ಯತ್ವೇ ಚ । ತಯೋಃ ಪಕ್ಷಯೋಃ ಮೋಕ್ಷಸ್ಯ ಧ್ರುವಮ್ ಅನಿತ್ಯತ್ವಮ್ । ನ ಹಿ ದಧ್ಯಾದಿ ವಿಕಾರ್ಯಮ್ ಉತ್ಪಾದ್ಯಂ ವಾ ಘಟಾದಿ ನಿತ್ಯಂ ದೃಷ್ಟಂ ಲೋಕೇ । ನ ಚ ಆಪ್ಯತ್ವೇ ನಾಪಿ ಕಾರ್ಯಾಪೇಕ್ಷಾ । ಸ್ವಾತ್ಮರೂಪತ್ವೇ ಸತಿ ಅನಾಪ್ಯತ್ವಾತ್ । ಸ್ವರೂಪವ್ಯತಿರಿಕ್ತತ್ವೇಽಪಿ ಬ್ರಹ್ಮಣೋ ನಾಪ್ಯತ್ವಮ್ । ಸರ್ವಗತತ್ವೇನ ನಿತ್ಯಾಪ್ತಸ್ವರೂಪತ್ವಾತ್ ಸರ್ವೇಣ ಬ್ರಹ್ಮಣಃ ಆಕಾಶಸ್ಯೇವ ॥

(ಭಾಷ್ಯಾರ್ಥ)

ಆದರೆ ಯಾರ ಮತದಲ್ಲಿ[4] ಮೋಕ್ಷವು ಹೊಸದಾಗಿ ಉಂಟುಮಾಡಿಕೊಳ್ಳ

---

1. ಬ್ರಹ್ಮವು ಏತಕ್ಕೂ ವಿಷಯವಲ್ಲವೆಂದು.

2. ಜ್ಞಾನವು ಅಜ್ಞಾನವನ್ನು ಕಳೆಯುವದಲ್ಲದೆ ವಿಷಯವನ್ನು ಬೆಳಗುವದೆಂಬ ವ್ಯಾಪಾರವನ್ನೂ ಮಾಡುವದೆಂಬುದು ಸರಿಯಲ್ಲ, ಆತ್ಮನು ವಿಷಯನೂ ಅಲ್ಲ. ಮಾಂ. ಭಾ. ಭಾ. ೩೯, ಬೃ. ೧-೪-೭, ೧-೪-೧೦.

3. ಏಕೆಂದರೆ ಮೋಕ್ಷವೆಂದರೆ ನಿತ್ಯಪ್ರಾಪ್ತವಾಗಿರುವ ಆತ್ಮಸ್ವರೂಪವೇ ಆಗಿರುತ್ತದೆ.

4. ಸೇಶ್ವರಮೀಮಾಂಸಕರು, ಯೋಗಿಗಳು, ತಾರ್ಕಿಕರು ಮುಂತಾದವರ ಮತದಲ್ಲಿ.

ತಕ್ಕದ್ದೋ ಅವನ (ಮತದಲ್ಲಿ ಅದಕ್ಕೆ) ಮಾನಸ, ವಾಚಿಕ, ಅಥವಾ ಕಾಯಿಕ ಕರ್ಮವು ಬೇಕಾಗುತ್ತದೆ ಎಂಬುದು ಯುಕ್ತವಾಗುತ್ತದೆ. ಇದರಂತೆ (ಮೋಕ್ಷವು) ವಿಕಾರ್ಯ (ಇರುವದನ್ನು ಮಾರ್ಪಡಿಸಿಕೊಂಡು ಪಡೆಯತಕ್ಕದ್ದು) ಎಂಬ (ಪಕ್ಷ) ದಲ್ಲಿಯೂ (ಕರ್ಮವು ಬೇಕಾಗುವದೆಂಬುದು ಯುಕ್ತ). ಆ ಎರಡು ಪಕ್ಷಗಳಲ್ಲಿಯೂ ಮೋಕ್ಷವು ಅನಿತ್ಯವಾಗಬೇಕೆಂಬುದು ಅವಶ್ಯವಾಗಿರುತ್ತದೆ; ಏಕೆಂದರೆ ವಿಕಾರ್ಯ ವಾದ ಮೊಸರು ಮುಂತಾದದ್ದಾಗಲಿ, ಉತ್ಪಾದ್ಯವಾದ ಗಡಿಗೆ ಮುಂತಾದದ್ದಾಗಲಿ ನಿತ್ಯವಾಗಿರುವದು ಲೋಕದಲ್ಲಿ ಕಂಡಿರುವದಿಲ್ಲ. (ಮೋಕ್ಷವು) ಆಪ್ಯವಾಗಿ (ಹೋಗಿ ಪಡೆಯತಕ್ಕದ್ದಾಗಿ)ರುವದರಿಂದ ಅದಕ್ಕೆ ಕಾರ್ಯವು ಬೇಕು ಎಂಬುದೂ ಸರಿಯಲ್ಲ[1], ಏಕೆಂದರೆ (ಅದು) ತನ್ನ ಸ್ವರೂಪವೇ ಆಗಿರುವದರಿಂದ ಆಪ್ಯವಲ್ಲ. ಬ್ರಹ್ಮವು ತನ್ನ ಸ್ವರೂಪಕ್ಕಿಂತ ಬೇರೆ ಎಂದರೂ ಆಪ್ಯವಲ್ಲ; ಏಕೆಂದರೆ ಆಕಾಶದಂತೆ ಸರ್ವ ಗತವಾಗಿರುವದರಿಂದ ಎಲ್ಲರಿಗೂ ಅದು ನಿತ್ಯಪ್ರಾಪ್ತವಾಗಿರುವ ಸ್ವರೂಪದ್ದಾ ಗಿದೆ.

(ಭಾಷ್ಯ)

೪೯. ನಾಪಿ ಸಂಸ್ಕಾರ್ಯೋ ಮೋಕ್ಷಃ। ಯೇನ ವ್ಯಾಪಾರಮ್ ಅಪೇಕ್ಷೇತ। ಸಂಸ್ಕಾರೋ ಹಿ ನಾಮ ಸಂಸ್ಕಾರ್ಯಸ್ಯ ಗುಣಾಧಾನೇನ ವಾ ಸ್ಯಾತ್ ದೋಷಾಪ ನಯನೇನ ವಾ। ನ ತಾವತ್ ಗುಣಾಧಾನೇನ ಸಂಭವತಿ। ಅನಾಧೇಯಾತಿಶಯ ಬ್ರಹ್ಮಸ್ವರೂಪತ್ವಾತ್ ಮೋಕ್ಷಸ್ಯ। ನಾಪಿ ದೋಷಾಪನಯನೇನ। ನಿತ್ಯಶುದ್ಧಬ್ರಹ್ಮ ಸ್ವರೂಪತ್ವಾತ್ ಮೋಕ್ಷಸ್ಯ। ಸ್ವಾತ್ಮಧರ್ಮ ಏವ ಸನ್ ತಿರೋಭೂತೋ ಮೋಕ್ಷಃ ಕ್ರಿಯಯಾ ಆತ್ಮನಿ ಸಂಸ್ಕ್ರಿಯಮಾಣೇ ಅಭಿವ್ಯಜ್ಯತೇ। ಯಥಾ ಆದರ್ಶೇ ನಿಘರ್ಷಣ ಕ್ರಿಯಯಾ ಸಂಸ್ಕ್ರಿಯಮಾಣೇ ಭಾಸ್ವರತ್ವಂ ಧರ್ಮಃ ಇತಿ ಚೇತ್। ನ। ಕ್ರಿಯಾ ಶ್ರಯತ್ವಾನುಪಪತ್ತೇರಾತ್ಮನಃ। ಯದಾಶ್ರಯಾ ಕ್ರಿಯಾ ತಮ್ ಅವಿಕುರ್ವತೀ ನೈವ ಆತ್ಮಾನಂ ಲಭತೇ। ಯದಿ ಆತ್ಮಾ ಕ್ರಿಯಯಾ ವಿಕ್ರಿಯೇತ, ಅನಿತ್ಯತ್ವಮ್ ಆತ್ಮನಃ ಪ್ರಸಜ್ಯೇತ। "ಅವಿಕಾರ್ಯೋಽಯಮುಚ್ಯತೇ" (ಗೀ. ೨-೨೫) ಇತಿ ಚೈವಮಾದೀನಿ ವಾಕ್ಯಾನಿ ಬಾಧ್ಯೇರನ್। ತಚ್ಚ ಅನಿಷ್ಟಮ್। ತಸ್ಮಾತ್ ನ ಸ್ವಾಶ್ರಯಾ ಕ್ರಿಯಾ ಆತ್ಮನಃ ಸಂಭವತಿ। ಅನ್ಯಾಶ್ರಯಾಯಾಸ್ತು ಕ್ರಿಯಾಯಾಃ ಅವಿಷಯತ್ವಾತ್ ನ ತಯಾ ಆತ್ಮಾ ಸಂಸ್ಕ್ರಿಯತೇ। ನನು ದೇಹಾಶ್ರಯಯಾ

---

1. ಮುಕ್ತಿಯು ಸ್ವರ್ಗಾದಿಗಳಂತೆ ಉತ್ಪಾದ್ಯವೇ ಮುಂತಾದ ರೂಪದ್ದೆಂದು ಹೇಳುವ ವಾದಿಗಳು ಹಿಂದೆ ಇದ್ದರು. ಅದು ಆಪ್ಯವೆನ್ನುವವರು ಈಗಲೂ ಇರುತ್ತಾರೆ. ಆಚಾರ್ಯರ ಮತದಲ್ಲಿ ಆಪೇಕ್ಷಿಕವಾದ ಮುಕ್ತಿಯು ಉಪಾಸನೆಯಿಂದ ಆಪ್ಯ.

ಸ್ನಾನಾಚಮನಯಜ್ಞೋಪವೀತಾದಿಕಯಾ ಕ್ರಿಯಯಾ ದೇಹೀ ಸಂಸ್ಕ್ರಿಯಮಾಣೋ ದೃಷ್ಟಃ । ನ । ದೇಹಾದಿಸಂಹತಸ್ಯೈವ ಅವಿದ್ಯಾಗೃಹೀತಸ್ಯ ಆತ್ಮನಃ ಸಂಸ್ಕ್ರಿಯಮಾಣತ್ವಾತ್ । ಪ್ರತ್ಯಕ್ಷಂ ಹಿ ಸ್ನಾನಾಚಮನಾದೇಃ ದೇಹಸಮವಾಯಿತ್ವಮ್ । ತಯಾ ದೇಹಾಶ್ರಯಯಾ ತತ್ಸಂಹತ ಏವ ಕಶ್ಚಿತ್ ಅವಿದ್ಯಯಾ ಆತ್ಮತ್ವೇನ ಪರಿಗೃಹೀತಃ ಸಂಸ್ಕ್ರಿಯತೇ ಇತಿ ಯುಕ್ತಮ್ । ಯಥಾ ದೇಹಾಶ್ರಯಚಿಕಿತ್ಸಾನಿಮಿತ್ತೇನ ಧಾತುಸಾಮ್ಯೇನ ತತ್ಸಂಹತಸ್ಯ ತದಭಿಮಾನಿನ ಆರೋಗ್ಯಫಲಮ್ 'ಅಹಮ್ ಅರೋಗಃ' ಇತಿ ಯತ್ರ ಬುದ್ಧಿಃ ಉತ್ಪದ್ಯತೇ। ಏವಂ ಸ್ನಾನಾಚಮನಯಜ್ಞೋಪವೀತಾದಿನಾ 'ಅಹಂ ಶುದ್ಧಃ ಸಂಸ್ಕೃತಃ' ಇತಿ ಯತ್ರ ಬುದ್ಧಿಃ ಉತ್ಪದ್ಯತೇ ಸ ಸಂಸ್ಕ್ರಿಯತೇ । ಸ ಚ ದೇಹೇನ ಸಂಹತ ಏವ। ತೇನೈವ ಹಿ ಅಹಂಕರ್ತ್ರಾ ಅಹಂಪ್ರತ್ಯಯವಿಷಯೇಣ ಪ್ರತ್ಯಯಿನಾ ಸರ್ವಾಃ ಕ್ರಿಯಾಃ ನಿರ್ವರ್ತ್ಯನ್ತೇ। ತತ್ಫಲಂ ಚ ಸ ಏವ ಅಶ್ನಾತಿ "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ "(ಮುಂ ೩-೧-೧) ಇತಿ ಮನ್ತ್ರವರ್ಣಾತ್) "ಆತ್ಮೇನ್ದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ" (ಕಂ. ೧-೩-೪) ಇತಿ ಚ। ತಥಾ ಚ "ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" (ಶ್ವೇ ೬-೧೧) ಇತಿ। "ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಗ್ಂ ಶುದ್ಧಮಪಾಪವಿದ್ಧಮ್" (ಈ. ೮) ಇತಿ ಚೈತೌ ಮನ್ತ್ರೌ ಅನಾಧೇಯಾತಿಶಯತಾಂ ನಿತ್ಯಶುದ್ಧತಾಂ ಚ ಬ್ರಹ್ಮಣೋ ದರ್ಶಯತಃ । ಬ್ರಹ್ಮಭಾವಶ್ಚ ಮೋಕ್ಷಃ । ತಸ್ಮಾತ್ ನ ಸಂಸ್ಕಾರ್ಯೋಽಪಿ ಮೋಕ್ಷಃ ॥

(ಭಾಷ್ಯಾರ್ಥ)

ಮೋಕ್ಷವು ಸಂಸ್ಕಾರ್ಯವೂ ಅಲ್ಲ, ಹಾಗೆ (ಸಂಸ್ಕಾರ್ಯವಾಗಿ)ದ್ದರೆ ಅದಕ್ಕೆ (ಯಾವದಾದರೊಂದು) ಕೆಲಸವು ಬೇಕಾಗುತ್ತಿತ್ತು. ಸಂಸ್ಕಾರವೆಂದರೆ ಸಂಸ್ಕಾರ ಮಾಡಬೇಕಾಗಿರುವ (ವಸ್ತುವಿನಲ್ಲಿ) ಗುಣವನ್ನು ಸೇರಿಸುವದರಿಂದಲೋ ದೋಷವನ್ನು ತೆಗೆದುಹಾಕುವದರಿಂದಲೋ ಆಗಬೇಕಷ್ಟೆ. (ಪ್ರಕೃತದಲ್ಲಿ) ಮೊದಲನೆಯದಾಗಿ ಗುಣವನ್ನು ಸೇರಿಸುವದರಿಂದ ಆಗುವಂತಿಲ್ಲ, ಏಕೆಂದರೆ ಮೋಕ್ಷವು ಹೊಸದೇನನ್ನೂ ಸೇರಿಸುವದಕ್ಕೆ ಆಗದ ಬ್ರಹ್ಮಸ್ವರೂಪವಾಗಿರುತ್ತದೆ. ದೋಷವನ್ನು ತೆಗೆದುಹಾಕುವದರಿಂದಲೂ (ಇಲ್ಲಿ ಸಂಸ್ಕಾರವಾಗುವಂ)ತಿಲ್ಲ, ಏಕೆಂದರೆ ಮೋಕ್ಷವು ನಿತ್ಯಶುದ್ಧವಾದ ಬ್ರಹ್ಮಸ್ವರೂಪವಾಗಿರುತ್ತದೆ.

(ಆಕ್ಷೇಪ): ದರ್ಪಣವನ್ನು ಉಜ್ಜುವದೆಂಬ ಕ್ರಿಯೆಯಿಂದ (ಸಂಸ್ಕರಿಸಿದರೆ) ಹೊಳೆಯುವದೆಂಬ ಧರ್ಮವು ಹೇಗೆ (ಹೊರತೋರಿಕೊಳ್ಳುವದೋ ಅದರಂತೆ) ತನ್ನ ಆತ್ಮನ ಧರ್ಮವೇ ಆಗಿರುವ ಮೋಕ್ಷವು, ಕ್ರಿಯೆಯಿಂದ ಆತ್ಮನು ಸಂಸ್ಕೃತನಾದಾಗ ಹೊರತೋರಿಕೊಳ್ಳುವದು (ಎನ್ನಬಹುದಲ್ಲವೆ)[1] ?

(ಪರಿಹಾರ): ಕೂಡದು. ಏಕೆಂದರೆ ಆತ್ಮನು (ಯಾವ) ಕ್ರಿಯೆಗಾದರೂ ಆಶ್ರಯನೆಂಬುದೇ ಹೊಂದುವದಿಲ್ಲ ಕ್ರಿಯೆಯು ಯಾವದನ್ನು ಆಶ್ರಯಿಸಿರುವದೋ ಅದನ್ನು ಮಾರ್ಪಡಿಸದೆ ಹುಟ್ಟಲೇ ಆರದು. ಆದರೆ ಆತ್ಮನು ಕ್ರಿಯೆಯಿಂದ ಮಾರ್ಪಡುವದಾದರೆ ಆತ್ಮನು ಅನಿತ್ಯನೆಂದಾಗುವದು. "ಇವನು ಅವಿಕಾರ್ಯನೆನಿಸುವನು" (ಗೀ. ೨-೨೫) ಎಂಬುದೇ ಮುಂತಾದ ವಾಕ್ಯಗಳು ಬಾಧಿತವಾಗುವವು. ಮತ್ತು ಅದು (ಯಾರಿಗೂ) ಇಷ್ಟವಲ್ಲ. ಆದ್ದರಿಂದ ಆತ್ಮನಲ್ಲಿ ತನ್ನನ್ನು ಆಶ್ರಯಿಸಿರುವ ಕ್ರಿಯೆಯಿದೆ (ಎಂಬುದು) ಹೊಂದುವದಿಲ್ಲ. ಇನ್ನೊಂದನ್ನು ಆಶ್ರಯಿಸಿರುವ ಕ್ರಿಯೆಗೋ ಎಂದರೆ (ಆತ್ಮನು ಅದಕ್ಕೆ) ವಿಷಯನೇ ಅಲ್ಲವಾದ್ದರಿಂದ ಅದರಿಂದ ಆತ್ಮನಿಗೆ ಸಂಸ್ಕಾರವಾಗುವದೇ ಇಲ್ಲ.

(ಆಕ್ಷೇಪ) ದೇಹವನ್ನು ಆಶ್ರಯಿಸಿರುವ ಸ್ನಾನ, ಆಚಮನ, ಯಜ್ಞೋಪವೀತ (ಧಾರಣ)-ಮುಂತಾದ ಕ್ರಿಯೆಯಿಂದ ದೇಹಿಗೆ ಸಂಸ್ಕಾರವಾಗುವದು ಕಂಡುಬಂದಿದೆಯಲ್ಲ ![2]

(ಪರಿಹಾರ). ಹಾಗಲ್ಲ. ಏಕೆಂದರೆ ದೇಹಾದಿಗಳೊಡನೆ ಸಂಹತನಾಗಿಯೇ ಇರುವ[3] ಅವಿದ್ಯಾಗೃಹೀತನಾದ ಆತ್ಮನಿಗೆ ಸಂಸ್ಕಾರವಾಗುತ್ತದೆ ಹೇಗೆಂದರೆ, ಸ್ನಾನ, ಆಚಮನ-ಮುಂತಾದದ್ದು ದೇಹಕ್ಕೆ ಸಂಬಂಧಪಟ್ಟಿರುವದು ಪ್ರತ್ಯಕ್ಷವಾಗಿದೆಯಷ್ಟೆ ದೇಹವನ್ನು ಆಶ್ರಯಿಸಿರುವ ಆ (ಕ್ರಿಯೆ) ಯಿಂದ ಆ (ದೇಹದೊಡನೆ) ಸಂಹತನಾಗಿರುವ, ಅವಿದ್ಯೆಯಿಂದ ಆತ್ಮನೆಂದು (ಜನರು)

---

1. ಸಿದ್ಧಾಂತಿಯು ಹೇಳಿದ ಎರಡು ಫಲಗಳಲ್ಲದೆ ಸಂಸ್ಕಾರಕ್ಕೆ ಮೊದಲೇ ಇದ್ದದ್ದನ್ನು ವ್ಯಕ್ತಗೊಳಿಸುವದೆಂಬ ಮತ್ತೊಂದು ಫಲವೂ ಇದೆ ಎಂಬುದು ಪೂರ್ವಪಕ್ಷಿಯ ಅಭಿಪ್ರಾಯ. ದೃಷ್ಟಾಂತದಲ್ಲಿ ದರ್ಪಣವೆಂದರೆ ಕಂಚು ಮುಂತಾದ ಲೋಹಗಳಿಂದ ಮಾಡಿದ ಹೊಳಪಿನ ಪದಾರ್ಥ. ಅದನ್ನು ಇಟ್ಟಿಗೆಯ ಪುಡಿ ಮುಂತಾದವುಗಳಿಂದ ಉಜ್ಜಿ ಹೊಳಪು ಮಾಡಿಕೊಂಡು ಕನ್ನಡಿಯಂತೆ ಉಪಯೋಗಿಸುತ್ತಿದ್ದರು

2. ಹೀಗಿರುವಲ್ಲಿ ಅನ್ಯಾಶ್ರಯವಾದ ಕ್ರಿಯೆಯಿಂದ ಆತ್ಮನಿಗೆ ಸಂಸ್ಕಾರವಿಲ್ಲವೆಂಬುದು ಹೇಗೆ ?

3. ಮನೆಯ ಗೋಡೆ, ಕಂಬಗಳು-ಮುಂತಾದವುಗಳಂತೆ ಒಂದಕ್ಕೊಂದು ಸೇರಿಕೊಂಡು ಮತ್ತೊಬ್ಬನಿಗೆ ಪ್ರಯೋಜನವನ್ನುಂಟುಮಾಡುವ ವಸ್ತುಗಳ ಗುಂಪಿಗೆ ಸಂಘಾತವೆಂದು ಹೆಸರು , ಹಾಗೆ ಒಂದರೊಡನೊಂದು ಕೂಡಿರುವ ವಸ್ತುಗಳು 'ಸಂಹತ' ವೆನಿಸುವವು.

**ತಿಳಿದುಕೊಂಡಿರುವ ಯಾವನೋ ಒಬ್ಬನಿಗೇ**[1] **ಸಂಸ್ಕಾರವಾಗುತ್ತದೆ** ಎಂಬುದು ಯುಕ್ತವು. ಹೇಗೆ ದೇಹವವನ್ನಾಶ್ರಯಿಸಿಕೊಂಡು ಆಗುವ ಚಿಕಿತ್ಸೆಯ ನಿಮಿತ್ತದಿಂದಾಗುವ ಧಾತುಸಾಮ್ಯ[2]ವೆಂಬ ಆರೋಗ್ಯಫಲವು ಆ ದೇಹದೊಡನೆ ಸಂಹತನಾಗಿ ಅದೇ (ನಾನೆಂಬ) ಅಭಿಮಾನವುಳ್ಳವನಿಗೇ, ನಾನು (ಈಗ) ಆರೋಗ್ಯವುಳ್ಳವನಾದೆನು'' ಎಂಬ ಬುದ್ಧಿಯು ಯಾವನಿಗೆ ಉಂಟಾಗುವದೋ (ಅವನಿಗೇ ಆಗತಕ್ಕದ್ದೋ) ಹಾಗೆಯೇ ಯಾವನಿಗೆ ಸ್ನಾನ, ಆಚಮನ, ಯಜ್ಞೋಪವೀತ (ಧಾರಣ) ಮುಂತಾದದ್ದರಿಂದ "ನಾನು (ಈಗ) ಶುದ್ಧನಾದೆನು, ಸಂಸ್ಕೃತನಾದೆನು" ಎಂಬ ಬುದ್ಧಿಯುಂಟಾಗುವದೋ ಅವನಿಗೇ ಸಂಸ್ಕಾರವಾಗುತ್ತದೆ. ಅವನು ದೇಹದೊಡನೆ ಸಂಹತನಾಗಿಯೇ ಇರುವನು.[3] ಅಹಂಪ್ರತ್ಯಯಕ್ಕೆ ವಿಷಯನಾಗಿರುವ **(ಎಲ್ಲಾ) ಪ್ರತ್ಯಯಗಳಿಗೂ ಆಶ್ರಯನಾದ ಅದೇ ಅಹಂಕರ್ತೃವಿನಿಂದಲೇ ಎಲ್ಲಾ ಕ್ರಿಯೆಗಳೂ ಮಾಡಲ್ಪಡುವವು**[4], **ಅವುಗಳ ಫಲವನ್ನೂ ಅವನೇ ಅನುಭವಿಸುವನು**[5] "ಅವೆರಡರಲ್ಲಿ ಒಂದು ಸರಿಯಾದ ಪಿಪ್ಪಲವನ್ನು ತಿನ್ನುತ್ತಿರುವದು, ಇನ್ನೊಂದು ತಿನ್ನದೆ ನೋಡುತ್ತಿರುವದು'' (ಮುಂ. ೩-೧-೧) ಎಂಬ ಮಂತ್ರವರ್ಣವೂ[6] "ದೇಹ, ಇಂದ್ರಿಯ, ಮನಸ್ಸು-ಇವುಗಳಿಂದ ಕೂಡಿದವನನ್ನೇ ಭೋಕ್ತೃವೆಂದು ತಿಳಿದವರು ಹೇಳುವರು" (ಕ. ೧-೩-೪) ಎಂಬುದೂ[7] ಹೀಗೆಂದು ಹೇಳುತ್ತವೆ ಆದ್ದರಿಂದಲೇ "ಒಬ್ಬನೇ ದೇವನು ಸರ್ವಭೂತಗಳಲ್ಲಿಯೂ ಅಡಗಿರುತ್ತಾನೆ. (ಅವನೇ) ಸರ್ವವ್ಯಾಪಿಯು, ಸರ್ವಭೂತಗಳಿಗೂ ಒಳಗಿರುವ ಆತ್ಮನು, ಕರ್ಮಾಧ್ಯಕ್ಷನು, ಸರ್ವಭೂತಗಳಿಗೂ ಇರುವದಕ್ಕೆ ಆಧಾರವಾಗಿರುವವನು, ಸಾಕ್ಷಿಯು, ಚೈತನ್ಯಸ್ವರೂಪನು, ತಾನೊಬ್ಬನೇ ಇರುವವನು, ನಿರ್ಗುಣನು"(ಶ್ವೇ. ೬-೧೧)

---

1. ಕಲ್ಪಿತನಾದ ಸಂಸಾರಿಗೇ ಎಂದರ್ಥ.

2. ವಾತ, ಪಿತ್ಥ, ಶ್ಲೇಷ್ಮ ಎಂಬ ಧಾತುಗಳು ಸಮಪ್ರಮಾಣದಿಂದಿರುವದೇ ಆರೋಗ್ಯವೆಂದು ವೈದ್ಯರೆನ್ನುವರು.

3 ಆದರೆ ನಿಜವಾದ ಆತ್ಮನು ಸಂಹತನಲ್ಲ. ಆತ್ಮನ ಸನ್ನಿಧಿಯಲ್ಲಿ ದೇಹೇಂದ್ರಿಯಾದಿಗಳ ಸಂಘಾತವು ಆತ್ಮನಿಗಾಗಿ ಕೆಲಸಮಾಡುತ್ತಿರುವದು. ಆದ್ದರಿಂದ ಮನೆಯಲ್ಲಾದ ಸಂಸ್ಕಾರವು ಮನೆಯ ಯಜಮಾನನಿಗೆ ಸೇರದೆ ಇರುವಂತೆ ದೇಹಾಶ್ರಯವಾದ ಕ್ರಿಯೆಯಿಂದ ಆತ್ಮನಿಗೆ ಸಂಸ್ಕಾರವಾಗಲಾರದು.

4. ಅಹಂಪ್ರತ್ಯಯವಿಷಯನಲ್ಲದ ಆತ್ಮನಿಗೆ ಯಾವ ಕ್ರಿಯೆಯೂ ಇರುವದಿಲ್ಲ. ಗೀ. ಭಾ. ೨-೨೧ (ಭಾ ಭಾ. ೩೯)

5. ಅಧ್ಯಾಸಪೂರ್ವಕವಾಗಿಯೇ ಕರ್ತೃತ್ವಭೋಕ್ತೃತ್ವಗಳಾಗುವವೆಂದು ಉಪೋದ್ಘಾತದಲ್ಲಿ ವರ್ಣಿಸಿದ್ದರ ಸಾರವೇ ಇದು.

6. ಈ ಮಂತ್ರದಲ್ಲಿ ಅಹಂಪ್ರತ್ಯಯಗಮ್ಯನಾದ ಜೀವನಿಗೂ ಸಾಕ್ಷಿಯಾದ ಪರಮೇಶ್ವರನಿಗೂ ಇರುವ ಸ್ವಭಾವಭೇದವನ್ನು ತಿಳಿಸಿದೆ.

7. ದೇಹಾದಿಸಂಹತನಾದವನೇ ಭೋಕ್ತೃ ಎಂಬುದನ್ನು ಈ ಮಂತ್ರದಲ್ಲಿ ಹೇಳಿದೆ

ಎಂದೂ" ಅವನು ಸರ್ವವ್ಯಾಪಿಯು, ಪ್ರಕಾಶಯುತನು, ಶರೀರರಹಿತನು, ವ್ರಣವಿಲ್ಲದವನು, ನರಗಳಿಲ್ಲದವನು, ಶುದ್ಧನು, ಪಾಪದ ಹೊಡೆತವಿಲ್ಲದವನು "(ಈ ೮)ಎಂಬೀ ಎರಡು ಮಂತ್ರಗಳೂ ಬ್ರಹ್ಮದಲ್ಲಿ ಮತ್ತೆ ಯಾವ ಹೆಚ್ಚಿನ (ಗುಣವನ್ನೂ) ಸೇರಿಸುವ ಹಾಗಿಲ್ಲವೆಂದೂ (ಅದು) ನಿತ್ಯಶುದ್ಧವೆಂದೂ ತಿಳಿಸುತ್ತವೆ. ಬ್ರಹ್ಮಸ್ವರೂಪವೇ ಮೋಕ್ಷವು.[1] ಆದ್ದರಿಂದ ಮೋಕ್ಷವು ಸಂಸ್ಕಾರ್ಯವೂ ಅಲ್ಲ.

(ಭಾಷ್ಯ)

೫೦. ಅತೋಽನ್ಯತ್ ಮೋಕ್ಷಂ ಪ್ರತಿ ಕ್ರಿಯಾನುಪ್ರವೇಶದ್ವಾರಂ ನ ಶಕ್ಯಂ ಕೇನಚಿತ್ ದರ್ಶಯಿತುಮ್। ತಸ್ಮಾತ್ ಜ್ಞಾನಮೇಕಂ ಮುಕ್ತ್ವಾ ಕ್ರಿಯಾಯಾ ಗನ್ಧಮಾತ್ರಸ್ಯಾಪಿ ಅನುಪ್ರವೇಶಃ ಇಹ ನೋಪಪದ್ಯತೇ ||

(ಭಾಷ್ಯಾರ್ಥ)

ಈ (ನಾಲ್ಕಕ್ಕಿಂತ) ಬೇರೆಯಾಗಿ ಮೋಕ್ಷವನ್ನು ಕ್ರಿಯೆಯಲ್ಲಿ ಸೇರಿಸುವ ದ್ವಾರವನ್ನು ತೋರಿಸುವದಕ್ಕೆ ಯಾರಿಂದಲೂ ಆಗಲಾರದು.[2] ಆದ್ದರಿಂದ ಜ್ಞಾನವೊಂದನ್ನು ಬಿಟ್ಟರೆ ಇಲ್ಲಿ (ಯಾವ) ಕ್ರಿಯೆಯ ವಾಸನೆಯೂ ಒಳಹೊಗುವದು ಆಗುವಂತಿಲ್ಲ.

## ಜ್ಞಾನವೆಂಬುದು ವಿಧಿಸಬಹುದಾದ ಕ್ರಿಯೆಯಲ್ಲ

(ಭಾಷ್ಯ)

೫೧. ನನು ಜ್ಞಾನಂ ನಾಮ ಮಾನಸೀ ಕ್ರಿಯಾ। ನ। ವೈಲಕ್ಷಣ್ಯಾತ್। ಕ್ರಿಯಾ ಹಿ ನಾಮ ಸಾ ಯತ್ರ ವಸ್ತುಸ್ವರೂಪನಿರಪೇಕ್ಷೈವ ಚೋದ್ಯತೇ, ಪುರುಷಚಿತ್ತವ್ಯಾಪಾರಾಧೀನಾ ಚ। ಯಥಾ। "ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ ತಾಂ ಮನಸಾ ಧ್ಯಾಯೇದ್ವಷಟ್ಕರಿಷ್ಯನ್" (ಐ. ಬ್ರಾ ೩-೮-೧) "ಸನ್ಧ್ಯಾಂ ಮನಸಾ

---

1. ಆದ್ದರಿಂದ ಮತ್ತೊಂದರಲ್ಲಿರುವ ಕ್ರಿಯೆಯಿಂದ ನಿತ್ಯಶುದ್ಧವಾಗಿರುವ ಮೋಕ್ಷವು ಸಂಸ್ಕೃತವಾಗುವದೆಂದು ಹೇಳುವದು ಸಾಹಸದ ಮಾತು ಎಂದು ಭಾವ. ಬ್ರಹ್ಮಭಾವವೇ ಮೋಕ್ಷವು ಎಂಬ ವಾಕ್ಯಕ್ಕೆ " ಬ್ರಹ್ಮವೇ ಮೋಕ್ಷವೆನಿಸುವದು " ಎಂದು ಅಭಿಪ್ರಾಯ

2. ಉತ್ಪಾದ್ಯವೇ ಮುಂತಾದ ನಾಲ್ಕೇ ಕ್ರಿಯೆಯ ಕಾರ್ಯವೆಂದು ಆಚಾರ್ಯರು ತಮ್ಮ ಭಾಷ್ಯಗಳಲ್ಲಿ ಮತ್ತೆಮತ್ತೆ ಹೇಳಿರುತ್ತಾರೆ. ಬೃ. ಭಾ ೩-೩-೧, ಈ. ಭಾ. ಭಾ. ೧, ತೈ. ಭಾ. ೧-೧೨, ಮುಂ. ಭಾ. ೨-೧-೧೨.

ಧ್ಯಾಯೇತ್ "(?)ಇತಿ ಚೈವಮಾದಿಷು । ಧ್ಯಾನಂ ಚಿನ್ತನಂ ಯದ್ಯಪಿ ಮಾನಸಮ್, ತಥಾಪಿ ಪುರುಷೇಣ ಕರ್ತುಮ್ ಅಕರ್ತುಮ್ ಅನ್ಯಥಾ ವಾ ಕರ್ತುಂ ಶಕ್ಯಮ್ । ಪುರುಷತನ್ತ್ರತ್ವಾತ್ । ಜ್ಞಾನಂ ತು ಪ್ರಮಾಣಜನ್ಯಮ್ । ಪ್ರಮಾಣಂ ಚ ಯಥಾಭೂತವಸ್ತುವಿಷಯಮ್ । ಅತಃ ಜ್ಞಾನಂ ಕರ್ತುಮ್ ಅಕರ್ತುಮ್ ಅನ್ಯಥಾ ವಾ ಕರ್ತುಮ್ ಅಶಕ್ಯಮ್ । ಕೇವಲಂ ವಸ್ತುತನ್ತ್ರಮೇವ ತತ್, ನ ಚೋದನಾತನ್ತ್ರಮ್ ನಾಪಿ ಪುರುಷತನ್ತ್ರಮ್ । ತಸ್ಮಾತ್ ಮಾನಸತ್ವೇಽಪಿ ಜ್ಞಾನಸ್ಯ ಮಹತ್ ವೈಲಕ್ಷಣ್ಯಮ್। ಯಥಾ ಚ "ಪುರುಷೋ ವಾವ ಗೌತಮಾಗ್ನಿಃ (ಛಾಂ. ೫ ೭-೧), " ಯೋಷಾ ವಾವ ಗೌತಮಾಗ್ನಿಃ (ಛಾ ೫-೮-೧) ಇತ್ಯತ್ರ ಯೋಷಿತ್ಪುರುಷಯೋಃ ಅಗ್ನಿಬುದ್ಧಿಃ ಮಾನಸೀ ಭವತಿ । ಕೇವಲಚೋದನಾ ಜನ್ಯತ್ವಾತ್ ಕ್ರಿಯೈವ ಸಾ ಪುರುಷತನ್ತ್ರಾ ಚ । ಯಾ ತು ಪ್ರಸಿದ್ಧೇ ಅಗ್ನೌ ಅಗ್ನಿ ಬುದ್ಧಿಃ, ನ ಸಾ ಚೋದನಾತನ್ತ್ರಾ ನಾಪಿ ಪುರುಷತನ್ತ್ರಾ ಕಿಂತರ್ಹಿ ಪ್ರತ್ಯಕ್ಷವಿಷಯ ವಸ್ತುತನ್ತ್ರೈವ ಇತಿ ಜ್ಞಾನಮೇವೈತತ್ ನ ಕ್ರಿಯಾ । ಏವಂ ಸರ್ವಪ್ರಮಾಣವಿಷಯ ವಸ್ತುಷು ವೇದಿತವ್ಯಮ್ ! ತತ್ರ ಏವಂ ಸತಿ ಯಥಾಭೂತಬ್ರಹ್ಮಾತ್ಮವಿಷಯಮಪಿ ಜ್ಞಾನಂ ನ ಚೋದನಾತನ್ತ್ರಮ್ । ತದ್ವಿಷಯೇ ಲಿಙಾದಯಃ ಶ್ರೂಯಮಾಣಾ ಅಪಿ ಅನಿಯೋಜ್ಯವಿಷಯತ್ವಾತ್ ಕುಣ್ಠೀಭವನ್ತಿ ಉಪಲಾದಿಷು ಪ್ರಯುಕ್ತಕ್ಷುರ ತೈಕ್ಷ್ಣ್ಯಾದಿವತ್ । ಅಹೇಯಾನುಪಾದೇಯವಸ್ತುವಿಷಯತ್ವಾತ್ ॥

(ಭಾಷ್ಯಾರ್ಥ)

(ಆಕ್ಷೇಪ) : ಜ್ಞಾನವೆಂಬುದು ಮನಸ್ಸಿನ ಕ್ರಿಯೆಯಲ್ಲವೆ ? [1]

(ಪರಿಹಾರ) : ಅಲ್ಲ. ಏಕೆಂದರೆ (ಕ್ರಿಯೆಗೂ ಅದಕ್ಕೂ) ವೈಲಕ್ಷಣ್ಯವಿದೆ. ಹೇಗೆಂದರೆ, ವಸ್ತುವಿನ ಸ್ವರೂಪವನ್ನು ಲೆಕ್ಕಿಸದೆ ಯಾವದು ವಿಹಿತವಾಗಿರುವದೋ (ಯಾವದು) ಮನುಷ್ಯನ ಚಿತ್ತವ್ಯಾಪಾರಕ್ಕೆ ಅಧೀನವಾಗಿಯೂ ಇರುವದೋ ಅದೇ ಕ್ರಿಯೆ ಎಂಬುದು. ಉದಾಹರಣೆಗೆ " ಯಾವ ದೇವತೆಗಾಗಿ ಹವಿಸ್ಸನ್ನು (ಕೊಡ ಬೇಕೆಂದು) ತೆಗೆದುಕೊಳ್ಳಲಾಗಿದೆಯೋ ಆ ದೇವತೆಯನ್ನು ವಷಟ್ಕರಿಸಬೇಕೆಂದಿರುವ ವವನು[2] ಮನಸ್ಸಿನಲ್ಲಿ ಧ್ಯಾನಮಾಡಬೇಕು " (ಐ. ಬ್ರಾ. ೩-೮-೧) ; " ಸಂಧ್ಯೆ

---

1. ಧ್ಯಾನ, ಜ್ಞಾನ–ಇವೆರಡನ್ನೂ ಶ್ರುತಿಯಲ್ಲಿ ಜ್ಞಾನವೆಂದೇ ಕರೆದಿರುವದು ಕಂಡು ಬರುವದರಿಂದಲೂ ಪೂರ್ವಪಕ್ಷಿಯ ಮತದಲ್ಲಿ ಧ್ಯಾನಕ್ಕಿಂತ ಬೇರೆಯಾದ ಮೋಕ್ಷಕಾರಣ ಜ್ಞಾನವು ಇಲ್ಲದ್ದರಿಂದಲೂ ಈ ಶಂಕೆಗೆ ಸಮಾಧಾನವನ್ನು ಹೇಳಬೇಕಾಗಿದೆ.

2. ಹೋತೃವು 'ವಷಟ್' ಎಂದು ಕೂಗಿದ ಒಡನೆ ಅಧ್ವರ್ಯುವು ಹವಿಸ್ಸನ್ನು ದೇವತೆಗೆ ಹಾಕುತ್ತಾನೆ. ಆ ದೇವತೆಯನ್ನು ಹೋತೃವು ಧ್ಯಾನಮಾಡಬೇಕೆಂದು ಇಲ್ಲಿ ವಿಧಿಸಿದೆ.

ಯನ್ನು ಮನಸ್ಸಿನಲ್ಲಿ ಧ್ಯಾನಮಾಡಬೇಕು" (?) ಎಂಬುದೇ ಮುಂತಾದ (ವಚನ) ಗಳಲ್ಲಿ (ವಿಧಿಸಿರುವದು ಧ್ಯಾನವು). ಧ್ಯಾನವೆಂದರೆ ಚಿಂತಿಸುವದು; (ಅದು) ಮನಸ್ಸಿಗೆ ಸಂಬಂಧಿಸಿದ್ದೇ ಆದರೂ ಮನುಷ್ಯನು ಮಾಡುವದಕ್ಕೂ ಬಿಡುವ ದಕ್ಕೂ ಅಥವಾ ಬೇರೊಂದು ಬಗೆಯಲ್ಲಿ ಮಾಡುವದಕ್ಕೂ ಬರುತ್ತದೆ; ಏಕೆಂದರೆ (ಅದು) ಪುರುಷತಂತ್ರವಾಗಿರುತ್ತದೆ.[1] ಜ್ಞಾನವಾದರೋ ಪ್ರಮಾಣ ದಿಂದ ಉಂಟಾಗತಕ್ಕದ್ದು; ಮತ್ತು (ಆ) ಪ್ರಮಾಣವು ವಸ್ತು ಹೇಗಿರು ವದೋ ಹಾಗೆಯೇ (ಅದನ್ನು) ವಿಷಯೀಕರಿಸುವದು. ಆದ್ದರಿಂದ ಜ್ಞಾನವು ಮಾಡುವದಕ್ಕಾಗಲಿ ಬಿಡುವದಕ್ಕಾಗಲಿ ಅಥವಾ ಬೇರೊಂದು ಬಗೆಯಲ್ಲಿ ಮಾಡುವದಕ್ಕಾಗಲಿ ಬರುವದಲ್ಲ. ಅದು ಕೇವಲ ವಸ್ತುತಂತ್ರವಾಗಿಯೇ ಇರುತ್ತದೆಯೇ ಹೊರತು ಚೋದನಾತಂತ್ರವೂ ಅಲ್ಲ, ಪುರುಷತಂತ್ರವೂ ಅಲ್ಲ.[2] ಆದ್ದರಿಂದ ಜ್ಞಾನವು ಮಾನಸವಾದರೂ ಕ್ರಿಯೆಗೂ ಅದಕ್ಕೂ ಬಹಳ ವೈಲಕ್ಷಣ್ಯವಿದೆ. (ಇದಕ್ಕೆ) ಮತ್ತೊಂದು ಉದಾಹರಣೆ: "ಎಲೈ ಗೌತಮನೆ, ಪುರುಷನೇ ಅಗ್ನಿಯು" (ಛಾಂ. ೫-೭-೧), "ಎಲೈ ಗೌತಮನೆ, ಸ್ತ್ರೀಯೇ ಅಗ್ನಿಯು" (ಛಾಂ. ೫-೮-೧) ಎಂಬಲ್ಲಿ ಸ್ತ್ರೀಪುರುಷರಲ್ಲಿ ಮಾನಸವಾದ ಅಗ್ನಿ ಬುದ್ಧಿಯುಂಟಾಗುವದಷ್ಟೆ. ಅದು ಬರಿಯ ವಿಧಿಯಿಂದಲೇ ಉಂಟಾಗುವದರಿಂದ ಕ್ರಿಯೆಯೇ (ಆಗಿರುತ್ತದೆ), ಮತ್ತು ಪುರುಷತಂತ್ರವೂ ಆಗಿರುತ್ತದೆ.[3] ಆದರೆ ಪ್ರಸಿದ್ಧ ವಾದ ಅಗ್ನಿಯಲ್ಲಿ ಅಗ್ನಿ ಎಂಬ ಬುದ್ಧಿಯುಂಟಾಗುವದಲ್ಲ, ಅದು ಚೋದನಾತಂತ್ರ ವಲ್ಲ, ಪುರುಷತಂತ್ರವೂ ಅಲ್ಲ, ಮತ್ತೇನೆಂದರೆ ಪ್ರತ್ಯಕ್ಷಕ್ಕೆ ವಿಷಯವಾದ ವಸ್ತುವಿಗೆ ಅಧೀನವಾಗಿಯೇ ಇರುವದರಿಂದ ಇದು ಜ್ಞಾನವೇ, ಕ್ರಿಯೆಯಲ್ಲ. ಎಲ್ಲಾ ಪ್ರಮಾಣ ವಿಷಯವಾದ ವಸ್ತುಗಳ (ಜ್ಞಾನವನ್ನೂ) ಹೀಗೆಯೇ ತಿಳಿಯಬೇಕು. ಇದು ಹೀಗಿರುವ ದರಿಂದ ಇದ್ದದ್ದು ಇದ್ದಂತೆ ತಿಳಿಸುವ ಬ್ರಹ್ಮಾತ್ಮವಿಷಯವಾದ ಜ್ಞಾನವೂ ಚೋದನಾ

1. ಪುರುಷನಿಗೆ ಅಧೀನ. ಹೀಗೆಯೇ ಚೋದನಾತಂತ್ರ, ವಸ್ತುತಂತ್ರ-ಎಂಬಲ್ಲಿರುವ ತಂತ್ರಶಬ್ದಕ್ಕೆ ಅರ್ಥವನ್ನು ಮಾಡಿಕೊಳ್ಳಬೇಕು

2. ಭಾ.ಭಾ. ೨೭ರಲ್ಲಿ ಕರ್ತವ್ಯಕ್ಕೂ ಭೂತವಸ್ತುಜ್ಞಾನಕ್ಕೂ ಇರುವ ತಾರತಮ್ಯ ವನ್ನು ವಿವರಿಸಿರುವ ಬಗೆಯನ್ನು ಇದಕ್ಕೆ ಹೋಲಿಸಿರಿ.

3. ಛಾಂದೋಗ್ಯದಲ್ಲಿ ಪಂಚಾಗ್ನಿವಿದ್ಯೆಯಲ್ಲಿ ವಿಧಿಸಿರುವ ಧ್ಯಾನವಿದು. ಸ್ತ್ರೀಪುರುಷರು ಅಗ್ನಿಯಲ್ಲದಿದ್ದರೂ ಅಗ್ನಿಯೆಂದು ಧ್ಯಾನಿಸಬೇಕೆಂದು ಅಲ್ಲಿ ವಿಧಿಸಿರುವದರಿಂದ ಆ ಧ್ಯಾನವು ಚೋದನಾತಂತ್ರ ಮತ್ತು ಪುರುಷತಂತ್ರ.

ತಂತ್ರವಲ್ಲ. ಆದರ ವಿಷಯದಲ್ಲಿ ಶ್ರುತಿಯಲ್ಲಿರುವ ಲಿಙ್ ಮುಂತಾದವುಗಳು[1] (ಅದು) ಕಟ್ಟುಮಾಡುವದಕ್ಕಾಗುವ ವಿಷಯವಲ್ಲವಾದ್ದರಿಂದ ಕಲ್ಲು ಮುಂತಾದವುಗಳಲ್ಲಿ ಉಪಯೋಗಿಸಿದ ಕ್ಷೌರದ ಕತ್ತಿಯ ಅಲುಗೇ ಮುಂತಾದವುಗಳಂತೆ (ಅಲ್ಲಿ ಅವು) ಮೊಂಡಾಗುತ್ತವೆ[2]. ಏಕೆಂದರೆ (ಅವಕ್ಕೆ) ಬಿಡತಕ್ಕದ್ದೂ ಅಲ್ಲದ, ತೆಗೆದುಕೊಳ್ಳತಕ್ಕದ್ದೂ ಅಲ್ಲದ (ಬ್ರಹ್ಮ) ವಸ್ತುವೇ (ಇಲ್ಲಿ) ವಿಷಯವಾಗಿರುತ್ತದೆ[3]

## ವಿಧಿಯಂತಿರುವ ಶ್ರವಣಾದಿವಚನಗಳ ಪ್ರಯೋಜನ

(ಭಾಷ್ಯ)

೫೨. ಕಿಮರ್ಥಾನಿ ತರ್ಹಿ "ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ" (ಬೃ. ೨-೪-೫) ಇತ್ಯಾದೀನಿ ವಿಧಿಚ್ಛಾಯಾನಿ ವಚನಾನಿ। ಸ್ವಾಭಾವಿಕಪ್ರವೃತ್ತಿವಿಷಯವಿಮುಖೀಕರಣಾರ್ಥಾನಿ ಇತಿ ಬ್ರೂಮಃ। ಯೋ ಹಿ ಬಹಿರ್ಮುಖಃ ಪ್ರವರ್ತತೇ ಪುರುಷಃ ಇಷ್ಟಂ ಮೇ ಭೂಯಾತ್, ಅನಿಷ್ಟಂ ಮಾ ಭೂತ್ ಇತಿ, ನ ಚ ತತ್ರ ಆತ್ಯನ್ತಿಕಂ ಪುರುಷಾರ್ಥಂ ಲಭತೇ, ತಮ್ ಆತ್ಯನ್ತಿಕಪುರುಷಾರ್ಥವಾಞ್ಛಿನಂ ಸ್ವಾಭಾವಿಕಕಾರ್ಯಕರಣಸಙ್ಘಾತಪ್ರವೃತ್ತಿಗೋಚರಾತ್ ವಿಮುಖೀಕೃತ್ಯ ಪ್ರತ್ಯಗಾತ್ಮಸ್ರೋತಸ್ತಯಾ ಪ್ರವರ್ತಯನ್ತಿ "ಆತ್ಮಾ ವಾ ಅರೇ ದ್ರಷ್ಟವ್ಯಃ" (ಬೃ. ೨-೪-೫) ಇತ್ಯಾದೀನಿ। ತಸ್ಯ ಆತ್ಮಾನ್ವೇಷಣಾಯ ಪ್ರವೃತ್ತಸ್ಯ ಅಹೇಯಮನುಪಾದೇಯಂ ಚ ಆತ್ಮತತ್ತ್ವಮ್ ಉಪದಿಶ್ಯತೇ "ಇದಂ ಸರ್ವಂ ಯದಯಮಾತ್ಮಾ"

---

1. ವಿಧಿಯ ಗುರುತೆಂದು ಮೀಮಾಂಸಕರು ತಿಳಿಯುವ ಲಿಙ್, ಲೋಟ್, ತವ್ಯ ಎಂಬ ಪ್ರತ್ಯಯಗಳು. ಈ ಗುರುತುಗಳು ಇಲ್ಲದ ಕಡೆಯಲ್ಲಿಯೂ ಕೆಲವು ವೇಳೆ ಕರ್ಮಕಾಂಡದಲ್ಲಿ ವಿಧಿಯನ್ನು ಕಲ್ಪಿಸಬೇಕಾಗುತ್ತದೆ. ಕರ್ಮಕಾಂಡದಲ್ಲಿ ವಿಧಿ ಮುಖ್ಯವಾಗಿರುವಂತೆ ಇಲ್ಲಿ ಬ್ರಹ್ಮಸ್ವರೂಪವು ಮುಖ್ಯವು, ಅದು ವಿಧಿಗೆ ವಿಷಯವಲ್ಲದ್ದರಿಂದ ಅದರ ವಿಷಯಕ್ಕೆ ಲಿಙಾದಿಗಳು ಕಾಣುವಲ್ಲಿ ಕೂಡ ವಿಧಿಯನ್ನು ಕಲ್ಪಿಸುವಹಾಗಿಲ್ಲ.

2. ಕ್ಷೌರದ ಕತ್ತಿಗೆ ಕಲ್ಲು ಮುಂತಾದವುಗಳು ಹೇಗೆ ವಿಷಯವಲ್ಲವೋ ಹಾಗೆ ವಿಧಿಗೆ ಆತ್ಮವಸ್ತುಜ್ಞಾನವು ವಿಷಯವಲ್ಲ ಎಂದು ಭಾವ.

3. ಜ್ಞಾನವು ವಿಧೇಯವಲ್ಲವೆಂಬುದಕ್ಕೆ ಅದು ಪುರುಷತಂತ್ರವಲ್ಲವೆಂಬುದೊಂದೇ ಕಾರಣವಲ್ಲ, ಜ್ಞಾನಕ್ಕೆ ವಿಷಯವಾದ ಬ್ರಹ್ಮವು ಅಹೇಯವೂ ಅನುಪಾದೇಯವೂ ಆಗಿರುವದರಿಂದ ಅದರ ವಿಷಯಕ್ಕೆ ಯಾವ ಕ್ರಿಯೆಯನ್ನು ವಿಧಿಸುವದೂ ವ್ಯರ್ಥ ಎಂಬುದೂ ಒಂದು ಕಾರಣ.

(ಬೃ. ೨-೪-೬), "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ ಕೇನ ಕಂ ವಿಜಾನೀಯಾತ್ ವಿಜ್ಞಾತಾರಮರೇ ಕೇನ ವಿಜಾನೀಯಾತ್" (ಬೃ. ೪-೫-೧೫) "ಆಯಮಾತ್ಮಾ ಬ್ರಹ್ಮ" (ಬೃ. ೨-೫-೧೯) ಇತ್ಯಾದಿಭಿಃ ||

(ಭಾಷ್ಯಾರ್ಥ)

(ಆಕ್ಷೇಪ)[1]—ಹಾಗಾದರೆ "ಎಲೆ (ಮೈತ್ರೇಯಿ), ಆತ್ಮನನ್ನೇ ನೋಡಬೇಕು, ಕೇಳಬೇಕು," (ಬೃ. ೨-೪-೫) ಎಂಬುದೇ ಮುಂತಾದ ವಿಧಿಯ ಹಾಗಿರುವ ವಚನಗಳ ಪ್ರಯೋಜನವೇನು ?[2]

(ಪರಿಹಾರ) :—ಸ್ವಾಭಾವಿಕವಾದ[3] ಪ್ರವೃತ್ತಿಯ ವಿಷಯದಿಂದ ಹಿಂದಿರುಗಿಸುವದಕ್ಕೆ (ಅವು ಬಂದಿವೆ) ಎಂದು ಹೇಳುತ್ತೇವೆ.[4] (ಇದರ ವಿವರ): 'ನನಗೆ ಇಷ್ಟವಾದದ್ದು ಆಗಲಿ, ಅನಿಷ್ಟವಾದದ್ದು ಆಗದಿರಲಿ' ಎಂದು ಯಾವ ಪುರುಷನು ಹೊರಮುಖವಾಗಿ ಹೊರಡುವನೋ, ಆದರೆ ಅಲ್ಲಿ ಆತ್ಯಂತಿಕವಾದ[5] ಪುರುಷಾರ್ಥವನ್ನು ಹೊಂದದಿರುವನೋ, ಆತ್ಯಂತಿಕವಾದ ಪುರುಷಾರ್ಥವನ್ನು ಬಯಸುತ್ತಿರುವ ಆ (ಪುರುಷನನ್ನು) "ಆತ್ಮನನ್ನೇ ನೋಡಬೇಕು (ಬೃ. ೨-೪-೩) ಮುಂತಾದವುಗಳು ಸ್ವಾಭಾವಿಕವಾದ ಕಾರ್ಯಕರಣಸಂಘಾತದ[6] ಪ್ರವೃತ್ತಿಯ ವಿಷಯದಿಂದ ಹಿಂತಿರುಗಿಸಿ ಒಳಗಿನ ಆತ್ಮನ ಕಡೆಗೇ ಪ್ರವಾಹರೂಪವಾಗಿ (ಹರಿಯುವ ಹಾಗೆ) ಮಾಡುತ್ತವೆ. (ಹೀಗೆ) ಆತ್ಮನನ್ನೇ ಹುಡುಕುವದಕ್ಕೆ ಹೊರಟಿರುವ ಆತನಿಗೆ ಬಿಡತಕ್ಕದ್ದಲ್ಲದ ತೆಗೆದುಕೊಳ್ಳತಕ್ಕದ್ದಲ್ಲದ ಆತ್ಮತತ್ತ್ವವನ್ನು "ಇವೆಲ್ಲವೂ ಈ ಆತ್ಮನೆಂಬುದೇ" (ಬೃ. ೨-೪-೬) "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ನೋಡಿಯಾನು ? . . . ಎಲೆ, ಅರಿಯುವವ

---

1. ಶ್ರವಣಾದಿಜ್ಞಾನವನ್ನು ನಿಜವಾಗಿ ವಿಧಿಸಿಲ್ಲ ಎಂಬ ಸಿದ್ಧಾಂತಿಯ ಅಭಿಪ್ರಾಯವನ್ನು ಆಕ್ಷೇಪಿಸುವದಕ್ಕಾಗಿ ಹೀಗೆಂದಿದೆ. ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ಇವು ವಿಧಿಗಳೇ.

2. ಲಿಙಾದಿಗಳಿರುವ ಇಂಥ ವಾಕ್ಯಗಳು ವಿಧಿಯಲ್ಲದಿದ್ದರೆ ಅಪ್ರಮಾಣವಾಗುವವಲ್ಲ !—ಎಂದು ಅಭಿಪ್ರಾಯ.

3. ಅವಿದ್ಯಾವಸ್ಥೆಯಲ್ಲಿ ಸ್ವಭಾವದಿಂದಾಗುವ.

4. ಹಿಂತಿರುಗಿಸುವ ಮಟ್ಟಿಗೆ ಇಲ್ಲಿ ವಿಧಿಯ ಕಾರ್ಯವಿರುತ್ತದೆ ಎಂದು ಭಾವ.

5. ಎಂದಿಗೂ ಕೊನೆಗಾಣದ ಎಂದರ್ಥ. ಬಹಿರ್ಮುಖವಾಗಿ ಹೊರಟವನಿಗೆ ವಿಷಯಗಳಿಂದ ಸಿಕ್ಕಬಹುದಾದ ಪುರುಷಾರ್ಥವು ಅನಿತ್ಯವಾಗಿರುತ್ತದೆ.

6. ದೇಹ, ಇಂದ್ರಿಯಗಳು—ಇವುಗಳು ಸಂಹತವಾಗಿ, ಒಂದರೊಡನೊಂದು ಸೇರಿಕೊಂಡು ಒಟ್ಟಾಗಿ ಆತ್ಮನಿಗೋಸ್ಕರ ಪ್ರವರ್ತಿಸುತ್ತವೆ ಎಂಬರ್ಥವನ್ನು 'ಸಂಘಾತ' ಎಂಬ ಶಬ್ದವು ಸೂಚಿಸುವದು.

ನನ್ನು ಏತರಿಂದ ಅರಿತಾನು ?" (ಬೃ. ೪-೫-೧೫), "ಈ ಆತ್ಮನು ಬ್ರಹ್ಮವು" (ಬೃ. ೨-೫-೧೯) ಮುಂತಾದ (ವಚನ) ಗಳಿಂದ ಉಪದೇಶಮಾಡಿರುತ್ತದೆ.[1]

## ಆತ್ಮಜ್ಞಾನಮಾತ್ರದಿಂದ ಕೃತಕೃತ್ಯತೆ

(ಭಾಷ್ಯ)

೫೩ ಯದಪಿ ಅಕರ್ತವ್ಯಪ್ರಧಾನಮ್ ಆತ್ಮಜ್ಞಾನಂ ಹಾನಾಯ ಉಪಾದಾನಾಯ ವಾ ನ ಭವತಿ ಇತಿ, ತತ್ ತಥೈವ ಇತಿ ಅಭ್ಯುಪಗಮ್ಯತೇ । ಅಲಂಕಾರೋ ಹಿ ಅಯಮ್ ಅಸ್ಮಾಕಂ ಯತ್ ಬ್ರಹ್ಮಾತ್ಮಾವಗತೌ ಸತ್ಯಾಂ ಸರ್ವಕರ್ತವ್ಯಹಾನಿಃ ಕೃತಕೃತ್ಯತಾ ಚ ಇತಿ । ತಥಾ ಚ ಶ್ರುತಿಃ—"ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ। ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್" (ಬೃ. ೪-೪-೧೨) ಇತಿ। "ಏತದ್ ಬುದ್ಧ್ವಾ ಬುದ್ಧಿಮಾನ್‌ಸ್ಯಾತ್ ಕೃತಕೃತ್ಯಶ್ಚ ಭಾರತ "(ಗೀ- ೧೫-೨೦) ಇತಿ ಸ್ಮೃತಿಃ । ತಸ್ಮಾತ್ ನ ಪ್ರತಿಪತ್ತಿವಿಧಿವಿಷಯತಯಾ ಬ್ರಹ್ಮಣಃ ಸಮರ್ಪಣಮ್ ॥

(ಭಾಷ್ಯಾರ್ಥ)

(ಇನ್ನು) ಕರ್ತವ್ಯವು ಪ್ರಧಾನವಾಗಿಲ್ಲದ ಆತ್ಮಜ್ಞಾನವು[2] ಬಿಡತಕ್ಕದ್ದಕ್ಕಾಗಲಿ ತೆಗೆದುಕೊಳ್ಳತಕ್ಕದ್ದಕ್ಕಾಗಲಿ (ಸಾಧನ) ವಾಗುವದಿಲ್ಲ ಎಂದು ಯಾವ (ಆಕ್ಷೇಪವನ್ನು ಪೂರ್ವಪಕ್ಷದಲ್ಲಿ ತೆಗೆದಿತ್ತೋ) ಅದು ಹಾಗೆಯೇ ಎಂದು ಒಪ್ಪಿಕೊಳ್ಳುತ್ತೇವೆ. **ಬ್ರಹ್ಮಾತ್ಮನನ್ನು ಅರಿತುಕೊಂಡಲ್ಲಿ ಮಾಡತಕ್ಕದ್ದೆಲ್ಲವೂ ತೀರಿಹೋಗುತ್ತದೆ. ಕೃತಕೃತ್ಯತೆಯೂ ಉಂಟಾಗುತ್ತದೆ**[3]—ಎಂಬುದು ನಮ್ಮ (ಮತಕ್ಕೆ) ಭೂಷಣವೇ (ಆಗಿರುತ್ತದೆ) "ಈ (ಆತ್ಮನು) ನಾನಾಗಿರುವೆನು–ಎಂದು ಆತ್ಮನನ್ನು ಮನುಷ್ಯನು ಅರಿತುಕೊಳ್ಳುವನಾದರೆ ಏನನ್ನು ಬಯಸಿ ಯಾರ

---

1. ಆದ್ದರಿಂದ ಆತ್ಮವಸ್ತುವನ್ನು ಉಪದೇಶಿಸುವ ವಾಕ್ಯಗಳ ಶ್ರವಣಕ್ಕೆ ಸಜ್ಜುಗೊಳಿಸುವದನ್ನು ಬಿಟ್ಟರೆ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಮುಂತಾದ ರೂಪದ ವಿಧಿಚ್ಛಾಯದ ವಚನಗಳಿಗೆ ಮತ್ತೆ ಯಾವ ಪ್ರಯೋಜನವೂ ಇರುವದಿಲ್ಲ. ಇವು ಸ್ವಪ್ರಧಾನವಿಧಿಗಳಲ್ಲವಾದ್ದರಿಂದ ದ್ರಷ್ಟವ್ಯವಿಧಿಗೆ ವಿಷಯವನ್ನು ತಿಳಿಸುವದಕ್ಕೆ ವಸ್ತುಬೋಧಕವಾಕ್ಯಗಳು ಬಂದಿವೆ ಎಂಬ ಪೂರ್ವಪಕ್ಷವು ತಪ್ಪು ಬೃ. ಭಾ. ೧-೪-೭.

2. ಇಲ್ಲಿ ಆತ್ಮಜ್ಞಾನವೆಂದರೆ ಬ್ರಹ್ಮಾತ್ಮಜ್ಞಾನವೇ ಎಂಬುದು ಪ್ರಕರಣದಿಂದಲೂ ವಾಕ್ಯಶೇಷದಿಂದಲೂ ಗೊತ್ತಾಗುತ್ತದೆ.

3. ಫಲಯುಕ್ತವಾದ ನಿಶ್ಚಿತಜ್ಞಾನವನ್ನುಂಟುಮಾಡುವದರಿಂದ ವಸ್ತುಬೋಧಕವಾಕ್ಯಗಳು ಪ್ರಮಾಣವಾಗಿವೆ. ಬೃ. ಭಾ. ೧-೪-೧೦. ಪ್ರವರ್ತಕವಾಗಿಯೇ ಪ್ರಮಾಣವಾಗಿರಬೇಕೆಂಬ ನಿಯಮವಿಲ್ಲ.

ಕಾಮುಕ್ಕಾಗಿ ಶರೀರವನ್ನನುಸರಿಸಿ ಸಂತಾಪಪಟ್ಟಾನು ?" (ಬೃ. ೪-೪-೧೨) ಎಂದು ಶ್ರುತಿಯೂ ಹಾಗೆಂದೇ ಹೇಳುತ್ತದೆ. "ಎಲೈ ಭಾರತನೆ, ಇದನ್ನು ಅರಿತು ಕೊಂಡರೆ ಬುದ್ಧಿವಂತನೂ ಕೃತಕೃತ್ಯನೂ ಆಗುವನು" (ಗೀ. ೧೫-೨೦) ಎಂದು ಸ್ಮೃತಿ (ಯೂ ಹೇಳುತ್ತದೆ.)

ಅದ್ದರಿಂದ ಪ್ರತಿಪತ್ತಿವಿಧಿಗೆ ವಿಷಯುವಾಗಿ ಬ್ರಹ್ಮವನ್ನು (ಶಾಸ್ತ್ರವು) ತಿಳಿಸುತ್ತದೆ (ಎಂಬದು ಸರಿ)ಯಲ್ಲ.

## ಕೇವಲವಸ್ತುವನ್ನು ಹೇಳುವ ವೇದಭಾಗವೂ ಉಂಟು

(ಭಾಷ್ಯ)

೫೪. ಯದಪಿ ಕೇಚಿತ್ ಆಹುಃ-'ಪ್ರವೃತ್ತಿನಿವೃತ್ತಿವಿಧಿತಚ್ಛೇಷವ್ಯತಿ ರೇಕೇಣ ಕೇವಲವಸ್ತುವಾದೀ ವೇದಭಾಗೋ ನಾಸ್ತಿ' ಇತಿ। ತನ್ನ। ಔಪನಿಷದಸ್ಯ ಪುರುಷಸ್ಯ ಅನನ್ಯಶೇಷತ್ವಾತ್। ಯೋಽಸೌ ಉಪನಿಷತ್ಸ್ವೇವ ಅಧಿಗತಃ ಪುರುಷಃ ಅಸಂಸಾರೀ ಬ್ರಹ್ಮ ಉತ್ಪಾದ್ಯಾದಿಚತುರ್ವಿಧದ್ರವ್ಯವಿಲಕ್ಷಣಃ, ಸ್ವಪ್ರಕರಣಸ್ಥಃ ಅನನ್ಯಶೇಷಃ ನಾಸೌ ನಾಸ್ತಿ ನಾಧಿಗಮ್ಯತೇ ಇತಿ ವಾ ಶಕ್ಯಂ ವದಿತುಮ್। "ಸ ಏಷ ನೇತಿ ನೇತ್ಯಾತ್ಮಾ" (ಬೃ. ೩-೯-೨೬) ಇತಿ ಆತ್ಮಶಬ್ದಾತ್। ಆತ್ಮನಶ್ಚ ಪ್ರತ್ಯಾಖ್ಯಾತುಮ್ ಅಶಕ್ಯತ್ವಾತ್ । ಯ ಏವ ನಿರಾಕರ್ತಾ ತಸ್ಯೈವ ಆತ್ಮತ್ವಾತ್। ನನು ಆತ್ಮಾ ಅಹಂಪ್ರತ್ಯಯವಿಷಯತ್ವಾತ್ ಉಪನಿಷತ್ಸ್ವೇವ ವಿಜ್ಞಾಯತೇ ಇತಿ ಅನುಪಪನ್ನಮ್। ನ। ತತ್ಸಾಕ್ಷಿತ್ವೇನ ಪ್ರತ್ಯುಕ್ತತ್ವಾತ್ । ನ ಹಿ ಅಹಂಪ್ರತ್ಯಯವಿಷಯಕರ್ತೃವ್ಯತಿರೇಕೇಣ ತತ್ಸಾಕ್ಷೀ ಸರ್ವಭೂತಸ್ಥಃ, ಸಮಃ, ಏಕಃ, ಕೂಟಸ್ಥನಿತ್ಯಃ ಪುರುಷಃ ವಿಧಿಕಾಣ್ಡೇ ತರ್ಕಸಮಯೇ ವಾ ಕೇನಚಿತ್ ಅಧಿಗತಃ ಸರ್ವಸ್ಯ ಆತ್ಮಾ। ಅತಃ ಸ ನ ಕೇನಚಿತ್ ಪ್ರತ್ಯಾಖ್ಯಾತುಂ ಶಕ್ಯಃ ವಿಧಿಶೇಷತ್ವಂ ವಾ ನೇತುಮ್। ಆತ್ಮತ್ವಾದೇವ ಚ ಸರ್ವೇಷಾಂ ನ ಹೇಯಃ ನಾಪಿ ಉಪಾದೇಯಃ। ಸರ್ವಂ ಹಿ ವಿನಶ್ಯತ್ ವಿಕಾರಜಾತಂ ಪುರುಷಾನ್ತಂ ವಿನಶ್ಯತಿ। ಪುರುಷೋ ವಿನಾಶಹೇತ್ವಭಾವಾತ್ ಅವಿನಾಶೀ । ವಿಕ್ರಿಯಾಹೇತ್ವಭಾವಾಚ್ಚ ಕೂಟಸ್ಥನಿತ್ಯಃ। ಅತ ಏವ ನಿತ್ಯಶುದ್ಧ ಬುದ್ಧಮುಕ್ತಸ್ವಭಾವಃ। ತಸ್ಮಾತ್ "ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ'' (ಕ. ೧-೩.೧೧)"ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ"(ಬೃ. ೩-೯-೨೬) ಇತಿ ಚ ಔಪನಿಷದತ್ವವಿಶೇಷಣಂ ಪುರುಷಸ್ಯ ಉಪನಿಷತ್ಸು ಪ್ರಾಧಾನ್ಯೇನ ಪ್ರಕಾಶ್ಯಮಾನತ್ವೇ ಉಪಪದ್ಯತೇ । ಅತಃ ಭೂತವಸ್ತುಪರೋ ವೇದಭಾಗೋ ನಾಸ್ತಿ-ಇತಿ ವಚನಂ ಸಾಹಸಮಾತ್ರಮ್ ॥

(ಭಾಷ್ಯಾರ್ಥ)

(ಇನ್ನು)ಪ್ರವೃತ್ತಿನಿವೃತ್ತಿವಿಧಿಗಳು, ಅವುಗಳಿಗೆ ಶೇಷವಾದದ್ದು–(ಇವನ್ನು ಬಿಟ್ಟರೆ ಬರಿಯ ವಸ್ತುವನ್ನು ಹೇಳುವ ವೇದಭಾಗವೇ ಇಲ್ಲ ಎಂದು ಕೆಲವರು[1] ಹೇಳುತ್ತಾರಲ್ಲ, ಅದು (ಸರಿ) ಯಲ್ಲ. ಏಕೆಂದರೆ ಔಪನಿಷದಪುರುಷನು ಮತ್ತೆ ಯಾವದಕ್ಕೂ ಶೇಷವಾಗಿರುವದಿಲ್ಲ. (ಇದರ ವಿವರ): ಸಂಸಾರಿಯಲ್ಲದ ಬ್ರಹ್ಮವೂ ಉತ್ಪಾದ್ಯವೇ ಮುಂತಾದ ನಾಲ್ಕು ಬಗೆಯ ದ್ರವ್ಯಕ್ಕಿಂತ ಬೇರೆಯ ಸ್ವಭಾವದವನೂ ತನ್ನ ಪ್ರಕರಣದಲ್ಲಿಯೇ[2] ಇರುವದರಿಂದ ಮತ್ತೊಂದಕ್ಕೆ ಶೇಷವಲ್ಲದವನೂ ಆಗಿರುವ ಉಪನಿಷತ್ತುಗಳಿಂದ ಮಾತ್ರವೇ ತಿಳಿಯಬರುವ ಈ ಪುರುಷನುಂಟಷ್ಟೆ, ಅವನು ಇಲ್ಲವೆಂದಾಗಲಿ (ವೇದಾಂತ ವಾಕ್ಯಗಳಿಂದ) ತಿಳಿಯಬರುವದಿಲ್ಲವೆಂದಾಗಲಿ ಹೇಳುವದಕ್ಕೆ ಆಗಲಾರದು; ಏಕೆಂದರೆ "ಆ ಇವನು ಇದಲ್ಲ, ಇದಲ್ಲ–ಎಂದ ಆತ್ಮನು" (ಬೃ. ೩-೯-೨೬) ಎಂದು (ಶ್ರುತಿಯಲ್ಲಿ ಈ ಪುರುಷನನ್ನು ತಿಳಿಸುವ) ಆತ್ಮಶಬ್ದವಿರುತ್ತದೆ. ಆತ್ಮನನ್ನು ಇಲ್ಲವೆನ್ನುವದಕ್ಕೂ ಆಗಲಾರದು ; ಏಕೆಂದರೆ ಯಾವನೇ ಇಲ್ಲ ವೆನ್ನುವನೋ ಅವನೇ ಆತ್ಮನಾಗುತ್ತಾನೆ.

(ಆಕ್ಷೇಪ) :—ಆತ್ಮನು ಅಹಂಪ್ರತ್ಯಯಕ್ಕೆ ವಿಷಯನಾಗಿರುವದರಿಂದ ಉಪ ನಿಷತ್ತುಗಳಲ್ಲಿ ಮಾತ್ರವೇ ತಿಳಿಯಬರುತ್ತಾನೆಂಬುದು ಸರಿಯಲ್ಲ.

(ಪರಿಹಾರ):—ಹಾಗಲ್ಲ. ಏಕೆಂದರೆ (ಆತ್ಮನು) ಅವನಿಗೂ ಸಾಕ್ಷಿಯಾಗಿರು ತ್ತಾನೆಂದು (ಮೊದಲೇ ಇದಕ್ಕೆ) ಸಮಾಧಾನವನ್ನು ಹೇಳಿರುತ್ತದೆ[3] ಅಹಂ ಪ್ರತ್ಯಯಕ್ಕೆ ವಿಷಯನಾಗಿರುವ ಕರ್ತೃವಿಗಿಂತ ಬೇರೆಯಾಗಿರುವವ ನಾಗಿಯೂ ಆ[4] (ಕರ್ತೃವಿಗೂ)ಸಾಕ್ಷಿಯಾಗಿಯೂ ಸರ್ವ ಭೂತಗಳಲ್ಲಿಯೂ ಇರುವವನಾಗಿಯೂ ಸಮನಾಗಿಯೂ ಒಬ್ಬನೇ ಆಗಿಯೂ ಕೂಟಸ್ಥನಿತ್ಯ

---

1. ಪ್ರತಿಪತ್ತಿವಿಧಿವಾದಿಗಳಾದ ವೃತ್ತಿಕಾರರೇ ಈ ಮತದವರೆಂದು ಇಟ್ಟುಕೊಳ್ಳ ಬಹುದು.

2 ಅಸಂಸಾರಿಯಾದ ಆತ್ಮನನ್ನು ಕರ್ಮಪ್ರಕರಣದಲ್ಲಿ ಹೇಳಿಲ್ಲ, ಆತ್ಮಪ್ರಕರಣ ದಲ್ಲಿಯೇ ಹೇಳಿದೆ.

3. ಅಹಂಪ್ರತ್ಯಯಗಮ್ಯನಾದ ಆತ್ಮನು ಅವಿದ್ಯಾಕಲ್ಪಿತನೆಂದೂ ಆತ್ಮನಲ್ಲವೆಂದೂ ಭಾ. ಭಾ. ೪೯ರಲ್ಲಿ ಹೇಳಿದೆ.

4. ಇಲ್ಲಿಂದ ಮುಂದಕ್ಕೆ ಕೊಟ್ಟಿರುವ ವಿಶೇಷಣಗಳು ಮಿಕ್ಕ ಸಿದ್ಧಾಂತಗಳಲ್ಲಿ ಹೇಳಿ ರುವ ಆತ್ಮಸ್ವರೂಪಕ್ಕೂ ಅದ್ವೈತವೇದಾಂತಿಗಳು ಹೇಳುವ ಆತ್ಮಸ್ವರೂಪಕ್ಕೂ ಇರುವ ಹೆಚ್ಚು ಕಡಿಮೆಯನ್ನು ಇಲ್ಲಿ ತಿಳಿಸಿದೆ. ಪೀಠಿಕೆಯನ್ನು ನೋಡಿ.

**ನಾಗಿಯೂ ಇರುವ ಪುರುಷನೇ ಎಲ್ಲರ ಆತ್ಮನೆಂದು ವಿಧಿಕಾಂಡದಲ್ಲಿಯೇ ಆಗಲಿ ತರ್ಕಶಾಸ್ತ್ರದಲ್ಲಿಯೇ ಆಗಲಿ, ಯಾರಿಗೂ ತಿಳಿಯಬಂದಿರುವದಿಲ್ಲ.** ಆದ್ದರಿಂದ[1] ಅವನನ್ನು ಇಲ್ಲವೆನ್ನುವದಕ್ಕಾಗಲಿ ವಿಧಿಗೆ ಅಂಗವಾಗಿ ಮಾಡುವದಕ್ಕಾಗಲಿ ಯಾರಿಂದಲೂ ಆಗಲಾರದು. ಎಲ್ಲರಿಗೂ ಆತ್ಮನಾಗಿರುವದರಿಂದಲೇ (ಅವನು) ಬಿಡುವದಕ್ಕಾಗಲಿ ತೆಗೆದುಕೊಳ್ಳುವದಕ್ಕಾಗಲಿ ಆಗುವಂಥವನಲ್ಲ.[2] ವಿನಾಶವಾಗುವ ಕಾರ್ಯಸಮೂಹವೆಲ್ಲವೂ ಕೊನೆಯಲ್ಲಿ ಪುರುಷನನ್ನು ಬಿಟ್ಟೇ ನಾಶವಾಗುವದು. ಪುರುಷನು (ಮಾತ್ರ) ನಾಶಕ್ಕೆ (ಮತ್ತೆ ಯಾವ) ಹೇತುವೂ ಇಲ್ಲದ್ದರಿಂದ ನಾಶರಹಿತನಾಗಿರುತ್ತಾನೆ, ಮಾರ್ಪಾಡಿಗೆ (ಯಾವ) ಹೇತುವೂ ಇಲ್ಲದ್ದರಿಂದ ಕೂಟಸ್ಥನಿತ್ಯನಾಗಿರುತ್ತಾನೆ. ಆದ್ದರಿಂದಲೇ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುತ್ತಾನೆ. ಆದ್ದರಿಂದ "ಪುರುಷನಿಗಿಂತ ಹೆಚ್ಚಿನದು ಯಾವದೂ ಇರುವದಿಲ್ಲ, ಅವನೇ ತೀರ ಕೊನೆಯು, ಅವನೇ ಎಲ್ಲಕ್ಕಿಂತಲೂ ಹೆಚ್ಚಿನ ಗತಿಯು" (ಕ. ೧-೩-೧೧) ಮತ್ತು "ಆ ಔಪನಿಷದಪುರುಷನನ್ನೇ ಕುರಿತು, ನಿನ್ನನ್ನು ಕೇಳುತ್ತೇನೆ" (ಬೃ ೩-೯-೨೬) ಎಂಬಲ್ಲಿರುವ **ಔಪನಿಷದ** ಎಂಬ ವಿಶೇಷಣವು ಪುರುಷನನ್ನು ಉಪನಿಷತ್ತುಗಳಲ್ಲಿ ಪ್ರಧಾನವಾಗಿ[3] ಪ್ರಕಾಶಿಸಿರುತ್ತದೆ ಎಂಬ (ಪಕ್ಷ) ದಲ್ಲಿಯೇ ಹೊಂದುತ್ತದೆ. ಆದ್ದರಿಂದ ಭೂತವಸ್ತುಪರವಾದ ವೇದಭಾಗವು ಇಲ್ಲವೆನ್ನುವದು ಸಾಹಸದ ಮಾತೇ (ಹೊರತು ಬೇರೆಯಲ್ಲ)

## ಶಾಸ್ತ್ರವು ಕ್ರಿಯೆಯನ್ನು ಮಾತ್ರ ಹೇಳುವದೆಂಬ ನಿಯಮವು ಸರಿಯಲ್ಲ

(ಭಾಷ್ಯ)

೫೫. ಯದಪಿ ಶಾಸ್ತ್ರತಾತ್ಪರ್ಯವಿದಾಮ್ ಅನುಕ್ರಮಣಮ್ "ದೃಷ್ಟೋ ಹಿ ತಸ್ಯಾರ್ಥಃ ಕರ್ಮಾವಬೋಧನಮ್" (ಶಾ. ಭಾ. ೧-೧-೧) ಇತ್ಯೇವಮಾದಿ,

---

1. ಎಲ್ಲರ ಆತ್ಮನಾಗಿರುವದರಿಂದ ಇಲ್ಲವೆನ್ನುವದಕ್ಕಿಲ್ಲ, ಸಾಕ್ಷಿಯಾಗಿ ಕೂಟಸ್ಥನಿತ್ಯನಾಗಿರುವದರಿಂದ ವಿಧಿಶೇಷನೆನ್ನುವದಕ್ಕಿಲ್ಲ.

2. ಕೇ. ಭಾ. ೧-೪ (ಭಾ. ಭಾ. ೨೪).

3. ಒಂದು ವಿಧಿಗೆ ಶೇಷವಾಗಿಯಲ್ಲ. ವೇದಾಂತವಾಕ್ಯಗಳು ಇಂಥ ಪುರುಷನನ್ನು ತಿಳಿಸುವದರಲ್ಲಿಯೇ ಸಮನ್ವಯವಾಗುತ್ತವೆ, ಈ ಪುರುಷನನ್ನು ಅರಿತುಕೊಳ್ಳುವದರಿಂದ ಪ್ರಯೋಜನವೂ ಉಂಟು.

ತತ್ ಧರ್ಮಜಿಜ್ಞಾಸಾವಿಷಯತ್ವಾತ್ ವಿಧಿಪ್ರತಿಷೇಧಶಾಸ್ತ್ರಾಭಿಪ್ರಾಯಂ ದ್ರಷ್ಟವ್ಯಮ್। ಅಪಿಚ "ಆಮ್ನಾಯಸ್ಯ ಕ್ರಿಯಾರ್ಥತ್ವಾದಾನರ್ಥಕ್ಯಮತದರ್ಥಾನಾಮ್" (ಜೈ. ಸೂ. ೧-೨-೧) ಇತ್ಯೇತತ್ ಏಕಾನ್ತೇನ ಅಭ್ಯುಪಗಚ್ಛತಾಂ ಭೂತೋಪದೇಶಾನರ್ಥಕ್ಯಪ್ರಸಙ್ಗಃ। ಪ್ರವೃತ್ತಿವಿಧಿವ್ಯತಿರೇಕೇಣ[1] ಭೂತಂ ಚೇತ್ ವಸ್ತು ಉಪದಿಶತಿ ಭವ್ಯಾರ್ಥತ್ವೇನ, ಕೂಟಸ್ಥನಿತ್ಯಂ ಭೂತಂ ನೋಪದಿಶತಿ ಇತಿ ಕೋ ಹೇತುಃ? ನ ಹಿ ಭೂತಮ್ ಉಪದಿಶ್ಯಮಾನಂ ಕ್ರಿಯಾ ಭವತಿ। ಅಕ್ರಿಯಾತ್ವೇಽಪಿ ಭೂತಸ್ಯ ಕ್ರಿಯಾಸಾಧನತ್ವಾತ್ ಕ್ರಿಯಾರ್ಥ ಏವ ಭೂತೋಪದೇಶಃ ಇತಿ ಚೇತ್। ನೈಷ ದೋಷಃ। ಕ್ರಿಯಾರ್ಥತ್ವೇಽಪಿ ಕ್ರಿಯಾನಿರ್ವರ್ತನಶಕ್ತಿಮದ್ ವಸ್ತು ಉಪದಿಷ್ಟಮೇವ। ಕ್ರಿಯಾರ್ಥತ್ವಂ ತು ಪ್ರಯೋಜನಂ ತಸ್ಯ। ನ ಚ ಏತಾವತಾ ವಸ್ತು ಅನುಪದಿಷ್ಟಂ ಭವತಿ। ಯದಿ ನಾಮ ಉಪದಿಷ್ಟಂ ಕಿಂ ತವ ತೇನ ಸ್ಯಾತ್ ಇತಿ? ಉಚ್ಯತೇ। ಅನವಗತಾತ್ಮವಸ್ತೂಪದೇಶಶ್ಚ ತಥೈವ ಭವಿತುಮರ್ಹತಿ। ತದವಗತ್ಯಾ ಮಿಥ್ಯಾಜ್ಞಾನಸ್ಯ ಸಂಸಾರಹೇತೋಃ ನಿವೃತ್ತಿಃ ಪ್ರಯೋಜನಂ ಕ್ರಿಯತೇ ಇತಿ ಅವಿಶಿಷ್ಟಮ್ ಅರ್ಥವತ್ತ್ವಂ ಕ್ರಿಯಾಸಾಧನವಸ್ತೂಪದೇಶೇನ ॥

(ಭಾಷ್ಯಾರ್ಥ)

(ಇನ್ನು) ಈ (ವೇದಕ್ಕೆ) ಕರ್ಮವನ್ನು ತಿಳಿಸುವದೇ (ಇಲ್ಲಿ) ಕಂಡುಬರುವ ಪ್ರಯೋಜನವು" (ಶಾ. ಭಾ. ೧-೧-೧) ಎಂದು ಮುಂತಾಗಿ ಶಾಸ್ತ್ರತಾತ್ಪರ್ಯವನ್ನು ಬಲ್ಲವರ ಹೇಳಿಕೆ (ಯಿದೆ ಎಂದು ಪೂರ್ವಪಕ್ಷಿ ಹೇಳಿದ್ದ)ನಲ್ಲ, ಅದು ಧರ್ಮಜಿಜ್ಞಾಸೆಯ ವಿಷಯವಾದ್ದರಿಂದ ವಿಧಿಪ್ರತಿಷೇಧಶಾಸ್ತ್ರವನ್ನು ಮನಸ್ಸಿನಲ್ಲಿಟ್ಟುಕೊಂಡು (ಹೇಳಿದ್ದು)-ಎಂದು ತಿಳಿಯಬೇಕು[2]. ಇನ್ನೊಂದು (ಮಾತು): ಶಾಸ್ತ್ರಕ್ಕೆ ಕ್ರಿಯೆಯೇ ಪ್ರಯೋಜನವಾದ್ದರಿಂದ ಆ (ಕ್ರಿಯೆಯಲ್ಲಿ) ತಾತ್ಪರ್ಯವಿಲ್ಲದ ವಾಕ್ಯಗಳು ನಿರರ್ಥಕ" (ಜೈ. ಸೂ. ೧-೨-೧) ಎಂಬೀ (ವಚನ) ವನ್ನು ನಿಯಮದಿಂದ ಅಂಗೀಕರಿಸುವವರ (ಮತದಲ್ಲಿ) ಭೂತ (ವಸ್ತುವನ್ನು) ಉಪದೇಶಮಾಡುವ (ವಚನಗಳು) ವ್ಯರ್ಥವಾಗಬೇಕಾಗುವದು. ಪ್ರವೃತ್ತಿನಿವೃತ್ತಿವಿಧಿಗಳಿಗಿಂತ ಬೇರೆ

---

1. 'ವಿಧಿತಚ್ಛೇಷವ್ಯತಿರೇಕೇಣ' ಎಂದು ಕೆಲವು ಅಚ್ಚಿನ ಪುಸ್ತಕಗಳಲ್ಲಿರುವದು ಸರಿಯಲ್ಲ.

2. ಶಾಬರಭಾಷ್ಯದಲ್ಲಿ ಪೂಜ್ಯಭಾವವನ್ನಿಟ್ಟುಕೊಂಡಿರುವ ಮೀಮಾಂಸಕರಿಗೂ ವೇದಾಂತಿಗಳಿಗೂ ಮನಸ್ಸಮಾಧಾನಾರ್ಥವಾಗಿ ಹೇಳಿದ ಉತ್ತರವಿದು. ಶಬರಸ್ವಾಮಿಗಳಿಗೂ ಈ ಅಭಿಪ್ರಾಯವಿದೆ ಎಂಬುದು ಅವರ ಭಾಷ್ಯದಿಂದಲೇ ಗೊತ್ತಾಗುವಂತಿಲ್ಲ. ಶ್ಲೋಕವಾರ್ತಿಕದಲ್ಲೇನೋ ಆತ್ಮವಿಚಾರವು ವೇದಾಂತದಲ್ಲಿ ಸ್ಪಷ್ಟವಾಗುವದು ಎಂಬ ವಚನವಿದೆ.

ಯಾಗಿರುವ ಭೂತವಸ್ತುವನ್ನು ಭವ್ಯವಾದ (ಧರ್ಮ) ಕ್ಕೋಸ್ಕರ (ಶಾಸ್ತ್ರವು) ಉಪದೇಶಿಸುತ್ತದೆಯಾದರೆ ಕೂಟಸ್ಥನಿತ್ಯವಾದ ಭೂತ(ವಸ್ತು)ವನ್ನು ಉಪದೇಶ ಮಾಡುವದಿಲ್ಲ ಎನ್ನುವದಕ್ಕೆ ಕಾರಣವೇನು? (ಕರ್ಮಕಾಂಡದಲ್ಲಿ) ಭೂತ (ವಸ್ತು) ವನ್ನು ಉಪದೇಶಿಸಿದರೆ ಕ್ರಿಯೆಯಾಗುವದಿಲ್ಲವಷ್ಟೆ?

(ಪೂರ್ವಪಕ್ಷಿ) :-(ಕರ್ಮಕಾಂಡದಲ್ಲಿ ಉಪದೇಶಿಸಿರುವ) ಭೂತ (ವಸ್ತುವು ತಾನೇ) ಕ್ರಿಯೆಯಲ್ಲದಿದ್ದರೂ ಕ್ರಿಯೆಗೆ ಸಾಧನವಾಗಿರುವದರಿಂದ (ಅಲ್ಲಿ) ಭೂತ (ವಸ್ತು) ವನ್ನು ಉಪದೇಶಿಸಿರುವದು ಕ್ರಿಯೆಗೋಸ್ಕರವೇ.

(ಸಿದ್ಧಾಂತಿ) :-ಇದೇನೂ ದೋಷವಲ್ಲ (ಅದು) ಕ್ರಿಯೆಗೋಸ್ಕರ (ಉಪದೇಶಿಸಿದ್ದಾದರೂ) ಕ್ರಿಯೆಯನ್ನು ನೆರವೇರಿಸುವ ಶಕ್ತಿಯುಳ್ಳ ವಸ್ತುವನ್ನು ಉಪದೇಶಮಾಡಿಯೇ ಇರುತ್ತದೆ (ಅದು) ಕ್ರಿಯೆಗೋಸ್ಕರವೆಂಬುದಾದರೋ, ಅದರ ಪ್ರಯೋಜನವು, ಇಷ್ಟುಮಾತ್ರದಿಂದ (ಭೂತ)ವಸ್ತುವನ್ನು ಉಪದೇಶಿಸಲೇ ಇಲ್ಲವೆಂದೇನೂ ಆಗುವದಿಲ್ಲ.

(ಪೂರ್ವಪಕ್ಷಿ) :-ಉಪದೇಶಿಸಿದೆ ಎಂದೇ ಆಗಲಿ, ಅದರಿಂದ ನಿನಗೇನು (ಪ್ರಯೋಜನ)[1]ವಾಗುವದು?

(ಸಿದ್ಧಾಂತಿ) :-ಹೇಳುತ್ತೇವೆ, (ಕೇಳು ಮತ್ತೆ ಯಾವ ಪ್ರಮಾಣದಿಂದಲೂ) ಗೊತ್ತಾಗದೆ ಇರುವ[2] ಆತ್ಮವಸ್ತುವನ್ನು ಉಪದೇಶಮಾಡಿದ್ದೂ ಹಾಗೆಯೇ ಆಗಬಹುದಾಗಿದೆ ಅದರ ಅರಿವಿನಿಂದ ಸಂಸಾರಕ್ಕೆ ಹೇತುವಾಗಿರುವ ಮಿಥ್ಯಾಜ್ಞಾನದ ನಿವೃತ್ತಿ ಎಂಬ ಪ್ರಯೋಜನವಾಗುವದಾದ್ದರಿಂದ ಕ್ರಿಯಾಸಾಧನವಾದ ವಸ್ತುವನ್ನು ಉಪದೇಶಿಸಿದ್ದಕ್ಕೂ (ಇದಕ್ಕೂ) ಪ್ರಯೋಜನವಿರುವದೆಂಬುದು ಸಮಾನವಾಗಿರುತ್ತದೆ.[3]

(ಭಾಷ್ಯ)

೫೬. ಅಪಿ ಚ "ಬ್ರಾಹ್ಮಣೋ ನ ಹಂತವ್ಯಃ" (?) ಇತ್ಯೇವಮಾದ್ಯಾ[4] ನಿವೃತ್ತಿಃ ಉಪದಿಶ್ಯತೇ। ನ ಚ ಸಾ ಕ್ರಿಯಾ। ನಾಪಿ ಕ್ರಿಯಾಸಾಧನಮ್।

---

1. ಆತ್ಮವಸ್ತುವನ್ನುಪದೇಶಿಸುವದರಿಂದಲೂ ಪ್ರಯೋಜನವಿದೆ ಎಂಬುದನ್ನು ಸ್ಪಷ್ಟಪಡಿಸುವದಕ್ಕಾಗಿ ಇಲ್ಲಿ ಶಂಕಾಪರಿಹಾರಗಳು ಬಂದಿವೆ ಎಂಬುದನ್ನು ನೆನಪಿಡಬೇಕು.

2. ಪ್ರಮಾಣಾಂತರದಿಂದ ತಿಳಿಯದೆ ಇರುವ ಪುರುಷಾರ್ಥೋಪಾಯವನ್ನು ಶಾಸ್ತ್ರವು ತಿಳಿಸುತ್ತದೆ. ಆ ಉಪಾಯವು ಕರ್ಮವೇ ಆಗಿರಬೇಕೆಂಬ ನಿಯಮವೇನೂ ಇಲ್ಲ ಎಂದು ಭಾವ.

3. ಆದ್ದರಿಂದ ಶಾಸ್ತ್ರವು ಸ್ವತಂತ್ರವಾಗಿ ಭೂತವಸ್ತುವನ್ನು ಉಪಯೋಗಿಸಬಾರದೆಂದು ಹೇಳುವದಕ್ಕೆ ಯಾರಿಗೂ ಅಧಿಕಾರವಿಲ್ಲ ಎಂದು ಭಾವ.

4. 'ಇತಿ ಚೈವಮಾದ್ಯಾ' ಎಂಬ ಪಾಠದಲ್ಲಿ ಚ ಹೆಚ್ಚು.

ಅಕ್ರಿಯಾರ್ಥಾನಾಮ್ ಉಪದೇಶಃ ಅನರ್ಥಕಶ್ಚೇತ್ "ಬ್ರಾಹ್ಮಣೋ ನ ಹನ್ತವ್ಯಃ" ಇತ್ಯಾದಿನಿವೃತ್ತ್ಯುಪದೇಶಾನಾಮ್ ಆನರ್ಥಕ್ಯಂ ಪ್ರಾಪ್ತಮ್ । ತಚ್ಚ ಅನಿಷ್ಟಮ್ । ನ ಚ ಸ್ವಭಾವಪ್ರಾಪ್ತಹನ್ತ್ಯರ್ಥಾನುರಾಗೇಣ ನಞಃ ಶಕ್ಯಮ್ ಅಪ್ರಾಪ್ತಕ್ರಿಯಾರ್ಥತ್ವಂ ಕಲ್ಪಯಿತುಂ ಹನನಕ್ರಿಯಾನಿವೃತ್ತ್ಯೌದಾಸೀನ್ಯವ್ಯತಿರೇಕೇಣ । ನಞಶ್ಚ ಏಷ ಸ್ವಭಾವಃ ಯತ್ ಸ್ವಸಂಬನ್ಧಿನೋಽಭಾವಂ ಬೋಧಯತಿ ಇತಿ । ಅಭಾವಬುದ್ಧಿಶ್ಚ ಔದಾಸೀನ್ಯಕಾರಣಮ್ । ಸಾ ಚ ದಗ್ಧೇನ್ಧನಾಗ್ನಿವತ್ ಸ್ವಯಮೇವ ಉಪಶಾಮ್ಯತಿ । ತಸ್ಮಾತ್ ಪ್ರಸಕ್ತಕ್ರಿಯಾನಿವೃತ್ತ್ಯೌದಾಸೀನ್ಯಮೇವ "ಬ್ರಾಹ್ಮಣೋ ನ ಹನ್ತವ್ಯಃ" (?) ಇತ್ಯಾದಿಷು ಪ್ರತಿಷೇಧಾರ್ಥಂ ಮನ್ಯಾಮಹೇ ಅನ್ಯತ್ರ ಪ್ರಜಾಪತಿವ್ರತಾದಿಭ್ಯಃ । ತಸ್ಮಾತ್ ಪುರುಷಾರ್ಥಾನುಪಯೋಗ್ಯುಪಾಖ್ಯಾನಾದಿಭೂತಾರ್ಥವಾದವಿಷಯಮ್ ಆನರ್ಥಕ್ಯಾಭಿಧಾನಂ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

ಇದೂ ಅಲ್ಲದೆ "ಬ್ರಾಹ್ಮಣನನ್ನು ಕೊಲ್ಲತಕ್ಕದ್ದಲ್ಲ" (?) ಎಂಬುದೇ ಮುಂತಾದ ನಿವೃತ್ತಿಯನ್ನು (ವೇದದಲ್ಲಿ) ಉಪದೇಶಿಸಿರುತ್ತದೆ. ಇದು ಕ್ರಿಯೆಯಲ್ಲ, ಕ್ರಿಯೆಗೆ ಸಾಧನವೂ ಅಲ್ಲ. ಕ್ರಿಯೆಗಾಗಿ (ಹೇಳದವು)ಗಳ ಉಪದೇಶವು ವ್ಯರ್ಥವೆಂದಾದರೆ "ಬ್ರಾಹ್ಮಣನನ್ನು ಕೊಲ್ಲತಕ್ಕದ್ದಲ್ಲ" ಎಂಬುದೇ ಮುಂತಾದ ನಿವೃತ್ತ್ಯುಪದೇಶಗಳು ವ್ಯರ್ಥವೆಂದಾಗುತ್ತದೆ ಅದು (ನಿಮಗೂ) ಇಷ್ಟವಿಲ್ಲ ಸ್ವಭಾವದಿಂದ ಪ್ರಾಪ್ತವಾಗಿರುವ ಕೊಲ್ಲುವದೆಂಬ ಕ್ರಿಯೆಗೆ[1] ಸಂಬಂಧಪಟ್ಟಿರುವದರಿಂದ ನಞ್‌ಗೆ[2] ಕೊಲ್ಲುವದೆಂಬ ಕ್ರಿಯೆಯನ್ನು ಬಿಡುವದರಿಂದಾಗುವ ಔದಾಸೀನ್ಯವಲ್ಲದೆ (ಹೇಗೂ) ಒದಗದೆ ಇರುವ ಕ್ರಿಯಾರ್ಥತ್ವವನ್ನು ಕಲ್ಪಿಸುವದು ಆಗಲಾರದು. ನಞ್ (ಅಲ್ಲ ಎಂಬ) ಶಬ್ದಕ್ಕೆ ತನಗೆ ಸಂಬಂಧಿಯಾಗಿರುವದರ ಅಭಾವವನ್ನು ತಿಳಿಸುವದೆಂಬುದೇ ಸ್ವಭಾವವು[4]. ಮತ್ತು ಅಭಾವಬುದ್ಧಿಯು ಔದಾಸೀನ್ಯಕ್ಕೆ ಕಾರಣ

---

1 ಅಜ್ಞಾನಸ್ವಭಾವದಿಂದ ಕೊಲ್ಲುವದೆಂಬ ಕ್ರಿಯೆಯಲ್ಲಿ ತೊಡಗಿರುತ್ತಾನೆ; ಅದು ಸರಿಯಲ್ಲವೆಂದು ಶಾಸ್ತ್ರವು ತಿಳಿಸುತ್ತದೆ.

2. ಇಲ್ಲ, ಅಲ್ಲ ಎಂಬ ನಿಷೇಧವನ್ನು ತಿಳಿಸುವ ನ ಎಂಬ ಶಬ್ದಕ್ಕೆ ನಞ ಎಂದು ವ್ಯಾಕರಣದ ಹೆಸರು ಇದು ವಾಕ್ಯಗಳಲ್ಲಿ ಕ್ರಿಯಾಪದಗಳೊಡನೆಯೂ ವಸ್ತುವಾಚಕಗಳೊಡನೆಯೂ ಸೇರಿಕೊಂಡಿರುತ್ತದೆ, ಉದಾಹರಣೆಗೆ 'ನ ಗಚ್ಛೇತ್' ಹೋಗಬಾರದು, 'ನ ಘಟಃ' ಗಡಿಗೆಯಲ್ಲ.

3. ನಞ್‌ಗೆ ಕ್ರಿಯೆಯೇನೂ ವಾಚ್ಯಾರ್ಥವಲ್ಲ.

4 ಅಭಾವವೇ ವಾಚ್ಯಾರ್ಥ. ತದನ್ಯ. ತದಿರುದ್ಧ–ಮುಂತಾದವುಗಳು ಲಕ್ಷ್ಯಾರ್ಥಗಳು

ವಾಗಿರುತ್ತದೆ[1]. ಆ (ಬುದ್ಧಿಯು) ಸೌದೆಯನ್ನು ಸುಟ್ಟ ಬೆಂಕಿಯಂತೆ ತಾನೇ ಶಾಂತವಾಗುತ್ತದೆ[2]. ಆದ್ದರಿಂದ "ಬ್ರಾಹ್ಮಣನನ್ನು ಕೊಲ್ಲತಕ್ಕದ್ದಲ್ಲ" (?) ಎಂಬುದೇ ಮುಂತಾದ (ಸ್ಥಲ)ಗಳಲ್ಲಿ–ಪ್ರಜಾಪತಿವ್ರತವೇ[3] ಮುಂತಾದವುಗಳನ್ನು ಬಿಟ್ಟರೆ ಮಿಕ್ಕ ಕಡೆಗಳಲ್ಲೆಲ್ಲ–ಒದಗಿರುವ ಕ್ರಿಯೆಯ ನಿವೃತ್ತಿಯಿಂದಾದ ಔದಾಸೀನ್ಯವೇ ಪ್ರತಿಷೇಧಕ್ಕೆ ಅರ್ಥವು ಎಂದು ನಮ್ಮ ಅಭಿಪ್ರಾಯವು.

ಆದ್ದರಿಂದ ಪುರುಷಾರ್ಥಕ್ಕೆ ಉಪಯೋಗವಿಲ್ಲದ ಉಪಾಖ್ಯಾನಗಳೇ ಮುಂತಾದ ಭೂತಾರ್ಥವಾದಗಳ[4] ವಿಷಯದಲ್ಲಿಯೇ (ಭೂತವಸ್ತುಗಳ ಉಪದೇಶವು) ವ್ಯರ್ಥವೆಂದು ಹೇಳಿರುವದು ಎಂದು ತಿಳಿಯಬೇಕು.

## ಭೂತವಸ್ತುವಾದ ಬ್ರಹ್ಮದ ಉಪದೇಶದಿಂದ ಸಂಸಾರಿತ್ವನಿವೃತ್ತಿ

(ಭಾಷ್ಯ)

೫೭. ಯದಪಿ ಉಕ್ತಮ್–ಕರ್ತವ್ಯವಿಧ್ಯನುಪ್ರವೇಶಮ್ ಅನ್ತರೇಣ ವಸ್ತುಮಾತ್ರಮ್ ಉಚ್ಯಮಾನಮ್ ಅನರ್ಥಕಂ ಸ್ಯಾತ್ 'ಸಪ್ತದ್ವೀಪಾ ವಸುಮತೀ' ಇತ್ಯಾದಿವತ್ ಇತಿ । ತತ್ ಪರಿಹೃತಮ್ । ರಜ್ಜುರಿಯಂ ನಾಯಂ ಸರ್ಪಃ ಇತಿ ವಸ್ತುಮಾತ್ರಕಥನೇಽಪಿ ಪ್ರಯೋಜನಸ್ಯ ದೃಷ್ಟತ್ವಾತ್ (ಇತಿ) । ನನು ಶ್ರುತಬ್ರಹ್ಮಣೋಽಪಿ ಯಥಾಪೂರ್ವಂ ಸಂಸಾರಿತ್ವದರ್ಶನಾತ್ ನ ರಜ್ಜುಸ್ವರೂಪಕಥನವತ್ ಅರ್ಥವತ್ತ್ವಮ್ ಇತ್ಯುಕ್ತಮ್, । ಅತ್ರೋಚ್ಯತೇ–ನಾವಗತಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಂ ಶಕ್ಯಂ ದರ್ಶಯಿತುಮ್ । ವೇದಪ್ರಮಾಣಜನಿತಬ್ರಹ್ಮಾತ್ಮ

---

1. ಅಭಾವಬುದ್ಧಿಯಿಂದ ಕ್ರಿಯೆಯಲ್ಲಿ ಯಾರೂ ತೊಡಗುವದಿಲ್ಲ.

2. ಅಭಾವಬುದ್ಧಿಯು ಪ್ರಸಕ್ತಕ್ರಿಯೆಯನ್ನು ಬಿಡಿಸಿದ ಬಳಿಕ ತಾನೇ ಹಿಂತುಹೋಗುತ್ತದೆ. ಆದ್ದರಿಂದ ಅದಕ್ಕೆ ಮತ್ತೆ ಯಾವ ವ್ಯಾಪಾರವೂ ಇರುವದಿಲ್ಲ.

3. ಪ್ರಜಾಪತಿವ್ರತದಲ್ಲಿ 'ಸೂರ್ಯನನ್ನು ನೋಡಬಾರದು' ಎಂದು ಉಪದೇಶಿಸಿದೆ. ಅಲ್ಲಿ 'ನೋಡಬಾರದು' ಎಂದರೆ ನೋಡದೆ ಇರುವದಕ್ಕೆ ತಕ್ಕ ಪ್ರಯತ್ನವನ್ನು ಮಾಡಬೇಕು ಎಂದರ್ಥ, ಏಕೆಂದರೆ ವ್ರತವೆಂಬುದು ಮಾಡಬೇಕಾದ ಪ್ರಯತ್ನವನ್ನು ತಿಳಿಸುತ್ತದೆ. ಜೈ. ಸೂ. ಶಾ. ಭಾ. ೬-೨-೧೯, ಇದನ್ನು ನೋಡಿರಿ. ಹೀಗೆ ಮಾಡಬೇಕಾದದ್ದನ್ನು ವಿಧಿಸಿರುವ ಕಡೆಗಳನ್ನು ಬಿಟ್ಟರೆ ಮಿಕ್ಕ ಕಡೆಗಳಲ್ಲೆಲ್ಲ ನಿಷೇಧವಚನಗಳಿಗೆ ಪ್ರಸಕ್ತಕ್ರಿಯೆಯನ್ನು ಬಿಟ್ಟು ಸುಮ್ಮನಿರಬೇಕೆಂಬುದೇ ಅಭಿಪ್ರಾಯ, ಅವು ಯಾವ ಕ್ರಿಯೆಯನ್ನೂ ಮಾಡಬೇಕೆಂದು ಉಪದೇಶಿಸುವದಿಲ್ಲ ಎಂದರ್ಥ.

4. ಇರುವದನ್ನೇ ಅನುವಾದಮಾಡುವ ಅರ್ಥವಾದಗಳು.

ಭಾವವಿರೋಧಾತ್ । ನ ಹಿ ಶರೀರಾದ್ಯಾತ್ಮಾಭಿಮಾನಿನಃ ದುಃಖಭಯಾದಿಮತ್ತ್ವಂ ದೃಷ್ಟಮ್ ಇತಿ ತಸ್ಯೈವ ವೇದಪ್ರಮಾಣಜನಿತಬ್ರಹ್ಮಾತ್ಮಾಗಮೇ ತದಭಿಮಾನ ನಿವೃತ್ತೌ ತದೇವ ಮಿಥ್ಯಾಜ್ಞಾನನಿಮಿತ್ತಂ ದುಃಖಭಯಾದಿಮತ್ತ್ವಂ ಭವತಿ ಇತಿ ಶಕ್ಯಂ ಕಲ್ಪಯಿತುಮ್ । ನ ಹಿ ಧನಿನೋ ಗೃಹಸ್ಥಸ್ಯ ಧನಾಭಿಮಾನಿನಃ ಧನಾಪಹಾರನಿಮಿತ್ತಂ ದುಃಖಂ ದೃಷ್ಟಮ್ ಇತಿ ತಸ್ಯೈವ ಪ್ರವ್ರಜಿತಸ್ಯ ಧನಾಭಿಮಾನ ರಹಿತಸ್ಯ ತದೇವ ಧನಾಪಹಾರನಿಮಿತ್ತಂ ದುಃಖಂ ಭವತಿ । ನ ಚ ಕುಣ್ಡಲಿನಃ ಕುಣ್ಡಲಿತ್ವಾಭಿಮಾನನಿಮಿತ್ತಂ ಸುಖಂ ದೃಷ್ಟಮ್ ಇತಿ ತಸ್ಯೈವ ಕುಣ್ಡಲವಿಯುಕ್ತಸ್ಯ ಕುಣ್ಡಲಿತ್ವಾಭಿಮಾನರಹಿತಸ್ಯ ತದೇವ ಕುಣ್ಡಲಿತ್ವಾಭಿಮಾನನಿಮಿತ್ತಂ ಸುಖಂ ಭವತಿ । ತದುಕ್ತಂ ಶ್ರುತ್ಯಾ–"ಅಶರೀರಂ ವಾವ ಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ" (ಛಾಂ. ೮-೧೨-೧) ಇತಿ ॥

(ಭಾಷ್ಯಾರ್ಥ)

(ಇನ್ನು) ಕರ್ತವ್ಯವಿಧಿಯಲ್ಲಿ ಸೇರಿಕೊಳ್ಳದೆ ಬರಿಯ ವಸ್ತುವನ್ನು ಹೇಳಿದರೆ 'ಭೂಮಿಯಲ್ಲಿ ಏಳು ದ್ವೀಪಗಳಿವೆ' ಎಂಬುದೇ ಮುಂತಾದ (ವಾಕ್ಯ)ದಂತೆ ನಿಷ್ಪ್ರಯೋಜನವಾಗುವದು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದಕ್ಕೂ 'ಇದು ಹಗ್ಗವು, ಹಾವಲ್ಲ' ಎಂದು ಒರಿಯ ವಸ್ತುವನ್ನು ಹೇಳಿದರೂ ಪ್ರಯೋಜನವುಂಟೆಂಬುದು ಕಂಡುಬರುವದರಿಂದ (ಇಲ್ಲಿಯೂ ಪ್ರಯೋಜನವುಂಟು ಎಂದು) ಪರಿಹಾರವನ್ನು ಹೇಳಿದ್ದಾಗಿದೆ.

(ಪೂರ್ವಪಕ್ಷಿ) — ಬ್ರಹ್ಮ (ವಿಷಯವಾಗಿ) ಶ್ರವಣಮಾಡಿದವನೂ ಮೊದಲಿನಂತೆಯೇ ಸಂಸಾರಿಯಾಗಿರುವನೆಂದು ಕಂಡುಬಂದಿರುವದರಿಂದ ಹಗ್ಗದ ಸ್ವರೂಪವನ್ನು ಹೇಳುವ, ವಾಕ್ಯದಂತೆ (ಇಲ್ಲಿ) ಸಪ್ರಯೋಜನತ್ವವಿಲ್ಲ ಎಂದು (ನಾವೂ) ಹೇಳಿದ್ದೆವಲ್ಲ[1]!

(ಸಿದ್ಧಾಂತಿ) — ಇದಕ್ಕೆ (ಉತ್ತರವನ್ನು) ಹೇಳುತ್ತೇವೆ (ಕೇಳು). **ತಾನು ಬ್ರಹ್ಮವೆಂಬು ಅರಿತುಕೊಂಡವನಿಗೆ ಮೊದಲಿನಂತೆ ಸಂಸಾರಿತ್ವ (ವಿರುವದೆಂದು) ತೋರಿಸಿಕೊಡುವದಕ್ಕೆ ಆಗಲಾರದು; ಏಕೆಂದರೆ (ಸಂಸಾರಿತ್ವವು)**

---

1. ಹಿಂದಿನ ಪ್ರಘಟ್ಟದಲ್ಲಿ ಪ್ರಯೋಜನವಿರುವದರಿಂದ ಭೂತವಸ್ತುವಾದ ಬ್ರಹ್ಮವನ್ನೂ ಶ್ರುತಿಯು ಉಪದೇಶಿಸಬಹುದು ಎಂದು ಹೇಳಿತ್ತು. ಈಗ ಅಂಥ ಪ್ರಯೋಜನವು ಆಗುವದೇ ಇಲ್ಲ ಎಂಬ ಶಂಕೆಯನ್ನು ತೆಗೆದು ಪರಿಹರಿಸಿದೆ.

**ವೇದಪ್ರಮಾಣದಿಂದ ಉಂಟಾದ ಬ್ರಹ್ಮಾತ್ಮಭಾವಕ್ಕೆ ವಿರುದ್ಧವಾಗಿರುತ್ತದೆ**[1]. ಶರೀರಾದಿಗಳು ತಾನೆಂದು ತಿಳಿದುಕೊಂಡಿರುವವನಿಗೆ ದುಃಖ, ಭಯ-ಮುಂತಾದವುಗಳಿರುವದು ಕಂಡಿದೆ (ಎಂಬ ಮಾತ್ರ)ದಿಂದ ಅದೇ (ಪುರುಷ)ನಿಗೆ ವೇದಪ್ರಮಾಣದಿಂದ ಬ್ರಹ್ಮಾತ್ಮಜ್ಞಾನವುಂಟಾಗಿ ಆ (ಶರೀರಾದಿಗಳ) ಅಭಿಮಾನವು ತೊಲಗಿದ ಮೇಲೂ ಮಿಥ್ಯಾಜ್ಞಾನನಿಮಿತ್ತವಾದ ಅದೇ ದುಃಖ ಭಯ-ಮುಂತಾದವುಗಳು ಇರುವವೆಂದು ಕಲ್ಪಿಸುವದಕ್ಕೆ ಆಗಲೇ ಆರದು. (ಇದಕ್ಕೊಂದು ದೃಷ್ಟಾಂತ): ಧನವಂತನಾದ ಗೃಹಸ್ಥನಿಗೆ ಧನವು (ತನ್ನದೆಂಬ) ಅಭಿಮಾನವಿರುವದರಿಂದ ಧನವನ್ನು (ಯಾರಾದರೂ) ಕದ್ದ ನಿಮಿತ್ತದಿಂದ ದುಃಖ(ವಾಗುವದನ್ನು) ಕಂಡಿರುತ್ತೇವೆಂಬ ಕಾರಣದಿಂದ ಅವನೇ ಸಂನ್ಯಾಸಿಯಾಗಿ ಧನಾಭಿಮಾನವನ್ನು ತೊರೆದಮೇಲೆ (ಆ) ಧನವನ್ನು ಕದ್ದ ನಿಮಿತ್ತದಿಂದ ಅದೇ ದುಃಖವು ಆಗುವದಿಲ್ಲವಷ್ಟೆ? (ಇನ್ನೊಂದು ದೃಷ್ಟಾಂತ): (ಕಿವಿಯಲ್ಲಿ) ಹತ್ತೊಂಟೆಯನ್ನು ಹಾಕಿಕೊಂಡಿರುವವನಿಗೆ (ತಾನು) ಒಂಟೆಯನ್ನು ಹಾಕಿಕೊಂಡಿರುವೆನೆಂಬ ಅಭಿಮಾನದ ನಿಮಿತ್ತದಿಂದ ಸುಖವಾಗುವದು ಕಂಡುಬರುತ್ತದೆ ಎಂಬ ಕಾರಣದಿಂದ ಅವನೇ ಒಂಟೆಯನ್ನು ತೆಗೆದುಹಾಕಿ (ತಾನು) ಒಂಟೆಯನ್ನು ಹಾಕಿಕೊಂಡಿರುವೆನೆಂಬ ಅಭಿಮಾನವನ್ನು ತೊರೆದ ಮೇಲೂ ಒಂಟೆಯನ್ನು (ಹಾಕಿಕೊಂಡಿರುವೆನೆಂಬ) ಅಭಿಮಾನದ ನಿಮಿತ್ತದಿಂದ ಆಗುತ್ತಿದ್ದ ಅದೇ ಸುಖವು ಆಗುವದಿಲ್ಲವಷ್ಟೆ? (ಇದರಂತೆಯೇ ಬ್ರಹ್ಮಜ್ಞಾನಿಯ ಅಸಂಸಾರಿತ್ವವನ್ನೂ ತಿಳಿಯಬೇಕು). ಇದನ್ನೇ ಶ್ರುತಿಯು "ಅಶರೀರನಾಗಿರುವವನನ್ನು ಪ್ರಿಯಾಪ್ರಿಯಗಳು ಸೋಕುವದಿಲ್ಲ" (ಛಾಂ. ೮-೧೨-೧) ಎಂದು ಹೇಳಿರುತ್ತದೆ.

## ಆತ್ಮನಿಗೆ ಶರೀರವಿರುವದೆಂಬುದು ಮಿಥ್ಯಾಜ್ಞಾನ

(ಭಾಷ್ಯ)

೫೮. ಶರೀರೇ ಪತಿತೇ ಅಶರೀರತ್ವಂ ಸ್ಯಾತ್ ನ ಜೀವತಃ ಇತಿ ಚೇತ್ । ನ । ಸಶರೀರತ್ವಸ್ಯ ಮಿಥ್ಯಾಜ್ಞಾನನಿಮಿತ್ತತ್ವಾತ್ । ನ ಹಿ ಆತ್ಮನಃ ಶರೀರಾತ್ಮಾಭಿಮಾನಲಕ್ಷಣಂ ಮಿಥ್ಯಾಜ್ಞಾನಂ ಮುಕ್ತ್ವಾ ಅನ್ಯತಃ ಸಶರೀರತ್ವಂ ಶಕ್ಯಂ ಕಲ್ಪಯಿತುಮ್ । ನಿತ್ಯಮ್ ಅಶರೀರತ್ವಮ್ ಅಕರ್ಮನಿಮಿತ್ತತ್ವಾತ್ ಇತಿ ಅವೋ

1. ಸಂಸಾರಿತ್ವವು ಅಜ್ಞಾನದ ಕಾರ್ಯ, ಅಸಂಸಾರಿತ್ವವು ಪ್ರಮಾಣಜ್ಞಾನದ ಫಲ. ಪ್ರಮಾಣಜ್ಞಾನದಿಂದ ಅಜ್ಞಾನವು ಹೋದಮೇಲೂ ಅಜ್ಞಾನದ ಕಾರ್ಯವು ಉಳಿದಿರುವದೆಂದು ಹೇಳುವದು ನಗೆಗೀಡಾದ ಮಾತು ಎಂದು ಭಾವ. ವೇದಾಂತಜ್ಞಾನದ ಫಲವು ಪ್ರತ್ಯಕ್ಷವಾಗಿ ತನಗೇ ಅನುಭವಕ್ಕೆ ಬರುವದರಿಂದ ಅದನ್ನು ಅಲ್ಲಗಳೆಯುವದಕ್ಕಿಲ್ಲ ಎಂದು ಹೇಳಿದಂತೆ ಆಯಿತು.

ಚಾಮ । ತತ್ಕೃತಧರ್ಮಾಧರ್ಮನಿಮಿತ್ತಂ ಸಶರೀರತ್ವಮ್ ಇತಿ ಚೇತ್ । ನ । ಶರೀರಸಂಬನ್ಧಸ್ಯ ಅಸಿದ್ಧತ್ವಾತ್ ಧರ್ಮಾಧರ್ಮಯೋಃ ಆತ್ಮಕೃತತ್ವಾಸಿದ್ಧೇಃ । ಶರೀರಸಂಬನ್ಧಸ್ಯ ಧರ್ಮಾಧರ್ಮಯೋಃ ತತ್ಕೃತತ್ವಸ್ಯ ಚ ಇತರೇತರಾಶ್ರಯತ್ವ ಪ್ರಸಙ್ಗಾತ್ ಅನ್ಧಪರಂಪರಾ ಏಷಾ ಅನಾದಿತ್ವಕಲ್ಪನಾ । ಕ್ರಿಯಾಸಮವಾಯಾ ಭಾವಾಚ್ಚ ಆತ್ಮನಃ ಕರ್ತೃತ್ವಾನುಪಪತ್ತೇಃ । ಸಂನಿಧಾನಮಾತ್ರೇಣ ರಾಜ ಪ್ರಭೃತೀನಾಂ ದೃಷ್ಟಂ ಕರ್ತೃತ್ವಮ್ ಇತಿ ಚೇತ್ । ನ । ಧನದಾನಾದ್ಯುಪಾರ್ಜಿತ ಭೃತ್ಯಸಂಬನ್ಧಿತ್ವಾತ್ ತೇಷಾಂ ಕರ್ತೃತ್ವೋಪಪತ್ತೇಃ । ನ ತು ಆತ್ಮನಃ ಧನ ದಾನಾದಿವತ್ ಶರೀರಾದಿಭಿಃ ಸ್ವಸ್ವಾಮಿಸಂಬನ್ಧನಿಮಿತ್ತಂ ಕಿಂಚಿತ್ ಶಕ್ಯಂ ಕಲ್ಪ ಯಿತುಮ್ । ಮಿಥ್ಯಾಭಿಮಾನಸ್ತು ಪ್ರತ್ಯಕ್ಷಃ ಸಂಬನ್ಧಹೇತುಃ । ಏತೇನ ಯಜ ಮಾನತ್ವಮ್ ಆತ್ಮನಃ ವ್ಯಾಖ್ಯಾತಮ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) —ಶರೀರವು ಬಿದ್ದುಹೋದ ಬಳಿಕ ಅಶರೀರತ್ವವಾದೀತು, ಬದುಕಿರುವವನಿಗೆ ಆಗಲಾರದು[1].

(ಸಿದ್ಧಾಂತಿ) —ಹಾಗಲ್ಲ ಏಕೆಂದರೆ ಸಶರೀರತ್ವವು (ತೋರುತ್ತಿರುವದು) **ಮಿಥ್ಯಾಜ್ಞಾನದ ನಿಮಿತ್ತದಿಂದ**[2] ಆತ್ಮನಿಗೆ ಶರೀರವೇ ತಾನೆಂಬ ಅಭಿಮಾನದ ರೂಪವಾದ ಮಿಥ್ಯಾಜ್ಞಾನವನ್ನು ಬಿಟ್ಟರೆ ಮತ್ತೇತರಿಂದಲೂ ಸಶರೀರತ್ವವು (ಬಂದಿದೆ) ಎಂದು ಕಲ್ಪಿಸುವದಕ್ಕೆ ಆಗುವ ಹಾಗೆಯೇ ಇಲ್ಲ. ಅಶರೀರತ್ವವು (ಯಾವ) ಕರ್ಮದ ನಿಮಿತ್ತದಿಂದಲೂ (ಆಗಿರು)ವದಿಲ್ಲವಾದ್ದರಿಂದ (ಅದು) ನಿತ್ಯ ವಾಗಿರುತ್ತದೆ ಎಂದು (ಹಿಂದೆಯೇ) ಹೇಳಿರುತ್ತೇವೆ

(ಪೂರ್ವಪಕ್ಷಿ) .—ಆ (ಆತ್ಮನು) ಮಾಡಿದ ಧರ್ಮಾಧರ್ಮಗಳ ನಿಮಿತ್ತ ದಿಂದ ಸಶರೀರತ್ವ (ವಾಗಿದೆ ಎನ್ನಬಹುದಲ್ಲ) !

---

1 ಪರಮಪುರುಷಾರ್ಥರೂಪವಾದ ಮುಕ್ತಿಯು ಶರೀರವು ಬಿದ್ದುಹೋದ ಬಳಿಕ ಆಗುವದೆಂಬ ವಿಶೇಷಕೈವಲ್ಯವಾದವನ್ನು ಅಲ್ಲಗಳೆದು ಸದ್ಯೋಮುಕ್ತಿಯನ್ನು ಇಲ್ಲಿ ಸ್ಥಾಪಿಸು ವದಕ್ಕೆ ಹೊರಟಿದೆ ಸಿದ್ಧಾಂತದಲ್ಲಿ ಪ್ರಾರಬ್ಧಕರ್ಮ, ಶರೀರವು ಬಿದ್ದುಹೋದಮೇಲೆ ಕೈವಲ್ಯ ವಾಗುವದು ಮುಂತಾದವುಗಳನ್ನು ಹೇಳಿರುವದು ವ್ಯವಹಾರದೃಷ್ಟಿಯಿಂದಲೇ.

2. ಮಿಥ್ಯಾಜ್ಞಾನ, ಭ್ರಾಂತಿ, ಮಿಥ್ಯಾಪ್ರತ್ಯಯ – ಇವೆಲ್ಲ ಸಮಾನಾರ್ಥಕಶಬ್ದಗಳೆಂ ಬುದು ೫೮, ೫೯, ೬೦ – ಈ ಭಾ. ಭಾ. ಗಳಿಂದ ಸ್ಪಷ್ಟವಾಗುತ್ತದೆ.

(ಸಿದ್ಧಾಂತ) :—ಕೂಡದು ಏಕೆಂದರೆ (ಆತ್ಮನಿಗೆ ಶರೀರದ ಸಂಬಂಧ (ವಿರುವದೆಂಬುದೇ) ಸಿದ್ಧವಾಗಿಲ್ಲವಾದ್ದರಿಂದ ಧರ್ಮಾಧರ್ಮಗಳು ಅವನು ಮಾಡಿದವು ಎಂಬುದು ಸಿದ್ಧವಾಗುವದಿಲ್ಲ.[1] (ಇವನಿಗೆ) ಶರೀರದ ಸಂಬಂಧ (ವಿದೆಯೆಂಬುದೂ) ಧರ್ಮಾಧರ್ಮಗಳನ್ನು ಇವನು ಮಾಡುವನೆಂಬುದೂ ಒಂದನ್ನೊಂದು ಆಶ್ರಯಿಸಿ (ಸಿದ್ಧ) ವಾಗಬೇಕಾಗಿರುವದರಿಂದ[2] ಅನಾದಿಯಾಗಿ ಹೀಗೆಯೇ (ಆಗುತ್ತಾ ಬಂದಿದೆ ಎಂದು) ಕಲ್ಪಿಸುವದು ಅಂಧಪರಂಪರೆಯೇ[3] ಆಗುವದು. ಇದಲ್ಲದೆ ಆತ್ಮನಿಗೆ ಕ್ರಿಯೆಯ ಸಂಬಂಧವೇ ಇಲ್ಲದ್ದರಿಂದ ಇವನು ಕರ್ತೃವೆಂಬುದೂ ಹೊಂದುವದಿಲ್ಲವಾದ್ದರಿಂದಲೂ (ಇವನು ಧರ್ಮಾಧರ್ಮಗಳನ್ನು ಮಾಡುತ್ತಾನೆಂಬುದು ಸಿದ್ಧವಾಗುವದಿಲ್ಲ.)

(ಪೂರ್ವಪಕ್ಷಿ) —ರಾಜನೇ ಮುಂತಾದವರು ಸುಮ್ಮನೆ ಹತ್ತಿರವಿದ್ದರೂ (ಅವರು) ಕರ್ತೃವಾಗಿರುವದು ಕಂಡುಬಂದಿದೆಯಲ್ಲ !

(ಸಿದ್ಧಾಂತಿ) — ಹಾಗಲ್ಲ. ಏಕೆಂದರೆ ಧನವನ್ನು ಕೊಡುವದೇ ಮುಂತಾದವುಗಳಿಂದ ಆಳುಗಳ ಸಂಬಂಧಿತ್ವವನ್ನು ಅವರು ಸಂಪಾದಿಸಿಕೊಂಡಿರುವದರಿಂದ ಅವರು ಕರ್ತೃವಾಗಿರಬಹುದಾಗಿದೆ. ಆದರೆ (ರಾಜನಿಗೆ) ಧನವನ್ನು ಕೊಡುವದೇ ಮುಂತಾದ (ನಿಮಿತ್ತದಂತೆ) ಆತ್ಮನಿಗೆ ಶರೀರವೇ ಮುಂತಾದವುಗಳಿಗೆ (ತಾನು) ಒಡೆಯನು (ಅವು) ತನ್ನವು-ಎಂಬ ಸಂಬಂಧಕ್ಕೆ ಬೇರೆ ನಿಮಿತ್ತವನ್ನು ಕಲ್ಪಿಸುವದಕ್ಕೆ ಆಗುವಹಾಗಿಲ್ಲ. ತಪ್ಪು (ತಿಳಿವಳಿಕೆಯಿಂದಾಗಿರುವ) ಅಭಿಮಾನವೇ

1. ಏಕೆಂದರೆ ಶರೀರಾದಿಗಳಿಲ್ಲದೆ ಕರ್ಮವನ್ನು ಮಾಡುವದು ಆಗುವದಿಲ್ಲ

2. ಶರೀರವಿದೆ ಎಂದು ಸಿದ್ಧವಾದರೆ ಧರ್ಮಾಧರ್ಮಗಳನ್ನು ಮಾಡುತ್ತಾನೆ ಎಂದು ಏರ್ಪಡುತ್ತದೆ, ಧರ್ಮಾಧರ್ಮಗಳನ್ನು ಮಾಡುತ್ತಾನೆಂದು ಸಿದ್ಧವಾದರೆ ಅವುಗಳ ಫಲವಾಗಿ ಶರೀರವಾಗಿದೆ ಎಂದು ಏರ್ಪಡುತ್ತದೆ ಹೀಗೆ ಅನ್ಯೋನ್ಯಾಶ್ರಯದೋಷವುಂಟಾಗುತ್ತದೆ.

3. ಹಿಂದುಹಿಂದಿನ ಶರೀರದಿಂದ ಮಾಡಿದ ಧರ್ಮಾಧರ್ಮಗಳಿಂದ ಮುಂದುಮುಂದಿನ ಶರೀರವುಂಟಾಗಿದೆ ಎಂದರೆ ಈ ದೋಷ. ಹುಟ್ಟುಕುರುಡರಾದವರು ಒಬ್ಬನಿಗೊಬ್ಬರು ದಾರಿ ತೋರಿಸುವರೆಂಬುದು ಹೇಗೆ ಅಸಂಭವವೋ ಹಾಗೆ ಎಷ್ಟು ಹಿಂದಿನ ಜನ್ಮಗಳನ್ನು ವಿಚಾರಕ್ಕೆ ತೆಗೆದುಕೊಂಡರೂ ಆತ್ಮನಿಗೆ ಶರೀರವಿದೆ ಎಂಬುದು ಸಿದ್ಧವಾಗುವದಿಲ್ಲವಾಗಿ ಜನ್ಮಪರಂಪರೆಯಲ್ಲಿ ಯಾವ ಜನ್ಮವೂ ಮುಂದಿನ ಜನ್ಮಕ್ಕೆ ಕಾರಣವಾದ ಧರ್ಮಾಧರ್ಮಗಳನ್ನು ಸಿದ್ಧಪಡಿಸುವ ಸಂಭವವಿಲ್ಲ (ಮಾಂ ಕಾ ಭಾ ೪-೧೪ರಿಂದ ೨೨)

(ಈ) ಸಂಬಂಧಕ್ಕೆ ಕಾರಣವೆಂಬುದು ಪ್ರತ್ಯಕ್ಷವಾಗಿರುತ್ತದೆ.[1] ಇದರಿಂದ ಆತ್ಮನು ಯಜಮಾನನಾಗಿರುವದು (ಹೇಗೆಂಬುದನ್ನೂ) ವಿವರಿಸಿದಂತೆ ಆಯಿತು.[2]

## ದೇಹಾತ್ಮಾಭಿಮಾನವು ಗೌಣವಲ್ಲ, ಮಿಥ್ಯವೇ

(ಭಾಷ್ಯ)

೫೯. ಅತ್ರಾಹುಃ-ದೇಹಾದಿವ್ಯತಿರಿಕ್ತಸ್ಯ ಆತ್ಮನಃ ಆತ್ಮೀಯೇ ದೇಹಾದೌ ಅಭಿಮಾನೋ ಗೌಣಃ ನ ಮಿಥ್ಯಾ ಇತಿ । ತತ್ ನ[3]। ಪ್ರಸಿದ್ಧವಸ್ತುಭೇದಸ್ಯ ಗೌಣತ್ವ ಮುಖ್ಯತ್ವಪ್ರಸಿದ್ಧೇಃ । ಯಸ್ಯ ಹಿ ಪ್ರಸಿದ್ಧೋ ವಸ್ತುಭೇದಃ, ಯಥಾ-ಕೇಸರಾದಿ ಮಾನ್ ಆಕೃತಿವಿಶೇಷಃ ಅನ್ವಯವ್ಯತಿರೇಕಾಭ್ಯಾಂ ಸಿಂಹಶಬ್ದಪ್ರತ್ಯಯಭಾಕ್ ಮುಖ್ಯಃ ಅನ್ಯಃ ಪ್ರಸಿದ್ಧಃ, ತತಶ್ಚ ಅನ್ಯಃ ಪುರುಷಃ ಪ್ರಾಯಿಕೈಃ ಕ್ರೌರ್ಯಶೌರ್ಯಾ ದಿಭಿಃ ಸಿಂಹಗುಣೈಃ ಸಂಪನ್ನಃ ಸಿದ್ಧಃ, ತಸ್ಯ ಪುರುಷೇ ಸಿಂಹಶಬ್ದಪ್ರತ್ಯಯೌ ಗೌಣೌ ಭವತಃ । ನ ಅಪ್ರಸಿದ್ಧವಸ್ತುಭೇದಸ್ಯ । ತಸ್ಯ ತು ಅನ್ಯತ್ರ ಅನ್ಯಶಬ್ದ ಪ್ರತ್ಯಯೌ ಭ್ರಾನ್ತಿನಿಮಿತ್ತಾವೇವ ಭವತಃ ನ ಗೌಣೌ । ಯಥಾ ಮನ್ದಾನ್ಧಕಾರೇ 'ಸ್ಥಾಣುರಯಮ್' ಇತಿ ಅಗೃಹ್ಯಮಾಣವಿಶೇಷೇ ಪುರುಷಶಬ್ದಪ್ರತ್ಯಯೌ ಸ್ಥಾಣು ವಿಷಯೌ । ಯಥಾ ವಾ ಶುಕ್ತಿಕಾಯಾಮ್ ಅಕಸ್ಮಾತ್ ರಜತಮ್ ಇತಿ ನಿಶ್ಚಿತೌ ಶಬ್ದಪ್ರತ್ಯಯೌ । ತದ್ವತ್ ದೇಹಾದಿಸಙ್ಘಾತೇ 'ಅಹಮ್' ಇತಿ ನಿರುಪಚಾರೇಣ ಶಬ್ದಪ್ರತ್ಯಯೌ ಆತ್ಮಾನಾತ್ಮಾವಿವೇಕೇನ ಉತ್ಪದ್ಯಮಾನೌ ಕಥಂ ಗೌಣೌ ಶಕ್ಯೌ ವದಿತುಮ್ ? ಆತ್ಮಾನಾತ್ಮವಿವೇಕಿನಾಮಪಿ ಪಣ್ಡಿತಾನಾಮ್ ಅಜಾವಿಪಾಲಾನಾ ಮಿವ ಅವಿವಿಕ್ತೌ ಶಬ್ದಪ್ರತ್ಯಯೌ ಭವತಃ । ತಸ್ಮಾತ್ ದೇಹಾದಿವ್ಯತಿರಿಕ್ತಾತ್ಮಾಸ್ತಿತ್ವ ವಾದಿನಾಂ ದೇಹಾದೌ ಅಹಂಪ್ರತ್ಯಯೋ ಮಿಥ್ಯೈವ ನ ಗೌಣಃ ॥

(ಭಾಷ್ಯಾರ್ಥ)

ಈ (ವಿಷಯ) ದಲ್ಲಿ (ಕೆಲವರು) ಹೇಳುವದೇನೆಂದರೆ : ದೇಹವೇ ಮುಂತಾ ದವುಗಳಿಗಿಂತ ಬೇರೆಯಾಗಿರುವ ಆತ್ಮನಿಗೆ ತನ್ನ ದೇಹಾದಿಯಲ್ಲಿ (ಇರುವ) ಅಭಿ ಮಾನವು ಗೌಣವು, ಮಿಥ್ಯೆಯಲ್ಲ.

---

1 ಏಕೆಂದರೆ ಈ ಅಭಿಮಾನವಿಲ್ಲದ ಸುಷುಪ್ತಿಯೇ ಮುಂತಾದ ಅವಸ್ಥೆಗಳಲ್ಲಿ ಈ ಸಂಬಂಧವಿರುವದಿಲ್ಲ.

2. ಆತ್ಮನು ಯಜಮಾನನು, ಯಾಗವನ್ನು ಮಾಡಿ ಸ್ವರ್ಗಾದಿಗಳನ್ನು ಪಡೆಯು ತ್ತಾನೆ-ಎಂದು ಶ್ರುತಿಯಲ್ಲಿ ಹೇಳಿರುತ್ತದೆಯಾದರೂ ಯಾಗಕರ್ತೃತ್ವವು ಶರೀರಾದಿಗಳ ಸಂಬಂಧವಿಲ್ಲದೆ ಆಗುವಂತಿಲ್ಲವಾದ್ದರಿಂದ ಅದೂ ಮಿಥ್ಯಾಭಿಮಾನವುಳ್ಳವರ ದೃಷ್ಟಿಯಿಂದಲೇ ಹೇಳಿದ್ದು ಎಂದು ಭಾವ.

3 ಇತಿ ಚೇತ್ ನ ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

(ಆದರೆ) ಇದು (ಸರಿ) ಯಲ್ಲ. ಏಕೆಂದರೆ **ವಸ್ತುಗಳು ಬೇರೆಬೇರೆ ಎಂದು ಪ್ರಸಿದ್ಧವಾಗಿರುವವನಿಗೆ (ಮಾತ್ರ) ಗೌಣತ್ವಮುಖ್ಯತ್ವಗಳು ಏರ್ಪಡುತ್ತವೆ.** ಹೇಗೆಂದರೆ ಕೇಸರಾದಿಗಳುಳ್ಳ ಒಂದಾನೊಂದು ಆಕೃತಿಯು ಅನ್ವಯವ್ಯತಿರೇಕಗಳಿಂದ[1] ಸಿಂಹವೆಂಬ ಶಬ್ದಕ್ಕೂ ಪ್ರತ್ಯಯಕ್ಕೂ ತಕ್ಕದ್ದಾಗಿರುವದೆಂದು ಮುಖ್ಯವಾದದ್ದು ಒಂದು ತಿಳಿದಿರುವದು, ಮತ್ತು ಅದಕ್ಕಿಂತ ಬೇರೆಯಾಗಿರುವ ಬಲು ಮಟ್ಟಿಗೆ ಕ್ರೌರ್ಯ, ಶೌರ್ಯ ಮುಂತಾದ ಸಿಂಹಗುಣಗಳಿಂದ ಒಡಗೂಡಿರುವ ಮನುಷ್ಯನೂ ತಿಳಿದಿರುವದು-(ಹೀಗೆ) ಯಾವನಿಗೆ ವಸ್ತುಭೇದವು ಪ್ರಸಿದ್ಧವಾಗಿರುವದೋ, ಅವನಿಗೆ ಮನುಷ್ಯನಲ್ಲಿ (ಉಂಟಾಗುವ) ಸಿಂಹವೆಂಬ ಶಬ್ದಪ್ರತ್ಯಯಗಳು ಗೌಣವಾಗುವವೇ (ಹೊರತು ಈ) ವಸ್ತುಭೇದವು ಪ್ರಸಿದ್ಧವಾಗಿಲ್ಲದವನಿಗೆ (ಗೌಣವಾಗ) ಲಾರವು. ಆ (ವಸ್ತುಭೇದಪ್ರಸಿದ್ಧಿಯಿಲ್ಲದವನಿ)ಗಾದರೋ ಒಂದರಲ್ಲಿ (ಆಗುವ) ಮತ್ತೊಂದರ ಶಬ್ದಪ್ರತ್ಯಯಗಳು ಭ್ರಾಂತಿನಿಮಿತ್ತವಾಗಿಯೇ ಆಗುವವೇ (ಹೊರತು) ಗೌಣವಾಗಲಾರವು. ಉದಾಹರಣೆಗೆ ನಸುಗತ್ತಲೆಯಲ್ಲಿ 'ಇದು ಮೋಟು ಮರವು' ಎಂದು ವಿಶೇಷವು ಗೊತ್ತಾಗದಿರುವಲ್ಲಿ ಮೋಟುಮರದ ವಿಷಯದಲ್ಲಿ (ಆಗುವ) 'ಮನುಷ್ಯ' ಎಂಬ ಶಬ್ದಪ್ರತ್ಯಯಗಳು (ಭ್ರಾಂತಿನಿಮಿತ್ತವಾಗಿರುತ್ತವೆ). ಅಥವಾ ಇನ್ನೊಂದು ಉದಾಹರಣೆ. ಕಪ್ಪೆಯಚಿಪ್ಪಿನಲ್ಲಿ ಇದ್ದಕ್ಕಿದ್ದ ಹಾಗೆ (ಇದು) ಬೆಳ್ಳಿಯೆಂದು ನಿಶ್ಚಿತವಾಗಿ ಆಗುವ ಶಬ್ದಪ್ರತ್ಯಯಗಳು[2] (ಭ್ರಾಂತಿನಿಮಿತ್ತವೇ ಆಗಿರುತ್ತವೆ). ಇದರಂತೆ ದೇಹವೇ ಮುಂತಾದವುಗಳ ಸಂಘಾತದಲ್ಲಿ ಆತ್ಮಾನಾತ್ಮಗಳನ್ನು ವಿಂಗಡಿಸಿಕೊಳ್ಳದ್ದರಿಂದ ಯಾವ ಉಪಚಾರವೂ ಇಲ್ಲದೆ 'ನಾನು' ಎಂದು ಉಂಟಾಗುತ್ತಿರುವ ಶಬ್ದಪ್ರತ್ಯಯಗಳನ್ನು ಗೌಣವೆಂದು ಹೇಳುವದು ಹೇಗೆತಾನೆ ಆದೀತು? **ಆತ್ಮಾನಾತ್ಮಗಳನ್ನು ವಿಂಗಡಿಸಿಕೊಂಡ ಪಂಡಿತರಿಗೂಕೂಡ ಆಡುಕುರಿಗಳನ್ನು ಕಾಯುವ (ಮೂಢ)ರಂತೆಯೇ (ನಾನು) ಎಂಬ ಶಬ್ದಪ್ರತ್ಯಯಗಳು ವಿಂಗಡವಾಗದೆ (ಒಂದುಗೂಡಿಕೊಂಡೇ) ಆಗುತ್ತಿರುವವು**[3]. ಆದ್ದರಿಂದ

1. 'ಅದಿದ್ದರೆ ಅದು ಇರುತ್ತದೆ' ಎಂಬುದು ಅನ್ವಯ, 'ಆದಿಲ್ಲದಿದ್ದರೆ ಆದೂ ಇರುವದಿಲ್ಲ' ಎಂಬುದು ವ್ಯತಿರೇಕ. ಕೇಸರಾದಿಗಳಿರುವ ಪ್ರಾಣಿಯಲ್ಲಿ ಸಿಂಹಶಬ್ದಪ್ರತ್ಯಯಗಳಾಗುವವು, ಇಲ್ಲದ ಪ್ರಾಣಿಯಲ್ಲಿ ಆಗವು-ಎಂಬ ಕಾರಣದಿಂದ ಸಿಂಹವೆಂಬ ಮೃಗವಲ್ಲಿ ಆಗುವ ಸಿಂಹಶಬ್ದಪ್ರತ್ಯಯಗಳು ಮುಖ್ಯ ಎಂದರ್ಥ.

2. ಬೆಳ್ಳಿಯೆಂಬ ಶಬ್ದಪ್ರತ್ಯಯಗಳಿರುವವೇ ಹೊರತು ಬೆಳ್ಳಿಯಿರುವದಿಲ್ಲವಾದ್ದರಿಂದ ಭ್ರಾಂತಿನಿಮಿತ್ತದಿಂದಾಗಿರುತ್ತವೆ ಎಂದು ಭಾವ

3. ದೇಹದಲ್ಲಿ ನಾನು ಎಂಬ ಪ್ರತ್ಯಯವಾಗುವಾಗ-ಮನುಷ್ಯನಲ್ಲಿ ಸಿಂಹಪ್ರತ್ಯಯವಾಗುವಾಗ ಸಿಂಹವು ಬೇರೆ ಇದೆ ಎಂದು ವಿಂಗಡವಾಗಿ ತಿಳಿಯುವಂತೆ-ಯಾರೊಬ್ಬರಿಗೂ ಆತ್ಮನು ದೇಹಕ್ಕಿಂತ ಬೇರೆಯಾಗಿ ತಿಳಿದುಬರುವದಿಲ್ಲ. ಗೌಣವಾದಿಗಳಿಗೂ ಹೀಗೇ ಅನುಭವವಿರುತ್ತದೆ ಎಂದು ಭಾವ. ಉ.ಸಾ. ಗದ್ಯ ಕನ್ನಡಾನುವಾದ ೩೩ನೆಯ ಪುಟವನ್ನು ನೋಡಿ.

ದೇಹಾದಿಗಳಿಗಿಂತ ಆತ್ಮನು ಬೇರೆಯಾಗಿರುವನೆಂಬ ವಾದಿಗಳ (ಮತದಲ್ಲಿ) ದೇಹಾದಿಗಳಲ್ಲಿ ನಾನು ಎಂಬ ಪ್ರತ್ಯಯವು ಮಿಥ್ಯೆಯಾದೀತೇ ಹೊರತು ಗೌಣವಾಗಲಾರದು.

## ಜ್ಞಾನದಿಂದಾಗುವ ಸಂಸಾರಿತ್ವನಿವೃತ್ತಿಯ ಉಪಸಂಹಾರ

(ಭಾಷ್ಯ)

೬೦ ತಸ್ಮಾತ್ ಮಿಥ್ಯಾಪ್ರತ್ಯಯನಿಮಿತ್ತತ್ವಾತ್ ಸಶರೀರತ್ವಸ್ಯ ಸಿದ್ಧಂ ಜೀವತೋಽಪಿ ವಿದುಷಃ ಅಶರೀರತ್ವಮ್ । ತಥಾ ಚ ಬ್ರಹ್ಮವಿದ್ವಿಷಯಾ ಶ್ರುತಿಃ- "ತದ್ಯಥಾಹಿನಿರ್ಲ್ವಯನೀ ವಲ್ಮೀಕೇ ಮೃತಾ ಪ್ರತ್ಯಸ್ತಾ ಶಯೀತ ಏವಮೇವ ಇದಂ ಶರೀರಂ ಶೇತೇ । ಅಥಾಯಮಶರೀರೋಽಮೃತಃ ಪ್ರಾಣೋ ಬ್ರಹ್ಮೈವ ತೇಜ ಏವ" (ಬೃ. ೪-೪-೭) ಇತಿ । "ಸಚಕ್ಷುರಚಕ್ಷುರಿವ ಸಕರ್ಣೋಽಕರ್ಣ ಇವ ಸವಾಗವಾಗಿವ ಸಮನಾ ಅಮನಾ ಇವ ಸಪ್ರಾಣೋಽಪ್ರಾಣ ಇವ" (?) ಇತಿ ಚ । ಸ್ಮೃತಿರಪಿ-ಸ್ಥಿತಪ್ರಜ್ಞಸ್ಯ ಕಾ ಭಾಷಾ (ಗೀ. ೨-೫೪) ಇತ್ಯಾದ್ಯಾ ಸ್ಥಿತಪ್ರಜ್ಞಲಕ್ಷಣಾನಿ ಆಚಕ್ಷಾಣಾ ವಿದುಷಃ ಸರ್ವಪ್ರವೃತ್ತ್ಯಸಂಬನ್ಧಂ ದರ್ಶಯತಿ । ತಸ್ಮಾತ್ ನ ಅವಗತಬ್ರಹ್ಮಾತ್ಮಭಾವಸ್ಯ ಯಥಾಪೂರ್ವಂ ಸಂಸಾರಿತ್ವಮ್ । ಯಸ್ಯ ತು ಯಥಾಪೂರ್ವಂ ಸಂಸಾರಿತ್ವಮ್, ನಾಸೌ ಅವಗತಬ್ರಹ್ಮಾತ್ಮಭಾವಃ ಇತಿ ಅನವದ್ಯಮ್ ॥

(ಭಾಷ್ಯಾರ್ಥ)

ಆದಕಾರಣ ಸಶರೀರತ್ವವೆಂಬುದು ಮಿಥ್ಯಾಪ್ರತ್ಯಯದ ನಿಮಿತ್ತದಿಂದಾಗಿರುವದರಿಂದ ಜ್ಞಾನಿಗೆ ಬದುಕಿರುವಾಗಲೂ ಅಶರೀರತ್ವ(ವಿರುವದೆಂದು) ಸಿದ್ಧವಾಯಿತು[1] ಆದ್ದರಿಂದಲೇ ಬ್ರಹ್ಮಜ್ಞಾನಿಯ ವಿಷಯದಲ್ಲಿ ಶ್ರುತಿಯು "ಅದು (ಹೇಗೆಂದರೆ) ಹಾವಿನ ಪೊರೆಯು ಸತ್ತು ಹುತ್ತದಲ್ಲಿ ಹಾಕಿದಂತೆ ಹೇಗೆ ಬಿದ್ದಿರುವದೋ ಇದರಂತೆಯೇ ಈ ಶರೀರವು ಬಿದ್ದಿರುತ್ತದೆ. ಇನ್ನು ಇವನು ಅಶರೀರನು, ಅಮೃತನು, ಪ್ರಾಣನು, ಬ್ರಹ್ಮವೇ, ತೇಜಸ್ಸೇ" (ಬೃ ೪-೪೭) ಎಂದೂ "ಇವನು ಕಣ್ಣುಳ್ಳವನಾದರೂ ಕಣ್ಣಿಲ್ಲದವನಂತೆ, ಕಿವಿಯುಳ್ಳವನಾದರೂ ಕಿವಿಯಿಲ್ಲದವನಂತೆ, ವಾಕ್ಸಹಿತನಾದರೂ ವಾಕ್ಕಿಲ್ಲದವನಂತೆ, ಮನಸ್ಸುಳ್ಳವನಾದರೂ ಮನಸ್ಸಿಲ್ಲದವನಂತೆ, ಪ್ರಾಣವುಳ್ಳವನಾದರೂ ಪ್ರಾಣವಿಲ್ಲದವನಂತೆ"[2](?) ಎಂದೂ (ಹೇಳುತ್ತದೆ). "ಸ್ಥಿತ

1. ಇದಕ್ಕೂ ವ್ಯಾಖ್ಯಾನಕಾರರು ಹೇಳುವ ಜೀವನ್ಮುಕ್ತಸ್ಥಿತಿಗೂ ಇರುವ ತಾರತಮ್ಯದ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ

2 ಈ ಶ್ರುತಿ ಯಾವದೆಂಬುದು ತಿಳಿಯದು ವ್ಯಾಖ್ಯಾನಕಾರರು 'ಸಚಕ್ಷುರಿವ ಅಚಕ್ಷುಃ' ಎಂದು ಪ್ರತ್ಯೇಕವಾಗಿ ಅನ್ವಯಮಾಡಿ ಅರ್ಥವನ್ನು ಮಾಡಿರುತ್ತಾರೆ ವ್ಯವಹಾರದೃಷ್ಟಿಯಿಂದ ಇಂದ್ರಿಯಾದಿಗಳಿದ್ದರೂ ಪರಮಾರ್ಥವಾಗಿ ಅವನಿಗೆ ಅವು ಇಲ್ಲವಾದ್ದರಿಂದ ಬದುಕಿರುವಾಗಲೇ ಅವನು ನಿತ್ಯಶುದ್ಧಬುದ್ಧಮುಕ್ತನಾಗಿರುವನು ಎಂಬುದು ಒಟ್ಟರ್ಥ.

ಪ್ರಜ್ಞನ ಭಾಷೆ ಯಾವದು ?" ಎಂದು ಮುಂತಾಗಿರುವ (ಗೀ. ೨-೫೪) ಸ್ಥಿತಪ್ರಜ್ಞನ ಲಕ್ಷಣವನ್ನು ಹೇಳುವ ಸ್ಮೃತಿಯೂ ಜ್ಞಾನಿಗೆ ಯಾವ ಪ್ರವೃತ್ತಿಯ ಸಂಬಂಧವೂ ಇಲ್ಲವೆಂದು ತಿಳಿಸುತ್ತದೆ. ಆದ್ದರಿಂದ ಬ್ರಹ್ಮದಲ್ಲಿ ಆತ್ಮಭಾವವನ್ನು ಅರಿತುಕೊಂಡವನಿಗೆ[1] ಮೊದಲಿನಂತೆ ಸಂಸಾರಿತ್ವವು ಇರುವದಿಲ್ಲ. ಯಾವನಿಗಾದರೆ ಮೊದಲಿನಂತೆಯೇ ಸಂಸಾರಿತ್ವವು ಇರುವದೋ ಅವನು ಬ್ರಹ್ಮಾತ್ಮಭಾವವನ್ನು ಅರಿತುಕೊಂಡವನಲ್ಲ. ಆದ್ದರಿಂದ (ಈ ಸಿದ್ಧಾಂತವು) ನಿರ್ದುಷ್ಟವಾಗಿದೆ.

## ಮನನನಿದಿಧ್ಯಾಸನಗಳು ಜ್ಞಾನವುಂಟಾದ ಮೇಲೆ ಮಾಡತಕ್ಕವಲ್ಲ

(ಭಾಷ್ಯ)

೬೧. ಯತ್ ಪುನರುಕ್ತಮ್-ಶ್ರವಣಾತ್ ಪರಾಚೀನಯೋಃ ಮನನನಿದಿಧ್ಯಾಸನಯೋಃ ದರ್ಶನಾತ್[2] ವಿಧಿಶೇಷತ್ವಂ ಬ್ರಹ್ಮಣಃ ನ ಸ್ವರೂಪಪರ್ಯವಸಾಯಿತ್ವಮ್ ಇತಿ । ನ । ಅವಗತ್ಯರ್ಥತ್ವಾತ್ ಮನನನಿದಿಧ್ಯಾಸನಯೋಃ । ಯದಿ ಹಿ ಅವಗತಂ ಬ್ರಹ್ಮ ಅನ್ಯತ್ರ ವಿನಿಯುಜ್ಯೇತ ಭವೇತ್ ತದಾ ವಿಧಿಶೇಷತ್ವಮ್ । ನ ತು ತದಸ್ತಿ । ಮನನನಿದಿಧ್ಯಾಸನಯೋರಪಿ ಶ್ರವಣವತ್ ಅವಗತ್ಯರ್ಥತ್ವಾತ್ ॥

(ಭಾಷಾರ್ಥ)

ಇನ್ನು ಶ್ರವಣವಾದ ಮೇಲೆ ಮನನನಿದಿಧ್ಯಾಸನಗಳನ್ನು (ವಿಧಿಸಿರುವದು) ಕಂಡುಬರುವದರಿಂದ ಬ್ರಹ್ಮವನ್ನು ವಿಧಿಗೆ ಶೇಷವಾ(ಗಿಟ್ಟುಕೊಳ್ಳಬೇಕೇ ಹೊರತು) ಸ್ವರೂಪದಲ್ಲಿಯೇ ಮುಗಿಯುವ(ದೆಂದು ಇಟ್ಟುಕೊಳ್ಳ)ತಕ್ಕದ್ದಲ್ಲ[3] ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. (ಅದೂ) ಸರಿಯಲ್ಲ. ಏಕೆಂದರೆ ಮನನನಿದಿಧ್ಯಾಸನಗಳು (ಬ್ರಹ್ಮದ) ಜ್ಞಾನಕ್ಕೋಸ್ಕರವಾಗಿಯೇ (ವಿಹಿತವಾಗಿರುತ್ತವೆ). ಬ್ರಹ್ಮದ ಅರಿವು ಆದಮೇಲೆ ಅದನ್ನು ಮತ್ತೊಂದು (ಕ್ರಿಯೆಯಲ್ಲಿ) ವಿನಿಯೋಗಮಾಡಿದ್ದರೆ ಆಗ (ಬ್ರಹ್ಮವು) ವಿಧಿಶೇಷವೆಂದು ಆಗುತ್ತಿತ್ತು. ಆದರೆ ಹಾಗಿಲ್ಲ. ಏಕೆಂದರೆ ಮನನನಿದಿಧ್ಯಾಸನಗಳನ್ನು ಕೂಡ ಶ್ರವಣದಂತೆ (ಬ್ರಹ್ಮದ) ಜ್ಞಾನಕ್ಕಾಗಿಯೇ[4] (ವಿಧಿಸಿರುತ್ತದೆ).

---

1. ಬ್ರಹ್ಮವೇ ತಾನೆಂದು ಅರಿತುಕೊಂಡಿರುವವನಿಗೆ ಎಂದರ್ಥ.

2. 'ವಿಧಿವದ್ದರ್ಶನಾತ್' ಎಂದೇ ಮೂಲದಲ್ಲಿದ್ದಿರಬಹುದೆಂದು ತೋರುತ್ತದೆ. ಹಿಂದಿನ ಪೂರ್ವಪಕ್ಷಾನುವಾದದಲ್ಲಿ ಹಾಗೆಯೇ ಇದೆ.

3. ಬ್ರಹ್ಮಸ್ವರೂಪವನ್ನು ಅರಿತುಕೊಂಡಮೇಲೂ ಅದನ್ನು ಮನನಮಾಡಿ ಉಪಾಸನೆ ಮಾಡಬೇಕೆಂಬುವದೇ ಶಾಸ್ತ್ರಾರ್ಥ ಎಂದರ್ಥ.

4 ಶ್ರವಣದಿಂದಲೇ ಯಾರಿಗೆ ಜ್ಞಾನವಾಗಿಬಿಡುವದೋ ಅವರಿಗೆ ಮನನಾದಿಗಳ ಅಭ್ಯಾಸದ ಆವಶ್ಯಕತೆ ಇಲ್ಲವೆಂದು ಸೂ. ಭಾ. ೪-೧-೨ರಲ್ಲಿ ಹೇಳಿರುವದನ್ನು ಇದಕ್ಕೆ ಹೋಲಿಸಿ.

## ಪೃಥಕ್ಶಾಸ್ತ್ರಾರಂಭಸಾಮರ್ಥ್ಯದಿಂದಲೂ ಬ್ರಹ್ಮವು ವಿಧಿಶೇಷವಲ್ಲವೆಂದಾಗುತ್ತದೆ

(ಭಾಷ್ಯ)

೬೨. ತಸ್ಮಾತ್ ನ ಪ್ರತಿಪತ್ತಿವಿಧಿವಿಷಯತಯಾ ಶಾಸ್ತ್ರಪ್ರಮಾಣಕತ್ವಂ ಬ್ರಹ್ಮಣಃ ಸಂಭವತಿ । ಇತ್ಯತಃ ಸ್ವತನ್ತ್ರಮೇವ ಬ್ರಹ್ಮ ಶಾಸ್ತ್ರಪ್ರಮಾಣಕಂ ವೇದಾನ್ತ ವಾಕ್ಯಸಮನ್ವಯಾತ್ ಇತಿ ಸಿದ್ಧಮ್ । ಏವಂ ಚ ಸತಿ "ಅಥಾತೋ ಬ್ರಹ್ಮ ಜಿಜ್ಞಾಸಾ' ಇತಿ ತದ್ವಿಷಯಃ ಪೃಥಕ್ಶಾಸ್ತ್ರಾರಮ್ಭಃ ಉಪಪದ್ಯತೇ । ಪ್ರತಿಪತ್ತಿವಿಧಿ ಪರತ್ವೇ ಹಿ "ಅಥಾತೋ ಧರ್ಮಜಿಜ್ಞಾಸಾ" ಇತ್ಯೇವ ಆರಬ್ಧತ್ವಾತ್ ನ ಪೃಥ ಕ್ಶಾಸ್ತ್ರಮ್ ಆರಭ್ಯೇತ । ಆರಭ್ಯಮಾಣಂ ಚ ಏವಮ್ ಆರಭ್ಯೇತ–"ಅಥಾತಃ ಪರಿಶಿಷ್ಟ ಧರ್ಮಜಿಜ್ಞಾಸಾ" ಇತಿ ! "ಅಥಾತಃ ಕ್ರತ್ವರ್ಥಪುರುಷಾರ್ಥಯೋರ್ಜಿಜ್ಞಾಸಾ" (ಜೈ.೪-೧-೧) ಇತಿವತ್ । ಬ್ರಹ್ಮಾತ್ಮೈಕ್ಯಾವಗತಿಸ್ತು ಅಪ್ರತಿಜ್ಞಾತಾ ಇತಿ ತದರ್ಥೋ ಯುಕ್ತಃ ಶಾಸ್ತ್ರಾರಮ್ಭಃ "ಅಥಾತೋ ಬ್ರಹ್ಮಜಿಜ್ಞಾಸಾ" (೧-೧-೧) ಇತಿ ॥

(ಭಾಷ್ಯಾರ್ಥ)

ಆದಕಾರಣ ಬ್ರಹ್ಮವು ಪ್ರತಿಪತ್ತಿವಿಧಿಗೆ ವಿಷಯವಾಗಿ ಶಾಸ್ತ್ರಪ್ರಮಾಣಕ-(ವಾಗಿರುತ್ತದೆ) ಎಂಬುದು ಆಗುವಂತಿಲ್ಲವಾದ್ದರಿಂದ ಸ್ವತಂತ್ರವಾಗಿಯೇ ಬ್ರಹ್ಮವು ಶಾಸ್ತ್ರಪ್ರಮಾಣಕವಾಗಿರುತ್ತದೆ, ಏಕೆಂದರೆ (ಅದರಲ್ಲಿಯೇ) ವೇದಾಂತವಾಕ್ಯಗಳು ಸಮನ್ವಯವಾಗುತ್ತವೆ ಎಂದು ಸಿದ್ಧವಾಯಿತು. **ಮತ್ತು ಹೀಗಾದರೇ "ಅಥಾತೋ ಬ್ರಹ್ಮಜಿಜ್ಞಾಸಾ" ಇನ್ನು ಆದ್ದರಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು ಎಂದು ಈ (ಬ್ರಹ್ಮದ) ವಿಷಯದಲ್ಲಿ ಬೇರೊಂದು ಶಾಸ್ತ್ರವನ್ನು ಪ್ರಾರಂಭಿಸಿರುವದು ಹೊಂದುತ್ತದೆ.** ಏಕೆಂದರೆ (ಈ ಶಾಸ್ತ್ರಕ್ಕೆ) ಪ್ರತಿಪತ್ತಿಯನ್ನು ವಿಧಿಸುವದೇ ತಾತ್ಪರ್ಯವಾಗಿದ್ದರೆ "ಅಥಾತೋ ಧರ್ಮಜಿಜ್ಞಾಸಾ" (ಜೈ. ಸೂ. ೧-೧೧ ಇನ್ನು ಆದ್ದರಿಂದ ಧರ್ಮಜಿಜ್ಞಾಸೆಯನ್ನು ಮಾಡಬೇಕು) ಎಂದೇ (ಅದರ ವಿಚಾರವನ್ನು) ಪ್ರಾರಂಭಿಸಿಬಿಟ್ಟಿರುವದರಿಂದ (ಮತ್ತೆ ಅದರ ವಿಷಯದಲ್ಲಿ) ಬೇರೊಂದು ಶಾಸ್ತ್ರವನ್ನು ಆರಂಭಿಸುತ್ತಿರಲಿಲ್ಲ.[1] (ಒಂದು ವೇಳೆ) ಆರಂಭಿಸಿದ್ದರೂ (ಪೂರ್ವಮೀಮಾಂಸದಲ್ಲಿ) "ಅಥಾತಃ ಕ್ರತ್ವರ್ಥಪುರುಷಾರ್ಥಯೋರ್ಜಿಜ್ಞಾಸಾ"

---

1. 'ಬ್ರಹ್ಮಜಿಜ್ಞಾಸಾ' ಎಂದು ಮೊದಲಾಗಿರುವ ಉತ್ತರಮೀಮಾಂಸಾಶಾಸ್ತ್ರವು ಬೇರೊಂದು ಶಾಸ್ತ್ರವೆ, ಪೂರ್ವಮೀಮಾಂಸಾಶಾಸ್ತ್ರದಲ್ಲಿಯೇ ಸೇರಿಹೋಗಿರುವದೆ ?–ಎಂಬುದೊಂದು ಈಗಿನ ವೇದಾಂತಿಗಳಲ್ಲಿ ವಾದಗ್ರಸ್ತವಿಷಯವಾಗಿದೆ. ಪೀಠಿಕೆಯನ್ನು ನೋಡಿ.

(ಜೈ. ಸೂ. ೪-೧-೧ "ಇನ್ನು ಆದ್ದರಿಂದ ಕ್ರತ್ವರ್ಥಪುರುಷಾರ್ಥಗಳ ಜಿಜ್ಞಾಸೆಯನ್ನು ಮಾಡಬೇಕು.[1]" ಎಂದು (ಪ್ರಾರಂಭಿಸಿರು) ವಂತೆ (ಇಲ್ಲಿಯೂ) "ಇನ್ನು ಆದ್ದರಿಂದ ಉಳಿದಿರುವ ಧರ್ಮವನ್ನು ಜಿಜ್ಞಾಸೆಮಾಡಬೇಕು" ಎಂದೀ ರೀತಿಯಾಗಿ ಪ್ರಾರಂಭ ಮಾಡಬೇಕಾಗುತ್ತಿತ್ತು. ಬ್ರಹ್ಮಾತ್ಮೈಕ್ಯದ ಜ್ಞಾನವಾದರೋ (ಪೂರ್ವಮೀಮಾಂಸೆಯಲ್ಲಿ ಅದನ್ನು) ಪ್ರತಿಜ್ಞೆಮಾಡಿರುವದಿಲ್ಲವಾಗಿ ಅದನ್ನು (ತಿಳಿಸುವದ)ಕ್ಕಾಗಿ ಅಥಾತೋ ಬ್ರಹ್ಮಜಿಜ್ಞಾಸಾ (೧-೧-೧) ಎಂದು (ಹೊಸದಾಗಿ) ಶಾಸ್ತ್ರವನ್ನು ಆರಂಭಿಸಿರುವದು ಯುಕ್ತವಾಗಿರುತ್ತದೆ

## ಬ್ರಹ್ಮಜ್ಞಾನವಾದ ಬಳಿಕ ವಿಧಿಪ್ರಮಾಣಗಳ ವ್ಯಾಪಾರವಿಲ್ಲ

(ಭಾಷ್ಯ)

೬೩. ತಸ್ಮಾತ್ "ಅಹಂ ಬ್ರಹ್ಮಾಸ್ಮಿ" ಇತ್ಯೇತದವಸಾನಾ ಏವ ಸರ್ವೇ ವಿಧಯಃ ಸರ್ವಾಣಿ ಚ ಇತರಾಣಿ ಪ್ರಮಾಣಾನಿ । ನ ಹಿ ಅಹೇಯಾನುಪಾದೇಯಾದ್ವೈತಾತ್ಮಾವಗತೌ ನಿರ್ವಿಷಯಾಣಿ ಅಪ್ರಮಾತೃಕಾಣಿ ಚ ಪ್ರಮಾಣಾನಿ ಭವಿತುಮರ್ಹನ್ತಿ । ಅಪಿ ಚ ಆಹುಃ —

**ಗೌಣಮಿಥ್ಯಾತ್ಮನೋಽಸತ್ತ್ವೇ ಪುತ್ರದೇಹಾದಿಬಾಧನಾತ್ ।**
**ಸದ್ಬ್ರಹ್ಮಾತ್ಮಾಹಮಿತ್ಯೇವಂ ಬೋಧೇ ಕಾರ್ಯಂ ಕಥಂ ಭವೇತ್ ॥೧॥**
**ಅನ್ವೇಷ್ಟವ್ಯಾತ್ಮವಿಜ್ಞಾನಾತ್ ಪ್ರಾಕ್ ಪ್ರಮಾತೃತ್ವಮಾತ್ಮನಃ ।**
**ಅನ್ವಿಷ್ಟಃ ಸ್ಯಾತ್ ಪ್ರಮಾತೈವ ಪಾಪ್ಮದೋಷಾದಿವರ್ಜಿತಃ ॥೨॥**
**ದೇಹಾತ್ಮಪ್ರತ್ಯಯೋ ಯದ್ವತ್ ಪ್ರಮಾಣತ್ವೇನ ಕಲ್ಪಿತಃ ।**
**ಲೌಕಿಕಂ ತದ್ವದೇವೇದಂ ಪ್ರಮಾಣಂ ತ್ವಾಽತ್ಮನಿಶ್ಚಯಾತ್ ॥೩॥[2] ಇತಿ ॥**

(ಭಾಷ್ಯಾರ್ಥ)

ಆದ್ದರಿಂದ "ನಾನು ಬ್ರಹ್ಮವು" ಎಂಬೀ (ಅರಿವಾಗುವ) ವರೆಗೇ ಎಲ್ಲಾ ವಿಧಿಗಳೂ ಮಿಕ್ಕ ಎಲ್ಲಾ ಪ್ರಮಾಣಗಳೂ (ಕೆಲಸಮಾಡುತ್ತಿರುವವು) ಏಕೆಂದರೆ

---

1. ಕ್ರತುವಿಗೆ ಬೇಕಾದ ಉಪಕಾರಕಗಳನ್ನೂ ಪುರುಷನ ಫಲವನ್ನು ಹೇಳುವ ವಿಚಾರಗಳನ್ನೂ ಮಾಡುತ್ತೇವೆಂದರ್ಥ.

2. ಇಲ್ಲಿ ಉದಾಹರಿಸಿರುವ ಶ್ಲೋಕಗಳು ಯಾರವು ಎಂಬ ಬಗ್ಗೆ ನಿಶ್ಚಿತವಾದ ತೀರ್ಮಾನವಾಗಿರುವದಿಲ್ಲ. ಪೀಠಿಕೆಯನ್ನು ನೋಡಿ.

ಅಹೇಯವೂ ಅನುಪಾದೇಯವೂ ಆಗಿರುವ ಅದ್ವೈತಾತ್ಮನ ಅರಿವು ಉಂಟಾದ ಮೇಲೆ ಯಾವ ವಿಷಯವೂ ಪ್ರಮಾತೃವೂ ಇಲ್ಲದ್ದರಿಂದ ಪ್ರಮಾಣಗಳು (ಪ್ರಮಾಣಗಳಾಗಿ) ರಲಾರವು. ಮತ್ತು (ದೊಡ್ಡವರೂ) ಹೀಗೆಂದು ಹೇಳುತ್ತಾರೆ —

೧. "ಮಕ್ಕಳು, ದೇಹ-ಮುಂತಾದವುಗಳು ಬಾಧಿತವಾಗಿ ಗೌಣಾತ್ಮ, ಮಿಥ್ಯಾತ್ಮ[1] ಇವೆರಡೂ ಅಸತ್ತಾಗಲು, ಸದ್ರೂಪವಾದ ಬ್ರಹ್ಮವೇ ತಾನೆಂಬ ಅರಿವಾದ ಮೇಲೆ ಕಾರ್ಯವು ಹೇಗೆ ಇದ್ದೀತು![2]

೨. "ಹುಡುಕತಕ್ಕ ಆತ್ಮನ ಅರಿವು (ಆಗುವ) ಮುಂಚೆ ಆತ್ಮನಿಗೆ ಪ್ರಮಾತೃತ್ವವಿರುತ್ತದೆ. ಹುಡುಕಿ (ಅರಿತುಕೊಂಡ) ಪ್ರಮಾತೃವೇ ಪಾಪ್ಮದೋಷಾದಿಗಳಿಲ್ಲದವನಾಗುವನು.[3]

೩. "ದೇಹವೇ ತಾನೆಂಬ ಅರಿವು ಹೇಗೆ ಪ್ರಮಾಣವೆಂದು ಕಲ್ಪಿತವಾಗಿರುವದೋ[4] ಹಾಗೆಯೇ ಈ ಲೌಕಿಕವೂ ಆತ್ಮನಿಶ್ಚಯವಾಗುವವರೆಗೇ ಪ್ರಮಾಣವೆಂದು (ಕಲ್ಪಿತವಾಗಿರುತ್ತದೆ.)[5]

---

1 ಪತ್ನಿ, ಪುತ್ರ–ಮುಂತಾದವರು ತನಗಿಂತ ಬೇರೆಯೆಂದು ತಿಳಿದೂ ಅವರು ತಾವೇ ಎಂದು ಜನರು ವ್ಯವಹರಿಸುತ್ತಾರಾದ್ದರಿಂದ ಅವರು ಗೌಣಾತ್ಮರು. ಆತ್ಮನು ಬೇರೆ, ಇದು ಬೇರೆ ಎಂದು ವಿಂಗಡಿಸಿ ತಿಳಿದುಕೊಳ್ಳಲಾರದೆ ಇದೇ ಆತ್ಮನು ಎಂದು ವ್ಯವಹರಿಸುವ ದೇಹಾದಿಗಳು ಮಿಥ್ಯಾತ್ಮರು. ಗೌಣಪ್ರತ್ಯಯಕ್ಕೂ ಮಿಥ್ಯಾಪ್ರತ್ಯಯಕ್ಕೂ ಇರುವ ತಾರತಮ್ಯವನ್ನು ಭಾ. ಭಾ. ೫೭ರಲ್ಲಿ ವಿವರಿಸಿದೆ.

2. 'ನಾನು ಬ್ರಹ್ಮವು' ಎಂಬ ಅರಿವಾದಾಗ ಇವೆರಡೂ ಅಸತ್ತಾಗುವವು, ಪುತ್ರಕರ್ಮೋಪಾಸನೆಗಳಿಂದ ಮನುಷ್ಯಲೋಕಪಿತೃಲೋಕದೇವಲೋಕಗಳನ್ನು ಪಡೆದುಕೊಳ್ಳುವೆನೆಂಬ ಕಾರ್ಯಬುದ್ಧಿಯು ಇಲ್ಲವಾಗುವದು–ಎಂಬುದು ಶ್ಲೋಕದ ಅರ್ಥ.

3. ಅಪಹತಪಾಪ್ಮಾ ಮುಂತಾದ ಗುಣಗಳಿಂದ ಕೂಡಿದ ಆತ್ಮನನ್ನು ಹುಡುಕಿ ಅರಿತುಕೊಂಡವನಿಗೆ ಪರಮಪುರುಷಾರ್ಥವು ಲಭಿಸುವದು ಎಂದು (ಛಾಂ ೮-೭-೧) ಶ್ರುತಿಯಿರುವದು. ತಾನು ಪ್ರಮಾತೃ ಎಂಬ ಅಧ್ಯಾಸವುಳ್ಳವನಿಗೇ ಈ ಉಪದೇಶವು. ಆತ್ಮನನ್ನು ಅರಿತುಕೊಂಡಾಗ ತಾನು ಬ್ರಹ್ಮವೇ, ಪ್ರಮಾತೃವಲ್ಲ ಎಂದು ನಿಶ್ಚಯವಾಗಿರುತ್ತದೆ–ಎಂಬುದ ಶ್ಲೋಕದ ಅರ್ಥ.

4. ದೇಹವೇ ತಾನೆಂಬ ಅರಿವು ದೇಹಾತಿರಿಕ್ತನಾದ ಆತ್ಮನೇ ತಾನೆಂಬ ಶಾಸ್ತ್ರೀಯವಾದ ತಿಳಿವಳಿಕೆಯುಂಟಾಗುವವರೆಗೆ ಪ್ರಮಾಣವಾಗಿರುವದು.

5. ಪ್ರಮಾಣಪ್ರಮೇಯವ್ಯವಹಾರವೆಲ್ಲವೂ ಸರ್ವರ ಆತ್ಮನಾದ ಬ್ರಹ್ಮವೇ ತಾನೆಂಬ ನಿಶ್ಚಯವಾಗುವವರೆಗೆ ಸತ್ಯವಾಗಿ ತೋರುತ್ತಿರುತ್ತದೆ ಎಂದರ್ಥ. ಪ್ರಮಾಣಪ್ರಮೇಯವ್ಯವಹಾರವೆಲ್ಲವೂ ಆವಿದ್ಯಕವೆಂದು ಅಧ್ಯಾಸಭಾಷ್ಯದಲ್ಲಿ ಹೇಳಿರುವದರ ಸಾರವಿದು.

## ೫. ಈಕ್ಷತ್ಯಧಿಕರಣ (ಸೂ. ೫-೧೧)

(ಸರ್ವಜ್ಞನಾದ ಬ್ರಹ್ಮವೇ ಜಗತ್ಕಾರಣವು, ಪ್ರಧಾನಾದಿಗಳಲ್ಲ)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೬೪ ಏವಂ ತಾವತ್ ವೇದಾನ್ತವಾಕ್ಯಾನಾಂ ಬ್ರಹ್ಮಾತ್ಮಾವಗತಿಪ್ರಯೋಜನಾನಾಂ ಬ್ರಹ್ಮಾತ್ಮನಿ ತಾತ್ಪರ್ಯೇಣ ಸಮನ್ವಿತಾನಾಮ್ ಅನ್ತರೇಣಾಪಿ ಕಾರ್ಯಾನುಪ್ರವೇಶಂ ಬ್ರಹ್ಮಣಿ ಪರ್ಯವಸಾನಮ್ ಉಕ್ತಮ್। ಬ್ರಹ್ಮ ಚ ಸರ್ವಜ್ಞಂ ಸರ್ವಶಕ್ತಿ ಜಗದುತ್ಪತ್ತಿಸ್ಥಿತಿನಾಶಕಾರಣಮ್ ಇತ್ಯುಕ್ತಮ್। ಸಾಙ್ಖ್ಯಾದಯಸ್ತು ಪರಿನಿಷ್ಠಿತಂ ವಸ್ತು ಪ್ರಮಾಣಾನ್ತರಗಮ್ಯಮೇವ ಇತಿ ಮನ್ಯಮಾನಾಃ ಪ್ರಧಾನಾದೀನಿ ಕಾರಣಾನ್ತರಾಣಿ ಅನುಮಿಮಾನಾಃ ತತ್ಪರತಯೈವ ವೇದಾನ್ತವಾಕ್ಯಾನಿ ಯೋಜಯನ್ತಿ। ಸರ್ವೇಷ್ವೇವ ವೇದಾನ್ತವಾಕ್ಯೇಷು ಸೃಷ್ಟಿವಿಷಯೇಷು ಅನುಮಾನೇನೈವ ಕಾರ್ಯೇಣ ಕಾರಣಂ ಲಿಲಕ್ಷಯಿಷಿತಮ್। ಪ್ರಧಾನಪುರುಷಸಂಯೋಗಾ ನಿತ್ಯಾನುಮೇಯಾಃ ಇತಿ ಸಾಙ್ಖ್ಯಾ ಮನ್ಯನ್ತೇ। ಕಾಣಾದಾಸ್ತು ಏತೇಭ್ಯ ಏವ ವಾಕ್ಯೇಭ್ಯಃ ಈಶ್ವರಂ ನಿಮಿತ್ತಕಾರಣಮ್ ಅನುಮಿಮತೇ ಅಣೂಂಶ್ಚ ಸಮವಾಯಿಕಾರಣಮ್। ಏವಮ್ ಅನ್ಯೇಽಪಿ ತಾರ್ಕಿಕಾಃ ವಾಕ್ಯಾಭಾಸಯುಕ್ತ್ಯಾಭಾಸಾವಷ್ಟಮ್ಭಾಃ ಪೂರ್ವಪಕ್ಷವಾದಿನಃ ಇಹ ಉತ್ತಿಷ್ಠನ್ತೇ। ತತ್ರ ಪದವಾಕ್ಯಪ್ರಮಾಣಜ್ಞೇನ ಆಚಾರ್ಯೇಣ ವೇದಾನ್ತವಾಕ್ಯಾನಾಂ ಬ್ರಹ್ಮಾವಗತಿಪರತ್ವದರ್ಶನಾಯ ವಾಕ್ಯಾಭಾಸಯುಕ್ತ್ಯಾಭಾಸವಿಪ್ರತಿಪತ್ತಯಃ[1] ಪೂರ್ವಪಕ್ಷೀಕೃತ್ಯ ನಿರಾಕ್ರಿಯನ್ತೇ॥

ಭಾಷ್ಯಾರ್ಥ

ಹೀಗೆ ಮೊದಲು (ಇಲ್ಲಿಯವರೆಗಿನ ಗ್ರಂಥದಲ್ಲಿ) ವೇದಾಂತವಾಕ್ಯಗಳಿಗೆ ಬ್ರಹ್ಮಾತ್ಮನನ್ನು [2] ಅರಿತುಕೊಳ್ಳುವದೆಂಬ ಪ್ರಯೋಜನವಿರುವದರಿಂದಲೂ ತಾತ್ಪರ್ಯದಿಂದ ಬ್ರಹ್ಮಾತ್ಮನಲ್ಲಿಯೇ ಸಮನ್ವಯವಾಗುವದರಿಂದಲೂ (ಅವಗಳಿಗೆ) ಕಾರ್ಯಾನುಪ್ರವೇಶವಿಲ್ಲದೆಯೇ ಬ್ರಹ್ಮ (ಸ್ವರೂಪವನ್ನು ತಿಳಿಸುವದರಲ್ಲಿ) ಪರ್ಯವಸಾನ (ವಿದೆ ಎಂದು) ಹೇಳಿದ್ದಾಯಿತು.[3] (ಈ) ಬ್ರಹ್ಮವು ಸರ್ವಜ್ಞವು, ಸರ್ವಶಕ್ತಿಯುಳ್ಳದ್ದು

1. ಭಾಮತಿಗೆ ಒಪ್ಪಾವ ಪಾಠವಿದು.

2. ದೇಹಾತ್ಮ, ಪುತ್ರಾತ್ಮ, ಜೀವಾತ್ಮ–ಇವರೆಲ್ಲರಿಗಿಂತ ವಿಲಕ್ಷಣನೆಂಬುದನ್ನು ಬ್ರಹ್ಮಾತ್ಮ ಎಂಬ ಮಾತು ಸೂಚಿಸುವದು.

3. ಒಂದನೆಯ ಮತ್ತು ನಾಲ್ಕನೆಯ ಅಧಿಕರಣಗಳಲ್ಲಿ ಇದನ್ನು ಹೇಳಿದೆ. ವೇದ

ಜಗತ್ತಿನ ಉತ್ಪತ್ತಿಸ್ಥಿತಿನಾಶಗಳಿಗೆ ಕಾರಣವಾದದ್ದು ಎಂದೂ ಹೇಳಿದ್ದಾಯಿತು.[1] ಆದರೆ ಸಾಂಖ್ಯರೇ ಮೊದಲಾದವರು ಪರಿನಿಷ್ಠಿತವಾದ ವಸ್ತುವು ಬೇರೆಯ ಪ್ರಮಾಣದಿಂದಲೇ ಅರಿಯಬಹುದಾದದ್ದು ಎಂದು ಭಾವಿಸಿ[2] ಪ್ರಧಾನವೇ ಮುಂತಾದ ಕಾರಣಾಂತರಗಳನ್ನು ಅನುಮಾನ (ಪ್ರಮಾಣದಿಂದ) ಊಹಿಸುವವರಾಗಿ ವೇದಾಂತವಾಕ್ಯಗಳನ್ನು ಅವುಗಳಲ್ಲಿಯೂ ತಾತ್ಪರ್ಯವಿರುವಂತೆ ಹೊಂದಿಸು (ವದಕ್ಕೆ ಪ್ರಯತ್ನಿಸು)ತ್ತಾರೆ. ಸೃಷ್ಟಿವಿಷಯಕವಾದ ವೇದಾಂತ ವಾಕ್ಯಗಳಲ್ಲೆಲ್ಲ ಅನುಮಾನ (ಪ್ರಮಾಣ)ದಿಂದಲೇ ಕಾರ್ಯದಿಂದ ಕಾರಣವನ್ನು (ನಿಶ್ಚಯಿಸಿ) ತಿಳಿಸುವ ಉದ್ದೇಶವಿರುತ್ತದೆ; ಪ್ರಧಾನ, ಪುರುಷ (ಇವುಗಳ) ಸಂಯೋಗ-(ಇವು) ನಿತ್ಯಾನುಮೇಯಗಳಾಗಿರುತ್ತವೆ[3] ಎಂದು ಸಾಂಖ್ಯರು ಅಭಿಪ್ರಾಯಪಡುತ್ತಾರೆ. ಕಣಾದರ (ಅನುಯಾಯಿ)ಗಳಾದರೋ (ಜಗತ್ತಿಗೆ) ಈಶ್ವರನು ನಿಮಿತ್ತಕಾರಣನೆಂದೂ ಅಣುಗಳು ಸಮವಾಯಿಕಾರಣವೆಂದೂ[4] ಇದೇ ವಾಕ್ಯಗಳಿಂದ ಅನುಮಾನಿಸುತ್ತಾರೆ[5] ಹೀಗೆಯೇ ಮಿಕ್ಕ ತಾರ್ಕಿಕರೂ[6] ವಾಕ್ಯಾಭಾಸಗಳನ್ನೂ ಯುಕ್ತ್ಯಾಭಾಸಗಳನ್ನೂ

---

1. ಎರಡುಮೂರನೆಯ ಅಧಿಕರಣಗಳಲ್ಲಿ.

2. ವೇದಾಂತಿಗಳಿಗೂ ಸಾಂಖ್ಯರೇ ಮೊದಲಾದವರಿಗೂ ವೇದಪ್ರಮಾಣದ ವಿಷಯದಲ್ಲಿ ಇರುವ ಮುಖ್ಯ ಭೇದವಿದು ಆತ್ಮವಸ್ತು ಶ್ರುತಿಯ ಹೊರತು ಮತ್ತೆ ಯಾವ ಪ್ರಮಾಣಕ್ಕೂ ಸಿಕ್ಕುವದಿಲ್ಲವೆಂಬುದು ವೇದಾಂತಿಗಳ ಮತ.

3. ವೇದಾಂತವಾಕ್ಯವು ಕಾರ್ಯದಿಂದ ಕಾರಣವನ್ನು ಅನುಮಾನದಿಂದ ಸಿದ್ಧಪಡಿಸುತ್ತದೆ ಎಂಬುದರಿಂದ ವೇದಾಂತವಾಕ್ಯವು ಅನುವಾದವೆಂದಾಗುವದು, ಕಾರ್ಯಕಾರಣವು ಪರಮಾರ್ಥ, ವೇದಾಂತಿಗಳು ಹೇಳುವಂತೆ ಮಾಯಿಕವಲ್ಲ ಎಂದೂ ಆಗುವದು. ಸಾಂಖ್ಯರ ಮತದಲ್ಲಿ ಪ್ರಧಾನವು ತನ್ನ ಕಾರ್ಯವಾದ ಮಹದಾದಿಗಳಿಂದ ಅನುಮೇಯ, ಪುರುಷನು ಭೋಕ್ತೃಭಾವದಿಂದ ಅನುಮೇಯ, ಸಂಯೋಗವು ಸಂಸಾರಬಂಧದಿಂದ ಅನುಮೇಯ.

4. ಯಾವ ಕಾರಣದಿಂದ ಕೂಡಿಕೊಂಡೇ ಕಾರ್ಯವು ಹುಟ್ಟುವದೋ ಅದು ಸಮವಾಯಿಕಾರಣ; ಕಾರ್ಯಕ್ಕೆ ಜನಕವಾಗಿದ್ದು ತಟಸ್ಥವಾಗಿರುವ ಕಾರಣವು ನಿಮಿತ್ತಕಾರಣ; ಈ ಎರಡೂ ಅಲ್ಲದ್ದು ಅಸಮವಾಯಿಕಾರಣ. ಸಾಂಖ್ಯರೂ ವೇದಾಂತಿಗಳೂ ಸಮವಾಯಿಕಾರಣವನ್ನು ಉಪಾದಾನಕಾರಣವೆನ್ನುವರು, ಮಿಕ್ಕದ್ದೆಲ್ಲವೂ ಅವರ ಮತದಲ್ಲಿ ನಿಮಿತ್ತಕಾರಣವೇ.

5. ಸಾಂಖ್ಯರಂತೆ ಇವರಿಗೂ ವೇದಪ್ರಮಾಣವು ತರ್ಕಕ್ಕೆ ಎರಡನೆಯದು.

ಆಶ್ರಯಿಸಿಕೊಂಡು ಪೂರ್ವಪಕ್ಷವಾದಿಗಳಾಗಿ ಇಲ್ಲಿ ಎದುರುನಿಂತಿರುತ್ತಾರೆ. ಈ (ವಿಷಯ)ದಲ್ಲಿ ಪದವಾಕ್ಯಪ್ರಮಾಣಜ್ಞರಾದ[1] (ಬಾದರಾಯಣಾ)ಚಾರ್ಯರು ವೇದಾಂತವಾಕ್ಯಗಳು ಬ್ರಹ್ಮಜ್ಞಾನದಲ್ಲಿಯೇ ತಾತ್ಪರ್ಯವುಳ್ಳವೆಂದು ತೋರಿಸುವದಕ್ಕಾಗಿ (ಈ) ವಾಕ್ಯಾಭಾಸಯುಕ್ತ್ಯಾಭಾಸ(ಗಳಿಂದಾಗಿರುವ) ವಿರುದ್ಧಾಭಿಪ್ರಾಯಗಳನ್ನು[2] ಪೂರ್ವಪಕ್ಷವಾಗಿ ಮಾಡಿಕೊಂಡು ತಿರಸ್ಕರಿಸುತ್ತಾರೆ.

## ಸಾಂಖ್ಯರ ಪೂರ್ವಪಕ್ಷ

(ಭಾಷ್ಯ)

೬೫. ತತ್ರ ಸಾಙ್ಖ್ಯಾಃ ಪ್ರಧಾನಂ ತ್ರಿಗುಣಮ್ ಅಚೇತನಂ ಜಗತಃ ಕಾರಣಮ್ ಇತಿ ಮನ್ಯಮಾನಾಃ ಆಹುಃ–ಯಾನಿ ವೇದಾನ್ತವಾಕ್ಯಾನಿ ಸರ್ವಜ್ಞಸ್ಯ ಸರ್ವಶಕ್ತೇಃ ಬ್ರಹ್ಮಣಃ ಜಗತ್ಕಾರಣತ್ವಂ ದರ್ಶಯನ್ತಿ ಇತ್ಯವೋಚಃ ತಾನಿ ಪ್ರಧಾನಕಾರಣಪಕ್ಷೇಽಪಿ ಯೋಜಯಿತುಂ ಶಕ್ಯನ್ತೇ । ಸರ್ವಶಕ್ತಿತ್ವಂ ತಾವತ್ ಪ್ರಧಾನಸ್ಯಾಪಿ ಸ್ವವಿಕಾರವಿಷಯಮ್ ಉಪಪದ್ಯತೇ । ಏವಂ ಸರ್ವಜ್ಞತ್ವಮಪಿ ಉಪಪದ್ಯತೇ । ಕಥಮ್ ? ಯತ್ ತು ಜ್ಞಾನಂ ಮನ್ಯಸೇ ಸ ಸತ್ತ್ವಧರ್ಮಃ । "ಸತ್ತ್ವಾತ್ ಸಂಜಾಯತೇ ಜ್ಞಾನಮ್" (ಗೀ. ೧೪–೧೭) ಇತಿ ಸ್ಮೃತೇಃ। ತೇನ ಚ ಸತ್ತ್ವಧರ್ಮೇಣ ಜ್ಞಾನೇನ ಕಾರ್ಯಕರಣವನ್ತಃ[3] ಪುರುಷಾಃ ಸರ್ವಜ್ಞಾ ಯೋಗಿನಃ ಪ್ರಸಿದ್ಧಾಃ । ಸತ್ತ್ವಸ್ಯ ಹಿ ನಿರತಿಶಯೋತ್ಕರ್ಷೇ ಸರ್ವಜ್ಞತ್ವಂ ಪ್ರಸಿದ್ಧಮ್ । ನ ಕೇವಲಸ ಅಕಾರ್ಯಕರಣಸ್ಯ ಪುರುಷಸ್ಯಉಪಲಬ್ಧಿಮಾತ್ರಸ್ಯ ಸರ್ವಜ್ಞತ್ವಂ ಕಿಂಚಿಜ್ಜ್ಞತ್ವಂ ವಾ ಕಲ್ಪಯಿತುಂ ಶಕ್ಯಮ್ । ತ್ರಿಗುಣತ್ವಾತ್ ತು ಪ್ರಧಾನಸ್ಯ ಸರ್ವಜ್ಞಾನಕಾರಣಭೂತಂ ಸತ್ತ್ವಂ ಪ್ರಧಾನಾವಸ್ಥಾಯಾಮಪಿ ವಿದ್ಯತೇ ಇತಿ ಪ್ರಧಾನಸ್ಯ ಅಚೇತನಸ್ಯೈವ ಸತಃ ಸರ್ವಜ್ಞತ್ವಂ ಉಪಚರ್ಯತೇ ವೇದಾನ್ತವಾಕ್ಯೇಷು ॥

(ಭಾಷ್ಯಾರ್ಥ)

ಇವರೊಳಗೆ (ಒಬ್ಬರಾದ) ಸಾಂಖ್ಯರು ಅಚೇತನವಾದ ಮೂರು ಗುಣಗಳ ಪ್ರಧಾನವೇ[4] ಜಗತ್ತಿಗೆ ಕಾರಣವೆಂದು ಭಾವಿಸಿಕೊಂಡು ಹೇಳುತ್ತಾರೇನೆಂದರೆ :— ಯಾವ ವೇದಾಂತವಾಕ್ಯಗಳು ಸರ್ವಜ್ಞವೂ ಸರ್ವಶಕ್ತಿಗಳುಳ್ಳದ್ದೂ ಆಗಿರುವ

---

1. ವ್ಯಾಕರಣ, ಮೀಮಾಂಸಾ, ನ್ಯಾಯ–ಇವುಗಳನ್ನು ಬಲ್ಲ.

2. ಅನುಭವದ ಆಧಾರವಿಲ್ಲದ ಕೇವಲಯುಕ್ತಿಪ್ರಧಾನವಾದ ದರ್ಶನಗಳು ಒಂದಕ್ಕೊಂದು ವಿರುದ್ಧವಾಗಿರುವದು ಯುಕ್ತವೇ ಆಗಿದೆ ಎಂದು ಭಾವ. ಗೌ. ಕಾ. ಭಾ. ೩–೧೭, ೪–೩ರಿಂದ ೫ ನೋಡಿ.

3. 'ಕಾರ್ಯಕಾರಣ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

4. ಸತ್ತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯಾದ ಮೂಲಪ್ರಕೃತಿಯನ್ನು ಪ್ರಧಾನವೆಂದು ಸಾಂಖ್ಯರು ಕರೆಯುವರು.

ಬ್ರಹ್ಮವೇ ಜಗತ್ಕಾರಣವೆಂದು ತಿಳಿಸುತ್ತವೆ ಎಂದು (ನೀನು) ಹೇಳಿದೆಯೋ ಅವುಗಳನ್ನು ಪ್ರಧಾನವು ಕಾರಣವೆಂಬ ಪಕ್ಷಕ್ಕೂ ಹೊಂದಿಸಬಹುದಾಗಿದೆ ಮೊದಲನೆಯದಾಗಿ ಸರ್ವಶಕ್ತಿತ್ವವೆಂಬುದು ಪ್ರಧಾನಕ್ಕೂ ತನ್ನ ಕಾರ್ಯಗಳ ವಿಷಯದಲ್ಲಿ[1] ಹೊಂದುತ್ತದೆ. ಹೀಗೆಯೇ ಸರ್ವಜ್ಞತ್ವವೂ[2] ಹೊಂದುತ್ತದೆ, ಹೇಗೆಂದರೆ, (ನೀನು) ಜ್ಞಾನವೆಂದು ತಿಳಿದಿರುವೆಯಲ್ಲ, ಅದು ಸತ್ತ್ವದ ಧರ್ಮವು. "ಸತ್ತ್ವದಿಂದ ಜ್ಞಾನವುಂಟಾಗುತ್ತದೆ" (ಗೀ ೧೪-೧೭) ಎಂಬ ಸ್ಮೃತಿಯಿಂದ (ಇದು ಸಿದ್ಧವಾಗುತ್ತದೆ). ಮತ್ತು ಆ ಸತ್ತ್ವಧರ್ಮವಾದ ಜ್ಞಾನದಿಂದ ಕಾರ್ಯಕರಣಗಳುಳ್ಳ[4] ಪುರುಷರು ಸರ್ವಜ್ಞರಾದ ಯೋಗಿ[5]ಗಳೆಂದು ಪ್ರಸಿದ್ಧರಾಗಿರುತ್ತಾರೆ. ಸತ್ತ್ವವು ಮಿಗಿಲಿಲ್ಲದಷ್ಟು ಹೆಚ್ಚಾದರೆ ಸರ್ವಜ್ಞತ್ವವು(ಂಟಾಗುವದು) ಪ್ರಸಿದ್ಧವಾಗಿರುತ್ತದೆ. ಯಾವ ಕಾರ್ಯಕರಣಗಳೂ ಇಲ್ಲದ ಚೈತನ್ಯಮಾತ್ರ(ಸ್ವರೂಪ)ನಾದ ಬರಿಯ ಪುರುಷನು[6] ಸರ್ವಜ್ಞನೆಂದಾಗಲಿ ಕಿಂಚಿಜ್ಜ್ಞನೆಂದಾಗಲಿ ಕಲ್ಪಿಸುವದಕೆ ಆಗಲಾರದು. ಪ್ರಧಾನವಾದರೋ ಮೂರು ಗುಣಗಳೂ (ಅದರಲ್ಲಿ) ಇರುವದಾದ

---

1. ಕಾರಣದಲ್ಲಿ ಕಾರ್ಯವನ್ನುಂಟುಮಾಡುವ ಶಕ್ತಿಯಿರುವದು ಸಹಜವಾಗಿದೆ ಎಂದು ಭಾವ.

2. ಸರ್ವಜ್ಞನಾದ ಈಶ್ವರನನ್ನಾಗಲಿ ಮನುಷ್ಯರನ್ನಾಗಲಿ ಮೀಮಾಂಸಕರು ಒಪ್ಪುವದಿಲ್ಲ ಸಾಂಖ್ಯರು, ಬೌದ್ಧರು, ವೈಶೇಷಿಕರು-ಮುಂತಾದವರು ಸರ್ವಜ್ಞನನ್ನು ಒಪ್ಪುತ್ತಾರೆ ವೇದಾಂತಿಗಳು ಹೇಳುವ ಸರ್ವಜ್ಞತ್ವವನ್ನು ಸ್ಪಷ್ಟಪಡಿಸುವದಕ್ಕಾಗಿ ಇಲ್ಲಿ ಸಾಂಖ್ಯನ ಪೂರ್ವಪಕ್ಷವನ್ನು ತೆಗೆದಿದೆ.

3. ಗೀತೆಯನ್ನೆಲ್ಲ ಸಾಂಖ್ಯರು ಪ್ರಮಾಣವೆಂದು ಹಿಡಿಯದಿದ್ದರೂ ಸತ್ತ್ವದಿಂದ ಜ್ಞಾನವುಂಟಾಗುವದೆಂಬುದಕ್ಕೆ ವೇದಾಂತಿಯು ಒಪ್ಪುವ ಗೀತಾಪ್ರಾಮಾಣ್ಯವನ್ನು ಇಲ್ಲಿ ತೆಗೆದುಕೊಂಡಿರುತ್ತಾನೆ.

4. ಶರೀರೇಂದ್ರಿಯಗಳಿಲ್ಲದೆ ಜ್ಞಾನವು ಹೇಗೆ ಉಂಟಾದೀತು ?-ಎಂಬ ಭಾವದಿಂದ ಹೀಗೆಂದಿದೆ

5. ಯೋಗಿಗಳು ಸರ್ವಜ್ಞರೆಂದು ಆಸ್ತಿಕನಾಸ್ತಿಕದರ್ಶನದವರಲ್ಲಿ ಅನೇಕರು ಒಪ್ಪಿದ್ದರು. ತಮ್ಮ ತಮ್ಮ ಕಡೆಯ ಯೋಗಿಗಳ ಅನುಭವವನ್ನು ಪ್ರಮಾಣವಾಗಿ ವಾದದಲ್ಲಿ ಉದಾಹರಿಸುತ್ತಲೂ ಇದ್ದರು.

6. ಸಾಂಖ್ಯರ ಪುರುಷನೂ ವೇದಾಂತಿಗಳು ಹೇಳುವ ಔಪನಿಷದಪುರುಷನಾದ ಆತ್ಮನೂ, ಒಂದೇ ಎಂದು ಇಲ್ಲಿ ಇಟ್ಟುಕೊಂಡಿದೆ. ಮನಸ್ಸುಕೂಡ ಪ್ರಕೃತಿಯ ಪರಿಣಾಮವೇ ಆಗಿರುವಾಗ ಜ್ಞಾನವೆಂಬ ಧರ್ಮವು ಕೇವಲ ಆತ್ಮನಿಗೆ ಎಲ್ಲಿಂದ ಬರಬೇಕು ?-ಎಂದು ಭಾವ.

ರಿಂದ, ಸರ್ವಜ್ಞಾನಕ್ಕೆ ಕಾರಣವಾದ ಸತ್ತ್ವವು ಪ್ರಧಾನಾವಸ್ಥೆಯಲ್ಲಿಯೂ[1] ಇರುವದರಿಂದ ಪ್ರಧಾನವು ಅಚೇತನವೇ ಆದರೂ ಸರ್ವಜ್ಞವು ಎಂದು ವೇದಾಂತವಾಕ್ಯಗಳಲ್ಲಿ ಉಪಚಾರಕ್ಕಾಗಿ ಕರೆದಿರುತ್ತದೆ (ಎನ್ನಬಹುದು)

(ಭಾಷ್ಯ)

೬೬. ಅವಶ್ಯಂ ಚ ತ್ವಯಾಪಿ ಸರ್ವಜ್ಞಂ ಬ್ರಹ್ಮ ಅಭ್ಯುಪಗಚ್ಛತಾ ಸರ್ವಜ್ಞಾನಶಕ್ತಿಮತ್ತ್ವೇನೈವ ಸರ್ವಜ್ಞತ್ವಮ್ ಉಪಗನ್ತವ್ಯಮ್ । ನ ಹಿ ಸರ್ವವಿಷಯಂ ಜ್ಞಾನಂ ಕುರ್ವದೇವ ಬ್ರಹ್ಮ ವರ್ತತೇ । ತಥಾ ಹಿ-ಜ್ಞಾನಸ್ಯ ನಿತ್ಯತ್ವೇ ಜ್ಞಾನಕ್ರಿಯಾಂ ಪ್ರತಿ ಸ್ವಾತನ್ತ್ರ್ಯಂ ಬ್ರಹ್ಮಣೋ ಹೀಯೇತ । ಅಥ ಅನಿತ್ಯಂ ತತ್ ಇತಿ । ಜ್ಞಾನಕ್ರಿಯಾಯಾ ಉಪರಮೇತಾಪಿ ಬ್ರಹ್ಮ । ತದಾ ಸರ್ವಜ್ಞಾನಶಕ್ತಿಮತ್ತ್ವೇನೈವ ಸರ್ವಜ್ಞತ್ವಮ್ ಆಪತತಿ । ಅಪಿ ಚ ಪ್ರಾಗುತ್ಪತ್ತೇಃ ಸರ್ವಕಾರಕಶೂನ್ಯಂ ಬ್ರಹ್ಮ ಇಷ್ಯತೇ ತ್ವಯಾ । ನ ಚ ಜ್ಞಾನಸಾಧನಾನಾಂ ಶರೀರೇನ್ದ್ರಿಯಾದೀನಾಮ್ ಅಭಾವೇ ಜ್ಞಾನೋತ್ಪತ್ತಿಃ ಕಸ್ಯಚಿತ್ ಉಪಪನ್ನಾ । ಅಪಿ ಚ ಪ್ರಧಾನಸ್ಯ ಅನೇಕಾತ್ಮಕಸ್ಯ ಪರಿಣಾಮಸಂಭವಾತ್ ಕಾರಣತ್ವೋಪಪತ್ತಿಃ ಮೃದಾದಿವತ್, ನ ಅಸಂಹತಸ್ಯ ಏಕಾತ್ಮಕಸ್ಯ ಬ್ರಹ್ಮಣಃ ಇತಿ। ಏವಂ ಪ್ರಾಪ್ತೇ ಇದಂ ಸೂತ್ರಮ್ ಆರಭ್ಯತೇ—

(ಭಾಷ್ಯಾರ್ಥ)

ಇದಲ್ಲದೆ ಬ್ರಹ್ಮವು ಸರ್ವಜ್ಞವೆಂದು ಅಂಗೀಕರಿಸಿರುವ (ವೇದಾಂತಿಯಾದ. ನೀನೂ (ಅದರಲ್ಲಿ) ಸರ್ವಜ್ಞಾನಗಳ ಶಕ್ತಿಯಿರುವದೆಂಬುದರಿಂದಲೇ (ಅದನ್ನು) ಸರ್ವಜ್ಞವೆಂದು ಅಂಗೀಕರಿಸಬೇಕಾಗಿದೆ. ಏಕೆಂದರೆ ಬ್ರಹ್ಮವು ಎಲ್ಲಾ ವಿಷಯಗಳನ್ನೂ ಅರಿಯುವದೆಂಬ ಕ್ರಿಯೆಯನ್ನು (ಯಾವಾಗಲೂ) ಮಾಡುತ್ತಲೇ ಇರುವದಿಲ್ಲ. ಇದು ಹೇಗೆಂದರೆ, ಜ್ಞಾನವು ನಿತ್ಯವಾದರೆ ಜ್ಞಾನಕ್ರಿಯೆಯ ವಿಷಯದಲ್ಲಿ ಬ್ರಹ್ಮಕ್ಕೆ ಸ್ವಾತಂತ್ರ್ಯವು[2] ತಪ್ಪಿಹೋದೀತು, ಹಾಗಿಲ್ಲದೆ ಅದು ಅನಿತ್ಯವೆಂದರೆ ಬ್ರಹ್ಮವು ಜ್ಞಾನಕ್ರಿಯೆಯನ್ನು ಬಿಟ್ಟರಲೂ ಬಹುದು (ಎಂದಾಗುವದು). ಆಗ ಸರ್ವಜ್ಞಾನಗಳ ಶಕ್ತಿಯು ಇರುವದರಿಂದಲೇ (ಬ್ರಹ್ಮವು) ಸರ್ವಜ್ಞವು ಎಂದಾಗುವದು. ಇದೂ ಅಲ್ಲದೆ (ಜಗತ್ತಿನ) ಉತ್ಪತ್ತಿಯಾಗುವ ಮೊದಲು ಯಾವ ಕಾರಕವೂ

---

1. ಮೂರು ಗುಣಗಳೂ ಸಮಪ್ರಧಾನವಾಗಿರುವ ಪ್ರಲಯಾವಸ್ಥೆಯಲ್ಲಿ ಎಂದರ್ಥ ಸೃಷ್ಟಿಯಾದ ಬಳಿಕ ಗುಣಗಳು ವಿಷಮವಾಗಿರುವವು.

2. ಕರ್ತೃವು ತನ್ನ ಕ್ರಿಯೆಯನ್ನು ವಶದಲ್ಲಿಟ್ಟುಕೊಂಡಿರಬೇಕು; ಕ್ರಿಯೆಯು ನಿತ್ಯವಾಗಿದ್ದರೆ ಕರ್ತೃವಿನ ಸ್ವಾತಂತ್ರ್ಯವೇನು ?_ಎಂದು ಭಾವ.

ಬ್ರಹ್ಮದಲ್ಲಿರುವದಿಲ್ಲವೆಂದು ನೀನು ಒಪ್ಪಿರುತ್ತೀಯಷ್ಟೆ[1]. ಜ್ಞಾನಕ್ಕೆ ಸಾಧನವಾಗಿರುವ ಶರೀರ, ಇಂದ್ರಿಯ-ಮುಂತಾದವು (ಯಾವವೂ)ಇಲ್ಲದೆ ಜ್ಞಾನವುಂಟಾಗುವದೆಂಬುದು ಯಾರಿಗೂ ಯುಕ್ತವಾಗಲಾರದು. ಇನ್ನೊಂದು (ಮಾತು): ಪ್ರಧಾನವು ಅನೇಕ (ಅವಯವಗಳುಳ್ಳ)ದ್ದಾಗಿರುವದರಿಂದ (ಅದಕ್ಕೆ) ಪರಿಣಾಮವಾಗಬಹುದಾಗಿರುವದರಿಂದ (ಅದು) ಮಣ್ಣು ಮುಂತಾದವುಗಳಂತೆ ಕಾರಣವಾಗಬಹುದು, ಒಂದರೊಡನೆಯೂ ಸಂಹತವಾಗದ ತಾನೊಂದೇ ಇರುವ ಸ್ವರೂಪದ ಬ್ರಹ್ಮವು ಕಾರಣವಾಗಲಾರದು.

## ಸಿದ್ಧಾಂತ : ವೇದವಾಕ್ಯಗಳಲ್ಲಿರುವ ಜಗತ್ಕಾರಣವು ಅಚೇತನವಲ್ಲ

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಈ (ಮುಂದಿನ) ಸೂತ್ರವನ್ನು ಆರಂಭಿಸಲಾಗಿದೆ —

### ಈಕ್ಷತೇರ್ನಾಶಬ್ದಮ್ ॥೫॥

೫. (ಜಗತ್ಕಾರಣಕ್ಕೆ) ನೋಟವನ್ನು (ಹೇಳಿರುವ)ದರಿಂದ ಅಶಬ್ದವಾದ ಪ್ರಧಾನವು (ಜಗತ್ಕಾರಣ)ವಲ್ಲ.

(ಭಾಷ್ಯ)

೬೭. ನ ಸಾಙ್ಖ್ಯಪರಿಕಲ್ಪಿತಂ ಅಚೇತನಂ ಪ್ರಧಾನಂ ಜಗತಃ ಕಾರಣಂ ಶಕ್ಯಂ ವೇದಾನ್ತೇಷು ಆಶ್ರಯಿತುಮ್। ಅಶಬ್ದಂ ಹಿ ತತ್ । ಕಥಮ್ ಅಶಬ್ದತ್ವಮ್? ಈಕ್ಷತೇಃ । ಈಕ್ಷಿತೃತ್ವಶ್ರವಣಾತ್ ಕಾರಣಸ್ಯ । ಕಥಮ್ ? ಏವಂ ಹಿ ಶ್ರೂಯತೇ "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ. ೬-೨-೧ ಇತ್ಯುಪಕ್ರಮ್ಯ " ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿತತ್ ತೇಜೋಽಸೃಜತ- (ಛಾಂ. ೬-೨-೩) ಇತಿ। ತತ್ರ ಇದಂಶಬ್ದವಾಚ್ಯಂ ನಾಮರೂಪವ್ಯಾಕೃತಂ ಜಗತ್ ಪ್ರಾಗುತ್ಪತ್ತೇಃ ಸದಾತ್ಮನಾ ಅವಧಾರ್ಯ ತಸ್ಯೈವ ಪ್ರಕೃತಸ್ಯ ಸಚ್ಛಬ್ದವಾಚ್ಯಸ್ಯ ಈಕ್ಷಣಪೂರ್ವಕಂ ತೇಜಃಪ್ರಭೃತೇಃ ಸ್ರಷ್ಟೃತ್ವಂ ದರ್ಶಯತಿ। ತಥಾ ಅನ್ಯತ್ರ—"ಆತ್ಮಾ ವಾ ಇದಮೇಕ ಏವಾಗ್ರ ಆಸೀತ್। ನಾನ್ಯತ್ ಕಿಂಚನ ಮಿಷತ್। ಸ ಈಕ್ಷತ ಲೋಕಾನ್ನುಸೃಜಾ ಇತಿ । ಸ ಇಮಾಂಲ್ಲೋಕಾನಸೃಜತ" (ಐ. ೧-೧-೧) ಇತಿ ಈಕ್ಷಾ

1. ತನಗೆರಡನೆಯದಿಲ್ಲದ ಬ್ರಹ್ಮವೊಂದೇ ಇದ್ದಿತ ಎಂಬ ಶ್ರುತ್ಯರ್ಥದ ಸೂಚನೆಯಿದು.

2. ಸಾಂಖ್ಯನು ಪರಿಣಾಮವಾದಿ. ಅವನ ಮತದಂತೆ ಸಾವಯವವಾದ ವಸ್ತುಮಾತ್ರ ಪರಿಣಾಮವಾಗಿ ಕಾರ್ಯರೂಪವನ್ನು ಪಡೆಯುವದು. ಮಾಯಿಕವಾದ ಕಾರ್ಯಕಾರಣಭಾವವನ್ನು ಅವನು ಒಪ್ಪುವದಿಲ್ಲ.

ಪೂರ್ವಿಕಾಮೇವ ಸೃಷ್ಟಿಮ್ ಆಚಷ್ಟೇ। ಕ್ವಚಿಚ್ಚ ಷೋಡಶಕಲಂ ಪುರುಷಂ ಪ್ರಸ್ತುತ್ಯ ಆಹ–"ಸ ಈಕ್ಷಾಂಚಕ್ರೇ। ಸ ಪ್ರಾಣಮಸೃಜತ" (ಪ್ರ ೬-೩) ಇತಿ। 'ಈಕ್ಷತೇಃ' ಇತಿ ಚ ಧಾತ್ವರ್ಥನಿರ್ದೇಶೋಽಭಿಪ್ರೇತಃ। 'ಯಜತೇಃ' (ಜೈ. ಸೂ. ೭-೪-೧) ಇತಿವತ್। ನ ಧಾತುನಿರ್ದೇಶಃ। ತೇನ "ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ। ತಸ್ಮಾದೇತದ್ ಬ್ರಹ್ಮ ನಾಮರೂಪಮನ್ನಂ ಚ ಜಾಯತೇ"(ಮುಂ. ೧-೧-೯) ಇತ್ಯೇವಮಾದೀನ್ಯಪಿ ಸರ್ವಜ್ಞೇಶ್ವರಕಾರಣಪರಾಣಿ ವಾಕ್ಯಾನಿ ಉದಾಹರ್ತವ್ಯಾನಿ॥

(ಭಾಷ್ಯಾರ್ಥ)

ಸಾಂಖ್ಯರು ಕಲ್ಪಿಸಿರುವ[1] ಅಚೇತನವಾದ ಪ್ರಧಾನವು ವೇದಾಂತ (ವಚನ) ಗಳಲ್ಲಿ (ಹೇಳಿರುವ) ಜಗತ್ಕಾರಣವೆಂದು ಇಟ್ಟುಕೊಳ್ಳುವದಕ್ಕೆ ಆಗುವದಿಲ್ಲ. ಏಕೆಂದರೆ ಅದು ಶಬ್ದ (ಪ್ರಮಾಣಕ)ವಲ್ಲ. ಅದು ಶಬ್ದ (ಪ್ರಮಾಣಕ)ವಲ್ಲವೆಂಬುದು ಹೇಗೆ?–ಎಂದರೆ ನೋಟವನ್ನು (ಹೇಳಿರುವದ) ರಿಂದ. (ಜಗತ್ತಿನ) ಕಾರಣವು (ಯೋಚಿಸಿ) ನೋಡುವದೆಂದು ಶ್ರುತಿಯಲ್ಲಿರುವದರಿಂದ (ಎಂದರ್ಥ). ಹೇಗೆಂದರೆ, "ಎಲೈ ಸೋಮ್ಯನೆ, ಇದು ಮೊದಲು ಸತ್ತೇ, ಎರಡನೆಯದಿಲ್ಲದ ಒಂದೇ ಆಗಿತ್ತು" (ಛಾಂ. ೬-೨-೧) ಎಂದು ಉಪಕ್ರಮಿಸಿ "ಅದು ಬಹುವಾಗುವೆನು, ಹುಟ್ಟುವೆನು" ಎಂದು (ಯೋಚಿಸಿ) ನೋಡಿತು, "ಅದು ತೇಜಸ್ಸನ್ನು ಸೃಷ್ಟಿಮಾಡಿತು" (ಛಾಂ. ೬-೨-೩) ಎಂದಿಂತು ಶ್ರುತಿಯಲ್ಲಿದೆ ಇಲ್ಲಿ ಇದಂ (ಇದು ಎಂಬ) ಶಬ್ದಕ್ಕೆ ವಾಚ್ಯವಾದ ನಾಮರೂಪಗಳಾಗಿ ವ್ಯಾಕೃತವಾಗಿರುವ[2] ಜಗತ್ತು ಹುಟ್ಟುವ ಮುಂಚೆ ಸದ್ರೂಪ (ವಾಗಿಯೇ ಇತ್ತೆಂದು)[3] ಒತ್ತಿ ಹೇಳಿ ಆ ಪ್ರಕೃತವಾದ ಸಚ್ಛಬ್ದವಾಚ್ಯವಾದ (ವಸ್ತುವೇ ಯೋಚಿಸಿ) ನೋಡುವ[4] ಮೂಲಕ ತೇಜಸ್ಸು ಮುಂತಾದದ್ದನ್ನು ಸೃಷ್ಟಿಸಿತು ಎಂದು ತಿಳಿಸಿರುತ್ತದೆ. ಹೀಗೆಯೇ ಮತ್ತೊಂದು (ಕಡೆಯಲ್ಲಿ) "ಇದು ಮೊದಲು ಆತ್ಮನೇ ಆಗಿದ್ದಿತು, ಅಲುಗಾಡುವದು[5] ಮತ್ತೆಯಾವದೂ ಇರಲಿಲ್ಲ.

---

1. ಸಾಂಖ್ಯರ ಕಲ್ಪನೆಯೊಂದನ್ನು ಬಿಟ್ಟರೆ ಪ್ರಧಾನಕ್ಕೆ ಮತ್ತೆ ಯಾವ ಪ್ರಮಾಣವೂ ಇಲ್ಲವೆಂದು ಭಾವ.

2. ಬಿಡಿಬಿಡಿಯಾಗಿರುವ.

3. ಸತ್ತು ಜಗತ್ತಿಗೆ ಉಪಾದಾನಕಾರಣವೆಂದು ಸೂಚಿಸಿದಂತಾಯಿತು.

4. ಬ್ರಹ್ಮವು ಸೃಷ್ಟಿಗೆ ಪೂರ್ವದಲ್ಲಿ ಯೋಚಿಸಿ ನೋಡುವದೆಂಬುದು, ಜೀವರ ಅಂತಃಕರಣವೃತ್ತಿಯಂತೆ, ಮಾಯೆಯಲ್ಲಿ ಆಗುವ ವೃತ್ತಿವಿಶೇಷವೆಂದು ವ್ಯಾಖ್ಯಾನಕಾರರು ಕೆಲವರು ಬರೆದಿರುತ್ತಾರೆ. ಇದಕ್ಕೆ ಶ್ರುತಿಯಲ್ಲಾಗಲಿ ಭಾಷ್ಯದಲ್ಲಾಗಲಿ ಆಧಾರವಿಲ್ಲ.

5. ಇದು ಉಪಲಕ್ಷಣವು, ಚೇತನಾಚೇತನವಾದದ್ದು ಯಾವದೂ ಇರಲಿಲ್ಲವೆಂದರ್ಥ ಈ ಮಂತ್ರದ ಭಾಷ್ಯವನ್ನು ನೋಡಿ.

ಆತನು 'ಲೋಕಗಳನ್ನು ಸೃಷ್ಟಿಸೋಣ' ಎಂದು (ಯೋಚಿಸಿ) ನೋಡಿದನು; ಆತನು ಈ ಲೋಕಗಳನ್ನು ಸೃಷ್ಟಿಮಾಡಿದನು" (ಐ. ೧-೧-೧) ಎಂದು ಮೊದಲು ನೋಡಿದ ಮೇಲೆಯೇ ಸೃಷ್ಟಿ (ಮಾಡಿದನೆಂದು) ಹೇಳಿರುತ್ತದೆ. ಮತ್ತು ಒಂದು ಕಡೆಯಲ್ಲಿ ಹದಿನಾರು ಕಲೆಗಳ ಪುರುಷನ (ವಿಷಯ)ವನ್ನು[1] ಪ್ರಾರಂಭಿಸಿ "ಆತನು (ಯೋಚಿಸಿ) ನೋಡಿದನು, ಅವನು ಪ್ರಾಣವನ್ನು ಸೃಷ್ಟಿಸಿದನು.'' (ಪ್ರ. ೬-೩ ಎಂದು ಹೇಳಿರುತ್ತದೆ

(ಸೂತ್ರದಲ್ಲಿ) ಈಕ್ಷತೇಃ ಎಂಬ (ಮಾತಿನಿಂದ) 'ಯಜತೇಃ' (ಎಂಬ ಜೈಮಿನಿಯ ಸೂತ್ರದಲ್ಲಿರುವ ಪ್ರಯೋಗದಂತೆ) ಧಾತುವಿನ ಅರ್ಥವನ್ನು[2] ತಿಳಿಸಿದೆಯೇ (ಹೊರತು ಬರಿಯ ಈಕ್ಷ್ ಎಂಬ) ಧಾತುವನ್ನು ತಿಳಿಸಿಲ್ಲ. ಆದ್ದರಿಂದ "ಯಾವನು ಸರ್ವಜ್ಞನೋ (ಯಾವನು) ಸರ್ವವಿತ್ತೋ ಯಾವನ ತಪಸ್ಸು ಜ್ಞಾನಮಯವೋ, ಆತನಿಂದ ಈ (ಕಾರ್ಯ)ಬ್ರಹ್ಮವೂ ನಾಮವೂ ರೂಪವೂ ಅನ್ನವೂ[3] ಉಂಟಾಗುತ್ತದೆ" (ಮುಂ. ೧-೧-೯) ಎಂಬುದೇ ಮುಂತಾಗಿ ಸರ್ವಜ್ಞನಾದ ಈಶ್ವರನೇ (ಜಗ)ತ್ಕಾರಣನೆಂದು ಹೇಳುವ ವಾಕ್ಯಗಳನ್ನೂ ಇಲ್ಲಿ ಉದಾಹರಿಸಬಹುದಾಗಿದೆ.

## ಪ್ರಧಾನವು ಸರ್ವಜ್ಞವೆನಿಸಲಾರದು

(ಭಾಷ್ಯ)

೬೮. ಯತ್ ತು ಉಕ್ತಮ್–ಸತ್ತ್ವಧರ್ಮೇಣ ಜ್ಞಾನೇನ ಸರ್ವಜ್ಞಂ ಪ್ರಧಾನಂ ಭವಿಷ್ಯತಿ ಇತಿ ತತ್ ನೋಪಪದ್ಯತೇ । ನ ಹಿ ಪ್ರಧಾನಾವಸ್ಥಾಯಾಂ ಗುಣಸಾಮ್ಯಾತ್ ಸತ್ತ್ವಧರ್ಮೋ ಜ್ಞಾನಂ ಸಂಭವತಿ । ನನು ಉಕ್ತಮ್ ಸರ್ವಜ್ಞಾನಶಕ್ತಿಮತ್ತ್ವೇನ ಸರ್ವಜ್ಞಂ ಭವಿಷ್ಯತಿ ಇತಿ । ತದಪಿ ನೋಪಪದ್ಯತೇ । ಯದಿ ಗುಣಸಾಮ್ಯೇ ಸತಿ ಸತ್ತ್ವವ್ಯಪಾಶ್ರಯಾಂ ಜ್ಞಾನಶಕ್ತಿಮ್ ಆಶ್ರಿತ್ಯ ಸರ್ವಜ್ಞಂ ಪ್ರಧಾನಮ್ ಉಚ್ಯೇತ, ಕಾಮಂ ರಜಸ್ತಮೋವ್ಯಪಾಶ್ರಯಾಮಪಿ ಜ್ಞಾನಪ್ರತಿಬನ್ಧಕಶಕ್ತಿಮ್ ಆಶ್ರಿತ್ಯ ಕಿಂಚಿಜ್ಜ್ಞಮ್ ಉಚ್ಯೇತ। ಅಪಿ ಚ ನ ಅಸಾಕ್ಷಿಕಾ ಸತ್ತ್ವವೃತ್ತಿಃ

---

1. ಪ್ರಾಣ, ಶ್ರದ್ಧೆ, ಆಕಾಶ, ವಾಯು, ಜ್ಯೋತಿ, ಅಪ್ಪು, ಪೃಥಿವಿ, ಇಂದ್ರಿಯ, ಮನಸ್ಸು, ಅನ್ನ, ಜಲ, ತಪಸ್ಸು, ಮಂತ್ರ, ಕರ್ಮ, ಲೋಕಗಳು, ನಾಮ–ಎಂಬ ಕಲೆಗಳ (ಪ್ರ. ೬–೪).

2. ಅರಿವೆಂಬುದೇ ಇಲ್ಲಿ ಧಾತುವಿನ ಅರ್ಥ.

3. ಆಹಾರಪದಾರ್ಥವು.

ಜಾನಾತಿನಾ ಅಭಿಧೀಯತೇ। ನ ಚ ಅಚೇತನಸ್ಯ ಪ್ರಧಾನಸ್ಯ ಸಾಕ್ಷಿತ್ವಮ್ ಅಸ್ತಿ। ತಸ್ಮಾತ್ ಅನುಪಪನ್ನಂ ಪ್ರಧಾನಸ್ಯ ಸರ್ವಜ್ಞತ್ವಮ್। ಯೋಗಿನಾಂ ತು ಚೇತನತ್ವಾತ್ ಸತ್ತ್ವೋತ್ಕರ್ಷನಿಮಿತ್ತಂ ಸರ್ವಜ್ಞತ್ವಂ ಉಪಪನ್ನಮ್ ಇತಿ ಅನುದಾಹರಣಮ್। ಅಥ ಪುನಃ ಸಾಕ್ಷಿನಿಮಿತ್ತಂ ಈಕ್ಷಿತೃತ್ವಂ ಪ್ರಧಾನಸ್ಯ ಕಲ್ಪ್ಯೇತ ಯಥಾ ಅಗ್ನಿನಿಮಿತ್ತಮ್ ಅಯಃಪಿಣ್ಡಾದೇಃ ದಗ್ಧೃತ್ವಮ್। ತಥಾ ಸತಿ ಯನ್ನಿಮಿತ್ತಮ್ ಈಕ್ಷಿತೃತ್ವಂ ಪ್ರಧಾನಸ್ಯ ತದೇವ ಸರ್ವಜ್ಞಂ ಮುಖ್ಯಂ ಬ್ರಹ್ಮ ಜಗತಃ ಕಾರಣಮ್ ಇತಿ ಯುಕ್ತಮ್ ॥

(ಭಾಷ್ಯಾರ್ಥ)

ಸತ್ತ್ವದ ಧರ್ಮವಾದ ಜ್ಞಾನದಿಂದ ಪ್ರಧಾನವು ಸರ್ವಜ್ಞವಾಗಬಹುದು ಎಂದು (ಹಿಂದೆ ಪೂರ್ವಪಕ್ಷಿ) ಹೇಳಿದ್ದನಷ್ಟೆ[1], ಅದು ಸರಿಯಾಗುವದಿಲ್ಲ ಏಕೆಂದರೆ ಪ್ರಧಾನಾವಸ್ಥೆಯಲ್ಲಿ (ಮೂರು) ಗುಣಗಳೂ ಸಮವಾಗಿರುವದರಿಂದ (ಆಗ) ಸತ್ತ್ವಧರ್ಮವಾದ ಜ್ಞಾನವು ಇರಲಾರದು

(ಸಾಂಖ್ಯ) —ಎಲ್ಲವನ್ನೂ ಅರಿಯುವ ಶಕ್ತಿಯಿರುವದರಿಂದ (ಅದು) ಸರ್ವಜ್ಞವಾಗಬಹುದು ಎಂದು ಹೇಳಿದ್ದೆ(ವಲ್ಲ)!

(ಸಿದ್ಧಾಂತಿ) —ಅದೂ ಸರಿಯಾಗುವದಿಲ್ಲ ಗುಣಗಳು ಸಮವಾಗಿರುವಾಗ ಸತ್ತ್ವವನ್ನವಲಂಬಿಸಿರುವ ಜ್ಞಾನಶಕ್ತಿಯನ್ನಾಶ್ರಯಿಸಿ ಪ್ರಧಾನವನ್ನು ಸರ್ವಜ್ಞವೆನ್ನಬಹುದಾದರೆ ರಜಸ್ತಮೋ(ಗುಣ)ಗಳನ್ನವಲಂಬಿಸಿರುವ ಜ್ಞಾನಕ್ಕಡ್ಡಿಯನ್ನುಂಟುಮಾಡುವ ಶಕ್ತಿಯನ್ನಾಶ್ರಯಿಸಿ ಅದು ಕಿಂಚಿಜ್ಜ್ಞವೆಂದೂ ಧಾರಾಳವಾಗಿ ಹೇಳಬಹುದಾಗುವದು. ಇದಲ್ಲದೆ ಸಾಕ್ಷಿಯಿಲ್ಲದ (ಬರಿಯ) ಸತ್ತ್ವದ ವೃತ್ತಿಯನ್ನೇ ಜ್ಞಾ (ಅರಿ ಎಂಬ) ಧಾತುವಿನಿಂದ ಕರೆಯುವದಕ್ಕಿಲ್ಲ, ಅಚೇತನವಾದ ಪ್ರಧಾನವು ಸಾಕ್ಷಿಯಾಗಲೂ ಆರದು. ಆದ್ದರಿಂದ ಪ್ರಧಾನವು[2] ಸರ್ವಜ್ಞವೆಂಬುದು ಸರಿಯಲ್ಲ. ಯೋಗಿಗಳಾದರೋ, ಚೇತನಸ್ವರೂಪರಾದ್ದರಿಂದ ಸತ್ತ್ವವು ಹೆಚ್ಚಿದ ನಿಮಿತ್ತದಿಂದ (ಅವರಿಗೆ) ಸರ್ವಜ್ಞತ್ವವು(ಂಟಾಗುವದೆಂಬುದು) ಹೊಂದುತ್ತದೆಯಾಗಿ (ಅದು ಪ್ರಧಾನವು ಸರ್ವಜ್ಞವೆಂಬುದಕ್ಕೆ ಸರಿಯಾದ) ಉದಾಹರಣೆಯಲ್ಲ.

---

1. ಭಾ. ಭಾ ೬೫ರಲ್ಲಿ

2. ಜ್ಞಾನಶಬ್ದಕ್ಕೆ ವಾಚ್ಯವಾಗಿರುವದು ಬರಿಯ ವೃತ್ತಿಯಲ್ಲ, ಜ್ಞಾನಸ್ವರೂಪವಾಗಿರುವ ಸಾಕ್ಷಿಚೈತನ್ಯಕ್ಕೆ ವಿಷಯವಾಗಿರುವ ಜ್ಞಾನಾಭಾಸವಾಗಿರುವ ವೃತ್ತಿಯೇ ಜ್ಞಾನಶಬ್ದವಾಚ್ಯ. ತೈ. ಭಾ. ೨.೧ (ಭಾ. ಭಾ. ೧೦೬).

ಇನ್ನು(ಇದನ್ನು ಬಿಟ್ಟು) ಬೆಂಕಿಯು ನಿಮಿತ್ತದಿಂದ ಕಬ್ಬಿಣದ ಗಟ್ಟಿಯೇ ಮುಂತಾದವುಗಳು ಸುಡುವ (ಕ್ರಿಯೆಯ ಕರ್ತೃ) ಗಳಾಗುವಂತೆ ಸಾಕ್ಷಿಯ ನಿಮಿತ್ತದಿಂದಲೇ ಪ್ರಧಾನಕ್ಕೂ ಈಕ್ಷಿತೃತ್ವ (ವುಂಟಾಗುವದೆಂದು) ಕಲ್ಪಿಸುವದಾದರೆ[1] ಹಾಗಾದ (ಪಕ್ಷ) ದಲ್ಲಿ ಯಾವ ಸಾಕ್ಷಿಯಾದ (ಬ್ರಹ್ಮದ) ನಿಮಿತ್ತದಿಂದ ಪ್ರಧಾನಕ್ಕೆ ಈಕ್ಷಿತೃತ್ವ ವುಂಟಾಗುವ) ದೆನ್ನುವಿರೋ ಆ ಮುಖ್ಯಸರ್ವಜ್ಞವಾದ[2] ಬ್ರಹ್ಮವೇ ಜಗತ್ತಿಗೆ ಕಾರಣವೆಂಬುದು ಯುಕ್ತವು.

## ಬ್ರಹ್ಮಕ್ಕೇ ಮುಖ್ಯಸರ್ವಜ್ಞತ್ವವು ಹೊಂದುತ್ತದೆ

(ಭಾಷ್ಯ)

೬೯. ಯತ್ ಪುನರುಕ್ತಮ್ ಬ್ರಹ್ಮಣೋಽಪಿ ನ ಮುಖ್ಯಂ ಸರ್ವಜ್ಞತ್ವಂ ಉಪಪದ್ಯತೇ, ನಿತ್ಯಜ್ಞಾನಕ್ರಿಯತ್ವೇ ಜ್ಞಾನಕ್ರಿಯಾಂ ಪ್ರತಿ ಸ್ವಾತನ್ತ್ರ್ಯಾಸಂಭವಾತ್ ಇತಿ। ಅತ್ರ ಉಚ್ಯತೇ। ಇದಂ ತಾವತ್ ಭವಾನ್ ಪ್ರಷ್ಟವ್ಯಃ-ಕಥಂ ನಿತ್ಯಜ್ಞಾನಕ್ರಿಯತ್ವೇ ಸರ್ವಜ್ಞತ್ವಹಾನಿಃ ಇತಿ। ಯಸ್ಯ ಹಿ ಸರ್ವವಿಷಯಾವಭಾಸನಕ್ಷಮಂ ಜ್ಞಾನಂ ನಿತ್ಯಮ್ ಅಸ್ತಿ, ಸಃ ಅಸರ್ವಜ್ಞಃ ಇತಿ ವಿಪ್ರತಿಷಿದ್ಧಮ್। ಅನಿತ್ಯತ್ವೇ ಹಿ ಜ್ಞಾನಸ್ಯ ಕದಾಚಿತ್ ಜಾನಾತಿ ಕದಾಚಿತ್ ನ ಜಾನಾತಿ ಇತಿ ಅಸರ್ವಜ್ಞತ್ವಮಪಿ ಸ್ಯಾತ್। ನಾಸೌ ಜ್ಞಾನನಿತ್ಯತ್ವೇ ದೋಷಃ ಅಸ್ತಿ। ಜ್ಞಾನನಿತ್ಯತ್ವೇ ಜ್ಞಾನವಿಷಯಃ ಸ್ವಾತನ್ತ್ರ್ಯವ್ಯಪದೇಶೋ ನೋಪಪದ್ಯತೇ ಇತಿ ಚೇತ್। ನ। ಪ್ರತತೌಷ್ಣ್ಯಪ್ರಕಾಶೇಽಪಿ ಸವಿತರಿ 'ದಹತಿ' 'ಪ್ರಕಾಶಯತಿ' ಇತಿ ಸ್ವಾತನ್ತ್ರ್ಯವ್ಯಪದೇಶದರ್ಶನಾತ್। ನನು ಸವಿತುರ್ದಾಹ್ಯಪ್ರಕಾಶ್ಯಸಂಯೋಗೇ ಸತಿ 'ದಹತಿ' 'ಪ್ರಕಾಶಯತಿ' ಇತಿ ವ್ಯಪದೇಶಃ ಸ್ಯಾತ್। ನ ತು ಬ್ರಹ್ಮಣಃ ಪ್ರಾಗುತ್ಪತ್ತೇಃ ಜ್ಞಾನಕರ್ಮಸಂಯೋಗಃ[3] ಅಸ್ತಿ ಇತಿ ವಿಷಮೋ ದೃಷ್ಟಾನ್ತಃ। ನ। ಅಸತ್ಯಪಿ ಚ ಕರ್ಮಣಿ 'ಸವಿತಾ ಪ್ರಕಾಶತೇ' ಇತಿ ಕರ್ತೃತ್ವವ್ಯಪದೇಶದರ್ಶನಾತ್। ಏವಮ್ ಅಸತ್ಯಪಿ ಜ್ಞಾನಕರ್ಮಣಿ ಬ್ರಹ್ಮಣಃ "ತದೈಕ್ಷತ" ಇತಿ ಕರ್ತೃತ್ವವ್ಯಪದೇಶೋಪಪತ್ತೇಃ ನ ವೈಷಮ್ಯಮ್। ಕರ್ಮಾಪೇಕ್ಷಾಯಾಂ ತು ಬ್ರಹ್ಮಣಿ ಈಕ್ಷಿತೃತ್ವಶ್ರುತಯಃ ಸುತರಾಮ್ ಉಪಪನ್ನಾಃ। ಕಿಂ

---

1. ಇದು ವೇದಾಂತಿಗೇ ಇಷ್ಟವಾದದ್ದು, ವೃತ್ತಿಯು ಜ್ಞಾನವ್ಯಾಪ್ತವಾಗಿರುವದರಿಂದಲೇ ಜ್ಞಾನರೂಪವಾಗಿ ತೋರುತ್ತದೆ. ತೈ. ಭಾ. ಭಾ. ೧೦೬ನ್ನು ನೋಡಿ.

2. ಬ್ರಹ್ಮವು ಹೀಗೆ ಮುಖ್ಯ ಸರ್ವಜ್ಞವಾದರೂ ಜ್ಞಾನಶಬ್ದವಾಚ್ಯವಲ್ಲವೆಂಬುದನು ಲಕ್ಷ್ಯದಲ್ಲಿಡಬೇಕು.

3. 'ಜ್ಞಾನಜ್ಞೇಯಕರ್ಮಸಂಯೋಗಃ' ಎಂಬ ಪಾಠದಲ್ಲಿ 'ಜ್ಞೇಯ' ಹೆಚ್ಚು.

ಪುನಸ್ತತ್ ಕರ್ಮ ಯತ್ ಪ್ರಾಗುತ್ಪತ್ತೇಃ ಈಶ್ವರಜ್ಞಾನಸ್ಯ ವಿಷಯೋ ಭವತಿ ಇತಿ ? ತತ್ತ್ವಾನ್ಯತ್ವಾಭ್ಯಾಮ್ ಅನಿರ್ವಚನೀಯೇ ನಾಮರೂಪೇ ಅವ್ಯಾಕೃತೇ ವ್ಯಾಚಿಕೀರ್ಷಿತೇ ಇತಿ ಬ್ರೂಮಃ । ಯತ್ಪ್ರಸಾದಾತ್ ಹಿ ಯೋಗಿನಾಮಪಿ ಅತೀತಾನಾಗತವಿಷಯಂ ಪ್ರತ್ಯಕ್ಷಂ ಜ್ಞಾನಮ್ ಇಚ್ಛನ್ತಿ ಯೋಗಶಾಸ್ತ್ರವಿದಃ, ಕಿಮು ವಕ್ತವ್ಯಂ ತಸ್ಯ ನಿತ್ಯಸಿದ್ಧಸ್ಯ ಈಶ್ವರಸ್ಯ ಸೃಷ್ಟಿಸ್ಥಿತಿಸಂಹೃತಿವಿಷಯಂ ನಿತ್ಯಜ್ಞಾನಂ ಭವತಿ ಇತಿ ||

(ಭಾಷ್ಯಾರ್ಥ)

ಇನ್ನು (ಬ್ರಹ್ಮದಲ್ಲಿರುವ) ಜ್ಞಾನಕ್ರಿಯೆಯು ನಿತ್ಯವಾಗಿದ್ದರೆ ಅರಿಯೋಣವೆಂಬ ಕ್ರಿಯೆಯ ವಿಷಯದಲ್ಲಿ (ಬ್ರಹ್ಮಕ್ಕೆ) ಸ್ವಾತಂತ್ರ್ಯವಿರಲಾರದಾದ್ದರಿಂದ ಬ್ರಹ್ಮಕ್ಕೂ ಮುಖ್ಯಸರ್ವಜ್ಞತ್ವವು ಹೊಂದುವದಿಲ್ಲ ಎಂದು (ಹಿಂದೆ ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ[1], ಅದಕ್ಕೆ (ಈಗ ಉತ್ತರವನ್ನು) ಹೇಳುತ್ತೇವೆ ಮೊದಲು ನಿನ್ನನ್ನು ಈ (ಪ್ರಶ್ನೆಯನ್ನು) ಕೇಳಬೇಕಾಗಿದೆ ಜ್ಞಾನಕ್ರಿಯೆಯು ನಿತ್ಯವಾಗಿದ್ದರೆ (ಬ್ರಹ್ಮದ) ಸರ್ವಜ್ಞತ್ವಕ್ಕೆ ಹೇಗೆ ಹಾನಿ (ಯುಂಟಾಗುತ್ತದೆ)? ಯಾವನಿಗೆ ಎಲ್ಲಾ ವಿಷಯುಗಳನ್ನೂ ಬೆಳಗಬಲ್ಲ ಜ್ಞಾನವು ಎಂದೆಂದಿಗೂ ಇದ್ದುಕೊಂಡಿರುವದೋ ಆತನು ಸರ್ವಜ್ಞನಲ್ಲ ಎಂಬುದು (ತನಗೆ ತಾನೇ) ವಿರುದ್ಧವು.[2] ಏಕೆಂದರೆ ಜ್ಞಾನವು ಅನಿತ್ಯವಾಗಿದ್ದರೆ ಕೆಲವು ವೇಳೆ ಅರಿಯುವನು, ಕೆಲವು ವೇಳೆ ಅರಿಯದಿರುವನು-(ಹೀಗಿರು)ವದರಿಂದ ಅಸರ್ವಜ್ಞತ್ವವೂ ಆದೀತು, ಆದರೆ ಜ್ಞಾನವು ನಿತವೆಂಬ ಪಕ್ಷ)ದಲ್ಲಿ ಈ ದೋಷವಿರುವದಿಲ್ಲ.

(ಸಾಂಖ್ಯ) —ಜ್ಞಾನವು ನಿತ್ಯವಾಗಿದ್ದರೆ ('ಅರಿಯುತ್ತಾನೆ' ಎಂದು) ಜ್ಞಾನದ ವಿಷಯವಾಗಿ ಸ್ವಾತಂತ್ರ್ಯವನ್ನು[3] ಹೇಳುವದು ಸರಿಯಾಗುವದಿಲ್ಲವಲ್ಲ!

(ವೇದಾಂತಿ).—ಹಾಗಲ್ಲ. ಏಕೆಂದರೆ ಎಡೆಬಿಡದೆ ಬಿಸಿಯೂ ಬೆಳಕೂ ಇರುವ ಸೂರ್ಯನ (ವಿಷಯ)ದಲ್ಲಿಯೂ 'ಸುಡುತ್ತಾನೆ' 'ಬೆಳಗುತ್ತಾನೆ' ಎಂದು ಸ್ವಾತಂತ್ರ್ಯವನ್ನು ಹೇಳುವದು ಕಂಡುಬರುತ್ತದೆ.[4]

---

1. ಭಾ. ಭಾ ೬೬ ರಲ್ಲಿ.

2 ಬೆಳಗಾವದಕ್ಕೆ ವಿಷಯವಿರಲಿ ಇಲ್ಲದಿರಲಿ, ಬೆಳಗುವ ಜ್ಞಾನವು ಸ್ವರೂಪವಾಗಿರುವದರಿಂದ ಇದ್ದೇ ಇರುತ್ತದೆ ಎಂದು ಭಾವ.

3. ಕರ್ತೃತ್ವವನ್ನು, ಕರ್ತೃವೆಂದರೆ ಹೊಸದಾಗಿ ಉಂಟಾಗುವ ಕ್ರಿಯೆಯ ಸಂಬಂಧವು ಎಂದು ಸಾಂಖ್ಯನ ಆಶಯ.

4. ಈ ದೃಷ್ಟಾಂತದಲ್ಲಿ ಸುಡುವಿಕೆ, ಬೆಳಗುವಿಕೆ_ಎಂಬುದು ಸೂರ್ಯನಲ್ಲಿ ಹೊಸದಾಗಿ ಉಂಟಾಗುವ ಕ್ರಿಯೆಯಲ್ಲ, ಏಕೆಂದರೆ ಸೂರ್ಯನು ಸುಡದೆ ಬೆಳಗದೆ ಇರುವ ಕಾಲವೇ ಇಲ್ಲ.

(ಸಾಂಖ್ಯ):—ಸೂರ್ಯನಿಗೆ ಸುಡತಕ್ಕ (ಮತ್ತು) ಬೆಳಗತಕ್ಕ ವಸ್ತುವಿನ ಸಂಬಂಧದಿಂದ 'ಸುಡುತ್ತಾನೆ' 'ಬೆಳಗುತ್ತಾನೆ' ಎಂಬ ಶಬ್ದವ್ಯವಹಾರವಾಗಬಹುದು. ಆದರೆ ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮದ ಜ್ಞಾನಕ್ಕೆ ಕರ್ಮವಾಗಿರುವ (ಯಾವ ವಸ್ತುವಿನ) ಸಂಬಂಧವೂ[1] ಇರುವದಿಲ್ಲ. ಆದ್ದರಿಂದ ದೃಷ್ಟಾಂತವು ಸಮವಾಗಲಿಲ್ಲ.

(ವೇದಾಂತಿ)—(ಇದೂ ಸರಿ)ಯಲ್ಲ. ಏಕೆಂದರೆ (ಯಾವ) ಕರ್ಮವೂ ಇಲ್ಲದಿರುವಾಗಲೂ[2] 'ಸೂರ್ಯನು ಬೆಳಗುತ್ತಾನೆ' ಎಂದು ಕರ್ತೃತ್ವವನ್ನು ಹೇಳುವದು ಕಂಡುಬರುತ್ತದೆ ಇದರಂತೆ ಜ್ಞಾನದ ಕರ್ಮವು ಇಲ್ಲದಿದ್ದರೂ "ಅದು (ಯೋಚಿಸಿ) ನೋಡಿತು" ಎಂದು ಕರ್ತೃತ್ವವನ್ನು ಹೇಳಬಹುದಾಗಿದೆ. ಆದ್ದರಿಂದ ದೃಷ್ಟಾಂತವು ವಿಷಮವಾಗಲಿಲ್ಲ.

ಕರ್ಮವು ಬೇಕೆಂದರಂತೂ ಬ್ರಹ್ಮದ (ವಿಷಯ)ದಲ್ಲಿ ಈಕ್ಷಿತೃತ್ವ(ವನ್ನು ಹೇಳುವ) ಶ್ರುತಿಗಳು ಮತ್ತೂ ಚೆನ್ನಾಗಿ ಹೊಂದುತ್ತವೆ[3].

(ಸಾಂಖ್ಯ): ಹಾಗಾದರೆ ಸೃಷ್ಟಿಗಿಂತ ಮುಂಚೆ ಈಶ್ವರನ ಜ್ಞಾನಕ್ಕೆ ವಿಷಯವಾಗಬಹುದಾದ ಆ ಕರ್ಮವು ಯಾವದು?

(ವೇದಾಂತಿ):–ಆತನ ಸ್ವರೂಪವೆಂದಾಗಲಿ ಬೇರೆಯೆಂದಾಗಲಿ ಗೊತ್ತುಪಡಿಸಿ ಹೇಳುವದಕ್ಕೆ ಬರುವಂತಿಲ್ಲದ[4], (ಆಗ್ಗೆ) ಬಿಡಿಬಿಡಿಯಾಗಿಲ್ಲದೆ ಇನ್ನು ಮುಂದೆ ಬಿಡಿಬಿಡಿಯಾಗಿ ಮಾಡಬೇಕೆಂದಿರುವ ನಾಮರೂಪಗಳು[5]

---

1. ಜ್ಞಾನಕ್ಕೆ ಕರ್ಮವು ಇರಲೇ ಬೇಕೆಂದು ಸಾಂಖ್ಯನು ಇಟ್ಟುಕೊಂಡಿದ್ದಾನೆ ಸಿದ್ಧಾಂತಿಯು ವ್ಯವಹಾರದೃಷ್ಟಿಯಿಂದ ಇದನ್ನು ಒಪ್ಪುತ್ತಾನೆ.

2. ಇಲ್ಲವೆಂದಿಟ್ಟುಕೊಂಡಿರುವಾಗಲೂ ಎಂದರ್ಥ. ಸೂರ್ಯನು ಬೆಳಗುತ್ತಾನೆ ಎಂಬ ದೃಷ್ಟಾಂತದಲ್ಲಿ ಸೂರ್ಯನು ಬೆಳಕಿನ ಸ್ವರೂಪನು ಎಂದೇ ಅರ್ಥ. ಇದರಂತೆ 'ಆತ್ಮನು ಅರಿಯುತ್ತಾನೆ' ಎಂಬಲ್ಲಿ ಆತ್ಮನು ಜ್ಞಾನಸ್ವರೂಪನು ಎಂದೇ ಅರ್ಥ. ಎರಡು ಕಡೆಯಲ್ಲಿಯೂ ಕರ್ಮದ ವಿವಕ್ಷೆಯಿಲ್ಲ ಎಂದು ಭಾವ ಇದು ಪರಮಾರ್ಥದೃಷ್ಟಿಯಿಂದ ಆಡಿದ ಮಾತು.

3 ಈಗ ವ್ಯವಹಾರದೃಷ್ಟಿಯಿಂದ ಜ್ಞಾನದ ಕರ್ಮವನ್ನು ತಿಳಿಸುತ್ತಾರೆ.

4. ನಾಮರೂಪಗಳು ಬ್ರಹ್ಮಕ್ಕಿಂತ ಬೇರೆಯೆಂದಾಗಲಿ ಬೇರೆಯಿಲ್ಲವೆಂದಾಗಲಿ ಹೇಳುವದಕ್ಕೆ ಬರುವದಿಲ್ಲವೆಂಬುದಕ್ಕೆ ನೀರುನೊರೆಗಳ ದೃಷ್ಟಾಂತವನ್ನು ಐ.ಭಾ.ಭಾ.೨೮.ಛಾಂ.ಭಾ. ೮-೧೪-೧, ಬೃ.ಭಾ. ೧-೮-೨, ೩-೫-೧ ರಲ್ಲಿ ಕೊಟ್ಟಿದೆ. ಇಲ್ಲಿರುವ ಅನಿರ್ವಚನೀಯವೆಂಬ ಶಬ್ದದ ಬಗ್ಗೆ ಪೀಠಿಕೆಯನ್ನು ನೋಡಿ

5. ಅವ್ಯಾಕೃತನಾಮರೂಪಗಳಿಗೂ ಪ್ರಧಾನಕ್ಕೂ ಇರುವ ಸಂಬಂಧವನ್ನು ಪೀಠಿಕೆಯಲ್ಲಿ ವಿವರಿಸಿದೆ.

**(ಈಶ್ವರನ ಜ್ಞಾನದ ಕರ್ಮವು)** ಎಂದು ಹೇಳುತ್ತೇವೆ. **ಯಾವನ ಪ್ರಸಾದ ದಿಂದ ಯೋಗಿಗಳಿಗೂ (ಹಿಂದೆ) ಆಗಿರುವ ಮತ್ತು (ಇನ್ನೂ) ಬರದೆ ಇರುವ (ವಸ್ತುಗಳ) ವಿಷಯದ ಪ್ರತ್ಯಕ್ಷಜ್ಞಾನವುಂಟಾಗುವದೆಂದು ಯೋಗಶಾಸ್ತ್ರ ವನ್ನು ಬಲ್ಲವರು ಹೇಳುವರೋ[1] ಆ ನಿತ್ಯಸಿದ್ಧನಾದ ಈಶ್ವರನಿಗೆ ಸೃಷ್ಟಿಸ್ಥಿತಿ ಸಂಹಾರಗಳ ವಿಷಯದಲ್ಲಿ ನಿತ್ಯಜ್ಞಾನವು ಇರುವದೆಂಬುದನ್ನು ಹೇಳತಕ್ಕದ್ದೇನು ?**

## ಬ್ರಹ್ಮಕ್ಕೆ ಜೀವರುಗಳಂತೆ ಜ್ಞಾನಕ್ಕೆ ಸಾಧನಗಳು ಬೇಕಿಲ್ಲ

(ಭಾಷ್ಯ)

೭೦. ಯದಪಿ ಉಕ್ತಮ್––ಪ್ರಾಗುತ್ಪತ್ತೇಃ ಬ್ರಹ್ಮಣಃ ಶರೀರಾದಿ ಸಂಬನ್ಧಮ್ ಅನ್ತರೇಣ ಈಕ್ಷಿತೃತ್ವಮ್ ಅನುಪಪನ್ನಮ್ ಇತಿ । ನ ತತ್ ಚೋದ್ಯಮ್ ಅವತರತಿ । ಸವಿತೃಪ್ರಕಾಶವತ್ ಬ್ರಹ್ಮಣೋ ಜ್ಞಾನಸ್ವರೂಪನಿತ್ಯತ್ವೇ ಜ್ಞಾನಸಾಧನಾಪೇಕ್ಷಾನುಪಪತ್ತೇಃ । ಅಪಿ ಚ ಅವಿದ್ಯಾದಿಮತಃ ಸಂಸಾರಿಣಃ ಶರೀರಾದ್ಯಪೇಕ್ಷಾ ಜ್ಞಾನೋತ್ಪತ್ತಿಃ ಸ್ಯಾತ್, ನ ಜ್ಞಾನಪ್ರತಿಬನ್ಧಕಾರಣರಹಿತಸ್ಯ ಈಶ್ವರಸ್ಯ । ಮನ್ತ್ರೌ ಚ ಇಮೌ ಈಶ್ವರಸ್ಯ ಶರೀರಾದ್ಯನಪೇಕ್ಷತಾಮ್ ಅನಾವರಣ ಜ್ಞಾನತಾಂ ಚ ದರ್ಶಯತಃ–"ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ । ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" (ಶ್ವೇ. ೬-೮) ಇತಿ । "ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ । ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾನ್ತಮ್" (ಶ್ವೇ. ೩-೧೯) ಇತಿ ಚ ॥

(ಭಾಷ್ಯಾರ್ಥ)

ಇನ್ನು ಸೃಷ್ಟಿಗೆ ಮುಂಚೆ ಬ್ರಹ್ಮಕ್ಕೆ ಶರೀರಾದಿಗಳ ಸಂಬಂಧವಿಲ್ಲದೆ ಈಕ್ಷಿತೃತ್ವವು (ಅರಿಯುವಿಕೆಯು) ಹೊಂದುವದಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ[2] ಆ ಆಕ್ಷೇಪಣೆಯೂ (ಇಲ್ಲಿ) ಬರುವಂತಿಲ್ಲ. ಏಕೆಂದರೆ **ಸೂರ್ಯನ ಬೆಳಕಿನಂತೆ ಬ್ರಹ್ಮದ ಜ್ಞಾನಸ್ವರೂಪವು ನಿತ್ಯವಾಗಿರುವಲ್ಲಿ ಜ್ಞಾನಸಾಮಗ್ರಿಗಳೇನೂ**

---

1. ಯೋ. ಸೂ. ೧-೨೫ ನೋಡಿ. ಯೋಗಿಪ್ರತ್ಯಕ್ಷಕ್ಕೆ ಕಾಲತ್ರಯದ ವಿಷಯಗಳೂ ಗೋಚರವಾಗುವವೆಂದು ಯೋಗಶಾಸ್ತ್ರದವರ ಹೇಳಿಕೆ.

2. ಭಾ. ಭಾ. ೬೬ರಲ್ಲಿ.

ಬೇಕಿರುವದಿಲ್ಲ[1]. ಇದಲ್ಲದೆ ಅವಿದ್ಯೆಯೇ ಮುಂತಾದ (ದೋಷಗಳಿರುವ)[2] ಸಂಸಾರಿಗೆ ಶರೀರಾದಿಗಳ ಅಪೇಕ್ಷೆಯಿಂದ ಜ್ಞಾನವುಂಟಾಗುವದೆಂಬುದು (ಸರಿ)ಯಾದೀತೇ (ಹೊರತು) ಜ್ಞಾನಕ್ಕೆ ಅಡ್ಡಿಯಾಗಿರುವ ಕಾರಣವೇ ಇಲ್ಲದ ಈಶ್ವರನಿಗೆ (ಇದು ಸರಿ) ಯಾಗಲಾರದು. ಈ (ಮುಂದೆ ಕೊಟ್ಟಿರುವ) ಎರಡು ಮಂತ್ರಗಳು ಈಶ್ವರನಿಗೆ (ಜ್ಞಾನವುಂಟಾಗುವದಕ್ಕೆ) ಶರೀರಾದಿಗಳ ಅಪೇಕ್ಷೆಯಿಲ್ಲವೆಂತಲೂ (ಅವನ) ಜ್ಞಾನಕ್ಕೆ (ಯಾವ) ಮುಸುಕೂ ಇಲ್ಲವೆಂತಲೂ ತಿಳಿಸುತ್ತವೆ[3]. "ಆತನಿಗೆ ಕಾರ್ಯವೂ ಕರಣವೂ ಇರುವದಿಲ್ಲ, ಅವನಿಗೆ ಸಮನೂ ಅಧಿಕನೂ ಕಂಡುಬಂದಿಲ್ಲ: ಈತನ ಪರಶಕ್ತಿಯು ವಿವಿಧವಾಗಿಯೇ (ಇರುವದೆಂದೂ) ಸ್ವಾಭಾವಿಕವಾಗಿರುವ ಜ್ಞಾನಬಲದಿಂದ ಆಗಿರುವ ಕ್ರಿಯೆಯುಳ್ಳದ್ದೆಂದೂ ಕೇಳಬರುತ್ತಿದೆ" (ಶ್ವೇ. ೬-೮), "ಆತನು ಕೈಕಾಲುಗಳಿಲ್ಲದೆ ವೇಗವಾಗಿ ನಡೆಯುವವನು, ಹಿಡಿಯುವವನು; ಕಣ್ಣಿಲ್ಲದೆ ನೋಡುತ್ತಾನೆ, ಕಿವಿಯಿಲ್ಲದೆ ಕೇಳುತ್ತಾನೆ ಆತನು ಅರಿಯತಕ್ಕ(ದ್ದೆಲ್ಲ)ವನ್ನೂ ಅರಿಯುತ್ತಾನೆ, ಆತನನ್ನು ಅರಿಯುವವನು (ಯಾವನೂ) ಇಲ್ಲ. ಆತನನ್ನು (ಎಲ್ಲರಿಗೂ) ಮೊದಲಿನ ಮಹಾಪುರುಷನೆನ್ನುವರು" (ಶ್ವೇ. ೩-೧೯)

## ಜೀವೇಶ್ವರವ್ಯವಹಾರವು ಉಪಾಧಿಕೃತವಾದದ್ದು

(ಭಾಷ್ಯ)

೭೧. ನನು ನಾಸ್ತಿ ತಾವತ್[4] ಜ್ಞಾನಪ್ರತಿಬನ್ಧಕಾರಣಾವಾನ್ ಈಶ್ವರಾದನ್ಯಃ ಸಂಸಾರೀ । ನಾನ್ಯೋಽತೋಽಸ್ತಿ ದ್ರಷ್ಟಾ ನಾನ್ಯೋಽತೋಽಸ್ತಿ ವಿಜ್ಞಾತಾ "(ಬೃ. ೩-೭-೨೩) ಇತಿ ಶ್ರುತೇಃ । ತತ್ರ ಕಿಮಿದಮ್ ಉಚ್ಯತೇ ಸಂಸಾರಿಣಃ ಶರೀರಾದ್ಯಪೇಕ್ಷಾ ಜ್ಞಾನೋತ್ಪತ್ತಿಃ, ನೇಶ್ವರಸ್ಯ ಇತಿ ? ಅತ್ರ ಉಚ್ಯತೇ। ಸತ್ಯಮ್

1. ಏಕೆಂದರೆ ಜ್ಞಾನವು ಹೊಸದಾಗಿ ಉಂಟಾಗಬೇಕಾದದ್ದಿರುವದಿಲ್ಲ. ಬ್ರಹ್ಮದ ಸರ್ವಜ್ಞತ್ವದ ವಿಷಯಕ್ಕೆ ತೈ. ಭಾ. ಭಾ. ೧೦೬ ನೋಡಿ.

2. ೪೨ನೇ ಭಾ. ಭಾ. ದಲ್ಲಿ 'ಅವಿದ್ಯಾದಿದೋಷವತಾಮ್' ಎಂಬುದರ ಅನುವಾದವನ್ನು ನೋಡಿ.

3. ವ್ಯಾವಹಾರಿಕವಾದ ಜೀವೇಶ್ವರಭೇದವನ್ನಿಟ್ಟುಕೊಂಡು ಈ ಮಾತನ್ನಾಡಿದೆ. ಇಲ್ಲಿ ಈಶ್ವರನ ಜ್ಞಾನಕ್ಕೆ ಆವರಣವಿಲ್ಲ ಎಂದದ್ದರಿಂದ ಜೀವನಿಗೆ ಆವರಣವಿದೆ ಎಂದಂತಾಯಿತೆಂದು ಊಹಿಸಿ ಮೂಲಾವಿದ್ಯೆ ಎಂಬ ಒಂದು ಭಾವರೂಪಾವಿದ್ಯೆಯನ್ನು ಕೆಲವರು ಸಾಧಿಸಿರುತ್ತಾರೆ. ಅದಕ್ಕೆ ಭಾಷ್ಯದ ಆಧಾರವಿಲ್ಲ. ಗೀ. ೩-೩೯ನ್ನು ನೋಡಿ.

4. 'ತವ' ಎಂದು ಪಾಠಾಂತರ.

ನೇಶ್ವರಾತ್ ಅನ್ಯಃ ಸಂಸಾರೀ। ತಥಾಪಿ ದೇಹಾದಿಸಙ್ಘಾತೋಪಾಧಿಸಂಬನ್ಧಃ ಇಷ್ಯತೇ ಏವ । ಘಟಕರಕಗಿರಿಗುಹಾದ್ಯುಪಾಧಿಸಂಬನ್ಧ ಇವ ವ್ಯೋಮ್ನಃ । ತತ್ಕೃತಶ್ಚ ಶಬ್ದ ಪ್ರತ್ಯಯವ್ಯವಹಾರಃ ಲೋಕಸ್ಯ ದೃಷ್ಟಃ 'ಘಟಚ್ಛಿದ್ರಮ್' 'ಕರಕಾದಿಚ್ಛಿದ್ರಮ್' ಇತ್ಯಾದಿಃ, ಆಕಾಶಾವ್ಯತಿರೇಕೇಽಪಿ । ತತ್ಕೃತಾ ಚ ಆಕಾಶೇ ಘಟಾಕಾಶಾದಿಭೇದ ಮಿಥ್ಯಾಬುದ್ಧಿಃ ದೃಷ್ಟಾ । ತಥಾ ಇಹಾಪಿ ದೇಹಾದಿಸಙ್ಘಾತೋಪಾಧಿಸಂಬನ್ಧಾತ್ ಅವಿವೇಕಕೃತಾ ಈಶ್ವರಸಂಸಾರಿಭೇದಮಿಥ್ಯಾಬುದ್ಧಿಃ । ದೃಶ್ಯತೇ ಚ ಆತ್ಮನ ಏವ ಸತಃ ದೇಹಾದಿಸಙ್ಘಾತೇ ಅನಾತ್ಮನಿ ಆತ್ಮತ್ವಾಭಿನಿವೇಶೋ ಮಿಥ್ಯಾಬುದ್ಧಿಮಾತ್ರೇಣ ಪೂರ್ವೇಣ । ಸತಿ ಚೈವಂ ಸಂಸಾರಿತ್ವೇ ದೇಹಾದ್ಯಪೇಕ್ಷಮ್ ಈಕ್ಷಿತೃತ್ವಮ್ ಉಪ ಪನ್ನಂ ಸಂಸಾರಿಣಃ ॥

(ಭಾಷ್ಯಾರ್ಥ)

(ಆಕ್ಷೇಪ):—ಜ್ಞಾನವನ್ನು ಅಡ್ಡಿಮಾಡುವ ಕಾರಣವುಳ್ಳವನಾಗಿ ಈಶ್ವರನಿ ಗಿಂತ ಬೇರೆಯಾಗಿರುವ ಸಂಸಾರಿಯೇ ಮೊದಲು ಇರುವದಿಲ್ಲ[2]. ಏಕೆಂದರೆ " ಈತನಿ ಗಿಂತ ಬೇರೆಯಾಗಿ ನೋಡುವವನಿಲ್ಲ, ಈತನಿಗಿಂತ ಬೇರೆಯಾಗಿ ಅರಿಯುವವ ನಿಲ್ಲ" (ಬೃ. ೩-೭-೨೩) ಎಂಬ ಶ್ರುತಿ ಹೀಗೆಂದು ಹೇಳುತ್ತದೆ. ಹೀಗಿರುವಲ್ಲಿ ಸಂಸಾರಿಗೆ ಶರೀರವೇ ಮುಂತಾದವುಗಳ ಅಪೇಕ್ಷೆಯಿಂದ ಜ್ಞಾನವುಂಟಾಗುವದು, ಈಶ್ವರನಿಗೆ (ಆಗುವ)ದಿಲ್ಲ ಎಂದು ಹೇಳುತ್ತೀರಲ್ಲ, ಇದೇನು ?

(ಪರಿಹಾರ):—ನಿಜ, ಈಶ್ವರನಿಗಿಂತ ಬೇರೆಯಾಗಿ ಸಂಸಾರಿಯಿಲ್ಲ ಆದರೂ ಆಕಾಶಕ್ಕೆ[3] ಗಡಿಗೆ, ಕುಡಿಕೆ, ಬೆಟ್ಟದ ಗವಿ-ಮುಂತಾದ ಉಪಾಧಿಗಳ ಸಂಬಂಧವಿರು ವಂತೆ ದೇಹವೇ ಮುಂತಾದವುಗಳ ಸಂಘಾತವೆಂಬ ಉಪಾಧಿಯ[4] ಸಂಬಂಧವನ್ನು

---

1. 'ಸಂಬನ್ಧಾವಿವೇಕಕೃತಾ' ಎಂದು ಅಚ್ಚಿನ ಪುಸ್ತಕದ ಪಾಠ.

2. ಆತ್ಮೈಕತ್ವವನ್ನು ಹೇಳುವ ನಿಮಗೆ ಜೀವದೃಷ್ಟಾಂತವೆಲ್ಲಿಂದ ಬಂತು ?—ಎಂದು ಆಕ್ಷೇಪ. ಪ್ರಕೃತಿಯನ್ನು ವಿಂಗಡಿಸಿಕೊಳ್ಳದ್ದೆಂಬ ಅವಿವೇಕದಿಂದ ಪುರುಷನಲ್ಲಿ ಭೋಕ್ತೃತ್ವ ವುಂಟಾಗಿರುವಂತೆ ಉಪಾಧಿಗಳ ಅವಿವೇಕದಿಂದ ಆತ್ಮನಲ್ಲಿ ಜೀವತ್ವವುಂಟಾಗಿರುವದೆಯದ ತಿಳಿಸು ವದಕ್ಕೆ ಈ ಪೂರ್ವಪಕ್ಷವನ್ನು ತೆಗೆದಿದೆ.

3. ಆಕಾಶದೃಷ್ಟಾಂತದ ವಿವರವನ್ನು ಗೌ. ಕಾ. ೩-೩ರಿಂದ ೧೨ರ ವರೆಗಿನ ಶ್ಲೋಕ ಗಳ ಭಾಷ್ಯವನ್ನು ನೋಡಿ.

4. ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರ–ಇವುಗಳ ಗುಂಪೇ ಉಪಾಧಿ.

(ನಾವು) ಒಪ್ಪಿಕೊಂಡಿರುತ್ತೇವೆ. ಆ (ಉಪಾಧಿ)ಗಳಿಂದಾಗಿ, 'ಗಡಿಗೆಯ ಟೊಳ್ಳು', 'ಕುಡಿಕೆಯ ಟೊಳ್ಳು' ಎಂದು ಮುಂತಾಗಿ-(ಆ ಟೊಳ್ಳುಗಳು) ಆಕಾಶಕ್ಕಿಂತ ಬೇರೆಯಲ್ಲದಿದ್ದರೂ ಜನರು ಶಬ್ದಪ್ರತ್ಯಯ (ರೂಪವಾದ) ವ್ಯವಹಾರ(ವನ್ನು ಮಾಡುತ್ತಿರುವದು) ಕಂಡುಬಂದಿದೆ. ಆದರಿಂದಾಗಿ ಆಕಾಶದಲ್ಲಿ ಘಟಾಕಾಶವೇ ಮುಂತಾದ ಭೇದಗಳಿರುವವೆಂಬ ತಪ್ಪುತಿಳಿವಳಿಕೆ(ಯುಂಟಾಗಿರುವದು) ಕಂಡುಬರುತ್ತದೆ. ಇದರಂತೆ ಇಲ್ಲಿಯೂ ದೇಹವೇ ಮುಂತಾದವುಗಳ ಸಂಘಾತವೆಂಬ ಉಪಾಧಿಯ ಸಂಬಂಧದಿಂದ ಅವಿವೇಕದಿಂದುಂಟಾಗಿರುವ ಈಶ್ವರಸಂಸಾರಭೇದ(ವನ್ನು ಕಾಣುವ) ತಪ್ಪುತಿಳಿವಳಿಕೆ(ಯುಂಟಾಗಿರುತ್ತದೆ)[1]. ತಾನು ಆತ್ಮನೇ ಆಗಿದ್ದರೂ ಅನಾತ್ಮವಾದ ದೇಹಾದಿಗಳ ಸಂಘಾತದಲ್ಲಿ ತಾನೇ ಅದೆಂಬ ಅಭಿಮಾನವುಂಟಾಗಿರುವದು ಮೇಲೆ ಹೇಳಿರುವ ಬರಿಯ ತಪ್ಪುತಿಳಿವಳಿಕೆಯಿಂದಲೇ ಆಗಿರುವದು ಕಂಡುಬಂದಿದೆ[2]. ಹೀಗೆ ಸಂಸಾರಿತ್ವವಾಗಿರುವಲ್ಲಿ ಸಂಸಾರಿಗೆ ದೇಹಾದಿಗಳ ಅಪೇಕ್ಷೆಯಿಂದಲೇ ಈಕ್ಷಿತೃತ್ವ(ವುಂಟಾಗುವದೆಂದು ಹೇಳಿದ್ದು) ಯುಕ್ತವಾಗಿದೆ[3].

## ಬ್ರಹ್ಮವು ಏಕಾತ್ಮಕವಾದರೂ ಕಾರಣವಾಗಬಹುದು

(ಭಾಷ್ಯ)

೭೨. ಯದಪಿ ಉಕ್ತಮ್ ಪ್ರಧಾನಸ್ಯ ಅನೇಕಾತ್ಮಕತ್ವಾತ್ ಮೃದಾದಿವತ್ ಕಾರಣತ್ವೋಪಪತ್ತಿಃ, ನ ಅಸಂಹತಸ್ಯ ಬ್ರಹ್ಮಣಃ ಇತಿ । ತತ್ ಪ್ರಧಾನಸ್ಯ ಅಶಬ್ದತ್ವೇನೈವ ಪ್ರತ್ಯುಕ್ತಮ್ । ಯಥಾ ತು ತರ್ಕೇಣಾಪಿ ಬ್ರಹ್ಮಣ ಏವ ಕಾರಣತ್ವಂ ನಿರ್ವೋಢುಂ ಶಕ್ಯತೇ ನ ಪ್ರಧಾನಾದೀನಾಮ್ ತಥಾ ಪ್ರಪಞ್ಚಯಿಷ್ಯತಿ-" ನ ವಿಲಕ್ಷಣತ್ವಾದಸ್ಯ" (೨-೧-೪) ಇತ್ಯೇವಮಾದಿನಾ ॥

---

1. ಇಷ್ಟು ಮಾತ್ರದಿಂದ ಆತ್ಮನ ಪಾರಮಾರ್ಥಿಕವಾದ ಏಕತ್ವಕ್ಕೆ ಯಾವ ಹಾನಿಯೂ ಇಲ್ಲ ಎಂದು ಭಾವ.

2. ಅನಾತ್ಮವಾದ ಆಕಾಶದಲ್ಲಿ ಅನೇಕತ್ವಭ್ರಮೆಯುಂಟಾಗಬಹುದು, ತನ್ನ ಸ್ವರೂಪವೆ ಆಗಿರುವ ಆತ್ಮನಲ್ಲಿ ಭ್ರಮೆಯುಂಟಾಗಿರುವದೆಂಬುದು ಹೇಗೆ?—ಎಂಬ ಶಂಕೆಗೆ ಸಮಾಧಾನವನ್ನು ಹೇಳುವದಕ್ಕಾಗಿ ಈ ಉತ್ತರವನ್ನು ಕೊಟ್ಟಿದೆ. ದೇಹಕ್ಕಿಂತ ಬೇರೆಯಾಗಿ ಆತ್ಮನಿರುವನೆಂದು ಒಪ್ಪುವವರ ಮತದಲ್ಲಿ, ಆತ್ಮನಲ್ಲಿ ದೇಹಾದಿಗಳೇ ತಾನೆಂದು ಭ್ರಮೆಯುಂಟಾಗುವಂತೆ ನಮ್ಮ ಮತದಲ್ಲಿಯೂ ಆತ್ಮನಲ್ಲಿ ಸಂಸಾರಿತ್ವಭ್ರಮೆಯುಂಟಾಗಬಹುದಾಗಿದೆ ಎಂದು ಭಾವ.

3. ಕಲ್ಪಿತನಾಗಿರುವ ಸಂಸಾರಿಗೆ ಕಲ್ಪಿತವಾಗಿರುವ ದೇಹಾದಿಗಳ ಸಂಬಂಧದಿಂದ ಜ್ಞಾನವು ಉಂಟಾಗುತ್ತದೆ. ಆದರೆ ಜ್ಞಾನಸ್ವಭಾವವೇ ಆಗಿರುವ ಪರಮಾರ್ಥಾತ್ಮನಿಗೆ ದೇಹಾದಿಗಳು ಬೇಕಿಲ್ಲ ಎಂದು ಭಾವ.

(ಭಾಷ್ಯಾರ್ಥ)

ಪ್ರಧಾನವು ಅನೇಕ ರೂಪವಾಗಿರುವದರಿಂದ ಮಣ್ಣು ಮುಂತಾದವುಗಳಂತೆ (ಅದು) ಕಾರಣವಾಗಬಹುದು ; ಏಕರೊಡನೆಯೂ ಸಂಹತವಾಗದ ಬ್ರಹ್ಮವು (ಕಾರಣ) ವಾಗಲಾರದು ಎಂದು (ಪೂರ್ವಪಕ್ಷದಲ್ಲಿ)[1] ಹೇಳಿತ್ತಷ್ಟೆ ; ಪ್ರಧಾನವು ಶಬ್ದಪ್ರಮಾಣಕವಲ್ಲ ಎಂಬುದರಿಂದಲೇ ಅದಕ್ಕೂ ಉತ್ತರವನ್ನು ಹೇಳಿದಂತಾಯಿತು.[2] ತರ್ಕದಿಂದ (ನೋಡಿದರೂ) ಬ್ರಹ್ಮವೇ (ಜಗತ್ತಿಗೆ) ಕಾರಣವೆಂಬುದನ್ನು ಹೇಗೆ ನಿರ್ವಾಹಮಾಡುವದು, ಪ್ರಧಾನಾದಿಗಳು (ಕಾರಣವೆಂಬುದನ್ನು ನಿರ್ವಾಹ ಮಾಡಲಾಗುವದಿಲ್ಲ ಎಂಬುದು ಹೇಗೆ) ಎಂಬುದನ್ನು "ನ ವಿಲಕ್ಷಣತ್ವಾತ್" (೨-೧-೪) ಎಂಬುದೇ ಮುಂತಾದ (ಗ್ರಂಥ) ದಿಂದ (ಸೂತ್ರಕಾರರು) ಮುಂದೆ ವಿಸ್ತಾರವಾಗಿ ತಿಳಿಸುವರು.

## ಸಾಂಖ್ಯನ ಪೂರ್ವಪಕ್ಷ : ಈಕ್ಷಿತೃತ್ವವು ಗೌಣ

(ಭಾಷ್ಯ)

೭೩. ಅತ್ರ ಆಹ । ಯದುಕ್ತಮ್ ನ ಅಚೇತನಂ ಪ್ರಧಾನಂ ಜಗತ್ಕಾರಣಮ್ ಈಕ್ಷಿತೃತ್ವಶ್ರವಣಾತ್ ಇತಿ । ತತ್ ಅನ್ಯಥಾಪಿ ಉಪಪದ್ಯತೇ । ಅಚೇತನೇಽಃ ಚೇತನವತ್ ಉಪಚಾರದರ್ಶನಾತ್ । ಯಥಾ ಪ್ರತ್ಯಾಸನ್ನಪತನತಾಂ ನದ್ಯಾಕೂಲಸ್ಯ ಆಲಕ್ಷ್ಯ 'ಕೂಲಂ ಪಿಪತಿಷತಿ' ಇತಿ ಅಚೇತನೇಽಪಿ ಕೂಲೇ ಚೇತನವತ್ ಉಪಚಾರಃ ದೃಷ್ಟಃ । ತದ್ವತ್ ಅಚೇತನೇಽಪಿ ಪ್ರಧಾನೇ ಪ್ರತ್ಯಾಸನ್ನಸರ್ಗೇ ಚೇತನವತ್ ಉಪಚಾರೋ ಭವಿಷ್ಯತಿ "ತದೈಕ್ಷತ" ಇತಿ । ಯಥಾ ಲೋಕೇ ಕಶ್ಚಿತ್ ಚೇತನಃ ಸ್ನಾತ್ವಾ ಭುಕ್ತ್ವಾ ಚ ಅಪರಾಹ್ಣೇ ಗ್ರಾಮಂ ರಥೇನ ಗಮಿಷ್ಯಾಮಿ- ಇತಿ ಈಕ್ಷಿತ್ವಾ ಅನನ್ತರಂ ತಥೈವ ನಿಯಮೇನ ಪ್ರವರ್ತತೇ ತಥಾ ಪ್ರಧಾನಮಪಿ ಮಹದಾದ್ಯಾಕಾರೇಣ ನಿಯಮೇನ ಪ್ರವರ್ತತೇ । ತಸ್ಮಾತ್ ಚೇತನವತ್ ಉಪಚರ್ಯತೇ । ಕಸ್ಮಾತ್ ಪುನಃ ಕಾರಣಾತ್ ವಿಹಾಯ ಮುಖ್ಯಮ್ ಈಕ್ಷಿತೃತ್ವಮ್ ಔಪಚಾರಿಕಂ ಕಲ್ಪ್ಯತೇ ? 'ತತ್ತೇಜ ಐಕ್ಷತ' (ಛಾಂ.೬-೨-೩) "ತಾ ಆಪ ಐಕ್ಷನ್ತ" (ಛಾಂ ೬-೨-೪) ಇತಿ ಚ ಅಚೇತನಯೋರಪಿ ಅಪ್ತೇಜಸೋ

1. ಕಾರಣವಾಗಿರುವದು ಸಾವಯವವೂ ಸಂಹತವೂ ಆಗಿರಬೇಕು ; ಆದ್ದರಿಂದ ಪ್ರಧಾನವು ಮಾತ್ರ ಇಲ್ಲಿ ಹೇಳಿರುವ ಜಗತ್ಕಾರಣವಾಗಬಹುದು–ಎಂದು ಪೂರ್ವಪಕ್ಷಿಯ ಭಾವ.

2. ಶಬ್ದಪ್ರಮಾಣಕವಲ್ಲದ ಪ್ರಧಾನವು ಶಬ್ದದಲ್ಲಿ ಹೇಳಿರುವ ಜಗತ್ಕಾರಣವಾಗಲಾರದು ಎಂದು ಭಾವ.

ಚೇತನವತ್ ಉಪಚಾರದರ್ಶನಾತ್ । ತಸ್ಮಾತ್ ಸತ್ಕರ್ತೃಕಮಪಿ ಈಕ್ಷಣಮ್ ಔಪಚಾರಿಕಮಿತಿ ಗಮ್ಯತೇ ಉಪಚಾರಪ್ರಾಯೇ ವಚನಾತ್ ಇತಿ । ಏವಂ ಪ್ರಾಪ್ತೆ ಇದಂ ಸೂತ್ರಮ್ ಆರಭ್ಯತೇ—

(ಭಾಷ್ಯಾರ್ಥ)

ಇಲ್ಲಿ (ಸಾಂಖ್ಯನು) ಹೇಳುತ್ತಾನೇನೆಂದರೆ, (ಜಗತ್ಕಾರಣವು ಯೋಚಿಸಿ) ನೋಡಿತೆಂದು ಶ್ರುತಿಯಲ್ಲಿರುವದರಿಂದ ಅಚೇತನವಾದ ಪ್ರಧಾನವು ಜಗತ್ಕಾರಣವಾಗಲಾರದು- ಎಂದು ಹೇಳಿದಿರಷ್ಟೆ, ಅದು ಬೇರೊಂದು ಬಗೆಯಿಂದಲೂ ಹೊಂದುತ್ತದೆ.[1] ಏಕೆಂದರೆ ಅಚೇತನ (ವಸ್ತುವಿನ ವಿಷಯ) ದಲ್ಲಿಯೂ (ಅದು) ಚೇತನವಾಗಿದ್ದಂತೆ ಉಪಚಾರ (ಕ್ಕೆ ಶಬ್ದಪ್ರಯೋಗವನ್ನು ಮಾಡುವದು) ಕಂಡಿದೆ. ಹೇಗೆ ನದಿಯ ದಡವು ಬೀಳುವದರಲ್ಲಿರುವದನ್ನು ಕಂಡು 'ದಡವು ಬೀಳೋಣವೆನ್ನುತ್ತಿದೆ'[2] ಎಂದು ಅಚೇತನವಾದ ದಡದಲ್ಲಿಯೂ (ಅದು) ಚೇತನವಾಗಿದ್ದರೆ ಹೇಗೋ ಹಾಗೆ ಉಪಚಾರದಿಂದ (ಚೇತನವಾಚಕಶಬ್ದವನ್ನು ಪ್ರಯೋಗಿಸುವದು) ಕಂಡು ಬರುತ್ತದೆಯೋ ಇದರಂತೆ ಪ್ರಧಾನವು ಅಚೇತನವಾಗಿದ್ದರೂ (ಅದು) ಸೃಷ್ಟಿಮಾಡುವದರಲ್ಲಿರುವಾಗ ಚೇತನವಾಗಿದ್ದಂತೆಯೇ (ಅದರಲ್ಲಿಯೂ) 'ಅದು ನೋಡಿತು. ಎಂದು ಉಪಚಾರಕ್ಕೆ (ಶಬ್ದಪ್ರಯೋಗವನ್ನು) ಮಾಡಬಹುದಾಗಿದೆ. ಲೋಕದಲ್ಲಿ ಯಾವನಾದರೂ ಚೇತನನಾದ (ಮನುಷ್ಯ)ನು ಸ್ನಾನವಮಾಡಿ, ಊಟಮಾಡಿಕೊಂಡು, ಮಧ್ಯಾಹ್ನದ ಮೇಲೆ ಊರಿಗೆ ಗಾಡಿಯಮೇಲೆ ಹೋಗೋಣ ಎಂದು ಯೋಚಿಸಿಕೊಂಡು ಆ ಮೇಲೆ ಗೊತ್ತಾಗಿ ಹಾಗೆಯೇ ನಡೆಯುವನೋ, ಅದರಂತೆ ಪ್ರಧಾನವೂ ಮಹತ್ತು ಮುಂತಾದ[3] ಆಕಾರಗಳನ್ನು ಗೊತ್ತಾಗಿ ತಳೆಯುತ್ತಿರುವದು. ಆದ್ದರಿಂದ ಅದು ಚೇತನವೆಂಬಂತೆಯೇ (ಶಬ್ದಪ್ರಯೋಗವನ್ನು ಅದರಲ್ಲಿ ಉಪಚಾರಕ್ಕಾಗಿ ಮಾಡಿರುತ್ತದೆ.

---

1. ಶ್ರುತಿಯಲ್ಲಿ ಹೇಳಿರುವ ಈಕ್ಷಿತೃತ್ವವು ಚೇತನಕ್ಕೆ ಹೊರತು ಬೇರೆಯರೀತಿಯಲ್ಲಿ ಹೊಂದುವದಿಲ್ಲ.-ಎಂಬ ಅರ್ಥಾಪತ್ತಿಯನ್ನು ವೇದಾಂತಿ ಹೇಳಿದ್ದನು. ಸಾಂಖ್ಯನು ಅದು ಪ್ರಧಾನಕ್ಕೂ ಹೊಂದುತ್ತದೆ ಎಂದು ತೋರಿಸುತ್ತಾನೆ.

2. 'ಪಿಪತಿಷತಿ' ಎಂಬುದಕ್ಕೆ ಬೀಳುವದಕ್ಕೆ ಇಚ್ಛಿಸುತ್ತದೆ ಎಂದು ಅಕ್ಷರಾರ್ಥ. ಅಚೇತನವಾದ ದಡಕ್ಕೆ ಇಚ್ಛೆ ಹೊಂದುವದಿಲ್ಲ. ಅದು ಇಷ್ಟರಲ್ಲಿಯೇ ಬೀಳುವದು ಎಂಬರ್ಥದಲ್ಲಿ ಈ ಶಬ್ದವನ್ನು ಉಪಯೋಗಿಸುವರು.

3. ಮಹತ್ತು, ಅಹಂಕಾರ, ತನ್ಮಾತ್ರೆಗಳು, ಇಂದ್ರಿಯಗಳು,ಮನಸ್ಸು, ಮಹಾಭೂತಗಳು-ಇವೆಲ್ಲ ಪ್ರಧಾನದ ಕಾರ್ಯಗಳೇ ಎಂದು ಸಾಂಖ್ಯನ ಮತ.

(ವೇದಾಂತಿ):—'ನೋಡಿತು' ಎಂಬುದರ ಮುಖ್ಯಾರ್ಥವನ್ನು ಬಿಟ್ಟು ಉಪಚಾರಕ್ಕಾಗಿ (ಪ್ರಯೋಗಿಸಿದ್ದೆಂದು) ಕಲ್ಪಿಸುವದಕ್ಕೆ ಕಾರಣವಾದರೂ ಏನು ?

(ಸಾಂಖ್ಯ):—ಏಕೆಂದರೆ 'ಆ ತೇಜವು ನೋಡಿತು' (ಛಾಂ. ೬-೨-೩) 'ಆ ಅಪ್ಪು ನೋಡಿತು' (ಛಾಂ ೬-೨-೪) ಎಂದು ಅಚೇತನವಾದ ಅಪ್ಪು, ತೇಜಸ್ಸು ಇವುಗಳ ವಿಷಯದಲ್ಲಿಯೂ ಚೇತನದಂತೆ ಉಪಚಾರ(ಕ್ಕಾಗಿ ಶಬ್ದ ಪ್ರಯೋಗವನ್ನು) ಮಾಡಿರುವದು ಕಂಡುಬರುತ್ತದೆ. ಆದ್ದರಿಂದ ಉಪಚಾರಕ್ಕಾಗಿ (ನೋಡೋಣವೆಂಬ ಮಾತನ್ನು) ಬಹುವಾಗಿ ಉಪಯೋಗಿಸಿರುವ (ಪ್ರಕರಣದಲ್ಲಿ ಹೇಳಿರುವ) ಸತ್ಕರ್ತೃಕವಾದ ಈಕ್ಷಣವೂ ಉಪಚಾರಕ್ಕಾಗಿ ಪ್ರಯೋಗಿಸಿದ್ದು ಎಂದು ನಿರ್ಣಯವಾಗುತ್ತದೆ.

## ಸಿದ್ಧಾಂತ: ಆತ್ಮಶಬ್ದವಿರುವದರಿಂದ ನೋಟವು ಗೌಣವಲ್ಲ

ಹೀಗೆಂದು (ಸಾಂಖ್ಯರ ಪೂರ್ವಪಕ್ಷವು) ಬಂದೊದಗಲಾಗಿ ಈ ಸೂತ್ರವನ್ನು ಆರಂಭಿಸಿರುತ್ತದೆ:—

**ಗೌಣಶ್ಚೇನ್ನಾತ್ಮಶಬ್ದಾತ್ ॥ ೬ ॥**

೬. (ಈಕ್ಷಣವು) ಗೌಣವೆಂದರೆ (ಅದು ಸರಿ)ಯಲ್ಲ, ಏಕೆಂದರೆ ಇಲ್ಲಿ ಆತ್ಮಶಬ್ದವಿದೆ.

(ಭಾಷ್ಯ)

೭೪. ಯದುಕ್ತಮ್ ಪ್ರಧಾನಮ್ ಅಚೇತನಂ ಸಚ್ಛಬ್ದವಾಚ್ಯಮ್ । ತಸ್ಮಿನ್ ಔಪಚಾರಿಕ ಈಕ್ಷತಿಃ ಅಪ್ತೇಜಸೋರಿವ ಇತಿ । ತದಸತ್ । ಕಸ್ಮಾತ್? ಆತ್ಮಶಬ್ದಾತ್ । "ಸದೇವ ಸೋಮ್ಯೇದಮಗ್ರ ಆಸೀತ್" ಇತಿ ಉಪಕ್ರಮ್ಯ 'ತದೈಕ್ಷತ....ತತ್ ತೇಜೋಽಸೃಜತ' (ಛಾಂ ೬-೨-೧) ಇತಿ ಚ ತೇಜೋಽಬನ್ನಾನಾಂ ಸೃಷ್ಟಿಮ್ ಉಕ್ತ್ವಾ ತದೇವ ಪ್ರಕೃತಂ ಸತ್ ಈಕ್ಷಿತೃ, ತಾನಿ ಚ ತೇಜೋಽಬನ್ನಾನಿ ದೇವತಾಶಬ್ದೇನ ಪರಾಮೃಶ್ಯ ಆಹ—"ಸೇಯಂ ದೇವತೈಕ್ಷತ ಹನ್ತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" (ಛಾಂ. ೬-೩-೨) ಇತಿ । ತತ್ರ ಯದಿ ಪ್ರಧಾನಂ ಅಚೇತನಂ ಗುಣವೃತ್ತ್ಯಾ ಈಕ್ಷಿತೃ ಕಲ್ಪ್ಯೇತ ತದೇವ ಪ್ರಕೃತತ್ವಾತ್ 'ಸೇಯಂ ದೇವತಾ' ಇತಿ ಪರಾಮೃಶ್ಯೇತ । ನ ತದಾ ದೇವತಾ ಜೀವಮ್ ಆತ್ಮಶಬ್ದೇನ

ಅಭಿದಧ್ಯಾತ್ । ಜೀವೋ ಹಿ ನಾಮ ಚೇತನಃ ಶರೀರಾಧ್ಯಕ್ಷಃ ಪ್ರಾಣಾನಾಂ ಧಾರಯಿತಾ । ತತ್ಪ್ರಸಿದ್ಧೇಃ । ನಿರ್ವಚನಾಚ್ಚ । ಸ ಕಥಮ್ ಅಚೇತನಸ್ಯ ಪ್ರಧಾನಸ್ಯ ಆತ್ಮಾ ಭವೇತ್। ಆತ್ಮಾ ಹಿ ನಾಮ ಸ್ವರೂಪಮ್। ನ ಅಚೇತನಸ್ಯ ಪ್ರಧಾನಸ್ಯ ಚೇತನೋ ಜೀವಃ ಸ್ವರೂಪಂ ಭವಿತುಮರ್ಹತಿ । ಅಥ ತು ಚೇತನಂ ಬ್ರಹ್ಮ ಮುಖ್ಯಮ್ ಈಕ್ಷಿತೃ ಪರಿಗೃಹ್ಯತೇ ತಸ್ಯ ಜೀವವಿಷಯಃ ಆತ್ಮಶಬ್ದ ಪ್ರಯೋಗಃ ಉಪಪದ್ಯತೇ ॥

(ಭಾಷ್ಯಾರ್ಥ)

ಅಚೇತನವಾದ ಪ್ರಧಾನವೇ (ಶ್ರುತಿಯಲ್ಲಿ) ಸತ್ ಎಂಬ ಶಬ್ದಕ್ಕೆ ವಾಚ್ಯವು, ಅದರಲ್ಲಿ ( ಹೇಳಿರುವ ) ಈಕ್ಷಣವು, ಅಪ್ಪು, ತೇಜಸ್ಸು- ಇವುಗಳಲ್ಲಿ (ಹೇಳಿರುವ ಈಕ್ಷಣದಂತೆ) ಉಪಚಾರಕ್ಕಾಗಿ ಪ್ರಯೋಗಿಸಿದ್ದು ಎಂದು (ಸಾಂಖ್ಯನು) ಹೇಳಿದ್ದನಷ್ಟೆ, ಅದು ಸರಿಯಲ್ಲ. ಏಕೆಂದರೆ (ಇಲ್ಲಿ) ಆತ್ಮಶಬ್ದ ವಿದೆ. (ಶ್ರುತಿಯು) "(ಎಲೈ) ಸೋಮ್ಯನೆ, ಇದು ಮೊದಲು ಸತ್ತೇ ಆಗಿದ್ದಿತು" (ಛಾಂ. ೬-೨-೧) ಎಂದು ಉಪಕ್ರಮಿಸಿ " ಅದು (ಬಹುವಾಗುವೆನು, ಹುಟ್ಟುವೆನು ಎಂದು ಯೋಚಿಸಿ) ನೋಡಿತು, ಅದು ತೇಜಸ್ಸನ್ನು ಸೃಷ್ಟಿಸಿತು " (ಛಾಂ ೬-೨-೩) ಎಂದು[1] ತೇಜಸ್ಸು, ಅಪ್ಪು, ಅನ್ನ[2] – ಇವುಗಳ ಸೃಷ್ಟಿಯನ್ನು ಹೇಳಿ ಈಕ್ಷಿತೃವೆಂದು ಪ್ರಕೃತವಾಗಿರುವ ಅದೇ ಸತ್ತನ್ನೂ ಆ ತೇಜಸ್ಸು, ಅಪ್ಪು, ಅನ್ನ-(ಇವು)ಗಳನ್ನೂ ದೇವತಾಶಬ್ದದಿಂದ ಪರಾಮರ್ಶೆಮಾಡಿ " ಆ ಈ ದೇವತೆಯು ಯೋಚಿಸಿದ್ದೇನೆಂದರೆ ಒಳ್ಳೆಯದು, ನಾನು ಈ ಮೂರು ದೇವತೆಗಳನ್ನೂ ಈ ಜೀವನೆಂಬ ಆತ್ಮನ ರೂಪದಿಂದ ಒಳಹೊಕ್ಕು ನಾಮರೂಪಗಳನ್ನು ವಿಂಗಡಿಸುವೆನು " (ಛಾಂ. ೬-೩-೨) ಎಂದು ಹೇಳಿರುತ್ತದೆ. ಇಲ್ಲಿ ಅಚೇತನವಾದ ಪ್ರಧಾನವು ಈಕ್ಷಿತೃ ಎಂದು ಗೌಣವೃತ್ತಿಯಿಂದ ಕಲ್ಪಿಸಿದರೆ, ಅದೇ ಇಲ್ಲಿ ಪ್ರಕೃತವಾಗಿರುವದರಿಂದ (ಅದನ್ನೇ) ' ಆ ಈ ದೇವತೆಯು ' ಎಂದು

---

1. ಇಲ್ಲಿ ' ತತ್ತೇಜ ಐಕ್ಷತ....ತದಪೋಽಸೃಜತ' (ಛಾಂ. ೬-೨-೩) ' ತಾ ಆಪ ಐಕ್ಷನ್ತ....ತಾ ಅನ್ನಮಸೃಜನ್ತ ' (ಛಾ. ೬-೨-೪) ಎಂಬ ವಚನಗಳನ್ನೂ ಭಾಷ್ಯಕಾರರು ಉದಾಹರಿಸಿದ್ದಾರೆಂದು ' ಇತಿ ಚ ' ಎಂಬ ಚಕಾರದಿಂದ ಊಹಿಸಬಹುದು. ಅಥವಾ ಒಂದು ಶ್ರುತಿಯನ್ನೇ ಇನ್ನೆರಡಕ್ಕೂ ಉಪಲಕ್ಷಣವಾಗಿ ಉದಾಹರಿಸಿದೆ ಎಂದಾದರೂ ಇಟ್ಟುಕೊಳ್ಳಬೇಕು.

2. ಪೃಥ್ವಿ.

ಪರಾಮರ್ಶಿಸಿದೆ ಎಂದಾಗುತ್ತಿತ್ತು.[1] ಆಗ ದೇವತೆಯು ಜೀವನನ್ನು ಆತ್ಮ ಶಬ್ದದಿಂದ ಕರೆಯುತ್ತಿರಲಿಲ್ಲ. ಏಕೆಂದರೆ ಜೀವನು ಎಂದರೆ ಚೇತನನು, ಶರೀರಕ್ಕೆ ಒಡೆಯನು, ಪ್ರಾಣಗಳನ್ನು ಧರಿಸಿರುವವನು; ಇದು (ಲೋಕ)ದಲ್ಲಿ ಪ್ರಸಿದ್ಧವಾಗಿರುವದರಿಂದಲೂ (ಈ ಶಬ್ದದ) ನಿರ್ವಚನದಿಂದಲೂ[2] (ಹೀಗೆಂದು ಗೊತ್ತಾಗಿರುತ್ತದೆ). ಅವನು ಅಚೇತನವಾದ ಪ್ರಧಾನದ ಆತ್ಮನು ಹೇಗಾದಾನು? ಆತ್ಮನೆಂದರೆ ಸ್ವರೂಪವಷ್ಟೆ. ಅಚೇತನನಾದ ಪ್ರಧಾನಕ್ಕೆ ಚೇತನನಾದ ಜೀವನು ಸ್ವರೂಪವಾಗಲಾರನು ಇದಕ್ಕೆ ಬದಲು ಚೇತನವಾದ ಬ್ರಹ್ಮವನ್ನು ಮುಖ್ಯವಾದ ಈಕ್ಷಿತೃವೆಂದು ಹಿಡಿದರೆ, ಅದು ಜೀವನ ವಿಷಯದಲ್ಲಿ ಆತ್ಮಶಬ್ದವನ್ನು ಪ್ರಯೋಗಮಾಡಿರುವದೆಂಬುದು ಹೊಂದುತ್ತದೆ.[3]

(ಭಾಷ್ಯ)

೭೫. ತಥಾ "ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ ಸ ಆತ್ಮಾ ತತ್ ತ್ವಮಸಿ ಶ್ವೇತಕೇತೋ" (ಛಾಂ ೬-೧೪-೩) ಇತ್ಯತ್ರ 'ಸ ಆತ್ಮಾ' ಇತಿ ಪ್ರಕೃತಂ ಸದಣಿಮಾನಮ್ ಆತ್ಮಾನಂ ಆತ್ಮಶಬ್ದೇನ ಉಪದಿಶ್ಯ 'ತತ್ ತ್ವಮಸಿ ಶ್ವೇತಕೇತೋ' ಇತಿ ಚೇತನಸ್ಯ ಶ್ವೇತಕೇತೋ-ರಾತ್ಮತ್ವೇನ ಉಪದಿಶತಿ ॥

(ಭಾಷ್ಯಾರ್ಥ)

ಇದರಂತೆ "ಯಾವ ಈ ಸೂಕ್ಷ್ಮ(ತತ್ತ್ವ)ವಿದೆಯಲ್ಲ, ಅದೇ (ಇದು). ಇದೆಲ್ಲವೂ ಇದನ್ನೇ ಆತ್ಮವಾಗುಳ್ಳದ್ದು; ಅದು ಸತ್ಯವು, ಅದೇ ಆತ್ಮನು. ಶ್ವೇತಕೇತುವೆ, ಅದೇ ನೀನಾಗಿರುವೆ" (ಛಾಂ ೬-೮-೭) ಎಂಬಲ್ಲಿ ಪ್ರಕೃತವಾಗಿರುವ ಸತ್ತಿಯ ಸೂಕ್ಷ್ಮಾತ್ಮನನ್ನು ಆತ್ಮಶಬ್ದದಿಂದ ತಿಳಿಸಿ "ಶ್ವೇತಕೇತುವೆ, ಅದೇ ನೀನಾಗಿರುವೆ" ಎಂದು ಚೇತನನಾಗಿರುವ ಶ್ವೇತಕೇತುವಿಗೆ ಅದು ಆತ್ಮನೆಂದು ಉಪದೇಶಮಾಡಿರುತ್ತದೆ[4] (ಆದ್ದರಿಂದಲೇ ಇಲ್ಲಿ ಈಕ್ಷಿತೃವಾದ ಸತ್ತು ಪ್ರಧಾನವಲ್ಲ)

---

1. ಏಕೆಂದರೆ 'ಸೇಯಂ' ಎಂಬ ಸರ್ವನಾಮವು ಪ್ರಕೃತಪರಾಮರ್ಶಿಯಾಗಿದೆ ಎಂದು ಭಾವ.

2. ಜೀವ-ಪ್ರಾಣಧಾರಣೇ ಎಂಬ ಧಾತುವಿನಿಂದ ಹುಟ್ಟಿರುವ ಜೀವಶಬ್ದಕ್ಕೆ ವ್ಯುತ್ಪತ್ತಿಯಿಂದಲೂ ಇದೇ ಅರ್ಥ.

3. ಆದ್ದರಿಂದ 'ತದೈಕ್ಷತ' ಎಂಬಲ್ಲಿ ಈಕ್ಷಿತೃತ್ವವು ಗೌಣವಲ್ಲ

4. ಚೇತನನಾದ ಶ್ವೇತಕೇತುವಿಗೆ ಸತ್ತು ಆತ್ಮವೆಂದಿರುವದರಿಂದ ಸತ್ತು ಪ್ರಧಾನವಲ್ಲ; ಅದರ ಈಕ್ಷಿತೃತ್ವವು ಗೌಣವಲ್ಲ-ಎಂದು ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಹೇಳಿದೆ.

(ಭಾಷ್ಯ)

೭೬. ಅಪ್ತೇಜಸೋಸ್ತು ವಿಷಯತ್ವಾದಚೇತನತ್ವಮ್ । ನಾಮರೂಪವ್ಯಾಕರಣಾದೌ ಚ ಪ್ರಯೋಜ್ಯತ್ವೇನೈವ ನಿರ್ದೇಶಾತ್ । ನ ಚ ಆತ್ಮಶಬ್ದವತ್ ಕಿಂಚಿತ್ ಮುಖ್ಯತ್ವೇ ಕಾರಣಮ್ ಅಸ್ತಿ ಇತಿ ಯುಕ್ತಂ ಕೂಲವತ್ ಗೌಣತ್ವಮ್ ಈಕ್ಷಿತೃತ್ವಸ್ಯ । ತಯೋರಪಿ ಚ ಸದಧಿಷ್ಠಿತತ್ವಾಪೇಕ್ಷಮೇವ ಈಕ್ಷಿತೃತ್ವಮ್ । ಸತಸ್ತು ಆತ್ಮಶಬ್ದಾತ್ ನ ಗೌಣಮ್ ಈಕ್ಷಿತೃತ್ವಮ್ ಇತ್ಯುಕ್ತಮ್॥

(ಭಾಷ್ಯಾರ್ಥ)

ಅಪ್ಪು, ತೇಜಸ್ಸು-ಇವುಗಳಾದರೋ ವಿಷಯವಾಗಿರುವದರಿಂದಲೂ[1] ನಾಮರೂಪಗಳ ವಿಂಗಡದಲ್ಲಿ (ಅವುಗಳನ್ನು) ಪ್ರೇರ್ಯವಾಗಿಯೇ ತಿಳಿಸಿರುವದರಿಂದಲೂ (ಅವು) ಅಚೇತನ(ವಾಗಿರುತ್ತವೆ) (ಅವು ಯೋಚಿಸಿ ನೋಡಿದವು ಎಂಬಲ್ಲಿ) ಅವುಗಳ ಈಕ್ಷಿತೃತ್ವವು ಮುಖ್ಯವೆಂಬುದಕ್ಕೆ (ಸತ್ತಿನ ವಿಷಯದಲ್ಲಿ) ಆತ್ಮಶಬ್ದವಿರುವ ಹಾಗೆ ಯಾವದೊಂದು ಕಾರಣವೂ ಇರುವದಿಲ್ಲ[2]. ಆದ್ದರಿಂದ (ಅವುಗಳ) ಈಕ್ಷಿತೃತ್ವವು ದಡವು (ಬೀಳೋಣವೆನ್ನುತ್ತಿದೆ) ಎಂಬಂತೆ ಗೌಣ ಎಂಬುದು ಯುಕ್ತವು ಅವುಗಳಿಗೂ ಈಕ್ಷಿತೃತ್ವವು ಸತ್ತಿನ ಆಶ್ರಯವನ್ನಿಟ್ಟುಕೊಂಡೇ (ಹೇಳಿದ್ದಾಗಿದೆ).[3] ಸತ್ತಿಗಾದರೋ ಆತ್ಮಶಬ್ದ(ಪ್ರಯೋಗ)ವಿರುವದರಿಂದ (ಅದರ) ಈಕ್ಷಿತೃತ್ವವು ಗೌಣವಲ್ಲ ಎಂದು (ಮೇಲೆ) ಹೇಳಿರುತ್ತೇವೆ.

## ಪೂರ್ವಪಕ್ಷ: ಪ್ರಧಾನವನ್ನೂ ಆತ್ಮನೆನ್ನಬಹುದು

(ಭಾಷ್ಯ)

೭೭. ಅಥ ಉಚ್ಯೇತ-ಅಚೇತನೇಽಪಿ ಪ್ರಧಾನೇ ಭವತಿ ಆತ್ಮಶಬ್ದಃ । ಆತ್ಮನಃ ಸರ್ವಾರ್ಥಕಾರಿತ್ವಾತ್ । ಯಥಾ ರಾಜ್ಞಃ ಸರ್ವಾರ್ಥಕಾರಿಣಿ ಭೃತ್ಯೇ

---

1. "ಈ ದೇವತೆಗಳನ್ನು ಒಳಹೊಕ್ಕು ನಾಮರೂಪಗಳನ್ನು ವಿಂಗಡಿಸುವೆನು" ಎಂದು ಅಪ್ತೇಜಸ್ಸುಗಳನ್ನು ಕುರಿತು ಸದ್ದೇವತೆಯು ಯೋಚಿಸಿನೋಡಿತು ಎಂದು ಈಕ್ಷಣಕ್ಕೆ ಅಪ್ತೇಜಸ್ಸುಗಳನ್ನು ವಿಷಯವಾಗಿ ಹೇಳಿದೆ.

2. ಸತ್ತೆಂಬುದು ಅಚೇತನವೆಂಬುದಕ್ಕೆ ಆತ್ಮಶಬ್ದವು ಬಾಧಕ; ಅಪ್ತೇಜಸ್ಸುಗಳು ಅಚೇತನವೆಂಬುದಕ್ಕೆ ಸಾಧಕವಿವೆ, ಬಾಧಕವಿಲ್ಲ.

3. ಸದ್ರೂಪನಾದ ಆತ್ಮನೇ ಅಪ್ತೇಜಸ್ಸುಗಳ ರೂಪವನ್ನು ಧರಿಸಿ ಮುಂದುಮುಂದಿನ ಕಾರ್ಯವನ್ನು ಸೃಷ್ಟಿಸುತ್ತಾನೆಂಬುದೇ ಈಕ್ಷಣಶ್ರುತಿಯ ಅಭಿಪ್ರಾಯ. ೨-೩-೧೩ರ ಭಾಷ್ಯವನ್ನು ನೋಡಿ.

ಭವತಿ ಆತ್ಮಶಬ್ದಃ 'ಮಮ ಆತ್ಮಾ ಭದ್ರಸೇನಃ' ಇತಿ | ಪ್ರಧಾನಂ ಹಿ ಪುರುಷಸ್ಯ ಆತ್ಮನಃ ಭೋಗಾಪವರ್ಗೌ ಕುರ್ವತ್ ಉಪಕರೋತಿ ರಾಜ್ಞ ಇವ ಭೃತ್ಯಃ ಸನ್ಧಿವಿಗ್ರಹಾದಿಷು ವರ್ತಮಾನಃ | ಅಥವಾ ಏಕ ಏವ ಆತ್ಮಶಬ್ದಃ ಚೇತನಾಚೇತನವಿಷಯೋ ಭವಿಷ್ಯತಿ | 'ಭೂತಾತ್ಮಾ' 'ಇನ್ದ್ರಿಯಾತ್ಮಾ' ಇತಿ ಚ ಪ್ರಯೋಗದರ್ಶನಾತ್ | ಯಥಾ ಏಕ ಏವ ಜ್ಯೋತಿಃಶಬ್ದಃ ಕ್ರತುಜ್ವಲನವಿಷಯಃ | ತತ್ರ ಕುತ ಏತತ್ ಆತ್ಮಶಬ್ದಾತ್ ಈಕ್ಷತೇಃ ಅಗೌಣತ್ವಮಿತಿ? ಅತಃ ಉತ್ತರಂ ಪಠತಿ—

(ಭಾಷ್ಯಾರ್ಥ)

ಇನ್ನು (ಸಾಂಖ್ಯನು) ಹೀಗೆನ್ನಬಹುದು: ಪ್ರಧಾನವು ಅಚೇತನವಾದರೂ (ಅದರಲ್ಲಿ) ಆತ್ಮಶಬ್ದವನ್ನು ಪ್ರಯೋಗಿಸಬಹುದು.[1] ಏಕೆಂದರೆ (ಅದು) ಆತ್ಮನಿಗೆ (ಪುರುಷಾ)ರ್ಥವನ್ನು ಮಾಡಿಕೊಡುತ್ತದೆ. ರಾಜನಿಗೆ ಬೇಕಾದವನ್ನೆಲ್ಲ ಮಾಡಿಕೊಡುವ ಭೃತ್ಯನ (ವಿಷಯ)ದಲ್ಲಿ 'ಭದ್ರಸೇನನು ನನ್ನ ಆತ್ಮನು' ಎಂದು ಹೇಗೆ ಆತ್ಮಶಬ್ದವು (ಪ್ರಯೋಗ)ವಾಗುವದೋ (ಅದರಂತೆಯೇ ಇಲ್ಲಿಯೂ ತಿಳಿಯಬೇಕು.) ರಾಜನಿಗೆ ಸಂಧಿ, ವಿಗ್ರಹ (ಮುಂತಾದ ಕಾರ್ಯ)ಗಳಲ್ಲಿ (ನಿಯುಕ್ತ)ನಾಗಿರುವ ಭೃತ್ಯನು (ಉಪಕಾರಮಾಡು)ವಂತೆ ಪ್ರಧಾನವು ಪುರುಷನಾದ ಆತ್ಮನಿಗೆ ಭೋಗಾಪವರ್ಗಗಳನ್ನು ಮಾಡಿಕೊಟ್ಟು ಉಪಕಾರಮಾಡುತ್ತದೆಯಲ್ಲವೆ? (ಆದ್ದರಿಂದ ಪ್ರಧಾನವನ್ನು ಆತ್ಮನೆನ್ನಬಹುದು), ಅಥವಾ ಒಂದೇ ಆತ್ಮಶಬ್ದವು ಚೇತನ, ಅಚೇತನ-(ಈ ಎರಡರ) ವಿಷಯದಲ್ಲಿಯೂ (ಪ್ರಯೋಗ)ವಾಗುತ್ತದೆ (ಎನ್ನೋಣ) ಏಕೆಂದರೆ 'ಭೂತಾತ್ಮ' 'ಇಂದ್ರಿಯಾತ್ಮ' ಎಂದು ಪ್ರಯೋಗ(ವಿರುವದು) ಕಂಡುಬಂದಿದೆ.[2] ಅಥವಾ ಜ್ಯೋತಿ ಎಂಬ ಒಂದೇ ಶಬ್ದವು ಯಾಗ, ಬೆಂಕಿ (ಎರಡರ) ವಿಷಯದಲ್ಲಿಯೂ (ಪ್ರಯೋಗವಾಗುತ್ತದೆಯಲ್ಲವೆ)? (ಹಾಗೆ) (ಇಲ್ಲಿಯೂ ಆತ್ಮಶಬ್ದದ ಪ್ರಯೋಗವು

---

1. ಗೌಣವೃತ್ತಿಯಿಂದ ಅದೂ ಆತ್ಮನು. ಪ್ರಕೃತಿಯಿಂದಲೇ ಪುರುಷನಿಗೆ ಬಂಧಮೋಕ್ಷಗಳಾಗುವವು. (ಸಾಂ. ಕಾ. ೬೩)

2. ಅಚೇತನವಾದ ಭೂತ, ಇಂದ್ರಿಯ-ಇವನ್ನೂ ಆತ್ಮನೆಂದು ಕರೆದಿರುವದು ಕಂಡುಬರುತ್ತದೆ. ಉದಾಹರಣೆ ವಿ. ಪು. ೫-೧೮-೫೦ರಲ್ಲಿ "ಭೂತಾತ್ಮಾ ಚೇನ್ದ್ರಿಯಾತ್ಮಾ ಚ ಪ್ರಧಾನಾತ್ಮಾ ತಥಾ ಭವಾನ್ | ಆತ್ಮಾ ಚ ಪರಮಾತ್ಮಾ ಚ ತ್ವಮೇಕಃ ಪಞ್ಚಧಾ ಸ್ಥಿತಃ" ಎಂದಿದೆ,

ಎರಡರ್ಥದಲ್ಲಿಯೂ ಆಗಬಹುದು) (ಹೀಗಿರು)ವಲ್ಲಿ ಆತ್ಮಶಬ್ದವಿರುವದರಿಂದ ಈಕ್ಷಿತೃತ್ವವು ಗೌಣವಲ್ಲವೆನ್ನುವದು ಹೇಗೆ?[1]

## ಸಿದ್ಧಾಂತ: ಸನ್ನಿಷ್ಠೆಯುಳ್ಳವನಿಗೆ ಮೋಕ್ಷವನ್ನು ಹೇಳಿರುವದರಿಂದ ಸತ್ತು ಪ್ರಧಾನವಲ್ಲ

ಈ (ಪೂರ್ವಪಕ್ಷ)ಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೆ :

**ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ॥ ೭ ॥**

೭. ಅದರಲ್ಲಿ ನಿಷ್ಠನಾಗಿರುವವನಿಗೆ ಮೋಕ್ಷವನ್ನುಪದೇಶ(ಮಾಡಿರುವದ ರಿಂದ (ಆತ್ಮಶಬ್ದವು ಪ್ರಧಾನವಿಷಯಃವಲ್ಲ)

(ಭಾಷ್ಯ)

೭೪. ನ ಪ್ರಧಾನಮ್ ಅಚೇತನಮ್ ಆತ್ಮಶಬ್ದಾಲಮ್ಬನಂ ಭವಿತು ಮರ್ಹತಿ । 'ಸ ಆತ್ಮಾ' ಇತಿ ಪ್ರಕೃತಂ ಸದಣಿಮಾನಮ್ ಆದಾಯ 'ತತ್ತ್ವಮಸಿ ಶ್ವೇತಕೇತೋ' ಇತಿ ಚೇತನಸ್ಯ ಶ್ವೇತಕೇತೋಃ ಮೋಕ್ಷಯಿತವ್ಯಸ್ಯ ತನ್ನಿಷ್ಠಾಮ್ ಉಪದಿಶ್ಯ "ಆಚಾರ್ಯವಾನ್ ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ" (ಛಾಂ ೬-೧೪-೨) ಇತಿ ಮೋಕ್ಷೋಪದೇಶಾತ್ । ಯದಿ ಹಿ ಅಚೇತನಂ ಪ್ರಧಾನಂ ಸಚ್ಛಬ್ದವಾಚ್ಯಂ 'ತದಸಿ' ಇತಿ ಗ್ರಾಹಯೇತ್ ಮುಮುಕ್ಷುಂ ಚೇತನಂ ಸನ್ತಮ್ 'ಅಚೇತನೋಽಸಿ' ಇತಿ ತದಾ ವಿಪರೀತವಾದಿ ಶಾಸ್ತ್ರಂ ಪುರುಷಸ್ಯ ಅನರ್ಥಾಯ ಇತಿ ಅಪ್ರಮಾಣಂ ಸ್ಯಾತ್ । ನ ತು ನಿರ್ದೋಷಂ ಶಾಸ್ತ್ರಮ್ ಅಪ್ರಮಾಣಂ ಕಲ್ಪಯಿತುಂ ಯುಕ್ತಮ್ ॥

(ಭಾಷ್ಯಾರ್ಥ)

ಅಚೇತನವಾದ ಪ್ರಧಾನವು ಆತ್ಮಶಬ್ದಕ್ಕೆ ವಿಷಯವಾಗಲಾರದು. ಏಕೆಂದರೆ 'ಅದು ಆತ್ಮನು' ಎಂದು ಪ್ರಕೃತವಾಗಿರುವ ಸತ್ತೆಂಬ ಸೂಕ್ಷ್ಮ(ತತ್ತ್ವ

1. ಪ್ರಧಾನದಲ್ಲಿಯೂ ಆತ್ಮಶಬ್ದವು ಗೌಣವಾಗಿ ಅಥವಾ ಮುಖ್ಯವಾಗಿ ಪ್ರಯುಕ್ತವಾಗಬಹುದಲ್ಲ! ಆದ್ದರಿಂದ ಈಕ್ಷಿತೃತ್ವವು ಗೌಣವಾಗಿ ಆಗಬಹುದಲ್ಲ ! ಎಂದು ಆಕ್ಷೇಪ.

ವನ್ನು) ತೆಗೆದುಕೊಂಡು "ಶ್ವೇತಕೇತುವೆ, ಅದು ನೀನಾಗಿರುವೆ" (ಛಾಂ. ೬-೧೩-೨) ಎಂದು ಮೋಕ್ಷವನ್ನು ಪಡೆಯಿಸಬೇಕಾಗಿರುವ ಶ್ವೇತಕೇತುವಿಗೆ ಅದರಲ್ಲಿ ನಿಷ್ಠೆಯನ್ನು ಹೇಳಿ[1] "ಆಚಾರ್ಯವಂತನಾದ ಪುರುಷನು (ಅದನ್ನು) ಅರಿತುಕೊಳ್ಳುತ್ತಾನೆ; ಅವನಿಗೆ ಎಲ್ಲಿಯವರೆಗೆ ಬಿಡುಗಡೆಯಾಗುವದಿಲ್ಲವೋ ಅಲ್ಲಿಯವರೆಗೇ[2] ತಡವು, ಆಮೇಲೆ (ಅದನ್ನೇ) ಸೇರುವನು" (ಛಾಂ. ೬-೧೪-೨) ಎಂದು ಮೋಕ್ಷವನ್ನು ಉಪದೇಶಮಾಡಿರುತ್ತದೆ. ಅಚೇತನವಾದ ಪ್ರಧಾನವೇ ಸಚ್ಛಬ್ದಕ್ಕೆ ವಾಚ್ಯವಾಗಿದ್ದು 'ಅದೇ ನೀನು' ಎಂದು ಚೇತನನಾಗಿ ಮುಮುಕ್ಷುವಾಗಿರುವ ಶ್ವೇತಕೇತುವಿಗೆ 'ನೀನು ಅಚೇತನನಾಗಿರುವೆ' ಎಂದು ತಿಳಿಸಿಕೊಡುವದಾದರೆ ಆಗ ಶಾಸ್ತ್ರವು ವಿಪರೀತವಾಗಿ ತಿಳಿಸುವದರಿಂದ ಪುರುಷನಿಗೆ ಅನರ್ಥ(ವನ್ನುಂಟುಮಾಡುವ)ದಕ್ಕೇ (ಬಂದಿದೆ) ಎಂದಾಗುವದರಿಂದ ಅಪ್ರಮಾಣವಾಗುವದು.[3] ಆದರೆ ಯಾವ ದೋಷವೂ ಇಲ್ಲದ ಶಾಸ್ತ್ರವು ಅಪ್ರಮಾಣವೆಂದು ಕಲ್ಪಿಸುವದು ಯುಕ್ತವಲ್ಲ.[4]

(ಭಾಷ್ಯ)

೭೯. ಯದಿ ಚ ಅಜ್ಞಸ್ಯ ಸತಃ ಮುಮುಕ್ಷೋಃ ಅಚೇತನಮ್ ಅನಾತ್ಮಾನಮ್ ಆತ್ಮಾ ಇತ್ಯುಪದಿಶೇತ್ ಪ್ರಮಾಣಭೂತಂ ಶಾಸ್ತ್ರಮ್ ಸ ಶ್ರದ್ದಧಾನತಯಾ ಅನ್ಧಗೋಲಾಙ್ಗೂಲನ್ಯಾಯೇನ ತದಾತ್ಮದೃಷ್ಟಿಂ ನ ಪರಿತ್ಯಜೇತ್ । ತದ್ವ್ಯತಿರಿಕ್ತಂ ಚ ಆತ್ಮಾನಂ ನ ಪ್ರತಿಪದ್ಯೇತ । ತಥಾ ಸತಿ ಪುರುಷಾರ್ಥಾತ್ ವಿಹನ್ಯೇತ ಅನರ್ಥಂ ಚ ಋಚ್ಛೇತ್। ತಸ್ಮಾತ್ ಯಥಾ ಸ್ವರ್ಗಾದ್ಯರ್ಥಿನಃ ಅಗ್ನಿಹೋತ್ರಾದಿಸಾಧನಂ ಯಥಾಭೂತಮ್ ಉಪದಿಶತಿ ತಥಾ ಮುಮುಕ್ಷೋರಪಿ

---

1. ಅದೇ ತಾನೆಂಬ ಅರಿವಿನಲ್ಲಿ ನೆಲೆನಿಲ್ಲುವದೇ ತನ್ನಿಷ್ಠೆ; ಅದರಿಂದಲೇ ಮೋಕ್ಷವಾಗುವದೆಂದು ಶ್ರುತಿ ಹೇಳುತ್ತದೆ.

2. ವ್ಯವಹಾರದಿಂದಾಗಿರುವ ಶರೀರಬಂಧವಿರುವವರೆಗೇ.

3. ನಿಜವನ್ನು ತಿಳಿಸದೆ ಇರುವದು, ಸಂಶಯವಾಗಿ ತಿಳಿಸುವದು, ವಿಪರೀತವಾಗಿ ತಿಳಿಸುವದು- ಇವೆಲ್ಲ ಅಪ್ರಮಾಣದ ಗುರುತುಗಳು.

4. ಪುರುಷನಲ್ಲಿ ಅಜ್ಞಾನ, ಅಶಕ್ತಿ, ಮೋಸ ಮುಂತಾದ ದೋಷಗಳಿರುವವು, ಅಪೌರುಷೇಯವಾದ ವೇದದಲ್ಲಿ ಇವು ಯಾವವೂ ಇರುವದಿಲ್ಲ.

"ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" ಇತಿ ಯಥಾಭೂತಮೇವ ಆತ್ಮಾನಮ್ ಉಪದಿಶತಿ ಇತಿ ಯುಕ್ತಮ್ ||

(ಭಾಷ್ಯಾರ್ಥ)

ಮತ್ತು ಅಜ್ಞನಾಗಿರುವ ಮುಮುಕ್ಷುವಿಗೆ ಅಚೇತನವಾಗಿರುವ ಅನಾತ್ಮವನ್ನು (ನಿನ್ನ) ಆತ್ಮನೆಂದು ಪ್ರಮಾಣವಾಗಿರುವ ಶಾಸ್ತ್ರವು ಹೇಳಿಕೊಡುವದಾದರೆ, ಅವನು ಶ್ರದ್ಧೆಯಿಂದ ಎತ್ತಿನ ಬಾಲವನ್ನು (ಹಿಡಿದುಕೊಂಡ) ಕುರುಡನಂತೆ[1] ಅದೇ ತನ್ನ ಆತ್ಮನೆಂಬ ದೃಷ್ಟಿಯನ್ನು ಬಿಡದೆ ಇರಬೇಕಾಗುವದು, ಅದಕ್ಕಿಂತ ಬೇರೆಯಾಗಿರುವ ಆತ್ಮನನ್ನು ತಿಳಿದುಕೊಳ್ಳದೆ ಹೋಗಬೇಕಾಗುವದು; ಆಗ ಅವನಿಗೆ ಪುರುಷಾರ್ಥವು ತಪ್ಪಿಹೋಗಬೇಕಾಗುವದು, ಅನರ್ಥವನ್ನೂ ಹೊಂದಬೇಕಾಗುವದು. ಆದ್ದರಿಂದ (ಶಾಸ್ತ್ರವು) ಹೇಗೆ ಸ್ವರ್ಗವೇ ಮುಂತಾದದ್ದನ್ನು ಬಯಸುವವನಿಗೆ ಅಗ್ನಿಹೋತ್ರವೇ ಮುಂತಾದ ನಿಜವಾದ ಸಾಧನವನ್ನು ಉಪದೇಶಿಸಿರುತ್ತದೆಯೋ ಹಾಗೆಯೇ ಮುಮುಕ್ಷುವಿಗೂ "ಅದು ಆತ್ಮನು, ಶ್ವೇತಕೇತುವೆ, ಅದು ನೀನಾಗಿರುವೆ" ಎಂದು ನಿಜವಾದ ಆತ್ಮನನ್ನೇ ಉಪದೇಶಿಸಿರುತ್ತದೆ ಎಂಬುದು ಯುಕ್ತವು[2]

(ಭಾಷ್ಯ)

೬೦. ಏವಂ ಚ ಸತಿ ತಪ್ತಪರಶುಗ್ರಹಣಮೋಕ್ಷದೃಷ್ಟಾನ್ತೇನ ಸತ್ಯಾಭಿಸನ್ಧಸ್ಯ ಮೋಕ್ಷೋಪದೇಶಃ ಉಪಪದ್ಯತೇ । ಅನ್ಯಥಾ ಹಿ ಅಮುಖ್ಯೇ ಸದಾತ್ಮತ್ವೋಪದೇಶೇ[3] "ಅಹಮುಕ್ಥಮಸ್ಮೀತಿ ವಿದ್ಯಾತ್" (ಐ. ಆ ೨-೧-೨-೬) ಇತಿವತ್ ಸಂಪನ್ಮಾತ್ರಮ್ ಇದಮ್ ಅನಿತ್ಯಫಲಂ ಸ್ಯಾತ್ ತತ್ರ ಮೋಕ್ಷೋಪದೇಶಃ

1. ದಾರಿಗಾಣದೆ ಸಂಕಟಪಡುತ್ತಿದ್ದ ಕುರುಡನೊಬ್ಬನಿಗೆ ಯಾವನೋ ಮೋಸಗಾರನು ಹತ್ತಿರವಿದ್ದ ಒಂದು ಹೋರಿಯ ಬಾಲವನ್ನು ಹಿಡಿಯಿಸಿ "ಇದನ್ನು ಬಿಡದಿರು, ಇದು ಊರಿಗೆ ಒಯ್ಯುವದು" ಎಂದು ಹೇಳಿದನು. ಆ ಅವಿವೇಕಿಯು ಅದನ್ನೇ ನಂಬಿ ಬಹಳ ಕಷ್ಟಪಟ್ಟನು. ಈ ದೃಷ್ಟಾಂತವನ್ನು **ಅಂಧಗೋಲಾಂಗೂಲನ್ಯಾಯ** ಎಂದು ಕರೆಯುತ್ತಾರೆ.

2. ಕರ್ಮನಿಷ್ಠನಿಗೆ ಸ್ವರ್ಗವನ್ನುಪದೇಶಿಸಿರುವಂತೆ ಆತ್ಮನಿಷ್ಠನಿಗೆ ಮೋಕ್ಷವನ್ನುಪದೇಶಿಸಿರುವದರಿಂದ ಸ್ವರ್ಗಸಾಧನವಾದ ಕರ್ಮದಂತೆ ಮೋಕ್ಷಸಾಧನವಾದ ಆತ್ಮನಿಷ್ಠೆಯು ಸರಿಯಾದ ಸಾಧನವಾಗಿರಬೇಕು. ಆದ್ದರಿಂದ ಸತ್ತು ಗೌಣಾತ್ಮನಲ್ಲ ಎಂದು ಸೂತ್ರಾರ್ಥವನ್ನು ಹೇಳಿದಂತೆ ಆಯಿತು.

3 'ಸದಾತ್ಮತತ್ತ್ವೋಪದೇಶೇ' ಎಂಬ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ

ನೋಪಪದ್ಯೇತ। ತಸ್ಮಾತ್ ನ ಸದಣಿಮನಿ ಆತ್ಮಶಬ್ದಸ್ಯ ಗೌಣತ್ವಮ್ । ಭೃತ್ಯೇತು ಸ್ವಾಮಿಭೃತ್ಯಭೇದಸ್ಯ ಪ್ರತ್ಯಕ್ಷತ್ವಾತ್ ಉಪಪನ್ನೋ ಗೌಣ ಆತ್ಮಶಬ್ದಃ 'ಮಮಾತ್ಮಾ ಭದ್ರಸೇನಃ' ಇತಿ। ಅಪಿ ಚ ಕ್ವಚಿತ್ ಗೌಣಃ ಶಬ್ದೋ ದೃಷ್ಟಃ ಇತಿ ನೈತಾವತಾ ಶಬ್ದಪ್ರಮಾಣಕೇ ಅರ್ಥೇ ಗೌಣೀ ಕಲ್ಪನಾ ನ್ಯಾಯ್ಯಾ। ಸರ್ವತ್ರ ಅನಾಶ್ವಾಸಪ್ರಸಙ್ಗಾತ್ ॥

(ಭಾಷ್ಯಾರ್ಥ)

ಮತ್ತು ಹೀಗಾದ (ಪಕ್ಷ)ದಲ್ಲಿಯೇ ಕಾದ ಕೊಡಲಿಯನ್ನು ಹಿಡಿದು ಕೊಂಡವನು (ಕಳ್ಳತನದ ಆರೋಪದಿಂದ) ಬಿಡುಗಡೆಯನ್ನು ಹೊಂದುವನೆಂಬ ದೃಷ್ಟಾಂತವನ್ನು ಕೊಟ್ಟು ಸತ್ಯವಾದ (ಬ್ರಹ್ಮದಲ್ಲಿಯೇ) ತಾತ್ಪರ್ಯವುಳ್ಳಾತನಿಗೆ ಮೋಕ್ಷವಾಗುವದೆಂದು ಹೇಳಿರುವದು ಹೊಂದುತ್ತದೆ. ಹಾಗಿಲ್ಲದೆ 'ಸತ್ತೆಂಬುದು (ನಿನ್ನ) ಆತ್ಮನು' ಎಂದು ಉಪದೇಶಿಸಿರುವದು ಮುಖ್ಯ(ವೃತ್ತಿ)ಯಿಂದಲ್ಲ (ಎಂಬವರ ಪಕ್ಷ) ದಲ್ಲಿ "ನಾನು ಉಕ್ಥವಾಗಿರುತ್ತೇನೆ ಎಂದು ತಿಳಿಯಬೇಕು"[1] (ಐ ಆ. ೨-೧-೨-೬) ಎಂಬಂತೆ ಇದು ಬರಿಯ ಸಂಪತ್ತು[2] (ಎಂದಾ)ಗುವದರಿಂದ ಇದಕ್ಕೆ ಅನಿತ್ಯವಾದ ಫಲವೇ ಆಗುವದು. ಆಗ (ಸದಾತ್ಮನೇ ನಾನೆಂದು ತಿಳಿದವನಿಗೆ) ಮೋಕ್ಷವನ್ನು ಉಪದೇಶಮಾಡಿರುವದು ಹೊಂದದೆಹೋಗುವದು.[3]

ಆದ್ದರಿಂದ ಸತ್ತೆಂಬ ಸೂಕ್ಷ್ಮತತ್ತ್ವದಲ್ಲಿ (ಉಪಯೋಗಿಸಿರುವ) ಆತ್ಮಶಬ್ದವು ಗೌಣವಲ್ಲ. ಭೃತ್ಯನ ವಿಷಯದಲ್ಲಿಯೋ ಎಂದರೆ ಧಣಿಯೂ ಭಂಟನೂ ಬೇರೆಬೇರೆಯಾಗಿರುವದು ಪ್ರತ್ಯಕ್ಷವಾಗಿರುವದರಿಂದ[4] 'ಭದ್ರಸೇನನು ನನ್ನ

1 ಪ್ರಾಣನು ಉಕ್ಥವು ; ನಾನು ಉಕ್ಥವೆಂದು ಉಪಾಸನೆಮಾಡಬೇಕು ಎಂಬುದು ಶ್ರುತಿಯ ಅರ್ಥ.

2 ಸಂಪತ್ತೆಂದರೇನೆಂಬುದನ್ನು ಭಾ. ಭಾ. ೪೬ರಲ್ಲಿ ವಿವರಿಸಿದೆ. ಸಂಪದ್ರೂಪವಾದ ಉಪಾಸನೆಗೆ ಜ್ಞಾನಪ್ರಾಪ್ಯವಾದ ನಿತ್ಯಫಲವು ದೊರಕಲಾರದು.

3 ಸನ್ನಿಷ್ಠನು ಪರಮಾರ್ಥವನ್ನು ನಂಬಿರುವದರಿಂದ ಮೋಕ್ಷವನ್ನು ಹೊಂದುತ್ತಾನೆ ಎಂದು ನಿತ್ಯಫಲವಾದ ಮೋಕ್ಷವನ್ನು ಉಪದೇಶಿಸಿರುವದರಿಂದ ಸತ್ತು ಗೌಣಾತ್ಮನಾಗಲಾರದು; ಏಕೆಂದರೆ ಗೌಣಾತ್ಮನ ಉಪಾಸನೆಯಿಂದ ನಿತ್ಯವಾದ ಮೋಕ್ಷಫಲವು ದೊರಕಲಾರದು ಎಂದು ಸೂತ್ರಾರ್ಥವನ್ನು ಹೇಳಿದಂತೆ ಆಯಿತು.

4 ಮುಖ್ಯಾರ್ಥವು ಬೇರೆಯಾಗಿರುವದು ಅನುಭವದಲ್ಲಿರುವಾಗಲೇ ಗೌಣಾರ್ಥವನ್ನು ಸ್ವೀಕರಿಸಬೇಕೆಂಬ ಬಗ್ಗೆ ಭಾ. ಭಾ. ೫೯ನ್ನು ನೋಡಿ.

ಆತ್ಮನು' ಎಂದು ಗೌಣವಾಗಿ ಆತ್ಮಶಬ್ದವು (ಪ್ರಯುಕ್ತವಾಗುವದು) ಯುಕ್ತವಾಗಿರುತ್ತದೆ. ಇದಲ್ಲದೆ (ಎಲ್ಲಿಯೋ) ಒಂದು ಕಡೆಯಲ್ಲಿ (ಒಂದು) ಶಬ್ದವನ್ನು ಗೌಣವಾಗಿ (ಉಪಯೋಗಿಸಿರುವದು) ಕಂಡುಬಂದರೆ ಅಷ್ಟುಮಾತ್ರದಿಂದ ಪ್ರಮಾಣಕವಾದ ವಿಷಯದಲ್ಲಿಯೂ ಗೌಣ(ವಾಗಿರಬೇಕು) ಎಂದು ಕಲ್ಪಿಸುವದು ಸರಿಯಲ್ಲ.[1] ಏಕೆಂದರೆ (ಆ ಪಕ್ಷದಲ್ಲಿ) ಎಲ್ಲಿಯೂ (ಮುಖ್ಯಾರ್ಥವೆಂಬ ಬಗ್ಗೆ) ವಿಶ್ವಾಸವೇ ಇಲ್ಲವಾಗಿಬಿಟ್ಟೀತು.

## ಆತ್ಮಶಬ್ದವು ನಾನಾರ್ಥಕವೆಂಬುದೂ ಸರಿಯಲ್ಲ

(ಭಾಷ್ಯ)

೮೧. ಯತ್ ತು ಉಕ್ತಮ್ ಚೇತನಾಚೇತನಯೋಃ ಸಾಧಾರಣಃ ಆತ್ಮಶಬ್ದಃ ಕ್ರತುಜ್ವಲನಯೋರಿವ ಜ್ಯೋತಿಃಶಬ್ದಃ ಇತಿ । ತನ್ನ । ಅನೇಕಾರ್ಥತ್ವಸ್ಯ ಅನ್ಯಾಯ್ಯತ್ವಾತ್ । ತಸ್ಮಾತ್ ಚೇತನವಿಷಯ ಏವ ಮುಖ್ಯಃ ಆತ್ಮಶಬ್ದಃ ಚೇತನತ್ವೋಪಚಾರಾತ್ ಭೂತಾದಿಷು ಪ್ರಯುಜ್ಯತೇ ' ಭೂತಾತ್ಮಾ ' ' ಇನ್ದ್ರಿಯಾತ್ಮಾ' ಇತಿ ಚ । ಸಾಧಾರಣತ್ವೇಽಪಿ ಆತ್ಮಶಬ್ದಸ್ಯ ನ ಪ್ರಕರಣಮ್ ಉಪಪದಂ ವಾ ಕಿಂಚಿತ್ ನಿಯಾಮಕಮ್ ಅನ್ತರೇಣ ಅನ್ಯತರವೃತ್ತಿತಾ ನಿರ್ಧಾರಯಿತುಂ ಶಕ್ಯತೇ । ನ ಚ ಅತ್ರ ಅಚೇತನಸ್ಯ ನಿಶ್ಚಾಯಕಂ ಕಿಂಚಿತ್ ಕಾರಣಮ್ ಅಸ್ತಿ। ಪ್ರಕೃತಂ ತು ಸತ್ ಈಕ್ಷಿತೃ, ಸಂನಿಹಿತಃ ಚೇತನಃ ಶ್ವೇತಕೇತುಃ । ನ ಹಿ ಚೇತನಸ್ಯ ಶ್ವೇತಕೇತೋಃ ಅಚೇತನಃ ಆತ್ಮಾ ಸಂಭವತಿ ಇತಿ ಅವೋಚಾಮ ತಸ್ಮಾತ್ ಚೇತನವಿಷಯಃ ಇಹ ಆತ್ಮಶಬ್ದಃ ಇತಿ ನಿಶ್ಚೀಯತೇ । ಜ್ಯೋತಿಃಶಬ್ದೋಽಪಿ ಲೌಕಿಕೇನ ಪ್ರಯೋಗೇಣ ಜ್ವಲನೇ ಏವ ರೂಢಃ । ಅರ್ಥವಾದಕಲ್ಪಿತೇನ ತು ಜ್ವಲನಸಾದೃಶ್ಯೇನ ಕ್ರತೌ ಪ್ರವೃತ್ತಃ ಇತಿ ಅದೃಷ್ಟಾನ್ತಃ ॥

(ಭಾಷ್ಯಾರ್ಥ)

ಇನ್ನು ಜ್ಯೋತಿ ಎಂಬ ಮಾತು ಯಾಗಕ್ಕೂ ಬೆಂಕಿಗೂ (ಸಾಧಾರಣವಾದ ಹೆಸರಾಗಿರು)ವಂತೆ ಆತ್ಮ ಎಂಬ ಮಾತು ಚೇತನಕ್ಕೂ ಅಚೇತನಕ್ಕೂ

1 ಶಬ್ದದಿಂದಲೇ ತಿಳಿಯುವ ವಸ್ತು ಪ್ರಮಾಣಾಂತರಗೋಚರವಲ್ಲ; ಆದ್ದರಿಂದ ಅಲ್ಲಿ ಮುಖ್ಯಾರ್ಥವು ಹೊಂದುವದಿಲ್ಲವೆಂದು ಹೇಳುವದಕ್ಕೆ ಕಾರಣವೇ ಇಲ್ಲ.

ಸಮಾನವಾಗಿರುತ್ತದೆ[1] ಎಂದು (ಸಾಂಖ್ಯನು) ಹೇಳಿದ್ದನಷ್ಟೆ, ಅದು ಸರಿಯಲ್ಲ. ಏಕೆಂದರೆ (ಒಂದೇ ಶಬ್ದಕ್ಕೆ) ಅನೇಕಾರ್ಥಗಳಿರುವವೆಂಬುದು ಅಯುಕ್ತವಾಗಿರುತ್ತದೆ.[2] ಆದ್ದರಿಂದ ಚೇತನವಿಷಯದಲ್ಲಿಯೇ ಆತ್ಮಶಬ್ದವು ಮುಖ್ಯವಾಗಿರುತ್ತದೆ; ಭೂತವೇ ಮುಂತಾದವುಗಳಲ್ಲಿ (ಅವು) ಚೇತನವೆಂದು ಉಪಚಾರಕ್ಕೆ ಇಟ್ಟುಕೊಂಡು 'ಭೂತಾತ್ಮ,' 'ಇಂದ್ರಿಯಾತ್ಮ' ಎಂದು ಪ್ರಯೋಗವಾಗಿರುತ್ತದೆ. ಆತ್ಮಶಬ್ದವು (ಚೇತನಾಚೇತನಗಳಿಗೆ) ಸಾಧಾರಣ(ವಾಗಿರುವದೆಂದು ಇಟ್ಟುಕೊಂಡ)ರೂ ನಿಶ್ಚಯಿಸುವದಕ್ಕೆ ಅನುಕೂಲವಾದ ಪ್ರಕರಣ, ಉಪಪದ[3]-(ಮುಂತಾದ) ಯಾವದಾದರೊಂದು (ಕಾರಣ)ವಿದ್ದ ಹೊರತು (ಅದು ಇವೆರಡರಲ್ಲಿ) ಇಂಥ (ಅರ್ಥ)ದಲ್ಲಿಯೇ ಬಂದಿದೆ ಎಂದು ತೀರ್ಮಾನಿಸುವದು ಆಗಲಾರದು. ಇಲ್ಲಿ (ಅದು) ಅಚೇತನ(ವನ್ನೇ ಹೇಳುತ್ತದೆ) ಎಂದು ನಿಶ್ಚಯಿಸುವ ಯಾವ ಕಾರಣವೂ ಇರುವದಿಲ್ಲ (ಇಲ್ಲಿ) ಪ್ರಕೃತವಾಗಿರುವದು ಈಕ್ಷಿತೃವಾದ ಸತ್ತು,[4] ಸನ್ನಿಧಿಯಲ್ಲಿ (ಹೇಳಿರುವವನು) ಚೇತನನಾದ ಶ್ವೇತಕೇತು; ಚೇತನನಾಗಿರುವ ಶ್ವೇತಕೇತುವಿಗೆ ಅಚೇತನವು ಆತ್ಮನಾಗಲಾರದೆಂದು (ಮೊದಲೇ) ಹೇಳಿರುತ್ತೇವೆ[5] ಆದ್ದರಿಂದ ಇಲ್ಲಿರುವ ಆತ್ಮಶಬ್ದವು ಚೇತನವಿಷಯವಾದದ್ದೇ ಎಂದು ನಿಶ್ಚಯವಾಗುತ್ತದೆ[6]

---

1 ಶ್ರುತಿಯಲ್ಲಿರುವ ಆತ್ಮಶಬ್ದವು ಗೌಣವಾಗಿ ಪ್ರಧಾನದಲ್ಲಿ ಪ್ರಯುಕ್ತವಾಗಿದೆ ಎಂಬ ಸಾಂಖ್ಯಮತವನ್ನು ಅನುವಾದಮಾಡಿಕೊಂಡು ಹಿಂದೆ ಖಂಡಿಸಿತ್ತು. ಈಗ ಆತ್ಮನೂ ಪ್ರಧಾನವೂ ಆತ್ಮಶಬ್ದಕ್ಕೆ ಮುಖ್ಯಾರ್ಥಗಳೇ ಎಂಬ ಪಕ್ಷವನ್ನು ಅನುವಾದಮಾಡಿಕೊಂಡು ಖಂಡಿಸಲಾಗುತ್ತದೆ.

2 ಒಂದು ಶಬ್ದಕ್ಕೆ ಒಂದೇ ಮುಖ್ಯಾರ್ಥವೆಂದು ಕಲ್ಪಿಸುವದೇ ಯುಕ್ತ.

3 ಹಿಂದಿನ ವಾಕ್ಯದಲ್ಲಿರುವದು ಈ ವಾಕ್ಯಕ್ಕೆ ಕಾರ್ಯಾಂತರಕ್ಕಾಗಿ ಸಂಬಂಧಿಸಿರುವದು **ಪ್ರಕರಣವು.** ಹತ್ತಿರದಲ್ಲಿರುವದು ಉಪಪದವು; ಇದನ್ನು ಸನ್ನಿಧಿ ಎಂದೂ ಕರೆಯುವರು.

4 ಆದ್ದರಿಂದ ಪ್ರಕರಣವು ಚೇತನವನ್ನೇ ಹೇಳುತ್ತದೆ.

5 ಆದ್ದರಿಂದ ಸನ್ನಿಧಿಯಿಂದಲೂ ಚೇತನವೇ ಸಚ್ಛಬ್ದವಾಚ್ಯವೆನ್ನಬೇಕಾಗಿದೆ.

6 ಆತ್ಮಶಬ್ದಕ್ಕೆ ಅನೇಕಾರ್ಥಗಳೆಂದು ಒಪ್ಪಿ ಹೇಳಿದ ಮಾತಿದು.

ಜ್ಯೋತಿ ಎಂಬ ಮಾತುಕೂಡ ಲೌಕಿಕಪ್ರಯೋಗದಲ್ಲಿ ಬೆಂಕಿಯಲ್ಲಿಯೇ ರೂಢವಾಗಿರುತ್ತದೆ. ಆದರೆ ಅರ್ಥವಾದದಲ್ಲಿ[1] ಕಲ್ಪಿತವಾಗಿರುವ ಅಗ್ನಿಯ ಸಾದೃಶ್ಯ ದಿಂದ ಯಾಗದಲ್ಲಿಯೂ ಪ್ರಯುಕ್ತವಾಗಿರುತ್ತದೆ. ಆದ್ದರಿಂದ ( ಒಂದೇ ) ಶಬ್ದಕ್ಕೆ ಅನೇಕಾರ್ಥವಿರುವದಕ್ಕೆ (ಅದು ಸರಿಯಾದ) ದೃಷ್ಟಾಂತವಲ್ಲ.[2]

## ಈ ಸೂತ್ರಕ್ಕೆ ಬೇರೊಂದುಬಗೆಯ ಅರ್ಥ

(ಭಾಷ್ಯ)

೬೨. ಅಥವಾ ಪೂರ್ವಸೂತ್ರೇ ಏವ ಆತ್ಮಶಬ್ದಂ ನಿರಸ್ತಸಮಸ್ತಗೌಣತ್ವ ಸಾಧಾರಣತ್ವಶಙ್ಕತಯಾ ವ್ಯಾಖ್ಯಾಯ ತತಃ ಸ್ವತನ್ತ್ರ ಏವ ಪ್ರಧಾನಕಾರಣ ನಿರಾಕರಣಹೇತುಃ ವ್ಯಾಖ್ಯೇಯಃ " ತನ್ನಿಷ್ಠಸ್ಯ ಮೋಕ್ಷೋಪದೇಶಾತ್ " ಇತಿ | ತಸ್ಮಾತ್ ನ ಅಚೇತನಂ ಪ್ರಧಾನಂ ಸಚ್ಛಬ್ದವಾಚ್ಯಮ್ ||

(ಭಾಷ್ಯಾರ್ಥ)

ಅಥವಾ (ಈ ಸೂತ್ರಕ್ಕೆ ಬೇರೊಂದು ಬಗೆಯಲ್ಲಿಯೂ ಅರ್ಥವನ್ನು ಹೇಳ ಬಹುದು):—ಆತ್ಮಶಬ್ದವು ಗೌಣವೆಂಬ (ಶಂಕೆ, ಅದು ಚೇತನಾಚೇತನಗಳಿಗೆ) ಸಾಧಾರಣ(ವಾಚಕ) ವೆಂಬ ಶಂಕೆ, (ಇದೆ)ಲ್ಲವನ್ನೂ ಹಿಂದಿನ ಸೂತ್ರದಲ್ಲಿಯೇ ನಿರಾಕರಿಸಿರುತ್ತದೆ ಎಂದು ವ್ಯಾಖ್ಯಾನಮಾಡಿ ಆಮೇಲೆ ಪ್ರಧಾನವು (ಜಗ)ತ್ಕಾರಣ ವೆಂಬುದನ್ನು ಖಂಡಿಸುವದಕ್ಕೆ " ತನ್ನಿಷ್ಠಸ್ಯ ಮೋಕ್ಷೋಪದೇಶಾತ್ " (ಸದ್ರೂಪ ವಾದ ವಸ್ತುವಿನಲ್ಲಿ ನಿಷ್ಠೆಯುಳ್ಳಾತನಿಗೆ ಮೋಕ್ಷವನ್ನು ಹೇಳಿರುವದರಿಂದ ಸಚ್ಛಬ್ದವಾಚ್ಯವಾದದ್ದು ಪ್ರಧಾನವಲ್ಲ) ಎಂಬುದು ಸ್ವತಂತ್ರವಾಗಿಯೇ ಕಾರಣ ವೆಂದು ವ್ಯಾಖ್ಯಾನಮಾಡಬಹುದಾಗಿದೆ. ಆದ್ದರಿಂದ ಅಚೇತನವಾದ ಪ್ರಧಾನವು ಸ್ವಚ್ಛಬ್ದವಾಚ್ಯವಲ್ಲ.

---

1. ' ಏತಾನಿ ವಾವ ತಾನಿ ಜ್ಯೋತೀಂಷಿ ಯ ಏತಸ್ಯ ಸ್ತೋಮಾಃ ' ಎಂಬ ಅರ್ಥ ವಾದದಲ್ಲಿ ಮೊದಲನೆಯ ಯಜ್ಞವಾದ ಜ್ಯೋತಿಷ್ಟೋಮದಲ್ಲಿ ಮಾಡಿದ ತ್ರಿವೃದಾದಿಸ್ತೋಮ ಗಳು ಆಮೇಲೆ ಮಾಡುವ ಕ್ರಮುಗಳನ್ನು ಉಜ್ಜ್ವಲಗೊಳಿಸುತ್ತವೆಯಾದ್ದರಿಂದ ಜ್ಯೋತಿಯಂತೆ ಇವೆ ಎಂದು ಸಾದೃಶ್ಯವನ್ನು ಕಲ್ಪಿಸಿದೆ.

2. ಏಕೆಂದರೆ ಜ್ಯೋತಿಶ್ಶಬ್ದವು ಅಲ್ಲಿ ಒಂದು ಮುಖ್ಯಾರ್ಥದಲ್ಲಿ ಇನ್ನೊಂದು ಗೌಣಾರ್ಥ ದಲ್ಲಿ ಪ್ರಯೋಗವಾಗಿದೆ.

## ಸನ್ನಿಷ್ಠೆಯನ್ನು ಬಿಡಬೇಕೆಂದು ಹೇಳಿಲ್ಲವಾದ್ದರಿಂದಲೂ ಸತ್ತು ಪ್ರಧಾನವಲ್ಲ

(ಭಾಷ್ಯ)

೮೩. ಕುತಶ್ಚ ನ ಪ್ರಧಾನಂ ಸಚ್ಛಬ್ದವಾಚ್ಯಮ್ ?

(ಭಾಷ್ಯಾರ್ಥ)

ಪ್ರಧಾನವು ಸಚ್ಛಬ್ದವಾಚ್ಯವಲ್ಲವೆಂಬುದು ಮತ್ತೂ ಯಾವ (ಕಾರಣ) ದಿಂದ? ಎಂದರೆ;

**ಹೇಯತ್ವಾವಚನಾಚ್ಚ ॥ ೮ ॥**

೮. ಬಿಡತಕ್ಕದ್ದೆಂದು ಹೇಳಿಲ್ಲವಾದ್ದರಿಂದಲೂ (ಪ್ರಧಾನವು ಸಚ್ಛಬ್ದ ವಾಚ್ಯವಲ್ಲ).

(ಭಾಷ್ಯ)

ಯದಿ ಅನಾತ್ಮೈವ ಪ್ರಧಾನಂ ಸಚ್ಛಬ್ದವಾಚ್ಯಂ "ಸ ಆತ್ಮಾ ತತ್ತ್ವಮಸಿ" (ಛಾಂ. ೬-೮-೭) ಇತಿ ಇಹ ಉಪದಿಷ್ಟಂ ಸ್ಯಾತ್, ಸ ತದುಪದೇಶ ಶ್ರವಣಾತ್ ಅನಾತ್ಮಜ್ಞತಯಾ ತನ್ನಿಷ್ಠೋ ಮಾ ಭೂತ್ ಇತಿ ಮುಖ್ಯಮ್ ಆತ್ಮಾನಮ್ ಉಪದಿದಿಕ್ಷುಃ ತಸ್ಯ ಹೇಯತ್ವಂ ಬ್ರೂಯಾತ್ । ಯಥಾ ಅರುನ್ಧತೀಂ ದಿದರ್ಶಯಿಷುಃ ತತ್ಸಮೀಪಸ್ಥಾಂ ಸ್ಥೂಲಾಂ ತಾರಾಮ್ ಅಮುಖ್ಯಾಂ ಪ್ರಥಮಮ್ ಅರುನ್ಧತೀ ಇತಿ ಗ್ರಾಹಯಿತ್ವಾ ತಾಂ ಪ್ರತ್ಯಾಖ್ಯಾಯ ಪಶ್ಚಾತ್ ಅರುನ್ಧತೀಮೇವ ಗ್ರಾಹಯತಿ ತದ್ವತ್ 'ನಾಯಮ್ ಆತ್ಮಾ' ಇತಿ ಬ್ರೂಯಾತ್ । ನ ಚೈವಮ್ ಅವೋಚತ್ । ಸನ್ಮಾತ್ರಾವಗತಿನಿಷ್ಠೈವ ಹಿ ಷಷ್ಠಪ್ರಪಾಠಕಪರಿಸಮಾಪ್ತಿರ್ದೃಶ್ಯತೇ ॥

(ಭಾಷ್ಯಾರ್ಥ)

ಅನಾತ್ಮವೇ ಆಗಿರುವ ಪ್ರಧಾನವು ಸಚ್ಛಬ್ದವಾಚ್ಯವಾಗಿದ್ದು "ಅದು ಆತ್ಮನು, ಅದು ನೀನಾಗಿರುವೆ" (ಛಾಂ. ೬-೮-೭) ಎಂದು ಇಲ್ಲಿ ಉಪದಿಷ್ಟವಾಗಿದ್ದರೆ, ಆ (ಶ್ವೇತಕೇತುವು) ಅದರ ಉಪದೇಶವನ್ನು ಕೇಳಿ ಅನಾತ್ಮವನ್ನೇ (ಆತ್ಮನೆಂದು) ತಿಳಿದುಕೊಂಡು ಅದರಲ್ಲಿಯೇ ನೆಲೆನಿಲ್ಲದೆ ಇರಲೆಂದು ಮುಖ್ಯಾತ್ಮವನ್ನು ತಿಳಿಸಿಕೊಡಲೆಳಸಿರುವ (ತಂದೆಯು) ಅದನ್ನು ಬಿಡಬೇಕೆಂದು ಹೇಳು

ತ್ತಿದ್ದನು. ಹೇಗೆ ಅರುಂಧತಿಯನ್ನು ತೋರಿಸಿಕೊಡಬೇಕೆಂಬವನು ಅದರ ಹತ್ತಿರ ವಿರುವ ನಿಜವಾದ (ಅರುಂಧತಿ)ಯಲ್ಲದ ದಪ್ಪನಾದ ನಕ್ಷತ್ರವೊಂದನ್ನು ಮೊದಲು ಅರುಂಧತಿಯೆಂದು ತಿಳಿಸಿದ ಬಳಿಕ ಅದನ್ನು ತಳ್ಳಿಗಳೆದು (ನಿಜವಾದ) ಅರುಂಧತಿ ಯನ್ನೇ ತೋರಿಸಿಕೊಡುತ್ತಾನೋ[1] ಅದರಂತೆ 'ಇದು ಆತ್ಮನಲ್ಲ' ಎಂದು ಹೇಳುತ್ತಿದ್ದನು. ಆದರೆ ಹಾಗೆ ಹೇಳಿರುವದಿಲ್ಲ. ಆರನೆಯ ಪ್ರಪಾಠಕವು ಸತ್ತೇ ಆತ್ಮನೆಂದು ತಿಳಿಸಿಕೊಡುವದರಲ್ಲಿಯೇ ಕೊನೆಗಂಡಿರುವದು ಕಂಡುಬರುತ್ತದೆ.[2]

( ಭಾಷ್ಯ )

೮೪. ಚಶಬ್ದಃ ಪ್ರತಿಜ್ಞಾವಿರೋಧಾಭ್ಯುಚ್ಚಯಪ್ರದರ್ಶನಾರ್ಥಃ । ಸತ್ಯಪಿ ಹೇಯತ್ವವಚನೇ ಪ್ರತಿಜ್ಞಾವಿರೋಧಃ ಪ್ರಸಜ್ಯೇತ । ಕಾರಣವಿಜ್ಞಾನಾದ್ ಹಿ ಸರ್ವಂ ವಿಜ್ಞಾತಮ್ ಇತಿ ಪ್ರತಿಜ್ಞಾತಮ್ । "ಉತ ತಮಾದೇಶಮ- ಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತ ಮಿತಿ ಕಥಂ ನು ಭಗವಃ ಸ ಆದೇಶೋ ಭವತೀತಿ" (ಛಾಂ ೬-೧-೩) "ಯಥಾ ಸೋಮ್ಯೈಕೇನ ಮೃತ್ಪಿಣ್ಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್। ಏವಂ ಸೋಮ್ಯ ಸ ಆದೇಶೋ ಭವತಿ" (ಛಾಂ. ೬-೧-೪,-೬) ಇತಿ ವಾಕ್ಯೋಪಕ್ರಮೇ ಶ್ರವಣಾತ್ । ನ ಚ ಸಚ್ಛಬ್ದವಾಚ್ಯೇ ಪ್ರಧಾನೇ ಭೋಗ್ಯ ವರ್ಗಕಾರಣೇ ಹೇಯತ್ವೇನ ಅಹೇಯತ್ವೇನ ವಾ ವಿಜ್ಞಾತೇ ಭೋಕ್ತೃವರ್ಗೋ ವಿಜ್ಞಾತೋ ಭವತಿ । ಅಪ್ರಧಾನವಿಕಾರತ್ವಾತ್ ಭೋಕ್ತೃವರ್ಗಸ್ಯ । ತಸ್ಮಾನ್ನ ಪ್ರಧಾನಂ ಸಚ್ಛಬ್ದವಾಚ್ಯಮ್ ॥

---

1 ಇದನ್ನು 'ಸ್ಥೂಲಾರುಂಧತೀನ್ಯಾಯ' ವೆಂದು ಕರೆಯುತ್ತಾರೆ. ನಿಜವಾದ ಅರುಂಧತಿಯು ಬಹಳ ಸಣ್ಣದಾಗಿರುವದರಿಂದ ಅದನ್ನು ಮೊದಲೇ ತೋರಿಸಿಕೊಡುವದು ಕಷ್ಟವೆಂಬ ಕಾರಣದಿಂದ ಅದರ ಬಳಿ ಇರುವ ದಪ್ಪನಾದ ಒಂದು ನಕ್ಷತ್ರವನ್ನೇ ಅರುಂಧತಿ ಎಂದು ತೋರಿಸಿ ಆ ಬಳಿಕ ಅದರ ಹತ್ತಿರವೇ ಇರುವ ಸಣ್ಣ ನಕ್ಷತ್ರವು ನಿಜವಾದ ಅರುಂಧತಿ ಎಂದು ತಿಳಿಸುವ ವಾಡಿಕೆಯುಂಟು.

2. ಛಾಂದೋಗ್ಯೋಪನಿಷತ್ತಿನ ಆರನೆಯ ಪ್ರಪಾಠಕದಲ್ಲಿ ಹದಿನಾರು ಖಂಡಗಳಿವೆ. ಎರಡನೆಯ ಖಂಡದಲ್ಲಿ ಸತ್ತಿನ ವಿಚಾರವನ್ನು ಉಪದೇಶಮಾಡುವದಕ್ಕೆ ಉಪಕ್ರಮಿಸಿ ಹದಿ ನಾರನೆಯ ಖಂಡದವರೆಗೂ ಸತ್ತೇ ಆತ್ಮನು ಎಂದೇ ಉಪಸಂಹಾರದಲ್ಲಿ ಹೇಳಿದೆ. ಅದರಂತೆಯೇ ಶ್ವೇತಕೇತುವು ಅರಿತುಕೊಂಡನೆಂದು ಉಪನಿಷತ್ತಿನ ಕಥೆಯನ್ನು ಮುಗಿಸಿದೆ.

( ಭಾಷ್ಯಾರ್ಥ )

(ಈ ಸೂತ್ರದಲ್ಲಿರುವ) ಚಶಬ್ದವು ಪ್ರತಿಜ್ಞಾವಿರೋಧವನ್ನೂ ಸೇರಿಸಿಕೊಳ್ಳಬೇಕೆಂದು ತಿಳಿಸುವದಕ್ಕಾಗಿ (ಬಂದಿದೆ)[1]. (ಪ್ರಧಾನವು ಆತ್ಮನಲ್ಲವಾದ್ದರಿಂದ ಅದನ್ನು) ಬಿಡತಕ್ಕದ್ದು ಎಂಬ ಮಾತು (ಉಪನಿಷತ್ತಿನಲ್ಲಿ) ಇದ್ದರೂ ಪ್ರತಿಜ್ಞಾವಿರೋಧವೆಂಬ ದೋಷವು ಉಂಟಾಗುತ್ತಿತ್ತು. ಹೇಗೆಂದರೆ ಕಾರಣವನ್ನು ಅರಿತುಕೊಳ್ಳುವದರಿಂದ ಎಲ್ಲವನ್ನೂ ಅರಿತುಕೊಂಡಂತೆ (ಆಗುವದೆಂ)ದಲ್ಲವೆ, ಇಲ್ಲಿ (ಮೊದಲು) ಪ್ರತಿಜ್ಞೆಮಾಡಿರುತ್ತದೆ? "ಯಾವದರಿಂದ ಕೇಳದೆ ಇದ್ದದ್ದು ಕೇಳಿದ್ದಾಗುವದೋ, ಮನನಮಾಡದೆ ಇದ್ದದ್ದು ಮನನಮಾಡಿದ್ದಾಗುವದೋ ಅರಿತುಕೊಳ್ಳದೆ ಇದ್ದದ್ದು ಅರಿತುಕೊಂಡದ್ದಾಗುವದೋ ಆ ಆದೇಶವನ್ನು ಕೇಳಿರುವೆಯಾ? ಪೂಜ್ಯರೆ, ಆ ಆದೇಶವು ಹೇಗಿರುವದು?" (ಛಾಂ. ೬-೧-೩),[2] "ಎಲೈ ಸೋಮ್ಯನೆ. ಹೇಗೆ ಒಂದು ಮಣ್ಣುಮುದ್ದೆಯಿಂದ ಮಣ್ಣಿನಿಂದಾಗಿರುವದೆಲ್ಲವೂ ಅರಿಯಲ್ಪಟ್ಟದ್ದಾಗುವದೋ, ವಿಕಾರವು ವಾಕ್ಕಿನಿಂದ ಉಂಟಾಗಿರುವ ಹೆಸರು ಮಾತ್ರವಾಗಿ ಮಣ್ಣೆಂಬುದೇ ಸತ್ಯವಾಗಿರುವದೋ ಹೀಗೆಯೇ ಎಲೈ ಸೋಮ್ಯನೆ, ಆ ಆದೇಶವು ಇರುತ್ತಿರುವದು" (ಛಾಂ. ೬-೧-೪, ೬-೧-೫, ೬-೧-೬) ಎಂದು ವಾಕ್ಯದ ಉಪಕ್ರಮದಲ್ಲಿ ಹೇಳಿರುವದರಿಂದ (ಹೀಗೆಂದು ಸಿದ್ಧವಾಗುತ್ತದೆ). ಆದರೆ ಸಚ್ಛಬ್ದವಾಚ್ಯ(ವೆಂದು ನೀವು ಇಟ್ಟುಕೊಂಡಿರುವ) ಭೋಗ್ಯರಾಶಿಗೆ (ಮಾತ್ರ) ಕಾರಣವಾಗಿರುವ ಪ್ರಧಾನವನ್ನು ಬಿಡತಕ್ಕದ್ದೆಂದೇ (ತಿಳಿಯಲಿ), ಬಿಡತಕ್ಕದ್ದಲ್ಲವೆಂದೇ ತಿಳಿಯಲಿ, ಭೋಕ್ತೃರಾಶಿಯನ್ನು ಅರಿತಂತೆ ಆಗುವದಿಲ್ಲ, ಏಕೆಂದರೆ ಭೋಕ್ತೃರಾಶಿಯು ಪ್ರಧಾನದ ಕಾರ್ಯವಲ್ಲ.[3] ಆದ್ದರಿಂದ ಪ್ರಧಾನವು ಸಚ್ಛಬ್ದವಾಚ್ಯವಲ್ಲ.

---

1. "ಈಕ್ಷತೇರ್ನಾಶಬ್ದಮ್" "ಗೌಣಶ್ಚೇನ್ನಾತ್ಮಶಬ್ದಾತ್" "ತನ್ನಿಷ್ಠಸ್ಯ ಮೋಕ್ಷೋಪದೇಶಾತ್" "ಹೇಯತ್ವಾವಚನಾಚ್ಚ" ಎಂಬ ಸೂತ್ರಕ್ರಮವಿರುವದರಿಂದ ಹೇತುಗಳ ಸಮುಚ್ಚಯವನ್ನೇ ಚಶಬ್ದವು ಹೇಳುತ್ತದೆ ಎಂದು ಭಾವಿಸಬಾರದು. ಚಶಬ್ದಕ್ಕೆ ಒಂದು ಹೆಚ್ಚಿಗೆಯ ಅರ್ಥವಿದೆ ಎಂದು ಭಾವ.

2. ಪ್ರಶ್ನೆಯು ತಂದೆಯಾದ ಉದ್ದಾಲಕನದು ; ಆ ಆದೇಶವು ಹೇಗಿರುವದು ?– ಎಂಬ ಪ್ರತಿಪ್ರಶ್ನೆಯು ಮಗನಾದ ಶ್ವೇತಕೇತುವಿನದು.

3. ಪುರುಷನು ಪ್ರಕೃತಿಯೂ ಅಲ್ಲ, ವಿಕೃತಿಯೂ ಅಲ್ಲ–ಎಂದು ಸಾಂಖ್ಯರ ಮತ. ಸಾ. ಕಾ. ೩ ನೋಡಿ. ಆದ್ದರಿಂದ ಪ್ರಧಾನದ ಜ್ಞಾನದಿಂದ ಪ್ರಧಾನದ ವಿಕಾರವಾದ ಭೋಗ್ಯವರ್ಗಕ್ಕೆ ಸೇರಿದ ಮಹದಾದಿಗಳನ್ನು ಅರಿತಂತೆ ಆಗುವದೇ ಹೊರತು ಭೋಕ್ತೃಗಳಾದ ಪುರುಷರನ್ನು ಅರಿತಂತೆ ಆಗುವದಿಲ್ಲ. ಪರಮಾತ್ಮನೇ ಸಚ್ಛಬ್ದವಾಚ್ಯನೆಂದು ಹಿಡಿದರೆ ಅವನು ಚೇತನಾಚೇತನಗಳೆಲ್ಲಕ್ಕೂ ಕಾರಣನಾದ್ದರಿಂದ ಸತ್ತಿನ ಜ್ಞಾನದಿಂದ ಎಲ್ಲವನ್ನೂ ಅರಿತಂತೆ ಆಗುತ್ತದೆ.

## ಆತ್ಮನಲ್ಲಿ ಲಯವನ್ನು ಹೇಳಿರುವದರಿಂದ ಸತ್ತು ಪ್ರಧಾನವಲ್ಲ

( ಭಾಷ್ಯ )

೮೫. ಕುತಶ್ಚ ನ ಪ್ರಧಾನಂ ಸಚ್ಛಬ್ದವಾಚ್ಯಮ್ ?

( ಭಾಷ್ಯಾರ್ಥ )

ಪ್ರಧಾನವು ಸಚ್ಛಬ್ದವಾಚ್ಯವಲ್ಲವೆಂಬುದು ಮತ್ತೂ ಏತರಿಂದ ?-ಎಂದರೆ

**ಸ್ವಾಪ್ಯಯಾತ್ ॥ ೯ ॥**

೯. ತನ್ನಲ್ಲಿ ಅಪ್ಯಯ(ವನ್ನು ಹೇಳಿರುವದ)ರಿಂದ(ಲೂ ಪ್ರಧಾನವು) ಸಚ್ಛಬ್ದವಾಚ್ಯವಲ್ಲ.

( ಭಾಷ್ಯ )

ತದೇವ ಸಚ್ಛಬ್ದವಾಚ್ಯಂ ಕಾರಣಂ ಪ್ರಕೃತ್ಯ ಶ್ರೂಯತೇ— " ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ ಸ್ವಂ ಹ್ಯಪೀತೋ ಭವತಿ " (ಛಾಂ. ೬-೮-೧) ಇತಿ । ಏಷಾ ಶ್ರುತಿಃ ' ಸ್ವಪಿತಿ ' ಇತ್ಯೇತತ್ ಪುರುಷಸ್ಯ ಲೋಕಪ್ರಸಿದ್ಧಂ ನಾಮ ನಿರ್ವಕ್ತಿ। ಸ್ವಶಬ್ದೇನ ಇಹ ಆತ್ಮಾ ಉಚ್ಯತೇ। ಯಃ ಪ್ರಕೃತಃ ಸಚ್ಛಬ್ದವಾಚ್ಯಃ ತಮ್ ಅಪೀತೋ ಭವತಿ ಅಪಿಗತೋ ಭವತಿ ಇತ್ಯರ್ಥಃ । ಅಪಿ ಪೂರ್ವಸ್ಯ ಏತೇಃ ಲಯಾರ್ಥತ್ವಂ ಪ್ರಸಿದ್ಧಮ್ । " ಪ್ರಭವಾಪ್ಯಯೌ " (ಮಾಂ. ೬) ಇತಿ ಉತ್ಪತ್ತಿಪ್ರಲಯಯೋಃ ಪ್ರಯೋಗದರ್ಶನಾತ್ । ಮನಃಪ್ರಚಾರೋಪಾಧಿವಿಶೇಷಸಂಬನ್ಧಾತ್ ಇನ್ದ್ರಿಯಾರ್ಥಾನ್ ಗೃಹ್ಣನ್ ತದ್ವಿಶೇಷಾಪನ್ನೋ ಜೀವೋ ಜಾಗರ್ತಿ । ತದ್ವಾಸನಾವಿಶಿಷ್ಟಃ ಸ್ವಪ್ನಾನ್ ಪಶ್ಯನ್ ಮನಃಶಬ್ದವಾಚ್ಯೋ ಭವತಿ । ಸ ಉಪಾಧಿದ್ವಯೋಪರಮೇ ಸುಷುಪ್ತಾವಸ್ಥಾಯಾಮ್ ಉಪಾಧಿಕೃತವಿಶೇಷಾಭಾವಾತ್ ಸ್ವಾತ್ಮನಿ ಪ್ರಲೀನ ಇವ ಇತಿ " ಸ್ವಂ ಹ್ಯಪೀತೋ ಭವತಿ " (ಛಾ. ೬-೮-೧) ಇತ್ಯುಚ್ಯತೇ । ಯಥಾ ಹೃದಯಶಬ್ದನಿರ್ವಚನಂ ಶ್ರುತ್ಯಾ ದರ್ಶಿತಮ್ " ಸ ವಾ ಏಷ ಆತ್ಮಾ ಹೃದಿ ತಸ್ಯೈತದೇವ ನಿರುಕ್ತಂ ಹೃದಯಮಿತಿ ತಸ್ಮಾದ್ಧೃದಯಮ್ "[1] (ಛಾಂ. ೮-೩-೩)

---

1. ಇಲ್ಲಿ ಒಂದು ಇತಿಶಬ್ದವು ಮುದ್ರಿತಸೂತ್ರಭಾಷ್ಯಪುಸ್ತಕಗಳಲ್ಲಿ ಹೆಚ್ಚಾಗಿವೆ. ಮುದ್ರಿತವಾಗಿರುವ ಉಪನಿಷತ್ತಿನಲ್ಲಿ ಅದಿಲ್ಲ.

ಇತಿ । ಯಥಾ ವಾ ಅಶನಾಯೋದನ್ಯಾಶಬ್ದಪ್ರವೃತ್ತಿಮೂಲಂ ದರ್ಶಯತಿ ಶ್ರುತಿಃ—"ಆಪ ಏವ ತದಶಿತಂ ನಯನ್ತೇ" (ಛಾಂ. ೬-೮-೩), "ತೇಜ ಏವ ತತ್ಪೀತಂ ನಯತೇ" (ಛಾಂ. ೬-೮-೫) ಇತಿ ಚ । ಏವಂ ಸ್ವಮ್ ಆತ್ಮಾನಂ ಸಚ್ಛಬ್ದವಾಚ್ಯಮ್ ಅಪೀತೋ ಭವತಿ ಇತೀಮಮ್ ಅರ್ಥಂ ಸ್ವಪಿತಿನಾಮನಿರ್ವಚನೇನ ದರ್ಶಯತಿ । ನ ಚ ಚೇತನ ಆತ್ಮಾ ಅಚೇತನಂ ಪ್ರಧಾನಂ ಸ್ವರೂಪತ್ವೇನ ಪ್ರತಿಪದ್ಯೇತ ॥

( ಭಾಷ್ಯಾರ್ಥ )

ಸಚ್ಛಬ್ದವಾಚ್ಯನಾದ ಅದೇ ಕಾರಣವನ್ನು ಕುರಿತು "ಎಲೈ ಸೋಮ್ಯನೆ, ಯಾವಾಗ ಈ ಪುರುಷನು ಸ್ವಪಿತಿ ಎಂಬ ಹೆಸರುಳ್ಳವನಾಗುವನೋ ಆಗ (ಇವನು) ಸತ್ತಿನೊಡನೆ ಸೇರಿದವನಾಗುತ್ತಾನೆ, ತನ್ನಲ್ಲಿ ಅಪೀತನಾಗುತ್ತಾನೆ; ಆದ್ದರಿಂದ ಇವನನ್ನು 'ಸ್ವಪಿತಿ' (ನಿದ್ರಿಸುತ್ತಾನೆ) ಎನ್ನುತ್ತಾರೆ. ತನ್ನಲ್ಲಿಯೇ ಅಲ್ಲವೆ ಅವನು ಅಪೀತನಾಗಿರುತ್ತಾನೆ? (ಛಾಂ. ೬-೮-೧) ಎಂದು ಶ್ರುತಿಯಲ್ಲಿ (ಹೇಳಿರುತ್ತದೆ). ಈ ಶ್ರುತಿಯು ಲೋಕದಲ್ಲಿ ಪ್ರಸಿದ್ಧವಾಗಿರುವ ಪುರುಷನ 'ಸ್ವಪಿತಿ' (ನಿದ್ರಿಸುತ್ತಾನೆ) ಎಂಬೀ ನಾಮವನ್ನು ನಿರ್ವಚನಮಾಡಿರುತ್ತದೆ. ಇಲ್ಲಿ 'ಸ್ವ' ಎಂಬ ಮಾತಿನಿಂದ ಆತ್ಮನನ್ನು ಹೇಳಿರುತ್ತದೆ. ಸಚ್ಛಬ್ದವಾಚ್ಯನಾದ, ಪ್ರಕೃತನಾದ (ಆತ್ಮ)ನಿರುವನಲ್ಲ, ಅವನಲ್ಲಿ ಅಪೀತನಾಗುತ್ತಾನೆ, ಸೇರಿಹೋಗುತ್ತಾನೆ ಎಂದು ಅರ್ಥ. ಅಪಿ (ಎಂಬ ಉಪಸರ್ಗವು) ಮೊದಲಿರುವ 'ಇ' ಧಾತುವಿಗೆ ಲಯವೆಂಬ ಅರ್ಥವಿರುವದು ಪ್ರಸಿದ್ಧವಾಗಿದೆ; ಏಕೆಂದರೆ "ಪ್ರಭವಾಪ್ಯಯೌ", (ಕಠ. ೬) ಎಂದು ಉತ್ಪತ್ತಿಪ್ರಲಯಗಳನ್ನು (ತಿಳಿಸುವದಕ್ಕೆ) ಪ್ರಯೋಗ (ಮಾಡಿರುವದು) ಕಂಡುಬರುತ್ತದೆ.

ಮನಸ್ಸಿನ ಪ್ರಚಾರಗಳೆಂಬ ಆಯಾ ಉಪಾಧಿಯ ಸಂಬಂಧದಿಂದ ಇಂದ್ರಿಯಾರ್ಥಗಳನ್ನು ಅರಿಯುವದರಿಂದ ಆ ವಿಶೇಷವೇ ಆಗಿ ಜೀವನು ಎಚ್ಚತ್ತಿರುತ್ತಾನೆ.[1] ಅದರ ವಾಸನೆಯಿಂದ ಕೂಡಿದವನಾಗಿ ಕನಸುಗಳನ್ನು ಕಾಣುವವನಾಗಿ ಮನಃಶಬ್ದವಾಚ್ಯನಾಗುತ್ತಾನೆ.[2] ಅವನು ಈ ಎರಡು ಉಪಾಧಿಗಳೂ

---

1. ನೋಡುವವನು, ಕೇಳುವವನು, ಯೋಚಿಸುವವನು-ಎಂದು ಆಯಾ ಉಪಾಧಿಯಿಂದ ಆಯಾ ರೂಪವನ್ನು ತನ್ನಲ್ಲಿ ಅಧ್ಯಾಸಮಾಡಿಕೊಂಡಿರುವದೇ ಎಚ್ಚರವೆಂಬ ಅವಸ್ಥೆ. ಬೃ. ೧.೪-೭ ರಲ್ಲಿ ಹೇಳಿರುವ ಕರ್ಮನಾಮಗಳ ಸೂಚನೆಯಿದು.

2. ಜೀವನನ್ನು ಮನಸ್ಸೆಂಬ ಹೆಸರಿನಿಂದ ಶ್ರುತಿಯಲ್ಲಿ ಛಾಂ. ೬-೮-೨ ಕರೆದಿರುವದಕ್ಕೆ ಇದೇ ಕಾರಣ.

ಇಲ್ಲವಾಗಲು[1] ತನಿನ್ನಿದ್ರೆಯ ಅವಸ್ಥೆಯಲ್ಲಿ ಉಪಾಧಿಯಿಂದ (ಯಾವ) ವಿಶೇಷವೂ ಇಲ್ಲದ್ದರಿಂದ[2] (ತಾನೇತಾನಾಗಿ) ತನ್ನಲ್ಲಿ ಪ್ರಲಯವಾದಂತೆ (ಆಗುತ್ತಾನೆ)[3]; ಆದ್ದರಿಂದ "ತನ್ನಲ್ಲಿಯೇ ಅಲ್ಲವೆ, ಲಯವಾಗುತ್ತಾನೆ?" ಎಂದು (ಶ್ರುತಿಯಲ್ಲಿ) ಹೇಳಿರುತ್ತದೆ.[4] ಹೇಗೆ ಶ್ರುತಿಯಲ್ಲಿ "ಆ ಈ ಆತ್ಮನೇ ಹೃದಯದಲ್ಲಿರುತ್ತಾನೆ; ಆ (ಹೃದಯಕ್ಕೆ) ಇದೇ ನಿರ್ವಚನವು: ಹೃದಯದಲ್ಲಿ (ಹೃದಿ) ಈತನು (ಅಯಮ್), ಆದ್ದರಿಂದ (ಅದು) ಹೃದಯವು ಎಂದು (ನಿರ್ವಚನವು)." (ಛಾಂ. ೮-೩-೩) ಎಂದು ಹೃದಯಶಬ್ದದ ನಿರ್ವಚನವನ್ನು ತಿಳಿಸಿರುತ್ತದೆಯೋ ಅಥವಾ ಹೇಗೆ ಶ್ರುತಿಯು "ನೀರೇ ಆ ತಿಂದದ್ದನ್ನು ತೆಗೆದುಕೊಂಡು ಹೋಗುತ್ತದೆ. (ಆದ್ದರಿಂದ ಅದಕ್ಕೆ ಅಶನಾಯಾ ಎಂದು ಹೆಸರು)." (ಛಾಂ. ೬-೮-೭), "ತೇಜಸ್ಸೇ ಆ ಕುಡಿದದ್ದನ್ನು ತೆಗೆದುಕೊಂಡು ಹೋಗುತ್ತದೆ. (ಆದ್ದರಿಂದ ಉದನ್ಯಾ ಎಂದು ಹೆಸರು)" (ಛಾಂ ೬-೮-೫) ಎಂದು 'ಅಶನಾಯಾ' (ಹಸಿವು) 'ಉದನ್ಯಾ' (ನೀರಡಿಕೆ)-ಎಂಬ ಶಬ್ದಗಳಿಗೆ ಪ್ರವೃತ್ತಿನಿಮಿತ್ತವನ್ನು ತಿಳಿಸಿಕೊಟ್ಟಿರುತ್ತದೆಯೋ,[5] ಇದರಂತೆಯೇ ಸಚ್ಛಬ್ದವಾಚ್ಯನಾದ ತನ್ನ ಆತ್ಮನಲ್ಲಿ ಅಪೀತನಾಗುತ್ತಾನೆ ಎಂಬೀ ವಿಷಯವನ್ನು ಸ್ವಪಿತಿ ಎಂಬ ಹೆಸರನ್ನು ನಿರ್ವಚನ

---

1. ಮನಸ್ಸಿನ ಪ್ರಚಾರಗಳು ಅಥವಾ ವೃತ್ತಿಗಳು, ಮತ್ತು ಅವುಗಳ ವಾಸನೆಗಳು ಎಂಬ ಉಪಾಧಿಗಳು ಇಲ್ಲವಾಗಲು ಎಂದರ್ಥ.

2. ಸುಷುಪ್ತಿಯಲ್ಲಿ ಮೂಲಾವಿದ್ಯೆ ಎಂಬ ಉಪಾಧಿಯಿರುವದೆಂಬ ಮತವು ಈ ಭಾಷ್ಯಕ್ಕೆ ವಿರುದ್ಧವಾಗಿರುತ್ತದೆ.

3. ನಿಜವಾಗಿ ಯಾವಾಗಲೂ ತಾನೇ ಆಗಿರುತ್ತಾನೆ; ಆದರೆ ಎಚ್ಚರ, ಕನಸುಗಳಲ್ಲಿ ಉಪಾಧಿಯಿಂದ ಬೇರೆಯ ರೂಪವನ್ನು ಪಡೆದಂತೆ ಆಗಿರುತ್ತಾನೆ. ಆದ್ದರಿಂದ ಆ ಅವಸ್ಥೆಗಳಿಗೆ ಹೋಲಿಸಿದರೆ ಇಲ್ಲಿ 'ತನ್ನಲ್ಲಿ ತಾನೇ ಲಯವಾದಂತೆ' ೩-೨-೭ರ ಭಾಷ್ಯವನ್ನು ನೋಡಿ.

4. 'ಸ್ವಮ್ ಅಪಿತಿ' ಎಂಬರ್ಥವನ್ನು ಸ್ವಪಿತಿ ಎಂಬ ಮಾತಿನ ವ್ಯುತ್ಪತ್ತಿಯಿಂದ ತೋರಿಸಿರುತ್ತದೆ. ಇದು ನಿಜವಾದ ಲಯವನ್ನು ಹೇಳುವದಕ್ಕಲ್ಲ, ವಿಶೇಷರೂಪವು ಇಲ್ಲವೆಂದು ತಿಳಿಸುವದಕ್ಕೆ ಇಲ್ಲಿ ಪ್ರಲೀನ ಇವ ( ಲಯವಾದಂತೆ )ಎಂದು ಹೇಳಿರುವದರಿಂದ ಪೂರ ಲಯವಾಗುವದಿಲ್ಲವೆಂಬರ್ಥವನ್ನು ಕೆಲವರು ತೆಗೆದಿದಾರೆ; ಅದು ಭಾಷ್ಯವಿರುದ್ಧ. ೧-೫-೧೫, ೧-೪-೧೭, ೩-೨-೭, ೩-೨-೩೪ ಇವುಗಳ ಭಾಷ್ಯವನ್ನು ನೋಡಿ.

5. 'ಅಶನಾಯಾ' ಎಂಬುದನ್ನು ಅಪ್ಪಿಗೂ 'ಉದನ್ಯಾ' ಎಂಬುದನ್ನು ತೇಜಸ್ಸಿಗೂ ಹೆಸರೆಂದು ಶ್ರುತಿಯಲ್ಲಿ ಹೇಳಿರುವದು ಹೇಗೆ ಅನ್ವರ್ಥವಾಗಿರುವದೋ ಹಾಗೆ 'ಸ್ವಪಿತಿ' ಎಂಬುದೂ ಆತ್ಮನಿಗೆ ಅನ್ವರ್ಥವಾಗಿರಬೇಕೆಂದು ನಿಶ್ಚಯಿಸಬೇಕು ಎಂದು ಭಾವ.

ಮಾಡಿ ತಿಳಿಸಿಕೊಟ್ಟಿರುತ್ತದೆ. ಆದರೆ ಚೇತನನಾದ ಆತ್ಮನು ಅಚೇತನವಾದ ಪ್ರಧಾನವನ್ನು ತನ್ನ ರೂಪವೆಂದು ಅರಿತುಕೊಳ್ಳುವದಕ್ಕೆ ಆಗಲಾರದು. (ಆದ್ದರಿಂದ ಪ್ರಧಾನವು ಸಚ್ಛಬ್ದವಾಚ್ಯವಲ್ಲ).

(ಭಾಷ್ಯ)

೮೬. ಯದಿ ಪುನಃ ಪ್ರಧಾನಮೇವ ಆತ್ಮೀಯತ್ವಾತ್ ಸ್ವಶಬ್ದೇನೈವ ಉಚ್ಯೇತ, ಏವಮಪಿ ಚೇತನಃ ಅಚೇತನಮ್ ಅಪ್ಯೇತಿ ಇತಿ ವಿರುದ್ಧಮ್ ಆಪದ್ಯೇತ । ಶ್ರುತ್ಯನ್ತರಂ ಚ "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಮ್" (ಬೃ. ೪-೩-೨೧) ಸುಷುಪ್ತಾವಸ್ಥಾಯಾಂ ಚೇತನೇ ಅಪ್ಯಯಂ ದರ್ಶಯತಿ । ಅತಃ, ಯಸ್ಮಿನ್ ಅಪ್ಯಯಃ ಸರ್ವೇಷಾಂ ಚೇತನಾನಾಮ್, ತತ್ ಚೇತನಂ ಸಚ್ಛಬ್ದವಾಚ್ಯಂ ಜಗತಃ ಕಾರಣಮ್, ನ ಪ್ರಧಾನಮ್ ॥

(ಭಾಷ್ಯಾರ್ಥ)

ಇನ್ನು ಪ್ರಧಾನವು ಆತ್ಮೀಯವಾಗಿರುವದರಿಂದ[1] ಸ್ವಶಬ್ದದಿಂದಲೇ (ಅದನ್ನೇ) ಹೇಳಿರುತ್ತದೆ (ಎಂಬ ಪಕ್ಷದಲ್ಲಿಯೋ ಎಂದರೆ), ಹಾಗೂ ಚೇತನನು ಅಚೇತನನಲ್ಲಿ ಲಯವಾಗುತ್ತಾನೆಂಬುದು ವಿರುದ್ಧವಾಗುವದು. ಇದಲ್ಲದೆ ಬೇರೊಂದು ಶ್ರುತಿಯೂ "ಪ್ರಾಜ್ಞನಾದ ಆತ್ಮನಿಂದ ಆಲಂಗಿತನಾಗಿ[2] ಹೊರಗಿನ ಅಥವಾ ಒಳಗಿನ ಯಾವದೊಂದು (ವಸ್ತುವನ್ನೂ) ಅರಿಯದೆ ಇರುತ್ತಾನೆ" (ಬೃ. ೪-೩-೨೧) ಎಂದು ಸುಷುಪ್ತಾವಸ್ಥೆಯಲ್ಲಿ (ಜೀವನು) ಚೇತನದಲ್ಲಿಯೇ ಲಯವಾಗುವನೆಂದು ತಿಳಿಸುತ್ತದೆ.[3] ಆದ್ದರಿಂದ ಎಲ್ಲಾ ಚೇತನರೂ ಯಾವದ

---

1. 'ಸ್ವ' ಎಂಬ ಮಾತಿಗೆ ತಾನು, ತನ್ನದು ಎಂದು ಎರಡು ಅರ್ಥಗಳುಂಟಷ್ಟೆ. ಪ್ರಧಾನಕ್ಕೆ 'ತಾನು' ಎಂಬರ್ಥವು ಹೊಂದದೆ ಹೋಗಲಿ, 'ತನ್ನದು' ಎಂಬರ್ಥವು ಹೊಂದು ವದಿಲ್ಲವೆ ?–ಎಂಬ ಶಂಕೆಗೆ ಸಮಾಧಾನವಿದು.

2. ಪರಮಾತ್ಮನೊಡನೆ ಒಂದಾಗಿ ಎಂದರ್ಥ; ಜೀವನಿಗೆ ಆಗ ಮತ್ತೊಂದರ ಅರಿವು ಇಲ್ಲದಿರುವದಕ್ಕೆ ಏಕತ್ವವೇ ಕಾರಣವು–ಎಂದು ಮೇಲೆ ಉದಾಹರಿಸಿರುವ ಶ್ರುತಿಯ ಭಾಷ್ಯ ದಲ್ಲಿಯೂ, ೩-೨-೭ರ ಭಾಷ್ಯದಲ್ಲಿಯೂ ಹೇಳಿದೆ.

3. 'ಪ್ರಾಜ್ಞನೊಡನೆ' ಒಂದಾಗುತ್ತಾನೆ ಎಂದಿರುವದರಿಂದ ಚೇತನದಲ್ಲಿ ಸೇರುತ್ತಾನೆ ಎಂದಂತೆ ಆಯಿತು; ಏಕೆಂದರೆ ಜಡವಾದ ಪ್ರಧಾನವು ಪ್ರಾಜ್ಞನಾಗಲಾರದು. ಸಚ್ಛಬ್ದವಾಚ್ಯವು ಪ್ರಧಾನವೆಂಬುದು ಈ ಶ್ರುತಿಗೂ ವಿರುದ್ಧವಾದದ್ದು.

ರಲ್ಲಿ ಲಯವಾಗುವರೋ[1] ಆ ಚೇತನವೇ ಸಚ್ಛಬ್ದವಾಚ್ಯವಾದ ಜಗತ್ಕಾರಣವು, ಪ್ರಧಾನವಲ್ಲ.

## ವೇದಾಂತವಾಕ್ಯಗಳು ಚೇತನಕಾರಣವನ್ನೇ ಹೇಳುತ್ತವೆ

(ಭಾಷ್ಯ)

೮೭. ಕುತಶ್ಚ ನ ಪ್ರಧಾನಂ ಜಗತಃ ಕಾರಣಮ್ ?

(ಭಾಷ್ಯಾರ್ಥ)

ಪ್ರಧಾನವು ಜಗತ್ಕಾರಣವಲ್ಲವೆಂಬುದು ಮತ್ತೂ ಯಾವ (ಕಾರಣ)ದಿಂದ ? ಎಂದರೆ—

**ಗತಿಸಾಮಾನ್ಯಾತ್ ॥ ೧೦ ॥**

೧೦. (ವೇದಾಂತವಾಕ್ಯಗಳ) ಗತಿಸಾಮಾನ್ಯದಿಂದಲೂ[2] (ಪ್ರಧಾನವು ಜಗತ್ಕಾರಣವಲ್ಲವೆಂದಾಗುತ್ತದೆ.

(ಭಾಷ್ಯ)

ಯದಿ ತಾರ್ಕಿಕಸಮಯೇ ಇವ ವೇದಾನ್ತೇಷ್ವಪಿ ಭಿನ್ನಾ ಕಾರಣಾವಗತಿಃ ಅಭವಿಷ್ಯತ್, ಕ್ವಚಿತ್ ಚೇತನಂ ಬ್ರಹ್ಮ ಜಗತಃ ಕಾರಣಮ್, ಕ್ವಚಿತ್ ಅಚೇತನಂ ಪ್ರಧಾನಮ್, ಕ್ವಚಿತ್ ಅನ್ಯದೇವ ಇತಿ, ತತಃ ಕದಾಚಿತ್ ಪ್ರಧಾನಕಾರಣವಾದಾನುರೋಧೇನಾಪಿ ಈಕ್ಷತ್ಯಾದಿಶ್ರವಣಮ್ ಅಕಲ್ಪಯಿಷ್ಯತ್। ನ ತು ಏತದಸ್ತಿ । ಸಮಾನೈವ ಹಿ ಸರ್ವೇಷು ವೇದಾನ್ತೇಷು ಚೇತನಕಾರಣಾವಗತಿಃ । "ಯಥಾಗ್ನೇರ್ಜ್ವಲತಃ ಸರ್ವಾ ದಿಶೋ ವಿಸ್ಫುಲಿಙ್ಗಾ ವಿಪ್ರತಿಷ್ಠೇರನ್ನೇವಮೇವೈತಸ್ಮಾದಾತ್ಮನಃ ಸರ್ವೇ ಪ್ರಾಣಾ ಯಥಾಯತನಂ ವಿಪ್ರತಿಷ್ಠನ್ತೇ ಪ್ರಾಣೇಭ್ಯೋ ದೇವಾ ದೇವೇಭ್ಯೋ ಲೋಕಾಃ" (ಕೌ. ೩-೩) ಇತಿ । "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತಿ, "ಆತ್ಮನ ಏವೇದಂ ಸರ್ವಮ್" (ಛಾಂ. ೭-೨೬-೧) ಇತಿ, "ಆತ್ಮನ ಏಷ

1. ಸುಷುಪ್ತಿಯಲ್ಲಿ ಜೀವರೆಲ್ಲರೂ ಪರಮಾತ್ಮನಲ್ಲಿ ಲಯವಾಗುತ್ತಾರೆಂಬುದಕ್ಕೆ ಛಾ. ೬-೮[illegible] ನೋಡಿ.

2. ಗತಿ ಎಂದರೆ ಅವಗತಿ, ತಿಳಿವಳಿಕೆ. ಎಲ್ಲಾ ಉಪನಿಷತ್ತುಗಳಲ್ಲಿಯೂ ಹೇಳಿರುವ ಕಾರಣಸ್ವರೂಪದ ಜ್ಞಾನವು ಒಂದೇ ಬಗೆಯಾಗಿರುತ್ತದೆ.

ಪ್ರಾಣೋ ಜಾಯತೇ" (ಪ್ರ. ೩-೩) ಇತಿ ಚ ಆತ್ಮನಃ ಕಾರಣತ್ವಂ ದರ್ಶಯನ್ತಿ ಸರ್ವೇ ವೇದಾನ್ತಾಃ । ಆತ್ಮಶಬ್ದಶ್ಚ ಚೇತನವಚನಃ ಇತ್ಯವೋಚಾಮ । ಮಹಚ್ಚ ಪ್ರಾಮಾಣ್ಯಕಾರಣಮೇತತ್ ಯದ್ ವೇದಾನ್ತವಾಕ್ಯಾನಾಂ ಚೇತನಕಾರಣತ್ವೇ ಸಮಾನಗತಿತ್ವಮ್, ಚಕ್ಷುರಾದೀನಾಮಿವ ರೂಪಾದಿಷು । ಅತೋ ಗತಿಸಾಮಾನ್ಯಾತ್ ಸರ್ವಜ್ಞಂ ಬ್ರಹ್ಮ ಜಗತಃ ಕಾರಣಮ್ ॥

(ಭಾಷ್ಯಾರ್ಥ)

ತಾರ್ಕಿಕರ[1] ಶಾಸ್ತ್ರಗಳಲ್ಲಿರುವಂತೆ ವೇದಾಂತ(ವಚನ)ಗಳಲ್ಲಿಯೂ (ಜಗತ್ತಿಗೆ) ಬೇರೆಬೇರೆಯ ಕಾರಣವನ್ನು ತಿಳಿಸುವದಾಗಿದ್ದರೆ—ಒಂದು ಕಡೆಯಲ್ಲಿ ಚೇತನವಾದ ಬ್ರಹ್ಮವು ಜಗತ್ತಿಗೆ ಕಾರಣವೆಂದು, ಒಂದು ಕಡೆಯಲ್ಲಿ ಅಚೇತನವಾದ ಪ್ರಧಾನವೆಂದು, ಒಂದು ಕಡೆಯಲ್ಲಿ ಮತ್ತೆ ಯಾವದೋ ಒಂದೆಂದು (ಹೀಗೆಲ್ಲ ತಿಳಿಸುವದಾಗಿದ್ದರೆ)—ಆಗ ಒಂದು ವೇಳೆ[2] ಪ್ರಧಾನವೇ ಕಾರಣವೆಂಬ ವಾದಕ್ಕೆ ಅನುಸಾರವಾಗಿಯೂ ಈಕ್ಷಿತೃತ್ವವೇ ಮುಂತಾದ ಶ್ರುತಿಯ (ಅರ್ಥವನ್ನು) ಕಲ್ಪಿಸಬಹುದಾಗಿತ್ತು. ಆದರೆ ಅದಿಲ್ಲ. ಏಕೆಂದರೆ ಎಲ್ಲಾ ವೇದಾಂತವಚನಗಳಲ್ಲಿಯೂ ಚೇತನವೇ ಕಾರಣವೆಂಬ ತಿಳಿವಳಿಕೆಯು ಸಮಾನವಾಗಿಯೇ (ಆಗುತ್ತದೆ). ಉರಿಯುತ್ತಿರುವ ಬೆಂಕಿಯಿಂದ ಎಲ್ಲಾ ಕಡೆಗಳಿಗೂ ಹೇಗೆ ಕಿಡಿಗಳು ಸಿಡಿಯುವವೋ ಹಾಗೆಯೇ ಈ ಆತ್ಮನಿಂದ ಎಲ್ಲಾ ಪ್ರಾಣಗಳೂ[3] ತಮ್ಮತಮ್ಮ ಸ್ಥಾನಕ್ಕೆ ಸಿಡಿದುಬರುತ್ತವೆ; ಪ್ರಾಣಗಳಾದ ಮೇಲೆ ದೇವತೆಗಳೂ ದೇವತೆಗಳ ಹಿಂದೆ ಲೋಕಗಳೂ (ಹೊರಟುಬರುವವು)" (ಕೌ. ೩-೩) ಎಂದೂ "ಆ ಈ ಆತ್ಮನಿಂದಲೇ ಆಕಾಶವುಂಟಾಯಿತು"(ತೈ. ೨-೧) ಎಂದೂ "ಆತ್ಮನಿಂದಲೇ ಇದೆಲ್ಲವೂ (ಆಗಿರುತ್ತದೆ) (ಛಾಂ. ೭-೨೬-೧) ಎಂದೂ "ಆತ್ಮನಿಂದ ಈ ಪ್ರಾಣನು ಉಂಟಾಗುತ್ತಾನೆ" (ಪ್ರ. ೩-೩)[4] ಎಂದೂ

---

1. ವೇದವನ್ನು ಪ್ರಧಾನಪ್ರಮಾಣವಾಗಿ ಹಿಡಿಯದ ಸಾಂಖ್ಯವೈಶೇಷಿಕಾದಿಗಳು ತಾರ್ಕಿಕರು. ಅವರಲ್ಲಿ ಒಬ್ಬೊಬ್ಬರು ಒಂದೊಂದು ಪರಿಯಲ್ಲಿ ಜಗತ್ಕಾರಣವನ್ನು ನಿರೂಪಿಸುತ್ತಾರೆ.

2. ಆಗ ವೇದವು ಅಪ್ರಮಾಣವೆಂದು ಕಲ್ಪಿಸಲೂ ಬಹುದಾಗಿತ್ತು ಎಂಬುದನ್ನು 'ಒಂದು ವೇಳೆ' ಎಂಬ ಮಾತು ಸೂಚಿಸುವದು.

3. ಇಂದ್ರಿಯಗಳು.

4. ಎಲ್ಲಾ ಉಪನಿಷತ್ತುಗಳಲ್ಲಿಯೂ ಆತ್ಮನೇ ಜಗತ್ಕಾರಣವೆಂದು ಹೇಳಿದೆ ಎಂದು ತೋರಿಸುವದಕ್ಕೆ ಬೇರೆಬೇರೆಯ ವೇದಗಳ ಉಪನಿಷದ್ವಚನಗಳನ್ನು ಇಲ್ಲಿ ಉದಾಹರಿಸಿದೆ.

ವೇದಾಂತಗಳೆಲ್ಲವೂ ಆತ್ಮನೇ ಜಗತ್ತಿಗೆ ಕಾರಣವೆಂದು ತಿಳಿಸುತ್ತವೆ. ಆತ್ಮ ಶಬ್ದವು ಚೇತನವನ್ನೇ ಹೇಳುತ್ತದೆ ಎಂದು (ಹಿಂದೆ) ಹೇಳಿರುತ್ತೇವೆ.[1]

ಕಣ್ಣೇ ಮುಂತಾದವು ರೂಪಾದಿಗಳನ್ನು (ಗೊತ್ತಾಗಿ ತಿಳಿಸು)ವಂತೆ ವೇದಾಂತವಾಕ್ಯಗಳು ಚೇತನಕಾರಣವನ್ನೇ ಸಮಾನವಾಗಿ ತಿಳಿಸುತ್ತವೆ[2] ಎಂಬಿದು (ಅವುಗಳು) ಪ್ರಮಾಣವೆಂಬುದಕ್ಕೆ ಒಂದು ಹೆಚ್ಚಿನ ಕಾರಣ ವಾಗಿರುತ್ತದೆ. ಆದ್ದರಿಂದ (ಹೀಗೆ ವೇದಾಂತವಾಕ್ಯಗಳಲ್ಲಿ ಕಾರಣವಿಷಯಕ್ಕೆ) ಗತಿಸಾಮಾನ್ಯವಿರುವದರಿಂದ ಸರ್ವಜ್ಞವಾದ ಬ್ರಹ್ಮವೇ ಜಗತ್ತಿಗೆ ಕಾರಣವು.

## ಬ್ರಹ್ಮವೇ ಕಾರಣವೆಂದು ಶ್ರುತಿಯಲ್ಲಿ ಹೇಳಿದೆ

(ಭಾಷ್ಯ)

೮೮. ಕುತಶ್ಚ ಸರ್ವಜ್ಞಂ ಬ್ರಹ್ಮ ಜಗತಃ ಕಾರಣಮ್ ?

(ಭಾಷ್ಯಾರ್ಥ)

ಸರ್ವಜ್ಞವಾದ ಬ್ರಹ್ಮವೇ ಜಗತ್ತಿಗೆ ಕಾರಣವೆಂಬುದು ಮತ್ತೂ ಏತರಿಂದ? ಎಂದರೆ :—

**ಶ್ರುತತ್ವಾಚ್ಚ ॥ ೧೧ ॥**

೧೧. ಶ್ರುತಿಯಲ್ಲಿ ಹೇಳಿರುವದರಿಂದಲೂ (ಬ್ರಹ್ಮವೇ ಜಗತ್ಕಾರಣವು).

(ಭಾಷ್ಯ)

ಸ್ವಶಬ್ದೇನೈವ ಚ ಸರ್ವಜ್ಞ ಈಶ್ವರೋ ಜಗತಃ ಕಾರಣಮ್ ಇತಿ ಶ್ರೂಯತೇ ಶ್ವೇತಾಶ್ವತರಾಣಾಂ ಮನ್ತ್ರೋಪನಿಷದಿ ಸರ್ವಜ್ಞಮ್ ಈಶ್ವರಂ ಪ್ರಕೃತ್ಯ "ಸ ಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ" (ಶ್ವೇ. ೬-೯) ಇತಿ । ತಸ್ಮಾತ್ ಸರ್ವಜ್ಞಂ ಬ್ರಹ್ಮ ಜಗತಃ ಕಾರಣಮ್, ನ ಅಚೇತನಂ ಪ್ರಧಾನಮ್ ಅನ್ಯದ್ ವಾ ಇತಿ ಸಿದ್ಧಮ್ ॥

1. ಭಾ. ಭಾ. ೭೮, ೭೯, ೮೦, ೮೧-ಇವುಗಳಲ್ಲಿ ಇದನ್ನು ತಿಳಿಸಿದೆ. ಆದ್ದರಿಂದ ಆತ್ಮ ಶಬ್ದವು ಬ್ರಹ್ಮಕಾರಣಕ್ಕೆ ಮಾತ್ರ ಅನುಗುಣವಾಗಿದೆ.

2. ಕಣ್ಣೇ ರೂಪವನ್ನು ತಿಳಿಸುವದು, ಕಣ್ಣು ರೂಪವನ್ನೇ ತಿಳಿಸುವದು, ಇದು ಎಲ್ಲೆಲ್ಲಿಯೂ ನಿಯತವಾಗಿದೆ. ಇದರಂತೆ ಉಪನಿಷತ್ತೇ ಬ್ರಹ್ಮವನ್ನು ತಿಳಿಸುವದು, ಅದು ಬ್ರಹ್ಮವನ್ನೇ ಮುಖ್ಯವಾಗಿ ತಿಳಿಸುತ್ತದೆ—ಎಂಬುದು ಎಲ್ಲಾ ಉಪನಿಷತ್ತುಗಳಿಗೂ ಸಮಾನವಾಗಿದೆ.

(ಭಾಷ್ಯಾರ್ಥ)

ಶ್ವೇತಾಶ್ವತರಶಾಖೆಯವರ ಮಂತ್ರೋಪನಿಷತ್ತಿನಲ್ಲಿ[1] ಸರ್ವಜ್ಞನಾದ ಈಶ್ವರನ (ವಿಚಾರವನ್ನು) ಪ್ರಾರಂಭಿಸಿ "ಆತನು ಕಾರಣವು, ಕರಣಗಳಿಗೊಡೆಯ(ರಾದ ಜೀವರಿಗೂ) ಒಡೆಯನು. ಆತನನ್ನು ಹುಟ್ಟಿಸುವವನಿಲ್ಲ, (ಅವನಿಗೆ) ಒಡೆಯನೂ ಇಲ್ಲ'' (ಶ್ವೇ. ೬-೯) ಎಂದು ಸರ್ವಜ್ಞನಾದ ಈಶ್ವರನೇ ಜಗತ್ತಿಗೆ ಕಾರಣವೆಂದು ಸ್ವಶಬ್ದದಿಂದಲೇ[2] ಹೇಳಿರುತ್ತದೆ. ಆದ್ದರಿಂದ ಸರ್ವಜ್ಞವಾದ ಬ್ರಹ್ಮವು ಜಗತ್ತಿಗೆ ಕಾರಣವೇ ಹೊರತು ಅಚೇತನವಾದ ಪ್ರಧಾನವಾಗಲಿ ಮತ್ತೊಂದಾಗಲಿ[3] (ಕಾರಣ)ವಲ್ಲ ಎಂದು ಸಿದ್ಧವಾಯಿತು.

---

1. ಶ್ವೇತಾಶ್ವತರೋಪನಿಷತ್ತು ಕೃಷ್ಣಯಜುರ್ವೇದದ ಆ ಶಾಖೆಯ ಸಂಹಿತೆಗೆ ಸೇರಿದ್ದು. ಆದ್ದರಿಂದ ಅದನ್ನು 'ಮಂತ್ರೋಪನಿಷತ್ತು' ಎಂದು ಕರೆದಿದೆ.

2. ಹಿಂದಿನ ಸೂತ್ರದ ಭಾಷ್ಯದಲ್ಲಿ ಉದಾಹರಿಸಿರುವ ಶಬ್ದಗಳು ಆತ್ಮನು ಕಾರಣವೆಂದು ಸಾಮಾನ್ಯವಾಗಿ ಹೇಳುತ್ತವೆ. ಈ ವಚನವು "ಜ್ಞಃ ಕಾಲಕಾಲೋ ಗುಣೀ ಸರ್ವವಿದ್ ಯಃ" (೬-೨)ಎಂದು ಪ್ರಕೃತನಾಗಿರುವ ಸರ್ವಜ್ಞನೇ ಕಾರಣವೆಂದು ಬಾಯಿಬಿಟ್ಟು ಹೇಳಿರುವದರಿಂದ ಜೀವನು ಕಾರಣನಾಗಿರಬಹುದೆಂಬ ಶಂಕೆಗೂ ಇಲ್ಲಿ ಅವಕಾಶವಿಲ್ಲ ಎಂಬುದನ್ನು 'ಸ್ವಶಬ್ದದಿಂದಲೇ' ಎಂಬ ಮಾತು ಸೂಚಿಸುತ್ತದೆ. ಪ್ರಧಾನಕಾರಣವಾದಕ್ಕಂತೂ ಇಲ್ಲಿ ಸರ್ವಥಾ ಅವಕಾಶವಿಲ್ಲವೆಂಬುದು ಸ್ಪಷ್ಟವೇ.

3. ಈ ಅಧಿಕರಣದಲ್ಲಿ ಪ್ರಧಾನವನ್ನೇ ಮುಖ್ಯವಾಗಿ ನಿರಾಕರಿಸಿರುತ್ತದೆಯಾದರೂ ಪರಮಾಣುಕಾರಣವಾದವೇ ಮುಂತಾದ ಅಚೇತನಕಾರಣವಾದಗಳನ್ನೆಲ್ಲ ನಿರಾಕರಿಸಿದಂತೆ ಆಗಿದೆ ಎಂದು ಉಪಕ್ರಮಕ್ಕನುಗುಣವಾಗಿ ಇಲ್ಲಿಯೂ 'ಮತ್ತೊಂದಾಗಲಿ' ಎಂಬ ಮಾತಿನಿಂದ ಸೂಚಿಸಿ ಉಪಸಂಹಾರಮಾಡಿರುತ್ತದೆ.

# ಅಧಿಕರಣಪಂಚಕದ ಸಾರ

ಒಂದೊಂದು ವಿಷಯವನ್ನು ಕುರಿತು ವಿಚಾರಮಾಡುವ ಸೂತ್ರಕ್ಕೆ ಅಥವಾ ಸೂತ್ರಗಳ ಗುಂಪಿಗೆ **ಅಧಿಕರಣ** ಎಂದು ಹೆಸರು. ಪ್ರತಿಯೊಂದು ಅಧಿಕರಣಕ್ಕೂ (ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿ, ಸೂತ್ರಸಂಗತಿ ಎಂಬ ರೂಪದ) **ಸಂಗತಿ** ಅಥವಾ ಸಂಬಂಧ, **ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ,** ಫಲ-ಎಂಬ ಐದು ಅವಯವಗಳಿರುತ್ತವೆ. ಈ ವಿಭಾಗಗಳನ್ನು ಯಥಾಸಂಭವವಾಗಿ ತೋರಿಸಿ ಪ್ರತಿಯೊಂದು ಅಧ್ಯಾಯಪಾದದ ಕೊನೆಯಲ್ಲಿಯೂ ಅಧಿಕರಣಗಳ ಸಾರವನ್ನು ಸಂಗ್ರಹಿಸಿ ಕೊಡುತ್ತಾಹೋಗುವೆವು. ಶಾಸ್ತ್ರಾರ್ಥವನ್ನೆಲ್ಲ ಮೊದಲನೆಯ ಐದು ಅಧಿಕರಣಗಳಲ್ಲಿ ಸಂಕ್ಷೇಪವಾಗಿ ತಿಳಿಸಿ ಮುಂದಿನ ಗ್ರಂಥಗಳಲ್ಲಿ ಅದನ್ನೇ ವಿಸ್ತರಿಸಿರುವದರಿಂದ ಇಲ್ಲಿ ಮೊದಲನೆಯ ಅಧಿಕರಣಪಂಚಕದ ಸಾರವನ್ನು ಕೊಟ್ಟಿರುತ್ತದೆ. ಈ ಶಾಸ್ತ್ರದಲ್ಲಿ ಪ್ರತಿಯೊಂದು ಅಧಿಕರಣದ ವಿಷಯವನ್ನೂ ಒಂದೊಂದು ವೇದಾಂತವಾಕ್ಯವನ್ನು ಉದಾಹರಿಸಿ ಚರ್ಚಿಸಲಾಗಿದೆ. ಆದರೆ ಇಲ್ಲಿ ಕೊಟ್ಟಿರುವ ವಿಷಯವಾಕ್ಯವು ಉದಾಹರಣೆಗಾಗಿ ಕೊಟ್ಟಿದ್ದೆಂದೂ ಅದೇ ಅರ್ಥದ ಮಿಕ್ಕ ವೇದಾಂತವಾಕ್ಯಗಳನ್ನೂ ವಿಷಯವಾಕ್ಯವೆಂದೇ ಪರಿಗಣಿಸಬೇಕೆಂದೂ ತಿಳಿಯಬೇಕು. ವಾಕ್ಯವನ್ನು ಚರ್ಚಿಸುವ ನ್ಯಾಯವೇ ಇಲ್ಲಿ ಮುಖ್ಯವಾಗಿರುತ್ತದೆ.

## ೧. ಜಿಜ್ಞಾಸಾಧಿಕರಣ

**ವಿಷಯವೂ ಸಂಶಯವೂ:** "ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ" (ತೈ. ೩-೧) ಮುಂತಾದ ಶ್ರುತಿವಾಕ್ಯಗಳಲ್ಲಿ ಹೇಳಿರುವ ಬ್ರಹ್ಮಜಿಜ್ಞಾಸೆಯನ್ನು ಮಾಡತಕ್ಕದ್ದೆ, ಅಲ್ಲವೆ ?

**ಪೂರ್ವಪಕ್ಷ:** ಈ ಜಿಜ್ಞಾಸೆಯನ್ನು ಮಾಡತಕ್ಕದ್ದಲ್ಲ. ಏಕೆಂದರೆ ಜಿಜ್ಞಾಸೆಗೆ ತಕ್ಕ ವಿಷಯವಾಗಲಿ ಪ್ರಯೋಜನವಾಗಲಿ ಅಧಿಕಾರಿಯಾಗಲಿ ಇರುವದಿಲ್ಲ. ಜಿಜ್ಞಾಸೆಗೆ ವಿಷಯವೆಂದು ಹೇಳಲಾಗಿರುವ ಬ್ರಹ್ಮವು ಜಿಜ್ಞಾಸುವಿನ ಆತ್ಮನೇ ಆಗಿರುವದರಿಂದ ನಿಸ್ಸಂದಿಗ್ಧವಾಗಿರುತ್ತದೆ. ಬ್ರಹ್ಮವು ನಿತ್ಯಪ್ರಾಪ್ತವಾಗಿರುವದರಿಂದ ಅದನ್ನು ತಿಳಿದುಕೊಳ್ಳುವದರಿಂದ ಹೊಸದಾಗಿ ಆಗಬೇಕಾಗಿರುವ ಪ್ರಯೋಜನವು ಯಾವದೂ ಇರುವದಿಲ್ಲ. ವಿಷಯವಿಲ್ಲದ ನಿಷ್ಪ್ರಯೋಜನವಾದ ಜಿಜ್ಞಾಸೆಯನ್ನು ಮಾಡಬೇಕೆನ್ನುವ ಅಧಿಕಾರಿಗಳು ಯಾರೂ ಇರುವದಿಲ್ಲ.

**ಸಿದ್ಧಾಂತ:** ಈ ಜಿಜ್ಞಾಸೆಯು ಮಾಡತಕ್ಕದ್ದು. ಏಕೆಂದರೆ ಬ್ರಹ್ಮವು ಆತ್ಮನಾಗಿರುವದರಿಂದ ಪ್ರಸಿದ್ಧವಾಗಿದ್ದರೂ ಆತ್ಮನು ದೇಹಾದಿರೂಪನೊ, ಅದಕ್ಕಿಂತ ಬೇರೆಯಾಗಿರುವ ಕರ್ತೃಭೋಕ್ತೃ

ಸ್ವರೂಪನೊ, ಅಥವಾ ಸರ್ವಾತ್ಮನಾದ ಅಸಂಸಾರಿಯೊ ? ಎಂಬ ಬಗ್ಗೆ ಮತಭೇದವಿರುವದರಿಂದ ಬ್ರಹ್ಮವು ಸಂದಿಗ್ಧವಾಗಿರುತ್ತದೆ. ಅದು ನಿತ್ಯಪ್ರಾಪ್ತವಾಗಿದ್ದರೂ ಅಜ್ಞಾನದಿಂದ ಅಪ್ರಾಪ್ತವಾದಂತೆ ಇದೆ ; ಆದ್ದರಿಂದ ಅದನ್ನು ಅರಿತುಕೊಂಡರೆ ಪರಮಪುರುಷಾರ್ಥರೂಪವಾದ ಮುಕ್ತಿಯು ದೊರಕು ವದೆಂದು ಶ್ರುತಿಯಲ್ಲಿ ಹೇಳಿದೆ.—ಕರ್ಮ ದಿಂದ ಆಗುವ ಗತಿಯು ಅನಿತ್ಯವೆಂದೂ ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ನಿತ್ಯಾನಿತ್ಯವಿವೇಕ, ಕರ್ಮಫಲದಲ್ಲಿ ವೈರಾಗ್ಯ, ಶಮಾದಿಷಟ್ಕಸಂಪತ್ತಿ ಇವುಗಳಿಂದೊಡಗೂಡಿ ನಿತ್ಯವಾದ ಮುಕ್ತಿಯನ್ನೇ ಪಡೆಯಬೇಕೆಂದು ಹವಣಿಸುವವರು ಈ ಜಿಜ್ಞಾಸೆಗೆ ಅಧಿಕಾರಿಗಳು. ಹೀಗೆ ವಿಷಯಾದಿಗಳು ಇರುವದರಿಂದ ಜಿಜ್ಞಾಸೆಯನು ಮಾಡಬೇಕು.[1]

## ೨. ಜನ್ಮಾದ್ಯಧಿಕರಣ

**ವಿಷಯವೂ ಸಂಶಯವೂ :** "ಯತೋ ವಾ ಇಮಾನಿ" (ತೈ. ೩-೧) ಮುಂತಾದ ಶ್ರುತಿಗಳಲ್ಲಿ ಹೇಳಿರುವ ಜಗತ್ಕಾರಣತ್ವವು ಬ್ರಹ್ಮಕ್ಕೆ ಲಕ್ಷಣವೆ, ಅಲ್ಲವೆ ?

**ಪೂರ್ವಪಕ್ಷ :** ಪ್ರಧಾನವು, ಪರಮಾಣುಗಳು ಅಥವಾ ಯಾವನಾದರೊಬ್ಬ ಜೀವನು ಜಗತ್ತಿಗೆ ಕಾರಣವಾಗಿರಬಹುದಾಗಿದೆ. ಅಥವಾ ಸ್ವಭಾವದಿಂದಲೇ ಜಗತ್ತು ಹೀಗೆಯೇ ಇದ್ದು ಕೊಂಡಿರಲೂಬಹುದು, ಬ್ರಹ್ಮವು ಜಗತ್ಕಾರಣವೆಂದಮಾತ್ರದಿಂದ ಅದರ ಸ್ವರೂಪವನ್ನು ಗೊತ್ತು ಪಡಿಸಿದಂತೆಯೂ ಆಗುವದಿಲ್ಲ. ಆದ್ದರಿಂದ ಜಗತ್ಕಾರಣವಾಕ್ಯದಲ್ಲಿ ಬ್ರಹ್ಮಲಕ್ಷಣವಿಲ್ಲ.

**ಸಿದ್ಧಾಂತ :** ನಾಮರೂಪಗಳಾಗಿ ವಿಂಗಡಿಸಿಕೊಂಡು ಅನೇಕ ಕರ್ತೃಭೋಕ್ತೃಗಳಿಂದ ಕೂಡಿರುವ ಈ ಜಗತ್ತಿಗೆ ಅಚೇತನವಾದ ಪ್ರಧಾನಾದಿಗಳಾಗಲಿ ಜೀವನಾಗಲಿ ಕಾರಣವೆಂದು ಕಲ್ಪಿಸುವದು ಸರಿಯಾಗಲಾರದು. ಗೊತ್ತಾದ ದೇಶಕಾಲನಿಮಿತ್ತಗಳನ್ನನುಸರಿಸಿ ಉಂಟಾಗು ತ್ತಿರುವ ಕ್ರಿಯಾಫಲಗಳಿಗೆ ಆಶ್ರಯವಾದ ಈ ಜಗತ್ತು ಸ್ವಭಾವದಿಂದಲೇ ಹೀಗಿರುವದೆಂದು ಕಲ್ಪಿಸುವದೂ ಸರಿಯಾಗುವದಿಲ್ಲ. ಜಗತ್ಕಾರಣವಾದ ಬ್ರಹ್ಮವನ್ನು ತಿಳಿಸುವ ಶ್ರುತಿಯಲ್ಲಿ ಬ್ರಹ್ಮವು ಆನಂದಸ್ವರೂಪವಾಗಿದೆ, ಸರ್ವಜ್ಞವಾಗಿದೆ, ಸರ್ವಶಕ್ತಿಯುತವಾಗಿದೆ, ನಿತ್ಯಶುದ್ಧಬುದ್ಧ ಮುಕ್ತಸ್ವಭಾವವಾಗಿದೆ ಎಂದು ಹೇಳಿರುವದರಿಂದ ಬ್ರಹ್ಮದ ಸ್ವರೂಪವೂ ವಾಕ್ಯದಿಂದ ನಿರ್ಣಯ ವಾಗುತ್ತದೆ. ಆದ್ದರಿಂದ ಉದಾಹರಿಸಿದ ಶ್ರುತಿಯನ್ನು ಲಕ್ಷಣವಾಕ್ಯವೆನ್ನಬಹುದು.

**ಸಂಬಂಧ :** ಇಲ್ಲಿ ಬ್ರಹ್ಮಸ್ವರೂಪವು ಜಗತ್ಕಾರಣವೆಂದು ಲಕ್ಷಣವಾಕ್ಯದಿಂದ ಸಂಭಾವಿತವಾಗಿರುವದರಿಂದ ಅದನ್ನು ಜಿಜ್ಞಾಸೆಮಾಡಬಹುದು ಎಂದಾಯಿತು.

---

1. ಇಲ್ಲಿ ಪೂರ್ವಪಕ್ಷವು ಸರಿಯಾದರೆ ಜ್ಞಾನಮಾತ್ರದಿಂದ ಮುಕ್ತಿಯಾಗಲಾರದೆಂಬ ಫಲ ; ಸಿದ್ಧಾಂತವು ಸರಿಯಾದರೆ ಜ್ಞಾನಮಾತ್ರದಿಂದ ಮುಕ್ತಿಯಾಗುತ್ತದೆ ಎಂಬ ಫಲ—ಹೀಗೆ ಪ್ರತಿಯೊಂದು ಅಧಿಕರಣಕ್ಕೂ ಪೂರ್ವಪಕ್ಷಕ್ಕೂ ಸಿದ್ಧಾಂತಕ್ಕೂ ಫಲಭೇದವಿರುತ್ತದೆ. ಪ್ರತಿ ಯೊಂದು ಅಧಿಕರಣದ ಚರ್ಚೆಗೂ ಹೀಗೆ ಫಲಭೇದವನ್ನು ಊಹಿಸಿಕೊಳ್ಳಬೇಕು.

# ೩. ಶಾಸ್ತ್ರಯೋನಿತ್ವಾಧಿಕರಣ

## ಒಂದನೆಯ ವರ್ಣಕ

**ವಿಷಯವೂ ಸಂಶಯವೂ :** ಬ್ರಹ್ಮವು ಜಗತ್ಕಾರಣವೆಂದದ್ದರಿಂದ ಸೂಚಿತವಾಗಿರುವ ಸರ್ವಜ್ಞತ್ವವು "ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ" (ಬೃ. ೨-೪-೧) ಮುಂತಾದ ಶ್ರುತಿಗಳಿಂದ ದೃಢವಾಗುತ್ತದೆಯೆ, ಇಲ್ಲವೆ ?

**ಪೂರ್ವಪಕ್ಷ :** ಹಿಂದೆ ಹೇಳಿದ ಜಗತ್ಕಾರಣತ್ವದಿಂದ ಸರ್ವಜ್ಞತ್ವವು ಸೂಚಿತವಾಗಿದೆ ಎಂಬುದೇ ಸರಿಯಲ್ಲ. ಒಂದು ವೇಳೆ ಅಲ್ಲಿ ಸೂಚಿತವಾಗಿದ್ದರೂ ಜಗತ್ಕಾರಣತ್ವದಲ್ಲಿಯೇ ವೇದಕಾರಣತ್ವವೂ ಸೇರಿರುವದರಿಂದ ಇಲ್ಲಿ ಹೊಸ ಯುಕ್ತಿಯೇನೂ ಇಲ್ಲ. ಆದ್ದರಿಂದ ಇಲ್ಲಿ ಸರ್ವಜ್ಞತ್ವವನ್ನು ದೃಢಗೊಳಿಸಿದೆ ಎಂಬುದು ಸರಿಯಲ್ಲ.

**ಸಿದ್ಧಾಂತ :** ಜಗತ್ತಿನ ಸ್ವರೂಪದ ವಿವರಣೆಯಿಂದಲೇ ಪ್ರಧಾನಾದಿಗಳಾಗಲಿ ಅಸರ್ವಜ್ಞನಾದ ಜೀವನಾಗಲಿ ಅದಕ್ಕೆ ಕಾರಣವಲ್ಲವೆಂದು ಏರ್ಪಡುತ್ತದೆ. ಆದ್ದರಿಂದ ಜಗತ್ತಿನ ಸ್ವರೂಪವನ್ನು ಬಲ್ಲ ಸರ್ವಜ್ಞನೇ ಕಾರಣವೆಂದು ಏರ್ಪಡುತ್ತದೆ. ಸರ್ವವಿಷಯಗಳ ತಿಳಿವಳಿಕೆಯನ್ನೂ ಉಂಟುಮಾಡುವ, ಸಕಲಶಾಸ್ತ್ರಗಳಿಗೂ ಮೂಲವಾದ ವೇದವನ್ನು ಯಾವ ಪ್ರಯತ್ನವೂ ಇಲ್ಲದೆ ಸೃಷ್ಟಿಸಿರುವದರಿಂದ ವೇದದಲ್ಲಿರುವ ತಿಳಿವಳಿಕೆಗಿಂತಲೂ ಹೆಚ್ಚಿನ ಜ್ಞಾನವು ಬ್ರಹ್ಮದಲ್ಲಿರಬೇಕೆಂದು ಸಿದ್ಧವಾಗುತ್ತದೆ. ಆದ್ದರಿಂದ ವೇದಕಾರಣತ್ವವನ್ನು ಹೇಳುವ ಶ್ರುತಿಯಿಂದ ಹಿಂದೆ ಸಿದ್ಧವಾಗಿರುವ ಸರ್ವಜ್ಞತ್ವವನ್ನು ಗಟ್ಟಿಗೊಳಿಸಿರುತ್ತದೆ.

## ಎರಡನೆಯ ವರ್ಣಕ

**ಸಂಗತಿ :** ಹಿಂದಿನ ಅಧಿಕರಣದಲ್ಲಿ ಲಕ್ಷಣವಾಕ್ಯದಿಂದ ಸಂಭಾವಿತವಾಗಿರುವ ಬ್ರಹ್ಮಕ್ಕೆ ಇಲ್ಲಿ ಪ್ರಮಾಣವನ್ನು ತಿಳಿಸಿದೆ.

**ವಿಷಯವೂ ಸಂಶಯವೂ :** "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" (ಬೃ. ೩-೯-೨೬) ಮುಂತಾದ ಶ್ರುತಿಗಳಲ್ಲಿ ಹೇಳಿರುವಂತೆ ಶಾಸ್ತ್ರವೊಂದೇ ಬ್ರಹ್ಮಕ್ಕೆ ಪ್ರಮಾಣವೊ, ಪ್ರತ್ಯಕ್ಷಾದಿಗಳೂ ಪ್ರಮಾಣವಾಗಬಹುದೊ ?

**ಪೂರ್ವಪಕ್ಷ :** ಬ್ರಹ್ಮವು ಭೂತವಸ್ತುವಾಗಿರುವದರಿಂದ ಪ್ರತ್ಯಕ್ಷಾದಿಗಳೂ ಅದಕ್ಕೆ ಪ್ರಮಾಣವಾಗಬಹುದು.

**ಸಿದ್ಧಾಂತ :** ಬ್ರಹ್ಮವು ಇಂದ್ರಿಯಗೋಚರವಲ್ಲದ್ದರಿಂದಲೂ ಇಂದ್ರಿಯಗೋಚರವಾದ ಲಿಂಗಾದಿಗಳೂ ಅದಕ್ಕೆ ಇಲ್ಲವಾದ್ದರಿಂದಲೂ ಅದಕ್ಕೆ ಪ್ರತ್ಯಕ್ಷಾದಿಗಳು ಪ್ರಮಾಣವಲ್ಲ. ಶಾಸ್ತ್ರವೊಂದೇ ಪ್ರಮಾಣವು.

# ೪. ಸಮನ್ವಯಾಧಿಕರಣ

## ಒಂದನೆಯ ವರ್ಣಕ

**ಸಂಗತಿ :** ಹಿಂದೆ ಹೇಳಿದ ಶಾಸ್ತ್ರಪ್ರಮಾಣಕತ್ವವನ್ನು ಇಲ್ಲಿ ಆಕ್ಷೇಪಿಸಿ ಪರಿಹರಿಸಿರುತ್ತದೆ.

**ವಿಷಯವೂ ಸಂಶಯವೂ :** "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ. ೬-೨-೧) "ತದೇತದ್ಬ್ರಹ್ಮಾಪೂರ್ವಮನಪರಮನನ್ತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂಃ" (ಬೃ. ೨-೫-೧೯) ಮುಂತಾದ ವಾಕ್ಯಗಳು ಬ್ರಹ್ಮವನ್ನು ತಿಳಿಸುವ ಪ್ರಮಾಣವೆ, ಅಲ್ಲವೆ ?

**ಪೂರ್ವಪಕ್ಷ:** ಶಾಸ್ತ್ರವು ಕ್ರಿಯೆಯನ್ನೇ ಹೇಳಬೇಕೆಂದು ಪೂರ್ವಮೀಮಾಂಸದಲ್ಲಿ ನಿರ್ಣಯಿಸಿರುತ್ತದೆ. ಸಿದ್ಧವಸ್ತುವು ಪ್ರತ್ಯಕ್ಷಾದಿಗಳಿಗೇ ವಿಷಯವಾಗಿರುವದರಿಂದ ಬ್ರಹ್ಮವನ್ನು ತಿಳಿಸುವ ಶಾಸ್ತ್ರವು ಅನುವಾದಮಾತ್ರವಾಗುವದು. ಹೇಯೋಪಾದೇಯವಲ್ಲದ ಸಿದ್ಧವಸ್ತುವಿನ ಜ್ಞಾನದಿಂದ ಯಾವ ಪ್ರಯೋಜನವೂ ಇರುವದಿಲ್ಲ. ಆದ್ದರಿಂದ ಈ ವಾಕ್ಯಗಳು ಬ್ರಹ್ಮವನ್ನು ತಿಳಿಸುವ ಪ್ರಮಾಣವಲ್ಲ. ಇವು ಅರ್ಥವಾದಗಳೆಂದೋ, ಕರ್ಮಕ್ಕೆ ಬೇಕಾದ ಕರ್ತೃದೇವತಾದಿಗಳನ್ನು ತಿಳಿಸುವವೆಂದೋ, ಉಪಾಸನೆಯೇ ಮುಂತಾದ ಕ್ರಿಯಾಂತರವನ್ನು ವಿಧಿಸುವವೆಂದೋ ತಿಳಿಯಬೇಕು.

**ಸಿದ್ಧಾಂತ :** ಶಾಸ್ತ್ರವು ಕ್ರಿಯೆಯನ್ನು ಮಾತ್ರ ತಿಳಿಸುವದೆಂಬ ನಿಯಮವು ಕರ್ಮಕಾಂಡಕ್ಕೆ ಸಂಬಂಧಿಸಿದ್ದು. ಬ್ರಹ್ಮಾತ್ಮಸ್ವರೂಪವು ಪ್ರತ್ಯಕ್ಷಾದಿಗೋಚರವಲ್ಲ. ಅದರ ಜ್ಞಾನದಿಂದ ಸರ್ವಕ್ಲೇಶಗಳೂ ಪರಿಹಾರವಾಗುವದರಿಂದ ಬ್ರಹ್ಮವಸ್ತುವಿನ ಉಪದೇಶದಿಂದ ಪ್ರಯೋಜನವೂ ಇದೆ. ಈ ವಾಕ್ಯಗಳು ಜಗತ್ಕಾರಣವಾದ ಬ್ರಹ್ಮದ ಸ್ವರೂಪವನ್ನೇ ತಾತ್ಪರ್ಯದಿಂದ ಬೋಧಿಸುತ್ತವೆಯಾದ್ದರಿಂದ ಅದರ ವಿಷಯಕ್ಕೆ ಪ್ರಮಾಣವೆನ್ನುವದಕ್ಕೆ ಯಾವ ಅಡ್ಡಿಯೂ ಇಲ್ಲ.

## ಎರಡನೆಯ ವರ್ಣಕ

**ಸಂಗತಿ :** ಬ್ರಹ್ಮಕ್ಕೆ ಶಾಸ್ತ್ರವು ಪ್ರಮಾಣವೆಂದು ಒಪ್ಪಿದರೂ ಶಾಸ್ತ್ರವು ಸ್ವತಂತ್ರವಾಗಿ ಬ್ರಹ್ಮವನ್ನು ಬೋಧಿಸುವದಿಲ್ಲ ಎಂಬ ಶಂಕೆಗೆ ಇಲ್ಲಿ ಪರಿಹಾರವನ್ನು ಹೇಳಿದೆ.

**ವಿಷಯವೂ ಸಂಶಯವೂ :** "ಆತ್ಮಾ ವಾ ಅರೇ ದ್ರಷ್ಟವ್ಯಃ...." (ಬೃ. ೨-೪-೫) "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೨) ಮುಂತಾದ ವಿಧಿರೂಪವಾಗಿಯೂ ಸ್ವರೂಪನಿರ್ದೇಶರೂಪವಾಗಿಯೂ ಇರುವ ವಚನಗಳು ಇಲ್ಲಿ ವಿಷಯವಾಕ್ಯಗಳು. ಇಲ್ಲಿ ಬ್ರಹ್ಮಾತ್ಮನ ಸ್ವರೂಪನಿರ್ದೇಶವನ್ನು ಮಾಡುವ "ವಿಜ್ಞಾನಮಾನನ್ದಮ್" ಮುಂತಾದ ವಾಕ್ಯಗಳು ಬ್ರಹ್ಮವನ್ನು ನೇರಾಗಿ ತಿಳಿಸುವ ಪ್ರಮಾಣಗಳೆ ? ಅಥವಾ ಅವು "ಆತ್ಮಾ ವಾ ಅರೇ ದ್ರಷ್ಟವ್ಯಃ" ಮುಂತಾದ ವಾಕ್ಯಗಳಲ್ಲಿರುವ ಜ್ಞಾನವಿಧಿಗೆ ಅಂಗವಾಗಿ ಬ್ರಹ್ಮವನ್ನು ತಿಳಿಸುವವೆ ? ಎಂಬುದು ಸಂಶಯವು

**ಪೂರ್ವಪಕ್ಷ :** ಶಾಸ್ತ್ರಕ್ಕೆ ಪ್ರವೃತ್ತಿನಿವೃತ್ತಿಗಳೇ ಪ್ರಯೋಜನವು. ಸಿದ್ಧವಸ್ತುವನ್ನು ಹೇಳುವಾಗಲೂ ಆ ವಸ್ತು ಕ್ರಿಯೆಗೆ ಅಂಗವಾಗಿರಬಹುದೇ ಹೊರತು ಸ್ವಪ್ರಧಾನವಾಗಿರಲಾರದು. ಕ್ರಿಯಗೆ ಸಂಬಂಧಪಡದ ಬರಿಯ ವಸ್ತುವನ್ನು ಉಪದೇಶಿಸುವದರಿಂದ ಪ್ರಯೋಜನವಿಲ್ಲ; ಕೇವಲ ವಸ್ತುವಾದಿಯಾದ ವಾಕ್ಯವು ವೇದದಲ್ಲಿಲ್ಲವೂ ಇಲ್ಲ. ಬ್ರಹ್ಮವಿಷಯವಾದ ವಾಕ್ಯಶ್ರವಣ ವನ್ನು ಮಾಡಿದವರೂ ಮುನ್ನಿನಂತೆಯೇ ಸಂಸಾರಿಗಳಾಗಿರುತ್ತಾರೆ; ಆದ್ದರಿಂದಲೇ ಶಾಸ್ತ್ರವು ಶ್ರವಣವಾದ ಬಳಿಕ ಮನನನಿದಿಧ್ಯಾಸನಗಳನ್ನೂ ಮಾಡಬೇಕೆಂದು ವಿಧಿಸಿರುತ್ತದೆ. ಆದ್ದರಿಂದ ಉಪನಿಷತ್ತುಗಳಲ್ಲಿ ಬ್ರಹ್ಮದ ಉಪಾಸನೆಯ ರೂಪವಾದ ವಾಕ್ಯಗಳೇ ಪ್ರಧಾನವಾಗಿರುವವು; ಈ ಉಪಾಸನೆಗೆ ಅಂಗವಾಗಿಯೇ ಬ್ರಹ್ಮವನ್ನು ವಸ್ತುಬೋಧಕವಾಕ್ಯಗಳು ಉಪದೇಶಿಸುತ್ತವೆ ಎಂದು ತಿಳಿಯಬೇಕು.

**ಸಿದ್ಧಾಂತ :** ಈ ವಾಕ್ಯಗಳು ನೇರಾಗಿಯೇ ಬ್ರಹ್ಮವನ್ನು ತಿಳಿಸುವ ಪ್ರಮಾಣಗಳು. ಶಾಸ್ತ್ರವು ಪ್ರವೃತ್ತಿನಿವೃತ್ತಿಗಳನ್ನೇ ಅಲ್ಲದೆ ಕೇವಲ ವಸ್ತುವನ್ನೂ ಹೇಳಬಹುದು. ವಸ್ತುವಿನ ಉಪದೇಶದಿಂದ ಪ್ರಯೋಜನವಿರಬೇಕೆಂಬ ನಿಯಮವಿದೆಯೇ ಹೊರತು ವಸ್ತು ಕ್ರಿಯೆಗೆ ಅಂಗ ವಾಗಿಯೇ ಇರಬೇಕೆಂಬ ನಿರ್ಬಂಧವೇನೂ ಇಲ್ಲ. ಪ್ರಕೃತದಲ್ಲಿ ಬ್ರಹ್ಮಜ್ಞಾನದಿಂದ ಅಜ್ಞಾನ ನಿವೃತ್ತಿಯಾಗಿ ಸದ್ಯೋಮುಕ್ತಿಯಾಗುವದೆಂಬ ಪ್ರಯೋಜನವಿದೆ. ಶ್ರವಣದ ಜೊತೆಗೆ ಮನನ ನಿದಿಧ್ಯಾಸನಗಳನ್ನೂ ಉಪದೇಶಿಸಿರುವದು ನಿಜ; ಆದರೆ ಅವುಗಳೂ ಶ್ರವಣದಂತೆ ಬ್ರಹ್ಮಜ್ಞಾನ ಕ್ಕಾಗಿಯೇ ವಿಹಿತವಾಗಿರುತ್ತವೆ. ಜ್ಞಾನವು ಬಂದಮೇಲೆ ಸಂಸಾರವು ಇರುವದೇ ಇಲ್ಲವಾದ್ದ ರಿಂದ ಜ್ಞಾನವು ನಿಷ್ಪ್ರಯೋಜನವೆಂದು ಹೇಳುವದಕ್ಕಾಗುವದಿಲ್ಲ.

ಬ್ರಹ್ಮವು ಯಾವ ಕ್ರಿಯೆಗೂ ವಿಷಯವಲ್ಲದ ನಿತ್ಯಸಿದ್ಧವಾದ ಆತ್ಮರೂಪವಾಗಿರುತ್ತದೆ; ಇದ್ದರಿಂದ ಬ್ರಹ್ಮಪ್ರಾಪ್ತಿರೂಪವಾದ ಮೋಕ್ಷಕ್ಕೆ ಯಾವ ಕ್ರಿಯೆಯೂ ಬೇಕಿರುವದಿಲ್ಲ. ಜ್ಞಾನವೇ ಒಂದು ಕ್ರಿಯೆಯಲ್ಲವೆ ? ಎಂದರೆ ಅಲ್ಲ; ಏಕೆಂದರೆ ಅದು ವಸ್ತುತಂತ್ರವಾಗಿರುತ್ತದೆ, ಶಾಸ್ತ್ರ ವಿಹಿತವಾದ ಕ್ರಿಯೆಗಳಂತೆ ಪುರುಷವ್ಯಾಪಾರತಂತ್ರವಾಗಿರುವದಿಲ್ಲ.

ಬ್ರಹ್ಮಜ್ಞಾನದಿಂದ ತೆಗೆದುಕೊಳ್ಳುವರು ಅಥವಾ ಬಿಡುವದು ಯಾವದೂ ಇಲ್ಲವಾದ್ದರಿಂದ ನಿಷ್ಪ್ರಯೋಜನವೆಂಬದೂ ಸರಿಯಲ್ಲ; ಬ್ರಹ್ಮಜ್ಞಾನವಾದ ಬಳಿಕ ಕೃತಕೃತ್ಯನಾಗುವನೆಂಬುದು ಜ್ಞಾನಕ್ಕೆ ಭೂಷಣವೇ ಹೊರತು ದೂಷಣವಲ್ಲ. ಬರಿಯ ವಸ್ತುವನ್ನು ಉಪದೇಶಿಸುವ ಜ್ಞಾನ ವಾಕ್ಯವೇ ವೇದದಲ್ಲಿಲ್ಲವೆಂಬುದು ಸಾಹಸವು; ಏಕೆಂದರೆ ಉಪನಿಷತ್ತುಗಳಲ್ಲಿ ಕ್ರಿಯಾಶೇಷವಲ್ಲದ ಆತ್ಮವಸ್ತುವನ್ನೇ ಹೇಳಿರುತ್ತದೆ. ಅಹಂಪ್ರತ್ಯಯವಿಷಯನಾಗಿರುವ ಆತ್ಮನನ್ನು ಮಾತ್ರ ಬೋಧಿಸಿದರೆ ಉಪನಿಷತ್ತುಗಳು ಅನುವಾದಮಾತ್ರವಾಗುವವೆಂಬ ಆಕ್ಷೇಪವೂ ಸರಿಯಲ್ಲ. ಏಕೆಂದರೆ ಅಹಂಪ್ರತ್ಯಯಗಮ್ಯನಾದ ಕರ್ತೃವಿಗಿಂತಲೂ ವಿಲಕ್ಷಣವಾಗಿ ಸಾಕ್ಷಿರೂಪನಾದ ಆತ್ಮ ನನ್ನೇ ಉಪನಿಷತ್ತುಗಳು ತಿಳಿಸುತ್ತವೆ. ಆ ಸಾಕ್ಷಿಯು ಮತ್ತೆ ಯಾವ ಪ್ರಮಾಣದಿಂದಲೂ ತಿಳಿಯಬರುವಂತಿಲ್ಲ. ಆದ್ದರಿಂದ ಬ್ರಹ್ಮವು ಸ್ವತಂತ್ರವಾಗಿಯೇ ಶಾಸ್ತ್ರಪ್ರಮಾಣಕವಾಗಿರುತ್ತದೆ.

# ೫. ಈಕ್ಷತ್ಯಧಿಕರಣ

**ಸಂಗತಿ :** ಸಿದ್ಧವಸ್ತುವನ್ನೂ ಶಾಸ್ತ್ರವು ಹೇಳಬಹುದೆಂದು ಹಿಂದಿನ ಅಧಿಕರಣದಲ್ಲಿ ನಿರ್ಣಯಮಾಡಿತ್ತಷ್ಟೆ. ಸಿದ್ಧವಸ್ತುವು ಪ್ರಮಾಣಾಂತರಕ್ಕೂ ಗೋಚರವಾಗಿರುವದರಿಂದ ಅನುಮಾನಪ್ರಮಾಣದಿಂದ ಸಿದ್ಧವಾಗುವ ಪ್ರಧಾನಾದಿಗಳನ್ನೇ ಶಾಸ್ತ್ರದಲ್ಲಿಯೂ ಜಗತ್ಕಾರಣವೆಂದು ಹೇಳಿದೆ ಎಂದು ಏತಕ್ಕೆ ಕಲ್ಪಿಸಬಾರದು ? ಎಂಬ ಆಕ್ಷೇಪವನ್ನು ತೆಗೆದು ಇಲ್ಲಿ ಪರಿಹಾರವನ್ನು ಹೇಳಿದೆ.

**ವಿಷಯವೂ ಸಂಶಯವೂ :** "ಸದೇವ ಸೋಮ್ಯೇದಮಗ್ರ ಆಸೀತ್" (ಛಾಂ. ೬-೨-೧) ಎಂದು ಮುಂತಾಗಿರುವ ಶ್ರುತಿಯಲ್ಲಿ ಸಚ್ಛಬ್ದವಾಚ್ಯವಾಗಿರುವದು ಬ್ರಹ್ಮವೋ, ಪ್ರಧಾನವೋ ?

**ಪೂರ್ವಪಕ್ಷ :** ಇಲ್ಲಿ ಹೇಳಿರುವದು ಪ್ರಧಾನವೇ, ಅದು ಮಹದಾದಿಕಾರ್ಯಗಳ ರೂಪದಲ್ಲಿ ಪರಿಣಮಿಸುವ ಶಕ್ತಿಗಳುಳ್ಳದ್ದಾದ್ದರಿಂದ ಸರ್ವಶಕ್ತಿಯುತವಾಗಿದೆ. ಸಕಲಜ್ಞಾನಕ್ಕೂ ಕಾರಣವಾಗಿರುವ ಸತ್ತ್ವದಿಂದೊಡಗೂಡಿರುವದರಿಂದ ಸರ್ವಜ್ಞವೂ ಆಗಿದೆ. ಬ್ರಹ್ಮವು ಅಶರೀರವಾಗಿರುವದರಿಂದಲೂ ಜ್ಞಾನಸ್ವರೂಪವಾಗಿರುವದರಿಂದಲೂ ಅದನ್ನು "ಸರ್ವಜ್ಞ" ಎಂದು ಕರೆಯುವದು ಸರಿಯಲ್ಲ. ನಿರವಯವವಾಗಿರುವದರಿಂದ ಯಾವ ಕಾರ್ಯದ ರೂಪವಾಗಿ ಪರಿಣಮಿಸುವ ಶಕ್ತಿಯೂ ಅದಕ್ಕಿಲ್ಲವಾಗಿ ಅದನ್ನು "ಸರ್ವಶಕ್ತಿ" ಎಂದು ಕರೆಯುವದೂ ಸರಿಯಲ್ಲ.

**ಸಿದ್ಧಾಂತ :** ಸಚ್ಛಬ್ದವಾಚ್ಯವಾದ ಜಗತ್ಕಾರಣವು "ಯೋಚಿಸಿ ನೋಡಿತು" ಎಂದು ಶ್ರುತಿಯಲ್ಲಿರುವದರಿಂದ ಜಗತ್ಕಾರಣವು ಚೇತನವಾಗಿರಬೇಕೆಂದು ಸಿದ್ಧವಾಗುತ್ತದೆ. ಈ ಪ್ರಕರಣದಲ್ಲಿ ಅಚೇತನವಾದ ಅಪ್ಪುತೇಜಸ್ಸುಗಳೂ ಯೋಚಿಸಿನೋಡಿದವೆಂದು ಶ್ರುತಿಯಲ್ಲಿ ಹೇಳಿರುವದರಿಂದ ಈ ನೋಟವು ಗೌಣವೆನ್ನೋಣ ಎಂದರೆ ಅದು ಆಗುವಹಾಗಿಲ್ಲ ; ಏಕೆಂದರೆ ಸದ್ವಸ್ತುವು ಜೀವನ ಆತ್ಮನೆಂದು ಹೇಳಿರುವದರಿಂದ ಅದು ಚೇತನವೇ ಆಗಿರಬೇಕಾಗಿದೆ. ಈ ಆತ್ಮಶಬ್ದವೂ ಗೌಣವೆನ್ನೋಣ ಎಂಬುದು ಸರಿಯಲ್ಲ ; ಏಕೆಂದರೆ ಸದ್ವಸ್ತುವನ್ನು ತಾನೆಂದು ಅರಿತವನಿಗೆ ಮೋಕ್ಷವಾಗುವದೆಂದು ಶ್ರುತಿಯಲ್ಲಿದೆ ; ಜಡವಾದ ಪ್ರಧಾನವು ಜೀವನ ಆತ್ಮನಾಗುವಂತಿಲ್ಲ. ಇದು ಸ್ಥೂಲಾರುಂಧತೀನ್ಯಾಯದಿಂದ ಹೇಳಿದ ಮಾತು ಎನ್ನುವದಕ್ಕಿಲ್ಲ ; ಏಕೆಂದರೆ ಶ್ರುತಿಯಲ್ಲಿ ಸದ್ವಸ್ತುವು ನಿಜವಾಗಿ ಆತ್ಮನಲ್ಲವೆಂದು ಹೇಳಿಲ್ಲ, ಬೇರೊಬ್ಬ ಆತ್ಮನನ್ನು ತಿಳಿಸಿಯೂ ಇಲ್ಲ. ಸುಷುಪ್ತಿಯಲ್ಲಿ ಜೀವನು ತನ್ನ ಸ್ವರೂಪವಾಗಿರುವ ಸದ್ವಸ್ತುವಿನಲ್ಲಿಯೇ ಲಯವಾಗುತ್ತಾನೆಂದು ಹೇಳಿರುವದರಿಂದಲೂ ಸಚ್ಛಬ್ದವಾಚ್ಯವಾದ ಕಾರಣವು ಪ್ರಧಾನವಲ್ಲ. ಸೃಷ್ಟಿವಾಕ್ಯಗಳೆಲ್ಲವೂ ಚೇತನರೂಪನಾದ ಆತ್ಮನೇ ಜಗತ್ಕಾರಣನೆಂದು ಹೇಳುತ್ತವೆ ; ಸರ್ವಜ್ಞನೂ ಸರ್ವಶಕ್ತನೂ ಆದ ಪರಮೇಶ್ವರನೇ ಜಗತ್ತಿಗೆ ಮೂಲಕಾರಣನೆಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಸುಸ್ಪಷ್ಟವಾಗಿ ಹೇಳಿಯೂ ಇದೆ. ಆದ್ದರಿಂದ ಚೇತನವಾದ ಬ್ರಹ್ಮವೇ ಜಗತ್ಕಾರಣವಲ್ಲದೆ ವೇದಬಾಹ್ಯವಾದ ಅಚೇತನವಾದ ಪ್ರಧಾನಾದಿಗಳು ಕಾರಣವಾಗಲಾರವು.

ಪ್ರಧಾನವು ಸತ್ತ್ವಗುಣದಿಂದ ಕೂಡಿರುವ ಕಾರಣದಿಂದ ಸರ್ವಜ್ಞವೆನಿಸಲಾರದು; ಏಕೆಂದರೆ ಜ್ಞಾನಕ್ಕೆ ಅಡ್ಡಿಯಾಗಿರುವ ರಜಸ್ತಮೋಗುಣಗಳಿಂದ ಕೂಡಿರುವ ಕಾರಣದಿಂದ ಅದನ್ನು ಕಿಂಚಿಜ್ಞ್ಞವೆಂದೂ ಕರೆಯಬೇಕಾಗುವದು. ಅದು ಶಬ್ದಪ್ರಮಾಣಕವಲ್ಲದ್ದರಿಂದ ಸರ್ವ ಶಕ್ತಿಯುತವೂ ಅಲ್ಲ. ನಿತ್ಯಜ್ಞಾನಸ್ವರೂಪವಾಗಿರುವದರಿಂದ ಬ್ರಹ್ಮಕ್ಕೆ ಜ್ಞಾನೋತ್ಪತ್ತಿಗಾಗಿ ಶರೀರವಿರಬೇಕಾದದ್ದಿಲ್ಲ; ಅದು ನಿರವಯವವಾದರೂ ಸರ್ವಶಕ್ತಿಯುತವಾಗಿರುವದೆಂದು ಶ್ರುತಿ ಯಲ್ಲಿ ಹೇಳಿರುವದರಿಂದ ಅದು ಸರ್ವಕಾರ್ಯವನ್ನೂ ಉಂಟುಮಾಡಬಹುದಾಗಿದೆ. ಆದ್ದರಿಂದ ಚೇತನವಾದ ಬ್ರಹ್ಮವೇ ಸಚ್ಛಬ್ದವಾಚ್ಯವಾದ ಜಗತ್ಕಾರಣವು.



*

# ಸ್ಪಷ್ಟಬ್ರಹ್ಮಲಿಂಗದ ವಾಕ್ಯಗಳ ವಿಚಾರ

## ಆಕ್ಷೇಪ : ಮುಂದಿನ ಗ್ರಂಥವೇತಕ್ಕೆ ?

( ಭಾಷ್ಯ )

೮೯. "ಜನ್ಮಾದ್ಯಸ್ಯ ಯತಃ" (೧-೧-೨) ಇತ್ಯಾರಭ್ಯ 'ಶ್ರುತತ್ವಾಚ್ಚ'- (೧-೧-೧೧) ಇತ್ಯೇವಮನ್ತೈಃ ಸೂತ್ರೈಃ ಯಾನಿ ಉದಾಹೃತಾನಿ ವೇದಾನ್ತ ವಾಕ್ಯಾನಿ, ತೇಷಾಂ ಸರ್ವಜ್ಞಃ ಸರ್ವಶಕ್ತಿಃ ಈಶ್ವರಃ ಜಗತೋ ಜನ್ಮಸ್ಥಿತಿಲಯ ಕಾರಣಮ್ ಇತ್ಯೇತಸ್ಯ ಅರ್ಥಸ್ಯ ಪ್ರತಿಪಾದಕತ್ವಂ ನ್ಯಾಯಪೂರ್ವಕಂ ಪ್ರತಿ ಪಾದಿತಮ್ | ಗತಿಸಾಮಾನ್ಯೋಪನ್ಯಾಸೇನ ಚ ಸರ್ವೇ ವೇದಾನ್ತಾಃ ಚೇತನ ಕಾರಣವಾದಿನಃ ಇತಿ ವ್ಯಾಖ್ಯಾತಮ್ | ಅತಃ ಪರಸ್ಯ ಗ್ರನ್ಥಸ್ಯ ಕಿಮ್ ಉತ್ಥಾನಮ್ ಇತಿ ?

( ಭಾಷ್ಯಾರ್ಥ )

'ಜನ್ಮಾದ್ಯಸ್ಯ ಯತಃ' (೧-೧-೨) ಎಂಬಲ್ಲಿಂದ ಮೊದಲಾಗಿ 'ಶ್ರುತತ್ವಾಚ್ಚ' (೧-೧-೧೧) ಎಂಬವರೆಗಿನ ಸೂತ್ರಗಳಲ್ಲಿ ಯಾವ ವೇದಾಂತವಾಕ್ಯಗಳನ್ನು ಉದಾ ಹರಿಸಲಾಯಿತೋ ಅವುಗಳು ಸರ್ವಜ್ಞನೂ ಸರ್ವಶಕ್ತನೂ ಆಗಿರುವ ಈಶ್ವರನು ಜಗತ್ತಿನ ಜನ್ಮ, ಸ್ಥಿತಿ, ಲಯ-(ಇವು)ಗಳಿಗೆ ಕಾರಣವು ಎಂಬೀ ವಿಷಯವನ್ನು ಪ್ರತಿಪಾದಿಸುತ್ತದೆ ಎಂದು (ತರ್ಕ) ನ್ಯಾಯಗಳಿಂದ ತಿಳಿಸಿಕೊಟ್ಟದ್ದಾಗಿದೆ. ಗತಿ ಸಾಮಾನ್ಯವನ್ನು ತಿಳಿಸುವ ಮೂಲಕ ಎಲ್ಲಾ ವೇದಾಂತಗಳೂ ಚೇತನಕಾರಣ ವನ್ನೇ ಹೇಳುತ್ತವೆ ಎಂಬುದನ್ನು ವಿವರಿಸಿದ್ದಾಗಿದೆ. (ಹೀಗಿರುವದರಿಂದ) ಇನ್ನು ಮುಂದಿನ ಗ್ರಂಥವನ್ನೆಬ್ಬಿಸುವ (ಕಾರಣ)ವೇನು ?[1] ಎಂಬ (ಆಕ್ಷೇಪವು ಎದ್ದು ಕೊಳ್ಳಬಹುದು.

## ಪರಿಹಾರ : ಮುಂದಿನ ಗ್ರಂಥವು ಸೋಪಾಧಿಕನಿರುಪಾಧಿಕಬ್ರಹ್ಮವಾಕ್ಯಗಳ ವಿವೇಚನೆಗಾಗಿ

(ಭಾಷ್ಯ)

೯೦. ಉಚ್ಯತೇ | ದ್ವಿರೂಪಂ ಹಿ ಬ್ರಹ್ಮ ಅವಗಮ್ಯತೇ, ನಾಮರೂಪ ವಿಕಾರಭೇದೋಪಾಧಿವಿಶಿಷ್ಟಮ್, ತದ್ವಿಪರೀತಂ ಚ ಸರ್ವೋಪಾಧಿವಿವರ್ಜಿತಮ್ "ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ...ಯತ್ರ ತ್ವಸ್ಯ ಸರ್ವ-

1. ಸಮನ್ವಯಾಧ್ಯಾಯದಲ್ಲಿ ಹೇಳಬೇಕಾದವಿಷ್ಟೆಲ್ಲ ಇಷ್ಟೇ ಅಲ್ಲವೆ? ಮತ್ತೇಕೆ ಮುಂದಿನ ಸೂತ್ರಗಳು ?-ಎಂದು ಆಕ್ಷೇಪ.

ಮಾತ್ಮೈವಾಭೂತ್ತತ್ ಕೇನ ಕಂ ಪಶ್ಯೇತ್" (ಬೃ. ೪-೫-೧೫) "ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾಥ ಯತ್ರಾನ್ಯತ್ ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಮ್" (ಛಾಂ.೭-೨೪-೧) "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಭಿವದನ್ ಯದಾಸ್ತೇ" (ತೈ. ಆ. ೩-೧೨-೭) "ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್ | ಅಮೃತಸ್ಯ ಪರಂ ಸೇತುಂ ದಗ್ಧೇನ್ಧನಮಿವಾನಲಮ್" (ಶ್ವೇ. ೬-೧೯) "ನೇತಿ ನೇತಿ" (ಬೃ. ೨-೩-೬) ಇತಿ, "ಅಸ್ಥೂಲಮನಣು" (ಬೃ. ೩-೮-೮) "ನ್ಯೂನಮನ್ಯತ್ಸ್ಥಾನಂ ಸಂಪೂರ್ಣಮನ್ಯತ್" ಇತಿ ಚೈವಂ ಸಹಸ್ರಶೋ ವಿದ್ಯಾವಿದ್ಯಾವಿಷಯಭೇದೇನ ಬ್ರಹ್ಮಣೋ ದ್ವಿರೂಪತಾಂ ದರ್ಶಯನ್ತಿ ವಾಕ್ಯಾನಿ ||

(ಭಾಷ್ಯಾರ್ಥ)

(ಇದಕ್ಕೆ ಉತ್ತರವನ್ನು) ಹೇಳುತ್ತೇವೆ. ನಾಮರೂಪಗಳ ಕಾರ್ಯವಾದ ಬೇರೆಬೇರೆಯ ಉಪಾಧಿಗಳಿಂದ ಕೂಡಿದ (ರೂಪ), ಮತ್ತು ಅದಕ್ಕೆ ವಿರುದ್ಧವಾಗಿ ಯಾವ ಉಪಾಧಿಯೂ ಇಲ್ಲದ (ರೂಪ)–ಎಂದು ಎರಡು ರೂಪಗಳ ಬ್ರಹ್ಮ(ವನ್ನು ಶ್ರುತಿಯಲ್ಲಿ ಹೇಳಿರುವದು) ಕಂಡುಬರುತ್ತದೆ. "ಎಲ್ಲಿ ದ್ವೈತವಿದ್ದಂತೆ ಇರುವದೋ ಅಲ್ಲಿ ಒಬ್ಬನು ಇನ್ನೊಬ್ಬನನ್ನು ಕಾಣುವನು.......ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ನೋಡಬೇಕು?" (ಬೃ. ೪-೫.೧೫) "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ ಮತ್ತೊಂದನ್ನು ಕೇಳುವದಿಲ್ಲವೋ, ಮತ್ತೊಂದನ್ನು ಅರಿಯುವದಿಲ್ಲವೋ ಅದು ಭೂಮವು; ಇನ್ನು ಎಲ್ಲಿ ಮತ್ತೊಂದನ್ನು ಕಾಣುವನೋ ಮತ್ತೊಂದನ್ನು ಕೇಳುವನೋ ಮತ್ತೊಂದನ್ನು ಅರಿಯುವನೋ ಅದು ಅಲ್ಪವು. ಯಾವದು ಭೂಮವೋ ಅದೇ ಅಮೃತವು, ಇನ್ನು ಯಾವದು ಅಲ್ಪವೋ ಅದು ಮರ್ತ್ಯವು" (ಛಾಂ. ೭-೨೪-೧), "ಯಾವ ಧೀರನಾದ (ಪರಮಾತ್ಮನು) ರೂಪಗಳನ್ನೆಲ್ಲ ಉಂಟುಮಾಡಿ (ಅವುಗಳ) ನಾಮಗಳನ್ನೂ ಮಾಡಿ, ವ್ಯವಹರಿಸುತ್ತಿರುವನೋ" (ತೈ.ಆ. ೩-೧೨-೭) "ನಿಷ್ಕಲನಾಗಿ ನಿಷ್ಕ್ರಿಯನಾಗಿ ಶಾಂತನಾಗಿ ದೋಷವಿಲ್ಲದವನಾಗಿ ಯಾವದರ ಅಂಟೂ ಇಲ್ಲದವನಾಗಿ, ಅಮೃತಕ್ಕೆ (ಒಯ್ಯುವ) ದೊಡ್ಡ ಸೇತುವೆಯಾಗಿ ಕಟ್ಟಿಗೆಯನ್ನು ಸುಟ್ಟುಹಾಕಿರುವ ಬೆಂಕಿಯಂತಿರುವ" (ಶ್ವೇ. ೬-೧೯), "ಇದಲ್ಲ, ಇದಲ್ಲ" (ಬೃ. ೨-೩-೬), "ಸ್ಥೂಲವಲ್ಲ, ಅಣುವಲ್ಲ" (ಬೃ. ೩-೮-೮) ಮತ್ತು "ಒಂದು ಸ್ಥಾನವು ನ್ಯೂನ(ವಾಗಿರುವದು), ಇನ್ನೊಂದು ಸಂಪೂರ್ಣ(ವಾಗಿರುವದು)" (?) ಎಂದೀ ಪರಿಯಲ್ಲಿ ವಿದ್ಯಾ(ವಿಷಯ), ಅವಿದ್ಯಾವಿಷಯ ಎಂದು ವಿಷಯಭೇದದಿಂದ ಬ್ರಹ್ಮಕ್ಕೆ ಎರಡು ರೂಪಗಳುಂಟೆಂದು ಸಾವಿರಗಟ್ಟಲೆಯ ವಾಕ್ಯಗಳು ತಿಳಿಸುತ್ತವೆ.

ದಿಂದ ಬ್ರಹ್ಮಕ್ಕೆ ಎರಡು ರೂಪಗಳುಂಟೆಂದು[1] ಸಾವಿರಗಟ್ಟಲೆಯ ವಾಕ್ಯಗಳು ತಿಳಿಸುತ್ತವೆ.

(ಭಾಷ್ಯ)

೯೧. ತತ್ರ ಅವಿದ್ಯಾವಸ್ಥಾಯಾಂ ಬ್ರಹ್ಮಣ ಉಪಾಸ್ಯೋಪಾಸಕಾದಿಲಕ್ಷಣಃ ಸರ್ವೋ ವ್ಯವಹಾರಃ । ತತ್ರ ಕಾನಿಚಿದ್ ಬ್ರಹ್ಮಣ ಉಪಾಸನಾನಿ ಅಭ್ಯುದಯಾರ್ಥಾನಿ, ಕಾನಿಚಿತ್ ಕ್ರಮಮುಕ್ತ್ಯರ್ಥಾನಿ, ಕಾನಿಚಿತ್ ಕರ್ಮಸಮೃದ್ಧ್ಯರ್ಥಾನಿ । ತೇಷಾಂ ಗುಣವಿಶೇಷೋಪಾಧಿಭೇದೇನ ಭೇದಃ । ಏಕ ಏವ ತು ಪರಮಾತ್ಮಾ ಈಶ್ವರಃ ತೈಸ್ತೈರ್ಗುಣವಿಶೇಷೈಃ ವಿಶಿಷ್ಟಃ ಉಪಾಸ್ಯೋ ಯದ್ಯಪಿ ಭವತಿ ತಥಾಪಿ ಯಥಾಗುಣೋಪಾಸನಮೇವ ಫಲಾನಿ ಭಿದ್ಯನ್ತೇ । "ತಂ ಯಥಾ ಯಥೋಪಾಸತೇ ತದೇವ ಭವತಿ" (ಶತ. ಬ್ರಾ. ? ) "ಯಥಾಕ್ರತುರಸ್ಮಿಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ" (ಛಾಂ. ೩-೧೪-೧) ಇತಿ ಚ । ಸ್ಮೃತೇಶ್ಚ—"ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್ । ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ॥" (ಗೀ. ೮-೬) ಇತಿ । ಯದ್ಯಪಿ ಏಕ ಆತ್ಮಾ ಸರ್ವಭೂತೇಷು ಸ್ಥಾವರಜಙ್ಗಮೇಷು ಗೂಢಃ, ತಥಾಪಿ ಚಿತ್ತೋಪಾಧಿವಿಶೇಷತಾರತಮ್ಯಾತ್ ಆತ್ಮನಃ ಕೂಟಸ್ಥನಿತ್ಯಸ್ಯ ಏಕರೂಪಸ್ಯಾಪಿ ಉತ್ತರೋತ್ತರಮ್ ಆವಿಷ್ಕೃತಸ್ಯ ತಾರತಮ್ಯಮ್ ಐಶ್ವರ್ಯಶಕ್ತಿವಿಶೇಷೈಃ ಶ್ರೂಯತೇ "ತಸ್ಯ ಯ ಆತ್ಮಾನಮಾವಿಸ್ತರಾಂ ವೇದ" (ಐ. ಆ. ೨-೩-೨-೧) ಇತ್ಯತ್ರ । ಸ್ಮೃತಾವಪಿ "ಯದ್ಯದ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್" (ಗೀ. ೧೦-೪೧) ಇತಿ । ಯತ್ರ ಯತ್ರ ವಿಭೂತ್ಯಾದ್ಯತಿಶಯಃ ಸ ಸ ಈಶ್ವರಃ ಇತ್ಯುಪಾಸ್ಯತಯಾ ಚೋದ್ಯತೇ । ಏವಮ್ ಇಹಾಪಿ ಆದಿತ್ಯಮಣ್ಡಲೇ ಹಿರಣ್ಮಯಃ ಪುರುಷಃ ಸರ್ವಪಾಪ್ಮೋದಯಲಿಙ್ಗಾತ್ ಪರ ಏವ ಇತಿ ವಕ್ಷ್ಯತಿ (೧-೧-೨೦)' ಏವಮ್ "ಆಕಾಶಸ್ತಲ್ಲಿಙ್ಗಾತ್" (೧-೧-೨೨) ಇತ್ಯಾದಿಷು ದ್ರಷ್ಟವ್ಯಮ್ ॥

---

1. ಅವಿದ್ಯಾವಿಷಯವಾದದ್ದು ಸೋಪಾಧಿಕರೂಪ, ವಿದ್ಯಾವಿಷಯವಲ್ಲಿ ನಿರುಪಾಧಿಕ ರೂಪ. ಇವೆರಡೂ ಪರಮಾರ್ಥವೆಂದು ತಿಳಿಯಬಾರದು. ನಿರುಪಾಧಿಕವೇ ಪರಮಾರ್ಥ ಸ್ವರೂಪ. ಸೂ. ಭಾ. ೩-೨-೧೧.

( ಭಾಷ್ಯಾರ್ಥ )

ಇವು(ಗಳ)ಲ್ಲಿ[1] ಬ್ರಹ್ಮಕ್ಕೆ ಉಪಾಸ್ಯ, ಉಪಾಸಕ ಮುಂತಾದ ವ್ಯವಹಾರ ವೆಲ್ಲವೂ ಅವಿದ್ಯಾವಸ್ಥೆಯಲ್ಲಿ[2]. ಅಲ್ಲಿ[3] ಬ್ರಹ್ಮದ ಕೆಲವು ಉಪಾಸನೆಗಳು ಅಭ್ಯುದಯಕ್ಕಾಗಿ[4] (ವಿಹಿತವಾಗಿರುತ್ತವೆ) ; ಕೆಲವು ಕ್ರಮಮುಕ್ತಿಗಾಗಿ[5] (ವಿಹಿತವಾಗಿವೆ) ; ಕೆಲವು ಕರ್ಮದ ಸಮೃದ್ಧಿಗಾಗಿ[6] (ವಿಹಿತವಾಗಿವೆ). ಆಯಾ ಗುಣಗಳೆಂಬ ಉಪಾಧಿಯ ಭೇದದಿಂದ ಆ (ಉಪಾಸನೆಗಳು) ಬೇರೆ ಬೇರೆಯಾಗಿರುವವು.[7] ಪರಮಾತ್ಮನಾದ ಒಬ್ಬ ಈಶ್ವರನೇ ಆಯಾ ಗುಣಗಳಿಂದ ಕೂಡಿ(ದವನೆಂದು) ಉಪಾಸ್ಯನಾಗಿರುತ್ತಾನೆಂಬುದು ನಿಜ; ಆದರೂ ಆಯಾ ಗುಣಗಳ ಉಪಾಸನೆಗೆ ತಕ್ಕಂತೆ ಫಲಗಳು ಬೇರೆಬೇರೆಯಾಗುವವು.[8] "ಆತನನ್ನು ಹೇಗೆಹೇಗೆ ಉಪಾಸನೆಮಾಡುವರೋ ಅದೇ (ಫಲವು) ಆಗುವದು" (ಶ. ಬ್ರಾ. ? ) ಎಂಬ ಶ್ರುತಿಯಿಂದಲೂ "ಮನುಷ್ಯನು ಈ ಲೋಕದಲ್ಲಿ ಯಾವ

---

1. ವಿದ್ಯಾವಿದ್ಯಾವಿಷಯಕವಾದ ರೂಪದ್ವಯದಲ್ಲಿ ಅವಿದ್ಯಾವಿಷಯವಾದದ್ದು ಯಾವ ದೆಂದರೆ ಎಂದರ್ಥ.

2. "ಅವಿದ್ಯಾವಸ್ಥೆ" ಎಂಬುದು ಬ್ರಹ್ಮದ ಒಂದು ಅವಸ್ಥೆಯೆಂದು ಭಾವಿಸಬಾರದು. ಅವಿದ್ಯಾದೃಷ್ಟಿಯಿಂದ ನೋಡಿದರೆ ಉಪಾಸ್ಯೋಪಾಸಕವ್ಯವಹಾರವಿರುತ್ತದೆ. ಪರಮಾರ್ಥವಾಗಿ ಬ್ರಹ್ಮವು ಉಪಾಸನೆಗೆ ವಿಷಯವಲ್ಲ ಎಂದು ಅಭಿಪ್ರಾಯ. ಕೇ. ಭಾ. ೧-೫ ನೋಡಿ.

3. ಅವಿದ್ಯಾವಿಷಯವಾಗಿ ಒಪ್ಪಿರುವ ಉಪಾಸನೆಗಳಲ್ಲಿ.

4. ಎಲ್ಲೆಂದರೆ ಅಲ್ಲಿ ಸಂಚರಿಸುವದು, ಇಷ್ಟವಾದದ್ದು ಸಂಕಲ್ಪಮಾತ್ರದಿಂದ ಎದುರಿಗೆ ಬಂದು ನಿಲ್ಲುವದು—ಮುಂತಾದದ್ದು ಅಭ್ಯುದಯಫಲವು.

5. ಉಪಾಸನೆಯ ಬಲದಿಂದ ಬ್ರಹ್ಮಲೋಕವನ್ನು ಪಡೆದುಕೊಂಡವರಿಗೆ ಜ್ಞಾನಪ್ರಾಪ್ತಿ ಕ್ರಮದಿಂದ ಮುಕ್ತಿಯಾಗುವದು. ೪-೩-೧೦ ರ ಭಾಷ್ಯವನ್ನು ನೋಡಿ.

6. ಉದ್ಗೀಥಧ್ಯಾನವೇ ಮುಂತಾದ ಉಪಾಸನೆಗಳು ಆಯಾ ಕರ್ಮವು ಸಮೃದ್ಧಿ ಯಾಗುವದಕ್ಕೆ ಕಾರಣವಾಗಿರುತ್ತವೆ. ಉಪಾಸನೆಯೂ ಕರ್ಮದಂತೆ ವಿಧಿಗೆ ವಿಷಯವಾಗಿದ್ದರೂ ಜ್ಞಾನದಂತೆ ಮಾನಸವೃತ್ತಿರೂಪವಾಗಿರುವದರಿಂದಲೂ ಜ್ಞಾನಕ್ಕೆ ಉಪಕಾರಕವಾಗಿರುವದರಿಂದಲೂ ಇವನ್ನು ಜ್ಞಾನಕಾಂಡದಲ್ಲಿಯೇ ವಿಧಿಸಿರುತ್ತದೆ. ಛಾ.ಂ ಭಾ. ದ ಅವತರಣಿಕೆಯನ್ನು ನೋಡಿ.

7. ಬ್ರಹ್ಮಸ್ವರೂಪವು ಸ್ವತಃ ಒಂದೇ ಆದರೂ ಗುಣವಿಶಿಷ್ಟರೂಪದಿಂದ ಬೇರೆಬೇರೆ ಯಾಗಿರುತ್ತದೆ ಎಂದೇ ಉಪಾಸಕನು ಭಾವಿಸುತ್ತಾನೆ.

8. ಗುಣವಿಶಿಷ್ಟವಾದ ಉಪಾಸ್ಯರೂಪವು ಬೇರೆಬೇರೆಯಾಗಿರುವಂತೆ ಉಪಾಸನೆಯ ಫಲ ಗಳೂ ಬೇರೆಬೇರೆಯಾಗಿರುವವು.

ಬಗೆಯ ನಿಶ್ಚಯವುಳ್ಳವನಾಗಿರುವನೋ ಈ (ದೇಹವನ್ನು ಬಿಟ್ಟು) ಹೊರಟು ಹೋದಬಳಿಕ ಹಾಗೆಯೇ ಆಗುವನು'' ಎಂಬ (ಶ್ರುತಿಯಿಂದಲೂ) '' ಕೌಂತೇಯನೆ, ಯಾವಾಗಲೂ ಆ ಭಾವದ ಭಾವನೆಯಿಂದ ಕೂಡಿದವನಾಗಿ ಯಾವ ಯಾವ ಭಾವವನ್ನು ಸ್ಮರಿಸಿಕೊಂಡು ಕೊನೆಯಲ್ಲಿ ಶರೀರವನ್ನು ಬಿಡುವನೋ, ಆಯಾ (ಭಾವ)ವನ್ನೇ ಸೇರುವನು" (ಗೀ. ೮-೬) ಎಂಬ ಸ್ಮೃತಿಯಿಂದಲೂ (ಇದು ಸಿದ್ಧವಾಗುವದು).

ಒಬ್ಬ ಆತ್ಮನೇ ಸ್ಥಾವರಜಂಗಮ(ರೂಪವಾದ) ಸಕಲಪ್ರಾಣಿಗಳಲ್ಲಿಯೂ ಹುದುಗಿಕೊಂಡಿರುವನೆಂಬುದು ನಿಜ[1] ; ಆದರೂ ಚಿತ್ತವೆಂಬ ಉಪಾಧಿವಿಶೇಷದ ತಾರತಮ್ಯದಿಂದ[2] ಕೂಟಸ್ಥನಿತ್ಯನಾದ ಆತ್ಮನು ಒಂದೇ ರೂಪದಲ್ಲಿದ್ದರೂ ಹೆಚ್ಚು ಹೆಚ್ಚಾಗಿ ಪ್ರಕಟನಾಗಿ ಬೇರೆಬೇರೆಯ ಈಶ್ವರಶಕ್ತಿಗಳಿಂದ ಹೆಚ್ಚುಕಡಿಮೆಯಾಗಿರುವನೆಂದು " ಆತನ ಆತ್ಮನನ್ನು ಯಾವನು ಅತಿಶಯದಿಂದ ಪ್ರಕಟವಾಗಿರುವದನ್ನು ಉಪಾಸನೆಮಾಡುವನೋ (ಅವನು ಹೆಚ್ಚಿನ ಪ್ರಾಕಟ್ಯವನ್ನು ಹೊಂದುವನು" ಐ. ಆ. ೨-೩-೨-೧) ಎಂಬ (ಶ್ರುತಿ)ಯಲ್ಲಿರುತ್ತದೆ.[3] ಸ್ಮೃತಿಯಲ್ಲಿಯೂ ''ಯಾವ ಯಾವ ವಸ್ತು ವಿಭೂತಿಯುಳ್ಳದ್ದೋ ಶ್ರೀಯುತವಾದದ್ದೋ ಊರ್ಜಿತವಾಗಿರುವದೋ ಅದನ್ನೇ ನನ್ನ ತೇಜಸ್ಸಿನ ಅಂಶದಿಂದ ಉಂಟಾಗಿರುವದೆಂದು ತಿಳಿ (ಗೀ. ೧೦-೪೧) ಎಂದು ಎಲ್ಲೆಲ್ಲಿ ವಿಭೂತಿಯೇ ಮುಂತಾದವು ಹೆಚ್ಚಾಗಿರುವವೋ ಅದದನ್ನು ಈಶ್ವರನೆಂದು ಉಪಾಸನೆಮಾಡಬೇಕೆಂದು ವಿಧಿಸಿರುತ್ತದೆ. ಇದರಂತೆ ಇಲ್ಲಿಯೂ ಆದಿತ್ಯಮಂಡಲದಲ್ಲಿರುವ ಹಿರಣ್ಮಯಪುರುಷ(ನೆಂದು ಶ್ರುತಿಯಲ್ಲಿ ಹೇಳಿರುವ) ಪುರುಷನು ಪರಮಾತ್ಮನೇ, ಏಕೆಂದರೆ ಯಾವ ಪಾಪದ ಸಂಬಂಧವೂ ಇಲ್ಲದಿರುವಿಕೆ ಎಂಬ (ಬ್ರಹ್ಮದ) ಗುರುತು (ಶ್ರುತಿಯಲ್ಲಿದೆ) ಎಂದು ಮುಂದೆ (೧-೧-೨೦ರಲ್ಲಿ) ಹೇಳಿರುತ್ತಾರೆ. ಹೀಗೆಯೇ " ಆಕಾಶಸ್ತಲ್ಲಿಙ್ಗಾತ್'' (ಆಕಾಶವು ಏಕೆಂದರೆ ಆ ಬ್ರಹ್ಮದ ಗುರುತನ್ನು ಹೇಳಿದೆ) ಎಂಬುದೇ (೧-೧-೨೨) ಮುಂತಾದ ಸೂತ್ರಗಳಲ್ಲಿಯೂ (ಉಪಾಸ್ಯಬ್ರಹ್ಮವನ್ನು ಹೇಳಿರುತ್ತದೆ) ಎಂದು ತಿಳಿಯಬೇಕು.

---

1. ಶ್ವೇ. ೬-೧೧ರ ಸೂಚನೆ.

2. ಚಿತ್ತನೈರ್ಮಲ್ಯವು ಹೆಚ್ಚುಕಡಿಮೆಯಾಗಿರುವದಕ್ಕೆ ಅನುಗುಣವಾಗಿಯೇ ಆತ್ಮನ ಪ್ರಾಕಟ್ಯದ ತಾರತಮ್ಯವೂ ಇರುತ್ತದೆ.

3. ಇಲ್ಲಿ ಹೇಳಿರುವ ವಾಕ್ಯವು ಐತರೇಯದ ಎರಡನೆಯ ಆರಣ್ಯಕದ ಮೂರನೆಯ ಅಧ್ಯಾಯದ ಎರಡನೆಯ ಖಂಡದಲ್ಲಿದೆ. ಉಕ್ಥಪುರುಷನ ಆತ್ಮನು ಅತಿಶಯವಾಗಿ ಪ್ರಕಟವಾಗಿರುವದನ್ನು ಉಪಾಸನೆಮಾಡಬೇಕೆಂದು ತಿಳಿಸುವದಕ್ಕೆ ಬಂದಿರುವ ಈ ವಾಕ್ಯದ ಮುಂದೆ ಮರಗಿಡಗಳು, ಪ್ರಾಣಿಗಳು, ಮನುಷ್ಯ-ಇವರಲ್ಲಿ ಮುಂದುಮುಂದಕ್ಕೆ ಹೋದಹಾಗೆಲ್ಲ ಆತ್ಮನು ಹೆಚ್ಚು ಪ್ರಕಟವಾಗಿರುತ್ತಾನೆ ; ಮನುಷ್ಯನಲ್ಲಿ ಅತ್ಯಂತ ಪ್ರಕಟವಾಗಿರುತ್ತಾನೆ ಎಂದು ಹೇಳಿದೆ.

( ಭಾಷ್ಯ )

೯೨. ಏವಂ ಸದ್ಯೋಮುಕ್ತಿಕಾರಣಮಪಿ ಆತ್ಮಜ್ಞಾನಮ್ ಉಪಾಧಿವಿಶೇಷ ದ್ವಾರೇಣ ಉಪದಿಶ್ಯಮಾನಮಪಿ ಅವಿವಕ್ಷಿತೋಪಾಧಿಸಂಬನ್ಧವಿಶೇಷಂ ಪರಾ ಪರವಿಷಯತ್ವೇನ ಸನ್ದಿಹ್ಯಮಾನಂ ವಾಕ್ಯಗತಿಪರ್ಯಾಲೋಚನಯಾ ನಿರ್ಣೇತವ್ಯಂ ಭವತಿ । ಯಥಾ ಇಹೈವ ತಾವತ್ "ಆನನ್ದಮಯೋಽಭ್ಯಾಸಾತ್" (೧-೧-೧೨) ಇತಿ ॥

(ಭಾಷ್ಯಾರ್ಥ)

ಹೀಗೆಯೇ **ಸದ್ಯೋಮುಕ್ತಿಗೆ**[1] **ಕಾರಣವಾಗಿರುವ ಆತ್ಮಜ್ಞಾನವನ್ನೂ** (ಆಯಾ) ಉಪಾಧಿಗಳ ಮೂಲಕ (ಅಲ್ಲಲ್ಲಿ) ಉಪದೇಶಮಾಡಿರುತ್ತದೆಯಾದರೂ ಆಯಾ ಉಪಾಧಿಯ ಸಂಬಂಧವು (ಇರುವದೆಂದು) ಹೇಳುವ (ಅಭಿಪ್ರಾಯ ವೇನೂ) ಇಲ್ಲದಿರುವದರಿಂದ (ಅಂಥ ಕಡೆಗಳಲ್ಲಿ ವಾಕ್ಯವು) ಪರ(ಬ್ರಹ್ಮವಿಷಯ ವೊ), ಅಪರಬ್ರಹ್ಮವಿಷಯವೊ? ಎಂಬ ಸಂದೇಹವುಂಟಾಗಲು ವಾಕ್ಯದ ತಾತ್ಪರ್ಯವನ್ನು ಚೆನ್ನಾಗಿ ಆಲೋಚಿಸಿ (ಅದು ಪರಬ್ರಹ್ಮವಿಷಯವೇ ಎಂದು) ನಿಶ್ಚಯಿಸಬೇಕಾಗುತ್ತದೆ. ಉದಾಹರಣೆಗೆ ಮೊದಲು "ಆನನ್ದಮಯೋಽಭ್ಯಾಸಾತ್" ಎಂಬ ಈ (ಮುಂದಿನ ಸೂತ್ರ) ದಲ್ಲಿಯೇ (ಇಂಥ ಪ್ರಸಂಗವು ಬಂದಿರುತ್ತದೆ).

(ಭಾಷ್ಯ)

೯೩. ಏವಮ್ ಏಕಮಪಿ ಬ್ರಹ್ಮ ಅಪೇಕ್ಷಿತೋಪಾಧಿಸಂಬನ್ಧಂ ನಿರಸ್ತೋಪಾಧಿಸಂಬನ್ಧಂ ಚ ಉಪಾಸ್ಯತ್ವೇನ ಜ್ಞೇಯತ್ವೇನ ಚ ವೇದಾನ್ತೇಷು ಉಪದಿಶ್ಯತೇ ಇತಿ ಪ್ರದರ್ಶಯಿತುಂ ಪರೋ ಗ್ರನ್ಥಃ ಆರಭ್ಯತೇ । ಯಚ್ಚ "ಗತಿಸಾಮಾನ್ಯಾತ್" (೧-೧-೧೦) ಇತಿ ಅಚೇತನಕಾರಣನಿರಾಕರಣಮ್ ಉಕ್ತಮ್, ತದಪಿ ವಾಕ್ಯಾನ್ತರಾಣಿ ಬ್ರಹ್ಮವಿಷಯಾಣಿ ವ್ಯಾಚಕ್ಷಾಣೇನ ಬ್ರಹ್ಮವಿಪರೀತಕಾರಣ ನಿಷೇಧೇನ ಪ್ರಪಞ್ಚ್ಯತೇ ॥

(ಭಾಷ್ಯಾರ್ಥ)

**ಹೀಗೆ ಒಂದೇ ಬ್ರಹ್ಮವೇ ಉಪಾಧಿಸಂಬಂಧವನ್ನು ಬಯಸುವ ದಾಗಿಯೂ (ಯಾವ) ಉಪಾಧಿಯ ಸಂಬಂಧವೂ ಇಲ್ಲದ್ದಾಗಿಯೂ, ಉಪಾಸ್ಯವೆಂದೂ ಜ್ಞೇಯವೆಂದೂ**[2] **ವೇದಾಂತಗಳಲ್ಲಿ ಉಪದಿಷ್ಟವಾಗಿರು**

---

1. ಜ್ಞಾನಸಮಕಾಲದಲ್ಲಿ ಆಗುವ ಮುಕ್ತಿಗೆ **ಸದ್ಯೋಮುಕ್ತಿ** ಎಂದು ಹೆಸರು. ಈ ಮುಕ್ತಿಯ ವಿಷಯದಲ್ಲಿ ವ್ಯಾಖ್ಯಾನಕಾರರ ಅಭಿಪ್ರಾಯವನ್ನು **ಟೀಕೆಯಲ್ಲಿ** ಚರ್ಚಿಸಿದೆ.

2. ಸೋಪಾಧಿಕಬ್ರಹ್ಮವು ಉಪಾಸ್ಯವು, ನಿರುಪಾಧಿಕಬ್ರಹ್ಮವು ಜ್ಞೇಯ–ಎಂದು.

**ತ್ತದೆ ಎಂದು ತೋರಿಸಿಕೊಡುವದಕ್ಕೆ ಮುಂದಿನ ಗ್ರಂಥವನ್ನು ಪ್ರಾರಂಭಿಸಿರುತ್ತದೆ.** ಮತ್ತು "ಗತಿಸಾಮಾನ್ಯಾತ್" (೧-೧-೧೦) ಎಂಬ (ಸೂತ್ರದಲ್ಲಿ) ಅಚೇತನಕಾರಣವನ್ನು ನಿರಾಕರಿಸಿ ಹೇಳಿತ್ತಷ್ಟೆ ; (ಮುಂದೆ ಹೇಳುವ) ಬೇರೆಯ ವಾಕ್ಯಗಳೂ ಬ್ರಹ್ಮವಿಷಯಕವೇ ಎಂದು ವ್ಯಾಖ್ಯಾನಮಾಡಿ ಬ್ರಹ್ಮವಲ್ಲದ್ದು ಕಾರಣವಲ್ಲ ಎಂದು ಹೇಳುವ ಮೂಲಕ ಅದನ್ನೂ ವಿವರಿಸಲಾಗುತ್ತದೆ.

## ೬. ಆನಂದಮಯಾಧಿಕರಣ (ಸೂ. ೧೨-೧೯)

(ವೃತ್ತಿಕಾರರ ಮತ : ತೈತ್ತಿರೀಯದ ಆನಂದಮಯವು ಬ್ರಹ್ಮವೇ)

ಆನನ್ದಮಯೋಽಭ್ಯಾಸಾತ್ ॥ ೧೨ ॥

೧೨. ಆನಂದಮಯನು ಬ್ರಹ್ಮವೇ, ಏಕೆಂದರೆ (ಆನಂದ ಶಬ್ದದ) ಅಭ್ಯಾಸವಿದೆ.

## ವಿಷಯವೂ ಸಂಶಯವೂ

( ಭಾಷ್ಯ )

೯೪. ತೈತ್ತಿರೀಯಕೇ ಅನ್ನಮಯಂ ಪ್ರಾಣಮಯಂ ಮನೋಮಯಂ ವಿಜ್ಞಾನಮಯಂ ಚ ಅನುಕ್ರಮ್ಯ ಆಮ್ನಾಯತೇ "ತಸ್ಮಾದ್ ವಾ ಏತಸ್ಮಾದ್ ವಿಜ್ಞಾನಮಯಾತ್ । ಅನ್ಯೋಽನ್ತರ ಆತ್ಮಾನನ್ದಮಯಃ (ತೈ. ೨-೫) ಇತಿ । ತತ್ರ ಸಂಶಯಃ । ಕಿಮಿಹ ಆನನ್ದಮಯಶಬ್ದೇನ ಪರಮೇವ ಬ್ರಹ್ಮ ಉಚ್ಯತೇ ಯತ್ ಪ್ರಕೃತಮ್ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತಿ, ಕಿಂ ವಾ ಅನ್ನಮಯಾದಿವದ್ ಬ್ರಹ್ಮಣೋಽರ್ಥಾನ್ತರಮ್ ಇತಿ ?

( ಭಾಷ್ಯಾರ್ಥ )

**ತೈತ್ತಿರೀಯಕದಲ್ಲಿ** ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ-(ಇವರುಗಳನ್ನು) ಒಬ್ಬರಾಗುತ್ತಲೊಬ್ಬರನ್ನು ಹೇಳಿ "ಆ ಈ ವಿಜ್ಞಾನಮಯನಿದಾನಲ್ಲ, ಇವನಿಗಿಂತ ಇನ್ನೊಬ್ಬ ಆನಂದಮಯನಾದ ಒಳಗಿನ ಆತ್ಮ (ನಿರುವನು)" (ತೈ. ೨-೫) ಎಂದು ಹೇಳಿರುತ್ತದೆ. ಅದರ (ವಿಷಯ)ದಲ್ಲಿ ಸಂಶಯ(ವೇನೆಂದರೆ) : ಇಲ್ಲಿ 'ಆನಂದಮಯ' ಎಂಬ ಶಬ್ದದಿಂದ "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮ" (ತೈ. ೨-೧) ಎಂದು ಪ್ರಕೃತವಾಗಿದೆಯಲ್ಲ,

(ಆ) ಪರಬ್ರಹ್ಮವನ್ನೇ ಹೇಳಿದೆಯೆ, ಅಥವಾ ಅನ್ನಮಯಾದಿಗಳಂತೆ ಬ್ರಹ್ಮಕ್ಕಿಂತ ಬೇರೆಯ ವಸ್ತುವನ್ನು (ಹೇಳಿದೆಯೆ) ?[1]

(ಭಾಷ್ಯ)

೯೫. ಕಿಂ ತಾವತ್ ಪ್ರಾಪ್ತಮ್ ? ಬ್ರಹ್ಮಣೋಽರ್ಥಾನ್ತರಮ್ ಅಮುಖ್ಯ ಆತ್ಮಾ ಆನನ್ದಮಯಃ ಸ್ಯಾತ್ । ಕಸ್ಮಾತ್ ? ಅನ್ನಮಯಾದ್ಯಮುಖ್ಯಾತ್ಮಪ್ರವಾಹಪತಿತತ್ವಾತ್ । ಅಥಾಪಿ ಸ್ಯಾತ್ ಸರ್ವಾನ್ತರತ್ವಾತ್ ಆನನ್ದಮಯೋ ಮುಖ್ಯ ಏವ ಆತ್ಮಾ ಇತಿ । ನ ಸ್ಯಾತ್ । ಪ್ರಿಯಾದ್ಯವಯವಯೋಗಾತ್, ಶಾರೀರತ್ವಶ್ರವಣಾಚ್ಚ । ಮುಖ್ಯಶ್ಚೇತ್ ಆತ್ಮಾ ಆನನ್ದಮಯಃ ಸ್ಯಾತ್, ನ ಪ್ರಿಯಾದಿಸಂಸ್ಪರ್ಶಃ ಸ್ಯಾತ್ । ಇಹ ತು "ತಸ್ಯ ಪ್ರಿಯಮೇವ ಶಿರಃ" ಇತ್ಯಾದಿ ಶ್ರೂಯತೇ । ಶಾರೀರತ್ವಂ ಚ ಶ್ರೂಯತೇ "ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ" (ತೈ. ೨-೬) ಇತಿ । ತಸ್ಯ ಪೂರ್ವಸ್ಯ ವಿಜ್ಞಾನಮಯಸ್ಯ ಏಷ ಏವ ಶಾರೀರ ಆತ್ಮಾ ಯ ಏಷ ಆನನ್ದಮಯಃ ಇತ್ಯರ್ಥಃ । ನ ಚ ಸಶರೀರಸ್ಯ ಸತಃ ಪ್ರಿಯಾಪ್ರಿಯಸಂಸ್ಪರ್ಶೋ ವಾರಯಿತುಂ ಶಕ್ಯಃ । ತಸ್ಮಾತ್ ಸಂಸಾರ್ಯೇವ ಆನನ್ದಮಯ ಆತ್ಮಾ ಇತಿ ॥

(ಭಾಷ್ಯಾರ್ಥ)

(ಇಲ್ಲಿ) ಮೊದಲು ಬಂದೊದಗುವ (ಅಭಿಪ್ರಾಯ) ವೇನೆಂದರೆ, ಆನಂದಮಯನೆಂದರೆ ಬ್ರಹ್ಮಕ್ಕಿಂತ ಬೇರೆಯಾದ ವಸ್ತುವೇ, ಅಮುಖ್ಯನಾದ ಆತ್ಮನೇ ಆಗಿರಬೇಕು. ಏಕೆ? ಎಂದರೆ, ಅನ್ನಮಯನೇ ಮುಂತಾದ ಅಮುಖ್ಯಾತ್ಮರ ಪ್ರವಾಹದಲ್ಲಿ (ಈ ಆನಂದಮಯಾತ್ಮನೂ) ಸೇರಿರುವದರಿಂದ.[2] ಎಲ್ಲಕ್ಕೂ ಒಳಗಿ

---

1. ತೈತ್ತಿರೀಯದ ಎರಡನೆಯ ವಲ್ಲಿಗೆ **ಆನಂದವಲ್ಲಿ** ಎಂದು ಹೆಸರು. ಅದರಲ್ಲಿ ಬ್ರಹ್ಮದಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಅಪ್ಪು, ಅಪ್ಪಿನಿಂದ ಪೃಥಿವಿ, ಪೃಥಿವಿಯಿಂದ ಗಿಡಮರಗಳು, ಗಿಡಮರಗಳಿಂದ ಅನ್ನ, ಅನ್ನದಿಂದ ಮನುಷ್ಯ-ಹೀಗೆ ಉಂಟಾಗಿರುವನೆಂದು ಹೇಳಿ ಈ ಮನುಷ್ಯನು ಅನ್ನರಸಮಯನು, ಇವನೊಳಗೆ ಪ್ರಾಣಮಯ, ಇನ್ನೂ ಒಳಗೆ ಮನೋಮಯ, ಅವನೊಳಗೆ ವಿಜ್ಞಾನಮಯ, ಅವನೊಳಗೆ ಆನಂದಮಯ-ಹೀಗೆ ಒಂದರೊಳಗೊಂದು ತುಂಬಿರುವ ಆತ್ಮರ ವರ್ಣನೆಯಿದೆ. ತೈತ್ತಿರೀಯದ ೨-೧ರಿಂದ ೫ನೆಯ ಅನುವಾಕಗಳನ್ನು ನೋಡಿ. ಇಲ್ಲಿ ಆನಂದಮಯನ ವಿಷಯದ ಚರ್ಚೆ ನಡೆದಿದೆ.

2. ಅಮುಖ್ಯಾತ್ಮರ ಸನ್ನಿಧಿಯಲ್ಲಿ ಹೇಳಿರುವ ಆನಂದಮಯನೂ ಅಮುಖ್ಯನೇ ಎಂದರ್ಥ. ಹಿಂದಿನ ಅಧಿಕರಣದಲ್ಲಿ ಚೇತನನಾದ ಶ್ವೇತಕೇತುವಿನ ಸನ್ನಿಧಿಯಿಂದ ಸಚ್ಛಬ್ದವಾಚ್ಯವು ಚೇತನವು ಎಂದು ನಿಶ್ಚಯಿಸಿತ್ತಷ್ಟೆ ; ಹಾಗೆಯೇ ಇಲ್ಲಿ ಸನ್ನಿಧಿಯಿಂದ ಆನಂದಮಯನು ಅಮುಖ್ಯನೆಂದು ಏಕೆ ನಿಶ್ಚಯಿಸಬಾರದು ?-ಎಂದು ಪೂರ್ವಪಕ್ಷಿಯ ಭಾವ.

ನವನಾಗಿರುವದರಿಂದ[1] ಆನಂದಮಯನು ಮುಖ್ಯನಾದ ಆತ್ಮನೇ ಎಂದು (ನಿಮ್ಮ ಅಭಿಪ್ರಾಯವು) ಇದ್ದರೂ ಇರಬಹುದು. (ಆದರೆ ಹಾ) ಗಾಗಲಾರದು; ಏಕೆಂದರೆ (ಇವನಿಗೆ) ಪ್ರಿಯವೇ ಮುಂತಾದ ಅವಯವಗಳ ಸಂಬಂಧವಿದೆ; (ಇವನು) ಶಾರೀರನೆಂದು ಶ್ರುತಿಯಲ್ಲಿ (ಹೇಳಿಯೂ) ಇದೆ. ಆನಂದಮಯನು ಮುಖ್ಯಾತ್ಮನಾದರೆ ಪ್ರಿಯಾದಿಗಳ ಸೋಂಕು[2] ಉಂಟಾಗಲಾರದು; ಆದರೆ ಇಲ್ಲಿ "ಅವನಿಗೆ ಪ್ರಿಯವೇ ತಲೆ" (ತೈ. ೨-೫) ಎಂದು ಮುಂತಾಗಿ ಶ್ರುತಿಯಲ್ಲಿದೆ. ಮತ್ತು "ಆ ಹಿಂದಿನವನಿಗೆ ಇವನೇ ಶಾರೀರನಾದ ಆತ್ಮನು" (ತೈ. ೨-೬) ಎಂದು ಶಾರೀರತ್ವವನ್ನೂ ಶ್ರುತಿಯಲ್ಲಿ ಹೇಳಿದೆ. ಆ ಹಿಂದಿನ ವಿಜ್ಞಾನಮಯನಿಗೆ ಈತನೇ-ಈ ಆನಂದಮಯನಿದಾನಲ್ಲ, ಇವನೇ-ಶಾರೀರ ಆತ್ಮನು[3] ಎಂದು ಶ್ರುತಿ ವಾಕ್ಯದ) ಅರ್ಥ. ಸಶರೀರನಾಗಿರುವವನಿಗೆ ಪ್ರಿಯಾಪ್ರಿಯಗಳ ಸೋಂಕನ್ನು ತಪ್ಪಿಸಿಕೊಳ್ಳುವದಕ್ಕೆ ಆಗಲಾರದು.[4] ಆದ್ದರಿಂದ ಆನಂದಮಯನೆಂಬ ಆತ್ಮನು ಸಂಸಾರಿಯೇ-

## ಸಿದ್ಧಾಂತ: ಆನಂದಶಬ್ದಾಭ್ಯಾಸವಿರುವದರಿಂದ ಆನಂದಮಯನು ಪರಮಾತ್ಮನು

(ಭಾಷ್ಯ)

೯೬. ಏವಂ ಪ್ರಾಪ್ತೇ ಇದಮ್ ಉಚ್ಯತೇ - "ಆನನ್ದಮಯೋಽಭ್ಯಾಸಾತ್" । ಪರ ಏವ ಆತ್ಮಾ ಆನನ್ದಮಯೋ ಭವಿತುಮರ್ಹತಿ । ಕುತಃ? ಅಭ್ಯಾಸಾತ್ । ಪರಸ್ಮಿನ್ನೇವ ಹಿ ಆತ್ಮನಿ ಆನನ್ದಶಬ್ದೋ ಬಹುಕೃತ್ವಃ ಅಭ್ಯಸ್ಯತೇ । ಆನನ್ದಮಯಂ ಪ್ರಸ್ತುತ್ಯ "ರಸೋ ವೈ ಸಃ" ಇತಿ ತಸ್ಯೈವ ರಸತ್ವಮ್ ಉಕ್ತ್ವಾ ಉಚ್ಯತೇ—"ರಸಗ್ಂ ಹ್ಯೇವಾಯಂ ಲಬ್ಧ್ವಾನನ್ದೀ ಭವತಿ (ತೈ. ೨-೭) ಇತಿ । "ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನನ್ದೋ ನ ಸ್ಯಾತ್ । ಏಷ ಹ್ಯೇವಾನನ್ದಯಾತಿ" (ತೈ. ೨-೭). "ಸೈಷಾನನ್ದಸ್ಯ ಮೀಮಾಗ್ಂಸಾ ಭವತಿ" (ತೈ. ೨-೮), "ಏತಮಾನನ್ದಮಯಮಾತ್ಮಾನಮುಪಸಂಕ್ರಾಮತಿ" (ತೈ. ೨-೮). "ಆನನ್ದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚ-

---

1. ಅನ್ನಮಯಾದಿಗಳಿಗಿಂತ ಇನ್ನೊಬ್ಬ ಒಳಗಿನ ಆತ್ಮನಿರುವನೆಂದು ಶ್ರುತಿಯಲ್ಲಿ ಹೇಳಿರುವಂತೆ ಆನಂದಮಯನಿಗಿಂತ ಒಳಗೆ ಬೇರೊಬ್ಬ ಆತ್ಮನಿರುವನೆಂದು ಹೇಳಿಲ್ಲ.

2. ಛಾಂ. ೮-೧೨-೧ರ ಸೂಚನೆ.

3. ವಿಜ್ಞಾನಮಯರೂಪವಾದ ಶರೀರವುಳ್ಳವನು ಆನಂದಮಯನು ಎಂದು ಶ್ರುತಿಗೆ ಪೂರ್ವಪಕ್ಷಿಯ ಅರ್ಥ.

4. ಛಾಂ. ೮-೧೨-೧ರ ಸೂಚನೆ.

ನೇತಿ'' (ತೈ. ೨-೯). "ಆನನ್ದೋ ಬ್ರಹ್ಮೇತಿ ವ್ಯಜಾನಾತ್'' (ತೈ. ೩-೬) ಇತಿ ಚ । ಶ್ರುತ್ಯನ್ತರೇ ಚ "ವಿಜ್ಞಾನಮಾನನ್ದಂ ಬ್ರಹ್ಮ'' ಬೃ. (೩-೯-೨೮) ಇತಿ ಬ್ರಹ್ಮಣ್ಯೇವ ಆನನ್ದಶಬ್ದೋ ದೃಷ್ಟಃ। ಏವಮ್ ಅನನ್ದಶಬ್ದಸ್ಯ ಬಹುಕೃತ್ವೋ ಬ್ರಹ್ಮಣಿ ಅಭ್ಯಾಸಾತ್ ಆನನ್ದಮಯ ಆತ್ಮಾ ಬ್ರಹ್ಮ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಹೀಗೆ (ಂಬ ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) ಈ ಉತ್ತರವನ್ನು ಹೇಳುತ್ತಾರೆ: "ಆನಂದಮಯವು (ಬ್ರಹ್ಮವೇ), ಏಕೆಂದರೆ ಅಭ್ಯಾಸವಿದೆ.'' (ಈ ಸೂತ್ರದ ಅಭಿಪ್ರಾಯವೇನೆಂದರೆ) ಆನಂದಮಯನು ಪರಮಾತ್ಮನೇ ಆಗಿರಬೇಕು; ಏಕೆಂದರೆ, ಅಭ್ಯಾಸವಿರುವವರಿಂದ ಪರಮಾತ್ಮನ (ವಿಷಯದ) ಲ್ಲಿಯೇ ಅಲ್ಲವೆ, ಆನಂದಶಬ್ದವನ್ನು ಬಹಳಸಲ (ಮತ್ತೆ ಮತ್ತೆ) ಹೇಳಿರುತ್ತದೆ? (ಹೇಗೆಂದರೆ), ಆನಂದಮಯನನ್ನು (ವರ್ಣಿಸುವದಕ್ಕೆ) ಪ್ರಾರಂಭಿಸಿ "ಅವನು ರಸವೇ'' (ತೈ. ೨-೭) ಎಂದು ಆ (ಆನಂದಮಯನನ್ನೇ) ರಸವೆಂದು ಕರೆದು "ರಸವನ್ನೇ ಪಡೆದಲ್ಲವೆ, ಈ (ಜೀವನು) ಆನಂದಿಯಾಗುತ್ತಾನೆ?" (ತೈ. ೨-೭) ಎಂದೂ "ಆಕಾಶದಲ್ಲಿ ಈ ಆನಂದವು ಇಲ್ಲದಿದ್ದರೆ ಯಾರುತಾನೆ ಅಪಾನ(ವೃತ್ತಿಯ) ವ್ಯಾಪಾರವನ್ನು ಮಾಡಿಯಾರು? ಯಾರು ಪ್ರಾಣ (ವೃತ್ತಿಯ) ವ್ಯಾಪಾರವನ್ನು ಮಾಡಿಯಾರು? ಇದೇ ಅಲ್ಲವೆ, ಅನಂದಗೊಳಿಸುವದು? (ತೈ. ೨-೭), "ಆ ಇದು ಅನಂದದ ಮೀಮಾಂಸೆಯಾಗಿರುತ್ತದೆ'' (ತೈ. ೨-೮), "ಈ ಆನಂದಮಯ ಆತ್ಮನನ್ನು ಸೇರಿಕೊಳ್ಳುತ್ತಾನೆ'' (ತೈ. ೨-೮) ಬ್ರಹ್ಮದ ಆನಂದವನ್ನು ಅರಿತುಕೊಂಡವನು ಏತಕ್ಕೂ ಹೆದರುವದಿಲ್ಲ'' (ತೈ.೨-೯) "ಆನಂದವು ಬ್ರಹ್ಮವೆಂದು ಅರಿತುಕೊಂಡನು'' (ತೈ. ೩-೬) ಎಂದೂ (ಹೇಳಿರುತ್ತದೆ.). ಬೇರೆ ಒಂದು ಶ್ರುತಿಯಲ್ಲಿ "ವಿಜ್ಞಾನವೂ ಆನಂದವೂ (ಆಗಿರುವದು) ಬ್ರಹ್ಮವು" (ಬೃ. ೩-೯-೨೦) ಎಂದು ಬ್ರಹ್ಮದಲ್ಲಿಯೇ ಆನಂದಶಬ್ದವನ್ನು (ಪ್ರಯೋಗಮಾಡಿರುವದು) ಕಂಡುಬರುತ್ತದೆ. ಹೀಗೆ ಆನಂದಶಬ್ದವನ್ನು ಬಹಳಸಲ ಬ್ರಹ್ಮದಲ್ಲಿ ಮತ್ತೆಮತ್ತೆ ಹೇಳಿರುವದರಿಂದ ಆನಂದಮಯಾತ್ಮನು ಬ್ರಹ್ಮವೇ ಎಂದು ನಿಶ್ಚಯವಾಗುತ್ತದೆ.

## ಸರ್ವಾಂತರನಾಗಿರುವದರಿಂದ ಆನಂದಮಯನು ಪರಮಾತ್ಮನು

(ಭಾಷ್ಯ)

೯೭. ಯತ್ತು ಉಕ್ತಮ್ ಅನ್ನಮಯಾದ್ಯಮುಖ್ಯಾತ್ಮಪ್ರವಾಹಪತಿತತ್ವಾತ್ ಆನನ್ದಮಯಸ್ಯಾಪಿ ಅಮುಖ್ಯತ್ವಮ್ ಇತಿ । ನಾಸೌ ದೋಷಃ । ಆನನ್ದ-

ಮಯಸ್ಯ ಸರ್ವಾನ್ತರತ್ವಾತ್ । ಮುಖ್ಯಮೇವ ಹಿ ಆತ್ಮಾನಮ್ ಉಪದಿದಿಕ್ಷು ಶಾಸ್ತ್ರಂ ಲೋಕಬುದ್ಧಿಮ್ ಅನುಸರತ್, ಅನ್ನಮಯಂ ಶರೀರಮ್ ಆತ್ಮಾನಮ್ ಅತ್ಯನ್ತಮೂಢಾನಾಂ ಆತ್ಮತ್ವೇನ ಪ್ರಸಿದ್ಧಮ್ ಅನೂದ್ಯ ಮೂಷಾನಿಷಿಕ್ತದ್ರುತ-ತಾಮ್ರಾದಿಪ್ರತಿಮಾವತ್ ತತೋಽನ್ತರಂ ತತೋಽನ್ತರಮ್ ಇತ್ಯೇವಂ ಪೂರ್ವೇಣ ಪೂರ್ವೇಣ ಸಮಾನಮ್ ಉತ್ತರಮ್ ಅನಾತ್ಮಾನಮ್ ಆತ್ಮೇತಿ ಗ್ರಾಹಯತ್ ಪ್ರತಿಪತ್ತಿಸೌಕರ್ಯಾಪೇಕ್ಷಯಾ, ಸರ್ವಾನ್ತರಂ ಮುಖ್ಯಮ್ ಆನನ್ದಮಯ-ಮಾತ್ಮಾನಮ್ ಉಪದಿದೇಶ ಇತಿ ಶ್ಲಿಷ್ಟತರಮ್ । ಯಥಾ ಅರುನ್ಧತೀನಿದರ್ಶನೇ ಬಹ್ವೀಷ್ವಪಿ ತಾರಾಸು ಅಮುಖ್ಯಾಸು ಅರುನ್ಧತೀಷು ದರ್ಶಿತಾಸು ಯಾ ಅನ್ತ್ಯಾ ಪ್ರದರ್ಶ್ಯತೇ ಸಾ ಮುಖ್ಯೈವ ಅರುನ್ಧತೀ ಭವತಿ, ಏವಮ್ ಇಹಾಪಿ ಆನನ್ದ-ಮಯಸ್ಯ ಸರ್ವಾನ್ತರತ್ವಾತ್ ಮುಖ್ಯಮ್ ಆತ್ಮತ್ವಮ್ ॥

( ಭಾಷ್ಯಾರ್ಥ )

ಅನ್ನಮಯನೇ ಮುಂತಾದ ಅಮುಖ್ಯಾತ್ಮರ ಪ್ರವಾಹದಲ್ಲಿ ಸೇರಿಕೊಂಡಿರುವದರಿಂದ ಆನಂದಮಯನೂ ಅಮುಖ್ಯ(ನಾಗಿರಬೇಕು) ಎಂದು ( ಪೂರ್ವಪಕ್ಷದಲ್ಲಿ ) ಹೇಳಿತ್ತಷ್ಟೆ, ಅದು[1] ತಪ್ಪಲ್ಲ. ಏಕೆಂದರೆ ಆನಂದಮಯನು ಸರ್ವಾಂತರನಾಗಿರುತ್ತಾನೆ. ಮುಖ್ಯನಾಗಿರುವ ಆತ್ಮನನ್ನೇ ಉಪದೇಶಮಾಡಬೇಕೆಂಬ ಇಚ್ಛೆಯಿಂದಲಲ್ಲವೆ, ಶಾಸ್ತ್ರವು ಲೋಕದ (ಸಾಮಾನ್ಯ ಜನರ) ಬುದ್ಧಿಯನ್ನು ಅನುಸರಿಸಿ ಅತ್ಯಂತ ಮೂಢರಿಗೆ ಆತ್ಮನೆಂದು ಪ್ರಸಿದ್ಧನಾಗಿರುವ ಅನ್ನಮಯವಾದ ಶರೀರವನ್ನು ಅನುವಾದಮಾಡಿಕೊಂಡು ಮೂಸೆಯಲ್ಲಿ ಹೊಯ್ದಿರುವ ಕರಗಿದ ತಾಮ್ರವೇ ಮುಂತಾದ (ಲೋಹದ) ಪ್ರತಿಮೆಯಂತೆ ಅದಕ್ಕಿಂತ ಒಳಗೆ ಅದಕ್ಕಿಂತ ಒಳಗೆ-ಎಂದಿಂತು ಹಿಂದುಹಿಂದಿನ (ಅನಾತ್ಮಕ್ಕೆ) ಸಮಾನವಾಗಿರುವ ಮುಂದುಮುಂದಿನ ಅನಾತ್ಮವನ್ನು ತಿಳಿಯುವದಕ್ಕೆ ಸುಲಭವಾಗಿರಲೆಂಬ ಇಚ್ಛೆಯಿಂದ ಆತ್ಮನೆಂದು (ಮೊದಲು)ತಿಳಿಸಿ (ಕೊನೆಗೆ) ಎಲ್ಲಕ್ಕೂ ಒಳಗಿರುವ ಆನಂದಮಯನೆಂಬ ಮುಖ್ಯಾತ್ಮನೆಂದು ಉಪದೇಶಮಾಡಿತು ಎಂದು (ಇಟ್ಟುಕೊಂಡರೆ) ಹೆಚ್ಚು ಹೊಂದಿಕೆಯಾಗಿರುತ್ತದೆ[2]. ಅರುಂಧತಿಯನ್ನು ತೋರಿಸಿಕೊಡುವಲ್ಲಿ[3] ಅಮುಖ್ಯ ಅರುಂಧತಿಗಳಾದ ಅನೇಕ ನಕ್ಷತ್ರಗಳನ್ನು ತೋರಿಸಿದ ಬಳಿಕ ಕೊನೆಯಲ್ಲಿ ಯಾವ ನಕ್ಷತ್ರವನ್ನು ತೋರಿಸುವರೋ ಅದು ಹೇಗೆ ಮುಖ್ಯ ಅರುಂಧತಿಯೇ ಆಗಿರುವದೋ ಹಾಗೆಯೇ ಇಲ್ಲಿಯೂ ಆನಂದಮಯನು ಎಲ್ಲಕ್ಕೂ ಒಳಗಿರುವದರಿಂದ ಮುಖ್ಯಾತ್ಮನೇ (ಆಗಿರುತ್ತಾನೆ).

1. ಅಮುಖ್ಯಾತ್ಮರ ಪ್ರವಾಹದಲ್ಲಿ ಹೇಳಿರುವದು.
2. ಹಾಗಿಲ್ಲದಿದ್ದರೆ ಮುಖ್ಯಾತ್ಮನನ್ನು ಉಪದೇಶಿಸಲೇ ಇಲ್ಲವೆಂಬ ದೋಷವು ಬರುತ್ತದೆ.
3. ಸ್ಥೂಲಾರುಂಧತೀನ್ಯಾಯವನ್ನು ಭಾ. ಭಾ. ೪೩ ರ ೧ನೆಯ ಟಿಪ್ಪಣಿಯಲ್ಲಿ ವಿವರಿಸಿದೆ.

## ಅಮುಖ್ಯಾತ್ಮಲಿಂಗಗಳಿಗೆ ಗತ್ಯಂತರವಿದೆ

(ಭಾಷ್ಯ)

೯೮. ಯತ್ ತು ಬ್ರೂಷೇ ಪ್ರಿಯಾದೀನಾಂ ಶಿರಸ್ತ್ವಾದಿಕಲ್ಪನಾ ಅನುಪಪನ್ನಾಮುಖ್ಯಸ್ಯ ಆತ್ಮನಃ ಇತಿ, ಅತೀತಾನನ್ತರೋಪಾಧಿಜನಿತಾ ಸಾ ನ ಸ್ವಾಭಾವಿಕೀ ಇತಿ ಅದೋಷಃ । ಶಾರೀರತ್ವಮಪಿ ಆನನ್ದಮಯಸ್ಯ ಅನ್ನಮಯಾದಿಶರೀರಪರಮ್ಪರಯಾ ಪ್ರದರ್ಶ್ಯಮಾನತ್ವಾತ್, ನ ಪುನಃ ಸಾಕ್ಷಾದೇವ ಶಾರೀರತ್ವಂ ಸಂಸಾರಿವತ್ । ತಸ್ಮಾತ್ ಆನನ್ದಮಯಃ ಪರ ಏವಾತ್ಮಾ ॥

( ಭಾಷ್ಯಾರ್ಥ )

ಮುಖ್ಯನಾದ ಆತ್ಮನಿಗೆ ಪ್ರಿಯಾದಿಗಳು ತಲೆಯೇ ಮುಂತಾದ (ಅವಯವಗಳೆಂದು) ಕಲ್ಪಿಸಿರುವದು ಹೊಂದುವದಿಲ್ಲ ಎಂದು (ಪೂರ್ವಪಕ್ಷಿಯಾದ ನೀನು) ಹೇಳುತ್ತೀಯಷ್ಟೆ; (ಅದರ) ಹಿಂದೆಯೇ ಹೇಳಿರುವ (ವಿಜ್ಞಾನಮಯಕೋಶ)ವೆಂಬ ಉಪಾಧಿಯಿಂದ ಈ (ಕಲ್ಪನೆ)ಯಾಗಿರುತ್ತದೆಯೇ ಹೊರತು ಸ್ವಾಭಾವಿಕವಲ್ಲ. ಆದ್ದರಿಂದ (ಇದು) ದೋಷವಲ್ಲ. ಆನಂದಮಯನು ಶಾರೀರನೆಂಬುದೂ ಅನ್ನಮಯವೇ ಮುಂತಾದ ಶರೀರಪರಂಪರೆಯಿಂದ (ಅವನನ್ನು) ತಿಳಿಸಿಕೊಟ್ಟಿರುವದರಿಂದಲೇ[1] ಹೊರತು (ಅವನು) ಸಂಸಾರಿಯಂತೆ ತಾನೇ ಶಾರೀರ(ನೆಂದ)ಲ್ಲ. ಆದ್ದರಿಂದ ಆನಂದಮಯನು ಪರಮಾತ್ಮನೇ.

## ಇಲ್ಲಿ ಮಯಪ್ರತ್ಯಯಕ್ಕೆ ಪ್ರಾಚುರ್ಯವೆಂದರ್ಥ

### ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ॥ ೧೩ ॥

೧೩. ವಿಕಾರವನ್ನು ಹೇಳುವ ಶಬ್ದವಿರುವದರಿಂದ (ಮುಖ್ಯಾತ್ಮ)ನಲ್ಲ, ಎಂದರೆ ಹಾಗಲ್ಲ; ಏಕೆಂದರೆ (ಇದಕ್ಕೆ) ಪ್ರಾಚುರ್ಯವು (ಅರ್ಥವು).

ಭಾಷ್ಯ

೯೯. ಅತ್ರ ಆಹ—ನಾನನ್ದಮಯಃ ಪರ ಆತ್ಮಾ ಭವಿತುಮರ್ಹತಿ ಕಸ್ಮಾತ್ ? ವಿಕಾರಶಬ್ದಾತ್ । ಪ್ರಕೃತಿವಚನಾತ್ ಅಯಮ್ ಅನ್ಯಃ ಶಬ್ದೋ-

---

1. ಸಾವಯವತ್ವವು ಉಪಾಧಿನಿಮಿತ್ತವಾಗಿದೆ, ಶಾರೀರತ್ವವೆಂಬುದು ಶರೀರಪರಂಪರೆಯಿಂದ ತಿಳಿಸಲ್ಪಟ್ಟವನು ಎಂಬ ನಿಮಿತ್ತದಿಂದಾದದ್ದು; ಆದ್ದರಿಂದ **ಲಿಂಗಗಳು** ಅಮುಖ್ಯಾತ್ಮನನ್ನು ತಿಳಿಸುವದಿಲ್ಲ ಎಂದು ಭಾವ.

**ವಿಕಾರವಚನಃ ಸಮಧಿಗತಃ। ಆನನ್ದಮಯಃ ಇತಿ ಮಯಟೋ ವಿಕಾರಾರ್ಥತ್ವಾತ್। ತಸ್ಮಾತ್ ಅನ್ನಮಯಾದಿ ಶಬ್ದವತ್ ವಿಕಾರವಿಷಯ ಏವ ಆನಂದಮಯಶಬ್ದಃ ಇತಿ ಚೇತ್। ನ। ಪ್ರಾಚುರ್ಯಾರ್ಥೇಽಪಿ ಮಯಟಃ ಸ್ಮರಣಾತ್। "ತತ್ಪ್ರಕೃತವಚನೇ ಮಯಟ್" (ಪಾ. ೫-೪-೨೫) ಇತಿ ಹಿ ಪ್ರಚುರತಾಯಾಮಪಿ ಮಯಟ್ ಸ್ಮರ್ಯತೇ। ಯಥಾ "ಅನ್ನಮಯೋ ಯಜ್ಞಃ" ಇತಿ ಅನ್ನಪ್ರಚುರಃ ಉಚ್ಯತೇ, ಏವಮ್ ಆನನ್ದಪ್ರಚುರಂ ಬ್ರಹ್ಮ ಆನನ್ದಮಯ ಉಚ್ಯತೇ। ಆನನ್ದಪ್ರಚುರತ್ವಂ ಚ ಬ್ರಹ್ಮಣಃ ಮನುಷ್ಯತ್ವಾದಾರಭ್ಯ ಉತ್ತರಸ್ಮಿನ್ ಉತ್ತರಸ್ಮಿನ್ ಸ್ಥಾನೇ ಶತಗುಣ ಆನನ್ದಃ ಇತ್ಯುಕ್ತ್ವಾ ಬ್ರಹ್ಮಾನನ್ದಸ್ಯ ನಿರತಿಶಯತ್ವಾವಧಾರಣಾತ್। ತಸ್ಮಾತ್ ಪ್ರಾಚುರ್ಯಾರ್ಥೇ ಮಯಟ್॥**

(ಭಾಷ್ಯಾರ್ಥ)

ಇಲ್ಲಿ (ಪೂರ್ವಪಕ್ಷಿ) ಹೇಳುತ್ತಾನೇನೆಂದರೆ: ಆನಂದಮಯನು ಪರಮಾತ್ಮನಾಗಲಾರನು. ಏಕೆಂದರೆ (ಇಲ್ಲಿ) ವಿಕಾರಶಬ್ದ(ವಿರುತ್ತದೆ. 'ಆನಂದಮಯ' (ಎಂಬಲ್ಲಿ) ಪ್ರಕೃತಿ(ಯಾದ ಆನಂದವನ್ನು ಹೇಳುವ) ಶಬ್ದಕ್ಕಿಂತಲೂ ಬೇರೆಯಾಗಿ ('ಅದರಿಂದಾದ' ಎಂಬ) ವಿಕಾರವನ್ನು ಹೇಳುವ ಈ ಶಬ್ದವೂ ಸಿಕ್ಕುತ್ತದೆ; ಏಕೆಂದರೆ 'ಆನಂದಮಯಃ' ಎಂಬಲ್ಲಿ 'ಮಯ' (ಎಂಬ ಪ್ರತ್ಯಯಕ್ಕೆ) ವಿಕಾರವೆಂಬುದೇ ಅರ್ಥವು.[1] ಆದ್ದರಿಂದ ಅನ್ನಮಯವೇ ಮುಂತಾದ ಶಬ್ದಗಳಂತೆ ಆನಂದಮಯಶಬ್ದವೂ ವಿಕಾರವನ್ನು ಹೇಳತಕ್ಕದ್ದೇ.[2]

ಹೀಗೆಂದರೆ (ನಾವು ಹೇಳುವದೇನೆಂದರೆ ಅದು) ಸರಿಯಲ್ಲ. ಏಕೆಂದರೆ ಮಯ (ಎಂಬ ಪ್ರತ್ಯಯ)ವನ್ನು ಪ್ರಾಚುರ್ಯವೆಂಬರ್ಥದಲ್ಲಿಯೂ (ವ್ಯಾಕರಣ) ಸ್ಮೃತಿಯಲ್ಲಿ (ಹೇಳಿದೆ). "ತತ್ಪ್ರಕೃತವಚನೇ ಮಯಟ್" (ಪಾ. ೫-೪-೨೫) (ಪ್ರಾಚುರ್ಯದಿಂದ ಕೂಡಿದ ವಸ್ತುವನ್ನು ತಿಳಿಸುವ ಶಬ್ದಕ್ಕೆ ಮಯಟ್ ಪ್ರತ್ಯಯವು ಬರುವದು) ಎಂದು ಪ್ರಚುರತ್ವವೆಂಬರ್ಥದಲ್ಲಿಯೂ 'ಮಯ' ಎಂಬ ಪ್ರತ್ಯಯವನ್ನು ಹೇಳಿದೆಯಲ್ಲವೆ? ಅನ್ನವು ಪ್ರಚುರವಾಗಿರುವ (ಯಜ್ಞವನ್ನು) 'ಅನ್ನಮಯವಾದ ಯಜ್ಞವು' ಎಂದು ಹೇಗೆ ಕರೆಯುವರೋ ಹಾಗೆಯೇ ಆನಂದಪ್ರಚುರವಾಗಿರುವ ಬ್ರಹ್ಮವನ್ನು 'ಆನಂದಮಯ' ಎಂದು ಕರೆದಿದೆ. ಬ್ರಹ್ಮವು ಆನಂದಪ್ರಚುರವಾಗಿರುತ್ತದೆ ಎಂಬುದು ಮನುಷ್ಯತ್ವದಿಂದ ಮೊದಲು ಮಾಡಿ

---

1. 'ಮಯಡ್ವಾ' (ಪಾ.೪-೩-೧೪೩) ಎಂಬ ಸೂತ್ರದಲ್ಲಿ "ಮಯ" ಪ್ರತ್ಯಯಕ್ಕೆ ವಿಕಾರಾರ್ಥವನ್ನು ಹೇಳಿದೆ.

2. ಸಾವಯವತ್ವ, ಶಾರೀರತ್ವ--ಎಂಬ **ಲಿಂಗ**ಗಳಲ್ಲದೆ ವಿಕಾರಶಬ್ದರೂಪವಾದ **ಶ್ರುತಿ**ಯೂ ಅಮುಖ್ಯಾತ್ಮನನ್ನು ತಿಳಿಸುತ್ತದೆ ಎಂದು ಭಾವ.

ಕೊಂಡು ಮುಂದುಮುಂದಿನ ಸ್ಥಾನದಲ್ಲಿ (ಹಿಂದುಹಿಂದಿನ ಸ್ಥಾನದ) ನೂರರಷ್ಟು ಆನಂದವು (ಇರುವದು) ಎಂದು (ತೈ. ೨-೮) ಹೇಳಿ ಬ್ರಹ್ಮಾನಂದವು ಮಿಗಿಲಿಲ್ಲದ್ದು[1] ಎಂದು ಗೊತ್ತುಪಡಿಸಿರುವದರಿಂದ (ಸಿದ್ಧವಾಗುತ್ತದೆ). ಆದ್ದರಿಂದ ಮಯ (ಎಂಬ ಪ್ರತ್ಯಯವು) ಪ್ರಾಚುರ್ಯ ಎಂಬರ್ಥದಲ್ಲಿಯೇ (ಪ್ರಯುಕ್ತವಾಗಿದೆ).

## ಬ್ರಹ್ಮವು ಆನಂದಕ್ಕೆ ಕಾರಣವಾಗಿರುವದರಿಂದಲೂ ಪ್ರತ್ಯಯವು ಪ್ರಾಚುರ್ಯಾರ್ಥವೇ

**ತದ್ಧೇತುವ್ಯಪದೇಶಾತ್ ॥ ೧೪ ॥**

೧೪. ಅದಕ್ಕೆ ಹೇತುವೆಂದು ಹೇಳಿರುವರಿಂದ (ಮಯಪ್ರತ್ಯಯಕ್ಕೆ ಪ್ರಾಚುರ್ಯವೇ ಅರ್ಥವು).

(ಭಾಷ್ಯ)

೧೦೦. ಇತಶ್ಚ ಪ್ರಾಚುರ್ಯಾರ್ಥೇ ಮಯಟ್ । ಯಸ್ಮಾತ್ ಆನನ್ದಹೇತುತ್ವಂ ಬ್ರಹ್ಮಣೋ ವ್ಯಪದಿಶತಿ ಶ್ರುತಿಃ--'ಏಷ ಹ್ಯೇವಾನನ್ದಯಾತಿ'(ತೈ.೨-೭) ಇತಿ। ಆನನ್ದಯತಿ ಇತ್ಯರ್ಥಃ । ಯೋ ಹಿ ಅನ್ಯಾನ್ ಆನನ್ದಯತಿ ಸ ಪ್ರಚುರಾನನ್ದಃ ಇತಿ ಪ್ರಸಿದ್ಧಂ ಭವತಿ । ಯಥಾ ಲೋಕೇ ಯೋಽನ್ಯೇಷಾಂ ಧನಿಕತ್ವಮ್ ಆಪಾದಯತಿ ಸ ಪ್ರಚುರಧನ ಇತಿ ಗಮ್ಯತೇ ತದ್ವತ್ । ತಸ್ಮಾತ್ ಪ್ರಾಚುರ್ಯಾರ್ಥೇಽಪಿ ಮಯಟಃ ಸಂಭವಾತ್ ಆನನ್ದಮಯಃ ಪರ ಏವಾತ್ಮಾ ॥

(ಭಾಷ್ಯಾರ್ಥ)

ಇದರಿಂದಲೂ ಮಯ (ಎಂಬ ಪ್ರತ್ಯಯವು) ಪ್ರಾಚುರ್ಯಾರ್ಥದಲ್ಲಿ (ಬಂದಿದೆ ಎನ್ನಬೇಕು). ಏಕೆಂದರೆ "ಈತನೇ ಆನಂದಗೊಳಿಸುತ್ತಾನೆ" (ತೈ. ೨-೭) ಎಂಬ ಶ್ರುತಿಯು ಬ್ರಹ್ಮವು ಆನಂದಕ್ಕೆ ಹೇತುವೆಂದು ಹೇಳುತ್ತದೆ. ('ಆನನ್ದಯಾತಿ' ಎಂಬ ಮಾತಿಗೆ) ಆನನ್ದಯತಿ[2] (ಆನಂದಗೊಳಿಸುತ್ತಾನೆ) ಎಂದರ್ಥ. ಯಾವನು ಮತ್ತೊಬ್ಬರನ್ನು ಆನಂದಗೊಳಿಸುತ್ತಾನೋ ಅವನಲ್ಲಿ ಆನಂದವು ಪ್ರಚುರವಾಗಿರಬೇಕೆಂದು ಸಿದ್ಧವಾಗುತ್ತದೆ. ಲೋಕದಲ್ಲಿ ಯಾವನು ಮತ್ತೊಬ್ಬರನ್ನು ಹಣವಂತರಾಗಿ ಮಾಡಬಲ್ಲನೋ ಅವನು ಪ್ರಚುರ

---

1. ಅಲ್ಪಾನಂದರಾದ ಮನುಷ್ಯಾದಿಗಳಿಗೆ ಹೋಲಿಸಿದರೆ ಬ್ರಹ್ಮವು ಆನಂದಪ್ರಚುರವಾಗಿರುತ್ತದೆ ಎಂದು ಹೇಳಬಹುದೆಂಬುದನ್ನು ಶ್ರುತಿಯು ಗೊತ್ತುಪಡಿಸಿಕೊಟ್ಟದೆ ಎಂದು ಭಾವ.

2. 'ಆನನ್ದಯಾತಿ' ಎಂಬ ದೀರ್ಘವು ಛಾಂದಸವು; 'ಆನನ್ದಯತಿ' ಎಂಬ ಮಾತಿನ ಸ್ಥಾನದಲ್ಲಿ 'ಆನನ್ದಯಾತಿ' ಎಂದು ಶ್ರುತಿಯಲ್ಲಿದೆ ಎಂದರ್ಥ.

ವಾಗಿ ಹಣವುಳ್ಳವನೆಂದು ಹೇಗೆ ಗೊತ್ತಾಗಿರುವದೋ, ಹಾಗೆಯೇ (ಇದು). ಆದ್ದರಿಂದ ಪ್ರಾಚುರ್ಯಾರ್ಥದಲ್ಲಿ ಮಯ (ಎಂಬ ಪ್ರತ್ಯಯವು) ಬರಬಹುದಾದ್ದರಿಂದ ಆನಂದಮಯನು ಪರಮಾತ್ಮನೇ.

## ಸಿದ್ಧಾಂತದಲ್ಲಿ ಮಂತ್ರಬ್ರಾಹ್ಮಣಗಳಿಗೆ ಏಕವಾಕ್ಯತೆಯಿದೆ.

**ಮಾನ್ತ್ರವರ್ಣಿಕಮೇವ ಚ ಗೀಯತೇ ॥ ೧೫ ॥**

೧೫. ಮಾಂತ್ರವರ್ಣಿಕವಾದ (ಬ್ರಹ್ಮವನ್ನೇ ಬ್ರಾಹ್ಮಣದಲ್ಲಿ) ಹೇಳಿರುತ್ತದೆಯಾದ್ದರಿಂದಲೂ (ಆನಂದಮಯನು ಪರಮಾತ್ಮನೇ).

(ಭಾಷ್ಯ)

೧೧೧. ಇತಶ್ಚ ಆನನ್ದಮಯಃ ಪರ ಏವಾತ್ಮಾ । ಯಸ್ಮಾತ್ "ಬ್ರಹ್ಮವಿದಾಪ್ನೋತಿ ಪರಮ್" (ತೈ. ೨-೧) ಇತ್ಯುಪಕ್ರಮ್ಯ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತ್ಯಸ್ಮಿನ್ ಮನ್ತ್ರೇ ಯತ್ ಪ್ರಕೃತಂ ಬ್ರಹ್ಮ ಸತ್ಯಜ್ಞಾನಾನನ್ತವಿಶೇಷಣೈರ್ನಿರ್ಧಾರಿತಮ್, ಯಸ್ಮಾತ್ ಆಕಾಶಾದಿಕ್ರಮೇಣ ಸ್ಥಾವರಜಙ್ಗಮಾನಿ ಭೂತಾನಿ ಅಜಾಯನ್ತ, ಯಚ್ಚ ಭೂತಾನಿ ಸೃಷ್ಟ್ವಾ ತಾನಿ ಅನುಪ್ರವಿಶ್ಯ ಗುಹಾಯಾಮ್ ಅವಸ್ಥಿತಂ ಸರ್ವಾನ್ತರಮ್, ಯಸ್ಯ ವಿಜ್ಞಾನಾಯ "ಅನ್ಯೋಽನ್ತರ ಆತ್ಮಾನ್ಯೋಽನ್ತರ ಆತ್ಮಾ" ಇತಿ ಪ್ರಕ್ರಾನ್ತಮ್ ತತ್ ಮಾನ್ತ್ರವರ್ಣಿಕಮೇವ ಬ್ರಹ್ಮ ಇಹ ಗೀಯತೇ "ಅನ್ಯೋಽನ್ತರ ಆತ್ಮಾನನ್ದಮಯಃ" (ತೈ. ೨.೫) ಇತಿ । ಮನ್ತ್ರಬ್ರಾಹ್ಮಣಯೋಶ್ಚ ಏಕಾರ್ಥತ್ವಂ ಯುಕ್ತಮ್, ಅವಿರೋಧಾತ್ । ಅನ್ಯಥಾ ಹಿ ಪ್ರಕೃತಹಾನಾಪ್ರಕೃತಪ್ರಕ್ರಿಯೇ ಸ್ಯಾತಾಮ್ । ನ ಚ ಅನ್ನಮಯಾದಿಭ್ಯ ಇವ ಆನನ್ದಮಯಾತ್ ಅನ್ಯೋಽನ್ತರ ಆತ್ಮಾ ಅಭಿಧೀಯತೇ । ಏತನ್ನಿಷ್ಠೈವ ಚ "ಸೈಷಾ ಭಾರ್ಗವೀ ವಾರುಣೀ ವಿದ್ಯಾ" (ತೈ. ೩-೬) । ತಸ್ಮಾತ್ ಆನನ್ದಮಯಃ ಪರ ಏವಾತ್ಮಾ ॥

(ಭಾಷ್ಯಾರ್ಥ)

ಇದರಿಂದಲೂ ಆನಂದಮಯನು ಪರಮಾತ್ಮನೇ (ಎನ್ನಬೇಕು). ಏಕೆಂದರೆ "ಬ್ರಹ್ಮವನ್ನು ಅರಿತುಕೊಂಡವನು ಪರವನ್ನು ಪಡೆಯುತ್ತಾನೆ" (ತೈ. ೨-೧) ಎಂದು ಉಪಕ್ರಮಿಸಿ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಎಂಬೀ ಮಂತ್ರದಲ್ಲಿ ಪ್ರಕೃತವಾದ[1] ಯಾವ ಬ್ರಹ್ಮವನ್ನು ಸತ್ಯ, ಜ್ಞಾನ, ಅನಂತ-ಎಂಬ ವಿಶೇಷಣಗಳಿಂದ ಗೊತ್ತುಪಡಿಸಲಾಗಿರುತ್ತದೆಯೋ, ಯಾವದರಿಂದ ಆಕಾಶವೇ

---

1. ಹಿಂದೆ ಆನಂದಮಯನು ಬ್ರಹ್ಮವೆಂಬುದಕ್ಕೆ ಸರ್ವಾಂತರತ್ವ, ಪ್ರಚುರಾನಂದತ್ವ ಎಂಬ **ಲಿಂಗ**ಗಳನ್ನು ಹೇಳಿತ್ತು ; ಈಗ ಇದು ಬ್ರಹ್ಮ**ಪ್ರಕರಣ**ವೇ ಎಂಬುದನ್ನು ಹೇಳಿದೆ.

ಮುಂತಾದ ಕ್ರಮದಿಂದ ಸ್ಥಾವರಜಂಗಮಪ್ರಾಣಿಗಳು ಹುಟ್ಟಿರುವವೋ, ಮತ್ತು ಯಾವದು ಭೂತಗಳನ್ನು ಸೃಷ್ಟಿಸಿ ಅವುಗಳನ್ನು ಒಳಹೊಕ್ಕು ಗುಹೆಯಲ್ಲಿ ಇದ್ದು ಕೊಂಡಿರುವ ಸರ್ವಾಂತರ (ತತ್ತ್ವ)ವಾಗಿರುವದೋ, ಯಾವದನ್ನು ಅರಿತುಕೊಳ್ಳು ವದಕ್ಕೆಂದು 'ಇನ್ನೊಬ್ಬ ಒಳಗಿನ ಆತ್ಮನು', 'ಇನ್ನೊಬ್ಬ ಒಳಗಿನ ಆತ್ಮನು' ಎಂದು ಪ್ರಕ್ರಮವಾಗಿರುವದೋ, ಆ ಮಾಂತ್ರವರ್ಣಿಕವಾದ ಬ್ರಹ್ಮವನ್ನೇ "ಆನಂದಮಯನೆಂಬ ಇನ್ನೊಬ್ಬ ಒಳಗಿನ ಆತ್ಮ (ನುಂಟು)" (ತೈ. ೨-೫) ಎಂದು ಇಲ್ಲಿ ಹೇಳಿರುತ್ತದೆ. ಮಂತ್ರಬ್ರಾಹ್ಮಣಗಳಿಗೆ ಏಕಾರ್ಥವನ್ನು (ಕಲ್ಪಿಸು ವದು) ಯುಕ್ತವು; ಏಕೆಂದರೆ (ಹಾಗಾದರೆ ಅವೆರಡಕ್ಕೂ) ಅವಿರೋಧವಾಗು ತ್ತದೆ.[1] ಹಾಗಿಲ್ಲದಿದ್ದರೆ ಪ್ರಕೃತವಾದದ್ದನ್ನು ಬಿಡುವದು, ಮತ್ತು ಅಪ್ರಕೃತವಾದ್ದನ್ನು ಪ್ರಾರಂಭಿಸುವದು[2] (ಎಂಬ ದೋಷ)ಗಳು ಉಂಟಾಗುವವು. ಅನ್ನಮಯಾದಿಗಳಿ ಗಿಂತ ಬೇರೆಯಾಗಿ(ಇನ್ನೊಬ್ಬ ಒಳಗಿನ ಆತ್ಮನನ್ನು ಹೇಳಿರುವಂತೆ ಆನಂದಮಯ ನಿಗಿಂತ ಬೇರೆಯಾದ ಒಳಗಿನ ಆತ್ಮನನ್ನು ಹೇಳಿರುವದೂ ಇಲ್ಲ.[3] "ಆ ಇದು ಭಾರ್ಗವ ಮತ್ತು ವಾರುಣ ವಿದ್ಯೆಯು" (ತೈ. ೩-೬ ಎಂದು ಹೇಳಿರುವವು) ಈ (ಆನಂದಮಯನಿಂದಲೇ) ಕೊನೆಗೊಂಡಿರುತ್ತದೆ[4]. ಆದ್ದರಿಂದ ಆನಂದಮಯ ನೆಂದರೆ ಪರಮಾತ್ಮನೇ.

## ಆನಂದಮಯನು ಜೀವನಲ್ಲವೆಂಬುದಕ್ಕೆ ಕಾರಣಗಳು.

**ನೇತರೋಽನುಪಪತ್ತೇಃ ॥ ೧೬ ॥**

೧೬. (ಆನಂದಮಯನು ಪರಮಾತ್ಮನೇ ಹೊರತು) ಇನ್ನೊಬ್ಬನಲ್ಲ; ಏಕೆಂದರೆ (ಇಲ್ಲಿ ಹೇಳಿರುವ ಧರ್ಮವು ಅವನಿಗೆ) ಹೊಂದುವದಿಲ್ಲ.

(ಭಾಷ್ಯ)

೧೦೨, **ಇತಶ್ಚ ಆನನ್ದಮಯಃ ಪರ ಏವ ಆತ್ಮಾ । ನೇತರಃ । ಇತರಃ ಈಶ್ವರಾತ್ ಅನ್ಯಃ ಸಂಸಾರೀ ಜೀವಃ ಇತ್ಯರ್ಥಃ । ನ ಜೀವಃ ಆನನ್ದಮಯ-ಶಬ್ದೇನ ಅಭಿಧೀಯತೇ । ಕಸ್ಮಾತ್? ಅನುಪಪತ್ತೇಃ । ಆನನ್ದಮಯಂ ಹಿ**

---

1. ಮಂತ್ರವನ್ನು ವಿವರಿಸುವದೇ ಬ್ರಾಹ್ಮಣದ ಕೆಲಸ.

2. ಪ್ರಕೃತವಾದ ಬ್ರಹ್ಮವನ್ನು ಬಿಟ್ಟು, ಅಪ್ರಕೃತನಾದ ಜೀವನನ್ನು ಹೇಳಿದಂತೆ ಆಗು ವದು. ಆಗ ಶ್ರುತಿಯು ಅಪ್ರಮಾಣವೆಂದಾಗುವದು_ಎಂದರ್ಥ.

3. ಆದ್ದರಿಂದ ಇವನೇ ಸರ್ವಾಂತರನಾದ ಆತ್ಮನು.

4. ಆದ್ದರಿಂದ ಆನಂದವಲ್ಲಿ ಭೃಗುವಲ್ಲಿ ಎರಡೂ ಹೊಂದಬೇಕಾದರೆ ಆನಂದಮಯನು ಪರಮಾತ್ಮನೆನ್ನಬೇಕು.

ಪ್ರಕೃತ್ಯ ಶ್ರೂಯತೇ—"ಸೋಽಕಾಮಯತ | ಬಹು ಸ್ಯಾಂ ಪ್ರಜಾಯೇಯೇತಿ | ಸ ತಪೋಽತಪ್ಯತ | ಸ ತಪಸ್ತಪ್ತ್ವಾ | ಇದಗ್ಂ ಸರ್ವಮಸೃಜತ | ಯದಿದಂ ಕಿಂಚ |" (ತೈ. ೨-೬) ಇತಿ | ತತ್ರ ಪ್ರಾಕ್ ಶರೀರಾದ್ಯುತ್ಪತ್ತೇಃ ಅಭಿಧ್ಯಾನಮ್ ಸೃಜ್ಯಮಾನಾನಾಂ ಚ ವಿಕಾರಾಣಾಂ ಸ್ರಷ್ಟುರವ್ಯತಿರೇಕಃ, ಸರ್ವವಿಕಾರಸೃಷ್ಟಿಶ್ಚ ನ ಪರಸ್ಮಾತ್ ಆತ್ಮನೋಽನ್ಯತ್ರ ಉಪಪದ್ಯತೇ ||

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಆನಂದಮಯನು ಪರಮಾತ್ಮನೇ, ಇನ್ನೊಬ್ಬನಲ್ಲ. **ಇನ್ನೊಬ್ಬನು ಎಂದರೆ ಈಶ್ವರನಿಗಿಂತ ಬೇರೆಯಾದ ಸಂಸಾರಿ ಜೀವನು ಎಂದರ್ಥ.**[1] ಜೀವನನ್ನು ಆನಂದಮಯಶಬ್ದದಿಂದ (ಇಲ್ಲಿ) ಹೇಳಿಲ್ಲ; ಏಕೆ? ಎಂದರೆ ಹೊಂದುವದಿಲ್ಲವಾದ್ದರಿಂದ. (ಅದು) ಹೇಗೆಂದರೆ ಆನಂದಮಯನನ್ನು (ಕುರಿತು ಹೇಳುವದಕ್ಕೆ) ಪ್ರಾರಂಭಿಸಿ 'ಅವನು ಬಹುವಾಗುವೆನು, ಹುಟ್ಟುವೆನು ಎಂದು ಕಾಮಿಸಿದನು. ಅವನು ತಪಸ್ಸು ಮಾಡಿದನು, ಅವನು ತಪಸ್ಸುಮಾಡಿದ ಬಳಿಕ ಈ ಏನೇನಿದೆಯೋ ಇದೆಲ್ಲವನ್ನೂ ಸೃಷ್ಟಿಸಿದನು" (ತೈ. ೨-೬) ಎಂದು ಶ್ರುತಿ ಹೇಳುತ್ತದೆ. ಇಲ್ಲಿ ಶರೀರವೇ ಮುಂತಾದವುಗಳು ಉಂಟಾಗುವ ಮೊದಲೇ ಯೋಚಿಸುವದು,[2] ಸೃಷ್ಟಿಯಾಗುವ ಕಾರ್ಯಗಳು ಸೃಷ್ಟಿಸುವಾತನಿಗಿಂತ ಬೇರೆಯಲ್ಲದಿರುವದು,[3] ಮತ್ತು ಸಮಸ್ತ ಕಾರ್ಯಗಳನ್ನೂ ಸೃಷ್ಟಿಸುವದು[4] (ಇದೆಲ್ಲವೂ) ಪರಮಾತ್ಮನಿಗಿಂತ ಬೇರೆಯವರಿಗೆ ಹೊಂದುವದಿಲ್ಲ.

**ಭೇದವ್ಯಪದೇಶಾಚ್ಚ || ೧೭ ||**

೧೭. ಬೇರೆಯಾಗಿ ಹೇಳಿರುವದರಿಂದಲೂ (ಇನ್ನೊಬ್ಬನಲ್ಲ).

---

1. ಸೂತ್ರಗಳಲ್ಲಿ ಇತರ ಎಂಬ ಮಾತನ್ನು ಸಾಮಾನ್ಯವಾಗಿ ಜೀವನು ಎಂಬರ್ಥದಲ್ಲಿಯೇ ಪ್ರಯೋಗಿಸಿರುತ್ತದೆ ಎಂಬುದನ್ನು ಲಕ್ಷಿಸಬೇಕು.

2. ಶರೀರವಿಲ್ಲದಿದ್ದರೂ ಯೋಚಿಸುವದು ಪರಮಾತ್ಮನಿಗೇ ಸಾಧ್ಯ. ಭಾ. ಭಾ. ೭೦.

3. ಜೀವರಾದ ಕುಂಬಾರ, ಬಡಗಿ_ಮುಂತಾದವರು ಸೃಷ್ಟಿಸುವ ಗಡಿಗೆ, ಮನೆ ಮುಂತಾದವು ಅವರಿಗಿಂತ ಬೇರೆಯಾಗಿರುತ್ತವೆ. ಆದರೆ 'ಬಹುವಾಗುವೆನು' ಎಂಬ ಮಾತು ಕಾರ್ಯವು ಕಾರಣಕ್ಕಿಂತ ಭಿನ್ನವಲ್ಲವೆಂದು ಹೇಳುತ್ತದೆ.

4. ಆಕಾಶಾದಿಗಳು ತಮ್ಮ ತಮ್ಮ ಕಾರ್ಯಗಳನ್ನು ಮಾತ್ರ ಸೃಷ್ಟಿಸುತ್ತವೆ; ಪರಮಾತ್ಮನು ಮಾತ್ರ ಎಲ್ಲಾ ಕಾರ್ಯಗಳನ್ನೂ ಸೃಷ್ಟಿಸಬಲ್ಲನು. 'ಇವೆಲ್ಲವನ್ನೂ ಸೃಷ್ಟಿಸಿದನು' ಎಂಬುದು ಸರ್ವಕಾರ್ಯಸೃಷ್ಟಿಯನ್ನೇ ಹೇಳುತ್ತದೆ.

(ಭಾಷ್ಯ)

೧೦೩. ಇತಶ್ಚ ನಾನನ್ದಮಯಃ ಸಂಸಾರೀ। ಯಸ್ಮಾತ್ ಆನನ್ದಮಯಾಧಿಕಾರೇ "ರಸೋ ವೈ ಸಃ । ರಸಗ್‌ಂ ಹ್ಯೇವಾಯಂ ಲಬ್ಧ್ವಾನನ್ದೀ ಭವತಿ" (ತೈ. ೨-೭) ಇತಿ ಜೀವಾನನ್ದಮಯೌ ಭೇದೇನ ವ್ಯಪದಿಶತಿ । ನ ಹಿ ಲಬ್ಧೈವ ಲಬ್ಧವ್ಯೋ ಭವತಿ ॥

(ಭಾಷ್ಯಾರ್ಥ)

ಇದರಿಂದಲೂ ಆನಂದಮಯನು ಸಂಸಾರಿಯಲ್ಲ(ವೆನ್ನಬೇಕು). ಏಕೆಂದರೆ ಆನಂದಮಯನ ಪ್ರಕರಣದಲ್ಲಿ "ಆತನು ರಸವೇ, ಇವನು ರಸವನ್ನು ಪಡೆದುಕೊಂಡೇ ಅಲ್ಲವೆ, ಆನಂದಿಯಾಗುವನು?" (ತೈ. ೨-೭) ಎಂಬ ಜೀವ, ಆನಂದಮಯ ಇವರನ್ನು ಬೇರೆಬೇರೆಯಾಗಿ ಹೇಳಿರುತ್ತದೆ. ಪಡೆಯುವವನೇ ಪಡೆಯಲ್ಪಡತಕ್ಕವನಾಗಲಾರನಷ್ಟೆ?

## ಸೂತ್ರದಲ್ಲಿ ಹೇಳುವ ಭೇದವು ಅವಿದ್ಯಾಕಲ್ಪಿತ

(ಭಾಷ್ಯ)

೧೦೪. ಕಥಂ ತರ್ಹಿ "ಆತ್ಮಾ ಅನ್ವೇಷ್ಟವ್ಯಃ"[1] (ಛಾಂ. ೮-೭-೧) "ಆತ್ಮಲಾಭಾನ್ನ ಪರಂ ವಿದ್ಯತೇ" (ಆ. ಧ. ೧-೮-೨೨-೧) ಇತಿ ಶ್ರುತಿಸ್ಮೃತೀ । ಯಾವತಾ ನ ಲಬ್ಧೈವ ಲಬ್ಧವ್ಯೋ ಭವತಿ ಇತ್ಯುಕ್ತಮ್ । ಬಾಢಮ್ । ತಥಾಪಿ ಆತ್ಮನಃ ಅಪ್ರಚ್ಯುತಾತ್ಮಭಾವಸ್ಯೈವ ಸತಃ, ತತ್ತ್ವಾನವಬೋಧನಿಮಿತ್ತೋ ದೇಹಾದಿಷು ಅನಾತ್ಮಸು ಆತ್ಮತ್ವನಿಶ್ಚಯೋ ಲೌಕಿಕೋ ದೃಷ್ಟಃ। ತೇನ ದೇಹಾದಿಭೂತಸ್ಯ ಆತ್ಮನೋಽಪಿ ಆತ್ಮಾ ಅನನ್ವಿಷ್ಟೋಽನ್ವೇಷ್ಟವ್ಯಃ, ಅಲಬ್ಧೋ ಲಬ್ಧವ್ಯಃ ಅಶ್ರುತಃ ಶ್ರೋತವ್ಯಃ, ಅಮತೋ ಮನ್ತವ್ಯಃ, ಅವಿಜ್ಞಾತೋ ವಿಜ್ಞಾತವ್ಯಃ ಇತ್ಯಾದಿಭೇದವ್ಯಪದೇಶಃ ಉಪಪದ್ಯತೇ । ಪ್ರತಿಷಿಧ್ಯತೇ ಏವ ತು ಪರಮಾರ್ಥತಃ ಸರ್ವಜ್ಞಾತ್ ಪರಮೇಶ್ವರಾತ್ ಅನ್ಯೋ ದ್ರಷ್ಟಾ ಶ್ರೋತಾ ವಾ "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೩-೭-೨೩) ಇತ್ಯಾದಿನಾ । ಪರಮೇಶ್ವರಸ್ತು ಅವಿದ್ಯಾಕಲ್ಪಿತಾತ್ ಶಾರೀರಾತ್ ಕರ್ತುರ್ಭೋಕ್ತುಃ ವಿಜ್ಞಾನಾತ್ಮಾಖ್ಯಾತ್ ಅನ್ಯಃ - ಯಥಾ ಮಾಯಾವಿನಃ ಚರ್ಮಖಡ್ಗಧರಾತ್ ಸೂತ್ರೇಣ ಆಕಾಶಮ್ ಅಧಿರೋಹತಃ ಸ ಏವ ಮಾಯಾವೀ ಪರಮಾರ್ಥರೂಪೋ ಭೂಮಿಷ್ಠಃ ಅನ್ಯಃ। ಯಥಾ ವಾ ಘಟಾಕಾಶಾತ್ ಉಪಾಧಿಪರಿಚ್ಛಿನ್ನಾತ್ ಅನುಪಾಧಿಃ ಅಪರಿಚ್ಛಿನ್ನ ಆಕಾಶಃ ಅನ್ಯಃ । ಈದೃಶಂ ಚ ವಿಜ್ಞಾನಾತ್ಮಪರಮಾತ್ಮಭೇದಮ್ ಆಶ್ರಿತ್ಯ "ನೇತರೋಽನುಪಪತ್ತೇಃ" (೧-೧-೧೬) "ಭೇದವ್ಯಪದೇಶಾಚ್ಚ (೧-೧-೧೭) ಇತ್ಯುಕ್ತಮ್ ॥

1. ಇದು ಶ್ರುತಿಯ ಅರ್ಥಮಾತ್ರವು.

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ "ಆತ್ಮನನ್ನು ಹುಡುಕಬೇಕು" (ಛಾಂ. ೮-೭-೧) "ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲ" (ಆ ಧ. ೧-೮-೨೨-೧) ಎಂಬ ಶ್ರುತಿ ಸ್ಮೃತಿಗಳು ಹೇಗೆ (ಸರಿ)? ಪಡೆಯುವವನೇ ಪಡೆಯಲ್ಪಡುವವನಾಗಲಾರನೆಂದು ಹೇಳಿದಿರಲ್ಲವೆ?

(ಪರಿಹಾರ) :—ನಿಜ. ಹಾಗಿದ್ದರೂ ಆತ್ಮನ (ತನ್ನ) ಆತ್ಮತ್ವಕ್ಕೆ ಚ್ಯುತಿಯಿಲ್ಲದಿದ್ದರೂ ತತ್ತ್ವವನ್ನು ತಿಳಿಯದೆ ಇರುವ ನಿಮಿತ್ತದಿಂದ ಅನಾತ್ಮವಾದ ದೇಹವೇ ಮುಂತಾದವುಗಳಲ್ಲಿ (ಅವೇ) ತಾನೆಂಬ ನಿಶ್ಚಯವು ಜನರಿಗೆ (ಆಗಿರುವದು) ಕಂಡುಬರುತ್ತದೆ. ಅದರಿಂದ ದೇಹಾದಿಗಳೇ (ತಾನಾ) ಗಿರುವ[1] ಆತ್ಮನಿಗೂ ಆತ್ಮನು 'ಹುಡುಕಲ್ಪಡದೆ ಇರುವವನು, ಹುಡುಕಲ್ಪಡತಕ್ಕವನು,' 'ಪಡೆಯಲ್ಪಡದೆ ಇರುವವನು, ಪಡೆಯಲ್ಪಡತಕ್ಕವನು' 'ಕೇಳಲ್ಪಡದೆ ಇರುವವನು, ಕೇಳಲ್ಪಡತಕ್ಕವನು,' 'ಮನನಮಾಡಲ್ಪಡದವನು, ಮನನಮಾಡಲ್ಪಡತಕ್ಕವನು,' 'ಅರಿಯಲ್ಪಡದವನು, ಅರಿಯಲ್ಪಡತಕ್ಕವನು' (ಆಗಿರುತ್ತಾನೆ) ಎಂದು ಮುಂತಾಗಿ ಭೇದವ್ಯಪದೇಶವು ಯುಕ್ತವಾಗುತ್ತದೆ. ಆದರೆ ಪರಮಾರ್ಥವಾಗಿ ಸರ್ವಜ್ಞನಾಗಿರುವ ಪರಮೇಶ್ವರನಿಗಿಂತ ಬೇರೆಯಾಗಿರುವ ದ್ರಷ್ಟೃವಾಗಲಿ ಶ್ರೋತೃವಾಗಲಿ ಇಲ್ಲವೆಂದು "ಇವನಿಗಿಂತ ಬೇರೆಯ ದ್ರಷ್ಟೃವಿಲ್ಲ" (ಬೃ. ೩-೭-೨೩) ಎಂಬಿದೇ ಮುಂತಾದ (ಶ್ರುತಿ)ಯಿಂದ ಅಲ್ಲಗಳೆಯಲ್ಪಟ್ಟಿರುತ್ತದೆ. ಆದರೆ ಪರಮೇಶ್ವರನು ಮಾತ್ರ ಅವಿದ್ಯಾಕಲ್ಪಿತನಾದ, ವಿಜ್ಞಾನಾತ್ಮನೆಂಬ ಶಾರೀರನಾದ[2] ಕರ್ತೃಭೋಕ್ತೃವಿಗಿಂತ ಬೇರೆಯೇ ಆಗಿರುತ್ತಾನೆ. ಹೇಗೆ ಕತ್ತಿಗುರಾಣಿಗಳನ್ನು ಹಿಡಿದು ನೂಲೇಣಿಯ ಮೂಲಕ ಆಕಾಶಕ್ಕೆ ಹತ್ತುತ್ತಿರುವ ಮಾಯಾವಿಗಿಂತ ನೆಲದ ಮೇಲೆ ನಿಂತಿರುವ ಪರಮಾರ್ಥರೂಪನಾದ ಅದೇ ಮಾಯಾವಿಯು ಬೇರೆಯಾಗಿರುವನೋ ಅಥವಾ ಹೇಗೆ ಉಪಾಧಿಗೆ ಕಟ್ಟುಬಿದ್ದಿರುವ ಘಟಾಕಾಶಕ್ಕಿಂತ ಉಪಾಧಿಗೆ ಕಟ್ಟುಬೀಳದೆ ಇರುವ ಆಕಾಶವು ಬೇರೆಯಾಗಿರುವದೋ (ಹಾಗೆ ವಿಜ್ಞಾನಾತ್ಮನಿಗಿಂತ ಪರಮೇಶ್ವರನು ಬೇರೆಯಾಗಿರುತ್ತಾನೆ.[3] ವಿಜ್ಞಾನಾತ್ಮಪರಮಾತ್ಮರಿಗೆ ಇಂಥ ಭೇದವನ್ನು

1. ದೇಹದಲ್ಲಿ ಆತ್ಮಾಧ್ಯಾಸವನ್ನು ಮಾಡಿಕೊಂಡಿರುವ.

2. ಜೀವ (ಪ್ರಾಣವನ್ನು ಧರಿಸಿರುವವನು), ಶಾರೀರ (ಶರೀರವುಳ್ಳವನು), ವಿಜ್ಞಾನಾತ್ಮ (ಬುದ್ಧಿಯುಳ್ಳವನು)—ಇವೆಲ್ಲ ಪರ್ಯಾಯಗಳು.

3. ಪರಮಾರ್ಥವಾದ ಮಾಯಾವಿಗಿಂತ ನೂಲೇಣಿಯ ಮಾಯಾವಿಯು ಬೇರೆಯಾಗಿ ನಿಜವಾಗಿಲ್ಲದಿರುವಂತೆಯೂ ಆಕಾಶಕ್ಕಿಂತ ಬೇರೆಯಾದ ಘಟಾಕಾಶವು ಬೇರೆಯಾಗಿಲ್ಲದಿರುವಂತೆಯೂ ಜೀವನು ಆತ್ಮನಿಗಿಂತ ಬೇರೆಯಿಲ್ಲ. ಮಾಯಾವಿ, ಆಕಾಶ—ಇವುಗಳು ಒಂದೊಂದೇ ಆದರೂ ಅವುಗಳಲ್ಲಿ ಕಲ್ಪಿತಭೇದವಿರುವಂತೆ ಒಬ್ಬನೇ ಆತ್ಮನಲ್ಲಿ ಕಲ್ಪಿತಭೇದವಿರುತ್ತದೆ—ಎಂಬುದು ದೃಷ್ಟಾಂತಗಳಲ್ಲಿ ವಿವಕ್ಷಿತಾಂಶ.

ಇಟ್ಟುಕೊಂಡೇ " ಇನ್ನೊಬ್ಬನಲ್ಲ, ಏಕೆಂದರೆ (ಅವನಿಗೆ ಈ ಧರ್ಮಗಳು) ಹೊಂದುವದಿಲ್ಲ" (೧-೧-೧೬) " ಬೇರೆಯಾಗಿ ಹೇಳಿರುವದರಿಂದಲೂ (ಇನ್ನೊಬ್ಬನಲ್ಲ)" (೧-೧-೧೭) ಎಂದು (ಸೂತ್ರದಲ್ಲಿ) ಹೇಳಿರುತ್ತದೆ.

## ಆನಂದಮಯನು ಕಾಮಯಿತೃವಾದ್ದರಿಂದ ಪ್ರಧಾನವಲ್ಲ

**ಕಾಮಾಚ್ಚ ನಾನುಮಾನಾಪೇಕ್ಷಾ ॥೧೮॥**

೧೮. ಕಾಮವಿರುವದರಿಂದ ಅನುಮಾನಾಪೇಕ್ಷೆಯೂ (ಇಲ್ಲಿರುವ)ದಿಲ್ಲ.

( ಭಾಷ್ಯ )

೧೦೫. ಆನನ್ದಮಯಾಧಿಕಾರೇ ಚ "ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ" (ತೈ. ೨-೬) ಇತಿ ಕಾಮಯಿತೃತ್ವನಿರ್ದೇಶಾತ್ ನಾನುಮಾನಿಕಮಪಿ ಸಾಙ್ಖ್ಯಪರಿಕಲ್ಪಿತಂ ಅಚೇತನಂ ಪ್ರಧಾನಮ್ ಆನನ್ದಮಯತ್ವೇನ ಕಾರಣತ್ವೇನ ವಾ ಅಪೇಕ್ಷಿತವ್ಯಮ್ । "ಈಕ್ಷತೇರ್ನಾಶಬ್ದಮ್"(೧-೧-೫)ಇತಿ ನಿರಾಕೃತಮಪಿ ಪ್ರಧಾನಂ ಪೂರ್ವಸೂತ್ರೋದಾಹೃತಾಂ ಕಾಮಯಿತೃತ್ವಶ್ರುತಿಮ್ ಆಶ್ರಿತ್ಯ ಪ್ರಸಙ್ಗಾತ್ ಪುನರ್ನಿರಾಕ್ರಿಯತೇ ಗತಿಸಾಮಾನ್ಯಪ್ರಪಞ್ಚನಾಯ ॥

(ಭಾಷ್ಯಾರ್ಥ)

ಆನಂದಮಯನ ಪ್ರಕರಣದಲ್ಲಿ " ಅವನು ಬಹುವಾಗುವೆನು, ಹುಟ್ಟುವೆನು ಎಂದು ಕಾಮಿಸಿದನು " (ತೈ. ೨-೬) ಎಂದು (ಆನಂದಮಯನಿಗೆ) ಕಾಮಯಿತೃತ್ವವನ್ನು ಹೇಳಿರುವದರಿಂದ ಅನುಮಾನ(ಪ್ರಮಾಣ)ಗಮ್ಯವಾದ ಸಾಂಖ್ಯನು ಕಲ್ಪಿಸಿರುವ ಅಚೇತನವಾದ ಪ್ರಧಾನವೂ[1] ಆನಂದಮಯನೆಂದಾಗಲಿ (ಜಗತ್ಕಾ)ರಣವೆಂದಾಗಲಿ ಭಾವಿಸುವ ಹಾಗಿಲ್ಲ.

" ಈಕ್ಷತೇರ್ನಾಶಬ್ದಮ್ "(೧-೧-೫) ಎಂದು ಪ್ರಧಾನವನ್ನು (ಹಿಂದೆಯೇ) ನಿರಾಕರಿಸಿದ್ದರೂ ಹಿಂದಿನ(೧-೭-೧೬) ಸೂತ್ರದಲ್ಲಿ ಉದಾಹರಿಸಿರುವ ಕಾಮಯಿ

---

1. ಪ್ರಧಾನವೆಂಬುದು ಉಪಲಕ್ಷಣವು ; ಪರಮಾಣುವೇ ಮುಂತಾದ ಅಚೇತನಕಾರಣಗಳನ್ನೆಲ್ಲ ' ಅನುಮಾನ ' ಎಂಬ ಶಬ್ದದಿಂದ ಗ್ರಹಿಸಬೇಕು.

ತೃತ್ವಶ್ರುತಿಯನ್ನು ಅವಲಂಬಿಸಿ[1] ಮತ್ತೆ ಪ್ರಸಂಗದಿಂದ[2] (ವೇದಾಂತವಾಕ್ಯಗಳ) ಗತಿಸಾಮಾನ್ಯವನ್ನು ವಿವರಿಸುವದಕ್ಕಾಗಿ[3] (ಅದನ್ನೂ) ನಿರಾಕರಿಸಿರುತ್ತದೆ.

# ಮುಕ್ತಿಫಲವನ್ನು ಹೇಳಿರುವದರಿಂದಲೂ ಆನಂದಮಯನು ಜೀವಪ್ರಧಾನಗಳಲ್ಲ

**ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ॥ ೧೯ ॥**

೧೯. ಈ (ಆನಂದಮಯನಲ್ಲಿ) ತದ್ಯೋಗವನ್ನೂ ಹೇಳಿರುತ್ತದೆ.

(ಭಾಷ್ಯ)

೧೦೬. ಇತಶ್ಚ ನ ಪ್ರಧಾನೇ ಜೀವೇ ವಾ ಆನನ್ದಮಯಶಬ್ದಃ । ಯಸ್ಮಾತ್ ಅಸ್ಮಿನ್ ಆನನ್ದಮಯೇ ಪ್ರಕೃತೇ ಆತ್ಮನಿ ಪ್ರತಿಬುದ್ಧಸ್ಯ ಅಸ್ಯ ಜೀವಸ್ಯ ತದ್ಯೋಗಂ ಶಾಸ್ತಿ । ತದಾತ್ಮನಾ ಯೋಗಃ ತದ್ಯೋಗಃ । ತದ್ಭಾವಾಪತ್ತಿಃ । ಮುಕ್ತಿಃ ಇತ್ಯರ್ಥಃ । ತದ್ಯೋಗಂ ಶಾಸ್ತಿ ಶಾಸ್ತ್ರಮ್ "ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿನ್ದತೇ । ಅಥ ಸೋಽಭಯಂ ಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರಮನ್ತರಂ ಕುರುತೇ । ಅಥ ತಸ್ಯ ಭಯಂ ಭವತಿ" (ತೈ ೨-೭) ಇತಿ । ಏತದುಕ್ತಂ ಭವತಿ –ಯದಾ ಏತಸ್ಮಿನ್ ಆನನ್ದಮಯೇ ಅಲ್ಪಮಪಿ ಅನ್ತರಮ್ ಅತಾದಾತ್ಮ್ಯರೂಪಂ ಪಶ್ಯತಿ ತದಾ ಸಂಸಾರಭಯಾತ್ ನ ನಿವರ್ತತೇ । ಯದಾ ತು ಏತಸ್ಮಿನ್ ಆನನ್ದಮಯೇ ನಿರನ್ತರಂ ತಾದಾತ್ಮ್ಯೇನ ಪ್ರತಿತಿಷ್ಠತಿ ತದಾ ಸಂಸಾರಭಯಾತ್ ನಿವರ್ತತೇ ಇತಿ । ತಚ್ಚ ಪರಮಾತ್ಮಪರಿಗ್ರಹೇ ಘಟತೇ, ನ ಪ್ರಧಾನಪರಿಗ್ರಹೇ ಜೀವಪರಿಗ್ರಹೇ ವಾ । ತಸ್ಮಾತ್ ಆನನ್ದಮಯಃ ಪರಮಾತ್ಮಾ ಇತಿ ಸ್ಥಿತಮ್ ॥

---

1. ೧-೧-೫ರಲ್ಲಿ ಹೇಳಿದ ಈಕ್ಷಿತೃತ್ವವು ಚೇತನಧರ್ಮವಾದ ಜ್ಞಾನ, ಇಚ್ಛೆ-ಮುಂತಾದವುಗಳನ್ನೆಲ್ಲ ಸೂಚಿಸುತ್ತದೆ ಎಂದಂತಾಯಿತು.

2. ಜೀವನು ಆನಂದಮಯನಾಗದೆ ಹೋದರೂ ಪ್ರಧಾನವಾಗಬಹುದಲ್ಲ!-ಎಂಬ ಶಂಕೆಯೂ ಬರಬಹುವೆಂದು ನೆನಪಿಗೆ ಬರಲು, ಚೇತನನಾದ ಜೀವನೇ ಆಗದಿರುವಾಗ ಅಚೇತನವಾದ ಪ್ರಧಾನವು ಹೇಗಾದೀತು ?-ಎಂದು ನಿರಾಕರಿಸಿದೆ.

3. ಎಲ್ಲಾ ವೇದಾಂತವಾಕ್ಯಗಳೂ ಚೇತನಕಾರಣವನ್ನೇ ತಿಳಿಸುತ್ತವೆ ಎಂದು ಹಿಂದೆ ೧-೧-೧೧ರಲ್ಲಿ ಹೇಳಿರುವದನ್ನು ಬಲಪಡಿಸುವದಕ್ಕಾಗಿ ಎಂದರ್ಥ. ಪ್ರಧಾನಕಾರಣವಾದವನು ನಿರಾಕರಿಸುವ ಮುಂದಿನ ಸೂತ್ರಗಳಿಗೆಲ್ಲ ಈ ಯುಕ್ತಿಯನ್ನು ಸೇರಿಸಿಕೊಳ್ಳಬೇಕು.

(ಭಾಷ್ಯಾರ್ಥ)

ಇದರಿಂದಲೂ ಪ್ರಧಾನದಲ್ಲಾಗಲಿ ಜೀವನಲ್ಲಾಗಲಿ ಆನಂದಮಯಶಬ್ದ (ವನ್ನು ಪ್ರಯೋಗಮಾಡಿರುವದಿಲ್ಲವೆನ್ನಬೇಕು). ಏಕೆಂದರೆ ಈ ಆನಂದಮಯ ನೆಂಬ ಪ್ರಕೃತನಾಗಿರುವ ಆತ್ಮನಲ್ಲಿ ಈ ಜೀವನಿಗೆ ಜ್ಞಾನವಾಗುತ್ತಲೂ ತದ್ಯೋಗ ವನ್ನು ತಿಳಿಸಿರುತ್ತದೆ. 'ತದ್ಯೋಗ' ಎಂದರೆ ಅವನ ರೂಪದಿಂದ ಯೋಗವು, ಆ ಸ್ವರೂಪವನ್ನು ಹೊಂದುವದು; ಮುಕ್ತಿಯು ಎಂದರ್ಥ. (ಈ) ತದ್ಯೋಗ ವನ್ನು "ಯಾವಾಗಲಾದರೆ ಇವನು ಈ ಅದೃಶ್ಯನಾದ ಅನಾತ್ಮ್ಯನಾದ[1] ಅನಿರುಕ್ತ ನಾದ,[2] ಅನಿಲಯನಾದ[3] (ಆನಂದಮಯನಲ್ಲಿ) ಅಭಯವಾಗಿ ಪ್ರತಿಷ್ಠೆಯನ್ನು ಹೊಂದುವನೋ ಆಗ ಅವನು ಅಭಯವನ್ನು ಹೊಂದಿದವನಾಗುವನು. ಯಾವಾ ಗಲೇ ಇವನು ಈತನಲ್ಲಿ ಸ್ವಲ್ಪವಾದರೂ ಭೇದವನ್ನು ಮಾಡಿಕೊಳ್ಳುವನೋ ಆಗ ಅವನಿಗೆ ಭಯವಾಗುವದು" (ತೈ. ೨-೭) ಎಂದು ಶಾಸ್ತ್ರವು ತಿಳಿಸುತ್ತದೆ. (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ: ಯಾವಾಗ ಈ ಆನಂದಮಯನಲ್ಲಿ ಸ್ವಲ್ಪವಾದರೂ ಅತಾದಾತ್ಮ್ಯರೂಪವಾದ ಭೇದವನ್ನು ಕಾಣುವನೋ ಆಗ ಸಂಸಾರಭಯದಿಂದ ಮುಕ್ತನಾಗುವದಿಲ್ಲ; ಆದರೆ ಯಾವಾಗ ಈ ಆನಂದಮಯನಲ್ಲಿ ಎಡೆಬಿಡದೆ ತಾದಾತ್ಮ್ಯದಿಂದ ನೆಲೆನಿಲ್ಲುವನೋ ಆಗ ಸಂಸಾರಭಯದಿಂದ ತಪ್ಪಿಸಿಕೊಳ್ಳುವನು. (ಹೀಗೆಂದು ಹೇಳಿರುವ) ಇದು ಪರಮಾತ್ಮನೇ (ಆನಂದಮಯನೆಂದು) ಇಟ್ಟು ಕೊಂಡರೆ ಹೊಂದುವದೇ ಹೊರತು ಪ್ರಧಾನವೆಂದು ಇಟ್ಟುಕೊಂಡರೂ ಜೀವನೆಂದು ಇಟ್ಟುಕೊಂಡರೂ (ಹೊಂದುವ)ದಿಲ್ಲ. ಆದ್ದರಿಂದ ಆನಂದಮಯನು ಪರಮಾತ್ಮನು ಎಂಬುದೇ ನಿಂತಿತು.

## ಭಾಷ್ಯಕಾರರ ಮತ: ಆನಂದಮಯನು ಅಬ್ರಹ್ಮವೇ

(ಭಾಷ್ಯ)

೧೦೭. ಇದಂ ತು ಇಹ ವಕ್ತವ್ಯಮ್—"ಸ ವಾ ಏಷ ಪುರುಷೋಽನ್ನ ರಸಮಯಃ"(ತೈ. ೨-೧)। "ತಸ್ಮಾದ್ವಾ ಏತಸ್ಮಾದನ್ನರಸಮಯಾತ್। ಅನ್ಯೋಽನ್ತರ ಆತ್ಮಾ ಪ್ರಾಣಮಯಃ" (ತೈ.೨-೨), ತಸ್ಮಾತ್ "ಅನ್ಯೋಽನ್ತರ ಆತ್ಮಾ ಮನೋ ಮಯಃ" (ತೈ. ೨-೩), ತಸ್ಮಾತ್ "ಅನ್ಯೋಽನ್ತರ ಆತ್ಮಾ ವಿಜ್ಞಾನಮಯಃ" (ತೈ. ೨-೪) ಇತಿ ಚ ವಿಕಾರಾರ್ಥೇ ಮಯಟ್ಪ್ರವಾಹೇ ಸತಿ ಆನನ್ದಮಯೋ ಏವ

1 ಅಶರೀರನಾದ.

2 ಇಂಥವನೆಂದು ಗೊತ್ತುಮಾಡಿ ಹೇಳುವದಕ್ಕಾಗದ.

3 ನಿರಾಧಾರನಾದ.

ಅಕಸ್ಮಾತ್ ಅರ್ಧಜರತೀಯನ್ಯಾಯೇನ ಕಥಮಿವ ಮಯಟಃ ಪ್ರಾಚುರ್ಯಾರ್ಥತ್ವಂ ಬ್ರಹ್ಮವಿಷಯತ್ವಂ ಚ ಆಶ್ರೀಯತೇ ಇತಿ| ಮಾನ್ತ್ರವರ್ಣಿಕಬ್ರಹ್ಮಾಧಿಕಾರಾತ್ ಇತಿ ಚೇತ್, ನ | ಅನ್ನಮಯಾದೀನಾಮಪಿ ತರ್ಹಿ ಬ್ರಹ್ಮತ್ವಪ್ರಸಙ್ಗಃ | ಅತ್ರಾಹ-ಯುಕ್ತಮ್ ಅನ್ನಮಯಾದೀನಾಮ್ ಅಬ್ರಹ್ಮತ್ವಮ್ | ತಸ್ಮಾತ್ ತಸ್ಮಾತ್ ಆನ್ತರಸ್ಯಾನ್ತರಸ್ಯ ಅನ್ಯಸ್ಯಾನ್ಯಸ್ಯ ಆತ್ಮನಃ ಉಚ್ಯಮಾನತ್ವಾತ್| ಆನನ್ದ-ಮಯಾತ್ ತು ನ ಕಶ್ಚಿತ್ ಅನ್ಯಃ ಆನ್ತರ ಆತ್ಮಾ ಉಚ್ಯತೇ | ತೇನ ಆನನ್ದ ಮಯಸ್ಯ ಬ್ರಹ್ಮತ್ವಮ್ | ಅನ್ಯಥಾ ಪ್ರಕೃತಹಾನಾಪ್ರಕೃತಪ್ರಕ್ರಿಯಾಪ್ರಸಙ್ಗಾತ್ ಇತಿ | ಅತ್ರ ಉಚ್ಯತೇ | ಯದ್ಯಪಿ ಅನ್ನಮಯಾದಿಭ್ಯ ಇವ ಆನನ್ದಮಯಾತ್ ಅನ್ಯೋಽನ್ತರ ಆತ್ಮಾ ಇತಿ ನ ಶ್ರೂಯತೇ, ತಥಾಪಿ ನಾನನ್ದಮಯಸ್ಯ ಬ್ರಹ್ಮ-ತ್ವಮ್ | ಯತಃ ಆನನ್ದಮಯಂ ಪ್ರಕೃತ್ಯ ಶ್ರೂಯತೇ "ತಸ್ಯ ಪ್ರಿಯಮೇವ ಶಿರಃ | ಮೋದೋ ದಕ್ಷಿಣಃ ಪಕ್ಷಃ | ಪ್ರಮೋದ ಉತ್ತರಃ ಪಕ್ಷಃ | ಆನನ್ದ ಆತ್ಮಾ | ಬ್ರಹ್ಮ ಪುಚ್ಛಂ ಪ್ರತಿಷ್ಠಾ" | (ತೈ. ೨-೫) ಇತಿ | ತತ್ರ ಯತ್ ಬ್ರಹ್ಮ ಮನ್ತ್ರ ವರ್ಣೇ ಪ್ರಕೃತಮ್ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತಿ, ತದಿಹ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" (ತೈ. ೨-೫) ಇತ್ಯುಚ್ಯತೇ | ತದ್ವಿಜಿಜ್ಞಾಪಯಿಷಯೈವ ಅನ್ನಮಯಾದಯ ಆನನ್ದಮಯಪರ್ಯನ್ತಾಃ ಪಞ್ಚ ಕೋಶಾಃ ಕಲ್ಪ್ಯನ್ತೇ | ತತ್ರ ಕುತಃ ಪ್ರಕೃತಹಾನಾಪ್ರಕೃತಪ್ರಕ್ರಿಯಾಪ್ರಸಙ್ಗಃ ?

(ಭಾಷ್ಯಾರ್ಥ)

ಆದರೆ ಈ (ವ್ಯಾಖ್ಯಾನ)ದಲ್ಲಿ (ವೃತ್ತಿಕಾರರು)ಇದನ್ನು ಹೇಳಬೇಕಾಗುವದು; "ಆ ಈ ಪುರುಷನೇ ಅನ್ನರಸಮಯನು '' (ತೈ. ೨-೧), "ಆ ಈ ಅನ್ನರಸಮಯ (ನಾಗಿರುವ ಪುರುಷ)ನಿಗಿಂತ ಒಳಗೆ ಇನ್ನೊಬ್ಬ ಪ್ರಾಣಮಯನಾದ ಆತ್ಮ(ನಿರುವನು) " (ತೈ. ೨-೨), "ಅವನಿಗಿಂತ ಒಳಗೆ ಇನ್ನೊಬ್ಬ ಮನೋಮಯನಾದ ಆತ್ಮ (ನಿರುವನು)." (ತೈ. ೨-೩) ಎಂದೂ (ಅವನಿಗಿಂತ ಒಳಗೆ ಇನ್ನೊಬ್ಬ ವಿಜ್ಞಾನಮಯನಾದ ಆತ್ಮ(ನಿರುವನು) (ತೈ. ೨.೪) ಎಂದೂ ವಿಕಾರಾರ್ಥವಾದ ಮಯ(ಪ್ರತ್ಯಯದ) ಪ್ರವಾಹವಿರುವಲ್ಲಿ[1] ಆನಂದಮಯನಲ್ಲಿ ಮಾತ್ರ ಮಯ(ಪ್ರತ್ಯಯ)ಕ್ಕೆ ಪ್ರಾಚುರ್ಯವೆಂಬರ್ಥವೆಂದೂ (ಅದು) ಬ್ರಹ್ಮವಿಷಯವೆಂದೂ ತಟ್ಟನೆ **ಅರ್ಧಜರತೀಯ ನ್ಯಾಯದಿಂದ**[2] ಇಟ್ಟುಕೊಂಡಿರುವದು ಹೇಗೆ ?

---

1 ಅನ್ನಮಯಾದಿಗಳು ಅಬ್ರಹ್ಮವೆಂದು ಸ್ಪಷ್ಟವಾಗಿರುವಲ್ಲಿ ಎಂದೂ ಯುಕ್ತಿಯನ್ನು ಸೇರಿಸಿಕೊಳ್ಳಬೇಕು.

2 ವಿಕಾರಾರ್ಥದ ಮಯಪ್ರತ್ಯಯಗಳು ಹಿಂದೆ ಇರುತ್ತವೆ; ಅಬ್ರಹ್ಮಗಳನ್ನೇ ಇದುವರೆಗೆ ಹೇಳಿರುತ್ತದೆ. ಹೀಗಿರುವಲ್ಲಿ, ಸನ್ನಿಧಿಯನ್ನು ತಿರಸ್ಕರಿಸಿ 'ಆನಂದಮಯ' ಎಂಬಲ್ಲಿ ಮಾತ್ರ ಪ್ರಾಚುರ್ಯಾರ್ಥವನ್ನೂ ಬ್ರಹ್ಮವಿಷಯತ್ವವನ್ನೂ ಇಟ್ಟುಕೊಳ್ಳುವದು **ಅರ್ಧಜರತೀಯ ನ್ಯಾಯ**ವಾಗುವದು, ಮೊಟ್ಟೆಯ ಅರ್ಧವನ್ನು ಅಡಿಗೆಗೆ ಇಟ್ಟುಕೊಂಡು ಮಿಕ್ಕರ್ಧವನ್ನು ಮರಿ ಹಾಕುವದಕ್ಕೆಂದು ಇಟ್ಟುಕೊಂಡಂತೆ ಹಾಸ್ಯಾಸ್ಪದವಾಗುವದು ಎಂದು ಭಾವ.

(ವೃತ್ತಿಕಾರ):-ಮಂತ್ರವರ್ಣದಲ್ಲಿ (ಹೇಳಿರುವ) ಬ್ರಹ್ಮದ ಪ್ರಕರಣದ (ಬಲ) ದಿಂದ ಹಾಗೆಂದು ನಿಶ್ಚಯಿಸಿರುತ್ತೇವೆ).

(ಭಾಷ್ಯಕಾರ):-(ಅದು ಸರಿ) ಯಲ್ಲ. (ಏಕೆಂದರೆ) ಹಾಗಾದರೆ ಅನ್ನಮಯಾದಿಗಳೂ ಬ್ರಹ್ಮವೆಂದಾಗಬೇಕಾಗುವದು.[1]

ಇದಕ್ಕೆ (ವೃತ್ತಿಕಾರರು) ಹೇಳುತ್ತಾರೆ (ಏನೆಂದರೆ): ಅನ್ನಮಯಾದಿಗಳು ಅಬ್ರಹ್ಮವೆಂಬುದೇ ಯುಕ್ತ ; ಏಕೆಂದರೆ ಆದದಕ್ಕಿಂತ ಒಳಗೊಳಗಿರುವ ಇನ್ನೊಬ್ಬ ಇನ್ನೊಬ್ಬ ಆತ್ಮನನ್ನು ಶ್ರುತಿಯಲ್ಲಿ ಹೇಳಿರುತ್ತದೆ. ಆದರೆ ಆನಂದಮಯನಿಗಿಂತ ಒಳಗಿರುವ ಇನ್ನೊಬ್ಬ ಆತ್ಮನನ್ನು ಹೇಳಿರುವದಿಲ್ಲ. ಆದ್ದರಿಂದ ಆನಂದಮಯನು ಬ್ರಹ್ಮವೇ. ಹಾಗಿಲ್ಲದಿದ್ದರೆ[2] ಪ್ರಕೃತವಾದದ್ದನ್ನು ಕೈಬಿಟ್ಟು ಪ್ರಕೃತವಲ್ಲದ್ದನ್ನು ಪ್ರಾರಂಭಿಸಿದಂತೆ ಆಗುವದು.[3]

(ಭಾಷ್ಯಕಾರ):-ಇದಕ್ಕೆ (ನಾವು ಈ ಉತ್ತರವನ್ನು) ಹೇಳುತ್ತೇವೆ : ಅನ್ನಮಯಾದಿಗಳಿಗಿಂತ (ಒಳಗಿನ ಇನ್ನೊಬ್ಬ ಇನ್ನೊಬ್ಬ ಆತ್ಮನಿರುವನೆಂದು ಹೇಳಿರು) ವಂತೆ ಆನಂದಮಯನಿಗಿಂತ ಒಳಗೆ ಇನ್ನೊಬ್ಬ ಆತ್ಮನನ್ನು (ಶ್ರುತಿಯಲ್ಲಿ) ಹೇಳಿರುವದಿಲ್ಲ, ನಿಜ ; ಆದರೂ ಆನಂದಮಯನು ಬ್ರಹ್ಮವಲ್ಲ. ಏಕೆಂದರೆ (ಈ) ಆನಂದಮಯನನ್ನು ಕುರಿತು "ಅವನಿಗೆ ಪ್ರಿಯವೇ ಶಿರವು ; ಮೋದವು ದಕ್ಷಿಣಪಕ್ಷವು ; ಪ್ರಮೋದವು ಉತ್ತರಪಕ್ಷವು ; ಆನಂದವು ಆತ್ಮನು ; ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" (ತೈ. ೨-೫) ಎಂದು ಶ್ರುತಿಯಲ್ಲಿದೆ[4]. "ಇಲ್ಲಿ ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (ತೈ.೨-೧) ಎಂದು ಯಾವ ಬ್ರಹ್ಮವು ಮಂತ್ರವರ್ಣದಲ್ಲಿ ಪ್ರಕೃತವಾಗಿರುತ್ತದೆಯೋ ಅದನ್ನೇ ಇಲ್ಲಿ "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" (ತೈ. ೨-೫) ಎಂದು ಹೇಳಿದೆ[5]. ಅದನ್ನು ತಿಳಿಸಿಕೊಡುವದಕ್ಕಾಗಿಯೇ ಅನ್ನಮಯವೇ ಮುಂತಾದ ಆನಂದಮಯದವರೆಗಿನ ಐದು ಕೋಶಗಳು[6] ಕಲ್ಪಿತವಾಗಿರುತ್ತವೆ. (ಹೀಗಿರು) ವಲ್ಲಿ ಪ್ರಕೃತವನ್ನು ಕೈಬಿಡುವದಾಗಲಿ ಪ್ರಕೃತವಲ್ಲದ್ದನ್ನು ಪ್ರಾರಂಭಿಸಿರುವದಾಗಲಿ ಎಲ್ಲಿ ?

---

1 ಏಕೆಂದರೆ ಅವೂ ಬ್ರಹ್ಮಪ್ರಕರಣದಲ್ಲಿವೆ.

2 ಬ್ರಹ್ಮವಾಗದಿದ್ದರೆ.

3 ಪ್ರಕೃತವಾದ ಬ್ರಹ್ಮವನ್ನು ಬಿಟ್ಟು ಅಪ್ರಕೃತವಾದ ಅಬ್ರಹ್ಮವನ್ನು ತಿಳಿಸುವದಕ್ಕೆ ಹೊರಟಂತೆ ಆಗುವದು. ಆದ್ದರಿಂದ ಆ ಅನಿಷ್ಟವು ಬಂದೊದಗದೆ ಇರಲೆಂದು ನಾವು ಆನಂದಮಯನೆಂದರೆ ಬ್ರಹ್ಮವೇ ಎಂದು ನಿಶ್ಚಯಿಸಿರುತ್ತೇವೆ ಎಂದು ಭಾವ.

4 ಆದ್ದರಿಂದ ಸಾವಯವತ್ವವೆಂಬ ಲಿಂಗದಿಂದ ಆನಂದಮಯವು ಅಬ್ರಹ್ಮವೆಂದು ನಿರ್ಣಯವಾಗುತ್ತದೆ ಎಂದರ್ಥ.

5 ಆದ್ದರಿಂದ ಆನಂದಮಯನಿಗಿಂತ ಬ್ರಹ್ಮವನ್ನು ಬೇರೆಯಾಗಿಯೇ ಹೇಳಿದೆ ಎಂದಾಯಿತು.

6 ವೃತ್ತಿಕಾರರ ಮತದಲ್ಲಿ ವಿಜ್ಞಾನಮಯಾಂತವಾಗಿ ನಾಲ್ಕು ಕೋಶಗಳು ಉಕ್ತವಾಗಿವೆ.

# ಪುಚ್ಛಬ್ರಹ್ಮವನ್ನು ಸ್ವಪ್ರಧಾನವಾಗಿ ಹೇಳಿದೆ

(ಭಾಷ್ಯ)

೧೧೮. ನನು ಆನನ್ದಮಯಸ್ಯ ಅವಯವತ್ವೇನ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಇತ್ಯುಚ್ಯತೇ ಅನ್ನಮಯಾದೀನಾಮಿವ "ಇದಂ ಪುಚ್ಛಂ ಪ್ರತಿಷ್ಠಾ" (ತೈ. ೨-೧) ಇತ್ಯಾದಿ । ತತ್ರ ಕಥಂ ಬ್ರಹ್ಮಣಃ ಸ್ವಪ್ರಧಾನತ್ವಂ ಶಕ್ಯಂ ವಿಜ್ಞಾತುಮ್ ? ಪ್ರಕೃತತ್ವಾತ್ ಇತಿ ಬ್ರೂಮಃ । ನನು ಆನನ್ದಮಯಾವಯವತ್ವೇನಾಪಿ ಬ್ರಹ್ಮಣಿ ವಿಜ್ಞಾಯಮಾನೇ ನ ಪ್ರಕೃತತ್ವಂ ಹೀಯತೇ । ಆನನ್ದಮಯಸ್ಯ ಬ್ರಹ್ಮತ್ವಾತ್ ಇತಿ । ಅತ್ರೋಚ್ಯತೇ । ತಥಾ ಸತಿ ತದೇವ ಬ್ರಹ್ಮ ಆನನ್ದಮಯ ಆತ್ಮಾ ಅವಯವೀ । ತದೇವ ಚ ಬ್ರಹ್ಮ ಪುಚ್ಛಂ ಪ್ರತಿಷ್ಠಾ ಅವಯವಃ ಇತಿ ಅಸಾಮಞ್ಜಸ್ಯಂ ಸ್ಯಾತ್ । ಅನ್ಯತರಪರಿಗ್ರಹೇ ತು ಯುಕ್ತಂ "ಬ್ರಹ್ಮಪುಚ್ಛಂ ಪ್ರತಿಷ್ಠಾ" (ತೈ. ೨.೫) ಇತ್ಯತ್ರೈವ ಬ್ರಹ್ಮನಿರ್ದೇಶ ಆಶ್ರಯಿತುಮ್ । ಬ್ರಹ್ಮಶಬ್ದಸಂಯೋಗಾತ್ । ನ ಆನನ್ದಮಯವಾಕ್ಯೇ । ಬ್ರಹ್ಮಶಬ್ದಸಂಯೋಗಾಭಾವಾತ್ ಇತಿ । ಅಪಿಚ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" (ತೈ. ೨-೫) ಇತ್ಯುಕ್ತ್ವಾ ಇದಮ್ ಉಚ್ಯತೇ "ತದಪ್ಯೇಷ ಶ್ಲೋಕೋ ಭವತಿ । ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ವೇದ । ಸನ್ತಮೇನಂ ತತೋ ವಿದುರಿತಿ" (ತೈ. ೨-೬) ಇತಿ[1] । ಅಸ್ಮಿಂಶ್ಚ ಶ್ಲೋಕೇ ಅನನುಕೃಷ್ಯ ಆನನ್ದಮಯಂ ಬ್ರಹ್ಮಣ ಏವ ಭಾವಾಭಾವವೇದನಯೋಃ ಗುಣದೋಷಾಭಿಧಾನಾತ್ ಗಮ್ಯತೇ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" (ತೈ. ೨-೫) ಇತ್ಯತ್ರ ಬ್ರಹ್ಮಣ ಏವ ಸ್ವಪ್ರಧಾನತ್ವಮ್ ಇತಿ । ನ ಚ ಆನನ್ದಮಯಸ್ಯ ಆತ್ಮನಃ ಭಾವಾಭಾವಶಙ್ಕಾ ಯುಕ್ತಾ । ಪ್ರಿಯಮೋದಾದಿವಿಶೇಷಸ್ಯ ಆನನ್ದಮಯಸ್ಯ ಸರ್ವಲೋಕಪ್ರಸಿದ್ಧತ್ವಾತ್ । ಕಥಂ ಪುನಃ ಸ್ವಪ್ರಧಾನಂ ಸತ್ ಬ್ರಹ್ಮ ಆನನ್ದಮಯಸ್ಯ ಪುಚ್ಛತ್ವೇನ ನಿರ್ದಿಶ್ಯತೇ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" (ತೈ. ೨-೫) ಇತಿ ? ನೈಷ ದೋಷಃ । ಪುಚ್ಛವತ್ ಪುಚ್ಛಮ್ ಪ್ರತಿಷ್ಠಾ ಪರಾಯಣಮ್ ಏಕನೀಡಂ ಲೌಕಿಕಸ್ಯಾನನ್ದಜಾತಸ್ಯ ಬ್ರಹ್ಮಾನನ್ದಃ ಇತ್ಯೇತತ್ ಅನೇನ ವಿವಕ್ಷ್ಯತೇ ನಾವಯವತ್ವಮ್ । "ಏತಸ್ಯೈವಾನನ್ದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ" (ಬೃ. ೪-೩-೩೨) ಇತಿ ಶ್ರುತ್ಯನ್ತರಾತ್ ॥

(ಭಾಷ್ಯಾರ್ಥ)

(ವೃತ್ತಿಕಾರ):-ಅನ್ನಮಯಾದಿಗಳಿಗೆ "ಇದು ಪುಚ್ಛವು, ಪ್ರತಿಷ್ಠೆಯು" ಎಂದು ಮುಂಚಾಗಿ (ಹೇಳಿರು)ವಂತೆ ಆನಂದಮಯನಿಗೆ ಅವಯವವಾಗಿ "ಬ್ರಹ್ಮವು

1 ಇಲ್ಲಿ ಒಂದು ಇತಿ ಬೇಕೆಂದು ಇಟ್ಟುಕೊಂಡಿದೆ.

ಪುಚ್ಛವು, ಪ್ರತಿಷ್ಠೆಯು" ಎಂದು ಹೇಳಿರುತ್ತದೆ. (ಹೀಗಿರು)ವಲ್ಲಿ ಬ್ರಹ್ಮವು ಸ್ವಪ್ರಧಾನವೆಂದು ತಿಳಿಯುವದು ಹೇಗೆ ಆದೀತು?

(ಭಾಷ್ಯಕಾರ):—(ಅದೇ) ಪ್ರಕೃತವಾಗಿರುವದರಿಂದ (ಹಾಗೆಂದು ನಿಶ್ಚಯಿಸಬಹುದು) ಎನ್ನುತ್ತೇವೆ.

(ವೃತ್ತಿಕಾರ):–ಬ್ರಹ್ಮವು ಆನಂದಮಯನ ಅವಯವವೆಂದು ತಿಳಿದರೂ (ಅದು) ಪ್ರಕೃತವಾಗಿರುವದೆಂಬುದಕ್ಕೆ ಹಾನಿ ಬರುವದಿಲ್ಲ; ಏಕೆಂದರೆ ಆನಂದಮಯನು ಬ್ರಹ್ಮವಾಗಿರುತ್ತಾನೆ[1].

(ಭಾಷ್ಯಕಾರ):—ಈ (ವಿಷಯ)ದಲ್ಲಿ (ನಾವು) ಹೇಳುವದೇನೆಂದರೆ, ಹಾಗಾದರೆ ಅದೇ ಬ್ರಹ್ಮವು ಆನಂದಮಯಾತ್ಮವಾಗಿ ಅವಯವಿಯೆಂದೂ ಅದೇ ಬ್ರಹ್ಮವೇ ಪುಚ್ಛವೂ ಪ್ರತಿಷ್ಠೆಯೂ (ಆಗಿರುವದರಿಂದ) ಅವಯವವಾಗಿರುವದೆಂದೂ ಅಸಮಂಜಸವಾಗುವದು. ಆದರೆ (ಈ ಎರಡರಲ್ಲಿ) ಒಂದನ್ನೇ (ಬ್ರಹ್ಮವೆಂದು) ತೆಗೆದುಕೊಳ್ಳುವದಾದರೋ "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" ಎಂಬಲ್ಲಿಯೇ ಬ್ರಹ್ಮವನ್ನು ಹೇಳಿದೆಯೆಂದು ಇಟ್ಟುಕೊಳ್ಳುವದೇ ಯುಕ್ತವು; ಏಕೆಂದರೆ (ಅಲ್ಲಿ) ಬ್ರಹ್ಮಶಬ್ದದ ಸಂಬಂಧ(ವಿರುತ್ತದೆ); ಆನನ್ದಮಯವಾಕ್ಯದಲ್ಲಿ (ಬ್ರಹ್ಮವನ್ನು ಹೇಳಿದೆಯೆಂದಿಟ್ಟುಕೊಳ್ಳುವದು ಯುಕ್ತ)ವಲ್ಲ; ಏಕೆಂದರೆ (ಅಲ್ಲಿ) ಬ್ರಹ್ಮಶಬ್ದದ ಸಂಬಂಧವಿರುವದಿಲ್ಲ.

ಇದೂ ಅಲ್ಲದೆ "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" ಎಂದು ಹೇಳಿ ಇದನ್ನು ಹೇಳಿದೆ: "ಈ(ವಿಷಯ)ದಲ್ಲಿಯೂ ಈ ಶ್ಲೋಕವಿದೆ : ಬ್ರಹ್ಮವು ಇಲ್ಲವೆಂದು ತಿಳಿದನಾದರೆ ಅವನು ಇಲ್ಲದವನೇ ಆಗುವನು; ಬ್ರಹ್ಮವು ಇದೆ ಎಂದು ಅರಿತನಾದರೆ ಅವನನ್ನು ಇದಾನೆಂದು (ಬಲ್ಲವರು) ತಿಳಿಯುವರು." ಈ ಶ್ಲೋಕದಲ್ಲಿ ಆನಂದಮಯನನ್ನು ಹಿಡಿದೆಳೆಯದೆ ಬ್ರಹ್ಮವೇ ಇದೆ, ಇಲ್ಲ- ಎಂಬ ತಿಳಿವಳಿಕೆಗಳಿಂದ (ಆಗುವ)ಗುಣದೋಷಗಳನ್ನು ಹೇಳಿರುವದರಿಂದ 'ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು' ಎಂಬಲ್ಲಿ ಬ್ರಹ್ಮಕ್ಕೇ ಸ್ವಪ್ರಧಾನತ್ವ(ವಿದೆ) ಎಂದು ನಿಶ್ಚಯವಾಗುತ್ತದೆ. ಆನಂದಮಯಾತ್ಮನು ಇದಾನೊ, ಇಲ್ಲವೊ-ಎಂಬ ಶಂಕೆಯು ಸರಿಯೂ ಅಲ್ಲ; ಏಕೆಂದರೆ ಪ್ರಿಯಮೋದಾದಿವಿಶೇಷಗಳುಳ್ಳ ಆನಂದಮಯನು ಸರ್ವಲೋಕಪ್ರಸಿದ್ಧನಾಗಿರುತ್ತಾನೆ.[2]

---

1. ಆದ್ದರಿಂದ ಪ್ರಕೃತವಾಗಿರುವ ಬ್ರಹ್ಮವನ್ನೇ ಆನಂದಮಯನೆಂದು ಕರೆದಿರುತ್ತದೆ ಎಂದು ತಿಳಿದರೂ ಬ್ರಹ್ಮಪ್ರಕರಣಕ್ಕೆ ವಿಚ್ಛೇದವಿರುವದಿಲ್ಲ–ಎಂದರ್ಥ.

2. ಆನಂದಮಯನೆಂದರೆ ಸುಷುಪ್ತಿಯಲ್ಲಿರುವ ಮೂಲಾಜ್ಞಾನವೆಂದು ಈಚಿನ ವೇದಾಂತಿಗಳು ಕೆಲವರು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಇದು ತೈತ್ತಿರೀಯಭಾಷ್ಯದಲ್ಲಿಯೂ ಈ ಭಾಷ್ಯದಲ್ಲಿಯೂ ಇರುವ ಆನಂದಮಯನ ವರ್ಣನೆಗೆ ತೀರ ವಿರುದ್ಧವಾಗಿರುವದೆಂಬುದು ಸುಸ್ಪಷ್ಟವಾಗಿರುತ್ತದೆ.

(ವೃತ್ತಿಕಾರ):—ಹಾಗಾದರೆ ಸ್ವಪ್ರಧಾನವಾಗಿರುವ ಬ್ರಹ್ಮವನ್ನು "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" ಎಂದು ಆನಂದಮಯನ ಪುಚ್ಛವಾಗಿ ಹೇಳಿರುವದು ಹೇಗೆ (ಸರಿ)?

(ಭಾಷ್ಯಕಾರ) :—ಇದೇನೂ ತಪ್ಪಲ್ಲ. ಪುಚ್ಛದಂತಿರುವದರಿಂದ ಪುಚ್ಛವು. ಬ್ರಹ್ಮಾನಂದವು ಲೌಕಿಕವಾದ ಆನಂದಸಮೂಹಕ್ಕೆಲ್ಲ ಪ್ರತಿಷ್ಠೆಯು. ಪರಾಯಣವು ಮುಖ್ಯಾಶ್ರಯವು - ಎಂದು (ಈ ವಾಕ್ಯದಲ್ಲಿ) ವಿವಕ್ಷಿತವಾಗಿರುವದೇ ಹೊರತು (ಆನಂದಮಯನ) ಅವಯವವೆಂದಲ್ಲ. "ಇದೇ ಆನಂದದ ಅಂಶಗಳನ್ನು ಮಿಕ್ಕ ಪ್ರಾಣಿಗಳು ಉಪಜೀವಿಸಿಕೊಂಡಿರುತ್ತವೆ" (ಬೃ. ೪-೩-೩೨) ಎಂದು ಬೇರೊಂದು ಶ್ರುತಿಯಲ್ಲಿರುವದರಿಂದ (ಈ ಅರ್ಥವೇ ಸರಿ).

## ಆನಂದಮಯನು ಬ್ರಹ್ಮವೆಂಬಲ್ಲಿ ದೋಷಾಂತರಗಳು

(ಭಾಷ್ಯ)

೧೯. ಅಪಿ ಚ ಆನನ್ದಮಯಸ್ಯ ಬ್ರಹ್ಮತ್ವೇ ಪ್ರಿಯಾದ್ಯವಯವತ್ವೇನ ಸವಿಶೇಷಂ ಬ್ರಹ್ಮ ಅಭ್ಯುಪಗನ್ತವ್ಯಮ್ । ನಿರ್ವಿಶೇಷಂ ತು ಬ್ರಹ್ಮ ವಾಕ್ಯಶೇಷೇ ಶ್ರೂಯತೇ । ವಾಙ್ಮನಸಯೋರಗೋಚರತ್ವಾಭಿಧಾನಾತ್ "ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ । ಆನನ್ದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ" (ತೈ. ೨-೯) ಇತಿ[1] । ಅಪಿ ಚ 'ಆನನ್ದಪ್ರಚುರಃ' ಇತ್ಯುಕ್ತೇ ದುಃಖಾಸ್ತಿತ್ವಮಪಿ ಗಮ್ಯತೇ । ಪ್ರಾಚುರ್ಯಸ್ಯ ಲೋಕೇ ಪ್ರತಿಯೋಗ್ಯಲ್ಪತ್ವಾಪೇಕ್ಷತ್ವಾತ್ । ತಥಾ ಚ ಸತಿ "ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ" (ಛಾಂ. ೭-೨೪-೧) ಇತಿ ಭೂಮ್ನಿ ಬ್ರಹ್ಮಣಿ ತದ್ವ್ಯತಿರಿಕ್ತಾಭಾವಶ್ರುತಿಃ ಉಪರುಧ್ಯೇತ । ಪ್ರತಿಶರೀರಂ ಚ ಪ್ರಿಯಾದಿಭೇದಾತ್ ಆನನ್ದಮಯಸ್ಯಾಪಿ ಭಿನ್ನತ್ವಮ್ । ಬ್ರಹ್ಮ ತು ನ ಪ್ರತಿಶರೀರಂ ಭಿದ್ಯತೇ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತಿ ಆನನ್ತ್ಯಶ್ರುತೇಃ । "ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ" (ಶ್ವೇ. ೬.೧೧) ಇತಿ ಚ ಶ್ರುತ್ಯನ್ತರಾತ್ । ನ ಚ ಆನನ್ದಮಯಸ್ಯ ಅಭ್ಯಾಸಃ ಶ್ರೂಯತೇ । ಪ್ರಾತಿಪದಿಕಾರ್ಥಮಾತ್ರಮೇವ ಹಿ ಸರ್ವತ್ರ ಅಭ್ಯಸ್ಯತೇ—"ರಸೋ ವೈ ಸಃ । ರಸಗ್ಂ ಹ್ಯೇವಾಯಂ ಲಬ್ಧ್ವಾನನ್ದೀ ಭವತಿ" (ತೈ. ೨-೭) । ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನನ್ದೋ ನ ಸ್ಯಾತ್" (ತೈ. ೨-೭) "ಸೈಷಾ

---

1. ಇಲ್ಲಿ ಒಂದು ಇತಿಯು ಭಾಷ್ಯದಲ್ಲಿ ಕೈಬಿಟ್ಟುಹೋಗಿರುವದೆಂದು ತೋರುವದು.

ನನ್ದಸ್ಯ ಮೀಮಾಗ್ಂಸಾ ಭವತಿ''(ತೈ. ೨-೮), ''ಆನನ್ದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನೇತಿ'' (ತೈ.೨-೯), '' ಆನನ್ದೋ ಬ್ರಹ್ಮೇತಿ ವ್ಯಜಾನಾತ್'' (ತೈ. ೩-೬) ಇತಿ ಚ । ಯದಿ ಚ ಆನನ್ದಮಯಶಬ್ದಸ್ಯ ಬ್ರಹ್ಮವಿಷಯತ್ವಂ ನಿಶ್ಚಿತಂ ಭವೇತ್ ತತ ಉತ್ತರೇಷು ಆನನ್ದಮಾತ್ರಪ್ರಯೋಗೇಷ್ವಪಿ ಆನನ್ದಮಯಾಭ್ಯಾಸಃ ಕಲ್ಪ್ಯೇತ । ನ ತು ಆನನ್ದಮಯಸ್ಯ ಬ್ರಹ್ಮತ್ವಮ್ ಅಸ್ತಿ, ಪ್ರಿಯಶಿರಸ್ತ್ವಾದಿಭಿರ್ಹೇತುಭಿಃ ಇತ್ಯವೋಚಾಮ । ತಸ್ಮಾತ್ ಶ್ರುತ್ಯನ್ತರೇ ''ವಿಜ್ಞಾನಮಾನನ್ದಂ ಬ್ರಹ್ಮ'' (ಬೃ. ೩-೯-೨೮) ಇತಿ ಆನನ್ದಪ್ರಾತಿಪದಿಕಸ್ಯ ಬ್ರಹ್ಮಣಿ ಪ್ರಯೋಗದರ್ಶನಾತ್'' ''ಯದೇಷ ಆಕಾಶ ಆನನ್ದೋ ನ ಸ್ಯಾತ್'' (ತೈ. ೨-೭) ಇತ್ಯಾದಿಃ ಬ್ರಹ್ಮವಿಷಯಃ ಪ್ರಯೋಗಃ, ನ ತು ಆನನ್ದಮಯಾಭ್ಯಾಸಃ ಇತಿ ಅವಗನ್ತವ್ಯಮ್ । ಯಸ್ತ್ವಯಂ ಮಯಡನ್ತಸ್ಯೈವ ಆನನ್ದಶಬ್ದಸ್ಯ ಅಭ್ಯಾಸಃ ''ಏತಮಾನನ್ದಮಯಮಾತ್ಮಾನಮುಪಸಙ್ಕ್ರಾಮತಿ'' (ತೈ. ೨-೮) ಇತಿ ನ ತಸ್ಯ ಬ್ರಹ್ಮವಿಷಯತ್ವಮ್ ಅಸ್ತಿ। ವಿಕಾರಾತ್ಮನಾಮೇವ ಅನ್ನಮಯಾದೀನಾಮ್ ಅನಾತ್ಮನಾಮ್ ಉಪಸಙ್ಕ್ರಮಿತವ್ಯಾನಾಂ ಪ್ರವಾಹೇ ಪಠಿತತ್ವಾತ್[1] ॥

(ಭಾಷ್ಯಾರ್ಥ)

ಇದಲ್ಲದೆ ಆನಂದಮಯನು ಬ್ರಹ್ಮವೆಂದರೆ ಪ್ರಿಯವೇ ಮುಂತಾದ ಅವಯವಗಳಿರುವದರಿಂದ ಸವಿಶೇಷಬ್ರಹ್ಮವನ್ನು (ಇಲ್ಲಿ ಹೇಳಿದೆ) ಎಂದಿಟ್ಟುಕೊಳ್ಳಬೇಕಾಗುವದು. ಆದರೆ ವಾಕ್ಯಶೇಷದಲ್ಲಿ ''ಯಾವದರಿಂದ ವಾಕ್ಕುಗಳು ಮನಸ್ಸಿನೊಡನೆ (ಯಾವದನ್ನು) ಹೊಂದಲಾರದೆ ಹಿಂದಿರುಗುವವೋ (ಆ) ಬ್ರಹ್ಮದ ಆನಂದವನ್ನು ಅರಿತುಕೊಂಡವನು ಏತಕ್ಕೂ ಹೆದರುವದಿಲ್ಲ'' (ತೈ. ೨-೯) ಎಂದು ವಾಙ್ಮನಸ್ಸುಗಳಿಗೆ ಅಗೋಚರವಾಗಿರುವದೆಂದು ಹೇಳಿರುವದರಿಂದ ನಿರ್ವಿಶೇಷ ಬ್ರಹ್ಮವನ್ನೇ ಹೇಳಿರುತ್ತದೆ. ಇದೂ ಅಲ್ಲದೆ ಆನಂದಪ್ರಚುರನು ಎಂದರೆ ದುಃಖ (ಒಂದಿಷ್ಟು) ಇದೆ ಎಂದೂ ನಿಶ್ಚಯವಾಗುತ್ತದೆ; ಏಕೆಂದರೆ ಪ್ರಾಚುರ್ಯವೆಂಬುದಕ್ಕೆ ಲೋಕದಲ್ಲಿ ಪ್ರತಿಯೋಗಿಯ ಅಲ್ಪತ್ವದ ಅಪೇಕ್ಷೆಯಿರುತ್ತದೆ. ಮತ್ತು ಹಾಗಾದರೆ ''ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ, ಮತ್ತೊಂದನ್ನು ಕೇಳುವದಿಲ್ಲವೋ, ಮತ್ತೊಂದನ್ನು ಅರಿಯುವದಿಲ್ಲವೋ ಅದು ಭೂಮವು'' (ಛಾಂ. ೭-೨೪-೧) ಎಂದು ಭೂಮವೆಂಬ ಬ್ರಹ್ಮದಲ್ಲಿ ಆ (ಬ್ರಹ್ಮಕ್ಕೆ) ವ್ಯತಿರಿಕ್ತವಾದದ್ದು ಇರುವದಿಲ್ಲವೆಂಬ ಶ್ರುತಿಗೆ ವಿರುದ್ಧವಾಗುವದು. ಮತ್ತು ಒಂದೊಂದು ಶರೀರದಲ್ಲಿಯೂ ಪ್ರಿಯವೇ ಮುಂತಾದವುಗಳು ಬೇರೆ(ಬೇರೆ)ಯಾಗಿರುವದರಿಂದ

1 ಭಾ. ಭಾ. ೯೭ರಲ್ಲಿರುವಂತೆ 'ಇಲ್ಲಿಯೂ ಪ್ರವಾಹೇ ಪಠಿತತ್ವಾತ್' ಎಂದೇ ಭಾಷ್ಯಕಾರರು ಬರೆದಿದ್ದರೂ ಬರೆದಿರಬಹುದೆಂದು ತೋರುತ್ತದೆ. ಪಾಠಭೇದದಿಂದ ಅರ್ಥಭೇದವೇನೂ ಆಗುವದಿಲ್ಲ.

ಆನಂದಮಯನೂ ಬೇರೆಬೇರೆಯಾಗಿರುತ್ತಾನೆ. ಆದರೆ ಬ್ರಹ್ಮವು (ಹಾಗೆ) ಒಂದೊಂದು ಶರೀರಕ್ಕೂ ಬೇರೆ(ಬೇರೆ)ಯಾಗಿರುವದಿಲ್ಲ. ಏಕೆಂದರೆ "ಸತ್ಯವೂ ಜ್ಞಾನವೂ ಅನಂತವೂ ಆದದ್ದು ಬ್ರಹ್ಮವು'' (ತೈ. ೨-೧) ಎಂದು ಬ್ರಹ್ಮಕ್ಕೆ ಆನಂತ್ಯವನ್ನು ಶ್ರುತಿಯಲ್ಲಿ (ಹೇಳಿರುತ್ತದೆ.) "ಒಬ್ಬ ದೇವನೇ ಸರ್ವಭೂತಗಳಲ್ಲಿಯೂ ಅಡಗಿರುವನು, (ಅವನು) ಸರ್ವವ್ಯಾಪಿಯು, ಸರ್ವಭೂತಗಳಿಗೂ ಒಳಗಿನ ಅಂತರಾತ್ಮನು'' (ಶ್ವೇ. ೬-೧೧) ಎಂದು ಬೇರೊಂದು ಶ್ರುತಿಯೂ (ಹೇಳುತ್ತದೆ).

ಆನಂದಮಯನ ಅಭ್ಯಾಸವು ಶ್ರುತಿಯಲ್ಲಿಲ್ಲವೂ ಇಲ್ಲ. "ಅವನು ರಸವೇ; ರಸವನ್ನೇ ಅಲ್ಲವೆ, ಇವನು ಪಡೆದು ಆನಂದಿಯಾಗುತ್ತಾನೆ?" (ತೈ.೨-೭), "ಈ ಆನಂದವು ಆಕಾಶದಲ್ಲಿಲ್ಲದಿದ್ದರೆ ಯಾವನು ತಾನೆ ಅಪಾನ(ವೃತ್ತಿಯ) ಕೆಲಸವನ್ನು ಮಾಡಿಯಾನು? ಯಾವನುತಾನೆ ಪ್ರಾಣ(ವೃತ್ತಿಯ) ಕೆಲಸವನ್ನು ಮಾಡಿಯಾನು?" (ತೈ. ೨-೭), "ಆ ಇದು ಆನಂದದ ಮೀಮಾಂಸೆಯಾಗಿರುವದು'' (ತೈ. ೨-೮), "ಬ್ರಹ್ಮದ ಆನಂದವನ್ನು ಅರಿತುಕೊಂಡವನು ಏತಕ್ಕೂ ಹೆದರುವದಿಲ್ಲ" (ತೈ. ೨-೯) ಎಂದೂ ''ಆನಂದವನ್ನು ಬ್ರಹ್ಮವೆಂದು ಅರಿತುಕೊಂಡನು'' (ತೈ. ೩-೬) ಎಂದೂ ಎಲ್ಲಾ ಕಡೆಯಲ್ಲಿಯೂ(ಆನಂದ) ಪ್ರಾತಿಪದಿಕದ ಅರ್ಥವನ್ನು ಮಾತ್ರವಲ್ಲವೆ, ಮತ್ತೆಮತ್ತೆ ಹೇಳಿರುವದು? ಆನಂದಮಯಶಬ್ದಕ್ಕೆ ಬ್ರಹ್ಮವೇ ವಿಷಯವೆಂದು (ಮೊದಲೇ) ನಿಶ್ಚಯವಾಗಿಬಿಟ್ಟಿದ್ದರೆ, ಆಗ ಮುಂದೆ ಆನಂದವೆಂದಿಷ್ಟೇ ಪ್ರಯೋಗವಿರುವ ಕಡೆಯಲ್ಲಿಯೂ ಆನಂದಮಯನನ್ನೇ ಮತ್ತೆಮತ್ತೆ ಹೇಳಿದೆ ಎಂದು ಕಲ್ಪಿಸಬಹುದಾಗಿತ್ತು.[1] ಆದರೆ ಪ್ರಿಯಶಿರಸ್ತ್ವವೇ ಮುಂತಾದ ಹೇತುಗಳಿಂದ ಆನಂದಮಯನು ಬ್ರಹ್ಮವೆಂಬುದು ಸರಿಯಲ್ಲವೆಂದು (ನಾವು) ಆಗಲೆ ಹೇಳಿರುತ್ತೇವೆ. ಆದ್ದರಿಂದ ಬೇರೊಂದು ಶ್ರುತಿಯಲ್ಲಿ "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು'' (ಬೃ.೩-೯-೨೮) ಎಂದು ಆನಂದಪ್ರಾತಿಪದಿಕವನ್ನು ಬ್ರಹ್ಮ(ವೆಂಬರ್ಥ)ದಲ್ಲಿ; ಪ್ರಯೋಗಮಾಡಿರುವದು ಕಂಡುಬರುವದರಿಂದ "ಈ ಆನಂದವು ಆಕಾಶದಲ್ಲಿಲ್ಲದಿದ್ದರೆ" (ತೈ. ೨-೭) ಎಂಬುದೇ ಮುಂತಾದದ್ದೂ ಬ್ರಹ್ಮವಿಷಯಕವಾದ ಪ್ರಯೋಗವೇ ಹೊರತು ಆನಂದಮಯನ ಅಭ್ಯಾಸವಲ್ಲ ಎಂದು ನಿಶ್ಚಯಿಸಬೇಕು. ಆದರೆ "ಈ ಆನಂದಮಯಾತ್ಮನನ್ನು ಉಪಸಂಕ್ರಮಿಸುತ್ತಾನೆ'' (ತೈ. ೨-೮) ಎಂಬೀ ಮಯಪ್ರತ್ಯಯಾಂತವೇ ಆಗಿರುವ ಆನಂದಮಯಶಬ್ದದ ಅಭ್ಯಾಸವಿರುವದಷ್ಟೆ, ಅದಕ್ಕೆ ಬ್ರಹ್ಮವಿಷಯತ್ವವಿರುವದಿಲ್ಲ.

---

1 ಬ್ರಹ್ಮಕ್ಕೆ ಮಯಪ್ರತ್ಯಯದ ವಿಕಾರಾದ್ಯರ್ಥಗಳು ಹೊಂದುವದಿಲ್ಲವಾದ್ದರಿಂದ ಮಯ ಎಂಬುದು ಸ್ವರೂಪಾರ್ಥಕವೆಂದು ಕಲ್ಪಿಸಬಹುದಾಗಿತ್ತು ಎಂದು ಭಾವ.

ಏಕೆಂದರೆ ವಿಕಾರಾತ್ಮರುಗಳೇ ಆಗಿರುವ ಉಪಸಂಕ್ರಮಿಸಲ್ಪಡಬೇಕಾದ ಅನಾತ್ಮ ವಾಗಿರುವ ಅನ್ನಮಯನೇ ಮುಂತಾದವರ ಪ್ರವಾಹದಲ್ಲಿ (ಈ ಆನಂದಮಯ ನನ್ನು ) ಹೇಳಿರುತ್ತದೆ.

## ಆನಂದಮಯನು ಅಬ್ರಹ್ಮವೆಂಬಲ್ಲಿ ಆಕ್ಷೇಪಪರಿಹಾರಗಳು

(ಭಾಷ್ಯ)

೧೧೦. ನನು ಆನನ್ದಮಯಸ್ಯ ಉಪಸಙ್ಕ್ರಮಿತವ್ಯಸ್ಯ ಅನ್ನಮಯಾದಿವತ್ ಅಬ್ರಹ್ಮತ್ವೇ ಸತಿ ನೈವ ವಿದುಷೋ ಬ್ರಹ್ಮಪ್ರಾಪ್ತಿಫಲಂ ನಿರ್ದಿಷ್ಟಂ ಭವೇತ್ । ನೈಷ ದೋಷಃ । ಆನನ್ದಮಯೋಪಸಙ್ಕ್ರಮಣನಿರ್ದೇಶೇನೈವ ಪುಚ್ಛ ಪ್ರತಿಷ್ಠಾಭೂತಬ್ರಹ್ಮಪ್ರಾಪ್ತೇಃ ಫಲಸ್ಯ ನಿರ್ದಿಷ್ಟತ್ವಾತ್ । "ತದಪ್ಯೇಷ ಶ್ಲೋಕೋ ಭವತಿ । ಯತೋ ವಾಚೋ ನಿವರ್ತನ್ತೇ" (ತೈ. ೨-೯) ಇತ್ಯಾದಿನಾ ಚ ಪ್ರಪಞ್ಚ್ಯಮಾನತ್ವಾತ್ । ಯಾ ತು ಆನನ್ದಮಯಸಂನಿಧಾನೇ "ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತಿ" (ತೈ. ೨-೬) (ಇತಿ) ಇಯಂ ಶ್ರುತಿರುದಾಹೃತಾ, ಸಾ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" (ತೈ. ೨-೫) ಇತ್ಯನೇನ ಸಂನಿಹಿತತರೇಣ ಬ್ರಹ್ಮಣಾ ಸಂಬಧ್ಯಮಾನಾ ನಾನನ್ದಮಯಸ್ಯ ಬ್ರಹ್ಮತಾಂ ಪ್ರತಿಬೋಧಯತಿ । ತದಪೇಕ್ಷತ್ವಾಚ್ಚ ಉತ್ತರಸ್ಯ ಗ್ರನ್ಥಸ್ಯ "ರಸೋ ವೈ ಸಃ" ಇತ್ಯಾದೇಃ ನಾನನ್ದಮಯವಿಷಯತಾ । ನನು "ಸೋಽಕಾಮಯತ'' ಇತಿ ಬ್ರಹ್ಮಣಿ ಪುಲ್ಲಿಙ್ಗನಿರ್ದೇಶೋ ನೋಪಪದ್ಯತೇ। ನಾಯಂ ದೋಷಃ। ''ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತ್ಯತ್ರ ಪುಲ್ಲಿಙ್ಗೇನಾಪಿ ಆತ್ಮಶಬ್ದೇನ ಬ್ರಹ್ಮಣಃ ಪ್ರಕೃತತ್ವಾತ್ । ಯಾ ತು ಭಾರ್ಗವೀ ವಾರುಣೀ ವಿದ್ಯಾ ''ಆನನ್ದೋ ಬ್ರಹ್ಮೇತಿ ವ್ಯಜಾನಾತ್'' (ತೈ. ೩.೬) ಇತಿ, ತಸ್ಯಾಂ ಮಯಡ-ಶ್ರವಣಾತ್, ಪ್ರಿಯಶಿರಸ್ತ್ವಾದ್ಯಶ್ರವಣಾಚ್ಚ ಯುಕ್ತಮ್ ಆನನ್ದಸ್ಯ ಬ್ರಹ್ಮತ್ವಮ್ । ತಸ್ಮಾತ್ ಅಣುಮಾತ್ರಮಪಿ ವಿಶೇಷಮನಾಶ್ರಿತ್ಯ ನ ಸ್ವತ ಏವ ಪ್ರಿಯಶಿರಸ್ತ್ವಾದಿ ಬ್ರಹ್ಮಣಿ ಉಪಪದ್ಯತೇ । ನ ಚ ಇಹ ಸವಿಶೇಷಂ ಬ್ರಹ್ಮ ಪ್ರತಿಪಿಪಾದಯಿಷಿತಮ್ । ವಾಙ್ಮನಸಗೋಚರಾತಿಕ್ರಮಶ್ರುತೇಃ । ತಸ್ಮಾತ್ ಅನ್ನಮಯಾದಿಷ್ವಿವ ಆನನ್ದಮಯೇಽಪಿ ವಿಕಾರಾರ್ಥ ಏವ ಮಯಟ್ ವಿಜ್ಞೇಯಃ, ನ ಪ್ರಾಚುರ್ಯಾರ್ಥಃ ॥

(ಭಾಷ್ಯಾರ್ಥ)

(ಆಕ್ಷೇಪ) :—ಉಪಸಂಕ್ರಮಣವಾಡತಕ್ಕ[1] ಆನಂದಮಯನು ಅನ್ನಮಯಾದಿಗಳಂತೆ ಅಬ್ರಹ್ಮ ಎಂಬ (ಪಕ್ಷ)ದಲ್ಲಿ ಜ್ಞಾನಿಗೆ ಬ್ರಹ್ಮಪ್ರಾಪ್ತಿ ಎಂಬ ಫಲವನ್ನು ತಿಳಿಸಿದಂತೆಯೇ ಆಗುವದಿಲ್ಲವಲ್ಲ!

(ಪರಿಹಾರ) :—ಇದೇನೂ ತಪ್ಪಾಗುವದಿಲ್ಲ. ಆನಂದಮಯನ ಉಪಸಂಕ್ರಮಣವನ್ನು ತಿಳಿಸಿದ್ದರಿಂದಲೇ ಪುಚ್ಛವೂ ಪ್ರತಿಷ್ಠೆಯೂ ಆಗಿರುವ ಬ್ರಹ್ಮವನ್ನು ಪಡೆಯುವದೆಂಬ ಫಲವನ್ನು ತಿಳಿಸಿದಂತೆ ಆಗಿರುತ್ತದೆ. ಮತ್ತು "ಈ (ವಿಷಯ)ವಲ್ಲಿಯೇ ಈ ಶ್ಲೋಕವು ಇರುತ್ತದೆ: ಯಾವದರಿಂದ ವಾಕ್ಕುಗಳು ಹಿಂತಿರುಗುವವೋ "(ತೈ. ೩-೯) ಎಂದು ಮುಂತಾಗಿ (ಈ ಬ್ರಹ್ಮಪ್ರಾಪ್ತಿಯನ್ನು) ವಿಸ್ತರಿಸಿ (ಹೇಳಿ)ಯೂ ಇರುತ್ತದೆ.[2] ಆನಂದಮಯನ ಸಂನಿಧಾನದಲ್ಲಿ "ಅವನು ಬಹುವಾಗುವೆನು, ಉತ್ಪತ್ತಿಯಾಗುವೆನು ಎಂದು ಕಾಮಿಸಿದನು" (ತೈ. ೨-೬) ಎಂಬೀ ಶ್ರುತಿಯಿದೆ ಎಂದು (ಪೂರ್ವಪಕ್ಷಿಯು ೧೬ನೆಯ ಸೂತ್ರದ ವೃತ್ತಿಯಲ್ಲಿ) ಉದಾಹರಿಸಿದ್ದನಷ್ಟೆ, ಅದು "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" ಎಂಬ (ವಾಕ್ಯದಲ್ಲಿ) ಸಂನಿಹಿತತರವಾಗಿರುವ ಬ್ರಹ್ಮಕ್ಕೆ ಸಂಬಂಧಪಟ್ಟಿರುವದರಿಂದ ಆನಂದಮಯನು ಬ್ರಹ್ಮವೆಂದು ತಿಳಿಸಲಾರದು.[3] "ರಸವೇ ಅವನು" ಎಂದು ಮುಂತಾಗಿರುವ (೧೭ನೆಯ ಸೂತ್ರದ ವೃತ್ತಿಯಲ್ಲಿ ಪೂರ್ವಪಕ್ಷಿಯು ಉದಾಹರಿಸಿರುವ) ಮುಂದಿನ ಗ್ರಂಥವೂ ಈ (ಪ್ರಕರಣ)ವನ್ನೇ ಬಯಸುವದರಿಂದ[4] (ಅದೂ) ಆನಂದಮಯನ ವಿಷಯವಲ್ಲ.

---

1 ಉಪಸಂಕ್ರಮಣವೆಂದರೆ ಪ್ರಾಪ್ತಿ ಎಂದು ಪೂರ್ವಪಕ್ಷಿಯ ಅರ್ಥ; ಜ್ಞಾನವು ಎಂದು ಭಾಷ್ಯಕಾರರ ಅಭಿಪ್ರಾಯ. ತೈ. ಭಾ. ೨-೮. ಭಾ. ಭಾ. ೨೧೭ನ್ನು ನೋಡಿ. ಆನಂದಮಯನೆಂದರೆ ಕಾರ್ಯಾತ್ಮನೇ ಎಂಬ ಸಿದ್ಧಾಂತದ ಯುಕ್ತಿಗಳನ್ನು ತೈ. ಭಾ. ೨-೫ ಭಾ. ಭಾ. ೧೮೮ ರಲ್ಲಿಯೂ ಸಂಗ್ರಹವಾಗಿ ಕೊಟ್ಟಿರುತ್ತದೆ.

2. ಆನಂದಮಯನನ್ನು ಅರಿತುಕೊಂಡದ್ದರಿಂದ "ಆನಂದವೇ ಆತ್ಮನು, ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" ಎಂದು ಮನದಟ್ಟಾಗಿಬಿಟ್ಟಿರುವದರಿಂದ ಆನಂದರೂಪವಾದ ಬ್ರಹ್ಮಪ್ರಾಪ್ತಿಯಾಗಿಬಿಟ್ಟಿರುತ್ತದೆ. "ಬ್ರಹ್ಮದ ಆನಂದವನ್ನು ಅರಿತುಕೊಂಡವನು ಏತಕ್ಕೂ ಹೆದರುವದಿಲ್ಲ" ಎಂಬ ವಾಕ್ಯದಿಂದ ಇದನ್ನು ವಿವರಿಸಿಯೂ ಇದೆ ಎಂದರ್ಥ.

3. ಆದ್ದರಿಂದ ಇದೊಂದೇ ವಾಕ್ಯದ ಬಲದಿಂದ ಆನಂದಮಯನು ಬ್ರಹ್ಮವೆಂದು ನಿರ್ಣಯಿಸುವದಕ್ಕೆ ಆಗುವದಿಲ್ಲ.

4. "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಎಂಬ ಬ್ರಹ್ಮದ ಪ್ರಕರಣದಲ್ಲಿಯೇ ಇರುವದರಿಂದ.

(ಆಕ್ಷೇಪ):—"ಅವನು ಕಾಮಿಸಿದನು" (ತೈ. ೨-೬) ಎಂಬ (ವಾಕ್ಯದಲ್ಲಿ) ಪುಲ್ಲಿಂಗದಿಂದ (ಬ್ರಹ್ಮವನ್ನು) ತಿಳಿಸಿರುವದು (ನಿಮ್ಮ ಪಕ್ಷದಲ್ಲಿ) ಹೊಂದುವ ದಿಲ್ಲವಲ್ಲ[1] !

(ಪರಿಹಾರ) :—ಇದೇನೂ ತಪ್ಪಲ್ಲ. "ಆ ಈ ಆತ್ಮನಿಂದ ಆಕಾಶವು ಹುಟ್ಟಿತು" (ತೈ. ೨-೧) ಎಂಬಲ್ಲಿ ಪುಲ್ಲಿಂಗವಾದ ಆತ್ಮಶಬ್ದದಿಂದಲೂ ಬ್ರಹ್ಮ ವನ್ನು ಪ್ರಕ್ರಮಮಾಡಿರುತ್ತದೆ. (ಇನ್ನು ನೀವು) "ಆನಂದವು ಬ್ರಹ್ಮವೆಂದು ತಿಳಿದನು" (ತೈ. ೩-೬) ಎಂದು ಉದಾಹರಿಸಿರುವ ಭಾರ್ಗವವಾರುಣವಿದ್ಯೆಯಿದೆ ಯಲ್ಲ, ಅದರಲ್ಲಿ (ಆನಂದಮಯ ಎಂದು) ಮಯ(ಪ್ರತ್ಯಯ)ವನ್ನು ಹೇಳಿರು ವದಿಲ್ಲವಾದ್ದರಿಂದಲೂ ಪ್ರಿಯಶಿರಸ್ತ್ವಾದಿಗಳನ್ನು ಹೇಳಿಲ್ಲವಾದ್ದರಿಂದಲೂ (ಅಲ್ಲಿ) ಆನಂದವೆಂದರೆ ಬ್ರಹ್ಮವೇ ಎಂಬುದೇ ಸರಿಯೇ.

ಆದ್ದರಿಂದ ಒಂದಿಷ್ಟುಮಾತ್ರವಾದರೂ ವಿಶೇಷವನ್ನು ಇಟ್ಟುಕೊಳ್ಳದೆ ಇದ್ದರೆ ಬ್ರಹ್ಮಕ್ಕೆ ಸ್ವಂತವಾಗಿಯೇ[2] ಪ್ರಿಯಶಿರಸ್ತ್ವಾದಿಗಳು (ಉಂಟೆಂಬದು) ಹೊಂದು ವದಿಲ್ಲ. ಇಲ್ಲಿ ಸವಿಶೇಷಬ್ರಹ್ಮವನ್ನು[3] ಹೇಳುವದರಲ್ಲಿ (ಶ್ರುತಿಗೆ) ತಾತ್ಪರ್ಯವು ಇರುವದೂ ಇಲ್ಲ; ಏಕೆಂದರೆ (ಬ್ರಹ್ಮವು) ವಾಕ್ಕಿಗೂ ಮನಸ್ಸಿಗೂ ವಿಷಯವಾಗಿರು ವದನ್ನು ಮೀರಿರುತ್ತದೆ ಎಂದು (ಇಲ್ಲಿ) ಶ್ರುತಿಯಲ್ಲಿದೆ. ಆದ್ದರಿಂದ ಅನ್ನ ಮಯವೇ ಮುಂತಾದವುಗಳಲ್ಲಿರುವಂತೆಯೇ ಆನಂದಮಯನಲ್ಲಿಯೂ ಮಯ (ಪ್ರತ್ಯಯಕ್ಕೆ) ವಿಕಾರಾರ್ಥವೇ, ಪ್ರಾಚುರ್ಯಾರ್ಥವಿಲ್ಲ ಎಂದು ತಿಳಿಯಬೇಕು.

## ಭಾಷ್ಯಕಾರರ ಅಧಿಕರಣದಲ್ಲಿ ಸೂತ್ರಗಳ ಅರ್ಥ

(ಭಾಷ್ಯ)

೧೧೧. ಸೂತ್ರಾಣಿ ತು ಏವಂ ವ್ಯಾಖ್ಯೇಯಾನಿ-"ಬ್ರಹ್ಮ ಪುಚ್ಛಂ ಪ್ರತಿಷ್ಠಾ" (ತೈ.೨-೫) ಇತ್ಯತ್ರ ಕಿಮ್ ಆನನ್ದಮಯಾವಯವತ್ವೇನ ಬ್ರಹ್ಮ ವಿವಕ್ಷ್ಯತೇ, ಉತ ಸ್ವಪ್ರಧಾನತ್ವೇನ ಇತಿ? ಪುಚ್ಛಶಬ್ದಾತ್ ಅವಯವತ್ವೇನ ಇತಿ ಪ್ರಾಪ್ತೇ ಉಚ್ಯತೇ- "ಆನನ್ದಮಯೋಽಭ್ಯಾಸಾತ್" (೧-೧-೧೨) । ಆನನ್ದಮಯ ಆತ್ಮಾ ಇತ್ಯತ್ರ

1. ಆನಂದಮಯಶಬ್ದವು ಪುಲ್ಲಿಂಗವಾದ್ದರಿಂದ ವೃತ್ತಿಕಾರರ ಮತಕ್ಕೇ "ಸಃ" ಎಂಬ ಪುಲ್ಲಿಂಗದ ಸರ್ವನಾಮವು ಹೊಂದಿಕೆಯಾಗಿದೆ ಎಂದು ಭಾವ.

2. ಉಪಾಧಿಯ ಅಪೇಕ್ಷೆಯಿಲ್ಲದೆಯೇ ಎಂದರ್ಥ.

3. ವೃತ್ತಿಕಾರರು ಆನಂದಮಯವೆಂಬ ಮಾತಿನಿಂದ ಸವಿಶೇಷಬ್ರಹ್ಮವನ್ನು ಹೇಳಿದೆ ಎಂಬ ಅಭಿಪ್ರಾಯವುಳ್ಳವರು; ಭಾಷ್ಯಕಾರರು ಇಲ್ಲಿ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದು ನಿರ್ವಿಶೇಷ ಬ್ರಹ್ಮವನ್ನು ಹೇಳಿದೆ ಎಂಬ ಅಭಿಪ್ರಾಯದವರು. ಇಬ್ಬರಿಗೂ ಬ್ರಹ್ಮದಲ್ಲಿ ನಿರ್ವಿಶೇಷತ್ವವುಂಟೆಂ ಬುದು ಒಪ್ಪಾಗಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು.

"ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಇತಿ ಸ್ವಪ್ರಧಾನಮೇವ ಬ್ರಹ್ಮ ಉಪದಿಶ್ಯತೇ। ಅಭ್ಯಾಸಾತ್। "ಅಸನ್ನೇವ ಸ ಭವತಿ" (ತೈ. ೨-೬) ಇತ್ಯಸ್ಮಿನ್ ನಿಗಮನ-ಶ್ಲೋಕೇ ಬ್ರಹ್ಮಣ ಏವ ಕೇವಲಸ್ಯ ಅಭ್ಯಸ್ಯಮಾನತ್ವಾತ್। "ವಿಕಾರಶಬ್ದಾತ್ ನೇತಿ ಚೇನ್ನ ಪ್ರಾಚುರ್ಯಾತ್" (೧-೧-೧೩) ವಿಕಾರಶಬ್ದೇನ ಅವಯವ-ಶಬ್ದೋಽಭಿಪ್ರೇತಃ। 'ಪುಚ್ಛಮ್' ಇತಿ ಅವಯವಶಬ್ದಾತ್ ನ ಸ್ವಪ್ರಧಾನತ್ವಂ ಬ್ರಹ್ಮಣಃ ಇತಿ ಯದುಕ್ತಮ್ ತಸ್ಯ ಪರಿಹಾರೋ ವಕ್ತವ್ಯಃ। ಅತ್ರ ಉಚ್ಯತೇ। ನಾಯಂ ದೋಷಃ। ಪ್ರಾಚುರ್ಯಾದಪಿ ಅವಯವಶಬ್ದೋಪಪತ್ತೇಃ। ಪ್ರಾ-ಚುರ್ಯಂ ಪ್ರಾಯಾಪತ್ತಿಃ। ಅವಯವಪ್ರಾಯೇ ವಚನಮ್ ಇತ್ಯರ್ಥಃ। ಅನ್ನ-ಮಯಾದೀನಾಂ ಹಿ ಶಿರ ಆದಿಷು ಪುಚ್ಛಾನ್ತೇಷು ಅವಯವೇಷು ಉಕ್ತೇಷು ಆನನ್ದ-ಮಯಸ್ಯಾಪಿ ಶಿರಆದೀನಿ ಅವಯವಾನ್ತರಾಣಿ ಉಕ್ತ್ವಾ ಅವಯವಪ್ರಾಯಾಪತ್ತ್ಯೈ "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಇತ್ಯಾಹ ನಾವಯವವಿವಕ್ಷಯಾ। ಯತ್ಕಾರಣಮ್ ಅಭ್ಯಾಸಾತ್' ಇತಿ ಸ್ವಪ್ರಧಾನತ್ವಂ ಬ್ರಹ್ಮಣಃ ಸಮರ್ಥಿತಮ್। "ತದ್ಧೇತು-ವ್ಯಪದೇಶಾಚ್ಚ" (೧-೧-೧೪) ಸರ್ವಸ್ಯ ವಿಕಾರಜಾತಸ್ಯ ಸಾನನ್ದಮಯಸ್ಯ ಕಾರಣತ್ವೇನ ಬ್ರಹ್ಮ ವ್ಯಪದಿಶ್ಯತೇ "ಇದಗ್ಂ ಸರ್ವಮಸೃಜತ ಯದಿದಂ ಕಿಂ ಚ" (ತೈ. ೨-೬) ಇತಿ। ನ ಚ ಕಾರಣಂ ಸತ್ ಬ್ರಹ್ಮ ಸ್ವವಿಕಾರಸ್ಯ ಆನನ್ದಮಯಸ್ಯ ಮುಖ್ಯಯಾ ವೃತ್ತ್ಯಾ ಅವಯವಃ ಉಪಪದ್ಯತೇ। ಅಪರಾಣ್ಯಪಿ ಸೂತ್ರಾಣಿ ಯಥಾ-ಸಂಭವಂ ಪುಚ್ಛವಾಕ್ಯನಿರ್ದಿಷ್ಟಸ್ಯೈವ ಬ್ರಹ್ಮಣ ಉಪಪಾದಕಾನಿ ದ್ರಷ್ಟವ್ಯಾನಿ ॥

(ಭಾಷ್ಯಾರ್ಥ)

ಸೂತ್ರಗಳಿಗಾದರೆ (ನಮ್ಮ ಅಧಿಕರಣದಂತೆ) ಹೀಗೆ ವ್ಯಾಖ್ಯಾನಮಾಡಬೇಕು. "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" (ತೈ.೨-೫) ಎಂಬಲ್ಲಿ ಬ್ರಹ್ಮವು ಆನನ್ದಮಯನ ಅವಯವವೆಂದು ವಿವಕ್ಷಿತವಾಗಿರುತ್ತದೆಯೆ, ಅಥವಾ ಸ್ವಪ್ರಧಾನವಾಗಿ (ವಿವಕ್ಷಿತವಾಗಿದೆಯೆ)? ಎಂದು (ಸಂಶಯವು). ಪುಚ್ಛ ಎಂಬ ಶಬ್ದವಿರುವದರಿಂದ ಅವಯವವೆಂದೇ (ವಿವಕ್ಷಿತವಾಗಿದೆ) ಎಂದು (ಪೂರ್ವಪಕ್ಷವು) ಬಂದೊದಗಲಾಗಿ (ಇದಕ್ಕೆ) "ಆನನ್ದಮಯೋಽಭ್ಯಾಸಾತ್" (೧-೧-೧೨) ಎಂದು (ಉತ್ತರವನ್ನು) ಹೇಳಿರುತ್ತದೆ. ಆನಂದಮಯನು ಆತ್ಮನು ಎಂಬಲ್ಲಿ ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು ಎಂದು ಬ್ರಹ್ಮವನ್ನು ಸ್ವಪ್ರಧಾನವಾಗಿಯೇ ಉಪದೇಶಿಸಿರುತ್ತದೆ; ಏಕೆಂದರೆ ಅಭ್ಯಾಸ ವಿರುವದರಿಂದ. "(ಬ್ರಹ್ಮವು ಅಸತ್ತೆಂದು ತಿಳಿದರೆ) ಅವನು ಅಸತ್ತೇ ಆಗುತ್ತಾನೆ" (ತೈ. ೨-೬) ಎಂಬ ನಿರ್ಣಯಮಂತ್ರದಲ್ಲಿ ಬರಿಯ ಬ್ರಹ್ಮವನ್ನೇ ಹೇಳಿರುವದರಿಂದ (ಎಂದರ್ಥ).

**"ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್"** (೧-೧-೧೩) ವಿಕಾರಶಬ್ದ(ವೆಂಬ ಮಾತಿಗೆ ಇಲ್ಲಿ) ಅವಯವಶಬ್ದ ಎಂದು ಅಭಿಪ್ರಾಯ. 'ಪುಚ್ಛವು'

ಎಂಬ ಅವಯವಶಬ್ದವಿರುವದರಿಂದ ಬ್ರಹ್ಮವು ಸ್ವಪ್ರಧಾನವಲ್ಲ ಎಂದು (ಪೂರ್ವ-ಪಕ್ಷಿ) ಹೇಳಿದ್ದನಲ್ಲ, ಅದಕ್ಕೆ ಪರಿಹಾರವನ್ನು ಹೇಳಬೇಕಷ್ಟೆ; (ಇದಕ್ಕೆ ನಾವು) ಹೇಳುವದೇನೆಂದರೆ: ಇದೇನೂ ತಪ್ಪಲ್ಲ; ಏಕೆಂದರೆ ಪ್ರಾಚುರ್ಯದಿಂದಲೂ ಅವಯವಶಬ್ದವು ಹೊಂದುತ್ತದೆ. ಪ್ರಾಚುರ್ಯ ಎಂದರೆ ಪ್ರಾಯಾಪತ್ತಿಯು, ಅವಯವ ಪ್ರಚುರವಾಗಿರುವ (ಪ್ರಕರಣದಲ್ಲಿ) ಹೇಳಿರುವದು ಎಂದರ್ಥ. ಅನ್ನಮಯನೇ ಮುಂತಾದವರಿಗೆ ಶಿರಸ್ಸು ಮುಂತಾಗಿ ಪುಚ್ಛದವರೆಗಿನ ಅವಯವಗಳನ್ನು ಹೇಳಿದ ಬಳಿಕ ಆನಂದಮಯನಿಗೂ ಶಿರಸ್ಸು ಮುಂತಾದ ಬೇರೆಯ ಅವಯವಗಳನ್ನು ಹೇಳಿ ಅವಯವಪ್ರಾಯಾಪತ್ತಿಯಿಂದ "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" (ತೈ. ೨-೫) ಎಂದು ಹೇಳಿದೆಯೇ ಹೊರತು ಅವಯವವೆಂದೇ ತಿಳಿಸುವದಕ್ಕಾಗಿ (ಹೇಳಿ)ಲ್ಲ. ಏಕೆಂದರೆ 'ಅಭ್ಯಾಸಾತ್' ಎಂದು ಬ್ರಹ್ಮಕ್ಕೆ ಸ್ವಪ್ರಧಾನತ್ವವನ್ನು (ಹಿಂದಿನ ಸೂತ್ರದಲ್ಲಿ) ಸಾಧಿಸಿದ್ದಾಗಿರುತ್ತದೆ.

"ತದ್ಧೇತುವ್ಯಪದೇಶಾಚ್ಚ" (೧-೧-೧೪) : ಬ್ರಹ್ಮವು ಆನಂದಮಯನೂ ಸೇರಿರುವ ಸಕಲಕಾರ್ಯಸಮೂಹಕ್ಕೂ ಕಾರಣವೆಂದು "ಇದು ಯಾವಯಾವದಿರುವದೋ ಅದೆಲ್ಲವನ್ನೂ ಸೃಷ್ಟಿಸಿತು" (ತೈ. ೨-೬) ಎಂಬ (ವಾಕ್ಯದಲ್ಲಿ) ಹೇಳಿರುತ್ತದೆ. ಕಾರಣವಾಗಿದ್ದುಕೊಂಡಿರುವ ಬ್ರಹ್ಮವು ತನ್ನ ಕಾರ್ಯವಾಗಿರುವ ಆನಂದಮಯನಿಗೆ ಮುಖ್ಯವೃತ್ತಿಯಿಂದ ಅವಯವವೆಂಬುದು ಹೊಂದುವದೇ ಇಲ್ಲ.

ಉಳಿದ (೧೫ರಿಂದ ೧೯ರ ವರೆಗಿನ) ಸೂತ್ರಗಳೂ ಯಥಾಸಂಭವವಾಗಿ ಪುಚ್ಛವಾಕ್ಯದಲ್ಲಿ ಹೇಳಿದ ಬ್ರಹ್ಮವನ್ನೇ (ಸ್ವಪ್ರಧಾನವೆಂದು) ಯುಕ್ತಿಯಿಂದ (ತೋರಿಸಿಕೊಡುವವೆಂದು) ಕಲ್ಪಿಸಬೇಕು.[1]

## ೭. ಅಂತರಧಿಕರಣ (೨೦-೨೧)

(ಛಾಂದೋಗ್ಯದ ಉದ್ಗೀಥವಿದ್ಯೆಯಲ್ಲಿ ಹೇಳಿರುವ ಪುರುಷನು ಬ್ರಹ್ಮವೇ)

**ಅನ್ತಸ್ತದ್ಧರ್ಮೋಪದೇಶಾತ್ ॥ ೨೦ ॥**

೨೦. ಒಳಗಿನ (ಪುರುಷನು ಬ್ರಹ್ಮವೇ) ; ಏಕೆಂದರೆ ಅದರ ಧರ್ಮಗಳನ್ನು ಉಪದೇಶಿಸಿರುತ್ತದೆ.

---

1. ಮಂತ್ರವರ್ಣದಲ್ಲಿ ಹೇಳಿದ ಪ್ರಕೃತಬ್ರಹ್ಮವನ್ನೇ ಪುಚ್ಛವಾಕ್ಯದಲ್ಲಿ ಹೇಳಿದೆ; ಇಲ್ಲಿ ಆನಂದಮಯನನ್ನು ಹೇಳಿಲ್ಲ. ಏಕೆಂದರೆ ಆವನಿಗೆ ಸ್ರಷ್ಟೃತ್ವಾದಿಗಳು ಹೊಂದುವದಿಲ್ಲ. ಅವನಿಗೂ ಬ್ರಹ್ಮಕ್ಕೂ ಭೇದವನ್ನು ಹೇಳಿದೆ. ಈ ಬ್ರಹ್ಮವು ಪ್ರಧಾನವಲ್ಲ. ಏಕೆಂದರೆ ಇಲ್ಲಿ ಕಾಮವನ್ನು ಹೇಳಿದೆ, ಜೀವನಿಗೆ ಈ ಬ್ರಹ್ಮದಲ್ಲಿ ಯೋಗವನ್ನೂ ಹೇಳಿರುತ್ತದೆ ಎಂದು ಸೂತ್ರಗಳ ಅರ್ಥವೆಂದು ಭಾವ.

# ವಿಷಯವೂ ಸಂಶಯವೂ

(ಭಾಷ್ಯ)

೧೧೨. ಇದಮ್ ಆಮ್ನಾಯತೇ— "ಅಥ ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ ಸರ್ವ ಏವ ಸುವರ್ಣಃ" (ಛಾಂ. ೧-೬-೬) "ತಸ್ಯ ಯಥಾ ಕಪ್ಯಾಸಂ ಪುಣ್ಡರೀಕಮೇವಮಕ್ಷಿಣೀ ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ" (ಛಾಂ. ೧-೬-೭) ........"ಇತ್ಯಧಿದೈವತಮ್" | (ಛಾ. ೧-೬-೮) "ಅಥಾಧ್ಯಾತ್ಮಮ್ ........" (ಛಾಂ. ೧-೭-೧) "ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ........" (ಛಾಂ. ೧-೭-೫) ಇತ್ಯಾದಿ | ತತ್ರ ಸಂಶಯಃ | ಕಿಂ ವಿದ್ಯಾಕರ್ಮಾತಿಶಯವಶಾತ್ ಪ್ರಾಪ್ತೋತ್ಕರ್ಷಃ ಕಶ್ಚಿತ್ ಸಂಸಾರೀ ಸೂರ್ಯಮಣ್ಡಲೇ ಚಕ್ಷುಷಿ ಚ ಉಪಾಸ್ಯತ್ವೇನ ಶ್ರೂಯತೇ, ಕಿಂ ವಾ ನಿತ್ಯಸಿದ್ಧಃ ಪರಮೇಶ್ವರ ಇತಿ?

(ಭಾಷ್ಯಾರ್ಥ)

ಇದನ್ನು ವೇದದಲ್ಲಿ ಹೇಳಿದೆ: "ಇನ್ನು ಆದಿತ್ಯನ ಒಳಗೆ ಯಾವ ಈ ಹಿರಣ್ಮಯನಾದ ಪುರುಷನು ಕಾಣಬರುವನಷ್ಟೆ; ಹಿರಣ್ಯದ ಗಡ್ಡಮೀಸೆಯುಳ್ಳವನಾಗಿ, ಹಿರಣ್ಯದ ಕೂದಲಿನವನಾಗಿ, ಉಗುರಿನ ಕೊನೆಯವರೆಗೂ ಎಲ್ಲವೂ ಚಿನ್ನವೇ (ಆಗಿರುವ ಪುರುಷನು ಕಾಣಬರುವನಷ್ಟೆ)—ಅವನಿಗೆ ಕಪಿಯ ಆಸನದಂತಿರುವ[1] ಪುಂಡರೀಕವು ಹೇಗೆ (ಕೆಂಪ)ಗಿರುವದೋ, ಹಾಗೆ ಕಣ್ಣುಗಳು (ಇರುವವು). ಅವನಿಗೆ 'ಉತ್' ಎಂದು ಹೆಸರು; ಆ ಈತನು ಸರ್ವಪಾಪಗಳನ್ನೂ ಬಿಟ್ಟೆದ್ದಿರುವನು. ಯಾವನು ಹೀಗೆಂದು ಅರಿಯುವನೋ ಅವನು ಸರ್ವಪಾಪಗಳನ್ನೂ ಬಿಟ್ಟೇಳುವನು (ಛಾಂ. ೧-೬-೭). ......"ಹೀಗೆ ಅಧಿದೈವತವಾಯಿತು.)" (ಛಾಂ. ೧-೬-೮). "ಇನ್ನು ಅಧ್ಯಾತ್ಮವು" (ಛಾಂ. ೧-೭-೧) ........ "ಇನ್ನು ಯಾವ ಈ ಪುರುಷನು ಕಣ್ಣಿನೊಳಗೆ ಕಾಣಬರುವನಷ್ಟೆ ........" (ಛಾಂ. ೧-೭-೫) ಇತ್ಯಾದಿ.[2] ಇಲ್ಲಿ ಸಂಶಯವೇನೆಂದರೆ ವಿದ್ಯಾಕರ್ಮಗಳು[3] ಮಿಗಿ

---

1. ಉಪಮಿತೋಪಮಾನದಲ್ಲಿ ನೀಚೋಪಮಾನ ಎಂಬ ದೋಷವಿಲ್ಲ. ಪ್ರಕೃತದಲ್ಲಿ ಕಪಿಯ ಆಸನವೆಂಬುದು ಕೆಂಪು ಕಮಲಕ್ಕೆ ಉಪಮಾನವು, ಈ ಕಮಲವು ಕಣ್ಣಿಗೆ ಉಪಮಾನವು; ಆದ್ದರಿಂದ ಪರಮೇಶ್ವರನ ಕಣ್ಣಿಗೆ ನೀಚೋಪಮಾನವನ್ನು ಹೇಳಿದಂತಾಗಲಿಲ್ಲ.

2. ಛಾಂದೋಗ್ಯದ ೧-೬ ಮತ್ತು ೧, ೭—ಈ ಎರಡು ಖಂಡಗಳನ್ನೂ ಸೇರಿಸಿ "ಇಯಮೇವರ್ಗಗ್ನಿಃ ಸಾಮ" (ಛಾಂ. ೧-೬-೧) ಎಂಬಲ್ಲಿಂದ ಹಿಡಿದು "ಸಾಮ ಗಾಯತಿ" (೧-೭-೯) ಎಂಬವರೆಗಿನ ಒಟ್ಟು ಗ್ರಂಥಭಾಗವನ್ನೇ ಇಲ್ಲಿ ವಿಷಯವಾಕ್ಯವಾಗಿ ಇಟ್ಟುಕೊಂಡಿದೆ. ಇಲ್ಲಿ ಉದ್ಗೀಥದ ಅವಯವವಾದ ಓಂಕಾರವನ್ನು 'ಉತ್' ಎಂಬ ಹೆಸರಿನ ಪುರುಷನೆಂದು ಉಪಾಸನೆಮಾಡಬೇಕೆಂದು ವಿಧಿಸಿದೆ.

3. ವಿದ್ಯೆ ಎಂದರೆ ಉಪಾಸನೆಯು ಕರ್ಮೋಪಾಸನೆಗಳ ಸಮುಚ್ಚಯದಿಂದ ಉತ್ಕೃಷ್ಟವಾದ ಉಪಾಸ್ಯತ್ವವು ದೊರಕಬಹುದು ಎಂಬುದು ಪೂರ್ವಪಕ್ಷಿಯ ಭಾವ.

ಲಾದ ಕಾರಣದಿಂದ ಹೆಚ್ಚುಗಾರಿಕೆಯನ್ನು ಪಡೆದಿರುವ ಯಾವನೋ ಒಬ್ಬ ಸಂಸಾರಿಯನ್ನು ಸೂರ್ಯಮಂಡಲದಲ್ಲಿಯೂ ಕಣ್ಣಿನಲ್ಲಿಯೂ ಉಪಾಸ್ಯನೆಂದು ಶ್ರುತಿಯಲ್ಲಿ ಹೇಳಿರುತ್ತದೆಯೆ, ಅಥವಾ ನಿತ್ಯಸಿದ್ಧನಾದ[1] ಪರಮೇಶ್ವರನನ್ನು (ಹೇಳಿರುತ್ತದೆಯೆ)?

## ಪೂರ್ವಪಕ್ಷ: ಆದಿತ್ಯಪುರುಷನು ಸಂಸಾರಿಯೇ

(ಭಾಷ್ಯ)

೧೧೩. ಕಿಂ ತಾವತ್ ಪ್ರಾಪ್ತಮ್ ? ಸಂಸಾರೀ ಇತಿ। ಕುತಃ? ರೂಪವತ್ತ್ವ ಶ್ರವಣಾತ್। ಆದಿತ್ಯಪುರುಷೇ ತಾವತ್ 'ಹಿರಣ್ಯಶ್ಮಶ್ರುಃ' ಇತ್ಯಾದಿರೂಪಮ್ ಉದಾಹೃತಮ್, ಅಕ್ಷಿಪುರುಷೇಽಪಿ ತದೇವ ಅತಿದೇಶೇನ ಪ್ರಾಪ್ಯತೇ—"ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಮ್" (ಛಾಂ. ೧-೭-೫) ಇತಿ। ನ ಚ ಪರಮೇಶ್ವರಸ್ಯ ರೂಪವತ್ತ್ವಂ ಯುಕ್ತಮ್। "ಅಶಬ್ದಮಸ್ಪರ್ಶಮರೂಪಮವ್ಯಯಮ್" (ಕ. ೧-೩-೧೫) ಇತಿ ಶ್ರುತೇಃ। ಆಧಾರಶ್ರವಣಾಚ್ಚ। "ಯ ಏಷೋಽನ್ತರಾದಿತ್ಯೇ" (ಛಾಂ. ೧-೬-೬), "ಯ ಏಷೋಽನ್ತರಕ್ಷಿಣಿ" (ಛಾಂ. ೧-೭-೫) ಇತಿ। ನ ಹಿ ಅನಾಧಾರಸ್ಯ ಸ್ವಮಹಿಮಪ್ರತಿಷ್ಠಿತಸ್ಯ ಸರ್ವವ್ಯಾಪಿನಃ ಪರಮೇಶ್ವರಸ್ಯ ಆಧಾರಃ ಉಪದಿಶ್ಯೇತ। "ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ, ಸ್ವೇ ಮಹಿಮ್ನಿ" (ಛಾಂ. ೭-೨೪-೧) ಇತಿ, "ಆಕಾಶವತ್ ಸರ್ವಗತಶ್ಚ ನಿತ್ಯಃ" (ಶತ.ಬ್ರಾ. ೧೦-೬.೩-೨) ಇತಿ ಚ ಶ್ರುತೀ ಭವತಃ। ಐಶ್ವರ್ಯಮರ್ಯಾದಾಶ್ರುತೇಶ್ಚ। "ಸ ಏಷ ಯೇ ಚಾಮುಷ್ಮಾತ್ ಪರಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚ" (ಛಾಂ. ೧-೬-೮) ಇತಿ ಆದಿತ್ಯಪುರುಷಸ್ಯೈಶ್ವರ್ಯಮರ್ಯಾದಾ। "ಸ ಏಷ ಯೇ ಚೈತಸ್ಮಾದರ್ವಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ ಚ" (ಛಾಂ. ೧-೭-೬) ಇತ್ಯಕ್ಷಿಪುರುಷಸ್ಯ। ನ ಚ ಪರಮೇಶ್ವರಸ್ಯ ಮರ್ಯಾದಾವದೈಶ್ವರ್ಯಂ ಯುಕ್ತಮ್। "ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ" (ಬೃ.೪-೪-೨೨) ಇತಿ ಅವಿಶೇಷಶ್ರುತೇಃ। ತಸ್ಮಾತ್ ನ ಅಕ್ಷ್ಯಾದಿತ್ಯಯೋರನ್ತಃ ಪರಮೇಶ್ವರಃ ಇತಿ॥

(ಭಾಷ್ಯಾರ್ಥ)

ಇಲ್ಲಿ ಮೊದಲು ಏನು ಬಂದೊದಗುತ್ತದೆ?—ಎಂದರೆ (ಈ ಪುರುಷನು) ಸಂಸಾರಿಯೇ ಎಂದು. ಏಕೆಂದರೆ (ಇವನಿಗೆ) ರೂಪವುಂಟೆಂದು ಶ್ರುತಿಯಲ್ಲಿದೆ.

1. ಯಾವ ಸಾಧನವನ್ನೂ ಬಯಸದೆ ಸರ್ವರಿಗೂ ಉಪಾಸ್ಯನಾಗಿರುವ.

ಮೊದಲನೆಯದಾಗಿ ಆದಿತ್ಯಪುರುಷನಲ್ಲಿ "ಹಿರಣ್ಯದ ಗಡ್ಡಮೀಸೆಗಳುಳ್ಳವನು" ಎಂದು ಮುಂತಾಗಿ ರೂಪವನ್ನು ಹೇಳಿರುತ್ತದೆ. ಅಕ್ಷಿಪುರುಷನಲ್ಲಿಯೂ "ಆ ಈತನಿಗೆ ಅವನಿಗೆ ಯಾವ ರೂಪವೋ ಅದೇ ರೂಪವು" (ಛಾಂ. ೧-೭-೫) ಎಂದು ಅದನ್ನೇ ಅತಿದೇಶದಿಂದ ಸೇರಿಸಿರುತ್ತದೆ. ಆದರೆ ಪರಮೇಶ್ವರನಿಗೆ ರೂಪವಿರುವದೆಂಬುದು ಯುಕ್ತವಲ್ಲ; ಏಕೆಂದರೆ "(ಅದು) ಅಶಬ್ದವು, ಅಸ್ಪರ್ಶವು, ಅರೂಪವು, ಅವ್ಯಯವು" (ಕ. ೧-೩-೧೫) ಎಂದು ಶ್ರುತಿಯಿದೆ. "ಯಾವ ಇವನು ಆದಿತ್ಯನೊಳಗೆ (ಇರುವನೋ)", "ಯಾವ ಇವನು ಕಣ್ಣಿನ ಒಳಗೆ (ಇರುವನೋ)" ಎಂದು ಆಧಾರವನ್ನು ಶ್ರುತಿಯಲ್ಲಿ ಹೇಳಿರುವದರಿಂದಲೂ (ಇವನು ಸಂಸಾರಿಯೇ. ಯಾವ) ಆಧಾರವೂ ಇಲ್ಲದ, ತನ್ನ ಮಹಿಮೆಯಲ್ಲಿಯೇ ನಿಂತಿರುವ ಸರ್ವವ್ಯಾಪಿಯಾದ ಪರಮೇಶ್ವರನಿಗೆ ಆಧಾರವನ್ನು ಹೇಳುವ ಹಾಗಿಲ್ಲವಷ್ಟೆ? (ಏಕೆಂದರೆ), "ಪೂಜ್ಯನೆ, ಆತನು ಏತರಲ್ಲಿ ನಿಂತಿರುವನು? (ಉತ್ತರ) : ತನ್ನ ಮಹಿಮೆಯಲ್ಲಿ ನಿಂತಿರುವನು" (ಛಾಂ. ೭-೨೪-೧) ಎಂದೂ "ಆಕಾಶದಂತೆ ಸರ್ವಗತನೂ ನಿತ್ಯನೂ (ಆಗಿರುವನು)" (ಶತ. ಬ್ರಾ. ೧೦-೬-೩-೨) ಎಂದೂ ಶ್ರುತಿಗಳಿವೆ. ಐಶ್ವರ್ಯಕ್ಕೆ ಎಲ್ಲೆಕಟ್ಟನ್ನು ಹೇಳುವ ಶ್ರುತಿ (ಯಿರುವದರಿಂದಲೂ ಇವನು ಸಂಸಾರಿಯೇ). "ಆ ಈತನು ಅದರಿಂದಾಚೆಗೆ[1] ಇರುವ ಲೋಕಗಳಿರುವವಲ್ಲ, ಅವುಗಳಿಗೂ ದೇವತೆಗಳ ಕಾಮಗಳಿಗೂ ಒಡೆಯನಾಗಿರುವನು" (ಛಾಂ. ೧-೬-೮) ಎಂದು ಆದಿತ್ಯಪುರುಷನಿಗೆ ಐಶ್ವರ್ಯದ ಎಲ್ಲೆಕಟ್ಟನ್ನು ಹೇಳಿದೆ. "ಆ ಈತನು ಇದಕ್ಕಿಂತ ಈಚೆಗೆ[2] ಲೋಕಗಳಿರುವವಲ್ಲ, ಅವುಗಳಿಗೂ ಮನುಷ್ಯರ ಕಾಮಗಳಿಗೂ ಒಡೆಯನಾಗಿರುವನು" (ಛಾ. ೧-೭-೬) ಎಂದು ಅಕ್ಷಿಪುರುಷನಿಗೆ (ಐಶ್ವರ್ಯದ ಎಲ್ಲೆಕಟ್ಟನ್ನು ಹೇಳಿದೆ). ಆದರೆ ಪರಮೇಶ್ವರನಿಗೆ ಎಲ್ಲೆಕಟ್ಟಿನ ಐಶ್ವರ್ಯವಿರುವದೆಂಬುದು ಯುಕ್ತವಲ್ಲ; ಏಕೆಂದರೆ "ಈತನು ಸರ್ವೇಶ್ವರನು, ಈತನು ಭೂತಗಳ ಅಧಿಪತಿಯು, ಈತನು ಭೂತಗಳನ್ನು ಕಾಪಾಡುವವನು, ಈತನು ಈ ಲೋಕಗಳು (ಒಂದರೊಡನೊಂದು) ಕಲೆಯದಿರುವಂತೆ ತಡೆದುಕೊಂಡಿರುವ ಸೇತುವೆಯು" (ಬೃ. ೪-೪-೨೨) ಎಂದು ಯಾವ ವಿಶೇಷವೂ ಇಲ್ಲದೆ (ಐಶ್ವರ್ಯವನ್ನು) ಶ್ರುತಿಯಲ್ಲಿ[3] (ಹೇಳಿದೆ). ಆದ್ದರಿಂದ ಕಣ್ಣು ಮತ್ತು ಆದಿತ್ಯ (ಇವುಗಳ) ಒಳಗಿನ (ಪುರುಷನು) ಪರಮೇಶ್ವರನಲ್ಲ.

---

1. ಆದಿತ್ಯನಿಂದಾಚೆಗೆ (ಅದಕ್ಕೂ ಮೇಲಿನ) ಲೋಕಗಳಿಗೆ ಒಡೆಯನು.
2. ಆಧ್ಯಾತ್ಮಿಕಾತ್ಮನಿಗಿಂತ (ಕೆಳಗಿನ) ಲೋಕಗಳಿಗೆ ಒಡೆಯನು.
3. ಐಶ್ವರ್ಯವೆಂದರೆ ಒಡೆತನವು; ಪರಮೇಶ್ವರನು ಎಲ್ಲರಿಗೂ ಒಡೆಯನಾಗಿರುವಲ್ಲಿ ಇಂತಿಷ್ಟಕ್ಕೆ ಮಾತ್ರ ಒಡೆಯನೆಂದು ಹೇಳುವದು ನ್ಯಾಯವಲ್ಲ ಎಂದು ಭಾವ.

# ಸಿದ್ಧಾಂತ: ಅಕ್ಷ್ಯಾದಿತ್ಯಪುರುಷನು ಪರಮೇಶ್ವರನೇ

(ಭಾಷ್ಯ)

೧೧೪. ಏವಂ ಪ್ರಾಪ್ತೇ ಬ್ರೂಮಃ "ಅನ್ತಸ್ತದ್ಧರ್ಮೋಪದೇಶಾತ್" ಇತಿ । 'ಯ ಏಷೋಽನ್ತರಾದಿತ್ಯೇ', 'ಯ ಏಷೋಽನ್ತರಕ್ಷಿಣಿ' ಇತಿ ಚ ಶ್ರೂಯಮಾಣಃ ಪುರುಷಃ ಪರಮೇಶ್ವರ ಏವ ನ ಸಂಸಾರೀ । ಕುತಃ? ತದ್ಧರ್ಮೋಪದೇಶಾತ್। ತಸ್ಯ ಹಿ ಪರಮೇಶ್ವರಸ್ಯ ಧರ್ಮಾಃ ಇಹ ಉಪದಿಷ್ಟಾಃ । ತದ್ ಯಥಾ-"ತಸ್ಯೋದಿತಿ ನಾಮ" ಇತಿ ಶ್ರಾವಯಿತ್ವಾ ಅಸ್ಯ ಆದಿತ್ಯಪುರುಷಸ್ಯ ನಾಮ "ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ" ಇತಿ ಸರ್ವಪಾಪ್ಮಾಪಗಮೇನ ನಿರ್ವಕ್ತಿ । ತದೇವ ಚ ಕೃತನಿರ್ವಚನಂ ನಾಮ ಅಕ್ಷಿಪುರುಷಸ್ಯಾಪಿ ಅತಿದಿಶತಿ "ಯನ್ನಾಮ ತನ್ನಾಮ" (ಛಾಂ. ೧-೭-೫) ಇತಿ ಸರ್ವಪಾಪ್ಮಾಪಗಮಶ್ಚ ಪರಮಾತ್ಮನ ಏವ ಶ್ರೂಯತೇ "ಯ ಆತ್ಮಾಪಹತಪಾಪ್ಮಾ" (ಛಾಂ. ೮-೭-೧) ಇತ್ಯಾದೌ । ತಥಾ ಚಾಕ್ಷುಷೇ ಪುರುಷೇ "ಸೈವರ್ಕ್ತತ್ಸಾಮ ತದುಕ್ಥಂ ತದ್ಯಜುಸ್ತದ್ಬ್ರಹ್ಮ" (ಛಾಂ. ೧-೭-೫) ಇತಿ ಋಕ್ಸಾಮಾದ್ಯಾತ್ಮಕತಾಂ ನಿರ್ಧಾರಯತಿ । ಸಾ ಚ ಪರಮೇಶ್ವರಸ್ಯ ಉಪಪದ್ಯತೇ । ಸರ್ವಕಾರಣತ್ವಾತ್ ಸರ್ವಾತ್ಮಕತ್ವೋಪಪತ್ತೇಃ । ಪೃಥಿವ್ಯಗ್ನ್ಯಾದ್ಯಾತ್ಮಕೇ ಚ ಅಧಿದೈವತಂ ಋಕ್ಸಾಮೇ ವಾಕ್ಪ್ರಾಣಾದ್ಯಾತ್ಮಕೇ ಚ ಅಧ್ಯಾತ್ಮಮ್ ಅನುಕ್ರಮ್ಯ ಆಹ "ತಸ್ಯರ್ಕ್ಚ ಸಾಮ ಚ ಗೇಷ್ಣೌ" (ಛಾಂ. ೧-೬-೮) ಇತ್ಯಧಿದೈವತಮ್ । ತಥಾ ಅಧ್ಯಾತ್ಮಮಪಿ "ಯಾವಮುಷ್ಯ ಗೇಷ್ಣೌ" (ಛಾಂ. ೧-೭-೫) ಇತಿ । ತಚ್ಚ ಸರ್ವಾತ್ಮನ ಏವ ಉಪಪದ್ಯತೇ । "ತದ್ಯ ಇಮೇ ವೀಣಾಯಾಂ ಗಾಯನ್ತ್ಯೇತಂ ತೇ ಗಾಯನ್ತಿ ತಸ್ಮಾತ್ ತೇ ಧನಸನಯಃ" (ಛಾಂ. ೧-೭-೬) ಇತಿ ಚ ಲೌಕಿಕೇಷ್ವಪಿ ಗಾನೇಷು ಅಸ್ಯೈವ ಗೀಯಮಾನತ್ವಂ ದರ್ಶಯತಿ । ತಚ್ಚ ಪರಮೇಶ್ವರಪರಿಗ್ರಹೇ ಘಟತೇ । "ಯದ್ಯದ್ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್"॥ (೧೦-೪೧) ಇತಿ ಭಗವದ್ಗೀತಾದರ್ಶನಾತ್ । ಲೋಕಕಾಮೇಶಿತೃತ್ವಮಪಿ ನಿರಙ್ಕುಶಂ ಶ್ರೂಯಮಾಣಂ ಪರಮೇಶ್ವರಂ ಗಮಯತಿ ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ "ಅನ್ತಸ್ತದ್ಧರ್ಮೋಪದೇಶಾತ್" ಎಂದು (ಇದಕ್ಕೆ ಉತ್ತರವನ್ನು) ಹೇಳುತ್ತೇವೆ. (ಇದರ ವಿವರ): "ಯಾವ ಇವನು ಆದಿತ್ಯನ ಒಳಗೆ", "ಯಾವ ಇವನು ಕಣ್ಣಿನೊಳಗೆ" ಎಂದು (ಈ) ಶ್ರುತಿಯಲ್ಲಿ ಹೇಳಿರುವ ಪುರುಷನು ಪರಮೇಶ್ವರನೇ, ಸಂಸಾರಿಯಲ್ಲ. ಏಕೆಂದರೆ ಅವನ ಧರ್ಮಗಳನ್ನು ಉಪದೇಶಮಾಡಿರುವದರಿಂದ. ಆ ಪರಮೇ

ಶ್ವರನ ಧರ್ಮಗಳನ್ನೇ ಅಲ್ಲವೆ, ಇಲ್ಲಿ ಉಪದೇಶಮಾಡಿರುತ್ತದೆ? ಅದು ಹೇಗೆಂದರೆ, "ಅವನಿಗೆ ಉತ್ ಎಂದು ಹೆಸರು" ಎಂದು ಹೇಳಿ ಈ ಆದಿತ್ಯಪುರುಷನ ನಾಮವನ್ನು "ಆ ಈತನು ಸರ್ವಪಾಪಗಳನ್ನೂ ಬಿಟ್ಟೆದ್ದಿರುತ್ತಾನೆ"[1] ಎಂದು ಯಾವ ಪಾಪವೂ ಇಲ್ಲದ್ದರಿಂದ (ಉತ್ ಎಂದು ಹೆಸರು ಎಂದು ಶ್ರುತಿಯು) ನಿರ್ವಚನ ಮಾಡಿರುತ್ತದೆ. (ಹೀಗೆ) ನಿರ್ವಚನವನ್ನು ಮಾಡಿರುವ ಅದೇ ನಾಮವನ್ನೇ ಅಕ್ಷಿಪುರುಷನಿಗೂ "ಅವನಿಗೆ ಯಾವದು ನಾಮವೋ ಅದೇ (ಇವನಿಗೆ) ನಾಮವು" (ಛಾಂ· ೧-೭-೫) ಎಂದು ಅತಿದೇಶಮಾಡಿರುತ್ತದೆ.[2] ಯಾವ ಪಾಪವೂ ಇಲ್ಲದಿರುವಿಕೆ ಎಂಬುದು ಪರಮಾತ್ಮನಿಗೇ (ಸೇರಿದ್ದೆಂದು) "ಯಾವ ಆತ್ಮನು ಅಪಹತಪಾಪ್ಮನೋ" (ಛಾಂ. ೮-೭.೧) ಎಂದು ಮುಂತಾದ ಶ್ರುತಿಯಲ್ಲಿ (ಹೇಳಿದೆ).

ಮತ್ತು ಕಣ್ಣಿನ ಪುರುಷನು "ಅದೇ ಋಕ್ಕು, ಅದೇ ಸಾಮವು, ಅದೇ ಉಕ್ಥವು, ಅದೇ ಯಜುಸ್ಸು, ಅದೇ ಬ್ರಹ್ಮವು"[3] (ಛಾ. ೧-೭-೫) ಎಂದು ಋಕ್ಸಾಮಾದಿಗಳ ಸ್ವರೂಪನಾಗಿರುವನೆಂದು ನಿಶ್ಚಯಿಸಿರುತ್ತದೆ. ಅದು ಪರಮೇಶ್ವರನಿಗೇ ಒಪ್ಪುತ್ತದೆ; ಏಕೆಂದರೆ (ಅವನು) ಎಲ್ಲಕ್ಕೂ ಕಾರಣವಾಗಿರುವದರಿಂದ ಸರ್ವಾತ್ಮಕನಾಗಿರಬಹುದಾಗಿದೆ. ಋಕ್ಸಾಮಗಳನ್ನು ಅಧಿದೈವತವಾಗಿ ಪೃಥಿವಿ, ಅಗ್ನಿ–ಮುಂತಾದ ಸ್ವರೂಪದವೆಂದೂ ಅಧ್ಯಾತ್ಮವಾಗಿ ವಾಕ್ಕು, ಪ್ರಾಣ-ಮುಂತಾದ ಸ್ವರೂಪದವೆಂದೂ ಅನುಕ್ರಮವಾಗಿ ಹೇಳಿ[4] "ಅವನಿಗೆ ಋಕ್ಕೂ ಸಾಮವೂ ಗೇಷ್ಣಗಳು" (ಛಾಂ. ೧-೬-೮) ಎಂದು ಅಧಿದೈವತವಾಗಿ ಹೇಳಿರುತ್ತದೆ. ಹಾಗೂ

---

1. 'ಉದೇತಿ' ಉದಯಿಸುತ್ತಾನೆ, ಮೇಲಕ್ಕೆ ಬಂದಿರುತ್ತಾನೆ, ಆದ್ದರಿಂದ ಉತ್ ಎಂಬ ಹೆಸರುಳ್ಳವನು ಎಂದು ಆದಿತ್ಯಪುರುಷನ ನಾಮವನ್ನು ನಿರ್ವಚನಮಾಡಿದೆ.

2. ಆದ್ದರಿಂದ ಅಕ್ಷಿಪುರುಷನೂ ಪಾಪರಹಿತನೆಂದು ಹೇಳಿದಂತೆ ಆಯಿತು.

3. ವೇದವು.

4. ಪೃಥ್ವಿ, ಅಗ್ನಿ; ಅಂತರಿಕ್ಷ, ವಾಯು; ದ್ಯುಲೋಕ, ಆದಿತ್ಯ; ನಕ್ಷತ್ರಗಳು ಚಂದ್ರ; ಆದಿತ್ಯನ ಬಿಳಿಯ ಕಾಂತಿ, ಕರಿಯ ಕಾಂತಿ–ಎಂದು ಅಧಿದೈವತವಾಗಿ ಋಕ್ಸಾಮಗಳಲ್ಲಿ ಪೃಥಿವ್ಯಾದಿದೃಷ್ಟಿಯನ್ನು ವಿಧಿಸಿದೆ. ಇದರಂತೆ ವಾಕ್ಕು, ಪ್ರಾಣ; ಚಕ್ಷುಸ್ಸು, ಛಾಯಾತ್ಮ; ಶ್ರೋತ್ರ, ಮನಸ್ಸು; ಕಣ್ಣಿನ ಬಿಳಿಯ ಕಾಂತಿ, ಕರಿಯ ಕಾಂತಿ–ಎಂದು ಅಧ್ಯಾತ್ಮವಾಗಿ ವಾಗಾದಿದೃಷ್ಟಿಯನ್ನು ವಿಧಿಸಿದೆ. ಇಲ್ಲಿ ಋಕ್ಸಾಮಗಳಂತೆ ಪೃಥ್ವಿ, ಅಗ್ನಿ–ಮುಂತಾದವೂ ನಿತ್ಯಸಂಬದ್ಧವಾಗಿವೆ ಎಂದು ಶ್ರುತಿಯಲ್ಲಿ ಹೇಳಿರುವದು ಉಪಾಸನೆಗಾಗಿ.

ಅಧ್ಯಾತ್ಮವಾಗಿಯೂ "ಯಾವವು ಅವನಿಗೆ ಗೇಷ್ಣುಗಳೋ ಅವೇ (ಇವನಿಗೂ) ಗೇಷ್ಣುಗಳು" (ಛಾಂ. ೧-೭-೫) ಎಂದು (ಹೇಳಿರುತ್ತದೆ). ಇದೂ ಸರ್ವಾತ್ಮ(ನಾದ ಪರಮೇಶ್ವರನಿಗೇ) ಹೊಂದುತ್ತದೆ.[1] ಮತ್ತು ಆದ್ದರಿಂದ ಯಾವ ಇವರು ವೀಣೆ ಯಲ್ಲಿ ಗಾನಮಾಡುತ್ತಾರೋ ಅವರು ಈತನನ್ನೇ ಗಾನಮಾಡುತ್ತಾರೆ; ಆದ್ದರಿಂದ ಅವರು ಧನವನ್ನು ಪಡೆದುಕೊಳ್ಳುತ್ತಿರುವರು (ಛಾಂ. ೧-೭-೬) ಎಂದು ಲೌಕಿಕ ಗಾನಗಳಲ್ಲಿಯೂ ಇತನನ್ನೇ (ಹೊಗಳಿ) ಗಾನಮಾಡುತ್ತಾರೆಂದು ತಿಳಿಸಿರುತ್ತದೆ. ಅದೂ (ಈ ಪುರುಷನು) ಪರಮೇಶ್ವರನೆಂದು ಹಿಡಿದರೇ ಹೊಂದುತ್ತದೆ. ಏಕೆಂದರೆ "ಯಾವ ಯಾವ ಸತ್ತ್ವವು ವಿಭೂತಿವಂತವಾಗಿರುವದೋ ಶ್ರೀಮಂತವಾಗಿರುವದೋ ಅಥವಾ ಊರ್ಜಿತವಾಗಿರುವದೋ ಅದದನ್ನೇ ನನ್ನ ತೇಜಸ್ಸಿನ ಅಂಶದಿಂದ ಹುಟ್ಟಿದ್ದೆಂದು ತಿಳಿಯಬೇಕು" (ಗೀ. ೧೦-೪೧) ಎಂದು ಭಗವದ್ಗೀತೆಯಲ್ಲಿ (ಹೇಳಿರುವದು) ಕಂಡುಬರುತ್ತದೆ. ಲೋಕಗಳಿಗೂ ಕಾಮಗಳಿಗೂ ನಿರಂಕುಶವಾಗಿ ಒಡೆಯನಾಗಿರುವನೆಂದು ಶ್ರುತಿಯಲ್ಲಿರುವದೂ (ಈ ಪುರುಷನು) ಪರಮೇಶ್ವರನೆಂದು ತಿಳಿಸಿಕೊಡುತ್ತದೆ.

## ರೂಪಾಧಾರಾದಿಗಳನ್ನು ಉಪಾಸನೆಗಾಗಿ ಹೇಳಿದೆ

(ಭಾಷ್ಯ)

೧೧೫. ಯತ್ತು ಉಕ್ತಮ್—ಹಿರಣ್ಯಶ್ಮಶ್ರುತ್ವಾದಿರೂಪಶ್ರವಣಂ ಪರಮೇಶ್ವರೇ ನೋಪಪದ್ಯತೇ ಇತಿ । ಅತ್ರ ಬ್ರೂಮಃ । ಸ್ಯಾತ್ ಪರಮೇಶ್ವರಸ್ಯಾಪಿ ಇಚ್ಛಾವಶಾತ್ ಮಾಯಾಮಯಂ ರೂಪಂ ಸಾಧಕಾನುಗ್ರಹಾರ್ಥಮ್ । ಮಾಯಾ ಹ್ಯೇಷಾ ಮಯಾ ಸೃಷ್ಟಾ ಯನ್ಮಾಂ ಪಶ್ಯಸಿ ನಾರದ । ಸರ್ವಭೂತಗುಣೈರ್ಯುಕ್ತಂ ನೈವಂ ಮಾಂ ಜ್ಞಾತುಮರ್ಹಸಿ" ॥ (ಮೋ. ಧ. ೩೩೯-೪೫)[2] ಇತಿ ಸ್ಮರಣಾತ್ । ಅಪಿ ಚ ಯತ್ರ ತು ನಿರಸ್ತಸರ್ವವಿಶೇಷಂ ಪಾರಮೇಶ್ವರಂ ರೂಪಮುಪದಿಶ್ಯತೇ ಭವತಿ ತತ್ರ ಶಾಸ್ತ್ರಮ್ 'ಅಶಬ್ದಮಸ್ಪರ್ಶಮರೂಪಮವ್ಯಯಮ್" (ಕ. ೧-೩-೧೫) ಇತ್ಯಾದಿ । ಸರ್ವಕಾರಣತ್ವಾತ್ ತು ವಿಕಾರಧರ್ಮೈರಪಿ ಕೈಶ್ಚಿದ್ವಿಶಿಷ್ಟಃ ಪರಮೇಶ್ವರಃ ಉಪಾಸ್ಯತ್ವೇನ ನಿರ್ದಿಶ್ಯತೇ "ಸರ್ವಕರ್ಮಾ ಸರ್ವಕಾಮಃ ಸರ್ವಗನ್ಧಃ ಸರ್ವರಸಃ" (ಛಾಂ. ೩-೧೪-೨) ಇತ್ಯಾದಿನಾ । ತಥಾ ಹಿರಣ್ಯಶ್ಮಶ್ರುತ್ವಾದಿನಿರ್ದೇಶೋಽಪಿ ಭವಿಷ್ಯತಿ । ಯದಪಿ ಆಧಾರಶ್ರವಣಾತ್ ನ ಪರಮೇಶ್ವರಃ ಇತಿ,

---

1. ಪೃಥಿವ್ಯಾದಿಗಳ ಮತ್ತು ವಾಗಾದಿಗಳ ರೂಪವಾಗಿರುವ ಋಕ್ಸಾಮಗಳು ಗೇಷ್ಣುಗಳೆಂದು ಹೇಳಿರುವದು ಸರ್ವಾತ್ಮನಾದ ಪರಮೇಶ್ವರನಿಗೆ ಹೊಂದುತ್ತದೆಯೇ ಹೊರತು ಸಂಸಾರಿಗೆ ಹೊಂದುವದಿಲ್ಲ.

2. 'ನೈವಂ ತ್ವಂ ಜ್ಞಾತುಮರ್ಹಸಿ' ಎಂದು ಅಚ್ಚಿನ ಪುಸ್ತಕದ ಪಾಠ.

ಅತ್ರೋಚ್ಯತೇ । ಸ್ವಮಹಿಮಪ್ರತಿಷ್ಠಸ್ಯಾಪಿ ಆಧಾರವಿಶೇಷೋಪದೇಶ ಉಪಾಸನಾರ್ಥೋ ಭವಿಷ್ಯತಿ । ಸರ್ವಗತತ್ವಾತ್ ಬ್ರಹ್ಮಣಃ ವ್ಯೋಮವತ್ ಸರ್ವಾನ್ತರತ್ವೋಪಪತ್ತೇಃ ಐಶ್ವರ್ಯಮರ್ಯಾದಾಶ್ರವಣಮಪಿ ಅಧ್ಯಾತ್ಮಾಧಿದೈವತವಿಭಾಗಾಪೇಕ್ಷಮ್ ಉಪಾಸನಾರ್ಥಮೇವ । ತಸ್ಮಾತ್ ಪರಮೇಶ್ವರ ಏವ ಅಕ್ಷ್ಯಾದಿತ್ಯಯೋರನ್ತರುಪದಿಶ್ಯತೇ ॥

( ಭಾಷ್ಯಾರ್ಥ )

ಇನ್ನು ಹಿರಣ್ಯದ ಗಡ್ಡಮೀಸೆಗಳಿರುವದೇ ಮುಂತಾದ ರೂಪವನ್ನು ಶ್ರುತಿ (ಯಲ್ಲಿ ಹೇಳಿರುವದು) ಪರಮೇಶ್ವರನಿಗೆ ಒಪ್ಪುವದಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಇದಕ್ಕೆ (ಈ ಉತ್ತರವನ್ನು) ಹೇಳುತ್ತೇವೆ. ಪರಮೇಶ್ವರನಿಗೂ ಇಚ್ಛೆಯ ವಶದಿಂದ ಮಾಯಾಮಯವಾದ ರೂಪವು ಸಾಧಕರಿಗೆ ಅನುಗ್ರಹವನ್ನು ಮಾಡುವದಕ್ಕಾಗಿ ಇರಬಹುದು. "ಎಲೈ ನಾರದನೆ, ನಾನೆಂದು ನೋಡುತ್ತಿರುವೆಯಲ್ಲ, ಇದು ನನ್ನಿಂದ ಸೃಷ್ಟವಾಗಿರುವ ಮಾಯೆಯು. ಹೀಗೆ ನಾನು ಸರ್ವಭೂತಗುಣಗಳಿಂದಲೂ ಕೂಡಿದವನೆಂದು ಎಣಿಸದಿರು" (ಮೋ. ಧ. ೩೩೯-೪೫) ಎಂಬ ಸ್ಮೃತಿಯಿಂದ[1] (ಹೀಗೆಂದು ಗೊತ್ತಾಗುತ್ತದೆ). ಇದಲ್ಲದೆ ಎಲ್ಲಿ ಯಾವ ವಿಶೇಷವೂ ಇಲ್ಲದ ಪರಮೇಶ್ವರರೂಪವನ್ನು ಉಪದೇಶಿಸಿರುತ್ತದೆಯೋ ಅಲ್ಲಿ "ಅಶಬ್ದವು, ಅಸ್ಪರ್ಶವು, ಅರೂಪವು, ಅವ್ಯಯವು" (ಕ. ೧-೩-೧೫) ಎಂಬ ಶಾಸ್ತ್ರವು ಆಗುತ್ತದೆ. ಆದರೆ ಎಲ್ಲಕ್ಕೂ ಕಾರಣವಾಗಿರುವದರಿಂದ ಕೆಲವು ಕಾರ್ಯಧರ್ಮಗಳಿಂದಲೂ ಕೂಡಿರುವ ಪರಮೇಶ್ವರನನ್ನು "ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು" (ಛಾಂ. ೩-೧೪-೨) ಎಂದು ಮುಂತಾಗಿರುವ ಶ್ರುತಿಯಿಂದ ಉಪಾಸ್ಯನೆಂದು ತಿಳಿಸಿರುತ್ತದೆ. ಹಾಗೆಯೇ ಹಿರಣ್ಯಶ್ಮಶ್ರುತ್ವಾದಿ (ರೂಪವನ್ನೂ) ಹೇಳಿರುವದೂ ಆಗಬಹುದಾಗಿರುತ್ತದೆ.[2]

ಇನ್ನು (ಪುರುಷನಿಗೆ) ಆಧಾರವನ್ನು ಹೇಳಿರುವದರಿಂದ (ಅವನು) ಪರಮೇಶ್ವರನಲ್ಲ ಎಂದು (ಪೂರ್ವಪಕ್ಷಿ ಹೇಳಿದ್ದನಷ್ಟೆ), ಅದಕ್ಕೆ (ಈ ಉತ್ತರವನ್ನು) ಹೇಳುತ್ತೇವೆ. ತನ್ನ ಮಹಿಮೆಯಲ್ಲಿ ನಿಂತಿರುವ (ಪರಮೇಶ್ವರನಿಗೂ) ಉಪಾಸನೆಗಾಗಿ ಒಂದು ಗೊತ್ತಾದ ಆಧಾರವನ್ನು ಉಪದೇಶಮಾಡ

1. ಈ ಸ್ಮೃತಿಯಲ್ಲಿ ಪರಮೇಶ್ವರನ ರೂಪವು ಮಾಯಾಮಯವೆಂದು ಹೇಳಿದೆ.

2. ನಿರ್ಗುಣನಿಗೆ ಗುಣವನ್ನು ಹೇಳಿರುವಂತೆ ನೀರೂಪನಿಗೆ ರೂಪವನ್ನೂ ಉಪಾಸನೆಗಾಗಿ ಹೇಳಬಹುದು ; ಈ ಗುಣವೂ ರೂಪವೂ ಉಪಾಧಿಯ ಧರ್ಮಗಳ ಅಧ್ಯಾಸದಿಂದ ಪರಮೇಶ್ವರನಿಗೆ ಆಗಬಹುದು.

ಬಹುದು. ಏಕೆಂದರೆ ಬ್ರಹ್ಮವು ಸರ್ವಗತವಾಗಿರುವದರಿಂದ ಆಕಾಶದಂತೆ ಎಲ್ಲಕ್ಕೂ ಒಳಗೆ ಇರಬಹುದಾಗಿರುತ್ತದೆ.

ಐಶ್ವರ್ಯಕ್ಕೆ ಎಲ್ಲೆಕಟ್ಟನ್ನು ಹೇಳಿರುವದೂ ಅಧ್ಯಾತ್ಮ, ಅಧಿದೈವತ ಎಂಬ ವಿಂಗಡದ ಅಪೇಕ್ಷೆಯಿಂದ ಉಪಾಸನೆಗಾಗಿಯೇ. ಆದ್ದರಿಂದ ಅಕ್ಷಿ, ಆದಿತ್ಯ-ಇವುಗಳೊಳಗೆ ಪರಮೇಶ್ವರನನ್ನೇ (ಉಪಾಸನೆಗಾಗಿ) ಉಪದೇಶಮಾಡಿದೆ[1].

## ಜೀವನಿಗಿಂತ ಬೇರೆಯಾದ ಅಂತರ್ಯಾಮಿಯೂ ಇರುತ್ತಾನೆ

### ಭೇದವ್ಯಪದೇಶಾಚ್ಚಾನ್ಯಃ ॥ ೨೧ ॥

೨೧. ಭೇದವ್ಯಪದೇಶದಿಂದಲೂ (ಈ ಪುರುಷನು ಜೀವನಿಗಿಂತ) ಅನ್ಯನು.

(ಭಾಷ್ಯ)

೧೧೬. ಅಸ್ತಿ ಚ ಆದಿತ್ಯಾದಿಶರೀರಾಭಿಮಾನಿಭ್ಯೋ ಜೀವೇಭ್ಯೋಽನ್ಯಃ ಈಶ್ವರಃ ಅನ್ತರ್ಯಾಮೀ । "ಯ ಆದಿತ್ಯೇ ತಿಷ್ಠನ್ನಾದಿತ್ಯಾದನ್ತರೋ ಯಮಾದಿತ್ಯೋ ನ ವೇದ ಯಸ್ಯಾದಿತ್ಯಃ ಶರೀರಂ ಯ ಆದಿತ್ಯಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ" (ಬೃ. ೩-೭-೯) ಇತಿ ಶ್ರುತ್ಯನ್ತರೇ ಭೇದವ್ಯಪದೇಶಾತ್ । ತತ್ರ ಹಿ "ಆದಿತ್ಯಾದನ್ತರೋ ಯಮಾದಿತ್ಯೋ ನ ವೇದ ಇತಿ ವೇದಿತುರಾದಿತ್ಯಾತ್ ವಿಜ್ಞಾನಾತ್ಮನೋಽನ್ಯಃ ಅನ್ತರ್ಯಾಮೀ ಸ್ಪಷ್ಟಂ ನಿರ್ದಿಶ್ಯತೇ । ಸ ಏವ ಇಹಾಪಿ ಅನ್ತರಾದಿತ್ಯೇ ಪುರುಷೋ ಭವಿತುಮರ್ಹತಿ । ಶ್ರುತಿಸಾಮಾನ್ಯಾತ್ । ತಸ್ಮಾತ್ ಪರಮೇಶ್ವರ ಏವ ಇಹ ಉಪದಿಶ್ಯತೇ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಆದಿತ್ಯನೇ ಮುಂತಾದ ಶರೀರಗಳ ಅಭಿಮಾನಿಗಳಾದ ಜೀವರುಗಳಿಗಿಂತಲೂ ಬೇರೆಯಾದ ಈಶ್ವರನೆಂಬ ಅಂತರ್ಯಾಮಿಯು ಇದ್ದೇ ಇದ್ದಾನೆ. ಏಕೆಂದರೆ ಬೇರೊಂದು ಶ್ರುತಿಯಲ್ಲಿ "ಯಾವನು ಆದಿತ್ಯನಲ್ಲಿದ್ದುಕೊಂಡು ಆದಿತ್ಯನಿಗಿಂತ ಒಳಗಿರುವವನಾಗಿರುವನೋ ಯಾವನನ್ನು ಆದಿತ್ಯನು ಅರಿಯನೋ, ಯಾವನಿಗೆ ಆದಿತ್ಯನು ಶರೀರವೋ, ಯಾವನು ಆದಿತ್ಯನನ್ನು ಒಳಗಿರುವವನಾಗಿ ಹಿಡಿತದಲ್ಲಿಟ್ಟುಕೊಂಡಿರುವನೋ, ಇವನೇ ನಿನ್ನ ಆತ್ಮನು, ಅಂತರ್ಯಾಮಿಯು, ಅಮೃತನು"

1. ಹಿಂದಿನ ಅಧಿಕರಣದಲ್ಲಿ ಬ್ರಹ್ಮ, ಆನಂದಮಯ ಎಂಬ ಪದಗಳು, ಆನಂದಪದದ ಅಭ್ಯಾಸ-ಈ ಮೂರರ ಬಲದಿಂದ ನಿರ್ವಿಶೇಷಬ್ರಹ್ಮವೇ ವಿವಕ್ಷಿತವೆಂದು ನಿಶ್ಚಯಿಸಿದಂತೆ ಇಲ್ಲಿ ರೂಪವತ್ತ್ವ, ಮರ್ಯಾದಾವದೈಶ್ವರ್ಯ ಎಂಬ ಧರ್ಮಗಳಿಂದ ಪುರುಷನು ಸಂಸಾರಿಯಾಗಲಿ ಎಂದು ಶಂಕಿಸಿ ಇವೆಲ್ಲ ಉಪಾಸನಾರ್ಥವಾಗಿ ಹೇಳಿದ್ದು ಎಂದು ಪರಿಹರಿಸಿದೆ.

(ಬೃ.೩-೭-೯) ಎಂದು ಭೇದವ್ಯಪದೇಶವಿದೆ. ಅಲ್ಲಿ "ಆದಿತ್ಯನಿಗಿಂತಲೂ ಒಳಗಿರುವವನು", "ಯಾವನನ್ನು ಆದಿತ್ಯನು ಅರಿಯನೋ" ಎಂದು ಅರಿಯುವಾತನಾದ[1] ಆದಿತ್ಯನೆಂಬ ವಿಜ್ಞಾನಾತ್ಮನಿಗಿಂತ ಅನ್ಯನಾದ[2] ಅಂತರ್ಯಾಮಿಯನ್ನು ಸ್ಪಷ್ಟವಾಗಿ ತಿಳಿಸಿರುತ್ತದೆಯಷ್ಟೆ. ಆತನೇ ಇಲ್ಲಿಯೂ ಆದಿತ್ಯನ ಒಳಗೆ ಇರುವ ಪುರುಷನೆಂಬುದು ಯುಕ್ತವು; ಏಕೆಂದರೆ (ಈ) ಶ್ರುತಿ(ಗಳೆರಡೂ) ಸಮಾನವಾಗಿರುತ್ತವೆ. ಆದ್ದರಿಂದ ಇಲ್ಲಿ ಪರಮೇಶ್ವರನನ್ನೇ ಉಪದೇಶಿಸಿದೆ ಎಂದು ಸಿದ್ಧವಾಯಿತು.[3]

## ೮. ಆಕಾಶಾಧಿಕರಣ

(ಛಾಂದೋಗ್ಯ ೧-೯ರಲ್ಲಿರುವ ಆಕಾಶವು ಬ್ರಹ್ಮವೇ)

**ಆಕಾಶಸ್ತಲ್ಲಿಙ್ಗಾತ್ ॥ ೨೨ ॥**

೨೨. ಆಕಾಶ (ವೆಂದರೆ ಬ್ರಹ್ಮವು) : ಏಕೆಂದರೆ ಅದರ ಲಿಂಗಗಳಿವೆ.

## ವಿಷಯವೂ ಸಂಶಯವೂ

(ಭಾಷ್ಯ)

೧೧೭. ಇದಮ್ ಆಮನನ್ತಿ— ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯನ್ತ ಆಕಾಶಂ ಪ್ರತ್ಯಸ್ತಂ ಯನ್ತ್ಯಾಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಮ್ (ಛಾಂ. ೧-೯-೧) ಇತಿ । ತತ್ರ ಸಂಶಯಃ—ಕಿಮ್ ಆಕಾಶಶಬ್ದೇನ ಪರಂ ಬ್ರಹ್ಮ ಅಭಿಧೀಯತೇ ಉತ ಭೂತಾಕಾಶಮ್ ಇತಿ । ಕುತಃ ಸಂಶಯಃ? ಉಭಯತ್ರ ಪ್ರಯೋಗದರ್ಶನಾತ್ । ಭೂತವಿಶೇಷೇ ತಾವತ್ ಸುಪ್ರಸಿದ್ಧೋ ಲೋಕವೇದಯೋರಾಕಾಶಶಬ್ದಃ । ಬ್ರಹ್ಮಣ್ಯಪಿ ಕ್ವಚಿತ್ ಪ್ರಯುಜ್ಯಮಾನೋ ದೃಶ್ಯತೇ । ಯತ್ರ ವಾಕ್ಯಶೇಷವಶಾತ್ ಅಸಾಧಾರಣಗುಣಶ್ರವಣಾದ್ ವಾ ನಿರ್ಧಾರಿತಂ ಬ್ರಹ್ಮ ಭವತಿ । ಯಥಾ "ಯದೇಷ ಆಕಾಶ ಆನನ್ದೋ ನ ಸ್ಯಾತ್" (ತೈ. ೨-೭) ಇತಿ, "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ಬ್ರಹ್ಮ" (ಛಾಂ. ೮-೧೪.೧) ಇತಿ ಚೈವಮಾದೌ । ಅತಃ ಸಂಶಯಃ.॥

---

1. ಪ್ರಮಾತೃವಾದ.

2. ಅರಿಯುವ ಜೀವಾತ್ಮನಿಗಿಂತ ಈಶ್ವರನು ಅನ್ಯನು. ಈಶ್ವರನಿಗಿಂತ ಜೀವನು ಅನ್ಯನಲ್ಲ. ಭಾ. ಭಾ. ೧೦೪ರಲ್ಲಿ ಕೊಟ್ಟಿರುವ ವಿವರಣೆಯನ್ನು ನೋಡಿ.

3. ಇದು ಉಪಾಸನಾವಿಧಿಪ್ರಧಾನವಾದ ವಾಕ್ಯವಾದರೂ ಅದಕ್ಕೆ ಶೇಷವಾಗಿ ಹೇಳಿರುವ ಉಪಾಸ್ಯವು ಬ್ರಹ್ಮವೇ ಎಂದು ಸಿದ್ಧವಾಯಿತು ಎಂದರ್ಥ. ಉಪಾಸ್ಯಬ್ರಹ್ಮದಲ್ಲಿ ಸಮನ್ವಯವೆಂದೇನೂ ಅಭಿಪ್ರಾಯವಲ್ಲ. ಟೀಕೆಯನ್ನು ನೋಡಿ.

(ಭಾಷ್ಯಾರ್ಥ)

(ಅಧ್ಯಯನವನ್ನು ಮಾಡುವವರು) ಈ (ಮಂತ್ರವನ್ನು) ಹೇಳುತ್ತಿರುವರು : ಈ ಲೋಕಕ್ಕೆ ಗತಿ ಯಾವದು? ಆಕಾಶವು ಎಂದು (ಆತನು ಉತ್ತರವನ್ನು) ಹೇಳಿದನು. ಏಕೆಂದರೆ ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟುತ್ತಿರುವವು. ಆಕಾಶವನ್ನು ಸೇರಿ ಮರೆಯಾಗುತ್ತಿರುವವು. ಇವುಗಳಿಗಿಂತ ಆಕಾಶವೇ ದೊಡ್ಡದು. ಆಕಾಶವೇ ಪರಾಯಣವು'' (ಛಾಂ. ೧-೯-೧). ಇಲ್ಲಿ ಸಂಶಯವೇನೆಂದರೆ, ಆಕಾಶಶಬ್ದದಿಂದ ಪರಬ್ರಹ್ಮವನ್ನು[1] ಹೇಳಿರುತ್ತದೆಯೆ, ಅಥವಾ ಭೂತಾಕಾಶವನ್ನು ಹೇಳಿರುತ್ತದೆಯೆ?

(ಪ್ರಶ್ನೆ) :—(ಇಲ್ಲಿ) ಸಂಶಯವೇತರಿಂದ (ಉಂಟಾಗುತ್ತದೆ)?

(ಉತ್ತರ) :—ಎರಡರಲ್ಲಿಯೂ ಪ್ರಯೋಗವು ಕಂಡುಬರುವದರಿಂದ. ಮೊದಲನೆಯದಾಗಿ ಒಂದಾನೊಂದು ಭೂತದಲ್ಲಿ ಆಕಾಶಶಬ್ದವು ಲೋಕವೇದಗಳಲ್ಲಿ[2] ಸುಪ್ರಸಿದ್ಧವಾಗಿರುತ್ತದೆ. ಬ್ರಹ್ಮದಲ್ಲಿಯೂ ಕೆಲವು ಕಡೆಗಳಲ್ಲಿ (ಈ ಮಾತನ್ನು) ಪ್ರಯೋಗಿಸಿರುವದು ಕಂಡುಬರುತ್ತದೆ; ಅಲ್ಲಿ ವಾಕ್ಯಶೇಷದ ವಶದಿಂದಲೋ (ಬ್ರಹ್ಮದ) ಅಸಾಧಾರಣಗುಣವು ಶ್ರುತಿಯಲ್ಲಿರುವದರಿಂದಲೋ (ಆಕಾಶವೆಂದರೆ) ಬ್ರಹ್ಮ(ವೆಂದು) ಗೊತ್ತುಮಾಡಬಹುದಾಗಿರುತ್ತದೆ. ಹೇಗೆಂದರೆ, ಆಕಾಶದಲ್ಲಿ ಈ ಆನಂದವು ಇಲ್ಲದಿದ್ದರೆ (ಯಾರು ತಾನೆ ಅಪಾನಕ್ರಿಯೆಯನ್ನು ಮಾಡಿಯಾರು, ಯಾರು ಪ್ರಾಣಕ್ರಿಯೆಯನ್ನು ಮಾಡಿಯಾರು)"[3] ?(ತೈ. ೩-೭) ಎಂದು, ಮತ್ತು ಆಕಾಶವೆಂಬುದೇ ನಾಮರೂಪಗಳನ್ನು ನಿರ್ವಹಿಸುವದು; ಅವುಗಳು ಯಾವದರಲ್ಲಿ (ರುವವೋ) ಅದು ಬ್ರಹ್ಮವು[4] (ಛಾಂ. ೮-೧೪-೧) ಎಂದು ಮುಂತಾದ (ಕಡೆ)ಯಲ್ಲಿ (ಆಕಾಶವೆಂದರೆ ಬ್ರಹ್ಮವೆಂದು ನಿಶ್ಚಯವಾಗುತ್ತದೆ). ಆದ್ದರಿಂದ (ಇಲ್ಲಿ) ಸಂಶಯ ವುಂಟಾಗುತ್ತದೆ.

---

1. ಪರಬ್ರಹ್ಮವೆಂದರೆ ಜೀವ, ಪ್ರಧಾನ ಮುಂತಾದವುಗಳಿಗಿಂತ ಹೆಚ್ಚಿನದಾದ ಬ್ರಹ್ಮವು. ಇಲ್ಲಿ ಪರ, ಅಪರ_ಎಂದೇನೂ ಬ್ರಹ್ಮವನ್ನು ವಿಂಗಡಿಸಿಲ್ಲ. ಪೀಠಿಕೆಯನ್ನು ನೋಡಿರಿ.

2. ವೈದಿಕವಾಙ್ಮಯವಲ್ಲದೆ ಪೌರುಷೇಯವಾದ ಗ್ರಂಥಗಳಲ್ಲಿ ಕಾಣುವ ಸಂಸ್ಕೃತ ಭಾಷೆಯನ್ನು ಇಲ್ಲಿ ಲೋಕವೆಂದು ಕರೆದಿದೆ.

3. ಆನಂದವೆಂಬ ಅಸಾಧಾರಣಗುಣದಿಂದ ಆಕಾಶವೆಂದರೆ ಬ್ರಹ್ಮವೆಂದು ಗೊತ್ತಾಗುವ ಸ್ಥಲವಿದು.

4. ವಾಕ್ಯಶೇಷದಲ್ಲಿ ನಾಮರೂಪನಿರ್ವಹಣವನ್ನು ಹೇಳುವದರಿಂದ ಆಕಾಶವೆಂದರೆ ಬ್ರಹ್ಮವೆಂದು ಗೊತ್ತಾಗುವ ಸ್ಥಲವಿದು. ಪ್ರಕೃತವಿಷಯವಾಕ್ಯದಲ್ಲಿ ಆಕಾಶವೆಂದರೆ ಭೂತಾಕಾಶವೊ, ಬ್ರಹ್ಮವೊ ಎಂಬುದು ತಟ್ಟನೆ ಹೀಗೆ ಗೊತ್ತಾಗುವದಿಲ್ಲ ಎಂದು ಭಾವ.

# ಪೂರ್ವಪಕ್ಷ: ಈ ಶ್ರುತಿಯಲ್ಲಿ ಆಕಾಶವೆಂದರೆ ಭೂತಾಕಾಶವು

(ಭಾಷ್ಯ)

೧೧೮. ಕಿಂ ಪುನರತ್ರ ಯುಕ್ತಮ್ ? ಭೂತಾಕಾಶಮ್ ಇತಿ | ಕುತಃ ? ತದ್ಧಿ ಪ್ರಸಿದ್ಧತರೇಣ ಪ್ರಯೋಗೇಣ ಶೀಘ್ರಂ ಬುದ್ಧಿಮಾರೋಹತಿ | ನ ಚ ಅಯಮ್ ಆಕಾಶಶಬ್ದಃ ಉಭಯೋಃ ಸಾಧಾರಣಃ ಶಕ್ಯೋ ವಿಜ್ಞಾತುಮ್ | ಅನೇಕಾರ್ಥತ್ವಪ್ರಸಜ್ಗಾತ್ | ತಸ್ಮಾತ್ ಬ್ರಹ್ಮಣಿ ಗೌಣಃ ಆಕಾಶಶಬ್ದೋ ಭವಿತುಮರ್ಹತಿ | ವಿಭುತ್ವಾದಿಭಿರ್ಹಿ ಬಹುಭಿರ್ಧರ್ಮೈಃ ಸದೃಶಮಾಕಾಶೇನ ಬ್ರಹ್ಮ ಭವತಿ | ನ ಚ ಮುಖ್ಯಸಂಭವೇ ಗೌಣೋಽರ್ಥೋ ಗ್ರಹಣಮ್ ಅರ್ಹತಿ | ಸಂಭವತಿ ಚ ಇಹ ಮುಖ್ಯಸ್ಯೈವ ಆಕಾಶಸ್ಯ ಗ್ರಹಣಮ್ | ನನು ಭೂತಾಕಾಶಪರಿಗ್ರಹೇ ವಾಕ್ಯಶೇಷೋ ನೋಪಪದ್ಯತೇ "ಸರ್ವಾಣಿ ಹ ವಾ ಇಮಾನಿ ಭೂತಾನಾಕಾಶಾದೇವ ಸಮುತ್ಪದ್ಯನ್ತೇ" ಇತ್ಯಾದಿಃ | ನೈಷ ದೋಷಃ | ಭೂತಾಕಾಶಸ್ಯಾಪಿ ವಾಯ್ವಾದಿಕ್ರಮೇಣ ಕಾರಣತ್ವೋಪಪತ್ತೇಃ | ವಿಜ್ಞಾಯತೇ ಹಿ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ | ಆಕಾಶಾದ್ವಾಯುಃ | ವಾಯೋರಗ್ನಿಃ" (ತೈ. ೨-೧) ಇತ್ಯಾದಿ| ಜ್ಯಾಯಸ್ತ್ವಪರಾಯಣತ್ವೇ ಅಪಿ ಭೂತಾನ್ತರಾಪೇಕ್ಷಯಾ ಉಪಪದ್ಯೇತೇ ಭೂತಾಕಾಶಸ್ಯಾಪಿ | ತಸ್ಮಾತ್ ಆಕಾಶಶಬ್ದೇನ ಭೂತಾಕಾಶಸ್ಯ ಗ್ರಹಣಮ್ ಇತಿ ||

(ಭಾಷ್ಯಾರ್ಥ)

ಇಲ್ಲಿ ಯಾವದು ಯುಕ್ತವು? ಎಂದರೆ ಭೂತಾಕಾಶವೇ (ಇಲ್ಲಿ ಹೇಳಿರುವ) ದೆಂಬುದು (ಯುಕ್ತವು). ಏಕೆಂದರೆ ಅದೇ ಪ್ರಸಿದ್ಧತರವಾದ ಪ್ರಯೋಗ(ವಿರುವ) ದರಿಂದ ಬೇಗನೆ ಬುದ್ಧಿಗೆ ಹತ್ತುತ್ತದೆ. ಈ ಆಕಾಶವೆಂಬ ಶಬ್ದವು (ಬ್ರಹ್ಮ, ಆಕಾಶ–ಈ) ಎರಡಕ್ಕೂ ಸಾಧಾರಣ(ವಾಚಕ)ವೆಂದು ತಿಳಿಯುವದು ಶಕ್ಯವಲ್ಲ; ಏಕೆಂದರೆ (ಆಗ ಒಂದು ಶಬ್ದಕ್ಕೆ) ಅನೇಕಾರ್ಥ(ಗಳಿವೆ ಎಂದು ಇಟ್ಟುಕೊಳ್ಳುವ) ಪ್ರಸಂಗವು ಬರುವದು.[1] ಆದ್ದರಿಂದ ಬ್ರಹ್ಮದಲ್ಲಿ ಆಕಾಶಶಬ್ದವು ಗೌಣವಾಗಿರಬೇಕು. ವಿಭುತ್ವವೇ ಮುಂತಾದ ಅನೇಕಧರ್ಮಗಳಿಂದ ಬ್ರಹ್ಮವು ಆಕಾಶಕ್ಕೆ ಸಮಾನವಾಗಿರುತ್ತದೆಯಲ್ಲವೆ? (ಆದ್ದರಿಂದ ಗೌಣವಾಗಬಹುದು). ಮುಖ್ಯ(ವಾದ ಅರ್ಥವು) ಹೊಂದುತ್ತಿರುವಲ್ಲಿ ಗೌಣಾರ್ಥವನ್ನು ತೆಗೆದುಕೊಳ್ಳುವದು (ಸರಿ)ಯಲ್ಲ, ಇಲ್ಲಿ ಮುಖ್ಯವಾದ (ಭೂತಾ)ಕಾಶವನ್ನು ತೆಗೆದುಕೊಂಡರೂ ಹೊಂದುತ್ತದೆ.

---

1. ಅದು ಯುಕ್ತವಲ್ಲವಾದ್ದರಿಂದ ಇವುಗಳಲ್ಲಿ ಒಂದೇ ವಾಚ್ಯಾರ್ಥವೆಂದು ತಿಳಿಯುವದು ಯುಕ್ತ.

(ಆಕ್ಷೇಪ) :—(ಇಲ್ಲಿ ಭೂತಾಕಾಶವನ್ನು ತೆಗೆದುಕೊಂಡರೆ "ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟುತ್ತಿರುವವು" ಎಂದು ಮುಂತಾಗಿರುವ ವಾಕ್ಯಶೇಷವು ಹೊಂದುವದಿಲ್ಲವಲ್ಲ !

(ಪರಿಹಾರ) :—ಇದು ದೋಷವಲ್ಲ. ಏಕೆಂದರೆ ಭೂತಾಕಾಶವು ವಾಯುವೇ ಮುಂತಾದವುಗಳ ಕ್ರಮದಿಂದ[1] ಕಾರಣವಾಗಿರುತ್ತದೆ. "ಆ ಈ ಆತ್ಮನಿಂದ ಆಕಾಶವು ಉಂಟಾಯಿತು. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ (ತೈ. ೨-೧) ಎಂದು ಮುಂತಾಗಿ (ಶ್ರುತಿಯಲ್ಲಿ) ಗೊತ್ತಾಗಿದೆಯಲ್ಲವೆ? (ಮಿಕ್ಕವುಗಳಿಗಿಂತ) ದೊಡ್ಡದಾಗಿರುವದು, ಪರಾಯಣವಾಗಿರುವದು-ಇವೂ ಮಿಕ್ಕಭೂತಗಳ ಅಪೇಕ್ಷೆಯಿಂದ ಭೂತಾಕಾಶಕ್ಕೂ ಹೊಂದುತ್ತವೆ. ಆದ್ದರಿಂದ ಆಕಾಶಶಬ್ದದಿಂದ ಭೂತಾಕಾಶವನ್ನು ತೆಗೆದುಕೊಳ್ಳುವದು (ಯುಕ್ತ).

## ಸಿದ್ಧಾಂತ: ಆಕಾಶವೆಂದರೆ ಬ್ರಹ್ಮವೇ; ಏಕೆಂದರೆ ಇಲ್ಲಿ ಬ್ರಹ್ಮಲಿಂಗಗಳಿವೆ

(ಭಾಷ್ಯ)

೧೧೯. ಏವಂ ಪ್ರಾಪ್ತೇ ಬ್ರೂಮಃ "ಆಕಾಶಸ್ತಲ್ಲಿಙ್ಗಾತ್" | ಆಕಾಶಶಬ್ದೇನ ಬ್ರಹ್ಮಣೋ ಗ್ರಹಣಂ ಯುಕ್ತಮ್ | ಕುತಃ? ತಲ್ಲಿಙ್ಗಾತ್ | ಪರಸ್ಯ ಹಿ ಬ್ರಹ್ಮಣಃ ಇದಂ ಲಿಙ್ಗಮ್ "ಸರ್ವಾಣಿ ಹ ವಾ ಇಮಾನಿ ಭೂತ್ಯಾನ್ಯಾಕಾಶಾದೇವ ಸಮುತ್ಪದ್ಯನ್ತೇ" ಇತಿ | ಪರಸ್ಮಾದ್ ಹಿ ಬ್ರಹ್ಮಣೋ ಭೂತಾನಾಮ್ ಉತ್ಪತ್ತಿಃ ಇತಿ ವೇದಾನ್ತೇಷು ಮರ್ಯಾದಾ| ನನು ಭೂತಾಕಾಶಸ್ಯಾಪಿ ವಾಯ್ವಾದಿಕ್ರಮೇಣ ಕಾರಣತ್ವಂ ದರ್ಶಿತಮ್ | ಸತ್ಯಂ ದರ್ಶಿತಮ್ | ತಥಾಪಿ ಮೂಲಕಾರಣಸ್ಯ ಬ್ರಹ್ಮಣಃ ಅಪರಿಗ್ರಹಾತ್ ಆಕಾಶಾದೇವ ಇತ್ಯವಧಾರಣಮ್, ಸರ್ವಾಣಿ ಇತಿ ಚ ಭೂತವಿಶೇಷಣಂ ನಾನುಕೂಲಂ ಸ್ಯಾತ್ | ತಥಾ "ಆಕಾಶಂ ಪ್ರತ್ಯಸ್ತಂಯನ್ತಿ" ಇತಿ ಬ್ರಹ್ಮಲಿಙ್ಗಮ್ | "ಆಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಮ್" ಇತಿ ಚ ಜ್ಯಾಯಸ್ತ್ವಪರಾಯಣತ್ವೇ | ಜ್ಯಾಯಸ್ತ್ವಂ ಹಿ ಅನಾಪೇಕ್ಷಿಕಂ ಪರಮಾತ್ಮನ್ಯೇವೈಕಸ್ಮಿನ್ ಆಮ್ನಾತಮ್—"ಜ್ಯಾಯಾನ್ ಪೃಥಿವ್ಯಾ ಜ್ಯಾಯಾನನ್ತರಿಕ್ಷಾಜ್ಜ್ಯಾಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ" (ಛಾಂ. ೩-೧೪-೩) ಇತಿ | ತಥಾ ಪರಾಯಣತ್ವಮಪಿ ಪರಮಕಾರಣತ್ವಾತ್ ಪರಮಾತ್ಮನ್ಯೇವ ಉಪಪನ್ನತರಮ್ | ಶ್ರುತಿಶ್ಚ ಭವತಿ "ವಿಜ್ಞಾನಮಾನನ್ದಂ

1. ಬ್ರಹ್ಮವು ಆಕಾಶಾದಿಕ್ರಮದಿಂದ ಕಾರಣವಾಗಿರುವಂತೆ ಆಕಾಶವು ವಾಯ್ವಾದಿಕ್ರಮದಿಂದ ಕಾರಣವಾಗಿರುತ್ತದೆ. ಆದ್ದರಿಂದ ಕಾರಣತ್ವವಾಕ್ಯವು ಹೊಂದುತ್ತದೆ.

ಬ್ರಹ್ಮ ರಾತೇರ್ದಾತುಃ ಪರಾಯಣಮ್ (ಬೃ. ೩-೯-೨೮) ಇತಿ । ಅಪಿ ಚ ಅನ್ತವತ್ತ್ವದೋಷೇಣ ಶಾಲಾವತ್ಯಸ್ಯ ಪಕ್ಷಂ ನಿನ್ದಿತ್ವಾ ಅನನ್ತಂ ಕಿಂಚಿದ್ ವಕ್ತುಕಾಮೇನ ಜೈವಲಿನಾ ಆಕಾಶಃ ಪರಿಗೃಹೀತಃ । ತಂ ಚ ಆಕಾಶಮ್ ಉದ್ಗೀಥೇ ಸಂಪಾದ್ಯ ಉಪಸಂಹರತಿ "ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನನ್ತಃ (ಛಾಂ. ೧-೯-೨) ಇತಿ । ತಚ್ಚ ಆನನ್ತ್ಯಂ ಬ್ರಹ್ಮಲಿಙ್ಗಮ್ ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಆಕಾಶವು (ಎಂದರೆ ಬ್ರಹ್ಮವು; ಏಕೆಂದರೆ) ಅದರ ಲಿಂಗಗಳಿವೆ. (ಇದರ ವಿವರ) : ಆಕಾಶವೆಂಬ ಶಬ್ದದಿಂದ ಬ್ರಹ್ಮವನ್ನು ತೆಗೆದುಕೊಳ್ಳುವದು ಯುಕ್ತವು; ಏಕೆಂದರೆ ಅದರ ಲಿಂಗಗಳಿವೆ. ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟುತ್ತವೆ ಎಂಬುದು ಪರಬ್ರಹ್ಮದ ಲಿಂಗವೇ; ಏಕೆಂದರೆ ಪರಬ್ರಹ್ಮದಿಂದಲೇ ಭೂತಗಳ ಉತ್ಪತ್ತಿಯಾಗುತ್ತದೆ ಎಂಬುದು ಉಪನಿಷತ್ತುಗಳ (ಉಪದೇಶದ) ಪದ್ಧತಿ.[1]

(ಆಕ್ಷೇಪ):—ಭೂತಾಕಾಶಕ್ಕೂ ವಾಯ್ವಾದಿಕ್ರಮದಿಂದ ಕಾರಣತ್ವ(ವುಂಟೆಂದು) ತೋರಿಸಿಕೊಟ್ಟಿವೆಯಲ್ಲ!

(ಪರಿಹಾರ):—ನಿಜ, ತೋರಿಸಿಕೊಟ್ಟಿವೆ. ಆದರೂ ಮೂಲಕಾರಣವಾದ ಬ್ರಹ್ಮವನ್ನು ತೆಗೆದುಕೊಳ್ಳದೆ ಇರುವದರಿಂದ ಆಕಾಶದಿಂದಲೇ (ಹುಟ್ಟುತ್ತಿರುವವು) ಎಂದು ಒತ್ತಿಹೇಳಿರುವದು,[2] 'ಎಲ್ಲಾ' ಎಂದು ಭೂತಗಳಿಗೆ ವಿಶೇಷಣ(ವನ್ನು ಕೊಟ್ಟಿರುವದೂ ನಿಮ್ಮ ಪಕ್ಷಕ್ಕೆ) ಅನುಕೂಲವಾಗಲಾರದು.[3] ಹೀಗೆಯೇ "ಆಕಾಶವನ್ನು ಸೇರಿ ಅಡಗುವವು" ಎಂಬುದೂ ಬ್ರಹ್ಮಲಿಂಗವು[4] ಮತ್ತು "ಆಕಾಶವೇ ಇವುಗಳಿಗಿಂತ ದೊಡ್ಡದು, ಪರಾಯಣವು" ಎಂದು (ಎಲ್ಲಕ್ಕೂ) ದೊಡ್ಡದಾಗಿರುವಿಕೆ, ಮತ್ತು ಪರಾಯಣವಾಗಿರುವಿಕೆ (ಇವೂ ಬ್ರಹ್ಮದ ಲಿಂಗಗಳು). ಹೇಗೆಂದರೆ ಅನಾ

1. ಉಪನಿಷತ್ತುಗಳಲ್ಲಿ ಬ್ರಹ್ಮಕ್ಕಿಂತ ಬೇರೆಯಾದ ಜಗತ್ಕಾರಣವನ್ನು ಒಪ್ಪಿಲ್ಲ.

2. ಭೂತಾಕಾಶವಾದರೆ, ಅದು ಹೊಂದುವದಿಲ್ಲ. ಉದಾಹರಣೆಗೆ ಅಗ್ನಿಯು ವಾಯುವಿನಿಂದಲೂ ಹುಟ್ಟುವದರಿಂದ, 'ಆಕಾಶದಿಂದಲೇ' ಎಂದು ಒತ್ತಿ ಹೇಳುವದು ಸರಿಯಾಗುವದಿಲ್ಲ.

3. ಏಕೆಂದರೆ ಆಕಾಶವೆಂಬ ಭೂತವನ್ನು ಬಿಡಬೇಕಾಗುತ್ತದೆ; ಬ್ರಹ್ಮವಾದರೇ ಆಕಾಶಕ್ಕೂ ಕಾರಣವಾಗಿರುತ್ತದೆ.

4. ಇಲ್ಲಿಯೂ ಆಕಾಶವೆಂಬ ಮಾತನ್ನು ಮತ್ತೆ ಹೇಳಿ ಅವಧಾರಣೆಮಾಡಿರುವದು ಬ್ರಹ್ಮಕ್ಕೆ ಮಾತ್ರ ಹೊಂದುತ್ತದೆ.

ಪೇಕ್ಷಿಕವಾದ ಜ್ಯಾಯಸ್ತ್ವ ಎಂಬುದು "ಪೃಥಿವಿಗಿಂತ ದೊಡ್ಡವನು. ಅಂತರಿಕ್ಷಕ್ಕಿಂತಲೂ ದೊಡ್ಡವನು, ದ್ಯುಲೋಕಕ್ಕಿಂತ ದೊಡ್ಡವನು, ಈ ಲೋಕಗಳಿಗಿಂತಲೂ ದೊಡ್ಡವನು" (ಛಾಂ ೩-೧೪-೩)ಎಂದು ಪರಮಾತ್ಮನೊಬ್ಬನ (ವಿಷಯ) ದಲ್ಲಿಯೇ ವೇದದಲ್ಲಿ ಹೇಳಿರುತ್ತದೆ. ಇದರಂತೆ ಪರಾಯಣತ್ವವೂ (ಎಲ್ಲಕ್ಕೂ) ಪರಮಕಾರಣವಾಗಿರುವದರಿಂದ ಪರಮಾತ್ಮನಿಗೇ (ಆಕಾಶಕ್ಕಿಂತ) ಹೆಚ್ಚು ಒಪ್ಪುತ್ತದೆ. "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು; ಧನವನ್ನು ದಾನಮಾಡುವವರಿಗೆ ಪರಾಯಣವು" (ಬೃ. ೩-೯-೨೮) ಎಂದು (ಹೇಳುವ) ಶ್ರುತಿಯೂ ಇದೆ. ಇದೂ ಅಲ್ಲದೆ **ಶಾಲಾವತ್ಯನ** ಪಕ್ಷವು ಅಂತವತ್ತ್ವವೆಂಬ ದೋಷವುಳ್ಳದ್ದೆಂದು ನಿಂದಿಸಿ[1] ಅನಂತವಾದ್ದೊಂದನ್ನು ಹೇಳಬೇಕೆಂಬ ಇಚ್ಛೆಯಿಂದ ಜೈವಲಿಯು ಆಕಾಶವನ್ನು ತೆಗೆದುಕೊಂಡಿರುತ್ತಾನೆ. ಆ ಆಕಾಶವನ್ನು ಉದ್ಗೀಥದಲ್ಲಿ ಸಂಪಾದನೆ ಮಾಡಿ "ಆ ಈ ಉದ್ಗೀಥವು ಪರೋವರೀಯವು, ಆ ಇದು ಅನಂತವು"[2] (ಛಾಂ. ೧-೯-೨) ಎಂದು ಉಪಸಂಹಾರಮಾಡಿರುತ್ತಾನೆ. ಆ ಆನಂತ್ಯವೆಂಬುದೂ ಬ್ರಹ್ಮದ ಲಿಂಗವು.

## ಆಕಾಶಶಬ್ದದ ಮುಖ್ಯಾರ್ಥವನ್ನು ಬಿಡುವದಕ್ಕೆ ಕಾರಣ

(ಭಾಷ್ಯ)

೧೨೦. ಯತ್ ಪುನರುಕ್ತಂ ಭೂತಾಕಾಶಂ ಪ್ರಸಿದ್ಧಿಬಲೇನ ಪ್ರಥಮತರಂ ಪ್ರತೀಯತೇ ಇತಿ । ಅತ್ರ ಬ್ರೂಮಃ । ಪ್ರಥಮತರಂ ಪ್ರತೀತಮಪಿ ಸತ್ ವಾಕ್ಯ

1. ವಾಕ್ಯವು ಬಂದಿರುವ ಸಂದರ್ಭವು ಹೀಗಿದೆ: ಶಿಲಕಶಾಲಾವತ್ಯ, ಚೈಕಿತಾಯನ ದಾಲ್ಭ್ಯ, ಪ್ರವಾಹಣಜೈವಲಿ_ಎಂಬ ಮೂವರು ಉದ್ಗೀಥವಿದ್ಯಾನಿಪುಣರು ಉದ್ಗೀಥವಿಷಯದಲ್ಲಿ ಚರ್ಚೆಮಾಡುವದಕ್ಕೆ ಪ್ರಾರಂಭಿಸಿದರು. ಬ್ರಾಹ್ಮಣರಾದ ಮೊದಲನೆಯ ಇಬ್ಬರೂ ಮೊದಲು ವಾದಮಾಡಿದರು. ಶಾಲಾವತ್ಯನು ಸಾಮಕ್ಕೆ ಯಾವದು ಗತಿ ?_ಎಂದು ಮೊದಲು ಪ್ರಶ್ನೆಯನ್ನು ಮಾಡಿದನು. ದಾಲ್ಭ್ಯನು ಸ್ವರವು ಗತಿ, ಅದಕ್ಕೆ ಪ್ರಾಣ, ಪ್ರಾಣಕ್ಕೆ ಅನ್ನ, ಅನ್ನಕ್ಕೆ ಅಪ್ಪು. ಅಪ್ಪಿಗೆ ಸ್ವರ್ಗಲೋಕವು ಗತಿ_ಎಂದು ತನ್ನ ಮತವನ್ನು ಕೊನೆಮುಟ್ಟಿಸಿದನು. ಶಿಲಕಶಾಲಾವತ್ಯನು ಸ್ವರ್ಗಕ್ಕೆ ಈ ಲೋಕವು ಗತಿ ಎಂದು ತನ್ನ ಕಡೆಯ ತೀರ್ಪನ್ನು ಹೇಳಿದನು. ಆಗ ಕ್ಷತ್ರಿಯನಾದ ಜೈವಲಿಯು "ಶಾಲಾವತ್ಯನೆ, ನಿನ್ನ ಸಾಮವು ಅಂತವುಳ್ಳದ್ದು; ಯಾವನಾದರೂ ಸಾಮಜ್ಞನಾದವನು ನಿನ್ನ ತಲೆ ಬೀಳಲಿ ಎಂದು ಶಪಿಸಿದರೆ ನಿನ್ನ ತಲೆ ಬೀಳಬೇಕಾಗುವದು" ಎಂದು ಅವನ ಪಕ್ಷವನ್ನು ನಿಂದಿಸಿ ತನ್ನ ಮತವನ್ನು ಹೇಳುವದಕ್ಕೆ ಪ್ರಾರಂಭಿಸಿ ಪ್ರಕೃತವಾಕ್ಯವನ್ನು ಹೇಳಿದ್ದಾನೆ. (ಛಾಂ. ೧_೮_೯).

2 ಉದ್ಗೀಥವನ್ನು ಆಕಾಶವೆಂಬ ದೃಷ್ಟಿಯಿಂದ ಉಪಾಸನೆಮಾಡಬೇಕು; ಅದು ಎಲ್ಲಕ್ಕೂ ದೊಡ್ಡದು, ಎಲ್ಲಕ್ಕೂ ಶ್ರೇಷ್ಠವು, ಅನಂತವಾದದ್ದು_ಎಂದು ಉಪಾಸನೆಯನ್ನು ವಿಧಿಸಿದೆ. ಆದ್ದರಿಂದಲೂ ಪರಿಚ್ಛಿನ್ನವಾದ ಭೂತಾಕಾಶವನ್ನು ಇಲ್ಲಿ ತೆಗೆದುಕೊಳ್ಳುವದಕ್ಕೆ ಬರುವದಿಲ್ಲ.

ಶೇಷಗತಾನ್ ಬ್ರಹ್ಮಗುಣಾನ್ ದೃಷ್ಟ್ವಾ ನ ಪರಿಗೃಹ್ಯತೇ । ದರ್ಶಿತಶ್ಚ ಬ್ರಹ್ಮಣ್ಯಪಿ ಆಕಾಶಶಬ್ದಃ "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ" ಇತ್ಯಾದೌ। ತಥಾ ಆಕಾಶಪರ್ಯಾಯವಾಚಿನಾಮಪಿ ಬ್ರಹ್ಮಣಿ ಪ್ರಯೋಗೋ ದೃಶ್ಯತೇ "ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ" (ಋ. ೧-೨೨-೧೬೪-೩೯) "ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇವ್ಯೋಮನ್ ಪ್ರತಿಷ್ಠಿತಾ"(ತೈ೩-೬)"ಓಂ ಖಂ ಬ್ರಹ್ಮ ಖಂ ಪುರಾಣಮ್"[1] (ಬೃ. ೫-೧-೧)ಇತಿ ಚೈವಮಾದೌ । ವಾಕ್ಯೋಪಕ್ರಮೇಽಪಿ ವರ್ತಮಾನಸ್ಯ ಆಕಾಶ ಶಬ್ದಸ್ಯ ವಾಕ್ಯಶೇಷವಶಾತ್ ಯುಕ್ತಾ ಬ್ರಹ್ಮವಿಷಯತ್ವಾವಧಾರಣಾ। ಅಗ್ನಿರಧೀತೇಽನುವಾಕಮ್ ಇತಿ ಹಿ ವಾಕ್ಯೋಪಕ್ರಮಗತೋಽಪ್ಯಗ್ನಿಶಬ್ದೋ ಮಾಣವಕವಿಷಯೋ ದೃಶ್ಯತೇ । ತಸ್ಮಾತ್ ಆಕಾಶಶಬ್ದಂ ಬ್ರಹ್ಮ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಆದರೆ ಭೂತಾಕಾಶವು (ಆಕಾಶಶಬ್ದಕ್ಕೆ ವಾಚ್ಯ ಎಂಬ) ಪ್ರಸಿದ್ಧಿಯ ಬಲದಿಂದ (ಬ್ರಹ್ಮಕ್ಕಿಂತಲೂ) ಮೊದಲು ತೋರುತ್ತದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ (ಪರಿಹಾರವನ್ನು) ಹೇಳುತ್ತೇವೆ. (ಭೂತಾಕಾಶವು ಬ್ರಹ್ಮಕ್ಕಿಂತ) ಮೊದಲು ತೋರುವದಾದರೂ ವಾಕ್ಯಶೇಷದಲ್ಲಿರುವ ಬ್ರಹ್ಮಗುಣಗಳನ್ನು ಕಂಡು (ಅದನ್ನು)ತೆಗೆದುಕೊಳ್ಳುವದಾಗುವದಿಲ್ಲ. "ಆಕಾಶವೆಂಬುದೇ ನಾಮರೂಪಗಳನ್ನು ನಿರ್ವಹಿಸುವದು" (ಛಾಂ. ೮-೧೪-೧) ಮುಂತಾದ (ಶ್ರುತಿಯಲ್ಲಿ) ಬ್ರಹ್ಮ (ವಿಷಯ)ದಲ್ಲಿಯೂ ಆಕಾಶಶಬ್ದವನ್ನು (ಪ್ರಯೋಗಿಸಿರುತ್ತದೆ ಎಂದು) ತೋರಿಸಿ ಕೊಟ್ಟಿದ್ದಾಗಿದೆ.[2] ಇದರಂತೆ ಆಕಾಶದ ಪರ್ಯಾಯವಾಚಕಗಳನ್ನು ಕೂಡ "(ಯಾವ) ಅಕ್ಷರವಾದ ಪರಮವ್ಯೋಮದಲ್ಲಿ ಋಕ್ಕುಗಳು (ಪ್ರಮಾಣವಾಗಿರುವವೋ), ಯಾವದರಲ್ಲಿ ಎಲ್ಲಾ ದೇವತೆಗಳೂ ಆಶ್ರಯಿಸಿಕೊಂಡಿರುವವೋ" (ಋ. ೧-೨೨-೧೬೪-೪೯) "ಆ ಈ ಭಾರ್ಗವವಾರುಣವಿದ್ಯೆಯು ಪರಮವ್ಯೋಮದಲ್ಲಿ

---

1 ಇಲ್ಲಿ ಬರೆವವರ ಕೈತಪ್ಪಿನಿಂದಲೋ ಏನೊ, ಛಾಂ. ೪-೧೦-೫ ಮತ್ತು ಬೃ. ೫-೧-೧ ಇವೆರಡನ್ನೂ ಕೂಡಿಸಿದ ಹೊಸವಾಕ್ಯವೊಂದು "ಓಂ ಕಂ ಬ್ರಹ್ಮ ಖಂ ಬ್ರಹ್ಮ ಖಂ ಪುರಾಣಮ್" ಎಂದು ಬಂದಿದೆ. **ಆನಂದಗಿರಿವ್ಯಾಖ್ಯಾನ**ದಲ್ಲಿ ಈ ಪಾಠವನ್ನೇ ಒಪ್ಪಿದೆ; **ರತ್ನಪ್ರಭೆ**ಯಲ್ಲಿ ಇದನ್ನು ಎರಡು ಶ್ರುತಿಯೆಂದು ಹಿಡಿದಿದೆ. ಬೃಹದಾರಣ್ಯಕವಾಕ್ಯವೊಂದನ್ನೇ ಇಲ್ಲಿ ಉದಾಹರಿಸಿದೆ ಎಂದು ನಾವು ಇಟ್ಟುಕೊಂಡಿದ್ದೇವೆ.

2 ಬ್ರಹ್ಮವನ್ನು ಗೌಣವೃತ್ತಿಯಿಂದ ಆಕಾಶವೆಂಬ ಶಬ್ದದಿಂದ ತಿಳಿಸುವ ಪ್ರಯೋಗವು ವೇದದಲ್ಲಿ ಪ್ರಚುರವಾಗಿರುವದರಿಂದ ಅದೂ ಅರ್ಥವಿಸಬಹುದೆಂದು ತೋರುತ್ತದೆ. ಬ್ರಹ್ಮದ ಗುಣಗಳಿರುವದರಿಂದ ಬ್ರಹ್ಮವೇ ಅರ್ಥವೆಂದು ನಿಶ್ಚಯವಾಗುತ್ತದೆ.

ನೆಲೆನಿಂತಿರುತ್ತದೆ "[1] (ತೈ. ೩-೬) ಓಂ (ಎಂಬುದು) ಖಂ ಬ್ರಹ್ಮವು, ಪುರಾಣವಾದ ಖವು[2] (ಬೃ. ೫-೧-೧) ಮುಂತಾದ (ಶ್ರುತಿ)ಯಲ್ಲಿ ಬ್ರಹ್ಮ (ವೆಂಬರ್ಥ)ದಲ್ಲಿ ಪ್ರಯೋಗಿಸಿರುವದು ಕಂಡುಬರುತ್ತದೆ. ವಾಕ್ಯದ ಉಪಕ್ರಮದಲ್ಲಿರುವ ಆಕಾಶಶಬ ವನ್ನುಕೂಡ ವಾಕ್ಯಶೇಷದ ವಶದಿಂದ ಬ್ರಹ್ಮವಿಷಯಕವೆಂದು ನಿಶ್ಚಯಿಸುವದು ಯುಕ್ತವಾಗಿದೆ.[3] ಏಕೆಂದರೆ "ಅಗ್ನಿರಧೀತೇಽನುವಾಕಮ್'' ಅಗ್ನಿಯು ಅನುವಾಕ ವನ್ನು ಅಧ್ಯಾಯಮಾಡುತ್ತಿದಾನೆ ಎಂಬಲ್ಲಿ ವಾಕ್ಯದ ಉಪಕ್ರಮದಲ್ಲಿದ್ದರೂ ಅಗ್ನಿ ಶಬ್ದವು ಬ್ರಹ್ಮಚಾರಿಯ ವಿಷಯ(ದಲ್ಲಿ ಪ್ರಯುಕ್ತವಾಗಿರುವದು) ಕಂಡುಬರು ತ್ತದೆ.[4] ಆದ್ದರಿಂದ ಆಕಾಶವೆಂಬ ಶಬ್ದಕ್ಕೆ (ವಾಚ್ಯವಾದದ್ದು) ಬ್ರಹ್ಮವೇ ಎಂದು ಸಿದ್ಧವಾಯಿತು.

## ೯. ಪ್ರಾಣಾಧಿಕರಣ

(ಛಾಂದೋಗ್ಯ ೧-೧೦-೯ ರಲ್ಲಿ ಪ್ರಾಣವೆಂದರೆ ಬ್ರಹ್ಮವೇ)

**ಅತ ಏವ ಪ್ರಾಣಃ || ೨೩ ||**

೨೩. ಆದ್ದರಿಂದಲೇ ಪ್ರಾಣವು ಬ್ರಹ್ಮವು.

## ವಿಷಯವೂ ಸಂಶಯವೂ

(ಭಾಷ್ಯ)

೧೨೧. ಉದ್ಗೀಥೇ '' ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ'' (ಛಾಂ. ೧.೧೦-೯) ಇತ್ಯುಪಕ್ರಮ್ಯ ಶ್ರೂಯತೇ '' ಕತಮಾ ಸಾ ದೇವತೇತಿ '' (ಛಾಂ. ೧-೧೧-೪) ''ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ

---

1 ಇಲ್ಲಿ ' ಆನಂದವು ಬ್ರಹ್ಮವೆಂದು ತಿಳಿದನು. ಈ ವಿದ್ಯೆಯು ಹೆಚ್ಚಿನ ವ್ಯೋಮದಲ್ಲಿ ನಿಂತಿರುತ್ತದೆ'—ಎಂಬ ವಾಕ್ಯದಿಂದ ವ್ಯೋಮವೆಂಬ ಆಕಾಶಪರ್ಯಾಯಶಬ್ದವನ್ನು ಬ್ರಹ್ಮದಲ್ಲಿ ಪ್ರಯೋಗಿಸಿದೆ ಎಂದು ಗೊತ್ತಾಗುತ್ತದೆ.

2 ಖಂ ಎಂಬುದು ಆಕಾಶಪರ್ಯಾಯಶಬ್ದವಾದರೂ ಪುರಾಣವಾದ ಖವು ಎಂಬ ವಿಶೇಷಣದಿಂದಲೂ ಬ್ರಹ್ಮಶಬ್ದದ ಸಾಹಚರ್ಯದಿಂದಲೂ ಇಲ್ಲಿ ಬ್ರಹ್ಮವನ್ನೇ ತಿಳಿಸುತ್ತದೆ.

3 ಸಾಮಾನ್ಯವಾಗಿ ಉಪಕ್ರಮವೇ ವಾಕ್ಯದಲ್ಲಿ ಪ್ರಬಲವಾದರೂ ವಾಕ್ಯಶೇಷದಲ್ಲಿ ಭೂತಾಕಾಶವನ್ನು ತೆಗೆದುಕೊಳ್ಳುವದಕ್ಕೆ ಅಡ್ಡಿಯಾಗಿರುವ ಬ್ರಹ್ಮಲಿಂಗಗಳಿಗೆ ಅನುಗುಣವಾಗು ವಂತೆ ಆಕಾಶವೆಂಬ ಶ್ರುತಿಯನ್ನು ಬಿಟ್ಟು ಬ್ರಹ್ಮವೆಂಬ ಗೌಣಾರ್ಥವನ್ನೇ ತೆಗೆದುಕೊಳ್ಳಬೇಕು.

4 ಇಲ್ಲಿ ಅಗ್ನಿ ಎಂಬ ಮಾತು ಉಪಕ್ರಮದಲ್ಲಿರುತ್ತದೆ; ಬೆಂಕಿ ಎಂಬ ಅರ್ಥವು ಮೊದಲು ತೋರುತ್ತದೆ. ಆದರೂ ಬೆಂಕಿಯು ಅನುವಾಕವನ್ನು ಅಧ್ಯಯನಮಾಡುವದಿಲ್ಲವಾದ್ದ ರಿಂದ ಬೆಂಕಿಯಂತೆ ತೇಜಸ್ವಿಯಾದ ಬ್ರಹ್ಮಚಾರಿ ಎಂಬ ಗೌಣಾರ್ಥವನ್ನೇ ತೆಗೆದುಕೊಳ್ಳಬೇಕಾಗಿದೆ.

ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ '' (ಛಾಂ. ೧-೧೧-೫) ಇತಿ । ತತ್ರ ಸಂಶಯನಿರ್ಣಯೌ ಪೂರ್ವವದೇವ ದ್ರಷ್ಟವ್ಯೌ । " ಪ್ರಾಣಬನ್ಧನಂ ಹಿ ಸೋಮ್ಯ ಮನಃ " (ಛಾಂ. ೬-೮-೨), " ಪ್ರಾಣಸ್ಯ ಪ್ರಾಣಮ್ " (ಬೃ. ೪-೪-೧೮) ಇತಿ ಚೈವಮಾದೌ ಬ್ರಹ್ಮವಿಷಯಃ ಪ್ರಾಣಶಬ್ದೋ ದೃಶ್ಯತೇ। ವಾಯುವಿಕಾರೇ ತು ಪ್ರಸಿದ್ಧತರೋ ಲೋಕವೇದಯೋಃ। ಅತಃ ಇಹ ಪ್ರಾಣಶಬ್ದೇನ ಕತರಸ್ಯ ಉಪಾದಾನಂ ಯುಕ್ತಮ್ ? ಇತಿ ಭವತಿ ಸಂಶಯಃ ॥

(ಭಾಷ್ಯಾರ್ಥ)

ಉದ್ಗೀಥ (ಪ್ರಕರಣದಲ್ಲಿ)[1] " ಎಲೈ ಪ್ರಸ್ತೋತೃವೆ, ಯಾವ ದೇವತೆಯು ಪ್ರಸ್ತಾವವನ್ನು ಅನುಸರಿಸಿಕೊಂಡಿರುವದೋ (ಅದನ್ನು ತಿಳಿಯದೆ ಪ್ರಸ್ತಾವವನ್ನು ಮಾಡಿದರೆ ನಿನ್ನ ತಲೆ ಬಿದ್ದುಹೋಗುವದು) " (ಛಾಂ. ೧-೧೦-೯) ಎಂದು ಉಪಕ್ರಮಿಸಿ " ಆ ದೇವತೆಯು ಯಾವದು ? " (ಛಾಂ. ೧-೧೧-೪) " ಪ್ರಾಣವು ಎಂದು ಆತನು ಹೇಳಿದನು. ಈ ಸರ್ವಭೂತಗಳೂ ಪ್ರಾಣವನ್ನೇ ಬಂದು ಸೇರಿಕೊಳ್ಳುವವು. ಆ ಈ ದೇವತೆಯು ಪ್ರಸ್ತಾವವನ್ನು ಅನುಸರಿಸಿಕೊಂಡಿರುತ್ತದೆ" (ಛಾಂ. ೧–೧೧–೫) ಎಂದು ಶ್ರುತಿಯಲ್ಲಿ ಹೇಳಿದೆ. ಇಲ್ಲಿ ಸಂಶಯನಿರ್ಣಯಗಳನ್ನು ಹಿಂದಿನ (ಅಧಿಕರಣದಂತೆಯೇ)[2] ಕಲ್ಪಿಸಬೇಕು. (ಹೇಗೆಂದರೆ) " ಸೋಮ್ಯನೆ, ಮನಸ್ಸು ಪ್ರಾಣಬಂಧನವಾಗಿರುತ್ತದೆಯಲ್ಲವೆ ? "[3] (ಛಾಂ. ೬-೮-೨) ಮತ್ತು " ಪ್ರಾಣಕ್ಕೂ ಪ್ರಾಣವು "[4] (ಬೃ. ೪-೪ ೧೮) ಎಂಬಿದೇ ಮುಂತಾದ (ಕಡೆಯಲ್ಲಿ) ಪ್ರಾಣಶಬ್ದವು ಬ್ರಹ್ಮವಿಷಯವಾಗಿರುವದು ಕಂಡುಬರುತ್ತದೆ. ವಾಯುವಿನ ವಿಕಾರ (ಎಂಬರ್ಥ)ದಲ್ಲಂತೂ ಲೋಕವೇದಗಳೆರಡರಲ್ಲಿಯೂ ಇನ್ನೂ ಪ್ರಸಿದ್ಧ

1 ಉದ್ಗೀಥವಿಚಾರವೇ ಇವರ ಹಿಂದೆಯೂ ಮುಂದೆಯೂ ಬಂದಿರುವದರಿಂದ ಉದ್ಗೀಥಪ್ರಕರಣದಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾವವಿಷಯಕವಾದ ಈ ಧ್ಯಾನವನ್ನು ವಿಧಿಸಿದೆ ಎಂಬುದನ್ನು ತಿಳಿಸುವದಕ್ಕಾಗಿ ' ಉದ್ಗೀಥವಲ್ಲಿ ' ಎಂಬ ಮಾತನ್ನು ಭಾಷ್ಯಕಾರರು ಉಪಯೋಗಿಸಿರುತ್ತಾರೆ.

2 ಅವನ್ನೇ ಇಲ್ಲಿ ಅತಿದೇಶಮಾಡಿರುತ್ತದೆ. ಇಲ್ಲಿರುವ ಹೆಚ್ಚಿನ ಶಂಕೆಗಳನ್ನು ಮುಂದೆ ತಿಳಿಸಲಾಗುವದು.

3 ,, ಮನಃಶಬ್ದವಾಚ್ಯನಾದ ಜೀವನು ಪ್ರಾಣನೆಂಬ ಪರಮೇಶ್ವರನಿಗೆ ಕಟ್ಟುಬಿದ್ದಿದ್ದಾನೆ", ಆದ್ದರಿಂದ ಪ್ರಾಣನನ್ನೇ ಸುಷುಪ್ತಿಯಲ್ಲಿ ಸೇರುತ್ತಾನೆ ಎಂದು ಶ್ರುತಿಯ ಅರ್ಥ.

4 ಪ್ರಾಣಕ್ಕೂ ಅವಭಾಸಕವಾದ ಚೈತನ್ಯವಾಗಿರುವದರಿಂದ ಪ್ರಾಣನಾಗಿರುವದೆಂದು ಯಾರು ಅರಿಯುವರೋ ಅವರು ಬ್ರಹ್ಮಜ್ಞಾನಿಗಳು ಎಂದು ಶ್ರುತಿಯ ಅರ್ಥ.

ವಾಗಿರುತ್ತದೆ. ಆದ್ದರಿಂದ ಇಲ್ಲಿ ಪ್ರಾಣಶಬ್ದದಿಂದ ಯಾವದನ್ನು ತೆಗೆದುಕೊಳ್ಳು ವದು ಯುಕ್ತ ?–ಎಂದು ಸಂಶಯವುಂಟಾಗುತ್ತದೆ[1].

## ಪೂರ್ವಪಕ್ಷ : ಪ್ರಾಣವೆಂದರೆ ವಾಯುವಿಕಾರವು

(ಭಾಷ್ಯ)

೧೨೨. ಕಿಂ ಪುನರತ್ರ ಯುಕ್ತಮ್ ? ವಾಯುವಿಕಾರಸ್ಯ ಪಞ್ಚವೃತ್ತೇಃ ಪ್ರಾಣಸ್ಯ ಉಪಾದಾನಂ ಯುಕ್ತಮ್ । ತತ್ರ ಹಿ ಪ್ರಸಿದ್ಧತರಃ ಪ್ರಾಣಶಬ್ದಃ. ಇತಿ ಅವೋಚಾಮ । ನನು ಪೂರ್ವವತ್ ಇಹಾಪಿ ತಲ್ಲಿಙ್ಗಾತ್ ಬ್ರಹ್ಮಣ ಏವ ಗ್ರಹಣಂ ಯುಕ್ತಮ್ ? ಇಹಾಪಿ ವಾಕ್ಯಶೇಷೇ ಭೂತಾನಾಂ ಸಂವೇಶನೋದ್ಗಮನೇ ಪಾರಮೇಶ್ವರಂ ಕರ್ಮ ಪ್ರತೀಯತೇ । ನ । ಮುಖ್ಯೇಽಪಿ ಪ್ರಾಣೇ ಭೂತಸಂವೇಶನೋದ್ಗಮನಸ್ಯ ದರ್ಶನಾತ್ । ಏವಂ ಹಿ ಆಮ್ನಾಯತೇ-" ಯದಾ ವೈ ಪುರುಷಃ ಸ್ವಪಿತಿ ಪ್ರಾಣಂ ತರ್ಹಿ ವಾಗಪ್ಯೇತಿ ಪ್ರಾಣಂ ಚಕ್ಷುಃ ಪ್ರಾಣಂ ಶ್ರೋತ್ರಂ ಪ್ರಾಣಂ ಮನಃ ಸ ಯದಾ ಪ್ರಬುಧ್ಯತೇ ಪ್ರಾಣಾದೇವಾಧಿ ಪುನರ್ಜಾಯನ್ತೇ " (ಶತ. ಬ್ರಾ. ೧೦-೩-೩-೬) ಇತಿ । ಪ್ರತ್ಯಕ್ಷಂ ಚೈತತ್ ಸ್ವಾಪಕಾಲೇ ಪ್ರಾಣವೃತ್ತೌ ಅಪರಿಲುಪ್ಯಮಾನಾಯಾಮ್ ಇನ್ದ್ರಿಯವೃತ್ತಯಃ ಪರಿಲುಪ್ಯನ್ತೇ ಪ್ರಬೋಧಕಾಲೇ ಚ ಪ್ರಾದುರ್ಭವನ್ತಿ ಇತಿ । ಇನ್ದ್ರಿಯಸಾರತ್ವಾಚ್ಚ ಭೂತಾ-

1 ಉಷಸ್ತಿಚಾಕ್ರಾಯಣನೆಂಬ ಋಷಿಯು ಯಾಚನೆಗಾಗಿ ಹೊರಟು ರಾಜನು ಯಜ್ಞಮಾಡುತ್ತಿದ್ದ ಬಳಿಗೆ ಬಂದನು. ಅಲ್ಲಿ ತನ್ನ ಉಪಾಸನಾಸಿದ್ಧಿಯ ಮಹಿಮೆಯನ್ನು ತಿಳಿಯಪಡಿಸುವವಕ್ಕಾಗಿ ಆತನು ಹೇಳಿದ ವಾಕ್ಯವು " ಪ್ರಸ್ತೋತರ್ಯಾ................" ಎಂಬುದು. ಯಜ್ಞದಲ್ಲಿ ಉದ್ಗಾತೃವಿನ ಸಹಾಯಕ್ಕೆ ಪ್ರಸ್ತೋತೃ ಎಂಬ ಋತ್ವಿಜನು ಇರುತ್ತಾನೆ ; ಅವನು ಹಾಡುವ ಸಾಮಕ್ಕೆ ಪ್ರಸ್ತಾವವೆಂದು ಹೆಸರು. " ಪ್ರಸ್ತಾವದಲ್ಲಿ ಯಾವ ದೇವತೆಯನ್ನು ಹೊಗಳಿದೆಯೋ ಅದು ನಿನಗೆ ಗೊತ್ತೆ ? ಇಲ್ಲದಿದ್ದರೆ, ಅದನ್ನು ಅರಿತಿರುವ ನನ್ನನ್ನು ಲೆಕ್ಕಿಸದೆ ಪ್ರಸ್ತಾವಮಾಡುವೆಯಾದರೆ ನಿನ್ನ ತಲೆ ಸಿಡಿದುಬೀಳಲಿ " ಎಂದು ಚಾಕ್ರಾಯಣನು ಹೇಳಲು ಪ್ರಸ್ತೋತೃ ಹೆದರಿ ಸುಮ್ಮನಾದನು. ಇವರಂತೆ ಉದ್ಗಾತೃಪ್ರತಿಹರ್ತೃಗಳೆಂಬ ಋತ್ವಿಜರೂ ಹೆದರಿ ಸುಮ್ಮನಾದರು. ರಾಜನು " ತಾವೇ ಋತ್ವಿಜರಾಗಿ ಕಾರ್ಯವನ್ನು ನೆರವೇರಿಸಬೇಕು " ಎಂದು ಬೇಡಿಕೊಂಡನು. ಋಷಿಯು " ಈ ಋತ್ವಿಜರೇ ನನ್ನ ಅನುಮತಿಯಿಂದ ಕೆಲಸ ಮಾಡಲಿ, ನನಗೂ ನೀನು ದಕ್ಷಿಣೆಯನ್ನು ಕೊಟ್ಟರಾಯಿತು " ಎಂದನು. ಆಗ ಪ್ರಸ್ತೋತೃವು " ಸ್ವಾಮಿ, ತಾವು ಹೇಳಿದ ದೇವತೆಯಾವದು ? ಎಂದು ಕೇಳಲು ಚಾಕ್ರಾಯಣನು ಕೊಟ್ಟ ಉತ್ತರದ ವಾಕ್ಯವಿದು. ಇಲ್ಲಿ ಪ್ರಾಣವೆಂದರೆ ಯಾವ ತತ್ತ್ವವು ?–ಎಂಬ ಬಗ್ಗೆ ಸಂಶಯವು ಬಂದು ಒದಗಿದೆ.

ನಾಮ್ ಅವಿರುದ್ಧಃ ಮುಖ್ಯೇ ಪ್ರಾಣೇऽಪಿ ಭೂತಸಂವೇಶನೋದ್ಗಮನವಾದೀ ವಾಕ್ಯಶೇಷಃ । ಅಪಿ ಚ ಆದಿತ್ಯಃ, ಅನ್ನಂ ಚ ಉದ್ಗೀಥಪ್ರತಿಹಾರಯೋರ್ದೇವತೇ ಪ್ರಸ್ತಾವದೇವತಾಯಾಃ ಪ್ರಾಣಸ್ಯ ಅನನ್ತರಂ ನಿರ್ದಿಶ್ಯೇತೇ । ನ ಚ ತಯೋ-ರ್ಬ್ರಹ್ಮತ್ವಮಸ್ತಿ । ತತ್ಸಾಮಾನ್ಯಾಚ್ಚ ಪ್ರಾಣಸ್ಯಾಪಿ ನ ಬ್ರಹ್ಮತ್ವಮ್ ಇತಿ ॥

(ಭಾಷ್ಯಾರ್ಥ)

ಹಾಗಾದರೆ ಇಲ್ಲಿ ಯಾವದು ಯುಕ್ತ ? (ಎಂದರೆ) ವಾಯುವಿನ ವಿಕಾರವಾದ ಐದು ವೃತ್ತಿಗಳ ಪ್ರಾಣವನ್ನು ತೆಗೆದುಕೊಳ್ಳುವದು ಯುಕ್ತವು. ಏಕೆಂದರೆ ಅದರಲ್ಲಿಯೇ ಪ್ರಾಣಶಬ್ದವು ಹೆಚ್ಚು ಪ್ರಸಿದ್ಧವಾಗಿರುತ್ತದೆ ಎಂದು (ಮೊದಲೇ) ಹೇಳಿರುತ್ತೇವೆ.

(ಆಕ್ಷೇಪ):—ಹಿಂದಿನ (ಅಧಿಕರಣದಂತೆ) ಇಲ್ಲಿಯೂ ಬ್ರಹ್ಮದ ಲಿಂಗಗಳಿರುವದರಿಂದ ಅದನ್ನೇ ತೆಗೆದುಕೊಳ್ಳುವದು ಯುಕ್ತವಲ್ಲವೆ ? ಇಲ್ಲಿಯೂ ವಾಕ್ಯಶೇಷದಲ್ಲಿ ಭೂತಗಳು ಹೊಕ್ಕು ಹೊರಡುವದು ಎಂಬ ಪರಮೇಶ್ವರನ ಕರ್ಮವು[1] ಕಾಣುತ್ತದೆಯಲ್ಲ![2]

(ಪರಿಹಾರ);—ಹಾಗಲ್ಲ. ಏಕೆಂದರೆ ಮುಖ್ಯಪ್ರಾಣದಲ್ಲಿಯೂ ಭೂತಗಳು ಹೊಕ್ಕು ಹೊರಡುವವೆಂಬುದು (ಶ್ರುತಿಯಲ್ಲಿ) ಕಂಡುಬರುತ್ತದೆ. (ಅದು) ಹೇಗೆಂದರೆ (ಶ್ರುತಿಯಲ್ಲಿ) ಹೀಗೆಂದು ಹೇಳಿದೆ : " ಯಾವಾಗ ಪುರುಷನು ನಿದ್ರಿಸುವನೋ ಆಗ ಪ್ರಾಣದಲ್ಲಿ ವಾಕ್ಕು ಅಡಗುವದು, ಪ್ರಾಣದಲ್ಲಿಯೇ ಚಕ್ಷುಸ್ಸು (ಅಡಗುವದು). ಪ್ರಾಣದಲ್ಲಿಯೇ ಶ್ರೋತ್ರವು (ಅಡಗುವದು), ಪ್ರಾಣದಲ್ಲಿಯೇ ಮನಸ್ಸು (ಅಡಗುವದು). ಅವನು ಯಾವಾಗ ಎಚ್ಚರುವನೋ (ಆಗ) ಪ್ರಾಣದಿಂದಲೇ ಮತ್ತೆ ಹುಟ್ಟುವವು, " (ಶತ. ಬ್ರಾ. ೧೦-೩-೩-೬) ಇದಲ್ಲದೆ ನಿದ್ರೆಯಲ್ಲಿ ಪ್ರಾಣವೃತ್ತಿಯು ಲೋಪವಾಗದೆ ಇರುವಲ್ಲಿ ಇಂದ್ರಿಯವೃತ್ತಿಗಳು ಕಾಣದೆಹೋಗುತ್ತವೆಯೆಂಬುದೂ ಎಚ್ಚರದ ಕಾಲದಲ್ಲಿ ತೋರಿಕೊಳ್ಳುವವೆಂಬುದೂ ಪ್ರತ್ಯಕ್ಷವಾಗಿರುತ್ತದೆ.[3] ಭೂತಗಳಿಗೆ ಇಂದ್ರಿಯಗಳೇ ಸಾರವಾಗಿರುವದರಿಂದ ಮುಖ್ಯಪ್ರಾಣದಲ್ಲಿ ಭೂತಗಳು ಹೊಕ್ಕುಹೊರಡುವವೆಂದು ಹೇಳುವ ವಾಕ್ಯಶೇಷವು

---

1 ಭೂತಗಳ ಸಂವೇಶನ(ಅಡಗುವದು), ಉದ್ಗಮನ(ಹೊರಟುಬರುವದು)-ಇವು ಭೂತಗಳ ಧರ್ಮವಲ್ಲವೆ ? ಎಂದು ಶಂಕಿಸಬಾರದು. ಭೂತಗಳ ಸೃಷ್ಟಿಪ್ರಲಯಗಳನ್ನು ಮಾಡುವದು ಬ್ರಹ್ಮದ ಕೆಲಸವೆಂಬುದೇ ಇಲ್ಲಿ ವಿವಕ್ಷಿತ.

2 ಆದ್ದರಿಂದ ಈ ಅಧಿಕರಣವು ವ್ಯರ್ಥವು ; ಏಕೆಂದರೆ ಈ ನ್ಯಾಯವು ಹಿಂದಿನ ಅಧಿಕರಣದಲ್ಲಿಯೇ ಬಂದಿರುತ್ತದೆ ಎಂದು ಆಕ್ಷೇಪಕನ ಭಾವ.

3 ಇದು ಮತ್ತೊಬ್ಬರ ನಿದ್ರೆಯನ್ನು ತನ್ನ ಎಚ್ಚರದ ದೃಷ್ಟಿಯಿಂದ ನೋಡಿ ಹೇಳಿದ ಮಾತು.

(ಇದಕ್ಕೆ) ವಿರುದ್ಧವಲ್ಲ.[1] ಇದೂ ಅಲ್ಲದೆ ಆದಿತ್ಯ, ಅನ್ನ-ಇವು ಉದ್ಗೀಥಪ್ರತಿಹಾರಗಳಿಗೆ ದೇವತೆಗಳೆಂದು ಪ್ರಸ್ತಾವದೇವತೆಯಾದ ಪ್ರಾಣವನ್ನು ಹೇಳಿದ ಬಳಿಕ ತಿಳಿಸಿರುತ್ತದೆ. ಅವುಗಳೇನೂ ಬ್ರಹ್ಮವಲ್ಲ; ಅವುಗಳಂತೆ (ಇರುವದರಿಂದ) ಪ್ರಾಣವೂ ಬ್ರಹ್ಮವಲ್ಲ [2] (ಎಂಬುದು ಯುಕ್ತವು).

## ಸಿದ್ಧಾಂತ : ಪ್ರಸ್ತಾವದೇವತೆಯು ಬ್ರಹ್ಮವೇ

(ಭಾಷ್ಯ)

೧೨೩. ಏವಂ ಪ್ರಾಪ್ತೇ ಸೂತ್ರಕಾರ ಆಹ- " ಅತ ಏವ ಪ್ರಾಣಃ " ಇತಿ | ' ತಲ್ಲಿಙ್ಗಾತ್ ' ಇತಿ ಪೂರ್ವಸೂತ್ರೇ ನಿರ್ದಿಷ್ಟಮ್ | ಅತ ಏವ ತಲ್ಲಿಙ್ಗಾತ್ ಪ್ರಾಣಶಬ್ದಮಪಿ ಪರಂ ಬ್ರಹ್ಮ ಭವಿತುಮರ್ಹತಿ । ಪ್ರಾಣಸ್ಯಾಪಿ ಹಿ ಬ್ರಹ್ಮಲಿಙ್ಗಸಂಬನ್ಧಃ ಶ್ರೂಯತೇ " ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮಭ್ಯುಜ್ಜಿಹತೇ " (ಛಾಂ. ೧-೧೧-೫) ಇತಿ । ಪ್ರಾಣನಿಮಿತ್ತೌ ಸರ್ವೇಷಾಂ ಭೂತಾನಾಮ್ ಉತ್ಪತ್ತಿಪ್ರಲಯೌ ಉಚ್ಯಮಾನೌ ಪ್ರಾಣಸ್ಯ ಬ್ರಹ್ಮತಾಂ ಗಮಯತಃ । ನನು ಉಕ್ತಂ ಮುಖ್ಯಪ್ರಾಣಪರಿಗ್ರಹೇಽಪಿ ಸಂವೇಶನೋದ್ಗಮನದರ್ಶನಮ್ ಅವಿರುದ್ಧಮ್, ಸ್ವಾಪಪ್ರಬೋಧಯೋರ್ದರ್ಶನಾತ್ ಇತಿ | ಅತ್ರೋಚ್ಯತೇ|ಸ್ವಾಪಪ್ರಬೋಧಯೋರಿನ್ದ್ರಿಯಾಣಾಮೇವ ಕೇವಲಾನಾಂ ಪ್ರಾಣಾಶ್ರಯಂ ಸಂವೇಶನೋದ್ಗಮನಂ ದೃಶ್ಯತೇ ನ ಸರ್ವೇಷಾಂ ಭೂತಾನಾಮ್ । ಇಹ ತು ಸೇನ್ದ್ರಿಯಾಣಾಂ ಸಶರೀರಾಣಾಂ ಚ ಜೀವಾವಿಷ್ಟಾನಾಂ ಭೂತಾನಾಮ್ " ಸರ್ವಾಣಿ ಹ ವಾ ಇಮಾನಿ ಭೂತಾನಿ " ಇತಿ ಶ್ರುತೇಃ | ಯದಾಪಿ ಭೂತಶ್ರುತಿಃ ಮಹಾಭೂತವಿಷಯಾ ಪರಿಗೃಹ್ಯತೇ, ತದಾಪಿ ಬ್ರಹ್ಮಲಿಙ್ಗತ್ವಮ್ ಅವಿರುದ್ಧಮ್ । ನನು ಸಹಾಪಿ ವಿಷಯೈಃ ಇನ್ದ್ರಿಯಾಣಾಂ ಸ್ವಾಪಪ್ರಬೋಧಯೋಃ ಪ್ರಾಣೇ ಅಪ್ಯಯಂ ಪ್ರಾಣಾಚ್ಚ ಪ್ರಭವಂ ಶೃಣುಮಃ " ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ ತದೈನಂ

---

1 ಶ್ರುತಿಯಲ್ಲಿ ಭೂತಗಳು ಅಡಗುವವೆಂದು ಹೇಳಿರುವದು ಅನುಭವದಲ್ಲಿ ಕಾಣುವದಿಲ್ಲವಲ್ಲ!-ಎಂಬ ಶಂಕೆಗೆ ಪರಿಹಾರವಿದು. ಭೂತಗಳ ಸಾರವಾಗಿರುವ ಇಂದ್ರಿಯಗಳು ಲಯವಾಗುವದು ಕಂಡಿದೆಯಾದ್ದರಿಂದ ಭೂತಗಳ ಲಯವನ್ನು ಹೇಳುವ ಶ್ರುತಿಯು ವಿರುದ್ಧವಲ್ಲ.

2 ಉದ್ಗೀಥದ ದೇವತೆ ಯಾವದು ?-ಎಂಬ ಉದ್ಗಾತೃವಿನ ಪ್ರಶ್ನೆಗೆ ಆದಿತ್ಯನೆಂದೂ ಪ್ರತಿಹಾರದ ದೇವತೆ ಯಾವದು ?-ಎಂಬ ಪ್ರತಿಹರ್ತೃವಿನ ಪ್ರಶ್ನೆಗೆ ಅನ್ನವೆಂದೂ ಚಾಕ್ರಾಯಣನು ಉತ್ತರವನ್ನು ಕೊಟ್ಟಿರುತ್ತಾನೆ. ಆ ದೇವತೆಗಳಂತೆಯೇ ಪ್ರಾಣವೂ ಸಾಮದ ದೇವತೆಯಾಗಿದೆ. ಆದ್ದರಿಂದ ಅವುಗಳಂತೆ ಇದೂ ಅಬ್ರಹ್ಮವೆಂಬುದು ಯುಕ್ತವು.

ಪಾಕ್ಸರ್ವೈರ್ನಾಮಭಿಃ ಸಹಾಪ್ಯೇತಿ'' (ಕೌ. ೩-೩) ಇತಿ। ತತ್ರಾಪಿ ತಲ್ಲಿಙ್ಗಾತ್ ಪ್ರಾಣಶಬ್ದಂ ಬ್ರಹ್ಮೈವ। ಯತ್ ಪುನರನ್ನಾದಿತ್ಯಸಂನಿಧಾನಾತ್ ಪ್ರಾಣಸ್ಯ ಅಬ್ರಹ್ಮತ್ವಮ್ ಇತಿ, ತದಯುಕ್ತಮ್। ವಾಕ್ಯಶೇಷಬಲೇನ ಪ್ರಾಣಶಬ್ದಸ್ಯ ಬ್ರಹ್ಮವಿಷಯತಾಯಾಂ ಪ್ರತೀಯಮಾನಾಯಾಂ ಸಂನಿಧಾನಸ್ಯ ಅಕಿಂಚಿತ್ಕರತ್ವಾತ್! ಯತ್ ಪುನಃ ಪ್ರಾಣಶಬ್ದಸ್ಯ ಪಞ್ಚವೃತ್ತೌ ಪ್ರಸಿದ್ಧತರತ್ವಮ್, ತತ್ ಆಕಾಶಶಬ್ದಸ್ಯೇವ ಪ್ರತಿವಿಧೇಯಮ್। ತಸ್ಮಾತ್ ಸಿದ್ಧಂ ಪ್ರಸ್ತಾವದೇವತಾಯಾಃ ಪ್ರಾಣಸ್ಯ ಬ್ರಹ್ಮತ್ವಮ್ ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ ಸೂತ್ರಕಾರರು ಹೇಳುತ್ತಾರೆ : "ಅತ ಏವ ಪ್ರಾಣಃ" (ಆದ್ದರಿಂದಲೇ ಪ್ರಾಣವು ಬ್ರಹ್ಮವು). ಹಿಂದಿನ ಸೂತ್ರದಲ್ಲಿ 'ತಲ್ಲಿಙ್ಗಾತ್' "ಅದರ ಲಿಂಗಗಳಿರುವದರಿಂದ" ಎಂದು ಹೇಳಿರುತ್ತದೆ(ಯಷ್ಟೆ; ಆ ಮಾತನ್ನು ಇಲ್ಲಿಗೂ ಸೇರಿಸಿಕೊಳ್ಳಬೇಕು). ಆದ್ದರಿಂದಲೇ ಆ (ಬ್ರಹ್ಮದ) ಲಿಂಗಗಳಿರುವದರಿಂದ ಪ್ರಾಣಶಬ್ದ(ವಾಚ್ಯ)ವೂ ಪರಬ್ರಹ್ಮವಾಗಿರಬೇಕು. ಏಕೆಂದರೆ ಪ್ರಾಣಕ್ಕೂ ಬ್ರಹ್ಮಲಿಂಗದ ಸಂಬಂಧವು "ಈ ಸರ್ವಭೂತಗಳೂ ಪ್ರಾಣವನ್ನೇ ಬಂದು ಸೇರುತ್ತವೆ, ಪ್ರಾಣವನ್ನೇ ಬಿಟ್ಟು ಹೊರಕ್ಕೆ ಬರುತ್ತವೆ" (ಛಾಂ ೧-೧೧-೫) ಎಂದು ಶ್ರುತಿಯಲ್ಲಿರುತ್ತದೆ. ಸರ್ವಭೂತಗಳಿಗೂ ಪ್ರಾಣನಿಮಿತ್ತವಾಗಿ ಉತ್ಪತ್ತಿಪ್ರಲಯಗಳು (ಆಗುವ)ವೆಂದಿರುವದರಿಂದ (ಇವು) ಪ್ರಾಣವು ಬ್ರಹ್ಮವೆಂಬುದನ್ನು ತಿಳಿಸಿಕೊಡುತ್ತವೆ.

(ಆಕ್ಷೇಪ) :—ಮುಖ್ಯಪ್ರಾಣವನ್ನು ತೆಗೆದುಕೊಂಡರೂ (ಭೂತಗಳು ಪ್ರಾಣವನ್ನು) ಹೊಕ್ಕು ಹೊರಕ್ಕೆ ಬರುವದೆಂಬ ಶ್ರುತಿಯು ವಿರುದ್ಧವಾಗುವದಿಲ್ಲ. ಏಕೆಂದರೆ ನಿದ್ರೆ ಎಚ್ಚರಗಳಲ್ಲಿ (ಹಾಗೆ ಹೊಕ್ಕು ಹೊರಬರುವದು) ಕಂಡಿದೆ ಎಂದು ಹೇಳಿದ್ದೆವಲ್ಲ!

(ಪರಿಹಾರ) :—ಇದಕ್ಕೆ ಹೇಳುತ್ತೇವೆ. ನಿದ್ರೆಎಚ್ಚರಗಳಲ್ಲಿ ಬರಿಯ ಇಂದ್ರಿಯಗಳಿಗೆ ಮಾತ್ರ ಪ್ರಾಣವನ್ನು ಆಶ್ರಯಿಸಿ ಹೊಕ್ಕು ಹೊರಬರುವದೆಂಬುದು ಕಂಡುಬರುತ್ತದೆಯೇ ಹೊರತು ಎಲ್ಲಾ ಭೂತಗಳಿಗೂ (ಹೊಕ್ಕು ಹೊರಬರುವದು ಕಂಡುಬರುವ)ದಿಲ್ಲ. ಆದರೆ ಇಲ್ಲಿ ಇಂದ್ರಿಯಗಳೊಡಗೂಡಿದ ಜೀವರುಗಳಿಂದ ಪ್ರವಿಷ್ಟವಾದ ಭೂತಗಳು (ಹೊಕ್ಕು ಹೊರಬರುವವೆಂದು ಹೇಳಿರುವದು ಕಾಣುತ್ತದೆ). ಏಕೆಂದರೆ "ಈ ಸರ್ವಭೂತಗಳೂ" ಎಂದು ಶ್ರುತಿಯಲ್ಲಿದೆ. ಭೂತ(ಗಳ ವಿಷಯದ ಈ) ಶ್ರುತಿಯು ಮಹಾಭೂತಗಳ ವಿಷಯವೆಂದು

ಯಾವಾಗ ಇಟ್ಟುಕೊಳ್ಳುವೆವೋ[1] ಆಗಲೂ (ಇದು) ಬ್ರಹ್ಮಲಿಂಗವೆಂಬುದು ವಿರುದ್ಧವಾಗುವದಿಲ್ಲ.

(ಆಕ್ಷೇಪ) :—ವಿಷಯಗಳೊಡನೆಯೂ ಇಂದ್ರಿಯಗಳು ಎಚ್ಚರನಿದ್ರೆಗಳಲ್ಲಿ ಪ್ರಾಣದಲ್ಲಿ ಲಯವಾಗುವವೆಂದೂ ಪ್ರಾಣದಿಂದ ಹೊರಟುಬರುವವೆಂದೂ "ಯಾವಾಗ ಸುಪ್ತನಾದವನು ಯಾವ ಸ್ವಪ್ನವನ್ನೂ ಕಾಣದೆ ಇರುವನೋ ಆಗ ಈ ಪ್ರಾಣದಲ್ಲಿಯೇ ಒಂದಾಗುತ್ತಾನೆ, ಆಗ ಇದರಲ್ಲಿ ವಾಕ್ಕು ಸರ್ವನಾಮ ಗಳೊಡನೆ ಲಯವಾಗುತ್ತದೆ" (ಕೌ. ೩-೩) ಎಂದು ಶ್ರುತಿಯಲ್ಲಿದೆಯಲ್ಲ[2] !

(ಪರಿಹಾರ) ;—ಅಲ್ಲಿಯೂ (ಆ ಬ್ರಹ್ಮದ) ಲಿಂಗವಿರುವದರಿಂದ ಪ್ರಾಣಶಬ್ದ ದಿಂದ (ಹೇಳಿರುವದು) ಬ್ರಹ್ಮವೇ.

ಇನ್ನು ಅನ್ನ, ಆದಿತ್ಯ—ಇವುಗಳ ಸನ್ನಿಧಿಯಲ್ಲಿರುವದರಿಂದ ಪ್ರಾಣವೂ ಅಬ್ರಹ್ಮವು ಎಂದು (ಪೂರ್ವಪಕ್ಷಿ ಹೇಳಿದ್ದ)ನಲ್ಲ, ಅದು ಸರಿಯಲ್ಲ. ಏಕೆಂದರೆ ವಾಕ್ಯಶೇಷದ ಬಲದಿಂದ ಪ್ರಾಣಶಬ್ದವು ಬ್ರಹ್ಮವಿಷಯವೆಂದು ಗೊತ್ತಾದ ಬಳಿಕ ಸಂನಿಧಾನವು ಏನೂ ಮಾಡಲಾರದು. ಇನ್ನು ಪ್ರಾಣಶಬ್ದವು ಪಂಚವೃತ್ತಿಯ (ವಾಯುವಿಕಾರದಲ್ಲಿ) ಹೆಚ್ಚು ಪ್ರಸಿದ್ಧವಾಗಿದೆ (ಎಂದಿ)ರಲ್ಲ, ಅದಕ್ಕೆ (ಹಿಂದಿನ ಅಧಿಕರಣದಲ್ಲಿ) ಆಕಾಶಶಬ್ದ(ದ ವಿಷಯಕ್ಕೆ ಹೇಳಿರು)ವಂತೆಯೇ ಪರಿಹಾರವನ್ನು ಮಾಡಿಕೊಳ್ಳಬೇಕು.

ಆದ್ದರಿಂದ ಪ್ರಸ್ತಾವದೇವತೆಯಾದ ಪ್ರಾಣವು ಬ್ರಹ್ಮವೆಂದು ಸಿದ್ಧ ವಾಯಿತು.

## ವೃತ್ತಿಕಾರರ ವಿಷಯವಾಕ್ಯಗಳು ಸರಿಯಲ್ಲ

(ಭಾಷ್ಯ)

೧೨೪. ಅತ್ರ ಕೇಚಿತ್ ಉದಾಹರನ್ತಿ—"ಪ್ರಾಣಸ್ಯ ಪ್ರಾಣಮ್" (ಬೃ. ೪-೪-೧೮), "ಪ್ರಾಣಬನ್ಧನಂ ಹಿ ಸೋಮ್ಯ ಮನಃ (ಛಾಂ. ೬-೮-೨) ಇತಿ ಚ । ತತ್ ಅಯುಕ್ತಮ್ । ಶಬ್ದಭೇದಾತ್ ಪ್ರಕರಣಾಚ್ಚ ಸಂಶಯಾನುಪಪತ್ತೇಃ। ಯಥಾ ಪಿತುಃ ಪಿತೇತಿ ಪ್ರಯೋಗೇ ಅನ್ಯಃ ಪಿತಾ ಷಷ್ಠೀನಿರ್ದಿಷ್ಟಃ, ಅನ್ಯಃ ಪ್ರಥಮಾನಿರ್ದಿಷ್ಟಃ ಪಿತುಃ ಪಿತಾ ಇತಿ ಗಮ್ಯತೇ, ತದ್ವತ್ 'ಪ್ರಾಣಸ್ಯ ಪ್ರಾಣಮ್' ಇತಿ ಶಬ್ದಭೇದಾತ್ ಪ್ರಸಿದ್ಧಾತ್ ಪ್ರಾಣಾತ್ ಅನ್ಯಃ ಪ್ರಾಣಸ್ಯ

---

1 ಭೂತಗಳು ಎಂದರೆ ಪ್ರಾಣಿಗಳು ಎಂಬರ್ಥವನ್ನು ಬಿಟ್ಟು ಮಹಾಭೂತಗಳು ಎಂದಿಷ್ಟುಮಾತ್ರ ಇಟ್ಟುಕೊಂಡರೆ ಎಂದರ್ಥ.

2 ಇದು ನಿದ್ರೆಮಾಡುವವನ ದೃಷ್ಟಿಯಿಂದ ಹೇಳಿದ್ದು ; ಇದೇ ಸರಿಯಾದ ದೃಷ್ಟಿ.

ಪ್ರಾಣಃ ಇತಿ ನಿಶ್ಚೀಯತೇ । ನ ಹಿ ಸ ಏವ ತಸ್ಯ ಇತಿ ಭೇದನಿರ್ದೇಶಾರ್ಹೋ ಭವತಿ । ಯಸ್ಯ ಚ ಪ್ರಕರಣೇ ಯೋ ನಿರ್ದಿಶ್ಯತೇ ನಾಮಾನ್ತರೇಣಾಪಿ ಸ ಏವ ತತ್ರ ಪ್ರಕರಣೀ ನಿರ್ದಿಷ್ಟಃ ಇತಿ ಗಮ್ಯತೇ । ಯಥಾ ಜ್ಯೋತಿಷ್ಟೋಮಾಧಿಕಾರೇ "ವಸನ್ತೇ ವಸನ್ತೇ ಜ್ಯೋತಿಷಾ ಯಜೇತ" ಇತ್ಯತ್ರ ಜ್ಯೋತಿಃಶಬ್ದೋ ಜ್ಯೋತಿಷ್ಟೋಮವಿಷಯೋ ಭವತಿ । ತಥಾ ಪರಸ್ಯ ಬ್ರಹ್ಮಣಃ ಪ್ರಕರಣೇ "ಪ್ರಾಣಬನ್ಧನಂ ಹಿ ಸೋಮ್ಯ ಮನಃ" ಇತಿ ಶ್ರುತಃ ಪ್ರಾಣಶಬ್ದಃ ವಾಯುವಿಕಾರಮಾತ್ರಂ ಕಥಮ್ ಅವಗಮಯೇತ್? ಅತಃ ಸಂಶಯಾವಿಷಯತ್ವಾತ್ ನೈತತ್ ಉದಾಹರಣಂ ಯುಕ್ತಮ್ । ಪ್ರಸ್ತಾವದೇವತಾಯಾಂ ತು ಪ್ರಾಣೇ ಸಂಶಯಪೂರ್ವಪಕ್ಷನಿರ್ಣಯಾ ಉಪಪಾದಿತಾಃ ॥

(ಭಾಷ್ಯಾರ್ಥ)

ಇಲ್ಲಿ ಕೆಲವರು (ವೃತ್ತಿಕಾರರು)[1] "ಪ್ರಾಣಸ್ಯ ಪ್ರಾಣಮ್" (ಪ್ರಾಣನ ಪ್ರಾಣವು" (ಬೃ. ೪-೪-೧೮) ಮತ್ತು "ಸೋಮ್ಯನೆ, ಮನಸ್ಸು ಪ್ರಾಣಬಂಧನವಾಗಿರುತ್ತದೆಯಲ್ಲವೆ ?" (ಛಾಂ, ೬-೮-೨) ಎಂಬ (ವಾಕ್ಯಗಳನ್ನು ಈ ಅಧಿಕರಣಕ್ಕೆ ವಿಷಯವಾಗಿ) ಉದಾಹರಿಸಿರುತ್ತಾರೆ. (ಆದರೆ) ಅದು ಸರಿಯಲ್ಲ. ಏಕೆಂದರೆ ಶಬ್ದವು ಬೇರೆಯಾಗಿರುವದರಿಂದಲೂ ಪ್ರಕರಣದಿಂದಲೂ (ಈ ವಾಕ್ಯಗಳಲ್ಲಿ) ಯಾವ ಸಂಶಯವೂ ಆಗುವಹಾಗಿಲ್ಲ. (ಹೇಗೆಂದರೆ), 'ತಂದೆಯ ತಂದೆ' ಎಂಬ ಪ್ರಯೋಗದಲ್ಲಿ ಹೇಗೆ ಷಷ್ಠೀವಿಭಕ್ತಿಯಿಂದ ತಿಳಿಸಿರುವ ತಂದೆಯು ಬೇರೆ, ಪ್ರಥಮಾವಿಭಕ್ತಿಯಿಂದ ತಿಳಿಸಿರುವ ತಂದೆಯ ತಂದೆಯು ಬೇರೆ–ಎಂದು (ಸ್ಪಷ್ಟವಾಗಿ) ಗೊತ್ತಾಗುವದೋ ಅದರಂತೆ "ಪ್ರಾಣನ ಪ್ರಾಣವು" ಎಂದು ಶಬ್ದವು ಬೇರೆಯಾಗಿರುವದರಿಂದ ಪ್ರಸಿದ್ಧವಾಗಿರುವ ಪ್ರಾಣಕ್ಕಿಂತ ಪ್ರಾಣದ ಪ್ರಾಣನು ಬೇರೆ ಎಂದು ನಿಶ್ಚಯವಾಗುತ್ತದೆ. ಏಕೆಂದರೆ ಅದೇ (ವಸ್ತುವನ್ನೇ) 'ತನ್ನ' (ಎಂದು ತನ್ನಿಂದಲೇ) ಬೇರ್ಪಡಿಸಿ ಹೇಳುವದಕ್ಕೆ ಬರುವದಿಲ್ಲ.[2] ಯಾವದರ ಪ್ರಕರಣದಲ್ಲಿ ಯಾವದನ್ನು ತಿಳಿಸಿದೆಯೋ (ಅದನ್ನು) ಬೇರೊಂದು) ಹೆಸರಿನಿಂದ (ತಿಳಿಸಿದ್ದರೂ) ಅಲ್ಲಿ ಅದೇ ಪ್ರಕರಣಿಯನ್ನೇ ತಿಳಿಸಿದೆ ಎಂದು ಗೊತ್ತು ಮಾಡಬೇಕಾಗುತ್ತದೆ. ಹೇಗೆಂದರೆ ಜ್ಯೋತಿಷ್ಟೋಮದ ಪ್ರಕರಣದಲ್ಲಿ "ವಸನ್ತೇ ವಸನ್ತೇ ಜ್ಯೋತಿಷಾ ಯಜೇತ" (?) ವಸಂತವಸಂತದಲ್ಲಿಯೂ ಜ್ಯೋತಿಯಿಂದ

---

1 ಈ ವೃತ್ತಿಕಾರರು ಯಾರು ? ಈ ಎರಡು ವಾಕ್ಯಗಳನ್ನೂ ಒಬ್ಬರೇ ಉದಾಹರಿಸಿದ್ದರೆ ?–ಎಂಬುದು ತಿಳಿಯಲಿಲ್ಲ. ಪೀಠಿಕೆಯನ್ನು ನೋಡಿ.

2 'ತನ್ನ ಮನೆ' ಎಂಬಂತೆ 'ತನ್ನ ತಾನು' ಎಂದು ಯಾರೂ ಪ್ರಯೋಗಿಸುವದಿಲ್ಲ, ಆದ್ದರಿಂದ ಮೊದಲನೆಯ ವಾಕ್ಯದಲ್ಲಿ ಸಂಶಯವಿಲ್ಲ. ಪ್ರಾಣದ ಪ್ರಾಣ–ಎಂಬಲ್ಲಿ ಎರಡು ಬೇರೆಬೇರೆಯ ಪ್ರಾಣಗಳೆಂದು ಸ್ಪಷ್ಟವಾಗಿದೆ.

ಯಾಗಮಾಡಬೇಕು ಎಂಬಲ್ಲಿ ಜ್ಯೋತಿ ಎಂಬ ಶಬ್ದವು ಜ್ಯೋತಿಷ್ಟೋಮದ ವಿಷಯವೇ ಆಗಿರುತ್ತದೆ. ಹಾಗೆಯೇ ಪರಬ್ರಹ್ಮದ ಪ್ರಕರಣದಲ್ಲಿ "ಪ್ರಾಣ ಬನ್ಧನಂ ಹಿ ಸೋಮ್ಯ ಮನಃ" ಎಂಬ ಶ್ರುತಿಯಲ್ಲಿರುವ ಪ್ರಾಣಶಬ್ದವು ಬರಿಯ ವಾಯುವಿಕಾರವನ್ನೇ ಹೇಗೆ ಹೇಳೀತು?[1] ಆದ್ದರಿಂದ ಸಂಶಯಕ್ಕೆ ವಿಷಯವಲ್ಲ ವಾದ್ದರಿಂದ ಈ ಉದಾಹರಣೆಯು ಸರಿಯಲ್ಲ. ಪ್ರಸ್ತಾವದೇವತೆಯಾದ ಪ್ರಾಣದ ವಿಷಯದಲ್ಲಾದರೆ ಸಂಶಯ ಪೂರ್ವಪಕ್ಷ, ನಿರ್ಣಯ–(ಇವೆಲ್ಲ)ವನ್ನೂ (ಮೇಲೆ ತೋರಿಸಿಕೊಟ್ಟಿದ್ದಾಗಿದೆ.

## ೧೦. ಜ್ಯೋತಿಶ್ಚರಣಾಧಿಕರಣ (೨೪-೨೭)

(ಛಾಂದೋಗ್ಯ ೩-೧೩ ರಲ್ಲಿರುವ ಜ್ಯೋತಿಯು ಬ್ರಹ್ಮವು)

**ಜ್ಯೋತಿಶ್ಚರಣಾಭಿಧಾನಾತ್ ॥ ೨೪ ॥**

೨೪. ಜ್ಯೋತಿಯು (ಬ್ರಹ್ಮವು); ಏಕೆಂದರೆ (ಇಲ್ಲಿ ಬ್ರಹ್ಮದ) ಚರಣ ವನ್ನು ಹೇಳಿರುತ್ತದೆ.

## ವಿಷಯವೂ ಸಂಶಯವೂ

(ಭಾಷ್ಯ)

೧೨೫. ಇದಮ್ ಆಮನನ್ತಿ "ಅಥ ಯದತಃ ಪರೋ ದಿವೋ ಜ್ಯೋತಿ. ರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ ಯದಿದಮಸ್ಮಿನ್ನನ್ತಃ ಪುರುಷೇ ಜ್ಯೋತಿಃ" (ಛಾಂ. ೩-೧೩-೭) ಇತಿ । ತತ್ರ ಸಂಶಯಃ । ಕಿಮ್ ಇಹ ಜ್ಯೋತಿಃಶಬ್ದೇನ ಆದಿತ್ಯಾದಿ ಜ್ಯೋತಿಃ ಅಭಿಧೀಯತೇ ಕಿಂ ವಾ ಪರಮಾತ್ಮಾ ಇತಿ । ಅರ್ಥಾನ್ತರವಿಷಯಸ್ಯಾಪಿ ಶಬ್ದಸ್ಯ ತಲ್ಲಿಙ್ಗಾತ್ ಬ್ರಹ್ಮವಿಷಯತ್ವಮ್ ಉಕ್ತಮ್ । ಇಹ ತು ತಲ್ಲಿಙ್ಗಮೇವ ಅಸ್ತಿ ನಾಸ್ತಿ ಇತಿ ವಿಚಾರ್ಯತೇ ॥

(ಭಾಷ್ಯಾರ್ಥ)

(ಛಾಂದೋಗ್ಯದಲ್ಲಿ) ಈ (ವಾಕ್ಯವನ್ನು ಅಧ್ಯಯನಮಾಡುತ್ತಾರೆ: ಈ ದ್ಯು (ಲೋಕ)ದ ಆಚೆಗೆ ವಿಶ್ವಕ್ಕೆಲ್ಲ ಮೇಲಿನ, ಎಲ್ಲಕ್ಕೂ ಮೇಲಿನ, ಅನುತ್ತಮವಾದ ಉತ್ತಮಲೋಕಗಳಲ್ಲಿ ಯಾವ ಜ್ಯೋತಿಯು ಬೆಳಗುತ್ತಿರುವದೋ ಅದು ಈ

---

1 ಪ್ರಕರಣದಿಂದ ಪ್ರಾಣವೆಂದರೆ ಬ್ರಹ್ಮವೇ ಎಂದು ನಿಶ್ಚಯವಾಗುತ್ತಿರುವದರಿಂದ ಎರಡನೆಯ ವಾಕ್ಯದಲ್ಲಿಯೂ ಸಂಶಯವುಂಟಾಗುವ ಹಾಗಿಲ್ಲ.

ಪುರುಷನೊಳಗೆ ಬೆಳಕಿದೆಯಲ್ಲ, ಇದೇ" (ಛಾಂ. ೩-೧೩-೭). ಇಲ್ಲಿ ಸಂಶಯವೇನೆಂದರೆ, ಇಲ್ಲಿ ಜ್ಯೋತಿ ಎಂಬ ಶಬ್ದವು ಸೂರ್ಯನೇ ಮುಂತಾದ ಬೆಳಕನ್ನು ಹೇಳುತ್ತದೆಯೆ, ಅಥವಾ ಪರಮಾತ್ಮನನ್ನು ಹೇಳುತ್ತದೆಯೆ? (ಹಿಂದಿನ ಅಧಿಕರಣಗಳಲ್ಲಿ) ಬೇರೊಂದು ವಸ್ತುವನ್ನು ಹೇಳುವ ಶಬ್ದವುಕೂಡ, ಬ್ರಹ್ಮದ ಲಿಂಗವಿರುವದರಿಂದ ಬ್ರಹ್ಮವಿಷಯ ಎಂದು (ನಿಶ್ಚಯಿಸಿ) ಹೇಳಿದ್ದಾಯಿತು. ಆದರೆ ಇಲ್ಲಿ ಆ (ಬ್ರಹ್ಮದ) ಲಿಂಗವೇ ಇದೆಯೊ, ಇಲ್ಲವೊ?-ಎಂಬುದನ್ನು ವಿಚಾರಮಾಡಲಾಗುತ್ತದೆ.

## ಪೂರ್ವಪಕ್ಷ: ಜ್ಯೋತಿಯೆಂದರೆ ಬೆಳಕು

(ಭಾಷ್ಯ)

೧೨೬. ಕಿಂ ತಾವತ್ ಪ್ರಾಪ್ತಮ್? ಆದಿತ್ಯಾದಿಕಮೇವ ಜ್ಯೋತಿಃ-ಶಬ್ದೇನ ಪರಿಗೃಹ್ಯತೇ ಇತಿ। ಕುತಃ? ಪ್ರಸಿದ್ಧೇಃ। ತಮಃ, ಜ್ಯೋತಿಃ ಇತಿ ಹಿ ಇಮೌ ಶಬ್ದೌ ಪರಸ್ಪರಪ್ರತಿದ್ವನ್ದ್ವಿವಿಷಯೌ ಪ್ರಸಿದ್ಧೌ। ಚಕ್ಷುರ್ವೃತ್ತೇರ್ನಿ-ರೋಧಕಂ ಶಾರ್ವರಾದಿಕಂ 'ತಮಃ' ಉಚ್ಯತೇ। ತಸ್ಯಾ ಏವ ಅನುಗ್ರಾಹಕಮ್ ಆದಿತ್ಯಾದಿಕಂ ಜ್ಯೋತಿಃ। ತಥಾ 'ದೀಪ್ಯತೇ' ಇತಿ ಇಯಮಪಿ ಶ್ರುತಿಃ ಆದಿತ್ಯಾದಿವಿಷಯಾ ಪ್ರಸಿದ್ಧಾ। ನ ಹಿ ರೂಪಾದಿಹೀನಂ ಬ್ರಹ್ಮ 'ದೀಪ್ಯತೇ' ಇತಿ ಮುಖ್ಯಾಂ ಶ್ರುತಿಮ್ ಅರ್ಹತಿ। ದ್ಯುಮರ್ಯಾದತ್ವಶ್ರುತೇಶ್ಚ। ನ ಹಿ ಚರಾಚರಬೀಜಸ್ಯ ಬ್ರಹ್ಮಣಃ ಸರ್ವಾತ್ಮಕಸ್ಯ ದ್ಯೌಃ ಮರ್ಯಾದಾ ಯುಕ್ತಾ। ಕಾರ್ಯಸ್ಯ ತು ಜ್ಯೋತಿಷಃ ಪರಿಚ್ಛಿನ್ನಸ್ಯ ದ್ಯೌಃ ಮರ್ಯಾದಾ ಸ್ಯಾತ್। "ಪರೋ ದಿವೋ ಜ್ಯೋತಿಃ" ಇತಿ ಚ ಬ್ರಾಹ್ಮಣಮ್। ನನು ಕಾರ್ಯಸ್ಯಾಪಿ ಜ್ಯೋತಿಷಃ ಸರ್ವತ್ರಗಮ್ಯಮಾನತ್ವಾತ್ ದ್ಯುಮರ್ಯಾದಾವತ್ತ್ವಮ್ ಅಸಮಞ್ಜಸಮ್। ಅಸ್ತು ತರ್ಹಿ ಅತ್ರಿವೃತ್ಕೃತಂ ತೇಜಃ ಪ್ರಥಮಜಮ್। ನ ಅತ್ರಿವೃತ್ಕೃತಸ್ಯ ತೇಜಸಃ ಪ್ರಯೋಜನಾಭಾವಾತ್ ಇತಿ। ಇದಮೇವ ಪ್ರಯೋಜನಂ ಯತ್ ಉಪಾಸ್ಯತ್ವಮ್ ಇತಿ ಚೇತ್। ನ। ಪ್ರಯೋಜನಾನ್ತರಪ್ರಯುಕ್ತಸ್ಯೈವ ಆದಿತ್ಯಾದೇರುಪಾಸ್ಯತ್ವದರ್ಶನಾತ್। "ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣಿ" (ಛಾಂ.೬-೩-೩) ಇತಿ ಚ ಅವಿಶೇಷಶ್ರುತೇಃ। ನಚ ಅತ್ರಿವೃತ್ಕೃತಸ್ಯಾಪಿ ತೇಜಸೋದ್ಯುಮರ್ಯಾದತ್ವಂ ಪ್ರಸಿದ್ಧಮ್। ಅಸ್ತು ತರ್ಹಿ ತ್ರಿವೃತ್ಕೃತಮೇವ ತತ್ತೇಜೋ ಜ್ಯೋತಿಃಶಬ್ದಮ್। ನನು ಉಕ್ತಮ್ ಅರ್ವಾಗಪಿ ದಿವಃ, ಅವಗಮ್ಯತೇ ಅಗ್ನ್ಯಾದಿಕಂ ಜ್ಯೋತಿರಿತಿ। ನೈಷ ದೋಷಃ। ಸರ್ವತ್ರಾಪಿ ಗಮ್ಯಮಾನಸ್ಯ ಜ್ಯೋತಿಷಃ 'ಪರೋ ದಿವಃ' ಇತಿ ಉಪಾಸನಾರ್ಥಃ ಪ್ರದೇಶವಿಶೇಷಪರಿಗ್ರಹೋ ನ ವಿರುಧ್ಯತೇ। ನ ತು ನಿಷ್ಪ್ರದೇಶಸ್ಯಾಪಿ ಬ್ರಹ್ಮಣಃ ಪ್ರದೇಶವಿಶೇಷಕಲ್ಪನಾ ಭಾಗಿನೀ। "ಸರ್ವತಃ ಪೃಷ್ಠೇಷ್ವ-

ನುತ್ತಮೇಷೂತ್ತಮೇಷು ಲೋಕೇಷು” ಇತಿ ಚ ಆಧಾರಬಹುತ್ವಶ್ರುತಿಃ ಕಾರ್ಯೇ ಜ್ಯೋತಿಷಿ ಉಪಪದ್ಯತೇತರಾಮ್ । “ಇದಂ ವಾವ ತದ್ಯದಿದಮಸ್ಮಿನ್ನನ್ತಃ ಪುರುಷೇ ಜ್ಯೋತಿಃ” (ಛಾಂ. ೩-೧೩-೭) ಇತಿ ಚ ಕೌಕ್ಷೇಯೇ ಜ್ಯೋತಿಷಿ ಪರಂ ಜ್ಯೋತಿರಧ್ಯಸ್ಯಮಾನಂ ದೃಶ್ಯತೇ । ಸಾರೂಪ್ಯನಿಮಿತ್ತಾಶ್ಚ ಅಧ್ಯಾಸಾ ಭವನ್ತಿ । ಯಥಾ “ತಸ್ಯ ಭೂರಿತಿ ಶಿರ ಏಕಂ ಶಿರ ಏಕಮೇತದಕ್ಷರಮ್” (ಬೃ. ೫-೫-೩) ಇತಿ । ಕೌಕ್ಷೇಯಸ್ಯ ತು ಜ್ಯೋತಿಷಃ ಪ್ರಸಿದ್ಧಮ್ ಅಬ್ರಹ್ಮತ್ವಮ್ । “ತಸ್ಯೈಷಾ ದೃಷ್ಟಿಃ” (ಛಾಂ. ೩-೧೩-೭), “ತಸ್ಯೈಷಾ ಶ್ರುತಿಃ” (ಛಾಂ. ೩-೧೩-೭) ಇತಿ ಚ ಔಷ್ಣ್ಯಘೋಷವಿಶಿಷ್ಟತ್ವಸ್ಯ ಶ್ರವಣಾತ್ । “ತದೇತದ್ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ” (ಛಾಂ. ೩-೧೩-೭) ಇತಿ ಚ ಶ್ರುತೇಃ । “ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ” (ಛಾಂ. ೩-೧೩-೮) ಇತಿ ಚ ಅಲ್ಪಫಲಶ್ರವಣಾತ್ ಅಬ್ರಹ್ಮತ್ವಮ್ । ಮಹತೇ ಹಿ ಫಲಾಯ ಬ್ರಹ್ಮೋಪಾಸನಮ್ ಇಷ್ಯತೇ । ನ ಚ ಅನ್ಯದಪಿ ಕಿಂಚಿತ್ ಸ್ವವಾಕ್ಯೇ ಪ್ರಾಣಾಕಾಶವತ್ ಜ್ಯೋತಿಷೋಽಸ್ತಿ ಬ್ರಹ್ಮಲಿಙ್ಗಮ್ । ನ ಚ ಪೂರ್ವಸ್ಮಿನ್ನಪಿ ವಾಕ್ಯೇ ಬ್ರಹ್ಮ ನಿರ್ದಿಷ್ಟಮಸ್ತಿ । “ಗಾಯತ್ರೀ ವಾ ಇದಗ್ಂ ಸರ್ವಂ ಭೂತಮ್” (ಛಾಂ. ೩-೧೨-೧) ಇತಿ ಛನ್ದೋನಿರ್ದೇಶಾತ್ । ಅಥಾಪಿ ಕಥಂಚಿತ್ ಪೂರ್ವಸ್ಮಿನ್ ವಾಕ್ಯೇ ಬ್ರಹ್ಮ ನಿರ್ದಿಷ್ಟಂ ಸ್ಯಾತ್, ಏವಮಪಿ ನ ತಸ್ಯ ಇಹ ಪ್ರತ್ಯಭಿಜ್ಞಾನಮಸ್ತಿ । ತತ್ರ ಹಿ “ತ್ರಿಪಾದಸ್ಯಾಮೃತಂ ದಿವಿ” (ಛಾಂ. ೩-೧೨-೬) ಇತಿ ದ್ಯೌಃ ಅಧಿಕರಣತ್ವೇನ ಶ್ರೂಯತೇ । ಅತ್ರ ಪುನಃ “ಪರೋ ದಿವೋ ಜ್ಯೋತಿಃ” ಇತಿ ದ್ಯೌಃ ಮರ್ಯಾದಾತ್ವೇನ । ತಸ್ಮಾತ್ ಪ್ರಾಕೃತಂ ಜ್ಯೋತಿಃ ಇಹ ಗ್ರಾಹ್ಯಮ್ ಇತಿ ॥

(ಭಾಷ್ಯಾರ್ಥ)

ಮೊದಲು ಬಂದೊದಗುವ (ಪಕ್ಷವು) ಯಾವದು ? ಸೂರ್ಯನೇ ಮುಂತಾದ (ಬೆಳಕನ್ನೇ) ಜ್ಯೋತಿ ಎಂಬ ಶಬ್ದದಿಂದ ತೆಗೆದುಕೊಳ್ಳಬೇಕು ಎಂದು (ಕಾಣುತ್ತದೆ). ಏಕೆಂದರೆ, (ಹಾಗೆಂದು) ಪ್ರಸಿದ್ಧವಾಗಿರುತ್ತದೆ. ಹೇಗೆಂದರೆ, ತಮಸ್ಸು, ಜ್ಯೋತಿ–ಎಂಬೀ ಶಬ್ದಗಳು ಒಂದಕ್ಕೊಂದು ಪ್ರತಿದ್ವಂದ್ವಿಗಳಾಗಿರುವ (ವಸ್ತುಗಳನ್ನು) ತಿಳಿಸುವವೆಂದು ಪ್ರಸಿದ್ಧವಾಗಿರುತ್ತದೆ, ಚಕ್ಷು(ರಿಂದ್ರಿಯದ) ವೃತ್ತಿಯನ್ನು ತಡೆಗಟ್ಟುವ ರಾತ್ರಿಯ(ಮಬ್ಬು) ಮುಂತಾದದ್ದು ತಮಸ್ಸು ಎನಿಸುತ್ತದೆ; ಅದಕ್ಕೇ ಅನುಕೂಲವಾಗಿರುವ ಸೂರ್ಯನೇ ಮುಂತಾದದ್ದು ಜ್ಯೋತಿ (ಎನಿಸುತ್ತದೆ). ಇದರಂತೆ ‘ಬೆಳಗುತ್ತದೆ’ ಎಂಬ ಮಾತೂ ಸೂರ್ಯನೇ ಮುಂತಾದದ್ದರ ವಿಷಯದಲ್ಲಿಯೇ ಪ್ರಸಿದ್ಧವಾಗಿರುತ್ತದೆ. ರೂಪವೇ ಮುಂತಾದದ್ದು (ಯಾವದೂ) ಇಲ್ಲದ ಬ್ರಹ್ಮವು ‘ಬೆಳಗುತ್ತದೆ’ ಎಂದು ಮುಖ್ಯಾ(ರ್ಥದಲ್ಲಿ)

ಹೇಳುವದಕ್ಕೆ ತಕ್ಕದ್ದಲ್ಲವಷ್ಟೆ. (ಈ ಜ್ಯೋತಿಗೆ) ದ್ಯುಲೋಕವು ಎಲ್ಲೆಕಟ್ಟು ಎಂದು ಹೇಳಿರುವದರಿಂದಲೂ (ಹೀಗೆಂದು ತಿಳಿಯಬೇಕು). ಚರಾಚರ (ವಸ್ತುಗಳಿಗೆಲ್ಲ) ಕಾರಣವಾಗಿರುವ ಬ್ರಹ್ಮವು ಸರ್ವಾತ್ಮಕವಾಗಿರುವದರಿಂದ ದ್ಯುಲೋಕವು ಎಲ್ಲೆಕಟ್ಟು ಎಂಬುದು ಯುಕ್ತವಾಗುವದೇ ಇಲ್ಲ. ಆದರೆ ಕಾರ್ಯವಾಗಿರುವ ಬೆಳಕು ಅಳತೆಯುದಾಗಿರುವದರಿಂದ ದ್ಯುಲೋಕವು (ಅದಕ್ಕೆ) ಎಲ್ಲೆಕಟ್ಟಾಗಬಹುದು. “ದ್ಯುಲೋಕದಿಂದಾಚೆಗೆ ಇರುವ ಬೆಳಕು“ ಎಂದು (ಈ ಛಾಂದೋಗ್ಯ) ಬ್ರಾಹ್ಮಣವು (ಜ್ಯೋತಿಗೆ ಎಲ್ಲೆಕಟ್ಟನ್ನು ಹೇಳುತ್ತದೆ).

(ಆಕ್ಷೇಪ) :—ಕಾರ್ಯವಾದ ಬೆಳಕೂ ಎಲ್ಲೆಲ್ಲಿಯೂ ತೋರಿಬರುತ್ತಿರುವದರಿಂದ (ಅದಕ್ಕೆ) ದ್ಯುಲೋಕವೆಂಬ ಎಲ್ಲೆಕಟ್ಟಿರುವದು ಹೊಂದುಗಡೆಯಾಗುವದಿಲ್ಲವಲ್ಲ!

(ಪರಿಹಾರ) :—ಹಾಗಾದರೆ ತ್ರಿವೃತ್ಕೃತವಾಗದೆ ಇರುವ[1] ಮೊದಲು ಹುಟ್ಟಿದ ತೇಜಸ್ಸು (ಜ್ಯೋತಿ) ಎಂದಾಗಲಿ!

(ಆಕ್ಷೇಪ) :—ಆಗದು. ಏಕೆಂದರೆ ತ್ರಿವೃತ್ಕೃತವಲ್ಲದ ತೇಜಸ್ಸಿನಿಂದ (ಯಾವ) ಪ್ರಯೋಜನವೂ ಇರುವದಿಲ್ಲ.[2]

(ಪರಿಹಾರ) ;—(ಅದು) ಉಪಾಸನೆಮಾಡತಕ್ಕದ್ದೆಂಬುದಿದೆಯಲ್ಲ, ಇದೇ (ಅದರ) ಪ್ರಯೋಜನ(ವಾಗಬಹುದಲ್ಲ)!

(ಆಕ್ಷೇಪ):—ಆಗದು. ಏಕೆಂದರೆ ಮತ್ತೊಂದು ಪ್ರಯೋಜನವುಳ್ಳ ಆದಿತ್ಯಾದಿಗಳನ್ನೇ ಉಪಾಸ್ಯ(ವೆಂದು ಶ್ರುತಿಯಲ್ಲಿ ಹೇಳಿರುವದು) ಕಂಡುಬರುತ್ತದೆ.[3] ಅವುಗಳಲ್ಲಿ ಒಂದೊಂದನ್ನೂ ತ್ರಿವೃತತ್ರಿವೃತವಾಗಿ ಮಾಡುವೆನು'' (ಛಾಂ. ೬-೩-೩) ಎಂದು ಸಾಮಾನ್ಯವಾಗಿ[4] ಶ್ರುತಿಯಲ್ಲಿ ಹೇಳಿರುತ್ತದೆ. ಇದಲ್ಲದೆ ತ್ರಿವೃತ್ಕೃತವಲ್ಲದ ತೇಜಸ್ಸಿಗಾದರೂ ದ್ಯುಲೋಕವು ಎಲ್ಲೆಕಟ್ಟಾಗಿರುವದು ಪ್ರಸಿದ್ಧವಾಗಿರುವದಿಲ್ಲ.

---

1 ಛಾಂ, ೬-೩-೩ರಲ್ಲಿ ಈ ತ್ರಿವೃತ್ಕರಣವನ್ನು ಹೇಳಿದೆ. ತೇಜಸ್ಸು, ಅಪ್ಪು, ಅನ್ನ-ಒಂದೊಂದನ್ನೂ ಮಿಕ್ಕೆರಡರೊಡನೆ ಬೆರೆಯಿಸಿ ಒಂದೊಂದು ಭೂತವು ಮುಖ್ಯವಾಗಿಯೂ ಮಿಕ್ಕೆರಡು ಅಧೀನವಾಗಿಯೂ ಇರುವಂತೆ ಮಾಡುವದು ತ್ರಿವೃತ್ಕರಣವು. ಇದು ಪಂಚೀಕರಣಕ್ಕೆ ಉಪಲಕ್ಷಣವೆಂದು (ಛಾಂ. ೬-೩-೪) ಭಾಷ್ಯದಲ್ಲಿದೆ. ಇಲ್ಲಿ ಅತ್ರಿವೃತ್ಕೃತತೇಜಸ್ಸನ್ನು ಹೇಳಿದೆಯೆಂಬ ಪಕ್ಷವನ್ನು ಯಾರು ಏತಕ್ಕೆ ತೆಗೆದಿದ್ದಾರೋ ತಿಳಿಯದು.

2 ತ್ರಿವೃತ್ಕೃತತೇಜಸ್ಸೇ ವ್ಯವಹಾರದಲ್ಲಿ ಕೆಲಸಕ್ಕೆ ಬರುತ್ತದೆ.

3 ನಿಷ್ಪ್ರಯೋಜನವಾದ ನೋಲದಕೊಂಬು ಮುಂತಾದ್ದನ್ನು ಉಪಾಸ್ಯವೆಂದು ಎಲ್ಲಿಯೂ ಹೇಳಿಲ್ಲ.

4 ಮೂರು ಭೂತಗಳೂ ತ್ರಿವೃತ್ಕೃತವಾಗಿವೆಯೆಂದೇ ಶ್ರುತಿಯಲ್ಲಿ ಹೇಳಿದೆ. ಹೀಗಿರುವಲ್ಲಿ ತ್ರಿವೃತ್ಕೃತವಲ್ಲದ ತೇಜಸ್ಸು ಬೇರೆಯಾಗಿ ಎಲ್ಲಿದೆ? ಎಲ್ಲಿಯೂ ಇಲ್ಲದ್ದನ್ನು ಉಪಾಸನೆ ಮಾಡಬೇಕೆಂದು ಶ್ರುತಿಹೇಳಲಾರದು ಎಂದು ಭಾವ.

(ಪೂರ್ವಪಕ್ಷಿ) :—ಹಾಗಾದರೆ ತ್ರಿವೃತ್ಕೃತವಾಗಿರುವ ತೇಜಸ್ಸೇ ಇಲ್ಲಿ ಜ್ಯೋತಿ ಎಂಬ ಶಬ್ದ(ದಿಂದ ಹೇಳಿರುವದು) ಎಂದಾಗಲಿ ![1]

(ಆಕ್ಷೇಪ):—ಅಗ್ನಿಯೇ ಮುಂತಾದ ಬೆಳಕು ದ್ಯುಲೋಕದ ಈಚೆಗೂ ಕಂಡುಬರುತ್ತದೆ ಎಂದು (ಇದರಲ್ಲಿಯೂ ದೋಷವನ್ನು) ಹೇಳಿತ್ತಲ್ಲ !

(ಪೂರ್ವಪಕ್ಷಿ):—(ಆದರೂ) ಇದು ದೋಷವಲ್ಲ. ಎಲ್ಲೆಲ್ಲಿಯೂ ತೋರುತ್ತಿರುವ ಜ್ಯೋತಿಯನ್ನೇ "ದ್ಯುಲೋಕದಿಂಪಾಚೆಗೆ" ಎಂದು ಉಪಾಸನೆಗಾಗಿ ಒಂದು ಗೊತ್ತಾದ ಪ್ರದೇಶವನ್ನು (ಅದಕ್ಕೆ)ಇಟ್ಟುಕೊಳ್ಳುವದು ವಿರುದ್ಧವಾಗುವದಿಲ್ಲ. ಆದರೆ ಯಾವ ಪ್ರದೇಶವೂ ಇಲ್ಲದ ಬ್ರಹ್ಮಕ್ಕೆ ಒಂದು ಗೊತ್ತಾದ ಪ್ರದೇಶವನ್ನು ಇಟ್ಟುಕೊಳ್ಳುವದು ಯುಕ್ತವಾಗುವದಿಲ್ಲ.

ಇದಲ್ಲದೆ "ಎಲ್ಲಕ್ಕಿಂತಲೂ ಮೇಲಿನ ಅನುತ್ತಮವಾದ ಉತ್ತಮಲೋಕಗಳಲ್ಲಿ" (ಇರುವ ಜ್ಯೋತಿ) ಎಂದು ಅನೇಕ ಆಧಾರಗಳನ್ನು ಶ್ರುತಿಯಲ್ಲಿ ಹೇಳಿರುವದು ಕಾರ್ಯವಾದ ಜ್ಯೋತಿಗೇ ಹೆಚ್ಚಾಗಿ[2] ಒಪ್ಪುತ್ತದೆ. ಮತ್ತು "ಈ ಪುರುಷನೊಳಗೆ ಇರುವ ಜ್ಯೋತಿಯಿರುವದಲ್ಲ, ಇದೇ ಅದು"[3] (ಛಾಂ. ೩-೧೩-೭) ಎಂದು ಹೊಟ್ಟೆಯೊಳಗಿನ ಜ್ಯೋತಿಯಲ್ಲಿ ಆ ಪರಜ್ಯೋತಿಯನ್ನು (ಉಪಾಸನೆಗಾಗಿ) ಅಧ್ಯಾಸಮಾಡಿರುವದು ಕಂಡುಬರುತ್ತದೆ. ಇಂಥ ಅಧ್ಯಾಸಗಳು ಸಾದೃಶ್ಯವೆಂಬ ಕಾರಣದಿಂದ ಆಗಿರುತ್ತವೆ.[4] ಉದಾಹರಣೆಗೆ ಆತನಿಗೆ "ಭೂಃ ಎಂಬುದು ತಲೆಯು. ಏಕೆಂದರೆ ತಲೆಯು ಒಂದು, ಈ ಅಕ್ಷರವೂ ಒಂದು" (ಬೃ.

---

1 ಅತಿವೃತ್ಕೃತತೇಜಸ್ಸೇ ಜ್ಯೋತಿ ಎಂಬ ಪಕ್ಷವನ್ನು ಖಂಡಿಸಿ ಮೂಲಪ್ರತಿಪಕ್ಷಿಯು ಈಗ ಮತ್ತೊಮ್ಮೆ ತನ್ನ ಮತವನ್ನು ಹೇಳಿದ್ದಾನೆ.

2 ಬ್ರಹ್ಮಕ್ಕಾದರೆ ಕಲ್ಪಿತವಾದ ಆಧಾರಗಳನ್ನು ಹೇಳಬೇಕಾಗುವದು ; ಕಾರ್ಯ ಜ್ಯೋತಿಗೆ ಯಾವ ಕಲ್ಪನೆಯ ಆವಶ್ಯಕತೆಯೂ ಇಲ್ಲ. ಅದಕ್ಕೆ ನಿಜವಾದ ಆಧಾರಗಳೇ ಇರಬಹುದು.

3 ಪೂರ ಮಂತ್ರವು ಹೀಗಿದೆ : ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿ- ಮಸ್ಮಿನ್ನಂತಃ ಪುರುಷೇ ಜ್ಯೋತಿಸ್ತಸ್ಯೈಷಾ ದೃಷ್ಟಿರ್ಯತ್ರೈತದಸ್ಮಿಞ್ಛರೀರೇ ಸಂಸ್ಪರ್ಶೇ- ನೋಷ್ಣಿಮಾನಂ ವಿಜಾನಾತಿ ತಸ್ಯೈಷಾ ಶ್ರುತಿರ್ಯತ್ರೈತತ್ಕರ್ಣಾವಪಿಗೃಹ್ಯ ನಿನದಮಿವ ನದಥುರಿವಾಗ್ನೇರಿವ ಜ್ವಲತ ಉಪಶೃಣೋತಿ ತದೇತದ್ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ ಯ ಏವಂ ವೇದ || (ಛಾಂ. ೩-೧೩-೭).

4 ಇಲ್ಲಿ ಅಧ್ಯಾಸವೆಂದರೆ ಭ್ರಾಂತಿ ಎಂದರ್ಥವಲ್ಲ. ಒಂದನ್ನು ಮತ್ತೊಂದೆಂದು ಉಪಾಸನೆಮಾಡಬೇಕೆಂದು ಶ್ರುತಿಯಲ್ಲಿ ದೃಷ್ಟಿಯ ಅಧ್ಯಾಸವನ್ನು ಮಾಡಿರುವದು.

೫-೫-೩) ಎಂದು (ಹೀಗೆ ಅಧ್ಯಾಸವನ್ನು ಮಾಡಿರುತ್ತದೆ).[1] ಹೊಟ್ಟೆಯೊಳಗಿನ ಜ್ಯೋತಿಯು ಬ್ರಹ್ಮವಲ್ಲವೆಂಬುದಂತೂ ಪ್ರಸಿದ್ಧವಾಗಿರುತ್ತದೆ. ಏಕೆಂದರೆ 'ಇದು ಅದರ ದೃಷ್ಟಿಯು' 'ಇದು ಅದರ ಶ್ರುತಿಯು'(ಛಾಂ.೩-೧೩-೭)ಎಂದು (ವಾಕ್ಯಶೇಷದಲ್ಲಿ ಅದರಲ್ಲಿ)ಬಿಸಿಯೂ ಸದ್ದೂ ಇರುವವೆಂದು ಶ್ರುತಿ(ಯಲ್ಲಿ ಹೇಳಿದೆ). "ಇದನ್ನು ದೃಷ್ಟವೆಂದೂ ಶ್ರುತವೆಂದೂ ಉಪಾಸನೆಮಾಡಬೇಕು'' (ಛಾಂ. ೩-೧೩-೮) ಎಂದು (ವಾಕ್ಯಶೇಷದಲ್ಲಿ) ಶ್ರುತಿಯಿರುವದರಿಂದಲೂ (ಹೀಗೆಂದು ನಿಶ್ಚಯಿಸಬೇಕು).[2] ಇದಲ್ಲದೆ "ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ನೋಡುವದಕ್ಕೆ ತಕ್ಕವನೂ ಹೆಸರುವಾಸಿಯಾದವನೂ ಆಗುವನು" (ಛಾಂ. ೩-೧೩-೮) ಎಂದು (ಈ ಉಪಾಸನೆಗೆ) ಅಲ್ಪಫಲವನ್ನು ಹೇಳಿರುವದರಿಂದಲೂ (ಇದು) ಬ್ರಹ್ಮವಲ್ಲ(ವೆನ್ನ ಬೇಕು). ಏಕೆಂದರೆ ಬ್ರಹ್ಮದ ಉಪಾಸನೆಯು ದೊಡ್ಡಫಲಕ್ಕಾಗಿಯಲ್ಲವೆ, ಮಾಡತಕ್ಕದ್ದು?[3] (ಹಿಂದಿನ ಅಧಿಕರಣಗಳಲ್ಲಿ) ಪ್ರಾಣ, ಆಕಾಶ–ಇವುಗಳಿಗಿದ್ದಂತೆ ಜ್ಯೋತಿಗೆ ತನ್ನ ವಾಕ್ಯದಲ್ಲಿ ಮತ್ತೆ ಯಾವ ಬ್ರಹ್ಮಲಿಂಗವೂ ಇರುವದಿಲ್ಲ.[4] ಹಿಂದಿನ ವಾಕ್ಯದಲ್ಲಿಯಾದರೂ ಬ್ರಹ್ಮವನ್ನು ತಿಳಿಸಿರುವದಿಲ್ಲ.[5] ಏಕೆಂದರೆ (ಅಲ್ಲಿ) "ಈ ಭೂತವೆಲ್ಲವೂ ಗಾಯತ್ರಿಯೇ" (ಛಾಂ. ೩-೧೨-೧) ಎಂದು (ಒಂದು) ಛಂದಸ್ಸನ್ನು ಹೇಳಿರುತ್ತದೆ. ಒಂದು ವೇಳೆ ಹಿಂದಿನ ವಾಕ್ಯದಲ್ಲಿ ಹೇಗೋ ಬ್ರಹ್ಮವನ್ನು ತಿಳಿಸಿದೆ ಎಂದಾದರೂ, ಅದೇ ಈ (ಜ್ಯೋತಿ) ಎಂಬ ಗುರುತು

---

1 ಆದಿತ್ಯನೊಳಗಿರುವ ಪುರುಷನಿಗೆ ಭೂಃ ಎಂಬ ವ್ಯಾಹೃತಿಯು ತಲೆ, ಏಕೆಂದರೆ ಅದು ತಲೆಯಂತೆ ಒಂದು; ಭುವಃ ಎಂಬುದು ತೋಳುಗಳು, ಏಕೆಂದರೆ ಅದು ತೋಳುಗಳಂತೆ ಎರಡು–ಎಂದು ಮುಂತಾಗಿ (ಅಕ್ಷರ) ಸಂಖ್ಯೆಯು ಸಾರೂಪ್ಯದಿಂದ ಶ್ರುತಿಯಲ್ಲಿ ಶಿರಆದಿದೃಷ್ಟಿಯನ್ನು ಅಧ್ಯಾಸಮಾಡಿರುವದು ಕಂಡುಬರುತ್ತದೆ.

2 ಏಕೆಂದರೆ ಬ್ರಹ್ಮವು ದೃಷ್ಟ, ಶ್ರುತ–ಎಂದು ಸಿದ್ಧಾಂತಿಯೂ ಒಪ್ಪುವದಿಲ್ಲ.

3 ಬ್ರಹ್ಮವೆಂದರೆ ಎಲ್ಲಕ್ಕಿಂತಲೂ ದೊಡ್ಡದು. ಗ್ರಾಮಾಧಿಕಾರಿಯಿಂದ ದೊರಕುವ ಸಣ್ಣಫಲಕ್ಕಾಗಿ ಯಾವ ವಿವೇಕಿಯೂ ರಾಜನನ್ನು ಕಾಣುವದಿಲ್ಲ. ಇದರಂತೆ ಇಷ್ಟು ಸಣ್ಣ ಫಲಕ್ಕಾಗಿ ಬ್ರಹ್ಮದ ಉಪಾಸನೆಯನ್ನು ಶ್ರುತಿಯು ವಿಧಿಸಲಾರದು ಎಂದು ಭಾವ.

4 "ಪರೋ ದಿವಃ" ಎಂಬ ಎಲ್ಲೆಕಟ್ಟು 'ಜ್ಯೋತಿಃ', 'ದೀಪ್ಯತೇ' ಎಂಬ ಶಬ್ದಗಳು, 'ವಿಶ್ವತಃ ಪೃಷ್ಠೇಷು' ಎಂಬ ಪ್ರದೇಶಕಲ್ಪನೆ ಮತ್ತು ಬ್ರಹ್ಮಾಧಾರತ್ವಕಲ್ಪನೆ, ಕಾರ್ಯವಾದ ಹೊಟ್ಟೆಯ ಜ್ಯೋತಿಯಲ್ಲಿ ಅಧ್ಯಾಸ, 'ದೃಷ್ಟ', 'ಶ್ರುತ' ಎಂದು ಉಪಾಸನೆ, ಅಲ್ಪಫಲ–ಇವುಗಳೆಲ್ಲ ಕಾರ್ಯವಾದ ಜ್ಯೋತಿಯ ಲಿಂಗಗಳು, ಬ್ರಹ್ಮಲಿಂಗಗಳಲ್ಲ. ಮತ್ತೆ ಯಾವ ಬ್ರಹ್ಮಲಿಂಗಗಳೂ ಈ ವಾಕ್ಯದಲ್ಲಿಲ್ಲ.

5 ತಿಳಿಸಿದ್ದರೆ ಅದೇ ಇಲ್ಲಿ ಜ್ಯೋತಿ ಎಂದು ಹತ್ತಿರವಿರುವ ವಾಕ್ಯದ ಬಲದಿಂದ ಕಲ್ಪಿಸಿದರೂ ಕಲ್ಪಿಸಬಹುದಾಗಿತ್ತು.

ಇಲ್ಲಿರುವದಿಲ್ಲ.[1] ಏಕೆಂದರೆ ಅಲ್ಲಿ "ಆತನ ಅಮೃತವಾದ ಮೂರು ಭಾಗವು ದ್ಯುಲೋಕದಲ್ಲಿದೆ" (ಛಾಂ. ೩-೧೨-೬) ಎಂದು ದ್ಯುಲೋಕವು (ಗಾಯತ್ರಿಗೆ) ಅಧಿಕರಣವೆಂದು ಶ್ರುತಿಯಲ್ಲಿದೆ; ಇಲ್ಲಿಯಾದರೋ "ದ್ಯುಲೋಕಕ್ಕಿಂತ ಆಚೆ ಯಿರುವ ಜ್ಯೋತಿ" ಎಂದು ದ್ಯುಲೋಕವು ಎಲ್ಲೆಕಟ್ಟೆಂದು (ಹೇಳಿದೆ).[2] ಆದ್ದರಿಂದ ಇಲ್ಲಿ ಪ್ರಾಕೃತವಾದ[3] (ಬೆಳಕೇ) ಜ್ಯೋತಿಯೆಂದು ಗ್ರಹಿಸಬೇಕು.

## ಸಿದ್ಧಾಂತ: ದ್ಯುಲೋಕದಾಚೆಯ ಜ್ಯೋತಿಯು ಬ್ರಹ್ಮವೇ

(ಭಾಷ್ಯ)

೧೨೭. ಏವಂ ಪ್ರಾಪ್ತೇ ಬ್ರೂಮಃ—ಜ್ಯೋತಿರಿಹ ಬ್ರಹ್ಮ ಗ್ರಾಹ್ಯಮ್ | ಕುತಃ? ಚರಣಾಭಿಧಾನಾತ್ | ಪಾದಾಭಿಧಾನಾತ್ ಇತ್ಯರ್ಥಃ | ಪೂರ್ವಸ್ಮಿನ್ ಹಿ ವಾಕ್ಯೇ ಚತುಷ್ಪಾದ್ ಬ್ರಹ್ಮ ನಿರ್ದಿಷ್ಟಮ್ | "ತಾವಾನಸ್ಯ ಮಹಿಮಾ ತತೋ ಜ್ಯಾಯಾಗ್ಂಶ್ಚ ಪೂರುಷಃ | ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" (ಛಾಂ. ೩-೧೨-೬) ಇತ್ಯನೇನ ಮನ್ತ್ರೇಣ | ತತ್ರ ಯತ್ ಚತುಷ್ಪದೋ ಬ್ರಹ್ಮಣಃ ತ್ರಿಪಾತ್ ಅಮೃತಂ ದ್ಯುಸಮ್ಬನ್ಧಿರೂಪಂ ನಿರ್ದಿಷ್ಟಂ ತದೇವ ಇಹ ದ್ಯುಸಂಬನ್ಧಾತ್ ನಿರ್ದಿಷ್ಟಮ್ ಇತಿ ಪ್ರತ್ಯಭಿಜ್ಞಾಯತೇ | ತತ್ ಪರಿತ್ಯಜ್ಯ ಪ್ರಾಕೃತಂ ಜ್ಯೋತಿಃ ಕಲ್ಪಯತಃ ಪ್ರಕೃತಹಾನಾಪ್ರಕೃತಪ್ರಕ್ರಿಯೇ ಪ್ರಸಜ್ಯೇಯಾತಾಮ್ | ನ ಕೇವಲಂ ಪೂರ್ವವಾಕ್ಯಾತ್[4] ಜ್ಯೋತಿರ್ವಾಕ್ಯೇ ಏವ ಬ್ರಹ್ಮಾನುವೃತ್ತಿಃ, ಪರಸ್ಯಾಮಪಿ ಶಾಣ್ಡಿಲ್ಯವಿದ್ಯಾಯಾಮ್ ಅನುವರ್ತಿಷ್ಯತೇ ಬ್ರಹ್ಮ | ತಸ್ಮಾತ್ ಇಹ ಜ್ಯೋತಿರಿತಿ ಬ್ರಹ್ಮ ಪ್ರತಿಪತ್ತವ್ಯಮ್ ||

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಒದಗಲಾಗಿ (ಇದಕ್ಕೆ ಉತ್ತರವನ್ನು) ಹೇಳುತ್ತೇವೆ. ಜ್ಯೋತಿ ಎಂದರೆ ಇಲ್ಲಿ ಬ್ರಹ್ಮವನ್ನು ತೆಗೆದುಕೊಳ್ಳಬೇಕು; ಏಕೆಂದರೆ ಚರಣವನ್ನು ಹೇಳಿರುವದರಿಂದ, ಎಂದರೆ ಪಾದವನ್ನು ಹೇಳಿರುವದರಿಂದ ಎಂದರ್ಥ. ಹೇಗೆಂದರೆ ಹಿಂದಿನ ವಾಕ್ಯದಲ್ಲಿ "ಅಷ್ಟು ಈತನ ಮಹಿಮೆಯು, ಪುರುಷನು ಅದಕ್ಕಿಂತಲೂ ಹೆಚ್ಚಿನವನು, ಈತನಿಗೆ ಭೂತಗಳೆಲ್ಲ (ಒಂದು) ಪಾದವು, ಈತನ

1 ಬರಿಯ ಸನ್ನಿಧಿಯು ಸಾಲದು; ಅದೇ ಇದೆಂಬುದಕ್ಕೆ ಯಾವದಾದರೂ ಗುರುತು ಬೇಕು.

2 ಆದ್ದರಿಂದ ಇದು ಬೇರೆಯಾಗಿರಬೇಕು.

3 ಪ್ರಕೃತಿಯ ಕಾರ್ಯವಾದ.

4 ಈ ಮಾತು ಕೆಲವು ಅಚ್ಚಿನ ಪುಸ್ತಕಗಳಲ್ಲಿ ಮಾತ್ರವೇ ಇದೆ.

ಅಮೃತವಾದ ಮೂರು ಪಾದವು ದ್ಯುಲೋಕದಲ್ಲಿ (ದೆ) " (ಛಾಂ. ೩-೧೨-೬) ಎಂಬ ಮಂತ್ರದಲ್ಲಿ ಬ್ರಹ್ಮವು ನಾಲ್ಕು ಪಾದಗಳುಳ್ಳದ್ದೆಂದು ಹೇಳಿದೆ. ಅಲ್ಲಿ ನಾಲ್ಕು ಪಾದಗಳುಳ್ಳ ಬ್ರಹ್ಮದ ಯಾವ ಅಮೃತವಾದ ಮೂರು ಪಾದವು ದ್ಯುಲೋಕ ಸಂಬಂಧವುಳ್ಳ ಸ್ವರೂಪದ್ದೆಂದು ತಿಳಿಸಿದೆಯೋ ಅದನ್ನೇ ಇಲ್ಲಿಯೂ ಹೇಳಿದೆ ಎಂದು ದ್ಯುಲೋಕಸಂಬಂಧದಿಂದ[1] ಗೊತ್ತುಪಡಿಸಬಹುದಾಗಿದೆ. ಅದನ್ನು ಕೈಬಿಟ್ಟು ಪ್ರಾಕೃತಜ್ಯೋತಿಯನ್ನು ಕಲ್ಪಿಸಿಕೊಳ್ಳುವವರಿಗೆ ಪ್ರಕೃತವಾದದ್ದನ್ನು ಬಿಡುವದು, ಅಪ್ರಕೃತವಾದದ್ದನ್ನು ಪ್ರಾರಂಭಿಸುವದು (ಎಂಬ ದೋಷಗಳು) ಗಂಟುಬೀಳುವವು. ಹಿಂದಿನ ವಾಕ್ಯದಿಂದ (ಈ) ಜ್ಯೋತಿರ್ವಾಕ್ಯದಲ್ಲಿ ಮಾತ್ರವೇ ಬ್ರಹ್ಮವು ಅನುಸರಿಸಿಕೊಂಡು ಬಂದಿರುತ್ತದೆ (ಎನ್ನುವ) ಹಾಗಿಲ್ಲ; ಮುಂದಿನ **ಶಾಂಡಿಲ್ಯವಿದ್ಯೆ**ಯಲ್ಲಿಯೂ ಅನುಸರಿಸಿಕೊಂಡಿರುವದು.[2] ಆದ್ದರಿಂದ ಇಲ್ಲಿ ಜ್ಯೋತಿ ಎಂದರೆ ಬ್ರಹ್ಮವೆಂದೇ ತಿಳಿಯಬೇಕು.

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೧೨೪. ಯತ್ತು ಉಕ್ತಮ್ 'ಜ್ಯೋತಿಃ' 'ದೀಪ್ಯತೇ' ಇತಿ ಚ ಏತೌ ಶಬ್ದೌ ಕಾರ್ಯೇ ಜ್ಯೋತಿಷಿ ಪ್ರಸಿದ್ಧೌ ಇತಿ । ನಾಯಂ ದೋಷಃ । ಪ್ರಕರಣಾತ್ ಬ್ರಹ್ಮಾವಗಮೇ ಸತಿ ಅನಯೋಃ ಶಬ್ದಯೋಃ ಅವಿಶೇಷಕತ್ವಾತ್ । ದೀಪ್ಯಮಾನ ಕಾರ್ಯಜ್ಯೋತಿರುಪಲಕ್ಷಿತೇ ಬ್ರಹ್ಮಣ್ಯಪಿ ಪ್ರಯೋಗಸಂಭವಾತ್ । " ಯೇನ ಸೂರ್ಯಸ್ತಪತಿ ತೇಜಸೇದ್ಧಃ" (ತೈ. ಬ್ರಾ. ೩-೧೨-೯-೭) ಇತಿ ಚ ಮನ್ತ್ರ ವರ್ಣಾತ್ । ಯದ್ವಾ ನಾಯಂ ಜ್ಯೋತಿಃಶಬ್ದಃ ಚಕ್ಷುರ್ವೃತ್ತೇರೇವ ಅನು ಗ್ರಾಹಕೇ ತೇಜಸಿ ವರ್ತತೇ, ಅನ್ಯತ್ರಾಪಿ ಪ್ರಯೋಗದರ್ಶನಾತ್ । " ವಾಚೈ-ವಾಯಂ ಜ್ಯೋತಿಷಾಸ್ತೇ "(ಬೃ.೪-೩-೫), " ಮನೋ ಜ್ಯೋತಿರ್ಜುಷತಾಮ್ " (ತೈ. ಬ್ರಾ. ೧-೬-೩-೩) ಇತಿ ಚ । ತಸ್ಮಾತ್ ಯದ್ಯತ್ ಕಸ್ಯಚಿದವಭಾಸಕಂ ತತ್ತಜ್ಜ್ಯೋತಿಃಶಬ್ದೇನ ಅಭಿಧೀಯತೇ । ತಥಾ ಸತಿ ಬ್ರಹ್ಮಣೋಽಪಿ ಚೈತನ್ಯ-ರೂಪಸ್ಯ ಸಮಸ್ತಜಗದವಭಾಸಹೇತುತ್ವಾತ್ ಉಪಪನ್ನೋ ಜ್ಯೋತಿಃಶಬ್ದಃ ।

---

1 ದ್ಯುಲೋಕಸಂಬಂಧಿತ್ವವೆಂಬ ಗುರುತಿನಿಂದ ಹಿಂದಿನ ವಾಕ್ಯದಲ್ಲಿ ಹೇಳಿರುವ ಬ್ರಹ್ಮವನ್ನೇ ಇಲ್ಲಿ ಜ್ಯೋತಿ ಎಂದಿದೆ ಎಂದು ಗೊತ್ತುಪಡಿಸಬಹುದಾಗಿದೆ.

2 ಹಿಂದೆಯೂ ಮುಂದೆಯೂ ಬ್ರಹ್ಮವನ್ನು ಹೇಳಿದೆಯೆಂದು ನಿಶ್ಚಯವಾಗುವದರಿಂದ ನಡುವೆಯೂ ಬ್ರಹ್ಮವನ್ನೇ ಹೇಳಿದೆ ಎಂದು ಕಲ್ಪಿಸುವದು ಯುಕ್ತ ಎಂದು ಭಾವ.

"ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ" (ಮುಂ. ೨-೨-೧೧, ಕಾ. ೨-೨-೧೫), "ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಮ್" (ಬೃ. ೪-೪-೧೬) ಇತ್ಯಾದಿಶ್ರುತಿಭ್ಯಶ್ಚ। ಯದಪಿ ಉಕ್ತಮ್ ದ್ಯುಮರ್ಯಾದತ್ವಂ ಸರ್ವಗತಸ್ಯ ಬ್ರಹ್ಮಣೋ ನೋಪಪದ್ಯತೇ ಇತಿ। ಅತ್ರೋಚ್ಯತೇ—ಸರ್ವಗತಸ್ಯಾಪಿ ಬ್ರಹ್ಮಣಃ ಉಪಾಸನಾರ್ಥಃ ಪ್ರದೇಶವಿಶೇಷಪರಿಗ್ರಹಃ ನ ವಿರುಧ್ಯತೇ। ನನು ಉಕ್ತಮ್, ನಿಷ್ಪ್ರದೇಶಸ್ಯ ಬ್ರಹ್ಮಣಃ ಪ್ರದೇಶವಿಶೇಷಕಲ್ಪನಾ ನೋಪಪದ್ಯತೇ ಇತಿ। ನಾಯಂ ದೋಷಃ। ನಿಷ್ಪ್ರದೇಶಸ್ಯಾಪಿ ಬ್ರಹ್ಮಣಃ ಉಪಾಧಿವಿಶೇಷಸಂಬನ್ಧಾತ್ ಪ್ರದೇಶವಿಶೇಷಕಲ್ಪನೋಪಪತ್ತೇಃ। ತಥಾ ಹಿ 'ಆದಿತ್ಯೇ', 'ಚಕ್ಷುಷಿ', 'ಹೃದಯೇ' ಇತಿ ಪ್ರದೇಶವಿಶೇಷಸಂಬನ್ಧೀನಿ ಬ್ರಹ್ಮಣಃ ಉಪಾಸನಾನಿ ಶ್ರೂಯನ್ತೇ। ಏತೇನ 'ವಿಶ್ವತಃ ಪೃಷ್ಠೇಷು' ಇತ್ಯಾಧಾರಬಹುತ್ವಮ್ ಉಪಪಾದಿತಮ್। ಯದಪಿ ಏತದುಕ್ತಮ್ ಔಷ್ಣ್ಯಘೋಷಾನುಮಿತೇ ಕೌಕ್ಷೇಯೇ ಕಾರ್ಯೇ ಜ್ಯೋತಿಷಿ ಅಧ್ಯಸ್ಯಮಾನತ್ವಾತ್ ಪರಮಪಿ ದಿವಃ ಕಾರ್ಯಜ್ಯೋತಿರೇವೇತಿ। ತದಪಿ ಅಯುಕ್ತಮ್। ಪರಸ್ಯಾಪಿ ಬ್ರಹ್ಮಣಃ ನಾಮಾದಿಪ್ರತೀಕತ್ವವತ್ ಕೌಕ್ಷೇಯಜ್ಯೋತಿಷ್ಪ್ರತೀಕತ್ವೋಪಪತ್ತೇಃ। "ದೃಷ್ಟಂ ಚ ಶ್ರುತಂ ಚೇತ್ಯುಪಾಸೀತ" ಇತಿ ತು ಪ್ರತೀಕದ್ವಾರಕಂ ದೃಷ್ಟತ್ವಂ ಶ್ರುತತ್ವಂ ಚ ಭವಿಷ್ಯತಿ। ಯದಪಿ ಅಲ್ಪಫಲಶ್ರವಣಾತ್ ನ ಬ್ರಹ್ಮ ಇತಿ। ತದಪಿ ಅನುಪಪನ್ನಮ್। ನ ಹಿ ಇಯತೇ ಫಲಾಯ ಬ್ರಹ್ಮ ಆಶ್ರಯಣೀಯಮ್, ಇಯತೇ ನ ಇತಿ ನಿಯಮಹೇತುರಸ್ತಿ। ಯತ್ರ ಹಿ ನಿರಸ್ತಸರ್ವವಿಶೇಷಸಂಬನ್ಧಂ ಪರಂ ಬ್ರಹ್ಮ ಆತ್ಮತ್ವೇನ ಉಪದಿಶ್ಯತೇ ತತ್ರ ಏಕರೂಪಮೇವ ಫಲಂ ಮೋಕ್ಷಃ ಇತ್ಯವಗಮ್ಯತೇ। ಯತ್ರ ತು ಗುಣವಿಶೇಷಸಂಬನ್ಧಂ ಪ್ರತೀಕವಿಶೇಷಸಂಬನ್ಧಂ ವಾ ಬ್ರಹ್ಮ ಉಪದಿಶ್ಯತೇ, ತತ್ರ ಸಂಸಾರಗೋಚರಾಣ್ಯೇವ ಉಚ್ಚಾವಚಾನಿ ಫಲಾನಿ ದೃಶ್ಯನ್ತೇ "ಅನ್ನಾದೋ ವಸುದಾನೋ ವಿನ್ದತೇ ವಸು ಯ ಏವಂ ವೇದ" (ಬೃ. ೪-೪-೨೪) ಇತ್ಯಾದ್ಯಾಸು ಶ್ರುತಿಷು॥

(ಭಾಷ್ಯಾರ್ಥ)

ಇನ್ನು 'ಜ್ಯೋತಿಯು' 'ಬೆಳಗುತ್ತದೆ' ಎಂಬೀ ಎರಡು ಶಬ್ದಗಳೂ ಕಾರ್ಯರೂಪವಾಗಿರುವ ಬೆಳಕು (ಎಂಬ ಅರ್ಥ)ದಲ್ಲಿ ಪ್ರಸಿದ್ಧವಾಗಿರುತ್ತವೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ ಇದು (ನಮ್ಮ ಪಕ್ಷದ) ದೋಷವಲ್ಲ, ಹೇಗೆಂದರೆ ಪ್ರಕರಣದಿಂದ ಬ್ರಹ್ಮವೆಂದು ನಿಶ್ಚಯವಾಗಿರುವಲ್ಲಿ ಈ (ಎರಡು) ಶಬ್ದಗಳು (ಕಾರ್ಯಜ್ಯೋತಿಯನ್ನೇ ಗೊತ್ತುಪಡಿಸುವ) ವಿಶೇಷಣಗಳಾಗಲಾರವು; ಏಕೆಂದರೆ ಬೆಳಗುತ್ತಿರುವ ಕಾರ್ಯಜ್ಯೋತಿಯಿಂದ ಉಪಲಕ್ಷಿತವಾಗಿರುವ ಬ್ರಹ್ಮ

ದಲ್ಲಿಯೂ (ಅವನ್ನು) ಪ್ರಯೋಗಿಸಬಹುದು.[1] ಯಾವ ತೇಜಸ್ಸಿನಿಂದ ಹೊತ್ತಿ ಕೊಂಡು ಸೂರ್ಯನು ತಪಿಸುತ್ತಿರುವನೋ....." (ತೈ. ಬ್ರಾ. ೩-೧೨-೯-೭) ಎಂದು ಮಂತ್ರವರ್ಣವೂ ಇದೆ.[2] ಅಥವಾ (ಹೀಗೂ ಸಮಾಧಾನವನ್ನು ಹೇಳಬಹುದು.) ಈ ಜ್ಯೋತಿ ಎಂಬ ಶಬ್ದವು ಚಕ್ಷುರ್ವೃತ್ತಿಗೆ ಅನುಗ್ರಾಹಕವಾಗಿರುವ ತೇಜಸ್ಸೊಂದನ್ನೇ ಹೇಳುವದಿಲ್ಲ; ಏಕೆಂದರೆ ಬೇರೆಯ (ಅರ್ಥ)ದಲ್ಲಿಯೂ (ಇದನ್ನು) ಪ್ರಯೋಗಿಸಿರುವದು ಕಂಡುಬರುತ್ತದೆ. "ಈತನು ಮಾತೆಂಬ ಜ್ಯೋತಿಯಿಂದಲೇ (ಕತ್ತಲೆಯಲ್ಲಿ) ಕುಳಿತುಕೊಳ್ಳುತ್ತಾನೆ" (ಬೃ. ೪-೩-೫) ಎಂದೂ "(ಆಜ್ಯವನ್ನು) ಸೇವಿಸುವವರಿಗೆ ಮನಸ್ಸು ಜ್ಯೋತಿಯು" (ತೈ.ಬ್ರಾ. ೧-೬-೩-೩) ಎಂದೂ (ಪ್ರಯೋಗವಿದೆ). ಆದ್ದರಿಂದ ಯಾವಯಾವದು ಏನನ್ನಾದರೂ ಬೆಳಗಿ (ತೋರಿಸು)ವದೋ ಅದದನ್ನು ಜ್ಯೋತಿ ಎಂದು ಕರೆಯುತ್ತಾರೆ (ಎಂದಾಯಿತು). ಹಾಗಾದರೆ ಬ್ರಹ್ಮವು ಚೈತನ್ಯರೂಪವಾಗಿರುವದರಿಂದ ಜಗತ್ತೆಲ್ಲವೂ ತೋರುವದಕ್ಕೆ ಕಾರಣವಾಗಿರುವದರಿಂದ (ಅದಕ್ಕೂ) ಜ್ಯೋತಿ ಎಂಬ ಶಬ್ದವು ಒಪ್ಪುತ್ತದೆ.[3] "ಆತನು ಬೆಳಗುವದನ್ನು ಅನುಸರಿಸಿಯೇ ಎಲ್ಲವೂ ಬೆಳಗುತ್ತಿರುವದು, ಆತನ ಬೆಳಕಿನಿಂದ ಇದೆಲ್ಲವೂ ಬೆಳಗುತ್ತಿರುವದು" (ಮುಂ. ೨-೨-೧೧, ಕ. ೨-೨-೧೫), "ಆ ಜ್ಯೋತಿಗಳ ಜ್ಯೋತಿಯನ್ನು ದೇವತೆಗಳು ಆಯುಸ್ಸು, ನಾಶವಿಲ್ಲದ್ದು ಎಂದು ಉಪಾಸನೆಮಾಡುತ್ತಾರೆ" (ಬೃ. ೪-೪-೧೬) ಎಂಬಿವೇ ಮುಂತಾದ ಶ್ರುತಿಗಳಿಂದಲೂ (ಈ ಅಭಿಪ್ರಾಯವು ಸಿದ್ಧವಾಗುತ್ತದೆ).

ಇನ್ನು ಸರ್ವಗತವಾದ ಬ್ರಹ್ಮಕ್ಕೆ ದ್ಯುಲೋಕವೆಂಬ ಎಲ್ಲೆಕಟ್ಟು (ಇರುವದೆಂಬುದು) ಒಪ್ಪುವದಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದಕ್ಕೆ (ನಾವು) ಹೇಳುವದೇನೆಂದರೆ ಸರ್ವಗತವಾದ ಬ್ರಹ್ಮಕ್ಕೂ ಉಪಾಸನೆಗಾಗಿ ಒಂದಾನೊಂದು ಪ್ರದೇಶವನ್ನು ಇಟ್ಟುಕೊಳ್ಳುವದು ವಿರುದ್ಧವಲ್ಲ.

(ಪೂರ್ವಪಕ್ಷಿ):—ಯಾವ ಸ್ಥಲವೂ ಇಲ್ಲದ ಬ್ರಹ್ಮಕ್ಕೆ ಒಂದಾನೊಂದು ಸ್ಥಲವನ್ನು ಕಲ್ಪಿಸುವದು ಸರಿಯಾಗುವದಿಲ್ಲ ಎಂದು (ನಾವು) ಹೇಳಿದ್ದೆವಲ್ಲ!

(ಸಿದ್ಧಾಂತಿ):—ಇದೇನೂ ದೋಷವಲ್ಲ, ಏಕೆಂದರೆ ಬ್ರಹ್ಮಕ್ಕೆ ಯಾವದೊಂದು ಸ್ಥಲವೂ ಇಲ್ಲದಿದ್ದರೂ ಆಯಾ ಉಪಾಧಿಯ ಸಂಬಂಧದಿಂದ

---

1 ಕಾರ್ಯವು ಕಾರಣವನ್ನು ತಿಳಿಸುವ ಉಪಲಕ್ಷಣವಾಗಬಹುದು.

2 ಬ್ರಹ್ಮದ ತೇಜಸ್ಸಿನಿಂದಲೇ ಸೂರ್ಯನೂ ಬೆಳಗುತ್ತಿರುವದರಿಂದ ಅದನ್ನೂ ಜ್ಯೋತಿ ಎಂದು ಕರೆಯುವದು ಯುಕ್ತವಾಗಿದೆ ಎಂದು ಭಾವ.

3 ಈ ದೃಷ್ಟಿಯಿಂದ ಬ್ರಹ್ಮವೇ ಜ್ಯೋತಿ ಎಂಬ ಶಬ್ದಕ್ಕೆ ಮುಖ್ಯವಾದ ಅರ್ಥವು.

**ಒಂದಾನೊಂದು ಸ್ಥಲವನ್ನು ಕಲ್ಪಿಸಬಹುದು.**[1] ಆದ್ದರಿಂದಲೇ 'ಆದಿತ್ಯನಲ್ಲಿ', 'ಕಣ್ಣಿನಲ್ಲಿ', 'ಹೃದಯದಲ್ಲಿ' ಎಂದು ಆಯಾ ಪ್ರದೇಶಗಳ ಸಂಬಂಧವುಳ್ಳ ಉಪಾಸನೆಗಳನ್ನು ಬ್ರಹ್ಮಕ್ಕೆ ಶ್ರುತಿಯಲ್ಲಿ (ಹೇಳಿ)ರುತ್ತದೆ. ಇದರಿಂದ 'ವಿಶ್ವಕ್ಕಿಂತ ಮೇಲಿನವುಗಳಾದ' ಎಂಬ ಆಧಾರಬಹುತ್ವವೂ ಸರಿ ಎಂದು ಹೇಳಿದಂತೆ ಆಯಿತು.[2]

ಇನ್ನು ಬಿಸಿ, ಸದ್ದು-ಇವುಗಳಿಂದ ಅನುಮಾನಿಸಿರುವ ಹೊಟ್ಟೆಯಲ್ಲಿನ ಕಾರ್ಯಜ್ಯೋತಿಯಲ್ಲಿ ಅಧ್ಯಾಸಮಾಡಿರುವದರಿಂದ ದ್ಯುಲೋಕದ ಆಚೆ ಇರುವ ಜ್ಯೋತಿಯೂ ಕಾರ್ಯವೇ (ಆಗಿರಬೇಕು) ಎಂಬುದನ್ನು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ; ಅದೂ ಸರಿಯಲ್ಲ. ಏಕೆಂದರೆ ಪರಬ್ರಹ್ಮಕ್ಕೂ ನಾಮವೇ ಮುಂತಾದ **ಪ್ರತೀಕ**ಗಳಿರುವಂತೆ[3] ಹೊಟ್ಟೆಯ ಜ್ಯೋತಿ ಎಂಬ ಪ್ರತೀಕವೂ ಇರಬಹುದಾಗಿದೆ.[4] "ದೃಷ್ಟವೆಂದೂ ಶ್ರುತವೆಂದೂ ಉಪಾಸನೆಮಾಡಬೇಕು" ಎಂಬಲ್ಲಾದರೋ ಪ್ರತೀಕದ ಮೂಲಕ ದೃಷ್ಟತ್ವವೂ ಶ್ರುತತ್ವವೂ (ಬ್ರಹ್ಮಕ್ಕೂ) ಆಗಬಹುದು.

ಇನ್ನು ಸಣ್ಣಫಲವನ್ನು ಶ್ರುತಿಯಲ್ಲಿ ಹೇಳಿರುವದರಿಂದ (ಜ್ಯೋತಿಯು) ಬ್ರಹ್ಮವಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲವೆ, ಅದೂ ಸರಿಯಲ್ಲ. ಏಕೆಂದರೆ ಇಂತಿಷ್ಟು ಫಲಕ್ಕಾಗಿ ಬ್ರಹ್ಮವನ್ನು ಇಟ್ಟುಕೊಳ್ಳಬೇಕು, ಇಷ್ಟಕ್ಕೆ ಕೂಡದು-ಎಂದು ನಿಯಮಿಸುವ ಕಾರಣವು (ಯಾವದೂ) ಇರುವದಿಲ್ಲ. **ಎಲ್ಲಿ ಯಾವ ವಿಶೇಷದ ಸಂಬಂಧವೂ** ಇಲ್ಲದ ಪರಬ್ರಹ್ಮವನ್ನು ಆತ್ಮನೆಂದು ಉಪದೇಶಿಸಿರುತ್ತದೆಯೋ ಅಲ್ಲಿ ಮೋಕ್ಷವೆಂಬ ಒಂದೇ ಬಗೆಯ ಫಲವೆಂದು ಗೊತ್ತಾಗಿರುತ್ತದೆ. ಆದರೆ ಎಲ್ಲಿ ಯಾವದಾದರೊಂದು ಗುಣದ ಸಂಬಂಧವುಳ್ಳ (ಬ್ರಹ್ಮ

---

1 ಉಪಾಧಿನಿಮಿತ್ತವಾದದ್ದು ಪರಮಾರ್ಥವಲ್ಲದಿದ್ದರೂ ಉಪಾಸನೆಗೆ ಉಪಯೋಗವಾಗಬಹುದು ಎಂದು ಭಾವ.

2 ಪ್ರದೇಶವು ಉಪಾಸನೆಗಾಗಿ ಕಲ್ಪಿತವಾಗಬಹುದಾದರೆ, ಪ್ರದೇಶಬಹುತ್ವವೂ ಹಾಗೆಯೇ ಕಲ್ಪಿತವಾಗಬಹುದಾಗಿದೆ ಎಂದು ಭಾವ.

3 ಯಾವದನ್ನು ಯಾವವರ ಸ್ಥಾನದಲ್ಲಿ ಉಪಾಸ್ಯವೆಂದು ಹೇಳಿದೆಯೋ ಅದು ಅವರ **ಪ್ರತೀಕವು**; ಉದಾಹರಣೆಗೆ ಸಾಲಗ್ರಾಮಶಿಲೆಯನ್ನು ವಿಷ್ಣುವೆಂದು ಉಪಾಸನೆಮಾಡಬೇಕೆಂದು ಹೇಳಿದೆ, ಆದ್ದರಿಂದ ಅದು ವಿಷ್ಣುವಿನ ಪ್ರತೀಕವು.

4 ನಾಮವೆಂಬ ಪ್ರತೀಕದಲ್ಲಿ ಬ್ರಹ್ಮವನ್ನು ಉಪಾಸನೆಮಾಡುತ್ತಾರಾದರೂ ನಾಮಕ್ಕೂ ಬ್ರಹ್ಮಕ್ಕೂ ಸಾದೃಶ್ಯವಿರುವದಿಲ್ಲ; ಹಾಗೆಯೇ ಹೊಟ್ಟೆಯ ಜ್ಯೋತಿಯಲ್ಲಿ ಬ್ರಹ್ಮದೃಷ್ಟಿಯನ್ನು ಹಾಕಿ ಉಪಾಸನೆಮಾಡುವದಕ್ಕೆ ಸಾದೃಶ್ಯವಿರಬೇಕಾದದ್ದಿಲ್ಲ.

ವನ್ನು) ಅಥವಾ ಯಾವದಾದರೊಂದು ಪ್ರತೀಕದ ಸಂಬಂಧವುಳ್ಳ ಬ್ರಹ್ಮವನ್ನು (ಉಪಾಸನೆಗಾಗಿ) ಉಪದೇಶಮಾಡಿರುತ್ತದೆಯೋ ಅಲ್ಲಿ "ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ಅನ್ನಾದನಾಗುವನು, ಧನದಾನವನ್ನು ಮಾಡುವವನಾಗುವನು, ಧನವನ್ನು ಪಡೆದುಕೊಳ್ಳುವನು" (ಬೃ. ೪-೪-೨೪) ಮುಂತಾದ ಶ್ರುತಿಗಳಲ್ಲಿ ಸಂಸಾರಗೋಚರವಾದ ಹೆಚ್ಚು ಕಡಿಮೆಯ (ಬಗೆಬಗೆಯ) ಫಲಗಳು (ಉಕ್ತವಾಗಿರುವದು) ಕಂಡುಬರುತ್ತದೆ.

## ಜ್ಯೋತಿ ಎಂಬ ಮಾತಿಗೆ ಬೇರೊಂದು ಅರ್ಥವನ್ನು ಮಾಡಲು ಕಾರಣ

(ಭಾಷ್ಯ)

೧೨೯. ಯದ್ಯಪಿ ನ ಸ್ವವಾಕ್ಯೇ ಕಿಂಚಿತ್ ಜ್ಯೋತಿಷೋ ಬ್ರಹ್ಮಲಿಙ್ಗಮಸ್ತಿ, ತಥಾಪಿ ಪೂರ್ವಸ್ಮಿನ್ ವಾಕ್ಯೇ ದೃಶ್ಯಮಾನಂ ಗ್ರಹೀತವ್ಯಂ ಭವತಿ । ತದುಕ್ತಂ ಸೂತ್ರಕಾರೇಣ—"ಜ್ಯೋತಿಶ್ಚರಣಾಭಿಧಾನಾತ್" ಇತಿ । ಕಥಂ ಪುನರ್ವಾಕ್ಯಾನ್ತರಗತೇನ ಬ್ರಹ್ಮಸನ್ನಿಧಾನೇನ ಜ್ಯೋತಿಃಶ್ರುತಿಃ ಸ್ವವಿಷಯಾತ್ ಶಕ್ಯಾ ಪ್ರಚ್ಯಾವಯಿತುಮ್ ? ನೈಷ ದೋಷಃ । "ಯದತಃ ಪರೋ ದಿವೋ ಜ್ಯೋತಿಃ" ಇತಿ ಪ್ರಥಮತರಪಠಿತೇನ ಯಚ್ಛಬ್ದೇನ ಸರ್ವನಾಮ್ನಾ ದ್ಯುಸಂಬನ್ಧಾತ್ ಪ್ರತ್ಯಭಿಜ್ಞಾಯಮಾನೇ ಪೂರ್ವವಾಕ್ಯನಿರ್ದಿಷ್ಟೇ ಬ್ರಹ್ಮಣಿ ಸ್ವಸಾಮರ್ಥ್ಯೇನ ಪರಾಮೃಷ್ಟೇ ಸತಿ ಅರ್ಥಾತ್ ಜ್ಯೋತಿಃಶಬ್ದಸ್ಯಾಪಿ ಬ್ರಹ್ಮವಿಷಯತ್ವೋಪಪತ್ತೇಃ । ತಸ್ಮಾತ್ ಇಹ ಜ್ಯೋತಿರಿತಿ ಬ್ರಹ್ಮ ಪ್ರತಿಪತ್ತವ್ಯಮ್ ॥

(ಭಾಷ್ಯಾರ್ಥ)

ತನ್ನ ವಾಕ್ಯದಲ್ಲಿ[1] ಜ್ಯೋತಿಯು ಬ್ರಹ್ಮ(ವೆಂಬದಕ್ಕೆ) ಲಿಂಗವು ಯಾವದೂ ಇಲ್ಲವೆಂಬುದು ನಿಜ, ಆದರೂ (ಇದರ) ಹಿಂದಿನ ವಾಕ್ಯದಲ್ಲಿ[2] ಕಂಡುಬರುವದರಿಂದ (ಅದನ್ನು) ತೆಗೆದುಕೊಳ್ಳಬೇಕಾಗಿರುತ್ತದೆ. ಇದನ್ನು ಸೂತ್ರಕಾರರು "ಜ್ಯೋತಿಶ್ಚರಣಾಭಿಧಾನಾತ್" (ಜ್ಯೋತಿ ಎಂದರೆ ಬ್ರಹ್ಮವು, ಏಕೆಂದರೆ ಬ್ರಹ್ಮದ ಚರಣವನ್ನು ಹಿಂದೆ ಹೇಳಿರುತ್ತದೆ) ಎಂದು ಹೇಳಿರುತ್ತಾರೆ.

---

1 "ಯದತಃ ಪರೋ" ಎಂಬ ಜ್ಯೋತಿರ್ವಾಕ್ಯದಲ್ಲಿ.

2 "ಗಾಯತ್ರೀ ವಾ ಇದಗ್ಂ ಸರ್ವಂ ಭೂತಂ" ಎಂಬ ೧೨ ನೆಯ ಖಂಡದಲ್ಲಿ.

(ಆಕ್ಷೇಪ):—ಆದರೆ ಬೇರೊಂದು ವಾಕ್ಯದಲ್ಲಿರುವ ಬ್ರಹ್ಮಸನ್ನಿಧಿಯಿಂದ ಜ್ಯೋತಿ ಎಂಬ ಶ್ರುತಿಯನ್ನು ತನ್ನ ವಿಷಯದಿಂದ (ಕೆಳಕ್ಕೆ) ಜಾರಿಸುವದಕ್ಕೆ ಹೇಗೆ ಆದೀತು ?[1]

(ಪರಿಹಾರ) :—ಇದೇನೂ ತಪ್ಪಲ್ಲ. "ಯದತಃ ಪರೋ ದಿವೋ ಜ್ಯೋತಿಃ" (ಯಾವ ಈ ದ್ಯುಲೋಕಕ್ಕಿಂತ ಆಚೆಯಿರುವ ಜ್ಯೋತಿಯು) ಎಂದು (ಜ್ಯೋತಿಃಶಬ್ದಕ್ಕಿಂತ) ಮೊದಲೇ ಹೇಳಿರುವ ಸರ್ವನಾಮವಾದ ಯತ್ ಎಂಬ ಶಬ್ದವು ದ್ಯುಲೋಕದ ಸಂಬಂಧದಿಂದ ಗುರುತಿಸಬಹುದಾದ ಪೂರ್ವವಾಕ್ಯದಲ್ಲಿ ತಿಳಿಸಿರುವ ಬ್ರಹ್ಮವನ್ನು ತನ್ನ ಸಾಮರ್ಥ್ಯದಿಂದ[2] ಪರಾಮರ್ಶಮಾಡುತ್ತಿರುವಲ್ಲಿ ಜ್ಯೋತಿ ಎಂಬ ಶಬ್ದವೂ ಅರ್ಥವಶದಿಂದ ಬ್ರಹ್ಮವಿಷಯಕವೆಂದೇ ಯುಕ್ತವಾಗುತ್ತದೆ.[3]

ಆದ್ದರಿಂದ ಇಲ್ಲಿ ಜ್ಯೋತಿ ಎಂದರೆ ಬ್ರಹ್ಮವೆಂದು ತಿಳಿಯಬೇಕು.

## ಹಿಂದಿನ ಗಾಯತ್ರೀವಾಕ್ಯದಲ್ಲಿ ಬ್ರಹ್ಮವನ್ನೇ ಹೇಳಿದೆ

**ಛನ್ದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ॥ ೨೫ ॥**

೨೫. (ಗಾಯತ್ರಿ ಎಂಬ) ಛಂದಸ್ಸನ್ನು ಹೇಳಿರುವದರಿಂದ (ಹಿಂದಿನ ವಾಕ್ಯದಲ್ಲಿಯೂ ಬ್ರಹ್ಮವನ್ನು ಹೇಳಿಲ್ಲ), ಎಂದರೆ ಹಾಗಲ್ಲ. ಏಕೆಂದರೆ ಹಾಗೆ

---

1 ಶ್ರುತಿ ಎಂದರೆ ಬಾಯಿಬಿಟ್ಟು ಹೇಳುವ ಶಬ್ದವು ; ಲಿಂಗವೆಂದರೆ ಅದೆಂದು ತಿಳಿಸುವ ವಿಶೇಷಣರೂಪವಾದ ಗುರುತು. ಬ್ರಹ್ಮದ ವಿಷಯಕ್ಕೆ ಶ್ರುತಿಯಾಗಲಿ ಲಿಂಗವಾಗಲಿ ಪ್ರಕೃತವಾಕ್ಯದಲ್ಲಿರುವದಿಲ್ಲ. ಹಿಂದಿನ ವಾಕ್ಯದಲ್ಲಿ ಬ್ರಹ್ಮವಿದ್ದಮಾತ್ರಕ್ಕೆ ಈ ವಾಕ್ಯದಲ್ಲಿ ಅದನ್ನು ಹೇಳಿದೆ ಎಂಬುದಕ್ಕೆ ಗುರುತೇನು ? ಅದಿಲ್ಲದಿರುವಾಗ ಜ್ಯೋತಿ ಎಂಬ ಶಬ್ದಕ್ಕೆ ಮುಖ್ಯಾರ್ಥವಾದ ಬೆಳಕನ್ನು ಬಿಟ್ಟು ಗೌಣಾರ್ಥವನ್ನು ತೆಗೆದುಕೊಳ್ಳಲು ಕಾರಣವೇನು ?—ಎಂದು ಆಕ್ಷೇಪ. ಈ ಆಕ್ಷೇಪದಲ್ಲಿ ಜ್ಯೋತಿ ಎಂಬ ಶಬ್ದವು ಬ್ರಹ್ಮವನ್ನೇ ಹೇಳುತ್ತದೆ ಎಂಬ ಸಿದ್ಧಾಂತವನ್ನು ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

2 ಪ್ರಸಿದ್ಧಾರ್ಥವನ್ನು ಹೇಳುವ ಸಾಮರ್ಥ್ಯದಿಂದ ಎಂದರ್ಥ. 'ಈ ದ್ಯುಲೋಕದ ಆಚೆಯಿರುವ ಯಾವ ಜ್ಯೋತಿಯುಂಟೋ' ಎಂಬಲ್ಲಿ ಜ್ಯೋತಿಯು ಸುಪ್ರಸಿದ್ಧವಾಗಿರುವದೆಂದು ಯತ್ ಶಬ್ದವು ತಿಳಿಸುತ್ತದೆ.

3 ಯತ್ ಎಂಬ ಪ್ರಸಿದ್ಧಾರ್ಥಬೋಧಕಶಬ್ದವು ಮೊದಲಲ್ಲಿದೆ, ಜ್ಯೋತಿ ಎಂಬುದು ಆಮೇಲೆ ಬಂದಿದೆ. ಪ್ರಸಿದ್ಧವಾದ ಯಾವದನ್ನೂ ಇಲ್ಲಿ ಹೇಳಿಲ್ಲವಾದ್ದರಿಂದ ದ್ಯುಲೋಕದ ಸಂಬಂಧವುಳ್ಳ ಯಾವ ಬ್ರಹ್ಮವನ್ನು ಹಿಂದೆ ಹೇಳಿತ್ತೋ ಅದನ್ನೇ ಇಲ್ಲಿಯೂ ಹೇಳಿದೆ ಎಂಬುದು ದ್ಯುಲೋಕಸಂಬಂಧದಿಂದ ನಿಶ್ಚಯವಾಗುತ್ತದೆ. ಎರಡನೆಯದಾಗಿ ಬಂದಿರುವ ಜ್ಯೋತಿಯೂ ಅದನ್ನೇ ಹೇಳಬೇಕಾಗುತ್ತದೆ.

ಚಿತ್ತವನ್ನು ಅರ್ಪಣ (ಮಾಡಬೇಕೆಂದು) ಹೇಳಿದೆ, ಹಾಗೆಯೇ ಅಲ್ಲವೆ, (ಶ್ರುತಿಯು) ತಿಳಿಸುತ್ತದೆ?

## ಪೂರ್ವಪಕ್ಷ: ಹಿಂದಿನ ವಾಕ್ಯದಲ್ಲಿ ಗಾಯತ್ರಿಯನ್ನೇ ಹೇಳಿದೆ

(ಭಾಷ್ಯ)

೧೩೦. ಅಥ ಯದುಕ್ತಂ ಪೂರ್ವಸ್ಮಿನ್ನಪಿ ವಾಕ್ಯೇ ನ ಬ್ರಹ್ಮ ಅಭಿಹಿತಮಸ್ತಿ, “ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ” (ಛಾಂ. ೩-೧೨-೧) ಇತಿ ಗಾಯತ್ರ್ಯಾಖ್ಯಸ್ಯ ಛನ್ದಸೋಽಭಿಹಿತತ್ವಾತ್ ಇತಿ ತತ್ ಪರಿಹರ್ತವ್ಯಮ್ । ಕಥಂ ಪುನಃ ಛನ್ದೋಽಭಿಧಾನಾತ್ ನ ಬ್ರಹ್ಮ ಅಭಿಹಿತಮ್ ಇತಿ ಶಕ್ಯತೇ ವಕ್ತುಮ್ ? ಯಾವತಾ “ತಾವಾನಸ್ಯ ಮಹಿಮಾ” ಇತ್ಯೇತಸ್ಯಾಮ್ ಋಚಿ ಚತುಷ್ಪಾದ್ ಬ್ರಹ್ಮ ದರ್ಶಿತಮ್ । ನೈತದಸ್ತಿ । “ಗಾಯತ್ರೀ ವಾ ಇದಂ ಸರ್ವಮ್” ಇತಿ ಗಾಯತ್ರೀಮ್ ಉಪಕ್ರಮ್ಯ ತಾಮೇವ ಭೂತಪೃಥಿವೀಶರೀರಹೃದಯವಾಕ್ಪ್ರಾಣಪ್ರಭೇದೈರ್ವ್ಯಾಖ್ಯಾಯ “ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಭ್ಯನೂಕ್ತಂ ತಾವಾನಸ್ಯ ಮಹಿಮಾ” (ಛಾಂ. ೩-೧೨-೫,೬) ಇತಿ ತಸ್ಯಾಮೇವ ವ್ಯಾಖ್ಯಾತರೂಪಾಯಾಂ ಗಾಯತ್ರ್ಯಾಮ್ ಉದಾಹೃತೋ ಮನ್ತ್ರಃ ಕಥಮ್ ಅಕಸ್ಮಾತ್ ಬ್ರಹ್ಮ ಚತುಷ್ಪಾತ್ ಅಭಿದಧ್ಯಾತ್? ಯೋಽಪಿ ತತ್ರ “ಯದ್ವೈ ತದ್ಬ್ರಹ್ಮ” (ಛಾಂ. ೩-೧೨-೭) ಇತಿ ಬ್ರಹ್ಮಶಬ್ದಃ ಸೋಽಪಿ ಛನ್ದಸಃ ಪ್ರಕೃತತ್ವಾತ್ ಛನ್ದೋವಿಷಯ ಏವ । “ಯ ಏತಾಮೇವಂ ಬ್ರಹ್ಮೋಪನಿಷದಂ ವೇದ” (ಛಾಂ. ೩-೧೧-೩) ಇತ್ಯತ್ರ ಹಿ ವೇದೋಪನಿಷದಮ್ ಇತಿ ವ್ಯಾಚಕ್ಷತೇ । ತಸ್ಮಾತ್ ಛನ್ದೋಽಭಿಧಾನಾತ್ ನ ಬ್ರಹ್ಮಣಃ ಪ್ರಕೃತತ್ವಮ್ ಇತಿ ಚೇತ್ ॥

(ಭಾಷ್ಯಾರ್ಥ)

ಇನ್ನು ಹಿಂದಿನ ವಾಕ್ಯದಲ್ಲಿಯೂ[1] ಬ್ರಹ್ಮವನ್ನು ಹೇಳಿರುವದಿಲ್ಲ. ಏಕೆಂದರೆ “ಇದು ಯಾವ ಯಾವದಿದೆಯೋ ಈ ಭೂತವೆಲ್ಲ ಗಾಯತ್ರಿಯೇ” (ಛಾಂ.

---

1 ಹನ್ನೆರಡನೆಯ ಅನುವಾಕವು ಹೀಗಿದೆ ಎಂದರೆ: (೧) ಗಾಯತ್ರಿಯೇ ಈ ಏನೇನಿದೆಯೋ ಈ ಎಲ್ಲಾ ಭೂತವು. ವಾಕ್ಕೇ ಗಾಯತ್ರಿ; ವಾಕ್ಕೇ ಈ ಎಲ್ಲಾ ಭೂತವು. (ಏಕೆಂದರೆ ಅದು) ಗಾನಮಾಡುತ್ತದೆ ಮತ್ತು ಕಾಪಾಡುತ್ತದೆ (ತ್ರಾಯತೇ). (೨) ಆ ಗಾಯತ್ರಿ ಎಂಬುದಿದೆಯಲ್ಲ ಅದು ಈ ಪೃಥ್ವಿಯೇ; ಇದರಲ್ಲಿಯೇ ಅಲ್ಲವೆ, ಭೂತವೆಲ್ಲ ನೆಲಸಿರುವದು?

೩-೧೨-೧) ಎಂದು ಗಾಯತ್ರಿ ಎಂಬ ಛಂದಸ್ಸನ್ನು (ಅಲ್ಲಿ) ಹೇಳಿರುತ್ತದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದನ್ನು ಪರಿಹರಿಸಿಕೊಳ್ಳಬೇಕಾಗಿರುತ್ತದೆ. ಛಂದಸ್ಸನ್ನು ಹೇಳಿರುವದರಿಂದ ಬ್ರಹ್ಮವನ್ನು ಹೇಳಿಲ್ಲ ಎಂದು ಹೇಳುವದಕ್ಕೆ ಹೇಗೆ ಆದೀತು? "ಇದರ ಮಹಿಮೆಯು ಅಷ್ಟು" (ಛಾಂ. ೩-೧೨-೬) ಎಂಬ ಋಕ್ಕಿನಲ್ಲಿ ನಾಲ್ಕುಪಾದದ ಬ್ರಹ್ಮವನ್ನು (ಹೇಳಿದೆ ಎಂದು ಸಿದ್ಧಾಂತಿಯು) ತೋರಿಸಿದ್ದನಲ್ಲ! ಎಂದು (ಯಾರಾದರೂ) ಕೇಳಿದರೆ, ಅದು (ಸರಿ) ಯಲ್ಲ. (ಏಕೆಂದರೆ) "ಗಾಯತ್ರಿಯೇ ಈ ಎಲ್ಲಾ ಭೂತವು" ಎಂದು ಗಾಯತ್ರಿಯನ್ನು ಉಪಕ್ರಮಿಸಿ ಆ ಗಾಯತ್ರಿಯನ್ನೇ) ಭೂತ, ಪೃಥಿವಿ, ಶರೀರ, ಹೃದಯ, ವಾಕ್ಕು, ಪ್ರಾಣ –ಎಂಬ ಒಳಭೇದಗಳಾಗಿ ವಿವರಿಸಿ "ಆ ಇದು ನಾಲ್ಕು ಪಾದಗಳುಳ್ಳ ಆರುವಿಧವಾದ ಗಾಯತ್ರಿಯು ; ಇದನ್ನೇ ಋಕ್ಕು ಹೇಳಿರುತ್ತದೆ. ಇದರ ಮಹಿಮೆಯು ಅಷ್ಟು.." (ಛಾಂ. ೩-೧೨-೫, ೬) ಎಂದು ವಿವರಿಸಿದ ಅದೇ ಗಾಯತ್ರಿಯ (ವಿಷಯ) ದಲ್ಲಿ ಉದಾಹರಿಸಿರುವ ಮಂತ್ರವು ತಟ್ಟನೆ ನಾಲ್ಕು ಪಾದದ ಬ್ರಹ್ಮವನ್ನು ಹೇಗೆತಾನೆ ಹೇಳೀತು? ಇನ್ನು ಅಲ್ಲಿ "ಆ ಬ್ರಹ್ಮ ಎಂಬುದಿದೆಯಲ್ಲ . . ." (ಛಾಂ. ೩-೧೨-೭) ಎಂದು ಬ್ರಹ್ಮಶಬ್ದವನ್ನುಪಯೋಗಿಸಿದೆಯಷ್ಟೆ, ಅದೂ (ಇಲ್ಲಿ) ಛಂದಸ್ಸು ಪ್ರಕೃತವಾಗಿರುವದರಿಂದ ಛಂದಸ್ಸಿನ ವಿಷಯವಾದದ್ದೇ. "ಯಾವನು ಈ ಬ್ರಹ್ಮೋಪನಿಷತ್ತನ್ನು ಹೀಗೆಂದು ಅರಿತಿರುವನೋ . . ." (ಛಾಂ. ೩-೧೧-೩) ಎಂಬಲ್ಲಿ (ಯಾವನು) ವೇದೋಪನಿಷತ್ತನ್ನು (ಬಲ್ಲವನಾಗಿರುವನೋ) ಎಂದಲ್ಲವೆ, ವ್ಯಾಖ್ಯಾನಮಾಡುತ್ತಾರೆ? [1] ಆದ್ದರಿಂದ ಛಂದಸ್ಸನ್ನು (ಹಿಂದಿನ ವಾಕ್ಯದಲ್ಲಿ) ಹೇಳಿರುವದರಿಂದ ಬ್ರಹ್ಮವು ಪ್ರಕೃತವಾಗಿಲ್ಲ.

---

ಇದನ್ನು ಮೀರಿರುವದಿಲ್ಲ. (೩) ಆ ಪೃಥ್ವಿಯಿದೆಯಲ್ಲ, ಅದು ಈ ಪುರುಷನಲ್ಲಿರುವ ಶರೀರವು; ಇದರಲ್ಲಲ್ಲವೆ, ಈ ಪ್ರಾಣಗಳು ನೆಲಸಿರುವದು ? ಇದನ್ನೇ ಮೀರದೆ ಇರುವವು. (೪) ಪುರುಷನಲ್ಲಿರುವ ಶರೀರಗಳಿವೆಯಲ್ಲ, ಪುರುಷನೊಳಗಿನ ಹೃದಯವೇ ಅದು ; ಇದರಲ್ಲಲ್ಲವೆ, ಈ ಪ್ರಾಣಗಳು ನೆಲಸಿವೆ? ಇದನ್ನು ಮೀರದೆ ಇರುತ್ತವೆ. (೫) ಆ ಇದು ನಾಲ್ಕು ಪದಗಳುಳ್ಳ ಆರು ಬಗೆಯ ಗಾಯತ್ರಿಯು ಇದನ್ನು (ಈ) ಋಕ್ಕು ತಿಳಿಯಪಡಿಸಿದೆ: ಇದರ ಮಹಿಮೆಯು ಅಷ್ಟು, ಪುರುಷನು ಅದಕ್ಕಿಂತ ದೊಡ್ಡವನು. ಎಲ್ಲಾ ಭೂತಗಳು ಈತನ ಪಾದವು, ಈತನ ಅಮೃತವಾದ ಮೂರು ಪಾದವು ದ್ಯುಲೋಕದಲ್ಲಿ (೬,೭,೮,೯). ಆ ಬ್ರಹ್ಮ ಎಂಬುದಿದೆಯಲ್ಲ, ಅದು ಪುರುಷನ ಹೊರಗಿನ ಈ ಆಕಾಶವೇ. ಈ ಪುರುಷನ ಹೊರಗಿನ ಆಕಾಶವಿದೆಯಲ್ಲ, ಅದು ಪುರುಷನೊಳಗಿನ ಈ ಆಕಾಶವೇ. ಪುರುಷನೊಳಗಿನ ಈ ಆಕಾಶವಿದೆಯಲ್ಲ, ಅದು ಹೃದಯದೊಳಗಿನ ಆಕಾಶವೇ; ಇದು ಪೂರ್ಣವು, ಅಪ್ರವರ್ತಿ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಪೂರ್ಣವಾದ ಅಪ್ರವರ್ತಿಯಾದ ಶ್ರೀಯನ್ನು ಪಡೆಯುವನು.

1 ಅಲ್ಲಿ ಬ್ರಹ್ಮ ಎಂಬ ಮಾತಿದ್ದರೂ ಬ್ರಹ್ಮವೆಂದು ಅರ್ಥಮಾಡದೆ ಇರುವದಕ್ಕೆ ಋಗಾದಿವೇದಗಳ ವಿಷಯವು ಪ್ರಕೃತವಾಗಿರುವದೇ ಕಾರಣ. ಇಲ್ಲಿಯೂ ಛಂದಸ್ಸು ಪ್ರಕೃತವಾಗಿರುವದರಿಂದ ಬ್ರಹ್ಮವೆಂದರೆ ಗಾಯತ್ರಿಯೇ.

# ಸಿದ್ಧಾಂತ: ಹಿಂದೆ ಗಾಯತ್ರಿಯ ದ್ವಾರದಿಂದ ಬ್ರಹ್ಮವನ್ನೇ ಹೇಳಿದೆ

( ಭಾಷ್ಯ )

೧೩೧. ನೈಷ ದೋಷಃ । " ತಥಾ ಚೇತೋಽರ್ಪಣನಿಗದಾತ್ " ತಥಾ ಗಾಯತ್ರ್ಯಾಖ್ಯಚ್ಛನ್ದೋದ್ವಾರೇಣ ತದನುಗತೇ ಬ್ರಹ್ಮಣಿ ಚೇತಸಃ ಅರ್ಪಣಂ ಚಿತ್ತಸಮಾಧಾನಮ್ ಅನೇನ ಬ್ರಾಹ್ಮಣವಾಕ್ಯೇನ ನಿಗದ್ಯತೇ " ಗಾಯತ್ರೀ ವಾ ಇದಂ ಸರ್ವಮ್ '' ಇತಿ । ನ ಹಿ ಅಕ್ಷರಸಂನಿವೇಶಮಾತ್ರಾಯಾ ಗಾಯತ್ರ್ಯಾಃ ಸರ್ವಾತ್ಮಕತ್ವಂ ಸಂಭವತಿ । ತಸ್ಮಾತ್ ಯತ್ ಗಾಯತ್ರ್ಯಾಖ್ಯವಿಕಾರೇ ಅನುಗತಂ ಜಗತ್ಕಾರಣಂ ಬ್ರಹ್ಮ ತದಿಹ ಸರ್ವಮ್ ಇತ್ಯುಚ್ಯತೇ । ಯಥಾ " ಸರ್ವಂ ಖಲ್ವಿದಂ ಬ್ರಹ್ಮ '' (ಛಾಂ. ೩-೧೪-೧) ಇತಿ । ಕಾರ್ಯಂ ಚ ಕಾರಣಾತ್ ಅವ್ಯತಿರಿಕ್ತಮ್ ಇತಿ ವಕ್ಷ್ಯಾಮಃ " ತದನನ್ಯತ್ವಮ್ ಆರಮ್ಭಣಶಬ್ದಾದಿಭ್ಯಃ '' (೨-೧-೧೪) ಇತ್ಯತ್ರ । ತಥಾ ಅನ್ಯತ್ರಾಪಿ ವಿಕಾರದ್ವಾರೇಣ ಬ್ರಹ್ಮಣ ಉಪಾಸನಂ ದೃಶ್ಯತೇ " ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸನ್ತ ಏತಮಗ್ನಾವಧ್ವರ್ಯವ ಏತಂ ಮಹಾವ್ರತೇ ಛನ್ದೋಗಾಃ " (ಐ. ಆ. ೩-೨-೩) ಇತಿ । ತಸ್ಮಾತ್ ಅಸ್ತಿ ಛನ್ದೋಽಭಿಧಾನೇಽಪಿ ಪೂರ್ವಸ್ಮಿನ್ ವಾಕ್ಯೇ ಚತುಷ್ಪಾತ್ ಬ್ರಹ್ಮ ನಿರ್ದಿಷ್ಟಮ್ । ತದೇವ ಜ್ಯೋತಿರ್ವಾಕ್ಯೇಽಪಿ ಪರಾಮೃಶ್ಯತೇ ಉಪಾಸನಾನ್ತರವಿಧಾನಾಯ ॥

(ಭಾಷ್ಯಾರ್ಥ)

ಇದು (ನಮ್ಮ ಪಕ್ಷದಲ್ಲಿ) ದೋಷವಲ್ಲ; ಏಕೆಂದರೆ '' ಹಾಗೆ ಚಿತ್ತವನ್ನು ಅರ್ಪಣಮಾಡಬೇಕೆಂದು ಹೇಳಿದೆ.'' ಹಾಗೆ ಎಂದರೆ ಗಾಯತ್ರಿ ಎಂಬ ಛಂದಸ್ಸಿನ ದ್ವಾರದಿಂದ ಅದರಲ್ಲಿ ಅನುಗತವಾಗಿರುವ ಬ್ರಹ್ಮದಲ್ಲಿ ಚಿತ್ತವನ್ನು ಅರ್ಪಣಮಾಡಬೇಕೆಂದು " ಗಾಯತ್ರಿಯೇ ಈ ಎಲ್ಲ (ಭೂತವು) '' ಎಂಬೀ ಬ್ರಾಹ್ಮಣವಾಕ್ಯದಿಂದ ಹೇಳಿದೆ. ಅಕ್ಷರಗಳ ಗುಂಪು ಮಾತ್ರವೇ ಆಗಿರುವ ಗಾಯತ್ರಿಯು ಸರ್ವಾತ್ಮಕವಾಗಿರುವದೆಂಬುದು ಹೊಂದುವಹಾಗಿಲ್ಲವಷ್ಟೆ ? ಆದ್ದರಿಂದ ಗಾಯತ್ರಿ ಎಂಬ ಕಾರ್ಯದಲ್ಲಿ ಅನುಗತವಾಗಿರುವ ಜಗತ್ಕಾರಣವಾದ ಬ್ರಹ್ಮ(ವಿದೆ)ಯಲ್ಲ, ಅದನ್ನೇ ಇಲ್ಲಿ ' ಎಲ್ಲವೂ ' ಎಂದಿರುತ್ತದೆ. ಹೇಗೆ " ಇದೆಲ್ಲವೂ ಬ್ರಹ್ಮವಲ್ಲವೆ ? " (ಛಾಂ. ೩-೧೪-೧) ಎಂದು (ಹೇಳಿದೆಯೋ ಹಾಗೆಯೇ ಇದು).[1] ಕಾರ್ಯವು

---

1 ಇದು ಎಂದರೆ ಪ್ರಪಂಚವು. ಕಾರ್ಯವಾದ ಪ್ರಪಂಚದ ದ್ವಾರವಾಗಿ ಕಾರಣವಾದ ಬ್ರಹ್ಮವನ್ನು ತಿಳಿಸಿ ಉಪಾಸನೆಯನ್ನು ವಿಧಿಸಿರುವ ವಾಕ್ಯವಿದು.

ಕಾರಣಕ್ಕಿಂತ ಬೇರೆಯಲ್ಲ ಎಂದು "ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ" (೨-೧-೧೪) ಎಂಬಲ್ಲಿ ಹೇಳುವೆವು.

ಹೀಗೆ ಬೇರೆಯ (ಶ್ರುತಿ) ಯಲ್ಲಿಯೂ ಕಾರ್ಯದ ದ್ವಾರದಿಂದ ಬ್ರಹ್ಮದ ಉಪಾಸನೆಯನ್ನು (ವಿಧಿಸಿರುವದು) ಕಂಡುಬರುತ್ತದೆ. (ಹೇಗೆಂದರೆ): "ಈತನನ್ನೇ ಬಹ್ವೃಚರು ದೊಡ್ಡದಾದ ಉಕ್ಥ(ವೆಂಬ ಶಸ್ತ್ರ)ದಲ್ಲಿ ಉಪಾಸನೆಮಾಡುತ್ತಾರೆ; ಈತನನ್ನೇ ಅಧ್ವರ್ಯುಗಳು ಅಗ್ನಿಯಲ್ಲಿ (ಉಪಾಸನೆ ಮಾಡುತ್ತಾರೆ), ಈತನನ್ನೇ ಮಹಾವ್ರತ (ವೆಂಬ ಕ್ರತುವಿ)ನಲ್ಲಿ ಛಂದೋಗರು (ಉಪಾಸನೆ ಮಾಡುತ್ತಾರೆ)" (ಐ. ಆ. ೩-೨-೩) ಎಂದು ಹೇಳಿದೆ.

ಆದ್ದರಿಂದ ಹಿಂದಿನ ವಾಕ್ಯದಲ್ಲಿ ಛಂದಸ್ಸನ್ನೇ ಹೇಳಿದ್ದರೂ ನಾಲ್ಕು ಪಾದಗಳನ್ನುಳ್ಳ ಬ್ರಹ್ಮವನ್ನು ತಿಳಿಸಿದೆ (ಎನ್ನಬೇಕು). ಅದೇ(ಬ್ರಹ್ಮವನ್ನೇ ಈ) ಜ್ಯೋತಿರ್ವಾಕ್ಯದಲ್ಲಿಯೂ ಬೇರೊಂದು ಉಪಾಸನೆಯನ್ನು ವಿಧಿಸುವದಕ್ಕಾಗಿ ಪರಾಮರ್ಶಿಸಿದೆ (ಎಂದದ್ದು ಸರಿಯೇ).

## ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ

(ಭಾಷ್ಯ)

೧೩೨. ಅಪರ ಆಹ—ಸಾಕ್ಷಾದೇವ ಗಾಯತ್ರೀಶಬ್ದೇನ ಬ್ರಹ್ಮ ಪ್ರತಿಪಾದ್ಯತೇ, ಸಂಖ್ಯಾಸಾಮಾನ್ಯಾತ್ । ಯಥಾ ಗಾಯತ್ರೀ ಚತುಷ್ಪದಾ ಷಡಕ್ಷರೈಃ ಪಾದೈಃ, ತಥಾ ಬ್ರಹ್ಮ ಚತುಷ್ಪಾತ್ । ತಥಾ ಅನ್ಯತ್ರಾಪಿ ಛನ್ದೋಽಭಿಧಾಯೀ ಶಬ್ದಃ ಅರ್ಥಾನ್ತರೇ ಸಂಖ್ಯಾಸಾಮಾನ್ಯಾತ್ ಪ್ರಯುಜ್ಯಮಾನೋ ದೃಶ್ಯತೇ । ತದ್ ಯಥಾ "ತೇ ವಾ ಏತೇ ಪಞ್ಚಾನ್ಯೇ ಪಞ್ಚಾನ್ಯೇ ದಶ ಸನ್ತಸ್ತತ್ಕೃತಮ್" ಇತ್ಯುಪಕ್ರಮ್ಯ ಆಹ—"ಸೈಷಾ ವಿರಾಡನ್ನಾದೀ" (ಛಾಂ. ೪-೩-೮) ಇತಿ । ಅಸ್ಮಿನ್ ಪಕ್ಷೇ ಬ್ರಹ್ಮೈವ ಅಭಿಹಿತಮಿತಿ ನ ಛನ್ದೋಽಭಿಧಾನಮ್ । ಸರ್ವಥಾಪಿ ಅಸ್ತಿ ಪೂರ್ವಸ್ಮಿನ್ ವಾಕ್ಯೇ ಪ್ರಕೃತಂ ಬ್ರಹ್ಮ ॥

(ಭಾಷ್ಯಾರ್ಥ)

**ಮತ್ತೊಬ್ಬರು** (ಈ ಸೂತ್ರಕ್ಕೆ) ಹೇಳುವ (ಅರ್ಥ)ವೇನೆಂದರೆ: ಗಾಯತ್ರಿ ಎಂಬ ಶಬ್ದದಿಂದ ನೇರಾಗಿಯೇ[1] ಬ್ರಹ್ಮವನ್ನು ಹೇಳಿದೆ, ಏಕೆಂದರೆ (ಇವೆರಡಕ್ಕೂ) ಸಂಖ್ಯೆಯು ಸಮಾನವಾಗಿರುತ್ತದೆ. (ಹೇಗೆಂದರೆ) ಹೇಗೆ ಗಾಯತ್ರಿಯು ಆರು ಅಕ್ಷರದ ಪಾದಗಳಿಂದ ನಾಲ್ಕು ಪಾದಗಳುಳ್ಳದ್ದಾಗಿರುವದೋ, ಹಾಗೆ

---

1 ಕಾರ್ಯವನ್ನು ದ್ವಾರವಾಗಿ ಉಪಯೋಗಿಸದೆಯೇ ಗಾಯತ್ರಿ ಎಂಬ ಶಬ್ದವನ್ನು ಗೌಣವೃತ್ತಿಯಿಂದ ಬ್ರಹ್ಮಕ್ಕೇ ಉಪಯೋಗಿಸಿದೆ ಎಂದರ್ಥ.

ಬ್ರಹ್ಮವೂ ನಾಲ್ಕು ಪಾದಗಳುಳ್ಳದ್ದಾಗಿದೆ.[1] ಇದರಂತೆ ಬೇರೆಯ (ಕಡೆ)ಯಲ್ಲಿಯೂ ಛಂದಸ್ಸನ್ನು ಹೇಳುವ ಶಬ್ದವನ್ನು ಮತ್ತೊಂದು ಪದಾರ್ಥ(ವನ್ನು ತಿಳಿಸುವದಕ್ಕೆ) ಸಂಖ್ಯೆಯು ಸಮಾನ(ವೆಂಬ ಕಾರಣದಿಂದ) ಪ್ರಯೋಗಿಸಿರುವದು ಕಂಡುಬರುತ್ತದೆ. ಅದು ಹೇಗೆಂದರೆ "ಆ ಇವು (ಈ) ಬೇರೆಯ ಐದು, (ಆ) ಬೇರೆಯ ಐದು (ಹೀಗೆ) ಹತ್ತಾಗುವದರಿಂದ ಅದು ಕೃತವು" ಎಂದು ಉಪಕ್ರಮಿಸಿ "ಇದು ಅನ್ನವನ್ನು ಭಕ್ಷಿಸುವ ವಿರಾಟ್" (ಛಾಂ. ೪-೩-೮)ಎಂದು (ಶ್ರುತಿಯು) ಹೇಳಿರುತ್ತದೆ.[2] ಈ ಪಕ್ಷದಲ್ಲಿ[3] ಬ್ರಹ್ಮವನ್ನೇ ಹೇಳಿರುತ್ತದೆ[4]ಯಾದ್ದರಿಂದ ಛಂದಸ್ಸನ್ನು ಹೇಳಿರುವದಿಲ್ಲ.

ಹೇಗೇ ಆಗಲಿ, ಹಿಂದಿನ ವಾಕ್ಯದಲ್ಲಿ ಬ್ರಹ್ಮವು ಪ್ರಕೃತವಾಗಿರುತ್ತದೆ.[5]

---

1 ಇಪ್ಪತ್ತುನಾಲ್ಕು ಅಕ್ಷರವುಳ್ಳ ಗಾಯತ್ರಿಯು ಆರಾರು ಅಕ್ಷರಗಳ ನಾಲ್ಕು ಪಾದಗಳುಳ್ಳದ್ದಾಗಿದೆ; ಬ್ರಹ್ಮವೂ ಭೂತವೇ ಮುಂತಾದ ನಾಲ್ಕು ಪಾದಗಳುಳ್ಳದ್ದಾಗಿದೆ. ಆದ್ದರಿಂದ ಬ್ರಹ್ಮವನ್ನು ಗಾಯತ್ರಿ ಎಂದು ಕರೆದಿದೆ. ದೇವದತ್ತನು ಸಿಂಹವು ಎಂಬಲ್ಲಿ ಕ್ರೌರ್ಯಾದಿಗುಣಸಾಮ್ಯದಿಂದ ಸಿಂಹಶಬ್ದವನ್ನು ಮನುಷ್ಯನನ್ನು ತಿಳಿಸುವದಕ್ಕೆ ಉಪಯೋಗಿಸಿರುವಂತೆಯೇ ಇದು ಎಂದು ಭಾವ.

2 **ಸಂವರ್ಗವಿದ್ಯೆ**ಯಲ್ಲಿ ವಾಯುವಿನಲ್ಲಿ ಲಯವಾಗುವ ಅಗ್ನ್ಯಾದಿಗಳು ನಾಲ್ಕು, ಪ್ರಾಣದಲ್ಲಿ ಲಯವಾಗುವ ವಾಗಾದಿಗಳು ನಾಲ್ಕು-ಇವುಗಳನ್ನು ವಾಯ್ವಾದಿಪಂಚಕ, ಪ್ರಾಣಾದಿಪಂಚಕ ಎಂದು ಎರಡು ಐದುಗಳಾಗಿ ಭಾವಿಸಿದರೆ **ಕೃತ**ವೆಂಬ ಗರವಾಗುತ್ತದೆ. ಕೃತದಲ್ಲಿ ನಾಲ್ಕು ಅಂಕಗಳಿರುವವು. ಆ ಅಂಕವು ಬಿದ್ದರೆ ತ್ರೇತೆ (೩), ದ್ವಾಪರ (೨), ಕಲಿ (೧) ಎಂಬ ಗರಗಳ ಅಂಕಗಳೂ ಸೇರಿ ಹತ್ತಾಗುವವು. ವಿರಾಟ್ಛಂದಸ್ಸಿನಲ್ಲಿ ಹತ್ತಕ್ಷರಗಳಿರುವಂತೆ ವಾಯ್ವಾದಿಗಳ ಒಟ್ಟು ಸಂಖ್ಯೆ ಹತ್ತಾಗಿರುವದರಿಂದ ಅದೂ ವಿರಾಟ್; ವಿರಾಟ್ ಎಂಬುದು ಅನ್ನವೆಂದು ಶ್ರುತಿ. ಕೃತದಲ್ಲಿ ಹತ್ತು ಸಂಖ್ಯೆಯು ಸೇರಿಕೊಂಡಿರುವಂತೆ ಈ ಒಟ್ಟಿನಲ್ಲಿ ಹತ್ತು ಸೇರಿರುವದರಿಂದ ಇದು ಅನ್ನಾದಿಯಾಗಿರುತ್ತದೆ. ಹೀಗೆ ಅನ್ನವಾಗಿಯೂ ಅನ್ನಾದಿಯಾಗಿಯೂ ವಾಯ್ವಾದಿಗಳನ್ನು ಉಪಾಸನೆಮಾಡಬೇಕು ಎಂದು ಶ್ರುತಿಯ ಅಭಿಪ್ರಾಯ. ಇಲ್ಲಿ ವಿರಾಟ್ ಎಂಬ ಛಂದೋವಾಚಕವನ್ನು ಸಂಖ್ಯೆಯ ಸಾಮಾನ್ಯದಿಂದ ವಾಯ್ವಾದಿಗಳ ಒಟ್ಟಿಗೆ ಉಪಯೋಗಿಸಿರುವಂತೆ ಗಾಯತ್ರೀಶಬ್ದವನ್ನು ಬ್ರಹ್ಮಕ್ಕೆ ಉಪಯೋಗಿಸಿದೆ ಎಂದು ಭಾಷ್ಯವಾಕ್ಯದ ಅರ್ಥ.

3 ಈ ಪಕ್ಷದಲ್ಲಿ ಕೆಲವು ದೋಷಗಳನ್ನು ತೋರಿಸಿ ಭಾಷ್ಯಕಾರರು 'ಅಪರ' ಎಂಬ ಮಾತಿನಿಂದ ಇದು ತಮ್ಮ ಮತವಲ್ಲವೆಂದು ಸೂಚಿಸಿದಾರೆ ಎಂದು **ರತ್ನಪ್ರಭಾವ್ಯಾಖ್ಯಾನ**. ಇದಕ್ಕೆ ಭಾಷ್ಯದಲ್ಲಿ ಆಧಾರವು ಕಾಣುವದಿಲ್ಲ.

4 ಇಲ್ಲಿ ಅಭಿಹಿತ ಎಂಬ ಮಾತಿದ್ದರೂ ವಾಚ್ಯವೆಂದು ಅರ್ಥವಲ್ಲ. ವಾಕ್ಯವು ಬ್ರಹ್ಮಪರವೆಂದಿಷ್ಟೇ ಅಭಿಪ್ರಾಯ. ಗಾಯತ್ರೀಶಬ್ದವನ್ನು ಅದಕ್ಕೂ ಬ್ರಹ್ಮಕ್ಕೂ ಸಾಮ್ಯವನ್ನು ಸೂಚಿಸುವದಕ್ಕೆ ಉಪಯೋಗಿಸದೆ ಎಂದು ಆಶಯ.

5. ಮೊದಲನೆಯ ಪಕ್ಷದಂತೆ ಲಕ್ಷಣಾವೃತ್ತಿಯಿಂದಲೂ ಎರಡನೆಯ ಪಕ್ಷದಂತೆ ಗೌಣವೃತ್ತಿಯಿಂದಲೂ ಗಾಯತ್ರೀಶಬ್ದವು ಬ್ರಹ್ಮವನ್ನು ತಿಳಿಸುತ್ತದೆಯಾದ್ದರಿಂದ ಇಲ್ಲಿ ಛಂದಸ್ಸನ್ನು ಹೇಳುವದಕ್ಕೆ ಬಂದಿಲ್ಲ ಎಂದು ಭಾವ.

# ಭೂತಾದಿಗಳು ಪಾದಗಳೆಂಬುದು ಬ್ರಹ್ಮಕ್ಕೇ ಹೊಂದುತ್ತದೆ

**ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್ ॥ ೨೬ ॥**

೧೬. ಭೂತಾದಿಪಾದಗಳನ್ನು ಹೇಳಿರುವದು ಹೊಂದುವದರಿಂದಲೂ ಹೀಗೆ.

(ಭಾಷ್ಯ)

೧೩೩. ಇತಶ್ಚ ಏವಮ್ ಅಭ್ಯುಪಗನ್ತವ್ಯಮಸ್ತಿ ಪೂರ್ವಸ್ಮಿನ್ ವಾಕ್ಯೇ ಪ್ರಕೃತಂ ಬ್ರಹ್ಮ ಇತಿ । ಯತಃ ಭೂತಾದೀನ್ ಪಾದಾನ್ ವ್ಯಪದಿಶತಿ । ಭೂತಪೃಥಿವೀ-ಶರೀರಹೃದಯಾನಿ ಹಿ ನಿರ್ದಿಶ್ಯ ಆಹ—"ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ" (ಛಾಂ. ೩-೧೨-೫) ಇತಿ । ನ ಹಿ ಬ್ರಹ್ಮಾನಾಶ್ರಯಣೇ ಕೇವಲಸ್ಯ ಛನ್ದಸಃ ಭೂತಾದಯಃ ಪಾದಾ ಉಪಪದ್ಯನ್ತೇ । ಅಪಿ ಚ ಬ್ರಹ್ಮಾನಾಶ್ರಯಣೇ ನೇಯಮ್ ಋಕ್ ಸಂಬಧ್ಯೇತ "ತಾವಾನಸ್ಯ" (ಛಾಂ. ೩-೧೨-೬) ಇತಿ । ಅನಯಾ ಹಿ ಋಚಾ ಸ್ವರಸೇನ ಬ್ರಹ್ಮೈವ ಅಭಿಧೀಯತೇ "ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" (ಛಾಂ. ೩-೧೨-೫) ಇತಿ ಸರ್ವಾತ್ಮತ್ವೋಪಪತ್ತೇಃ । ಪುರುಷಸೂಕ್ತೇಽಪಿ ಇಯಮ್ ಋಕ್ ಬ್ರಹ್ಮಪರತಯೈವ ಸಮಾಮ್ನಾಯತೇ । ಸ್ಮೃತಿಶ್ಚ ಬ್ರಹ್ಮಣ ಏವಂರೂಪತಾಂ ದರ್ಶಯತಿ "ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್" (ಗೀ. ೧೦-೪೨) ಇತಿ । "ಯದ್ವೈ ತದ್ಬ್ರಹ್ಮ" (ಛಾಂ. ೩-೧೨-೭) ಇತಿ ಚ ನಿರ್ದೇಶ ಏವಂ ಸತಿ ಮುಖ್ಯಾರ್ಥಃ ಉಪಪದ್ಯತೇ । "ಪಞ್ಚ ಬ್ರಹ್ಮಪುರುಷಾಃ" (ಛಾಂ. ೩-೧೩-೬) ಇತಿ ಚ ಹೃದಯ-ಸುಷಿಷು ಬ್ರಹ್ಮಪುರುಷಶ್ರುತಿಃ ಬ್ರಹ್ಮಸಂಬನ್ಧಿತಾಯಾಂ ವಿವಕ್ಷಿತಾಯಾಂ ಸಂಭವತಿ। ತಸ್ಮಾತ್ ಅಸ್ತಿ ಪೂರ್ವಸ್ಮಿನ್ ವಾಕ್ಯೇ ಬ್ರಹ್ಮ ಪ್ರಕೃತಮ್ । ತದೇವ ಬ್ರಹ್ಮ ಜ್ಯೋತಿರ್ವಾಕ್ಯೇ ದ್ಯುಸಂಬನ್ಧಾತ್ ಪ್ರತ್ಯಭಿಜ್ಞಾಯಮಾನಂ ಪರಾಮೃಶ್ಯತೇ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಹೀಗೆಂದು, ಹಿಂದಿನ ವಾಕ್ಯದಲ್ಲಿ ಬ್ರಹ್ಮವು ಪ್ರಸ್ತುತ ವಾಗಿದೆ ಎಂದು, ಒಪ್ಪಬೇಕು. ಏತಕ್ಕೆಂದರೆ, (ಅಲ್ಲಿ) ಭೂತಗಳೇ ಮುಂತಾದ ಪಾದಗಳನ್ನು (ಶ್ರುತಿಯು) ಹೇಳಿರುತ್ತದೆ. ಭೂತ, ಪೃಥಿವಿ, ಶರೀರ, ಹೃದಯ

ಇವುಗಳನ್ನು ತಿಳಿಸಿ "ಆ ಇದು ನಾಲ್ಕು ಪಾದಗಳುಳ್ಳ ಆರು ಬಗೆಯ ಗಾಯತ್ರಿ" (ಛಾಂ. ೩-೧೨-೫) ಎಂದಲ್ಲವೆ, (ಶ್ರುತಿಯು) ಹೇಳಿರುತ್ತದೆ? (ಇಲ್ಲಿ ಗಾಯತ್ರಿ ಎಂದರೆ) ಬ್ರಹ್ಮವೆಂದಿಟ್ಟುಕೊಳ್ಳದೆ ಇದ್ದರೆ ಬರಿಯ (ಗಾಯತ್ರೀ)ಛಂದಸ್ಸಿಗೆ ಭೂತಗಳೇ ಮುಂತಾದವು ಪಾದಗಳೆಂಬುದು ಹೊಂದಲೇ ಆರದು.

ಇದಲ್ಲದೆ (ಇದು) ಬ್ರಹ್ಮವೆಂದು ಇಟ್ಟುಕೊಳ್ಳದಿದ್ದರೆ "ಇಷ್ಟು ಈತನ (ಮಹಿಮೆಯು)" (ಛಾಂ. ೩-೧೨-೬) ಎಂಬೀ ಋಕ್ಕು ಸಂಬದ್ಧವಾಗುವದಿಲ್ಲ. ಏಕೆಂದರೆ ಈ ಋಕ್ಕಿನಿಂದ ಸ್ವರಸದಿಂದ ಬ್ರಹ್ಮವೇ ಉಕ್ತವಾಗಿರುತ್ತದೆ, (ಎಂದರೆ) "ಈತನಿಗೆ ಸರ್ವಭೂತಗಳೂ (ಒಂದು) ಪಾದವು, ಈತನ ಅಮೃತವಾದ ಮೂರುಪಾದವು ದ್ಯು(ಲೋಕ)ದಲ್ಲಿ (ರುವದು)" (ಛಾಂ. ೩-೧೨-೫) ಎಂದು ಹೇಳಿರುವ ಸರ್ವಾತ್ಮತ್ವವು ಹೊಂದುಗಡೆಯಾಗುತ್ತದೆ. **ಪುರುಷಸೂಕ್ತ**ದಲ್ಲಿಯೂ ಈ ಋಕ್ಕನ್ನು ಬ್ರಹ್ಮಪರವಾಗಿಯೇ ಹೇಳಿರುತ್ತದೆ. ಬ್ರಹ್ಮವು ಈ ರೂಪವುಳ್ಳದ್ದೆಂದು "ಈ ಜಗತ್ತೆಲ್ಲವನ್ನೂ ನಾನು ಒಂದಂಶದಿಂದ ಎತ್ತಿಹಿಡಿದುಕೊಂಡಿರುವೆನು" (ಗೀ. ೧೦-೪೨) ಎಂಬ ಸ್ಮೃತಿಯೂ ತಿಳಿಸುತ್ತದೆ. "ಈ ಬ್ರಹ್ಮವೆಂಬುದಿದೆಯಲ್ಲ, ........" (ಛಾಂ. ೩-೧೨-೭) ಎಂಬ (ಶ್ರುತಿಯ) ನಿರ್ದೇಶವೂ ಹೀಗೆಂದು (ಇಟ್ಟುಕೊಂಡರೆ) ಮುಖ್ಯಾರ್ಥದಲ್ಲಿ[1] ಹೊಂದುಗಡೆಯಾಗುವದು. "ಐದು (ಜನ) ಬ್ರಹ್ಮಪುರುಷರು" (ಛಾಂ. ೩-೧೩-೬) ಎಂದು ಹೃದಯದ ಬಿಲಗಳನ್ನು (ತಿಳಿಸುವದಕ್ಕೆ) ಬ್ರಹ್ಮಪುರುಷರು (ಎಂಬ) ಮಾತನ್ನುಪಯೋಗಿಸಿರುವ ಶ್ರುತಿಯು[2] (ಅವು) ಬ್ರಹ್ಮಕ್ಕೆ ಸಂಬಂಧ(ಪಟ್ಟಿರುವವೆಂಬ) ವಿವಕ್ಷೆಯಿಂದಲೇ ಹೊಂದುತ್ತದೆ.

ಆದ್ದರಿಂದ ಹಿಂದಿನ ವಾಕ್ಯದಲ್ಲಿ ಬ್ರಹ್ಮವು ಪ್ರಕೃತವಾಗಿರುತ್ತದೆ (ಈ) ಜ್ಯೋತಿರ್ವಾಕ್ಯದಲ್ಲಿಯೂ ದ್ಯು(ಲೋಕ) ಸಂಬಂಧವಿರುವದರಿಂದ ಅದೇ (ಬ್ರಹ್ಮವೆಂದು) ಗೊತ್ತುಮಾಡಬಹುದಾದ್ದರಿಂದ (ಅದನ್ನು 'ಯಾವ' ಎಂಬ ಸರ್ವನಾಮದಿಂದ) ಪರಾಮರ್ಶಿಸಿರುತ್ತದೆ ಎಂದು ನಿಶ್ಚಯವಾಯಿತು.

1 ಮುಖ್ಯಾರ್ಥವು ಹೊಂದುವಲ್ಲಿ ಗೌಣಾರ್ಥವನ್ನು ಒಪ್ಪುವದು ಅನ್ಯಾಯವೆಂದು ಭಾವ.

2 ಹೃದಯಕ್ಕೆ ಐದು ರಂಧ್ರಗಳಿವೆ. ಸ್ವರ್ಗದ್ವಾರಗಳಾಗಿರುವ ಅವುಗಳನ್ನು ಪ್ರಾಣವೇ ಮುಂತಾದ ದೇವತೆಗಳು ಕಾದುಕೊಂಡಿರುವದರಿಂದ ಅವು ದೇವಸುಷಿಗಳು. ಇವು ಹೃದಯದಲ್ಲಿರುವ ಬ್ರಹ್ಮಕ್ಕೆ ಸಂಬಂಧಪಟ್ಟಿರುವದರಿಂದ ಬ್ರಹ್ಮಪುರುಷರು—ಎಂದು ಶ್ರುತಿಯಲ್ಲಿ ಹೇಳಿದೆಯೆಂದು ಭಾವ.

# ದ್ಯುಲೋಕಸಂಬಂಧದ ವಾಕ್ಯವು ಪೂರ್ವಾಪರ ವಿರುದ್ಧವಲ್ಲ

**ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ॥ ೨೭ ॥**

೨೭. ಉಪದೇಶಭೇದವಿರುವದರಿಂದ (ಸರಿ)ಯಲ್ಲ, ಎಂದರೆ ಹಾಗಲ್ಲ; ಏಕೆಂದರೆ ಎರಡರಲ್ಲಿಯೂ ವಿರೋಧವಿಲ್ಲ.

(ಭಾಷ್ಯ)

೧೩೪. ಯದಪಿ ಏತದುಕ್ತಮ್—ಪೂರ್ವತ್ರ "ತ್ರಿಪಾದಸ್ಯಾಮೃತಂ ದಿವಿ (ಛಾಂ. ೩-೧೨-೬) ಇತಿ ಸಪ್ತಮ್ಯಾ ದ್ಯೌರಾಧಾರತ್ವೇನೋಪದಿಷ್ಟಾ, ಇಹ ಪುನಃ "ಅಥ ಯದತಃ ಪರೋ ದಿವಃ'' (ಛಾಂ. ೩-೧೩-೭) ಇತಿ ಪಞ್ಚಮ್ಯಾ ಮರ್ಯಾದಾತ್ವೇನ । ತಸ್ಮಾತ್ ಉಪದೇಶಭೇದಾತ್ ನ ತಸ್ಯ ಇಹ ಪ್ರತ್ಯಭಿಜ್ಞಾನಮಸ್ತಿ ಇತಿ, ತತ್ ಪರಿಹರ್ತವ್ಯಮ್ । ಅತ್ರೋಚ್ಯತೇ । ನಾಯಂ ದೋಷಃ । ಉಭಯಸ್ಮಿನ್ನಪಿ ಅವಿರೋಧಾತ್ । ಉಭಯಸ್ಮಿನ್ನಪಿ ಸಪ್ತಮ್ಯನ್ತೇ ಪಞ್ಚಮ್ಯನ್ತೇ ಚೋಪದೇಶೇ ನ ಪ್ರತ್ಯಭಿಜ್ಞಾನಂ ವಿರುಧ್ಯತೇ। ಯಥಾ ಲೋಕೇ ವೃಕ್ಷಾಗ್ರಸಂಬದ್ಧೋಽಪಿ ಶ್ಯೇನಃ ಉಭಯಥಾ ಉಪದಿಶ್ಯಮಾನೋ ದೃಶ್ಯತೇ 'ವೃಕ್ಷಾಗ್ರೇ ಶ್ಯೇನಃ', 'ವೃಕ್ಷಾಗ್ರಾತ್ ಪರತಃ ಶ್ಯೇನ' ಇತಿ ಚ । ಏವಂ ದಿವ್ಯೇವ ಸತ್ ಬ್ರಹ್ಮ 'ದಿವಃ ಪರಮ್' ಇತಿ ಉಪದಿಶ್ಯತೇ । ಅಪರ ಆಹ—ಯಥಾ ಲೋಕೇ ವೃಕ್ಷಾಗ್ರೇಣ ಅಸಂಬದ್ಧೋಽಪಿ ಶ್ಯೇನಃ ಉಭಯಥಾ ಉಪದಿಶ್ಯಮಾನೋ ದೃಶ್ಯತೇ' ವೃಕ್ಷಾಗ್ರೇ ಶ್ಯೇನಃ', 'ವೃಕ್ಷಾಗ್ರಾತ್ ಪರತಃ ಶ್ಯೇನಃ' ಇತಿ ಚ, ಏವಂ ಚ[1] ದಿವಃ ಪರಮಪಿ ಸತ್ ಬ್ರಹ್ಮ 'ದಿವಿ' ಇತಿ ಉಪದಿಶ್ಯತೇ । ತಸ್ಮಾತ್ ಅಸ್ತಿ ಪೂರ್ವನಿರ್ದಿಷ್ಟಸ್ಯ ಬ್ರಹ್ಮಣಃ ಇಹ ಪ್ರತ್ಯಭಿಜ್ಞಾನಮ್। ಅತಃ ಪರಮೇವ ಬ್ರಹ್ಮ ಜ್ಯೋತಿಃಶಬ್ದಮ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಹಿಂದಿನ(ವಾಕ್ಯದಲ್ಲಿ) "ಈತನ ಅಮೃತವಾದ ಮೂರು ಪಾದವು ದ್ಯುಲೋಕದಲ್ಲಿ(ರುತ್ತದೆ)'' (ಛಾಂ. ೩-೧೨-೬) ಎಂದು ಸಪ್ತಮೀ(ವಿಭಕ್ತಿ)ಯಿಂದ ದ್ಯು(ಲೋಕ)ವನ್ನು ಆಧಾರವಾಗಿ ಹೇಳಿತ್ತು; ಆದರೆ ಇಲ್ಲಿ (ಅದನ್ನು) "ಈ ದ್ಯುಲೋಕದಿಂದಾಚೆಗೆ ಯಾವ ಜ್ಯೋತಿಯು'' (ಛಾಂ. ೩-೧೩-೭) ಎಂದು ಪಂಚಮೀ (ವಿಭಕ್ತಿಯಿಂದ) ಎಲ್ಲೆಕಟ್ಟಾಗಿ ಹೇಳಿರುತ್ತದೆ. ಆದ್ದರಿಂದ (ಹೀಗೆ) ಉಪದೇಶ

---

1 ಇಲ್ಲಿ 'ಚ' ಇಲ್ಲದಿದ್ದರೂ ಸಾಗುತ್ತದೆ.

ಭೇದವಿರುವದರಿಂದ ಅದನ್ನು ಇಲ್ಲಿ ಗುರುತಿಸುವದು ಆಗುವದಿಲ್ಲ-ಎಂದು (ಪೂರ್ವ ಪಕ್ಷದಲ್ಲಿ) ಹೇಳಿತ್ತಲ್ಲ, ಅದನ್ನು ಪರಿಹರಿಸಿಕೊಳ್ಳಬೇಕು. ಆ (ವಿಷಯ)ದಲ್ಲಿ (ನಾವು) ಹೇಳುವದೇನೆಂದರೆ, ಇದು ದೋಷವಲ್ಲ. ಏಕೆಂದರೆ ಎರಡು (ರೀತಿ) ಯಲ್ಲಿಯೂ (ಎಂದರೆ) ಸಪ್ತಮ್ಯಂತವಾಗಿ ಮತ್ತು ಪಂಚಮ್ಯಂತವಾಗಿ ಹೇಳಿರುವದರಲ್ಲಿ (ಬ್ರಹ್ಮವನ್ನು) ಗುರುತಿಸುವದಕ್ಕೆ ವಿರೋಧವಾಗಿ (ಏನೂ) ಇರುವದಿಲ್ಲ. ಹೇಗೆ ಲೋಕದಲ್ಲಿ ಮರದ ತುದಿಗೆ ಗಿಡುಗವು ಸೇರಿಕೊಂಡಿದ್ದರೂ (ಅದನ್ನು) 'ಮರದ ತುದಿಯಲ್ಲಿರುವ ಗಿಡುಗ' (ಎಂದೂ) 'ಮರದ ತುದಿಯಿಂದಾಚೆಗೆ ಇರುವ ಗಿಡುಗ' ಎಂದೂ ಎರಡು ರೀತಿಯಲ್ಲಿ ತಿಳಿಸುವದು ಕಂಡುಬರುತ್ತದೆಯೋ, ಹಾಗೆ ದ್ಯುಲೋಕದಲ್ಲಿಯೇ ಇದ್ದರೂ ಬ್ರಹ್ಮವನ್ನು ದ್ಯುಲೋಕದಿಂದಾಚೆಗೆ ಇರುವದೆಂದು ಹೇಳಿರುತ್ತದೆ.

(ಇಲ್ಲಿ) ಇನ್ನೊಬ್ಬರು ಹೇಳುತ್ತಾರೇನೆಂದರೆ, ಹೇಗೆ ಲೋಕದಲ್ಲಿ ಮರದ ತುದಿಗೆ ಸಂಬಂಧಪಡದೆ ಇದ್ದರೂ ಗಿಡುಗನನ್ನು 'ಮರದ ತುದಿಯಲ್ಲಿರುವ ಗಿಡುಗ' (ಎಂದೂ) 'ಮರದ ತುದಿಯಿಂದಾಚೆಗೆ ಇರುವ ಗಿಡುಗ' ಎಂದೂ ಎರಡು ಬಗೆಯಲ್ಲಿ ತಿಳಿಸುವದು ಕಂಡುಬರುತ್ತದೆಯೋ ಹಾಗೆ ದ್ಯುಲೋಕದ ಆಚೆ ಇದ್ದರೂ ಬ್ರಹ್ಮವನ್ನು ದ್ಯುಲೋಕದಲ್ಲಿ(ದೆ) ಎಂದು ಹೇಳಿರುತ್ತದೆ.[1]

ಆದ್ದರಿಂದ ಹಿಂದೆ ತಿಳಿಸಿರುವ ಬ್ರಹ್ಮವನ್ನು ಇಲ್ಲಿ ಗುರುತಿಸಬಹುದು. ಆದ್ದರಿಂದ ಪರಬ್ರಹ್ಮವೇ (ಇಲ್ಲಿ) ಜ್ಯೋತಿಃಶಬ್ದದಿಂದ (ಹೇಳಿರುವದು) ಎಂದು ಸಿದ್ಧವಾಯಿತು.

## ೧೧. ಪ್ರತರ್ದನಾಧಿಕರಣ (೨೮-೩೧)

**(ಕೌಷೀತಕಿಬ್ರಾಹ್ಮಣೋಪನಿಷತ್ತಿನಲ್ಲಿರುವ ಪ್ರಾಣನು ಬ್ರಹ್ಮವೇ)**

**ಪ್ರಾಣಸ್ತಥಾನುಗಮಾತ್** ||೨೮||

೨೮. (ಕೌಷೀತಕ್ಯುಪನಿಷತ್ತಿನ) ಪ್ರಾಣನು ಬ್ರಹ್ಮವೇ, ಏಕೆಂದರೆ ಹಾಗೆ ಅನುಗಮವಿರುತ್ತದೆ.

---

1 **ಮೊದಲನೆಯ ವ್ಯಾಖ್ಯಾನದಲ್ಲಿ** ದ್ಯುಲೋಕದಲ್ಲಿರುವದನ್ನೇ ದ್ಯುಲೋಕದಿಂದಾಚೆಗೆ ಇದೆ ಎಂದು ಹೇಳಿದೆ; ಮರದ ತುದಿಯಲ್ಲಿರುವ ಹಕ್ಕಿಯನ್ನು ಮರದ ತುದಿಯಿಂದಾಚೆಗೆ ಇದೆ ಎಂದು ಹೇಳುವಂತೆ ಈ ಪ್ರಯೋಗವು-ಎಂದು ಪ್ರತಿಪಾದಿಸಿದೆ. ಇಲ್ಲಿ ಬ್ರಹ್ಮವು ದ್ಯುಲೋಕಕ್ಕೆ ಸಂಬಂಧಪಟ್ಟದೆ ಎಂದಂತಾಯಿತು. **ಎರಡನೆಯ ವ್ಯಾಖ್ಯಾನದಲ್ಲಿ** ಪರಮಾರ್ಥದೃಷ್ಟಿಯಿಂದ ನೋಡಿದರೆ ಬ್ರಹ್ಮವು ದ್ಯುಲೋಕಕ್ಕೆ ಸಂಬಂಧಪಟ್ಟಿಲ್ಲವಾದರೂ ಉಪಾಸನಾರ್ಥವಾಗಿ ದ್ಯುಲೋಕಕ್ಕೆ ಸಂಬಂಧಪಟ್ಟಂತೆ ಉಪದಿಷ್ಟವಾಗಿದೆ; ಮರಕ್ಕೆ ಸಂಬಂಧಪಡದೆ ಮರದಮೇಲುಗಡೆ ಇರುವ ಹಕ್ಕಿಯನ್ನು ಮರದ ಮೇಲಿದೆ ಎಂದು ಹೇಳುವಂತೆ ಈ ಪ್ರಯೋಗವು ಎಂದು ಪ್ರತಿಪಾದಿಸಿದೆ.

# ವಿಷಯವಾಕ್ಯವೂ ಸಂಶಯವೂ

(ಭಾಷ್ಯ)

೧೩೫. ಅಸ್ತಿ ಕೌಷೀತಕಿಬ್ರಾಹ್ಮಣೋಪನಿಷದಿ ಇನ್ದ್ರಪ್ರತರ್ದನಾಖ್ಯಾಯಿಕಾ "ಪ್ರತರ್ದನೋ ಹ ವೈ ದೈವೋದಾಸಿರಿನ್ದ್ರಸ್ಯ ಪ್ರಿಯಂ ಧಾಮೋಪಜಗಾಮ ಯುದ್ಧೇನ ಚ ಪೌರುಷೇಣ ಚ" (ಕೌ. ೩-೧) ಇತ್ಯಾರಭ್ಯ ಆಮ್ನಾತಾ ತಸ್ಯಾಂ ಶ್ರೂಯತೇ "ಸ ಹೋವಾಚ ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ಸ್ವ" (ಕೌ. ೩-೨) ಇತಿ | ತಥಾ ಉತ್ತರತ್ರಾಪಿ "ಅಥ ಖಲು ಪ್ರಾಣ ಏವ ಪ್ರಜ್ಞಾತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ" (ಕೌ ೩-೩) ಇತಿ | ತಥಾ "ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್" (ಕೌ ೩-೮) ಇತ್ಯಾದಿ | ಅನ್ತೇ ಚ "ಸ ಏಷ[1] ಪ್ರಾಣ ಏವ ಪ್ರಜ್ಞಾತ್ಮಾನನ್ದೋಽಜರೋಽಮೃತಃ (ಕೌ. ೩-೯) ಇತ್ಯಾದಿ | ತತ್ರ ಸಂಶಯಃ—ಕಿಮಿಹ ಪ್ರಾಣಶಬ್ದೇನ ವಾಯುಮಾತ್ರಮ್ ಅಭಿಧೀಯತೇ ಉತ ದೇವತಾತ್ಮಾ ಇತಿ, ಜೀವಃ, ಅಥವಾ ಪರಂ ಬ್ರಹ್ಮ ಇತಿ ||

(ಭಾಷ್ಯಾರ್ಥ)

ಕೌಷೀತಕಿಬ್ರಾಹ್ಮಣೋಪನಿಷತ್ತಿನಲ್ಲಿ ಇಂದ್ರಪ್ರತರ್ದನರ ಕಥೆಯಿದೆ: ದಿವೋದಾಸನ ಮಗನಾದ ಪ್ರತರ್ದನನು ಯುದ್ಧ(ನಿಮಿತ್ತ)ದಿಂದಲೂ ಪೌರುಷವನ್ನು (ತೋರಿಸುವ ನಿಮಿತ್ತ)ದಿಂದಲೂ ಇಂದ್ರನ ಪ್ರಿಯಸ್ಥಾನಕ್ಕೆ ಹೋದನು". (ಕೌ. ೩-೧) ಎಂದು ಪ್ರಾರಂಭಿಸಿ (ಅದನ್ನು) ಹೇಳಿರುತ್ತದೆ. ಅದರಲ್ಲಿ "ಆತನು ಹೇಳಿದನೇನೆಂದರೆ: ನಾನು ಪ್ರಜ್ಞಾತ್ಮನಾದ ಪ್ರಾಣನಾಗಿರುತ್ತೇನೆ; ಆ ನನ್ನನ್ನು ಆಯುಸ್ಸು 'ಅಮೃತವು ಎಂದು ಉಪಾಸನೆಮಾಡು" (ಕೌ. ೩-೧) ಎಂಬ ಶ್ರುತಿ (ವಚನ)ವಿದೆ. ಹಾಗೂ ಮುಂದೆಯೂ "ಇನ್ನು (ಕೇಳು), ಪ್ರಜ್ಞಾತ್ಮನಾದ ಪ್ರಾಣನೇ ಈ ಶರೀರವನ್ನು ಹಿಡಿದು ಎತ್ತಿ ನಿಲ್ಲಿಸಿರುತ್ತಾನೆ" (ಕೌ. ೩-೩) ಎಂಬ (ವಚನವಿದೆ). ಮತ್ತು "ಮಾತನ್ನು ವಿಚಾರಮಾಡಬಾರದು, ಮಾತಾಡುವವನನ್ನು ಅರಿತುಕೊಳ್ಳಬೇಕು" (ಕೌ. ೩-೮) ಎಂದು ಮುಂತಾದ (ವಚನವಿದೆ). ಕೊನೆಯಲ್ಲಿ, "ಆ ಈ ಪ್ರಜ್ಞಾತ್ಮನಾದ ಪ್ರಾಣನೇ ಆನಂದ(ರೂಪ)ನು, ಅಜರನು, ಅಮೃತನು" (ಕೌ. ೩-೯) ಎಂದು ಮುಂತಾಗಿ (ವಚನವಿದೆ).[2] ಅಲ್ಲಿ ಸಂಶಯ:

1 ನಿರ್ಣಯಸಾಗರ ಪಾಠದಲ್ಲಿ 'ಸ ಏಷ' ಎಂಬುದರ ಬದಲು 'ಏಷ' ಎಂದಿಷ್ಟೇ ಇದೆ.

2 ಈ ಉಪನಿಷತ್ತಿಗೆ ಎರಡು ಪಾಠಗಳಿವೆ. ಒಂದು ನಿರ್ಣಯಸಾಗರದ ಅಷ್ಟೋತ್ತರಶತೋಪನಿಷತ್ತಿನಲ್ಲಿ ಅಚ್ಚಾಗಿರುವ ಪಾಠ; ಇನ್ನೊಂದು ಆನಂದಾಶ್ರಮದಲ್ಲಿ ಮುದ್ರಿತವಾದ ಶಾಙ್ಖಾಯನಾರಣ್ಯಕದ ಮೂರನೆಯ ಅಧ್ಯಾಯದಿಂದ ಮುಂದಕ್ಕಿರುವ ಭಾಗದಲ್ಲಿ ಕಾಣುವ ಪಾಠ. ಆಚಾರ್ಯರು ಈ ಎರಡಕ್ಕೂ ಭಿನ್ನವಾದ ಮತ್ತೊಂದು ಪಾಠವನ್ನು ಅನುಸರಿಸಿದ್ದರೆಂದು ಕಾಣುತ್ತದೆ. ವಿಶೇಷಪಾಠಗಳನ್ನು ಅಲ್ಲಲ್ಲಿ ತಿಳಿಸುವೆವು.

ವೇನೆಂದರೆ, ಇಲ್ಲಿ ಪ್ರಾಣನೆಂದರೆ ಬರಿಯ ವಾಯುವನ್ನು ಹೇಳಿದೆಯೆ, ಅಥವಾ ದೇವತಾತ್ಮನನ್ನು (ಹೇಳಿದೆಯೆ)? ಜೀವನನ್ನು (ಹೇಳಿದೆಯೆ), ಅಥವಾ ಪರ ಬ್ರಹ್ಮವನ್ನು (ಹೇಳಿದೆಯೆ)?

## ಸಂಶಯವು ಯುಕ್ತವಾಗಿದೆ

(ಭಾಷ್ಯ)

೧೩೬. ನನು "ಅತ ಏವ ಪ್ರಾಣಃ" (೧-೧-೨೩) ಇತ್ಯತ್ರ ವರ್ಣಿತಂ ಪ್ರಾಣಶಬ್ದಸ್ಯ ಬ್ರಹ್ಮಪರತ್ವಮ್ । ಇಹಾಪಿ ಚ ಬ್ರಹ್ಮಲಿಙ್ಗಮ್ ಅಸ್ತಿ "ಆನನ್ದೋಽಜರೋಽಮೃತಃ" । ಕಥಮ್ ಇಹ ಪುನಃ ಸಂಶಯಃ ಸಂಭವತಿ? ಅನೇಕ ಲಿಙ್ಗದರ್ಶನಾತ್ ಇತಿ ಬ್ರೂಮಃ । ನ ಕೇವಲಮ್ ಇಹ ಬ್ರಹ್ಮಲಿಙ್ಗಮೇವ ಉಪ ಲಭ್ಯತೇ । ಸನ್ತಿ ಹಿ ಇತರಲಿಙ್ಗಾನ್ಯಪಿ । "ಮಾಮೇವ ವಿಜಾನೀಹಿ" (ಕೌ. ೩-೧) ಇತಿ ಇನ್ದ್ರಸ್ಯ ವಚನಂ ದೇವತಾತ್ಮಲಿಙ್ಗಮ್ । "ಇದಂ ಶರೀರಂ ಪರಿಗೃಹ್ಯ ಉತ್ಥಾಪಯತಿ" (ಕೌ. ೩-೩) ಇತಿ ಪ್ರಾಣಲಿಙ್ಗಮ್ । "ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್" (ಕೌ. ೩-೮) ಇತ್ಯಾದಿ ಜೀವಲಿಙ್ಗಮ್ । ಅತ ಉಪಪನ್ನಃ ಸಂಶಯಃ ॥

(ಭಾಷ್ಯಾರ್ಥ)

(ಆಕ್ಷೇಪ):—"ಅತ ಏವ ಪ್ರಾಣಃ" (೧ ೧ ೨೩) ಎಂಬಲ್ಲಿ ಪ್ರಾಣ ಎಂಬ ಮಾತು ಬ್ರಹ್ಮಪರವಾದದ್ದೆಂದು ಬಣ್ಣಿಸಿದ್ದಾಗಿದೆ. ಇಲ್ಲಿಯೂ "ಆನಂದ (ರೂಪ)ನು, ಅಜರನು, ಅಮೃತನು" (ಕೌ. ೩ ೯) ಎಂದು ಮುಂತಾಗಿ ಬ್ರಹ್ಮ ಲಿಂಗವು ಇದೆ. (ಹೀಗಿರುವಲ್ಲಿ) ಇಲ್ಲಿ ಮತ್ತೆ ಸಂಶಯವು ಹೇಗೆ ಉಂಟಾಗುವದು?

(ಪರಿಹಾರ):—ಅನೇಕ ಲಿಂಗಗಳು ಕಂಡುಬರುವದರಿಂದ (ಉಂಟಾಗುತ್ತದೆ) ಎನ್ನುತ್ತೇವೆ. ಇಲ್ಲಿ ಬರಿಯ ಬ್ರಹ್ಮಲಿಂಗವೇ ಇರುವದಿಲ್ಲ; ಏಕೆಂದರೆ ಬೇರೆಯ ಲಿಂಗಗಳೂ ಇರುತ್ತವೆ. (ಹೇಗೆಂದರೆ) "ನನ್ನನ್ನೇ ಅರಿತುಕೊ" (ಕೌ. ೩-೧) ಎಂದು ಇಂದ್ರನು ಹೇಳಿರುವದು **ದೇವತಾತ್ಮನ** ಲಿಂಗವು; "ಈ ಶರೀರವನ್ನು ಹಿಡಿದು ಎತ್ತಿನಿಲ್ಲಿಸಿರುತ್ತಾನೆ" (ಕೌ. ೩-೩) ಎಂದಿರುವದು **ಪ್ರಾಣದ** ಲಿಂಗವು; "ಮಾತನ್ನು ವಿಚಾರಮಾಡಬಾರದು, ಮಾತಾಡುವವನನ್ನು ಅರಿತುಕೊಳ್ಳಬೇಕು" (ಕೌ. ೩-೮) ಎಂದು ಮುಂತಾಗಿರುವದು **ಜೀವನ** ಲಿಂಗವು. ಆದ್ದರಿಂದ ಸಂಶಯವು ಯುಕ್ತವಾಗಿದೆ.

# ಸಿದ್ಧಾಂತ: ಪ್ರಾಣನೆಂದರೆ ಬ್ರಹ್ಮವೇ, ವಾಯುವಲ್ಲ.

(ಭಾಷ್ಯ)

೧೩೭. ತತ್ರ ಪ್ರಸಿದ್ಧೇರ್ವಾಯುಃ ಪ್ರಾಣಃ ಇತಿ ಪ್ರಾಪ್ತೇ ಉಚ್ಯತೇ—ಪ್ರಾಣ ಶಬ್ದಂ ಬ್ರಹ್ಮ ವಿಜ್ಞೇಯಮ್। ಕುತಃ? ತಥಾ ಅನುಗಮಾತ್। ತಥಾ ಹಿ ಪೌರ್ವಾ ಪರ್ಯೇಣ ಪರ್ಯಾಲೋಚ್ಯಮಾನೇ ವಾಕ್ಯೇ ಪದಾನಾಂ[1] ಸಮನ್ವಯಃ ಬ್ರಹ್ಮ ಪ್ರತಿಪಾದನಪರಃ ಉಪಲಭ್ಯತೇ। ಉಪಕ್ರಮೇ ತಾವತ್ "ವರಂ ವೃಣೀಷ್ವ" (ಕೌ. ೩-೧)[2] ಇತಿ ಇನ್ದ್ರೇಣ ಉಕ್ತಃ ಪ್ರತರ್ದನಃ ಪರಮಂ ಪುರುಷಾರ್ಥಂ ವರಮ್ ಉಪಚಿಕ್ಷೇಪ "ತ್ವಮೇವ ಮೇ[3] ವೃಣೀಷ್ವ ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ" (ಕೌ. ೩-೧) ಇತಿ। ತಸ್ಮೈ ಹಿತತಮತ್ವೇನ ಉಪದಿಶ್ಯ ಮಾನಃ ಪ್ರಾಣಃ ಕಥಂ ಪರಮಾತ್ಮಾ ನ ಸ್ಯಾತ್। ನ ಹಿ ಅನ್ಯತ್ರ ಪರಮಾತ್ಮ ಜ್ಞಾನಾತ್ ಹಿತತಮಪ್ರಾಪ್ತಿರಸ್ತಿ। "ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ" (ಶ್ವೇ. ೩-೮) ಇತ್ಯಾದಿಶ್ರುತಿಭ್ಯಃ। ತಥಾ "ಸ ಯೋ ಮಾಂ ವೇದ[4] ನ ಹ ವೈ ತಸ್ಯ ಕೇನ ಚ[5] ಕರ್ಮಣಾ ಲೋಕೋ ಮೀಯತೇ ನ ಸ್ತೇಯೇನ ನ ಭ್ರೂಣಹತ್ಯಯಾ"[6] (ಕೌ. ೩-೧) ಇತ್ಯಾದಿ ಚ ಬ್ರಹ್ಮಪರಿಗ್ರಹೇ ಘಟತೇ। ಬ್ರಹ್ಮವಿಜ್ಞಾನೇನ ಹಿ ಸರ್ವಕರ್ಮಕ್ಷಯಃ ಪ್ರಸಿದ್ಧಃ "ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ" (ಮುಂ. ೨-೨-೮) ಇತ್ಯಾ ದ್ಯಾಸು ಶ್ರುತಿಷು। ಪ್ರಜ್ಞಾತ್ಮತ್ವಂ ಚ ಬ್ರಹ್ಮಪಕ್ಷೇ ಏವ ಉಪಪದ್ಯತೇ। ನ ಹಿ ಅಚೇತನಸ್ಯ ವಾಯೋಃ ಪ್ರಜ್ಞಾತ್ಮತ್ವಂ ಸಂಭವತಿ। ತಥಾ ಉಪಸಂಹಾರೇಽಪಿ

---

1. 'ಪದಾರ್ಥಾನಾಂ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ. ಇದೇ ಟೀಕಾಸಮ್ಮತ ವಾದ ಪಾಠವೆಂದು ತೋರುತ್ತದೆ.

2. ಇದು ಆ॥ ಪಾಠ; ನಿ॥ ಪಾಠದಲ್ಲಿ 'ವರಂ ತೇ ದದಾನಿ' ಎಂದಿದೆ.

3. "ತ್ವಮೇವ ವೃಣೀಷ್ವ" ಎಂದಿಷ್ಟೇ ಎರಡು ಪಾಠಗಳಲ್ಲಿಯೂ ಇದೆ; 'ಮೇ' ಇಲ್ಲ.

4. ಇದು ಆ॥ ಪಾಠ; 'ವಿಜಾನೀಯಾತ್' ಎಂದು ನಿ॥.

5. 'ನಾಸ್ಯ ಕೇನ ಚ' ಎಂದು ನಿ॥; ಇಲ್ಲಿರುವದು ಆ॥ ಪಾಠ 'ಕೇನಚನ' ಎಂಬಲ್ಲಿ ನ ಹೆಚ್ಚಾಗಿ ಅಚ್ಚಿನಲ್ಲಿದೆ.

6. ಇದು ಆ॥ ಪಾಠ; ನಿ॥ ಪಾಠದಲ್ಲಿ 'ನ ಮಾತೃವಧೇನ ನ ಪಿತೃವಧೇನ ನ ಸ್ತೇಯೇನ ನ ಭ್ರೂಣಹತ್ಯಯಾ' ಎಂದು ಅನುಕ್ರಮವಿದೆ.

ಅನನ್ದೋಽಜರೋಽಮೃತಃ (ಕೌ. ೩-೯) ಇತಿ ಆನನ್ದತ್ವಾದೀನಿ ನ ಬ್ರಹ್ಮಣೋಽನ್ಯತ್ರ ಸಮ್ಯಕ್ ಸಂಭವನ್ತಿ । “ ಸ[1] ನ ಸಾಧುನಾ ಕರ್ಮಣಾ ಭೂಯಾನ್ ಭವತಿ[2] ನೋ ಏವಾಸಾಧುನಾ ಕರ್ಮಣಾ ಕನೀಯಾನೇಷ ಹ್ಯೇವ[3] ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ[4] । ಏಷ ಉ ಏವಾಸಾಧು[5] ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯೋಽಧೋ[6] ನಿನೀಷತೇ[7] ” (ಕೌ. ೩-೯) ಇತಿ, “ ಏಷ ಲೋಕಾಧಿಪತಿರೇಷ ಲೋಕೇಶಃ ”[8] (ಕೌ. ೩-೯) ಇತಿ ಚ ಸರ್ವಮೇತತ್ ಪರಸ್ಮಿನ್ ಬ್ರಹ್ಮಣಿ ಆಶ್ರೀಯಮಾಣೇ ಅನುಗನ್ತುಂ ಶಕ್ಯತೇ ನ ಮುಖ್ಯೇ ಪ್ರಾಣೇ । ತಸ್ಮಾತ್ ಪ್ರಾಣೋ ಬ್ರಹ್ಮ ॥

(ಭಾಷ್ಯಾರ್ಥ)

ಇವುಗಳಲ್ಲಿ (ವಾಯುವೆಂಬ ಅರ್ಥವು) ಪ್ರಸಿದ್ಧವಾಗಿರುವದರಿಂದ ಪ್ರಾಣ ಎಂದರೆ ವಾಯು ಎಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಪ್ರಾಣವೆಂಬ ಮಾತಿಗೆ ಬ್ರಹ್ಮವೇ (ಅರ್ಥ)ವೆಂದು ಅರಿಯಬೇಕು. ಅದೇಕೆ? ಎಂದರೆ ಹಾಗೆ ಅನುಗಮವಿರುವದರಿಂದ. ಹಿಂದುಮುಂದಿನ (ಸಂದರ್ಭವನ್ನು) ನೋಡಿ ವಾಕ್ಯವನ್ನು ಪರ್ಯಾಲೋಚನೆ ಮಾಡಿದರೆ ಪದಗಳ ಸಮನ್ವಯವು ಬ್ರಹ್ಮವನ್ನು ತಿಳಿಸಿಕೊಡುವದರಲ್ಲಿ ತಾತ್ಪರ್ಯವುಳ್ಳದ್ದಾಗಿ(ರುವದು) ಕಂಡುಬರುತ್ತದೆ. ಮೊದಲನೆಯದಾಗಿ ಉಪಕ್ರಮದಲ್ಲಿ “ ವರವನ್ನು ಕೇಳಿಕೊ ” (ಕೌ. ೩-೧) ಎಂದು ಇಂದ್ರನು ಹೇಳಲು ಪ್ರತರ್ದನನು “ ಮನುಷ್ಯನಿಗೆ ಹಿತತಮವೆಂದು ಯಾವದು ನಿನಗೆ ತೋರುವದೋ (ಅದನ್ನು) ನೀನೇ ನನಗಾಗಿ ಆರಿಸಿ

---

1. ಎರಡು ಪಾಠಗಳಲ್ಲಿಯೂ ‘ ಸ ’ ಇಲ್ಲ.
2. ನಿ|| ಪಾಠದಲ್ಲಿ ‘ ಭವತಿ ’ ಇಲ್ಲ.
3. ನಿ || ಪಾಠದಲ್ಲಿ ‘ ಏಷ ಹ್ಯೇವೈನಂ ’ ಎಂದಿದೆ.
4. ‘ ಯಮುನ್ನಿನೀಷತಿ ’ ಎಂದು ನಿ ||
5. ‘ ಏಷ ಏವೈನಮಸಾಧು ’ ಎಂದು ನಿ ||
6. ನಿ || ಪಾಠದಲ್ಲಿ ‘ ಅಧೋ ’ ಇಲ್ಲ.
7. ‘ ನಿನೀಷತೇ ’ ನಿ ||
8. ‘ ಲೋಕೇಶಃ ’ ಎಂಬುದರ ಬದಲು ‘ ಸರ್ವೇಶ್ವರಃ ’ ಎಂದು ನಿ || ಇಲ್ಲಿ ಕೊಟ್ಟಿರುವ ಖಂಡಗಳ ಸಂಖ್ಯೆಗಳು ನಿ || ಪಾಠದ ಪ್ರಕಾರ; ಆ || ಪಾಠದಲ್ಲಿ ಈ ಅಧ್ಯಾಯಕ್ಕೆ ಎಂಟೇ ಖಂಡಗಳಿವೆ.

ಕೊಡು" (ಕೌ. ೩-೧) ಎಂದು ಪರಮಪುರುಷಾರ್ಥವೇ (ತನ್ನ) ವರವೆಂದು ಸೂಚಿಸಿದನು. ಅವನಿಗೆ ಹಿತತಮವೆಂದು ಉಪದೇಶಿಸಿರುವ ಪ್ರಾಣನು ಹೇಗೆ ತಾನೆ ಪರಮಾತ್ಮನಲ್ಲದೆ ಹೋದಾನು? ಪರಮಾತ್ಮಜ್ಞಾನವನ್ನು ಬಿಟ್ಟು ಮತ್ತೊಂದರಿಂದ ಹಿತತಮದ ಪ್ರಾಪ್ತಿಯು ಆಗುವದೇ ಇಲ್ಲ. "ಅವನನ್ನೇ ಅರಿತುಕೊಂಡರೆ ಅತಿಮೃತ್ಯುವನ್ನು ಹೊಂದುವನು, ಅದನ್ನು ಹೊಂದುವದಕ್ಕೆ ಬೇರೊಂದು ಹಾದಿಯಿರುವದಿಲ್ಲ" (ಶ್ವೇ. ೩-೮) ಎಂಬುದೇ ಮುಂತಾದ ಶ್ರುತಿಗಳಿಂದ (ಹೀಗೆಂದು ಸಿದ್ಧವಾಗಿರುತ್ತದೆ).

ಹೀಗೆಯೇ "ನನ್ನನ್ನು ಯಾವನು ಅರಿತುಕೊಳ್ಳುವನೋ ಅವನ ಯಾವ ಕರ್ಮದಿಂದಲೂ (ಅವನ) ಲೋಕವು ನಾಶವಾಗುವದಿಲ್ಲ; ಕಳ್ಳತನದಿಂದಲಾಗಲಿ ಭ್ರೂಣಹತ್ಯೆಯಿಂದಲಾಗಲಿ ............ (ನಾಶವಾಗುವದಿಲ್ಲ)" (ಕೌ. ೩-೧) ಎಂಬುದೇ ಮುಂತಾದದ್ದು (ಇಲ್ಲಿ) ಬ್ರಹ್ಮವನ್ನು ತೆಗೆದುಕೊಂಡರೇ ಹೊಂದುತ್ತದೆ. ಏಕೆಂದರೆ ಬ್ರಹ್ಮವಿಜ್ಞಾನದಿಂದಲೇ ಎಲ್ಲಾ ಕರ್ಮಗಳೂ ನಾಶವಾಗುವವೆಂದು "ಆ ಪರಾವರನನ್ನು ಕಂಡುಕೊಂಡರೆ ಇವನ ಕರ್ಮಗಳು ಕ್ಷಯವಾಗುವವು" (ಮುಂ. ೨-೨-೮) ಎಂಬುದೇ ಮುಂತಾದ ಶ್ರುತಿಗಳಲ್ಲಿ ಪ್ರಸಿದ್ಧವಾಗಿರುತ್ತದೆ.

(ಪ್ರಾಣನು) ಪ್ರಜ್ಞಾತ್ಮನೆಂಬುದೂ ಬ್ರಹ್ಮವೇ (ಪ್ರಾಣನೆಂಬ) ಪಕ್ಷದಲ್ಲಿಯೇ ಹೊಂದುತ್ತದೆ; ಏಕೆಂದರೆ ಅಚೇತನವಾದ ವಾಯುವು ಪ್ರಜ್ಞಾರೂಪವಾಗಿರುವದೆಂಬುದು ಆಗುವಹಾಗಿಲ್ಲ.

ಇದರಂತೆ ಉಪಸಂಹಾರದಲ್ಲಿ "ಆನಂದನು, ಅಜರನು, ಅಮೃತನು" (ಕೌ. ೩-೯) ಎಂದು (ಹೇಳಿರುವ) ಆನಂದತ್ವವೇ ಮುಂತಾದವು ಬ್ರಹ್ಮವನ್ನು ಬಿಟ್ಟರೆ ಮಿಕ್ಕ ಕಡೆಯಲ್ಲಿ (ಅಷ್ಟು) ಚೆನ್ನಾಗಿ ಹೊಂದುವದಿಲ್ಲ. "ಆ ಪ್ರಾಣನು ಒಳ್ಳೆಯ ಕರ್ಮದಿಂದ ದೊಡ್ಡವನಾಗುವದಿಲ್ಲ, ಕೆಟ್ಟಕರ್ಮದಿಂದ ಸಣ್ಣವನೂ (ಆಗುವದೇ) ಇಲ್ಲ. ಏಕೆಂದರೆ ಈತನೇ, ಯಾವನನ್ನು ಈ ಲೋಕಗಳಿಂದ ಮೇಲಕ್ಕೊಯ್ಯಲಿಚ್ಛಿಸುವನೋ ಅವನಿಂದ ಒಳ್ಳೆಯ ಕರ್ಮವನ್ನು ಮಾಡಿಸುತ್ತಾನೆ; ಈತನೇ ಯಾವನನ್ನು ಈ ಲೋಕಗಳಿಂದ ಕೆಳಕ್ಕೊಯ್ಯಲಿಚ್ಛಿಸುವನೋ ಅವನಿಂದ ಕೆಟ್ಟ ಕರ್ಮವನ್ನು ಮಾಡಿಸುತ್ತಾನೆ" ಎಂಬುದೂ "ಈತನೇ ಲೋಕಾಧಿಪತಿಯು, ಈತನೇ ಲೋಕೇಶನು" ಎಂಬುದೂ ಇದೆಲ್ಲವೂ (ಪ್ರಾಣವೆಂದರೆ) ಪರಬ್ರಹ್ಮವೆಂದಿಟ್ಟುಕೊಂಡರೇ ಅನ್ವಯಿಸುವದಕ್ಕೆ ಆಗುತ್ತದೆಯೇ ಹೊರತು ಮುಖ್ಯಪ್ರಾಣವೇ (ಪ್ರಾಣವೆಂದು ಇಟ್ಟುಕೊಂಡರೆ) ಆಗುವದಿಲ್ಲ. ಆದ್ದರಿಂದ (ಇಲ್ಲಿ ಹೇಳಿರುವ) ಪ್ರಾಣವು ಬ್ರಹ್ಮವೇ.

# ಪ್ರಾಣನೆಂದರೆ ಇಂದ್ರನಲ್ಲ

### ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬನ್ಧಭೂಮಾ ಹ್ಯಸ್ಮಿನ್ || ೨೯ ||

೨೯. ವಕ್ತೃವಿನ ಆತ್ಮನನ್ನು ಉಪದೇಶಿಸಿರುವದರಿಂದ (ಪ್ರಾಣನು ಬ್ರಹ್ಮವಲ್ಲ) ಎಂದರೆ (ಹಾಗಲ್ಲ); ಏಕೆಂದರೆ ಇದರಲ್ಲಿ ಆಧ್ಯಾತ್ಮಸಂಬಂಧದ ಬಾಹುಳ್ಯವಿದೆ.

# ಪ್ರಾಣನೆಂದರೆ ಇಂದ್ರನೆಂಬುದಕ್ಕೆ ಪೂರ್ವಪಕ್ಷದ ಯುಕ್ತಿಗಳು

(ಭಾಷ್ಯ)

೧೩೮. ಯದುಕ್ತಂ ಪ್ರಾಣೋ ಬ್ರಹ್ಮ ಇತಿ, ತದಾಕ್ಷಿಪ್ಯತೇ । ನ ಪರಂ ಬ್ರಹ್ಮ ಪ್ರಾಣಶಬ್ದಮ್ । ಕಸ್ಮಾತ್ ? ವಕ್ತುಃ ಆತ್ಮೋಪದೇಶಾತ್ । ವಕ್ತಾ ಹಿ ಇನ್ದ್ರೋ ನಾಮ ಕಶ್ಚಿತ್ ವಿಗ್ರಹವಾನ್ ದೇವತಾವಿಶೇಷಃ ಸ್ವಮ್ ಆತ್ಮಾನಂ ಪ್ರತರ್ದನಾಯ ಆಚಚಕ್ಷೇ "ಮಾಮೇವ ವಿಜಾನೀಹಿ" (ಕೌ. ೩-೧) ಇತಿ ಉಪಕ್ರಮ್ಯ "ಪ್ರಾಣೋಽಸ್ಮಿ ಪ್ರಜ್ಞಾತ್ಮಾ" (ಕೌ. ೩-೨) ಇತಿ ಅಹಂಕಾರ ವಾದೇನ । ಸ ಏಷ ವಕ್ತುರಾತ್ಮತ್ವೇನ ಉಪದಿಶ್ಯಮಾನಃ ಪ್ರಾಣಃ ಕಥಂ ಬ್ರಹ್ಮ ಸ್ಯಾತ್? ನ ಹಿ ಬ್ರಹ್ಮಣಃ ವಕ್ತೃತ್ವಂ ಸಂಭವತಿ "ಅವಾಗಮನಾಃ" (ಬೃ. ೩-೮-೮) ಇತ್ಯಾದಿಶ್ರುತಿಭ್ಯಃ । ತಥಾ ವಿಗ್ರಹಸಂಬನ್ಧಿಭಿರೇವ ಬ್ರಹ್ಮಣಿ ಅಸಂಭವದ್ಭಿರ್ಧರ್ಮೈಃ ಆತ್ಮಾನಂ ತುಷ್ಟಾವ—"ತ್ರಿಶೀರ್ಷಾಣಂ ತ್ವಾಷ್ಟ್ರಮಹನಮರುನ್ಮುಖಾನ್ ಯತೀನ್ಸಾಲಾವೃಕೇಭ್ಯಃ ಪ್ರಾಯಚ್ಛಮ್"[1] (ಕೌ. ೩-೧) ಇತ್ಯೇವಮಾದಿಭಿಃ । ಪ್ರಾಣತ್ವಂ ಚ ಇನ್ದ್ರಸ್ಯ ಬಲವತ್ತ್ವಾತ್ ಉಪಪದ್ಯತೇ । "ಪ್ರಾಣೋ ವೈ ಬಲಮ್" (?) ಇತಿ ಹಿ ವಿಜ್ಞಾಯತೇ । ಬಲಸ್ಯ ಚ ಇನ್ದ್ರೋ ದೇವತಾ ಪ್ರಸಿದ್ಧಾ । ಯಾ ಚ ಕಾಚಿದ್ ಬಲಕೃತಿಃ ಇನ್ದ್ರಕರ್ಮೈವ ತತ್ ಇತಿ ಹಿ ವದನ್ತಿ । ಪ್ರಜ್ಞಾತ್ಮತ್ವಮಪಿ ಅಪ್ರತಿಹತಜ್ಞಾನತ್ವಾತ್ ದೇವತಾತ್ಮನಃ ಸಂಭವತಿ । ಅಪ್ರತಿಹತಜ್ಞಾನಾ ದೇವತಾ ಇತಿ ಹಿ ವದನ್ತಿ । ನಿಶ್ಚಿತೇ ಚ ಏವಂ

---

1. "ತ್ವಾಷ್ಟ್ರಮಹನಮರುರ್ಮುಖಾನ್ ಯತೀನ್ ಸಾಲಾವೃಕೇಭ್ಯಃ ಪ್ರಾಯಚ್ಛನ್" ಆ || ಪಾಠ.

ದೇವತಾತ್ಮೋಪದೇಶೇ ಹಿತತಮತ್ವಾದಿವಚನಾನಿ ಯಥಾಸಂಭವಂ ತದ್ವಿಷಯಾಣ್ಯೇವ ಯೋಜಯಿತವ್ಯಾನಿ । ತಸ್ಮಾತ್ ವಕ್ತುಃ ಇನ್ದ್ರಸ್ಯ ಆತ್ಮೋಪದೇಶಾತ್ ನ ಪ್ರಾಣೋ ಬ್ರಹ್ಮ ॥

(ಭಾಷ್ಯಾರ್ಥ)

ಪ್ರಾಣವೆಂದರೆ ಬ್ರಹ್ಮವೆಂದು ಹೇಳಿರುತ್ತದೆಯಷ್ಟೆ; ಅದನ್ನು ಇಲ್ಲಿ ಆಕ್ಷೇಪಿಸಲಾಗುತ್ತದೆ. ಪ್ರಾಣಶಬ್ದ(ದಿಂದ ಹೇಳಿರುವದು) ಪರಬ್ರಹ್ಮವಲ್ಲ. ಅದೇಕೆ? ಎಂದರೆ ವಕ್ತೃವಿನ ಆತ್ಮವನ್ನು ಉಪದೇಶಿಸಿರುವದರಿಂದ. ವಕ್ತೃವು ಎಂದರೆ ಇಂದ್ರನೆಂಬ ಶರೀರಿಯಾದ[1] ಒಬ್ಬ ದೇವತೆಯು. "ನನ್ನನ್ನೇ ತಿಳಿ" (ಕೌ. ೩-೧) ಎಂದು ಉಪಕ್ರಮಿಸಿ "ಪ್ರಜ್ಞಾತ್ಮನಾದ ಪ್ರಾಣನಾಗಿರುತ್ತೇನೆ" (ಕೌ. ೩-೨) ಎಂದು ಅಹಂಕಾರವಾದದಿಂದ[2] ತನ್ನ ಆತ್ಮವನ್ನೇ[3] ಪ್ರತರ್ದನನಿಗೆ ತಿಳಿಸಿಕೊಟ್ಟಿರುತ್ತಾನಲ್ಲವೆ? ವಕ್ತೃವಿನ ಆತ್ಮವೆಂದು ತಿಳಿಸಿರುವ ಆ ಈ ಪ್ರಾಣನು ಹೇಗೆ ತಾನೆ ಬ್ರಹ್ಮವಾದಾನು? ಬ್ರಹ್ಮವು ವಕ್ತೃವೆಂಬುದು ಆಗುವ ಹಾಗೆಯೇ ಇಲ್ಲ; "ವಾಕ್ಕಿಲ್ಲದ್ದು, ಮನಸ್ಸಿಲ್ಲದ್ದು" (ಬೃ. ೩-೮-೮) ಎಂದು ಮುಂತಾಗಿರುವ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ). ಮತ್ತು ಶರೀರಕ್ಕೆ ಸಂಬಂಧಪಟ್ಟಿರುವವಾಗಿಯೇ (ಇರುವ) ಬ್ರಹ್ಮಕ್ಕೆ (ಹೇಗೂ) ಹೊಂದದೆ ಇರುವ ಧರ್ಮಗಳಿಂದ (ಎಂದರೆ) "ಮೂರು ತಲೆಯ ತ್ವಾಷ್ಟ್ರನನ್ನು[4] ಕೊಂದಿರುವೆನು, ಅರುನ್ಮುಖರೆಂಬ[5] ಯತಿಗಳನ್ನು ತೋಳಗಳಿಗೆ ಕೊಟ್ಟಿರುವೆನು" (ಕೌ. ೩-೧)ಎಂಬಿವೇ ಮುಂತಾದ[6] (ಧರ್ಮಗಳಿಂದ) ಹೊಗಳಿಕೊಂಡಿರುತ್ತಾನೆ. ಇಂದ್ರನು ಪ್ರಾಣವೆಂಬುದು (ಅವನು) ಬಲವುಳ್ಳವನಾದ್ದರಿಂದ ಒಪ್ಪುತ್ತದೆ. "ಪ್ರಾಣವೇ ಬಲವು" (?) ಎಂದಲ್ಲವೆ,

---

1. ದೇವತೆಗಳಿಗೆ ಶರೀರವುಂಟೆಂಬುದು ಮುಂದೆ **ದೇವತಾಧಿಕರಣಭಾಷ್ಯ**ದಲ್ಲಿ ಸಿದ್ಧವಾಗುತ್ತದೆ.

2. 'ನನ್ನನ್ನು ತಿಳಿದುಕೊ' ಎಂಬುದು ಅಹಂಕಾರವಾದವು. ಇಂದ್ರನು ನಾನು ಹೀಗಿದೇನೆ ಎಂದಿದಾನೆಯೇ ಹೊರತು ಬ್ರಹ್ಮವು ಹೀಗಿದೆ ಎಂದಿಲ್ಲ.

3. ತನ್ನ ಸ್ವರೂಪವನ್ನೇ, ತನ್ನನ್ನೇ ಎಂದರ್ಥ.

4. ತ್ವಷ್ಟೃವಿನ ಮಗನಾದ ವಿಶ್ವರೂಪನನ್ನು.

5. ರುತ್ ಎಂದರೆ ವೇದಾಂತವಾಕ್ಯವು, ಅರುನ್ಮುಖರೆಂದರೆ ವೇದಾಂತಬಹಿರ್ಮುಖರು—ಎಂದು **ಆನಂದಗಿರಿ** ಮತ್ತು **ರತ್ನಪ್ರಭಾ**ವ್ಯಾಖ್ಯಾನಗಳಲ್ಲಿದೆ.

6. ಅನೇಕ ಸಂಧಿಗಳನ್ನು ಮೀರಿ ದ್ಯುಲೋಕದಲ್ಲಿ ಪ್ರಹ್ಲಾದನ ಕಡೆಯವರನ್ನೂ ಅಂತರಿಕ್ಷದಲ್ಲಿ ಪುಲೋಮನ ಕಡೆಯವರನ್ನೂ ಭೂಮಿಯಲ್ಲಿ ಕಾಲಕಾಶಿಯ ಕಡೆಯವರನ್ನೂ ಕೊಂದಿರುವೆನು—ಎಂಬುದು 'ಮುಂತಾದ' ಎಂಬ ಮಾತಿನ ಅರ್ಥ.

(ಶ್ರುತಿಯಿಂದ) ತಿಳಿದು ಬರುತ್ತದೆ? ಬಲಕ್ಕೆ ಇಂದ್ರನು ದೇವತೆ ಎಂಬುದೂ ಪ್ರಸಿದ್ಧವಾಗಿರುತ್ತದೆ; ಯಾವಯಾವದು ಬಲದಿಂದ ಮಾಡತಕ್ಕದ್ದೋ (ಅದು) ಇಂದ್ರನ ಕರ್ಮವೇ ಎಂದಲ್ಲವೆ, (ಜನರು) ಹೇಳುತ್ತಾರೆ? ಪ್ರಜ್ಞಾತ್ಮನಾಗಿರುವ ದೆಂಬುದೂ (ತನ್ನ) ಜ್ಞಾನಕ್ಕೆ ಯಾವ ಅಡ್ಡಿಯೂ ಇಲ್ಲದಿರುವದರಿಂದ ದೇವತಾತ್ಮ ನಿಗೆ ಅಗಬಹುದಾಗಿದೆ. ದೇವತೆಗಳು ಅಪ್ರತಿಹತಜ್ಞಾನರು[1] ಎಂದಲ್ಲವೆ, ಹೇಳು ತ್ತಾರೆ? ಹೀಗೆ (ಇಲ್ಲಿ) ದೇವತಾತ್ಮನನ್ನೇ ತಿಳಿಸಿರುತ್ತದೆ ಎಂದು ನಿಶ್ಚಯ ವಾದ್ದರಿಂದ ಹಿತತಮತ್ವವೇ ಮುಂತಾದ ವಚನಗಳನ್ನು ಎಷ್ಟು ಹೊಂದುತ್ತವೆಯೋ ಅಷ್ಟುಮಟ್ಟಿಗೆ ಆ (ದೇವತೆಯ)ವಿಷಯವಾಗಿಯೇ ಜೋಡಿಸಿಕೊಳ್ಳಬೇಕು. ಅದ್ದ ರಿಂದ ವಕ್ತೃವಾದ ಇಂದ್ರನ ಆತ್ಮವನ್ನು ತಿಳಿಸಿರುವದರಿಂದ (ಇಲ್ಲಿ) ಪ್ರಾಣ ಎಂದರೆ ಬ್ರಹ್ಮವಲ್ಲ.

## ಇದು ಬ್ರಹ್ಮವನ್ನು ತಿಳಿಸುವ ವಾಕ್ಯವೇ ಎಂಬುದಕ್ಕೆ ಯುಕ್ತಿಗಳು

(ಭಾಷ್ಯ)

೧೪೯. ಇತ್ಯಾಕ್ಷಿಪ್ಯ ಪ್ರತಿಸಮಾಧೀಯತೇ " ಅಧ್ಯಾತ್ಮಸಂಬನ್ಧಭೂಮಾ-ಹ್ಯಸ್ಮಿನ್ '' ಇತಿ । ಅಧ್ಯಾತ್ಮಸಂಬನ್ಧಃ ಪ್ರತ್ಯಗಾತ್ಮಸಂಬನ್ಧಃ । ತಸ್ಯ ಭೂಮಾ ಬಾಹುಲ್ಯಮ್ ಅಸ್ಮಿನ್ ಅಧ್ಯಾಯೇ ಉಪಲಭ್ಯತೇ । '' ಯಾವದ್ಧ್ಯಸ್ಮಿಞ್ಶರೀರೇ ಪ್ರಾಣೋ ವಸತಿ ತಾವದಾಯುಃ '' (ಕೌ. ೩-೨) ಇತಿ ಪ್ರಾಣಸ್ಯೈವ ಪ್ರಜ್ಞಾತ್ಮನಃ ಪ್ರತ್ಯಗ್ಭೂತಸ್ಯಾಯುಷ್ಪ್ರದಾನೋಪಸಂಹಾರಯೋಃ ಸ್ವಾತನ್ತ್ರ್ಯಂ ದರ್ಶಯತಿ, ನ ದೇವತಾವಿಶೇಷಸ್ಯ ಪರಾಚೀನಸ್ಯ । ತಥಾ '' ಅಸ್ತಿತ್ವೇ ಚ ಪ್ರಾಣಾನಾಂ ನಿಃ-ಶ್ರೇಯಸಮ್ "[2] (ಕೌ. ೩-೨) ಇತಿ ಅಧ್ಯಾತ್ಮಮೇವ ಇನ್ದ್ರಿಯಾಶ್ರಯಂ ಪ್ರಾಣಂ ದರ್ಶಯತಿ । '' ಪ್ರಾಣ ಏವ ಪ್ರಜ್ಞಾತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ " (ಕೌ. ೩-೩) ಇತಿ, '' ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್ " (ಕೌ. ೩-೮) ಇತಿ ಚೋಪಕ್ರಮ್ಯ '' ತದ್ಯಥಾ ರಥಸ್ಯಾರೇಷು ನೇಮಿರರ್ಪಿತಾ

---

1. ತಮ್ಮ ಜ್ಞಾನಕ್ಕೆ ತಡೆಯಿಲ್ಲದವರು, ಪರೋಕ್ಷವಾದದ್ದನ್ನೂ ತಿಳಿಯಬಲ್ಲವರು.

2. " ಅಸ್ತೀತ್ಯೇವ ಪ್ರಾಣಾನಾಂ ನಿಃಶ್ರೇಯಸಾದಾನಮ್ " ನಿ ॥ '' ಅಸ್ತಿತ್ವೇವ ಪ್ರಾಣಾನಾಂ ನಿಃಶ್ರೇಯಸಾದಾನಮ್" ಆ ॥ ಎಂಬ ಪಾಠಗಳಿಗಿಂತ ಭಿನ್ನವಾದ ಪಾಠವೋ, ಅಥವಾ ಅವುಗಳ ಅರ್ಥವೋ ತಿಳಿಯದು. " ಅಥಾತೋ ನಿಃಶ್ರೇಯಸಾದಾನಮ್ " (ಕೌ, ೨-೧೪) ಎಂಬುದರ ಅರ್ಥವಿದೆಂದು ವ್ಯಾಖ್ಯಾನಗಳಲ್ಲಿ ಹೇಳುವದು ಯುಕ್ತವೆಂದು ತೋರುವದಿಲ್ಲ.

ನಾಭಾವರಾ ಅರ್ಪಿತಾ ಏವಮೇವೈತಾ ಭೂತಮಾತ್ರಾಃ ಪ್ರಜ್ಞಾಮಾತ್ರಾಸ್ವರ್ಪಿತಾಃ ಪ್ರಜ್ಞಾಮಾತ್ರಾಃ ಪ್ರಾಣೇಽರ್ಪಿತಾಃ ಸ ಏಷ ಪ್ರಾಣ ಏವ ಪ್ರಜ್ಞಾತ್ಮಾನನ್ದೋಽಜರೋಽಮೃತಃ'' (ಕೌ. ೩-೯) ಇತಿ ವಿಷಯೇನ್ದ್ರಿಯವ್ಯವಹಾರಾನಭಿಭೂತಂ ಪ್ರತ್ಯಗಾತ್ಮಾನಮೇವೋಪಸಂಹರತಿ। ''ಸ ಮ ಆತ್ಮೇತಿ ವಿದ್ಯಾತ್'' (ಕೌ.೩-೯) ಇತಿ ಚೋಪಸಂಹಾರಃ ಪ್ರತ್ಯಗಾತ್ಮಪರಿಗ್ರಹೇ ಸಾಧುಃ, ನ ಪರಾಚೀನಪರಿಗ್ರಹೇ। ''ಅಯಮಾತ್ಮಾ ಬ್ರಹ್ಮ ಸರ್ವಾನುಭೂಃ'' (ಬೃ. ೨-೫-೧೯) ಇತಿ ಚ ಶ್ರುತ್ಯನ್ತರಮ್। ತಸ್ಮಾತ್ ಅಧ್ಯಾತ್ಮಸಂಬನ್ಧಬಾಹುಲ್ಯಾತ್ ಬ್ರಹ್ಮೋಪದೇಶ ಏವಾಯಂ ನ ದೇವತಾತ್ಮೋಪದೇಶಃ॥

(ಭಾಷ್ಯಾರ್ಥ)

ಹೀಗೆಂದು ಆಕ್ಷೇಪಿಸಿ ''ಈ (ಅಧ್ಯಾಯದಲ್ಲಿ) ಅಧ್ಯಾತ್ಮಸಂಬಂಧಭೂಮವಿದೆ'' ಎಂದು ಪ್ರತಿಸಮಾಧಾನವನ್ನು ಹೇಳುತ್ತಾರೆ. ಅಧ್ಯಾತ್ಮಸಂಬಂಧವೆಂದರೆ ಪ್ರತ್ಯಗಾತ್ಮನ ಸಂಬಂಧವು; ಅದರ ಭೂಮವು ಎಂದರೆ ಬಾಹುಲ್ಯವು ಈ ಅಧ್ಯಾಯದಲ್ಲಿ ಕಂಡುಬರುತ್ತದೆ. ''ಈ ಶರೀರದಲ್ಲಿ ಎಲ್ಲಿಯವರೆಗೆ ಪ್ರಾಣನು ಇದ್ದುಕೊಂಡಿರುವನೋ ಅಲ್ಲಿಯವರೆಗೆ ಆಯುಸ್ಸು (ಇರುತ್ತದೆ)'' (ಕೌ. ೩-೨) ಎಂದು ಪ್ರಜ್ಞಾತ್ಮನಾದ ಪ್ರಾಣನೇ ಒಳಗಿನ (ಆತ್ಮನಾಗಿ) ಆಯುಸ್ಸನ್ನು ಕೊಡುವದು, ಉಪಸಂಹಾರಮಾಡಿಕೊಳ್ಳುವದು-ಇವುಗಳಲ್ಲಿಸ್ವಾತಂತ್ರ್ಯ(ವುಳ್ಳವನೆಂದು)ತೋರಿಸಿದೆಯೇ ಹೊರತು ಹೊರಗಿನ ದೇವತಾವಿಶೇಷಕ್ಕೆ (ತೋರಿಸಿರುವ)ದಿಲ್ಲ. ಮತ್ತು ''ಅದಿದ್ದರೇ ಪ್ರಾಣಗಳ ನಿಃಶ್ರೇಯಸವು'' (ಕೌ. ೩-೨) ಎಂದು ಪ್ರಾಣವು ಇಂದ್ರಿಯಗಳಿಗೆ ಆಶ್ರಯವಾಗಿ ಅಧ್ಯಾತ್ಮವಾಗಿಯೇ ಇದೆ ಎಂದು ತಿಳಿಸಿರುತ್ತದೆ. ಮತ್ತು ''ಪ್ರಜ್ಞಾತ್ಮನಾದ ಪ್ರಾಣನೇ ಈ ಶರೀರವನ್ನು ಹಿಡಿದೆತ್ತಿಕೊಂಡಿರುತ್ತಾನೆ'' (ಕೌ. ೩-೩) ಎಂದೂ ''ವಾಕ್ಕನ್ನು ವಿಚಾರಮಾಡಬಾರದು, ವಕ್ತೃವನ್ನೇ ಅರಿತುಕೊಳ್ಳಬೇಕು'' ಎಂದೂ ಉಪಕ್ರಮಿಸಿ ''ಅದು ಹೇಗೆಂದರೆ (ಹೇಗೆ) ರಥದ (ಚಕ್ರದ) ಹಾರೆಕೋಲುಗಳಲ್ಲಿ ಹಳಿಯು ಸೇರಿಸಿಡಲ್ಪಟ್ಟಿರುತ್ತದೆಯೋ, ಹಾರೆಕೋಲುಗಳನ್ನು ಗುಂಬದಲ್ಲಿ ಸೇರಿಸಿಟ್ಟಿದೆಯೋ, ಹೀಗೆಯೇ ಈ ಭೂತಮಾತ್ರೆಗಳನ್ನು ಪ್ರಜ್ಞಾಮಾತ್ರೆಗಳಲ್ಲಿ ಸೇರಿಸಿಟ್ಟಿದೆ, ಪ್ರಜ್ಞಾಮಾತ್ರೆಗಳನ್ನು ಪ್ರಾಣನಲ್ಲಿ ಸೇರಿಸಿಟ್ಟಿದೆ. ಆ ಈ ಪ್ರಜ್ಞಾತ್ಮನಾದ ಪ್ರಾಣನು ಆನಂದನು, ಅಜರನು, ಅಮರನು'' (ಕೌ. ೩-೯) ಎಂದು ವಿಷಯೇಂದ್ರಿಯವ್ಯವಹಾರಗಳಿಂದ ತಿರಸ್ಕೃತವಾಗದಿರುವ ಪ್ರತ್ಯಗಾತ್ಮನನ್ನೇ ಉಪಸಂಹಾರಮಾಡಿರುತ್ತದೆ. ''ಅವನನ್ನು ನನ್ನ ಆತ್ಮನು ಎಂದು ಅರಿತುಕೊಳ್ಳಬೇಕು.'' (ಕೌ. ೩-೯) ಎಂಬ ಉಪಸಂಹಾರವುಕೂಡ ಪ್ರತ್ಯಗಾತ್ಮನನ್ನು ತೆಗೆದುಕೊಂಡರೆ ಸರಿಯಾಗುತ್ತದೆಯೇ ಹೊರತು ಹೊರಗಿನ (ದೇವತಾದಿಗಳನ್ನು) ತೆಗೆದುಕೊಂಡರೆ (ಸರಿಯಾಗುವ)ದಿಲ್ಲ. ''ಈ

ಎಲ್ಲವನ್ನೂ ಅನುಭವಿಸುತ್ತಿರುವ ಆತ್ಮನು ಬ್ರಹ್ಮವು" (ಬೃ. ೨-೫-೧೯) ಎಂದ ಬೇರೊಂದು ಶ್ರುತಿಯೂ ಇದೆ.[1] ಆದ್ದರಿಂದ (ಹೀಗೆ) ಅಧ್ಯಾತ್ಮಸಂಬಂಧದ ಬಾಹುಲ್ಯವಿರುವದರಿಂದ ಇದು ಬ್ರಹ್ಮವನ್ನು ತಿಳಿಸುವದೇ ಹೊರತು ದೇವತಾತ್ಮನನ್ನು ತಿಳಿಸುವದಿಲ್ಲ.

## ಇಂದ್ರನು ನಾನು ಎಂದುಕೊಂಡಿರುವದು ಶಾಸ್ತ್ರದೃಷ್ಟಿಯಿಂದ

**ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ॥ ೩೦ ॥**

೩೦. (ವಕ್ತೃವಿನ ಆತ್ಮನನ್ನು) ಹೇಳಿರುವದಾದರೋ ವಾಮದೇವನಂತೆ ಶಾಸ್ತ್ರದೃಷ್ಟಿಯಿಂದ.

(ಭಾಷ್ಯ)

೧೪೦. ಕಥಂ ತರ್ಹಿ ವಕ್ತುರಾತ್ಮೋಪದೇಶಃ? ಇನ್ದ್ರೋ ನಾಮ ದೇವತಾತ್ಮಾ ಸ್ವಮ್ ಆತ್ಮಾನಂ ಪರಮಾತ್ಮತ್ವೇನ ಅಹಮೇವ ಪರಂ ಬ್ರಹ್ಮ ಇತಿ ಆರ್ಷೇಣ ದರ್ಶನೇನ ಯಥಾಶಾಸ್ತ್ರಂ ಪಶ್ಯನ್ ಉಪದಿಶತಿ ಸ್ಮ "ಮಾಮೇವ ವಿಜಾನೀಹಿ" (ಕೌ. ೩-೧) ಇತಿ । ಯಥಾ "ತದ್ಧೈತತ್ ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯಶ್ಚ" (ಬೃ. ೧-೪-೧೦) ಇತಿ, ತದ್ವತ್ । "ತದ್ ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್" (ಬೃ. ೧-೪-೧೦) ಇತಿ ಶ್ರುತೇಃ । ಯತ್ ಪುನರುಕ್ತಂ "ಮಾಮೇವ ವಿಜಾನೀಹಿ" ಇತ್ಯುಕ್ತ್ವಾ ವಿಗ್ರಹಧರ್ಮೈಃ ಇನ್ದ್ರ ಆತ್ಮಾನಂ ತುಷ್ಟಾವ ತ್ವಾಷ್ಟ್ರವಧಾದಿಭಿಃ ಇತಿ, ತತ್ ಪರಿಹರ್ತವ್ಯಮ್ । ಅತ್ರೋಚ್ಯತೇ. ನ ತ್ವಾಷ್ಟ್ರವಧಾದೀನಾಂ ವಿಜ್ಞೇಯೇನ್ದ್ರಸ್ತುತ್ಯರ್ಥತ್ವೇನ ಉಪನ್ಯಾಸಃ– "ಯಸ್ಮಾತ್ ಏವಂ ಕರ್ಮಾ ಅಹಮ್, ತಸ್ಮಾತ್ ಮಾಂ ವಿಜಾನೀಹಿ" ಇತಿ । ಕಥಂ ತರ್ಹಿ? ವಿಜ್ಞಾನಸ್ತುತ್ಯರ್ಥತ್ವೇನ । ಯತ್ಕಾರಣಂ ತ್ವಾಷ್ಟ್ರವಧಾದೀನಿ ಸಾಹಸಾನಿ ಉಪನ್ಯಸ್ಯಪರೇಣ ವಿಜ್ಞಾನಸ್ತುತಿಮ್ ಅನುಸಂದಧಾತಿ—"ತಸ್ಯ ಮೇ ತತ್ರ ಲೋಮ ಚ ನ ಮೀಯತೇ ಸ ಯೋ ಮಾಂ ವೇದ ನ ಹ ವೈ ತಸ್ಯ ಕೇನ ಚ ಕರ್ಮಣಾ

---

1. ಬ್ರಹ್ಮವು ಪ್ರತ್ಯಗ್ರೂಪವೆಂದು ಈ ಶ್ರುತಿಯಲ್ಲಿ ಹೇಳಿದೆ; ಆದ್ದರಿಂದ ಪ್ರತ್ಯಗಾತ್ಮನನ್ನೇ ಬಹಳವಾಗಿ ಹೇಳುವ ಪ್ರಕೃತವಾಕ್ಯಸಂದರ್ಭವು ಹೊರಗಿನ ದೇವತೆಯನ್ನು ಹೇಳುತ್ತದೆ ಎಂಬುದು ಸರಿಯಲ್ಲ.

ಲೋಕೋ ಮೀಯತೇ ''[1] (ಕೌ. ೩-೧) ಇತ್ಯಾದಿನಾ । ಏತದುಕ್ತಂ ಭವತಿ-ಯಸ್ಮಾತ್ ಈದೃಶಾನ್ಯಪಿ ಕ್ರೂರಾಣಿ ಕರ್ಮಾಣಿ ಕೃತವತೋ ಮಮ ಬ್ರಹ್ಮಭೂತಸ್ಯ ಲೋಮಾಪಿ ನ ಹಿಂಸ್ಯತೇ, ಸ ಯೋಽನ್ಯೋಽಪಿ ಮಾಂ ವೇದ ನ ತಸ್ಯ ಕೇನಚಿದಪಿ ಕರ್ಮಣಾ ಲೋಕೋ ಹಿಂಸ್ಯತೇ ಇತಿ । ವಿಜ್ಞೇಯಂ ತು ಬ್ರಹ್ಮೈವ "ಪ್ರಾಣೋಽಸ್ಮಿ ಪ್ರಜ್ಞಾತ್ಮಾ" ಇತಿ ವಕ್ಷ್ಯಮಾಣಮ್ । ತಸ್ಮಾತ್ ಬ್ರಹ್ಮವಾಕ್ಯಮೇತತ್ ॥

(ಭಾಷ್ಯಾರ್ಥ)

ಹಾಗಾದರೆ[2] ವಕ್ತೃವಿನ ಆತ್ಮವನ್ನು ತಿಳಿಸಿರುವದು ಹೇಗೆ (ಹೊಂದುತ್ತದೆ)? ಎಂದರೆ, ಇಂದ್ರನೆಂಬ ದೇವತಾತ್ಮನು ತನ್ನ ಆತ್ಮನನ್ನು ಪರಮಾತ್ಮನನ್ನಾಗಿ ತಾನೇ ಪರಬ್ರಹ್ಮವು ಎಂದು ಆರ್ಷದರ್ಶನದಿಂದ[3] ಶಾಸ್ತ್ರದಲ್ಲಿ ಹೇಳಿರುವಂತೆ ಕಂಡುಕೊಂಡು "ನನ್ನನ್ನೇ ಅರಿತುಕೊ" (ಕೌ. ೩-೧) ಎಂದು ಉಪದೇಶಿಸಿರುತ್ತಾನೆ. ಹೇಗೆ "ಆ ಇದನ್ನು ಅರಿತುಕೊಂಡು ಋಷಿಯಾದ ವಾಮದೇವನು ನಾನು ಮನುವಾಗಿದ್ದೆನು, ಸೂರ್ಯನಾಗಿದ್ದೆನು ಎಂದು ಅರಿತುಕೊಂಡನು" (ಬೃ. ೧-೪-೧೦) ಎಂದು (ಶ್ರುತಿಯಲ್ಲಿ ಹೇಳಿದೆಯೋ) ಅದರಂತೆಯೇ (ಇದು). "ಅದನ್ನು ದೇವತೆಗಳಲ್ಲಿ ಯಾವಯಾವನು ಅರಿತುಕೊಂಡನೋ, ಅವನೇ ಅದಾದನು"[4] (ಬೃ. ೧-೪-೧೦) ಎಂಬ ಶ್ರುತಿಯಿಂದ (ಹೀಗೆಂದು ಸಿದ್ಧವಾಗುತ್ತದೆ). ಇನ್ನು "ನನ್ನನ್ನೇ ಅರಿತುಕೊ" ಎಂದು ಹೇಳಿ ತ್ವಾಷ್ಟ್ರವಧೆಯೇ ಮುಂತಾದ ಶರೀರಧರ್ಮಗಳಿಂದ ಇಂದ್ರನು ತನ್ನನ್ನು ಹೊಗಳಿಕೊಂಡಿದಾನೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ' ಅದನ್ನು ಪರಿಹರಿಸಬೇಕಾಗಿದೆ. ಅದಕ್ಕೆ (ಈ ಪರಿಹಾರವನ್ನು) ಹೇಳುತ್ತೇವೆ. ತ್ವಾಷ್ಟ್ರವಧೆಯೇ ಮುಂತಾದವುಗಳನ್ನು ಉಪಾಸ್ಯನಾದ ಇಂದ್ರನನ್ನು—'ನಾನು ಇಂಥ ಕರ್ಮವನ್ನು ಮಾಡಿದವನು, ಆದ್ದರಿಂದ ನನ್ನನ್ನು ಉಪಾಸನೆ ಮಾಡು' ಎಂದು ಹೊಗಳುವದಕ್ಕಾಗಿ ಹೇಳಿರುವದಿಲ್ಲ, ಮತ್ತೇಕೆಂದರೆ (ಬ್ರಹ್ಮ)ವಿಜ್ಞಾನದ ಸ್ತುತಿಗಾಗಿ (ಹೇಳಿರುತ್ತದೆ). ಯಾವ

---

1. "ತಸ್ಯ ಮೇ ತತ್ರ ನ ಲೋಮ ಚ ನಾಮೀಯತ ಸ ಯೋ ಮಾಂ ವೇದ" ಎಂದು ಆ ॥ ಪಾಠ ; 'ಯೋ ಮಾಂ ವಿಜಾನೀಯಾತ್' ಎಂದು ನಿ ॥ ಪಾಠ.

2. ಪ್ರಾಣವು ದೇವತಾತ್ಮನಲ್ಲವಾದರೆ.

3. ವೇದದಲ್ಲಿ ಹೇಳಿರುವ ಜ್ಞಾನವು ಋಷಿಗಳಿಗೆ ಧರ್ಮಾತಿಶಯದಿಂದ ಹೊಳೆಯುವದು ಆರ್ಷದರ್ಶನವು.

4. ದೇವತೆಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಮುಂದೆ ೧-೩-೨೬ ರಲ್ಲಿ ನಿರ್ಣಯಿಸಲಾಗುವದು,

ಕಾರಣದಿಂದ (ಹೀಗೆ ನಿಶ್ಚಯಿಸಿದೆ ಎಂದರೆ) ತ್ವಾಷ್ಟ್ರವಧೆಯೇ ಮುಂತಾದ ಸಾಹಸಗಳನ್ನು ಹೇಳಿ ಮುಂದೆ "ಆ ನನ್ನ ಕೂದಲೆಳೆಗೂ ಅದರಿಂದ ತೊಂದರೆ ಯಾಗಿರುವದಿಲ್ಲ, ನನ್ನನ್ನು ಯಾವನು ಅರಿತುಕೊಳ್ಳುವನೋ ಅವನ ಲೋಕಕ್ಕೆ ಯಾವ ಕರ್ಮದಿಂದಲೂ ತೊಂದರೆಯಾಗುವದಿಲ್ಲ" (ಕೌ. ೩-೧) ಎಂದು ಮುಂತಾಗಿ ವಿಜ್ಞಾನದ ಸ್ತುತಿಯನ್ನು ಸೇರಿಸಿರುತ್ತಾನೆ. (ಇಲ್ಲಿ) ಇಷ್ಟನ್ನು ಹೇಳಿ ದಂತಾಗಿದೆ. ಈ ಬಗೆಯ ಕ್ರೂರಕರ್ಮಗಳನ್ನು ಮಾಡಿದ್ದರೂ ಬ್ರಹ್ಮವಾಗಿರುವ ನನ್ನ ಕೂದಲೆಳೆಗೂ ತೊಂದರೆಯಾಗದ್ದರಿಂದ, ಬೇರೆ ಯಾವನು ನನ್ನನ್ನು ಅರಿತು ಕೊಳ್ಳುವನೋ ಅವನಿಗೆ ಯಾವ ಕರ್ಮದಿಂದಲೂ ಲೋಕಕ್ಕೆ ಹಿಂಸೆಯಾಗುವ ದಿಲ್ಲ (ಎಂಬುದು ಅಭಿಪ್ರಾಯವು)[1]. ಇಲ್ಲಿ ಅರಿತುಕೊಳ್ಳಬೇಕಾದದ್ದೋ ಎಂದರೆ ಮುಂದೆ 'ಪ್ರಜ್ಞಾತ್ಮನಾದ ಪ್ರಾಣನಾಗಿರುವೆನು' ಎಂದು ಹೇಳಿರುವ ಬ್ರಹ್ಮವೇ. ಆದ್ದರಿಂದ ಇದು ಬ್ರಹ್ಮವಾಕ್ಯವು.

## ಜೀವಮುಖ್ಯಪ್ರಾಣಗಳನ್ನು ಗ್ರಹಿಸಿದರೆ ದೋಷ

**ಜೀವಮುಖ್ಯಪ್ರಾಣಲಿಙ್ಗಾನ್ನೇತಿ**
**ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ ॥ ೩೧ ॥**

೩೧. ಜೀವ, ಮುಖ್ಯಪ್ರಾಣ-ಇವುಗಳ ಲಿಂಗವಿರುವದರಿಂದ (ಇದು ಬ್ರಹ್ಮವಾಕ್ಯವಲ್ಲ)ಎಂದರೆ ಹಾಗಲ್ಲ; ಏಕೆಂದರೆ(ಆಗ)ಉಪಾಸಾತ್ರೈವಿಧ್ಯ ವಾಗುವದು. (ಪ್ರಾಣಶಬ್ದಕ್ಕೆ ಬ್ರಹ್ಮಲಿಂಗದಿಂದ ಬ್ರಹ್ಮಪರತ್ವವನ್ನು ಬೇರೆಯ ಕಡೆಯಲ್ಲಿಯೂ)ಆಶ್ರಯಿಸಿರುವದರಿಂದಲೂ ಇಲ್ಲಿ ಅದರ ಸಂಬಂಧ ವಿರುವದರಿಂದಲೂ(ಇದು ಬ್ರಹ್ಮವಾಕ್ಯವೇ).

## ಪೂರ್ವಪಕ್ಷ: ವಾಕ್ಯದಲ್ಲಿ ಜೀವಮುಖ್ಯಪ್ರಾಣಲಿಂಗಗಳಿವೆ

(ಭಾಷ್ಯ)

೧೪೧. ಯದ್ಯಪಿ ಆಧ್ಯಾತ್ಮಸಂಬನ್ಧಭೂಮದರ್ಶನಾನ್ ನ ಪರಾಚೀವಸ್ಯ ದೇವತಾತ್ಮನಃ ಉಪದೇಶಃ, ತಥಾಪಿ ನ ಬ್ರಹ್ಮವಾಕ್ಯಂ ಭವಿತುಮರ್ಹತಿ । ಕುತಃ? ಜೀವಲಿಙ್ಗಾತ್, ಮುಖ್ಯಪ್ರಾಣಲಿಙ್ಗಾಚ್ಚ । ಜೀವಸ್ಯ ತಾವತ್ ಅಸ್ಮಿನ್ ವಾಕ್ಯೇ ವಿಸ್ಪಷ್ಟಂ ಲಿಙ್ಗಮ್ ಉಪಲಭ್ಯತೇ "ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್" (ಕೌ. ೩-೮) ಇತ್ಯಾದಿ । ಅತ್ರ ಹಿ ವಾಗಾದಿಭಿಃ ಕರಣೈರ್ವ್ಯಾಪೃತಸ್ಯ

1. ಜ್ಞಾನಕ್ಕೆ ಪೂರ್ವದಲ್ಲಿ ಮಾಡಿದ ಕರ್ಮಗಳೆಲ್ಲವೂ ಜ್ಞಾನದಿಂದ ಕ್ಷಯವಾಗು ತ್ತವೆ, ಆದ್ದರಿಂದ ಬ್ರಹ್ಮಜ್ಞಾನಕ್ಕೆ ಯಾವ ಅಡ್ಡಿಯೂ ಉಳಿಯುವದಿಲ್ಲ—ಎಂದು ಭಾವ.

ಕಾರ್ಯಕರಣಾಧ್ಯಕ್ಷಸ್ಯ ಜೀವಸ್ಯ ವಿಜ್ಞೇಯತ್ವಮ್ ಅಭಿಧೀಯತೇ। ತಥಾ ಮುಖ್ಯಪ್ರಾಣಲಿಙ್ಗಮಪಿ “ಅಥ ಖಲು ಪ್ರಾಣ ಏವ ಪ್ರಜ್ಞಾತ್ಮೇದಂ ಶರೀರಂ ಪರಿಗೃಹ್ಯೋತ್ಥಾಪಯತಿ” (ಕೌ. ೩-೩) ಇತಿ। ಶರೀರಧಾರಣಂ ಚ ಮುಖ್ಯಪ್ರಾಣಸ್ಯ ಧರ್ಮಃ। ಪ್ರಾಣಸಂವಾದೇ ವಾಗಾದೀನ್ ಪ್ರಾಣಾನ್ ಪ್ರಕೃತ್ಯ “ತಾನ್ ವರಿಷ್ಠಃ ಪ್ರಾಣ ಉವಾಚ ಮಾ ಮೋಹಮಾಪದ್ಯಥಾಹಮೇವೈತತ್ಪಞ್ಚಧಾತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾಮಿ” (ಪ್ರ. ೨-೩) ಇತಿ ಶ್ರವಣಾತ್। ಯೇ ತು ‘ಇಮಂ ಶರೀರಂ ಪರಿಗೃಹ್ಯ’ ಇತಿ ಪಠನ್ತಿ ತೇಷಾಮ್ ಇಮಂ ಜೀವಮ್, ಇನ್ದ್ರಿಯಗ್ರಾಮಂ ವಾ ಪರಿಗೃಹ್ಯ ಶರೀರಮ್ ಉತ್ಥಾಪಯತಿ ಇತಿ ವ್ಯಾಖ್ಯೇಯಮ್। ಪ್ರಜ್ಞಾತ್ಮತ್ವಮಪಿ ಜೀವೇ ತಾವತ್ ಚೇತನತ್ವಾತ್ ಉಪಪನ್ನಮ್। ಮುಖ್ಯೇಽಪಿ ಪ್ರಾಣೇ ಪ್ರಜ್ಞಾಸಾಧನಪ್ರಾಣಾನ್ತರಾಶ್ರಯತ್ವಾತ್ ಉಪಪನ್ನಮೇವ। ಜೀವಮುಖ್ಯಪ್ರಾಣಪರಿಗ್ರಹೇ ಚ ಪ್ರಾಣಪ್ರಜ್ಞಾತ್ಮನೋಃ ಸಹ ವೃತ್ತಿತ್ವೇನಾಭೇದನಿರ್ದೇಶಃ ಸ್ವರೂಪೇಣ ಚ ಭೇದನಿರ್ದೇಶಃ ಇತಿ ಉಭಯಥಾ ನಿರ್ದೇಶಃ ಉಪಪದ್ಯತೇ “ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ವೈ ಪ್ರಜ್ಞಾ ಸ ಪ್ರಾಣಃ ಸಹ ಹ್ಯೇತಾವಸ್ಮಿಞ್ಶರೀರೇ ವಸತಃ ಸಹೋತ್ಕ್ರಾಮತಃ”[1] (ಕೌ. ೩-೪) ಇತಿ। ಬ್ರಹ್ಮಪರಿಗ್ರಹೇ ತು ಕಿಂ ಕಸ್ಮಾದ್ ಭಿದ್ಯೇತ? ತಸ್ಮಾತ್ ಇಹ ಜೀವಮುಖ್ಯಪ್ರಾಣಯೋಃ ಅನ್ಯತರಃ, ಉಭೌ ವಾ ಪ್ರತೀಯೇಯಾತಾಂ ನ ಬ್ರಹ್ಮ ಇತಿ ಚೇತ್” ॥

(ಭಾಷ್ಯಾರ್ಥ)

ಅಧ್ಯಾತ್ಮಸಂಬಂಧದ ಬಾಹುಲ್ಯವು ಕಾಣುತ್ತಿರುವದರಿಂದ ಹೊರಗಿನ ದೇವತಾತ್ಮನನ್ನು (ಇಲ್ಲಿ) ತಿಳಿಸಿಲ್ಲವೆಂದಾಗಲಿ; ಆದರೂ (ಇದು) ಬ್ರಹ್ಮವಾಕ್ಯವಾಗಲಾರದು. ಏಕೆಂದರೆ (ಇಲ್ಲಿ) ಜೀವಲಿಂಗವಿದೆ, ಮುಖ್ಯಪ್ರಾಣಲಿಂಗವೂ ಇದೆ. ಮೊದಲನೆಯದಾಗಿ ಈ ವಾಕ್ಯದಲ್ಲಿ “ವಾಕ್ಕನ್ನು ವಿಚಾರಿಸಬಾರದು, ವಕ್ತೃವನ್ನು ಅರಿತುಕೊಳ್ಳಬೇಕು” (ಕೌ ೩–೮) ಎಂದು ಮುಂತಾಗಿ ಜೀವನ ಲಿಂಗವು ವಿಸ್ಪಷ್ಟವಾಗಿ ಕಂಡುಬರುತ್ತದೆ. ಹೇಗೆಂದರೆ ಇಲ್ಲಿ ವಾಕ್ಕೇ ಮುಂತಾದ ಕರಣಗಳಿಂದ ವ್ಯಾಪಾರವನ್ನು ಮಾಡುತ್ತಿರುವ, ಕಾರ್ಯಕರಣಗಳಿಗೆ ಒಡೆಯನಾದ ಜೀವನನ್ನು ಅರಿತುಕೊಳ್ಳಬೇಕೆಂದು ಹೇಳಿರುತ್ತದೆ. ಹೀಗೆಯೇ “ಇನ್ನು ಪ್ರಜ್ಞಾತ್ಮನಾದ ಪ್ರಾಣನೇ ಈ ಶರೀರವನ್ನು ಹಿಡಿದೆತ್ತಿರುವದು” (ಕೌ. ೩-೩) ಎಂದು ಮುಖ್ಯಪ್ರಾಣಲಿಂಗವೂ (ಕಾಣಬರುತ್ತದೆ). ಶರೀರಧಾರಣವಂತೂ ಮುಖ್ಯಪ್ರಾಣದ ಧರ್ಮವು. ಪ್ರಾಣಸಂವಾದದಲ್ಲಿ ವಾಗಾದಿಪ್ರಾಣಗಳ ಪ್ರಕರಣದಲ್ಲಿ “ಅವರನ್ನು ಕುರಿತು ವರಿಷ್ಠ

---

1. “ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ವಾ ಪ್ರಜ್ಞಾ ಸ ಪ್ರಾಣಃ” ಎಂದು ನಿ ॥ ಅ ॥ ಪಾಠಗಳು ; ಆದರೆ ಅ ॥ ಪಾಠದಲ್ಲಿ ಈ ಎರಡು ವಾಕ್ಯಗಳೂ ಒಂದೇ ಕಡೆಯಲ್ಲಿಲ್ಲ.

ನಾದ ಪ್ರಾಣನು ಹೇಳಿದನೇನೆಂದರೆ ಮೋಹವನ್ನು ಹೊಂದಬೇಡಿರಿ, ನಾನೇ ನನ್ನನ್ನು ಐದು ಭಾಗವಾಗಿ ಈ ಶರೀರವನ್ನು ಎತ್ತಿಹಿಡಿದು ನಿಲ್ಲಿಸಿಕೊಂಡಿರುವೆನು". (ಪ್ರ. ೨-೩) ಎಂದು ಶ್ರುತಿಯು (ಹೇಳುವದರಿಂದ ಇದು ಸಿದ್ಧವಾಗುತ್ತದೆ). ಯಾರು "ಇಮಂ ಶರೀರಂ ಪರಿಗೃಹ್ಯ"[1] ಎಂಬ (ಪುಲ್ಲಿಂಗ) ಪಾಠವನ್ನು ಇಟ್ಟುಕೊಂಡಿರುವರೋ ಅವರ (ಮತದಲ್ಲಿ) ಈ ಜೀವನನ್ನು ಅಥವಾ ಇಂದ್ರಿಯ ಸಮೂಹವನ್ನು ಹಿಡಿದು ಶರೀರವನ್ನು ಎತ್ತಿಹಿಡಿದುಕೊಂಡಿರುತ್ತದೆ ಎಂದು (ಈ ವಾಕ್ಯಕ್ಕೆ) ಅರ್ಥವನ್ನು ಮಾಡಬೇಕು. ಪ್ರಜ್ಞಾತ್ಮನಾಗಿರುವದೂ ಮೊದಲನೆಯದಾಗಿ ಜೀವನು ಚೇತನನಾಗಿರುವದರಿಂದ (ಅವನಿಗೆ) ಹೊಂದುತ್ತದೆ. ಪ್ರಜ್ಞೆಗೆ ಸಾಧನವಾಗಿರುವ ಬೇರೆಯ ಪ್ರಾಣಗಳಿಗೆ[2] ಆಶ್ರಯವಾಗಿರುವದರಿಂದ ಮುಖ್ಯಪ್ರಾಣಕ್ಕೂ (ಪ್ರಜ್ಞಾತ್ಮತ್ವವು) ಹೊಂದಿಯೇ ಹೊಂದುತ್ತದೆ. (ಇಲ್ಲಿ) ಜೀವಮುಖ್ಯಪ್ರಾಣಗಳನ್ನು ತೆಗೆದುಕೊಂಡರೆ ಪ್ರಾಣಪ್ರಜ್ಞಾತ್ಮರು ಜೊತೆಯಲ್ಲಿಯೇ ಇರುವದರಿಂದ (ಅವರಿಗೆ) ಅಭೇದವನ್ನು ಹೇಳಿದೆ, ಸ್ವರೂಪದಿಂದ ಭೇದವನ್ನು ಹೇಳಿದೆ[3] ಎಂದಾಗಿ "ಯಾವದು ಪ್ರಾಣವೋ ಅದು ಪ್ರಜ್ಞೆಯು, ಯಾವದು ಪ್ರಜ್ಞೆಯೋ ಅದು ಪ್ರಾಣವು; ಏಕೆಂದರೆ ಇವರಿಬ್ಬರೂ ಜೊತೆಯಲ್ಲಿಯೇ ಈ ಶರೀರದಲ್ಲಿ ಇರುತ್ತಾರೆ, ಜೊತೆಯಲ್ಲಿಯೇ ಹೊರಟುಹೋಗುತ್ತಾರೆ" (ಕೌ. ೩-೪) ಎಂದು ಎರಡು ರೀತಿಯಲ್ಲಿ ಹೇಳಿರುವದೂ ಸರಿಯಾಗುತ್ತದೆ. ಆದರೆ ಬ್ರಹ್ಮವನ್ನು ತೆಗೆದುಕೊಂಡರೆ ಯಾವದು ಯಾವದಕ್ಕಿಂತ ಭಿನ್ನವಾಗಿರಬೇಕು. ?[4] ಆದ್ದರಿಂದ ಈ (ವಾಕ್ಯದಲ್ಲಿ) ಜೀವಮುಖ್ಯಪ್ರಾಣಗಳಲ್ಲಿ ಒಂದನ್ನು ಅಥವಾ ಈ ಎರಡನ್ನೂ ಗ್ರಹಿಸಬಹುದೇ ಹೊರತು ಬ್ರಹ್ಮವನ್ನಲ್ಲ.

## ಸಿದ್ಧಾಂತ: ಬ್ರಹ್ಮವನ್ನು ತೆಗೆದುಕೊಂಡರೆ ಏಕವಾಕ್ಯತೆ ಇರುತ್ತದೆ

(ಭಾಷ್ಯ)

೧೪೨. ನೈತದೇವಮ್। ಉಪಾಸಾತ್ರೈವಿಧ್ಯಾತ್ । ಏವಂ ಸತಿ ತ್ರಿವಿಧಮೇ ಉಪಾಸನಂ ಪ್ರಸಜ್ಯೇತ—ಜೀವೋಪಾಸನಂ ಮುಖ್ಯಪ್ರಾಣೋಪಾಸನಂ ಬ್ರಹ್ಮೋಪಾಸನಂ ಚ ಇತಿ । ನ ಚೈತತ್ ಏಕಸ್ಮಿನ್ ವಾಕ್ಯೇ ಅಭ್ಯುಪಗನ್ತುಂ ಯುಕ್ತಮ್,

1. ಈ ಪಾಠವು ನಿ ॥ ಆ ॥ ಎರಡರಲ್ಲಿಯೂ ಇಲ್ಲ.
2. ಇಂದ್ರಿಯಗಳಿಗೆ.
3. ಜೀವನೂ ಪ್ರಾಣವೂ ಬೇರೆಬೇರೆಯಾಗಿದ್ದರೂ ಒಟ್ಟಿಗೆ ಇರುತ್ತಾರೆ.
4. ಬ್ರಹ್ಮವು ಅದ್ವಿತೀಯವಾಗಿರುವದರಿಂದ ಅದರಲ್ಲಿ ಪ್ರಾಣ, ಪ್ರಜ್ಞೆ–ಎಂಬ ಭೇದವಿರುವದಿಲ್ಲ.

ಉಪಕ್ರಮೋಪಸಂಹಾರಾಭ್ಯಾಂ ಹಿ ವಾಕ್ಯೈಕತ್ವಮ್ ಅವಗಮ್ಯತೇ। "ಮಾಮೇವ ವಿಜಾನೀಹಿ" (ಕೌ. ೩-೧) ಇತಿ ಉಪಕ್ರಮ್ಯ "ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ಸ್ವ" (ಕೌ. ೩-೧) ಇತ್ಯುಕ್ತ್ವಾ ಅನ್ತೇ "ಸ ಏಷ ಪ್ರಾಣ ಏವ ಪ್ರಜ್ಞಾತ್ಮಾನನ್ದೋಽಜರೋಽಮೃತಃ" (ಕೌ. ೩-೯) ಇತಿ ಏಕರೂಪೌ ಉಪಕ್ರಮೋಪಸಂಹಾರೌ ದೃಶ್ಯೇತೇ। ತತ್ರ ಅರ್ಥೈಕತ್ವಂ ಯುಕ್ತಮ್ ಆಶ್ರಯಿತುಮ್ ನ ಚ ಬ್ರಹ್ಮಲಿಙ್ಗಮ್ ಅನ್ಯಪರತ್ವೇನ ಪರಿಣೇತುಂ ಶಕ್ಯಮ್। ದಶಾನಾಂ ಭೂತಮಾತ್ರಾಣಾಂ ಪ್ರಜ್ಞಾಮಾತ್ರಾಣಾಂ ಚ ಬ್ರಹ್ಮಣೋಽನ್ಯತ್ರ ಅರ್ಪಣಾನುಪಪತ್ತೇಃ। ಆಶ್ರಿತತ್ವಾಚ್ಚ ಅನ್ಯತ್ರಾಪಿ ಬ್ರಹ್ಮಲಿಙ್ಗವಶಾತ್ ಪ್ರಾಣಶಬ್ದಸ್ಯ ಬ್ರಹ್ಮಣಿ ವೃತ್ತೇಃ। ಇಹಾಪಿ ಚ ಹಿತತಮೋಪನ್ಯಾಸಾದಿಬ್ರಹ್ಮಲಿಙ್ಗಯೋಗಾತ್ ಬ್ರಹ್ಮೋಪದೇಶ ಏವಾಯಮ್ ಇತಿ ಗಮ್ಯತೇ ॥

(ಭಾಷ್ಯಾರ್ಥ)

ಇದು ಹೀಗಲ್ಲ. ಏಕೆಂದರೆ ಉಪಾಸಾತ್ರೈವಿಧ್ಯವಾಗುವದು. ಹೀಗಾದರೆ, ಜೀವೋಪಾಸನೆ, ಮುಖ್ಯಪ್ರಾಣೋಪಾಸನೆ, ಬ್ರಹ್ಮೋಪಾಸನೆ—ಎಂದು (ಇಲ್ಲಿ) ಮೂರು ಬಗೆಯ ಉಪಾಸನೆಯನ್ನು (ಹೇಳಿದೆಯೆಂದಾ)ಗುವದು.[1] ಆದರೆ ಒಂದೇ ವಾಕ್ಯದಲ್ಲಿ ಒಪ್ಪುವದು ಸರಿಯಲ್ಲ.[2] ಉಪಕ್ರಮೋಪಸಂಹಾರಗಳಿಂದ (ಇದೆಲ್ಲ) ಒಂದೇ ವಾಕ್ಯವೆಂದು ನಿಶ್ಚಯವಾಗುತ್ತದೆ. "ನನ್ನನ್ನೇ ಅರಿತುಕೊ" (ಕೌ. ೩-೧) ಎಂದು ಉಪಕ್ರಮಿಸಿ "ಪ್ರಜ್ಞಾತ್ಮನಾದ ಪ್ರಾಣನಾಗಿರುತ್ತಾನೆ, ಆ ನನ್ನನ್ನು ಆಯುಸ್ಸು, ಅಮೃತವು ಎಂದು ಉಪಾಸನೆ ಮಾಡು" (ಕೌ. ೩-೧) ಎಂದು ಹೇಳಿ ಕೊನೆಯಲ್ಲಿ "ಆ ಈ ಪ್ರಜ್ಞಾತ್ಮನಾದ ಪ್ರಾಣನೇ ಆನಂದನು, ಅಜರನು, ಅಮೃತನು" ಎಂದು (ಹೇಳಿರುತ್ತದೆಯಾದ್ದರಿಂದ) ಉಪಕ್ರಮೋಪಸಂಹಾರಗಳು ಒಂದೇ ರೂಪವಾಗಿ ಕಾಣುತ್ತವೆ. (ಆದ್ದರಿಂದ) ಇಲ್ಲಿ ಒಂದೇ ಅರ್ಥವನ್ನು ಇಟ್ಟುಕೊಳ್ಳುವದೇ ಯುಕ್ತವು. ಬ್ರಹ್ಮಲಿಂಗವನ್ನು ಮತ್ತೊಂದರ ಪರವಾಗಿ ತಿರುಗಿಸುವದಕ್ಕೂ ಆಗುವಹಾಗಿಲ್ಲ.[3] ಹತ್ತು ಭೂತಮಾತ್ರೆಗಳೂ ಪ್ರಜ್ಞಾಮಾತ್ರೆಗಳೂ[4]

---

1. ಜೀವ, ಮುಖ್ಯಪ್ರಾಣ–ಇವುಗಳ ಲಿಂಗಗಳಿವೆಯೆಂಬುದು ಪೂರ್ವಪಕ್ಷಿಗೆ ಸಮ್ಮತವಾಗಿದೆ; ಬ್ರಹ್ಮಲಿಂಗಗಳನ್ನೂ ನಾವು ತೋರಿಸಿರುತ್ತೇವೆ. ಆದ್ದರಿಂದ ಮೂರನ್ನೂ ಒಪ್ಪಬೇಕಾಗುತ್ತದೆ ಎಂದು ಭಾವ.

2. ವಾಕ್ಯವೆಂದರೆ ಎಷ್ಟು ಹೇಳಬೇಕೋ ಅಷ್ಟು. ಎಲ್ಲವೂ ಸೇರಿ ಒಂದೇ ತಾತ್ಪರ್ಯವುಳ್ಳ ಒಂದೇ ವಾಕ್ಯವಾಗುತ್ತಿರುವಲ್ಲಿ ಅನೇಕ ವಾಕ್ಯಗಳಾಗಿ ಒಡೆಯುವದು ಸರಿಯಲ್ಲ ಎಂದರ್ಥ.

3. ಬ್ರಹ್ಮಲಿಂಗಗಳೆಂದು ನೀವು ಹೇಳಿದವುಗಳನ್ನೂ ಹೇಗೋ ಜೀವನಿಗೂ ಮುಖ್ಯಪ್ರಾಣಕ್ಕೂ ಹೊಂದಿಸಬಹುದಲ್ಲವೆ ?–ಎಂಬ ಆಕ್ಷೇಪಕ್ಕೆ ಪರಿಹಾರವಿದು.

4. ಭೂತಮಾತ್ರೆಗಳೆಂದರೆ ವಿಷಯಗಳು, ಪ್ರಜ್ಞಾಮಾತ್ರೆಗಳೆಂದರೆ ಇಂದ್ರಿಯಗಳು, ಕೌ. ೩-೫ ನೋಡಿ.

ಬ್ರಹ್ಮವನ್ನು ಬಿಟ್ಟರೆ ಮತ್ತೊಂದರಲ್ಲಿ ಸೇರಿಸಲ್ಪಟ್ಟವೆ ಎಂಬುದು ಒಪ್ಪುವ ಹಾಗಿಲ್ಲ. ಮತ್ತೊಂದು ಕಡೆಯಲ್ಲಿಯೂ[1] ಬ್ರಹ್ಮಲಿಂಗದ ವಶದಿಂದ ಪ್ರಾಣಶಬ್ದಕ್ಕೆ ಬ್ರಹ್ಮದಲ್ಲಿ ವೃತ್ತಿಯನ್ನು ಆಶ್ರಯಿಸಿರುತ್ತದೆ. ಇಲ್ಲಿಯೂ ಹಿತತಮವಾದದ್ದನ್ನು ಹೇಳಿರುವದೇ ಮುಂತಾದ ಬ್ರಹ್ಮಲಿಂಗಗಳ ಸಂಬಂಧವಿರುವದರಿಂದ ಇದು ಬ್ರಹ್ಮವನ್ನು ತಿಳಿಸುವದೇ ಎಂದು ನಿಶ್ಚಯವಾಗುತ್ತದೆ.

## ಪ್ರಾಣಜೀವಲಿಂಗಗಳಿಗೆ ಗತಿ

(ಭಾಷ್ಯ)

೧೪೩. ಯತ್ತು ಮುಖ್ಯಪ್ರಾಣಲಿಙ್ಗಂ ದರ್ಶಿತಮ್ "ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ" ಇತಿ, ತದಸತ್ । ಪ್ರಾಣವ್ಯಾಪಾರಸ್ಯಾಪಿ ಪರಮಾತ್ಮಾಯತ್ತತ್ವಾತ್ ಪರಮಾತ್ಮನಿ ಉಪಚರಿತುಂ ಶಕ್ಯತ್ವಾತ್ । "ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ । ಇತರೇಣ ತು ಜೀವನ್ತಿ ಯಸ್ಮಿನ್ನೇತಾವುಪಾಶ್ರಿತೌ" (ಕ. ೨-೨-೫) ಇತಿ ಶ್ರುತೇಃ । ಯದಪಿ "ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್" ಇತ್ಯಾದಿ ಜೀವಲಿಙ್ಗಂ ದರ್ಶಿತಮ್, ತದಪಿ ನ ಬ್ರಹ್ಮಪಕ್ಷಂ ನಿವಾರಯತಿ । ನ ಹಿ ಜೀವೋ ನಾಮ ಅತ್ಯನ್ತಭಿನ್ನೋ ಬ್ರಹ್ಮಣಃ । "ತತ್ತ್ವಮಸಿ" (ಛಾಂ. ೬-೮-೭), "ಅಹಂ ಬ್ರಹ್ಮಾಸ್ಮಿ" (ಬೃ. ೧-೪-೧೦) ಇತ್ಯಾದಿಶ್ರುತಿಭ್ಯಃ । ಬುದ್ಧ್ಯಾದ್ಯುಪಾಧಿಕೃತಂ ತು ವಿಶೇಷಮ್ ಆಶ್ರಿತ್ಯ ಬ್ರಹ್ಮೈವ ಸನ್ ಜೀವಃ ಕರ್ತಾ ಭೋಕ್ತಾ ಚ ಇತಿ ಉಚ್ಯತೇ । ತಸ್ಯ ಉಪಾಧಿಕೃತವಿಶೇಷಪರಿತ್ಯಾಗೇನ ಸ್ವರೂಪಂ ಬ್ರಹ್ಮ ದರ್ಶಯಿತುಂ "ನ ವಾಚಂ ವಿಜಿಜ್ಞಾಸೀತ ವಕ್ತಾರಂ ವಿದ್ಯಾತ್" ಇತ್ಯಾದಿನಾ ಪ್ರತ್ಯಗಾತ್ಮಾಭಿಮುಖೀಕರಣಾರ್ಥಮ್ ಉಪದೇಶೋ ನ ವಿರುಧ್ಯತೇ । "ಯದ್ವಾಚಾನಭ್ಯುದಿತಂ ಯೇನ ವಾಗಭ್ಯುದ್ಯತೇ । ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ" (ಕೇ. ೧-೪) ಇತ್ಯಾದಿ ಚ ಶ್ರುತ್ಯನ್ತರಂ ವಚನಾದಿಕ್ರಿಯಾವ್ಯಾಪೃತಸ್ಯೈವ ಆತ್ಮನಃ ಬ್ರಹ್ಮತ್ವಂ ದರ್ಶಯತಿ । ಯತ್ಪುನಃ ಏತದುಕ್ತಮ್— "ಸಹ ಹ್ಯೇತಾವಸ್ಮಿಞ್ಛರೀರೇ ವಸತಃ ಸಹೋತ್ಕ್ರಾಮತಃ" ಇತಿ ಪ್ರಾಣಪ್ರಜ್ಞಾತ್ಮನೋರ್ಭೇದದರ್ಶನಂ ಬ್ರಹ್ಮವಾದೇ ನೋಪಪದ್ಯತ ಇತಿ । ನೈಷ ದೋಷಃ । ಜ್ಞಾನಕ್ರಿಯಾಶಕ್ತಿದ್ವಯಾಶ್ರಯಯೋಃ ಬುದ್ಧಿಪ್ರಾಣಯೋಃ ಪ್ರತ್ಯಗಾತ್ಮೋಪಾಧಿಭೂತಯೋಃ ಭೇದನಿರ್ದೇಶೋಪಪತ್ತೇಃ ಉಪಾಧಿದ್ವಯೋಪಹಿತಸ್ಯ ತು ಪ್ರತ್ಯಗಾತ್ಮನಃ ಸ್ವರೂಪೇಣ ಅಭೇದಃ ಇತ್ಯತಃ ಪ್ರಾಣ ಏವ ಪ್ರಜ್ಞಾತ್ಮಾ ಇತಿ ಏಕೀಕರಣಮ್ ಅವಿರುದ್ಧಮ್ ॥

---

1. ಪ್ರಾಣಾಧಿಕರಣದಲ್ಲಿ.

(ಭಾಷ್ಯಾರ್ಥ)

"ಈ ಶರೀರವನ್ನು ಹಿಡಿದುಕೊಂಡಿರುತ್ತದೆ" ಎಂಬುದು ಮುಖ್ಯಪ್ರಾಣ ಲಿಂಗವೆಂದು (ಪೂರ್ವಪಕ್ಷದಲ್ಲಿ) ತೋರಿಸಿತ್ತಷ್ಟೆ, ಅದು ಸರಿಯಲ್ಲ. ಏಕೆಂದರೆ ಪ್ರಾಣವ್ಯಾಪಾರವೂ ಪರಮಾತ್ಮನಿಗೆ ಅಧೀನವಾಗಿರುವದರಿಂದ ಪರಮಾತ್ಮನಲ್ಲಿ ಉಪಚಾರದಿಂದ (ಅದನ್ನು) ಹೇಳುವದಕ್ಕೆ ಆಗುತ್ತದೆ. "ಪ್ರಾಣದಿಂದಲಲ್ಲ, ಅಪಾನದಿಂದಲೂ ಯಾವನೊಬ್ಬ ಮರ್ತ್ಯನೂ ಜೀವಿಸಿರುವದಿಲ್ಲ; ಇವೆರಡೂ ಯಾವನಲ್ಲಿ ಆಶ್ರಯಿಸಿಕೊಂಡಿರುವವೋ (ಆ) ಇನ್ನೊಬ್ಬನಿಂದ ಜೀವಿಸಿರುತ್ತವೆ" (ಕ. ೨-೩-೫) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಇನ್ನು "ವಾಕ್ಕನ್ನು ವಿಚಾರಿಸಬಾರದು, ವಕ್ತೃವನ್ನು ಅರಿತುಕೊಳ್ಳಬೇಕು" (ಕೌ. ೩-೮) ಎಂದು ಮುಂತಾಗಿ ಜೀವಲಿಂಗವೆಂದು (ಪೂರ್ವಪಕ್ಷದಲ್ಲಿ) ತೋರಿಸಿತ್ತಷ್ಟೆ; ಅದೂ ಬ್ರಹ್ಮಪಕ್ಷವನ್ನು ತಡೆಮಾಡುವದಿಲ್ಲ, ಏಕೆಂದರೆ ಜೀವನೆಂದರೆ ಬ್ರಹ್ಮಕ್ಕಿಂತ ಅತ್ಯಂತ ಭಿನ್ನನಲ್ಲವೇ ಅಲ್ಲ; 'ಅದೇ ನೀನಾಗಿರುವೆ' (ಛಾಂ. ೬-೮-೭) "ನಾನು ಬ್ರಹ್ಮವಾಗಿರುವೆನು" (ಬೃ. ೧-೪-೧೦) ಎಂದು ಮುಂತಾಗಿರುವ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ). ಬುದ್ಧಿಯೇ ಮುಂತಾದ ಉಪಾಧಿಗಳಿಂದಾಗಿರುವ ವಿಶೇಷವನ್ನಿಟ್ಟುಕೊಂಡು ಬ್ರಹ್ಮವೇ ಆಗಿರುವವನನ್ನೇ ಜೀವನು, ಕರ್ತೃ, ಭೋಕ್ತೃ-ಎನ್ನುತ್ತೇವೆ. ಅವನಿಗೆ ಉಪಾಧಿಯಿಂದಾಗಿರುವ ವಿಶೇಷವನ್ನು ಬಿಟ್ಟರೆ (ಅವನ) ಸ್ವರೂಪವು ಬ್ರಹ್ಮವೇ ಎಂಬುದನ್ನು ತಿಳಿಸುವದಕ್ಕಾಗಿ "ವಾಕ್ಕನ್ನು ವಿಚಾರಮಾಡಬಾರದು, ವಕ್ತೃವನ್ನು ಅರಿತುಕೊಳ್ಳಬೇಕು" (ಕೌ. ೩-೮) ಎಂದು ಮುಂತಾಗಿ ಪ್ರತ್ಯಗಾತ್ಮನ ಕಡೆಗೆ ತಿರುಗಿಸುವದಕ್ಕಾಗಿ ಉಪದೇಶಮಾಡಿರುವದು ವಿರುದ್ಧವಾಗುವದಿಲ್ಲ.[1] "ಯಾವದು ವಾಕ್ಕಿನಿಂದ ಹೇಳಲ್ಪಡುವದಿಲ್ಲವೋ ಯಾವದರಿಂದ ವಾಕ್ಕು ತಿಳಿಸಲ್ಪಡುವದೋ ಅದನ್ನೇ ಬ್ರಹ್ಮವೆಂದು ನೀನು ತಿಳಿ. ಯಾವದನ್ನು ಇದೆಂದು ಉಪಾಸನೆ ಮಾಡುತ್ತಾರೋ ಇದಲ್ಲ" (ಕೇ. ೧-೪) ಎಂಬಿದೇ ಮುಂತಾದ ಬೇರೊಂದು ಶ್ರುತಿಯು ವಚನವೇ ಮುಂತಾದ ಕ್ರಿಯೆಗಳಲ್ಲಿ ತೊಡಗಿರುವ ಆತ್ಮನನ್ನೇ ಬ್ರಹ್ಮವೆಂದು ತಿಳಿಸುತ್ತದೆ[2]. ಇನ್ನು "ಇವರಿಬ್ಬರೂ ಜೊತೆಯಲ್ಲಿಯೇ ಇರುತ್ತಾರೆ, ಜೊತೆಯಲ್ಲಿಯೇ ಹೊರಟುಹೋಗುತ್ತಾರೆ" ಎಂದು ಪ್ರಾಣಪ್ರಜ್ಞಾತ್ಮರಿಗೆ ಭೇದ

---

1. ವಕ್ತೃವನ್ನು ಅರಿತುಕೊಳ್ಳಬೇಕು-ಎಂಬುದು ವಿಧಿಯಲ್ಲ. "ಆತ್ಮನನ್ನೇ ಶ್ರವಣಮಾಡಬೇಕು, ಮನನ ಮಾಡಬೇಕು" ಎಂಬ ವಾಕ್ಯದಂತೆ ಇಲ್ಲಿಯೂ ಅನಾತ್ಮವಾದ ವಾಗಾದಿಗಳಿಂದ ಹಿಂತಿರುಗಿಸಿ ಆತ್ಮನ ಕಡೆಗೆ ಲಕ್ಷ್ಯವನ್ನು ಎಳೆದಿದೆ ಎಂದು ಭಾವ.

2. ಆದರೆ ವಕ್ತೃತ್ವವು ಆತ್ಮನ ಧರ್ಮವೆಂದೇನೂ ಅಲ್ಲಿ ತಾತ್ಪರ್ಯವಿಲ್ಲ; ಪ್ರಕೃತದಲ್ಲಿಯೂ ಹಾಗೆಯೇ ಎಂದು ಭಾವ.

ವನ್ನು ತಿಳಿಸಿರುವದು ಬ್ರಹ್ಮವಾದಕ್ಕೆ ಹೊಂದುವದಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದೇನೂ ದೋಷವಲ್ಲ. ಜ್ಞಾನ, ಕ್ರಿಯೆ—ಎಂಬ ಎರಡು ಶಕ್ತಿಗಳಿಗೆ ಆಶ್ರಯವಾಗಿದ್ದು ಪ್ರತ್ಯಗಾತ್ಮನಿಗೆ ಉಪಾಧಿಯಾಗಿದ್ದುಕೊಂಡಿರುವ ಬುದ್ಧಿಪ್ರಾಣಗಳಿಗೆ (ಈ) ಭೇದನನ್ನು ತಿಳಿಸಬಹುದಾಗಿದೆ. ಆದರೆ ಈ ಎರಡು ಉಪಾಧಿಗಳಿಂದ ಉಪಹಿತವಾಗಿರುವ ಪ್ರತ್ಯಗಾತ್ಮನು ಸ್ವರೂಪದಿಂದ ಒಬ್ಬನೇ ಆಗಿರುವದರಿಂದ ಪ್ರಾಣನೇ ಪ್ರಜ್ಞಾತ್ಮನು ಎಂದು ಒಂದುಗೂಡಿಸಿ (ಹೇಳಿರುವದು) ಅವಿರುದ್ಧವಾಗಿರುತ್ತದೆ.

## ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ

(ಭಾಷ್ಯ)

೧೪೪. ಅಥವಾ ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್'' ಇತ್ಯಸ್ಯ ಅಯಮ್ ಅನ್ಯೋಽರ್ಥಃ । ನ ಬ್ರಹ್ಮವಾಕ್ಯೇಽಪಿ ಜೀವಮುಖ್ಯಪ್ರಾಣಲಿಙ್ಗಂ ವಿರುಧ್ಯತೇ । ಕಥಮ್ ? ಉಪಾಸಾತ್ರೈವಿಧ್ಯಾತ್, ತ್ರಿವಿಧಮ್ ಇಹ ಬ್ರಹ್ಮೋಪಾಸನಂ ವಿವಕ್ಷಿತಂ ಪ್ರಾಣಧರ್ಮೇಣ, ಪ್ರಜ್ಞಾಧರ್ಮೇಣ, ಸ್ವಧರ್ಮೇಣ ಚ । ತತ್ರ "ಆಯುರಮೃತಮಿತ್ಯುಪಾಸ್ಸ್ವಾಯುಃ ಪ್ರಾಣಃ[1]" (ಕೌ. ೩-೨) ಇತಿ, ''ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ" (ಕೌ. ೩-೩) ಇತಿ, ''ತಸ್ಮಾದೇತದೇವೋಕ್ಥಮುಪಾಸೀತ''[2] (ಕೌ. ೩-೩) ಇತಿ ಚ ಪ್ರಾಣಧರ್ಮಃ । "ಅಥ ಯಥಾಸ್ಯೈ ಪ್ರಜ್ಞಾಯೈ ಸರ್ವಾಣಿ ಭೂತಾನ್ಯೇಕೀಭವನ್ತಿ ತದ್ವ್ಯಾಖ್ಯಾಸ್ಯಾಮಃ''[3] (ಕೌ. ೩-೪) ಇತ್ಯುಪಕ್ರಮ್ಯ ''ವಾಗೇವಾಸ್ಯಾ ಏಕಮಙ್ಗಮದೂದುಹತ್[4] ತಸ್ಯೈ ನಾಮ ಪರಸ್ತಾತ್ಪ್ರತಿವಿಹಿತಾ ಭೂತಮಾತ್ರಾ ....'' (ಕೌ. ೩-೫), ''ಪ್ರಜ್ಞಯಾ ವಾಚಂ ಸಮಾರುಹ್ಯ ವಾಚಾ ಸರ್ವಾಣಿ ನಾಮಾನ್ಯಾಪ್ನೋತಿ ...." (ಕೌ. ೩-೬) ಇತ್ಯಾದಿಃ ಪ್ರಜ್ಞಾಧರ್ಮಃ । ''ತಾ ವಾ ಏತಾ ದಶೈವ ಭೂತಮಾತ್ರಾಃ ಅಧಿಪ್ರಜ್ಞಂ ದಶ ಪ್ರಜ್ಞಾಮಾತ್ರಾ ಅಧಿಭೂತಮ್ ಯದ್ಧಿ ಭೂತಮಾತ್ರಾ ನ ಸ್ಯುರ್ನ ಪ್ರಜ್ಞಾಮಾತ್ರಾಃ ಸ್ಯುರ್ಯದ್ಧಿ ಪ್ರಜ್ಞಾಮಾತ್ರಾ ನ

---

1. ಅಮೃತಮುಪಾಸ್ಸ್ವ ಎಂದು ಅಚ್ಚಿನ ಪುಸ್ತಕದಲ್ಲಿರುವದು ತಪ್ಪು; ಭಾಷ್ಯಕಾರರು 'ಅಮೃತಮಿತ್ಯುಪಾಸ್ಸ್ವ' ಎಂದೇ ಹಿಂದೆ ಬರೆದಿದಾರೆ.

2. 'ತಸ್ಮಾದೇತಮೇವ' ನಿ ॥

3. ಅಥ ಖಲು ಯಥಾ ಪ್ರಜ್ಞಾಯಾಂ ಸರ್ವಾಣಿ ಭೂತಾನ್ಯೇಕೀಭವನ್ತಿ' ನಿ ॥, 'ಭೂತಾನ್ಯೇಕಂ ಭವನ್ತಿ' ಆ ॥

4. "ಏಕಮಙ್ಗಮುದೂಢಂ" ನಿ ॥ "ಏಕಮಙ್ಗಮುದ್ದೂಳಂ" ಆ ॥

ಸ್ಯುರ್ನ ಭೂತಮಾತ್ರಾಃ[1] ಸ್ಯುಃ (ಕೌ. ೩-೮) "ನ ಹ್ಯನ್ಯತರತೋ ರೂಪಂ ಕಿಂಚನ ಸಿಧ್ಯೇತ್ ನೋ ಏತನ್ನಾನಾ.ತದ್ಯಥಾ ರಥಸ್ಯಾರೇಷು ನೇಮಿರರ್ಪಿತಾ ನಾಭಾವರಾ ಅರ್ಪಿತಾ ಏವಮೇವೈತಾ ಭೂತಮಾತ್ರಾಃ-ಪ್ರಜ್ಞಾಮಾತ್ರಾಸ್ವರ್ಪಿತಾಃ ಪ್ರಜ್ಞಾಮಾತ್ರಾಃ ಪ್ರಾಣೇಽರ್ಪಿತಾಃ ಸ ಏಷ ಪ್ರಾಣ ಏವ ಪ್ರಜ್ಞಾತ್ಮಾ"[2] (ಕೌ. ೩-೯) ಇತ್ಯಾದಿಬ್ರ್ರಹ್ಮಧರ್ಮಃ। ತಸ್ಮಾತ್ ಬ್ರಹ್ಮಣ ಏವೈತತ್ ಉಪಾಧಿದ್ವಯಧರ್ಮೇಣ ಸ್ವಧರ್ಮೇಣ ಚ ಏಕಮುಪಾಸನಂ ತ್ರಿವಿಧಂ ವಿವಕ್ಷಿತಮ್ । ಅನ್ಯತ್ರಾಪಿ "ಮನೋಮಯಃ ಪ್ರಾಣಶರೀರಃ" (ಛಾಂ. ೩-೧೪-೨) ಇತ್ಯಾದೌ ಉಪಾಧಿಧರ್ಮೇಣ ಬ್ರಹ್ಮಣಃ ಉಪಾಸನಮ್ ಆಶ್ರಿತಮ್ । ಇಹಾಪಿ ತದ್ ಯುಜ್ಯತೇ ವಾಕ್ಯಸ್ಯ ಉಪಕ್ರಮೋಪಸಂಹಾರಾಭ್ಯಾಮ್ ಏಕಾರ್ಥತ್ವಾವಗಮಾತ್ ಪ್ರಾಣಪ್ರಜ್ಞಾಬ್ರಹ್ಮಲಿಙ್ಗಾವಗಮಾಚ್ಚ । ತಸ್ಮಾತ್ ಬ್ರಹ್ಮವಾಕ್ಯಮೇತತ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಅಥವಾ "ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್" ಎಂಬೀ (ಸೂತ್ರಭಾಗಕ್ಕೆ) ಈ ಮತ್ತೊಂದರ್ಥ(ವನ್ನೂ ಹೇಳಬಹುದು): ಬ್ರಹ್ಮವಾಕ್ಯದಲ್ಲಿಯೂ ಜೀವಮುಖ್ಯಪ್ರಾಣದ ಲಿಂಗವಿರುವದು ವಿರುದ್ಧವಾಗುವದಿಲ್ಲ. ಹೇಗೆ? ಎಂದರೆ ಉಪಾಸಾತ್ರೈವಿಧ್ಯವಿರುವದರಿಂದ, ಪ್ರಾಣಧರ್ಮದಿಂದ. ಪ್ರಜ್ಞಾಧರ್ಮದಿಂದ ಮತ್ತು ತನ್ನ ಧರ್ಮದಿಂದ–ಹೀಗೆ ಮೂರು ಬಗೆಯ ಬ್ರಹ್ಮೋಪಾಸನೆಯನ್ನು[3] (ಉಪದೇಶಿಸುವದರಲ್ಲಿ) ತಾತ್ಪರ್ಯವಿರುತ್ತದೆ. ಇವುಗಳೊಳಗೆ "ಆಯುಸ್ಸು, ಅಮೃತವು ಎಂದು ಉಪಾಸನೆಮಾಡು, ಪ್ರಾಣನೇ ಆಯುಸ್ಸು" (ಕೌ. ೩-೨) ಎಂಬುದೂ "ಈ ಶರೀರವನ್ನು ಹಿಡಿದೆತ್ತಿಕೊಂಡಿರುತ್ತದೆ." (ಕೌ. ೩-೩) ಎಂಬುದೂ "ಆದ್ದರಿಂದ ಇದನ್ನೇ ಉಕ್ಥವೆಂದು ಉಪಾಸನೆಮಾಡಬೇಕು." (ಕೌ. ೩-೩) ಎಂಬುದೂ ಪ್ರಾಣಧರ್ಮವು. "ಇನ್ನು ಹೇಗೆ ಈ

---

1. 'ಯದ್ವಾ ಪ್ರಜ್ಞಾಮಾತ್ರಾ' ಎಂದು ನಿ॥ ಆ॥ ಪಾಠ.

2. ಇಲ್ಲಿ ನಿ॥ ಪಾಠದ ಪ್ರಕಾರ ಖಂಡಸಂಖ್ಯೆಗಳನ್ನು ಹಾಕಿದೆ. ಆ॥ ಪಾಠದಲ್ಲಿ ೮ ಖಂಡಗಳು ಮಾತ್ರ ಇವೆ. ಅಚ್ಚಿನ ಭಾಷ್ಯಪುಸ್ತಕಗಳಲ್ಲಿ ಒಳವಾಕ್ಯಗಳಿಗೆ ಅಲ್ಲಲ್ಲಿ ವಿರಾಮಸೂಚಕ ಚಿಹ್ನೆಗಳಿವೆಯಾದರೂ ನಿ॥ ಆ॥ ಪಾಠಗಳಲ್ಲಿ ಎಲ್ಲವೂ ದಂಡಾಯಮಾನವಾಗಿ ಯಾವ ವಿರಾಮಚಿಹ್ನೆಯೂ ಇಲ್ಲದೆ ಬರೆದಿರುವದನ್ನೇ ನಾವೂ ಅನುಸರಿಸಿರುತ್ತೇವೆ.

3. ಮೂರು ಬಗೆಯಿಂದಲೂ ಬ್ರಹ್ಮವನ್ನೇ ಉಪಾಸನೆಮಾಡಬೇಕು; ಬ್ರಹ್ಮಕ್ಕೆ ಈ ಮೂರು ಬಗೆಯ ಧರ್ಮಗಳುಂಟೆಂದು ಉಪಾಸನೆಮಾಡಿದ ಮಾತ್ರದಿಂದ ಉಪಾಸನೆಗಳು ಮೂರಾಗುವದಿಲ್ಲ ಎಂದು ಭಾವ.

ಪ್ರಜ್ಞೆಯಲ್ಲಿ ಸರ್ವಭೂತಗಳೂ ಒಂದಾಗುವವೋ ಅದನ್ನು ವಿವರಿಸಿ ಹೇಳುವೆವು"[1] (ಕೌ. ೩-೪) ಎಂದು ಉಪಕ್ರಮಿಸಿ "ವಾಕ್ಕೇ ಇದರ ಒಂದು ಅಂಗವನ್ನು (ಹಾಲಿನಂತೆ) ಕರೆದುಕೊಂಡಿದೆ; ಇದಕ್ಕೆ ನಾಮವು ಮುಂದುಗಡೆ ಗೊತ್ತಾಗಿರುವ ಭೂತಮಾತ್ರೆಯು ...." (ಕೌ. ೩-೫), "ಪ್ರಜ್ಞೆಯಿಂದ ವಾಕ್ಕನ್ನೇರಿ ವಾಕ್ಕಿನಿಂದ ಎಲ್ಲಾ ನಾಮುಗಳನ್ನೂ ವ್ಯಾಪಿಸುತ್ತಾನೆ'' (ಕೌ. ೩-೬) ಎಂಬುದೇ ಮುಂತಾಗಿರುವದು ಪ್ರಜ್ಞೆಯ ಧರ್ಮವು. ''ಆ ಈ ಹತ್ತೇ ಭೂತಮಾತ್ರೆಗಳು ಅಧಿಪ್ರಜ್ಞವಾಗಿರುತ್ತವೆ; ಹತ್ತು ಪ್ರಜ್ಞಾಮಾತ್ರೆಗಳು ಅಧಿಭೂತವಾಗಿರುತ್ತವೆ. ಏಕೆಂದರೆ ಭೂತಮಾತ್ರೆಗಳು ಇಲ್ಲದಿದ್ದರೆ ಪ್ರಜ್ಞಾಮಾತ್ರೆಗಳು ಇರಲಾರವು, ಪ್ರಜ್ಞಾಮಾತ್ರೆಗಳು ಇಲ್ಲದಿದ್ದರೆ ಭೂತಮಾತ್ರೆಗಳು ಇರಲಾರವು.[2] ಇವೆರಡರಲ್ಲಿ ಒಂದರಿಂದಲೇ ಯಾವದೊಂದು ರೂಪವೂ ಸಿದ್ಧವಾಗಲಾರದಷ್ಟೆ. ಇದು ಬೇರೆ ಬೇರೆಯಲ್ಲ. ಅದು ಹೇಗೆಂದರೆ (ಹೇಗೆ) ರಥದ (ಚಕ್ರದ) ಹಾರೆಕೋಲುಗಳನ್ನು ಹಳಿಯು ಸೇರಿಕೊಂಡಿರುವದೋ, (ಹೇಗೆ) ಗುಂಬದಲ್ಲಿ ಹಾರೆಯಕೋಲುಗಳು ಸೇರಿಬಿಟ್ಟವೆಯೋ, ಹೀಗೆಯೇ ಈ ಭೂತಮಾತ್ರೆಗಳು ಪ್ರಜ್ಞಾಮಾತ್ರೆಗಳಲ್ಲಿ ಸೇರಿಕೊಂಡಿವೆ, ಪ್ರಜ್ಞಾಮಾತ್ರೆಗಳು ಪ್ರಾಣನಲ್ಲಿ ಸೇರಿಕೊಂಡಿವೆ. ಆ ಈ ಪ್ರಾಣನೇ ಪ್ರಜ್ಞಾತ್ಮನು'' (ಕೌ. ೩-೮-೯) ಎಂಬಿವೇ ಮುಂತಾದದ್ದು ಬ್ರಹ್ಮಧರ್ಮವು. **ಆದ್ದರಿಂದ ಬ್ರಹ್ಮವನ್ನೇ ಎರಡು ಉಪಾಧಿಗಳ ಧರ್ಮದಿಂದಲೂ ತನ್ನ ಧರ್ಮದಿಂದಲೂ ಮೂರು ವಿಧವಾಗಿರುವ ಈ ಒಂದೇ ಉಪಾಸನೆಯನ್ನು ಹೇಳಬೇಕೆಂದು ಹೊರಟಿರುತ್ತದೆ.**

ಬೇರೆಯ (ಶ್ರುತಿ)ಯಲ್ಲಿಯೂ ''ಮನೋಮಯನು, ಪ್ರಾಣಶರೀರನು'' (ಛಾಂ. ೭-೧೪ ೨) ಮುಂತಾದ ಕಡೆಯಲ್ಲಿ ಉಪಾಧಿಯ ಧರ್ಮದಿಂದ ಬ್ರಹ್ಮದ ಉಪಾಸನೆಯನ್ನು ಆಶ್ರಯಿಸಿರುತ್ತದೆ. ಇಲ್ಲಿಯೂ ಅದು ಹೊಂದುತ್ತದೆ; ಏಕೆಂದರೆ ವಾಕ್ಯದ ಉಪಕ್ರಮೋಪಸಂಹಾರಗಳಿಂದ ಒಂದೇ ಅರ್ಥವನ್ನು (ಹೇಳಿದೆ) ಎಂದು ನಿಶ್ಚಯವಾಗುತ್ತದೆ,[3] ಮತ್ತು ಪ್ರಾಣಪ್ರಜ್ಞಾಬ್ರಹ್ಮಗಳ ಲಿಂಗ

1. ಒಂದೇ ಪ್ರಜ್ಞೆಯಿಂದ ಎಲ್ಲವನ್ನೂ ಒಬ್ಬ ಜೀವನೇ ಹೇಗೆ ಅರಿಯುವನೋ ಅದನ್ನು ಹೇಳುವೆವು ಎಂದರ್ಥ.

2. ಪ್ರಜ್ಞಾಮಾತ್ರೆಗಳೂ ಭೂತಮಾತ್ರೆಗಳೂ ಒಂದನ್ನೊಂದು ಅವಲಂಬಿಸಿಕೊಂಡಿವೆ ಎಂದರ್ಥ. ಅಧಿಪ್ರಜ್ಞ ಎಂದರೆ ಪ್ರಜ್ಞೆಗೆ ಸಂಬಂಧಪಟ್ಟದ್ದು, ಅಧಿಭೂತ ಎಂದರೆ ಭೂತಗಳಿಗೆ ಸಂಬಂಧಪಟ್ಟದ್ದು.

3. ಬ್ರಹ್ಮವನ್ನೇ ಹೇಳಿದೆ ಎಂದು ಉಪಕ್ರಮೋಪಸಂಹಾರಗಳಿಂದ ನಿಶ್ಚಯವಾಗುವದರಿಂದ ಪ್ರಾಣಪ್ರಜ್ಞೆಗಳ ಧರ್ಮವನ್ನೂ ಬ್ರಹ್ಮಕ್ಕೇ ಉಪಾಸನೆಗಾಗಿ ಹೇಳಿದೆ ಎಂದು ಹೇಳಬಹುದಾಗಿದೆ ಎಂದರ್ಥ.

ಗಳೂ (ಇಲ್ಲಿರುವವೆಂದು) ನಿಶ್ಚಯವಾಗಿರುತ್ತದೆ.[1] ಆದ್ದರಿಂದ ಇದು ಬ್ರಹ್ಮ ವಾಕ್ಯವು ಎಂದು ಸಿದ್ಧವಾಯಿತು.



---

1. ಈ ಎರಡನೆಯ ವ್ಯಾಖ್ಯಾನವು **ಹಿಂದಿನ ವೃತ್ತಿಕಾರರದೆಂದೂ** ಅದು ಭಾಷ್ಯಕಾರರಿಗೆ ಸಮ್ಮತವಲ್ಲವೆಂದೂ **ಭಾಮತೀವ್ಯಾಖ್ಯಾನದಲ್ಲಿದೆ**. ಅದನ್ನೇ ಆನಂದ ಗಿರೀಯ ರತ್ನಪ್ರಭಾ-ಈ ವ್ಯಾಖ್ಯಾನಗಳಲ್ಲಿಯೂ ಬರೆದಿದೆ. ಆದರೆ ಭಾಷ್ಯದಲ್ಲಿ ಆ ವ್ಯಾಖ್ಯಾನ ದಲ್ಲಿ ಅಸ್ವಾರಸ್ಯವನ್ನೇನೂ ತಿಳಿಸಿಲ್ಲ. "ಇಲ್ಲಿ ಬ್ರಹ್ಮವು ವಿಧೇಯವಲ್ಲವಾದ್ದರಿಂದ ಉಪಾಸನಾ ವಿಶಿಷ್ಟಬ್ರಹ್ಮವನ್ನು ವಿಧಿಸಿದೆ ಎನ್ನುವದಕ್ಕೆ ಬರುವದಿಲ್ಲ. ಬ್ರಹ್ಮವನ್ನು ಅನುವಾದಮಾಡಿ ಕೊಂಡು ಉಪಾಸನೆಯನ್ನು ವಿಧಿಸುವದಕ್ಕೆ ಬರುವದಿಲ್ಲ; ಏಕೆಂದರೆ ಆಗ ಮೂರು ಉಪಾಸನೆ ಗಳನ್ನು ವಿಧಿಸಿದಂತೆ ಆಗಿ ಏಕವಾಕ್ಯತೆಯಿಲ್ಲವಾಗುತ್ತದೆ" ಎಂಬುದು ವ್ಯಾಖ್ಯಾನಕಾರರ ಮತ. ಆದರೆ ಶಾಂಡಿಲ್ಯವಿದ್ಯೆಯಂತೆ ಪ್ರಾಣಧರ್ಮ, ಮನೋಧರ್ಮ, ಸ್ವಧರ್ಮ-ಈ ಮೂರರಿಂದೊಡ ಗೂಡಿದ ಬ್ರಹ್ಮದ ಉಪಾಸನೆಯನ್ನು ವಿಧಿಸಿವೆ ಎಂದರೆ ವಾಕ್ಯಭೇದವಾಗುವದೆ?-ಎಂಬು ದನ್ನು ವಿದ್ವಾಂಸರು ಆಲೋಚಿಸಬೇಕಾಗಿದೆ. ಮೊದಲನೆಯ ವ್ಯಾಖ್ಯಾನದಲ್ಲಿ ಜ್ಞೇಯಬ್ರಹ್ಮ ವನ್ನೂ ಎರಡನೆಯ ವ್ಯಾಖ್ಯಾನದಲ್ಲಿ ಉಪಾಸ್ಯಬ್ರಹ್ಮವನ್ನೂ ಹೇಳಿರುವದರಿಂದ ಎರಡು ಪಕ್ಷ ದಲ್ಲಿಯೂ ಇದು ಬ್ರಹ್ಮವಾಕ್ಯವೇ ಆಗುತ್ತದೆ. ಆದರೂ ಒಟ್ಟು ಶ್ರುತಿಯನ್ನು ನೋಡಿದರೆ ಜ್ಞೇಯಬ್ರಹ್ಮವಾಕ್ಯವೇ ಎಂದು ಎಲ್ಲರೂ ಒಪ್ಪಬೇಕಾಗುವದು. ಈ ಕಾರಣದಿಂದಲೇ ಎರಡ ನೆಯ ವ್ಯಾಖ್ಯಾನವು ಉಪಾದೇಯವಲ್ಲವೆಂದು ಆಚಾರ್ಯರು ಅಭಿಪ್ರಾಯಪಟ್ಟಿರಬಹುದೆ? ಬಲ್ಲ ವರು ಇದನ್ನು ನಿರ್ಧರಿಸಬೇಕು.

# ಅಧಿಕರಣಗಳ ಸಾರ

ಇಲ್ಲಿಂದ ಮುಂದಕ್ಕೆ ಸೋಪಾಧಿಕಬ್ರಹ್ಮವನ್ನು ಹೇಳುವ ವಾಕ್ಯಗಳನ್ನೂ ನಿರುಪಾಧಿಕಬ್ರಹ್ಮವನ್ನು ಹೇಳುವ ವಾಕ್ಯಗಳನ್ನೂ ಗೊತ್ತುಪಡಿಸಲಾಗುವದು. **ಸೋಪಾಧಿಕಬ್ರಹ್ಮವು** ಉಪಾಧಿಯಿಂದೊಡಗೂಡಿ ಉಪಾಸ್ಯವಾಗಿರುತ್ತದೆ; **ನಿರುಪಾಧಿಕಬ್ರಹ್ಮವು** ಉಪಾಧಿಯ ಮೂಲಕವೇ ತಿಳಿಯಬಂದರೂ ತನ್ನ ರೂಪದಿಂದಲೇ ಜ್ಞೇಯವಾಗಿರುತ್ತದೆ.

## ೬. ಆನಂದಮಯಾಧಿಕರಣ

### ವೃತ್ತಿಕಾರರ ಮತದಂತೆ

**ವಿಷಯವೂ ಸಂಶಯವೂ :** ತೈತ್ತಿರೀಯೋಪನಿಷತ್ತಿನಲ್ಲಿರುವ " ಅನ್ಯೋಽನ್ತರ ಆತ್ಮಾನನ್ದಮಯಃ " (ತೈ. ೨-೫) ಎಂಬ ವಾಕ್ಯದ ಆನಂದಮಯನು ಪರಬ್ರಹ್ಮವೊ, ಅಥವಾ ಅನ್ನಮಯಾದಿಗಳಂತೆ ಬ್ರಹ್ಮಕ್ಕಿಂತ ಭಿನ್ನಪದಾರ್ಥವೊ ?

**ಪೂರ್ವಪಕ್ಷ:** ಅಮುಖ್ಯಾತ್ಮರ ಸಾಲಿನಲ್ಲಿ ಹೇಳಿರುವದರಿಂದಲೂ ಪ್ರಿಯಾದ್ಯವಯವಗಳನ್ನು ತಿಳಿಸಿರುವದರಿಂದಲೂ ಶಾರೀರನೆಂದು ಕರೆದಿರುವದರಿಂದಲೂ ' ಆನಂದಮಯ ' ಎಂದು ವಿಕಾರಾರ್ಥಮಯಟ್ ಪ್ರತ್ಯಯದ ಪ್ರಯೋಗವಿರುವದರಿಂದಲೂ ಆನಂದಮಯನು ಅಬ್ರಹ್ಮವೇ.

**ಸಿದ್ಧಾಂತ :** ಆನಂದಮಯನನ್ನು ಆನಂದವೆಂಬರ್ಥದ ಶಬ್ದಗಳಿಂದ ಮತ್ತೆಮತ್ತೆ ಕರೆದಿರುವದರಿಂದಲೂ ಆನಂದಕ್ಕೆ ಕಾರಣನೆಂದು ಹೇಳಿರುವದರಿಂದಲೂ ಉಪಕ್ರಮಮಂತ್ರದಲ್ಲಿ ಹೇಳಿರುವ ಬ್ರಹ್ಮವನ್ನೇ ಬ್ರಾಹ್ಮಣದಲ್ಲಿ ವಿಸ್ತರಿಸಿ ಉಪಸಂಹಾರಮಾಡಿದೆ ಎಂದಿಟ್ಟುಕೊಳ್ಳುವದೇ ನ್ಯಾಯವಾದ್ದರಿಂದಲೂ ಆನಂದಮಯನು ಬ್ರಹ್ಮವೇ. ಆನಂದಮಯ ಎಂಬಲ್ಲಿ ಮಯಪ್ರತ್ಯಯವು ವಿಕಾರಾರ್ಥದಲ್ಲಿ ಪ್ರಯೋಗಿಸಿಲ್ಲ, ಪ್ರಾಚುರ್ಯಾರ್ಥದಲ್ಲಿ ಪ್ರಯೋಗಿಸಿದೆ. ಪ್ರಿಯಾದಿಗಳನ್ನು ಹೇಳಿರುವದು ಉಪಾಧಿಯಿಂದ ಬಂದದ್ದು; ಶಾರೀರನೆಂದು ಕರೆದಿರುವದು ಅನ್ನಮಯಾದಿ ಶರೀರಪರಂಪರೆಯಿಂದ ತಿಳಿಯತಕ್ಕವನೆಂಬ ಕಾರಣದಿಂದ. ಆದ್ದರಿಂದ ಆನಂದಮಯನು ಜೀವನಲ್ಲ, ಪ್ರಧಾನವೇ ಮುಂತಾದ ಜಡವಸ್ತುವೂ ಅಲ್ಲ ; ಉಪಾಸ್ಯವಾದ ಬ್ರಹ್ಮವೇ.

### ಭಾಷ್ಯಕಾರರ ಮತದಂತೆ

**ವಿಷಯವೂ ಸಂಶಯವೂ:** " ಬ್ರಹ್ಮ ಪುಚ್ಛಂ ಪ್ರತಿಷ್ಠಾ " ಎಂಬಲ್ಲಿ ಬ್ರಹ್ಮವನ್ನು ಆನಂದಮಯನ ಅವಯವವಾಗಿ ಹೇಳಿದೆಯೆ; ಸ್ವತಂತ್ರವಾಗಿಯೇ ಹೇಳಿದೆಯೆ ?

**ಪೂರ್ವಪಕ್ಷ:** ಪುಚ್ಛವೆಂಬ ಶಬ್ದವಿರುವದರಿಂದ ಆನಂದಮಯನಿಗೆ ಬ್ರಹ್ಮವು ಅ ಯವವೆಂದು ತಿಳಿಯಬೇಕು.

**ಸಿದ್ಧಾಂತ:** ಮುಂದೆ "ಅಸನ್ನೇವ ಸ ಭವತಿ। ಅಸದ್ ಬ್ರಹ್ಮೇತಿ ವೇದ ಚೇತ್ ಎಂದು ಬ್ರಹ್ಮಶಬ್ದದ ಅಭ್ಯಾಸವೇ ಇರುವದರಿಂದಲೂ, ಅವಯವಗಳನ್ನು ಹೇಳುವದು ಪ್ರಚಾ ವಾಗಿರುವ ಸಂದರ್ಭದಲ್ಲಿ ಬ್ರಹ್ಮವನ್ನು ಪುಚ್ಛವೆಂದು ಕರೆದಿದೆಯೇ ಹೊರತು ಅದು ಆನಂ ಮಯನ ಅವಯವವೇ ಎಂಬ ಅಭಿಪ್ರಾಯವಿಲ್ಲ ಎಂದೂ ಹೇಳಬಹುದಾದ್ದರಿಂದಲೂ, ಬ್ರಹ್ಮ ಆನಂದಮಯಸಹಿತವಾದ ಜಗತ್ತೆಲ್ಲವನ್ನೂ ಸೃಷ್ಟಿಸಿತೆಂದು ಜಗದ್ಧೇತುತ್ವವಚನವಿರುವದರಿಂದಲ ಬ್ರಹ್ಮವು ಸ್ವಪ್ರಧಾನವೇ. "ಬ್ರಹ್ಮವಿದಾಪ್ನೋತಿ ಪರಂ" ಎಂದು ಪ್ರಾರಂಭಿಸಿ "ಸತ್ಯಂ ಜ್ಞಾನ ಮನನ್ತಂ ಬ್ರಹ್ಮ" ಎಂಬ ಮಂತ್ರದಲ್ಲಿ ಪ್ರಕೃತವಾಗಿರುವ ಬ್ರಹ್ಮವನ್ನೇ "ಬ್ರಹ್ಮ ಪುಚ್ಛ ಪ್ರತಿಷ್ಠಾ" ಎಂದು ಸ್ವತಂತ್ರವಾಗಿ ಹೇಳಿವೆಯೆನ್ನುವದೇ ಯುಕ್ತವು. ಆನಂದಮಯಶಬ್ದ ಅಭ್ಯಾಸವಿಲ್ಲದ್ದರಿಂದಲೂ ಆನಂದಮಯನಿಗಿಂತ ಭಿನ್ನವಾಗಿ ಬ್ರಹ್ಮವನ್ನು ಹೇಳಿರುವದರಿಂದಲ "ಸೋಽಕಾಮಯತ" ಎಂಬ ಪುಲ್ಲಿಂಗಶ್ರುತಿಯು ಆತ್ಮಶಬ್ದವಾಚ್ಯವಾದ ಬ್ರಹ್ಮಕ್ಕೂ ಆ ಬಹುದಾದ್ದರಿಂದ ಅದನ್ನು ತಿಳಿದ ಮಾತ್ರದಿಂದಲೇ ಆನಂದಮಯನು ನಿರ್ವಿಶೇಷವಾದ ಬ್ರಹ್ಮ ಸ್ವರೂಪವಾಗಿ ಅಭಯವನ್ನು ಪಡೆಯುವನೆಂದು ಶ್ರುತಿಯು ಹೇಳುವದರಿಂದಲೂ ಆನಂದಮಯನ ಬ್ರಹ್ಮವಲ್ಲ. ಆದ್ದರಿಂದ ಪುಚ್ಛವಾಕ್ಯದಲ್ಲಿ ಜ್ಞೇಯವಾದ ನಿರ್ವಿಶೇಷಬ್ರಹ್ಮವನ್ನು ಸ್ವಪ್ರಧಾನವಾ ಹೇಳಿದೆ.

## ೭. ಅಂತರಧಿಕರಣ

**ವಿಷಯವೂ ಸಂಶಯವೂ:** ಛಾಂದೋಗ್ಯ(೧-೬)ರಲ್ಲಿ "ಅಥ ಯ ಏಷೋಽ ನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ" "ಅಥ ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ" ಎಂದು ಹೇಳಿರುವ ಆದಿತ್ಯಾಂತರ್ಗತಪುರುಷನೂ ಅಕ್ಷ್ಯಂತರ್ಗತಪುರುಷನೂ ಪ ಮೇಶ್ವರನೋ, ಸಂಸಾರಿಯೊ?

**ಪೂರ್ವಪಕ್ಷ:** ಈ ಪುರುಷನಿಗೆ ರೂಪ, ಆಧಾರ, (ಇವನ) ಐಶ್ವರ್ಯಕ್ಕೆ ಇಷ್ಟ ಲೋಕಗಳ ಒಡೆತನವೆಂಬ ಎಲ್ಲೆಕಟ್ಟು—ಇವುಗಳನ್ನು ಹೇಳಿರುವದರಿಂದ ಇವನು ಸಂಸಾರಿಯೇ

**ಸಿದ್ಧಾಂತ:** ಪರಮೇಶ್ವರನಿಗೂ ಸಾಧಕಾನುಗ್ರಹಾರ್ಥವಾಗಿ ಮಾಯಾಮಯವಾ ರೂಪವಿರಬಹುದು; ಉಪಾಸನೆಗಾಗಿ ಆಧಾರವನ್ನು ಅಧ್ಯಾತ್ಮಾಧಿದೈವವಿಭಾಗನಿಮಿತ್ತವಾ ಐಶ್ವರ್ಯಮರ್ಯಾದೆಯನ್ನು ಹೇಳಬಹುದು. ಆದಿತ್ಯಾದಿಜೀವರುಗಳಿಗಿಂತ ಬೇರೆಯಾದ ಅಂತರ್ಯಾಮಿಯಾದ ಈಶ್ವರನನ್ನು ಬೇರೆಯ ಶ್ರುತಿಯಲ್ಲಿಯೂ ಹೇಳಿದೆ. ಆದ್ದರಿಂದ ಈ ಪುರುಷನು ಉಪಾಸ್ಯನಾದ ಈಶ್ವರನೇ.

## ೮. ಆಕಾಶಾಧಿಕರಣ

**ವಿಷಯುವೂ ಸಂಶಯುವೂ** : ಛಾಂದೋಗ್ಯದಲ್ಲಿ (೧-೯) "ಅಸ್ಯ ಲೋಕಸ್ಯ ಗತಿರಿತಿ । ಆಕಾಶ ಇತಿ ಹೋವಾಚ" ಎಂದು ಹೇಳಿರುವ ಆಕಾಶವು ಭೂತಾಕಾಶವೊ, ಸ್ಮವೊ ?

**ಪೂರ್ವಪಕ್ಷ** : ಭೂತಾಕಾಶದಲ್ಲಿ ಆಕಾಶಶಬ್ದವು ರೂಢವಾಗಿರುವದರಿಂದಲೂ, ವಾಯ್ವಾ ಗಳು ಆಕಾಶದಿಂದ ಹುಟ್ಟುವದರಿಂದ ಸರ್ವಭೂತಗಳಿಗೂ ಈ ಆಕಾಶವು ಕಾರಣವೆಂಬ ,ತಿಯೂ ಹೊಂದುವದರಿಂದಲೂ, ಮಿಕ್ಕ ವಿಶೇಷಣಗಳನ್ನೂ ಭೂತಾಂತರಾಪೇಕ್ಷೆಯಿಂದ ತಾಕಾಶಕ್ಕೇ ಹೊಂದಿಸಬಹುದಾದ್ದರಿಂದಲೂ, ಇಲ್ಲಿ ಆಕಾಶವೆಂದರೆ ಭೂತಾಕಾಶವೇ.

**ಸಿದ್ಧಾಂತ** : ಆಕಾಶವೇ ಮುಂತಾದ ಎಲ್ಲಾ ಭೂತಗಳಿಗೂ ಬ್ರಹ್ಮವೇ ಕಾರಣವು, ದರಲ್ಲಿಯೇ ಎಲ್ಲಾ ಭೂತಗಳೂ ಲಯುವಾಗುತ್ತವೆ. ನಿರಪೇಕ್ಷವಾದ ಜ್ಯಾಯಸ್ತ್ವಪರಾಯಣತ್ವ ಸೂ ಅನಂತತ್ವವೂ ಬ್ರಹ್ಮಕ್ಕೇ ಹೊಂದುತ್ತವೆ. ಆದ್ದರಿಂದ ಶ್ರುತಿಯಲ್ಲಿ ಹೇಳಿರುವವೆಲ್ಲ ಹ್ಮಲಿಂಗಗಳು. ವೇದದಲ್ಲಿ ಬ್ರಹ್ಮಕ್ಕೂ ಆಕಾಶಶಬ್ದವನ್ನು ಉಪಯೋಗಿಸಿರುವದುಂಟು. ದ್ದರಿಂದ ಉಪಕ್ರಮದಲ್ಲಿರುವ ಆಕಾಶಶಬ್ದವನ್ನು ವಾಕ್ಯಶೇಷದಲ್ಲಿ ಬ್ರಹ್ಮದ ಅಸಾಧಾರಣಲಿಂಗ ಿರುವದರಿಂದ ಬ್ರಹ್ಮವೆಂಬ ಅರ್ಥದಲ್ಲಿಯೇ ಗ್ರಹಿಸಬೇಕು.

## ೯. ಪ್ರಾಣಾಧಿಕರಣ

**ವಿಷಯುವೂ ಸಂಶಯುವೂ** : ಛಾಂದೋಗ್ಯದಲ್ಲಿ "ಕತಮಾ ಸಾ ದೇವತೇತಿ । ,ಣ ಇತಿ ಹೋವಾಚ" (ಛಾಂ. ೧-೧೧-೪) ಎಂಬ ವಾಕ್ಯದಲ್ಲಿರುವ ಪ್ರಸ್ತಾವದೇವತೆಯು ,ಣವೊ, ಬ್ರಹ್ಮವೊ ?

**ಪೂರ್ವಪಕ್ಷ** : ಪ್ರಾಣಶಬ್ದಕ್ಕೆ ಪ್ರಾಣವೇ ಮುಖ್ಯಾರ್ಥವಾಗಿರುವದರಿಂದಲೂ ಭೂತ ು ಇದರಲ್ಲಿಯೇ ಲಯವಾಗಿ ಇದರಿಂದಲೇ ಹೊರಕ್ಕೆ ಬರುವವೆಂದು ಶ್ರುತಿಯಲ್ಲಿ ಹೇಳಿರುವದು ,ಣಕ್ಕೂ ಶ್ರುತಿಪ್ರತ್ಯಕ್ಷಪ್ರಮಾಣಗಳಿಂದ ಹೊಂದುವದರಿಂದಲೂ ಇದರ ಸನ್ನಿಧಿಯಲ್ಲಿ ಹೇಳಿ ತ ಉದ್ಗೀಥಪ್ರತೀಹಾರಗಳ ದೇವತೆಗಳು ಅಬ್ರಹ್ಮವಾಗಿರುವದರಿಂದಲೂ ಇಲ್ಲಿ ಹೇಳಿರುವದು ಯುವಿಕಾರವಾದ ಪ್ರಾಣವೇ, ಬ್ರಹ್ಮವಲ್ಲ.

**ಸಿದ್ಧಾಂತ** : ಎಲ್ಲಾ ಭೂತಗಳೂ ಇದರಲ್ಲಡಗಿ ಹೊರಕ್ಕೆ ಬರುವದೆಂಬುದು ಬ್ರಹ್ಮಕ್ಕೆ ಾಧಾರಣಲಿಂಗವು. ಸುಷುಪ್ತಿಯಲ್ಲಿ ಇಂದ್ರಿಯಗಳುಮಾತ್ರ ಪ್ರಾಣದಲ್ಲಿ ಅಡಗುತ್ತವೆ, ಕ್ಷರದಲ್ಲಿ ಹೊರಕ್ಕೆ ಬರುತ್ತವೆ ಎಂಬುದು ಮತ್ತೊಬ್ಬರ ಪ್ರತ್ಯಕ್ಷದಿಂದ ಕಂಡುಬರುತ್ತದೆ; ಲ್ಲಾ ಭೂತಗಳೂ ಅದರಲ್ಲಿ ಪ್ರಲಯವಾಗುವದಿಲ್ಲ, ಅದರಿಂದ ಹೊರಟುಬರುವದೂ ಕಂಡಿಲ್ಲ. ಕ್ಯಶೇಷದಲ್ಲಿ ಪ್ರಾಣನೆಂದರೆ ಬ್ರಹ್ಮವೇ ಎಂದು ನಿಶ್ಚಯವಾಗುತ್ತಿರುವದರಿಂದ ಆದಿತ್ಯ, ಅನ್ನ— ಬ ಅಬ್ರಹ್ಮಗಳನ್ನು ಉದ್ಗೀಥಪ್ರತೀಹಾರದೇವತೆಗಳಾಗಿ ಹೇಳಿರುತ್ತದೆಯೆಂಬ ಸನ್ನಿಧಿಯನ್ನೂ,

ಅನಾದರಮಾಡಬೇಕಾಗಿದೆ. ಪ್ರಾಣಶಬ್ದವು ಬ್ರಹ್ಮದಲ್ಲಿಯೂ ವೇದದಲ್ಲಿ ಪ್ರಯೋಗವಾಗುತ್ತಿರುವದು ಕಂಡುಬರುತ್ತಿರುವದರಿಂದ ಅದು ಪಂಚವೃತ್ತಿಪ್ರಾಣದ ವಾಚಕವೇ ಆಗಿರಬೇಕೆಂಬ ನಿರ್ಬಂಧವಿಲ್ಲ. ಆದ್ದರಿಂದ ಇಲ್ಲಿ ಪ್ರಸ್ತಾವದೇವತೆ ಎಂದು ಉಪಾಸ್ಯವಾಗಿರುವ ಪ್ರಾಣವು ಬ್ರಹ್ಮವೇ.

## ೧೦. ಜ್ಯೋತಿಶ್ಚರಣಾಧಿಕರಣ

**ವಿಷಯವೂ ಸಂಶಯವೂ :** "ಅಥ ಯದತಃ ಪರೋ ದಿವೋ ಜ್ಯೋತಿಃ" ಎಂದು ಮುಂತಾಗಿರುವ ಛಾಂದೋಗ್ಯ (೩-೧೩-೭) ವಾಕ್ಯದಲ್ಲಿ ಜ್ಯೋತಿ ಎಂದರೆ ಆದಿತ್ಯನೇ ಮುಂತಾದ ಬೆಳಕೆ, ಬ್ರಹ್ಮವೆ ?

**ಪೂರ್ವಪಕ್ಷ:** ಜ್ಯೋತಿ ಎಂಬ ಶಬ್ದವು ಬೆಳಕು ಎಂಬರ್ಥದಲ್ಲಿ ಪ್ರಸಿದ್ಧವಾಗಿದೆ. ದೀಪ್ಯತೇ (ಬೆಳಗುತ್ತದೆ) ಎಂಬುದೂ ಆದಿತ್ಯಾದಿಗಳಿಗೇ ಹೊಂದುತ್ತದೆ. 'ದ್ಯುಲೋಕದಿಂದಾಚೆಗೆ' ಎಂಬ ಎಲ್ಲೆಕಟ್ಟಿನ ಮಾತೂ ಕಾರ್ಯವಾದ ಬೆಳಕಿಗೆ ಒಪ್ಪುತ್ತದೆ. 'ಉತ್ತಮವಾದ ಲೋಕಗಳಲ್ಲಿ' ಎಂಬ ಆಧಾರಬಹುತ್ವವೂ ಅದಕ್ಕೇ ಸಲ್ಲುತ್ತದೆ. ಹೊಟ್ಟೆಯಲ್ಲಿರುವ ಬೆಳಕಿನಲ್ಲಿ ಇದನ್ನು ಉಪಾಸನೆಗಾಗಿ ಅಧ್ಯಾಸಮಾಡಿರುವದರಿಂದ ಇದೂ ಅದರಂತೆ ಬೆಳಕೇ ಆಗಿರಬೇಕೆಂದು ಊಹಿಸಬಹುದಾಗಿದೆ. ಇದರ ಉಪಾಸನೆಗೆ ಅಲ್ಪಫಲವನ್ನು ಹೇಳಿರುವದರಿಂದಲೂ ಇದು ಅಬ್ರಹ್ಮವೆನ್ನಬೇಕಾಗಿದೆ. ಈ ವಾಕ್ಯದಲ್ಲಿ ಬ್ರಹ್ಮಕ್ಕೇ ಸಲ್ಲುವ ಬೇರೆ ಯಾವ ಲಿಂಗವೂ ಇಲ್ಲ. ಆದ್ದರಿಂದ ಇಲ್ಲಿ ಜ್ಯೋತಿ ಎಂಬುದು ಬೆಳಕೇ.

**ಸಿದ್ಧಾಂತ :** ಹಿಂದಿನ ವಾಕ್ಯದಲ್ಲಿ ಬ್ರಹ್ಮವನ್ನು ಹೇಳಿ ಅದರ ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿವೆಯೆಂದು ಹೇಳಿದೆ ; ಅದನ್ನೇ ಇಲ್ಲಿ ದ್ಯುಲೋಕದಿಂದಾಚೆ ಇರುವ ಜ್ಯೋತಿ ಎಂದು ಕರೆದಿದೆ ಎಂಬುದು ಯುಕ್ತವು. ಅಲ್ಲಿ ಗಾಯತ್ರಿಯನ್ನು ಹೇಳಿರುವಂತೆ ತೋರಿದರೂ ಗಾಯತ್ರಿ ಎಂಬ ವಿಕಾರದಲ್ಲಿರುವ ಬ್ರಹ್ಮವನ್ನೇ 'ಗಾಯತ್ರಿಯೇ ಇದೆಲ್ಲವೂ' ಎಂಬ ವಾಕ್ಯದಿಂದ ಹೇಳಿರುತ್ತದೆ. ಅಥವಾ ಗಾಯತ್ರೀ ಎಂಬ ಶಬ್ದವನ್ನು ಸಂಖ್ಯಾಸಾಮಾನ್ಯದಿಂದ ಬ್ರಹ್ಮಕ್ಕೇ ಉಪಯೋಗಿಸಿದೆ ಎನ್ನಲೂ ಬಹುದು. ಗಾಯತ್ರಿಗೆ ಭೂತಪೃಥಿವೀಶರೀರಹೃದಯಗಳೆಂಬ ನಾಲ್ಕುಪಾದಗಳಿವೆಯೆಂದು ಹೇಳಿರುವದರಿಂದಲೂ ಅಲ್ಲಿ ಗಾಯತ್ರಿಯು ಬ್ರಹ್ಮವೇ. ಆ ವಾಕ್ಯದಲ್ಲಿ 'ದಿವಿ' ಎಂದು ಸಪ್ತಮೀವಿಭಕ್ತಿಯನ್ನೂ ಇಲ್ಲಿ 'ದಿವಃ' ಎಂದು ಪಂಚಮೀವಿಭಕ್ತಿಯನ್ನೂ ಹೇಳಿದ್ದರೂ ದ್ಯುಲೋಕದ ಸಂಬಂಧವು ಎರಡರಲ್ಲಿಯೂ ಸಮಾನವಾಗಿದೆ. ಮರದ ತುದಿಗೆ ಸಂಬಂಧಪಟ್ಟಿರುವ, ಅಥವಾ ಸಂಬಂಧಪಡದಿದ್ದರೂ ಅದರಿಂದ ತಿಳಿದುಬರುವ, ಹಕ್ಕಿಯನ್ನು 'ಮರದ ತುದಿಯಲ್ಲಿರುವ ಗಿಡುಗ' 'ಮರದ ತುದಿಯಿಂದಾಚೆಗಿರುವ ಗಿಡುಗ' ಎಂದು ಎರಡು ಬಗೆಯಿಂದಲೂ ತಿಳಿಸಬಹುದಾಗಿರುವಂತೆ ಇಲ್ಲಿ ಬ್ರಹ್ಮವನ್ನು ವಿಭಕ್ತಿಭೇದದಿಂದ ತಿಳಿಸಿರುವದು ವಿರುದ್ಧವಲ್ಲ. ಬ್ರಹ್ಮಕ್ಕೂ ಉಪಾಧಿವಶದಿಂದ ಆಧಾರಬಹುತ್ವವನ್ನು ಹೇಳಬಹುದು.

ಬ್ರಹ್ಮದ ಉಪಾಸನೆಗೆ ಅಲ್ಪಫಲವೂ ಆಗಬಹುದು. ಇಷ್ಟು ಫಲಕ್ಕಾಗಿಯೇ ಬ್ರಹ್ಮೋಪಾಸನೆಯನ್ನು ಶ್ರುತಿಯಲ್ಲಿ ವಿಧಿಸಿರುತ್ತದೆ ಎಂಬ ನಿಯಮವೇನೂ ಇರುವದಿಲ್ಲ. ಜ್ಯೋತಿ ಎಂಬುದು ಅವಭಾಸಕವಾದ (ತೋರಿಸಿಕೊಡುವ) ಪದಾರ್ಥಕ್ಕೆಲ್ಲ ಹೆಸರಾಗಬಹುದು; ಈ ಅರ್ಥದಲ್ಲಿ ಬ್ರಹ್ಮವನ್ನು ತಿಳಿಸುವ ಜ್ಯೋತಿಃಶಬ್ದದ ಪ್ರಯೋಗವೂ ಶ್ರುತಿಯಲ್ಲಿ ಇದೆ. ಆದ್ದರಿಂದ ಜ್ಯೋತಿ ಎಂದರೆ ಇಲ್ಲಿ ಉಪಾಸ್ಯವಾದ ಬ್ರಹ್ಮವೇ.

# ೧೦. ಪ್ರತರ್ದನಾಧಿಕರಣ

**ವಿಷಯವೂ ಸಂಶಯವೂ:** ಕೌಷೀತಕಿಬ್ರಾಹ್ಮಣೋಪನಿಷತ್ತಿನಲ್ಲಿ "ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾಮಾಯುರಮೃತಮಿತ್ಯುಪಾಸ್ಸ್ವ" (೩-೧) ಎಂಬ ವಾಕ್ಯದಲ್ಲಿ ಪ್ರಾಣ ಎಂಬ ಶಬ್ದದಿಂದ ಹೇಳಿರುವದು ದೇವತೆಯೆ, ಮುಖ್ಯಪ್ರಾಣವೆ, ಜೀವನೆ, ಅಥವಾ ಬ್ರಹ್ಮವೆ?

**ಪೂರ್ವಪಕ್ಷ:** ಇಂದ್ರನು "ನನ್ನನ್ನೇ ಉಪಾಸನೆಮಾಡು" ಎಂದು ತನ್ನನ್ನೇ ಹೇಳಿಕೊಂಡಿದ್ದಾನೆ; ತಾನು ಮಾಡಿದ್ದ ಕ್ರೂರಕರ್ಮಗಳಿಗೆ ಯಾವ ದುಷ್ಫಲವೂ ಜ್ಞಾನಿಯಾದ ತನಗೆ ಆಗಲಿಲ್ಲ ಎಂದು ಹೊಗಳಿಕೊಂಡಿರುತ್ತಾನೆ. ಆದ್ದರಿಂದ **ದೇವತೆಯೇ** ಪ್ರಾಣವು. ಇಂದ್ರನು ಬಲಾಭಿಮಾನಿಯಾದ್ದರಿಂದ ಅವನನ್ನು ಪ್ರಾಣನೆಂದಿದೆ. ಅಥವಾ "ವಕ್ತೃವನ್ನು ಅರಿತುಕೊಳ್ಳಬೇಕು" (೩-೮) ಎಂದು ಮುಂತಾಗಿ **ಜೀವಲಿಂಗವೂ** ಕಂಡುಬರುತ್ತದೆ; "ಈ ಪ್ರಾಣವೇ ಶರೀರವನ್ನು ಹಿಡಿದೆತ್ತಿ ನಿಲ್ಲಿಸಿಕೊಂಡಿರುತ್ತದೆ" (೩-೩) ಎಂದು **ಮುಖ್ಯಪ್ರಾಣಲಿಂಗವೂ** ಇವೆ. ಆದ್ದರಿಂದ **ಜೀವಮುಖ್ಯಪ್ರಾಣ**ಗಳಲ್ಲಿ ಒಂದು ಅಥವಾ ಎರಡೂ ಪ್ರಾಣಶಬ್ದದಿಂದ ಹೇಳಲ್ಪಟ್ಟಿರುತ್ತವೆ. ಪ್ರಜ್ಞಾತ್ಮನೆಂಬ ವಿಶೇಷಣವನ್ನು ಇವೆರಡಕ್ಕೂ ಹೊಂದಿಸಬಹುದು. ಜೀವಪ್ರಾಣಗಳು ಎರಡೂ ಜೊತೆಯಲ್ಲಿರುವದರಿಂದ "ಎರಡೂ ಜೊತೆಯಲ್ಲಿರುತ್ತವೆ, ಜೊತೆಯಲ್ಲಿಯೇ ಹೋಗುತ್ತವೆ" ಎಂಬ ವಚನವು ಅವಕ್ಕೇ ಸರಿಯಾಗಿ ಹೊಂದುತ್ತದೆ.

**ಸಿದ್ಧಾಂತ:** ಇಂದ್ರನು ಹೇಳಿರುವ ಜ್ಞಾನವು ಮನುಷ್ಯನಿಗೆ ಹಿತತಮವೆಂಬುದೂ ಪಾಪಕರ್ಮದ ಫಲವು ಜ್ಞಾನದಿಂದ ನಾಶವಾಯಿತೆಂಬುದೂ ಬ್ರಹ್ಮಕ್ಕೇ ಹೊಂದುತ್ತದೆ. ಪ್ರಜ್ಞಾತ್ಮತ್ವ, ಆನಂದ, ಅಜರ, ಅಮೃತ–ಎಂಬ ವಿಶೇಷಣಗಳೂ ಕರ್ಮಫಲದಾತೃತ್ವವೂ ಲೋಕೇಶತ್ವವೂ ಪ್ರಾಣವನ್ನು ಬ್ರಹ್ಮವೆಂದಿಟ್ಟುಕೊಂಡರೇ ಸರಿಯಾಗುವದು. ಇಂದ್ರನು ತನ್ನನ್ನೇ ಉಪಾಸನೆಮಾಡೆಂದು ಹೇಳಿರುವದು ಶಾಸ್ತ್ರದೃಷ್ಟಿಯಿಂದ, ದೇವತೆಯನ್ನೇ ಉಪಾಸನೆ ಮಾಡಬೇಕೆಂದಲ್ಲ. ಜೀವಮುಖ್ಯಪ್ರಾಣಗಳನ್ನೂ ತೆಗೆದುಕೊಂಡರೆ ಜೀವನ ಉಪಾಸನೆ, ಪ್ರಾಣದ ಉಪಾಸನೆ, ಬ್ರಹ್ಮದ ಉಪಾಸನೆ–ಎಂದು ಮೂರು ಉಪಾಸನೆಗಳನ್ನು ವಿಧಿಸಿದೆ ಎಂದಾಗಿ ವಾಕ್ಯಭೇದವಾಗುವದು. ಆದ್ದರಿಂದ ಪ್ರಾಣಾಧಿಕರಣದಲ್ಲಿ ನಿರ್ಣಯಿಸಿದಂತೆ ಇಲ್ಲಿಯೂ ಪ್ರಾಣಶಬ್ದವನ್ನು ಬ್ರಹ್ಮಪರವೆಂದು ನಿಶ್ಚಯಿಸುವದೇ ಉತ್ತಮ. ಪ್ರಾಣಪ್ರಜ್ಞಾತ್ಮರ ಭೇದವು

ಉಪಾಧಿವಶದಿಂದ ಆತ್ಮನಿಗೂ ಆಗಬಹುದು; ಉಪಹಿತರೂಪದಿಂದ ಅವೆರಡಕ್ಕೂ ಅಭೇದವನ್ನೂ ಹೇಳಬಹುದು. ಅಥವಾ **ವೃತ್ತಿಕಾರರು** ಹೇಳುವಂತೆ ಒಂದು ಬ್ರಹ್ಮವನ್ನೇ ಪ್ರಾಣಧರ್ಮ, ಜೀವಧರ್ಮ, ತನ್ನ ಧರ್ಮ–ಎಂದು ಮೂರು ಬಗೆಯ ಧರ್ಮಗಳಿಂದ ಉಪಾಸನೆ ಮಾಡಬೇಕೆಂಬ ಅಭಿಪ್ರಾಯದಿಂದ ಪ್ರಾಣಜೀವರ ಲಿಂಗಗಳುಳ್ಳ ವಾಕ್ಯಗಳನ್ನು ಇಲ್ಲಿ ಉಪಯೋಗಿಸಿದೆ ಎಂದಾದರೂ ಇಟ್ಟುಕೊಳ್ಳಬಹುದು. ಹೇಗಾದರೂ ಇಲ್ಲಿ ಪ್ರಾಣವೆಂದರೆ ಬ್ರಹ್ಮವೇ, ದೇವತಾದಿಗಳಲ್ಲ.

# ಒಂದನೆಯ ಅಧ್ಯಾಯ—ಎರಡನೆಯ ಪಾದ

## (ಅಸ್ಪಷ್ಟಬ್ರಹ್ಮಲಿಂಗವಾಕ್ಯಗಳ ವಿಚಾರ)

# ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೪೫. ಪ್ರಥಮೇ ಪಾದೇ 'ಜನ್ಮಾದ್ಯಸ್ಯ ಯತಃ' (೧-೧-೨) ಇತಿ ಆಕಾಶಾದೇಃ ಸಮಸ್ತಸ್ಯ ಜಗತಃ ಜನ್ಮಾದಿಕಾರಣಂ ಬ್ರಹ್ಮ ಇತ್ಯುಕ್ತಮ್ । ತಸ್ಯ ಸಮಸ್ತಜಗತ್ಕಾರಣಸ್ಯ ಬ್ರಹ್ಮಣೋ ವ್ಯಾಪಿತ್ವಮ್, ನಿತ್ಯತ್ವಮ್, ಸರ್ವಜ್ಞತ್ವಮ್, ಸರ್ವಶಕ್ತಿತ್ವಮ್, ಸರ್ವಾತ್ಮತ್ವಮ್ ಇತ್ಯೇವಂ ಜಾತೀಯಕಾ ಧರ್ಮಾ ಉಕ್ತಾ ಏವ ಭವನ್ತಿ । ಅರ್ಥಾನ್ತರಪ್ರಸಿದ್ಧಾನಾಂ ಚ ಕೇಷಾಂಚಿತ್ ಶಬ್ದಾನಾಂ ಬ್ರಹ್ಮ-ವಿಷಯತ್ವಹೇತುಪ್ರತಿಪಾದನೇನ ಕಾನಿಚಿತ್ ವಾಕ್ಯಾನಿ ಸ್ಪಷ್ಟಬ್ರಹ್ಮಲಿಙ್ಗಾನಿ ಸನ್ದಿಹ್ಯಮಾನಾನಿ ಬ್ರಹ್ಮಪರತಯಾ ನಿರ್ಣೀತಾನಿ । ಪುನರಪಿ ಅನ್ಯಾನಿ ವಾಕ್ಯಾನಿ ಅಸ್ಪಷ್ಟಬ್ರಹ್ಮಲಿಙ್ಗಾನಿ ಸಂದಿಹ್ಯನ್ತೇ—ಕಿಂ ಪರಂ ಬ್ರಹ್ಮ ಪತಿಪಾದಯನ್ತಿ, ಆಹೋಸ್ವಿತ್ ಅರ್ಥಾನ್ತರಂ ಕಿಂಚಿತ್? ಇತಿ । ತನ್ನಿರ್ಣಯಾಯ ದ್ವಿತೀಯ-ತೃತೀಯೌ ಪಾದೌ ಆರಭ್ಯೇತೇ ॥

(ಭಾಷ್ಯಾರ್ಥ)

ಮೊದಲನೆಯ ಪಾದದಲ್ಲಿ "ಜನ್ಮಾದ್ಯಸ್ಯ ಯತಃ" (೧-೧-೨) ಎಂದು ಆಕಾಶವೇ ಮುಂತಾದ ಸಮಸ್ತ ಜಗತ್ತಿನ ಜನ್ಮಾದಿಗೆ ಬ್ರಹ್ಮವು ಕಾರಣವು ಎಂದು ಹೇಳಿದ್ದಾಗಿದೆ. ಸಮಸ್ತಜಗತ್ಕಾರಣವಾದ ಈ ಬ್ರಹ್ಮಕ್ಕೆ ವ್ಯಾಪಿತ್ವ, ನಿತ್ಯತ್ವ, ಸರ್ವಜ್ಞತ್ವ, ಸರ್ವಶಕ್ತಿತ್ವ, ಸರ್ವಾತ್ಮತ್ವ,-ಎಂಬೀ ಜಾತಿಯ ಧರ್ಮಗಳನ್ನು ಹೇಳಿದಂತೆಯೇ ಆಗಿರುತ್ತದೆ.[1] ಬೇರೆಯ ವಸ್ತುಗಳಲ್ಲಿ (ವಾಚಕಗಳೆಂದು) ಪ್ರಸಿದ್ಧವಾಗಿರುವ ಕೆಲವು ಶಬ್ದಗಳಿಗೆ ಬ್ರಹ್ಮವೇ ವಿಷಯ[2] ಎಂಬುದಕ್ಕೆ ಹೇತುವನ್ನು

---

1. ಕಾರಣವು ಕಾರ್ಯವನ್ನೆಲ್ಲ ವ್ಯಾಪಿಸಿರಬೇಕು, ಕಾರಣರಹಿತವಾದದ್ದು ನಿತ್ಯವಾಗಿರಬೇಕು, ಚೇತನಾಚೇತನರೂಪವಾಗಿರುವ ಕ್ರಿಯಾಕಾರಕಫಲರೂಪವಾದ ಜಗತ್ತಿಗೆ ಕಾರಣವಾಗಿರುವದರಿಂದ ಸರ್ವಜ್ಞವೂ ಸರ್ವಶಕ್ತಿಯುತವೂ ಆಗಿರಬೇಕು, ಸರ್ವವಸ್ತುಗಳೂ ಇದಕ್ಕೆ ಕಾರ್ಯವಾಗಿರುವದರಿಂದ ಇದು ಸರ್ವಾತ್ಮವಾಗಿರಬೇಕು ಎಂದು ಹೇಳಿದಂತೆ ಆಯಿತು.

2. ಸತ್ತು, ಪುರುಷ, ಆಕಾಶ, ಪ್ರಾಣ, ಜ್ಯೋತಿ–ಇಂಥ ಶಬ್ದಗಳಿಗೆ ರೂಢಿಯಲ್ಲಿರುವ ಅರ್ಥವು ಬೇರೆಯಾದರೂ ಇವು ಬ್ರಹ್ಮವನ್ನೇ ಹೇಳುತ್ತವೆ–ಎಂದು ಹಿಂದೆ ತಿಳಿಸಿದ್ದಾಗಿದೆ.

ತಿಳಿಸಿ ಸ್ಪಷ್ಟವಾದ ಬ್ರಹ್ಮಲಿಂಗಗಳುಳ್ಳ ಕೆಲವು ವಾಕ್ಯಗಳಲ್ಲಿ ಸಂದೇಹವು ಬರುವದರಿಂದ[1] (ಅವು) ಬ್ರಹ್ಮಪರವೆಂದು ನಿರ್ಣಯಿಸಿದ್ದಾಗಿದೆ. (ಈಗ) ಮತ್ತೂ ಬೇರೆಯ (ಕೆಲವು) ಅಸ್ಪಷ್ಟವಾದ ಬ್ರಹ್ಮಲಿಂಗಗಳುಳ್ಳ ವಾಕ್ಯಗಳಲ್ಲಿ (ಅವು) ಪರಬ್ರಹ್ಮವನ್ನು ತಿಳಿಸುತ್ತವೆಯೊ, ಅಥವಾ ಮತ್ತೆ ಯಾವದಾದರೊಂದು ವಸ್ತುವನ್ನು ತಿಳಿಸುತ್ತವೆಯೊ?-ಎಂದು ಸಂದೇಹವಾಗುತ್ತದೆ.[2] ಅವುಗಳ ನಿರ್ಣಯಕ್ಕಾಗಿ ಎರಡನೆಯ ಮೂರನೆಯ ಪಾದಗಳನ್ನು ಆರಂಭಿಸಿರುತ್ತದೆ.

## ೧. ಸರ್ವತ್ರಪ್ರಸಿದ್ಧ್ಯಧಿಕರಣ (೧-೮)

(ಛಾಂದೋಗ್ಯದ ೩-೧೪ರಲ್ಲಿರುವ ಮನೋಮಯನು ಬ್ರಹ್ಮವೇ)

**ಸರ್ವತ್ರಪ್ರಸಿದ್ಧೋಪದೇಶಾತ್ ॥ ೧ ॥**

೧. ಎಲ್ಲೆಲ್ಲಿಯೂ ಪ್ರಸಿದ್ಧವಾಗಿರುವದನ್ನೇ ಉಪದೇಶಿಸಿರುವದರಿಂದ ಮನೋಮಯನು ಬ್ರಹ್ಮವೇ.

## ವಿಷಯವೂ ಸಂಶಯವೂ

(ಭಾಷ್ಯ)

೧೪೭. ಇದಮ್ ಆಮ್ನಾಯತೇ "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನ್ ಇತಿ ಶಾನ್ತ ಉಪಾಸೀತ । ಅಥ ಖಲು ಕ್ರತುಮಯಃ ಪುರುಷೋ ಯಥಾಕ್ರತುರಸ್ಮಿಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ" (ಛಾಂ ೩-೧೪-೧), "ಮನೋಮಯಃ ಪ್ರಾಣಶರೀರೋ ಭಾರೂಪಃ" (ಛಾಂ ೩-೧೪-೨) ಇತ್ಯಾದಿ । ತತ್ರ ಸಂಶಯಃ । ಕಿಮ್ ಇಹ ಮನೋಮಯತ್ವಾದಿಭಿರ್ಧರ್ಮೈಃ ಶಾರೀರ ಆತ್ಮಾ ಉಪಾಸ್ಯತ್ವೇನ ಉಪದಿಶ್ಯತೇ ಆಹೋಸ್ವಿತ್ ಪರಂ ಬ್ರಹ್ಮ? ಇತಿ ॥

(ಭಾಷ್ಯಾರ್ಥ)

ಇದು ಶ್ರುತಿಯಲ್ಲಿದೆ. "ಇದೆಲ್ಲವೂ ತಜ್ಜಲಾನ್ ಆಗಿರುವದರಿಂದ ಬ್ರಹ್ಮವೇ ಅಲ್ಲವೆ? ಆದ್ದರಿಂದ ಶಾಂತನಾಗಿ ಉಪಾಸನೆಮಾಡಬೇಕು ಇನ್ನು (ಈ) ಪುರುಷನು ಕ್ರತುಮಯನಾಗಿರುತ್ತಾನೆ; ಪುರುಷನು ಈ ಲೋಕದಲ್ಲಿ ಎಂಥ ಕ್ರತುವುಳ್ಳವನಾಗಿರುವನೋ ಅದರಂತೆಯೇ ಇಲ್ಲಿಂದ ಹೊರಟುಹೋದ ಬಳಿಕ (ಪರಲೋಕದಲ್ಲಿ ಫಲ)ವಾಗುವದು. ಅವನು ಕ್ರತುವನ್ನು ಮಾಡಬೇಕು" (ಛಾಂ. ೩-೧೪-೧), "ಮನೋಮಯನು, ಪ್ರಾಣಶರೀರನು, ಭಾರೂಪನು" (ಛಾಂ. ೩-೧೪-೨)

---

1. ಇವು ಬ್ರಹ್ಮದ ಧರ್ಮಗಳೇ ಎಂದು ಗೊತ್ತಾಗುವಂತೆ ಇರುವ ಧರ್ಮಗಳಿದ್ದರೂ ಬೇರೆಯ ಪದಾರ್ಥಗಳ ಧರ್ಮಗಳೂ ವಾಕ್ಯದಲ್ಲಿರುವವರಿಂದ ಸಂಶಯವುಂಟಾಗುತ್ತದೆ.

2. ಬ್ರಹ್ಮವನ್ನು ಹೇಳುತ್ತವೆಯೊ ಇಲ್ಲವೊ? ಬೇರೆಯ ವಸ್ತುಗಳ ಧರ್ಮವನ್ನು ತಿಳಿಸುವ ಶಬ್ದಗಳಿರುವದರಿಂದ ಇವು ಬ್ರಹ್ಮಪರವಲ್ಲವೆಂದೇಕೆ ನಿರ್ಣಯಿಸಬಾರದು? ಎಂಬುದು ಸಂಶಯದ ಆಕಾರವು.

ಇತ್ಯಾದಿ.[1] ಇಲ್ಲಿ ಸಂಶಯವೇನೆಂದರೆ ಇಲ್ಲಿ ಮನೋಮಯತ್ವವೇ ಮುಂತಾ ಧರ್ಮಗಳಿಂದ ಶಾರೀರಾತ್ಮನನ್ನು ಉಪಾಸನೆ ಮಾಡಬೇಕೆಂದು ತಿಳಿಸಿದೆಯೆ ಅಥವಾ ಪರಬ್ರಹ್ಮವನ್ನು (ತಿಳಿಸಿದೆಯೆ)?

## ಪೂರ್ವಪಕ್ಷ: ಶಾಂಡಿಲ್ಯವಿದ್ಯೆಯ ಮನೋಮಯನು ಶಾರೀರನೇ

(ಭಾಷ್ಯ)

೧೪೭. ಕಿಂ ತಾವತ್ ಪ್ರಾಪ್ತಮ್? ಶಾರೀರ ಇತಿ । ಕುತಃ? ತಸ್ಯ ಹಿ ಕಾರ್ಯಕರಣಾಧಿಪತೇಃ ಪ್ರಸಿದ್ಧೋ ಮನಆದಿಭಿಃ ಸಂಬನ್ಧಃ ನ ಪರಸ್ಯ ಬ್ರಹ್ಮಣಃ । "ಅಪ್ರಾಣೋ ಹ್ಯಮನಾಃ ಶುಭ್ರಃ" (ಮುಂ. ೨-೧-೨) ಇತ್ಯಾದಿ ಶ್ರುತಿಭ್ಯಃ । ನನು "ಸರ್ವಂ ಖಲ್ವಿದಂ ಬ್ರಹ್ಮ" ಇತಿ ಸ್ವಶಬ್ದೇನೈವ ಬ್ರಹ್ಮ ಉಪಾತ್ತಮ್। ಕಥಮಿಹ ಶಾರೀರ ಆತ್ಮಾ ಉಪಾಸ್ಯ ಆಶಙ್ಕ್ಯತೇ? ನೈಷ ದೋಷಃ ನೇದಂ ವಾಕ್ಯಂ ಬ್ರಹ್ಮೋಪಾಸನಾವಿಧಿಪರಮ್, ಕಿಂ ತರ್ಹಿ ಶಮವಿಧಿಪರಮ್ ಯತ್ಕಾರಣಂ "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾನ್ತ ಉಪಾಸೀತ" ಇತ್ಯಾಹ। ಏತದುಕ್ತಂ ಭವತಿ–ಯಸ್ಮಾತ್ ಸರ್ವಮಿದಂ ವಿಕಾರಜಾತಂ ಬ್ರಹ್ಮೈವ ತಜ್ಜತ್ವಾತ್, ತಲ್ಲತ್ವಾತ್, ತದನತ್ವಾಚ್ಚ । ನ ಚ ಸರ್ವಸ್ಯ ಏಕಾತ್ಮತ್ವೇ ರಾಗಾ ದಯಃ ಸಂಭವನ್ತಿ, ತಸ್ಮಾತ್ ಶಾನ್ತ ಉಪಾಸೀತ ಇತಿ । ನ ಚ ಶಮವಿಧಿಪರತ್ವೇ ಸತಿ ಅನೇನ ವಾಕ್ಯೇನ ಬ್ರಹ್ಮೋಪಾಸನಂ ನಿಯನ್ತುಂ ಶಕ್ಯತೇ। ಉಪಾಸನಂ ತು "ಸ ಕ್ರತುಂ ಕುರ್ವೀತ" ಇತ್ಯನೇನ ವಿಧೀಯತೇ । ಕ್ರತುಃ, ಸಂಕಲ್ಪಃ

---

1. ಸತ್ಯಸಂಕಲ್ಪನು, ಆಕಾಶಾತ್ಮನು, ಸರ್ವಕರ್ಮನು, ಸರ್ವಕಾಮನು, ಸರ್ವ ಗಂಧನು, ಸರ್ವರಸನು, ಇವೆಲ್ಲವನ್ನೂ ವ್ಯಾಪಿಸಿಕೊಂಡಿರುವವನು, ಅವಾಕಿಯು, ಅನಾದರನು (೨); ಈ ಹೃದಯದೊಳಗೆ ಇರುವ ನನ್ನ ಆತ್ಮನು ಭತ್ತದ ಕಾಳಿಗಿಂತ, ಜವೆಗೋಧಿಯ ಕಾ ಗಿಂತ, ಸಾಸುವೆಯ ಕಾಳಿಗಿಂತ, ಸಾವೆಯ ಕಾಳಿಗಿಂತ ಅಥವಾ ಸಾವೆಯಕ್ಕಿಯ ಕಾಳಿಗಿಂ ಸಣ್ಣವನು; ಈ ಹೃದಯದೊಳಗೆ ಇರುವ ನನ್ನ ಆತ್ಮನು ಪೃಥಿವಿಗಿಂತ ದೊಡ್ಡವನು, ಅಂ ರಿಕ್ಷಕ್ಕಿಂತ ದೊಡ್ಡವನು, ದ್ಯುಲೋಕಕ್ಕಿಂತ ದೊಡ್ಡವನು, ಈ ಲೋಕಗಳಿಗಿಂತ ದೊಡ್ಡವನು (೩) ಸರ್ವಕರ್ಮನು, ಸರ್ವಕಾಮನು, ಸರ್ವಗಂಧನು, ಸರ್ವರಸನು, ಇವೆಲ್ಲವನ್ನೂ ವ್ಯಾಪಿ ಕೊಂಡಿರುವವನು, ಅವಾಕಿಯು, ಅನಾದರನು; ಈತನು ಹೃದಯದೊಳಗಿರುವ ನನ್ನ ಆತ್ಮನು, ಇದೆ ಬ್ರಹ್ಮವು; ಇದನ್ನು ಇಲ್ಲಿಂದ ಹೊರಟುಹೋಗಿ ಸೇರುವವನಾಗಿರುವೆನು ಎಂದು ಯಾವನಿಗೆ ನಿಶ್ಚ ವಾಗಿರುವದೋ ಸಂಶಯವಿರುವದಿಲ್ಲವೋ (ಅವನು ಸೇರುವನು). ಹೀಗೆಂದು ಶಾಂಡಿಲ್ಯನ (ಹೇಳಿದನು)–ಇಲ್ಲಿಯವರೆಗಿನ ವಾಕ್ಯವನ್ನು ಇತ್ಯಾದಿ ಎಂದು ಸಂಗ್ರಹಿಸಿದೆ.

ಧ್ಯಾನಮ್ ಇತ್ಯರ್ಥಃ | ತಸ್ಯ ಚ ವಿಷಯತ್ವೇನ ಶ್ರೂಯತೇ "ಮನೋಮಯಃ ಪ್ರಾಣಶರೀರಃ" ಇತಿ ಜೀವಲಿಙ್ಗಮ್ | ಅತೋ ಬ್ರೂಮೋ ಜೀವವಿಷಯಮ್ ಏತದುಪಾಸನಮ್ ಇತಿ ||

(ಭಾಷ್ಯಾರ್ಥ)

ಮೊದಲು ಏನು ಬಂದೊದಗುತ್ತದೆ ಎಂದರೆ ಶಾರೀರನೇ (ಉಪಾಸ್ಯನೆಂದು ತೋರುತ್ತದೆ). ಏಕೆ? ಏಕೆಂದರೆ, ಕಾರ್ಯಕಾರಣಗಳಿಗೆ ಒಡೆಯನಾಗಿರುವ ಅವನಿಗೇ ಮನಸ್ಸೇ ಮುಂತಾದವುಗಳ ಸಂಬಂಧವು ಪ್ರಸಿದ್ಧವಾಗಿರುತ್ತದೆ, ಪರಬ್ರಹ್ಮಕ್ಕೆ (ಸಂಬಂಧವು ಪ್ರಸಿದ್ಧವಾ)ಗಿಲ್ಲ. ಏಕೆಂದರೆ (ಪರಮಾತ್ಮನು) "ಅಪ್ರಾಣನು, ಅಮನನು, ಶುಭ್ರನು" (ಮುಂ. ೨-೧-೨) ಮುಂತಾದ ಶ್ರುತಿಗಳು (ಹಾಗೆನ್ನುತ್ತವೆ).

(ಆಕ್ಷೇಪ):—ಇದೆಲ್ಲವೂ ಬ್ರಹ್ಮವೇ" ಎಂದು ಬ್ರಹ್ಮವನ್ನು ತನ್ನ ಶಬ್ದದಿಂದಲೇ (ಶ್ರುತಿಯಲ್ಲಿ) ತೆಗೆದುಕೊಂಡಿರುತ್ತದೆ; (ಹೀಗಿರುವಲ್ಲಿ) ಇಲ್ಲಿ ಶಾರೀರಾತ್ಮನನ್ನು ಉಪಾಸನೆಮಾಡಬೇಕೆಂದು ಆಶಂಕೆಮಾಡುವದು ಹೇಗೆ?

(ಪರಿಹಾರ):—ಇದು ದೋಷವಲ್ಲ. ಈ ವಾಕ್ಯವು ಬ್ರಹ್ಮೋಪಾಸನೆಯನ್ನು ವಿಧಿಸುವ ತಾತ್ಪರ್ಯವುಳ್ಳದ್ದಲ್ಲ. ಮತ್ತೇನೆಂದರೆ ಶಮವನ್ನು ವಿಧಿಸುವದರಲ್ಲಿ ತಾತ್ಪರ್ಯವುಳ್ಳದ್ದು. ಯಾವ ಕಾರಣದಿಂದ (ಹೀಗೆನ್ನುವೆವೆಂದರೆ) "ಇದೆಲ್ಲವೂ ತಜ್ಜಲಾನ್ ಆಗಿರುವದರಿಂದ ಬ್ರಹ್ಮವೇ; ಆದ್ದರಿಂದ ಶಾಂತನಾಗಿ ಉಪಾಸನೆ ಮಾಡಬೇಕು" ಎಂದು ಹೇಳುತ್ತಿದೆ. ಇಲ್ಲಿ ಇಷ್ಟನ್ನು ಹೇಳಿದಂತೆ ಆಯಿತು: ಈ ಕಾರ್ಯಸಮೂಹವೆಲ್ಲವೂ ಅದರಿಂದ ಹುಟ್ಟಿರುವದರಿಂದಲೂ (ತಜ್ಜ), ಅದರಲ್ಲಿ ಲಯವಾಗುವದರಿಂದಲೂ (ತಲ್ಲ) ಆದರಲ್ಲಿಯೇ ಇದ್ದು (ತನ್ನ) ವ್ಯಾಪಾರವನ್ನು ಮಾಡಿಕೊಂಡಿರುವದರಿಂದಲೂ (ತದನ) ಬ್ರಹ್ಮವೇ ಆಗಿರುವದಷ್ಟೆ,[1] ಎಲ್ಲವೂ ಒಂದೇ ಆಗಿದ್ದರೆ ರಾಗಾದಿಗಳು ಸಂಭವಿಸುವದೂ ಇಲ್ಲವಷ್ಟೆ; ಆದ್ದರಿಂದ ಶಾಂತನಾಗಿ ಉಪಾಸನೆಮಾಬೇಕು. (ಇದು) ಶಮವಿಧಿಪರವೆಂದಾದರೆ ಈ ವಾಕ್ಯದಿಂದ ಬ್ರಹ್ಮವನ್ನೇ ಉಪಾಸನೆ (ಮಾಡಬೇಕೆಂದು) ನಿಯಮಿಸುವದಕ್ಕೆ ಆಗಲಾರದು.[2] ಉಪಾಸನೆಯನ್ನಾದರೋ "ಸ ಕ್ರತುಂ ಕುರ್ವೀತ" (ಅವನು ಕ್ರತುವನ್ನು ಮಾಡಬೇಕು) ಎಂಬ (ವಾಕ್ಯದಿಂದ) ವಿಧಿಸಿರುತ್ತದೆ.[3] ಕ್ರತು ಎಂದರೆ

---

1. ಕಾರ್ಯವು ಕಾರಣಕ್ಕಿಂತ ಭಿನ್ನವಲ್ಲವಾದ್ದರಿಂದ ಎಲ್ಲವೂ ಬ್ರಹ್ಮವೇ.

2. ಏಕೆಂದರೆ ಆಗ ವಾಕ್ಯಭೇದವಾಗುವದು, ಏಕವಾಕ್ಯತೆ ತಪ್ಪುವದು ಎಂದು ಭಾವ.

3. "ಸರ್ವಂ ಖಲ್ವಿದಂ ಬ್ರಹ್ಮ........" ಎಂಬ ವಾಕ್ಯದಲ್ಲಿ ವಿಧಿಯು ಶಮವಿಷಯಕವಾದ್ದರಿಂದ ಬ್ರಹ್ಮವನ್ನು ಉಪಾಸನೆಮಾಡಬೇಕೆಂದು ಸಿದ್ಧಿಸುವದಿಲ್ಲ; ಸರ್ವಂ ಖಲು ಎಂಬುದು ಶಮವೇಕಿರಬೇಕು ಎಂಬುದಕ್ಕೆ ಹೇತುವನ್ನು ಹೇಳುತ್ತದೆ. ಈ ವಾಕ್ಯದಲ್ಲಿ ವಿಧಿ ಇದ್ದರೂ ವಿಹಿತವಾಗಿರುವ ವಿಷಯವು ಇಂಥದ್ದೆಂದು ಸ್ಪಷ್ಟವಾಗಿರುವದಿಲ್ಲ ಎಂದು ಭಾವ,

ಸಂಕಲ್ಪವು, ಧ್ಯಾನವು ಎಂದರ್ಥ.[1] ಅದಕ್ಕೆ ವಿಷಯವಾಗಿ “ ಮನೋಮಯನು, ಪ್ರಾಣಶರೀರನು ” ಎಂದು ಜೀವಲಿಂಗವನ್ನು ಶ್ರುತಿ(ಯಲ್ಲಿ ಹೇಳಿದೆ).[2] ಆದ್ದರಿಂದ ಈ ಉಪಾಸನೆಯು ಜೀವವಿಷಯಕವಾದದ್ದು ಎಂದು ಹೇಳುತ್ತೇವೆ.

## ಶ್ರುತಿಯಲ್ಲಿರುವ ಬ್ರಹ್ಮಲಿಂಗಗಳೆಂಬವೂ ಜೀವಲಿಂಗಗಳೇ

(ಭಾಷ್ಯ)

೧೪೮. “ ಸರ್ವಕರ್ಮಾ, ಸರ್ವಕಾಮಃ ” (ಛಾಂ. ೩-೧೪-೨) ಇತ್ಯಾದ್ಯಪಿ ಶ್ರೂಯಮಾಣಂ ಪರ್ಯಾಯೇಣ ಜೀವವಿಷಯಮ್ ಉಪಪದ್ಯತೇ | “ ಏಷ ಮ ಆತ್ಮಾನ್ತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ ” (ಛಾಂ. ೩-೧೪-೨) ಇತಿ ಚ ಹೃದಯಾಯತನತ್ವಮ್ ಅಣೀಯಸ್ತ್ವಂ ಚ ಆರಾಗ್ರಮಾತ್ರಸ್ಯ ಜೀವಸ್ಯ ಅವಕಲ್ಪತೇ ನ ಅಪರಿಚ್ಛಿನ್ನಸ್ಯ ಬ್ರಹ್ಮಣಃ | ನನು “ ಜ್ಯಾಯಾನ್ ಪೃಥಿವ್ಯಾಃ ” (ಛಾಂ ೩-೧೪-೨) ಇತ್ಯಾದ್ಯಪಿ ನ ಪರಿಚ್ಛಿನ್ನೇ ಅವಕಲ್ಪತೇ ಇತಿ | ಅತ್ರ ಬ್ರೂಮಃ | ನ ತಾವತ್ ಅಣೀಯಸ್ತ್ವಂ ಜ್ಯಾಯಸ್ತ್ವಂ ಚ ಉಭಯಮ್ ಏಕಸ್ಮಿನ್ ಸಮಾಶ್ರಯಿತುಂ ಶಕ್ಯಮ್ | ವಿರೋಧಾತ್ | ಅನ್ಯತರಾಶ್ರಯಣೇ ಚ ಪ್ರಥಮಶ್ರುತತ್ವಾತ್ ಅಣೀಯಸ್ತ್ವಂ ಯುಕ್ತಮ್ ಆಶ್ರಯಿತುಮ್ | ಜ್ಯಾಯಸ್ತ್ವಂ ತು ಬ್ರಹ್ಮಭಾವಾಪೇಕ್ಷಯಾ ಭವಿಷ್ಯತಿ ಇತಿ | ನಿಶ್ಚಿತೇ ಚ ಜೀವವಿಷಯತ್ವೇ ಯತ್ ಅನ್ತೇ ಬ್ರಹ್ಮಸಂಕೀರ್ತನಮ್ “ ಏತದ್ಬ್ರಹ್ಮ ” (ಛಾಂ. ೩-೧೪-೪) ಇತಿ, ತದಪಿ ಪ್ರಕೃತಪರಾಮರ್ಶಾರ್ಥತ್ವಾತ್ ಜೀವವಿಷಯಮೇವ | ತಸ್ಮಾತ್ ಮನೋಮಯತ್ವಾದಿಭಿರ್ಧರ್ಮೈಃ ಜೀವ ಉಪಾಸ್ಯಃ ಇತಿ ||

(ಭಾಷ್ಯಾರ್ಥ)

‘ ಸರ್ವಕರ್ಮನು, ಸರ್ವಕಾಮನು ’ (ಛಾಂ. ೩-೧೪-೨) ಮುಂತಾದದ್ದು ಒಂದೊಂದಾಗಿ[3] ಜೀವನ ವಿಷಯ(ದಲ್ಲಿಯೂ ಆಗ)ಬಹುದಾಗಿದೆ. “ ಈ ಹೃದಯ

1. ಉಪನಿಷತ್ತಿನ ಭಾಷ್ಯದಲ್ಲಿ ಕ್ರತು ಎಂದರೆ ನಿಶ್ಚಯವು, ಅಧ್ಯವಸಾಯವು, ಹೀಗೇ ಬೇರೆಯಲ್ಲ ಎಂಬ ಅಲುಗಾಡದ ಪ್ರತ್ಯಯವು ಎಂದಿದೆ. ಇಲ್ಲಿ ಹೇಳಿರುವ ಸಂಕಲ್ಪವೂ ಅಥವಾ ಧ್ಯಾನವೂ ಅಲುಗಾಡದ ಶ್ರದ್ಧೆಯೊಡಗೂಡಿದ ಉಪಾಸನೆಯೇ ಎಂದು ಭಾವ.

2. ಉಪಾಸ್ಯವನ್ನು ವರ್ಣಿಸುವಾಗ ಯಾವ ಬ್ರಹ್ಮಲಿಂಗವನ್ನೂ ಹೇಳಿಲ್ಲ ಎಂದು ಭಾವ.

3. ಜೀವನು ಎಲ್ಲಾ ಕರ್ಮಗಳನ್ನೂ ಒಟ್ಟಿಗೆ ಮಾಡಲಾರನಾದರೂ ಒಂದೊಂದಾಗಿ ಮಾಡಬಹುದು; ಎಲ್ಲಾ ಕಾಮಗಳನ್ನೂ ಒಟ್ಟಿಗೆ ಪಡೆಯಲಾರನಾದರೂ ಕ್ರಮದಿಂದ ಎಲ್ಲವನ್ನೂ ಪಡೆಯಬಹುದು.

ದೊಳಗಿರುವ ಈ ನನ್ನ ಆತ್ಮನು ಬತ್ತದ (ಕಾಳಿಗಿಂತಲೂ) ಜವೆಯ (ಕಾಳಿಗಿಂತಲೂ) ........ ಅಣುವಾಗಿರುವನು'' (ಛಾಂ. ೩-೧೪-೩) ಎಂದು ಹೃದಯವೆಂಬ ಆಶ್ರಯವುಳ್ಳವನಾಗಿರುವದೂ ಬಹಳ ಅಣುವಾಗಿರುವದೂ ದಬ್ಬಳದ ತುದಿಯಷ್ಟು (ಸಣ್ಣದಾಗಿರುವ) ಪ್ರಮಾಣದ[1] ಜೀವನಿಗೆ ಹೊಂದುವದೇ ಹೊರತು ಅಪರಿಚ್ಛಿನ್ನವಾಗಿರುವ ಬ್ರಹ್ಮಕ್ಕೆ (ಹೊಂದುವ)ದಿಲ್ಲ.

(ಆಕ್ಷೇಪ) :—"ಪೃಥಿವಿಗಿಂತ ದೊಡ್ಡವನು" (ಛಾಂ. ೩-೧೪-೩) ಎಂದು ಮುಂತಾಗಿರುವ (ವಿಶೇಷಣ)ವೂ ಪರಿಚ್ಛಿನ್ನನಾಗಿರುವ ಜೀವನಿಗೆ ಹೊಂದುವದಿಲ್ಲವಲ್ಲ[2]!

(ಪರಿಹಾರ) :—ಇದಕ್ಕೆ (ಉತ್ತರ)ವನ್ನು ಹೇಳುತ್ತೇವೆ ಮೊದಲನೆಯದಾಗಿ ಹೆಚ್ಚು ಅಣುವಾಗಿರುವದು ಹೆಚ್ಚು ದೊಡ್ಡವನಾಗಿರುವದು-(ಈ) ಎರಡೂ ಒಬ್ಬನಲ್ಲಿಯೇ (ಇದೆ ಎಂದು) ಇಟ್ಟುಕೊಳ್ಳುವದಕ್ಕೆ ಬರುವಹಾಗಿಲ್ಲ; ಏಕೆಂದರೆ (ಇವೆರಡಕ್ಕೂ ಪರಸ್ಪರ)ವಿರೋಧವಿದೆ. ಎರಡರಲ್ಲಿ ಒಂದನ್ನೇ ಆಶ್ರಯಿಸುವದಾದರೆ ಮೊದಲು ಶ್ರುತಿಯಲ್ಲಿರುವದರಿಂದ ಅಣೀಯಸ್ತ್ವವನ್ನೇ ಇಟ್ಟುಕೊಳ್ಳುವದು ಯುಕ್ತವು. ಜ್ಯಾಯಸ್ತ್ವವೋ ಎಂದರೆ (ಜೀವನಿಗೆ ಮುಂದೆ ಬರುವ) ಬ್ರಹ್ಮಭಾವದ ಅಪೇಕ್ಷೆಯಿಂದ ಆಗಬಹುದು.[3] (ಹೀಗೆ ವಾಕ್ಯವು) ಜೀವವಿಷಯವೆಂದು ನಿಶ್ಚಯವಾಗಿರುವದರಿಂದ ಕೊನೆಯಲ್ಲಿ "ಇದು ಬ್ರಹ್ಮವು" (ಛಾಂ. ೩-೧೪-೪) ಎಂದು ಬ್ರಹ್ಮವನ್ನು ಹೇಳಿದೆಯಲ್ಲ, ಅದೂ ಪ್ರಕೃತವಾದದ್ದನ್ನು ಪರಾಮರ್ಶಿಸುವದರಿಂದ[4] ಜೀವವಿಷಯವೇ (ಆಗುತ್ತದೆ). ಆದ್ದರಿಂದ ಮನೋಮಯತ್ವವೇ ಮುಂತಾದ ಧರ್ಮಗಳಿಂದ ಉಪಾಸ್ಯವಾಗಿರುವದು ಜೀವನೇ.

## ಸಿದ್ಧಾಂತ: ಇಲ್ಲಿ ಉಪಾಸ್ಯನಾದ ಮನೋಮಯನು ಬ್ರಹ್ಮವೇ

೧೪೯. ಏವಂ ಪ್ರಾಪ್ತೇ ಬ್ರೂಮಃ । ಪರಮೇವ ಬ್ರಹ್ಮ ಮನೋಮಯತ್ವಾದಿಭಿರ್ಧರ್ಮೈಃ ಉಪಾಸ್ಯಮ್ । ಕುತಃ ? ಸರ್ವತ್ರಪ್ರಸಿದ್ಧೋಪದೇಶಾತ್ ।

---

1. ಶ್ವೇ. ೬-೮.

2. ಎಲ್ಲಾ ವಿಶೇಷಣಗಳೂ ಬ್ರಹ್ಮಕ್ಕೆ ಹೊಂದುವದಿಲ್ಲವೆಂಬುದು ದೋಷವಾದರೂ ಎಲ್ಲವೂ ಜೀವನಿಗೂ ಹೊಂದುವದಿಲ್ಲವಲ್ಲ !–ಎಂದು ಶಂಕೆ.

3. ಯಾವಯಾವದು ಬ್ರಹ್ಮಲಿಂಗವೆಂದು ಹೇಳುವಿರೋ ಅದನ್ನೆಲ್ಲ ಜೀವನಿಗೂ ಭವಿಷ್ಯದ್ವೃತ್ತಿಯಿಂದ ಹೇಳಬಹುದು–ಎಂಬುದು ಪೂರ್ವಪಕ್ಷಿಯ ಆಶಯ.

4. ಏತತ್ ಎಂಬ ಸರ್ವನಾಮವು ಪ್ರಕೃತಪರಾಮರ್ಶಿ; ಪ್ರಕೃತವಾಗಿರುವವನು ಮನೋಮಯನಾದ ಜೀವನು.

ಯತ್ ಸರ್ವೇಷು ವೇದಾನ್ತೇಷು ಪ್ರಸಿದ್ಧಂ ಬ್ರಹ್ಮಶಬ್ದಸ್ಯ ಆಲಮ್ಬನಂ ಜಗ-ತ್ಕಾರಣಮ್ । ಇಹ ಚ "ಸರ್ವಂ ಖಲ್ವಿದಂ ಬ್ರಹ್ಮ" ಇತಿ ವಾಕ್ಯೋಪಕ್ರಮೇ ಶ್ರುತಮ್, ತದೇವ ಮನೋಮಯತ್ವಾದಿಧರ್ಮೈಃ ವಿಶಿಷ್ಟಮ್ ಉಪದಿಶ್ಯತೇ ಇತಿ ಯುಕ್ತಮ್ । ಏವಂ ಚ ಪ್ರಕೃತಹಾನಾಪ್ರಕೃತಪ್ರಕ್ರಿಯೇ ನ ಭವಿಷ್ಯತಃ । ನನು ವಾಕ್ಯೋಪಕ್ರಮೇ ಶಮವಿಧಿವಿವಕ್ಷಯಾ ಬ್ರಹ್ಮನಿರ್ದಿಷ್ಟಮ್ ನ ಸ್ವವಿವಕ್ಷಯಾ ಇತ್ಯುಕ್ತಮ್ । ಅತ್ರೋಚ್ಯತೇ-ಯದ್ಯಪಿ ಶಮವಿಧಿವಿವಕ್ಷಯಾ ಬ್ರಹ್ಮನಿರ್ದಿಷ್ಟಮ್, ತಥಾಪಿ ಮನೋಮಯತ್ವಾದಿಷು ಉಪದಿಶ್ಯಮಾನೇಷು ತದೇವ ಬ್ರಹ್ಮ ಸಂನಿಹಿತಂ ಭವತಿ । ಜೀವಸ್ತು ನ ಸಂನಿಹಿತಃ, ನ ಚ ಸ್ವಶಬ್ದೇನ ಉಪಾತ್ತಃ ಇತಿ ವೈಷಮ್ಯಮ್ ॥

(ಭಾಷ್ಯಾರ್ಥ)

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. (ಇಲ್ಲಿ) ಮನೋಮಯತ್ವವೇ ಮುಂತಾದ ಧರ್ಮಗಳಿಂದ ಉಪಾಸ್ಯ(ವೆಂದು ಹೇಳಿರುವದು) ಪರಬ್ರಹ್ಮವೇ. ಏಕೆ? ಎಂದರೆ ಎಲ್ಲೆಲ್ಲಿಯೂ ಪ್ರಸಿದ್ಧವಾಗಿರುವದನ್ನು ಹೇಳಿರುವದರಿಂದ. ಸರ್ವವೇದಾಂತಗಳಲ್ಲಿಯೂ ಯಾವದು ಬ್ರಹ್ಮಶಬ್ದಕ್ಕೆ ವಿಷಯವಾದ ಜಗತ್ಕಾರಣವು ಪ್ರಸಿದ್ಧವಾಗಿರುತ್ತಯೋ (ಯಾವದನ್ನು) ಇಲ್ಲಿಯೂ "ಇದೆಲ್ಲವೂ ಬ್ರಹ್ಮವೇ" ಎಂದು ವಾಕ್ಯದ ಉಪಕ್ರಮದಲ್ಲಿ ಶ್ರುತಿಯಲ್ಲಿ ಹೇಳಿದೆಯೋ, ಅದನ್ನೇ ಮನೋಮಯತ್ವಾದಿಧರ್ಮಗಳಿಂದ ವಿಶಿಷ್ಟವಾಗಿ (ಉಪಾಸನೆಗಾಗಿ) ತಿಳಿಸಿಕೊಟ್ಟಿದೆ ಎಂಬುದು ಯುಕ್ತವು. ಹೀಗಾದರೆ ಪ್ರಕೃತವನ್ನು ಕೈಬಿಡುವದು, ಅಪ್ರಕೃತವನ್ನು ಪ್ರಾರಂಭಿಸುವದು (ಎಂಬ ದೋಷ)ಗಳು ಆಗುವದಿಲ್ಲ.[1]

(ಪೂರ್ವಪಕ್ಷ) :—ವಾಕ್ಯದ ಉಪಕ್ರಮದಲ್ಲಿ ಶಮವಿಧಿಯನ್ನು ತಿಳಿಸುವ ಅಭಿಪ್ರಾಯದಿಂದ ಬ್ರಹ್ಮವನ್ನು ತಿಳಿಸಿದೆಯೇ ಹೊರತು ಅದನ್ನೇ ಹೇಳಬೇಕೆಂಬ ಅಭಿಪ್ರಾಯದಿಂದಲ್ಲ ಎಂದು ಹೇಳಿದ್ದೆವಲ್ಲ![2]

---

1. ಇದೆಲ್ಲವೂ ಬ್ರಹ್ಮವು ಎಂದು ಪ್ರಕೃತವಾಗಿರುವಲ್ಲಿ 'ಮನೋಮಯಃ' ಎಂದು ಅಪ್ರಕೃತನಾದ ಜೀವನನ್ನು ಹೇಳುವದಕ್ಕೆ ಪ್ರಾರಂಭಿಸಿದೆ ಎಂಬ ದೋಷವು ಪೂರ್ವಪಕ್ಷದಲ್ಲಿ ಇರುತ್ತದೆ ಎಂದು ಭಾವ. ಇಲ್ಲಿ ಹಿಂದೆ ಗಾಯತ್ರೀವಾಕ್ಯದಲ್ಲಿ (೩-೧೨-೧) ಎಂಬ ಖಂಡದಲ್ಲಿ ಪ್ರಕೃತವಾಗಿರುವ ಬ್ರಹ್ಮದ ಅನುವೃತ್ತಿಯು ಹದಿಮೂರನೆಯ ಖಂಡದಲ್ಲಿರುವ ಜ್ಯೋತಿರ್ವಾಕ್ಯದಂತೆ ಈ ಶಾಂಡಿಲ್ಯವಿದ್ಯೆಯಲ್ಲಿಯೂ ಇದೆ ಎಂದು (ಭಾ. ಭಾ. ೧೨೭) ರಲ್ಲಿ ಹೇಳಿದ್ದನ್ನು ನೆನಪಿಗೆ ತಂದುಕೊಳ್ಳಬೇಕು.

2. ಬ್ರಹ್ಮವು ಸ್ವಪ್ರಧಾನವಲ್ಲದಿರುವಾಗ ಅದರ ಉಪಾಸನೆಯನ್ನು ಇಲ್ಲಿ ವಿಧಿಸಿದೆ ಎನ್ನುವದು ಹೇಗೆ ?—ಎಂದು ಶಂಕೆ.

(ಪರಿಹಾರ) :—ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. (ಅಲ್ಲಿ) ಶಮವಿಧಿಯನ್ನು ಹೇಳಬೇಕೆಂದು ಬ್ರಹ್ಮವನ್ನು ತಿಳಿಸಿದೆಯೆಂದಾಗಲಿ; ಆದರೂ (ಇಲ್ಲಿ) ಮನೋಮಯತ್ವಾದಿಗಳನ್ನು ತಿಳಿಸುವಾಗ ಅದೇ ಬ್ರಹ್ಮವೇ ಸನ್ನಿಹಿತವಾಗಿರುತ್ತದೆ. ಜೀವನಾದರೋ ಸಂನಿಹಿತನೂ ಆಗಿರುವದಿಲ್ಲ, ತನ್ನ ಶಬ್ದದಿಂದ ಅವನನ್ನು (ಶ್ರುತಿಯಲ್ಲಿ) ತೆಗೆದುಕೊಂಡೂ ಇರುವದಿಲ್ಲ. ಹೀಗೆ (ಇಬ್ಬರಿಗೂ) ಹೆಚ್ಚು ಕಡಿಮೆಯಿದೆ.

## ಇಲ್ಲಿ ಹೇಳಿರುವ ಗುಣಗಳು ಬ್ರಹ್ಮಕ್ಕೇ ಹೊಂದುತ್ತವೆ

**ವಿವಕ್ಷಿತಗುಣೋಪಪತ್ತೇಶ್ಚ ॥ ೨ ॥**

೨. ವಿವಕ್ಷಿತವಾದ ಗುಣಗಳು ಹೊಂದುವದರಿಂದಲೂ (ಮನೋಮಯನು ಬ್ರಹ್ಮವೇ).

## ವಿವಕ್ಷಿತವೆಂದರೇನು ?

(ಭಾಷ್ಯ)

೧೫೦. ವಕ್ತುಮ್ ಇಷ್ಟಾಃ ವಿವಕ್ಷಿತಾಃ । ಯದ್ಯಪಿ ಅಪೌರುಷೇಯೇ ವೇದೇ ವಕ್ತುರಭಾವಾತ್ ನ ಇಚ್ಛಾರ್ಥಃ ಸಂಭವತಿ, ತಥಾಪಿ ಉಪಾದಾನೇನ ಫಲೇನ ಉಪಚರ್ಯತೇ । ಲೋಕೇ ಹಿ ಯತ್ ಶಬ್ದಾಭಿಹಿತಮ್ ಉಪಾದೇಯಂ ಭವತಿ ತತ್ ವಿವಕ್ಷಿತಮ್ ಇತ್ಯುಚ್ಯತೇ । ಯತ್ ಅನುಪಾದೇಯಮ್, ತತ್ ಅವಿವಕ್ಷಿತಮ್ ಇತಿ । ತದ್ವತ್ ವೇದೇಽಪಿ ಉಪಾದೇಯತ್ವೇನ ಅಭಿಹಿತಂ ವಿವಕ್ಷಿತಂ ಭವತಿ, ಇತರತ್ ಅವಿವಕ್ಷಿತಮ್ । ಉಪಾದಾನಾನುಪಾದಾನೇ ತು ವೇದವಾಕ್ಯತಾತ್ಪರ್ಯಾತಾತ್ಪರ್ಯಾಭ್ಯಾಮ್ ಅವಗಮ್ಯೇತೇ ॥

(ಭಾಷ್ಯಾರ್ಥ)

ಹೇಳುವದಕ್ಕೆ ಇಷ್ಟವಾದವು ವಿವಕ್ಷಿತ(ವೆನಿಸುವವು). ಅಪೌರುಷೇಯವಾದ ವೇದದಲ್ಲಿ ವಕ್ತೃವಿಲ್ಲದ್ದರಿಂದ ಇಚ್ಛೆಯೆಂಬ ಅರ್ಥವು ಹೊಂದುವದಿಲ್ಲವೆಂಬುದು ನಿಜ; ಆದರೂ ತೆಗೆದುಕೊಳ್ಳುವದೆಂಬ ಫಲದಿಂದ (ವಿವಕ್ಷಿತವೆಂಬ ಮಾತನ್ನು) ಉಪಚಾರಕ್ಕೆ (ಪ್ರಯೋಗಿಸಿ)ರುತ್ತದೆ. ಲೋಕದಲ್ಲಿ ಶಬ್ದದಿಂದ ಹೇಳಿದ್ದು ಯಾವದು ತೆಗೆದುಕೊಳ್ಳತಕ್ಕದ್ದಾಗಿರುವದೋ ಅದನ್ನು ವಿವಕ್ಷಿತವೆನ್ನುತ್ತಾರೆ; ಯಾವದು ತೆಗೆದುಕೊಳ್ಳತಕ್ಕದ್ದಲ್ಲವೋ ಅದನ್ನು ಅವಿವಕ್ಷಿತವೆನ್ನುತ್ತಾರಲ್ಲವೆ? ಅದರಂತೆ ವೇದದಲ್ಲಿಯೂ ತೆಗೆದುಕೊಳ್ಳತಕ್ಕದ್ದೆಂದು ಹೇಳಿರುವದು ವಿವಕ್ಷಿತವಾಗಿರುತ್ತದೆ; (ಅದಕ್ಕಿಂತ) ಬೇರೆಯಾದದ್ದು ಅವಿವಕ್ಷಿತ(ವಾಗಿರುತ್ತದೆ).

ತೆಗೆದುಕೊಳ್ಳತಕ್ಕದ್ದು, ತೆಗೆದುಕೊಳ್ಳದಿರುವದು—ಎಂಬಿವಾದರೋ ವೇದವಾಕ್ಯದ ತಾತ್ಪರ್ಯ, ಅತಾತ್ಪರ್ಯ[1]–ಇವುಗಳಿಂದ ಗೊತ್ತುಪಡಿಸತಕ್ಕವಾಗಿರುತ್ತವೆ.

## ವಿವಕ್ಷಿತಗುಣಗಳು ಬ್ರಹ್ಮಕ್ಕೇ ಹೊಂದುತ್ತವೆ

(ಭಾಷ್ಯ)

೧೫೧. ತದಿಹ ಯೇ ವಿವಕ್ಷಿತಾ ಗುಣಾಃ, ಉಪಾಸನಾಯಾಮ್ ಉಪಾದೇಯತ್ವೇನ ಉಪದಿಷ್ಟಾಃ ಸತ್ಯಸಂಕಲ್ಪತ್ವ[2]ಪ್ರಭೃತಯಃ, ತೇ ಪರಸ್ಮಿನ್ ಬ್ರಹ್ಮಣಿ ಉಪಪದ್ಯನ್ತೇ। ಸತ್ಯಸಂಕಲ್ಪತ್ವಂ ಹಿ ಸೃಷ್ಟಿಸ್ಥಿತಿಸಂಹಾರೇಷು ಅಪ್ರತಿಬದ್ಧ ಶಕ್ತಿತ್ವಾತ್ ಪರಮಾತ್ಮನ ಏವ ಅವಕಲ್ಪತೇ। ಪರಮಾತ್ಮಗುಣತ್ವೇನ ಚ "ಯ ಆತ್ಮಾಪಹತಪಾಪ್ಮಾ" (ಛಾಂ. ೮-೭-೧) ಇತ್ಯತ್ರ "ಸತ್ಯಕಾಮಃ ಸತ್ಯಸಂಕಲ್ಪಃ" ಇತಿ ಶ್ರುತಮ್। ಆಕಾಶಾತ್ಮಾ[3] ಇತಿ ಆಕಾಶವತ್ ಆತ್ಮಾ ಅಸ್ಯ ಇತ್ಯರ್ಥಃ। ಸರ್ವಗತತ್ವಾದಿಭಿಃ ಧರ್ಮೈಃ ಸಂಭವತಿ ಆಕಾಶೇನ ಸಾಮ್ಯಂ ಬ್ರಹ್ಮಣಃ। "ಜ್ಯಾಯಾನ್ ಪೃಥಿವ್ಯಾಃ" ಇತ್ಯಾದಿನಾ ಚ ಏತದೇವ ದರ್ಶಯತಿ। ಯದಾಪಿ ಆಕಾಶಃ ಆತ್ಮಾ ಅಸ್ಯ[4] ಇತಿ ವ್ಯಾಖ್ಯಾಯತೇ, ತದಾಪಿ ಸಂಭವತಿ ಸರ್ವಜಗತ್ಕಾರಣಸ್ಯ, ಸರ್ವಾತ್ಮನೋ ಬ್ರಹ್ಮಣಃ ಆಕಾಶಾತ್ಮತ್ವಮ್। ಅತ ಏವ 'ಸರ್ವಕರ್ಮಾ' ಇತ್ಯಾದಿ। ಏವಮ್ ಇಹ ಉಪಾಸ್ಯತಯಾ ವಿವಕ್ಷಿತಾ ಗುಣಾಃ ಬ್ರಹ್ಮಣಿ ಉಪಪದ್ಯನ್ತೇ ॥

(ಭಾಷ್ಯಾರ್ಥ)

ಹೀಗಿರುವದರಿಂದ ಇಲ್ಲಿ ವಿವಕ್ಷಿತವಾದ, ಎಂದರೆ ಉಪಾಸನೆಯಲ್ಲಿ ತೆಗೆದುಕೊಳ್ಳಬೇಕೆಂದು ತಿಳಿಸಿರುವ ಸತ್ಯಸಂಕಲ್ಪತ್ವವೇ ಮುಂತಾದ ಗುಣಗಳಿವೆಯಲ್ಲ, ಅವು ಪರಬ್ರಹ್ಮದಲ್ಲಿ ಹೊಂದುಗಡೆಯಾಗುತ್ತವೆ. ಹೇಗೆಂದರೆ, **ಸತ್ಯಸಂಕಲ್ಪವು** ಸೃಷ್ಟಿಸ್ಥಿತಿಸಂಹಾರಗಳಲ್ಲಿ (ಯಾವ) ಅಡ್ಡಿಯೂ ಇಲ್ಲದ ಶಕ್ತಿಯುಳ್ಳವನಾಗಿರುವದ

---

1. ತಾತ್ಪರ್ಯ, ಅತಾತ್ಪರ್ಯ—ಇವುಗಳನ್ನು ಉಪಕ್ರಮಾದಿಲಿಂಗಗಳಿಂದ ಗೊತ್ತುಪಡಿಸಬೇಕಾಗುವದು.

2. ಸತ್ಯಸಂಕಲ್ಪ ಎಂಬ ಶಬ್ದವನ್ನು ಭಾವಪ್ರಧಾನವಾಗಿ ನಿರ್ದೇಶಿಸಿರುತ್ತದೆಯೋ, 'ಸತ್ಯಸಂಕಲ್ಪತ್ವ' ಎಂದೇ ಆಚಾರ್ಯರು ಬರೆದಿದ್ದರೋ ತಿಳಿಯದು.

3. 'ಆಕಾಶಾತ್ಮೇತ್ಯಾದಿನಾ' ಎಂಬ ಅಚ್ಚಿನ ಪಾಠದಲ್ಲಿ 'ಆದಿನಾ' ಹೆಚ್ಚು.

4. ಅಚ್ಚಿನಲ್ಲಿ 'ಯಸ್ಯ' ಎಂದಿದೆ; ಆಚಾರ್ಯರು ಇಲ್ಲಿ 'ಅಸ್ಯ' ಎಂದೇ ಬರೆದಿರಬೇಕೆಂದು ತೋರುತ್ತದೆ.

ರಿಂದ ಪರಮಾತ್ಮನಿಗೇ ಹೊಂದುತ್ತದೆ. "ಯ ಆತ್ಮಾಪಹತಪಾಪ್ಮಾ" (ಛಾಂ. ೮-೭-೧) ಎಂಬಲ್ಲಿ "ಸತ್ಯಕಾಮನು, ಸತ್ಯಸಂಕಲ್ಪನು" ಎಂದು (ಇದನ್ನು) ಪರಮಾತ್ಮನ ಗುಣವೆಂದು ಶ್ರುತಿಯಲ್ಲಿಯೂ ಹೇಳಿದೆ. '**ಆಕಾಶಾತ್ಮನು**' ಎಂಬುದಕ್ಕೆ ಆಕಾಶದಂತೆ ಇರುವ ಆತ್ಮವು ಈತನದು ಎಂದರ್ಥ. ಸರ್ವಗತತ್ವವೇ ಮುಂತಾದ ಧರ್ಮಗಳಿರುವದರಿಂದ ಬ್ರಹ್ಮಕ್ಕೆ ಆಕಾಶದ ಸಾಮ್ಯವಿರುತ್ತದೆ.[1] '**ಪೃಥಿವಿಗಿಂತ ದೊಡ್ಡವನು**' ಮುಂತಾದ (ಶ್ರುತಿಭಾಗ)ದಿಂದ ಇದನ್ನೇ[2] ತಿಳಿಸಿಕೊಟ್ಟಿರುತ್ತದೆ. ಯಾವಾಗ ಆಕಾಶವೇ ಈತನಿಗೆ ಆತ್ಮವು ಎಂದು ವ್ಯಾಖ್ಯಾನ ಮಾಡುವೆವೋ ಆಗಲೂ ಸರ್ವಜಗತ್ತಿಗೂ ಕಾರಣವಾಗಿರುವ ಸರ್ವಾತ್ಮವಾಗಿರುವ ಬ್ರಹ್ಮಕ್ಕೆ ಆಕಾಶಾತ್ಮತ್ವವು ಹೊಂದುತ್ತದೆ. ಆದ್ದರಿಂದಲೇ 'ಸರ್ವಕರ್ಮನು' ಮುಂತಾದದ್ದು (ಬ್ರಹ್ಮಕ್ಕೆ ಹೊಂದುತ್ತದೆ). ಹೀಗೆ ಇಲ್ಲಿ ಉಪಾಸ್ಯವೆಂದು ವಿವಕ್ಷಿತವಾಗಿರುವ ಗುಣಗಳು ಬ್ರಹ್ಮಕ್ಕೆ ಹೊಂದುತ್ತವೆ.

## ಮನೋಮಯತ್ವಾದಿಲಿಂಗಗಳ ಗತಿ

(ಭಾಷ್ಯ)

೧೫೨. ಯತ್ತು ಉಕ್ತಮ್ "ಮನೋಮಯಃ ಪ್ರಾಣಶರೀರಃ" ಇತಿ ಜೀವಲಿಙ್ಗಂ ನ ತದ್ ಬ್ರಹ್ಮಣಿ ಉಪಪದ್ಯತೇ ಇತಿ, ತದಪಿ ಬ್ರಹ್ಮಣಿ ಉಪಪದ್ಯತೇ ಇತಿ ಬ್ರೂಮಃ। ಸರ್ವಾತ್ಮತ್ವಾದ್ ಹಿ ಬ್ರಹ್ಮಣಃ ಜೀವಸಂಬನ್ಧೀನಿ ಮನೋಮಯತ್ವಾದೀನಿ ಬ್ರಹ್ಮಸಂಬನ್ಧೀನಿ ಭವನ್ತಿ। ತಥಾ ಚ ಬ್ರಹ್ಮವಿಷಯೇ ಶ್ರುತಿಸ್ಮೃತೀ ಭವತಃ—"ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ। ತ್ವಂ ಜೀರ್ಣೋ ದಣ್ಡೇನ ವಞ್ಚಸಿ ತ್ವಂ ಜಾತೋ ಭವಸಿ ವಿಶ್ವತೋಮುಖಃ" ॥ (ಶ್ವೇ ೪-೩) ಇತಿ, "ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್। ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ॥" (ಗೀ. ೧೩-೧೩) ಇತಿ ಚ। "ಅಪ್ರಾಣೋ ಹ್ಯಮನಾ ಶುಭ್ರಃ" (ಮುಂ. ೨-೧-೨) ಇತಿ ಶ್ರುತಿಃ ಶುದ್ಧಬ್ರಹ್ಮವಿಷಯಾ, ಇಯಂ ತು "ಮನೋಮಯಃ ಪ್ರಾಣಶರೀರಃ" ಇತಿ ಸಗುಣಬ್ರಹ್ಮವಿಷಯಾ ಇತಿ ವಿಶೇಷಃ। ಅತಃ ವಿವಕ್ಷಿತಗುಣೋಪಪತ್ತೇಃ ಪರಮೇವ ಬ್ರಹ್ಮ ಇಹ ಉಪಾಸ್ಯತ್ವೇನ ಉಪದಿಷ್ಟಮ್ ಇತಿ ಗಮ್ಯತೇ ॥

---

1. ಸರ್ವಗತತ್ವ, ನಿತ್ಯತ್ವ, ಸೂಕ್ಷ್ಮತ್ವ-ಮುಂತಾದ ಧರ್ಮಗಳು ಆಕಾಶದಲ್ಲಿ ಇತರ ಭೂತಗಳ ಅಪೇಕ್ಷೆಯಿಂದ, ಆತ್ಮನಲ್ಲಿ ನಿರಪೇಕ್ಷವಾಗಿವೆ.

2. ಆಕಾಶದಂತೆ ಸರ್ವಗತನು-ಎಂದು ಮುಂತಾಗಿರುವ ಸಾಮ್ಯವನ್ನೇ.

(ಭಾಷ್ಯಾರ್ಥ)

ಇನ್ನು 'ಮನೋಮಯನು,' 'ಪ್ರಾಣರೂಪನು' (ಛಾಂ. ೩-೧೪-೨) ಎಂಬುದು ಜೀವಲಿಂಗವು, ಅದು ಬ್ರಹ್ಮಕ್ಕೆ ಹೊಂದುಗೆಯಾಗುವದಿಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ; ಅದೂ ಬ್ರಹ್ಮಕ್ಕೆ ಹೊಂದುತ್ತದೆ ಎಂದು ಹೇಳುತ್ತೇವೆ. ಹೇಗೆಂದರೆ ಬ್ರಹ್ಮವು ಸರ್ವಾತ್ಮವಾಗಿರುವದರಿಂದ ಜೀವಸಂಬದ್ಧಗಳಾದ ಮನೋಮಯತ್ವಾದಿಗಳು ಬ್ರಹ್ಮಸಂಬದ್ಧವೂ ಆಗುತ್ತವೆ[1]. ಆದ್ದರಿಂದಲೇ ಬ್ರಹ್ಮದ ವಿಷಯದಲ್ಲಿ "ನೀನು ಸ್ತ್ರೀಯು, ನೀನು ಪುರುಷನು, ನೀನೇ ಕುಮಾರನು ಅಥವಾ ಕುಮಾರಿಯು; ನೀನು ಮುದುಕನಾಗಿ ಕೋಲನ್ನು (ಹಿಡಿದುಕೊಂಡು) ಓಡಾಡುವೆ, ನೀನು ಹುಟ್ಟಿ ವಿಶ್ವತೋಮುಖನಾಗಿರುವೆ'' (ಶ್ವೇ. ೪-೩) ಎಂದೂ "ಅದು ಎಲ್ಲಾ ಕಡೆಯಲ್ಲಿಯೂ ಕೈಕಾಲುಗಳುಳ್ಳದ್ದು, ಎಲ್ಲಾ ಕಡೆಗಳಲ್ಲಿಯೂ ಕಣ್ಣುತಲೆಬಾಯಿಗಳುಳ್ಳದ್ದು, ಎಲ್ಲಾ ಕಡೆಯಲ್ಲಿಯೂ ಕಿವಿಯುಳ್ಳದ್ದು, ಲೋಕದಲ್ಲಿ ಎಲ್ಲವನ್ನೂ ಆವರಿಸಿಕೊಂಡಿರುವದು'' (ಗೀ. ೧೩-೧೩) ಎಂದೂ ಶ್ರುತಿಸ್ಮೃತಿಗಳಿರುವವು. "ಅಪ್ರಾಣನು, ಅಮನನು, ಶುಭ್ರನು'' (ಮುಂ. ೨-೧-೨) ಎಂಬುದು ಶುದ್ಧಬ್ರಹ್ಮವಿಷಯಕವಾದದ್ದು, "ಮನೋಮಯನು, ಪ್ರಾಣಶರೀರನು'' ಎಂಬ ಇದಾದರೋ ಸಗುಣಬ್ರಹ್ಮವಿಷಯಕವಾದದ್ದು. ಇದೇ (ಇಲ್ಲಿರುವ) ವಿಶೇಷವು. ಆದ್ದರಿಂದ ವಿವಕ್ಷಿತವಾದ ಗುಣಗಳು ಹೊಂದುವದರಿಂದ (ಇಲ್ಲಿ) ಪರಬ್ರಹ್ಮವನ್ನೇ ಉಪಾಸ್ಯವಾಗಿ ಉಪದೇಶಿಸಿರುತ್ತದೆ ಎಂದು ನಿಶ್ಚಯವಾಯಿತು.

## ಮನೋಮಯನು ಜೀವನಲ್ಲವೆಂಬುದಕ್ಕೆ ಯುಕ್ತಿಗಳು

**ಅನುಪಪತ್ತೇಸ್ತು ನ ಶಾರೀರಃ ॥ ೩ ॥**

೩. ಆದರೆ (ಇವು) ಹೊಂದದೆ ಇರುವದರಿಂದ (ಮನೋಮಯನು) ಶಾರೀರನಲ್ಲ.

(ಭಾಷ್ಯ)

೧೫೩. ಪೂರ್ವೇಣ ಸೂತ್ರೇಣ ಬ್ರಹ್ಮಣಿ ವಿವಕ್ಷಿತಾನಾಂ ಗುಣಾನಾಮ್ ಉಪಪತ್ತಿಃ ಉಕ್ತಾ। ಅನೇನ ತು ಶಾರೀರೇ ತೇಷಾಮ್ ಅನುಪಪತ್ತಿಃ ಉಚ್ಯತೇ।

---

1. ಎಲ್ಲವೂ ಬ್ರಹ್ಮದ ಕಾರ್ಯವಾಗಿರುವದರಿಂದ ಯಾವದರ ಧರ್ಮವನ್ನಾದರೂ ಬ್ರಹ್ಮದ ಧರ್ಮವೆಂದು ಹೇಳಬಹುದಾಗುವದು. ಆಗ ಮತ್ತೊಂದರ ಧರ್ಮವೆಂಬ ವ್ಯವಹಾರವೇ ಇಲ್ಲವಾಗುವದಿಲ್ಲವೆ ?–ಎಂದು ಶಂಕಿಸಬಾರದು. ಬ್ರಹ್ಮದ ಧರ್ಮವೆಂದು ವಿವಕ್ಷಿತವಾಗಿದ್ದರೆ ಉಪಾಸನೆಗಾಗಿ ಅದನ್ನು ಬ್ರಹ್ಮಧರ್ಮವೆಂದು ಭಾವಿಸಬೇಕು ; ಅವಿವಕ್ಷಿತವಾಗಿರುವ ಧರ್ಮಗಳು ಅಬ್ರಹ್ಮದವು ಎಂಬ ವ್ಯವಸ್ಥೆಯು ಅದ್ವೈತಸಿದ್ಧಾಂತದಲ್ಲಿಯೂ ಇರುತ್ತದೆ.

ತುಶಬ್ದೋಽವಧಾರಣಾರ್ಥಃ। ಬ್ರಹ್ಮೈವ ಉಕ್ತೇನ ನ್ಯಾಯೇನ ಮನೋಮಯತ್ವಾದಿಗುಣಮ್, ನ ತು ಶಾರೀರೋ ಜೀವೋ ಮನೋಮಯತ್ವಾದಿಗುಣಃ। ಯತ್ಕಾರಣಂ "ಸತ್ಯಸಂಕಲ್ಪಃ, ಆಕಾಶಾತ್ಮಾ, ಅವಾಕೀ, ಅನಾದರಃ, ಜ್ಯಾಯಾನ್ ಪೃಥಿವ್ಯಾಃ" ಇತಿ ಚೈವಂಜಾತೀಯಕಾ ಗುಣಾಃ ನ ಶಾರೀರೇ ಆಞ್ಜಸ್ಯೇನ ಉಪಪದ್ಯನ್ತೇ ॥

(ಭಾಷ್ಯಾರ್ಥ)

ಹಿಂದಿನ ಸೂತ್ರದಲ್ಲಿ ವಿವಕ್ಷಿತವಾದ ಗುಣಗಳು ಬ್ರಹ್ಮಕ್ಕೆ ಹೊಂದುತ್ತವೆ ಎಂದು ಹೇಳಿರುತ್ತದೆ. ಈ (ಸೂತ್ರ)ದಲ್ಲಾದರೋ ಅವು ಶಾರೀರನಿಗೆ ಹೊಂದುವದಿಲ್ಲವೆಂದು ಹೇಳಲಾಗುತ್ತದೆ. (ಇಲ್ಲಿರುವ) ತುಶಬ್ದವು ಅವಧಾರಣೆಗಾಗಿ (ಬಂದಿದೆ). ಮೇಲೆ ಹೇಳಿರುವ ಯುಕ್ತಿಯಿಂದ ಬ್ರಹ್ಮವೇ ಮನೋಮಯತ್ವಾದಿಗುಣಗಳುಳ್ಳದ್ದೇ ಹೊರತು, ಶಾರೀರನು ಎಂದರೆ ಜೀವನು, ಮನೋಮಯತ್ವಾದಿಗುಣಗಳುಳ್ಳವನಲ್ಲ[1]. ಯಾವ ಕಾರಣದಿಂದ ಎಂದರೆ 'ಸತ್ಯಸಂಕಲ್ಪನು,' 'ಆಕಾಶಾತ್ಮನು,' 'ಅವಾಕಿಯು,' 'ಅನಾದರನು' ಮತ್ತು ಪೃಥಿವಿಗಿಂತ ದೊಡ್ಡವನು ಎಂಬೀ ಬಗೆಯ ಗುಣಗಳು ಶಾರೀರನಿಗೆ ಸರಿಯಾಗಿ ಹೊಂದುವದಿಲ್ಲ.

## ಶಾರೀರನೆಂಬುದರ ಅಭಿಪ್ರಾಯ

( ಭಾಷ್ಯ )

೧೫೪. ಶಾರೀರಃ ಇತಿ। ಶರೀರೇ ಭವಃ ಇತ್ಯರ್ಥಃ। ನನು ಈಶ್ವರೋಽಪಿ ಶರೀರೇ ಭವತಿ। ಸತ್ಯಂ ಶರೀರೇ ಭವತಿ, ನ ತು ಶರೀರೇ ಏವ ಭವತಿ। "ಜ್ಯಾಯಾನ್ ಪೃಥಿವ್ಯಾ ಜ್ಯಾಯಾನನ್ತರಿಕ್ಷಾತ್," "ಆಕಾಶವತ್ಸರ್ವಗತಶ್ಚ ನಿತ್ಯಃ" (ಶತ. ಬ್ರಾ. ೧೦-೬-೩-೨) ಇತಿ ಚ ವ್ಯಾಪಿತ್ವಶ್ರವಣಾತ್। ಜೀವಸ್ತು ಶರೀರೇ ಏವ ಭವತಿ। ತಸ್ಯ ಭೋಗಾಧಿಷ್ಠಾನಾತ್ ಶರೀರಾದನ್ಯತ್ರ ವೃತ್ತ್ಯಭಾವಾತ್ ॥

---

1. ಜೀವನು ಮನೋಮಯನೆಂದು ಪ್ರಸಿದ್ಧವಾಗಿರುವದರಿಂದ ಅವನು ಮನೋಮಯನಲ್ಲವೆಂಬದೇನೂ ವಿವಕ್ಷಿತವಲ್ಲ; ಮನೋಮಯತ್ವಾದಿಗುಣಗಳುಳ್ಳವನೆಂದು ಉಪಾಸನೆಮಾಡಬೇಕೆಂದು ಇಲ್ಲಿ ಹೇಳಿರುವದು ಜೀವನಲ್ಲ ಎಂಬಿದೇ ಅಭಿಪ್ರಾಯವು.

2. ವಾಕ್ಕಿಲ್ಲದವನು.

3. ಹೊಸದಾಗಿ ಏನನ್ನಾದರೂ ಪಡೆಯುವ ಸಂಭ್ರಮವಿಲ್ಲದವನು.

(ಭಾಷ್ಯಾರ್ಥ)

ಶಾರೀರನು ಎಂದರೆ ಶರೀರದಲ್ಲಿರುವವನು ಎಂದರ್ಥ.

(ಆಕ್ಷೇಪ) :—ಈಶ್ವರನೂ ಶರೀರದಲ್ಲಿರುತ್ತಾನಲ್ಲ!

(ಪರಿಹಾರ) :—ನಿಜ, ಶರೀರದಲ್ಲಿರುತ್ತಾನೆ; ಆದರೆ ಶರೀರದಲ್ಲಿಯೇ ಇರುವದಿಲ್ಲ. ಏಕೆಂದರೆ "ಪೃಥಿವಿಗಿಂತ ದೊಡ್ಡವನು, ಅಂತರಿಕ್ಷಕ್ಕಿಂತ ದೊಡ್ಡವನು" (ಛಾಂ. ೩-೧೪-೩), "ಆಕಾಶದಂತೆ ಸರ್ವಗತನೂ ನಿತ್ಯನೂ ಆಗಿರುತ್ತಾನೆ" (ಶತ. ಬ್ರಾ. ೧೦-೬-೩-೨) ಎಂದು (ಅವನು ಸರ್ವ)ವ್ಯಾಪಿ ಎಂದು ಶ್ರುತಿಯಲ್ಲಿದೆ. ಜೀವನಾದರೋ ಶರೀರದಲ್ಲಿಯೇ ಇರುತ್ತಾನೆ; ಏಕೆಂದರೆ ಅವನಿಗೆ ಭೋಗಕ್ಕಾಶ್ರಯವಾಗಿರುವ ಶರೀರಕ್ಕಿಂತ ಬೇರೆಯ ಕಡೆಯಲ್ಲಿ ವ್ಯಾಪಾರವಿರುವದಿಲ್ಲ.

**ಕರ್ಮಕರ್ತೃವ್ಯಪದೇಶಾಚ್ಚ ॥ ೪ ॥**

೪. ಕರ್ಮಕರ್ತೃವ್ಯಪದೇಶವಿರುವದರಿಂದಲೂ (ಈ ಮನೋಮಯನು ಶಾರೀರನಲ್ಲ).

(ಭಾಷ್ಯ)

೧೫೫. ಇತಶ್ಚ ನ ಶಾರೀರೋ ಮನೋಮಯತ್ವಾದಿಗುಣಃ। ಯಸ್ಮಾತ್ ಕರ್ಮಕರ್ತೃವ್ಯಪದೇಶೋ ಭವತಿ "ಏತಮಿತಃ ಪ್ರೇತ್ಯಾಭಿಸಂಭವಿತಾಸ್ಮಿ" (ಛಾಂ. ೩-೧೪-೪) ಇತಿ। 'ಏತಮ್' ಇತಿ ಪ್ರಕೃತಂ ಮನೋಮಯತ್ವಾದಿಗುಣಮ್ ಉಪಾಸ್ಯಮಾತ್ಮಾನಂ ಕರ್ಮತ್ವೇನ ಪ್ರಾಪ್ಯತ್ವೇನ ವ್ಯಪದಿಶತಿ। ಅಭಿಸಂಭವಿತಾಸ್ಮಿ' ಇತಿ ಶಾರೀರಮ್ ಉಪಾಸಕಂ ಕರ್ತೃತ್ವೇನ ಪ್ರಾಪಕತ್ವೇನ। 'ಅಭಿಸಂಭವಿತಾಸ್ಮಿ' ಇತಿ। ಪ್ರಾಪ್ತಾ ಅಸ್ಮಿ ಇತ್ಯರ್ಥಃ। ನ ಚ ಸತ್ಯಾಂ ಗತೌ ಏಕಸ್ಯ ಕರ್ಮಕರ್ತೃವ್ಯಪದೇಶೋ ಯುಕ್ತಃ। ತಥಾ ಉಪಾಸ್ಯೋಪಾಸಕಭಾವೋಽಪಿ ಭೇದಾಧಿಷ್ಠಾನ ಏವ। ತಸ್ಮಾದಪಿ ನ ಶಾರೀರೋ ಮನೋಮಯತ್ವಾದಿವಿಶಿಷ್ಟಃ ॥

(ಭಾಷ್ಯಾರ್ಥ)

ಈ ಕಾರಣದಿಂದಲೂ ಶಾರೀರನು (ಇಲ್ಲಿ ಹೇಳಿರುವ) ಮನೋಮಯತ್ವಾದಿಗುಣಗಳುಳ್ಳ (ಉಪಾಸ್ಯನಲ್ಲ). ಏಕೆಂದರೆ (ಇಲ್ಲಿ) "ಈತನನ್ನು ಇಲ್ಲಿಂದ ಹೊರಟು ಹೋಗಿ ಸೇರುವವನಾಗಿರುವೆನು" (ಛಾಂ. ೩-೧೪-೪) ಎಂದು ಕರ್ಮಕರ್ತೃವ್ಯಪದೇಶವಿರುತ್ತದೆ. 'ಏತಮ್' (ಈತನನ್ನು) ಎಂದು ಪ್ರಕೃತನಾಗಿರುವ ಮನೋಮಯತ್ವಾದಿಗುಣವುಳ್ಳ ಉಪಾಸ್ಯನಾದ ಆತ್ಮನನ್ನು ಕರ್ಮವಾಗಿ, ಪ್ರಾಪ್ಯನೆಂದು ಹೇಳಿರುತ್ತದೆ. 'ಅಭಿಸಂಭವಿತಾಸ್ಮಿ' (ಸೇರುವವನಾಗಿರುವೆನು) ಎಂದು

ಉಪಾಸಕನಾದ ಶಾರೀರನನ್ನು ಕರ್ತೃವಾಗಿ, ಪ್ರಾಪಕನಾಗಿ, ಹೇಳಿರುತ್ತದೆ. 'ಅಭಿಸಂಭವಿತಾಸ್ಮಿ' ಎಂದರೆ ಪಡೆಯುವವನಾಗಿರುವೆನು ಎಂದರ್ಥ. (ಬೇರೆಯ) ಗತಿಯಿರುವಲ್ಲಿ ಒಬ್ಬನೇ ಕರ್ಮವು ಮತ್ತು ಕರ್ತೃ ಎಂದು ಹೇಳುವದು ಸರಿಯಲ್ಲ. ಇದರಂತೆ ಉಪಾಸ್ಯೋಪಾಸಕಭಾವವೂ ಭೇದವನ್ನಾಶ್ರಯಿಸಿಯೇ ಇರುತ್ತದೆ. ಆದ್ದರಿಂದಲೂ (ಇಲ್ಲಿರುವ) ಮನೋಮಯತ್ವಾದಿಗಳಿಗೆ(ಧರ್ಮ) ವಿಶಿಷ್ಟನು ಶಾರೀರನಲ್ಲ.

**ಶಬ್ದವಿಶೇಷಾತ್ ॥ ೫ ॥**

೫. ಶಬ್ದವಿಶೇಷವಿರುವದರಿಂದಲೂ (ಇವನು ಶಾರೀರನಲ್ಲ).

(ಭಾಷ್ಯ)

೧೫೬. ಇತಶ್ಚ ಶಾರೀರಾದನ್ಯೋ ಮನೋಮಯತ್ವಾದಿಗುಣಃ| ಯಸ್ಮಾತ್ ಶಬ್ದವಿಶೇಷೋ ಭವತಿ ಸಮಾನಪ್ರಕರಣೇ ಶ್ರುತ್ಯನ್ತರೇ—"ಯಥಾ ವ್ರೀಹಿರ್ವಾ ಯವೋ ವಾ ಶ್ಯಾಮಾಕೋ ವಾ ಶ್ಯಾಮಾಕತಣ್ಡುಲೋ ವೈವಮಯಮನ್ತರಾತ್ಮನ್ ಪುರುಷೋ ಹಿರಣ್ಮಯಃ"(ಶತ. ಬ್ರಾ. ೧೦-೬-೩-೨) ಇತಿ। ಶಾರೀರಸ್ಯಾತ್ಮನೋ ಯಃ ಶಬ್ದಃ ಅಭಿಧಾಯಕಃ ಸಪ್ತಮ್ಯನ್ತಃ 'ಅನ್ತರಾತ್ಮನ್' ಇತಿ, ತಸ್ಮಾತ್ ವಿಶಿಷ್ಟಃ ಅನ್ಯಃ ಪ್ರಥಮಾನ್ತಃ ಪುರುಷಶಬ್ದೋ ಮನೋಮಯತ್ವಾದಿವಿಶಿಷ್ಟಸ್ಯ ಆತ್ಮನೋಽಭಿಧಾಯಕಃ। ತಸ್ಮಾತ್ ತಯೋರ್ಭೇದೋಽಧಿಗಮ್ಯತೇ ||

(ಭಾಷ್ಯಾರ್ಥ)

ಈ ಕಾರಣದಿಂದಲೂ ಮನೋಮಯತ್ವಾದಿಗುಣಗಳುಳ್ಳವನು ಶಾರೀರಾತ್ಮನಿಗಿಂತ ಬೇರೆಯೇ. ಏಕೆಂದರೆ ಬೇರೊಂದು ಶ್ರುತಿಯಲ್ಲಿ ಇದೇ ಬಗೆಯ ಪ್ರಕರಣದಲ್ಲಿ "ಬತ್ತದ ಕಾಳಾಗಲಿ, ಜವೆಯ ಕಾಳಾಗಲಿ, ಸಾವೆಯ ಕಾಳಾಗಲಿ, ಸಾವೆಯಕ್ಕಿಯ ಕಾಳಾಗಲಿ ಹೇಗೆ (ಸಣ್ಣದಾಗಿ) ಇರುವದೋ ಹೀಗೆಯೇ ಈ ಈ ಆತ್ಮನೊಳಗಿರುವ ಹಿರಣ್ಮಯಪುರುಷನೂ ಇರುವನು" (ಶತ. ಬ್ರಾ. ೧೦-೬-೩-೨) ಎಂಬ ಶಬ್ದವಿಶೇಷವು ಇರುತ್ತದೆ. ಶಾರೀರಾತ್ಮನನ್ನು ಹೇಳುವ ಸಪ್ತಮ್ಯಂತವಾದ 'ಅಂತರಾತ್ಮನ್' ಎಂಬ ಶಬ್ದವಿದೆಯಲ್ಲ, ಅದಕ್ಕಿಂತ ಬೇರೆಯಾದ ಪ್ರಥಮಾಂತವಾದ ಪುರುಷಶಬ್ದವು ಮನೋಮಯತ್ವಾದಿವಿಶಿಷ್ಟನಾದ ಆತ್ಮನನ್ನು ಹೇಳುವ ವಿಶಿಷ್ಟವಾದ ವಾಚಕವಾಗಿರುತ್ತದೆ. ಆದ್ದರಿಂದ ಅವರಿಬ್ಬರಿಗೂ ಭೇದವಿದೆ ಎಂದು ನಿಶ್ಚಯವಾಗುತ್ತದೆ.

---

1. ಜೀವನಿಗಿಂತ ಬೇರೆಯಾಗಿ ಈಶ್ವರನು ಇರುತ್ತಾನೆಂದು ನಿಶ್ಚಯವಾಗುತ್ತದೆ ಎಂದರ್ಥ. ಈಶ್ವರನಿಗಿಂತ ಬೇರೆಯಾದ ಜೀವನೆಂಬುವನು ಮತ್ತೆ ಬೇರೆಯಿಲ್ಲ; ಏಕೆಂದರೆ ಜೀವತ್ವವೇ ಕಲ್ಪಿತವಾಗಿರುತ್ತದೆ. ಭಾ. ಭಾ. ೬೧, ೧೦೪—ಇವುಗಳನ್ನು ನೋಡಿರಿ.

**ಸ್ಮೃತೇಶ್ಚ ॥ ೬ ॥**

೬. ಸ್ಮೃತಿಯಿಂದಲೂ (ಇದು ಸಿದ್ಧವಾಗುತ್ತದೆ).

(ಭಾಷ್ಯ)

೧೫೬. ಸ್ಮೃತಿಶ್ಚ ಶಾರೀರಪರಮಾತ್ಮನೋರ್ಭೇದಂ ದರ್ಶಯತಿ— "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವ ಭೂತಾನಿ ಯನ್ತ್ರಾರೂಢಾನಿ ಮಾಯಯಾ ॥" (ಗೀ. ೧೮-೬೧) ಇತ್ಯಾದ್ಯಾ ॥

(ಭಾಷ್ಯಾರ್ಥ)

ಅರ್ಜುನನೆ, ಸರ್ವಭೂತಗಳ ಹೃದ್ದೇಶದಲ್ಲಿಯೂ ಈಶ್ವರನು ಯಂತ್ರಾರೂಢರಾಗಿರುವ ಸರ್ವಭೂತಗಳನ್ನೂ ಮಾಯೆಯಿಂದ ಭ್ರಾಂತಿಗೊಳಿಸುತ್ತಾ ಇದು ಕೊಂಡಿರುವನು" (ಗೀ. ೧೮-೬೧) ಎಂದು ಮುಂತಾಗಿರುವ ಸ್ಮೃತಿಯೂ ಶಾರೀರ ಪರಮಾತ್ಮರಿಗೆ ಭೇದವನ್ನು ತಿಳಿಸುತ್ತದೆ.

## ಶಾರೀರನೆಂದರೆ ಯಾರು ?

(ಭಾಷ್ಯ)

೧೫೮. ಅತ್ರಾಹ—ಕಃ ಪುನರಯಂ ಶಾರೀರೋ ನಾಮ ಪರಮಾತ್ಮನ್ಯೋಽನ್ಯಃ, ಯಃ ಪ್ರತಿಷಿಧ್ಯತೇ "ಅನುಪಪತ್ತೇಸ್ತು ನ ಶಾರೀರಃ" (೧-೨-೩) ಇತ್ಯಾದಿನಾ ? ಶ್ರುತಿಸ್ತು—"ನಾನ್ಯೋಽತೋಽಸ್ತಿ ದ್ರಷ್ಟಾ ನಾನ್ಯೋಽತೋಽಸ್ತಿ ಶ್ರೋತಾ" (ಬೃ. ೩-೭-೨೩) ಇತ್ಯೇವಂಜಾತೀಯಕಾ ಪರಮಾತ್ಮನೋಽನ್ಯಮ್ ಆತ್ಮಾನಂ ವಾರಯತಿ । ತಥಾ ಸ್ಮೃತಿರಪಿ—"ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ" (ಗೀ. ೧೩-೨) ಇತ್ಯೇವಂಜಾತೀಯಕಾ ಇತಿ । ಅತ್ರೋಚ್ಯತೇ । ಸತ್ಯಮೇವೈತತ್ । ಪರ ಏವ ಆತ್ಮಾ ದೇಹೇನ್ದ್ರಿಯಮನೋಬುದ್ಧ್ಯುಪಾಧಿಭಿಃ ಪರಿಚ್ಛಿದ್ಯಮಾನಃ ಬಾಲೈಃ ಶಾರೀರ ಇತ್ಯುಪಚರ್ಯತೇ । ಯಥಾ ಘಟಕರಕಾದ್ಯುಪಾಧಿವಶಾತ್ ಅಪರಿಚ್ಛಿನ್ನಮಪಿ ನಭಃ ಪರಿಚ್ಛಿನ್ನವತ್ ಅವಭಾಸತೇ, ತದ್ವತ್ । ತದಪೇಕ್ಷಯಾ ಚ ಕರ್ಮಕರ್ತೃತ್ವಾದಿಭೇದವ್ಯವಹಾರೋ ನ ವಿರುಧ್ಯತೇ ಪ್ರಾಕ್ "ತತ್ತ್ವಮಸಿ" ಇತಿ ಆತ್ಮೈಕತ್ವೋಪದೇಶಗ್ರಹಣಾತ್ । ಗೃಹೀತೇ ತು ಆತ್ಮೈಕತ್ವೇ ಬನ್ಧಮೋಕ್ಷಾದಿಸರ್ವವ್ಯವಹಾರಪರಿಸಮಾಪ್ತಿರೇವ ಸ್ಯಾತ್ ॥

(ಭಾಷ್ಯಾರ್ಥ)

ಇಲ್ಲಿ (ಆಕ್ಷೇಪಕನು) ಕೇಳುತ್ತಾನೇನೆಂದರೆ: ಪರಮಾತ್ಮನಿಗಿಂತ ಬೇರೆ ಯಾಗಿರುವ ಶಾರೀರನೆಂಬುವನನ್ನು, "ಅನುಪಪತ್ತೇಸ್ತು ನ ಶಾರೀರಃ" ಎಂದು

ಮುಂತಾಗಿ ಅಲ್ಲಗಳೆದಿದೆಯಲ್ಲ, ಅವನು ಯಾರು? "ಇವನಿಗಿಂತ ಬೇರೆಯಾದ ದ್ರಷ್ಟೃವಿಲ್ಲ, ಇವನಿಗಿಂತ ಬೇರೆಯಾದ ಶ್ರೋತೃವಿಲ್ಲ" (ಬೃ. ೩-೭-೨೩) ಎಂಬೀ ಜಾತಿಯ ಶ್ರುತಿಯಾದರೋ ಪರಮಾತ್ಮನಿಗಿಂತ ಬೇರೆಯಾದ ಆತ್ಮನನ್ನು ಇಲ್ಲ ವೆಂದಿರುತ್ತದೆ. "ಎಲೈ ಭಾರತನೆ, ಎಲ್ಲಾ ಕ್ಷೇತ್ರಗಳಲ್ಲಿಯೂ (ಇರುವ) ಕ್ಷೇತ್ರ ಜ್ಞನನ್ನು ನಾನೆಂದು ತಿಳಿ" (ಗೀ. ೧೩-೨) ಎಂಬ ಜಾತಿಯ ಸ್ಮೃತಿಯೂ (ಬೇರೆಯ ಆತ್ಮನು ಇಲ್ಲವೆಂದಿರುತ್ತದೆ)ಯಲ್ಲ!

(ಸಮಾಧಾನ):—ಇದಕ್ಕೆ ಹೇಳುತ್ತೇವೆ. ಇದು ನಿಜವೇ. **ಪರಮಾತ್ಮನೇ ದೇಹ, ಇಂದ್ರಿಯ, ಮನಸ್ಸು, ಬುದ್ಧಿ-ಎಂಬ ಉಪಾಧಿಗಳಿಂದ ಅಳತೆಗೆ ಸಿಕ್ಕಿ ಬಾಲಕರಿಂದ ಶಾರೀರ ಎನ್ನಿಸಿಕೊಳ್ಳುತ್ತಾನೆ. ಹೇಗೆ ಗಡಿಗೆ, ಕುಡಿಕೆ ಮುಂತಾದ ಉಪಾಧಿಗಳ ವಶದಿಂದ ಅಳತೆಗೆ ಸಿಕ್ಕದ ಆಕಾಶವು ಕೂಡ ಅಳತೆಗೆ ಸಿಕ್ಕಿರುವಂತೆ ಕಾಣುತ್ತದೆಯೋ, ಅದರಂತೆಯೇ ಇದು[1]. ಅದರ ಅಪೇಕ್ಷೆಯಿಂದ (ಆತ್ಮನಿಗೆ) ಕರ್ಮಕರ್ತೃತ್ವವೇ ಮುಂತಾದ ಭೇದ ವ್ಯವಹಾರವು "ತತ್ತ್ವಮಸಿ" (ಅದೇ ನೀನು) ಎಂಬ ಆತ್ಮೈಕತ್ವವನ್ನು ಗ್ರಹಿಸುವದಕ್ಕಿಂತ ಮುಂಚೆ (ಆಗಿರುವದು) ವಿರುದ್ಧವಲ್ಲ. ಆತ್ಮೈಕತ್ವ ವನ್ನು ಗ್ರಹಿಸಿದ ಮೇಲೋ ಎಂದರೆ ಬಂಧ, ಮೋಕ್ಷ-ಮುಂತಾದ ವ್ಯವ ಹಾರವೆಲ್ಲವೂ ಮುಗಿದೇ ಹೋಗುವದು.**

## ಪರಮಾತ್ಮನಿಗೆ ಅಲ್ಪಪ್ರದೇಶವನ್ನೂ ಅಣುತವನ್ನೂ ಹೇಳಿರುವದಕ್ಕೆ ಕಾರಣ

**ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ॥ ೭ ॥**

೭. ಅರ್ಭಕೌಕನಾದ್ದರಿಂದಲೂ ಆ ವ್ಯಪದೇಶವಿರುವದರಿಂದಲೂ (ಪರಮಾತ್ಮ)ನಲ್ಲ, ಎಂದರೆ ಹಾಗಲ್ಲ. ಏಕೆಂದರೆ ಹೀಗೆ ನಿಚಾಯ್ಯನಾಗಿರು ತ್ತಾನೆ. ಆಕಾಶದಂತೆ (ಎಂಬ ದೃಷ್ಟಾಂತ)ವೂ ಇದೆ.

(ಭಾಷ್ಯ)

**೧೫೫. ಅರ್ಭಕಮ್ ಅಲ್ಪಮ್, ಓಕೋ ನೀಡಮ್। "ಏಷ ಮ ಆತ್ಮಾನ್ತ ರ್ಹೃದಯೇ" ಇತಿ ಪರಿಚ್ಛಿನ್ನಾಯತನತ್ವಾತ್, ಸ್ವಶಬ್ದೇನ ಚ "ಅಣೀ-**

---

1. ೧೪೩ನೆಯ ಭಾ. ಭಾ. ವನ್ನು ನೋಡಿ.

ಘ್ಯಾನ್ ವ್ರೀಹೇರ್ವಾ ಯವಾದ್ವಾ" ಇತಿ ಅಣೀಯಸ್ತ್ವವ್ಯಪದೇಶಾತ್, ಶಾರೀರ ಏವ ಆರಾಗ್ರಮಾತ್ರೋ ಜೀವಃ ಇಹ ಉಪದಿಶ್ಯತೇ, ನ ಸರ್ವಗತಃ ಪರಮಾತ್ಮಾ ಇತಿ ಯದುಕ್ತಮ್, ತತ್ ಪರಿಹರ್ತವ್ಯಮ್। ಅತ್ರೋಚ್ಯತೇ-ನಾಯಂ ದೋಷಃ। ನ ತಾವತ್ ಪರಿಚ್ಛಿನ್ನದೇಶಸ್ಯ ಸರ್ವಗತತ್ವವ್ಯಪದೇಶಃ ಕಥಮಪಿ ಉಪಪದ್ಯತೇ। ಸರ್ವಗತಸ್ಯ ತು ಸರ್ವದೇಶೇಷು ವಿದ್ಯಮಾನತ್ವಾತ್ ಪರಿಚ್ಛಿನ್ನದೇಶವ್ಯಪದೇಶೋಽಪಿ ಕಯಾಚಿತ್ ಅಪೇಕ್ಷಯಾ ಸಂಭವತಿ। ಯಥಾ ಸಮಸ್ತವಸುಧಾಧಿಪತಿರಪಿ ಹಿ ಸನ್ 'ಅಯೋಧ್ಯಾಧಿಪತಿಃ' ಇತಿ ವ್ಯಪದಿಶ್ಯತೇ। ಕಯಾ ಪುನರಪೇಕ್ಷಯಾ ಸರ್ವಗತಃ ಸನ್ ಈಶ್ವರಃ ಅರ್ಭಕೌಕಾ ಅಣೀಯಾಂಶ್ಚ ವ್ಯಪದಿಶ್ಯತ ಇತಿ? ನಿಚಾಯ್ಯತ್ವಾದೇವಮ್ ಇತಿ ಬ್ರೂಮಃ। ಏವಮ್ ಅಣೀಯಸ್ತ್ವಾದಿಗುಣಗಣೋಪೇತಃ ಈಶ್ವರಃ ತತ್ರ ಹೃದಯಪುಣ್ಡರೀಕೇ ನಿಚಾಯ್ಯಃ ದ್ರಷ್ಟವ್ಯಃ ಉಪದಿಶ್ಯತೇ। ಯಥಾ ಶಾಲಗ್ರಾಮೇ ಹರಿಃ। ತತ್ರ ಅಸ್ಯ ಬುದ್ಧಿವಿಜ್ಞಾನಂ ಗ್ರಾಹಕಮ್। ಸರ್ವಗತೋಽಪಿ ಈಶ್ವರಃ ತತ್ರ ಉಪಾಸ್ಯಮಾನಃ ಪ್ರಸೀದತಿ। ವ್ಯೋಮವಚ್ಚ ಏತತ್ ದ್ರಷ್ಟವ್ಯಮ್। ಯಥಾ ಸರ್ವಗತಮಪಿ ಸತ್ ವ್ಯೋಮ ಸೂಚೀಪಾಶಾದ್ಯಪೇಕ್ಷಯಾ ಅರ್ಭಕೌಕಃ ಅಣೀಯಶ್ಚ ವ್ಯಪದಿಶ್ಯತೇ, ಏವಂ ಬ್ರಹ್ಮಾಪಿ। ತದೇವಂ ನಿಚಾಯ್ಯತ್ವಾಪೇಕ್ಷಂ ಬ್ರಹ್ಮಣೋಽರ್ಭಕೌಕಸ್ತ್ವಮ್ ಅಣೀಯಸ್ತ್ವಂ ಚ ನ ಪಾರಮಾರ್ಥಿಕಮ್। ತತ್ರ ಯದಾಶಙ್ಕ್ಯತೇ ಹೃದಯಾಯತನತ್ವಾತ್ ಬ್ರಹ್ಮಣಃ, ಹೃದಯಾಯತನಾನಾಂ ಚ ಪ್ರತಿಶರೀರಂ ಭಿನ್ನತ್ವಾತ್ ಭಿನ್ನಾಯತನಾನಾಂ ಚ ಶುಕಾದೀನಾಮ್ ಅನೇಕತ್ವಸಾವಯವತ್ವಾನಿತ್ಯತ್ವಾದಿದೋಷದರ್ಶನಾತ್ ಬ್ರಹ್ಮಣೋಽಪಿ ತತ್ಪ್ರಸಙ್ಗಃ ಇತಿ, ತದಪಿ ಪರಿಹೃತಂ ಭವತಿ ॥

(ಭಾಷ್ಯಾರ್ಥ)

ಅರ್ಭಕವಾದದ್ದು ಎಂದರೆ ಅಲ್ಪವಾದದ್ದು; ಓಕ ಎಂದರೆ ಆಶ್ರಯವು "ಈ ಹೃದಯದೊಳಗಿನ ನನ್ನ ಆತ್ಮನು" ಎಂದು ಪರಿಚ್ಛಿನ್ನವಾದ ಆಶ್ರಯ(ವನ್ನು ಹೇಳಿರುವದರಿಂದಲೂ) "ಬತ್ತದ ಕಾಳಿಗಿಂತಲೂ ಜವೆಗಿಂತಲೂ........ (ಸಣ್ಣವನು)" ಎಂದು ತನ್ನನ್ನು ಹೇಳುವ ಮಾತಿನಿಂದ (ಆತ್ಮನು) ಬಹಳ ಅಣುವಾಗಿರುವನೆಂದು ಹೇಳಿರುವದರಿಂದಲೂ ಶಾರೀರನನ್ನೇ (ಎಂದರೆ) ದಬ್ಬಳದ ತುದಿಯಷ್ಟು ಪರಿಮಿತಿಯ ಜೀವನನ್ನೇ ಇಲ್ಲಿ ಹೇಳಿರುತ್ತದೆ, ಸರ್ವಗತನಾದ ಪರಮಾತ್ಮನನ್ನು ಹೇಳಿಲ್ಲ-ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದನ್ನು ಪರಿಹರಿಸಿಕೊಳ್ಳಬೇಕಷ್ಟೆ, ಅದಕ್ಕೆ (ಈ ಸಮಾಧಾನವನ್ನು) ಹೇಳುತ್ತೇವೆ:

---

1. ಶ್ವೇ. ೫-೮ರ ಸೂಚನೆ.

ಇದು ದೋಷವಲ್ಲ. ಅಳತೆಯ ಪ್ರದೇಶವುಳ್ಳ (ಜೀವನಿಗೆ) ಸರ್ವಗತತ್ವವನ್ನು ಹೇಳುವದಂತೂ ಹೇಗೂ ಹೊಂದುವದಿಲ್ಲ. ಆದರೆ ಸರ್ವಗತನಾಗಿರುವ (ಪರಮಾತ್ಮನು) ಎಲ್ಲಾ ಪ್ರದೇಶಗಳಲ್ಲಿಯೂ ಇರುವದರಿಂದ ಅಳತೆಯ ಪ್ರದೇಶದಲ್ಲಿರುವನೆಂದು (ಹೇಳುವದೂ) ಯಾವದೋ ಒಂದು ಅಪೇಕ್ಷೆಯಿಂದ ಆಗಬಹುದಾಗುತ್ತದೆ. ಹೇಗೆ ಇಡಿಯ ಭೂಮಂಡಲದ ಅಧಿಪತಿಯಾಗಿರುವವನನ್ನು ಕೂಡ 'ಅಯೋಧ್ಯಾಧಿಪತಿ' ಎಂದು ಕರೆಯುತ್ತಾರೋ ಹಾಗೆ.

**(ಪ್ರಶ್ನೆ):**—ಹಾಗಾದರೆ ಏತರ ಅಪೇಕ್ಷೆಯಿಂದ ಸರ್ವಗತನಾಗಿರುವ ಈಶ್ವರನನ್ನು ಅರ್ಭಕೌಕನೆಂದೂ ಅಣೀಯಸನೆಂದೂ ಹೇಳಿದೆ?

**(ಉತ್ತರ):**—ಹೀಗೆ ನಿಚಾಯ್ಯನಾಗಿರುವದರಿಂದ-ಎಂದು ಹೇಳುತ್ತೇವೆ. ಹೀಗೆ ಅಣೀಯಸ್ತ್ವವೇ ಮುಂತಾದ ಗುಣಗಳಿಂದ ಕೂಡಿದ ಈಶ್ವರನು ಹೃದಯ ಪುಂಡರೀಕದಲ್ಲಿ ನಿಚಾಯ್ಯನಾಗಿರುತ್ತಾನೆ, (ಎಂದರೆ) ಉಪಾಸ್ಯನಾಗಿರುತ್ತಾನೆ ಎಂದು (ಇಲ್ಲಿ) ತಿಳಿಸಿರುತ್ತದೆ. ಶಾಲಗ್ರಾಮದಲ್ಲಿ ಹರಿಯು ಹೇಗೆ (ಉಪಾಸ್ಯನಾಗಿರುತ್ತಾನೋ) ಹಾಗೆ.[1] ಆ (ಹೃದಯಪುಂಡರೀಕ)ದಲ್ಲಿ ಈ (ಪರಮಾತ್ಮನನ್ನು) ಗ್ರಹಿಸುವದು ಬುದ್ಧಿವಿಜ್ಞಾನವು.[2] ಈಶ್ವರನು ಸರ್ವಗತನಾಗಿದ್ದರೂ ಅಲ್ಲಿ ಉಪಾಸನೆಮಾಡಿದರೆ ಪ್ರಸನ್ನನಾಗುತ್ತಾನೆ.

ಆಕಾಶದಂತೆಯೂ ಇದನ್ನು ತಿಳಿದುಕೊಳ್ಳಬೇಕು. ಆಕಾಶವು ಸರ್ವಗತವಾಗಿದ್ದರೂ ಸೂಜಿ, ದಾಳ-ಮುಂತಾದವುಗಳ ಅಪೇಕ್ಷೆಯಿಂದ ಅಲ್ಪವಾದ ಆಶ್ರಯವುಳ್ಳದ್ದೆಂದೂ ಅಣುತರ (ಪ್ರಮಾಣ)ದ್ದೆಂದೂ ಹೇಗೆ ಹೇಳುವರೋ ಬ್ರಹ್ಮವೂ ಹಾಗೆಯೇ (ಅಲ್ಪಾಶ್ರಯವುಳ್ಳದ್ದೆಂದೂ ಅಣುತರಪ್ರಮಾಣವುಳ್ಳದ್ದೆಂದೂ ಉಕ್ತವಾಗಿದೆ). ಆದ್ದರಿಂದ ಹೀಗೆ ಉಪಾಸನೆಯ ಅಪೇಕ್ಷೆಯಿಂದ ಬ್ರಹ್ಮವು ಅಲ್ಪಾಶ್ರಯವುಳ್ಳದ್ದೂ ಅಣುತರವೂ (ಆಗಿರುವದೇ ಹೊರತು) ನಿಜವಾಗಿಯೂ ಹಾಗಿಲ್ಲ. ಹೀಗಿರುವಲ್ಲಿ[3] ಬ್ರಹ್ಮಕ್ಕೆ ಹೃದಯವು ಆಶ್ರಯವಾಗಿರುವದರಿಂದಲೂ, ಹೃದಯಾಶ್ರಯಗಳು ಒಂದೊಂದು ಶರೀರಕ್ಕೂ ಬೇರೆಬೇರೆಯಾಗಿರುವದರಿಂದಲೂ ಬೇರೆಬೇರೆಯ ಆಶ್ರಯಗಳುಳ್ಳ ಗಿಣಿಯೇ ಮುಂತಾದವುಗಳಲ್ಲಿ

---

1. ಸರ್ವವ್ಯಾಪಕನಾದ ವಿಷ್ಣುವನ್ನು ಶಾಲಗ್ರಾಮದಲ್ಲಿ ಉಪಾಸನೆಮಾಡಬೇಕೆಂದು ಹೇಳಿರುವಂತೆ ಹೃದಯದಲ್ಲಿ ಪರಮೇಶ್ವರನನ್ನು ಉಪಾಸನೆಮಾಡಬೇಕೆಂದು ಹೇಳಿದೆ ಎಂದು ಭಾವ.

2. ಹೃದಯದಲ್ಲಿ ಉಪಾಸನೆಮಾಡುವದರ ಫಲವೇನು?-ಎಂದರೆ ಧ್ಯಾನರೂಪವಾದ ಅಂತಃಕರಣವೃತ್ತಿಯಿಂದ ಅಲ್ಲಿ ಸಾಕ್ಷಾತ್ಕಾರವಾಗುವದೇ ಫಲವು ಎಂದರ್ಥ.

3. ಅರ್ಭಕೌಕಸ್ತ್ವವೂ ಅಣೀಯಸ್ತ್ವವೂ ಅಪರಮಾರ್ಥವಾಗಿರುವದರಿಂದ ಎಂದರ್ಥ

ಅನೇಕವಾಗಿರುವದು, ಸಾವಯವವಾಗಿರುವದು, ಅಸತ್ಯವಾಗಿರುವದು-ಮುಂತಾದ ದೋಷಗಳು ಕಂಡುಬರುವದರಿಂದ ಬ್ರಹ್ಮಕ್ಕೂ ಆ ದೋಷಗಳು ಬರುವವು ಎಂದು ಶಂಕಿಸುವರಲ್ಲ, ಅದನ್ನೂ ಪರಿಹರಿಸಿದಂತೆ ಆಯಿತು.[1]

## ಈಶ್ವರನಿಗೆ ಸುಖದುಃಖಾದಿಗಳ ಅನುಭವವೇಕಿಲ್ಲ?

**ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್** ॥ ೮ ॥

೩. (ಈಶ್ವರನಿಗೂ ಸಂಸಾರ) ಸಂಭೋಗವುಂಟಾಗುವದು, ಎಂದರೆ ಹಾಗಲ್ಲ, ಏಕೆಂದರೆ ವೈಶೇಷ್ಯವಿದೆ.

## ಪೂರ್ವಪಕ್ಷ: ಸಿದ್ಧಾಂತದಲ್ಲಿ ಈಶ್ವರನಿಗಿಂತ ಬೇರೆ ಸಂಸಾರಿಯಿಲ್ಲ

(ಭಾಷ್ಯ)

೧೬೦. ವ್ಯೋಮವತ್ ಸರ್ವಗತಸ್ಯ ಬ್ರಹ್ಮಣಃ ಸರ್ವಪ್ರಾಣಿಹೃದಯ ಸಂಬನ್ಧಾತ್, ಚಿದ್ರೂಪತಯಾ ಚ ಶಾರೀರಾತ್ ಅವಿಶಿಷ್ಟತ್ವಾತ್, ಸುಖದುಃಖಾ ಸಂಭೋಗೋಽಪ್ಯವಿಶಿಷ್ಟಃ ಪ್ರಸಜ್ಯೇತ । ಏಕತ್ವಾಚ್ಚ । ನ ಹಿ ಪರಸ್ಮಾತ್ ಆತ್ ನೋಽನ್ಯಃ ಕಶ್ಚಿದಾತ್ಮಾ ಸಂಸಾರೀ ವಿದ್ಯತೇ । "ನಾನ್ಯೋಽತೋಽಸ್ತಿ ವಿಜ್ಞಾತಾ (ಬೃ. ೩-೭-೨೩) ಇತ್ಯಾದಿಶ್ರುತಿಭ್ಯಃ । ತಸ್ಮಾತ್ ಪರಸ್ಯೈವ ಸಂಸಾರಸಂಭೋ ಪ್ರಾಪ್ತಿಃ ॥

(ಭಾಷ್ಯಾರ್ಥ)

ಆಕಾಶದಂತೆ ಸರ್ವಗತವಾಗಿರುವ ಬ್ರಹ್ಮವು ಎಲ್ಲಾ ಪ್ರಾಣಿಗಳ ಹೃದಯ ಕ್ಕೂ ಸಂಬಂಧ(ಪಟ್ಟಿರು)ವದರಿಂದಲೂ ಚಿದ್ರೂಪವಾಗಿರುವದರಿಂದ ಶಾರೀ ನಿಗಿಂತ (ಬೇರೆ ಯಾವ) ವಿಶೇಷವೂ ಇಲ್ಲದ್ದಾದ್ದರಿಂದಲೂ ಸುಖದುಃಖಗ ಸಂಭೋಗವೂ (ಇವೆರಡಕ್ಕೂ) ಸಮಾನವಾಗಿರಬೇಕಾಗುವದು. ಒಂದೇ ಆಗಿರ

---

1. ಅನುಮಾನದಲ್ಲಿ ಕೊಟ್ಟಿರುವ ದೃಷ್ಟಾಂತದಲ್ಲಿ ಒಂದೊಂದು ಗಿಣಿಗೂ ಒಂದೊಂ ಪಂಜರವು ನಿಜವಾಗಿ ಆಶ್ರಯವಾಗಿರುತ್ತದೆ. ಆದರೆ ಬ್ರಹ್ಮವು ನಿಜವಾಗಿ ಹೃದಯವೆಂಬ ಆಶ್ರ ದಲ್ಲಿಲ್ಲ; ಒಂದೊಂದು ಹೃದಯಕ್ಕೂ ಇಷ್ಟಿಷ್ಟು ಎಂದು ಹಂಚಿಕೊಂಡೂ ಅದು ಇರುವದಿ ಆದ್ದರಿಂದ ಅನುಮಾನವು ಸರಿಯಲ್ಲ ಎಂದು ಭಾವ.

ವದರಿಂದಲೂ ಸಂಭೋಗವು ಇರಬೇಕಾಗುವದು. ಪರಮಾತ್ಮನಿಗಿಂತ ಬೇರೆಯಾಗಿ ಸಂಸಾರಿಯಾದ ಆತ್ಮನು ಮತ್ತೆಯಾರೂ ಇರುವದೇ ಇಲ್ಲ. "ಈತನಿಗಿಂತ ಬೇರೆಯಾದ ವಿಜ್ಞಾತೃವಿಲ್ಲ." (ಬೃ. ೩-೭-೨೩) ಮುಂತಾದ ಶ್ರುತಿಗಳಿಂದ (ಹೀಗೆಂದು ಸಿದ್ಧವಾಗಿರುತ್ತದೆ). ಆದ್ದರಿಂದ ಪರಮಾತ್ಮನಿಗೇ ಸಂಸಾರಸಂಭೋಗವು ಬಂದೊದಗುವದು[1].

## ಸಿದ್ಧಾಂತ: ಪರಮಾತ್ಮನಲ್ಲಿರುವ ವಿಶೇಷ

(ಭಾಷ್ಯ)

೧೬೧. ಇತಿ ಚೇತ್ । ನ । ವೈಶೇಷ್ಯಾತ್ । ನ ತಾವತ್ ಸರ್ವಪ್ರಾಣಿಹೃದಯಸಂಬನ್ಧಾತ್ ಶಾರೀರವತ್ ಬ್ರಹ್ಮಣಃ ಸಂಭೋಗಪ್ರಸಙ್ಗಃ । ವೈಶೇಷ್ಯಾತ್ । ವಿಶೇಷೋ ಹಿ ಭವತಿ ಶಾರೀರಪರಮೇಶ್ವರಯೋಃ । ಏಕಃ ಕರ್ತಾ ಭೋಕ್ತಾ ಧರ್ಮಾಧರ್ಮಸಾಧನಃ ಸುಖದುಃಖಾದಿಮಾಂಶ್ಚ । ಏಕಸ್ತದ್ವಿಪರೀತಃ ಅಪಹತಪಾಪ್ಮತ್ವಾದಿಗುಣಃ । ಏತಸ್ಮಾತ್ ಅನಯೋರ್ವಿಶೇಷಾತ್ ಏಕಸ್ಯ ಭೋಗಃ, ನೇತರಸ್ಯ । ಯದಿ ಚ ಸಂನಿಧಾನಮಾತ್ರೇಣ ವಸ್ತುಶಕ್ತಿಮ್ ಅನಾಶ್ರಿತ್ಯ ಕಾರ್ಯಸಂಬನ್ಧಃ ಅಭ್ಯುಪಗಮ್ಯೇತ, ಆಕಾಶಾದೀನಾಮಪಿ ದಾಹಾದಿಪ್ರಸಙ್ಗಃ । ಸರ್ವಗತಾನೇಕಾತ್ಮವಾದಿನಾಮಪಿ ಸಮೌ ಏತೌ ಚೋದ್ಯಪರಿಹಾರೌ ॥

(ಭಾಷ್ಯಾರ್ಥ)

ಹೀಗೆಂದರೆ (ಅದು ಸರಿ)ಯಲ್ಲ. ಏಕೆಂದರೆ ವೈಶೇಷ್ಯವಿದೆ. ಮೊದಲನೆಯದಾಗಿ ಸರ್ವಪ್ರಾಣಿಗಳ ಹೃದಯದ ಸಂಬಂಧದಿಂದ ಶಾರೀರನಂತೆ ಬ್ರಹ್ಮಕ್ಕೂ (ಸಂಸಾರ)ಸಂಭೋಗವು ಬಂದೊದಗಲಾರದು. ಏಕೆಂದರೆ ವೈಶೇಷ್ಯವಿದೆ. ಶಾರೀರಪರಮೇಶ್ವರರಿಗೆ ವಿಶೇಷವಿರುತ್ತದೆಯಲ್ಲವೆ? (ಹೇಗೆಂದರೆ) ಒಬ್ಬನು ಕರ್ತನು, ಭೋಕ್ತನು, ಧರ್ಮಾಧರ್ಮಗಳೆಂಬ ಸಾಧನಗಳುಳ್ಳವನು. ಮತ್ತು ಸುಖದುಃಖಾದಿಗಳುಳ್ಳವನು; ಇನ್ನೊಬ್ಬನು ಅದಕ್ಕೆ ವಿಪರೀತವಾಗಿರುವವನು, ಅಪಹತಪಾಪ್ಮತ್ವವೇ ಮುಂತಾದ ಗುಣಗಳುಳ್ಳವನು. ಇಬ್ಬರಿಗೂ ಈ ವಿಶೇಷವಿರುವದರಿಂದ ಒಬ್ಬನಿಗೆ (ಸಂಸಾರ) ಭೋಗ(ವುಂಟು), ಇನ್ನೊಬ್ಬನಿಗಿಲ್ಲ. ಸಂನಿಧಿಮಾತ್ರದಿಂದಲೇ ವಸ್ತುವಿನ ಶಕ್ತಿಯನ್ನು ಲೆಕ್ಕಿಸದೆ ಕಾರ್ಯದ ಸಂಬಂಧವನ್ನು ಇಟ್ಟುಕೊಳ್ಳುವದಾದರೆ, ಆಕಾಶವೇ ಮುಂತಾದವುಗಳಿಗೂ ಸುಡುವಿಕೆಯೇ

---

1. ಜೀವೇಶ್ವರರ ಐಕ್ಯವನ್ನು ಒಪ್ಪುವ ಮತದಲ್ಲಿ ಈಶ್ವರನಿಗೂ ಸಂಸಾರವುಂಟೆಂದಾಗುವದೆಂಬ ದೋಷವನ್ನು ಗೀ. ಭಾ. ೧೩-೨, ಬೃ. ಭಾ. ೨-೧-೨೦) ತೈ-ಭಾ. ‖-೮ (ಭಾ· ಭಾ. ೨೦೯) ಇವುಗಳಲ್ಲಿ ಒಡ್ಡಿ ಪರಿಹರಿಸಿದೆ.

ವುುಂತಾದವು ಆಗಬೇಕಾದೀತು. [1]ಸರ್ವಗತರಾಗಿರುವ ಅನೇಕಾತ್ಮವಾದಿಗಳಿಗೂ ಈ ಚೋದ್ಯಪರಿಹಾರಗಳು ಸಮವಾಗಿರುತ್ತವೆ[2].

## ಸಂಸಾರಿತ್ವವು ಅವಿದ್ಯಾಕಲ್ಪಿತವಾಗಿರುವದರಿಂದ ಪರಮಾತ್ಮನಿಗಿಲ್ಲ

(ಭಾಷ್ಯ)

೧೬೨. ಯದಪಿ ಏಕತ್ವಾತ್ ಬ್ರಹ್ಮಣಃ ಆತ್ಮಾನ್ತರಾಭಾವಾತ್ ಶಾರೀರಸ್ಯ ಭೋಗೇನ ಬ್ರಹ್ಮಣೋ ಭೋಗಪ್ರಸಙ್ಗಃ ಇತಿ । ಅತ್ರ ವದಾಮಃ—ಇದಂ ತಾವತ್ ದೇವಾನಾಂಪ್ರಿಯಃ ಪ್ರಷ್ಟವ್ಯಃ । ಕಥಮಯಂ ತ್ವಯಾ ಆತ್ಮಾನ್ತರಾಭಾವೋಽಧ್ಯವಸಿತಃ ಇತಿ । "ತತ್ತ್ವಮಸಿ" (ಛಾಂ. ೬-೮-೭), "ಅಹಂ ಬ್ರಹ್ಮಾಸ್ಮಿ" (ಬೃ. ೧-೪-೧೦), "ನಾನ್ಯೋಽತೋಽಸ್ತಿವಿಜ್ಞಾತಾ" (ಬೃ. ೩-೭-೨೩) ಇತ್ಯಾದಿಶಾಸ್ತ್ರೇಭ್ಯಃ ಇತಿ ಚೇತ್ । ಯಥಾಶಾಸ್ತ್ರಂ ತರ್ಹಿ ಶಾಸ್ತ್ರೀಯೋಽರ್ಥಃ ಪ್ರತಿಪತ್ತವ್ಯಃ, ನ ತತ್ರ ಅರ್ಧಜರತೀಯಂ ಲಭ್ಯಮ್ । ಶಾಸ್ತ್ರಂ ಚ 'ತತ್ತ್ವಮಸಿ' ಇತಿ ಅಪಹತಪಾಪ್ಮತ್ವಾದಿವಿಶೇಷಣಂ ಬ್ರಹ್ಮ ಶಾರೀರಸ್ಯ ಆತ್ಮತ್ವೇನ ಉಪದಿಶತ್ ಶಾರೀರಸ್ಯೈವ ತಾವತ್ ಉಪಭೋಕ್ತೃತ್ವಂ ವಾರಯತಿ । ಕುತಸ್ತದುಪಭೋಗೇನ ಬ್ರಹ್ಮಣ ಉಪಭೋಗಪ್ರಸಙ್ಗಃ? ಅಥ ಅಗೃಹೀತಂ ಶಾರೀರಸ್ಯ ಬ್ರಹ್ಮಣಾ ಏಕತ್ವಮ್, ತದಾ ಮಿಥ್ಯಾಜ್ಞಾನನಿಮಿತ್ತಃ ಶಾರೀರಸ್ಯೋಪಭೋಗಃ । ನ ತೇನ ಪರಮಾರ್ಥರೂಪಸ್ಯ ಬ್ರಹ್ಮಣಃ ಸಂಸ್ಪರ್ಶಃ । ನ ಹಿ ಬಾಲೈಃ ತಲಮಲಿನತಾದಿಭಿರ್ವ್ಯೋಮ್ನಿ ವಿಕಲ್ಪ್ಯಮಾನೇ ತಲಮಲಿನತಾದಿವಿಶಿಷ್ಟಮೇವ ಪರಮಾರ್ಥತೋ ವ್ಯೋಮ ಭವತಿ । ತದಾಹ—'ನ ವೈಶೇಷ್ಯಾತ್' ಇತಿ । ನೈಕತ್ವೇಽಪಿ ಶಾರೀರಸ್ಯ ಉಪಭೋಗೇನ ಬ್ರಹ್ಮಣಃ ಉಪಭೋಗಪ್ರಸಙ್ಗಃ । ವೈಶೇಷ್ಯಾತ್ । ವಿಶೇಷೋ ಹಿ ಭವತಿ ಮಿಥ್ಯಾಜ್ಞಾನಸಮ್ಯಗ್ಜ್ಞಾನಯೋಃ । ಮಿಥ್ಯಾಜ್ಞಾನಕಲ್ಪಿತ ಉಪಭೋಗಃ, ಸಮ್ಯಗ್ಜ್ಞಾನದೃಷ್ಟಮ್ ಏಕತ್ವಮ್ । ನ ಚ ಮಿಥ್ಯಾಜ್ಞಾನಕಲ್ಪಿತೇನ ಉಪಭೋಗೇನ ಸಮ್ಯಗ್ಜ್ಞಾನದೃಷ್ಟಂ ವಸ್ತು ಸಂಸ್ಪೃಶ್ಯತೇ । ತಸ್ಮಾತ್ ನೋಪಭೋಗಗನ್ಧೋಽಪಿ ಶಕ್ಯ ಈಶ್ವರಸ್ಯ ಕಲ್ಪಯಿತುಮ್ ॥೮॥

---

1. ಆಕಾಶವನ್ನು ಬೆಂಕಿಯು ಸುಡಲಾರದು, ಏಕೆಂದರೆ ಅದಕ್ಕೆ ದಾಹ್ಯತ್ವಯೋಗ್ಯತೆಯಿಲ್ಲ. ಸನ್ನಿಧಿಮಾತ್ರದಿಂದ ಕಾರ್ಯವಾಗುವದೆಂದರೆ ಬೆಂಕಿಯ ಸಂಬಂಧದಿಂದ ಆಕಾಶವೂ ಸುಟ್ಟುಹೋಗಬೇಕಾಗುವದು. ಇದು ಪೂರ್ವಪಕ್ಷಿಗೂ ಒಪ್ಪಿಲ್ಲ; ಆದ್ದರಿಂದ ಪೂರ್ವಪಕ್ಷವು ಸರಿಯಲ್ಲ,

2. ಆಯಾ ಆತ್ಮನ ಕರ್ಮದಿಂದ ಅವನವನಿಗೇ ಭೋಗವಾಗುತ್ತದೆ ; ಅದೇ ಸ್ಥಳದಲ್ಲಿ ಸನ್ನಿಹಿತನಾಗಿದ್ದರೂ ಬೇರೆಯ ಆತ್ಮರಿಗೆ ಆಗುವದಿಲ್ಲ ಎಂದೇ ಅವರೂ ಹೇಳಬೇಕಾಗುವದು ಎಂದರ್ಥ. ಈ ಪರಿಹಾರವು ನಿರ್ದುಷ್ಟವೆಂಬ ಅಭಿಪ್ರಾಯವು ಆಚಾರ್ಯರಿಗಿಲ್ಲ. ೨-೩-೫೦ರಿಂದ ೫೩ರವರೆಗಿನ ಸೂತ್ರಗಳ ಭಾಷ್ಯವನ್ನು ನೋಡಿ.

(ಭಾಷ್ಯಾರ್ಥ)

ಇನ್ನು ಬ್ರಹ್ಮವು ಒಂದೇ ಆಗಿರುವದರಿಂದ ಬೇರೆ (ಯಾವ) ಆತ್ಮನೂ ಇಲ್ಲದ್ದರಿಂದ ಶಾರೀರನ ಭೋಗದಿಂದ ಬ್ರಹ್ಮಕ್ಕೆ ಭೋಗವುಂಟಾಗಬೇಕಾಗುವದು ಎಂದು (ಪೂರ್ವಪಕ್ಷಿಯು ಹೇಳಿದ್ದನಷ್ಟೆ), ಅದಕ್ಕೆ ಹೇಳುತ್ತೇವೆ. ಮೊದಲು (ಆ) ಮೂರ್ಖನನ್ನು "ಬೇರೆ (ಯಾವ) ಆತ್ಮನೂ ಇಲ್ಲವೆಂಬುದನ್ನು ನೀನು ಹೇಗೆ ನಿಶ್ಚಯಿಸಿದೆ?'' ಎಂದು ಕೇಳಬೇಕು. "ಅದು ನೀನಾಗಿರುವೆ'' (ಛಾಂ. ೬-೮-೭), "ನಾನು ಬ್ರಹ್ಮವಾಗಿರುವೆನು'' (ಬೃ. ೧-೪-೧೦), "ಇವನಿಗಿಂತ ಬೇರೆಯ ವಿಜ್ಞಾತೃವಿಲ್ಲ'' (ಬೃ. ೩-೭-೨೩) ಮುಂತಾದ ಶಾಸ್ತ್ರಗಳಿಂದ (ನಿಶ್ಚಯಿಸಿದೆನು) ಎಂದರೆ, ಹಾಗಾದರೆ ಶಾಸ್ತ್ರದಲ್ಲಿರುವಂತೆಯೇ ಶಾಸ್ತ್ರೀಯವಾದ (ಈ) ವಿಷಯವನ್ನು[1] ಅರಿಯಬೇಕೇ ಹೊರತು ಈ ವಿಷಯದಲ್ಲಿ ಅರ್ಧಜರತೀಯವು ಸಿಕ್ಕುವಂತಿಲ್ಲ.[2] ಶಾಸ್ತ್ರವಾದರೋ "ಅದು ನೀನಾಗಿರುವೆ" (ಛಾಂ. ೬-೮-೭) ಎಂದು ಅಪಹತಪಾಪ್ಮತ್ವವೇ ಮುಂತಾದ ವಿಶೇಷಣವುಳ್ಳ ಬ್ರಹ್ಮವನ್ನು ಶಾರೀರನ ಆತ್ಮನೆಂದು ಉಪದೇಶಿಸುವದರಿಂದ ಶಾರೀರನಿಗೇ ಮೊದಲು ಉಪಭೋಕ್ತೃತ್ವವಿಲ್ಲವೆನ್ನುತ್ತಿದೆ. (ಹೀಗಿರುವಲ್ಲಿ) ಅವನ ಉಪಭೋಗದಿಂದ ಬ್ರಹ್ಮಕ್ಕೆ ಉಪಭೋಗ(ವಾದೀತು) ಎಂಬ ಪ್ರಸಂಗವೆಲ್ಲಿ (ಬಂತು)? ಹೀಗಲ್ಲದೆ ಶಾರೀರನು ಬ್ರಹ್ಮದಲ್ಲಿಯೇ ಒಂದಾಗಿರುವನೆಂಬುದನ್ನು (ಇನ್ನೂ) ಗ್ರಹಿಸಿಲ್ಲ(ಎಂದಾದರೆ) ಆಗ ಮಿಥ್ಯಾಜ್ಞಾನನಿಮಿತ್ತದಿಂದ ಶಾರೀರನಿಗೆ ಉಪಭೋಗ(ವುಂಟಾಗಿರುತ್ತದೆ)[3]; ಪರಮಾರ್ಥರೂಪವಾದ ಬ್ರಹ್ಮಕ್ಕೆ ಅದರ ಸೋಂಕಿರುವದಿಲ್ಲ, ಹುಡುಗರು ಆಕಾಶದ ತಲವು ಮಲಿನವಾಗಿರುವದು (ಎಂದು) ಮುಂತಾಗಿ ವಿಕಲ್ಪಿಸಿದರೆ, ಆಕಾಶವು ನಿಜವಾಗಿ ತಲಮಲಿನತಾದಿಗಳಿಂದ ಕೂಡಿಕೊಂಡೇ ಇರುವದಿಲ್ಲವಷ್ಟೆ, ಇದನ್ನೇ (ಸೂತ್ರಕಾರರು) 'ನ ವೈಶೇಷ್ಯಾತ್ ...

---

1. ಪ್ರಮಾಣಾಂತರಗೋಚರವಲ್ಲದ ವಿಷಯವನ್ನು.

2. ಹೇಂಟೆಯೇ ಮುಂತಾದವುಗಳಲ್ಲಿ ಅರ್ಧವನ್ನು ಅಡಿಗೆಮಾಡುವದು, ಇನ್ನರ್ಧವನ್ನು ಮರಿಹಾಕುವದಕ್ಕೆ ಇಟ್ಟುಕೊಳ್ಳುವದು.—ಇದು ಆಗಲಾರದು. ಇದರಂತೆ ಇಲ್ಲಿ ಏಕತ್ವವೂ ಬೇಕು, ಉಪಭೋಗವೂ ಬೇಕು—ಎಂದರೆ ಆಗಲಾರದು ಎಂದರ್ಥ. ಅರ್ಧಜರತೀಯನ್ಯಾಯವನ್ನು ಆನಂದಗಿರಿವ್ಯಾಖ್ಯಾನದಲ್ಲಿ ಹೀಗೆ ವಿವರಿಸಿದೆ. ಮುದುಕಿಯ ಮುಖವನ್ನು ಮಾತ್ರ ಕಾಮಿಸುತ್ತಾನೆ, ಶರೀರಗಳನ್ನಲ್ಲ—ಎಂದು ಈ ನ್ಯಾಯವನ್ನು ರತ್ನಪ್ರಭಾವ್ಯಾಖ್ಯಾನದಲ್ಲಿ ವಿವರಿಸಿದೆ.

3. ಗೀ. ಭಾ. ೧೩—೨ (ಭಾ. ಭಾ. ೨೧೬).

(ಹಾಗಲ್ಲ, ಏಕೆಂದರೆ ವೈಶೇಷ್ಯವಿದೆ) ಎಂದು ಹೇಳಿರುತ್ತಾರೆ.[1] ಮಿಥ್ಯಾಜ್ಞಾನ ಸಮ್ಯಗ್ಜ್ಞಾನ-ಇವುಗಳಿಗೆ ವಿಶೇಷವಿರುವದಲ್ಲವೆ? **ಉಪಭೋಗವು ಮಿಥ್ಯಾಜ್ಞಾನದಿಂದ ಕಲ್ಪಿತವಾಗಿರುತ್ತದೆ, ಏಕತ್ವವು ಸಮ್ಯಗ್ಜ್ಞಾನದಿಂದ ಕಂಡದ್ದಾಗಿರುತ್ತದೆ. ಆದರೆ ಮಿಥ್ಯಾಜ್ಞಾನದಿಂದ ಕಲ್ಪಿತವಾದ ಉಪಭೋಗವು ಸಮ್ಯಗ್ಜ್ಞಾನದಿಂದ ಕಂಡ ವಸ್ತುವನ್ನು ಸೋಕಲಾರದು.**[2] ಆದ್ದರಿಂದ ಈಶ್ವರನಿಗೆ ಉಪಭೋಗದ ವಾಸನೆಯನ್ನುಕೂಡ ಕಲ್ಪಿಸುವದು ಆಗಲಾರದು.

## ೨. ಅತ್ತ್ರಧಿಕರಣ (೯-೧೦)

(ಕಠ ೧-೨-೨೪ರಲ್ಲಿರುವ ಅತ್ತೃವು ಬ್ರಹ್ಮವೇ)

**ಅತ್ತಾ ಚರಾಚರಗ್ರಹಣಾತ್ ॥ ೯ ॥**

೯. (ಕಠದಲ್ಲಿರುವ) ಅತ್ತೃವು (ಬ್ರಹ್ಮವು); ಏಕೆಂದರೆ (ಅಲ್ಲಿ) ಚರಾಚರಗಳ ಗ್ರಹಣವಿದೆ.

## ವಿಷಯವೂ ಸಂಶಯವೂ

(ಭಾಷ್ಯ)

೧೬೩. ಕಠವಲ್ಲೀಷು ಪಠ್ಯತೇ—"ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ । ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ" (ಕ. ೧-೨-೨೪) ಇತಿ । ಅತ್ರ ಕಶ್ಚಿದೋದನೋಪಸೇಚನಸೂಚಿತಃ ಅತ್ತಾ ಪ್ರತೀಯತೇ । ತತ್ರ ಕಿಮ್ ಅಗ್ನಿಃ ಅತ್ತಾ ಸ್ಯಾತ್, ಉತ ಜೀವಃ, ಅಥವಾ ಪರಮಾತ್ಮಾ ಇತಿ ಸಂಶಯಃ । ವಿಶೇಷಾನವಧಾರಣಾತ್ । ತ್ರಯಾಣಾಂ ಚ ಅಗ್ನಿಜೀವಪರಮಾತ್ಮನಾಮ್ ಅಸ್ಮಿನ್ ಗ್ರನ್ಥೇ ಪ್ರಶ್ನೋಪನ್ಯಾಸೋಪಲಬ್ಧೇಃ ॥

---

1. ಶಾರೀರಪರಮೇಶ್ವರರಿಗೆ ವಿಶೇಷವಿದೆ ಎಂದು ಸೂತ್ರಕ್ಕೆ ಅರ್ಥವನ್ನು ಮೊದಲು ಮಾಡಿತ್ತು. ಇದು ವರ್ಣಕಾಂತರ.

2. ಯಾವದರಲ್ಲಿ ಯಾವದನ್ನು ಅಧ್ಯಾಸಮಾಡುತ್ತಾರೋ ಅದರ ಗುಣವಾಗಲಿ ದೋಷವಾಗಲಿ ಆ ವಸ್ತುವಿಗೆ ಅಣುಮಾತ್ರವೂ ಸೋಕುವದಿಲ್ಲ ಎಂದು ಅಧ್ಯಾಸಭಾಷ್ಯದಲ್ಲಿ (ಭಾ. ಭಾ. ೪) ಹೇಳಿರುವದನ್ನು ಇಲ್ಲಿ ಲಕ್ಷ್ಯಕ್ಕೆ ತರಬೇಕು. ಗೀ. ಭಾ. ೧೩-೨ (ಭಾ. ಭಾ. ೨೨೬) ದಲ್ಲಿ ಇದೇ ಅಭಿಪ್ರಾಯವಿದೆ.

(ಭಾಷ್ಯಾರ್ಥ)

ಕಠವಲ್ಲಿಗಳಲ್ಲಿ[1] "ಯಾವನಿಗೆ ಬ್ರಹ್ಮವೂ ಕ್ಷತ್ರವೂ ಎರಡೂ ಊಟವಾಗಿರುವವೋ, ಯಾವನಿಗೆ ಮೃತ್ಯುವು ಉಪ್ಪಿನಕಾಯಿಯಾಗಿರುವದೋ ಆತನು ಎಲ್ಲಿರುವನೆಂಬುದನ್ನು ಯಾವನು ಹೀಗೆ ಅರಿತಿರುವನು?" (೧-೨-೨೫) ಎಂದು ಹೇಳಿದೆ. ಇಲ್ಲಿ ಊಟ, ಉಪ್ಪಿನಕಾಯಿ-ಇವುಗಳಿಂದ ಉಪಸೂಚಿತನಾದ ಯಾವನೋ ಒಬ್ಬ ಅತ್ತೃವು ತಿಳಿದುಬರುತ್ತಾನೆ.[2] ಇಲ್ಲಿ ಅತ್ತೃವು ಅಗ್ನಿಯಾಗಿರಬಹುದೆ, ಅಥವಾ ಜೀವನೆ, ಅಥವಾ ಪರಮಾತ್ಮನೆ?-ಎಂಬುದು ಸಂಶಯವು. ಏಕೆಂದರೆ ಇಂಥವನೇ ಎಂದು (ಇಲ್ಲಿ) ಒತ್ತಿ ಹೇಳಿರುವದಿಲ್ಲ. ಮತ್ತು ಅಗ್ನಿ, ಜೀವ, ಪರಮಾತ್ಮ-(ಈ) ಮೂವರನ್ನೂ ಕುರಿತು ಕೇಳಿರುವದೂ ಹೇಳಿರುವದೂ ಈ ಗ್ರಂಥದಲ್ಲಿ ಕಂಡುಬರುತ್ತದೆ.[3]

## ಪೂರ್ವಪಕ್ಷ: ಈ ಅತ್ತೃವು ಅಗ್ನಿಯೋ ಜೀವನೋ ಆಗಿರಬೇಕು

(ಭಾಷ್ಯ)

೧೬೫. ಕಿಂ ತಾವತ್ ಪ್ರಾಪ್ತಮ್? ಅಗ್ನಿರತ್ತಾ ಇತಿ। ಕುತಃ? "ಅಗ್ನಿರನ್ನಾದಃ" (ಬೃ. ೧-೪-೬) ಇತಿ ಶ್ರುತಿಪ್ರಸಿದ್ಧಿಭ್ಯಾಮ್। ಜೀವೋ ವಾ ಅತ್ತಾ ಸ್ಯಾತ್। "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ" (ಮುಂ. ೩-೧-೧) ಇತಿ ದರ್ಶನಾತ್। ನ ಪರಮಾತ್ಮಾ। "ಅನಶ್ನನ್ನನ್ಯೋ ಅಭಿಚಾಕಶೀತಿ" (ಮುಂ. ೩-೧-೧) ಇತಿ ದರ್ಶನಾತ್ ಇತಿ ॥

(ಭಾಷ್ಯಾರ್ಥ)

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ಎಂದರೆ ಅತ್ತೃವು ಅಗ್ನಿಯೇ ಎಂದು (ಕಾಣುತ್ತದೆ). ಏಕೆಂದರೆ "ಅಗ್ನಿಯು ಅನ್ನಾದನು" (ಬೃ. ೧-೪-೬) ಎಂದು ಶ್ರುತಿಯೂ ಲೋಕಪ್ರಸಿದ್ಧಿಯೂ ಇವೆ.[4] ಅಥವಾ

---

1. ಕಠೋಪನಿಷತ್ತಿನ ಆರು ವಿಭಾಗಗಳಿಗೆ ವಲ್ಲಿಗಳೆಂದು ಹೆಸರು.

2. ಊಟಕ್ಕೆ ಒಬ್ಬ ಊಟಮಾಡುವವನು ಬೇಕು.

3. "ಸತ್ವಮಗ್ನಿಮ್" (ಕ. ೧-೧-೧೩) ಎಂದು ಅಗ್ನಿಯ ವಿಷಯವನ್ನೂ "ಯೇಯಂ ಪ್ರೇತೇ" (ಕ. ೧-೧-೨೦) ಎಂದು ಜೀವನ ವಿಷಯವನ್ನೂ "ಅನ್ಯತ್ರ ಧರ್ಮಾತ್" (ಕ. ೧-೨-೧೪) ಎಂದು ಪರಮಾತ್ಮನ ವಿಷಯವನ್ನೂ ನಚಿಕೇತನು ಕೇಳಿರುತ್ತಾನೆ. ಮುಂದೆ ೧-೪-೬ರ ಭಾಷ್ಯವನ್ನು ನೋಡಿ.

4. ನಚಿಕೇತನು ಕೇಳಿರುವದು ವಿರಾಟ್ಪುರುಷನ ವಿಷಯವಾದರೂ ಆ ಪುರುಷನೇ ಅಗ್ನಿರೂಪದಿಂದಿರುತ್ತಾನೆಂದು ಶ್ರುತಿಪ್ರಸಿದ್ಧಿ.

(ಈ) ಅತ್ತೃವು ಜೀವನಾಗಬಹುದು. ಏಕೆಂದರೆ "ಅವುಗಳಲ್ಲಿ ಒಂದು (ಹಕ್ಕಿಯು) ಪಿಪ್ಪಲವನ್ನು ಸವಿದು ತಿನ್ನುತ್ತದೆ" (ಮುಂ. ೩-೧-೧) ಎಂದು ಶ್ರುತಿಯಲ್ಲಿರುವದು) ಕಂಡುಬಂದಿದೆ. ಇವನು ಪರಮಾತ್ಮನಲ್ಲ; ಏಕೆಂದರೆ "ಇನ್ನೊಂದು ತಿನ್ನದೆ ನೋಡುತ್ತಿರುತ್ತದೆ" (ಮುಂ. ೩-೧-೧) ಎಂದು (ಶ್ರುತಿಯಲ್ಲಿರುವದು ಕಂಡುಬಂದಿದೆ.

## ಸಿದ್ಧಾಂತ: ಪರಮಾತ್ಮನೇ ಜಗತ್ಸಂಹಾರಕರೂಪ ಅತ್ತೃ

(ಭಾಷ್ಯ)

೧೬೫. ಏವಂ ಪ್ರಾಪ್ತೇ ಬ್ರೂಮಃ। ಅತ್ತಾ ಅತ್ರ ಪರಮಾತ್ಮಾ ಭವಿತುಮರ್ಹತಿ। ಕುತಃ? ಚರಾಚರಗ್ರಹಣಾತ್। ಚರಾಚರಂ ಹಿ ಸ್ಥಾವರಜಙ್ಗಮಂ ಮೃತ್ಯೂಪಸೇಚನಮ್ ಇಹ ಆದ್ಯತ್ವೇನ ಪ್ರತೀಯತೇ। ತಾದೃಶಸ್ಯ ಚ ಆದ್ಯಸ್ಯ ನ ಪರಮಾತ್ಮನೋಽನ್ಯಃ ಕಾರ್ತ್ಸ್ನ್ಯೇನ ಅತ್ತಾ ಸಂಭವತಿ। ಪರಮಾತ್ಮಾ ತು ವಿಕಾರಜಾತಂ ಸಂಹರನ್ ಸರ್ವಮ್ ಅತ್ತಿ ಇತ್ಯುಪಪದ್ಯತೇ। ನನು ಇಹ ಚರಾಚರಗ್ರಹಣಂ ನೋಪಲಭ್ಯತೇ। ಕಥಂ ಸಿದ್ಧವತ್ ಚರಾಚರಗ್ರಹಣಂ ಹೇತುತ್ವೇನ ಉಪಾದೀಯತೇ? ನೈಷ ದೋಷಃ। ಮೃತ್ಯೂಪಸೇಚನತ್ವೇನ ಸರ್ವಸ್ಯ ಪ್ರಾಣಿನಿಕಾಯಸ್ಯ ಪ್ರತೀಯಮಾನತ್ವಾತ್। ಬ್ರಹ್ಮಕ್ಷತ್ರಯೋಶ್ಚ ಪ್ರಾಧಾನ್ಯಾತ್ ಪ್ರದರ್ಶನಾರ್ಥತ್ವೋಪಪತ್ತೇಃ। ಯತ್ತು ಪರಮಾತ್ಮನೋಽಪಿ ನಾತ್ತೃತ್ವಂ ಸಂಭವತಿ। "ಅನಶ್ನನ್ನನ್ಯೋಽಭಿಚಾಕಶೀತಿ" ಇತಿ ದರ್ಶನಾತ್ ಇತಿ। ಅತ್ರೋಚ್ಯತೇ– ಕರ್ಮಫಲಭೋಗಸ್ಯ ಪ್ರತಿಷೇಧಕಮ್ ಏತದ್ ದರ್ಶನಮ್। ತಸ್ಯ ಸಂನಿಹಿತತ್ವಾತ್। ನ ವಿಕಾರಸಂಹಾರಸ್ಯ ಪ್ರತಿಷೇಧಕಮ್। ಸರ್ವವೇದಾನ್ತೇಷು ಸೃಷ್ಟಿಸ್ಥಿತಿಸಂಹಾರಕಾರಣತ್ವೇನ ಬ್ರಹ್ಮಣಃ ಪ್ರಸಿದ್ಧತ್ವಾತ್। ತಸ್ಮಾತ್ ಪರಮಾತ್ಮೈವ ಇಹ ಅತ್ತಾ ಭವಿತುಮರ್ಹತಿ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಒಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಇಲ್ಲಿರುವ ಅತ್ತೃವು ಪರಮಾತ್ಮನಾಗಿರಬೇಕು. ಏಕೆ? ಎಂದರೆ ಚರಾಚರದ ಗ್ರಹಣವಿರುವದರಿಂದ. ಚರಾಚರವನ್ನು ಎಂದರೆ ಸ್ಥಾವರಜಂಗಮವನ್ನು ಮೃತ್ಯುವೆಂಬ ಉಪ್ಪಿನಕಾಯಿ(ಯೊಡನೆ)ಇಲ್ಲಿ ಆದ್ಯವಾಗಿ (ಹೇಳಿರುವದು) ಕಾಣುತ್ತದೆಯಲ್ಲವೆ? ಅಂಥ ಆದ್ಯವನ್ನು ಪರಮಾತ್ಮನ ಹೊರತು ಬೇರೆ ಯಾವನೂ ಪರಿಪೂರ್ಣವಾಗಿ ತಿನ್ನುವವನು ಇರುವಹಾಗಿಲ್ಲ. ಪರಮಾತ್ಮನಾದರೋ ಕಾರ್ಯಸಮೂಹವನ್ನು ಸಂಹಾರಮಾಡುವದರಿಂದ (ಅದನ್ನೆಲ್ಲವನ್ನೂ) ತಿನ್ನುತ್ತಾನೆ ಎಂಬುದು ಯುಕ್ತವಾಗಿದೆ.

(ಆಕ್ಷೇಪ):— ಇಲ್ಲಿ ಚರಾಚರಗ್ರಹಣವು ಕಾಣಿಸುವದಿಲ್ಲವಲ್ಲ ! (ಹೀಗಿರುವಲ್ಲಿ) ಸಿದ್ಧವಾಗಿರುವಂತೆ ಚರಾಚರಗ್ರಹಣವನ್ನು ಹೇತುವಾಗಿ ತೆಗೆದುಕೊಂಡಿರುವದು ಹೇಗೆ (ಸರಿ) ?

(ಪರಿಹಾರ) : - ಇದೇನೂ ದೋಷವಲ್ಲ. ಮೃತ್ಯುವು ಉಪ್ಪಿನಕಾಯಿಯಾಗಿರುವದರಿಂದ ಎಲ್ಲಾ ಜೀವರಾಶಿಯೂ (ಅನ್ನವೆಂದು) ತೋರಿಬರುತ್ತದೆ. ಬ್ರಹ್ಮಕ್ಷತ್ರಗ(ಳೆರಡನ್ನೇ ಹೇಳಿರುವದು ಅವು ) ಮುಖ್ಯವಾಗಿರುವದರಿಂದ ಉಪಲಕ್ಷಣವಾಗಿ (ಹೇಳಿದೆ) ಎಂಬುದು ಹೊಂದುತ್ತದೆ. ಇನ್ನು ಪರಮಾತ್ಮನಿಗೂ (ಈ) ಅತ್ತೃತ್ವವು ಹೊಂದುವಹಾಗಿಲ್ಲ ; ಏಕೆಂದರೆ "ಇನ್ನೊಂದು (ಹಕ್ಕಿಯು) ತಿನ್ನದೆ ನೋಡುತ್ತಿರುತ್ತದೆ" (ಮುಂ. ೩-೧-೧) ಎಂದು (ಶ್ರುತಿಯಲ್ಲಿರುವದು) ಕಂಡುಬರುತ್ತದೆ ಎಂದು (ಪೂರ್ವಪಕ್ಷದಲ್ಲಿ ಹೇಳಿತ್ತಷ್ಟೆ), ಅದಕ್ಕೆ (ಈ ಸಮಾಧಾನವನ್ನು) ಹೇಳುತ್ತೇವೆ: ಈ ಶ್ರುತಿಯು ಕರ್ಮಫಲಭೋಗವನ್ನು (ಮಾತ್ರ) ಅಲ್ಲಗಳೆಯುತ್ತದೆ, ಏಕೆಂದರೆ ಅದೇ (ಆ) ಸನ್ನಿಧಿಯಲ್ಲಿರುತ್ತದೆ. ಇಷ್ಟೇ ಹೊರತು ಇದು) ಕಾರ್ಯ(ಗಳನ್ನೆಲ್ಲ ಪರಮಾತ್ಮನು) ಸಂಹಾರಮಾಡುವನೆಂಬುದನ್ನು ಇಲ್ಲವೆನ್ನುವದಿಲ್ಲ ಏಕೆಂದರೆ ಸರ್ವವೇದಾಂತಗಳಲ್ಲಿಯೂ (ಜಗತ್ತಿನ) ಸೃಷ್ಟಿಸ್ಥಿತಿಸಂಹಾರಗಳಿಗೆ ಕಾರಣವೆಂದೇ ಬ್ರಹ್ಮವು ಪ್ರಸಿದ್ಧವಾಗಿರುತ್ತದೆ.[1] ಆದ್ದರಿಂದ (ಇಲ್ಲಿ ಹೇಳಿರುವ) ಅತ್ತೃವು ಪರಮಾತ್ಮನೇ ಆಗಿರಬೇಕು.

## ಪ್ರಕರಣಾಚ್ಚ ॥ ೧೦ ॥

೧೦. ಪ್ರಕರಣದಿಂದಲೂ (ಹೀಗೆಂದು ನಿಶ್ಚಯಿಸಬೇಕು).

( ಭಾಷ್ಯ )

೧೬೬. ಇತಶ್ಚ ಪರಮಾತ್ಮೈವ ಇಹ ಅತ್ತಾ ಭವಿತುಮರ್ಹತಿ | ಯತ್ಕಾರಣಂ ಪ್ರಕರಣಮಿದಂ ಪರಮಾತ್ಮನಃ "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್" (ಕ. ೧-೨-೧೮) ಇತ್ಯಾದಿ | ಪ್ರಕೃತಗ್ರಹಣಂ ಚ ನ್ಯಾಯ್ಯಮ್| "ಕ ಇತ್ಥಾ ವೇದ ಯತ್ರ ಸಃ" (ಕ. ೧-೨-೨೪) ಇತಿ ಚ ದುರ್ವಿಜ್ಞಾನತ್ವಂ ಪರಮಾತ್ಮಲಿಙ್ಗಮ್ ॥

( ಭಾಷ್ಯಾರ್ಥ )

ಈ (ಕಾರಣ)ದಿಂದಲೂ ಪರಮಾತ್ಮನೇ ಇಲ್ಲಿ ಅತ್ತೃವಾಗಿರಬೇಕು. ಯಾವ ಕಾರಣದಿಂದ ಎಂವರೆ "ಜ್ಞಾನಸ್ವರೂಪನಾದ(ಈತನು) ಹುಟ್ಟುವದಿಲ್ಲ,

---

1. ಸಂಹಾರವೆಂಬ ಅತ್ತೃತ್ವವು ಭೋಕ್ತೃತ್ವವಲ್ಲ, ಏಕೆಂದರೆ ಪರಮಾತ್ಮನಿಗೆ ಅದರಲ್ಲಿ ಅಭಿಮಾನವಿಲ್ಲ.

ಸಾಯುವದೂ ಇಲ್ಲ ....'' (೧-೨-೧೮) ಎಂದು ಮುಂತಾಗಿರುವ ಇದು ಪರಮಾತ್ಮನ ಪ್ರಕರಣವು[1] ಪ್ರಕೃತವಾದದ್ದನ್ನು ಗ್ರಹಿಸುವದು ಯುಕ್ತವೂ ಆಗಿದೆ "ಆತನು ಎಲ್ಲಿರುವನೆಂಬುದನ್ನು ಹೀಗೆ[2] ಯಾವನು ಅರಿತಾನು ? (ಕ. ೧-೨-೨೪ ) ಎಂದು ( ಈತನನ್ನು ) ಅರಿಯುವದು ಕಷ್ಟವೆಂದು (ತಿಳಿಸಿರುವದೂ) ಪರಮಾತ್ಮನ ಲಿಂಗವಾಗಿರುತ್ತದೆ.[3]

## ೩. ಗುಹಾಪ್ರವಿಷ್ಟಾಧಿಕರಣ ( ೧೧-೧೨ )

( ಕಠ ೧-೩-೧ರಲ್ಲಿ ಹೇಳಿರುವ ಗುಹಾಪ್ರವಿಷ್ಟರು ಜೀವಪರಮಾತ್ಮರು )

**ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ॥ ೧೧ ॥**

೧೧. ಗುಹೆಯನ್ನು ಹೊಕ್ಕವರು (ಇಬ್ಬರೂ) ಆತ್ಮರು ; ಏಕೆಂದರೆ ಹಾಗೆಂದು ಕಂಡಿರುತ್ತದೆ.

## ವಿಷಯವೂ ಸಂಶಯವೂ

( ಭಾಷ್ಯ )

೧೬೭. ಕಠವಲ್ಲೀಷ್ವೇವ ಪಠ್ಯತೇ — " ಋತಂ ಪಿಬನ್ತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ | ಛಾಯಾತಪೌ ಬ್ರಹ್ಮವಿದೋ ವದನ್ತಿ ಪಞ್ಚಾಗ್ನಯೋ ಯೇ ಚ ತ್ರಿಣಾಚಿಕೇತಾಃ " (ಕ. ೧-೩-೧) ಇತಿ | ತತ್ರ ಸಂಶಯಃ ॥ | ಕಿಮಿಹ ಬುದ್ಧಿಜೀವೌ ನಿರ್ದಿಷ್ಟೌ ಉತ ಜೀವಪರಮಾತ್ಮಾನೌ ಇತಿ | ಯದಿ ಬುದ್ಧಿಜೀವೌ, ತತಃ ಬುದ್ಧಿಪ್ರಧಾನಾತ್ ಕಾರ್ಯಕರಣಸಙ್ಘಾತಾತ್ ವಿಲಕ್ಷಣೋ ಜೀವಃ ಪ್ರತಿಪಾದಿತೋ ಭವತಿ | ತದಪಿ ಇಹ ಪ್ರತಿಪಾದಯಿತವ್ಯಮ್ | "ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ| ಏತದ್ವಿದ್ಯಾಮನುಶಿಷ್ಟಸ್ತ್ವಯಾಹಂ ವರಾಣಾಮೇಷ ವರಸ್ತೃತೀಯಃ " (ಕ. ೧--೧--೨೦) ಇತಿ ಪೃಷ್ಟತ್ವಾತ್ | ಅಥ ಜೀವಪರಮಾತ್ಮಾನೌ, ತತಃ ಜೀವಾದ್ವಿಲಕ್ಷಣಃ ಪರಮಾತ್ಮಾ ಪ್ರತಿಪಾದಿತೋ ಭವತಿ

---

1· ಅಗ್ನಿಜೀವರುಗಳ ಪ್ರಕರಣವಲ್ಲ.

2 " ನಾವಿರತೋ ದುಶ್ಚರಿತಾತ್ " ಎಂಬ ಹಿಂದಿನ ಮಂತ್ರದಲ್ಲಿ ಹೇಳಿರುವ ಸಾಧನಸಂಪತ್ತುಳ್ಳವನಂತೆ ಎಂದರ್ಥ. ಜ್ಞಾನಕ್ಕೆ ಪ್ರತಿಷಿದ್ಧತ್ಯಾಗವೂ ಶಮಾದಿಗಳೂ ಅತ್ಯವಶ್ಯವೆಂದು ಭಾವ.

3 ಪ್ರಕರಣವಾಗಲಿ ಲಿಂಗವಾಗಲಿ ಇಲ್ಲದ್ದರಿಂದ ಅಗ್ನಿಜೀವರುಗಳಲ್ಲ.

ತದಪಿ ಇಹ ಪ್ರತಿಪಾದಯಿತವ್ಯಮ್ । "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ ತತ್ ಪಶ್ಯಸಿ ತದ್ವದ ॥" (ಕ. ೧-೨-೧೪) ಇತಿ ಪೃಷ್ಟತ್ವಾತ್ ॥

(ಭಾಷ್ಯಾರ್ಥ)

ಕಠವಲ್ಲಿಗಳಲ್ಲಿಯೇ ಹೇಳಿರುವದೇನೆಂದರೆ: "ಸುಕೃತದ ಲೋಕದಲ್ಲಿ ಋತವನ್ನು ಪಾನಮಾಡುತ್ತಾ ಹೆಚ್ಚಿನ ಪರಾರ್ಧದಲ್ಲಿ ಗುಹೆಯನ್ನು ಹೊಕ್ಕಿರುವ (ಇಬ್ಬರನ್ನು) ನೆರಳುಬಿಸಿಲುಗಳೆಂದು ಬ್ರಹ್ಮವಿದರೂ ಪಂಚಾಗ್ನಿಗಳೂ ಮತ್ತು ತ್ರಿಣಾಚಿಕೇತರಾಗಿರುವರಲ್ಲ (ಅವರೂ) ಹೇಳುವರು" (ಕ. ೧-೩-೧). ಇಲ್ಲಿ ಸಂಶಯವೇನೆಂದರೆ, ಇಲ್ಲಿ ಬುದ್ಧಿಜೀವರುಗಳನ್ನು ಹೇಳಿದೆಯೆ, ಜೀವಪರಮಾತ್ಮರನ್ನು (ಹೇಳಿದೆಯೆ)? ಬುದ್ಧಿಜೀವರುಗಳನ್ನು (ಹೇಳಿದೆ ಎಂದಾದರೆ ಆಗ ಬುದ್ಧಿಪ್ರಧಾನವಾದ ಕಾರ್ಯಕರಣಸಂಘಾತಕ್ಕಿಂತ ವಿಲಕ್ಷಣನಾದ ಜೀವನನ್ನು ತಿಳಿಸಿಕೊಟ್ಟಂತೆ ಆಗುತ್ತದೆ. ಅದನ್ನೂ ಇಲ್ಲಿ ತಿಳಿಸಿಕೊಡಬೇಕಾಗಿದೆ. ಏಕೆಂದರೆ "ಸತ್ತ ಮನುಷ್ಯನ ವಿಷಯದಲ್ಲಿ ಇವನು ಇರುತ್ತಾನೆಂದು ಕೆಲವರು, ಇರುವದಿಲ್ಲವೆಂದು ಕೆಲವರು— ಹೀಗೆ ಸಂಶಯವಿರುವದಷ್ಟೆ, ನಿನ್ನಿಂದ ಅನುಶಿಷ್ಟನಾಗಿ ನಾನು ಇದನ್ನು ಅರಿತುಕೊಳ್ಳಬೇಕು. ವರಗಳಲ್ಲಿ ಈ ವರವು ಮೂರನೆಯದು" (ಕ. ೧-೧-೨೦) ಎಂದು (ನಚಿಕೇತನು) ಕೇಳಿಕೊಂಡಿರುತ್ತಾನೆ. ಹಾಗಲ್ಲದೆ ಜೀವಪರಮಾತ್ಮರು ಎಂದಾದರೆ, ಆಗ ಜೀವನಿಗಿಂತ ವಿಲಕ್ಷಣನಾದ ಪರಮಾತ್ಮನನ್ನು ತಿಳಿಸಿಕೊಟ್ಟಂತೆ ಆಗುತ್ತದೆ. ಅದನ್ನೂ ಇಲ್ಲಿ ತಿಳಿಸಿಕೊಡಬೇಕಾಗಿದೆ. ಏಕೆಂದರೆ "ಧರ್ಮಕ್ಕಿಂತ ಬೇರೆಯಾಗಿ ಅಧರ್ಮಕ್ಕಿಂತ ಬೇರೆಯಾಗಿ ಈ ಕೃತಾಕೃತಕ್ಕಿಂತ ಬೇರೆಯಾಗಿ ಭೂತಕ್ಕಿಂತಲೂ ಭವ್ಯಕ್ಕಿಂತಲೂ ಬೇರೆ(ಯಾಗಿರುವ) ಯಾವದನ್ನು ನೀನು ಕಂಡಿರುವೆಯೋ ಅದನ್ನು ನೀನು ಹೇಳು" (೧-೨-೧೪) ಎಂದು (ನಚಿಕೇತನು) ಕೇಳಿಕೊಂಡಿರುತ್ತಾನೆ.

## ಸಂಶಯದ ವಿಷಯಕ್ಕೆ ಆಕ್ಷೇಪಸಮಾಧಾನಗಳು

( ಭಾಷ್ಯ )

೧೬೮. ಅತ್ರಾಹ ಆಕ್ಷೇಪ್ತಾ— ಉಭಾವಪಿ ಏತೌ ಪಕ್ಷೌ ನ ಸಂಭವತಃ। ಕಸ್ಮಾತ್ ? ಋತಪಾನಂ ಕರ್ಮಫಲೋಪಭೋಗಃ । 'ಸುಕೃತಸ್ಯ ಲೋಕೇ' ಇತಿ ಲಿಙ್ಗಾತ್ । ತತ್ ಚೇತನಸ್ಯ ಕ್ಷೇತ್ರಜ್ಞಸ್ಯ ಸಂಭವತಿ, ನಾಚೇತನಾಯಾ ಬುದ್ಧೇಃ । "ಪಿಬನ್ತೌ" ಇತಿ ಚ ದ್ವಿವಚನೇನ ದ್ವಯೋಃ ಪಾನಂ ದರ್ಶಯತಿ ಶ್ರುತಿಃ। ಅತೋ ಬುದ್ಧಿಕ್ಷೇತ್ರಜ್ಞಪಕ್ಷಸ್ತಾವತ್ ನ ಸಂಭವತಿ । ಅತ ಏವಕ್ಷೇತ್ರ

ಜ್ಞಪರಮಾತ್ಮಪಕ್ಷೋಽಪಿ ನ ಸಂಭವತಿ | ಚೇತನೇಽಪಿ ಪರಮಾತ್ಮನಿ ಋತ ಪಾನಾಸಂಭವಾತ್ | "ಅನಶ್ನನ್ನನ್ಯೋ ಅಭಿಚಾಕಶೀತಿ" ಇತಿ ಮನ್ತ್ರವರ್ಣಾದಿತಿ | ಅತ್ರೋಚ್ಯತೇ। ನೈಷ ದೋಷಃ | 'ಛತ್ರಿಣೋ ಗಚ್ಛನ್ತಿ' ಇತಿ ಏಕೇನಾಪಿ ಛತ್ರಿಣಾ ಬಹೂನಾಂ ಛತ್ರಿತ್ವೋಪಚಾರದರ್ಶನಾತ್ | ಏವಮ್ ಏಕೇನಾಪಿ ಪಿಬತಾ ದ್ವೌ ಪಿಬನ್ತೌ ಉಚ್ಯೇತೇ | ಯದ್ವಾ ಜೀವಸ್ತಾವತ್ ಪಿಬತಿ, ಈಶ್ವರಸ್ತು ಪಾಯಯತಿ | ಪಾಯಯನ್ನಪಿ 'ಪಿಬತಿ' ಇತ್ಯುಚ್ಯತೇ । ಪಾಚಯಿತರ್ಯಪಿ ಪಕ್ತೃತ್ವಪ್ರಸಿದ್ಧಿದರ್ಶನಾತ್ | ಬುದ್ಧಿಕ್ಷೇತ್ರಜ್ಞಪರಿಗ್ರಹೋಽಪಿ ಸಂಭವತಿ | ಕರಣೇ ಕರ್ತೃತ್ವೋಪಚಾರಾತ್ । 'ಏಧಾಂಸಿ ಪಚನ್ತಿ' ಇತಿ ಪ್ರಯೋಗದರ್ಶನಾತ್ । ನ ಚ ಅಧ್ಯಾತ್ಮಾಧಿಕಾರೇ ಅನ್ಯೌ ಕೌಚಿತ್ ದ್ವೌ ಋತಂ ಪಿಬನ್ತೌ ಸಂಭವತಃ | ತಸ್ಮಾತ್ ಬುದ್ಧಿಜೀವೌ ಸ್ಯಾತಾಮ್, ಜೀವಪರಮಾತ್ಮಾನೌ ವಾ ಇತಿ ಸಂಶಯಃ ||

( ಭಾಷ್ಯಾರ್ಥ )

ಇಲ್ಲಿ **ಆಕ್ಷೇಪಕನು** ಹೇಳುತ್ತಾನೇನೆಂದರೆ: ಈ ಎರಡು ಪಕ್ಷಗಳೂ ಹೊಂದುವಹಾಗಿಲ್ಲ ಏಕೆಂದರೆ, ಋತಪಾನವೆಂದರೆ ಕರ್ಮದ ಫಲವನ್ನು ಉಪಭೋಗಿಸುವದು. 'ಸುಕೃತದ ಲೋಕದಲ್ಲಿ' ಎಂಬ ಲಿಂಗವಿರುವದರಿಂದ (ಈ ಅರ್ಥವನ್ನು ಮಾಡಬೇಕಾಗಿದೆ). ಅದು ಚೇತನನಾದ ಕ್ಷೇತ್ರಜ್ಞನಿಗೆ ಹೊಂದುತ್ತದೆಯೇ ಹೊರತು ಅಚೇತನವಾದ ಬುದ್ಧಿಗೆ (ಹೊಂದು)ವದಿಲ್ಲ. ಮತ್ತು ಪಿಬನ್ತೌ (ಪಾನಮಾಡುವವರಾಗಿ) ಎಂದು ದ್ವಿವಚನವನ್ನು ಉಪಯೋಗಿಸಿರುವದರಿಂದ ಇಬ್ಬರು ಪಾನ(ಮಾಡುವವರೆಂದು)ಶ್ರುತಿಯು ತಿಳಿಸುತ್ತಿದೆ. ಆದ್ದರಿಂದ ಮೊದಲನೆಯದಾಗಿ ಬುದ್ಧಿಕ್ಷೇತ್ರಜ್ಞರು ( ಋತಪಾನವನ್ನು ಮಾಡುವವರು ) ಎಂಬ ಪಕ್ಷವು ಹೊಂದುವದಿಲ್ಲ. ಆದ್ದರಿಂದಲೇ ಕ್ಷೇತ್ರಜ್ಞಪರಮಾತ್ಮರು (ಋತಪಾನವನ್ನು ಮಾಡುವವರು) ಎಂಬ ಪಕ್ಷವೂ ಹೊಂದುವಹಾಗಿಲ್ಲ. ಏಕೆಂದರೆ ಪರಮಾತ್ಮನು ಚೇತನನಾದರೂ "ಇನ್ನೊಂದು (ಹಕ್ಕಿಯು) ತಿನ್ನದೆ ನೋಡುತ್ತಾ ಇರುತ್ತದೆ". (ಮುಂ.) ಎಂದು ಮಂತ್ರವರ್ಣವಿರುವದರಿಂದ (ಅವನಿಗೆ) ಋತಪಾನವು ಹೊಂದುವಹಾಗಿಲ್ಲ.

ಈ (ಪೂರ್ವಪಕ್ಷಕ್ಕೆ ನಾವು) ಹೇಳುವ (ಸಮಾಧಾನ)ವೇನೆಂದರೆ, ಇದು (ಈ ಪಕ್ಷಗಳ ದೋಷವಲ್ಲ. ಏಕೆಂದರೆ 'ಕೊಡೆಯವರು ಹೋಗುತ್ತಿದಾರೆ' ಎಂದು ಒಬ್ಬನೇ ಕೊಡೆಯುವನು ಇದ್ದರೂ ಬಲುಮಂದಿಯನ್ನು ಕೊಡೆಯವರು ಎಂದು ಕರೆಯುವದು ಕಂಡುಬರುತ್ತದೆ[1]. ಇದರಂತೆ ಒಬ್ಬನು ಕುಡಿಯುತ್ತಿದ್ದ

---

[1]. 'ಛತ್ರಿಣಃ' ಎಂದರೆ ಇವರ ಗುಂಪಿನಲ್ಲಿ ಕೊಡೆಯಿದೆ ಎಂದೂ ಅರ್ಥವಾಗಬಹುದು. ಛತ್ರಮ್ ಏಷಾಮ್ ಅಸ್ತಿ, ಛತ್ರಾಣಿ ಏಷಾಂ ಸನ್ತಿ ಎಂದು ಎರಡು ಬಗೆಯಲ್ಲಿಯೂ ಇದನ್ನು ಸಂದರ್ಭಾನುಸಾರವಾಗಿ ಬಿಡಿಸಬಹುದು. ಇದರಂತೆ 'ಪಿಬನ್ತೌ' ಎಂಬ ಪದಾರ್ತವನ್ನೂ ತಿಳಿದುಕೊಳ್ಳಬಹುದೆಂದು ಭಾವ. ಛತ್ರಿನ್ಯಾಯವನ್ನು ಜೈ. ಸೂ. ೩-೭-೨೨ರ ಭಾಷ್ಯದಲ್ಲಿ ಉಪಯೋಗಿಸಿದೆ.

ರೂ ಇಬ್ಬರನ್ನು 'ಕುಡಿಯುವವರು' ಎಂದು ಹೇಳಿದೆ (ಎನ್ನಬಹುದು). ಅಥವಾ ಜೀವನಂತೂ ಕುಡಿಯುತ್ತಾನೆ, ಈಶ್ವರನಾದರೋ ಕುಡಿಸುತ್ತಾನೆ. ಕುಡಿಸುವವನಾದರೂ(ಈಶ್ವರನನ್ನು) 'ಕುಡಿಯುತ್ತಾನೆ' ಎಂದಿದೆ (ಎಂದಾದರೂ ಹೇಳಬಹುದು). ಏಕೆಂದರೆ ಅಡಿಗೆಮಾಡಿಸುವವನನ್ನೂ ಅಡಿಗೆಮಾಡುವವನು(ಎಂದು ಕರೆಯುವ ಪ್ರಸಿದ್ಧಿಯು ಕಂಡುಬರುತ್ತದೆ.[1] (ಇಲ್ಲಿ) ಬುದ್ಧಿಕ್ಷೇತ್ರಜ್ಞರು (ಋತಪಾನವನ್ನು ಮಾಡುವವರು ಎಂದು) ಇಟ್ಟುಕೊಂಡರೂ ಆಗುತ್ತದೆ. ಏಕೆಂದರೆ 'ಕಟ್ಟಿಗೆಗಳು ಬೇಯಿಸುತ್ತವೆ' ಎಂಬ ಪ್ರಯೋಗವೂ ಕಂಡುಬರುವದರಿಂದ ಕರಣವಾದ (ಬುದ್ಧಿಯಲ್ಲಿಯೂ) ಕರ್ತೃತ್ವವನ್ನು ಉಪಚಾರಕ್ಕೆ (ಹೇಳಿದೆ ಎನ್ನಬಹುದು). (ಇದಲ್ಲದೆ) ಅಧ್ಯಾತ್ಮಪ್ರಕರಣದಲ್ಲಿ ಋತಪಾನವನ್ನು ಮಾಡುವವರು ಬೇರೆಯಿಬ್ಬರು ಮತ್ತೆಯಾರೂ ಇರುವಹಾಗಿಲ್ಲ. ಆದ್ದರಿಂದ (ಇವರು) ಬುದ್ಧಿಜೀವರಾಗಬೇಕೊ, ಅಥವಾ ಜೀವಪರಮಾತ್ಮ(ರಾಗಬೇಕೊ) ?– ಎಂದು ಸಂಶಯ(ವುಂಟಾಗುವದು ಯುಕ್ತವಾಗಿದೆ).

## ಪೂರ್ವಪಕ್ಷ: ಗುಹಾಪ್ರವಿಷ್ಟರೆಂದರೆ ಬುದ್ಧಿಕ್ಷೇತ್ರಜ್ಞರು

( ಭಾಷ್ಯ )

೧೬೯. ಕಿಂ ತಾವತ್ ಪ್ರಾಪ್ತಮ್ ? ಬುದ್ಧಿಕ್ಷೇತ್ರಜ್ಞೌ ಇತಿ | ಕುತಃ ? 'ಗುಹಾಂ ಪ್ರವಿಷ್ಟೌ' । ಇತಿ ವಿಶೇಷಣಾತ್ । ಯದಿ ಶರೀರಂ ಗುಹಾ, ಯದಿ ವಾ ಹೃದಯಂ, ಉಭಯಥಾಪಿ ಬುದ್ಧಿಕ್ಷೇತ್ರಜ್ಞೌ ಗುಹಾಂ ಪ್ರವಿಷ್ಟೌ ಉಪಪದ್ಯೇತೇ । ನ ಚ ಸತಿ ಸಂಭವೇ ಸರ್ವಗತಸ್ಯ ಬ್ರಹ್ಮಣಃ ವಿಶಿಷ್ಟದೇಶತ್ವಂ ಯುಕ್ತಂ ಕಲ್ಪಯಿತುಮ್ । 'ಸುಕೃತಸ್ಯ ಲೋಕೇ' ಇತಿ ಚ ಕರ್ಮಗೋಚರಾನತಿಕ್ರಮಂ ದರ್ಶಯತಿ । ಪರಮಾತ್ಮಾ ತು ನ ಸುಕೃತಸ್ಯ ವಾ ದುಷ್ಕೃತಸ್ಯ ವಾ ಗೋಚರೇ ವರ್ತತೇ । "ನ ಕರ್ಮಣಾ ವರ್ಧತೇ ನೋ ಕನೀಯಾನ್" (ಬೃ. ೪–೪–೨೩ ? ತೈ. ಬ್ರಾ. ೩–೧೨–೫೫) ಇತಿ ಶ್ರುತೇಃ । 'ಛಾಯಾತಪೌ' ಇತಿ ಚ ಚೇತನಾಚೇತನಯೋರ್ನಿರ್ದೇಶಃ ಉಪಪದ್ಯತೇ | ಛಾಯಾತಪವತ್ ಪರಸ್ಪರವಿಲಕ್ಷಣತ್ವಾತ್ । ತಸ್ಮಾದ್ ಬುದ್ಧಿಕ್ಷೇತ್ರಜ್ಞೌ ಇಹ ಉಚ್ಯೇಯಾತಾಮ್ ಇತಿ ॥

---

1. ಅಡಿಗೆಯನ್ನು ಮಾಡುವೆನೆಂದು ಒಪ್ಪಿಕೊಂಡು ಪರಿಚಾರಕರಿಂದ ಅಡಿಗೆಯನ್ನು ಮಾಡಿಸುವವನನ್ನೂ 'ಪಾಚಕನು' (ಅಡಿಗೆಮಾಡುವವನು) ಎನ್ನುವರು. ಸೇನೆಯ ಮೂಲಕವಾಗಿ ಯುದ್ಧಮಾಡುವ ರಾಜನನ್ನೂ ಯುದ್ಧಮಾಡುವವನು ಎನ್ನುವರು. ಹೀಗೆ ಕಾರಯಿತೃವಿನಲ್ಲಿ ಕರ್ತೃತ್ವವನ್ನು ಹೇಳುವ ಮಾತನ್ನು ಪ್ರಯೋಗಿಸುವದುಂಟು.

(ಭಾಷ್ಯಾರ್ಥ)

ಮೊದಲು ಯಾವ (ಪಕ್ಷವು) ಬಂದೊದಗುತ್ತದೆ ? ಎಂದರೆ, ಬುದ್ಧಿ ಕ್ಷೇತ್ರಜ್ಞರೇ (ಗುಹಾಪ್ರವಿಷ್ಟರು) ಎಂದು (ತೋರುತ್ತದೆ. ) ಏಕೆ ? ಎಂದರೆ 'ಗುಹೆಯನ್ನು ಹೊಕ್ಕವರು' ಎಂಬ ವಿಶೇಷಣವಿರುವದರಿಂದ. ಶರೀರವೇ ಗುಹೆ ಯಾಗಲಿ, ಹೃದಯವೇ ಗುಹೆಯಾಗಲಿ, ಎರಡು ಪ್ರಕಾರದಿಂದಲೂ ಬುದ್ಧಿ ಕ್ಷೇತ್ರಜ್ಞರೇ ಗುಹೆಯನ್ನು ಹೊಕ್ಕಿರುವವರು ಎಂಬುದು ಯುಕ್ತವಾಗಿದೆ. (ಇನ್ನೊಂದರ)ಸಂಭವವಿರುವಲ್ಲಿ ಸರ್ವಗತವಾಗಿರುವ ಬ್ರಹ್ಮವು (ಒಂದಾನೊಂದು) ಗೊತ್ತಾದ ದೇಶವಲ್ಲಿದೆ ಎಂದು ಕಲ್ಪಿಸುವದು ಯುಕ್ತವೂ ಅಲ್ಲ. ಇದೂ ಅಲ್ಲದೆ 'ಸುಕೃತದ ಲೋಕದಲ್ಲಿ[1] (ಋತವನ್ನು ಪಾನಮಾಡುವವನು)' ಎಂದು ಕರ್ಮಗೋಚರ(ವಾಗಿರುವ ಕ್ಷೇತ್ರವನ್ನು) ಬಿಡಲಿಲ್ಲವೆಂದು (ಶ್ರುತಿ) ತಿಳಿಸುತ್ತದೆ. ಪರಮಾತ್ಮನೋ ಎಂದರೆ ಸುಕೃತದ ಅಥವಾ ದುಷ್ಕೃತದ ಗೋಚರ ದಲ್ಲಿರುವದಿಲ್ಲ. "ಕರ್ಮದಿಂದ ಬೆಳೆಯುವದಿಲ್ಲ, ಕುಗ್ಗುವವನೂ ಆಗುವದಿಲ್ಲ" (ಬೃ. ೪-೪-೨೩ ? ತೈ. ಬ್ರಾ. ೩-೧೨-೫೫) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). 'ನೆರಳುಬಿಸಿಲುಗಳು' ಎಂದು ಚೇತನಾಚೇತನರನ್ನು ತಿಳಿಸುವದು ಯುಕ್ತವಾಗಿರುತ್ತದೆ ; ಏಕೆಂದರೆ (ಅವು) ನೆರಳುಬಿಸಿಲುಗಳಂತೆ ಒಂದಕ್ಕಿಂತ ಒಂದು ವಿಲಕ್ಷಣವಾಗಿರುತ್ತವೆ.[2] ಆದ್ದರಿಂದ ಇಲ್ಲಿ ಬುದ್ಧಿಜೀವರು ಗಳನ್ನು ಹೇಳಿರಬೇಕು.

## ಸಿದ್ಧಾಂತ: ಜೀವಪರಮಾತ್ಮರನ್ನೇ ಗುಹಾಪ್ರವಿಷ್ಟರೆಂದಿದೆ

(ಭಾಷ್ಯ)

೧೭೦. ಏವಂ ಪ್ರಾಪ್ತೇ ಬ್ರೂಮಃ| ವಿಜ್ಞಾನಾತ್ಮಪರಮಾತ್ಮಾನೌ ಇಹ ಉಚ್ಯೇಯಾತಾಮ್ | ಕಸ್ಮಾತ್ ? ಆತ್ಮಾನೌ ಹಿ ತೌ ಉಭಾವಪಿ ಚೇತನೌ ಸಮಾನಸ್ವಭಾವೌ । ಸಂಖ್ಯಾಶ್ರವಣೇ ಚ ಸಮಾನಸ್ವಭಾವೇಷ್ವೇವ ಲೋಕೇ ಪ್ರತೀತಿರ್ದೃಶ್ಯತೇ | 'ಅಸ್ಯ ಗೋರ್ದ್ವಿತೀಯೋಽನ್ವೇಷ್ಟವ್ಯಃ' ಇತ್ಯುಕ್ತೇ ಗೌರೇವ ದ್ವಿತೀಯಃ ಅನ್ವಿಷ್ಯತೇ,ನಾಶ್ವ: ಪುರುಷೋ ವಾ। ತದಿಹ ಋತಪಾನೇನ ಲಿಙ್ಗೇನ

---

1. 'ಸುಕೃತಸ್ಯ ಲೋಕೇ' ಎಂಬುದಕ್ಕೆ ಕರ್ಮದ ಕ್ಷೇತ್ರದಲ್ಲಿ ಎಂಬ ಅರ್ಥ ವನ್ನು ಇಲ್ಲಿ ತೆಗೆದಿರುವಂತೆ ಇದೆ. ಈ ಭಾಷ್ಯದ ಆಧಾರದಿಂದಲೇ ನಾವು ಸುಕೃತದ ಲೋಕದಲ್ಲಿ ಎಂದು ಕನ್ನಡಿಸಿರುವದು. ಉಪನಿಷದ್ಭಾಷ್ಯದಲ್ಲಿ ಸುಕೃತಸ್ಯ ಎಂಬುವನ್ನು ಋತಂ ಎಂಬುವದರೊಡನೆ ಅನ್ವಯಿಸಿರುತ್ತದೆ. ಈ ಹೆಚ್ಚುಕಡಿಮೆಗೆ ಕಾರಣವೇನೋ ತಿಳಿಯದು,

2. ಜೀವಾತ್ಮಪರಮಾತ್ಮರನ್ನು ತೆಗೆದುಕೊಂಡರೆ ಈ ವೈಲಕ್ಷಣ್ಯವು ಸಿಕ್ಕುವದಿಲ್ಲ ಎಂದು ಭಾವ.

ನಿಶ್ಚಿತೇ ವಿಜ್ಞಾನಾತ್ಮನಿ ದ್ವಿತೀಯಾನ್ವೇಷಣಾಯಾಂ ಸಮಾನಸ್ವಭಾವಶ್ಚೇತನಃ ಪರಮಾತ್ಮೈವ ಪ್ರತೀಯತೇ ||

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಇದಕ್ಕೆ ಉತ್ತರವನ್ನು) ಹೇಳುವೆವು. ಇಲ್ಲಿ ವಿಜ್ಞಾನಾತ್ಮಪರಮಾತ್ಮರನ್ನು ಹೇಳಿರಬೇಕು. ಏಕೆ? ಎಂದರೆ, ಅವರಿಬ್ಬರೂ ಆತ್ಮರುಗಳಾಗಿ ಚೇತನರಾಗಿ ಸಮಾನವಾದ ಸ್ವಭಾವವುಳ್ಳವರಾಗಿರುವದರಿಂದ. ಲೋಕದಲ್ಲಿ ಸಂಖ್ಯೆಯನ್ನು (ಹೇಳಿರುವದನ್ನು) ಕೇಳಿದರೆ, ಸಮಾನವಾದ ಸ್ವಭಾವವುಳ್ಳವುಗಳ ವಿಷಯದ ಪ್ರತೀತಿಯೇ ಆಗುವದು ಕಂಡುಬಂದಿರುತ್ತಿದೆ. (ಹೇಗೆಂದರೆ) 'ಈ ಎತ್ತಿಗೆ ಎರಡನೆಯದನ್ನು ಹುಡುಕಬೇಕು' ಎಂದರೆ ಎರಡನೆಯ ಎತ್ತನ್ನೇ ಹುಡುಕುತ್ತಾರೆಯೇ ಹೊರತು ಕುದುರೆಯನ್ನಾಗಲಿ ಮನುಷ್ಯನನ್ನಾಗಲಿ ಹುಡುಕುವದಿಲ್ಲ. ಆದ್ದರಿಂದ ಋತಪಾನವೆಂಬ ಲಿಂಗದಿಂದ ವಿಜ್ಞಾನಾತ್ಮ(ನೊಬ್ಬ)ನೆಂದು ನಿಶ್ಚಯವಾದಮೇಲೆ, ಎರಡನೆಯದನ್ನು ಹುಡುಕಬೇಕಾಗಿರುವಲ್ಲಿ (ಅವನಿಗೆ) ಸಮಾನವಾದ ಸ್ವಭಾವವುಳ್ಳ ಚೇತನನಾದ ಪರಮಾತ್ಮನೇ (ಮನಸ್ಸಿಗೆ) ತೋರುತ್ತಾನೆ.[1]

## ಪೂರ್ವಪಕ್ಷದ ಯುಕ್ತಿಗೆ ಸಮಾಧಾನ

(ಭಾಷ್ಯ)

೧೭೧. ನನು ಉಕ್ತಮ್ ಗೃಹಾಹಿತತ್ವದರ್ಶನಾತ್ ನ ಪರಮಾತ್ಮಾ ಪ್ರತ್ಯೇತವ್ಯಃ ಇತಿ | ಗುಹಾಹಿತತ್ವದರ್ಶನಾದೇವ ಪರಮಾತ್ಮಾ ಪ್ರತ್ಯೇತವ್ಯಃ ಇತಿ ವದಾಮಃ | ಗುಹಾಹಿತತ್ವಂ ತು ಶ್ರುತಿಸ್ಮೃತಿಷ್ವಸಕೃತ್ ಪರಮಾತ್ಮನ ಏವ ದೃಶ್ಯತೇ । "ಗುಹಾಹಿತಂ ಗಹ್ವರೇಷ್ಠಂ ಪುರಾಣಮ್" (ಕ. ೧-೨-೧೨), "ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ (ತೈ.೨--೧), "ಆತ್ಮಾನಮನ್ವಿಚ್ಛ ಗುಹಾಂ ಪ್ರವಿಷ್ಟಮ್" (ಮೋ. ಧ. ೧೭೫-೩೮) ಇತ್ಯಾದ್ಯಾಸು । ಸರ್ವಗತಸ್ಯಾಪಿ ಬ್ರಹ್ಮಣಃ ಉಪಲಬ್ಧ್ಯರ್ಥೋ ದೇಶವಿಶೇಷೋಪದೇಶೋ ನ ವಿರುಧ್ಯತೇ ಇತ್ಯೇತದಪಿ ಉಕ್ತಮೇವ | ಸುಕೃತಲೋಕವರ್ತಿತ್ವಂ ತು ಛತ್ರಿತ್ವವತ್ ಏಕಸ್ಮಿನ್ನಪಿ ವರ್ತಮಾನಮ್ ಉಭಯೋರವಿರುದ್ಧಮ್ |

1. 'ಆತ್ಮಾನೌ ಹಿ' ಎಂಬ ಸೂತ್ರಭಾಗಕ್ಕೆ ಜೀವಪರಮಾತ್ಮರಿಬ್ಬರನ್ನೂ ಹೇಳಿದೆ ಎಂದು ಅಭಿಪ್ರಾಯವಿಲ್ಲ. ಒಬ್ಬನು ಜೀವನೆಂದು ಗೊತ್ತಾಗಿರುವದನ್ನು ಅನುವಾದಮಾಡಿಕೊಂಡು ಅವನಿಗೆ ಸಮಾನಸ್ವಭಾವದವನಾಗಿರುವದರಿಂದ ಎರಡನೆಯವನಾದ ಪರಮಾತ್ಮನನ್ನೇ ಶ್ರುತಿಯಲ್ಲಿ ಪ್ರತಿಪಾದಿಸಿದೆ ಎಂದು ಅಭಿಪ್ರಾಯ.

'ಛಾಯಾತಪೌ' ಇತ್ಯಪಿ ಅವಿರುದ್ಧಮ್ । ಛಾಯಾತಪವತ್ ಪರಸ್ಪರವಿಲಕ್ಷಣತ್ವಾತ್ ಸಂಸಾರಿತ್ವಾಸಂಸಾರಿತ್ವಯೋಃ । ಅವಿದ್ಯಾಕೃತತ್ವಾತ್ ಸಂಸಾರಿತ್ವಸ್ಯ, ಪಾರಮಾರ್ಥಿಕತ್ವಾಚ್ಚ ಅಸಂಸಾರಿತ್ವಸ್ಯ । ತಸ್ಮಾತ್ ವಿಜ್ಞಾನಾತ್ಮಪರಮಾತ್ಮಾನೌ ಗುಹಾಂ ಪ್ರವಿಷ್ಟೌ ಗೃಹ್ಯೇತೇ ॥

(ಭಾಷ್ಯಾರ್ಥ)

(ಆಕ್ಷೇಪ) :— ಗುಹಾಹಿತರಾಗಿರುವರೆಂದು ಶ್ರುತಿಯಲ್ಲಿರುವದರಿಂದ (ಇಲ್ಲಿ) ಪರಮಾತ್ಮನೆಂದು ತಿಳಿಯತಕ್ಕದ್ದಲ್ಲ ಎಂದು ಪೂರ್ವಪಕ್ಷದಲ್ಲಿ ಹೇಳಿತ್ತಲ್ಲ!

(ಪರಿಹಾರ) :— ಗುಹಾಹಿತರಾಗಿರುವರೆಂದು ಶ್ರುತಿಯಲ್ಲಿರುವದರಿಂದಲೇ ಪರಮಾತ್ಮನೆಂದು ತಿಳಿಯತಕ್ಕದ್ದು ಎನ್ನುತ್ತೇವೆ. ಗುಹಾಹಿತನಾಗಿರುವದೆಂಬುದು "ಗುಹಾಹಿತನಾದ ಗಹ್ವರದಲ್ಲಿರುವ ಪುರಾಣನಾದ (ದೇವನನ್ನು) (ಕ. ೧-೨-೧೨), "ಗುಹೆಯಲ್ಲಿ ನಿಹಿತನಾಗಿ ಪರಮಾಕಾಶದಲ್ಲಿ (ಬ್ರಹ್ಮವನ್ನು) ಯಾವನು ಅರಿತುಕೊಳ್ಳುವನೋ .... " (ತೈ. ೨-೧), "ಗುಹೆಯನ್ನು ಹೊಕ್ಕಿರುವ ಆತ್ಮನನ್ನು ಹುಡುಕು" ( ಮೋ. ಧ. ೧೭೫-೩೮ ) ಮುಂತಾದ ಶ್ರುತಿಸ್ಮೃತಿಗಳಲ್ಲಿ ಪರಮಾತ್ಮನ (ವಿಷಯದಲ್ಲಿಯೇ) ಮತ್ತೆಮತ್ತೆ (ಹೇಳಿರುವದು ) ಕಂಡುಬರುತ್ತದೆ.[1] ಬ್ರಹ್ಮವು ಸರ್ವಗತವಾಗಿದ್ದರೂ ಜ್ಞಾನಕ್ಕಾಗಿ ( ಒಂದಾನೊಂದು ) ಗೊತ್ತಾದ ದೇಶವನ್ನು ಉಪದೇಶಿಸುವದು ವಿರುದ್ಧವಲ್ಲ ಎಂಬಿದನ್ನು ( ಹಿಂದೆ ) ಹೇಳಿಯೇ ಇದೆ. ಸುಕೃತಲೋಕದಲ್ಲಿರುವದೋ ಎಂದರೆ ಛತ್ರಿತ್ವದಂತೆ ಒಬ್ಬನಲ್ಲಿದ್ದರೂ ಇಬ್ಬರಿಗೂ (ಆಗುವದು) ವಿರುದ್ಧವಲ್ಲ. 'ನೆರಳುಬಿಸಿಲುಗಳಂತೆ' ಎಂಬುದೂ (ಈ ಪಕ್ಷದಲ್ಲಿ) ವಿರುದ್ಧವಲ್ಲ. ಏಕೆಂದರೆ ಸಂಸಾರಿತ್ವ, ಅಸಂಸಾರಿತ್ವ- ಇವು ನೆರಳುಬಿಸಿಲುಗಳಂತೆ ಒಂದಕ್ಕಿಂತ ಒಂದು ವಿಲಕ್ಷಣವಾಗಿರುತ್ತವೆ. (ಹೇಗೆಂದರೆ) ಸಂಸಾರಿತ್ವವು ಅವಿದ್ಯಾಕೃತವಾಗಿರುತ್ತದೆ, ಅಸಂಸಾರಿತ್ವವೆಂಬುದು ಪಾರಮಾರ್ಥಿಕವಾಗಿರುತ್ತದೆ. ಆದ್ದರಿಂದ ( ಇಲ್ಲಿ ) ಗುಹೆಯನ್ನು ಹೊಕ್ಕವರು ಎಂದರೆ ವಿಜ್ಞಾನಾತ್ಮಪರಮಾತ್ಮರನ್ನು ತೆಗೆದುಕೊಳ್ಳಬೇಕು.

---

1. 'ತದ್ದರ್ಶನಾತ್' ಎಂಬ ಸೂತ್ರಭಾಗದ ಅರ್ಥವಿದು. 'ದರ್ಶನ' ಎಂಬ ಮಾತನ್ನು ಸೂತ್ರದಲ್ಲಿ ಶ್ರುತಿಯೆಂಬರ್ಥದಲ್ಲಿ ಬಹಳವಾಗಿ ಉಪಯೋಗಿಸಿವೆ.

## ಇಲ್ಲಿ ಜೀವಪರಮಾತ್ಮರ ವಿಶೇಷಣಗಳೇ ಇವೆ

**ವಿಶೇಷಣಾಚ್ಚ ॥ ೧೨ ॥**

೧೨. ವಿಶೇಷಣದಿಂದಲೂ (ಹೀಗೆಂದು ತಿಳಿಯಬೇಕು.)

(ಭಾಷ್ಯ)

೧೮೨. ಕುತಶ್ಚ ವಿಜ್ಞಾನಾತ್ಮಪರಮಾತ್ಮಾನೌ ಗೃಹ್ಯೇತೇ ? (ವಿಶೇಷಣಾಚ್ಚ )[1] ವಿಶೇಷಣಂ ಚ ವಿಜ್ಞಾನಾತ್ಮಪರಮಾತ್ಮನೋರೇವ ಭವತಿ । "ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು '' ( ಕ. ೧-೩-೩ ) ಇತ್ಯಾದಿನಾ ಪರೇಣ ಗ್ರನ್ಥೇನ ರಥಿರಥಾದಿರೂಪಕಕಲ್ಪನಯಾ ವಿಜ್ಞಾನಾತ್ಮಾನಂ ರಥಿನಂ ಸಂಸಾರಮೋಕ್ಷಯೋರ್ಗನ್ತಾರಂ ಕಲ್ಪಯತಿ |,' "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ " (ಕ. ೧-೩-೬) ಇತಿ ಚ ಪರಮಾತ್ಮಾನಂ ಗನ್ತವ್ಯಮ್| ತಥಾ "ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಮ್" (ಕ.೧-೨-೧೨) ಇತಿ ಪೂರ್ವಸ್ಮಿನ್ನಪಿ ಗ್ರನ್ಥೇ ಮನ್ತೃಮನ್ತವ್ಯತ್ವೇನ ಏತಾವೇವ ವಿಶೇಷಿತೌ। ಪ್ರಕರಣಂ ಚೇದಂ ಪರಮಾತ್ಮನಃ | ''ಬ್ರಹ್ಮವಿದೋ ವದನ್ತಿ" (ಕ. ೧-೩-೧) ಇತಿ ಚ ವಕ್ತೃವಿಶೇಷೋಪಾದಾನಂ ಪರಮಾತ್ಮಪರಿಗ್ರಹೇ ಘಟತೇ । ತಸ್ಮಾತ್ ಇಹ ಜೀವಪರಮಾತ್ಮಾನೌ ಉಚ್ಯೇಯಾತಾಮ್ ||

( ಭಾಷ್ಯಾರ್ಥ )

(ಇಲ್ಲಿ) ವಿಜ್ಞಾನಾತ್ಮಪರಮಾತ್ಮರನ್ನೇ ತೆಗೆದುಕೊಳ್ಳಬೇಕೆಂಬುದು ಮತ್ತೂ ಯಾವ (ಕಾರಣದಿಂದ) ? ಎಂದರೆ (ವಿಶೇಷಣವಿರುವದರಿಂದ. ಇಲ್ಲಿರುವ) ವಿಶೇಷಣವುಕೂಡ ಜೀವಪರಮಾತ್ಮರುಗಳಿಗೇ ಆಗುತ್ತದೆ. "ಆತ್ಮನನ್ನು ರಥಿಯೆಂದು ತಿಳಿ, ಶರೀರವನ್ನು ರಥವೆಂದೇ (ತಿಳಿ) " (ಕ. ೧--೩) ಮುಂತಾದ ಮುಂದಿನ ಗ್ರಂಥದಿಂದ ರಥಿ, ರಥ- ಮುಂತಾದ ರೂಪಕವನ್ನು ಕಲ್ಪಿಸುವದರಿಂದ ವಿಜ್ಞಾನಾತ್ಮನನ್ನು ರಥಿಯೆಂದು ಸಂಸಾರಮೋಕ್ಷಗಳನ್ನು (ಪಡೆಯುವ) ಗಂತೃವೆಂದು ಕಲ್ಪಿಸಿರುತ್ತದೆ. ಮತ್ತು "ಅವನು ದಾರಿಯ ಕೊನೆಯನ್ನು, ಆ ವಿಷ್ಣುವಿನ ಪರಮಪದವನ್ನು ಪಡೆಯುತ್ತಾನೆ '' (ಕ. ೧-೩-೯) ಎಂದು ಪರಮಾತ್ಮನನ್ನು ಗಂತವ್ಯವೆಂದು (ಕಲ್ಪಿಸಿರುತ್ತದೆ). ಹಾಗೂ " ಆ ದುರ್ದರ್ಶ

---

1. ಅವತಾರಿಣಿಕೆಯಾದ ಬಳಿಕ ಆಚಾರ್ಯರು ಬರೆದುಕೊಂಡಿರು ಸೂತ್ರವನ್ನು ಹೀಗೆ ಕಂಸದಲ್ಲಿ ತೋರಿಸಿದೆ.

ನಾದ, ಗೂಢವನ್ನು ಹೊಕ್ಕಿರುವ, ಗುಹಾಹಿತನಾದ ಗಹ್ವರದಲ್ಲಿರುವ ಪುರಾಣನಾದ ದೇವನನ್ನು ಅಧ್ಯಾತ್ಮಯೋಗದ ಪ್ರಾಪ್ತಿಯಿಂದ ತಿಳಿದುಕೊಂಡ ಧೀರನು ಹರ್ಷಶೋಕಗಳನ್ನು ಬಿಡುತ್ತಾನೆ'' (ಕ. ೧-೨-೧೨) ಎಂದು (ಈ) ಹಿಂದಿನ ಗ್ರಂಥದಲ್ಲಿಯೂ (ಜೀವನು) ಮಂತೃ, (ಪರಮಾತ್ಮನು) ಮಂತವ್ಯ- ಎಂದು ಈ (ಇಬ್ಬರನ್ನೇ) ವಿಶೇಷಿಸಿರುತ್ತದೆ.[1] ಇದು ಪರಮಾತ್ಮನ ಪ್ರಕರಣವೂ[2] ಆಗಿದೆ. (ಈ ವಾಕ್ಯದಲ್ಲಿ) 'ಬ್ರಹ್ಮವಿದರು ಹೇಳುವರು' ಎಂಬೀ ವಕ್ತೃವಿಶೇಷವನ್ನು ತೆಗೆದುಕೊಂಡು (ಹೇಳಿ)ರುವದೂ[3] (ಇಲ್ಲಿ) ಪರಮಾತ್ಮನನ್ನು ತೆಗೆದುಕೊಂಡರೆ ಹೊಂದುತ್ತದೆ. ಆದ್ದರಿಂದ ಇಲ್ಲಿ ಜೀವಪರಮಾತ್ಮರನ್ನೇ ಹೇಳಿರಬೇಕು.[4]

## 'ದ್ವಾ ಸುಪರ್ಣಾ' ಎಂಬ ಮಂತ್ರಕ್ಕೆ ಈ ನ್ಯಾಯವು ಹೊಂದುತ್ತದೆಯೆ?

( ಭಾಷ್ಯ )

೧೭೩. ಏಷ ಏವ ನ್ಯಾಯಃ "ದ್ವಾ ಸುಪರ್ಣಾ ಸಯುಜಾ ಸಖಾಯಾ'' (ಮುಂ. ೩-೧-೧) ಇತ್ಯೇವಮಾದಿಷ್ವಪಿ । ತತ್ರಾಪಿ ಹಿ ಅಧ್ಯಾತ್ಮಾಧಿಕಾರಾತ್ ನ ಪ್ರಾಕೃತೌ ಸುಪರ್ಣೌ ಉಚ್ಯೇತೇ । ''ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ'' (ಮುಂ. ೩-೧-೧) ಇತಿ ಅದನಲಿಙ್ಗಾತ್ ವಿಜ್ಞಾನಾತ್ಮಾ ಭವತಿ । ''ಅನಶ್ನನ್ನನ್ಯೋ ಅಭಿಚಾಕಶೀತಿ" (ಮುಂ. ೩-೧-೧) ಇತಿ ಅನಶನಚೇತನತ್ವಾಭ್ಯಾಂ ಪರಮಾತ್ಮಾ । ಅನನ್ತರೇ ಚ ಮನ್ತ್ರೇ ತಾವೇವ ದ್ರಷ್ಟೃದ್ರಷ್ಟವ್ಯಭಾವೇನ ವಿಶಿನಷ್ಟಿ— "ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ । ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ'' (ಮುಂ. ೩-೧-೨) ಇತಿ ॥

---

1. ಗಂತೃಗಂತವ್ಯಭಾವವೂ ಮಂತೃಮಂತವ್ಯಭಾವವೂ ಜೀವಪರಮಾತ್ಮರಿಗಿದೆ, ಬುದ್ಧಿಜೀವರುಗಳಿಗೆ ಇಲ್ಲ.

2. 'ವಿಶೇಷಣಾಚ್ಚ' ಎಂಬಲ್ಲಿರುವ ಚಶಬ್ದದ ಅರ್ಥವಿದು

3. 'ವಿಶೇಷಣಾತ್' ಎಂಬುದಕ್ಕೆ ಇನ್ನೊಂದರ್ಥವಿದೆಂದು ಭಾವಿಸಬಹುದು.

4. ಇಲ್ಲಿ ಬುದ್ಧಿವ್ಯತಿರಿಕ್ತಜೀವನನ್ನೂ ಹೇಳತಕ್ಕದ್ದು ಅವಶ್ಯವಾದರೂ ಮರಣಾನಂತರದಲ್ಲಿರುವ ಜೀವನನ್ನು ೨-೫-೬, ೭ರಲ್ಲಿ ಹೇಳಿದೆ. ಪ್ರಕೃತದಲ್ಲಿ ಜೀವನ ಪರಮಾರ್ಥರೂಪವನ್ನೇ ತಿಳಿಸಿವೆ ಎಂಬುವಕ್ಕೆ ಮೇಲೆ ಕೊಟ್ಟಿರುವ ಅನೇಕಯುಕ್ತಿಗಳಿವೆ ಎಂದು ಭಾವ.

(ಭಾಷ್ಯಾರ್ಥ)

"ದ್ವಾ ಸುಪರ್ಣಾ ಸಯುಜಾ ಸಖಾಯಾ" (ಗೆಳೆಯರಾದ ಎರಡು ಪಕ್ಷಿಗಳು (ಮುಂ. ೩-೧-೧) ಮುಂತಾದ (ಸ್ಥಳ)ಗಳಲ್ಲಿಯೂ ಇದೇ ನ್ಯಾಯವು ಹೊಂದುತ್ತದೆ. ಏಕೆಂದರೆ ಅಲ್ಲಿಯೂ ಅಧ್ಯಾತ್ಮಪ್ರಕರಣವಿರುವದರಿಂದ ಸಾಮಾನ್ಯವಾದ ಪಕ್ಷಿಗಳನ್ನು ಹೇಳಿರುತ್ತದೆ (ಎನ್ನುವದ)ಕ್ಕಿಲ್ಲ. "ಅವುಗಳಲ್ಲಿ ಒಂದು ಪಿಪ್ಪಲವನ್ನು ಸವಿದು ತಿನ್ನುತ್ತದೆ" (ಮುಂ. ೩-೧-೧) ಎಂದು ತಿನ್ನುವದೆಂಬ ಲಿಂಗವಿರುವದರಿಂದ (ಒಂದು ಪಕ್ಷಿ ಎಂದರೆ) ವಿಜ್ಞಾನಾತ್ಮನಾಗಿರುವದು; "ಇನ್ನೊಂದು ತಿನ್ನದೆ ನೋಡುತ್ತಿರುತ್ತದೆ" (ಮುಂ. ೩-೧-೧)ಎಂಬಲ್ಲಿ ತಿನ್ನದೆ ಇರುವದು, ಚೇತನವಾಗಿರುವದು (ಎಂಬ ಲಿಂಗ)ಗಳಿಂದ (ಇನ್ನೊಂದು ಪಕ್ಷಿಯು) ಪರಮಾತ್ಮನಾಗಿರುವದು.[1] ಮುಂದಿನ ಮಂತ್ರದಲ್ಲಿ "ಒಂದೇ ವೃಕ್ಷದಲ್ಲಿ ಪುರುಷನು ನಿಮಗ್ನನಾಗಿ ಅಸಮರ್ಥತೆಯಿಂದ ಮೋಹಗೊಂಡು ಶೋಕಿಸುತ್ತಿರುವನು. ಭಜಿಸಲ್ಪಟ್ಟ (ತನಗಿಂತ) ಬೇರೆಯಾದ ಈಶ್ವರನನ್ನು ಇವನ ಮಹಿಮೆಯನ್ನು ಹೀಗೆಂದು ಯಾವಾಗ ಕಂಡುಕೊಳ್ಳುವನೋ (ಆಗ) ಶೋಕವಿಲ್ಲದವನಾಗುವನು" (ಮುಂ. ೩-೧-೨) ಎಂದು ಆ ಇಬ್ಬರನ್ನೇ ದ್ರಷ್ಟೃದ್ರಷ್ಟವ್ಯಭಾವದಿಂದ ವಿಶೇಷಿಸಿರುತ್ತದೆ.[2]

(ಭಾಷ್ಯ)

೧೭೪. ಅಪರ ಆಹ- "ದ್ವಾ ಸುಪರ್ಣಾ" ಇತಿ ನೇಯಮ್ ಋಕ್ ಅಸ್ಯ ಅಧಿಕರಣಸ್ಯ ಸಿದ್ಧಾನ್ತಂ ಭಜತೇ | ಪೈಙ್ಗಿರಹಸ್ಯಬ್ರಾಹ್ಮಣೇನ ಅನ್ಯಥಾ ವ್ಯಾಖ್ಯಾತತ್ವಾತ್ | "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತೀತಿ ಸತ್ತ್ವಮನಶ್ನನ್ನನ್ಯೋ ಅಭಿಚಾಕಶೀತೀತ್ಯನಶ್ನನ್ನನ್ಯೋಽಭಿಪಶ್ಯತಿ ಜ್ಞಸ್ತಾವೇತೌ ಸತ್ತ್ವಕ್ಷೇತ್ರಜ್ಞೌ" (?) ಇತಿ | ಸತ್ತ್ವಶಬ್ದೋ ಜೀವಃ, ಕ್ಷೇತ್ರಜ್ಞಶಬ್ದಃ ಪರಮಾತ್ಮಾ ಇತಿ ಯದುಚ್ಯತೇ, ತನ್ನ | ಸತ್ತ್ವಕ್ಷೇತ್ರಜ್ಞಶಬ್ದಯೋರನ್ತಃಕರಣಶಾರೀರಪರತಯಾ ಪ್ರಸಿದ್ಧತ್ವಾತ್ | ತತ್ರೈವ ಚ ವ್ಯಾಖ್ಯಾತತ್ವಾತ್— "ತದೇತತ್ ಸತ್ತ್ವಂ ಯೇನ ಸ್ವಪ್ನಂ ಪಶ್ಯತಿ | ಅಥ ಯೋಽಯಂ ಶಾರೀರ ಉಪದ್ರಷ್ಟಾ ಸ ಕ್ಷೇತ್ರಜ್ಞಸ್ತಾವೇತೌ ಸತ್ತ್ವಕ್ಷೇತ್ರಜ್ಞೌ" (?) ಇತಿ | ನಾಪಿ ಅಸ್ಯ ಅಧಿಕರಣಸ್ಯ ಪೂರ್ವಪಕ್ಷಂ ಭಜತೇ | ನ ಹಿ ಅತ್ರ ಶಾರೀರಃ ಕ್ಷೇತ್ರಜ್ಞಃ ಕರ್ತೃತ್ವಭೋಕ್ತೃತ್ವಾದಿನಾ ಸಂಸಾರಧರ್ಮೇಣೋಪೇತೋ ವಿವಕ್ಷ್ಯತೇ | ಕಥಂ ತರ್ಹಿ ಸರ್ವಸಂಸಾರಧರ್ಮಾತೀತೋ ಬ್ರಹ್ಮಸ್ವಭಾವಶ್ಚೈತನ್ಯಮಾತ್ರಸ್ವರೂಪಃ |

---

1. 'ಆತ್ಮಾನೌ ಹಿ' ಎಂಬ ಸೂತ್ರಭಾಗದ ಅಭಿಪ್ರಾಯವಿದು.
2. 'ವಿಶೇಷಣಾಚ್ಚ' ಎಂಬುದರ ಅಭಿಪ್ರಾಯವಿದು.

"ಅನಶ್ನನ್ನನ್ಯೋ ಅಭಿಚಾಕಶೀತೀತ್ಯನಶ್ನನ್ನನ್ಯೋಽಭಿಪಶ್ಯತಿ ಜ್ಞಃ" (?) ಇತಿ ವಚನಾತ್ । "ತತ್ತ್ವಮಸಿ" (ಛಾಂ. ೬-೮-೭), "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ" (ಗೀ. ೧೩-೨) ಇತ್ಯಾದಿಶ್ರುತಿಸ್ಮೃತಿಭ್ಯಶ್ಚ । ತಾವತಾ ಚ ವಿದ್ಯೋಪಸಂಹಾರದರ್ಶನಮ್ ಏವಮೇವ ಅವಕಲ್ಪತೇ । "ತಾವೇತೌ ಸತ್ತ್ವಕ್ಷೇತ್ರಜ್ಞೌ ನ ಹ ವಾ ಏವಂವಿದಿ ಕಿಂಚನ ರಜ ಆಧ್ವಂಸತೇ" (?) ಇತ್ಯಾದಿ ॥

(ಭಾಷ್ಯಾರ್ಥ)

(ಇಲ್ಲಿ) **ಮತ್ತೊಬ್ಬ (ವ್ಯಾಖ್ಯಾನಕಾರರು) ಹೇಳುತ್ತಾನೇನೆಂದರೆ**[1] "ದ್ವಾ ಸುಪರ್ಣಾ" ಎಂಬೀ ಋಕ್ಕಿಗೆ ಈ ಅಧಿಕರಣದ ಸಿದ್ಧಾಂತವು ದೊರೆಯುವದಿಲ್ಲ. ಏಕೆಂದರೆ **ಪೈಂಗಿರಹಸ್ಯಬ್ರಾಹ್ಮಣದಲ್ಲಿ** (ಮಂತ್ರದ ಅರ್ಥವನ್ನು) ಬೇರೆಯ ರೀತಿಯಲ್ಲಿ (ಎಂದರೆ) "ಅವುಗಳಲ್ಲಿ ಒಂದು ಪಿಪ್ಪಲವನ್ನು ಸವಿದು ತಿನ್ನುತ್ತದೆ ಎಂದರೆ ಸತ್ತ್ವವು, ಇನ್ನೊಂದು ತಿನ್ನದೆ ನೋಡುತ್ತದೆ ಎಂದರೆ ಜ್ಞನು ; ಆ ಈ (ಎರಡೂ) ಸತ್ತ್ವಕ್ಷೇತ್ರಜ್ಞರು" (?) ಎಂದು ವಿವರಿಸಿರುತ್ತದೆ. ಇಲ್ಲಿ ಸತ್ತ್ವವೆಂಬ ಶಬ್ದದಿಂದ ಹೇಳಿರುವದು ಜೀವನು, ಕ್ಷೇತ್ರಜ್ಞನೆಂದರೆ ಪರಮಾತ್ಮನು ಎಂದು (ನೀವು) ಹೇಳುವದಾದರೆ ಅದು ಸರಿಯಲ್ಲ ; ಏಕೆಂದರೆ ಸತ್ತ್ವ, ಕ್ಷೇತ್ರಜ್ಞ- ಎಂಬ ಶಬ್ದಗಳು ಅಂತಃಕರಣ, ಜೀವ - (ಇವರನ್ನು) ಹೇಳುವದೆಂದು ಪ್ರಸಿದ್ಧವಾಗಿರುತ್ತದೆ. ಮತ್ತೆ ಅದೇ (ರಹಸ್ಯಬ್ರಾಹ್ಮಣ)ದಲ್ಲಿ "ಯಾವದರಿಂದ ಕನಸನ್ನು ಕಾಣುತ್ತಾರೋ ಆ ಇದೇ ಸತ್ತ್ವವು; ಇನ್ನು ಯಾವ ಈ ಉಪದ್ರಷ್ಟೃವಾದ ಶಾರೀರನುಂಟೋ ಅವನು ಕ್ಷೇತ್ರಜ್ಞನು. ಆ ಇವೆರಡೂ ಸತ್ತ್ವಕ್ಷೇತ್ರಜ್ಞರು" (?) ಎಂದು ವ್ಯಾಖ್ಯಾನ ಮಾಡಿರುತ್ತದೆ. (ಆ ಋಕ್ಕಿಗೆ) ಈ ಅಧಿಕರಣದ ಪೂರ್ವಪಕ್ಷವೂ ದೊರೆಯಲಾರದು. ಏಕೆಂದರೆ ಇಲ್ಲಿ ಶಾರೀರನಾದ ಕ್ಷೇತ್ರಜ್ಞನು ಕರ್ತೃತ್ವಭೋಕ್ತೃತ್ವವೇ ಮುಂತಾದ ಸಂಸಾರಧರ್ಮಗಳಿಂದ ಕೂಡಿರುವನೆಂದು ಹೇಳುವದಕ್ಕೆ ಹೊರಟಿರುವದಿಲ್ಲ ; ಮತ್ತೆ ಹೇಗೆಂದರೆ ಎಲ್ಲಾ ಸಂಸಾರಧರ್ಮಗಳನ್ನೂ ಮೀರಿ ಬ್ರಹ್ಮಸ್ವಭಾವವಾಗಿರುವ ಚೈತನ್ಯಮಾತ್ರಸ್ವರೂಪನೆಂದು (ಹೇಳುವದಕ್ಕೆ ಹೊರಟಿರುತ್ತದೆ). ಏಕೆಂದರೆ "ಇನ್ನೊಂದು ತಿನ್ನದೆ ನೋಡುತ್ತಿರುತ್ತದೆ ಎಂದಿದೆಯಲ್ಲ, (ಅಲ್ಲಿ) ತಿನ್ನದೆ ನೋಡುತ್ತಿರುವವನು ಜ್ಞನು" (?) ಎಂದು (ಪೈಂಗಿರಹಸ್ಯದ)

---

1. ಈ ಪಕ್ಷದಿಂದ ಹಿಂದೆ ಹೇಳಿರುವ ಜೀವಪರಮೇಶ್ವರಪಕ್ಷವು ಖಂಡಿತವಾಗಿದೆ ಎಂದು ವ್ಯಾಖ್ಯಾನಕಾರರುಗಳ ಅಭಿಪ್ರಾಯವು. ಆದರೆ ಆತ್ಮಾನೌ ಎಂಬ ಸೂತ್ರಾಕ್ಷರಕ್ಕೆ ಮೊದಲನೆಯ ವ್ಯಾಖ್ಯಾನವೇ ಹೊಂದುತ್ತದೆ. ಉಪನಿಷದ್ಭಾಷ್ಯದಲ್ಲಿಯೂ ೧-೩-೭, ೩-೩-೩೪ ಈ ಸೂತ್ರಗಳ ಭಾಷ್ಯದಲ್ಲಿಯೂ ಈ ಪಕ್ಷವನ್ನು ಅಂಗೀಕರಿಸಿರುತ್ತದೆ.

ವಚನವಿದೆ. ಅದೇ ನೀನಾಗಿರುವೆ (ಛಾಂ. ೬-೮-೭), "ಕ್ಷೇತ್ರಜ್ಞನನ್ನು ನಾನೆಂದು ತಿಳಿ" (ಗೀ. ೧೩-೨) ಎಂದು ಮುಂತಾಗಿರುವ ಶ್ರುತಿಸ್ಮೃತಿಗಳಿಂದಲೂ (ಇದು ಸಿದ್ಧವಾಗುತ್ತದೆ). "ಆ ಈ ಇಬ್ಬರು ಸತ್ತ್ವಕ್ಷೇತ್ರಜ್ಞರು. ಹೀಗೆಂದು ತಿಳಿದವನಿಗೆ ಯಾವ ರಜಸ್ಸೂ ಅಂಟಿಕೊಳ್ಳುವದಿಲ್ಲ" (?) ಎಂದು ಮುಂತಾಗಿ ಆಷ್ಟರಿಂದಲೇ (ಬ್ರಹ್ಮ)ವಿದ್ಯೆಯನ್ನು ಉಪಸಂಹಾರಮಾಡಿರುವದೂ ಹೀಗೆಯೇ ಹೊಂದುತ್ತದೆ.

## ಅಂತಃಕರಣಕ್ಕೆ ಭೋಕ್ತೃತ್ವವನ್ನು ಹೇಳಿರುವದರ ಅಭಿಪ್ರಾಯ

(ಭಾಷ್ಯ)

೧೭೫. ಕಥಂ ಪುನರಸ್ಮಿನ್ ಪಕ್ಷೇ "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತೀತಿ ಸತ್ತ್ವಮ್" (?) ಇತಿ ಅಚೇತನೇ ಸತ್ತ್ವೇ ಭೋಕ್ತೃತ್ವವಚನಮ್ ಇತಿ ? ಉಚ್ಯತೇ। ನೇಯಂ ಶ್ರುತಿಃ ಅಚೇತನಸ್ಯ ಸತ್ತ್ವಸ್ಯ ಭೋಕ್ತೃತ್ವಂ ವಕ್ಷ್ಯಾಮಿ ಇತಿ ಪ್ರವೃತ್ತಾ। ಕಿಂ ತರ್ಹಿ, ಚೇತನಸ್ಯ ಕ್ಷೇತ್ರಜ್ಞಸ್ಯ ಅಭೋಕ್ತೃತ್ವಂ ಬ್ರಹ್ಮಸ್ವಭಾವತಾಂ ಚ ವಕ್ಷ್ಯಾಮಿ ಇತಿ। ತದರ್ಥಂ ಸುಖಾದಿವಿಕ್ರಿಯಾವತಿ ಸತ್ತ್ವೇ ಭೋಕ್ತೃತ್ವಮ್ ಅಧ್ಯಾರೋಪಯತಿ। ಇದಂ ಹಿ ಕರ್ತೃತ್ವಂ ಭೋಕ್ತೃತ್ವಂ ಚ ಸತ್ತ್ವಕ್ಷೇತ್ರಜ್ಞಯೋಃ ಇತರೇತರಸ್ವಭಾವಾವಿವೇಕಕೃತಂ ಕಲ್ಪ್ಯತೇ। ಪರಮಾರ್ಥತಸ್ತು ನಾನ್ಯತರಸ್ಯಾಪಿ ಸಂಭವತಿ। ಅಚೇತನತ್ವಾತ್ ಸತ್ತ್ವಸ್ಯ, ಅವಿಕ್ರಿಯಾತ್ವಾಚ್ಚ ಕ್ಷೇತ್ರಜ್ಞಸ್ಯ। ಅವಿದ್ಯಾಪ್ರತ್ಯುಪಸ್ಥಾಪಿತಸ್ವಭಾವತ್ವಾಚ್ಚ ಸತ್ತ್ವಸ್ಯ ಸುತರಾಂ ನ ಸಂಭವತಿ। ತಥಾ ಚ ಶ್ರುತಿಃ "ಯತ್ರ ವಾ ಅನ್ಯದಿವ ಸ್ಯಾತ್ ತತ್ರಾನ್ಯೋಽನ್ಯತ್ ಪಶ್ಯೇತ್" (ಬೃ. ೪-೩-೩೧) ಇತ್ಯಾದಿನಾ ಸ್ವಪ್ನದೃಷ್ಟಹಸ್ತ್ಯಾದಿವತ್ ಅವಿದ್ಯಾವಿಷಯೇ ಏವ ಕರ್ತೃತ್ವಾದಿವ್ಯವಹಾರಂ ದರ್ಶಯತಿ। "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿನಾ ಚ ವಿವೇಕಿನಃ ಕರ್ತೃತ್ವಾದಿವ್ಯವಹಾರಾಭಾವಂ ದರ್ಶಯತಿ ॥

(ಭಾಷ್ಯಾರ್ಥ)

(ಆಕ್ಷೇಪ) :— ಆದರೆ ಈ ಪಕ್ಷದಲ್ಲಿ "ಅವೆರಡರಲ್ಲಿ ಒಂದು ಪಿಪ್ಪಲವನ್ನು ಸವಿದು ತಿನ್ನುತ್ತದೆ- ಎಂಬುದು ಸತ್ತ್ವವು" (ಪೈಂ. ?) ಎಂದು ಅಚೇತನವಾದ ಸತ್ತ್ವಕ್ಕೆ ಭೋಕ್ತೃವನ್ನು ಹೇಳಿರುವದು ಹೇಗೆ ?

(ಪರಿಹಾರ) :— ಈ ಶ್ರುತಿಯು ಅಚೇತನವಾದ ಸತ್ತ್ವಕ್ಕೆ ಭೋಕ್ತೃತ್ವವನ್ನು ಹೇಳುವೆನೆಂದು ಹೊರಟಿರುವದಿಲ್ಲ ; ಮತ್ತೇನೆಂದರೆ ಚೇತನವಾದ ಕ್ಷೇತ್ರಜ್ಞನಿಗೆ ಅಭೋಕ್ತೃತ್ವವನ್ನೂ ಬ್ರಹ್ಮಸ್ವಭಾವತ್ವವನ್ನೂ ಹೇಳುವೆನೆಂದು (ಹೊರಟಿರುತ್ತದೆ). ಆದಕ್ಕಾಗಿ ಸುಖಾದಿವಿಕಾರಗಳುಳ್ಳ ಸತ್ತ್ವದಲ್ಲಿ ಭೋಕ್ತೃತ್ವವನ್ನು ಅಧ್ಯಾರೋಪಮಾಡಿರುತ್ತದೆ[1]. ಏಕೆಂದರೆ **ಈ ಕರ್ತೃತ್ವವೂ ಭೋಕ್ತೃತ್ವವೂ ಸತ್ತ್ವಕ್ಷೇತ್ರಜ್ಞರ ಪರಸ್ಪರಸ್ವಭಾವವನ್ನು ವಿಂಗಡಿಸಿ ತಿಳಿದುಕೊಳ್ಳದ್ದರಿಂದ ಕಲ್ಪಿತವಾಗಿರುತ್ತದೆ. ನಿಜವಾಗಿ ನೋಡಿದರೋ (ಅದು) ಇವೆರಡರಲ್ಲಿ ಒಂದಕ್ಕೂ ಹೊಂದುವಹಾಗಿರುವದಿಲ್ಲ**[2]**. ಏಕೆಂದರೆ ಸತ್ತ್ವವು ಅಚೇತನವಾಗಿರುತ್ತದೆ; ಕ್ಷೇತ್ರಜ್ಞನು ಅವಿಕಾರ್ಯನಾಗಿರುತ್ತಾನೆ. (ಸತ್ತ್ವವು) ಅವಿದ್ಯೆಯು ಮುಂದೊಡ್ಡಿದ ಸ್ವಭಾವದ್ದಾದ್ದರಿಂದ ಸತ್ತ್ವಕ್ಕಂತೂ ಸ್ವಲ್ಪವೂ ಹೊಂದುವದಿಲ್ಲ.** ಆದ್ದರಿಂದಲೇ ಶ್ರುತಿಯು "ಎಲ್ಲಿಯಾದರೆ ಮತ್ತೊಂದಿರುವಂತೆ ಇರುವದೋ ಅಲ್ಲಿ ಒಬ್ಬನು ಮತ್ತೊಂದನ್ನು ಕಂಡಾನು" (ಬೃ. ೪-೩-೩೧)- ಎಂದು ಮುಂತಾಗಿರುವ (ವಾಕ್ಯ)ದಿಂದ ಕನಸಿನಲ್ಲಿ ಕಂಡ ಆನೆಯೇ ಮುಂತಾದವುಗಳಂತೆ ಅವಿದ್ಯಾವಿಷಯದಲ್ಲಿಯೇ ಕರ್ತೃತ್ವಾದಿವ್ಯವಹಾರವಿರುವದೆಂದು ತಿಳಿಸುತ್ತದೆ. "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ಕಂಡಾನು ?" (ಬೃ. ೪-೫-೧೫) ಎಂದು ಮುಂತಾಗಿರುವ (ವಾಕ್ಯ)ದಿಂದ ವಿವೇಕಿಗೆ ಕರ್ತೃತ್ವವೇ ಮುಂತಾದ ವ್ಯವಹಾರವೇ ಇಲ್ಲವೆಂದು ತಿಳಿಸುತ್ತದೆ.

## ೪. ಅಂತರಾಧಿಕರಣ (೧೩-೧೭)

( ಛಾಂದೋಗ್ಯ ೪-೧೫ರಲ್ಲಿರುವ ಅಕ್ಷಿಪುರುಷನು ಬ್ರಹ್ಮವೇ )

**ಅಂತರ ಉಪಪತ್ತೇಃ ॥ ೧೩ ॥**

೧೩. ( ಕಣ್ಣಿನ ) ಒಳಗಿರುವ (ಪುರುಷನು ಬ್ರಹ್ಮವೇ) ; ಏಕೆಂದರೆ (ಗುಣಗಳು) ಹೊಂದುತ್ತವೆ.

---

1. ಸಾಂಖ್ಯರ ಪ್ರಕ್ರಿಯೆಯನ್ನು ಅನುಸರಿಸಿ ಆತ್ಮಸ್ವರೂಪವನ್ನು ವಿವೇಚನೆಮಾಡುವಾಗ ವೇದಾಂತಿಗಳು ಶರೀರಪ್ರಾಣಾದಿಗಳಿಗೆ ಕೆಲಕೆಲವು ಧರ್ಮಗಳನ್ನು ಅಧ್ಯಾರೋಪಮಾಡುವದು ಪರಮಸಿದ್ಧಾಂತವಲ್ಲವೆಂಬುದಕ್ಕೆ ಇದೊಂದು ಗಮಕವು,

2. ಸೂತ್ರದ ಮೊದಲನೆಯ ವ್ಯಾಖ್ಯಾನದಲ್ಲಿ ಜೀವನಲ್ಲಿ ಲೋಕಸಿದ್ಧನಾಗಿರುವ ಭೋಕ್ತೃತ್ವವನ್ನು ಅನುವಾದಮಾಡಿಕೊಂಡು ಪರಮಾತ್ಮನು ಅಭೋಕ್ತೃವೆಂದಿದೆ. ಎರಡನೆಯ ವ್ಯಾಖ್ಯಾನದಲ್ಲಿ ಕ್ಷೇತ್ರಜ್ಞನಿಗೆ ಔಪಾಧಿಕವಾಗಿ ಕರ್ತೃವು ತೋರಿದರೂ ಅವು ಪರಮಾರ್ಥವಾಗಿಲ್ಲ ಎಂದು ಹೇಳಿದೆ.

## ವಿಷಯವೂ ಸಂಶಯವೂ

( ಭಾಷ್ಯ )

೧೭೬. "ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ। ತದ್ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಞ್ಚತಿ ವರ್ತ್ಮನೀ ಏವ ಗಚ್ಛತಿ (ಛಾಂ. ೪-೧೫-೧) ಇತ್ಯಾದಿ ಶ್ರೂಯತೇ। ತತ್ರ ಸಂಶಯಃ। ಕಿಮಯಂ ಪ್ರತಿಬಿಮ್ಬಾತ್ಮಾ ಅಕ್ಷ್ಯಧಿಕರಣೋ ನಿರ್ದಿಶ್ಯತೇ, ಅಥವಾ ವಿಜ್ಞಾನಾತ್ಮಾ ಉತ ದೇವತಾತ್ಮಾ ಇನ್ದ್ರಿಯಸ್ಯ ಅಧಿಷ್ಠಾತಾ, ಅಥವಾ ಈಶ್ವರಃ ಇತಿ ॥

( ಭಾಷ್ಯಾರ್ಥ )

"ಕಣ್ಣಿನಲ್ಲಿ ಯಾವ ಈ ಪುರುಷನು ಕಾಣಿಸುತ್ತಾನೋ, ಇವನೇ ಆತ್ಮನು ಎಂದು, ಇದೇ ಅಮೃತವು, ಅಭಯವು, ಇದೇ ಬ್ರಹ್ಮವು- ಎಂದು ಹೇಳಿದನು. ಆ ಈ (ಸ್ಥಾನ)ದಲ್ಲಿ (ಕರಗಿಸಿದ) ತುಪ್ಪವನ್ನಾಗಲಿ ನೀರನ್ನಾಗಲಿ ಚಿಮುಕಿಸಿದರೆ (ಅದು) ಎರಡು ಕೊನೆಗಳನ್ನೇ ಸೇರುವದು" (ಛಾಂ. ೪-೧೫-೧) ಎಂದು ಮುಂತಾಗಿ[1] ಶ್ರುತಿಯಲ್ಲಿದೆ. ಅಲ್ಲಿ ಸಂಶಯವೇನೆಂದರೆ, ಈ (ವಾಕ್ಯದಲ್ಲಿ) ಕಣ್ಣಿನಲ್ಲಿ ಈ ಪ್ರತಿಬಿಂಬಾತ್ಮನನ್ನೇ ತಿಳಿಸಿದೆಯೆ, ಅಥವಾ ವಿಜ್ಞಾನಾತ್ಮನನ್ನು, ಇಲ್ಲವೆ ಇಂದ್ರಿಯಕ್ಕೆ ಅಧಿಷ್ಠಾತೃವಾದ ದೇವತಾತ್ಮನನ್ನು (ತಿಳಿಸಿದೆಯೆ), ಅಥವಾ ಈಶ್ವರನನ್ನು ತಿಳಿಸಿದೆಯೆ ?

## ಪೂರ್ವಪಕ್ಷ: ಛಾಯಾತ್ಮಾದಿಗಳನ್ನೇ ಇಲ್ಲಿ ತಿಳಿಸಿದೆ

( ಭಾಷ್ಯ )

೧೭೭. ಕಿಂ ತಾವತ್ ಪ್ರಾಪ್ತಮ್ ? ಛಾಯಾತ್ಮಾ ಪುರುಷಪ್ರತಿರೂಪಃ ಇತಿ। ಕುತಃ ? ತಸ್ಯ ದೃಶ್ಯಮಾನತ್ವಪ್ರಸಿದ್ಧೇಃ। "ಯ ಏಷೋಽಕ್ಷಿಣಿ

1. ಇದು ಸತ್ಯಕಾಮನು ಉಪಕೋಸಲನಿಗೆ ಹೇಳಿರುವ ಉಪಾಸನೆಯು. ಇದಕ್ಕೆ ಉಪಕೋಸಲವಿದ್ಯೆ ಎಂದು ಹೆಸರು. ವಾಕ್ಯಶೇಷಕ್ಕೆ ಅರ್ಥವು ಹೀಗಿರುವದು. "ಈತನನ್ನು ಸ್ವಂಯದ್ವಾಮನೆನ್ನುವರು ; ಏಕೆಂದರೆ ಈತನನ್ನು ಎಲ್ಲಾ ಕಾಮಗಳು ಬಂದು ಸೇರುತ್ತವೆ. ಯಾವನು ಹೀಗೆಂದು ಅರಿಯುವನೋ ಅವನನ್ನು ಎಲ್ಲಾ ಕಾಮಗಳೂ ಬಂದು ಸೇರುವವು. ಈತನೇ ವಾಮನಿ, ಏಕೆಂದರೆ ಈತನೇ ಎಲ್ಲಾ ಕಾಮಗಳನ್ನೂ ಒಯ್ದುಕೊಡುತ್ತಾನೆ ; ಯಾವನು ಹೀಗೆಂದು ಅರಿಯುವನೋ ಅವನು ಎಲ್ಲಾ ಕಾಮಗಳನ್ನೂ ಒಯ್ದುಕೊಡುತ್ತಾನೆ. ಈತನೇ ಭಾಮನೀ, ಏಕೆಂದರೆ ಈತನೇ ಎಲ್ಲಾ ಲೋಕಗಳಲ್ಲಿಯೂ ಬೆಳಗುತ್ತಿರುವನು ; ಯಾವನು ಹೀಗೆಂದು ಅರಿಯುವನೋ ಆತನು ಎಲ್ಲಾ ಲೋಕಗಳಲ್ಲಿಯೂ ಬೆಳಗುವನು" ಇದರ ಮುಂದಿನ ವಾಕ್ಯವನ್ನು ಮುಂದೆ ಕನ್ನಡಿಸಿ ಟಿಪ್ಪಣಿಯಲ್ಲಿ ಕೊಡಲಾಗುವದು.

ಪುರುಷೋ ದೃಶ್ಯತೇ" ಇತಿ ಚ ಪ್ರಸಿದ್ಧವತ್ ಉಪದೇಶಾತ್| ವಿಜ್ಞಾನಾತ್ಮನೋ ವಾ ಅಯಂ ನಿರ್ದೇಶಃ ಇತಿ ಯುಕ್ತಮ್ | ಸ ಹಿ ಚಕ್ಷುಷಾ ರೂಪಂ ಪಶ್ಯನ್ ಚಕ್ಷುಷಿ ಸನ್ನಿಹಿತೋ ಭವತಿ । ಆತ್ಮಶಬ್ದಶ್ಚ ಅಸ್ಮಿನ್ ಪಕ್ಷೇ ಅನುಕೂಲೋ ಭವತಿ । ಆದಿತ್ಯಪುರುಷೋ ವಾ ಚಕ್ಷುಷೋಽನುಗ್ರಾಹಕಃ ಪ್ರತೀಯತೇ | "ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ" (ಬೃ. ೫-೫-೨) ಇತಿ ಶ್ರುತೇಃ । ಅಮೃತತ್ವಾದೀನಾಂ ಚ ದೇವತಾತ್ಮನ್ಯಪಿ ಕಥಂಚಿತ್ ಸಂಭವಾತ್ । ನೇಶ್ವರಃ । ಸ್ಥಾನವಿಶೇಷನಿರ್ದೇಶಾತ್ ಇತಿ ॥

(ಭಾಷ್ಯಾರ್ಥ)

ಇಲ್ಲಿ ಮೊದಲು ಒದಗುವ (ಪೂರ್ವಪಕ್ಷವು) ಯಾವದು ? ಪುರುಷನ ಪ್ರತಿಬಿಂಬವಾದ ಛಾಯಾತ್ಮನನ್ನು (ಇಲ್ಲ ತಿಳಿಸಿದೆ). ಏಕೆ ? ಎಂದರೆ ಅವನು (ಮತ್ತೊಬ್ಬರಿಗೆ) ಕಂಡುಬರುತ್ತಾನೆಂಬುದು ಪ್ರಸಿದ್ಧವಾಗಿರುತ್ತದೆ. ಮತ್ತು "ಯಾವ ಈ ಪುರುಷನು ಕಣ್ಣಿನಲ್ಲಿ ಕಾಣಿಸುತ್ತಾನೋ" ಎಂಬ ವಾಕ್ಯವು (ಅವನು ಎಲ್ಲರಿಗೂ) ಪ್ರಸಿದ್ಧನಾಗಿರುವಂತೆ ಉಪದೇಶಮಾಡಿರುತ್ತದೆ:[1] ಅಥವಾ ಇದು ವಿಜ್ಞಾನಾತ್ಮನನ್ನು ತಿಳಿಸಿದ್ದು ಎಂದು (ಹೇಳುವದು) ಯುಕ್ತವು. ಏಕೆಂದರೆ ಆ (ವಿಜ್ಞಾನಾತ್ಮನು) ಕಣ್ಣಿನಿಂದ ರೂಪವನ್ನು ನೋಡುತ್ತಾ ಕಣ್ಣಿನಲ್ಲಿ ಸಂನಿಹಿತನಾಗಿರುತ್ತಾನೆ. ಈ ಪಕ್ಷದಲ್ಲಿ ಆತ್ಮನೆಂಬ ಮಾತೂ ಅನುಕೂಲವಾಗಿರುತ್ತದೆ.[2] ಅಥವಾ ಕಣ್ಣಿಗೆ ಅನುಗ್ರಾಹಕನಾಗಿರುವ ಆದಿತ್ಯಪುರುಷನು (ಈ ಮಂತ್ರದಲ್ಲಿ) ತಿಳಿಯಬರುತ್ತಾನೆ (ಎಂದಾದರೂ ಹೇಳಬಹುದು). "ಈತನು ಕಿರಣಗಳಿಂದ ಇದರಲ್ಲಿ ಇದ್ದುಕೊಂಡಿರುತ್ತಾನೆ" (ಬೃ. ೫-೫-೨) ಎಂದು ಶ್ರುತಿಯಿದೆ. ಅಮೃತನಾಗಿರುವದು ಮುಂತಾದ (ವಿಶೇಷಣಗಳು ಈ) ದೇವತಾತ್ಮನಲ್ಲಿಯೂ ಹೇಗೋ (ಒಂದು ರೀತಿಯಲ್ಲಿ)[3] ಆಗಬಹುದಾಗಿದೆ. (ಹೀಗೆ ಛಾಯಾತ್ಮಾದಿಗಳಲ್ಲಿ ಒಬ್ಬನನ್ನು[4] ಇಲ್ಲಿ ಹೇಳಿದೆ ಎಂದು ತಿಳಿಯ

---

1. ಹಿಂದೆ 'ಪಿಬನ್ತೌ' ಎಂಬ ಶ್ರುತಿಗೆ ಅನುಗುಣವಾಗಿ ಮುಂದಿನ ಗುಹಾಪ್ರವೇಶಾದಿಗಳನ್ನೂ ಹೊಂದಿಸಿದಂತೆ ಇಲ್ಲಿಯೂ 'ದೃಶ್ಯತೇ' ಎಂಬ ಮೊದಲಿರುವ ಶಬ್ದಕ್ಕೆ ಅನುಗುಣವಾಗಿ ಮಿಕ್ಕದ್ದನ್ನು ಹೊಂದಿಸಬೇಕೆಂದು ಪೂರ್ವಪಕ್ಷಿಯ ಆಶಯ.

2. ಇದು ಛಾಯಾತ್ಮನಿಗೆ ಹೊಂದುವದಿಲ್ಲ ಎಂದು ಜೀವವಾದಿಯ ಭಾವ.

3. ಗೌಣವಾಗಿ

4 ಇಲ್ಲಿ ಮುಖ್ಯವಾಗಿ ಪ್ರತಿಬಿಂಬಾತ್ಮವನ್ನೇ ಪೂರ್ವಪಕ್ಷಿಯು ಹಿಡಿದಿದ್ದಾನೆ. ಜೀವನನ್ನೂ ಆದಿತ್ಯನನ್ನೂ ಹೇಳಿರುವದಕ್ಕೆ ೧೭ನೆಯ ಸೂತ್ರದಲ್ಲಿ ಪರಿಹಾರಾಂತರವನ್ನು ಹೇಳುವದೇ ಉದ್ದೇಶ ; ಏಕೆಂದರೆ 'ಅಂತಸ್ತದ್ಧರ್ಮೋಪದೇಶಾತ್' (೧-೧-೨೦) ಎಂಬ ಸೂತ್ರದಲ್ಲಿಯೇ ಜೀವದೇವತೆಗಳನ್ನು ನಿರಾಕರಿಸಿದ್ದಾಗಿದೆ ; ದೃಶ್ಯತೇ ಎಂಬುದು ಮುಖ್ಯಾರ್ಥದಲ್ಲಿ ಅವರಿಗೆ ಹೊಂದುವದೂ ಇಲ್ಲ.

ಬೇಕೇ ಹೊರತು) ಈಶ್ವರ(ನನ್ನು ಹೇಳಿದೆ ಎನ್ನುವ)ಹಾಗಿಲ್ಲ ; ಏಕೆಂದರೆ (ಈ ಪುರುಷನಿಗೆ ಒಂದು) ಗೊತ್ತಾದ ಸ್ಥಾನವನ್ನು ಹೇಳಿದೆ.

## ಸಿದ್ಧಾಂತ: ಇಲ್ಲಿರುವ ಧರ್ಮಗಳು ಬ್ರಹ್ಮಕ್ಕೇ ಹೊಂದುತ್ತವೆ

(ಭಾಷ್ಯ)

೧೭೪. ಏವಂ ಪ್ರಾಪ್ತೇ ಬ್ರೂಮಃ। ಪರಮೇಶ್ವರ ಏವ ಅಕ್ಷಿಣ್ಯಭ್ಯನ್ತರಃ ಪುರುಷಃ ಇಹ ಉಪದಿಷ್ಟಃ ಇತಿ । ಕಸ್ಮಾತ್ ? ಉಪಪತ್ತೇಃ । ಉಪಪದ್ಯತೇ ಹಿ ಪರಮೇಶ್ವರೇ ಗುಣಜಾತಮ್ ಇಹ ಉಪದಿಶ್ಯಮಾನಮ್ । ಆತ್ಮತ್ವಂ ತಾವತ್ ಮುಖ್ಯಯಾ ವೃತ್ತ್ಯಾ ಪರಮೇಶ್ವರೇ ಉಪಪದ್ಯತೇ । "ಸ ಆತ್ಮಾ ತತ್ತ್ವಮಸಿ '' (ಛಾಂ. ೬-೮-೭) ಇತಿ ಶ್ರುತೇಃ । ಅಮೃತತ್ವಾಭಯತ್ವೇ ಚ ತಸ್ಮಿನ್ ಅಸಕೃತ್ ಶ್ರುತೌ ಶ್ರೂಯೇತೇ । ತಥಾ ಪರಮೇಶ್ವರಾನುರೂಪಮ್ ಏತದಕ್ಷಿಸ್ಥಾನಮ್ । ಯಥಾ ಹಿ ಪರಮೇಶ್ವರಃ ಸರ್ವದೋಷೈರಲಿಪ್ತಃ, ಅಪಹತಪಾಪ್ಮತ್ವಾದಿಶ್ರವಣಾತ್ । ತಥಾ ಅಕ್ಷಿಸ್ಥಾನಂ ಸರ್ವಲೇಪರಹಿತಮ್ ಉಪದಿಷ್ಟಮ್। ''ತದ್ ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಞ್ಚತಿ ವರ್ತ್ಮನೀ ಏವ ಗಚ್ಛತಿ " ಇತಿ ಶ್ರುತೇಃ । ಸಂಯದ್ವಾಮತ್ವಾದಿಗುಣೋಪದೇಶಶ್ಚ ತಸ್ಮಿನ್ ಅವಕಲ್ಪತೇ । "ಏತಂ ಸಂಯದ್ವಾಮ ಇತ್ಯಾಚಕ್ಷತೇ ಏತಂ ಹಿ ಸರ್ವಾಣಿ ವಾಮಾನ್ಯಭಿಸಂಯನ್ತಿ" (ಛಾಂ.೪-೧೫-೨), "ಏಷ ಉ ಏವ ವಾಮನೀರೇಷ ಹಿ ಸರ್ವಾಣಿ ವಾಮಾನಿ ನಯತಿ" (ಛಾಂ. ೪-೧೫-೩), ''ಏಷ ಉ ಏವ ಭಾಮನೀರೇಷ ಹಿ ಸರ್ವೇಷು ಲೋಕೇಷು ಭಾತಿ" (ಛಾಂ. ೪-೧೫-೪) ಇತಿ ಚ । ಅತ ಉಪಪತ್ತೇಃ ಅನ್ತರಃ ಪರಮೇಶ್ವರಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಪರಮೇಶ್ವರನನ್ನೇ ಇಲ್ಲಿ ಕಣ್ಣಿನೊಳಗಿರುವ ಪುರುಷನೆಂದು ಹೇಳಿರುವದು. ಏಕೆ ? ಎಂದರೆ, ಹೊಂದುವವದರಿಂದ. ಇಲ್ಲಿ ಹೇಳಿರುವ ಗುಣಸಮೂಹವು ಪರಮೇಶ್ವರನಿಗೆ ಹೊಂದುತ್ತದೆಯಲ್ಲವೆ ? (ಅದು) ಹೇಗೆಂದರೆ, ಆತ್ಮನೆಂಬುದು[1] ಮುಖ್ಯವೃತ್ತಿಯಿಂದ ಪರಮೇಶ್ವರನಿಗೇ ಹೊಂದುತ್ತದೆ ; ಏಕೆಂದರೆ "ಅದೇ ಆತ್ಮನು, ಅದೇ ನೀನಾಗಿರುವೆ " (ಛಾಂ. ೬-೮-೭) ಎಂದು

1. 'ದೃಶ್ಯತೇ' ಎಂಬ ಲಿಂಗವನ್ನು ಬಿಟ್ಟರೆ ಇಲ್ಲಿ ಛಾಯಾತ್ಮನನ್ನು ಹೇಳುವ ಮಾತು ಯಾವದೂ ಇಲ್ಲ. ಆತ್ಮ ಎಂಬುದು ಶ್ರುತಿಯಾದ್ದರಿಂದ ಈ ಲಿಂಗಕ್ಕಿಂತಲೂ ಪ್ರಬಲ, 'ಬ್ರಹ್ಮ' ಎಂಬ ಶ್ರುತಿಯೂ ಹೀಗೆಯೇ.

ಶ್ರುತಿಯುದೆ. ಅಮೃತವಾಗಿರುವದು, ಅಭಯುವಾಗಿರುವದು– ಇವೆರಡನ್ನೂ ಆ (ಬ್ರಹ್ಮಕ್ಕೆ) ಹಲವು ಸಲ ಶ್ರುತಿಯಲ್ಲಿ ಹೇಳಿರುತ್ತದೆ.[1] ಇದರಂತೆ ಈ ಕಣ್ಣೆಂಬ ಸ್ಥಾನವು ಪರಮೇಶ್ವರನಿಗೆ ಅನುಗುಣವಾಗಿದೆ. ಹೇಗೆಂದರೆ ಪರಮೇಶ್ವರನು 'ಅಪಹತಪಾಪ್ಮನು' ಎಂದು ಮುಂತಾದ ಶ್ರುತಿಯ(ಪ್ರಮಾಣದಿಂದ) ಹೇಗೆ ಯಾವ ದೋಷಗಳ ಅಂಟೂ ಇಲ್ಲದವನೋ, ಹಾಗೆಯೇ (ಈ) ಅಕ್ಷಿಸ್ಥಾನವೂ ಯಾವ ದೋಷದ (ಅಂಟೂ) ಇಲ್ಲದ್ದೆಂದು (ಇಲ್ಲಿ) ತಿಳಿಸಿದೆ. "ಈ (ಕಣ್ಣಿ)ನಲ್ಲಿ ತುಪ್ಪವನ್ನಾಗಲಿ ನೀರನ್ನಾಗಲಿ ಚಿಮುಕಿಸಿದರೂ(ಅದು ಕಣ್ಣಿನ) ಕೊನೆಗಳನ್ನೇ ಸೇರುತ್ತದೆ" ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).[2] ಈತನನ್ನು ಸಂಯದ್ವಾಮನೆಂದು ಕರೆಯುತ್ತಾರೆ; ಏಕೆಂದರೆ ಈತನನ್ನು ಎಲ್ಲಾ ವಾಮಗಳೂ ಬಂದುಸೇರುತ್ತವೆ"[3] (ಛಾಂ. ೪-೧೫-೨) ಎಂದೂ "ಈತನೇ ವಾಮನೀ; ಏಕೆಂದರೆ ಈತನೇ ಎಲ್ಲಾ ವಾಮಗಳನ್ನೂ ಒಯ್ದು ಕೊಡುತ್ತಾನೆ"[4] (ಛಾಂ. ೪-೧೫-೩) ಎಂದೂ "ಈತನೇ ಭಾಮನೀ; ಏಕೆಂದರೆ ಈತನೇ ಎಲ್ಲಾ ಲೋಕಗಳಲ್ಲಿಯೂ ಬೆಳಗುತ್ತಿರುವನು"[5] (ಛಾಂ. ೪-೧೫-೪) ಎಂದೂ ಸಂಯದ್ವಾಮತ್ವವೇ ಮುಂತಾದ ಗುಣಗಳನ್ನು ಹೇಳಿರುವದೂ ಆ (ಪರಮೇಶ್ವರನಿಗೇ) ಹೊಂದುತ್ತದೆ. ಆದ್ದರಿಂದ (ಇದೆಲ್ಲವೂ ಪರಮೇಶ್ವರನಿಗೇ) ಹೊಂದುವದರಿಂದ (ಕಣ್ಣಿನ) ಒಳಗಿನ (ಪುರುಷನು) ಪರಮೇಶ್ವರನೇ.

## ಬ್ರಹ್ಮಕ್ಕೆ ಉಪಾಸನೆಗಾಗಿ ಸ್ಥಾನಾದಿಗಳನ್ನು ಉಪದೇಶಿಸಿದೆ

**ಸ್ಥಾನಾದಿವ್ಯಪದೇಶಾಚ್ಚ ॥ ೧೪ ॥**

೧೪. ಸ್ಥಾನಾದಿಗಳನ್ನು ಹೇಳಿರುವದರಿಂದಲೂ (ಹೀಗೆ).

( ಭಾಷ್ಯ )

೧೭೯. ಕಥಂ ಪುನಃ ಆಕಾಶವತ್ ಸರ್ವಗತಸ್ಯ ಬ್ರಹ್ಮಣಃ ಅಕ್ಷ್ಯಲ್ಪಸ್ಥಾನಮ್ ಉಪಪದ್ಯತೇ ಇತಿ ? ಅತ್ರೋಚ್ಯತೇ | ಭವೇದೇಷಾ ಅನವಕ್ಲೃಪ್ತಿಃ ಯದಿ ಏತದೇವ ಏಕಂ ಸ್ಥಾನಮ್ ಅಸ್ಯ ನಿರ್ದಿಷ್ಟಂ ಭವೇತ್ | ಸನ್ತಿ ಹಿ ಅನ್ಯಾ

1. ಇವು ಬ್ರಹ್ಮಕ್ಕೆ ಅಸಾಧಾರಣಲಿಂಗಗಳು.

2. ನಿತ್ಯಶುದ್ಧತ್ವವು ಪರಮೇಶ್ವರನಿಗೆ ಅಸಾಧಾರಣಲಿಂಗವು.

3. ವಾಮಗಳೆಂದರೆ ಕಾಮಿತವಾದ ವಸ್ತುಗಳು; ಪರಮೇಶ್ವರನು ಸತ್ಯಕಾಮನು.

4. ಜೀವರುಗಳಿಗೆ ಕರ್ಮಫಲಗಳನ್ನು ಕೊಡಬಲ್ಲವನು ಪರಮೇಶ್ವರನೇ.

5. ಸೂರ್ಯಾದಿಗಳೂ ಪರಮೇಶ್ವರನ ಬೆಳಕನ್ನನುಸರಿಸಿಯೇ ಬೆಳಗುವರೆಂದು ಶ್ರುತಿಸ್ಮೃತಿಗಳಲ್ಲಿದೆ. ಇದುವರೆಗೆ ಹೇಳಿದ ಲಿಂಗಗಳೆಲ್ಲ ಬ್ರಹ್ಮಕ್ಕೇ ಹೊಂದುತ್ತವೆ.

ನ್ಯಪಿ ಪೃಥಿವ್ಯಾದೀನಿ ಸ್ಥಾನಾನಿ ಅಸ್ಯ ನಿರ್ದಿಷ್ಟಾನಿ "ಯಃ ಪೃಥಿವ್ಯಾಂ ತಿಷ್ಠನ್" (ಬೃ. ೩--೭--೩) ಇತ್ಯಾದಿನಾ । ತೇಷು ಹಿ ಚಕ್ಷುರಪಿ ನಿರ್ದಿಷ್ಟಮ್ "ಯಶ್ಚಕ್ಷುಷಿ ತಿಷ್ಠನ್" (ಬೃ. ೩-೭-೧೮) ಇತಿ । "ಸ್ಥಾನಾದಿವ್ಯಪದೇಶಾತ್" ಇತಿ ಆದಿಗ್ರಹಣೇನ ಏತದ್ ದರ್ಶಯತಿ — ನ ಕೇವಲಂ ಸ್ಥಾನಮೇವ ಏಕಮ್ ಅನುಚಿತಂ ಬ್ರಹ್ಮಣೋ ನಿರ್ದಿಶ್ಯಮಾನಂ ದೃಶ್ಯತೇ, ಕಿಂ ತರ್ಹಿ ನಾಮ, ರೂಪಮ್ – ಇತ್ಯೇವಂಜಾತೀಯಕಮಪಿ ಅನಾಮರೂಪಸ್ಯ ಬ್ರಹ್ಮಣಃ ಅನುಚಿತಂ ನಿರ್ದಿಶ್ಯಮಾನಂ ದೃಶ್ಯತೇ — "ತಸ್ಯೋದಿತಿ ನಾಮ" (ಛಾಂ.೧-೬-೭), "ಹಿರಣ್ಯಶ್ಮಶ್ರುಃ" (ಛಾಂ.೧-೬-೬) ಇತ್ಯಾದಿ। ನಿರ್ಗುಣಮಪಿ ಸದ್ ಬ್ರಹ್ಮ ನಾಮರೂಪಗತೈರ್ಗುಣೈಃ ಸಗುಣಮ್ ಉಪಾಸನಾರ್ಥಂ ತತ್ರ ತತ್ರ ಉಪದಿಶ್ಯತೇ ಇತ್ಯೇತದಪಿ ಉಕ್ತಮೇವ। ಸರ್ವಗತಸ್ಯಾಪಿ ಬ್ರಹ್ಮಣ ಉಪಲಬ್ಧ್ಯರ್ಥಂ ಸ್ಥಾನವಿಶೇಷೋ ನ ವಿರುಧ್ಯತೇ, ಶಾಲಗ್ರಾಮ ಇವ ವಿಷ್ಣೋಃ, ಇತ್ಯೇತದಪ್ಯುಕ್ತಮೇವ ॥

(ಭಾಷ್ಯಾರ್ಥ)

(ಆಕ್ಷೇಪ):–ಆದರೆ ಆಕಾಶದಂತೆ ಸರ್ವಗತವಾಗಿರುವ ಬ್ರಹ್ಮಕ್ಕೆ ಕಣ್ಣೆಂಬ ಅಲ್ಪಸ್ಥಾನವನ್ನು (ಹೇಳಿರುವದು) ಹೇಗೆ ಹೊಂದುತ್ತದೆ[1] ?

(ಸಮಾಧಾನ):– ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. ಇದೊಂದೇ ಸ್ಥಾನವನ್ನು ಈ (ಬ್ರಹ್ಮಕ್ಕೆ) ಹೇಳಿದ್ದರೆ ಇದು ಅನುಪಪತ್ತಿಯಾಗುತ್ತಿತ್ತು. (ಆದರೆ)"ಯಾವನು ಪೃಥಿವಿಯಲ್ಲಿ ಇರುವವನಾಗಿ" (ಬೃ. ೩-೭-೩) ಎಂದು ಮುಂತಾದ (ಶ್ರುತಿ)ಯಲ್ಲಿ ಈ (ಬ್ರಹ್ಮಕ್ಕೆ) ಹೇಳಿರುವ ಪೃಥಿವಿಯೇ ಮುಂತಾದ (ಇನ್ನೂ) ಬೇರೆಯ ಸ್ಥಾನಗಳೂ ಇವೆಯಷ್ಟೆ, ಆ (ಸ್ಥಾನ)ಗಳಲ್ಲಿ "ಯಾವನು ಕಣ್ಣಿನಲ್ಲಿರುವವನಾಗಿ" (ಬೃ. ೩-೭-೧೮) ಎಂದು ಕಣ್ಣನ್ನೂ ಹೇಳಿರುತ್ತದೆ.[2]

"ಸ್ಥಾನಾದಿವ್ಯಪದೇಶಾತ್" ಎಂಬಲ್ಲಿ 'ಆದಿ' (ಮುಂತಾದ) ಎಂಬ (ಮಾತನ್ನು) ಹಿಡಿದಿರುವದರಿಂದ ಈ (ಅಭಿಪ್ರಾಯವನ್ನು) ತಿಳಿಸಿದಂತೆ (ಆಯಿತು. ಏನೆಂದರೆ) : ಸ್ಥಾನವೊಂದನ್ನೇ ಅನುಚಿತವಾಗಿ ಬ್ರಹ್ಮಕ್ಕೆ (ಶ್ರುತಿಯಲ್ಲಿ) ಹೇಳಿರುವದು ಕಂಡುಬರುವದಿಲ್ಲ, ಮತ್ತೇನೆಂದರೆ "ಅವನಿಗೆ ಉತ್ ಎಂದು ಹೆಸರು" (ಛಾಂ.೧-೬-೭), "ಚಿನ್ನದ ಗಡ್ಡಮೀಸೆಗಳುಳ್ಳವನು"

---

1. ದೊಡ್ಡ ವಸ್ತುವಿಗೆ ಸಣ್ಣ ಸ್ಥಾನವನ್ನು ಹೇಳಿವೆ ಎಂಬುದು ಹೊಂದುವದಿಲ್ಲವಲ್ಲ ! ಛಾಯಾತ್ಮನಿಗಾದರೆ ಹೊಂದುತ್ತದೆ- ಎಂದು ಆಕ್ಷೇಪಕನ ಭಾವ.

2. ಅಲ್ಪವಾದ ಕಣ್ಣೆಂಬ ಒಂದೇ ಸ್ಥಾನವನ್ನು ಬ್ರಹ್ಮಕ್ಕೆ ಹೇಳಿಲ್ಲ, ಹಲವು ಸ್ಥಾನಗಳನ್ನು ಹೇಳಿವೆ ; ಆದ್ದರಿಂದ ಬ್ರಹ್ಮವು ಎಲ್ಲಾ ಕಡೆಯಲ್ಲಿಯೂ ಇರುವವೆಂಬುದಕ್ಕೆ ಅಕ್ಷಿಸ್ಥಾನವೇನೂ ಅಡ್ಡಿಯಾಗುವದಿಲ್ಲ ಎಂದು ಭಾವ.

(ಛಾಂ. ೧–೬--೬) ಎಂದು ಮುಂತಾಗಿ ನಾಮ, ರೂಪ-- ಎಂಬೀ ಜಾತಿಯ (ಬೇರೆಯ ಧರ್ಮಗಳನ್ನು) ಬ್ರಹ್ಮಕ್ಕೆ ಅನುಚಿತವಾಗಿ ಹೇಳಿರುವದು ಕಂಡುಬರುತ್ತದೆ.[1] **ಬ್ರಹ್ಮವು ನಿರ್ಗುಣವಾಗಿದ್ದುಕೊಂಡಿದ್ದರೂ ನಾಮರೂಪಗಳಿಗೆ ಸೇರಿದ ಗುಣಗಳಿಂದ ಸಗುಣವಾಗಿದೆಯೆಂದು ಉಪಾಸನೆಗಾಗಿ ಅಲ್ಲಲ್ಲಿ (ಶ್ರುತಿಯಲ್ಲಿ) ಉಪದೇಶಿಸಿರುತ್ತದೆ ಎಂಬುದನ್ನು (ಹಿಂದೆ) ಹೇಳಿಯೇ ಇದೆ. ಬ್ರಹ್ಮವು ಸರ್ವಗತವಾಗಿದ್ದರೂ, ವಿಷ್ಣುವಿಗೆ ಶಾಲಗ್ರಾಮದಂತೆ, ಉಪಾಸನೆಗಾಗಿ (ಅದಕ್ಕೆ) ಒಂದು ಗೊತ್ತಾದ ಸ್ಥಾನವನ್ನು (ಹೇಳುವದು) ವಿರುದ್ಧವಲ್ಲ ಎಂಬಿದನ್ನೂ (ಹಿಂದೆ) ಹೇಳಿಯೇ ಇದೆ.**[2]

**ಸುಖವಿಶಿಷ್ಟಾಭಿಧಾನಾದೇವ ಚ ॥ ೧೫ ॥**

೧೫. ಮತ್ತು ಸುಖವಿಶಿಷ್ಟವಾದ (ಬ್ರಹ್ಮವನ್ನು) ಹೇಳಿರುವದರಿಂದಲೇ (ಈ ಪುರುಷನು ಬ್ರಹ್ಮವೆಂದು ನಿಶ್ಚಯವಾಗುತ್ತದೆ. )

## ಪ್ರಕರಣದಿಂದಲೂ
## ಅಕ್ಷಿಪುರುಷನು ಬ್ರಹ್ಮವೆಂದೇ ತಿಳಿಯಬೇಕು

( ಭಾಷ್ಯ )

೧೮೦. ಅಪಿ ಚ ಸೈವಾತ್ರ ವಿವದಿತವ್ಯಮ್ ಕಿಂ ಬ್ರಹ್ಮ ಅಸ್ಮಿನ್ ವಾಕ್ಯೇ ಅಭಿಧೀಯತೇ ನ ವಾ ಇತಿ | ಸುಖವಿಶಿಷ್ಟಾಭಿಧಾನಾದೇವ ಬ್ರಹ್ಮತ್ವಂ ಸಿದ್ಧಮ್ । ಸುಖವಿಶಿಷ್ಟಂ ಹಿ ಬ್ರಹ್ಮ ಯದ್ ವಾಕ್ಯೋಪಕ್ರಮೇ ಪ್ರಕ್ರಾನ್ತಮ್ "ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ" ( ಛಾಂ. ೪–೧೦--೫ ) ಇತಿ, ತದೇವ ಇಹ ಅಭಿಹಿತಮ್ | ಪ್ರಕೃತಪರಿಗ್ರಹಸ್ಯ ನ್ಯಾಯ್ಯತ್ವಾತ್ "ಆಚಾರ್ಯಸ್ತು ತೇ ಗತಿಂ ವಕ್ತಾ" (ಛಾಂ. ೪--೧೪--೧೧) ಇತಿ ಚ ಗತಿಮಾತ್ರಾಭಿಧಾನಪ್ರತಿಜ್ಞಾನಾತ್ ॥

---

1. ಹಾಗಾದರೆ ಇದೆಲ್ಲವೂ ಅನುಚಿತವೆಂದೇ ಆಗಲಿ ಎಂಬ ಆಕ್ಷೇಪಕ್ಕೆ ಮುಂದಿನ ವಾಕ್ಯದಲ್ಲಿ ಸಮಾಧಾನವನ್ನು ಹೇಳಿದೆ.

2. ೧-೧-೨೦ (ಭಾ. ಭಾ. ೧೧೫) ; ೧_೨_೨ (ಭಾ. ಭಾ. ೧೫೮) ಮುಂತಾದ ಸ್ಥಲಗಳಲ್ಲಿ ಸಮಾಧಾನವನ್ನು ಹೇಳಿರುವದರಿಂದ ಇಲ್ಲಿ ಮತ್ತೆ ಆಕ್ಷೇಪವು ತಲೆಯೆತ್ತುವ ಹಾಗಿಲ್ಲ ಎಂದು ಭಾವ.

( ಭಾಷ್ಯಾರ್ಥ )

ಇದಲ್ಲದೆ ಈ ವಾಕ್ಯದಲ್ಲಿ ಬ್ರಹ್ಮವನ್ನು ಹೇಳಿದೆಯೆ, ಇಲ್ಲವೆ?-- ಎಂಬೀ (ವಿಷಯ)ದಲ್ಲಿ ವಿವಾದವನ್ನು (ಮಾಡತಕ್ಕದ್ದೇ) ಅಲ್ಲ, (ಏಕೆಂದರೆ) ಸುಖ ವಿಶಿಷ್ಟವಾದದ್ದನ್ನು ಹೇಳಿರುವದರಿಂದಲೇ (ಇದು) ಬ್ರಹ್ಮವೆಂದು ಸಿದ್ಧವಾಗುತ್ತದೆ. ಹೇಗೆಂದರೆ "ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ" (ಛಾಂ. ೪--೧೦--೪) ಎಂದು ಸುಖವಿಶಿಷ್ಟವಾದ ಯಾವ ಬ್ರಹ್ಮವನ್ನು ವಾಕ್ಯದ ಉಪಕ್ರಮದಲ್ಲಿ (ಹೇಳುವದಕ್ಕೆ) ಮೊದಲುಮಾಡಿದೆಯೋ[1] ಅದನ್ನೇ ಇಲ್ಲಿ ಹೇಳಿರುತ್ತದೆ (ಎನ್ನಬೇಕು) ; ಏಕೆಂದರೆ ಪ್ರಕೃತವಾದದ್ದನ್ನೇ ತೆಗೆದುಕೊಳ್ಳುವದು ನ್ಯಾಯವಾಗಿರುತ್ತದೆ. "ಆದರೆ ಆಚಾರ್ಯನು ನಿನಗೆ ಗತಿಯನ್ನು ಹೇಳುವನು" (ಛಾಂ. ೪--೧೪--೧) ಎಂದು (ಮುಂದೆ) ಗತಿಯನ್ನು ಮಾತ್ರ ಹೇಳುವನೆಂದು ತಿಳಿಸಿರುವದರಿಂದಲೂ[2] (ಬ್ರಹ್ಮವು ಪ್ರಕೃತವಾಗಿದೆಯೆಂದು ತಿಳಿಯಬೇಕು. )

## ಇದು ಬ್ರಹ್ಮದ ಪ್ರಕರಣವೆಂಬುದು ಹೇಗೆ?

( ಭಾಷ್ಯ )

೧೮೧. ಕಥಂ ಪುನರ್ವಾಕ್ಯೋಪಕ್ರಮೇ ಸುಖವಿಶಿಷ್ಟಂ ಬ್ರಹ್ಮ ವಿಜ್ಞಾಯತೇ ಇತಿ ? ಉಚ್ಯತೇ । "ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ" ಇತ್ಯೇತದ್ ಅಗ್ನೀನಾಂ ವಚನಂ ಶ್ರುತ್ವಾ ಉಪಕೋಸಲ ಉವಾಚ "ವಿಜಾನಾಮ್ಯಹಂ ಯತ್ ಪ್ರಾಣೋ ಬ್ರಹ್ಮ ಕಂ ಚ ಖಂ ಚ ನ ವಿಜಾನಾಮಿ ||" (ಛಾಂ. ೪–೧೦–೫) ಇತಿ । ತತ್ರ ಇದಂ ಪ್ರತಿವಚನಮ್ " ಯದ್ ವಾವ ಕಂ ತದೇವ ಖಂ ಯದೇವ ಖಂ ತದೇವ ಕಮ್" (ಛಾಂ. ೪–೧೦--೫) ಇತಿ । ತತ್ರ ಖಂಶಬ್ದೋ ಭೂತಾಕಾಶೇ ನಿರೂಢೋ ಲೋಕೇ । ಯದಿ ತಸ್ಯ

---

1. ಉಪಕೋಸಲ ಕಾಮಲಾಯನನು ಸತ್ಯಕಾಮ ಜಾಬಾಲನಲ್ಲಿ ಬ್ರಹ್ಮಚರ್ಯದಿಂದ ಇದ್ದನು. ಹನ್ನೆರಡು ವರ್ಷಗಳು ಆಚಾರ್ಯನನ್ನು ಸೇವಿಸಿದರೂ ಆತನು ಇವನಿಗೆ ವಿದ್ಯಾಭ್ಯಾಸವನ್ನು ಪೂರ್ತಿಹೇಳಿಸಲಿಲ್ಲ. ಬಹಳ ವ್ಯಥೆಪಡುತ್ತಿದ್ದ ಉಪಕೋಸಲನಿಗೆ ಅವನ ಸೇವೆಯಿಂದ ಪ್ರಸನ್ನರಾಗಿದ್ದ ಅಗ್ನಿಗಳು ಮಾಡಿದ ಉಪದೇಶದ ವಾಕ್ಯವಿದು. ಇದೇ ಪ್ರಕೃತ ವಾಕ್ಯದ ಪ್ರಕರಣದ ಪ್ರಾರಂಭವು.

2. ಅಗ್ನಿಗಳು ಉಪದೇಶಿಸಿರುವ ಬ್ರಹ್ಮವಿದ್ಯೆಯನ್ನು ಅನುಷ್ಠಾನಮಾಡಿದ ಉಪಾಸಕನಿಗೇ ಆಚಾರ್ಯನು ಮುಂದೆ ಗತಿಯನ್ನು ಹೇಳಿರುತ್ತಾನೆ. ಆದ್ದರಿಂದಲೂ ಅಕ್ಷಿಪುರುಷನು ಬ್ರಹ್ಮವು.

ವಿಶೇಷಣತ್ವೇನ ಕಂಶಬ್ದಃ ಸುಖವಾಚೀ ನೋಪಾದೀಯೇತ, ತಥಾ ಸತಿ ಕೇವಲೇ ಭೂತಾಕಾಶೇ ಬ್ರಹ್ಮಶಬ್ದೋ ನಾಮಾದಿಷ್ವಿವ ಪ್ರತೀಕಾಭಿಪ್ರಾಯೇಣ ಪ್ರಯುಕ್ತಃ ಇತಿ ಪ್ರತೀತಿಃ ಸ್ಯಾತ್, ತಥಾ ಕಂಶಬ್ದಸ್ಯ ವಿಷಯೇನ್ದ್ರಿಯ ಸಂಪರ್ಕಜನಿತೇ ಸಾಮಯೇ ಸುಖೇ ಪ್ರಸಿದ್ಧತ್ವಾತ್ ಯದಿ ತಸ್ಯ ಖಂಶಬ್ದೋ ವಿಶೇಷಣತ್ವೇನ ನೋಪಾದೀಯೇತ ಲೌಕಿಕಃ ಸುಖಂ ಬ್ರಹ್ಮ ಇತಿ ಪ್ರತೀತಿಃ ಸ್ಯಾತ್ । ಇತರೇತರವಿಶೇಷಿತೌ ತು ಕಂಖಂಶಬ್ದೌ ಸುಖಾತ್ಮಕಂ ಬ್ರಹ್ಮ ಗಮಯತಃ । ತತ್ರ ದ್ವಿತೀಯೇ ಬ್ರಹ್ಮಶಬ್ದೇ ಅನುಪಾದೀಯಮಾನೇ 'ಕಂ ಖಂ ಬ್ರಹ್ಮ' ಇತ್ಯೇವ ಉಚ್ಯಮಾನೇ ಕಂಶಬ್ದಸ್ಯ ವಿಶೇಷಣತ್ವೇನೈವ ಉಪಯುಕ್ತತ್ವಾತ್, ಸುಖಸ್ಯ ಗುಣಸ್ಯ ಅಧ್ಯೇಯತ್ವಂ ಸ್ಯಾತ್ । ತನ್ಮಾಭೂತ್ ಇತಿ ಉಭಯೋಃ ಕಂಖಂ ಶಬ್ದಯೋಃ ಬ್ರಹ್ಮಶಬ್ದಶಿರಸ್ತ್ವಂ "ಕಂ ಬ್ರಹ್ಮ ಖಂ ಬ್ರಹ್ಮ" ಇತಿ । ಇಷ್ಟಂ ಹಿ ಸುಖಸ್ಯಾಪಿ ಗುಣಸ್ಯ ಗುಣಿವದ್ ಧ್ಯೇಯತ್ವಮ್ । ತದೇವಂ ವಾಕ್ಯೋಪಕ್ರಮೇ ಸುಖವಿಶಿಷ್ಟಂ ಬ್ರಹ್ಮ ಉಪದಿಷ್ಟಮ್ ॥

(ಭಾಷ್ಯಾರ್ಥ)

ಪ್ರಶ್ನೆ :- ಹಾಗಾದರೆ, ವಾಕ್ಯದ ಉಪಕ್ರಮದಲ್ಲಿ ಸುಖವಿಶಿಷ್ಟವಾದ (ಬ್ರಹ್ಮವನ್ನು ಹೇಳಿದೆಯೆಂದು) ಹೇಗೆ ಗೊತ್ತಾಗುತ್ತದೆ ?

(ಉತ್ತರ):- ಹೇಳುತ್ತೇವೆ, (ಕೇಳು). "ಪ್ರಾಣವು ಬ್ರಹ್ಮವು, ಕಂ (ಸುಖವು) ಬ್ರಹ್ಮವು, ಖಂ (ಆಕಾಶವು) ಬ್ರಹ್ಮವು" ಎಂಬ ಅಗ್ನಿಗಳ ವಚನವನ್ನು ಕೇಳಿದ **ಉಪಕೋಸಲನು** "ಪ್ರಾಣವು ಬ್ರಹ್ಮವೆಂಬುದನ್ನು ನಾನು ಬಲ್ಲೆನು ; ಆದರೆ ಕಂ ಎಂಬುದು (ಬ್ರಹ್ಮವೆಂಬುದನ್ನೂ) ಖಂ ಎಂಬುದು (ಬ್ರಹ್ಮವೆಂಬುದನ್ನೂ) ಅರಿಯೆನು"[1] (ಛಾಂ. ೪--೧೦--೫) ಎಂದನು. ಅದಕ್ಕೆ ಇದು (ಅಗ್ನಿಗಳ) ಉತ್ತರವು : "ಯಾವದು ಕಂ ಎಂಬುದೋ ಅದೇ ಖಂ ಎಂಬುದು; ಯಾವದು ಖಂ ಎಂಬುದೋ ಅದೇ ಕಂ ಎಂಬುದು." ಇಲ್ಲಿ ಖಂ ಎಂಬ ಶಬ್ದವು ಲೋಕದಲ್ಲಿ ಭೂತಾಕಾಶವಲ್ಲಿ ರೂಢವಾಗಿರುತ್ತದೆ. ಅದಕ್ಕೆ ವಿಶೇಷಣವಾಗಿ ಸುಖವಾಚಕವಾದ ಕಂಶಬ್ದವನ್ನು ತೆಗೆದುಕೊಳ್ಳದೆಹೋಗಿದ್ದರೆ ಆ (ಪಕ್ಷದಲ್ಲಿ) ನಾಮಾದಿಗಳಲ್ಲಿ ಹೇಗೋ ಹಾಗೆ ಬರಿಯ ಭೂತಾಕಾಶ(ವನ್ನು ತಿಳಿಸುವದಕ್ಕೇ ಅದು ಬ್ರಹ್ಮಕ್ಕೆ) **ಪ್ರತೀಕವೆಂಬ**[2] ಅಭಿಪ್ರಾಯದಿಂದ ಬ್ರಹ್ಮಶಬ್ದವನ್ನು ಪ್ರಯೋ

1. ಪ್ರಾಣನು ಅಥವಾ ಸೂತ್ರಾತ್ಮನು ಬ್ರಹ್ಮವಾಗಬಹುದು ; ಆದರೆ ವಿಷಯಸುಖವೂ ಆಕಾಶವೂ ಬ್ರಹ್ಮವೆಂಬುದು ಹೇಗೆ ?_ ಎಂದು ಪ್ರಶ್ನೆ.

2. ಒಂದು ವಸ್ತುವನ್ನು ತಿಳಿಸುವ ದೃಷ್ಟಿಯನ್ನು ಮತ್ತೊಂದರಲ್ಲಿಡುವದು **ಪ್ರತೀಕೋಪಾಸನೆ,** 'ಖಂ ಬ್ರಹ್ಮ' ಎಂದಿಷ್ಟೇ ಹೇಳಿದ್ದರೆ ಆಕಾಶವನ್ನು ಬ್ರಹ್ಮದೃಷ್ಟಿಯಿಂದ ಉಪಾಸನೆಮಾಡಬೇಕೆಂದು ಪ್ರತೀಕೋಪಾಸನೆಯನ್ನು ಹೇಳಿದಂತಾಗುತ್ತಿತ್ತು ಎಂದು ಭಾಷ್ಯವಾಕ್ಯಾರ್ಥ.

ಗಿಸಿವೆ ಎಂಬ ಅರಿವು ಆಗುತ್ತಿತ್ತು. ಹೀಗೆಯೇ ಕಂಶಬ್ದವು ವಿಷಯೇಂದ್ರಿಯುಗಳ ಸಂಯೋಗದಿಂದ ಉಂಟಾಗುವ ದೋಷಯುಕ್ತಸುಖ(ವನ್ನು ತಿಳಿಸುವದೆಂದು) ಪ್ರಸಿದ್ಧವಾಗಿರುವದರಿಂದ, ಅದಕ್ಕೆ ಖಂಶಬ್ದವನ್ನು ವಿಶೇಷಣವಾಗಿ ತೆಗೆದುಕೊಳ್ಳದಿದ್ದರೆ ಲೌಕಿಕಸುಖವೇ ಬ್ರಹ್ಮವು ಎಂಬ ಅರಿವು ಆಗುತ್ತಿತ್ತು. (ಇದಕ್ಕೆ ಬದಲು) ಕಂಖಂಶಬ್ದಗಳನ್ನು ಒಂದಕ್ಕೊಂದು ವಿಶೇಷಣವಾಗಿ (ಮಾಡಿದರೊ, ಎಂದರೆ) ಸುಖರೂಪವಾದ ಬ್ರಹ್ಮವನ್ನು ತಿಳಿಸುತ್ತವೆ. ಇಲ್ಲಿ ಎರಡನೆಯ ಬ್ರಹ್ಮಶಬ್ದವನ್ನು ತೆಗೆದುಕೊಳ್ಳದೆ 'ಕಂ ಖಂ ಬ್ರಹ್ಮ' ಎಂದಿಷ್ಟೇ ಹೇಳಿದ್ದರೆ ಕಂಶಬ್ದವು ವಿಶೇಷಣವಾಗಿಯೇ ಉಪಯೋಗವಾಗಿರುವದರಿಂದ ಸುಖವೆಂಬ ಗುಣವನ್ನು ಧ್ಯಾನಮಾಡತಕ್ಕದ್ದಲ್ಲ ಎಂದಾಗುತ್ತಿತ್ತು; ಹಾಗಾಗಬಾರದು ಎಂದು ಕಂಖಂಶಬ್ದಗಳೆರಡಕ್ಕೂ ಬ್ರಹ್ಮಶಬ್ದವನ್ನು ಮುಂದೆ ಹಾಕಿ "ಕಂ ಬ್ರಹ್ಮ ಖಂ ಬ್ರಹ್ಮ" ಎಂದು (ಹೇಳಿರುತ್ತದೆ). ಏಕೆಂದರೆ ಗುಣಿಯಾದ ಬ್ರಹ್ಮದಂತೆ ಗುಣವಾದ ಸುಖವನ್ನೂ ಧ್ಯಾನಮಾಡಬೇಕೆಂಬುದು (ಈ ಶ್ರುತಿಗೆ) ಇಷ್ಟವಾಗಿರುತ್ತದೆ.[1] ಅಂತು ಹೀಗೆ ವಾಕ್ಯದ ಉಪಕ್ರಮದಲ್ಲಿ ಸುಖವಿಶಿಷ್ಟವಾದ ಬ್ರಹ್ಮವನ್ನು ಉಪದೇಶಿಸಿರುತ್ತದೆ.

## ಸತ್ಯಕಾಮನು ಪ್ರಕೃತಬ್ರಹ್ಮವನ್ನೇ ಹೇಳಿರುತ್ತಾನೆಯೆ?

(ಭಾಷ್ಯ)

೧೮೨. ಪ್ರತ್ಯೇಕಂ ಚ ಗಾರ್ಹಪತ್ಯಾದಯೋಽಗ್ನಯಃ ಸ್ವಂ ಸ್ವಂ ಮಹಿಮಾನಮ್ ಉಪದಿಶ್ಯ "ಏಷಾ ಸೋಮ್ಯ ತೇಽಸ್ಮದ್ವಿದ್ಯಾತ್ಮವಿದ್ಯಾ ಚ" (ಛಾಂ. ೪-೧೪-೧) ಇತಿ ಉಪಸಂಹರನ್ತಃ ಪೂರ್ವತ್ರ ಬ್ರಹ್ಮ ನಿರ್ದಿಷ್ಟಮ್ ಇತಿ ಜ್ಞಾಪಯನ್ತಿ । "ಆಚಾರ್ಯಸ್ತು ತೇ ಗತಿಂ ವಕ್ತಾ" (ಛಾಂ.೪-೧-೪೧) ಇತಿ ಗತಿಮಾತ್ರಾಭಿಧಾನಪ್ರತಿಜ್ಞಾನಮ್ ಅರ್ಥಾನ್ತರವಿವಕ್ಷಾಂ ವಾರಯತಿ । "ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯನ್ತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ" (ಛಾಂ. ೪--೧೪--೩) ಇತಿ ಚ ಅಕ್ಷಿಸ್ಥಾನಂ ಪುರುಷಂ ವಿಜಾನತಃ ಪಾಪೇನ ಅನುಪಘಾತಂ ಬ್ರುವನ್ ಅಕ್ಷಿಸ್ಥಾನಸ್ಯ ಪುರುಷಸ್ಯ ಬ್ರಹ್ಮತ್ವಂ ದರ್ಶಯತಿ । ತಸ್ಮಾತ್ ಪ್ರಕೃತಸ್ಯೈವ ಬ್ರಹ್ಮಣಃ, ಅಕ್ಷಿಸ್ಥಾನತಾಂ ಸಂಯದ್ವಾಮತ್ವಾದಿಗುಣತಾಂ ಚ ಉಕ್ತ್ವಾ ಅರ್ಚಿರಾದಿಕಾಂ ತದ್ವಿದೋ ಗತಿಂ ವಕ್ಷ್ಯಾಮಿ ಇತ್ಯುಪಕ್ರಮತೇ "ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚ" (ಛಾಂ. ೪--೧೫--೧) ಇತಿ ॥

1. ಯಾವ ಗುಣವುಳ್ಳದ್ದೆಂದು ಬ್ರಹ್ಮವನ್ನು ಉಪಾಸನೆಮಾಡಬೇಕೆಂದು ವಿಧಿಸಿರುತ್ತದೆಯೋ ಆ ಗುಣವನ್ನೂ ಉಪಾಸನೆಮಾಡಬೇಕೆಂದೂ ಹಾಗೆ ಉಪಾಸನೆಮಾಡಿದರೇ ಉಕ್ತಫಲವೆಂದೂ ಶ್ರುತಿಯ ಅಭಿಪ್ರಾಯ.

( ಭಾಷ್ಯಾರ್ಥ )

ಗಾರ್ಹಪತ್ಯವೇ ಮುಂತಾದ ಅಗ್ನಿಗಳು ಒಂದೊಂದಾಗಿ ತಮ್ಮತಮ್ಮ ಮಹಿಮೆಯನ್ನು ಉಪದೇಶಿಸಿ "ಸೋಮ್ಯನೆ, ನಿನಗೆ ಈ ನಮ್ಮ ವಿದ್ಯೆಯನ್ನೂ ಆತ್ಮವಿದ್ಯೆಯನ್ನೂ (ಹೇಳಿರುತ್ತೇವೆ.)" (ಛಾಂ. ೪-೧೪-೧) ಎಂದು ಉಪಸಂಹಾರಮಾಡಿರುವದರಿಂದ[1] ಹಿಂದಿನ (ವಾಕ್ಯ)ದಲ್ಲಿ ಬ್ರಹ್ಮವನ್ನು ಹೇಳಿದೆ ಎಂದು ತಿಳಿಸಿಕೊಟ್ಟಿರುತ್ತವೆ. "ಆದರೆ ಆಚಾರ್ಯನು ನಿನಗೆ ಗತಿಯನ್ನು ಹೇಳುವನು" (ಛಾಂ. ೪-೧೪-೧) ಎಂದು (ಮುಂದೆ) ಗತಿಮಾತ್ರವನ್ನು ಹೇಳುವನೆಂದು ತಿಳಿಸಿರುವದು ಮತ್ತೊಂದು ವಿಷಯವನ್ನು ತಿಳಿಸುವ ಅಭಿಪ್ರಾಯ(ವಿದೆಯೆಂಬುದನ್ನು) ಅಲ್ಲಗಳೆಯುತ್ತದೆ[2]. ಮತ್ತು ಹೇಗೆ ಕಮಲದೆಲೆಗೆ ನೀರು ಅಂಟುವದಿಲ್ಲವೋ, ಹಾಗೆಯೇ ಹೀಗೆಂದು ಉಪಾಸನೆಮಾಡಿದವನಿಗೆ ಪಾಪಕರ್ಮವು ಅಂಟುವದಿಲ್ಲ" (ಛಾಂ. ೪-೧೪-೩) ಎಂದು ಕಣ್ಣೆಂಬ ಸ್ಥಾನದಲ್ಲಿರುವ ಪುರುಷನನ್ನು ಉಪಾಸನೆಮಾಡುವವನಿಗೆ ಪಾಪದ ಹೊಡೆತವಿಲ್ಲವೆಂದು ಹೇಳುವದರಿಂದ (ಸತ್ಯಕಾಮನು) ಅಕ್ಷಿಸ್ಥಾನದ ಪುರುಷನು ಬ್ರಹ್ಮವೆಂದು ತಿಳಿಸಿರುತ್ತಾನೆ[3]. ಆದ್ದರಿಂದ ಪ್ರಕೃತವೇ ಆಗಿರುವ ಬ್ರಹ್ಮಕ್ಕೆ ಕಣ್ಣೆಂಬ ಸ್ಥಾನವನ್ನೂ ಸಂಯದ್ವಾಮತ್ವವೇ ಮುಂತಾದ ಗುಣಗಳನ್ನೂ ಹೇಳಿ[4] ಅದನ್ನು ಉಪಾಸನೆಮಾಡಿದವನಿಗೆ **ಅರ್ಚಿರಾದಿಗತಿಯನ್ನೂ** ಹೇಳೋಣವೆಂದು "ಕಣ್ಣಿನಲ್ಲಿ ಯಾವ ಈ ಪುರುಷನು ಕಾಣುವನೋ ಇವನೇ ಆತ್ಮನು" (ಛಾಂ. ೪-೧೫ ೧) ಎಂದು ಉಪಕ್ರಮಿಸಿರುತ್ತಾನೆ (ಎಂದು ಸಿದ್ಧವಾಯಿತು.).

---

1. ಅಗ್ನಿಗಳು ಒಟ್ಟುಗೂಡಿ ಬ್ರಹ್ಮವಿದ್ಯೆಯನ್ನು ಉಪದೇಶಿಸಿದವು. ಬಳಿಕ ಗಾರ್ಹಪತ್ಯವು ಪೃಥಿವಿ, ಅಗ್ನಿ, ಅನ್ನ, ಆದಿತ್ಯ- ಇವು ನನ್ನ ತನುಗಳು, ಆದಿತ್ಯನಲ್ಲಿರುವ ಈ ಪುರುಷನೇ ನಾನು (೪-೧೧-೧) ಎಂದೂ ಅನ್ವಾಹಾರ್ಯಪಚನವು ಅಪ್ಪು, ದಿಕ್ಕುಗಳು, ನಕ್ಷತ್ರಗಳು, ಚಂದ್ರ- ಇವು ನನ್ನ ತನುಗಳು, ಚಂದ್ರನಲ್ಲಿರುವ ಈ ಪುರುಷನೇ ನಾನು (೪-೧೨-೧) ಎಂದೂ ಆಹವನೀಯವು ಪ್ರಾಣ, ಆಕಾಶ, ದ್ಯುಲೋಕ, ವಿದ್ಯುತ್ತು- ಇವು ನನ್ನ ತನುಗಳು, ವಿದ್ಯುತ್ತಿನಲ್ಲಿರುವ ಈ ಪುರುಷನೇ ನಾನು (೪-೧೩-೧) ಎಂದೂ ತಮ್ಮತಮ್ಮ ಮಹಿಮೆಯನ್ನು ಪ್ರತ್ಯೇಕವಾಗಿ ಹೇಳಿ 'ಬೇರೆಬೇರೆಯಾಗಿ ನಾವು ಹೇಳಿರುವದು ನಮ್ಮನಮ್ಮ ಅಗ್ನಿವಿದ್ಯೆ ; ಮೊದಲು ನಾವೆಲ್ಲರೂ ಸೇರಿ ಹೇಳಿರುವದು ಆತ್ಮವಿದ್ಯೆ'- ಎಂದು ಉಪಸಂಹಾರಮಾಡಿವೆ.

2. ಅಗ್ನಿಗಳು ಹೇಳಿದ್ದು ಆತ್ಮವಿದ್ಯೆ, ಸತ್ಯಕಾಮನು ಹೇಳಿದ್ದು ಛಾಯಾತ್ಮವಿದ್ಯೆ- ಎಂದು ಬೇರೆಬೇರೆಯಾಗಿರಬಾರದೇಕೆ ?- ಎಂಬ ಆಕ್ಷೇಪಕ್ಕೆ ಪರಿಹಾರವಿದು.

3. ಏಕೆಂದರೆ ಪಾಪಪುಣ್ಯಗಳ ಸಂಬಂಧವಿಲ್ಲದಿರುವದು ಬ್ರಹ್ಮಕ್ಕೆ ಮಾತ್ರ.

4. ಈ ಸ್ಥಾನವೂ ಗುಣಗಳೂ ಉಪಾಸ್ಯವಾಗಿರುತ್ತವೆಯಾದ್ದರಿಂದ ಇವಿಲ್ಲದೆ ವಿದ್ಯೆಯು ಪೂರ್ತಿಯಾಗುವದಿಲ್ಲ.

**ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ॥ ೧೬ ॥**

೧೬. ಉಪಾಸನೆಯನ್ನು ಶ್ರವಣಮಾಡಿದವನ ಗತಿಯನ್ನು ಹೇಳಿರುವದರಿಂದಲೂ (ಅಕ್ಷಿಪುರುಷನು ಬ್ರಹ್ಮವೇ).

ದೇವಯಾನಗತಿಯನ್ನು ಹೇಳಿರುವದರಿಂದ ಇದು ಬ್ರಹ್ಮವೇ

( ಭಾಷ್ಯ )

೧೮೩. ಇತಶ್ಚ ಅಕ್ಷಿಸ್ಥಾನಃ ಪುರುಷಃ ಪರಮೇಶ್ವರಃ । ಯಸ್ಮಾತ್ ಶ್ರುತೋಪನಿಷತ್ಕಸ್ಯ ಶ್ರುತರಹಸ್ಯವಿಜ್ಞಾನಸ್ಯ ಬ್ರಹ್ಮವಿದಃ ಯಾ ಗತಿಃ ದೇವಯಾನಾಖ್ಯಾ ಪ್ರಸಿದ್ಧಾ ಶ್ರುತೌ– "ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾತ್ಮಾನಮನ್ವಿಷ್ಯಾದಿತ್ಯಮಭಿಜಯನ್ತೇ । ಏತದ್ವೈ ಪ್ರಾಣಾನಾಮಾಯತನಮೇತದಮೃತಮಭಯಮೇತತ್ ಪರಾಯಣಮೇತಸ್ಮಾನ್ನ ಪುನರಾವರ್ತನ್ತೇ" (ಪ್ರ. ೧–೧೦) ಇತಿ । ಸ್ಮೃತಾವಪಿ "ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ । ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ" (ಗೀ. ೮–೨೪) ಇತಿ । ಸೈವ ಇಹ ಅಕ್ಷಿಪುರುಷವಿದೋಽಭಿಧೀಯಮಾನಾ ದೃಶ್ಯತೇ । "ಅಥ ಯದು ಚೈವಾಸ್ಮಿಞ್ಛವ್ಯಂ ಕುರ್ವನ್ತಿ ಯದಿ ಚ ನಾರ್ಚಿಷಮೇವಾಭಿಸಂಭವನ್ತಿ" ಇತ್ಯುಪಕ್ರಮ್ಯ "ಆದಿತ್ಯಾಚ್ಚನ್ದ್ರಮಸಂ ಚನ್ದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ ಸ ಏನಾನ್ ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತನ್ತೇ" (ಛಾಂ. ೪-೧೫-೫) ಇತಿ । ತದಿಹ ಬ್ರಹ್ಮವಿದ್ವಿಷಯಯಾ ಪ್ರಸಿದ್ಧಯಾ ಗತ್ಯಾ ಅಕ್ಷಿಸ್ಥಾನಸ್ಯ ಬ್ರಹ್ಮತ್ವಂ ನಿಶ್ಚೀಯತೇ ॥

( ಭಾಷ್ಯಾರ್ಥ )

ಈ (ಕಾರಣ)ದಿಂದಲೂ ಅಕ್ಷಿಸ್ಥಾನದಲ್ಲಿರುವ ಪುರುಷನು ಪರಮೇಶ್ವರನೇ. ಏಕೆಂದರೆ ಶ್ರುತೋಪನಿಷತ್ಕನಿಗೆ ಎಂದರೆ ರಹಸ್ಯವಾದ ಜ್ಞಾನವನ್ನು ಶ್ರವಣಮಾಡಿರುವ ಬ್ರಹ್ಮಜ್ಞಾನಿಗೆ[1] "ಇನ್ನು ಉತ್ತರ(ಮಾರ್ಗ)ದಿಂದ (ಹೋಗುವವರು) ತಪಸ್ಸಿನಿಂದಲೂ ಬ್ರಹ್ಮಚರ್ಯೆಯಿಂದಲೂ ಶ್ರದ್ಧೆಯಿಂದಲೂ ವಿದ್ಯೆಯಿಂದಲೂ ಆತ್ಮನನ್ನು ಹುಡುಕುವವರಾಗಿ ಆದಿತ್ಯನನ್ನು ಗೆದ್ದುಕೊಳ್ಳುವರು.

1. ಉಪಾಸಕನಿಗೆ.

ಇದೇ ಪ್ರಾಣಗಳಿಗೆ ನೆಲೆ; ಇದು ಅಮೃತವು, ಅಭಯವು; ಇದು ಪರಾ ಯಣವು. ಇದರಿಂದ ಮತ್ತೆ ಹಿಂತಿರುಗುವದಿಲ್ಲ" (ಪ್ರ. ೧-೧೦) ಶ್ರುತಿ ಯಲ್ಲಿಯೂ "ಅಗ್ನಿ, ಜ್ಯೋತಿ, ಅಹಸ್ಸು, ಶುಕ್ಲ( ಪಕ್ಷ), ಉತ್ತರಾಯಣ- ಎಂಬ ಆರು ಮಾಸಗಳು- ಇದರಲ್ಲಿ ಪ್ರಯಾಣಮಾಡಿದ ಬ್ರಹ್ಮವಿದರಾದ ಜನರು ಬ್ರಹ್ಮವನ್ನು ಸೇರುತ್ತಾರೆ" (ಗೀ. ೮-೨೪) ಎಂದು ಸ್ಮೃತಿಯಲ್ಲಿಯೂ ಯಾವ **ದೇವಯಾನ**ವೆಂಬ ಗತಿಯು[1] ಪ್ರಸಿದ್ಧವಾಗಿರುತ್ತದೆಯೋ ಅದೇ (ಗತಿಯನ್ನೇ) ಇಲ್ಲಿ "ಇನ್ನು ಈತನಿಗೆ ಶವಕರ್ಮವನ್ನು ಮಾಡಲಿ ಬಿಡಲಿ, ( ಇಂಥ ಉಪಾ ಸಕರು) ಅರ್ಚಿಯನ್ನೇ ಸೇರುವರು"- ಎಂದು ಉಪಕ್ರಮಿಸಿ "ಆದಿತ್ಯನಿಂದ ಚಂದ್ರನನ್ನು, ಚಂದ್ರನಿಂದ ವಿದ್ಯುತ್ತನ್ನೂ (ಸೇರುವರು). ಅಲ್ಲಿ ಅಮಾನವ ಪುರುಷನು (ಬರುವನು); ಅವನು ಇವರನ್ನು ಬ್ರಹ್ಮವನ್ನು ಸೇರಿಸುವನು. ಇದೇ ದೇವಪಥವು, ಬ್ರಹ್ಮಪಥವು; ಇದರಿಂದ (ಬ್ರಹ್ಮವನ್ನು) ಸೇರುವವರು ಈ ಮಾನವ ಆವರ್ತವನ್ನು (ಮತ್ತೆ ಸೇರಿ) ಸುತ್ತುವದಿಲ್ಲ" (ಛಾಂ. ೪-೧೫-೫) ಎಂದು ಅಕ್ಷಿಪುರುಷೋಪಾಸಕನಿಗೆ ಹೇಳಿರುವದು ಕಂಡುಬರುತ್ತದೆ[2]. ಆದ್ದರಿಂದ ಇಲ್ಲಿ (ಹೇಳಿರುವ) ಬ್ರಹ್ಮೋಪಾಸಕನ ವಿಷಯವಾದ ಪ್ರಸಿದ್ಧವಾದ ಗತಿಯಿಂದ ಅಕ್ಷಿಸ್ಥಾನ(ದಲ್ಲಿರುವ ಪುರುಷನು) ಬ್ರಹ್ಮವೇ ಎಂದು ನಿಶ್ಚಯವಾಗುತ್ತದೆ.

**ಅನವಸ್ಥಿತೇರಸಂಭವಾಚ್ಚ ನೇತರಃ ॥ ೧೭ ॥**

೧೭. ನಿಲ್ಲದಿರುವದರಿಂದಲೂ ಹೊಂದುವದಿಲ್ಲವಾದ್ದರಿಂದ ಲೂ ಇನ್ನೊಬ್ಬನಲ್ಲ.

## ಛಾಯಾತ್ಮಾದಿಗಳಿಗೆ ನಿಲುಗಡೆಯಿಲ್ಲ, ಗುಣಗಳು ಹೊಂದುವದೂ ಇಲ್ಲ

**(ಭಾಷ್ಯ)**

೧೮೪. ಯತ್ಪುನರುಕ್ತಮ್-- ಛಾಯಾತ್ಮಾ, ವಿಜ್ಞಾನಾತ್ಮಾ, ದೇವ ತಾತ್ಮಾ ವಾ ಸ್ಯಾತ್ ಅಕ್ಷಿಸ್ಥಾನಃ ಇತಿ । ಅತ್ರೋಚ್ಯತೇ ನ ಛಾಯಾತ್ಮಾದಿಃ

---

1. ಈ ಗತಿಯ ವಿಚಾರವನ್ನು ಮುಂದೆ ೪-೩-೧ರಿಂದ ೬ರವರೆಗಿನ ಸೂತ್ರಗಳಲ್ಲಿ ಮಾಡಿರುತ್ತದೆ.

2. ಅಗ್ನಿವಿದ್ಯೆಗೂ ಬ್ರಹ್ಮದ ಒಂದೊಂದು ಗುಣವನ್ನು ಉಪಾಸನೆಮಾಡುವವರಿಗೂ ಬೇರೆಬೇರೆಯ ಫಲವನ್ನು ಹೇಳಿ ಕೊನೆಯಲ್ಲಿ ಅಕ್ಷಿಪುರುಷನ ವಿದ್ಯೆಗೆ ಈ ಗತಿಯನ್ನು ಹೇಳಿರುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯನ್ನೇ ಇಲ್ಲಿ ಹೇಳಿದೆ ಎಂದು ಗೊತ್ತಾಗುತ್ತದೆ.

ಇತರಃ ಇಹ ಗ್ರಹಣಮರ್ಹತಿ । ಕಸ್ಮಾತ್ । ಅನವಸ್ಥಿತೇಃ? ನ ತಾವತ್ ಛಾಯಾತ್ಮನಃ ಚಕ್ಷುಷಿ ನಿತ್ಯಮ್ ಅವಸ್ಥಾನಂ ಸಂಭವತಿ । ಯದೈವ ಹಿ ಕಶ್ಚಿತ್ ಪುರುಷಃ ಚಕ್ಷುರಾಸೀದಿತಿ ತದಾ ಚಕ್ಷುಷಿ ಪುರುಷಚ್ಛಾಯಾ ದೃಶ್ಯತೇ, ಅಪಗತೇ ತಸ್ಮಿನ್ ನ ದೃಶ್ಯತೇ "ಯ ಏಷೋಽಕ್ಷಿಣಿ ಪುರುಷಃ" ಇತಿ ಚ ಶ್ರುತಿಃ ಸಂನಿಧಾನಾತ್ ಸ್ವಚಕ್ಷುಷಿ ದೃಶ್ಯಮಾನಂ ಪುರುಷಮ್ ಉಪಾಸ್ಯತ್ವೇನ ಉಪದಿಶತಿ ನ ಚ ಉಪಾಸನಾಕಾಲೇ ಛಾಯಾಕರಂ ಕಂಚಿತ್ ಪುರುಷಂ ಚಕ್ಷುಃಸಮೀಪೇ ಸಂನಿಧಾಪ್ಯ ಉಪಾಸ್ತೇ ಇತಿ ಯುಕ್ತಂ ಕಲ್ಪಯಿತುಮ್ । "ಅಸ್ಯೈವ ಶರೀರಸ್ಯ ನಾಶಮನ್ವೇಷ ನಶ್ಯತಿ" ( ಛಾಂ. ೮-೯-೧ ) ಇತಿ ಶ್ರುತಿಃ ಛಾಯಾತ್ಮನೋಽಪಿ ಅನವಸ್ಥಿತತ್ವಂ ದರ್ಶಯತಿ । ಅಸಂಭವಾಚ್ಚ ತಸ್ಮಿನ್ ಅಮೃತತ್ವಾದೀನಾಂ ಗುಣಾನಾಂ ನ ಛಾಯಾತ್ಮನಿ ಪ್ರತೀತಿಃ ॥

(ಭಾಷ್ಯಾರ್ಥ)

ಇನ್ನು ಅಕ್ಷಿಸ್ಥಾನ(ಪುರುಷ)ನು ಛಾಯಾತ್ಮನೋ, ವಿಜ್ಞಾನಾತ್ಮನೋ, ದೇವತಾತ್ಮನೋ ಆಗಿರಬಹುದು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಇದಕ್ಕೆ ಹೇಳುತ್ತೇವೆ: ಛಾಯಾತ್ಮನೇ ಮುಂತಾದ ಇನ್ನೊಬ್ಬನನ್ನು ಇಲ್ಲಿ ತೆಗೆದುಕೊಳ್ಳಬಾರದು. ಏಕೆ ಎಂದರೆ, ನಿಲ್ಲದೆ ಇರುವದರಿಂದ. ಮೊದಲನೆಯದಾಗಿ ಛಾಯಾತ್ಮನು ಯಾವಾಗಲೂ ಕಣ್ಣಿನಲ್ಲಿ ನಿಂತಿರುವದು ಆಗುವಹಾಗಿಲ್ಲ[1]. ಏಕೆಂದರೆ ಯಾವಾಗ ಯಾವನಾದರೊಬ್ಬ ಪುರುಷನು ಕಣ್ಣಿನ ಬಳಿ ಇರುತ್ತಾನೋ ಆಗ ಮಾತ್ರ ಕಣ್ಣಿನಲ್ಲಿ ಪುರುಷನ ನೆರಳು ಕಾಣಿಸುತ್ತದೆ; ಅವನು ಹೊರಟುಹೋದರೆ ಕಾಣಿಸುವದಿಲ್ಲ. ಕಣ್ಣಿನಲ್ಲಿ ಯಾವ ಈ ಪುರುಷನು ಕಾಣಿಸುತ್ತಾನೋ ಎಂದು (ಈ) ಶ್ರುತಿಯು ತನ್ನ ಕಣ್ಣಿನಲ್ಲಿ ಕಾಣುವ ಪುರುಷನು ಹತ್ತಿರದಲ್ಲಿರುವದರಿಂದ (ಅವನನ್ನೇ) ಉಪಾಸನೆಮಾಡಬೇಕೆಂದು ತಿಳಿಸುತ್ತದೆ (ಎಂಬುದು ಯುಕ್ತವು)[2]. ಉಪಾಸನಾಕಾಲದಲ್ಲಿ ನೆರಳನ್ನುಂಟುಮಾಡುವ ಯಾವನಾದರೊಬ್ಬ ಪುರುಷನನ್ನು ಕಣ್ಣಿನ ಹತ್ತಿರ ಇಟ್ಟುಕೊಂಡು ಉಪಾಸನೆಮಾಡುತ್ತಾನೆ ಎಂದು ಕಲ್ಪಿಸು

---

1. ಒಬ್ಬನಿದ್ದರೆ ಮಾತ್ರ ನಿಂತಿರುವ ಈ ನೆರಳನ್ನು ಯಾವಾಗಲೂ ಉಪಾಸನೆ ಮಾಡುವದಕ್ಕೆ ಆಗುವದಿಲ್ಲ ; ಉಪಾಸನೆಗೆ ವಿಚ್ಛಿತ್ತಿ ಬರುತ್ತದೆ. ಹಾಗಾಗಬಾರದು.

2 ಮತ್ತೊಬ್ಬರ ಕಣ್ಣಿನಲ್ಲಿ ಕಾಣುವ ನೆರಳನ್ನೇ ಉಪಾಸನೆಮಾಡಬಹುದಲ್ಲ!- ಎಂಬ ಶಂಕೆಗೆ ಪರಿಹಾರವಿದು. 'ಏಷಃ' ಎಂಬ ಸರ್ವನಾಮವು ಹತ್ತಿರವಿರುವ ಪುರುಷನನ್ನೇ ಹೇಳುತ್ತದೆ. 'ದೃಶ್ಯತೇ' ಎಂದರೆ ಕಾಣಿಸುತ್ತದೆ ಎಂದು ಅರ್ಥ ; ತನಗೇ ಕಾಣಿಸಬೇಕೆಂಬ ನಿಯಮವೇನೂ ಇಲ್ಲವೆಂದು ಭಾವ.

ವದೂ ಯುಕ್ತವಾಗುವದಿಲ್ಲ[1]. "ಇದೇ ಶರೀರವು ನಾಶವಾದದ್ದನ್ನು ಅನುಸರಿಸಿ ಇದು ನಾಶವಾಗುತ್ತದೆ" (ಛಾಂ. ೮-೯-೧) ಎಂಬ ಶ್ರುತಿಯು ಛಾಯಾತ್ಮನು (ಯಾವಾಗಲೂ) ನಿಲ್ಲುವದಿಲ್ಲ ಎಂದು ತಿಳಿಸುತ್ತದೆ[2]. ಆ (ಛಾಯಾಪುರುಷ)ನಿಗೆ ಅಮೃತತ್ವವೇ ಮುಂತಾದ ಗುಣಗಳು[3] ಹೊಂದುವದಿಲ್ಲವಾದ್ದರಿಂದಲೂ ಛಾಯಾತ್ಮನ ವಿಷಯದಲ್ಲಿ (ಅವನೇ ಅಕ್ಷಿಪುರುಷನೆಂಬ) ಅಭಿಪ್ರಾಯವು (ಉಂಟಾಗುವಹಾ)ಗಿಲ್ಲ.

## ವಿಜ್ಞಾನಾತ್ಮನೂ ಅಕ್ಷಿಪುರುಷನಲ್ಲ

(ಭಾಷ್ಯ)

೧೮೫. ತಥಾ ವಿಜ್ಞಾನಾತ್ಮನೋಽಪಿ ಸಾಧಾರಣೇ ಕೃತ್ಸ್ನಶರೀರೇನ್ದ್ರಿಯಸಂಬನ್ಧೇ ಸತಿ ಚಕ್ಷುಷ್ಯೇವ ಅವಸ್ಥಿತತ್ವಂ ವಕ್ತುಂ ನ ಶಕ್ಯಮ್ । ಬ್ರಹ್ಮಣಸ್ತು ವ್ಯಾಪಿನೋಽಪಿ ದೃಷ್ಟ ಉಪಲಬ್ಧ್ಯರ್ಥೋ ಹೃದಯಾದಿದೇಶ ವಿಶೇಷಸಂಬನ್ಧಃ । ಸಮಾನಶ್ಚ ವಿಜ್ಞಾನಾತ್ಮನ್ಯಪಿ ಅಮೃತತ್ವಾದೀನಾಂ ಗುಣಾನಾಮ್ ಅಸಂಬನ್ಧಃ । ಯದ್ಯಪಿ ವಿಜ್ಞಾನಾತ್ಮಾ ಪರಮಾತ್ಮನೋಽನನ್ಯ ಏವ, ತಥಾಪಿ ಅವಿದ್ಯಾಕಾಮಕರ್ಮಕೃತಂ ತಸ್ಮಿನ್ ಮರ್ತ್ಯತ್ವಮ್ ಅಧ್ಯಾರೋಪಿತಂ ಭಯಂ ಚ ಇತಿ ಅಮೃತತ್ವಾಭಯತ್ವೇ ನೋಪಪದ್ಯೇತೇ । ಸಂಯದ್ವಾಮತ್ವಾದಯಶ್ಚ ಏತಸ್ಮಿನ್ ಅನೈಶ್ವರ್ಯಾತ್ ಅನುಪಪನ್ನಾ ಏವ ॥

( ಭಾಷ್ಯಾರ್ಥ )

ಇದರಂತೆ ವಿಜ್ಞಾನಾತ್ಮನಿಗೂ ಎಲ್ಲಾ ಶರೀರೇಂದ್ರಿಯಗಳೊಡನೆ ಸಂಬಂಧ (ವಿರುವದು) ಸಮಾನವಾಗಿರುವಲ್ಲಿ ಕಣ್ಣಿನಲ್ಲಿಯೇ ಇರುತ್ತಾನೆಂದು ಹೇಳುವದಕ್ಕಾಗಲಾರದು.[4] ಬ್ರಹ್ಮವು (ಸರ್ವ)ವ್ಯಾಪಿಯಾಗಿದ್ದರೂ ಉಪಾಸನೆಗಾಗಿ ಹೃದಯವೇ ಮುಂತಾದ ಗೊತ್ತಾದ ಸ್ಥಳದ ಸಂಬಂಧ(ವಿರಬಹುದೆಂದು ಶ್ರುತಿ

---

1. ಮತ್ತೊಬ್ಬರ ಕಣ್ಣಿನಲ್ಲಿ ಕಾಣುವ ನೆರಳನ್ನುಪಯೋಗಿಸುವದಕ್ಕೆ ಅವರು ಯಾವಾಗಲೂ ಹತ್ತಿರವಿರಬೇಕಾಗುವದು. ಇಲ್ಲದಿದ್ದರೆ ಉಪಾಸನೆಗೆ ವಿಚ್ಛಿತ್ತಿ ಬರುತ್ತದೆ-ಎಂದು ಭಾವ.

2. 'ಅನವಸ್ಥಿತೇಃ' ಎಂಬುದಕ್ಕೆ ಅನಿತ್ಯವಾಗಿರುವದರಿಂದ ಎಂಬ ಮತ್ತೊಂದು ಅರ್ಥವನ್ನು ಮಾಡಿದೆ.

3. ಅಮೃತತ್ವ, ಅಭಯತ್ವ, ಆತ್ಮತ್ವ, ಬ್ರಹ್ಮತ್ವ, ಸಂಯದ್ವಾಮತ್ವ, ವಾಮನೀತ್ವ, ಭಾಮನೀತ್ವ- ಎಂಬಿವು.

4. ಇದು 'ಅನವಸ್ಥಿತೇಃ' ಎಂಬ ಸೂತ್ರಭಾಗದ ಅಭಿಪ್ರಾಯ. ಬಲಗಣ್ಣಿನಲ್ಲಿ ಜೀವನಿರುತ್ತಾನೆಂದು ಶ್ರುತಿಯಲ್ಲಿ ಹೇಳಿರುವದು ಉಪಲಕ್ಷಣಕ್ಕಾಗಿ, ಕಣ್ಣಿನಲ್ಲಿ ಮಾತ್ರವೇ ಇರುವನೆಂದು ಅದರ ಅರ್ಥವಲ್ಲ.

ಯಲ್ಲಿ) ಕಂಡಿರುತ್ತದೆ. ಅಮೃತತ್ವವೇ ಮುಂತಾದ (ಗುಣ)ಗಳ ಸಂಬಂಧವು ಇಲ್ಲವೆಂಬುದು[1] ವಿಜ್ಞಾನಾತ್ಮನಿಗೂ ಸಮಾನವಾಗಿರುತ್ತದೆ (ಹೇಗೆಂದರೆ) ವಿಜ್ಞಾನಾತ್ಮನು ಪರಮಾತ್ಮನಿಗಿಂತ ಬೇರೆಯಲ್ಲವೇ ಅಲ್ಲವೆಂಬುದೇನೋ (ನಿಜ)[2] ; ಆದರೂ ಅವನಲ್ಲಿ **ಅವಿದ್ಯಾಕಾಮಕರ್ಮಗಳಿಂದಾಗುವ ಮರ್ತ್ಯತ್ವವೂ ಭಯವೂ ಅಧ್ಯಾರೋಪಿತವಾಗಿರುತ್ತವೆಯಾದ್ದರಿಂದ ಅಮೃತತ್ವವೂ ಅಭಯತ್ವವೂ ಹೊಂದುವದಿಲ್ಲ.** ಈಶ್ವರತ್ವವಿಲ್ಲದ್ದರಿಂದ[3] ಸಂಯದ್ವಾಮತ್ವವೇ ಮುಂತಾದವುಗಳೂ ಇವನಿಗೆ ಹೊಂದುವದೇ ಇಲ್ಲ.

## ಆದಿತ್ಯನಿಗೆ ಆತ್ಮತ್ವಾದಿಗಳು ಹೊಂದುವದಿಲ್ಲ

( ಭಾಷ್ಯ )

೧೮೬. ದೇವತಾತ್ಮನಸ್ತು "ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ" (ಬೃ. ೫-೫-೨) ಇತಿ ಶ್ರುತೇರ್ಯದ್ಯಪಿ ಚಕ್ಷುಷಿ ಅವಸ್ಥಾನಂ ಸ್ಯಾತ್, ತಥಾಪಿ **ಆತ್ಮತ್ವಂ ತಾವತ್ ನ ಸಂಭವತಿ।** ಪರಾಗ್ರೂಪತ್ವಾತ್ | ಅಮೃತತ್ವಾದಯೋಽಪಿ ನ ಸಂಭವನ್ತಿ | ಉತ್ಪತ್ತಿಪ್ರಲಯಶ್ರವಣಾತ್ | ಅಮರತ್ವಮಪಿ ದೇವಾನಾಂ ಚಿರಕಾಲಾವಸ್ಥಾನಾಪೇಕ್ಷಮ್ | ಐಶ್ವರ್ಯಮಪಿ ಪರಮೇಶ್ವರಾಯತ್ತಮ್, ನ ಸ್ವಾಭಾವಿಕಮ್ | "ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ। ಭೀಷಾಸ್ಮಾದಗ್ನಿಶ್ಚೇನ್ದ್ರಶ್ಚ ಮೃತ್ಯುರ್ಧಾವತಿ ಪಞ್ಚಮಃ" (ತೈ. ೨-೮) ಇತಿ ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

ದೇವತಾತ್ಮನಿಗಾದರೋ[4] "ಈತನು ಈ (ಚಕ್ಷುಸ್ಸಿನಲ್ಲಿ) ರಶ್ಮಿಗಳಿಂದ

---

1. 'ಅಸಂಭವಾಚ್ಚ' ಎಂಬ ಸೂತ್ರಭಾಗದ ಅಭಿಪ್ರಾಯವಿದು. ಆಚಾರ್ಯರು ಇಲ್ಲಿ 'ಅಸಂಬನ್ಧಃ' ಎಂಬುದರ ಬದಲು 'ಅಸಂಭವಃ' ಎಂದೇ ಬರೆದಿದ್ದರೂ ಬರೆದಿರಬಹುದೆಂದು ಊಹಿಸುವವಕ್ಕೆಡೆಯಿದೆ.

2. ಜೀವನೂ ಪರಮಾತ್ಮನೂ ಒಂದೇ ಆಗಿರುವಲ್ಲಿ ಜೀವನಿಗೆ ಪರಮಾತ್ಮನ ಧರ್ಮಗಳು ಏಕೆ ಹೊಂದುವದಿಲ್ಲ ? ಎಂಬ ಶಂಕೆಯನ್ನು ತೆಗೆದು ಇಲ್ಲಿ ಪರಿಹಾರವನ್ನು ಹೇಳಿದೆ. ಜೀವನಿಗಿರುವ ಸಂಸಾರಭೋಗವು ಪರಮಾತ್ಮನಿಗೇಕಿಲ್ಲ ?– ಎಂಬ ಶಂಕೆಗೆ ಭಾ.ಭಾ. ೧೬೨ರಲ್ಲಿ ಕೊಟ್ಟಿರುವ ಪರಿಹಾರವನ್ನು ನೋಡಿ.

3. ಎಲ್ಲವನ್ನೂ ಆಳುವ ಸ್ವಾತಂತ್ರ್ಯನಲ್ಲದ್ದರಿಂದ.

4 ಜೀವದೇವತೆಗಳನ್ನು ಹಿಂದೆ ೧.೧–೩೦, ೩೧ರಲ್ಲಿಯೇ ನಿರಾಕರಿಸಿತ್ತು. ಈಗ ಆಸವಸ್ಥಿತಿ ಮತ್ತು ಬ್ರಹ್ಮಧರ್ಮಾಸಂಭವ– ಎಂಬಿವುಗಳನ್ನು ಸ್ಪಷ್ಟಪಡಿಸುವದಕ್ಕಾಗಿ ಮತ್ತೆ ಆ ಪೂರ್ವಪಕ್ಷವನ್ನು ಎತ್ತಿದೆ. ಹಾಗಿಲ್ಲದಿದ್ದರೆ 'ದೃಶ್ಯತೇ' ಎಂಬ ಪೂರ್ವಪಕ್ಷದ ಲಿಂಗವು ಅವರಿಗೂ ಮುಖ್ಯವೃತ್ತಿಯಲ್ಲಿಲ್ಲವಾಗಿ ಅವರನ್ನು ತೆಗೆದುಕೊಳ್ಳುವ ಕಾರಣವೇ ಇಲ್ಲ.

ನಿಂತಿರುತ್ತಾನೆ" (ಬೃ. ೫-೫-೨) ಎಂಬ ಶ್ರುತಿಯ (ಪ್ರಮಾಣ)ದಿಂದ ಕಣ್ಣಿನಲ್ಲಿರುವಿಕೆಯೇನೋ ಆಗಬಹುದು; ಆದರೂ ಮೊದಲನೆಯದಾಗಿ ಆತ್ಮತ್ವವು ಹೊಂದುವದಿಲ್ಲ, ಏಕೆಂದರೆ (ಆದಿತ್ಯನು) ಹೊರಗಿರುವ ಸ್ವರೂಪದವನಾಗಿರುತ್ತಾನೆ. ಅಮೃತತ್ವವೇ ಮುಂತಾದ (ಗುಣ)ಗಳೂ ಹೊಂದುವದಿಲ್ಲ; ಏಕೆಂದರೆ (ಅವನಿಗೆ) ಉತ್ಪತ್ತಿಪ್ರಲಯಗಳನ್ನು ಶ್ರುತಿಯಲ್ಲಿ ಹೇಳಿದೆ[1]. ದೇವತೆಗಳು ಅಮರರು ಎಂಬುದೂ ಬಹುಕಾಲದವರೆಗೆ ಇರುವದೆಂಬುದರ ಅಪೇಕ್ಷೆಯಿಂದ ಹೇಳಿದ್ದು[2]. ಅವರಿಗಿರುವ ಐಶ್ವರ್ಯವೂ ಪರಮೇಶ್ವರನ ಅಧೀನವಾಗಿರುವದೇ ಹೊರತು ಸ್ವಾಭಾವಿಕವಲ್ಲ; ಏಕೆಂದರೆ "ಈತನ ಭಯದಿಂದ ವಾಯುವು ಬೀಸುತ್ತಾನೆ; ಭಯದಿಂದ ಸೂರ್ಯನು ಉದಯಿಸುತ್ತಾನೆ; ಈತನ ಭಯದಿಂದ ಅಗ್ನಿಯೂ ಇಂದ್ರನೂ (ಕೆಲಸಮಾಡುತ್ತಾರೆ), ಐದನೆಯವನಾದ ಮೃತ್ಯುವು ಓಡುತ್ತಾನೆ" (ತೈ. ೨-೮) ಎಂಬ ಮಂತ್ರವರ್ಣದಿಂದ (ಹೀಗೆಂದು ನಿಶ್ಚಯವಾಗುತ್ತದೆ).

## ದೃಶ್ಯತೇ ಎಂಬ ಶ್ರುತಿಗೆ ಗತಿ

(ಭಾಷ್ಯ)

೧೮೭. ತಸ್ಮಾತ್ ಪರಮೇಶ್ವರ ಏವಾಯಮ್ ಅಕ್ಷಿಸ್ಥಾನಃ ಪ್ರತ್ಯೇತವ್ಯಃ । ಅಸ್ಮಿಂಶ್ಚ ಪಕ್ಷೇ "ದೃಶ್ಯತೇ" ಇತಿ ಪ್ರಸಿದ್ಧವದುಪಾದಾನಂ ಶಾಸ್ತ್ರಾದ್ಯಪೇಕ್ಷಂ ವಿದ್ವದ್ವಿಷಯಂ ಪ್ರರೋಚನಾರ್ಥಮ್ ಇತಿ ವ್ಯಾಖ್ಯೇಯಮ್ ॥

( ಭಾಷ್ಯಾರ್ಥ )

ಆದ್ದರಿಂದ ಈ ಅಕ್ಷಿಸ್ಥಾನದಲ್ಲಿರುವ (ಪುರುಷನು) ಪರಮೇಶ್ವರನೇ ಎಂದು ತಿಳಿಯಬೇಕು. ಈ ಪಕ್ಷದಲ್ಲಿ "ದೃಶ್ಯತೇ" (ಕಾಣಿಸುತ್ತಾನೆ) ಎಂದು ಪ್ರಸಿದ್ಧವಾಗಿರುವಂತೆ (ತಿಳಿಸುವ ಮಾತನ್ನು) ತೆಗೆದುಕೊಂಡಿರುವದನ್ನು ಶಾಸ್ತ್ರಾದ್ಯಪೇಕ್ಷವಾಗಿರುವ ಜ್ಞಾನಿಗಳ ವಿಷಯವು, (ಈ ವಿದ್ಯೆಯಲ್ಲಿ) ಅಭಿರುಚಿಯುಂಟಾಗಲೆಂದು (ಹೇಳಿದ್ದು)[3] ಎಂದು ವಿವರಿಸಬೇಕು.

---

1. ಛಾಂ ೩-೧೯-೩ರಲ್ಲಿ ಸೂರ್ಯನಿಗೆ ಉತ್ಪತ್ತಿಯನ್ನು ಹೇಳಿದೆ; ಛಾಂ. ೪-೩-೧ರಲ್ಲಿ ಸೂರ್ಯನಿಗೆ ವಾಯುವಿನಲ್ಲಿ ಪ್ರಲಯವನ್ನು ಹೇಳಿದೆ. ಇದರಂತೆ ಬೇರೆ ಶ್ರುತಿಗಳನ್ನೂ ಉದಾಹರಿಸಬಹುದು.

2. ಪ್ರಲಯವಾಗುವವರೆಗೆ ಇರುವ ಚಿರಕಾಲಸ್ಥಿತಿಗೆ ಅಮೃತತ್ವವೆಂದು ಹೆಸರು ಎಂದು ಪುರಾಣವಚನವಿದೆ ಛಾಂ. ೫-೯-೨ರ ಭಾಷ್ಯವನ್ನು ನೋಡಿ. ಆ ದೃಷ್ಟಿಯಿಂದ ದೇವತೆಯ ಸ್ಥಾನವೂ ಗೌಣವಾಗಿ ಅಮೃತವೆನಿಸಬಹುದು.

3. ಶಾಸ್ತ್ರಾಚಾರ್ಯರ ಉಪದೇಶವನ್ನು ಪಡೆದ ಬ್ರಹ್ಮಚರ್ಯಾದಿಸಾಧನಸಂಪನ್ನರಾದ ವಿವೇಕಿಗಳಿಗೆ ಈ ಪುರುಷನು ಕಾಣಿಸುತ್ತಾನೆ ಎಂದರ್ಥ. ಪುರುಷನು ಜ್ಞಾನಿಗಳಿಗೆ ಕಾಣಿಸುವನೆಂದು ಹೊಗಳಿರುವದು ಉಪಾಸನೆಯಲ್ಲಿ ಆದರವನ್ನುಂಟುಮಾಡುವದಕ್ಕೆ ಎಂದು ಅಭಿಪ್ರಾಯ.

## ೫. ಅಂತರ್ಯಾಮ್ಯಧಿಕರಣ (ಸೂ. ೧೮-೨೦)

(ಬೃ. ೩-೭-೩ರಿಂದ ೨೩ರವರೆಗೆ ಹೇಳಿರುವ ಅಂತರ್ಯಾಮಿಯು ಬ್ರಹ್ಮವು).

**ಅನ್ತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ॥ ೧೮ ॥**

೧೮. ಅಧಿದೈವಾದಿಗಳಲ್ಲಿರುವ ಅಂತರ್ಯಾಮಿಯು (ಬ್ರಹ್ಮವು) ; ಏಕೆಂದರೆ ಅದರ ಧರ್ಮಗಳನ್ನು ಹೇಳಿದೆ.

### ವಿಷಯವೂ ಸಂಶಯವೂ

( ಭಾಷ್ಯ )

೧೮೮. "ಯ ಇಮಂ ಚ ಲೋಕಂ ಪರಂ ಚ ಲೋಕಂ ಸರ್ವಾಣಿ ಚ ಭೂತಾನಿ ಯೋಽನ್ತರೋ ಯಮಯತಿ" ( ಬೃ. ೩-೭-೧ , ಇತ್ಯುಪಕ್ರಮ್ಯ ಶ್ರೂಯತೇ "ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅನ್ತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ" (ಬೃ. ೩-೭-೩) ಇತ್ಯಾದಿ । ಅತ್ರ ಅಧಿದೈವತಮ್, ಅಧಿಲೋಕಮ್, ಅಧಿವೇದಮ್, ಅಧಿಯಜ್ಞಮ್, ಅಧಿಭೂತಮ್ ಅಧ್ಯಾತ್ಮಂ ಚ ಕಶ್ಚಿತ್ ಅನ್ತರವಸ್ಥಿತೋ ಯಮಯಿತಾ ಅನ್ತರ್ಯಾಮೀ ಇತಿ ಶ್ರೂಯತೇ । ಸ ಕಿಮ್ ಅಧಿದೈವಾದ್ಯಭಿಮಾನೀ ದೇವತಾತ್ಮಾ ಕಶ್ಚಿತ್, ಕಿಂ ವಾ ಪ್ರಾಪ್ತಾಣಿಮಾದ್ಯೈಶ್ವರ್ಯಃ ಕಶ್ಚಿದ್ ಯೋಗೀ ಕಿಂ ವಾ ಪರಮಾತ್ಮಾ, ಕಿಂ ವಾ ಅರ್ಥಾನ್ತರಂ ಕಿಂಚಿತ್ ? ಇತಿ ಅಪೂರ್ವಸಂಜ್ಞಾದರ್ಶನಾತ್ ಸಂಶಯಃ ॥

( ಭಾಷ್ಯಾರ್ಥ )

"ಯಾವನು ಈ ಲೋಕವನ್ನೂ ಪರಲೋಕವನ್ನೂ ಎಲ್ಲಾ ಭೂತಗಳನ್ನೂ ಒಳಗಿದ್ದುಕೊಂಡು ಕಟ್ಟಿನಲ್ಲಿಟ್ಟಿರುತ್ತಾನೋ" (ಬೃ. ೩-೭-೧) ಎಂದು ಪ್ರಾರಂಭಿಸಿ ಯಾವನು ಪೃಥಿವಿಯಲ್ಲಿದ್ದುಕೊಂಡು ಪೃಥಿವಿಗೂ ಒಳಗಿರುವನೋ, ಯಾವನನ್ನು ಪೃಥಿವಿಯು ಅರಿಯದೋ, ಯಾವನಿಗೆ ಪೃಥಿವಿಯು ಶರೀರವೋ, ಯಾವನು ಪೃಥಿವಿಯನ್ನು ಒಳಗಿದ್ದುಕೊಂಡು ಕಟ್ಟಿನಲ್ಲಿಟ್ಟುಕೊಂಡಿರುವನೋ, ಇವನೇ ನಿನ್ನ ಆತ್ಮನು, ಅಂತರ್ಯಾಮಿಯು, ಅಮೃತನು" (ಬೃ. ೩-೭-೩) ಎಂಬ ಮುಂತಾಗಿ ಶ್ರುತಿಯು (ಹೇಳುತ್ತದೆ). ಇಲ್ಲಿ ಅಧಿದೈವತ, ಅಧಿಲೋಕ,

ಅಧಿವೇದ, ಅಧಿಯಜ್ಞ, ಅಧಿಭೂತ, ಅಧ್ಯಾತ್ಮ[1]- (ಇವುಗಳಲ್ಲಿ) ಒಳಗೆ ಇದ್ದುಕೊಂಡು (ಎಲ್ಲವನ್ನೂ) ಕಟ್ಟಿನಲ್ಲಿಟ್ಟುಕೊಂಡಿರುವ ಯಾವನೋ ಒಬ್ಬ **ಅಂತರ್ಯಾಮಿಯು** (ಇದಾನೆಂದು) ಶ್ರುತಿಯಲ್ಲಿರುತ್ತದೆ. ಅವನು ಅಧಿದೈವವೇ ಮುಂತಾದವುಗಳ ಅಭಿಮಾನಿಯಾದ ಯಾವನಾದರೊಬ್ಬ ದೇವತಾತ್ಮನೆ, ಅಥವಾ **ಅಣಿಮಾದ್ಯೈಶ್ವರ್ಯಗಳನ್ನು** ಹೊಂದಿರುವ **ಯಾವನಾದರೊಬ್ಬ ಯೋಗಿಯೆ,** ಅಥವಾ ಪರಮಾತ್ಮನೆ, ಅಥವಾ ಮತ್ತೆ ಯಾವದೋ ಒಂದು ಬೇರೆಯ ಪದಾರ್ಥವೆ ? ಎಂದು- (ಅಂತರ್ಯಾಮಿ ಎಂಬ) ಅಪೂರ್ವವಾದ ಹೆಸರು (ಇಲ್ಲಿ) ಕಾಣುತ್ತಿರುವದರಿಂದ ಸಂಶಯವು.

## ಪೂರ್ವಪಕ್ಷ: ಅಂತರ್ಯಾಮಿಯು ಒಬ್ಬ ದೇವತೆ, ಅಥವಾ ಯೋಗಿ

(ಭಾಷ್ಯ)

೧೮೯ ಕಿಂ ತಾವನ್ನಃ ಪ್ರತಿಭಾತಿ ? ಸಂಜ್ಞಾಯಾ ಅಪ್ರಸಿದ್ಧತ್ವಾತ್, ಸಂಜ್ಞಿನೋಽಪಿ ಅಪ್ರಸಿದ್ಧೇನ ಅರ್ಥಾನ್ತರೇಣ ಕೇನಚಿತ್ ಭವಿತವ್ಯಮ್ ಇತಿ | ಅಥವಾ ನಾನಿರೂಪಿತರೂಪಮ್ ಅರ್ಥಾನ್ತರಂ ಶಕ್ಯಮಸ್ತಿ ಅಭ್ಯುಪಗನ್ತುಮ್ । ಅನ್ತರ್ಯಾಮಿಶಬ್ದಶ್ಚ ಅನ್ತರ್ಯಮನಯೋಗೇನ ಪ್ರವೃತ್ತಃ, ನಾತ್ಯನ್ತಮ್ ಅಪ್ರಸಿದ್ಧಃ | ತಸ್ಮಾತ್ ಪೃಥಿವ್ಯಾದ್ಯಭಿಮಾನೀ ಕಶ್ಚಿದ್ ದೇವೋಽನ್ತರ್ಯಾಮೀ ಸ್ಯಾತ್ | ತಥಾ ಚ ಶ್ರೂಯತೇ "ಪೃಥಿವ್ಯೇವ ಯಸ್ಯಾಯತನಮಗ್ನಿರ್ಲೋಕೋ ಮನೋ ಜ್ಯೋತಿಃ" (ಬೃ. ೩-೯-೧೦) ಇತ್ಯಾದಿ | ಸ ಚ ಕಾರ್ಯಕರಣವತ್ತ್ವಾತ್ ಪೃಥಿವ್ಯಾದೀನ್ ಅನ್ತಸ್ತಿಷ್ಠನ್ ಯಮಯತೀತಿ ಯುಕ್ತಂ ದೇವತಾತ್ಮನೋ ಯಮಯಿತೃತ್ವಮ್ | ಯೋಗಿನೋ ವಾ ಕಸ್ಯಚಿತ್ ಸಿದ್ಧಸ್ಯ ಸರ್ವಾನುಪ್ರವೇಶೇನ ಯಮಯಿತೃತ್ವಂ ಸ್ಯಾತ್ । ನ ತು ಪರಮಾತ್ಮಾ ಪ್ರತೀಯೇತ | ಅಕಾರ್ಯಕರಣತ್ವಾತ್ ಇತಿ ॥

---

1. 'ಯಃ ಪೃಥಿವ್ಯಾಮ್' (ಬೃ. ೩-೭-೩) ಎಂದು ಮುಂತಾಗಿ "ಯಃ ಸ್ತನಯಿತ್ನೌ' (?) ಎಂಬವರೆಗೆ **ಅಧಿದೈವತವು** ; "ಯಃ ಸರ್ವೇಷು ಲೋಕೇಷು" (?) ಎಂಬುದು **ಅಧಿಲೋಕವು** ; "ಯಃ ಸರ್ವೇಷು ವೇದೇಷು" ಎಂಬುದು **ಅಧಿವೇದವು** ; "ಯಃ ಸರ್ವೇಷು ಯಜ್ಞೇಷು" (?) ಎಂಬುದು **ಅಧಿಯಜ್ಞವು** ; "ಯಃ ಸರ್ವೇಷು ಭೂತೇಷು" (ಬೃ. ೩-೭-೧೫) ಎಂಬುದು **ಅಧಿಭೂತವು** ; "ಯಃ ಪ್ರಾಣೇ ತಿಷ್ಠನ್" (ಬೃ. ೩-೭-೧೬) ಎಂದು ಮುಂತಾಗಿ "ಯ ಆತ್ಮನಿ ತಿಷ್ಠನ್" (?) ಎಂಬವರೆಗಿನದು **ಅಧ್ಯಾತ್ಮವು.** ಇಲ್ಲಿ (?) ಹೀಗೆ ಸಂಶಯಚಿಹ್ನೆ ಹಾಕಿರುವದು ಮಾಧ್ಯಂದಿನಪಾಠವು. ನಾವು ಹಾಕಿರುವ ಸಂಖ್ಯೆ ಮಾತ್ರ ಕಾಣ್ವಪಾಠದಂತೆ, ಸೂತ್ರದಲ್ಲಿ ಮಾಧ್ಯಂದಿನಪಾಠವನ್ನೇ ಉದಾಹರಿಸಿದೆ ಎಂಬುದು ಸ್ಪಷ್ಟ.

( ಭಾಷ್ಯಾರ್ಥ )

ಮೊದಲು ನಮಗೆ ಯಾವ (ಪೂರ್ವಪಕ್ಷವು) ತೋರುತ್ತದೆ? (ಅಂತರ್ಯಾಮಿ ಎಂಬ) ಹೆಸರು ಅಪ್ರಸಿದ್ಧವಾದದ್ದಾದ್ದರಿಂದ (ಈ) ಹೆಸರಿನ (ವಸ್ತುವೂ) ಅಪ್ರಸಿದ್ಧವಾದ(ಇವೆಲ್ಲಕ್ಕಿಂತ) ಬೇರೆಯಾದ ಯಾವದೋ ಒಂದು ಪದಾರ್ಥವಾಗಿರಬೇಕು ಎಂದು ತೋರುತ್ತದೆ. ಅಥವಾ (ಇಂಥದ್ದೆಂದು) ಗೊತ್ತುಮಾಡದೆ ಇರುವ ಸ್ವರೂಪದ ಮತ್ತೊಂದು ಪದಾರ್ಥವು ಇದೆ ಎಂದು ಒಪ್ಪುವದಾಗಲಾರದು.[1] 'ಅಂತರ್ಯಾಮಿ' ಎಂಬ ಶಬ್ದವುಕೂಡ ಒಳಗಿದ್ದು ಕಟ್ಟುಮಾಡುವದೆಂಬ ಯೋಗದಿಂದ ಪ್ರವೃತ್ತವಾಗಿರುವದರಿಂದ ಅತ್ಯಂತವಾಗಿ ಅಪ್ರಸಿದ್ಧವಲ್ಲ.[2] ಆದ್ದರಿಂದ ಪೃಥಿವಿಯೇ ಮುಂತಾದದ್ದಕ್ಕೆ ಅಭಿಮಾನಿಯಾಗಿರುವ ಯಾವದೋ ಒಂದು ದೇವತೆಯು ಅಂತರ್ಯಾಮಿಯಾಗಿರಬೇಕು. ಹಾಗೆಂದು "ಯಾವನಿಗೆ ಪೃಥಿವಿಯೇ ಆಶ್ರಯವೋ, ಅಗ್ನಿಯು ಲೋಕವೋ, ಮನಸ್ಸು ಜ್ಯೋತಿಯೋ "[3] (ಬೃ. ೩-೯-೧೦) ಎಂದು ಮುಂತಾಗಿ ಶ್ರುತಿಯೂ ಹೇಳುತ್ತದೆ. ಆ (ದೇವತಾತ್ಮನು) ಕಾರ್ಯಕರಣಗಳುಳ್ಳವನಾಗಿರುವದರಿಂದ ಪೃಥಿವ್ಯಾದಿಗಳನ್ನು ಒಳಗಿದ್ದುಕೊಂಡು ಕಟ್ಟುಮಾಡುತ್ತಾನೆ ಎಂಬ (ಕಾರಣ)ದಿಂದ ದೇವತಾತ್ಮನಿಗೆ ಯಮನಮಾಡುವದೆಂಬುದು ಹೊಂದಬಹುದು. ಅಥವಾ ಯಾವನೋ ಒಬ್ಬ **ಸಿದ್ಧನಾದ ಯೋಗಿಯು**[4] ಎಲ್ಲರನ್ನೂ ಒಳಹೊಕ್ಕಿರುವದರಿಂದ (ಅವನಿಗೆ) ಯಮನಮಾಡುವದೆಂಬುದು ಹೊಂದಬಹುದು. ಆದರೆ ಪರಮಾತ್ಮನನ್ನು ಮಾತ್ರ (ಇಲ್ಲಿ ಅಂತರ್ಯಾಮಿ ಎಂದು) ತಿಳಿಯುವದಕ್ಕಾಗಲಾರದು ; ಏಕೆಂದರೆ (ಅವನಿಗೆ) ಕಾರ್ಯಕರಣಗಳಿರುವದಿಲ್ಲ.[5]

---

1. ಪದಾರ್ಥವು ಇಂಥದ್ದೆಂದು ಹೇಳದಿದ್ದರೆ ಸಿದ್ಧಾಂತವಾಗಲಾರದು. ಅಲೌಕಿಕಾರ್ಥವನ್ನು ಕಾರಣವಿಲ್ಲದೆ ಕಲ್ಪಿಸುವದು ಯುಕ್ತವೂ ಅಲ್ಲ.

2. 'ಅನ್ತರ್ಯಮಯತಿ ಇತಿ ಅನ್ತರ್ಯಾಮೀ' ಎಂಬ ಅವಯವಾರ್ಥವಿರುವದರಿಂದ ಇದು ಯೌಗಿಕಶಬ್ದವು, ಹೊಸದಾದ ರೂಢಶಬ್ದವಲ್ಲ.

3. ಪೃಥಿವಿಯೆಂಬ ಶರೀರವುಳ್ಳ, ಅಗ್ನಿಯೆಂಬ ಕಣ್ಣುಳ್ಳ, ಮನಸ್ಸಿನಿಂದ ಸಂಕಲ್ಪಮಾಡುವ ದೇವನಿರುವನಲ್ಲ (ಅವನನ್ನು ತಿಳಿದುಕೊಳ್ಳಬೇಕು) ಎಂದು ಶ್ರುತಿಯ ಅರ್ಥ.

4. ಯೋಗಿಯು ತನ್ನ ಕರಣಗಳ ಮೂಲಕ ಎಲ್ಲರ ಶರೀರದಲ್ಲಿಯೂ ವ್ಯಾಪಾರ ಮಾಡುವ, ಸಿದ್ಧಿಯನ್ನು ಹೊಂದಿರುತ್ತಾನೆಂದು ಕಲ್ಪಿಸುವದಕ್ಕೆ ಬರುತ್ತದೆ.

5. ಶರೀರಿಯು ಶರೀರವನ್ನೂ ಕರಣಗಳ ಮೂಲಕ ಮತ್ತೊಂದು ವಸ್ತುವನ್ನೂ ನಿಯಮದಲ್ಲಿಟ್ಟುಕೊಳ್ಳಬಹುದು. ಯಾವ ಶರೀರವೂ ಕರಣವೂ ಇಲ್ಲದ ಆತ್ಮನು ಹೇಗೆ ತಾನೆ ಯಮನವೆಂಬ ಕ್ರಿಯೆಯನ್ನು ಮಾಡಿಯಾನು ?- ಎಂದು ಭಾವ.

## ಪರಮಾತ್ಮನ ಧರ್ಮಗಳನ್ನು ಹೇಳಿರುವದರಿಂದ ಅವನೇ ಅಂತರ್ಯಾಮಿ

( ಭಾಷ್ಯ )

೧೯೦. ಏವಂ ಪ್ರಾಪ್ತೇ ಇದಮುಚ್ಯತೇ– ಯೋಽನ್ತರ್ಯಾಮೀ ಅಧಿದೈವಾದಿಷು ಶ್ರೂಯತೇ ಸ ಪರಮಾತ್ಮೈವ ಸ್ಯಾತ್ ನಾನ್ಯಃ ಇತಿ | ಕುತಃ ? ತದ್ಧರ್ಮವ್ಯಪದೇಶಾತ್ | ತಸ್ಯ ಹಿ ಪರಮಾತ್ಮನೋ ಧರ್ಮಾಃ ಇಹ ನಿರ್ದಿಶ್ಯಮಾನಾಃ ದೃಶ್ಯನ್ತೇ | ಪೃಥಿವ್ಯಾದಿ ತಾವತ್ ಅಧಿದೈವಾದಿ ಭೇದಭಿನ್ನಂ ಸಮಸ್ತಂ ವಿಕಾರಜಾತಮ್ ಅನ್ತಸ್ತಿಷ್ಠನ್ ಯಮಯತಿ ಇತಿ ಪರಮಾತ್ಮನೋ ಯಮಯಿತೃತ್ವಂ ಧರ್ಮಃ ಉಪಪದ್ಯತೇ | ಸರ್ವವಿಕಾರ ಕಾರಣತ್ವೇ ಸತಿ ಸರ್ವಶಕ್ತ್ಯುಪಪತ್ತೇಃ| "ಏಷ ತ ಆತ್ಮಾನ್ತರ್ಯಾಮ್ಯಮೃತಃ" ಇತಿ ಚಾತ್ಮತ್ವಾಮೃತತ್ವೇ ಮುಖ್ಯೇ ಪರಮಾತ್ಮನ ಉಪಪದ್ಯೇತೇ | "ಯಂ ಪೃಥಿವೀ ನ ವೇದ" ಇತಿ ಚ ಪೃಥಿವೀದೇವತಾಯಾ ಅವಿಜ್ಞೇಯಮ್ ಅನ್ತರ್ಯಾಮಿಣಂ ಬ್ರುವನ್ ದೇವತಾತ್ಮನೋಽನ್ಯಮ್ ಅನ್ತರ್ಯಾಮಿಣಂ ದರ್ಶಯತಿ। ಪೃಥಿವೀದೇವತಾ ಹಿ 'ಅಹಮಸ್ಮಿ ಪೃಥಿವೀ' ಇತಿ ಆತ್ಮಾನಂ ವಿಜಾನೀಯಾತ್ | ತಥಾ 'ಅದೃಷ್ಟಃ', 'ಅಶ್ರುತಃ' (ಬೃ. ೩-೭-೨೩) ಇತ್ಯಾದಿ ವ್ಯಪದೇಶಃ ರೂಪಾದಿವಿಹೀನತ್ವಾತ್ ಪರಮಾತ್ಮನ ಉಪಪದ್ಯತೇ ಇತಿ ||

(ಭಾಷ್ಯಾರ್ಥ)

ಹೀಗೆಂಬ ( ಪೂರ್ವಪಕ್ಷವು ) ಬಂದೊದಗಲಾಗಿ ಈ (ಸಿದ್ಧಾಂತವನ್ನು) ಹೇಳುತ್ತೇವೆ. ಅಧಿದೈವಾದಿಗಳಲ್ಲಿ ಅಂತರ್ಯಾಮಿ(ಯೊಬ್ಬನಿರುವನೆಂದು ಈ) ಶ್ರುತಿಯಲ್ಲಿದೆಯಷ್ಟೆ, ಅವನು ಪರಮಾತ್ಮನೇ ಆಗಬಹುದೇ ಹೊರತು ಮತ್ತೊಬ್ಬ ನಲ್ಲ. ಏಕೆ ? ಎಂದರೆ ಅವನ ಧರ್ಮಗಳನ್ನು ಹೇಳಿರುವದರಿಂದ. ಆ ಪರ ಮಾತ್ಮನ ಧರ್ಮಗಳನ್ನೇ ಇಲ್ಲಿ ತಿಳಿಸಿರುವದು ಕಾಣಬರುತ್ತದೆ. ಮೊದಲನೆಯ ದಾಗಿ ಪೃಥಿವಿಯೇ ಮುಂತಾದ ಅಧಿದೈವಾದಿಪ್ರಕಾರದಿಂದ ಬೇರೆಬೇರೆಯಾಗಿ ರುವ ಕಾರ್ಯಸಮೂಹವನ್ನೆಲ್ಲ ಒಳಗಿದ್ದುಕೊಂಡು ಕಟ್ಟುಮಾಡುವನಾದ್ದರಿಂದ ಯಮಯಿತೃತ್ವನೆಂಬ ಧರ್ಮವು ಪರಮಾತ್ಮನಿಗೆ ಹೊಂದುತ್ತದೆ ; ಏಕೆಂದರೆ ಎಲ್ಲಾ ಕಾರ್ಯಗಳಿಗೂ (ಅವನು) ಕಾರಣವಾಗಿರುವದರಿಂದ (ಅವನಲ್ಲಿ) ಎಲ್ಲಾ ಶಕ್ತಿಗಳೂ [1](ಇರಬಹುದೆಂಬುದು)ಯುಕ್ತವಾಗಿರುತ್ತದೆ."ಇವನೇ ನಿನ್ನ ಆತ್ಮನು ಅಂತರ್ಯಾಮಿಯೂ, ಅಮೃತನು" (ಬೃ. ೩–೭–೩) ಎಂದು ಹೇಳಿರುವ ಆತ್ಮತ್ವವೂ ಅಮೃತತ್ವವೂ ಮುಖ್ಯ(ವಾದ ಅರ್ಥದಲ್ಲಿ) ಪರಮಾತ್ಮನಿಗೇ ಹೊಂದುತ್ತವೆ. "ಯಾವನನ್ನು ಪೃಥಿವಿ ಅರಿಯದೋ" (ಬೃ.೩–೭–೩) ಎಂದು

1. ಆಯಾ ಕಾರ್ಯಗಳನ್ನು ಕಟ್ಟುಮಾಡುವ ಶಕ್ತಿಗಳೆಲ್ಲ.

ಪೃಥಿವೀದೇವತೆಗೆ ಅಂತರ್ಯಾಮಿಯನ್ನು ಅರಿಯುವದಾಗದೆಂದು (ಯಾಜ್ಞವಲ್ಕ್ಯನು) ಹೇಳಿರುವದರಿಂದ ದೇವತಾತ್ಮನಿಗಿಂತಲೂ ಅಂತರ್ಯಾಮಿಯು ಬೇರೆ ಎಂದು ತಿಳಿಸಿರುತ್ತಾನೆ; ಏಕೆಂದರೆ ಪೃಥಿವೀದೇವತೆಯು 'ನಾನು ಪೃಥಿವಿಯಾಗಿರುವೆನು' ಎಂದು ತನ್ನನ್ನು (ತಾನು) ಅರಿತುಕೊಳ್ಳಬಹುದಾಗಿದೆ. ಇದರಂತೆ 'ಅದೃಷ್ಟಃ', 'ಅಶ್ರುತಃ' (ಬೃ. ೩-೭-೨೩) ಎಂದು ಮುಂತಾಗಿ ಹೇಳಿರುವದೂ ರೂಪಾದಿಗಳಿಲ್ಲದ್ದರಿಂದ ಪರಮಾತ್ಮನಿಗೇ ಹೊಂದುತ್ತದೆ.

## ಪರಮಾತ್ಮನಿಗೆ ಮತ್ತೊಬ್ಬರನ್ನು ಕಟ್ಟಿನಲ್ಲಿಡುವದಕ್ಕೆ ಕಾರ್ಯಕರಣಗಳು ಬೇಡ

( ಭಾಷ್ಯ )

೧೯೧. ಯತ್ತು ಅಕಾರ್ಯಕರಣಸ್ಯ ಪರಮಾತ್ಮನಃ ಯಮಯಿತೃತ್ವಂ ನೋಪಪದ್ಯತೇ ಇತಿ । ನೈಷ ದೋಷಃ । ಯಾನ್ ನಿಯಚ್ಛತಿ ತತ್ಕಾರ್ಯಕರಣೈರೇವ ತಸ್ಯ ಕಾರ್ಯಕರಣವತ್ತ್ವೋಪಪತ್ತೇಃ । ತಸ್ಯಾಪ್ಯನ್ಯೋ ನಿಯನ್ತಾ ಇತಿ ಅನವಸ್ಥಾದೋಷಶ್ಚ ನ ಸಂಭವತಿ । ಭೇದಾಭಾವಾತ್ । ಭೇದೇ ಹಿ ಸತಿ ಅನವಸ್ಥಾದೋಷೋಪಪತ್ತಿಃ । ತಸ್ಮಾತ್ ಪರಮಾತ್ಮೈವ ಅನ್ತರ್ಯಾಮೀ ॥

(ಭಾಷ್ಯಾರ್ಥ)

ಆದರೆ ಕಾರ್ಯಕರಣಗಳಿಲ್ಲದ ಪರಮಾತ್ಮನಿಗೆ ಯಮಯಿತೃತ್ವವು ಹೊಂದುವದಿಲ್ಲ ಎಂದು (ಪೂರ್ವಪಕ್ಷಿಯು ಹೇಳಿದ್ದ)ನಷ್ಟೆ, ಅದೇನೂ (ಸಿದ್ಧಾಂತದಲ್ಲಿ) ದೋಷವಲ್ಲ. ಏಕೆಂದರೆ ಯಾರನ್ನು ಕಟ್ಟಿನಲ್ಲಿಡಬೇಕೋ ಅವರ ಕಾರ್ಯಕರಣಗಳಿಂದಲೇ ಆ (ಪರಮಾತ್ಮನೂ) ಕಾರ್ಯಕರಣವಂತನಾಗಬಹುದಾಗಿದೆ. ಅವನಿಗೂ (ಒಬ್ಬ) ಬೇರೆಯ ನಿಯಂತನು, (ಅವನಿಗೆ ಮತ್ತೊಬ್ಬನು- ಎಂದು) ಹೀಗೆ ಅನವಸ್ಥಾದೋಷವೂ ಆಗುವದಿಲ್ಲ; ಏಕೆಂದರೆ ಭೇದವಿರುವದಿಲ್ಲ[1]. ಭೇದವಿದ್ದರಲ್ಲವೆ, ಅನವಸ್ಥಾದೋಷವು ಹೊಂದುತ್ತದೆ? ಆದ್ದರಿಂದ ಪರಮಾತ್ಮನೇ ಅಂತರ್ಯಾಮಿಯು.

---

1. ಶರೀರಾದಿಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಜೀವನಿಗಿಂತ ಬೇರೆಯಾಗಿ ಅವನನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಅಂತರ್ಯಾಮಿಯನ್ನು ಹೇಳಿದ್ದರೆ ಅವನಿಗಿಂತ ಬೇರೆಯಾಗಿ ಮತ್ತೊಬ್ಬ ನಿಯಂತೃವನ್ನು ಒಪ್ಪಬೇಕಾಗಿಬಂದು ಅನವಸ್ಥೆಯಾಗುತ್ತಿತ್ತು. ಆದರೆ ಪರಮಾತ್ಮನಿಗಿಂತ ಬೇರೆಯಾಗಿ ದ್ರಷ್ಟೃವೇ ಇಲ್ಲವೆಂದು ಶ್ರುತಿ ಹೇಳುತ್ತಿದೆ. (ಬೃ. ೩-೮-೧೧) ಒಬ್ಬನೇ ಆತ್ಮನಾದರೆ ನಿಯಂತೃನಿಯಂತವ್ಯಭೇದವು ಹೇಗಾಗುತ್ತದೆ? ಎಂದರೆ ಅವಿದ್ಯೆಯಿಂದ ಎಂದು ಮುಂದೆ ೨೦ನೆಯ ಸೂತ್ರದ ಭಾಷ್ಯದಲ್ಲಿ ಸಮಾಧಾನವನ್ನು ಹೇಳಲಾಗುವದು.

**ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ॥ ೧೯ ॥**

೧೯. ಸ್ಮೃತಿಯಲ್ಲಿ (ಹೇಳಿರುವ) ಪ್ರಧಾನವೂ ಅಂತರ್ಯಾಮಿಯಲ್ಲ ; ಏಕೆಂದರೆ ಅದರದಲ್ಲದ ಧರ್ಮಗಳನ್ನು ಹೇಳಿರುತ್ತದೆ.

## ಪ್ರಧಾನವು ಅಂತರ್ಯಾಮಿಯಾಗಲಾರದು

(ಭಾಷ್ಯ)

೧೯೨. ಸ್ಯಾದೇತತ್ | ಅದೃಷ್ಟತ್ವಾದಯೋ ಧರ್ಮಾಃ ಸಾಂಖ್ಯಸ್ಮೃತಿಕಲ್ಪಿತಸ್ಯ ಪ್ರಧಾನಸ್ಯಾಪಿ ಉಪಪದ್ಯನ್ತೇ | ರೂಪಾದಿಹೀನತಯಾ ತಸ್ಯ ತೈರಭ್ಯುಪಗಮಾತ್ | "ಅಪ್ರತರ್ಕ್ಯಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ" (ಮನು. ೧–೫) ಇತಿ ಹಿ ಸ್ಮರನ್ತಿ | ತಸ್ಯಾಪಿ ನಿಯನ್ತೃತ್ವಂ ಸರ್ವವಿಕಾರಕಾರಣತ್ವಾತ್ ಉಪಪದ್ಯತೇ | ತಸ್ಮಾತ್ ಪ್ರಧಾನಮ್ ಅನ್ತರ್ಯಾಮಿಶಬ್ದಂ ಸ್ಯಾತ್ |."ಈಕ್ಷತೇರ್ನಾಶಬ್ದಮ್" (೧–೧–೫) ಇತ್ಯತ್ರ ನಿರಾಕೃತಮಪಿ ಸತ್ ಪ್ರಧಾನಮ್ ಇಹ ಅದೃಷ್ಟತ್ವಾದಿವ್ಯಪದೇಶಸಂಭವೇನ ಪುನರಾಶಙ್ಕ್ಯತೇ | ಅತಃ ಉತ್ತರಮ್ ಉಚ್ಯತೇ । ನ ಚ ಸ್ಮಾರ್ತಂ ಪ್ರಧಾನಮ್ ಅನ್ತರ್ಯಾಮಿಶಬ್ದಂ ಭವಿತುಮರ್ಹತಿ | ಕಸ್ಮಾತ್ ? ಅತದ್ಧರ್ಮಾಭಿಲಾಪಾತ್ । ಯದ್ಯಪಿ ಅದೃಷ್ಟತ್ವಾದಿವ್ಯಪದೇಶಃ ಪ್ರಧಾನಸ್ಯ ಸಂಭವತಿ, ತಥಾಪಿ ನ ದ್ರಷ್ಟೃತ್ವಾದಿವ್ಯಪದೇಶಃ ಸಂಭವತಿ | ಪ್ರಧಾನಸ್ಯ ಅಚೇತನತ್ವೇನ ತೈರಭ್ಯುಪಗಮಾತ್ | "ಅದೃಷ್ಟೋ ದ್ರಷ್ಟಾಶ್ರುತಃ ಶ್ರೋತಾಮತೋ ಮನ್ತಾವಿಜ್ಞಾತೋ ವಿಜ್ಞಾತಾ" (ಬೃ. ೩–೭–೨೩) ಇತಿ ಹಿ ವಾಕ್ಯಶೇಷಃ ಇಹ ಭವತಿ ಆತ್ಮತ್ವಮಪಿ ನ ಪ್ರಧಾನಸ್ಯ ಉಪಪದ್ಯತೇ ॥

(ಭಾಷ್ಯಾರ್ಥ)

ಈ (ಮತವು ಪೂರ್ವಪಕ್ಷದಲ್ಲಿರ)ಬಹುದು: ಅದೃಷ್ಟತ್ವವೇ ಮುಂತಾದ ಧರ್ಮಗಳು ಸಾಂಖ್ಯಸ್ಮೃತಿಯಲ್ಲಿ ಕಲ್ಪಿತವಾಗಿರುವ[1] ಪ್ರಧಾನಕ್ಕೂ ಹೊಂದುತ್ತವೆ. ಏಕೆಂದರೆ ಅದು ರೂಪಾದಿಗಳಿಲ್ಲದ್ದೆಂದು ಅವರು ಒಪ್ಪಿರುತ್ತಾರೆ. "ತರ್ಕವನ್ನು ಮಾಡುವದಕ್ಕೆ ಬಾರದ್ದು, ಅರಿಯುವದಕ್ಕೆ ಆಗದ್ದು, ಎಲ್ಲೆಲ್ಲಿಯೂ ನಿದ್ರಿಸುವಂತಿರುವದು" ( ಮನು. ೧–೫ ) ಎಂದಲ್ಲವೆ, ಸ್ಮೃತಿಕಾರರು ಹೇಳುತ್ತಾರೆ ? ತನ್ನ ಎಲ್ಲಾ ಕಾರ್ಯಗಳಿಗೂ ಕಾರಣವಾಗಿರುವದರಿಂದ ಅದಕ್ಕೂ

1. ಪ್ರಧಾನವು ಅನುಮಾನದಿಂದ ಕಲ್ಪಿತವಾಗಿರುವ ಜಗತ್ಕಾರಣವು, ಶ್ರುತಿಯಲ್ಲಿ ಹೇಳಿರುವ ಕಾರಣವಲ್ಲ.

ನಿಯಂತೃತ್ವವು ಹೊಂದುತ್ತದೆ.[1] ಆದ್ದರಿಂದ ಪ್ರಧಾನವು 'ಅಂತರ್ಯಾಮಿ' ಎಂಬ ಶಬ್ದದಿಂದ (ಹೇಳಿದ್ದು) ಆಗಬಹುದಲ್ಲ !

'ಈಕ್ಷತೇರ್ನಾಶಬ್ದಮ್' (೧-೧-೫) ಎಂಬಲ್ಲಿ ಪ್ರಧಾನವು ನಿರಾಕೃತ ವಾಗಿದ್ದರೂ ಇಲ್ಲಿ (ಅದಕ್ಕೆ) ಅದೃಷ್ಟತ್ವವೇ ಮುಂತಾದ (ಧರ್ಮಗಳನ್ನು) ಹೇಳಿರುವದು ಹೊಂದಬಹುದಾದ್ದರಿಂದ (ಅಂತರ್ಯಾಮಿಯು ಪ್ರಧಾನವಾಗ ಬಹುದು ಎಂದು) ಮತ್ತೆ ಶಂಕಿಸಿರುತ್ತದೆ.

ಇದಕ್ಕೆ (ಈಗ ಉತ್ತರವನ್ನು) ಹೇಳಲಾಗುತ್ತದೆ. ಸ್ಮೃತಿಯಲ್ಲಿ ಹೇಳಿ ರುವ ಪ್ರಧಾನವು ಅಂತರ್ಯಾಮಿಶಬ್ದವಾಚ್ಯವಾಗಲಾರದು. ಏಕೆ ? ಎಂದರೆ ಅದರದಲ್ಲದ ಧರ್ಮಗಳನ್ನು (ಇಲ್ಲಿ) ಹೇಳಿರುವದರಿಂದ ಅದೃಷ್ಟತ್ವವೇ ಮುಂ ತಾದ (ಧರ್ಮಗಳನ್ನು) ಹೇಳಿರುವದೇನೋ ಪ್ರಧಾನಕ್ಕೆ ಆಗಬಹುದು ; ಆದರೆ ದ್ರಷ್ಟೃತ್ವವೇ ಮುಂತಾದವುಗಳನ್ನು ಹೇಳಿರುವದು (ಅದಕ್ಕೆ) ಆಗುವದಿಲ್ಲ ; ಏಕೆಂದರೆ ಪ್ರಧಾನವು ಅಚೇತನವು ಎಂದು ಆ (ಸಾಂಖ್ಯರು) ಇಟ್ಟುಕೊಂಡಿರು ತ್ತಾರೆ. "ಅದೃಷ್ಟವಾದ ದ್ರಷ್ಟೃ, ಅಶ್ರುತವಾದ ಶ್ರೋತೃ, ಅಮತವಾದ ಮಂತೃ, ಅವಿಜ್ಞಾತವಾದ ವಿಜ್ಞಾತೃ" (ಬೃ. ೩-೭-೨೩) ಎಂದಲ್ಲವೆ, ವಾಕ್ಯ ಶೇಷವಿದೆ ? ಆತ್ಮತ್ವವೂ ಪ್ರಧಾನಕ್ಕೆ ಹೊಂದುವದಿಲ್ಲ.

## ಶಾರೀರನೂ ಅಂತರ್ಯಾಮಿಯಾಗಲಾರನು

(ಭಾಷ್ಯ)

೧೯೩. ಯದಿ ಪ್ರಧಾನಮ್ ಆತ್ಮತ್ವದ್ರಷ್ಟೃತ್ವಾದ್ಯಸಂಭವಾತ್ ನಾನ್ತ ರ್ಯಾಮೀ ಅಭ್ಯುಪಗಮ್ಯತೇ, ಶಾರೀರಸ್ತರ್ಹಿ ಅನ್ತರ್ಯಾಮೀ ಭವತು | ಶಾರೀರೋ ಹಿ ಚೇತನತ್ವಾತ್ ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ ಚ ಭವತಿ | ಆತ್ಮಾ ಚ | ಪ್ರತ್ಯಕ್ತ್ವಾತ್ | ಅಮೃತಶ್ಚ | ಧರ್ಮಾಧರ್ಮ ಫಲೋಪಭೋಗೋಪಪತ್ತೇಃ | ಅದೃಷ್ಟತ್ವಾದಯಶ್ಚ ಧರ್ಮಾಃ ಶಾರೀರೇ ಪ್ರಸಿದ್ಧಾಃ । ದರ್ಶನಾದಿಕ್ರಿಯಾಯಾಃ ಕರ್ತರಿ ಪ್ರವೃತ್ತಿವಿರೋಧಾತ್ । "ನ ದೃಷ್ಟೇರ್ದ್ರಷ್ಟಾರಂ ಪಶ್ಯೇಃ" (ಬೃ. ೩-೪-೨) ಇತ್ಯಾದಿ ಶ್ರುತಿ ಭ್ಯಶ್ಚ | ತಸ್ಯ ಚ ಕಾರ್ಯಕರಣಸಙ್ಘಾತಮ್ ಅನ್ತರ್ಯಮಯಿತುಂ ಶೀಲಮ್ | ಭೋಕ್ತೃತ್ವಾತ್ | ತಸ್ಮಾತ್ ಶಾರೀರೋಽನ್ತರ್ಯಾಮೀ ಇತಿ । ಅತಃ ಉತ್ತರಂ ಪಠತಿ—

1. ಕಾರ್ಯವನ್ನು ಕಾರಣವು ನಿಯಮಮಾಡುತ್ತದೆ.

(ಭಾಷ್ಯಾರ್ಥ)

(ಆಕ್ಷೇಪ) :— ಆತ್ಮತ್ವ, ದ್ರಷ್ಟೃತ್ವವೇ ಮುಂತಾದ (ಧರ್ಮಗಳು) ಹೊಂದದಿರುವದರಿಂದ ಪ್ರಧಾನವು ಅಂತರ್ಯಾಮಿ (ಎಂಬುವದನ್ನು) ಒಪ್ಪಲಾಗದಿರಬಹುದು ; ಹಾಗಾದರೆ ಶಾರೀರನು ಅಂತರ್ಯಾಮಿಯಾಗಲಿ ! ಏಕೆಂದರೆ, ಶಾರೀರನು ಚೇತನನಾಗಿರುವದರಿಂದ ದ್ರಷ್ಟೃವೂ ಶ್ರೋತೃವೂ ಮಂತೃವೂ ವಿಜ್ಞಾತೃವೂ ಆಗಿರುತ್ತಾನೆ, ಒಳಗಿರುವದರಿಂದ ಆತ್ಮನೂ ಆಗಿರುತ್ತಾನೆ ; ಧರ್ಮಾಧರ್ಮಗಳ ಫಲಗಳನ್ನು (ಅವನು) ಅನುಭವಿಸುವದು ಹೊಂದುವದಕ್ಕಾಗಿ ಅವನು ಅಮೃತನೂ (ಆಗಿರುತ್ತಾನೆ).[1] ಅದೃಷ್ಟತ್ವವೇ ಮುಂತಾದ ಧರ್ಮಗಳು ಶಾರೀರನಲ್ಲಿ ಪ್ರಸಿದ್ಧವಾಗಿರುತ್ತವೆ; ಏಕೆಂದರೆ ನೋಡುವದು ಮುಂತಾದ ಕ್ರಿಯೆಯು (ತನ್ನ) ಕರ್ತೃವಾದ (ಶಾರೀರನಲ್ಲಿ) ವ್ಯಾಪಾರ ಮಾಡುವದು ವಿರೋಧವಾಗಿರುತ್ತದೆ[2] "ದೃಷ್ಟಿಯ ದ್ರಷ್ಟೃವನ್ನು (ನೀನು) ನೋಡಲಾರೆ" (ಬೃ. ೩-೪-೨) ಮುಂತಾದ ಶ್ರುತಿಗಳ (ಪ್ರಮಾಣ)ದಿಂದಲೂ (ಶಾರೀರನಿಗೆ ಅದೃಷ್ಟತ್ವಾದಿಧರ್ಮಗಳು ಹೊಂದುತ್ತವೆ). ಮತ್ತು ಅವನಿಗೆ ಕಾರ್ಯಕರಣಸಂಘಾತವನ್ನು (ಅದರ) ಒಳಗಿದ್ದುಕೊಂಡು ಕಟ್ಟಿನಲ್ಲಿಟ್ಟುಕೊಂಡಿರುವದು ಸ್ವಭಾವವು ; ಏಕೆಂದರೆ (ಅವನೇ) ಭೋಕ್ತೃವಾಗಿರುತ್ತಾನೆ. ಆದ್ದರಿಂದ ಶಾರೀರನೇ ಅಂತರ್ಯಾಮಿಯು.

ಈ (ಶಂಕೆಗೆ) ಉತ್ತರವನ್ನು ಹೇಳುತ್ತಾರೆ :

**ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ॥ ೨೦ ॥**

೨೦. ಶಾರೀರನೂ (ಅಂತರ್ಯಾಮಿಯಲ್ಲ) ; ಏಕೆಂದರೆ ಎರಡು (ಶಾಖೆಯವರೂ) ಇವನನ್ನು ಬೇರೆಯಾಗಿ ಹೇಳುತ್ತಿದ್ದಾರೆ.

( ಭಾಷ್ಯ )

೧೯೪. ನ ಇತಿ ಪೂರ್ವಸೂತ್ರಾತ್ ಅನುವರ್ತತೇ | ಶಾರೀರಶ್ಚ ನ ಅನ್ತರ್ಯಾಮೀ ಇಷ್ಯತೇ । ಕಸ್ಮಾತ್ ? ಯದ್ಯಪಿ ದ್ರಷ್ಟೃತ್ವಾದಯೋ ಧರ್ಮಾಸ್ತಸ್ಯ ಸಂಭವನ್ತಿ, ತಥಾಪಿ ಘಟಾಕಾಶವತ್ ಉಪಾಧಿಪರಿಚ್ಛಿನ್ನತ್ವಾತ್ ನ ಕಾರ್ತ್ಸ್ನ್ಯೇನ ಪೃಥಿವ್ಯಾದಿಷು ಅನ್ತರವಸ್ಥಾತುಂ ನಿಯನ್ತುಂ ಚ ಶಕ್ನೋತಿ | ಅಪಿ ಚ ಉಭಯೇಽಪಿ ಹಿ ಶಾಖಿನಃ ಕಾಣ್ವಾಃ ಮಾಧ್ಯನ್ದಿನಾಶ್ಚ ಅನ್ತರ್ಯಾಮಿಣೋ ಭೇದೇನ ಏನಂ ಶಾರೀರಂ ಪೃಥಿವ್ಯಾದಿವತ್

1. ಈ ಜನ್ಮದಲ್ಲಿ ಮಾಡಿದ ಕರ್ಮದ ಫಲವನ್ನು ಜನ್ಮಾಂತರದಲ್ಲಿ ಅನುಭವಿಸಬೇಕಾಗಿರುವದರಿಂದ ಅಮೃತನು, ನಿತ್ಯನು.

2. ಕ್ರಿಯೆಯು ಕರ್ತೃವಿಗಿಂತ ಬೇರೆಯಾದ ಕರ್ಮದಲ್ಲಿ ವ್ಯಾಪಾರವನ್ನು ಮಾಡಬೇಕು ; ಕರ್ತೃವಿನ ಕ್ರಿಯೆಯು ಕರ್ತೃವನ್ನೇ ವ್ಯಾಪಿಸಲಾರದು.

ಅಧಿಷ್ಠಾನತ್ವೇನ ನಿಯಮ್ಯತ್ವೇನ ಚ ಅಧೀಯತೇ । "ಯೋ ವಿಜ್ಞಾನೇ ತಿಷ್ಠನ್" (ಬೃ. ೩-೭-೨೨) ಇತಿ ಕಾಣ್ವಾಃ । "ಯ ಆತ್ಮನಿ ತಿಷ್ಠನ್" (?) ಇತಿ ಮಾಧ್ಯನ್ದಿನಾಃ । "ಯ ಆತ್ಮನಿ ತಿಷ್ಠನ್" ಇತ್ಯಸ್ಮಿಂಸ್ತಾವತ್ ಪಾಠೇ ಭವತಿ ಆತ್ಮಶಬ್ದಃ ಶಾರೀರಸ್ಯ ವಾಚಕಃ । "ಯೋ ವಿಜ್ಞಾನೇ ತಿಷ್ಠನ್" ಇತ್ಯಸ್ಮಿನ್ನಪಿ ಪಾಠೇ ವಿಜ್ಞಾನಶಬ್ದೇನ ಶಾರೀರ ಉಚ್ಯತೇ । ವಿಜ್ಞಾನಮಯೋ ಹಿ ಶಾರೀರಃ । ತಸ್ಮಾತ್ ಶಾರೀರಾದನ್ಯ ಈಶ್ವರಃ ಅನ್ತರ್ಯಾಮೀ ಇತಿ ಸಿದ್ಧಮ್ ॥

( ಭಾಷ್ಯಾರ್ಥ )

'ನ' (ಅಲ್ಲ) ಎಂಬ (ಮಾತು) ಹಿಂದಿನ ಸೂತ್ರದಿಂದ ಅನುಸರಿಸಿಕೊಂಡು ಬಂದಿರುತ್ತದೆ. ಶಾರೀರನೂ ಅಂತರ್ಯಾಮಿ ಎಂದು ಒಪ್ಪುವಹಾಗಿಲ್ಲ. ಏಕೆ ? ಎಂದರೆ, ಅವನಿಗೆ ದ್ರಷ್ಟೃತ್ವಾದಿಧರ್ಮಗಳೇನೋ ಹೊಂದುತ್ತವೆ ; ಆದರೂ **ಘಟಾಕಾಶ**ದಂತೆ ಉಪಾಧಿಪರಿಚ್ಛಿನ್ನನಾಗಿರುವದರಿಂದ ಪೃಥಿವ್ಯಾದಿಗಳಲ್ಲಿ ಪೂರ್ತಿಯಾಗಿ ಒಳಗೆ ಇದ್ದುಕೊಂಡಿರುವದಕ್ಕಾಗಲಿ ( ಅವುಗಳನ್ನು ) ಕಟ್ಟಿನಲ್ಲಿಟ್ಟುಕೊಳ್ಳುವದಕ್ಕಾಗಲಿ (ಅವನು) ಶಕ್ತನಲ್ಲ.[1] ಇದಲ್ಲದೆ **ಕಾಣ್ವರು, ಮಾಧ್ಯಂದಿನರು**-- ಈ ಎರಡೂ ಶಾಖೆಯವರು ಅಂತರ್ಯಾಮಿಗಿಂತ ಬೇರೆಯಾಗಿ ಈ ಶಾರೀರನನ್ನು ಪೃಥಿವಿ ಮುಂತಾದವುಗಳಂತೆಯೇ ( ಇವನು ಅಂತರ್ಯಾಮಿಗೆ ) ಅಧಿಷ್ಠಾನವೆಂದೂ ನಿಯಮ್ಯನೆಂದೂ[2] ಹೇಳುತ್ತಾರೆ. "ಯೋ ವಿಜ್ಞಾನೇ ತಿಷ್ಠನ್" (ಯಾವದು ವಿಜ್ಞಾನದಲ್ಲಿದ್ದುಕೊಂಡು (ಬೃ. ೩--೭--೨೨) ಎಂದು ಕಾಣ್ವರು (ಹೇಳುತ್ತಾರೆ) ; "ಯ ಆತ್ಮನಿ ತಿಷ್ಠನ್" (ಯಾವನು ಆತ್ಮನಲ್ಲಿದ್ದುಕೊಂಡು) ಎಂದು ಮಾಧ್ಯಂದಿನರು (ಹೇಳುತ್ತಾರೆ). ಮೊದಲನೆಯದಾಗಿ "ಯಾವನು ಆತ್ಮನಲ್ಲಿದ್ದುಕೊಂಡು" ಎಂಬ (ಮಾಧ್ಯಂದಿನ)ಪಾಠದಲ್ಲಿ ಆತ್ಮಶಬ್ದವು ಶಾರೀರನನ್ನು ಹೇಳತಕ್ಕದ್ದಾಗಿದೆ. "ಯಾವನು ವಿಜ್ಞಾನದಲ್ಲಿದ್ದುಕೊಂಡು" ಎಂಬ (ಕಾಣ್ವ)ಪಾಠದಲ್ಲಿಯೂ ವಿಜ್ಞಾನಶಬ್ದದಿಂದ ಶಾರೀರನನ್ನೇ ಹೇಳಿರುತ್ತದೆ ; ಏಕೆಂದರೆ ಶಾರೀರನು ವಿಜ್ಞಾನಮಯನು. ಆದ್ದರಿಂದ ಶಾರೀರನಿಗಿಂತ ಬೇರೆಯಾಗಿರುವ ಈಶ್ವರನೇ ಅಂತರ್ಯಾಮಿ ಎಂದು ಸಿದ್ಧವಾಯಿತು.

---

1. ಒಂದು ಶರೀರದಲ್ಲಿ ಮಾತ್ರವೇ ಇರುವವನು ಪೃಥಿವ್ಯಾದಿಗಳಲ್ಲೆಲ್ಲ ಇರುವ ಹಾಗಿಲ್ಲ ; ಒಂದು ಘಟಾಕಾಶವು ಎಲ್ಲಾ ಘಟಗಳಲ್ಲಿಯೂ ಇರಲಾರದಂತೆಯೇ ಇದು. ತನ್ನ ಶರೀರಾದಿಗಳೇ ಪೂರ್ಣವಾಗಿ ಇವನ ಕಟ್ಟಿನಲ್ಲಿರುವದಿಲ್ಲ.

2. ಆತ್ಮನೆಂಬ ಶಾರೀರನು ಅಧಿಷ್ಠಾನವು, ಇರುವ ಸ್ಥಳವು ; ಈಶ್ವರನೆಂಬ ಅಂತರ್ಯಾಮಿಯು ಅಧಿಷ್ಠಾತೃ, ಅದರಲ್ಲಿರುವವನು-- ಎಂದೂ ಆತ್ಮನೆಂಬ ಶಾರೀರನು ನಿಯಮ್ಯನು, ಕಟ್ಟಿನಲ್ಲಿರುವವನು, ಈಶ್ವರನೆಂಬ ಅಂತರ್ಯಾಮಿಯು ನಿಯಾಮಕನು, ಕಟ್ಟಿನಲ್ಲಿಟ್ಟಿರುವವನು-- ಎಂದೂ ಶ್ರುತಿಯಿಂದ ಸಿದ್ಧವಾಗುತ್ತದೆ. ಆದ್ದರಿಂದ ಅಂತರ್ಯಾಮಿಯು ಶಾರೀರನಿಗಿಂತ ಬೇರೆಯಾಗಿರುತ್ತಾನೆಂದಾಯಿತು.

## ಶಾರೀರಾಂತರ್ಯಾಮಿಗಳು ಭಿನ್ನರೊ, ಅಭಿನ್ನರೊ ?

( ಭಾಷ್ಯ )

೧೯೫. ಕಥಂ ಪುನಃ ಏಕಸ್ಮಿನ್ ದೇಹೇ ದ್ವೌ ದ್ರಷ್ಟಾರೌ ಉಪಪದ್ಯೇತೇ, ಯಶ್ಚಾಯಮ್ ಈಶ್ವರೋಽನ್ತರ್ಯಾಮೀ, ಯಶ್ಚಾಯಮ್ ಇತರಃ ಶಾರೀರಃ ? ಕಾ ಪುನರಿಹ ಅನುಪಪತ್ತಿಃ ? "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೩-೭-೨೩) ಇತ್ಯಾದಿಶ್ರುತಿವಚನಂ ವಿರುಧ್ಯೇತ | ಅತ್ರ ಹಿ ಪ್ರಕೃತಾತ್ ಅನ್ತರ್ಯಾಮಿಣಃ ಅನ್ಯಂ ದ್ರಷ್ಟಾರಂ ಶ್ರೋತಾರಂ ಮನ್ತಾರಂ ವಿಜ್ಞಾತಾರಂ ಚ ಆತ್ಮಾನಂ ಪ್ರತಿಷೇಧತಿ | ನಿಯನ್ತ್ರನ್ತರಪ್ರತಿಷೇಧಾರ್ಥಮೇತದ್ವಚನಮ್ ಇತಿ ಚೇತ್ | ನ | ನಿಯನ್ತ್ರನ್ತರಾಪ್ರಸಙ್ಗಾತ್, ಅವಿಶೇಷಶ್ರವಣಾಚ್ಚ । ಅತ್ರೋಚ್ಯತೇ । ಅವಿದ್ಯಾಪ್ರತ್ಯುಪಸ್ಥಾಪಿತಕಾರ್ಯಕರಣೋಪಾಧಿನಿಮಿತ್ತೋಽಯಂ ಶಾರೀರಾನ್ತರ್ಯಾಮಿಣೋರ್ಭೇದವ್ಯಪದೇಶಃ ನ ಪಾರಮಾರ್ಥಿಕಃ । ಏಕೋ ಹಿ ಪ್ರತ್ಯಗಾತ್ಮಾ ಭವತಿ, ನ ದ್ವೌ ಪ್ರತ್ಯಗಾತ್ಮಾನೌ ಸಂಭವತಃ | ಏಕಸ್ಯೈವ ತು ಭೇದವ್ಯವಹಾರಃ ಉಪಾಧಿಕೃತಃ, ಯಥಾ 'ಘಟಾಕಾಶಃ', 'ಮಹಾಕಾಶಃ' ಇತಿ | ತತಶ್ಚ ಜ್ಞಾತೃಜ್ಞೇಯಾದಿಭೇದಶ್ರುತಯಃ, ಪ್ರತ್ಯಕ್ಷಾದೀನಿ ಚ ಪ್ರಮಾಣಾನಿ, ಸಂಸಾರಾನುಭವಃ, ವಿಧಿಪ್ರತಿಷೇಧಶಾಸ್ತ್ರಂ ಚ ಇತಿ ಸರ್ವಮೇತತ್ ಉಪಪದ್ಯತೇ | ತಥಾ ಚ ಶ್ರುತಿಃ "ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ" (ಬೃ. ೪-೫-೧೫) ಇತಿ ಅವಿದ್ಯಾವಿಷಯೇ ಸರ್ವಂ ವ್ಯವಹಾರಂ ದರ್ಶಯತಿ | "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತಿ ವಿದ್ಯಾವಿಷಯೇ ಸರ್ವಂ ವ್ಯವಹಾರಂ ವಾರಯತಿ ॥

(ಭಾಷ್ಯಾರ್ಥ)

(ಆಕ್ಷೇಪ) :— ಹಾಗಾದರೆ ಒಂದೇ ದೇಹದಲ್ಲಿ ಇಬ್ಬರು ದ್ರಷ್ಟೃಗಳು - ಈಶ್ವರನೆಂಬ ಅಂತರ್ಯಾಮಿಯಿರುವನಲ್ಲ ಇವನೊಬ್ಬ, ಮತ್ತು (ಇವನಿಗಿಂತ) ಬೇರೆಯಾಗಿರುವ ಶಾರೀರನೆಂಬ ಇವನೊಬ್ಬನು - (ಹೀಗೆ) (ಇರುವದೆಂಬುದು) ಹೊಂದುವದು ಹೇಗೆ ?

(ಪ್ರಶ್ನೆ) :— ಇಲ್ಲಿ ಹೊಂದುಗಡೆಯಿಲ್ಲವೆಂಬುದು ಯಾವದು ?

(ಉತ್ತರ) :— (ಹೀಗಾದರೆ) "ಇವನಿಗಿಂತ ಬೇರೆಯ ದ್ರಷ್ಟೃವಿಲ್ಲ" ( ಬೃ. ೩-೭-೨೩ ) ಮುಂತಾದ ಶ್ರುತಿವಚನಕ್ಕೆ ವಿರೋಧವಾಗುತ್ತದೆ[1].

---

1. ಪ್ರಕೃತಶ್ರುತಿಯಲ್ಲಿರುವ ಶಾರೀರಾಂತರ್ಯಾಮಿಭೇದವು ನಿಜವೆಂದಿಟ್ಟುಕೊಂಡರೆ ಬೇರೆ ದ್ರಷ್ಟೃವಿಲ್ಲ ಎಂಬ ಶ್ರುತಿಗೆ ವಿರುದ್ಧವಾಗುವದು.

ಏಕೆಂದರೆ ಇಲ್ಲಿ ಪ್ರಕೃತನಾಗಿರುವ ಅಂತರ್ಯಾಮಿಗಿಂತ ಬೇರೆಯಾಗಿರುವ ದ್ರಷ್ಟೃವೂ ಶ್ರೋತೃವೂ ಮಂತೃವೂ ವಿಜ್ಞಾತೃವೂ ಆಗಿರುವ ಆತ್ಮನು ಇಲ್ಲವೆಂದಿರುತ್ತದೆ.

(ಪ್ರಶ್ನೆ) :— ಈ ವಚನವು ಮತ್ತೊಬ್ಬ ನಿಯಂತೃವಿಲ್ಲ ಎನ್ನುವದಕ್ಕೆ[1] (ಬಂದಿದೆ) ಎಂದರೊ ?

(ಉತ್ತರ) :— ಹಾಗಾಗದು. ಏಕೆಂದರೆ ಮತ್ತೊಬ್ಬ ನಿಯಂತೃವಿನ ಪ್ರಸಕ್ತಿಯೇ ಇಲ್ಲಿಲ್ಲ, ಮತ್ತು (ಇವನಿಗಿಂತ ಯಾವ ಬೇರೆಯ ದ್ರಷ್ಟೃವೂ ಇಲ್ಲ ಎಂದು ಮುಂತಾಗಿ) ಅವಿಶೇಷವಾಗಿಯೇ ಶ್ರುತಿಯಲ್ಲಿ ಹೇಳಿದೆ[2].

(ಆಕ್ಷೇಪಕ್ಕೆ ಪರಿಹಾರ) :— ಇದಕ್ಕೆ (ಈ ಪರಿಹಾರವನ್ನು) ಹೇಳುತ್ತೇವೆ. **ಅವಿದ್ಯೆಯು ತಂದೊಡ್ಡಿರುವ ಕಾರ್ಯಕರಣಗಳೆಂಬ ಉಪಾಧಿಯ ನಿಮಿತ್ತದಿಂದ ಈ ಶಾರೀರಾಂತರ್ಯಾಮಿಗಳ ಭೇದವನ್ನು ಹೇಳಿರುತ್ತಾರೆಯೇ ಹೊರತು ಪರಮಾರ್ಥವಾಗಿ (ಹೇಳಿ)ಲ್ಲ. ಏಕೆಂದರೆ ಒಳಗಿನ ಆತ್ಮನೆಂದರೆ ಒಬ್ಬನಿದ್ದಾನೇ ಹೊರತು ಇಬ್ಬರು ಒಳಗಿನಾತ್ಮರು ಇರಲಾರರು**[3]. **ಒಬ್ಬನಿಗೇ (ಹೀಗೆ) ಭೇದವ್ಯವಹಾರವಾಗಿರುವದು 'ಘಟಾಕಾಶ', 'ಮಹಾಕಾಶ'- ಎಂಬಂತೆ ಉಪಾಧಿಯಿಂದಾಗಿರುತ್ತದೆ. ಇದರಿಂದ ಜ್ಞಾತೃಜ್ಞೇಯಾದಿಭೇದ(ವನ್ನು ಹೇಳುವ) ಶ್ರುತಿಗಳು, ಪ್ರತ್ಯಕ್ಷಾದಿಪ್ರಮಾಣಗಳು, ಸಂಸಾರಾನುಭವ, ವಿಧಿಪ್ರತಿಷೇಧಶಾಸ್ತ್ರ-- ಇದೆಲ್ಲವೂ ಹೊಂದುಗಡೆಯಾಗುತ್ತದೆ**[4]. ಹೀಗಿರುವದರಿಂದಲೇ ಶ್ರುತಿಯು "ಎಲ್ಲಿ ದ್ವೈತವಿರುವಂತೆ ಇರುವದೋ ಅಲ್ಲಿ ಒಬ್ಬನು ಇನ್ನೊಬ್ಬನನ್ನು ಕಾಣುತ್ತಾನೆ" (ಬೃ. ೪-೫-೧೫) ಎಂದು ಅವಿದ್ಯಾವಿಷಯದಲ್ಲಿ ಎಲ್ಲಾ ವ್ಯವಹಾರವೂ (ಉಂಟೆಂದು) ತಿಳಿಸುತ್ತದೆ ; "ಆದರೆ ಎಲ್ಲಿ ಇವನಿಗೆ ಎಲ್ಲವೂ

---

1. 'ಬೇರೆ ದ್ರಷ್ಟೃವಿಲ್ಲ' ಎಂಬ ಶ್ರುತಿಗೆ ಪ್ರಕೃತಶ್ರುತಿಗೆ ವಿರುದ್ಧವಾಗದಂತೆ ಅರ್ಥಮಾಡುವದಕ್ಕೆ ಮಾಡಿದ ಪ್ರಯತ್ನವಿದು. ಈ ವ್ಯಾಖ್ಯಾನವನ್ನು ಈಚಿನ ಭಾಷ್ಯಕಾರರುಗಳು ಕೆಲವರು ಇಟ್ಟುಕೊಂಡಿರುತ್ತಾರೆ.

2. ಬೇರೆ ಅಂತರ್ಯಾಮಿಯಿಲ್ಲ ಎಂದು ಹೇಳಿಲ್ಲ, ಬೇರೆ ಯಾವ ದ್ರಷ್ಟೃವೂ ಇಲ್ಲ- ಎಂದು ಹೇಳಿದೆ ; ಅದ್ದರಿಂದ ಸಾಮಾನ್ಯಶ್ರುತಿಗೆ ವಿಶೇಷಾರ್ಥವನ್ನು ಹೇಳುವದು ಸರಿಯಲ್ಲ ಎಂದು ಅಭಿಪ್ರಾಯ.

3. ಶ್ರುತಿಗೆ ಯುಕ್ತಿಯ ಬೆಂಬಲವೂ ಇದೆ ಎಂದು ಭಾವ.

4. ಇಲ್ಲಿ ಹೇಳಿರುವದೆಲ್ಲವೂ ಆತ್ಮಾನಾತ್ಮರ ಅಧ್ಯಾಸವೆಂಬ ಅವಿದ್ಯೆಯಿಂದ ಆಗಿರುವ ವ್ಯವಹಾರವು. ಇದಕ್ಕಾಗಿಯೇ ಶಾಸ್ತ್ರದ ಆದಿಯಲ್ಲಿ ವ್ಯವಹಾರವೆಲ್ಲವೂ ಅವಿದ್ಯಕವೆಂದು ಸಾಧಿಸುವ ಉಪೋದ್ಘಾತವನ್ನು ಭಾಷ್ಯಕಾರರು ಬರೆದಿರುವದು.

ಆತ್ಮನೇ ಆಗಿರುವದೋ, ಅಲ್ಲಿ ಏತರಿಂದ ಯಾರನ್ನು ಕಂಡಾನು ?" (ಬೃ. ೪-೫-೧೫) ಎಂದು ವಿದ್ಯಾವಿಷಯದಲ್ಲಿ ಎಲ್ಲಾ ವ್ಯವಹಾರವನ್ನೂ ಅಲ್ಲಗಳೆದಿರುತ್ತದೆ.

## ೬. ಅದೃಶ್ಯತ್ವಾಧಿಕರಣ (೨೧-೨೩)

(ಮುಂಡಕ ೧-೧-೬ರಲ್ಲಿ ಹೇಳಿರುವ ಅಕ್ಷರವು ಬ್ರಹ್ಮವೇ)

**ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ॥ ೨೧ ॥**

೨೧. ಅದೃಶ್ಯತ್ವಾದಿಗುಣಗಳುಳ್ಳವನು (ಪರಮೇಶ್ವರನೇ), ಏಕೆಂದರೆ (ಅವನ) ಧರ್ಮಗಳನ್ನು ಹೇಳಿದೆ.

## ವಿಷಯವೂ ಸಂಶಯವೂ

(ಭಾಷ್ಯ)

೧೯೬. "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" (ಮುಂ. ೧-೧-೫) "ಯತ್ ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ ತದಪಾಣಿಪಾದಮ್ । ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ" (ಮುಂ. ೧-೧-೬) ಇತಿ ಶ್ರೂಯತೇ । ತತ್ರ ಸಂಶಯಃ— ಕಿಮಯಮ್ ಅದ್ರೇಶ್ಯತ್ವಾದಿಗುಣಕೋ ಭೂತಯೋನಿಃ ಪ್ರಧಾನಂ ಸ್ಯಾತ್, ಉತ ಶಾರೀರಃ, ಆಹೋಸ್ವಿತ್ ಪರಮೇಶ್ವರಃ ಇತಿ ॥

(ಭಾಷ್ಯಾರ್ಥ)

"ಇನ್ನು ಪರ(ವಿದ್ಯೆ); ಇದರಿಂದ ಆ ಅಕ್ಷರವನ್ನು ತಿಳಿಯುವದಕ್ಕಾಗುತ್ತದೆ" (ಮುಂ. ೧-೧-೫). "ಯಾವ ಆ (ಅಕ್ಷರವು) ಅದೃಶ್ಯವಾದದ್ದು,[1] ಅಗ್ರಾಹ್ಯವು, ಅಗೋತ್ರವು, ಅವರ್ಣವು, ಅಚಕ್ಷುಃಶ್ರೋತ್ರವು, ಅದು ಅಪಾಣಿಪಾದವು, ನಿತ್ಯವು, ವಿಭು, ಸರ್ವಗತವು, ಸುಸೂಕ್ಷ್ಮವು, ಅದು ಅವ್ಯಯವಾದದ್ದು. ಯಾವ (ಈ) ಭೂತಯೋನಿಯನ್ನು ಧೀರರು ಎಲ್ಲೆಲ್ಲಿಯೂ ಕಾಣುತ್ತಾರೆ" (ಮುಂ. ೧-೧-೬) ಎಂದು ಶ್ರುತಿಯಲ್ಲಿದೆ. ಅಲ್ಲಿ ಈ ಅದೃಶ್ಯತ್ವಾದಿಗುಣವುಳ್ಳ ಭೂತಯೋನಿಯು ಪ್ರಧಾನವಾಗಿರಬಹುದೆ, ಅಥವಾ ಶಾರೀರನೆ, ಇಲ್ಲವೆ ಪರಮೇಶ್ವರನೆ ?– ಎಂಬುದು ಸಂಶಯವು.

---

1. 'ಅದ್ರೇಶ್ಯಮ್' ಎಂಬ ಮಾತು 'ಅದೃಶ್ಯಮ್' ಎಂಬುದಕ್ಕೆ ವೈದಿಕರೂಪ.

## ಪೂರ್ವಪಕ್ಷ: ಈ ಭೂತಯೋನಿಯು ಪ್ರಧಾನ, ಅಥವಾ ಜೀವ

( ಭಾಷ್ಯ )

೧೯೭. ತತ್ರ ಪ್ರಧಾನಮ್ ಅಚೇತನಂ ಭೂತಯೋನಿಃ ಇತಿ ಯುಕ್ತಮ್ | ಅಚೇತನಾನಾಮೇವ ತದ್ದೃಷ್ಟಾನ್ತತ್ವೇನ ಉಪಾದಾನಾತ್, "ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವನ್ತಿ । ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾಕ್ಷರಾತ್ ಸಂಭವತೀಹ ವಿಶ್ವಮ್ ||" (ಮುಂ. ೧-೧-೭) ಇತಿ । ನನು ಊರ್ಣನಾಭಿಃ ಪುರುಷಶ್ಚ ಚೇತನೌ ಇಹ ದೃಷ್ಟಾನ್ತತ್ವೇನ ಉಪಾತ್ತೌ | ನೇತಿ ಬ್ರೂಮಃ | ನ ಹಿ ಕೇವಲಸ್ಯ ಚೇತನಸ್ಯ ತತ್ರ ಸೂತ್ರಯೋನಿತ್ವಂ ಕೇಶಲೋಮಯೋನಿತ್ವಂ ಚಾಸ್ತಿ | ಚೇತನಾಧಿಷ್ಠಿತಂ ಹಿ ಅಚೇತನಮ್ ಊರ್ಣನಾಭಿಶರೀರಂ ಸೂತ್ರಸ್ಯ ಯೋನಿಃ | ಪುರುಷಶರೀರಂ ಚ ಕೇಶಲೋಮ್ನಾಮ್ ಇತಿ ಪ್ರಸಿದ್ಧಮ್ । ಅಪಿ ಚ ಪೂರ್ವತ್ರ ಅದೃಷ್ಟತ್ವಾದ್ಯಭಿಲಾಪಸಂಭವೇಽಪಿ ದ್ರಷ್ಟೃತ್ವಾದ್ಯಭಿಲಾಪಾಸಂಭವಾತ್ ನ ಪ್ರಧಾನಮ್ ಅಭ್ಯುಪಗತಮ್ । ಇಹ ತು ಅದೃಶ್ಯತ್ವಾದಯೋ ಧರ್ಮಾಃ ಪ್ರಧಾನೇ ಸಂಭವನ್ತಿ । ನ ಚಾತ್ರ ವಿರುಧ್ಯಮಾನೋ ಧರ್ಮಃ ಕಶ್ಚಿತ್ ಅಭಿಲಪ್ಯತೇ | ನನು "ಯಃ ಸರ್ವಜ್ಞಃ ಸರ್ವವಿತ್" (ಮುಂ.೧.೧-೯) ಇತ್ಯಯಂ ವಾಕ್ಯಶೇಷಃ ಅಚೇತನೇ ಪ್ರಧಾನೇ ನ ಸಂಭವತಿ | ಕಥಂ ಪ್ರಧಾನಂ ಭೂತಯೋನಿಃ ಪ್ರತಿಜ್ಞಾಯತೇ ಇತಿ ? ಅತ್ರೋಚ್ಯತೇ । "ಯಯಾ ತದಕ್ಷರಮಧಿಗಮ್ಯತೇ," "ಯತ್ತದದ್ರೇಶ್ಯಮ್"- ಇತಿ ಅಕ್ಷರಶಬ್ದೇನ ಅದೃಶ್ಯತ್ವಾದಿಗುಣಕಂ ಭೂತಯೋನಿಂ ಶ್ರಾವಯಿತ್ವಾ ಪುನರನ್ತೇ ಶ್ರಾವಯಿಷ್ಯತಿ — "ಅಕ್ಷರಾತ್ ಪರತಃ ಪರಃ" (ಮುಂ ೨-೧-೨) ಇತಿ । ತತ್ರ ಯಃ ಪರೋಽಕ್ಷರಾತ್ ಶ್ರುತಃ ಸ ಸರ್ವಜ್ಞಃ ಸರ್ವವಿತ್ ಸಂಭವಿಷ್ಯತಿ | ಪ್ರಧಾನಮೇವ ತು ಅಕ್ಷರಶಬ್ದನಿರ್ದಿಷ್ಟಂ ಭೂತಯೋನಿಃ | ಯದಾ ತು ಯೋನಿಶಬ್ದೋ ನಿಮಿತ್ತವಾಚೀ, ತದಾ ಶಾರೀರೋಽಪಿ ಭೂತಯೋನಿಃ ಸ್ಯಾತ್| ಧರ್ಮಾಧರ್ಮಾಭ್ಯಾಂ ಭೂತಜಾತಸ್ಯ ಉಪಾರ್ಜನಾತ್ ಇತಿ ||

(ಭಾಷ್ಯಾರ್ಥ)

ಇಲ್ಲಿ ಅಚೇತನವಾದ ಪ್ರಧಾನವೇ ಭೂತಯೋನಿ ಎಂಬುದು ಯುಕ್ತವು. ಏಕೆಂದರೆ "ಹೇಗೆ ಜೇಡರಹುಳು (ದಾರವನ್ನು) ಸೃಷ್ಟಿಸುತ್ತಲೂ ಹಿಂತೆಗೆದುಕೊಳ್ಳುತ್ತಲೂ ಇರುವದೋ, ಹೇಗೆ ಪೃಥಿವಿಯಲ್ಲಿ ಗಿಡಮರಗಳು ಉಂಟಾಗುವವೋ, ಹೇಗೆ ಇರುವ ಮನುಷ್ಯನಿಂದ ಕೇಶಗಳೂ ಲೋಮಗಳೂ ಹುಟ್ಟು

ವವೋ, ಹಾಗೆ ಅಕ್ಷರದಿಂದ ಇಲ್ಲಿ ಎಲ್ಲವೂ ಉಂಟಾಗುತ್ತದೆ" (ಮುಂ.೧-೧-೭) ಎಂದು ಅಚೇತನವಾದ (ವಸ್ತುಗಳನ್ನೇ) ಆ (ಭೂತಯೋನಿ)ಗೆ ದೃಷ್ಟಾಂತ ವಾಗಿ ತೆಗೆದುಕೊಂಡಿದೆ[1].

(ಆಕ್ಷೇಪ):— ಜೇಡರಹುಳು ಮತ್ತು ಮನುಷ್ಯ (ಎಂಬ) ಚೇತನ (ವಸ್ತು)ಗಳನ್ನೇ ಇಲ್ಲಿ ದೃಷ್ಟಾಂತವಾಗಿ ತೆಗೆದುಕೊಂಡಿದೆಯಲ್ಲ !

(ಪರಿಹಾರ) :— ಇಲ್ಲವೆನ್ನುತ್ತೇವೆ. ಏಕೆಂದರೆ ಆ (ದೃಷ್ಟಾಂತ)ದಲ್ಲಿ ಬರಿಯ ಚೇತನವು ದಾರಕ್ಕೆ ಕಾರಣವಾಗಿ ಅಥವಾ ಕೇಶಲೋಮಗಳಿಗೆ ಕಾರಣ ವಾಗಿ ಇರುವದಿಲ್ಲ. ಚೇತನಕ್ಕೆ ಒಳಪಟ್ಟ ಅಚೇತನವಾದ ಜೇಡರಹುಳುವಿನ ಶರೀರವೇ ದಾರಕ್ಕೆ ಕಾರಣವಾಗಿದೆ, ಮತ್ತು ಮನುಷ್ಯನ ಶರೀರವೇ ಕೇಶ ಲೋಮಗಳಿಗೆ (ಕಾರಣವು) ಎಂಬುದು ಪ್ರಸಿದ್ಧವಾಗಿರುತ್ತದೆ.

ಇದಲ್ಲದೆ ಹಿಂದಿನ (ಅಧಿಕರಣ)ದಲ್ಲಿ ಅದೃಷ್ಟತ್ವವೇ ಮುಂತಾದವನ್ನು ಹೇಳಿರುವದು ಹೊಂದಿದರೂ ದ್ರಷ್ಟೃತ್ವವೇ ಮುಂತಾದ (ವಿಶೇಷಣಗಳನ್ನು) ಹೇಳಿರುವದು ಹೊಂದುವದಿಲ್ಲವಾದ್ದರಿಂದ ಪ್ರಧಾನವು (ಅಂತರ್ಯಾಮಿ ಎಂಬು ದನ್ನು ಸಿದ್ಧಾಂತಿಯು) ಒಪ್ಪಲಿಲ್ಲ. ಇಲ್ಲಿಯಾದರೋ ಅದೃಶ್ಯತ್ವಾದಿಧರ್ಮ ಗಳು ಪ್ರಧಾನಕ್ಕೆ ಹೊಂದುತ್ತವೆ ; (ಅದಕ್ಕೆ) ವಿರುದ್ಧವಾಗಿರುವ ಯಾವ ಧರ್ಮವನ್ನೂ ಇಲ್ಲಿ ಹೇಳಿರುವದೂ ಇಲ್ಲ.

(ಆಕ್ಷೇಪ) :— "ಯಾವನು ಸರ್ವಜ್ಞನೋ ಸರ್ವವಿತ್ತೋ" (ಮುಂ. ೧-೧-೯) ಎಂಬೀ ವಾಕ್ಯಶೇಷವು ಅಚೇತನವಾದ ಪ್ರಧಾನಕ್ಕೆ ಹೊಂದುವದಿಲ್ಲ ವಲ್ಲ! (ಹೀಗಿರುವಲ್ಲಿ) ಪ್ರಧಾನವು ಭೂತಯೋನಿ ಎಂದು ಹೇಗೆ ಹೇಳುತ್ತೀರಿ?

(ಪರಿಹಾರ) :— ಇದಕ್ಕೆ ಹೇಳುತ್ತೇವೆ. "ಇದರಿಂದ ಆ ಅಕ್ಷರವನ್ನು ತಿಳಿಯುವದಕ್ಕಾಗುತ್ತದೆ" (ಮುಂ. ೧-೧-೫), "ಯಾವ ಅದು ಅದೃಶ್ಯ ವಾದದ್ದು" (ಮುಂ. ೧-೧-೬) ಎಂದು ಅಕ್ಷರಶಬ್ದದಿಂದ ಅದೃಶ್ಯವೇ ಮುಂತಾದ ಗುಣಗಳುಳ್ಳ ಭೂತಯೋನಿಯನ್ನು ಹೇಳಿ, ಮತ್ತೆ ಕೊನೆಯಲ್ಲಿ "ಹೆಚ್ಚಿನ ಅಕ್ಷರಕ್ಕಿಂತ ಹೆಚ್ಚಿನವನು" (ಮುಂ. ೨-೧-೨) ಎಂದು ಹೇಳ ಲಾಗಿದೆ. ಅಲ್ಲಿ ಅಕ್ಷರಕ್ಕಿಂತ ಹೆಚ್ಚಿನವನು ಎಂದು ಯಾರನ್ನು ಹೇಳಿದೆಯೋ ಅವನು ಸರ್ವಜ್ಞನೂ ಸರ್ವವಿತ್ತೂ ಆಗಲಿ; ಆದರೆ (ಈ) ಅಕ್ಷರಶಬ್ದದಿಂದ ತಿಳಿಸಿರುವ ಭೂತಯೋನಿಯು ಪ್ರಧಾನವೇ (ಸರಿ).

---

1. ಜಡದಿಂದ ಜಡವು ಹುಟ್ಟುವದೆಂಬುದು ಯುಕ್ತಿಯುಕ್ತವೂ ಆಗಿರುತ್ತದೆ ಎಂದು ಭಾವ.

ಯಾವಾಗಲಾದರೆ ಯೋನಿ ಎಂಬ ಶಬ್ದವು ನಿಮಿತ್ತವಾಚಕವೆಂದು (ಅಂಗೀಕರಿಸುವೆವೋ)[1] ಆಗ ಶಾರೀರನೂ ಭೂತಯೋನಿಯಾಗಬಹುದು. ಏಕೆಂದರೆ (ಅವನು ತನ್ನ) ಧರ್ಮಾಧರ್ಮಗಳಿಂದ ಭೂತಸಮೂಹವನ್ನು ಸಂಪಾದಿಸಿಕೊಳ್ಳುತ್ತಾನೆ.[2]

## ಸಿದ್ಧಾಂತ: ಈ ಭೂತಯೋನಿಯು ಪರಮೇಶ್ವರನೇ, ಏಕೆಂದರೆ ಅವನ ಧರ್ಮಗಳನ್ನು ಹೇಳಿದೆ.

(ಭಾಷ್ಯ)

೧೯೮. ಏವಂ ಪ್ರಾಪ್ತೇ ಅಭಿಧೀಯತೇ । ಯೋಽಯಮ್ ಅದೃಶ್ಯತ್ವಾದಿಗುಣಕೋ ಭೂತಯೋನಿಃ, ಸ ಪರಮೇಶ್ವರ ಏವ ಸ್ಯಾತ್, ನಾನ್ಯಃ ಇತಿ । ಕಥಮೇತತ್ ಅವಗಮ್ಯತೇ ? ಧರ್ಮೋಕ್ತೇಃ । ಪರಮೇಶ್ವರಸ್ಯ ಹಿ ಧರ್ಮಃ ಇಹ ಉಚ್ಯಮಾನೋ ದೃಶ್ಯತೇ — "ಯಃ ಸರ್ವಜ್ಞಃ ಸರ್ವವಿತ್" (ಮುಂ. ೧-೧-೯) ಇತಿ । ನ ಹಿ ಪ್ರಧಾನಸ್ಯ ಅಚೇತನಸ್ಯ ಶಾರೀರಸ್ಯ ವಾ ಉಪಾಧಿಪರಿಚ್ಛಿನ್ನದೃಷ್ಟೇಃ ಸರ್ವಜ್ಞತ್ವಂ ಸರ್ವವಿತ್ತ್ವಂ ವಾ ಸಂಭವತಿ । ನನು ಅಕ್ಷರಶಬ್ದನಿರ್ದಿಷ್ಟಾತ್ ಭೂತಯೋನೇಃ ಪರಸ್ಯೈವ ತತ್ ಸರ್ವಜ್ಞತ್ವಂ ಸರ್ವವಿತ್ತ್ವಂ ಚ ನ ಭೂತಯೋನಿವಿಷಯಮ್ ಇತ್ಯುಕ್ತಮ್। ಅತ್ರೋಚ್ಯತೇ। ನೈವಂ ಸಂಭವತಿ । ಯತ್ಕಾರಣಂ "ಅಕ್ಷರಾತ್ ಸಂಭವತೀಹ ವಿಶ್ವಮ್" (ಮುಂ. ೧-೧-೭) ಇತಿ ಪ್ರಕೃತಂ ಭೂತಯೋನಿಮ್ ಇಹ ಜಾಯಮಾನಪ್ರಕೃತಿತ್ವೇನ ನಿರ್ದಿಶ್ಯ ಅನನ್ತರಮಪಿ ಜಾಯಮಾನಪ್ರಕೃತಿತ್ವೇನೈವ ಸರ್ವಜ್ಞಂ ನಿರ್ದಿಶತಿ—"ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ।ತಸ್ಮಾದೇತದ್ ಬ್ರಹ್ಮ ನಾಮರೂಪಮನ್ನಂ ಚ ಜಾಯತೇ" (ಮುಂ.೧-೧-೯) ಇತಿ। ತಸ್ಮಾತ್ ನಿರ್ದೇಶಸಾಮ್ಯೇನ ಪ್ರತ್ಯಭಿಜ್ಞಾಯಮಾನತ್ವಾತ್ ಪ್ರಕೃತಸ್ಯೈವ ಅಕ್ಷರಸ್ಯ ಭೂತಯೋನೇಃ ಸರ್ವಜ್ಞತ್ವಂ ಸರ್ವವಿತ್ತ್ವಂ ಚ ಧರ್ಮಃ ಉಚ್ಯತೇ ಇತಿ ಗಮ್ಯತೇ। "ಅಕ್ಷರಾತ್ ಪರತಃ ಪರಃ" (ಮುಂ.೨-೧-೨) ಇತ್ಯತ್ರಾಪಿ ನ ಪ್ರಕೃತಾತ್ ಭೂತಯೋನೇಃ ಅಕ್ಷರಾತ್ ಪರಃ ಕಶ್ಚಿತ್ ಅಭಿಧೀಯತೇ। ಕಥಮೇತತ್ ಅವಗಮ್ಯತೇ ? "ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್" (ಮುಂ. ೧-೨-೧೩) ಇತಿ ಪ್ರಕೃತ್ಯ ತಸ್ಯೈ

---

1. ಇದುವರೆಗೆ ಅದು ಉಪಾದಾನವಾಚಕವೆಂದೇ ಇಟ್ಟುಕೊಂಡಿದೆ.

2 ಜೀವರುಗಳು ಮಾಡಿದ ಧರ್ಮಾಧರ್ಮಗಳ ಫಲವಾಗಿ ಜಗತ್ತು ಉಂಟಾಗಿದೆ ಎಂದು ಭಾವ.

ವಾಕ್ಷರಸ್ಯ ಭೂತಯೋನೇಃ ಅದೃಶ್ಯತ್ವಾದಿಗುಣಕಸ್ಯ ವಕ್ತವ್ಯತ್ವೇನ ಪ್ರತಿಜ್ಞಾತತ್ವಾತ್ । ಕಥಂ ತರ್ಹಿ "ಅಕ್ಷರಾತ್ ಪರತಃ ಪರಃ" ಇತಿ ವ್ಯಪದಿಶ್ಯತೇ ಇತಿ ? ಉತ್ತರಸೂತ್ರೇ ತದ್ ವಕ್ಷ್ಯಾಮಃ ||

( ಭಾಷ್ಯಾರ್ಥ )

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಇದಕ್ಕೆ ಹೀಗೆಂದು) ಹೇಳುತ್ತೇವೆ. ಅದೃಶ್ಯವೇ ಮುಂತಾದ ಗುಣಗಳುಳ್ಳ ಯಾವ ಈ ಭೂತಯೋನಿ (ಯನ್ನು ಹೇಳಿದೆಯೋ) ಇವನು ಪರಮೇಶ್ವರನೇ ಆಗಬೇಕೇ ಹೊರತು ಮತ್ತೊಬ್ಬ(ನಾಗ)ಲಾರನು. ಇದು ಹೇಗೆ ನಿಶ್ಚಯವಾಗುತ್ತದೆ ? ಎಂದರೆ (ಅವನ) ಧರ್ಮಗಳನ್ನು ಹೇಳಿರುವದರಿಂದ. "ಯಾವನು ಸರ್ವಜ್ಞನೋ ಸರ್ವವಿತ್ತೋ" ( ಮುಂ. ೧-೧-೯ ) ಎಂದು ಪರಮೇಶ್ವರನ ಧರ್ಮವನ್ನಲ್ಲವೆ, ಇಲ್ಲಿ ಹೇಳಿರುವದು ಕಂಡುಬರುತ್ತದೆ ? ಅಚೇತನವಾದ ಪ್ರಧಾನಕ್ಕಾಗಲಿ, ಉಪಾಧಿಯ ಅಳತೆಗೆ ಕಟ್ಟುಬಿದ್ದಿರುವ ದೃಷ್ಟಿಯುಳ್ಳ ಶಾರೀರನಿಗಾಗಲಿ ಸರ್ವಜ್ಞತ್ವವು ಅಥವಾ ಸರ್ವವಿತ್ತ್ವವು[1] ಹೊಂದುವಹಾಗಿಲ್ಲವಷ್ಟೆ ?

(ಪೂರ್ವಪಕ್ಷಿ):- ಅಕ್ಷರಶಬ್ದದಿಂದ ಹೇಳಿರುವ ಭೂತಯೋನಿಗಿಂತಲೂ ಹೆಚ್ಚಿನವನಾದ (ಬೇರೊಬ್ಬನಿಗೇ ಈ) ಸರ್ವಜ್ಞತ್ವವನ್ನೂ ಸರ್ವವಿತ್ತ್ವವನ್ನೂ (ಹೇಳಿದೆ, ಅದು) ಭೂತಯೋನಿಯ ವಿಷಯವಲ್ಲ- ಎಂದು (ನಾವು) ಹೇಳಿದ್ದೆವಲ್ಲ !

(ಸಿದ್ಧಾಂತ):- ಹೀಗೆ ಹೊಂದುವದಿಲ್ಲ. ಯಾವ ಕಾರಣದಿಂದ ಎಂದರೆ, "ಅಕ್ಷರದಿಂದ ಇಲ್ಲಿ ಎಲ್ಲವೂ ಉಂಟಾಗುತ್ತದೆ" (ಮುಂ. ೧-೧-೭) ಎಂದು ಪ್ರಕೃತನಾಗಿರುವ ಭೂತಯೋನಿಯನ್ನು ಹುಟ್ಟುವದಕ್ಕೆಲ್ಲ ಮೂಲಕಾರಣವೆಂದು ತಿಳಿಸಿ, ಆ ಬಳಿಕವೂ "ಯಾವನು ಸರ್ವಜ್ಞನೋ ಸರ್ವವಿತ್ತೋ ಯಾವನ ತಪಸ್ಸು ಜ್ಞಾನಮಯವಾಗಿರುವದೋ, ಆತನಿಂದ ಈ ಬ್ರಹ್ಮವೂ ನಾಮವೂ ರೂಪವೂ ಅನ್ನವೂ ಉಂಟಾಗುತ್ತದೆ" (ಮುಂ. ೧-೧-೯) ಎಂದು ಸರ್ವಜ್ಞನನ್ನೂ ಹುಟ್ಟುವದಕ್ಕೆಲ್ಲ ಮೂಲಕಾರಣವೆಂದೇ (ಶ್ರುತಿಯು) ತಿಳಿಸುತ್ತದೆ. ಆದ್ದರಿಂದ (ಹೀಗೆ) ನಿರ್ದೇಶವು ಸಮಾನವಾಗಿರುವದರಿಂದ[2] ಅದೇ ಎಂದು

1. ಸರ್ವಜ್ಞತ್ವವು ಎಂದರೆ ಎಲ್ಲವನ್ನೂ ಸಾಮಾನ್ಯವಾಗಿ ಅರಿಯುವದು, ಸರ್ವವಿತ್ತ್ವವು ಎಂದರೆ ಒಂದೊಂದನ್ನೂ ಬೇರೆಬೇರೆಯಾಗಿ ಅರಿಯುವದು.

2. ಹುಟ್ಟುವದಕ್ಕೆ ಕಾರಣವಾಗಿರುವದೆಂದೇ ಎರಡು ಕಡೆಯಲ್ಲಿಯೂ ತಿಳಿಸಿರುವದರಿಂದ.

ಗುರುತಿಸಬಹುದಾದ್ದರಿಂದ ಪ್ರಕೃತವಾಗಿರುವ ಅಕ್ಷರವೆಂಬ ಭೂತಯೋನಿಗೇ ಸರ್ವಜ್ಞತ್ವವೂ ಸರ್ವವಿತ್ತ್ವವೂ ಧರ್ಮವೆಂದು ಹೇಳಿದೆ ಎಂದು ಗೊತ್ತಾಗುತ್ತದೆ.

"ಹೆಚ್ಚಿನ ಅಕ್ಷರಕ್ಕಿಂತ ಹೆಚ್ಚಿನವನಾಗಿರುವ" (ಮುಂ. ೨-೧-೨) ಎಂಬಲ್ಲಿಯೂ ಪ್ರಕೃತವಾಗಿರುವ ಭೂತಯೋನಿಯಾದ ಅಕ್ಷರಕ್ಕಿಂತ ಹೆಚ್ಚಿನವನಾದ ಯಾವನನ್ನೂ ಹೇಳಿರುವದಿಲ್ಲ. ಇದು ಹೇಗೆ ಗೊತ್ತು ? ಎಂದರೆ "ಯಾವದರಿಂದ ಸತ್ಯವಾಗಿರುವ ಅಕ್ಷರವೆಂಬ ಪುರುಷನನ್ನು ತಿಳಿಯುವನೋ ಆ ಬ್ರಹ್ಮವಿದ್ಯೆಯನ್ನು ತತ್ತ್ವದಿಂದ ತಿಳಿಸಬೇಕು" (ಮುಂ. ೧-೨-೧೩) ಎಂದು ಪ್ರಾರಂಭಿಸಿ ಅದೃಶ್ಯತ್ವಾದಿಗುಣಗಳುಳ್ಳ ಅದೇ ಅಕ್ಷರವೆಂಬ ಭೂತಯೋನಿಯನ್ನೇ ಹೇಳಲಾಗುವದೆಂದು ತಿಳಿಸಿರುವದರಿಂದ (ಹೀಗೆಂದು ಗೊತ್ತಾಗುತ್ತದೆ).

(ಆಕ್ಷೇಪ):- "ಹೆಚ್ಚಿನ ಅಕ್ಷರಕ್ಕಿಂತಲೂ ಹೆಚ್ಚಿನವನು" (ಮುಂ ೨-೧-೨) ಎಂದು ಹೇಳಿರುವದು ಹೇಗೆ ?[1]

(ಉತ್ತರ):- ಇದನ್ನು ಮುಂದಿನ ಸೂತ್ರದಲ್ಲಿ ಹೇಳುವೆವು

## ಪರವಿದ್ಯೆ ಎಂಬ ಹೆಸರೂ ಇದು ಬ್ರಹ್ಮವೆಂದು ತಿಳಿಸುತ್ತದೆ

( ಭಾಷ್ಯ )

೧೯೯. ಅಪಿ ಚ ಅತ್ರ ದ್ವೇ ವಿದ್ಯೇ ವೇದಿತವ್ಯೇ ಉಕ್ತೇ 'ಪರಾ ಚೈವಾಪರಾ ಚ' (ಮುಂ. ೧-೧-೪) ಇತಿ | ತತ್ರ ಅಪರಾಮ್ ಋಗ್ವೇದಾದಿಲಕ್ಷಣಾಂ ವಿದ್ಯಾಮ್ ಉಕ್ತ್ವಾ ಬ್ರವೀತಿ- "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" (ಮುಂ. ೧-೧-೫) ಇತ್ಯಾದಿ | ತತ್ರ ಪರಸ್ಯಾ ವಿದ್ಯಾಯಾ ವಿಷಯತ್ವೇನ ಅಕ್ಷರಂ ಶ್ರುತಮ್ । ಯದಿ ಪುನಃ ಪರಮೇಶ್ವರಾತ್ ಅನ್ಯತ್ ಅದೃಶ್ಯತ್ವಾದಿಗುಣಕಮ್ ಅಕ್ಷರಂ ಪರಿಕಲ್ಪ್ಯೇತ, ನೇಯಂ ಪರಾ ವಿದ್ಯಾ ಸ್ಯಾತ್ । ಪರಾಪರವಿಭಾಗೋ ಹ್ಯಯಂ ವಿದ್ಯಯೋಃ ಅಭ್ಯುದಯನಿಃಶ್ರೇಯಸಫಲತಯಾ ಪರಿಕಲ್ಪ್ಯತೇ । ನ ಚ ಪ್ರಧಾನವಿದ್ಯಾ ನಿಃಶ್ರೇಯಸಫಲಾ ಕೇನಚಿತ್ ಅಭ್ಯುಪಗಮ್ಯತೇ | ತಿಸ್ರಶ್ಚ ವಿದ್ಯಾಃ ಪ್ರತಿಜ್ಞಾಯೇರನ್ ತ್ವತ್ಪಕ್ಷೇ। ಅಕ್ಷರಾತ್ ಭೂತಯೋನೇಃ ಪರಸ್ಯ ಪರಮಾತ್ಮನಃ ಪ್ರತಿಪಾದ್ಯಮಾನತ್ವಾತ್ | ದ್ವೇ ಏವ ತು

1. ಇಲ್ಲಿ ಅಕ್ಷರವೇ ಬೇರೆ, ಅದಕ್ಕಿಂತ ಹೆಚ್ಚಿನವನೇ ಬೇರೆ- ಎಂದು ಕಾಣುತ್ತದೆಯಲ್ಲ !. ಎಂದು ಶಂಕೆ.

ವಿದ್ಯೇ ವೇದಿತವ್ಯೇ ಇಹ ನಿರ್ದಿಷ್ಟೇ। "ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" (ಮುಂ. ೧-೧-೩) ಇತಿ ಚ ಏಕವಿಜ್ಞಾನೇನ ಸರ್ವವಿಜ್ಞಾನಾಪೇಕ್ಷಣಂ ಸರ್ವಾತ್ಮಕೇ ಬ್ರಹ್ಮಣಿ ವಿವಕ್ಷ್ಯಮಾಣೇ ಅವಕಲ್ಪತೇ ನ ಅಚೇತನಮಾತ್ರೈಕಾಯತನೇ ಪ್ರಧಾನೇ, ಭೋಗ್ಯವ್ಯತಿರಿಕ್ತೇ ವಾ ಭೋಕ್ತರಿ। ಅಪಿ ಚ "ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ" ಇತಿ ಬ್ರಹ್ಮವಿದ್ಯಾಂ ಪ್ರಾಧಾನ್ಯೇನ ಉಪಕ್ರಮ್ಯ ಪರಾಪರವಿಭಾಗೇನ ಪರಾಂ ವಿದ್ಯಾಮ್ ಅಕ್ಷರಾಧಿಗಮನೀಂ ದರ್ಶಯನ್ ತಸ್ಯಾ ಬ್ರಹ್ಮವಿದ್ಯಾತ್ವಂ ದರ್ಶಯತಿ। ಸಾ ಚ ಬ್ರಹ್ಮವಿದ್ಯಾಸಮಾಖ್ಯಾ ತದಧಿಗಮ್ಯಸ್ಯ ಅಕ್ಷರಸ್ಯ ಅಬ್ರಹ್ಮತ್ವೇ ಬಾಧಿತಾ ಸ್ಯಾತ್। ಅಪರಾ ಋಗ್ವೇದಾದಿಲಕ್ಷಣಾ ಕರ್ಮವಿದ್ಯಾ ಬ್ರಹ್ಮವಿದ್ಯೋಪಕ್ರಮೇ ಉಪನ್ಯಸ್ಯತೇ ಬ್ರಹ್ಮವಿದ್ಯಾಪ್ರಶಂಸಾಯೈ। "ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ। ಏತಚ್ಛ್ರೇಯೋ ಯೇಽಭಿನನ್ದನ್ತಿ ಮೂಢಾ ಜರಾಮೃತ್ಯುಂ ತೇ ಪುನರೇವಾಪಿ ಯನ್ತಿ" (ಮುಂ. ೧-೨-೭) ಇತ್ಯೇವಮಾದಿನಿನ್ದಾವಚನಾತ್, ನಿನ್ದಿತ್ವಾ ಚ ಅಪರಾಂ ವಿದ್ಯಾಂ ತತೋ ವಿರಕ್ತಸ್ಯ ಪರವಿದ್ಯಾಧಿಕಾರಂ ದರ್ಶಯತಿ– ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ | ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ||" (ಮುಂ. ೧-೨-೧೨) ಇತಿ ॥

( ಭಾಷ್ಯಾರ್ಥ )

ಇದೂ ಅಲ್ಲದೆ, ಇಲ್ಲಿ 'ಪರ' ಮತ್ತು 'ಅಪರ' ಎಂದು ಎರಡು ವಿದ್ಯೆಗಳನ್ನು ತಿಳಿಯಬೇಕೆಂದು (ಮುಂ. ೧-೧-೪) ಹೇಳಿದೆ. ಇವುಗಳಲ್ಲಿ ಋಗ್ವೇದಾದಿರೂಪವಾದ ಅಪರವಿದ್ಯೆಯನ್ನು ಹೇಳಿ "ಇನ್ನು ಪರವಿದ್ಯೆ, ಅದರಿಂದ ಆ ಅಕ್ಷರವನ್ನು ತಿಳಿಯುವದಕ್ಕಾಗುತ್ತದೆ" (ಮುಂ. ೧-೧-೫) ಎಂದು ಮುಂತಾಗಿ ಹೇಳಿರುತ್ತದೆ. ಇಲ್ಲಿ ಪರವಿದ್ಯೆಗೆ ವಿಷಯವೆಂದು ಅಕ್ಷರವನ್ನು ಹೇಳಿರುತ್ತದೆ. (ಹೀಗಿರುವಲ್ಲಿ) ಪರಮೇಶ್ವರನಿಗಿಂತ ಬೇರೆ (ಯಾವದೋ ಒಂದು) ಅದೃಶ್ಯತ್ವಾದಿಗುಣವುಳ್ಳ ಅಕ್ಷರವು ಎಂದು ಕಲ್ಪಿಸುವದಾದರೆ, ಇದು ಪರವಿದ್ಯೆಯಾಗಲಾರದು. ಹೇಗೆಂದರೆ ವಿದ್ಯೆಗಳನ್ನು ಪರ, ಅಪರ– ಎಂದು (ವಿಂಗಡಿಸುವ) ಈ ವಿಭಾಗವನ್ನು ಅಭ್ಯುದಯ, ನಿಃಶ್ರೇಯಸ– ಎಂಬ ಫಲಕ್ಕಲ್ಲವೆ, ಕಲ್ಪಿಸಿರುವದು? ಪ್ರಧಾನವಿದ್ಯೆಗೆ ನಿಃಶ್ರೇಯಸವು ಫಲವೆಂದು ಯಾರೂ ಒಪ್ಪಿರುವದಿಲ್ಲ. (ಪೂರ್ವಪಕ್ಷಿಯಾದ) ನಿನ್ನ ಪಕ್ಷದಲ್ಲಿ[1] ಮೂರು ವಿದ್ಯೆಗಳನ್ನು(ಹೇಳುತ್ತೇವೆಂದು) ಪ್ರತಿಜ್ಞೆ

1. 'ತ್ವತ್ಪಕ್ಷೇ' ಎಂಬ ಮಾತು ಹಿಂದಿನ ವಾಕ್ಯಕ್ಕೂ ಮುಂದಿನ ವಾಕ್ಯಕ್ಕೂ ಸಮವಾಗಿಯೇ ಅನ್ವಯವಾಗುವಂತೆ ಇದೆ.

ಮಾಡಿದಂತೆ ಆಗುತ್ತದೆ ! ಏಕೆಂದರೆ ಅಕ್ಷರವೆಂಬ ಭೂತಯೋನಿಗಿಂತ ಹೆಚ್ಚಿನ ಪರಮಾತ್ಮನನ್ನು (ಮುಂದೆ) ತಿಳಿಸಲಾಗುತ್ತದೆ (ಎಂಬುದು ನಿನ್ನ ಪಕ್ಷವು). ಆದರೆ ಎರಡೇ ವಿದ್ಯೆಗಳು ತಿಳಿಯತಕ್ಕವು ಎಂದು ಇಲ್ಲಿ ತಿಳಿಸಿರುತ್ತದೆ.

ಮತ್ತು "ಪೂಜ್ಯನೆ, ಯಾವದನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತದ್ದಾಗುವದು?'' (ಮುಂ. ೧-೧-೩) ಎಂದು ಒಂದರ ಅರಿವಿನಿಂದ ಎಲ್ಲದರ ಅರಿವನ್ನೂ ಬಯಸಿರುವದು ಸರ್ವಾತ್ಮಕವಾದ ಬ್ರಹ್ಮವನ್ನು ಹೇಳಬೇಕೆಂದಿದ್ದರೆ ಸರಿಯಾಗುತ್ತದೆಯೇ ಹೊರತು ಅಚೇತನಮಾತ್ರಕ್ಕೆ ಒಂದೇ ಆಶ್ರಯವಾಗಿರುವ ಪ್ರಧಾನವನ್ನಾಗಲಿ ಭೋಗ್ಯವ್ಯತಿರಿಕ್ತವಾದ ಭೋಕ್ತೃವನ್ನಾಗಲಿ (ಹೇಳಬೇಕೆಂದಿದ್ದರೆ ಸರಿಯಾಗುವ)ದಿಲ್ಲ[1]. ಇದಲ್ಲದೆ ''ಆತನು ಎಲ್ಲಾ ವಿದ್ಯೆಗಳಿಗೂ ಪ್ರತಿಷ್ಠೆಯಾಗಿರುವ ಬ್ರಹ್ಮವಿದ್ಯೆಯನ್ನು ಅಥರ್ವನೆಂಬ ಹಿರಿಯಮಗನಿಗೆ ಹೇಳಿಕೊಟ್ಟನು" (ಮುಂ. ೧-೧-೧) ಎಂದು ಬ್ರಹ್ಮವಿದ್ಯೆಯನ್ನೇ ಮುಖ್ಯವಾಗಿ ಪ್ರಾರಂಭಿಸಿ, (ವಿದ್ಯೆಗಳನ್ನು) ಪರ, ಅಪರ- ಎಂದು ವಿಂಗಡಿಸಿ ಪರವಿದ್ಯೆಯು ಅಕ್ಷರವನ್ನು ತಿಳಿಸಿಕೊಡುತ್ತದೆ ಎಂದು ತಿಳಿಸಿರುವದರಿಂದ ಆ (ಪರವಿದ್ಯೆಯು) ಬ್ರಹ್ಮವಿದ್ಯೆ- ಎಂದು ತಿಳಿಸಿದಂತಾಗಿದೆ. ಆ ಬ್ರಹ್ಮವಿದ್ಯೆ ಎಂಬ **ಸಮಾಖ್ಯೆಯು** ಆ(ವಿದ್ಯೆಯಿಂದ) ತಿಳಿಯಬರುವದು ಬ್ರಹ್ಮವಲ್ಲದೆಹೋದರೆ ಬಾಧಿತವಾಗುವದು[2]. ಋಗ್ವೇದಾದಿರೂಪವಾದ ಅಪರ(ವಿದ್ಯೆಯಾದ) ಕರ್ಮವಿದ್ಯೆಯನ್ನು ಬ್ರಹ್ಮವಿದ್ಯೆಯ ಮೊದಲಲ್ಲಿ, (ಆ) ಬ್ರಹ್ಮವಿದ್ಯೆಯನ್ನು ಹೊಗಳುವದಕ್ಕಾಗಿ ಹೇಳಿದೆ (ಎನ್ನಬೇಕು). ಏಕೆಂದರೆ ''ಈ ಹದಿನೆಂಟು ಯಜ್ಞರೂಪಗಳು ಹಗುರವಾಗಿರುವವು, ಗಟ್ಟಿಯಲ್ಲ, ಅವುಗಳಲ್ಲಿ ಕೀಳುಕರ್ಮವು ಉಕ್ತವಾಗಿರುತ್ತದೆ. ಇದನ್ನು ಶ್ರೇಯಸ್ಸೆಂದು ಯಾವ ಮೂಢರು ಹಿಗ್ಗುವರೋ ಅವರು ಜರಾಮೃತ್ಯುವನ್ನು ಮತ್ತೆ ಹೊಂದುವರು" (ಮುಂ. ೧-೨-೩) ಎಂದು ಮುಂತಾಗಿ (ಕರ್ಮವನ್ನು) ನಿಂದಿಸಿರುವ ವಚನವು (ಅಲ್ಲಿರುತ್ತದೆ). ಮತ್ತು ಅಪರವಿದ್ಯೆಯನ್ನು ನಿಂದಿಸಿ ಅದರಲ್ಲಿ ವಿರಕ್ತನಾದವನಿಗೇ ಪರವಿದ್ಯೆಯಲ್ಲಿ ಅಧಿಕಾರವೆಂಬುದನ್ನು "ಕರ್ಮದಿಂದ ಆಗಿರುವ ಲೋಕಗಳನ್ನು ಪರೀಕ್ಷಿಸಿ ಬ್ರಾಹ್ಮಣನು 'ಅಕೃತವಾದದ್ದು ಕೃತದಿಂದ ಆಗುವದಿಲ್ಲ' ಎಂದು ನಿರ್ವೇದವನ್ನು ಹೊಂದಬೇಕು. ಅದನ್ನು ಅರಿಯುವದಕ್ಕಾಗಿ ಅವನು ಸಮಿತ್ಪಾಣಿಯಾಗಿ ಶ್ರೋತ್ರಿಯನೂ

---

1. ಒಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದೆಂಬುದೂ ಇದು ಬ್ರಹ್ಮವೆಂಬುದಕ್ಕೆ ಒಂದು ಗುರುತು.

2. ಬ್ರಹ್ಮವಿದ್ಯೆ ಎಂಬ ಸಮಾಖ್ಯೆಯೂ ಪರವಿದ್ಯೆಗೆ ವಿಷಯವಾದ ಭೂತಯೋನಿಯು ಬ್ರಹ್ಮವೇ ಎಂಬುದನ್ನು ತಿಳಿಸುತ್ತದೆ.

ಬ್ರಹ್ಮನಿಷ್ಠನೂ ಆದ ಗುರುವನ್ನೇ ಬಳಿಸಾರಬೇಕು" (ಮುಂ. ೧-೨-೧೨) ಎಂದು ತಿಳಿಸಿರುತ್ತದೆ[1].

## ದೃಷ್ಟಾಂತಬಲದಿಂದ ಬ್ರಹ್ಮವನ್ನು ನಿರಾಕರಿಸುವದು ಸರಿಯಲ್ಲ

( ಭಾಷ್ಯ )

೨೦೦. ಯತ್ತು ಉಕ್ತಮ್ ಅಚೇತನಾನಾಂ ಪೃಥಿವ್ಯಾದೀನಾಂ ದೃಷ್ಟಾನ್ತತ್ವೇನೋಪಾದಾನಾತ್ ದಾರ್ಷ್ಟಾರ್ನ್ತಿಕೇನಾಪಿ ಅಚೇತನೇನ ಭೂತಯೋನಿನಾ ಭವಿತವ್ಯಮ್ ಇತಿ । ತತ್ ಅಯುಕ್ತಮ್ । ನ ಹಿ ದೃಷ್ಟಾನ್ತದಾರ್ಷ್ಟಾರ್ನ್ತಿಕಯೋಃ ಅತ್ಯನ್ತಸಾಮ್ಯೇನ ಭವಿತವ್ಯಮ್ ಇತಿ ನಿಯಮೋಽಸ್ತಿ। ಅಪಿ ಚ ಸ್ಥೂಲಾಃ ಪೃಥಿವ್ಯಾದಯಃ ದೃಷ್ಟಾನ್ತತ್ವೇನ ಉಪಾತ್ತಾಃ ಇತಿ ನ ಸ್ಥೂಲ ಏವ ದಾರ್ಷ್ಟಾರ್ನ್ತಿಕೋ ಭೂತಯೋನಿಃ ಅಭ್ಯುಪಗಮ್ಯತೇ । ತಸ್ಮಾತ್ ಅದೃಶ್ಯತ್ವಾದಿಗುಣಕೋ ಭೂತಯೋನಿಃ ಪರಮೇಶ್ವರ ಏವ ॥

(ಭಾಷ್ಯಾರ್ಥ)

ಇನ್ನು ಅಚೇತನವಾದ ಪೃಥಿವಿಯೇ ಮುಂತಾದವುಗಳನ್ನು ದೃಷ್ಟಾಂತವಾಗಿ ತೆಗೆದುಕೊಂಡಿರುವದರಿಂದ ದಾರ್ಷ್ಟಾರ್ಂತಿಕವಾದ ಭೂತಯೋನಿಯೂ ಅಚೇತನವಾಗಿರಬೇಕು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದು ಅಯುಕ್ತವು. ಏಕೆಂದರೆ **ದೃಷ್ಟಾಂತದಾರ್ಷ್ಟಾರ್ಂತಿಕಗಳಿಗೆ ಅತ್ಯಂತವಾಗಿ ಹೋಲಿಕೆಯೇ ಇರಬೇಕೆಂಬ ನಿಯಮವಿರುವದಿಲ್ಲ**[2]. ಇದಲ್ಲದೆ ಪೃಥಿವಿಯೇ ಮುಂತಾದ ಸ್ಥೂಲ(ಪದಾರ್ಥ)ಗಳನ್ನು ದೃಷ್ಟಾಂತವಾಗಿ ತೆಗೆದುಕೊಂಡಿರುತ್ತದೆ ಎಂಬ (ಕಾರಣದಿಂದ) ಭೂತಯೋನಿಯೂ ಸ್ಥೂಲವೇ (ಆಗಿರಬೇಕೆಂದು ನೀವೂ) ಒಪ್ಪುವದಿಲ್ಲ[3]. ಆದ್ದರಿಂದ ಅದೃಶ್ಯತ್ವವೇ ಮುಂತಾದ ಗುಣಗಳುಳ್ಳ ಭೂತ ಯೋನಿಯು ಪರಮೇಶ್ವರನೇ.

---

1. ಆದ್ದರಿಂದ ಬ್ರಹ್ಮವಿದ್ಯೆಯನ್ನು ಹೊಗಳುವದಕ್ಕೆ ಅಪರವಿದ್ಯೆಯಾದ ಕರ್ಮವಿದ್ಯೆಯನ್ನು ಇಲ್ಲಿ ಪ್ರಸ್ತಾಪಿಸಿದೆ ಎಂದಾಯಿತು.

2. ಇದ್ದರೆ ದೃಷ್ಟಾಂತ, ದಾರ್ಷ್ಟಾರ್ಂತಿಕ- ಎಂಬ ಭೇದವೇ ಇಲ್ಲವಾಗುತ್ತದೆ.

3. ಒಪ್ಪಿದರೆ ಪ್ರಧಾನವು ಕಾರ್ಯಗಳೆಲ್ಲಕ್ಕಿಂತಲೂ ಸೂಕ್ಷ್ಮವಾಗಿರುವ ಅವ್ಯಕ್ತವೆಂಬ ಸಿದ್ಧಾಂತವು ಹೋಗಬೇಕಾಗುವದು. ಆದ್ದರಿಂದ ಕಾರ್ಯಕಾರಣಗಳಿಗೆ ಸಾಲಕ್ಷಣ್ಯವೇ ಇರಬೇಕಾದದ್ದಿಲ್ಲವೆಂಬುದನ್ನು ತಿಳಿಸುವಮಟ್ಟಿಗೆ ದೃಷ್ಟಾಂತವನ್ನುಪಯೋಗಿಸಿದೆ ಎಂದು ಹೇಳುವದೇ ಯುಕ್ತ ಎಂದು ಭಾವ.

**ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ॥ ೨೨ ॥**

೨೨. ವಿಶೇಷಣಭೇದವ್ಯಪದೇಶಗಳಿಂದ ಮಿಕ್ಕ ಎರಡೂ ಅಲ್ಲ(ವೆನ್ನಬೇಕು.).

## ಜೀವನೂ ಪ್ರಧಾನವೂ ಭೂತಯೋನಿಯಲ್ಲವೆಂಬುದೇಕೆ?

( ಭಾಷ್ಯ )

೨೦೧. ಇತಶ್ಚ ಪರಮೇಶ್ವರ ಏವ ಭೂತಯೋನಿಃ, ನೇತರೌ ಶಾರೀರಃ ಪ್ರಧಾನಂ ವಾ । ಕಸ್ಮಾತ್ ? ವಿಶೇಷಣಭೇದವ್ಯಪದೇಶಾಭ್ಯಾಮ್ । ವಿಶಿನಷ್ಟಿ ಹಿ ಪ್ರಕೃತಂ ಭೂತಯೋನಿಂ ಶಾರೀರಾತ್ ವಿಲಕ್ಷಣತ್ವೇನ– "ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯನ್ತರೋ ಹ್ಯಜಃ । ಅಪ್ರಾಣೋ ಹ್ಯಮನಾಃ ಶುಭ್ರಃ" (ಮುಂ. ೨–೧–೨) ಇತಿ । ನ ಹ್ಯೇತತ್ ದಿವ್ಯತ್ವಾದಿವಿಶೇಷಣಮ್ ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪಪರಿಚ್ಛೇದಾಭಿಮಾನಿನಃ ತದ್ಧರ್ಮಾನ್ ಸ್ವಾತ್ಮನಿ ಕಲ್ಪಯತಃ ಶಾರೀರಸ್ಯ ಉಪಪದ್ಯತೇ । ತಸ್ಮಾತ್ ಸಾಕ್ಷಾತ್ ಔಪನಿಷದಃ ಪುರುಷಃ ಇಹ ಉಚ್ಯತೇ । ತಥಾ ಪ್ರಧಾನಾದಪಿ ಪ್ರಕೃತಂ ಭೂತಯೋನಿಂ ವ್ಯಪದಿಶತಿ– "ಅಕ್ಷರಾತ್ ಪರತಃ ಪರಃ" (ಮುಂ. ೨-೧–೨) ಇತಿ । ಅಕ್ಷರಮ್ ಅವ್ಯಾಕೃತಂ ನಾಮರೂಪಬೀಜಶಕ್ತಿರೂಪಮ್ ಭೂತಸೂಕ್ಷ್ಮಮ್ ಈಶ್ವರಾಶ್ರಯಮ್ ತಸ್ಯೈವ ಉಪಾಧಿಭೂತಮ್ ಸರ್ವಸ್ಮಾತ್ ವಿಕಾರಾತ್ ಪರಃ ಯೋಽವಿಕಾರಃ, ತಸ್ಮಾತ್ ಪರತಃ ಪರಃ ಇತಿ ಭೇದೇನ ವ್ಯಪದೇಶಾತ್ ಪರಮಾತ್ಮಾನಮ್ ಇಹ ವಿವಕ್ಷಿತಂ ದರ್ಶಯತಿ । ನಾತ್ರ ಪ್ರಧಾನಂ ನಾಮ ಕಿಂಚಿತ್ ಸ್ವತನ್ತ್ರಂ ತತ್ತ್ವಮ್ ಅಭ್ಯುಪಗಮ್ಯ ತಸ್ಮಾದ್ ಭೇದವ್ಯಪದೇಶಃ ಉಚ್ಯತೇ । ಕಿಂ ತರ್ಹಿ ಯದಿ ಪ್ರಧಾನಮಪಿ ಕಲ್ಪ್ಯಮಾನಂ ಶ್ರುತ್ಯವಿರೋಧೇನ ಅವ್ಯಾಕೃತಾದಿಶಬ್ದವಾಚ್ಯಂ ಭೂತಸೂಕ್ಷ್ಮಂ ಪರಿಕಲ್ಪ್ಯೇತ ಪರಿಕಲ್ಪ್ಯತಾಮ್ । ತಸ್ಮಾದ್ ಭೇದವ್ಯಪದೇಶಾತ್ ಪರಮೇಶ್ವರೋ ಭೂತಯೋನಿಃ ಇತ್ಯೇತತ್ ಇಹ ಪ್ರತಿಪಾದ್ಯತೇ ॥

( ಭಾಷ್ಯಾರ್ಥ )

ಈ (ಕಾರಣ)ದಿಂದಲೂ ಪರಮೇಶ್ವರನೇ ಭೂತಯೋನಿಯು ; ಬೇರೆಯವರಲ್ಲ, ಎಂದರೆ ಶಾರೀರನಾಗಲಿ ಪ್ರಧಾನವಾಗಲಿ (ಅಲ್ಲ). ಏಕೆ ? ಎಂದರೆ ವಿಶೇಷಣಭೇದವ್ಯಪದೇಶಗಳಿ(ರುವದ)ರಿಂದ. ಹೇಗೆಂದರೆ, ಪ್ರಕೃತವಾಗಿರುವ ಭೂತಯೋನಿಯು ಶಾರೀರನಿಗಿಂತ ಬೇರೆಯ ಸ್ವಭಾವದವನೆಂಬ ವಿಶೇಷಣವನ್ನು (ಶ್ರುತಿಯು) ಕೊಟ್ಟಿರುತ್ತದೆ. "ದಿವ್ಯನು, ಏಕೆಂದರೆ ಅಮೂರ್ತನಾದ

ಪುರುಷನು, ಒಳಗುಹೊರಗುಗಳಿಂದ ಕೂಡಿ ಅಜನಾಗಿರುವವನು, ಅಪ್ರಮಾಣನು, ಅಮನನು, ಶುಭ್ರನು" (ಮುಂ. ೨-೧-೨) ಎಂದು (ಹೇಳಿದೆ). ಈ ದಿವ್ಯತ್ವವೇ ಮುಂತಾದ ವಿಶೇಷಣವು **ಅವಿದ್ಯೆಯು ತಂದೊಡ್ಡಿದ ನಾಮರೂಪಗಳ ಕಟ್ಟಿಗೆ ಅಭಿಮಾನಿಯಾಗಿ ಅದರ ಧರ್ಮಗಳನ್ನು ತನ್ನ ಆತ್ಮನಲ್ಲಿ ಕಲ್ಪಿಸಿಕೊಂಡಿರುವ ಶಾರೀರನಿಗೆ ಹೊಂದುವದಿಲ್ಲವಷ್ಟೆ.**[1] ಆದ್ದರಿಂದ ಔಪನಿಷದಪುರುಷನನ್ನೇ[2] ನೇರಾಗಿ ಇಲ್ಲಿ ಹೇಳಿರುತ್ತದೆ.

ಇದರಂತೆ ಪ್ರಕೃತನಾಗಿರುವ ಭೂತಯೋನಿಯನ್ನು "ಹೆಚ್ಚಿನ ಅಕ್ಷರಕ್ಕಿಂತ ಹೆಚ್ಚಿನವನು'' (ಮುಂ. ೨-೧-೨) ಎಂದು ಪ್ರಧಾನಕ್ಕಿಂತ ಬೇರೆ ಎಂದು ಹೇಳಿರುತ್ತದೆ. **ಅಕ್ಷರವೆಂದರೆ ಈಶ್ವರನನ್ನು ಆಶ್ರಯಿಸಿಕೊಂಡು ಆತನಿಗೇ ಉಪಾಧಿಯಾಗಿರುವ ನಾಮರೂಪಗಳ ಬೀಜಶಕ್ತಿಯ ರೂಪವಾದ ಭೂತಸೂಕ್ಷ್ಮವಾದ ಅವ್ಯಾಕೃತವು[3].** (ತನ್ನ) ಎಲ್ಲಾ ಕಾರ್ಯಗಳಿಗಿಂತಲೂ ಯಾವದು ಹೆಚ್ಚಿನದೋ, ಕಾರ್ಯವಲ್ಲವೋ, ಆ ಹೆಚ್ಚಿನ (ಅಕ್ಷರಕ್ಕಿಂತ)[4] ಹೆಚ್ಚಿನದು- ಎಂದು ಬೇರೆಯಾಗಿ ತಿಳಿಸಿರುವದರಿಂದ ಪರಮಾತ್ಮನನ್ನೇ ಇಲ್ಲಿ ಹೇಳಬೇಕೆಂದಿರುವದು ಎಂದು ತಿಳಿಸಿರುತ್ತದೆ. ಇಲ್ಲಿ ಪ್ರಧಾನವೆಂಬ ಸ್ವತಂತ್ರವಾದ ಯಾವದೋ ಒಂದು ತತ್ತ್ವವನ್ನು ಒಪ್ಪಿ, ಅದಕ್ಕಿಂತ ಬೇರೆಯಾಗಿ ತಿಳಿಸಿದೆ ಎಂದು ಹೇಳಿಲ್ಲ[5] ; ಮತ್ತೇನೆಂದರೆ ಪ್ರಧಾನವನ್ನು ಕಲ್ಪಿಸು

---

1. ಅವಿದ್ಯೆಯಿಂದ ಕಲ್ಪಿತವಾಗಿರುವ ನಾಮರೂಪಗಳ ಕಾರ್ಯವಾದ ಶರೀರವನ್ನೇ ತಾನೆಂದು ತಿಳಿದಿರುವವನು ಶಾರೀರನು. ಅವನಿಗೆ ಶ್ರುತಿಯಲ್ಲಿ ಹೇಳಿದ ಯಾವ ವಿಶೇಷಣವೂ ಹೊಂದುವದಿಲ್ಲ.

2. ಶಾರೀರನು ಅಹಂಪ್ರತ್ಯಯವಿಷಯನು; ಅವನಿಗೂ ಸಾಕ್ಷಿಯಾಗಿರುವ ಆತ್ಮನು ಔಪನಿಷದಪುರುಷನು. ಭಾ. ಭಾ. ೩೪ನ್ನು ನೋಡಿ.

3. ಅವ್ಯಾಕೃತವೆಂದರೆ ಅವಿದ್ಯಾಶಕ್ತಿಯು, ಅದು ಅನೇಕವಾಗಿರುತ್ತದೆ. ಅದು ಈಶ್ವರಾಶ್ರಯವೆಂದರೆ ಜೀವನನ್ನು ಆಶ್ರಯಿಸಿ ಈಶ್ವರನನ್ನು ವಿಷಯವಾಗಿ ಮಾಡಿಕೊಂಡಿರುತ್ತದೆ : ಜೀವರೂಪನಾದ ಈಶ್ವರನಿಗೇ ಅದು ಉಪಾಧಿಯಾಗಿರುವದು ಎಂದು ವಾಚಸ್ಪತಿಮಿಶ್ರರ ವ್ಯಾಖ್ಯಾನಪ್ರಸ್ಥಾನವು. ಇವರು ನಾನಾಜೀವವಾದಿಗಳು. ಚಿದ್ಧಾತುವಿನಲ್ಲಿಯೇ ಅವ್ಯಾಕೃತವು ಸಂಬಂಧಿಸಿರುವದರಿಂದ ಜೀವತ್ವವುಂಟಾಗಿದೆ. ; ಆಶ್ರಯವೆಂದರೆ ವಿಷಯವೆಂಬ ವ್ಯಾಖ್ಯಾನವು ತಪ್ಪು ಎಂಬುದು ಏಕಜೀವವಾದಿಗಳ ಮತವು. ರತ್ನಪ್ರಭಾನ್ಯಾಯನಿರ್ಣಯವ್ಯಾಖ್ಯಾನಗಳನ್ನು ನೋಡಿ. ಈ ಮತಭೇದವಿಷಯಕ್ಕೆ ಪೀಠಿಕೆಯನ್ನು ನೋಡಿ.

4. 'ತಸ್ಮಾತ್ ಅಕ್ಷರಾತ್' ಎಂದೇ ಭಾಷ್ಯಕಾರರು ಬರೆದಿದ್ದರೂ ಬರೆದಿರಬಹುದೆಂದು ತೋರುವದು.

5. ಹಾಗೆ ಹೇಳಿದ್ದರೆ ಶ್ರುತಿಗೆ ಪ್ರಧಾನವೂ ಸಮ್ಮತವೆಂಬ ಅನಿಷ್ಟಪ್ರಾಪ್ತಿಯಾಗುತ್ತಿತ್ತು.

ವಾಗ ಶ್ರುತಿಗೆ ಅವಿರೋಧವಾಗಿ ಅವ್ಯಾಕೃತವೆಂಬ ಶಬ್ದದಿಂದ ಹೇಳಲ್ಪಡುವ ಭೂತಸೂಕ್ಷ್ಮವೆಂದು[1] ಕಲ್ಪಿಸುವದಾದರೆ (ಅವಶ್ಯವಾಗಿ) ಕಲ್ಪಿಸಬಹುದು[2]. ಅದಕ್ಕಿಂತ ಬೇರೆಯಾಗಿ ತಿಳಿಸಿರುವದರಿಂದ ಪರಮೇಶ್ವರನೇ ಭೂತಯೋನಿಯು ಎಂಬಿದನ್ನೇ ಇಲ್ಲಿ ಹೇಳಿರುತ್ತದೆ.

### ರೂಪೋಪನ್ಯಾಸಾಚ್ಚ ॥ ೨೩ ॥

ರೂಪವನ್ನು ಹೇಳಿರುವದರಿಂದಲೂ (ಭೂತಯೋನಿಯು ಪರಮೇಶ್ವರನೇ)

## ಸರ್ವಾತ್ಮಕನಾಗಿರುವದರಿಂದಲೂ ಇದು ಪರಮೇಶ್ವರನೇ

### ವೃತ್ತಿಕಾರರ ಮತ

(ಭಾಷ್ಯ)

೨೦೨. ಕುತಶ್ಚ ಪರಮೇಶ್ವರೋ ಭೂತಯೋನಿಃ ? (ರೂಪೋಪನ್ಯಾಸಾಚ್ಚ) ।[3] ಅಪಿ ಚ- "ಅಕ್ಷರಾತ್ ಪರತಃ ಪರಃ" (ಮುಂ. ೨-೧-೨) ಇತ್ಯಸ್ಯ ಅನನ್ತರಮ್ "ಏತಸ್ಮಾಜ್ಜಾಯತೇ ಪ್ರಾಣಃ" (ಮುಂ. ೨-೧-೩) ಇತಿ ಪ್ರಾಣಪ್ರಭೃತೀನಾಂ ಪೃಥಿವೀಪರ್ಯನ್ತಾನಾಂ ತತ್ತ್ವಾನಾಂ ಸರ್ಗಮ್ ಉಕ್ತ್ವಾ ತಸ್ಯೈವ ಭೂತಯೋನೇಃ ಸರ್ವವಿಕಾರಾತ್ಮಕಂ ರೂಪಮ್ ಉಪನ್ಯಸ್ಯಮಾನಂ ಪಶ್ಯಾಮಃ- "ಅಗ್ನಿರ್ಮೂರ್ಧಾ ಚಕ್ಷುಷೀ ಚನ್ದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ । ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾನ್ತರಾತ್ಮಾ" (ಮುಂ. ೨-೧-೪) ಇತಿ । ತಚ್ಚ ಪರಮೇಶ್ವರಸ್ಯೈವ ಉಚಿತಮ್ । ಸರ್ವವಿಕಾರಕಾರಣತ್ವಾತ್ । ನ ಶಾರೀರಸ್ಯ ತನುಮಹಿಮ್ನಃ । ನಾಪಿ ಪ್ರಧಾನಸ್ಯ ಅಯಂ ರೂಪೋಪನ್ಯಾಸಃ ಸಂಭವತಿ । ಸರ್ವಭೂತಾನ್ತರಾತ್ಮತ್ವಾಸಂಭವಾತ್ । ತಸ್ಮಾತ್ ಪರಮೇಶ್ವರ ಏವ ಭೂತಯೋನಿಃ ನೇತರೌ ಇತಿ ಗಮ್ಯತೇ ॥

---

1. ಭೂತಸೂಕ್ಷ್ಮವೆಂದರೆ ಲಯವಾಗಿರುವ ಭೂತಗಳ ಸಂಸ್ಕಾರವು.

2. ಅದರಲ್ಲಿ ಎಲ್ಲಾ ಕಾರ್ಯವೂ ಇದ್ದುಕೊಂಡಿರುವದರಿಂದ ಅದಕ್ಕೆ 'ಪ್ರಧಾನ'ವೆಂಬ ಹೆಸರೂ ಇರಬಹುದು. 'ಪ್ರಧೀಯತೇ ಅಸ್ಮಿನ್ನಿತಿ ಪ್ರಧಾನಮ್' ಎಂದು ವ್ಯುತ್ಪತ್ತಿಯು. ಅವ್ಯಾಕೃತದ ವಿಷಯಕ್ಕೆ ೧-೪-೩ರ ಭಾಷ್ಯವನ್ನು ನೋಡಿ.

3. ಅವತರಣಿಕೆಗೂ ಸೂತ್ರಕ್ಕೂ ಸಂಬಂಧವನ್ನು ತೋರಿಸುವದಕ್ಕಾಗಿ ಹೀಗೆ ಕಂಸದಲ್ಲಿ ಬರೆದುಕೊಂಡಿದೆ. ಅವತರಣಿಕೆಯ ವಾಕ್ಯಗಳನ್ನು ಬೇರೆ ಒಂದು ಸಾಲಿನಲ್ಲಿ ಬರೆಯುವದಕ್ಕಿಂತ ಹೀಗೆ ಭಾಷ್ಯದೊಡನೆ ಸೇರಿಸಿಕೊಳ್ಳುವದರಲ್ಲಿ ಸೌಕರ್ಯವು ತೋರಿದ ಕಡೆಗಳಲ್ಲೆಲ್ಲ ಹೀಗೆಯೇ ಬರೆದುಕೊಂಡಿದೆ.

(ಭಾಷ್ಯಾರ್ಥ)

ಮತ್ತೂ ಏತರಿಂದ (ಈ) ಭೂತಯೋನಿಯು ಪರಮೇಶ್ವರನೇ (ಎನ್ನಬೇಕು) ? ಎಂದರೆ (ರೂಪೋಪನ್ಯಾಸದಿಂದ). ಇದಲ್ಲದೆ ''ಹೆಚ್ಚಿನ ಅಕ್ಷರಕ್ಕಿಂತಲೂ ಹೆಚ್ಚಿನವನು'' (ಮುಂ. ೨-೧-೨) ಎಂಬಿದರ ಅನಂತರದಲ್ಲಿ "ಇವನಿಂದ ಪ್ರಾಣನು ಹುಟ್ಟುತ್ತಾನೆ" (ಮುಂ. ೨-೧-೩) ಎಂದು ಪ್ರಾಣನೇ ಮುಂತಾಗಿ ಪೃಥಿವಿಯವರೆಗಿನ ತತ್ತ್ವಗಳ ಸೃಷ್ಟಿಯನ್ನು ಹೇಳಿ ಅದೇ ಭೂತಯೋನಿಗೆ ಸರ್ವಕಾರ್ಯಗಳ ಸ್ವರೂಪನಾಗಿರುವ ರೂಪವನ್ನು "ಅಗ್ನಿಯು ಮೂರ್ಧವು, ಚಂದ್ರಸೂರ್ಯರು ಕಣ್ಣುಗಳು, ದಿಕ್ಕುಗಳು ಶ್ರೋತ್ರಗಳು, ವಿವರವಾದ ವೇದಗಳು ವಾಕ್ಕು, ವಾಯುವು ಪ್ರಾಣನು, ವಿಶ್ವವು ಈತನ ಹೃದಯವು, ಪೃಥಿವಿಯು ಪಾದಗಳಿಂದಾಗಿರುವದು– (ಹೀಗೆ) ಈತನು ಸರ್ವಭೂತಗಳಿಗೂ ಅಂತರಾತ್ಮನು" (ಮುಂ. ೩-೧-೪) ಎಂದು ತಿಳಿಸಿರುವದು ನಮಗೆ ಕಾಣಿಸುತ್ತದೆ. ಆ (ರೂಪವು) ಪರಮೇಶ್ವರನಿಗೇ ತಕ್ಕದ್ದಾಗಿರುತ್ತದೆ. ಏಕೆಂದರೆ (ಆತನು) ಎಲ್ಲಾ ಕಾರ್ಯಗಳಿಗೂ ಕಾರಣನಾಗಿರುತ್ತಾನೆ[1]; ಅಲ್ಪಮಹಿಮೆಯ ಶಾರೀರನಿಗೆ (ಇದು) ತಕ್ಕದ್ದಲ್ಲ. ಈ ರೂಪೋಪನ್ಯಾಸವು ಪ್ರಧಾನಕ್ಕೂ ಹೊಂದುವದಿಲ್ಲ, ಏಕೆಂದರೆ (ಅದು) ಸರ್ವಭೂತಗಳಿಗೂ ಅಂತರಾತ್ಮವೆಂಬುದು ಹೊಂದುವಹಾಗಿಲ್ಲ ಆದ್ದರಿಂದ ಭೂತಯೋನಿಯು ಪರಮೇಶ್ವರನೇ ಹೊರತು ಮಿಕ್ಕೆರಡಲ್ಲ ಎಂದು ನಿಶ್ಚಯವಾಗುತ್ತದೆ.

## ಇದು ಭೂತಯೋನಿಯ ರೂಪವೆಂಬುದಕ್ಕೆ ಗಮಕ

( ಭಾಷ್ಯ )

೨೦೩. ಕಥಂ ಪುನಃ ಭೂತಯೋನೇರಯಂ ರೂಪೋಪನ್ಯಾಸಃ ಇತಿ ಗಮ್ಯತೇ ? ಪ್ರಕರಣಾತ್ | 'ಏಷಃ' ಇತಿ ಚ ಪ್ರಕೃತಾನುಕರ್ಷಣಾತ್ | ಭೂತಯೋನಿಂ ಹಿ ಪ್ರಕೃತ್ಯ "ಏತಸ್ಮಾಜ್ಜಾಯತೇ ಪ್ರಾಣಃ" (ಮುಂ.೨-೧-೩). ''ಏಷ ಸರ್ವಭೂತಾನ್ತರಾತ್ಮಾ'' (ಮುಂ. ೨-೧-೪) ಇತಿ ವಚನಂ ಭೂತಯೋನಿವಿಷಯಮೇವ ಭವತಿ । ಯಥಾ ಉಪಾಧ್ಯಾಯಂ ಪ್ರಕೃತ್ಯ "ಏತಸ್ಮಾದಧೀಷ್ವ, ಏಷ ವೇದವೇದಾಙ್ಗಪಾರಗಃ" ಇತಿ ವಚನಮ್ ಉಪಾಧ್ಯಾಯವಿಷಯಂ ಭವತಿ ತದ್ವತ್ । ಕಥಂ ಪುನಃ ಅದೃಶ್ಯತ್ವಾದಿಗುಣಕಸ್ಯ ಭೂತಯೋನೇಃ ವಿಗ್ರಹವದ್ರೂಪಂ ಸಂಭವತಿ ? ಸರ್ವಾತ್ಮತ್ವವಿವಕ್ಷಯಾ ಇದ

---

1. ಕಾರಣವೇ ಕಾರ್ಯರೂಪವಾಗಿರುತ್ತದೆಯಾದ್ದರಿಂದ ಭೂತಯೋನಿಯೇ ಅಗ್ನ್ಯಾದಿಗಳ ರೂಪವಾಗಿರುತ್ತಾನೆ ಎಂದರ್ಥ.

ಮುಚ್ಯತೇ ನ ತು ವಿಗ್ರಹವತ್ತ್ವವಿವಕ್ಷಯಾ ಇತಿ ಅದೋಷಃ| 'ಅಹಮನ್ನಮ್' 'ಅಹಮನ್ನಾದಃ' (ತೈ. ೩-೧೦) ಇತ್ಯಾದಿವತ್ ||

( ಭಾಷ್ಯಾರ್ಥ )

(ಪ್ರಶ್ನೆ):– ಇದು ಭೂತಯೋನಿಯ ರೂಪದ ಉಪನ್ಯಾಸವೆಂದು ಹೇಗೆ ನಿಶ್ಚಯವಾಗುತ್ತದೆ ?

(ಉತ್ತರ):– ಪ್ರಕರಣದಿಂದಲೂ 'ಈತನು' ಎಂದು ಪ್ರಕೃತವಾದದ್ದನ್ನು ಪರಾಮರ್ಶಿಸಿರುವದರಿಂದಲೂ (ಹೀಗೆಂದು ಗೊತ್ತಾಗುತ್ತದೆ). ಭೂತಯೋನಿಯ ಪ್ರಕರಣದಲ್ಲಿ "ಇವನಿಂದ ಪ್ರಾಣನು ಹುಟ್ಟುತ್ತಾನೆ" (ಮುಂ. ೨-೧-೩), "ಈತನು ಸರ್ವಭೂತಗಳಿಗೂ ಅಂತರಾತ್ಮನು" (ಮುಂ. ೨-೧-೪) ಎಂದು ಹೇಳಿರುವದು ಭೂತಯೋನಿವಿಷಯವುತಾನೆ, ಆಗಬೇಕು ? ಉಪಾಧ್ಯಾಯನ ಪ್ರಕರಣದಲ್ಲಿ "ಈತನಿಂದ (ವೇದವನ್ನು) ಕಲಿತುಕೊ, ಈತನು ವೇದವೇದಾಂಗ ಪಾರಗನು'' ಎಂದು ಹೇಳುವದು ಹೇಗೆ ಉಪಾಧ್ಯಾಯನ ವಿಷಯವೇ ಆಗಿರುವದೋ ಹಾಗೆಯೇ (ಇದು).

(ಆಕ್ಷೇಪ):– ಅದೃಶ್ಯತ್ವವೇ ಮುಂತಾದ ಗುಣಗಳುಳ್ಳ ಭೂತಯೋನಿಗೆ ಶರೀರದಿಂದ ಕೂಡಿದ ರೂಪವು ಹೇಗೆ ಹೊಂದುತ್ತದೆ ?

(ಪರಿಹಾರ):– 'ನಾನು ಅನ್ನವು', 'ನಾನು ಅನ್ನಾದನು' (ತೈ. ೩-೧೦) ಎಂಬುದೇ ಮುಂತಾದದ್ದರಂತೆ (ಭೂತಯೋನಿಯು) ಸರ್ವಾತ್ಮನಾಗಿರುವನೆಂದು ತಿಳಿಸುವದಕ್ಕೆ ಇದನ್ನು ಹೇಳಿದೆಯೇ ಹೊರತು (ಇದಕ್ಕೆ) ಶರೀರವಿದೆ ಎಂಬುದನ್ನು ತಿಳಿಸುವದಕ್ಕಲ್ಲ. ಆದ್ದರಿಂದ ಇದು ದೋಷವಲ್ಲ.

## ರೂಪೋಪನ್ಯಾಸದ ವಿಷಯಕ್ಕೆ ಸಿದ್ಧಾಂತ

( ಭಾಷ್ಯ )

೨೦೪. ಅನ್ಯೇ ಪುನರ್ಮನ್ಯನ್ತೇ– ನಾಯಂ ಭೂತಯೋನೇಃ ರೂಪೋಪನ್ಯಾಸಃ । ಜಾಯಮಾನತ್ವೇನ ಉಪನ್ಯಾಸಾತ್ । "ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇನ್ದ್ರಿಯಾಣಿ ಚ | ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ" (ಮುಂ.೨-೧-೩) ಇತಿ ಹಿ ಪೂರ್ವತ್ರ ಪ್ರಾಣಾದಿ ಪೃಥಿವ್ಯನ್ತಂ ತತ್ತ್ವಜಾತಂ ಜಾಯಮಾನತ್ವೇನ ನಿರದಿಕ್ಷತ್ । ಉತ್ತರತ್ರಾಪಿ ಚ "ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ" (ಮುಂ. ೨-೧-೫) ಇತ್ಯೇವಮಾದಿ "ಅತಶ್ಚ ಸರ್ವಾ ಓಷಧಯೋ ರಸಾಶ್ಚ" (ಮುಂ. ೨-೧-೯) ಇತ್ಯೇವಮನ್ತಂ ಜಾಯಮಾನತ್ವೇನೈವ ನಿರ್ದೇಕ್ಷ್ಯತಿ | ಇಹೈವ ಕಥಮ್ ಅಕಸ್ಮಾತ್

ಅನ್ತರಾಲೇ ಭೂತಯೋನೇಃ ರೂಪಮ್ ಉಪನ್ಯಸೇತ್ ? ಸರ್ವಾತ್ಮತ್ವಮಪಿ ಸೃಷ್ಟಿಂ ಪರಿಸಮಾಪ್ಯ ಉಪದೇಕ್ಷ್ಯತಿ— "ಪುರುಷ ಏವೇದಂ ವಿಶ್ವಂ ಕರ್ಮ" (ಮುಂ. ೨-೧-೧೦) ಇತ್ಯಾದಿನಾ | ಶ್ರುತಿಸ್ಮೃತ್ಯೋಶ್ಚ ತ್ರೈಲೋಕ್ಯಶರೀರಸ್ಯ ಪ್ರಜಾಪತೇಃ ಜನ್ಮಾದಿ ನಿರ್ದಿಶ್ಯಮಾನಮ್ ಉಪಲಭಾಮಹೇ— "ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ । ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ" (ಋ. ೧೦-೧೨೧-೧) ಇತಿ | ಸಮವರ್ತತ ಇತಿ | ಅಜಾಯತ ಇತ್ಯರ್ಥಃ | ತಥಾ "ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ | ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತ" (?)[1] ಇತಿ ಚ । ವಿಕಾರಪುರುಷಸ್ಯಾಪಿ ಸರ್ವಭೂತಾನ್ತರಾತ್ಮತ್ವಂ ಸಂಭವತಿ | ಪ್ರಾಣಾತ್ಮನಾ ಸರ್ವಭೂತಾನಾಮ್ ಅಧ್ಯಾತ್ಮಮ್ ಅವಸ್ಥಾನಾತ್ | ಅಸ್ಮಿನ್ ಪಕ್ಷೇ "ಪುರುಷ ಏವೇದಂ ವಿಶ್ವಂ ಕರ್ಮ" (ಮುಂ. ೨-೧-೧೦) ಇತ್ಯಾದಿ ಸರ್ವರೂಪೋಪನ್ಯಾಸಃ ಪರಮೇಶ್ವರ ಪ್ರತಿಪತ್ತಿಹೇತುಃ ಇತಿ ವ್ಯಾಖ್ಯೇಯಮ್ ||

( ಭಾಷ್ಯಾರ್ಥ )

ಇನ್ನು ಕೆಲವರು ಅಭಿಪ್ರಾಯಪಡುವದೇನೆಂದರೆ[2]: ಇದು ಭೂತಯೋನಿಯ ರೂಪದ ಉಪನ್ಯಾಸವಲ್ಲ, ಏಕೆಂದರೆ (ಇದನ್ನು) ಹುಟ್ಟುವದೆಂದು ಹೇಳಿರುತ್ತದೆ. "ಈತನಿಂದ ಪ್ರಾಣವೂ ಮನಸ್ಸೂ ಸರ್ವೇಂದ್ರಿಯಗಳೂ, ಆಕಾಶ, ವಾಯು, ಜ್ಯೋತಿ, ಅಪ್ಪು, ಎಲ್ಲವನ್ನೂ ಧರಿಸಿಕೊಂಡಿರುವ ಪೃಥಿವಿ- ಇವುಗಳೂ ಹುಟ್ಟುತ್ತವೆ" (ಮುಂ. ೨-೧-೩) ಎಂದಲ್ಲವೆ, (ಇದರ) ಹಿಂದೆ ಪ್ರಾಣನು ಮೊದಲಾಗಿ ಪೃಥಿವಿಯವರೆಗೆ ಇರುವ ತತ್ತ್ವಸಮೂಹವನ್ನು ಹುಟ್ಟುವದೆಂದೇ ತಿಳಿಸಿರುತ್ತದೆ ? ಮುಂದೆಯೂ "ಯಾವನಿಗೆ ಸೂರ್ಯನೇ ಸಮಿತ್ತೋ ಆ ಅಗ್ನಿಯೂ ಆತನಿಂದಲೇ (ಹುಟ್ಟುತ್ತಾನೆ)" (ಮುಂ ೨-೧-೫) ಎಂಬಲ್ಲಿಂದ "ಈತನಿಂದಲೇ ಎಲ್ಲಾ ಔಷಧಿಗಳೂ ರಸವೂ (ಆಗಿರುವವು)" (ಮುಂ. ೨-೧-೯) ಎಂಬವರೆಗೂ (ಎಲ್ಲವನ್ನೂ) ಹುಟ್ಟುವದೆಂದೇ ತಿಳಿಸಲಾಗುತ್ತದೆ. (ಹೀಗಿರುವಲ್ಲಿ) ನಡುವೆ ಇಲ್ಲಿ ಮಾತ್ರ ತಟ್ಟನೆ ಹೇಗೆ ಭೂತಯೋನಿಯ ರೂಪವನ್ನು

---

1. ಈ ವಾಕ್ಯವು ಮಾರ್ಕಂಡೇಯಪುರಾಣದಲ್ಲಿರುವದೆಂದು ಕೆಲವರು ಶೋಧಿಸಿ ಕಂಡುಹಿಡಿದಿರುತ್ತಾರೆ; ಆದರೆ ಆ ಪುರಾಣವನ್ನು ಆಚಾರ್ಯರು ಅಷ್ಟಾಗಿ ಭಾಷ್ಯದಲ್ಲಿ ಎಲ್ಲಿಯೂ ಉದಾಹರಿಸಿಲ್ಲ. ಇದು ಮುದ್ರಿತಪುಸ್ತಕದಲ್ಲಿ ಕಾಣದೆ ಇರುವ ಮನುಸ್ಮೃತಿ ವಾಕ್ಯವೋ ಮಹಾಭಾರತದಲ್ಲಿದೆಯೋ ತಿಳಿಯದು.

2. ಇದು ಭಾಷ್ಯಕಾರರ ಮತವಲ್ಲವೆಂಮ ಕಲ್ಪತರುಪರಿಮಳದಲ್ಲಿ ಹೇಳಿರುವದು ಮೂಲವ್ಯಾಖ್ಯಾನವಾದ ಭಾಮತಿಗೂ ಮಂಡಕೋಪನಿಷದ್ಭಾಷ್ಯಕ್ಕೂ ವಿರುದ್ಧವಾಗಿದೆ.

ತಿಳಿಸೀತು ? ಸೃಷ್ಟಿಯನ್ನು (ಹೇಳಿ) ಮುಗಿಸಿದ ಬಳಿಕ (ಭೂತಯೋನಿಯ) ಸರ್ವಾತ್ಮತ್ವವನ್ನೂ "ಕರ್ಮ ... ಇದೆಲ್ಲವೂ ಪುರುಷನೇ" (ಮುಂ. ೨-೧-೧೦) ಎಂದು ಮುಂತಾಗಿ (ಮುಂದೆ) ಉಪದೇಶಿಸಲಾಗುತ್ತದೆ.[1] ಮತ್ತು ಶ್ರುತಿ ಸ್ಮೃತಿಗಳಲ್ಲಿ "ಹಿರಣ್ಯಗರ್ಭನು ಮೊದಲು ಉಂಟಾದನು ; ಹುಟ್ಟಿದವನಾಗಿ ಅವನು ಭೂತ(ಗಳ ಗುಂಪಿಗೆ) ತಾನೊಬ್ಬನೇ ಒಡೆಯನಾದನು. ಆತನು ಈ ಪೃಥಿವಿಯನ್ನೂ ಮತ್ತು ದ್ಯುಲೋಕವನ್ನೂ ಧರಿಸಿದನು. (ಆ) ಒಬ್ಬ ದೇವನಿಗೇ[2] ಹವಿಸ್ಸಿನಿಂದ (ಪರಿಚರ್ಯೆಯನ್ನು) ಮಾಡುವೆವು" ಎಂದೂ (ಋ.ಸಂ ೧೦-೧೨೧-೧)-ಇಲ್ಲಿ ಸಮವರ್ತತ ಎಂದರೆ ಹುಟ್ಟಿದನು ಎಂದರ್ಥ. ಹಾಗೆಯೇ "ಆತನೇ ಮೊದಲನೆಯ ಶರೀರಿಯು, ಆತನೇ ಪುರುಷನೆನಿಸುತ್ತಾನೆ. ಭೂತಗಳಿಗೆ ಆದಿಕರ್ತನಾದ ಆ ಬ್ರಹ್ಮನು ಮೊದಲು ಉಂಟಾದನು" (?) ಎಂದೂ ತ್ರೈಲೋಕ್ಯಶರೀರನಾದ ಪ್ರಜಾಪತಿಗೆ[3] ಜನ್ಮವೇ ಮುಂತಾದದ್ದನ್ನು ಹೇಳಿರುವದು ನಮಗೆ ತೋರಿಬರುತ್ತದೆ. ಕಾರ್ಯಪುರುಷನಾದ (ಪ್ರಜಾಪತಿಗೂ) ಸರ್ವಭೂತಗಳಿಗೂ ಅಂತರಾತ್ಮನಾಗಿರುವದೆಂಬುದು ಹೊಂದುತ್ತದೆ ; ಏಕೆಂದರೆ (ಅವನು) ಪ್ರಾಣರೂಪದಿಂದ[4] ಆಧ್ಯಾತ್ಮದಲ್ಲಿರುತ್ತಾನೆ[5]. ಈ ಪಕ್ಷ

1. "ಅಗ್ನಿರ್ಮೂರ್ಧಾ" ಎಂಬುದು ಸರ್ವಾತ್ಮತ್ವವನ್ನು ಹೇಳುತ್ತದೆ ಎಂದು ಸಿದ್ಧವಾದರೆ, ಇದು ಪರಮಾತ್ಮಪ್ರಕರಣವಾದ್ದರಿಂದ ಮಂತ್ರದಲ್ಲಿರುವದು ಪರಮಾತ್ಮನ ರೂಪ ವರ್ಣನೆ ಎಂದು ಹೇಳಬಹುದು. ಪರಮಾತ್ಮನಿಂದ ಹುಟ್ಟುವ ವಸ್ತುವನ್ನು ಹೇಳಿದರೂ ಪರಮಾತ್ಮಪ್ರಕರಣಕ್ಕೆ ಬಾಧಕವಿಲ್ಲದಿರುವದರಿಂದ ಹಿಂದುಮುಂದಿನ ವಾಕ್ಯಗಳಿಗೆ ಅನುಗುಣವಾಗಿ ಭಾಷ್ಯಕಾರರು ವ್ಯಾಖ್ಯಾನಮಾಡಿರುತ್ತಾರೆ.

2. 'ಕಸ್ಮೈ' ಎಂಬುದಕ್ಕೆ ಪ್ರಜಾಪತಿಗೆ ಎಂಬ ಅರ್ಥವನ್ನು ನ್ಯಾಯನಿರ್ಣಯದಲ್ಲಿ ಹೇಳಿದೆ ; ಪ್ರಜಾಪತಿಗೆ ಎಂಬರ್ಥದಲ್ಲಿ ಕಶಬ್ದವು ಸರ್ವನಾಮವಲ್ಲವಾದ್ದರಿಂದ ಏಕಸ್ಮೈ ಎಂಬುದರ ರೂಪಾಂತರವಿದೆಂದು ಭಾವಿಸಿ ರತ್ನಪ್ರಭಾವ್ಯಾಖ್ಯಾನದಲ್ಲಿ ಕೊಟ್ಟಿರುವ ಅರ್ಥವನ್ನು ನಾವು ಇಲ್ಲಿ ಹಾಕಿರುತ್ತೇವೆ. "ನಾವು ಹವಿಸ್ಸಿನಿಂದ ಆರಾಧಿಸುತ್ತಿರುವದು ಯಾವ ದೇವನನ್ನು ? (ಎಂದರೆ ಈತನನ್ನೇ)" ಎಂದೂ ಅಧ್ಯಾಹಾರಪೂರ್ವಕವಾಗಿ ಅರ್ಥವನ್ನು ಹೇಳಬಹುದೆಂದು ತೋರುತ್ತದೆ.

3. ಹಿರಣ್ಯಗರ್ಭನಿಂದ ಹುಟ್ಟುವ ವಿರಾಟ್ಪುರುಷನಿಗೆ ಎಂದರ್ಥ. ಇಲ್ಲಿ ಹಿರಣ್ಯಗರ್ಭನನ್ನೂ ವಿರಾಟ್ಪುರುಷನನ್ನೂ ಒಂದೆಂದೇ ಭಾವಿಸಿದೆ ಎಂದು ತೋರುತ್ತದೆ.

4. ಸರ್ವಕರಣಾತ್ಮನಾಗಿ.

5. ಪ್ರಾಣಿಗಳ ಶರೀರದಲ್ಲಿದ್ದುಕೊಂಡು ದ್ರಷ್ಟೃ, ಶ್ರೋತೃ, ಮಂತೃ, ವಿಜ್ಞಾತೃ-ಎಂದು ತೋರಿಕೊಳ್ಳುತ್ತಾನೆ ಎಂದರ್ಥ. ಶರೀರಕ್ಕೂ ನಿಜವಾದ ಆತ್ಮನಿಗೂ ನಡುವೆ ಇರುವದರಿಂದ ಲಿಂಗಶರೀರವು ಅಂತರಾತ್ಮನು ಎಂದು ಮುಂ. ಭಾ. ೨-೧-೪ರಲ್ಲಿ ವಿವರಿಸಿದೆ. ವಿರಾಟ್ಪುರುಷನುಕೂಡ ಪರಮಾತ್ಮನಿಂದಲೇ ಹುಟ್ಟುತ್ತಾನೆ, ಪರಮಾತ್ಮಮಯನಾಗಿರುತ್ತಾನೆ-ಎಂಬುದು ಮಂತ್ರದ ಒಟ್ಟರ್ಥವು ಎಂದು ಭಾವ.

ದಲ್ಲಿ “ ಕರ್ಮ.... ಇದೆಲ್ಲವೂ ಪುರುಷನೇ ” (ಮುಂ. ೨-೧-೧೦) ಎಂದು ಮುಂತಾಗಿ ಸರ್ವರೂಪವುಳ್ಳವನೆಂದು ಹೇಳಿರುವದು ಪರಮೇಶ್ವರನೆಂದು ತಿಳಿಯುವದಕ್ಕೆ ಕಾರಣ(ವಾಗಿದೆ ಎಂದು ರೂಪೋಪನ್ಯಾಸಾಚ್ಚ ಎಂಬ ಸೂತ್ರಕ್ಕೆ) ವ್ಯಾಖ್ಯಾನವನ್ನು ಮಾಡಬೇಕು.

## ೭. ವೈಶ್ವಾನರಾಧಿಕರಣ (೧೪-೩೨)

(ಛಾಂದೋಗ್ಯ ೫-೧೮-೧, ೨ರಲ್ಲಿರುವ ವೈಶ್ವಾನರನು ಬ್ರಹ್ಮವೇ)

**ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ॥ ೨೪ ॥**

೨೪. ವೈಶ್ವಾನರನು (ಬ್ರಹ್ಮವೇ), ಏಕೆಂದರೆ ಸಾಧಾರಣ ಶಬ್ದಗಳಿಗೆ ವಿಶೇಷವಿದೆ.

### ವಿಷಯವೂ ಸಂಶಯವೂ

( ಭಾಷ್ಯ )

೨೦೫. “ಕೋ ನ ಆತ್ಮಾ ಕಿಂ ಬ್ರಹ್ಮ” (ಛಾಂ. ೫-೧೧-೧) ಇತಿ, “ಆತ್ಮಾನಮೇವೇಮಂ ವೈಶ್ವಾನರಂ ಸಂಪ್ರತ್ಯಧ್ಯೇಷಿ ತಮೇವ ನೋ ಬ್ರೂಹಿ” (ಛಾಂ. ೫-೧೧-೬) ಇತಿ ಚ ಉಪಕ್ರಮ್ಯ ದ್ಯುಸೂರ್ಯವಾಯ್ವಾಕಾಶವಾರಿ ಪೃಥಿವೀನಾಂ ಸುತೇಜಸ್ತ್ವಾದಿಗುಣಯೋಗಮ್ ಏಕೈಕೋಪಾಸನನಿಂದಯಾ ಚ ವೈಶ್ವಾನರಂ ಪ್ರತಿ ಏಷಾಂ ಮೂರ್ಧಾದಿಭಾವಮ್ ಉಪದಿಶ್ಯ ಆಮ್ನಾಯತೇ- ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯ ಪಚನ ಆಸ್ಯಮಾಹವನೀಯಃ” ( ಛಾಂ. ೫-೧೮-೨ ) ಇತ್ಯಾದಿ । ತತ್ರ ಸಂಶಯಃ- ಕಿಂ ವೈಶ್ವಾನರಶಬ್ದೇನ ಜಾಠರೋಽಗ್ನಿಃ ಉಪದಿಶ್ಯತೇ, ಉತ ಭೂತಾಗ್ನಿಃ, ಅಥ ತದಭಿಮಾನಿನೀ ದೇವತಾ, ಅಥವಾ ಶಾರೀರ ಆಹೋಸ್ವಿತ್ ಪರಮೇಶ್ವರಃ ಇತಿ । ಕಿಂ ಪುನರತ್ರ ಸಂಶಯಕಾರಣಮ್ ? ವೈಶ್ವಾನರಃ ಇತಿ ಜಾಠರಭೂತಾಗ್ನಿದೇವತಾನಾಂ ಸಾಧಾರಣಶಬ್ದಪ್ರಯೋಗಾತ್, ಆತ್ಮಾ ಇತಿ ಚ ಶಾರೀರಪರಮೇಶ್ವರಯೋಃ । ತತ್ರ ಕಸ್ಯ ಉಪಾದಾನಂ ನ್ಯಾಯ್ಯಮ್, ಕಸ್ಯ ವಾ ಹಾನಮ್ ? ಇತಿ ಭವತಿ ಸಂಶಯಃ ॥

(ಭಾಷ್ಯಾರ್ಥ)

"ನಮ್ಮ ಆತ್ಮನು ಯಾರು ? ಬ್ರಹ್ಮವೆಂದರೆ ಯಾವದು? " (ಛಾಂ. ೫-೧೧-೧) ಎಂದೂ "ಆತ್ಮನೇ ಆಗಿರುವ ಈ ವೈಶ್ವಾನರನನ್ನು (ನೀನು) ಚೆನ್ನಾಗಿ ಅರಿತಿರುವೆ ; (ಆದ್ದರಿಂದ) ಅವನನ್ನೇ ನಮಗೆ ಹೇಳು" (ಛಾಂ. ೫-೧೧-೬) ಎಂದೂ ಉಪಕ್ರಮಿಸಿ ದ್ಯುಲೋಕ, ಸೂರ್ಯ, ವಾಯು, ಆಕಾಶ, ಅಪ್ಪು, ಪೃಥಿವಿ- ಇವುಗಳಿಗೆ ಸುತೇಜಸ್ತ್ವವೇ ಮುಂತಾದ[1] ಗುಣಗಳ ಸಂಬಂಧವನ್ನೂ ಒಂದೊಂದನ್ನೇ (ಬೇರೆಯಾಗಿ) ಉಪಾಸನೆಮಾಡುವದನ್ನು ನಿಂದಿಸಿ[2] ವೈಶ್ವಾನರನಿಗೆ ಇವು ಮೂರ್ಧಾದಿಗಳಾಗಿರುವವೆಂಬುದನ್ನೂ ಉಪದೇಶಿಸಿ "ಆವನೆ ಯಾವಾತನು ಈ ಹೀಗಿರುವ ಪ್ರಾದೇಶಮಾತ್ರನಾದ, ಅಭಿವಿಮಾನನಾದ[3] ಆತ್ಮನಾದ, ವೈಶ್ವಾನರನನ್ನು ಉಪಾಸನೆಮಾಡುತ್ತಾನೋ, ಅವನು ಸರ್ವಲೋಕಗಳಲ್ಲಿಯೂ ಸರ್ವಭೂತಗಳಲ್ಲಿಯೂ ಸರ್ವ ಆತ್ಮರುಗಳಲ್ಲಿಯೂ ಅನ್ನವನ್ನು ತಿನ್ನುತ್ತಾನೆ" (ಛಾಂ. ೫-೧೮-೧) ; ಆ ಈ ಆತ್ಮನಾದ ವೈಶ್ವಾನರನಿಗೆ ಸುತೇಜವು[4] ಮೂರ್ಧವೇ, ವಿಶ್ವರೂಪನು[5] ಕಣ್ಣು, ಪೃಥಗ್ವರ್ತ್ಮಾತ್ಮನು[6] ಪ್ರಾಣವು, ಬಹುಲವು[7] ಸಂದೇಹವು,[8] ರಯಿಯು[9] ಬಸ್ತಿಯೇ[10] ಪೃಥಿವಿಯೇ

---

1. ಸುತೇಜಸ್ತ್ವ, ವಿಶ್ವರೂಪತ್ವ, ಪೃಥಗ್ವರ್ತ್ಮಾತ್ಮತ್ವ, ಬಹುಲತ್ವ, ರಯಿತ್ವ, ಪ್ರತಿಷ್ಠಾತ್ವತ್ವ- ಎಂಬ ಗುಣಗಳನ್ನು ಮುಂದೆ ಉದಾಹರಿಸಿರುವ ಶ್ರುತಿಯ ಅನುವಾದದ ಟಿಪ್ಪಣಿಯಲ್ಲಿ ಇವುಗಳನ್ನು ವಿವರಿಸಿದೆ.

2. ಉದ್ದಾಲಕ ಆರುಣಿಯು ತನ್ನ ಬಳಿಗೆ ಬಂದ ಪ್ರಾಚೀನಶಾಲಾದಿಗಳು ಉಪಾಸನೆಮಾಡುತ್ತಿದ್ದ ದ್ಯುಲೋಕಾದಿಗಳು ವೈಶ್ವಾನರನಿಗೆ ಅವಯವಮಾತ್ರವಾಗಿರುವದರಿಂದ ಈ ಒಂದೊಂದು ಅವಯವವನ್ನೇ ಪೂರ್ಣವೈಶ್ವಾನರನೆಂದು ನೀವು ಉಪಾಸನೆಮಾಡುತ್ತಿದ್ದು ಪೂರ್ಣವೈಶ್ವಾನರನನ್ನು ಅರಿತುಕೊಳ್ಳುವದಕ್ಕೆ ನನ್ನ ಬಳಿಗೆ ಬರದೆ ಇದ್ದಿದ್ದರೆ ನಿಮಗೆ ಕ್ರಮವಾಗಿ ಮೂರ್ಧಪಾತ, ಅಂಧತ್ವ, ಪ್ರಾಣೋತ್ಕ್ರಮಣ, ದೇಹವಿಶೀರ್ಣತ್ವ, ಬಸ್ತಿಭೇದ, ಪಾದಶೋಷ- ಎಂಬ ದುಷ್ಫಲಗಳು ಆಗುತ್ತಿದ್ದವು" ಎಂದು ವ್ಯಸ್ತೋಪಾಸನೆಯನ್ನು ನಿಂದಿಸಿರುತ್ತಾನೆ.

3. ಈ ಶಬ್ದಕ್ಕೆ ಅರ್ಥವನ್ನು ಮುಂದೆ ಭಾ. ಭಾ. ೨೧೯ರಲ್ಲಿ ಕೊಟ್ಟಿದೆ.

4. ಒಳ್ಳೆಯ ಕಾಂತಿಯುಳ್ಳ ದ್ಯುಲೋಕವು.

5. ನಾನಾರೂಪಗಳುಳ್ಳ ಸೂರ್ಯನು.

6. ಬೇರೆಬೇರೆಕಡೆಗಳಲ್ಲಿ ಗತಿಯುಳ್ಳ ಸ್ವಭಾವದ ವಾಯು.

7. ವ್ಯಾಪಿತ್ವಗುಣವುಳ್ಳ ಆಕಾಶವು.

8. ಸೊಂಟವು.

9. ಧನವನ್ನು ಕೊಡುವ ಉದಕವು.

10. ಮೂತ್ರಸ್ಥಾನವು.

ಾದಗಳು ; ವೇದಿಯು[1] ಎದೆಯು, ಲೋಮಗಳು ಬರ್ಹಿಯು[2] ಾರ್ಹಪತ್ಯವು ಹೃದಯವು, ಅನ್ವಾಹಾರ್ಯಪಚನವು ಮನಸ್ಸು, ಆಹವನೀಯ ೖ ಮುಖವು'' (ಛಾಂ. ೫-೧೮-೨) ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿದೆ.

ಇಲ್ಲಿ **ಸಂಶಯವು**ವೇನೆಂದರೆ ವೈಶ್ವಾನರ ಎಂಬ ಶಬ್ದದಿಂದ ಹೊಟ್ಟೆಯಲ್ಲಿ ುವ ಅಗ್ನಿಯನ್ನು ಉಪದೇಶಿಸಿದೆಯೆ, ಇಲ್ಲದಿದ್ದರೆ ಭೂತಾಗ್ನಿಯನ್ನು, ಇಲ್ಲವೆ ದಕ್ಕೆ ಅಭಿಮಾನಿಯಾದ ದೇವತೆಯನ್ನು, ಅಥವಾ ಶಾರೀರನನ್ನು, ಅದಲ್ಲದಿದ್ದರೆ ರಮೇಶ್ವರನನ್ನು (ಉಪದೇಶಿಸಿದೆಯೆ) ?

(ಪ್ರಶ್ನೆ):- ಇಲ್ಲಿ ಸಂಶಯಕ್ಕೆ ಕಾರಣವಾದರೂ ಏನು ?

(ಉತ್ತರ):-ಜಾಠರಭೂತಾಗ್ನಿಗಳಿಗೂ ದೇವತೆಗೂ ಸಾಧಾರಣವಾಗಿರುವ ವೈಶ್ವಾನರ' ಎಂಬ ಶಬ್ದವನ್ನು ಪ್ರಯೋಗಿಸಿರುವದರಿಂದಲೂ ಶಾರೀರಪರಮೇ ್ವರರಿಗೆ (ಸಾಧಾರಣವಾಗಿರುವ) ಆತ್ಮ ಎಂಬ (ಶಬ್ದವನ್ನು ಪ್ರಯೋಗಿಸಿರು ದರಿಂದಲೂ ಸಂಶಯಕ್ಕೆ ಕಾರಣವಿದೆ). ಇಲ್ಲಿ ಯಾವದನ್ನು ತೆಗೆದುಕೊಳ್ಳು ದು ನ್ಯಾಯವು? ಯಾವದನ್ನು ಬಿಡುವದು (ನ್ಯಾಯವು) ?- ಎಂದು ಸಂಶಯ ವಾಗುತ್ತದೆ).

## ಪೂರ್ವಪಕ್ಷ: ಅಗ್ನಿ, ದೇವತೆ, ಶಾರೀರ – ಇವರಲ್ಲಿ ಒಬ್ಬನು ವೈಶ್ವಾನರನು

( ಭಾಷ್ಯ )

೨೦೬. ಕಿಂ ತಾವತ್ ಪ್ರಾಪ್ತಮ್? ಜಾಠರೋಽಗ್ನಿಃ ಇತಿ । ಕುತಃ? ತ್ರ ಹಿ ವಿಶೇಷೇಣ ಕ್ವಚಿತ್ ಪ್ರಯೋಗೋ ದೃಶ್ಯತೇ- "ಅಯಮಗ್ನಿರ್ವೈಶ್ವಾ ರೋ ಯೋಽಯಮನ್ತಃ ಪುರುಷೇ ಯೇನೇದಮನ್ನಂ ಪಚ್ಯತೇ ಯದಿದ ುದ್ಯತೇ'' (ಬೃ. ೫-೯-೧) ಇತ್ಯಾದೌ । ಅಗ್ನಿಮಾತ್ರಂ ವಾ ಸ್ಯಾತ್। ಸಾಮಾ ್ಯೇನಾಪಿ ಪ್ರಯೋಗದರ್ಶನಾತ್ ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ೖಶ್ವಾನರಂ ಕೇತುಮಹ್ನಾಮಕೃಣ್ವನ್" (ಋ. ೧೦-೮೮-೧೨) ಅಗ್ನಿಶರೀರಾ ಾ ದೇವತಾ ಸ್ಯಾತ್ । ತಸ್ಯಾಮಪಿ ಪ್ರಯೋಗದರ್ಶನಾತ್- "ವೈಶ್ವಾನರಸ್ಯ ಮತೌ ಸ್ಯಾಮ ರಾಜಾ ಹಿ ಕಂ ಭುವನಾನಾಮಭಿಶ್ರೀಃ'' (ಋ. ೧-೯೮-೧, ್ರ. ಸಂ.. ೧-೫-೧) ಇತ್ಯೇವಮಾದ್ಯಾಯಾಃ ಶ್ರುತೇರ್ದೇವತಾಯಾಮ್ ಶ್ವರ್ಯಾದ್ಯುಪೇತಾಯಾಂ ಸಂಭವಾತ್ । ಅಥ ಆತ್ಮಶಬ್ದಸಾಮಾನಾಧಿ

---

1. ಇಲ್ಲಿಂದ ಮುಂದಕ್ಕೆ ವೈಶ್ವಾನರೋಪಾಸಕನ ಭೋಜನವನ್ನು ಅಗ್ನಿಹೋತ್ರ ಂದು ಸಂಪಾದನೆಮಾಡುವ ಉಪಾಸನೆಯನ್ನೂ ಹೇಳಿರುತ್ತದೆ.

2. ಹರಡಿದ ದರ್ಭೆಗಳು.

ಕರಣ್ಯಾತ್ ಉಪಕ್ರಮೇ ಚ "ಕೋ ನ ಆತ್ಮಾ ಕಿಂ ಬ್ರಹ್ಮ" ಇತಿ ಕೇವಲಾತ್ಮಶಬ್ದಪ್ರಯೋಗಾತ್, ಆತ್ಮಶಬ್ದವಶೇನ ಚ ವೈಶ್ವಾನರಶಬ್ದಃ ಪರಿಣೇಯಃ ಇತ್ಯುಚ್ಯತೇ, ತಥಾಪಿ ಶಾರೀರ ಆತ್ಮಾ ಸ್ಯಾತ್ । ತಸ್ಯ ಭೋಕ್ತೃತ್ವೇನ ವೈಶ್ವಾನರಸಂನಿಕರ್ಷಾತ್ । "ಪ್ರಾದೇಶಮಾತ್ರಮ್" ಇತಿ ಚ ವಿಶೇಷಣಸ್ಯ ತಸ್ಮಿನ್ ಉಪಾಧಿಪರಿಚ್ಛಿನ್ನೇ ಸಂಭವಾತ್ । ತಸ್ಮಾತ್ ನೇಶ್ವರೋ ವೈಶ್ವಾನರಃ ಇತಿ ॥

( ಭಾಷ್ಯಾರ್ಥ )

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ಜಾಠರಾಗ್ನಿಯೇ (ವೈಶ್ವಾನರನು). ಏಕೆ ? ಎಂದರೆ ತಿನ್ನತಕ್ಕ ಈ ಅನ್ನವು ಯಾವದರಿಂದ ಪಕ್ವವಾಗುವದೋ, ಯಾವದು ಪುರುಷನ ಒಳಗಡೆಯಿರುವದೋ, (ಆ) ಈ ಅಗ್ನಿಯೇ ವೈಶ್ವಾನರನು " (ಬೃ.೫-೯-೧) ಎಂದು ಮುಂತಾಗಿರುವ ವಾಕ್ಯದಲ್ಲಿ) ಅದರಲ್ಲಿಯೇ ( ವೈಶ್ವಾನರಶಬ್ದದ ) ವಿಶೇಷವಾದ ಪ್ರಯೋಗವನ್ನು (ಮಾಡಿರುವದು) ಕೆಲವು ಕಡೆಯಲ್ಲಿ ಕಂಡುಬರುತ್ತದೆ. ಅಥವಾ ಬರಿಯ ಅಗ್ನಿಯೇ (ವೈಶ್ವಾನರ)ನಾಗಿರಬಹುದು ; ಏಕೆಂದರೆ "ದೇವತೆಗಳು ವೈಶ್ವಾನರಾಗ್ನಿಯನ್ನು ಭುವನಕ್ಕೆಲ್ಲ ಹಗಲುಗಳ ಗುರುತಾಗಿ ಮಾಡಿದರು" (ಋ.೧೦-೮೮-೧) ಮುಂತಾದ (ಕಡೆ)ಯಲ್ಲಿ ಸಾಮಾನ್ಯರೂಪದಿಂದ (ಬರಿಯ ಅಗ್ನಿಯನ್ನು ತಿಳಿಸುವದಕ್ಕೂ ವೈಶ್ವಾನರಶಬ್ದವನ್ನು) ಪ್ರಯೋಗಿಸಿರುವದು ಕಂಡುಬರುತ್ತದೆ. ಅಗ್ನಿಯೆಂಬ ಶರೀರವುಳ್ಳ ದೇವತೆ(ಯೇ ವೈಶ್ವಾನರನು) ಎಂದಾದರೂ ಆಗಬಹುದು ; ಏಕೆಂದರೆ ಆ (ದೇವತೆಯಲ್ಲಿಯೂ ಈ ಶಬ್ದಕ್ಕೆ) ಪ್ರಯೋಗವು ಕಂಡಿರುತ್ತದೆ. "ವೈಶ್ವಾನರನ ಸುಮತಿಯಲ್ಲಿ ನಾವು ಇರುವಂತಾಗಲಿ ! ಏಕೆಂದರೆ ಅವನು ಭುವನಗಳಿಗೆಲ್ಲ ರಾಜನು, ಸುಖಪ್ರದನು, ಅಭಿಮುಖವಾದ ಶ್ರೀಯುಳ್ಳವನು " (ಋ.೧-೯೮-೧) ಎಂಬಿದೇ ಮುಂತಾದ ಶ್ರುತಿಯು ಐಶ್ವರ್ಯವೇ ಮುಂತಾದವುಗಳುಳ್ಳ[1] ದೇವತೆಯಲ್ಲಿ ( ಪ್ರಯೋಗವಾಗಿದೆ ಎಂದರೇ ) ಹೊಂದುತ್ತದೆ.

ಹಾಗಿಲ್ಲವೆ ಆತ್ಮಶಬ್ದದ ಸಾಮಾನಾಧಿಕರಣ್ಯವಿರುವದರಿಂದಲೂ[2] ಉಪಕ್ರಮದಲ್ಲಿ "ನಮ್ಮ ಆತ್ಮನು ಯಾರು ? ಬ್ರಹ್ಮವು ಯಾವದು ? " ಎಂದು ಬರಿಯ ಆತ್ಮಶಬ್ದವನ್ನೇ[3] ಪ್ರಯೋಗಿಸಿರುವದು ಕಂಡುಬಂದಿರುವದರಿಂದಲೂ,

---

1. ಜ್ಞಾನ, ಸುಖಪ್ರದತ್ವ- ಮುಂತಾದವುಗಳು ಬರಿಯ ಅಗ್ನಿಗೆ ಹೊಂದುವದಿಲ್ಲ ; ದೇವತೆಗೆ ಹೊಂದುತ್ತದೆ.

2. "ಆತ್ಮನಾದ ವೈಶ್ವಾನರನನ್ನು ಉಪಾಸನೆಮಾಡುತ್ತಾನೋ" ಎಂದು ವಾಕ್ಯದಲ್ಲಿ ಸಾಮಾನಾಧಿಕರಣ್ಯವಿರುವದರಿಂದ ಇಲ್ಲಿ ಅಗ್ನಿಯನ್ನು ತೆಗೆದುಕೊಳ್ಳುವದಾಗುವದಿಲ್ಲ.

3. ವೈಶ್ವಾನರಶಬ್ದವಿಲ್ಲದ ಆತ್ಮಶಬ್ದವನ್ನು ಮಾತ್ರವೇ.

ತ್ಮಶಬ್ದಕ್ಕೆ ತಕ್ಕಂತೆ ವೈಶ್ವಾನರಶಬ್ದ(ದ ಅರ್ಥವನ್ನು) ತಿರುಗಿಸಿಕೊಳ್ಳಬೇಕು ನ್ನುವದಾದರೆ, ಹಾಗಾದರೂ ಶಾರೀರನು (ವೈಶ್ವಾನರನೆಂಬ) ಆತ್ಮನಾಗ ಹುದು ; ಏಕೆಂದರೆ ಅವನು ಭೋಕ್ತೃವಾಗಿರುವದರಿಂದ ವೈಶ್ವಾನರನಿಗೆ ಮಿಾಪವಾಗಿರುತ್ತಾನೆ. 'ಪ್ರಾದೇಶಮಾತ್ರನಾದ' ಎಂಬ ವಿಶೇಷಣವೂ ಉಪಾಧಿಪರಿಚ್ಛಿನ್ನನಾಗಿರುವ ಆ (ಶಾರೀರನಿಗೇ) ಹೊಂದುತ್ತದೆ[1]. ಆದ್ದರಿಂದ ಈಶ್ವರನು ವೈಶ್ವಾನರನಲ್ಲ.

## ಸಿದ್ಧಾಂತ:

## ವಿಶೇಷಲಿಂಗವಿರುವದರಿಂದ ಈ ವೈಶ್ವಾನರನು ಬ್ರಹ್ಮವೇ

( ಭಾಷ್ಯ )

೨೦೭. ಏವಂ ಪ್ರಾಪ್ತೇ ತತ ಇದಮುಚ್ಯತೇ— ವೈಶ್ವಾನರಃ ಪರಮಾತ್ಮಾ ಭವಿತುಮರ್ಹತಿ ಇತಿ | ಕುತಃ? ಸಾಧಾರಣಶಬ್ದವಿಶೇಷಾತ್ । ಸಾಧಾರಣಶಬ್ದಯೋಃ ವಿಶೇಷಃ ಸಾಧಾರಣಶಬ್ದವಿಶೇಷಃ । ಯದ್ಯಪಿ ಏತೌ ಉಭಾವಪಿ ಆತ್ಮವೈಶ್ವಾನರಶಬ್ದೌ | ವೈಶ್ವಾನರಶಬ್ದಸ್ತು ತ್ರಯಸ್ಯ ಸಾಧಾರಣಃ ಆತ್ಮಶಬ್ದಶ್ಚ ದ್ವಯಸ್ಯ | ತಥಾಪಿ ವಿಶೇಷೋ ದೃಶ್ಯತೇ ಯೇನ ಪರಮೇಶ್ವರಪರತ್ವಂ ತಯೋರಭ್ಯುಪಗಮ್ಯತೇ "ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ" ಇತ್ಯಾದಿ। ಅತ್ರ ಹಿ ಪರಮೇಶ್ವರ ಏವ ದ್ಯುಮೂರ್ಧತ್ವಾದಿವಿಶಿಷ್ಟಃ ಅವಸ್ಥಾನ್ತರಗತಃ ಪ್ರತ್ಯಗಾತ್ಮತ್ವೇನ ಉಪನ್ಯಸ್ತಃ ಧ್ಯಾನಾಯ ಇತಿ ಗಮ್ಯತೇ । ಕಾರಣತ್ವಾತ್ | ಕಾರಣಸ್ಯ ಹಿ ಸರ್ವಾಭಿಃ ಕಾರ್ಯಗತಾಭಿರವಸ್ಥಾಭಿಃ ಅವಸ್ಥಾವತ್ತ್ವಾತ್ ದ್ಯುಲೋಕಾದ್ಯವಯವತ್ವಮ್ ಉಪಪದ್ಯತೇ । "ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ" ಇತಿ ಚ ಸರ್ವಲೋಕಾದ್ಯಾಶ್ರಯಂ ಫಲಂ ಶ್ರೂಯಮಾಣಂ ಪರಮಕಾರಣಪರಿಗ್ರಹೇ ಸಂಭವತಿ| ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ" (ಛಾಂ. ೫—೨೪—೩) ಇತಿ ಚ ತದ್ವಿದಃ ಸರ್ವಪಾಪ್ಮ ಪ್ರದಾಹಶ್ರವಣಮ್, "ಕೋ ನ ಆತ್ಮಾ ಕಿಂ ಬ್ರಹ್ಮ" ಇತಿ ಚ ಆತ್ಮಬ್ರಹ್ಮಶಬ್ದಾಭ್ಯಾಮ್ ಉಪಕ್ರಮಃ— ಇತ್ಯೇವಮ್ ಏತಾನಿ ಲಿಙ್ಗಾನಿ ಪರಮೇಶ್ವರಮೇವ ಅವಗಮಯನ್ತಿ । ತಸ್ಮಾತ್ ಪರಮೇಶ್ವರ ಏವ ವೈಶ್ವಾನರಃ ||

---

1. ಜಾಠರಾಗ್ನಿಯೇ ಮುಂತಾದವುಗಳನ್ನು ಪ್ರತ್ಯಗಾತ್ಮನೆಂದು ಹೇಳುವದು ಯಲ್ಲ ; ಏಕೆಂದರೆ ಅವು ಅನಾತ್ಮವಾಗಿವೆ. ಉಪಾಸನೆಯಲ್ಲಿ ಹೇಳಿದ್ದು ಯಥಾರ್ಥವಲ್ಲ ದು ಅನವಶ್ಯರಾಗಿ ತಿಳಿಯಬಾರದೆಂಬುದಕ್ಕೆ ಬೃ. ಭಾ. ೧-೩-೧ರಲ್ಲಿರುವ ಪ್ರಾಣೋ ಸನಾವಿವರವನ್ನು ನೋಡಿ.

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಇದಕ್ಕೆ ಈ (ಸಿದ್ಧಾಂತ)ವನ್ನು ಹೇಳುತ್ತೇವೆ: (ಇಲ್ಲಿರುವ) ವೈಶ್ವಾನರನು ಪರಮಾತ್ಮನಾಗಿರಬೇಕು. **ಏಕೆ ? ಎಂದರೆ ಸಾಧಾರಣಶಬ್ದವಿಶೇಷವಿರುವದರಿಂದ** ಸಾಧಾರಣಶಬ್ದವಿಶೇಷವು ಎಂದರೆ ಸಾಧಾರಣಶಬ್ದಗಳ ವಿಶೇಷವು. ಆತ್ಮ, ವೈಶ್ವಾನರ– ಎಂಬೀ ಎರಡೂ ಸಾಧಾರಣಶಬ್ದಗಳೇ; ವೈಶ್ವಾನರ ಶಬ್ದವೋ ಮೂರಕ್ಕೆ ಸಾಧಾರಣ(ವಾಗಿದೆ), ಆತ್ಮಶಬ್ದವೂ ಎರಡಕ್ಕೇ (ಸಾಧಾರಣವಾಗಿದೆ)– ಹೀಗಿದ್ದರೂ "ಆ ಈ ಆತ್ಮನಾದ ವೈಶ್ವಾನರನಿಗೆ ಸುತೇಜವು ಮೂರ್ಧವೇ" (ಛಾಂ. ೫–೧೮–೨) ಎಂದು ಮುಂತಾಗಿ ವಿಶೇಷವು ಕಂಡುಬರುತ್ತದೆ; ಅದರಿಂದ ಆ (ಎರಡೂ) ಪರಮೇಶ್ವರನ ಪರವೆಂದು ಅಂಗೀಕರಿಸುತ್ತೇವೆ. ಏಕೆಂದರೆ ಇಲ್ಲಿ ದ್ಯುಮೂರ್ಧತ್ವವೇ ಮುಂತಾದವುಗಳಿಂದ ಕೂಡಿ ಅವಸ್ಥಾಂತರವನ್ನು ಹೊಂದಿರುವ[1] ಪರಮೇಶ್ವರನನ್ನೇ ಉಪಾಸನೆಗಾಗಿ ಪ್ರತ್ಯಗಾತ್ಮನೆಂದು ಹೇಳಿದೆ ಎಂದು ನಿಶ್ಚಯಿಸಬಹುದಾಗಿದೆ. ಏಕೆಂದರೆ (ಅವನು) ಕಾರಣವಾಗಿರುತ್ತಾನೆ. **ಕಾರ್ಯಗತವಾದ ಅವಸ್ಥೆಗಳೆಲ್ಲವೂ ಕಾರಣಕ್ಕೇ ಅವಸ್ಥೆಗಳಾಗಿರುವದರಿಂದ** ದ್ಯುಲೋಕವೇ ಮುಂತಾದ ಅವಯವಗಳೂ (ಪರಮೇಶ್ವರನವೆಂಬುದು) ಯುಕ್ತವಾಗಿರುತ್ತದೆ[2]. "ಅವನು ಸರ್ವಲೋಕಗಳಲ್ಲಿಯೂ ಸರ್ವಭೂತಗಳಲ್ಲಿಯೂ ಸರ್ವ ಆತ್ಮರುಗಳಲ್ಲಿಯೂ ಅನ್ನವನ್ನು ತಿನ್ನುತ್ತಾನೆ" (ಛಾಂ. ೫–೧೮–೧) ಎಂದೂ ಸರ್ವಲೋಕಗಳೇ ಮುಂತಾದವನ್ನು ಆಶ್ರಯಿಸಿರುವ ಫಲವು ಶ್ರುತಿಯಲ್ಲಿರುವದು ಪರಮಕಾರಣನಾಗಿರುವ (ಪರಮೇಶ್ವರನನ್ನು) ತೆಗೆದುಕೊಂಡರೇ ಹೊಂದುತ್ತದೆ. "ಹೀಗೆಯೇ ಈ (ಜ್ಞಾನಿಯ) ಪಾಪಗಳೆಲ್ಲವೂ ಸುಟ್ಟುಹೋಗುತ್ತವೆ"

---

1 ಕಾರ್ಯವಾದ ವಿರಾಟ್ಪುರುಷನ ಅವಸ್ಥೆಯನ್ನು ಹೊಂದಿರುವ.

2. ಹಿಂದಿನ ಅಧಿಕರಣದಲ್ಲಿ 'ಅಗ್ನಿಮೂರ್ಧ' ಎಂದು ಮುಂತಾಗಿರುವ ವಿರಾಟ್ಪುರುಷನ ವರ್ಣನೆಯು ಪರಮೇಶ್ವರನ ರೂಪದ ಉಪನ್ಯಾಸವಲ್ಲ ಎಂದು ಭಾಷ್ಯಕಾರರು ಹೇಳಿರುತ್ತಾರಷ್ಟೆ. ಇಲ್ಲಿ ಪರಮೇಶ್ವರನಿಗೇ ದ್ಯುಲೋಕಾದ್ಯವಯವಗಳನ್ನು ಕಲ್ಪಿಸಿರುವಂತೆ ಅಲ್ಲಿಯೂ ಸರ್ವಾತ್ಮತ್ವವನ್ನು ತಿಳಿಸುವದಕ್ಕೆ ಆ ರೂಪವನ್ನು ಹೇಳಬಹುದಲ್ಲ !– ಎಂಬ ಶಂಕೆಯನ್ನು ಕಲ್ಪತರುಪರಿಮಳದಲ್ಲಿ ತೆಗೆದಿವೆ. ಇಲ್ಲಿ ದ್ಯುಮೂರ್ಧತ್ವಾದಿಗಳು ವಿರಾಟ್ಪುರುಷದದೇ ಆದರೂ ಗೌಣವಾಗಿ ಪರಮೇಶ್ವರನವೆಂದು ಉಪಾಸನೆಗಾಗಿ ಕಲ್ಪಿಸಿರುತ್ತದೆ. ಅಲ್ಲಿ ಆರೂಪೋಪನ್ಯಾಸವು ವಿರಾಟ್ಪುರುಷನದೇ ಎಂದು ಹೇಳಿದರೂ ಪರಮೇಶ್ವರನಿಗೆ ಕಾರಣತ್ವವೂ ಸರ್ವಾತ್ಮ್ಯವೂ ಸಿದ್ಧಿಸುವದರಿಂದಲೂ ವಿರಾಟ್ಪುರುಷನ ರೂಪವನ್ನು ಮಾತ್ರ ಪರಮೇಶ್ವರನದೆಂದು ಸಂಕೋಚಿಸಿ ಹೇಳುವದಕ್ಕೆ ಇಲ್ಲಿಯಂತೆ ಅಲ್ಲಿ ಉಪಾಸನೆಯೇನೂ ವಿವಕ್ಷಿತವಾದ್ದರಿಂದಲೂ ಹುಟ್ಟುವ ವಸ್ತುಗಳನ್ನೇ ಹೇಳಿರುವ ಸನ್ನಿಧಿಗೆ ಅನುಗುಣವಾಗಿ ಆ ರೂಪವರ್ಣನೆಯನ್ನು ಹುಟ್ಟುವ ವಿರಾಟ್ಪುರುಷನವೇ ಎಂದು ತೀರ್ಮಾನಿಸಿರುವೆದು ಯುಕ್ತವಾಗಿವೆ ಎಂದು ತೋರುತ್ತದೆ.

(ಛಾಂ. ೫–೨೪–೩) ಎಂದು ಆ ಉಪಾಸಕನಿಗೆ ಸರ್ವಪಾಪಗಳೂ ಸುಟ್ಟು ಹೋಗುವವೆಂದು ಶ್ರುತಿಯಲ್ಲಿರುವದು, 'ನಮ್ಮ ಆತ್ಮನು ಯಾರು ? ಬ್ರಹ್ಮವು ಯಾವದು ? '' (ಛಾಂ ೫–೧೧–೧) ಎಂದು ಆತ್ಮಬ್ರಹ್ಮಶಬ್ದಗಳಿಂದ ಉಪಕ್ರಮಿಸಿರುವದು – ಎಂದೀ ಪರಿಯ ಈ ಲಿಂಗಗಳು ಪರಮೇಶ್ವರನನ್ನೇ (ವೈಶ್ವಾನರನೆಂದು) ನಿಶ್ಚಯಿಸಿಕೊಡುತ್ತವೆ, ಆದ್ದರಿಂದ ಪರಮೇಶ್ವರನೇ ವೈಶ್ವಾನರನು.

## ಸ್ಮೃತಿಯೂ ಇಲ್ಲಿ ವರ್ಣಿತವಾಗಿರುವ ಪರಮೇಶ್ವರರೂಪವನ್ನು ಹೇಳುತ್ತದೆ

**ಸ್ಮರ್ಯಮಾಣಮನುಮಾನಂ ಸ್ಯಾದಿತಿ ॥ ೨೫ ॥**

೨೫- ಸ್ಮೃತಿಯಲ್ಲಿರುವದು (ಇದಕ್ಕೆ) ಅನುಮಾನವಾಗಬಹುದಾದ್ದರಿಂದ (ವೈಶ್ವಾನರನು ಪರಮೇಶ್ವರನೇ. )

( ಭಾಷ್ಯ )

೨೦೮. ಇತಶ್ಚ ಪರಮೇಶ್ವರ ಏವ ವೈಶ್ವಾನರಃ। ಯಸ್ಮಾತ್ ಪರಮೇಶ್ವರಸ್ಯೈವ ಅಗ್ನಿರಾಸ್ಯಂ ದ್ಯೌರ್ಮೂರ್ಧಾ–ಇತೀದೃಶಂ ತ್ರೈಲೋಕ್ಯಾತ್ಮಕಂ ರೂಪಂ ಸ್ಮರ್ಯತೇ "ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ। ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರಂ ತಸ್ಮೈ ಲೋಕಾತ್ಮನೇ ನಮಃ ॥ '' (ಮೋ. ೪೭–೬೮) ಇತಿ। ಏತತ್ ಸ್ಮರ್ಯಮಾಣಂ ರೂಪಂ ಮೂಲಭೂತಾಂ ಶ್ರುತಿಮ್ ಅನುಮಾಪಯತ್ ಅಸ್ಯ ವೈಶ್ವಾನರಶಬ್ದಸ್ಯ ಪರಮೇಶ್ವರಪರತ್ವೇ ಅನುಮಾನಮ್ ಲಿಙ್ಗಂ ಗಮಕಂ ಸ್ಯಾತ್ ಇತ್ಯರ್ಥಃ । ಇತಿಶಬ್ದೋ ಹೇತ್ವರ್ಥಃ । ಯಸ್ಮಾತ್ ಇದಂ ಗಮಕಂ ತಸ್ಮಾದಪಿ ವೈಶ್ವಾನರಃ ಪರಮಾತ್ಮೈವ ಇತ್ಯರ್ಥಃ । ಯದ್ಯಪಿ ಸ್ತುತಿರಿಯಂ ''ತಸ್ಮೈ ಲೋಕಾತ್ಮನೇ ನಮಃ '' ಇತಿ । ಸ್ತುತಿತ್ವಮಪಿ ನಾಸತಿ ಮೂಲಭೂತೇ ವೇದವಾಕ್ಯೇ ಸಮ್ಯಕ್ ಈದೃಶೇನ ರೂಪೇಣ ಸಂಭವತಿ । ''ದ್ಯಾಂ ಮೂರ್ಧಾನಂ ಯಸ್ಯ ವಿಪ್ರಾ ವದನ್ತಿ ಖಂ ವೈ ನಾಭಿಂ ಚನ್ದ್ರಸೂರ್ಯೌ ಚ ನೇತ್ರೇ । ದಿಶಃ ಶ್ರೋತ್ರೇ ವಿದ್ಧಿ ಪಾದೌ ಕ್ಷಿತಿಂ ಚ ಸೋಽಚಿನ್ತ್ಯಾತ್ಮಾ ಸರ್ವಭೂತಪ್ರಣೇತಾ ॥ '' ( ? ) ಇತ್ಯೇವಂಜಾತೀಯಕಾ ಚ ಸ್ಮೃತಿಃ ಇಹ ಉದಾಹರ್ತವ್ಯಾ ॥

( ಭಾಷ್ಯಾರ್ಥ )

ಈ (ಕಾರಣ)ದಿಂದಲೂ ವೈಶ್ವಾನರನು ಪರಮೇಶ್ವರನೇ , ಏಕೆಂದರೆ, ಪರಮೇಶ್ವರನಿಗೇ ಅಗ್ನಿಯು ಬಾಯಿ, ದ್ಯುಲೋಕವು ಮೂರ್ಧ– ಎಂಬೀ

ಬಗೆಯ ತ್ರೈಲೋಕ್ಯಾತ್ಮಕರೂಪವನ್ನು "ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ । ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರಂ ತಸ್ಮೈ ಲೋಕಾತ್ಮನೇ ನಮಃ" ಯಾವನಿಗೆ ಅಗ್ನಿಯು ಮುಖವೋ ದ್ಯುಲೋಕವು ತಲೆಯೋ, ಆಕಾಶವು ಹೊಕ್ಕುಳೋ, ಭೂಮಿಯು ಕಾಲುಗಳೋ, ಸೂರ್ಯನು ಕಣ್ಣೋ, ದಿಕ್ಕುಗಳು ಕಿವಿಯೋ ಅಂಥ ಲೋಕಾತ್ಮನಿಗೆ ನಮಸ್ಕಾರ ! (ಮೋ. ಧ. ೪೭–೬೮) ಎಂದು ಸ್ಮೃತಿಯಲ್ಲಿ ಹೇಳಿದೆ. ಈ ಸ್ಮೃತಿಯಲ್ಲಿ ಹೇಳಿರುವ ರೂಪವು ಮೂಲವಾಗಿರುವ ಶ್ರುತಿಯನ್ನು ಅನುಮಾನದಿಂದ (ತಿಳಿಸುವ)ದರಿಂದ ಈ ವೈಶ್ವಾನರಶಬ್ದವು ಪರಮೇಶ್ವರಪರವೆಂಬುದಕ್ಕೆ ಅನುಮಾನವು, ಎಂದರೆ ಲಿಂಗವು, ಗಮಕವಾಗಿರುವದು ಎಂದರ್ಥ. ಇಲ್ಲಿರುವ 'ಇತಿ' ಎಂಬ ಶಬ್ದಕ್ಕೆ ಹೇತುವೆಂದು ಅರ್ಥ. ಇದು ಗಮಕವಾಗಿದೆಯಲ್ಲವೆ ? ಆದ್ದರಿಂದಲೂ ವೈಶ್ವಾನರನು ಪರಮಾತ್ಮನೇ ಎಂದರ್ಥ. "ತಸ್ಮೈ ಲೋಕಾತ್ಮನೇ ನಮಃ" ಈ (ಸ್ಮೃತಿವಾಕ್ಯವು) ಸ್ತುತಿಯೇ ಆದರೂ ಮೂಲಭೂತವಾದ ವೇದವಚನವಿಲ್ಲದೆ ಇಂಥ ರೂಪದಿಂದ ಸ್ತುತಿತ್ವವೂ (ಇಷ್ಟು) ಚೆನ್ನಾಗಿ ಹೊಂದುವ ಹಾಗಿಲ್ಲ[1]. "ಯಾವನಿಗೆ ದ್ಯುಲೋಕವು ಮೂರ್ಧವು, ಆಕಾಶವು ಹೊಕ್ಕುಳು, ಚಂದ್ರಸೂರ್ಯರು ಕಣ್ಣುಗಳು, ಎಂದು ವಿಪ್ರರು ಹೇಳುವರೋ, (ಆತನಿಗೆ) ದಿಕ್ಕುಗಳು ಕಿವಿಗಳುಭೂಮಿಯು ಕಾಲುಗಳು ಎಂದು ತಿಳಿ. ಆತನೇ ಎಲ್ಲಾ ಭೂತಗಳನ್ನೂ ನಡೆಯಿಸುವ ಅಚಿಂತ್ಯಾತ್ಮನು" (?)[2] ಎಂಬೀ ಜಾತಿಯ ಸ್ಮೃತಿಯನ್ನೂ ಇಲ್ಲಿ ಉದಾಹರಿಸಬೇಕು.

**ಶಬ್ದಾದಿಭ್ಯೋಽನ್ತಃಪ್ರತಿಷ್ಠಾನಾಚ್ಚ ನೇತಿ ಚೇನ್ನ ತಥಾದೃಷ್ಟ್ಯುಪದೇಶಾದಸಂಭವಾತ್ ಪುರುಷಮಪಿ ಚೈನಮಧೀಯತೇ || ೨೬ ||**

೨೬. ಶಬ್ದವೇ ಮುಂತಾದವುಗಳಿಂದಲೂ, ಒಳಗೆ ಇದ್ದುಕೊಂಡಿರುವದರಿಂದಲೂ (ಪರಮೇಶ್ವರ)ನಲ್ಲ, ಎಂದರೆ ಹಾಗಲ್ಲ; ಏಕೆಂದರೆ ಅಂಥ ದೃಷ್ಟಿಯನ್ನು ಉಪದೇಶಿಸಿರುತ್ತದೆ ; (ದ್ಯುಲೋಕಾದಿ

---

1. ಇದು ಸ್ತುತಿಯಾದರೂ ಪರಮಾತ್ಮನಿಗೆ ಬೇರೆಬೇರೆಯ ಅವಯವಗಳನ್ನು ಹೀಗೆ ಕಲ್ಪಿಸಿ ಹೇಳುವದಕ್ಕೆ ಆಧಾರವಾದ ಶ್ರುತಿಯಿರಬೇಕು ; ಏಕೆಂದರೆ ಮನುಷ್ಯಮಾತ್ರನಿಗೆ ಇಂಥ ರೂಪವು ಪರಮಾತ್ಮನದೆಂದು ಕಲ್ಪಿಸುವ ಶಕ್ತಿಯಿಲ್ಲ. ಸ್ತುತಿಯಾದ್ದರಿಂದ ಇದು ಹೀಗಿಲ್ಲ ಎಂದು ಕಲ್ಪಿಸುವವಕ್ಕೂ ಕಾರಣವಿಲ್ಲ ; ಏಕೆಂದರೆ ಬಾಧಕವಿಲ್ಲದಿದ್ದರೆ ಇರುವ ರೂಪವನ್ನೇ ಸ್ತುತಿಯಲ್ಲಿ ಹೇಳಿದೆ ಎಂದು ಕಲ್ಪಿಸುವದೇ ಯುಕ್ತ.

2. ಈ ವಾಕ್ಯವೂ ಭಾರತದಲ್ಲಿ ಎಲ್ಲಿಯೋ ಇರಬಹುದು. ಇದು ಸ್ತುತಿರೂಪವಲ್ಲದ ಸ್ಮೃತಿ.

ಗಳು ಮೂರ್ಧಾದಿಗಳಾಗಿರುವದು ಜಾಠರಾಗ್ನ್ಯಾದಿಗಳಿಗೆ) ಹೊಂದುವದಿಲ್ಲ, ಮತ್ತು ಇವನನ್ನು ಪುರುಷನೆಂದೂ ಪಠಿಸುತ್ತಾರೆ.

## ಪೂರ್ವಪಕ್ಷ: ಶಬ್ದಾದಿಗಳೂ ಅಂತಃಪ್ರತಿಷ್ಠಾನವೂ ಈಶ್ವರನಿಗೆ ಹೊಂದುವದಿಲ್ಲ

( ಭಾಷ್ಯ )

೨೯. ಅತ್ರ ಆಹ– ನ ಪರಮೇಶ್ವರೋ ವೈಶ್ವಾನರೋ ಭವಿತುಮರ್ಹತಿ । ಕುತಃ ? ಶಬ್ದಾದಿಭ್ಯಃ, ಅನ್ತಃಪ್ರತಿಷ್ಠಾನಾಚ್ಚ । ಶಬ್ದಸ್ತಾವತ್ ವೈಶ್ವಾನರಶಬ್ದಃ ನ ಪರಮೇಶ್ವರೇ ಸಂಭವತಿ । ಅರ್ಥಾನ್ತರೇ ರೂಢತ್ವಾತ್। ತಥಾ ಅಗ್ನಿಶಬ್ದಃ "ಸ ಏಷೋಽಗ್ನಿರ್ವೈಶ್ವಾನರಃ" (ಶತ.ಬ್ರಾ. ೧೦-೬-೧.೧೧) ಇತಿ । ಆದಿಶಬ್ದಾತ್ "ಹೃದಯಂ ಗಾರ್ಹಪತ್ಯಃ" ( ಛಾಂ. ೫–೧೮–೨ ) ಇತ್ಯಾದ್ಯಗ್ನಿತ್ರೇತಾಕಲ್ಪನಮ್ "ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಮ್" (ಛಾಂ. ೫–೧೦–೧) ಇತ್ಯಾದಿನಾ ಚ ಪ್ರಾಣಾಹುತ್ಯಧಿಕರಣತಾಸಂಕೀರ್ತನಮ್ । ಏತೇಭ್ಯೋ ಹೇತುಭ್ಯಃ ಜಾಠರೋ ವೈಶ್ವಾನರಃ ಪ್ರತ್ಯೇತವ್ಯಃ । ತಥಾ ಅನ್ತಃಪ್ರತಿಷ್ಠಾನಮಪಿ ಶ್ರೂಯತೇ – "ಪುರುಷೇಽನ್ತಃ ಪ್ರತಿಷ್ಠಿತಂ ವೇದ" (ಶತ. ಬ್ರಾ. ೧೦–೬–೧–೧೧) ಇತಿ । ತಚ್ಚ ಜಾಠರೇ ಸಂಭವತಿ । ಯದಪ್ಯುಕ್ತಮ್ "ಮೂರ್ಧೈವ ಸುತೇಜಾಃ" ಇತ್ಯಾದೇಃ ವಿಶೇಷಾತ್ ಕಾರಣಾತ್ ಪರಮಾತ್ಮಾ ವೈಶ್ವಾನರಃ ಇತಿ । ಅತ್ರ ಬ್ರೂಮಃ– ಕುತೋ ಹ್ಯೇಷ ನಿರ್ಣಯಃ ಯತ್ ಉಭಯಥಾಪಿ ವಿಶೇಷಪ್ರತಿಭಾನೇ ಸತಿ ಪರಮೇಶ್ವರವಿಷಯ ಏವ ವಿಶೇಷ ಆಶ್ರಯಣೀಯಃ, ನ ಜಾಠರವಿಷಯಃ ಇತಿ ? ಅಥವಾ ಭೂತಾಗ್ನೇಃ ಅನ್ತರ್ಬಹಿಶ್ಚ ಅವತಿಷ್ಠಮಾನಸ್ಯೈವ ನಿರ್ದೇಶೋ ಭವಿಷ್ಯತಿ । ತಸ್ಯಾಪಿ ಹಿ ದ್ಯುಲೋಕಾದಿಸಂಬನ್ಧೋ ಮನ್ತ್ರವರ್ಣಾತ್ ಅವಗಮ್ಯತೇ "ಯೋ ಭಾನುನಾ ಪೃಥಿವೀಂ ದ್ಯಾಮುತೇಮಾಮಾತತಾನ ರೋದಸೀ ಅನ್ತರಿಕ್ಷಮ್" (ಋ.ಸಂ. ೧೦–೮೮–೩) ಇತ್ಯಾದೌ । ಅಥವಾ ತಚ್ಛರೀರಾಯಾ ದೇವತಾಯಾ ಐಶ್ವರ್ಯಯೋಗಾತ್ ದ್ಯುಲೋಕಾದ್ಯವಯವತ್ವಂ ಭವಿಷ್ಯತಿ । ತಸ್ಮಾತ್ ನ ಪರಮೇಶ್ವರೋ ವೈಶ್ವಾನರಃ ಇತಿ ॥

( ಭಾಷ್ಯಾರ್ಥ )

ಇಲ್ಲಿ ಪೂರ್ವಪಕ್ಷಿಯು ಹೇಳುತ್ತಾನೇನೆಂದರೆ ; (ಈ) ವೈಶ್ವಾನರನು ಪರಮೇಶ್ವರನಾಗಿರಲಾರನು. ಏಕೆ ? ಎಂದರೆ ಶಬ್ದಾದಿಗಳಿಂದಲೂ ಅಂತಃಪ್ರತಿಷ್ಠಾನದಿಂದಲೂ (ಹಾಗೆಂದು ತಿಳಿಯಬೇಕಾಗಿದೆ). ಮೊದಲನೆಯದಾಗಿ

ಶಬ್ದವು, ಎಂದರೆ ವೈಶ್ವಾನರಶಬ್ದವು, ಪರಮೇಶ್ವರನಿಗೆ ಹೊಂದುವದಿಲ್ಲ; ಏಕೆಂದರೆ (ಅದು) ಮತ್ತೊಂದು ಪದಾರ್ಥವನ್ನು[1] ಹೇಳುವ ರೂಢ(ಶಬ್ದವಾಗಿದೆ). ಹೀಗೆಯೇ ಅಗ್ನಿಶಬ್ದವು (ಕೂಡ) "ಆ ಈ ಅಗ್ನಿಯು ವೈಶ್ವಾನರನು" (ಶತ. ಬ್ರಾ. ೧೦-೬-೧-೧೧) ಎಂದು (ಬೇರೊಂದು ಅರ್ಥವನ್ನು ಹೇಳುವ ರೂಢ ಶಬ್ದವಾಗಿದೆ. ಸೂತ್ರದಲ್ಲಿ ಶಬ್ದಾದಿ ಎಂದು) ಆದಿಶಬ್ದವಿರುವದರಿಂದ "ಗಾರ್ಹಪತ್ಯವು ಹೃದಯವು" (ಛಾಂ. ೫-೧೮-೨) ಎಂದು ಮುಂತಾದ ಅಗ್ನಿತ್ರಿತಯದ ಕಲ್ಪನೆ, "ಹೀಗಿರುವಲ್ಲಿ, ಯಾವ ಅನ್ನವು ಮೊದಲು ಬರುತ್ತದೆಯೋ ಅದನ್ನು ಹೋಮಮಾಡಬೇಕು" (ಛಾಂ.೫-೧೯-೧) ಎಂದು ಮುಂತಾಗಿರುವ (ವಾಕ್ಯ)ದಿಂದ ಪ್ರಾಣಾಹುತಿಗೆ ಅಧಿಕರಣವೆಂದು ಹೇಳಿರುವದು-(ಇವುಗಳನ್ನು ತೆಗೆದುಕೊಳ್ಳಬೇಕು.) ಈ ಹೇತುಗಳಿಂದ ಜಾಠರಾಗ್ನಿಯೇ ವೈಶ್ವಾನರನು ಎಂದು ತಿಳಿಯಬೇಕು. ಹೀಗೆಯೇ "ಪುರುಷನಲ್ಲಿ ಒಳಗೆ ಇರುವನೆಂದು ತಿಳಿಯುತ್ತಾನೋ" (ಶತ ಬ್ರಾ. ೧೦-೬-೧-೧೧) ಎಂದು ಅಂತಃಪ್ರತಿಷ್ಠಾನವನ್ನೂ ಶ್ರುತಿಯಲ್ಲಿ ಹೇಳಿದೆ. ಇದೂ ಜಾಠರಾಗ್ನಿಗೇ ಹೊಂದುತ್ತದೆ. ಇನ್ನು "ಸುತೇಜವೇ ಮೂರ್ಧವು" ಎಂಬುದೇ ಮುಂತಾದ ವಿಶೇಷ ಕಾರಣದಿಂದ ವೈಶ್ವಾನರನು ಪರಮಾತ್ಮನೇ ಎಂದು (೧-೨-೧೪ರಲ್ಲಿ) ಹೇಳಿದಿರಷ್ಟೆ. ಅದಕ್ಕೆ ನಾವು ಹೇಳುವದೇನೆಂದರೆ: ಎರಡು ಪ್ರಕಾರದಿಂದಲೂ ವಿಶೇಷವು ತೋರುತ್ತಿರುವಲ್ಲಿ[2] ಪರಮೇಶ್ವರನ ವಿಷಯದ್ದೆಂದೇ ವಿಶೇಷವನ್ನು ಆಶ್ರಯಿಸಬೇಕೇ ಹೊರತು ಜಾಠರಾಗ್ನಿಯ ವಿಷಯದ್ದೆಂದು (ಇಟ್ಟುಕೊಳ್ಳ) ಬಾರದು ಎಂಬೀ ನಿರ್ಣಯ(ವನ್ನು) ಏತರಿಂದ ಮಾಡುತ್ತೀರಿ[3]?

ಅಥವಾ ಒಳಗೂ ಹೊರಗೂ ಇರುತ್ತಿರುವ ಭೂತಾಗ್ನಿಯನ್ನೇ ಈ (ವೈಶ್ವಾನರನೆಂಬ) ನಿರ್ದೇಶವು (ತಿಳಿಸುತ್ತದೆ ಎಂದಾಗಲಿ). ಏಕೆಂದರೆ ಆ (ಭೂತಾಗ್ನಿ)ಗೂ "ಯಾವದು (ತನ್ನ) ಕಾಂತಿಯಿಂದ ಭೂಮಿಯನ್ನೂ ಈ ಸ್ವರ್ಗವನ್ನೂ (ದ್ಯಾವಾಪೃಥಿವಿಗಳೆಂಬ) ರೋದಸ್ಸುಗಳನ್ನೂ ಅಂತರಿಕ್ಷವನ್ನೂ ಹಬ್ಬಿಕೊಂಡಿರುವದೋ...." (ಋ. ಸಂ. ೧೦-೮೮-೩) ಎಂದು ಮುಂತಾಗಿರುವ ಮಂತ್ರವರ್ಣದಲ್ಲಿ ದ್ಯುಲೋಕಾದಿಗಳ ಸಂಬಂಧವಿರುವದೆಂದು ನಿಶ್ಚಯವಾಗುತ್ತದೆ.

---

1. ರೂಢಿಯನ್ನು ಬಿಟ್ಟು ಯೌಗಿಕಾರ್ಥವನ್ನು ತೆಗೆದುಕೊಳ್ಳುವದಕ್ಕೆ ಕಾರಣವಿಲ್ಲ ಎಂದರ್ಥ.

2. ಜಾಠರಾಗ್ನಿಗೂ ಪರಮೇಶ್ವರನಿಗೂ ಸಮವಾಗಿಯೇ ಹೊಂದುತ್ತಿರುವಾಗ.

3. ನಿರ್ಣಯಕ್ಕೆ ಯಾವ ವಿಶೇಷಕಾರಣವೂ ಇರುವದಿಲ್ಲವಾದ್ದರಿಂದಲೂ ಜಾಠರಾಗ್ನಿಯ ಅಂಗಗಳೇ ಇಲ್ಲಿ ಕಾಣುತ್ತಿರುವದರಿಂದಲೂ ಜಾಠರಾಗ್ನಿಯನ್ನೇ ವೈಶ್ವಾನರನೆಂದು ತೆಗೆದುಕೊಳ್ಳುವದು ಯುಕ್ತ ಎಂದು ಭಾವ.

ಅಥವಾ ಆ (ಅಗ್ನಿಯೆಂಬ) ಶರೀರವುಳ್ಳ ದೇವತೆಗೆ ಐಶ್ವರ್ಯದ ಸಂಬಂಧದಿಂದ ದ್ಯುಲೋಕವೇ ಮುಂತಾದ ಅವಯವಗಳಿರುವವೆಂದು ಆಗಬಹುದು. ಆದ್ದರಿಂದ ವೈಶ್ವಾನರನು ಪರಮೇಶ್ವರನಲ್ಲ.

## ಸಿದ್ಧಾಂತ: ಪರಮೇಶ್ವರನ ಉಪಾಸನೆಗಾಗಿ ಜಾಠರಾಗ್ನಿಯನ್ನುಪದೇಶಿಸಿದೆ

( ಭಾಷ್ಯ )

೨೧೦. ಅತ್ರೋಚ್ಯತೇ—'ನ, ತಥಾದೃಷ್ಟ್ಯುಪದೇಶಾತ್' ಇತಿ। ನ ಶಬ್ದಾದಿಭ್ಯಃ ಕಾರಣೇಭ್ಯಃ ಪರಮೇಶ್ವರಸ್ಯ ಪ್ರತ್ಯಾಖ್ಯಾನಂ ಯುಕ್ತಮ್। ಕುತಃ ? ತಥಾ ಜಾಠರಾಪರಿತ್ಯಾಗೇನ ದೃಷ್ಟ್ಯುಪದೇಶಾತ್। ಪರಮೇಶ್ವರದೃಷ್ಟಿರ್ಹಿ ಜಾಠರೇ ವೈಶ್ವಾನರೇ ಇಹ ಉಪದಿಶ್ಯತೇ। 'ಮನೋ ಬ್ರಹ್ಮೇತ್ಯುಪಾಸೀತ' ಇತ್ಯಾದಿವತ್। ಅಥವಾ ಜಾಠರವೈಶ್ವಾನರೋಪಾಧಿಃ ಪರಮೇಶ್ವರಃ ಇಹ ದ್ರಷ್ಟವ್ಯತ್ವೇನ ಉಪದಿಶ್ಯತೇ "ಮನೋಮಯಃ ಪ್ರಾಣಶರೀರೋ ಭಾರೂಪಃ" (ಛಾಂ. ೩-೧೪-೨) ಇತ್ಯಾದಿವತ್। ಯದಿ ಚೇಹ ಪರಮೇಶ್ವರೋ ನ ವಿವಕ್ಷ್ಯೇತ ಕೇವಲ ಏವ ಜಾಠರೋಽಗ್ನಿರ್ವಿವಕ್ಷ್ಯೇತ, ತತಃ "ಮೂರ್ಧೈವ ಸುತೇಜಾಃ" ಇತ್ಯಾದೇಃ ವಿಶೇಷಸ್ಯ ಅಸಂಭವ ಏವ ಸ್ಯಾತ್। ಯಥಾ ತು ದೇವತಾಭೂತಾಗ್ನಿವ್ಯಪಾಶ್ರಯೇಣಾಪಿ ಅಯಂ ವಿಶೇಷಃ ಉಪಪಾದಯಿತುಂ ನ ಶಕ್ಯತೇ ತಥಾ ಉತ್ತರಸೂತ್ರೇ ವಕ್ಷ್ಯಾಮಃ। ಯದಿ ಚ ಕೇವಲ ಏವ ಜಾಠರೋ ವಿವಕ್ಷ್ಯೇತ, ಪುರುಷೇಽನ್ತಃಪ್ರತಿಷ್ಠಿತತ್ವಂ ಕೇವಲಂ ತಸ್ಯ ಸ್ಯಾತ್, ನ ತು ಪುರುಷತ್ವಮ್। ಪುರುಷಮಪಿ ಚೈನಮಧೀಯತೇ ವಾಜಸನೇಯಿನಃ "ಸ ಏಷೋಽಗ್ನಿರ್ವೈಶ್ವಾನರೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽನ್ತಃಪ್ರತಿಷ್ಠಿತಂ ವೇದ" (ಶತ. ಬ್ರಾ. ೧೦-೬-೧-೧೧) ಇತಿ। ಪರಮೇಶ್ವರಸ್ಯ ತು ಸರ್ವಾತ್ಮತ್ವಾತ್ ಪುರುಷತ್ವಮ್, ಪುರುಷೇಽನ್ತಃಪ್ರತಿಷ್ಠಿತತ್ವಂ ಚ ಉಭಯಮ್ ಉಪಪದ್ಯತೇ। ಯೇ ತು 'ಪುರುಷವಿಧಮಪಿ ಚೈನಮಧೀಯತೇ' ಇತಿ ಸೂತ್ರಾವಯವಂ ಪಠನ್ತಿ, ತೇಷಾಮ್ ಏಷೋಽರ್ಥಃ — ಕೇವಲಜಾಠರಪರಿಗ್ರಹೇ ಪುರುಷೇಽನ್ತಃಪ್ರತಿಷ್ಠಿತತ್ವಂ ಕೇವಲಂ ಸ್ಯಾತ್, ನ ಪುರುಷವಿಧತ್ವಮ್। ಪುರುಷವಿಧಮಪಿ ಚೈನಮ್ ಅಧೀಯತೇ ವಾಜಸನೇಯಿನಃ—"ಪುರುಷವಿಧಂ ಪುರುಷೇಽನ್ತಃಪ್ರತಿಷ್ಠಿತಂ ವೇದ" ಇತಿ। ಪುರುಷವಿಧತ್ವಂ ಚ ಪ್ರಕರಣಾತ್ ಯತ್ ಅಧಿದೈವತಂ ದ್ಯುಮೂರ್ಧತ್ವಾದಿ ಪೃಥಿವೀಪ್ರತಿಷ್ಠಿತತ್ವಾನ್ತಮ್, ಯಚ್ಚ ಅಧ್ಯಾತ್ಮಂ ಪ್ರಸಿದ್ಧಂ ಮೂರ್ಧತ್ವಾದಿ ಚುಬುಕಪ್ರತಿಷ್ಠಿತತ್ವಾನ್ತಮ್, ತತ್ ಪರಿಗೃಹ್ಯತೇ ॥

(ಭಾಷ್ಯಾರ್ಥ)

ಇದಕ್ಕೆ (ಉತ್ತರವನ್ನು) ಹೇಳುತ್ತೇವೆ: ಹಾಗಲ್ಲ. ಏಕೆಂದರೆ ಹಾಗಿರುವ ದೃಷ್ಟಿಯನ್ನು ಉಪದೇಶಿಸಿರುತ್ತದೆ. ಶಬ್ದವೇ ಮುಂತಾದ ಕಾರಣಗಳಿಂದ ಪರಮೇಶ್ವರನು (ವೈಶ್ವಾನರ)ನಲ್ಲ ಎನ್ನುವದು ಸರಿಯಾಗಿಲ್ಲ. ಏಕೆ? ಎಂದರೆ ಹಾಗಿರುವ ಜಾಠರಾಗ್ನಿಯನ್ನು ಬಿಡದಿರುವ ದೃಷ್ಟಿಯನ್ನು ಉಪದೇಶಿಸಿರುತ್ತದೆ. ಇಲ್ಲಿ "ಮನಸ್ಸನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು" (ಛಾಂ. ೩-೧೮-೧) ಮುಂತಾದವುಗಳಂತೆ ಜಾಠರವೈಶ್ವಾನರನಲ್ಲಿ ಪರಮೇಶ್ವರದೃಷ್ಟಿಯನ್ನೇ ಉಪದೇಶಿಸಿರುತ್ತದೆ[1]. ಅಥವಾ "ಮನೋಮಯನು, ಪ್ರಾಣಶರೀರನು, ಭಾರೂಪನು" (ಛಾಂ. ೩-೧೪-೨) ಮುಂತಾದ ಕಡೆಯಲ್ಲಿ ಹೇಗೋ ಹಾಗೆ ಜಾಠರ ವೈಶ್ವಾನರ ಎಂಬ ಉಪಾಧಿಯುಳ್ಳ ಪರಮೇಶ್ವರನನ್ನು ಉಪಾಸನೆಮಾಡಬೇಕೆಂದು ಉಪದೇಶಿಸಿರುತ್ತದೆ[2].

ಇದಲ್ಲದೆ ಇಲ್ಲಿ ಪರಮೇಶ್ವರನನ್ನು ಹೇಳಬೇಕೆಂಬ ಅಭಿಪ್ರಾಯವಿಲ್ಲವೆಂದೂ ಬರಿಯ[3] ಜಾಠರಾಗ್ನಿಯೇ ವಿವಕ್ಷಿತವಾಗಿರುವದೆಂದೂ (ಹೇಳುವ)ದಾದರೆ, ಆಗ "ಸುತೇಜವೇ ಮೂರ್ಧವು" ಎಂದು ಮುಂತಾದ ವಿಶೇಷವು (ಅದಕ್ಕೆ) ಹೊಂದುವದಿಲ್ಲವೆಂದೇ ಆಗುವದು[4]. ದೇವತೆಯನ್ನೂ ಭೂತಾಗ್ನಿಯನ್ನೂ ಆಶ್ರಯಿಸಿದರೂ ಈ ವಿಶೇಷವನ್ನು ಹೊಂದಿಸುವದು ಆಗುವದಿಲ್ಲವೆಂಬುದು ಹೇಗೆಂಬುದನ್ನು ಮುಂದಿನ ಸೂತ್ರದಲ್ಲಿ ಹೇಳುವೆವು. ಮತ್ತು ಬರಿಯ ಜಾಠರಾಗ್ನಿಯೇ ವಿವಕ್ಷಿತವಾಗಿದ್ದರೆ ಪುರುಷನಲ್ಲಿ ಒಳಗೆ ಇರುವದೆಂಬುದೊಂದೇ ಅದಕ್ಕೆ ಆಗುವದೇ ಹೊರತು (ಅದು) ಪುರುಷನೆಂದು ಆಗುವದಿಲ್ಲ. "ಆ ಈ ಅಗ್ನಿ ವೈಶ್ವಾನರನು ಪುರುಷನು, ಯಾವನು ಈ ಅಗ್ನಿವೈಶ್ವಾನರನನ್ನು ಪುರುಷವಿಧನೆಂದೂ ಪುರುಷನಲ್ಲಿ ಒಳಗೆ ಇರುವವನೆಂದೂ ಹೀಗೆ ತಿಳಿಯುವನೋ ....." (ಶತ. ಬ್ರಾ. ೧೦-೬-೧-೧೧) ಎಂದು ವಾಜಸನೇಯಿಗಳು ಇವನನ್ನು ಪುರುಷನೆಂದೂ ಅಧ್ಯಯನ(ದಲ್ಲಿ ಕರೆದಿರು)ತ್ತಾರೆ. ಪರಮೇಶ್ವರನಾದರೋ ಸರ್ವಾತ್ಮನಾದ್ದರಿಂದ (ಅವನಿಗೆ) ಪುರುಷನಾಗಿರುವಿಕೆ, ಪುರುಷನೊಳಗೆ ಇದ್ದುಕೊಂಡಿರುವದು- ಈ ಎರಡೂ ಹೊಂದುತ್ತದೆ.

---

1. ಜಾಠರಾಗ್ನಿಯು ಪರಮೇಶ್ವರನಿಗೆ ಪ್ರತೀಕವೆಂದು ಅಭಿಪ್ರಾಯ.

2. ಜಾಠರಾಗ್ನಿಯು ಪರಮೇಶ್ವರನಿಗೆ ಉಪಾಧಿಯಾದ್ದರಿಂದ ತದ್ವಿಶಿಷ್ಟನಾದ ಪರಮೇಶ್ವರನನ್ನೇ ಉಪಾಸನೆಮಾಡಬೇಕೆಂದು ಹೇಳಿದೆ ಎಂದರ್ಥ.

3. ಪರಮೇಶ್ವರನ ಪ್ರತೀಕವೂ ಅಲ್ಲದ, ಉಪಾಧಿಯೂ ಅಲ್ಲದ ಎಂದರ್ಥ.

4 ಏಕೆಂದರೆ ಜಾಠರಾಗ್ನಿಗೆ ದ್ಯುಲೋಕವು ಮೂರ್ಧವಾಗಲಾರದು. ಇತ್ಯಾದಿ.

ಯಾರಾದರೆ "**ಪುರುಷವಿಧಮಪಿ ಚೈನಮಧೀಯತೇ**" ಎಂದು **ಸೂತ್ರಾವಯವದ ಪಾಠ**ವನ್ನಿಟ್ಟುಕೊಂಡಿರುವರೋ, ಅವರಿಗೆ ಇದು (ಅದರ) ಅರ್ಥವು: ಬರಿಯ ಜಾಠರಾಗ್ನಿಯನ್ನೇ (ಇಲ್ಲಿ) ಹಿಡಿದರೆ ಪುರುಷನಲ್ಲಿ ಒಳಗೆ ಇರುವದೆಂಬುದು ಮಾತ್ರ (ಅದಕ್ಕೆ) ಆಗುವದೇ ಹೊರತು ಪುರುಷವಿಧವಾಗಿರುವದೆಂಬುದು (ಹೊಂದುವ)ದಿಲ್ಲ. ವಾಜಸನೇಯಿಗಳು "ಪುರುಷವಿಧನೆಂದೂ ಪುರುಷನಲ್ಲಿ ಒಳಗೆ ಇದ್ದುಕೊಂಡಿರುವನೆಂದೂ (ಯಾವನು) ತಿಳಿಯುವನೋ ...." ಎಂದು ಈ (ವೈಶ್ವಾನರನನ್ನು) ಪುರುಷವಿಧನೆಂದೂ ಅಧ್ಯಯನದಲ್ಲಿ (ಕರೆದಿರು)ತ್ತಾರೆ. ಪುರುಷವಿಧನಾಗಿರುವದು ಎಂದರೆ (ಈ) ಪ್ರಕರಣದಂತೆ ಅಧಿದೈವತವಾಗಿ ದ್ಯುಲೋಕವೆಂಬ ಮೂರ್ಧವುಳ್ಳವನಾಗಿರುವನೆಂಬುದರಿಂದ ಹಿಡಿದು ಪೃಥಿವಿಯಲ್ಲಿ ಪ್ರತಿಷ್ಠಿತನಾಗಿರುವನೆಂಬವರೆಗಿನ (ಧರ್ಮವು), ಮತ್ತು ಅಧ್ಯಾತ್ಮವಾಗಿ ಮೂರ್ಧವುಳ್ಳವನಾಗಿರುವದರಿಂದ ಹಿಡಿದು ಚುಬುಕದಲ್ಲಿದ್ದುಕೊಂಡಿರುವದರವರೆಗಿನ (ಧರ್ಮವೆಂದು ಶ್ರುತಿ)ಪ್ರಸಿದ್ಧವಾಗಿದೆಯಲ್ಲ, ಅದು-(ಇವೆರಡನ್ನೂ) ಪರಿಗ್ರಹಿಸಬೇಕು.[1]

**ಅತ ಏವ ನ ದೇವತಾ ಭೂತಂ ಚ ॥ ೨೭ ॥**

೨೭. ಆದ್ದರಿಂದಲೇ ದೇವತೆಯಾಗಲಿ ಭೂತವಾಗಲಿ (ವೈಶ್ವಾನರ)ನಲ್ಲ.

## ಅಗ್ನಿದೇವತೆಗೆ ಅಥವಾ ಭೂತಕ್ಕೆ ಈ ಧರ್ಮವು ಹೊಂದುವದಿಲ್ಲ

(ಭಾಷ್ಯ)

೨೧೧. ಯತ್ ಪುನರುಕ್ತಮ್- ಭೂತಾಗ್ನೇರಪಿ ಮನ್ತ್ರವರ್ಣೇ ದ್ಯುಲೋಕಾದಿಸಂಬನ್ಧದರ್ಶನಾತ್ "ಮೂರ್ಧೈವ ಸುತೇಜಾಃ" ಇತ್ಯಾದ್ಯವಯವಕಲ್ಪನಂ ತಸ್ಯೈವ ಭವಿಷ್ಯತಿ ಇತಿ[2] ತಚ್ಛರೀರಾಯಾ ದೇವತಾಯಾ ವಾ ಐಶ್ವರ್ಯಯೋಗಾತ್ ಇತಿ, ತತ್ ಪರಿಹರ್ತವ್ಯಮ್ । ಅತ್ರೋಚ್ಯತೇ- ಅತ ಏವ ಉಕ್ತೇಭ್ಯೋ ಹೇತುಭ್ಯಃ ನ ದೇವತಾ ವೈಶ್ವಾನರಃ। ತಥಾ ಭೂತಾಗ್ನಿರಪಿ ನ ವೈಶ್ವಾನರಃ । ನ ಹಿ ಭೂತಾಗ್ನೇಃ ಔಷ್ಣ್ಯಪ್ರಕಾಶಮಾತ್ರಾತ್ಮಕಸ್ಯ ದ್ಯುಮೂರ್ಧತ್ವಾದಿಕಲ್ಪನಾ ಉಪಪದ್ಯತೇ । ವಿಕಾರಸ್ಯ ವಿಕಾರಾನ್ತರಾತ್ಮತ್ವಾಸಂ

---

1. ಇದೂ ಪರಮೇಶ್ವರನಿಗೆ ಮಾತ್ರ ಹೊಂದುತ್ತದೆ.

2. ಇಲ್ಲಿ 'ಇತಿ'ಯು ಬೇಕಿಲ್ಲ, ಅಥವಾ ಮುಂದೆ 'ಐಶ್ವರ್ಯಯೋಗಾತ್ ಇತಿ ಚ' ಎಂದಾದರೂ ಇರಬೇಕು ಎಂದು ತೋರುತ್ತದೆ. ಮೂಲಭಾಷ್ಯವು ಹೇಗಿತ್ತೋ ತಿಳಿಯದು.

ಭವಾತ್ । ತಥಾ ದೇವತಾಯಾಃ ಸತ್ಯಪಿ ಐಶ್ವರ್ಯಯೋಗೇ ನ ದ್ಯುಮೂರ್ಧತ್ವಾದಿಕಲ್ಪನಾ ಸಂಭವತಿ । ಅಕಾರಣತ್ವಾತ್. ಪರಮೇಶ್ವರಾಧೀನೈಶ್ವರ್ಯತ್ವಾಚ್ಚ । ಆತ್ಮಶಬ್ದಾಸಂಭವಶ್ಚ ಸರ್ವೇಷ್ವೇಷು ಪಕ್ಷೇಷು ಸ್ಥಿತ ಏವ॥

( ಭಾಷ್ಯಾರ್ಥ )

ಇನ್ನು ಭೂತಾಗ್ನಿಗೂ ಮಂತ್ರವರ್ಣದಲ್ಲಿ ದ್ಯುಲೋಕಾದಿಗಳ ಸಂಬಂಧವನ್ನು ಹೇಳಿರುವದು ಕಂಡುಬಂದಿರುವದರಿಂದ ಸುತೇಜವೇ ಮೂರ್ಧವು ಎಂದು ಮುಂತಾಗಿ ಅವಯವಗಳನ್ನು ಕಲ್ಪಿಸಿರುವದು ಅದಕ್ಕೇ ಆಗಲಿ, ಅದನ್ನು ಶರೀರವಾಗಿ (ಮಾಡಿಕೊಂಡಿ)ರುವ ದೇವತೆಗೆ ಐಶ್ವರ್ಯದ ಸಂಬಂಧವಿರುವದರಿಂದ (ಅದಕ್ಕಾದರೂ ಆಗಲಿ) ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದನ್ನು ಪರಿಹರಿಸಬೇಕಷ್ಟೆ. ಆ (ವಿಷಯ)ದಲ್ಲಿ (ಇದನ್ನು) ಹೇಳುತ್ತೇವೆ: ಆದ್ದರಿಂದಲೇ ಎಂದರೆ (ಮೇಲೆ) ಹೇಳಿರುವ ಕಾರಣಗಳಿಂದಲೇ[1] ದೇವತೆಯೂ ವೈಶ್ವಾನರನಲ್ಲ. ಏಕೆಂದರೆ ಬರಿಯ ಬಿಸಿಬೆಳಕುಗಳ ಸ್ವರೂಪವಾಗಿರುವ ಭೂತಾಗ್ನಿಗೆ ದ್ಯುಮೂರ್ಧತ್ವಾದಿಕಲ್ಪನೆಯು ಹೊಂದುವದಿಲ್ಲ; ಏಕೆಂದರೆ (ಒಂದು) **ಕಾರ್ಯವು ಇನ್ನೊಂದು ಕಾರ್ಯದ ರೂಪವಾಗಿರುವದೆಂಬುದು ಹೊಂದುವದಿಲ್ಲ.**[2] ಇದರಂತೆ ದೇವತೆಗೆ ಐಶ್ವರ್ಯದ ಸಂಬಂಧವಿದ್ದರೂ ದ್ಯುಮೂರ್ಧತ್ವಾದಿಕಲ್ಪನೆಯು ಹೊಂದುವದಿಲ್ಲ. ಏಕೆಂದರೆ (ಅದು) ಕಾರಣವಾಗಿರುವದಿಲ್ಲ. ಮತ್ತು ಪರಮೇಶ್ವರನಿಗೆ ಅಧೀನವಾಗಿರುವ ಐಶ್ವರ್ಯವೇ (ದೇವತೆಗೆ ಇರುತ್ತದೆ).[3] ಈ ಪಕ್ಷಗಳಲ್ಲೆಲ್ಲ ಆತ್ಮಶಬ್ದವು ಹೊಂದುವದಿಲ್ಲವೆಂಬ (ದೋಷ)ವೂ ಇದ್ದೇ ಇರುತ್ತದೆ[4]

---

1. ದ್ಯುಮೂರ್ಧತ್ವನೇ ಮುಂತಾದ ವಿಶೇಷವು ಹೊಂದುವದಿಲ್ಲ, ಪುರುಷತ್ವವು ಹೊಂದುವದಿಲ್ಲ, ಪುರುಷವಿಧತ್ವವೂ ಹೊಂದುವದಿಲ್ಲ– ಎಂಬ ಕಾರಣಗಳಿಂದ.

2. ಆದರೆ ಕಾರಣವು ಎಲ್ಲಾ ಕಾರ್ಯಗಳ ರೂಪದಲ್ಲಿಯೂ ಇರಬಹುದು. "ಅಗ್ನಿಯಿಂದ ಅಪ್ಪು ಆಯಿತು" ಎಂದು ಮುಂತಾಗಿ ಕಾರ್ಯಗಳಿಗೇ ಪರಸ್ಪರವಾಗಿ ಕಾರ್ಯಕಾರಣಭಾವವನ್ನು ಶ್ರುತಿಯಲ್ಲಿ ಹೇಳಿದ್ದರೂ ಪರಮಾತ್ಮನೇ ಆಯಾ ರೂಪದಿಂದ ಕಾರಣನು ಎಂದು ಆ ವಚನಗಳ ಅಭಿಪ್ರಾಯವೆಂದು ಭಾವ. ಮುಂದೆ ೨-೩-೧೩ರ ಭಾಷ್ಯವನ್ನು ನೋಡಿ.

3. ಏಕೆಂದರೆ ಸರ್ವಜಗತ್ಕಾರಣತ್ವರೂಪವಾದ ಐಶ್ವರ್ಯವು ಪರಮೇಶ್ವರನಿಗೆ ಹೊರತು ಮತ್ತೆ ಯಾರಿಗೂ ಇರುವದಿಲ್ಲ. ಮುಂದೆ ೪-೪-೧೭ರ ಭಾಷ್ಯವನ್ನು ನೋಡಿ.

4. ಜಾಠರಾಗ್ನಿಯಾಗಲಿ ಭೂತಾಗ್ನಿಯಾಗಲಿ ದೇವತೆಯಾಗಲಿ ಎಲ್ಲರ ಆತ್ಮನಾಗಲಾರದು.

## ಮತಾಂತರ:
## ಇಲ್ಲಿ ನೇರಾಗಿ ಪರಮೇಶ್ವರೋಪಾಸನೆಯನ್ನೇ ಹೇಳಿದೆ

( ಭಾಷ್ಯ )

೨೧೨. ಪೂರ್ವಂ ಜಾಠರಾಗ್ನಿಪ್ರತೀಕಃ ಜಾಠರಾಗ್ನ್ಯುಪಾಧಿಕೋ ವಾ ಪರಮೇಶ್ವರಃ ಉಪಾಸ್ಯಃ ಇತ್ಯುಕ್ತಮ್ ಅನ್ತಃಪ್ರತಿಷ್ಠಿತತ್ವಾದ್ಯನುರೋಧೇನ | ಇದಾನೀಂ ತು ವಿನೈವ ಪ್ರತೀಕೋಪಾಧಿಕಲ್ಪನಾಭ್ಯಾಂ ಸಾಕ್ಷಾದಪಿ ಪರಮೇಶ್ವರೋಪಾಸನಪರಿಗ್ರಹೇ ನ ಕಶ್ಚಿದ್ ವಿರೋಧಃ ಇತಿ ಜೈಮಿನಿರಾಚಾರ್ಯೋ ಮನ್ಯತೇ|ನನು ಜಾಠರಾಗ್ನ್ಯಪರಿಗ್ರಹೇ ಅನ್ತಃಪ್ರತಿಷ್ಠಿತತ್ವವಚನಂ ಶಬ್ದಾದೀನಿ ಚ ಕಾರಣಾನಿ ವಿರುಧ್ಯೇರನ್ ಇತಿ | ಅತ್ರೋಚ್ಯತೇ | ಅನ್ತಃಪ್ರತಿಷ್ಠಿತತ್ವವಚನಂ ತಾವತ್ ನ ವಿರುಧ್ಯತೇ | ನ ಹಿ ಇಹ "ಪುರುಷವಿಧಂ ಪುರುಷೇಽನ್ತಃ ಪ್ರತಿಷ್ಠಿತಂ ವೇದ" ಇತಿ ಜಾಠರಗ್ನ್ಯಭಿಪ್ರಾಯೇಣ ಇದಮುಚ್ಯತೇ | ತಸ್ಯ ಅಪ್ರಕೃತತ್ವಾತ್ ಅಸಂಶಬ್ದಿತತ್ವಾಚ್ಚ | ಕಥಂ ತರ್ಹಿ ? ಯತ್ ಪ್ರಕೃತಂ ಮೂರ್ಧಾದಿಚುಬುಕಾನ್ತೇಷು ಪುರುಷಾವಯವೇಷು ಪುರುಷವಿಧತ್ವಂ ಕಲ್ಪಿತಮ್ ತದಭಿಪ್ರಾಯೇಣ ಇದಮುಚ್ಯತೇ "ಪುರುಷವಿಧಂ ಪುರುಷೇಽನ್ತಃ ಪ್ರತಿಷ್ಠಿತಂ ವೇದ" ಇತಿ | ಯಥಾ ವೃಕ್ಷೇ ಶಾಖಾಂ ಪ್ರತಿಷ್ಠಿತಾಂ ಪಶ್ಯತಿ ಇತಿ, ತದ್ವತ್ | ಅಥವಾ ಯಃ ಪ್ರಕೃತಃ ಪರಮಾತ್ಮಾ ಅಧ್ಯಾತ್ಮಮ್ ಅಧಿದೈವತಂ ಚ ಪುರುಷವಿಧತ್ವೋಪಾಧಿಃ ತಸ್ಯ ಯತ್ ಕೇವಲಂ ಸಾಕ್ಷಿರೂಪಮ್ ತದಭಿಪ್ರಾಯೇಣ ಇದಮುಚ್ಯತೇ – ಪುರುಷೇಽನ್ತಃಪ್ರತಿಷ್ಠಿತಂ ವೇದ" ಇತಿ ||

( ಭಾಷ್ಯಾರ್ಥ )

(ಈ) ಮೊದಲು ಜಾಠರಾಗ್ನಿ ಎಂಬ ಪ್ರತೀಕವುಳ್ಳ ಅಥವಾ ಜಾಠರಾಗ್ನಿ ಎಂಬ ಉಪಾಧಿಯುಳ್ಳ ಪರಮೇಶ್ವರನನ್ನು ಉಪಾಸನೆಮಾಡಬೇಕೆಂದು (ಶ್ರುತಿಯಲ್ಲಿ ಹೇಳಿದೆ) ಎಂದು ಅಂತಃಪ್ರತಿಷ್ಠಿತತ್ವವೇ ಮುಂತಾದದ್ದನ್ನು ಅನುಸರಿಸಿ ಹೇಳಿತ್ತು. ಆದರೆ ಈಗ ಪ್ರತೀಕೋಪಾಧಿಕಲ್ಪನೆಗಳನ್ನು ಬಿಟ್ಟೇ ನೇರಾಗಿಯೂ ಪರಮೇಶ್ವರನ ಉಪಾಸನೆಯನ್ನು (ಇಲ್ಲಿ) ಹಿಡಿದರೂ ಯಾವ ವಿರೋಧವೂ ಇಲ್ಲ ಎಂದು ಜೈಮಿನಿ[1] ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.

(ಆಕ್ಷೇಪ) :— ಜಾಠರಾಗ್ನಿಯನ್ನು ಹಿಡಿಯದಿದ್ದರೆ ಅಂತಃಪ್ರತಿಷ್ಠಿತನಾಗಿರುವನೆಂಬ ಮಾತೂ ಶಬ್ದಾದಿಗಳೆಂಬ ಕಾರಣಗಳೂ ವಿರುದ್ಧವಾಗುವುದಿಲ್ಲವೆ ?

---

1. ಈ ಜೈಮಿನಿ ಯಾರೆಂಬುದು ತಿಳಿಯದು. ಕರ್ಮವೇ ಫಲದಾತೃವೆಂದೂ ಈಶ್ವರನು ಬೇರೆಯಾಗಿಲ್ಲವೆಂದೂ ಹೇಳುವ ಆಚಾರ್ಯನಿವನಲ್ಲವೆಂಬುದು ಸ್ಪಷ್ಟವಾಗಿದೆ.

(ಪರಿಹಾರ) : — ಇದಕ್ಕೆ ಪರಿಹಾರವನ್ನು ಹೇಳುತ್ತೇವೆ. ಮೊದಲನೆಯದಾಗಿ ಅಂತಃಪ್ರತಿಷ್ಠಿತನಾಗಿರುವನೆಂಬ ವಚನವು ವಿರುದ್ಧವಾಗುವದಿಲ್ಲ. ಏಕೆಂದರೆ ಇಲ್ಲಿ "ಪುರುಷವಿಧನೆಂದೂ ಪುರುಷನಲ್ಲಿ ಒಳಗೆ ಇದ್ದುಕೊಂಡಿರುವನೆಂದೂ (ಯಾವನು) ತಿಳಿಯುವನೋ '' ( ಶತ. ಬ್ರಾ ) ಎಂದು ಜಾಠರಾಗ್ನಿಯನ್ನು (ತಿಳಿಸುವ) ಅಭಿಪ್ರಾಯದಿಂದ ಹೇಳಿರುವದಿಲ್ಲ. ಏಕೆಂದರೆ ಆ (ಜಾಠರಾಗ್ನಿಯು) ಇಲ್ಲಿ ಪ್ರಕೃತವಾಗಿರುವದೂ ಇಲ್ಲ (ಅದನ್ನು) ಶಬ್ದದಿಂದ ಹೇಳಿರುವದೂ ಇಲ್ಲ. ಮತ್ತೇನೆಂದರೆ, ಮೂರ್ಧವು ಮೊದಲಾಗಿ ಗಲ್ಲದವರೆಗಿನ ಪುರುಷನ ಅವಯವಗಳಲ್ಲಿ ಪುರುಷವಿಧತ್ವವನ್ನು ಕಲ್ಪಿಸಿರುವದು ಪ್ರಕೃತವಾಗಿದೆಯಲ್ಲ, ಅದರ ಅಭಿಪ್ರಾಯದಿಂದ "ಪುರುಷವಿಧನೆಂದೂ ಪುರುಷನಲ್ಲಿ ಒಳಗೆ ಇದ್ದುಕೊಂಡಿರುವನೆಂದೂ (ಯಾವನು) ತಿಳಿಯುವನೋ '' ಎಂದು ಹೇಳಿದೆ. "ಮರದಲ್ಲಿ ಕೊಂಬೆ ಇರುವದನ್ನು ತಿಳಿಯುತ್ತಾನೆ '' ಎಂದು ಹೇಗೆ ಹೇಳುವರೋ) ಆದರಂತೆಯೇ ಇದು[1] ಅಥವಾ ಆಧ್ಯಾತ್ಮವಾಗಿಯೂ ಅಧಿದೈವವಾಗಿಯೂ ಪುರುಷವಿಧತ್ವವೆಂಬ[2] ಉಪಾಧಿಯುಳ್ಳ ಪರಮಾತ್ಮನು ಪ್ರಕೃತನಾಗಿರುವನಷ್ಟೆ, ಅವನ ಕೇವಲ ಸಾಕ್ಷಿರೂಪವಿದೆಯಲ್ಲ, ಅದನ್ನು (ತಿಳಿಸುವ) ಅಭಿಪ್ರಾಯದಿಂದ[3] "(ಪುರುಷವಿಧನೆಂದೂ) ಪುರುಷನಲ್ಲಿ ಒಳಗೆ ಇದ್ದುಕೊಂಡಿರುವನೆಂದೂ (ಯಾವನು) ತಿಳಿಯುತ್ತಾನೋ '' ಎಂದು ಹೇಳಿದೆ.

## ವೈಶ್ವಾನರ, ಅಗ್ನಿ—ಎಂಬ ಹೆಸರುಗಳಿಗೂ ಗಾರ್ಹಪತ್ಯಾದಿಕಲ್ಪನೆಗೂ ಗತಿ

(ಭಾಷ್ಯ)

೨೧೩. ನಿಶ್ಚಿತೇ ಚ ಪೂರ್ವಾಪರಾಲೋಚನವಶೇನ ಪರಮಾತ್ಮಪರಿಗ್ರಹೇ ತದ್ವಿಷಯ ಏವ ವೈಶ್ವಾನರಶಬ್ದಃ ಕೇನಚಿತ್ ಯೋಗೇನ ವರ್ತಿಷ್ಯತೇ | ವಿಶ್ವಶ್ಚಾಯಂ ನರಶ್ಚ ಇತಿ, ವಿಶ್ವೇಷಾಂ ವಾ ಅಯಂ ನರಃ, ವಿಶ್ವೇ ವಾ ನರಾ

---

1 . ಈ ಕಲ್ಪನೆಗೆ ಮೂಲವಾದ ಶ್ರುತಿಯನ್ನು ೩೧ನೆಯ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದೆ. ಪುರುಷಾವಯವಗಳಲ್ಲಿ ವೈಶ್ವಾನರನ ಅವಯವಗಳನ್ನು ಸಂಪಾದನೆಮಾಡಿ ಪುರುಷವಿಧತ್ವವನ್ನು ಕಲ್ಪಿಸಿದೆಯಲ್ಲ, ಅದನ್ನೇ ಈ ಶ್ರುತಿಯಲ್ಲಿ ಹೇಳಿದೆ. ಅವಯವಸಂಪತ್ತಿಯಿಂದ ಪುರುಷವಿಧತ್ವವನ್ನು ಆವಯವಗಳು ಅವಯವಸಮುದಾಯ(ಶರೀರ)ದಲ್ಲಿ —ಕೊಂಬೆಗಳು ಮ ದಲ್ಲಿರುವಂತೆ— ಇರುವವೆಂದು ತಿಳಸುವದಕ್ಕೆ ಅಂತಃಪ್ರತಿಷ್ಠಿತತ್ವವನ್ನು ಹೇಳಿದೆ ಎಂದು ಅಭಿಪ್ರಾಯ.

2. ಪುರುಷಾವಯವಗಳಲ್ಲಿ ಸಂಪಾದನೆಮಾಡಿರುವದೇ ಇಲ್ಲಿಯೂ ಪುರುಷವಿಧತ್ವವು

3. ಪುರುಷರೆಲ್ಲರಿಗೂ ಸಾಕ್ಷಿ ಎಂಬುದನ್ನು ತಿಳಿಸುವದಕ್ಕೆ ಪುರುಷನೊಳಗೆ ಇರುತ್ತಾನೆಂದಿದೆ ಎಂದು ಅಭಿಪ್ರಾಯ.

ಅಸ್ಯ ಇತಿ ವಿಶ್ವಾನರಃ ಪರಮಾತ್ಮಾ। ಸರ್ವಾತ್ಮತ್ವಾತ್ | ವಿಶ್ವಾನರ ಏವ ವೈಶ್ವಾನರಃ | ತದ್ಧಿತಃ ಅನನ್ಯಾರ್ಥಃ, ರಾಕ್ಷಸವಾಯಸಾದಿವತ್ | ಅಗ್ನಿ ಶಬ್ದೋಽಪಿ ಅಗ್ರಣೀತ್ವಾದಿಯೋಗಾಶ್ರಯಣೇನ ಪರಮಾತ್ಮವಿಷಯ ಏವ ಭವಿಷ್ಯತಿ । ಗಾರ್ಹಪತ್ಯಾದಿಕಲ್ಪನಂ ಪ್ರಾಣಾಹುತ್ಯಧಿಕರಣತ್ವಂ ಚ ಪರಮಾತ್ಮನೋಽಪಿ ಸರ್ವಾತ್ಮತ್ವಾತ್ ಉಪಪದ್ಯತೇ ॥

(ಭಾಷ್ಯಾರ್ಥ)

ಹಿಂದುಮುಂದಿನ (ಸಂದರ್ಭವನ್ನು) ಆಲೋಚನೆ(ಮಾಡಿದ್ದರ) ವಶದಿಂದ ಪರಮಾತ್ಮನನ್ನೇ (ಇಲ್ಲಿ) ತೆಗೆದುಕೊಳ್ಳಬೇಕೆಂದು ನಿಶ್ಚಯವಾದಮೇಲೆ **ವೈಶ್ವಾನರ ಎಂಬ ಶಬ್ದವೂ** ಯಾವದಾದರೊಂದು ಯೋಗದಿಂದ ಆ (ಪರಮೇಶ್ವರನ) ವಿಷಯವಾಗಿಯೇ ವೃತ್ತಿಯುಳ್ಳದ್ದಾಗುತ್ತದೆ. ಇವನು ವಿಶ್ವನಾದ ನರನು[1], ಅಥವಾ ಇವನು ವಿಶ್ವರ ನರನು[2], ಅಥವಾ ವಿಶ್ವನರರೂ ಈತನವರು[3] –ಆದ್ದರಿಂದ ಪರಮಾತ್ಮನು ವಿಶ್ವಾನರನು ಎನ್ನಿಸುತ್ತಾನೆ ; ಏಕೆಂದರೆ ಅವನು ಸರ್ವಾತ್ಮನಾಗಿರುತ್ತಾನೆ. ರಾಕ್ಷಸ, ವಾಯಸ– ಮುಂತಾದ ಶಬ್ದಗಳಂತೆ[4] ವಿಶ್ವಾನರನೇ ವೈಶ್ವಾನರನು (ಎಂದು) ಸ್ವಾರ್ಥದಲ್ಲಿ (ವಿಶ್ವಾನರ ಶಬ್ದಕ್ಕೆ) ತದ್ಧಿತ(ಪ್ರತ್ಯಯವು ಬಂದಿರುತ್ತದೆ). **ಅಗ್ನಿ ಎಂಬ ಶಬ್ದವೂ** ಅಗ್ರಣೀತ್ವವೇ[5] ಮುಂತಾದ ಯೋಗವನ್ನು ಆಶ್ರಯಿಸಿದರೆ ಪರಮಾತ್ಮನ ವಿಷಯವೇ ಆಗಬಹುದು. ಗಾರ್ಹಪತ್ಯವೇ ಮುಂತಾದವುಗಳ ಕಲ್ಪನವೂ ಪ್ರಾಣಾಹುತ್ಯಧಿಕರಣತ್ವವೂ ಸರ್ವಾತ್ಮನಾದ್ದರಿಂದ[6] ಪರಮಾತ್ಮನಿಗೇ ಹೊಂದುತ್ತದೆ.

## ಪ್ರಾದೇಶಮಾತ್ರವೆಂಬ ವಿಶೇಷಣಕ್ಕೆ ಗತಿ

(ಭಾಷ್ಯ)

೨೧೪. ಕಥಂ ಪುನಃ ಪರಮೇಶ್ವರಪರಿಗ್ರಹೇ ಪ್ರಾದೇಶಮಾತ್ರಶ್ರುತಿಃ ಉಪಪದ್ಯತೇ ಇತಿ । ತಾಂ ವ್ಯಾಖ್ಯಾತುಮ್ ಆರಭತೇ —

---

1. ಎಲ್ಲಾ ಜೀವರ ರೂಪವಾಗಿರುವವನು.

2. ಎಲ್ಲರನ್ನೂ ಕರ್ಮಫಲಕ್ಕೆ ಒಯ್ಯುವವನು.

3. ಈತನ ವಶದಲ್ಲಿರುವವರು, ಅಥವಾ ಈತನಿಗಿಂತ ಭಿನ್ನರಲ್ಲದವರು

4 ರಕ್ಷ ಏವ ರಾಕ್ಷಸಃ, ವಯ ಏವ ವಾಯಸಃ– ಎಂಬಂತೆ

5. ಅಗ್ರವನ್ನು ಎಂದರೆ ಕರ್ಮಫಲವನ್ನು ಹೊಂದಿಸುತ್ತಾನೆ, ಆದ್ದರಿಂದ ಅಗ್ನಿಯು ; ಅಥವಾ ಮುಂದಿದ್ದುಕೊಂಡು ಫಲಕ್ಕೆ ಕರೆದುಕೊಂಡು ಹೋಗುತ್ತಾನೆ, ಆದ್ದರಿಂದ ಅಗ್ನಿಯು.

6. ಇದುವರೆಗೆ ಶತಪಥಬ್ರಾಹ್ಮಣದಲ್ಲಿಯೂ ಪರಮೇಶ್ವರನ ಉಪಾಸನೆಯನ್ನೇ ಹೇಳಿದೆ ಎಂದು ಸಾಧಿಸಿದ್ದಾಯಿತು. ಈಗ ಪ್ರಕೃತವಾದ ಛಾಂದೋಗ್ಯದಲ್ಲಿರುವ ಲಿಂಗಗಳೂ ಪರಮೇಶ್ವರನಿಗೇ ಆಗುತ್ತವೆ ಎಂದು ಹೇಳಿದೆ.

(ಭಾಷ್ಯಾರ್ಥ)

ಇನ್ನು ಪರಮೇಶ್ವರನನ್ನು ತೆಗೆದುಕೊಂಡಾಗ 'ಪ್ರಾದೇಶಮಾತ್ರ'[1] ನೆಂಬ ಶ್ರುತಿ ಹೇಗೆ ಹೊಂದುತ್ತದೆ ? – ಎಂದರೆ ಆ (ಶ್ರುತಿಯ ಅರ್ಥವನ್ನು) ವಿವರಿಸುವದಕ್ಕೆ ಆರಂಭಿಸುತ್ತಾರೆ :—

**ಅಭಿವ್ಯಕ್ತೇರಿತ್ಯಾಶ್ಮರಥ್ಯಃ ॥ ೨೯ ॥**

೨೯. ಅಭಿವ್ಯಕ್ತಿಯಿಂದ (ಪ್ರಾದೇಶಮಾತ್ರನು) ಎಂದು ಆಶ್ಮರಥ್ಯನು (ಅಭಿಪ್ರಾಯಪಡುತ್ತಾನೆ).

(ಭಾಷ್ಯ)

೨೧೫. ಅತಿಮಾತ್ರಸ್ಯಾಪಿ ಪರಮೇಶ್ವರಸ್ಯ ಪ್ರಾದೇಶಮಾತ್ರತ್ವಮ್ ಅಭಿವ್ಯಕ್ತಿನಿಮಿತ್ತಂ ಸ್ಯಾತ್ । ಅಭಿವ್ಯಜ್ಯತೇ ಕಿಲ ಪ್ರಾದೇಶಮಾತ್ರಪರಿಮಾಣಃ ಪರಮೇಶ್ವರಃ ಉಪಾಸಕಾನಾಂ ಕೃತೇ । ಪ್ರದೇಶೇಷು ವಾ ಹೃದಯಾದಿಷು ಉಪಲಬ್ಧಿಸ್ಥಾನೇಷು ವಿಶೇಷೇಣ ಅಭಿವ್ಯಜ್ಯತೇ । ಅತಃ ಪರಮೇಶ್ವರೇಽಪಿ ಪ್ರಾದೇಶಮಾತ್ರಶ್ರುತಿಃ ಅಭಿವ್ಯಕ್ತೇರುಪಪದ್ಯತೇ ಇತಿ ಆಶ್ಮರಥ್ಯ ಆಚಾರ್ಯೋ ಮನ್ಯತೇ ॥

(ಭಾಷ್ಯಾರ್ಥ)

ಅತಿಮಾತ್ರನಾದರೂ[2] ಪರಮೇಶ್ವರನು ಪ್ರಾದೇಶಮಾತ್ರನು (ಎಂದು ಹೇಳಿರುವದು) ಅಭಿವ್ಯಕ್ತಿಯ ನಿಮಿತ್ತದಿಂದ ಆಗಬಹುದು. ಏಕೆಂದರೆ ಪರಮೇಶ್ವರನು ಉಪಾಸಕರಿಗೋಸ್ಕರ ಒಂದು ಚೋಟಿನ ಪರಿಮಾಣದವನಾಗಿ ಅಭಿವ್ಯಕ್ತನಾಗುತ್ತಾನಂತೆ[3]. ಅಥವಾ ಹೃದಯವೇ ಮುಂತಾದ ಪ್ರದೇಶಗಳಲ್ಲಿ, ಎಂದರೆ ಅರಿಯುವ ಸ್ಥಾನಗಳಲ್ಲಿ, ವಿಶೇಷವಾಗಿ ಅಭಿವ್ಯಕ್ತನಾಗುತ್ತಾನೆ[4]. ಆದ್ದರಿಂದ ಪ್ರಾದೇಶಮಾತ್ರವೆಂಬ ಶ್ರುತಿಯು ಅಭಿವ್ಯಕ್ತಿಯ (ನಿಮಿತ್ತ)ದಿಂದ ಪರಮೇಶ್ವರನಿಗೂ ಹೊಂದುತ್ತದೆ– ಎಂದು **ಆಶ್ಮರಥ್ಯ**ನೆಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.

---

1. ಚೋಟಿನ ಅಳತೆಯವನು.

2. ಅಳತೆಯಿನ್ನೂ ಮೀರಿ ಅನಂತನಾಗಿದ್ದರೂ

3. ಕಾಣಿಸಿಕೊಳ್ಳುತ್ತಾನೆ. ಇಲ್ಲಿ ಕಿಲ (ಅಂತೆ)ಎಂಬ ಶಬ್ದವು ಉಪಾಸಕರ ಅನುಭವ ಪ್ರಸಿದ್ಧಿಯನ್ನು ಹೇಳುತ್ತದೆ.

4. ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿದ್ದರೂ ಹೃದಯವೇ ಮುಂತಾದ ಸ್ಥಾನಗಳಲ್ಲಿ ಮಾತ್ರ ವಿಶೇಷರೂಪದಿಂದ ಆತನನ್ನು ಸಾಕ್ಷಾತ್ಕಾರಮಾಡಿಕೊಳ್ಳಬಹುದು ಎಂದು ಅಭಿಪ್ರಾಯ.

## ಅನುಸ್ಮೃತೇರ್ಬಾದರಿಃ ॥ ೩೦ ॥

೩೦. ಅನುಸ್ಮೃತಿಯಿಂದ (ಪ್ರಾದೇಶಮಾತ್ರನು) ಎಂದು ಬಾದರಿಯು (ಅಭಿಪ್ರಾಯಪಡುತ್ತಾನೆ).

(ಭಾಷ್ಯ)

೨೧೬. ಪ್ರಾದೇಶಮಾತ್ರಹೃದಯಪ್ರತಿಷ್ಠೇನ ವಾ ಅಯಂ ಮನಸಾ ಅನುಸ್ಮರ್ಯತೇ । ತೇನ ಪ್ರಾದೇಶಮಾತ್ರಃ ಇತ್ಯುಚ್ಯತೇ । ಯಥಾ ಪ್ರಸ್ಥಮಿತಾ ಯವಾಃ ಪ್ರಸ್ಥಾ ಇತಿ ಉಚ್ಯನ್ತೇ ತದ್ವತ್ । ಯದ್ಯಪಿ ಚ ಯವೇಷು ಸ್ವಗತಮೇವ ಪರಿಮಾಣಂ ಪ್ರಸ್ಥಸಂಬನ್ಧಾತ್ ವ್ಯಜ್ಯತೇ, ನ ಚೇಹ ಪರಮೇಶ್ವರಗತಂ ಕಿಂಚಿತ್ ಪರಿಮಾಣಮ್ ಅಸ್ತಿ ಯದ್ ಹೃದಯಸಂಬನ್ಧಾತ್ ವ್ಯಜ್ಯತೇ । ತಥಾಪಿ ಪ್ರಯುಕ್ತಾಯಾಃ ಪ್ರಾದೇಶಮಾತ್ರಶ್ರುತೇಃ ಸಂಭವತಿ ಯಥಾ ಕಥಂಚಿತ್ ಅನುಸ್ಮರಣಮ್ ಆಲಮ್ಬನಮ್ ಇತಿ ಉಚ್ಯತೇ । ಪ್ರಾದೇಶಮಾತ್ರತ್ವೇನ ವಾ ಅಯಮ್ ಅಪ್ರಾದೇಶಮಾತ್ರೋಽಪಿ ಅನುಸ್ಮರಣೀಯಃ ಪ್ರಾದೇಶಮಾತ್ರಶ್ರುತ್ಯರ್ಥವತ್ತಾಯೈ । ಏವಮ್ ಅನುಸ್ಮೃತಿನಿಮಿತ್ತಾ ಪರಮೇಶ್ವರೇ ಪ್ರಾದೇಶಮಾತ್ರಶ್ರುತಿಃ ಇತಿ ಬಾದರಿಃ ಆಚಾರ್ಯೋ ಮನ್ಯತೇ ॥

(ಭಾಷ್ಯಾರ್ಥ)

ಪ್ರಾದೇಶಮಾತ್ರವಾದ ಹೃದಯದಲ್ಲಿರುವ ಮನಸ್ಸಿನಿಂದ ಇವನನ್ನು ಅನುಸ್ಮರಣೆಮಾಡುತ್ತಾರೆ; ಆದರಿಂದ ಪ್ರಾದೇಶಮಾತ್ರನು ಎನಿಸುತ್ತಾನೆ. ಹೇಗೆ ಬಳ್ಳದಲ್ಲಿ ಅಳೆದ ಜವೆಕಾಳನ್ನು 'ಬಳ್ಳ (ಕಾಳು) ಎನ್ನುತ್ತಾರೋ ಅದರಂತೆಯೇ (ಇದು). ಜವೆಕಾಳಿನಲ್ಲಿ ಸ್ವಗತವಾಗಿದ್ದುಕೊಂಡಿರುವ ಪರಿಮಾಣವೇ ಬಳ್ಳದ ಸಂಬಂಧದಿಂದ ವ್ಯಕ್ತವಾಗುತ್ತದೆ; ಆದರೆ ಪರಮೇಶ್ವರಗತವಾಗಿರುವ ಯಾವದೊಂದು ಪರಿಮಾಣವೂ ಹೃದಯದ ಸಂಬಂಧದಿಂದ ವ್ಯಕ್ತವಾಗುತ್ತದೆ ಎಂಬುದಿಲ್ಲ. ಆದರೂ ಪ್ರಾದೇಶಮಾತ್ರ ಎಂಬ ಶ್ರುತಿಯು ಪ್ರಯುಕ್ತವಾಗಿರುವರಿಂದ (ಅದಕ್ಕೆ) ಅನುಸ್ಮೃತಿಯು ಹೇಗೋ ಆಲಂಬನವಾಗಬಹುದಾಗಿದೆ ಎಂದು (ಇಲ್ಲಿ ಹೀಗೆ) ಹೇಳಿದೆ[1] ಅಥವಾ ಪ್ರಾದೇಶಮಾತ್ರದವನಲ್ಲವಾದರೂ ಈತನನ್ನು

---

1. ಹೃದಯವು ಪ್ರಾದೇಶಮಾತ್ರವಾಗಿರುವದರಿಂದ ಆದರಲ್ಲಿ ಉಂಟಾಗುವ ಮನಸ್ಸಿನ ಅನುಸ್ಮೃತಿಯೂ ಪ್ರಾದೇಶಮಾತ್ರವೆನ್ನಬಹುದು ; ಆ ಅನುಸ್ಮೃತಿಗೆ ವಿಷಯವಾಗಿರುವದರಿಂದ ಪರಮೇಶ್ವರನೂ ಪ್ರಾದೇಶಮಾತ್ರನೆನಿಸುತ್ತಾನೆ. ಎಂದು ಹೇಗೋ ಕಲ್ಪಿಸಬೇಕು ಎಂದು ಭಾವ.

ಪ್ರಾದೇಶಮಾತ್ರಶ್ರುತಿಯ ಸಾರ್ಥಕ್ಯಕ್ಕಾಗಿ ಪ್ರಾದೇಶಮಾತ್ರನೆಂದು ಅನುಸ್ಮರಣೆ ಮಾಡಬೇಕು (ಎಂದಾದರೂ ಅರ್ಥವನ್ನು ಮಾಡಬಹುದು). ಹೀಗೆ ಅನುಸ್ಮೃತಿಯ ನಿಮಿತ್ತವಾಗಿ ಪರಮೇಶ್ವರನಲ್ಲಿ ಪ್ರಾದೇಶಮಾತ್ರಶ್ರುತಿಯು (ಪ್ರವೃತ್ತವಾಗಿದೆ) ಎಂದು **ಬಾದರಿ** ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.

**ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ॥ ೩೧ ॥**

೩೧. ಸಂಪತ್ತಿಯಿಂದ (ಪ್ರಾದೇಶಮಾತ್ರನು) ಎಂದು ಜೈಮಿನಿಯು (ಅಭಿಪ್ರಾಯಪಡುತ್ತಾನೆ). ಹಾಗಲ್ಲವೆ, (ಶ್ರುತಿಯು) ತಿಳಿಸುತ್ತದೆ ?

(ಭಾಷ್ಯ)

೨೧೭. ಸಂಪತ್ತಿನಿಮಿತ್ತಾ ವಾ ಸ್ಯಾತ್ ಪ್ರಾದೇಶಮಾತ್ರಶ್ರುತಿಃ। ಕುತಃ? ತಥಾ ಹಿ ಸಮಾನಪ್ರಕರಣಂ ವಾಜಸನೇಯಿಬ್ರಾಹ್ಮಣಂ ದ್ಯುಪ್ರಭೃತೀನ್ ಪೃಥಿವೀಪರ್ಯನ್ತಾನ್ ತ್ರೈಲೋಕ್ಯಾತ್ಮನೋ ವೈಶ್ವಾನರಸ್ಯ ಅವಯವಾನ್ ಅಧ್ಯಾತ್ಮಮೂರ್ಧಪ್ರಭೃತಿಷು ಚುಬುಕಪರ್ಯನ್ತೇಷು ದೇಹಾವಯವೇಷು ಸಂಪಾದಯತ್ ಪ್ರಾದೇಶಮಾತ್ರಸಂಪತ್ತಿಂ ಪರಮೇಶ್ವರಸ್ಯ ದರ್ಶಯತಿ— "ಪ್ರಾದೇಶಮಾತ್ರಮಿವ ಹ ವೈ ದೇವಾಃ ಸುವಿದಿತಾ ಅಭಿಸಂಪನ್ನಾಸ್ತಥಾ ನು ವ ಏತಾನ್ ವಕ್ಷ್ಯಾಮಿ ಯಥಾ ಪ್ರಾದೇಶಮಾತ್ರಮೇವಾಭಿಸಂಪಾದಯಿಷ್ಯಾಮೀತಿ (ಶತ. ಬ್ರಾ. ೧೦-೬-೧-೧೦) ಸ ಹೋವಾಚ ಮೂರ್ಧಾನಮುಪದಿಶನ್ನುವಾಚೈಷ ವಾ ಅತಿಷ್ಠಾ ವೈಶ್ವಾನರ ಇತಿ। ನಾಸಿಕೇ ಉಪದಿಶನ್ನುವಾಚೈಷ ವೈ ಪೃಥಗ್ವರ್ತ್ಮಾತ್ಮಾ ವೈಶ್ವಾನರ ಇತಿ। ಮುಖ್ಯಾ ಅಪ ಉಪದಿಶನ್ನುವಾಚೈಷ ವೈ ಬಹುಲೋ ವೈಶ್ವಾನರ ಇತಿ। ಮುಖ್ಯಾ ಅಪ ಉಪದಿಶನ್ನುವಾಚೈಷ ವೈ ರಯಿರ್ವೈಶ್ವಾನರ ಇತಿ। ಚುಬುಕಮುಪದಿಶನ್ನುವಾಚೈಷ ವೈ ಪ್ರತಿಷ್ಠಾ ವೈಶ್ವಾನರ ಇತಿ" (ಶತ. ಬ್ರಾ. ೧೦-೬-೧-೧೧) ಚುಬುಕಮ್ ಇತಿ ಅಧರಂ ಮುಖಫಲಕಮ್ ಉಚ್ಯತೇ। ಯದ್ಯಪಿ ವಾಜಸನೇಯಕೇ ದ್ಯೌರತಿಷ್ಠಾತ್ವಗುಣಾ ಸಮಾಮ್ನಾಯತೇ, ಆದಿತ್ಯಶ್ಚ ಸುತೇಜಸ್ತ್ವಗುಣಃ, ಛಾಂದೋಗ್ಯೇ ಪುನಃ ದ್ಯೌಃ ಸುತೇಜಸ್ತ್ವಗುಣಾ ಸಮಾಮ್ನಾಯತೇ ಆದಿತ್ಯಶ್ಚ ವಿಶ್ವರೂಪತ್ವಗುಣಃ। ತಥಾಪಿ ನೈತಾವತಾ ವಿಶೇಷೇಣ ಕಿಂಚಿತ್ ಹೀಯತೇ। ಪ್ರಾದೇಶಮಾತ್ರಶ್ರುತೇರವಿಶೇಷಾತ್। ಸರ್ವಶಾಖಾಪ್ರತ್ಯಯತ್ವಾಚ್ಚ। ಸಂಪತ್ತಿನಿಮಿತ್ತಾಂ ಪ್ರಾದೇಶಮಾತ್ರಶ್ರುತಿಂ ಯುಕ್ತತರಾಂ ಜೈಮಿನಿರಾಚಾರ್ಯೋ ಮನ್ಯತೇ ॥

(ಭಾಷ್ಯಾರ್ಥ)

ಅಥವಾ (ಈ) ಪ್ರಾದೇಶಮಾತ್ರಶ್ರುತಿಯು ಸಂಪತ್ತಿಯ ನಿಮಿತ್ತದಿಂದ ಲಾದರೂ ಆಗಬಹುದು. ಏಕೆ? ಎಂದರೆ, **ಸಮಾನಪ್ರಕರಣವುಳ್ಳ ವಾಜಸನೇಯಿಬ್ರಾಹ್ಮಣವು**[1] ಹಾಗೆಯೇ ದ್ಯುಲೋಕವೇ ಮುಂತಾಗಿ ಪೃಥಿವಿಯ ವರೆಗೆ (ಇರುವ) ತ್ರೈಲೋಕ್ಯಾತ್ಮನಾದ ವೈಶ್ವಾನರನ ಅವಯವಗಳನ್ನು ಆಧ್ಯಾತ್ಮವಾದ ಮೂರ್ಧವು ಮೊದಲಾಗಿ ಚುಬುಕದವರೆಗಿನ ದೇಹಾವಯವಗಳಲ್ಲಿ ಸಂಪಾದನೆಮಾಡಿ ಪರಮೇಶ್ವರನಿಗೆ ಪ್ರಾದೇಶಮಾತ್ರಸಂಪತ್ತಿಯನ್ನೇ[2] ತಿಳಿಸುತ್ತದೆ. (ಹೇಗೆಂದರೆ) : "ಪ್ರಾದೇಶಮಾತ್ರನಾಗಿರುವಂತೆ (ಈಶ್ವರನನ್ನು) ದೇವತೆಗಳು ಚೆನ್ನಾಗಿ ತಿಳಿದುಕೊಂಡು (ಅವನನ್ನು) ಪಡೆದುಕೊಂಡರಲ್ಲವೆ?[3] ಹಾಗೆಯೇ ನಿಮಗೆ[4] ಪ್ರಾದೇಶಮಾತ್ರನನ್ನಾಗಿಯೇ ಸಂಪಾದನೆಮಾಡುವಂತೆ ಈ (ಅವಯವಗಳನ್ನು) ಹೇಳುವೆನು (ಎಂದನು)" (ಶತ. ಬ್ರಾ. ೧೦-೬-೧-೧೦). ಅವನು ಹೇಳಿದ್ದು ಹೇಗೆಂದರೆ: (ತನ್ನ) ಮೂರ್ಧವನ್ನು ತೋರಿಸಿ ಇವನೇ ಅತಿಷ್ಠಾ ವೈಶ್ವಾನರನು ಎಂದನು[5] ; ಕಣ್ಣುಗಳನ್ನು ತೋರಿಸಿ ಇವನೇ ಸುತೇಜಾ ವೈಶ್ವಾನರನು ಎಂದನು ; ಮೂಗಿನ ಹೊಳ್ಳೆಗಳನ್ನು ತೋರಿಸಿ ಇವನೇ ಪೃಥಗ್ವರ್ತ್ಮಾತ್ಮ ವೈಶ್ವಾನರನು ಎಂದನು ; ಮುಖದಲ್ಲಿರುವ ಆಕಾಶವನ್ನು ತೋರಿಸಿ ಇವನೇ ಬಹುಲ ವೈಶ್ವಾನರನು ಎಂದನು ; ಮುಖದ ನೀರನ್ನು ತೋರಿಸಿ ಇವನೇ ರಯಿ ವೈಶ್ವಾನರನು ಎಂದನು ; ಚುಬುಕವನ್ನು ತೋರಿಸಿ ಇವನೇ ಪ್ರತಿಷ್ಠಾ ವೈಶ್ವಾನರನು ಎಂದನು" (ಶತ. ಬ್ರಾ. ೧೦-೬-೧-೧೦) (ಇಲ್ಲಿ) ಚುಬುಕವೆಂದರೆ ಕೆಳಗಿನ ಮುಖದ ಹಲಗೆ (ಗಲ್ಲವು). ವಾಜಸನೇಯಕದಲ್ಲಿ ದ್ಯುಲೋಕವು ಅತಿಷ್ಠಾತ್ವಗುಣವುಳ್ಳದ್ದೆಂದು ಹೇಳಿದೆ, ಆದಿತ್ಯನೋ ಸುತೇಜಸ್ತ್ವಗುಣವುಳ್ಳವನೆಂದು (ಹೇಳಿದೆ) : ಆದರೆ ಛಾಂದೋಗ್ಯದಲ್ಲಿ

---

1. ಅಲ್ಲಿಯೂ ಅಶ್ವಪತಿಗೂ ಔಪಮನ್ಯವನೇ ಮುಂತಾದವರಿಗೂ ನಡೆದ ವೈಶ್ವಾನರವಿಷಯಕವಾದ ಸಂವಾದವಿದೆ.

2. ಮೂರ್ಧದಿಂದ ಚುಬುಕದವರೆಗಿರುವ ಪ್ರದೇಶವು ಪ್ರಾದೇಶಮಾತ್ರವಾಗಿರುವದರಿಂದ ಅಷ್ಟರಲ್ಲಿಯೇ ಪರಮೇಶ್ವರನಿಗೆ ಸಂಪತ್ತಿಯನ್ನು ಮಾಡಿ ತೋರಿಸಿದೆ.

3. ಈ ಅರ್ಥವನ್ನು ನ್ಯಾಯನಿರ್ಣಯ ಮತ್ತು ರತ್ನಪ್ರಭಾವ್ಯಾಖ್ಯಾನ- ಇವನ್ನನುಸರಿಸಿ ಬರೆದಿದೆ. ಕಲ್ಪತರುವಿನಲ್ಲಿ "ದೇವತೆಗಳು ಪ್ರಾದೇಶಮಾತ್ರರಾಗಿ (ಉಪಾಸನೆಯಿಂದ) ಪ್ರಾಪ್ತರಾದರೆ ಸುವಿದಿತರಾಗುತ್ತಾರಲ್ಲವೆ?" ಎಂಬ ಅರ್ಥವನ್ನು ತೆಗೆದಿದೆ.

4. ಪ್ರಾಚೀನಶಾಲ ಔಪಮನ್ಯವನೇ ಮೊದಲಾದವರಿಗೆ ಅಶ್ವಪತಿಯು ಹೇಳಿದ ಮಾತಿದು.

5. ಹೀಗೆಂದು ಮೂರ್ಧದಲ್ಲಿ ಸಂಪಾದನೆಮಾಡಬೇಕು ಎಂದು ಅಭಿಪ್ರಾಯ.

ದ್ಯುಲೋಕವು ಸುತೇಜಸ್ತ್ವಗುಣವುಳ್ಳದ್ದೆಂದೂ ಆದಿತ್ಯನು ವಿಶ್ವರೂಪತ್ವಗುಣವುಳ್ಳವನೆಂದೂ ಹೇಳಿದೆ. ಹೀಗಿದ್ದರೂ ಇಷ್ಟು ವಿಶೇಷದಿಂದ ಯಾವ ಹಾನಿಯೂ ಇಲ್ಲ; ಏಕೆಂದರೆ ಪ್ರಾದೇಶಮಾತ್ರಶ್ರುತಿಯು (ಎರಡಕ್ಕೂ) ಸಮಾನವಾಗಿದೆ. ಸರ್ವಶಾಖಾಪ್ರತ್ಯಯನ್ಯಾಯದಿಂದಲೂ[1] (ಹೀಗೆಂದು ತಿಳಿಯಬೇಕು). ಪ್ರಾದೇಶಮಾತ್ರಶ್ರುತಿಯು ಸಂಪತ್ತಿನಿಮಿತ್ತವಾಗಿ (ಬಂದದ್ದು ಎಂಬುದು) ಯುಕ್ತತರವೆಂದು[2] ಜೈಮಿನಿ ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.

**ಆಮನನ್ತಿ ಚೈನಮಸ್ಮಿನ್ ॥ ೩೨ ॥**

೩೨. ಮತ್ತು ಈತನನ್ನು ಇದರಲ್ಲಿ (ಜಾಬಾಲಶಾಖೆಯವರು) ಪಠಿಸುತ್ತಲೂ ಇದ್ದಾರೆ.

( ಭಾಷ್ಯ )

೨೧೮. ಆಮನನ್ತಿ ಚ ಏನಂ ಪರಮೇಶ್ವರಮ್ ಅಸ್ಮಿನ್ ಮೂರ್ಧಚುಬುಕಾನ್ತರಾಲೇ ಜಾಬಾಲಾಃ- "ಯ ಏಷೋಽನನ್ತೋಽವ್ಯಕ್ತಃ ಆತ್ಮಾ ಸೋಽವಿಮುಕ್ತೇ ಪ್ರತಿಷ್ಠಿತ ಇತಿ | ಸೋಽವಿಮುಕ್ತಃ ಕಸ್ಮಿನ್ ಪ್ರತಿಷ್ಠಿತ ಇತಿ। ವರಣಾಯಾಂ ನಾಸ್ಯಾಂ ಚ ಮಧ್ಯೇ ಪ್ರತಿಷ್ಠಿತ ಇತಿ। ಕಾ ವೈ ವರಣಾ ಕಾ ಚ ನಾಸೀತಿ" (ಜಾ. ೧) | ತತ್ರ ಚ ಇಮಾಮೇವ ನಾಸಿಕಾಂ ವರಣಾ ನಾಸೀ ಇತಿ ನಿರುಚ್ಯ "ಯಾ ಸರ್ವಾಣೀನ್ದ್ರಿಯಕೃತಾನಿ ಪಾಪಾನಿ ವಾರಯತೀತಿ ಸಾ ವರಣಾ, ಸರ್ವಾಣೀನ್ದ್ರಿಯಕೃತಾನಿ ಪಾಪಾನಿ ನಾಶಯತೀತಿ ಸಾ ನಾಸೀ"[3] ಇತಿ, ಪುನರಾಮನನ್ತಿ "ಕತಮಚ್ಚಾಸ್ಯ ಸ್ಥಾನಂ ಭವತೀತಿ |

---

1. ಈ ನ್ಯಾಯವನ್ನು ೩-೩-೧ರಲ್ಲಿ ವಿವರಿಸಿದೆ. ಬೇರೆಬೇರೆಯ ಶಾಖೆಗಳಲ್ಲಿ ವಿಧಿಸಿರುವ ಆಯಾ ಉಪಾಸನೆಗಳನ್ನು ಒಂದೆಂದೇ ಭಾವಿಸಬೇಕು ಎಂಬುದು ನ್ಯಾಯವು. ಒಂದೇ ವಿದ್ಯೆಯನ್ನು ಬೇರೆಬೇರೆಯ ಶಾಖೆಗಳಲ್ಲಿ ವಿಧಿಸಿದ್ದರೆ ಒಂದೊಂದು ಶಾಖೆಯಲ್ಲಿ ಹೇಳಿರುವ ಗುಣವನ್ನು ಇನ್ನೊಂದು ಶಾಖೆಯಲ್ಲಿ ಹೇಳದಿದ್ದರೂ ಸೇರಿಸಿಕೊಂಡು ಉಪಾಸನೆ ಮಾಡಬೇಕು. ಇಲ್ಲಿ ಶಾಖಾಭೇದದಿಂದ ಗುಣಗಳನ್ನು ಅಲ್ಲಲ್ಲಿ ಹೇಳಿರುವಷ್ಟನ್ನೇ ಆಯಾ ಶಾಖೆಯವರು ಉಪಾಸನೆಮಾಡಬಹುದು ಎಂದು ರತ್ನಪ್ರಭಾವ್ಯಾಖ್ಯಾನದಲ್ಲಿ ಬರೆದಿರುವ ಮತ್ತೊಂದು ಅಭಿಪ್ರಾಯವು ಯುಕ್ತವೆಂದು ತೋರುವದಿಲ್ಲ.

2. ಯುಕ್ತತರವೆಂದು ಇಲ್ಲಿ ಹೇಳಿರುವ ಈ ಪಕ್ಷವನ್ನು ಛಾಂದೋಗ್ಯ (೫-೧೮-೧) ಭಾಷ್ಯದಲ್ಲಿ ಒಪ್ಪಿಲ್ಲ. ಈ ಎರಡು ಭಾಷ್ಯಗಳಿಗಿರುವ ಈ ಅಭಿಪ್ರಾಯಭೇದಕ್ಕೆ ಕಾರಣವೇನೋ ತಿಳಿಯದು.

3. ಸರ್ವಾನಿನ್ದ್ರಿಯಕೃತಾನ್ ದೋಷಾನ್ ವಾರಯತೀತಿ ತೇನ ವರಣಾ ಭವತಿ। ಸರ್ವಾನಿನ್ದ್ರಿಯಕೃತಾನ್ ಪಾಪಾನ್ನಾಶಯತೀತಿ ತೇನ ನಾಶೀ ಭವತಿ" ಎಂದು ಅಚ್ಚಿನ ಪುಸ್ತಕದ ಪಾಠ. ಭಾಷ್ಯದಲ್ಲಿ ಬರೆದಿರುವದು ಪಾಠಾಂತರವೋ ಶ್ರುತಿಯ ಅರ್ಥಮಾತ್ರವೋ ತಿಳಿಯದು.

ಭ್ರುವೋರ್ಘ್ರಾಣಸ್ಯ ಚ ಯಃ ಸನ್ಧಿಃ ಸ ಏಷ ದ್ಯುಲೋಕಸ್ಯ ಪರಸ್ಯ ಚ ಸಂಧಿರ್ಭವತೀತಿ" (ಜಾ. ೧) | ತಸ್ಮಾತ್ ಉಪಪನ್ನಾ ಪರಮೇಶ್ವರೇ ಪ್ರಾದೇಶ ಮಾತ್ರಶ್ರುತಿಃ ।

(ಭಾಷ್ಯಾರ್ಥ)

ಮತ್ತು ಈ ಮೂರ್ಧಚುಬುಕಗಳ ನಡುವೆ ಈ ಪರಮೇಶ್ವರನನ್ನು (ಉಪಾಸನೆಮಾಡಬೇಕೆಂದು) ಜಾಬಾಲ(ಶಾಖೆಯವರು) "ಈ ಅನಂತನೂ ಅವ್ಯಕ್ತನೂ ಆದ ಆತ್ಮನಿರುವನಲ್ಲ, ಅವನು ಅವಿಮುಕ್ತನಲ್ಲಿ[1] ಇದ್ದುಕೊಂಡಿರುವನು. ಆ ಅವಿಮುಕ್ತನು ಏತರಲ್ಲಿದ್ದುಕೊಂಡಿರುವನು ? ವರಣಾದಲ್ಲಿಯೂ ನಾಸಿಯಲ್ಲಿಯೂ ನಡುವೆ ಇದ್ದುಕೊಂಡಿರುವನು. ವರಣಾ ಎಂದರೆ ಯಾವದು? ಮತ್ತು ನಾಸೀ ಎಂದರೆ ಯಾವದು ? (ಜಾ. ೧) ಎಂದು (ಪಠಿಸುತ್ತಾರೆ) ಮತ್ತು ಅಲ್ಲಿ "ಯಾವದು ಇಂದ್ರಿಯಕೃತವಾದ ಸರ್ವಪಾಪಗಳನ್ನೂ ನಿವಾರಣ ಮಾಡುವದೋ ಅದು ವರಣಾ ; ಇಂದ್ರಿಯಕೃತವಾದ ಸರ್ವಪಾಪಗಳನ್ನೂ ನಾಶಮಾಡುವದರಿಂದ ಅದು ನಾಸೀ"– ಎಂದು ಈ ನಾಸಿಕೆಯನ್ನೇ[2] ವರಣಾ ನಾಸೀ ಎಂದು ನಿರ್ವಚನಮಾಡಿ "ಇವನ ಸ್ಥಾನವು ಯಾವದಾಗಿರುತ್ತದೆ ? ಹುಬ್ಬುಗಳಿಗೂ ಮೂಗಿಗೂ (ನಡುವೆ ಇರುವ) ಸಂಧಿಯಿದೆಯಲ್ಲ, ಆ ಇದು ದ್ಯುಲೋಕಕ್ಕೂ ಪರ(ಲೋಕಕ್ಕೂ) ಸಂಧಿಯು" (ಜಾ. ೧) ಎಂದು ಮತ್ತೆ ಪಠಿಸುತ್ತಾರೆ. ಆದ್ದರಿಂದ ಪರಮೇಶ್ವರನಲ್ಲಿ ಪ್ರಾದೇಶಮಾತ್ರ ಎಂಬ ಶ್ರುತಿಯು ಯುಕ್ತವಾಗಿದೆ.

(ಭಾಷ್ಯ)

೨೧೯. ಅಭಿವಿಮಾನಶ್ರುತಿಃ ಪ್ರತ್ಯಗಾತ್ಮತ್ವಾಭಿಪ್ರಾಯಾ । ಪ್ರತ್ಯಗಾತ್ಮತಯಾ ಸರ್ವೈಃ ಪ್ರಾಣಿಭಿಃ ಅಭಿವಿಮಾಯತೇ ಇತಿ ಅಭಿವಿಮಾನಃ | ಅಭಿಗತೋ ವಾ ಅಯಂ ಪ್ರತ್ಯಗಾತ್ಮತ್ವಾತ್ ವಿಮಾನಶ್ಚ ಮಾನವಿಯೋಗಾತ್ ಇತಿ ಅಭಿವಿಮಾನಃ । ಅಭಿವಿಮಿಮೀತೇ ವಾ ಸರ್ವಂ ಜಗತ್ಕಾರಣತ್ವಾತ್ ಇತ್ಯಭಿವಿಮಾನಃ । ತಸ್ಮಾತ್ ಪರಮೇಶ್ವರೋ ವೈಶ್ವಾನರಃ ಇತಿ ಸಿದ್ಧಮ್ ||

(ಭಾಷ್ಯಾರ್ಥ)

ಅಭಿವಿಮಾನ ಎಂಬ ಶ್ರುತಿಗೆ ಪ್ರತ್ಯಗಾತ್ಮನೆಂಬುದು ಅಭಿಪ್ರಾಯವು. (ತಮ್ಮ) ಪ್ರತ್ಯಗಾತ್ಮನೆಂದು ಎಲ್ಲಾ ಪ್ರಾಣಿಗಳೂ (ಈತನನ್ನು) ಅರಿತುಕೊಳ್ಳು

---

1. ಜೀವನಲ್ಲಿ.
2. "ಭ್ರೂಸಹಿತನಾಸಿಕೆಯನ್ನೇ" ನ್ಯಾಯನಿರ್ಣಯವ್ಯಾ ||

ತ್ತಾರೆ ; ಆದ್ದರಿಂದ (ಅಭಿವಿಮೀಯತೇ ಇತಿ) **ಅಭಿವಿಮಾನ**ನೆಂದು ಹೆಸರು.[1] ಅಥವಾ ಪ್ರತ್ಯಗಾತ್ಮನಾಗಿರುವದರಿಂದ ಇವನು ಅಭಿಗತನು ; ಮಾನವಿಯೋಗದಿಂದ (ಪರಿಮಾಣರಾಹಿತ್ಯವಿರುವದರಿಂದ) ವಿಮಾನನು.[2] ಅಥವಾ ಜಗತ್ತಿಗೆ ಕಾರಣನಾಗಿರುವದರಿಂದ ಎಲ್ಲವನ್ನೂ ಅಳೆಯುತ್ತಾನೆ (ಅಭಿವಿಮಿಮೀತೇ)[3], ಆದ್ದರಿಂದ ಅಭಿವಿಮಾನನು.

ಆದ್ದರಿಂದ ವೈಶ್ವಾನರನು ಪರಮೇಶ್ವರನೇ ಎಂದು ಸಿದ್ಧವಾಯಿತು.

——:o:——

1. ಪ್ರತಿಯೊಬ್ಬನೂ ತನ್ನತನ್ನ ಆತ್ಮನೆಂದೇ ಈತನನ್ನು ಗೊತ್ತುಪಡಿಸಿಕೊಳ್ಳುತ್ತಾನೆ ಎಂಬರ್ಥ. ಛಾಂದೋಗ್ಯಭಾಷ್ಯದಲ್ಲಿ ಇದೊಂದೇ ಅರ್ಥವನ್ನು ಕೊಟ್ಟಿರುತ್ತದೆ.

2. ನಮ್ಮ ಆತ್ಮನೇ ಆಗಿ ತೀರ ಹತ್ತಿರವಿರುತ್ತಾನೆ, ಮತ್ತು ಅಪರಿಚ್ಛಿನ್ನನು ಎಂದರ್ಥ.

3. 'ಸೃಷ್ಟಿಸುತ್ತಾನೆ' ಎಂದು ರತ್ನಪ್ರಭಾವ್ಯಾಖ್ಯಾನದ ಅರ್ಥ.

# ಅಧಿಕರಣಗಳ ಸಾರ

---

ಎರಡನೆಯ ಮೂರನೆಯ ಪಾದಗಳಲ್ಲಿ ಅಸ್ಪಷ್ಟಬ್ರಹ್ಮಲಿಂಗವುಳ್ಳ ವೇದಾಂತವಾಕ್ಯಗಳನ್ನು ವಿಚಾರಮಾಡಿರುತ್ತದೆ. ಎರಡನೆಯ ಪಾದದಲ್ಲಿ ಉಪಾಸ್ಯಬ್ರಹ್ಮವಾಕ್ಯಗಳೇ ಹೆಚ್ಚಾಗಿವೆ.

## ೧. ಸರ್ವತ್ರಪ್ರಸಿದ್ಧ್ಯಧಿಕರಣ

**ವಿಷಯವೂ ಸಂಶಯವೂ :** ಛಾಂದೋಗ್ಯದಲ್ಲಿ "ಮನೋಮಯಃ ಪ್ರಾಣಶರೀರಃ" (ಛಾಂ. ೩-೧೪-೨) ಎಂಬ ಶಾಂಡಿಲ್ಯವಿದ್ಯಾವಾಕ್ಯದಲ್ಲಿ ಮನೋಮಯತ್ವಾದಿಗುಣಗಳುಳ್ಳವನು ಶಾರೀರನೊ, ಪರಬ್ರಹ್ಮವೊ ?

**ಪೂರ್ವಪಕ್ಷ :** ಕಾರ್ಯಕರಣವಂತನಾಗಿರುವ ಶಾರೀರನಿಗೇ ಮನಆದಿಗಳ ಸಂಬಂಧವು ಹೊಂದುವದರಿಂದ ಅವನೇ ಇಲ್ಲಿ ಉಪಾಸ್ಯನಾಗಿರುತ್ತಾನೆ. ಹೃದಯವೆಂಬ ಪರಿಚ್ಛಿನ್ನಸ್ಥಾನದಲ್ಲಿರುವ ಆತ್ಮನೆಂದೂ ಅಣುತರವಾದ ಸ್ವರೂಪದವನೆಂದೂ ಹೇಳಿರುವ ಈ ಮನೋಮಯನು ಪರಮಾತ್ಮನಾಗಲಾರನು. "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ" ಎಂಬುದು ಶಮವಿಧಿಪರವಾಗಿರುವದರಿಂದ ಬ್ರಹ್ಮೋಪಾಸನೆಯನ್ನು ವಿಧಿಸುವದೆನ್ನುವದಕ್ಕೆ ಬರುವದಿಲ್ಲ. ಸರ್ವಕಾಮಃ ಮುಂತಾದ ವಿಶೇಷಣಗಳನ್ನು ಹೇಗಾದರೂ ಮಾಡಿ ಜೀವನಿಗೇ ಹೊಂದಿಸಬೇಕು.

**ಸಿದ್ಧಾಂತ :** "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಉಪಕ್ರಮದಲ್ಲಿ ಬ್ರಹ್ಮವು ಪ್ರಕೃತವಾಗಿರುವದರಿಂದಲೂ ಉಪಾಸನೆಮಾಡಬೇಕೆಂದು ಹೇಳಿರುವ ಸತ್ಯಕಾಮತ್ವಸತ್ಯಸಂಕಲ್ಪತ್ವಾದಿಗುಣಗಳು ಬ್ರಹ್ಮಕ್ಕೇ ಹೊಂದುವದರಿಂದಲೂ ಉಪಾಸಕನಾದ ಶಾರೀರನು ಉಪಾಸ್ಯನಾಗಿರುವ ಮನೋಮಯಾದಿಗುಣಯುತವಾದ ಆತನನ್ನು ಮುಂದೆ ಪಡೆಯುವನೆಂದು ಹೇಳಿರುವದರಿಂದಲೂ ಸಮಾನಪ್ರಕರಣವಾದ (ಶತ. ಬ್ರಾ.) ಶ್ರುತ್ಯಂತರದಲ್ಲಿಯೂ (ಗೀ ೧೮-೬೧) ಸ್ಮೃತಿಯಲ್ಲಿಯೂ ಶಾರೀರನಿಗಿಂತ ಆವನು ಬೇರೆಯೆಂದು ಹೇಳಿರುವದರಿಂದಲೂ ಬ್ರಹ್ಮವೇ ಇಲ್ಲಿ ಹೇಳಿರುವ ಮನೋಮಯತ್ವಾದಿಗುಣಕನಾದ ಆತ್ಮನು. ಪರಮಾತ್ಮನು ಹೃದಯದಲ್ಲಿರುವನೆಂದು ಹೇಳಿರುವದು ಉಪಾಸನೆಗಾಗಿ ; ಅವನು ಜೀವರ ಹೃದಯದಲ್ಲಿದ್ದರೂ ಜೀವರಿಗೆ ಮಿಥ್ಯಾಜ್ಞಾನದಿಂದಾಗಿರುವ ಸುಖದುಃಖಭೋಗವು ಪರಮಾರ್ಥರೂಪನಾದ ಅವನಿಗೆ ಅಂಟುವದಿಲ್ಲ.

## ೨. ಅತ್ತ್ರಧಿಕರಣ

**ವಿಷಯವೂ ಸಂಶಯವೂ:** ಕಠವಲ್ಲಿಗಳಲ್ಲಿ "ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ, ಮೃತ್ಯುರ್ಯಸ್ಯೋಪಸೇಚನಮ್" (ಕ. ೧-೨-೨೪) ಎಂಬ ವಾಕ್ಯದಲ್ಲಿ ಉಪದೇಶಿಸಿರುವ ಅತ್ತೃವು ಅಗ್ನಿಯೊ, ಜೀವನೊ, ಪರಮಾತ್ಮನೊ ?

**ಪೂರ್ವಪಕ್ಷ:** ಶ್ರುತ್ಯಂತರದಲ್ಲಿ ಅಗ್ನಿಯನ್ನೂ ಜೀವರನ್ನೂ ಅತ್ತೃವೆಂದು ಹೇಳಿರುವದರಿಂದ ಅವರಿಬ್ಬರಲ್ಲಿ ಒಬ್ಬನು ಅತ್ತೃವಾಗಬಹುದು. ಪರಮಾತ್ಮನು ತಿನ್ನುವವನಲ್ಲ, ನೋಡುತ್ತಿರುವವನು ಎಂದು ಶ್ರುತಿಯಲ್ಲಿರುವದರಿಂದ ಈ ವಾಕ್ಯವು ಅವನನ್ನು ಹೇಳಲಾರದು.

**ಸಿದ್ಧಾಂತ:** ಮೃತ್ಯುವಿನಿಂದೊಡಗೂಡಿದ ಸರ್ವಜಗತ್ತನ್ನೂ ತಿನ್ನುವವನು ಪರಮಾತ್ಮನೇ ಆಗಬೇಕು. ಅವನು ತಿನ್ನುವವನಲ್ಲ ಎನ್ನುವ ಶ್ರುತಿಗೆ ಕರ್ಮಫಲಭೋಗವನ್ನು ನಿಷೇಧಮಾಡುವದರಲ್ಲಿ ತಾತ್ಪರ್ಯವೇ ಹೊರತು ಜಗತ್ಸಂಹಾರನಿಷೇಧದಲ್ಲಿ ತಾತ್ಪರ್ಯವಿಲ್ಲ. ಈ ವಾಕ್ಯವು ಪರಮಾತ್ಮನ ಪ್ರಕರಣದಲ್ಲಿ ಬಂದಿರುವದರಿಂದಲೂ ಈ ಅತ್ತೃವು ಪರಮಾತ್ಮನೆಂದೇ ತಿಳಿಯಬೇಕು.

## ೩. ಗುಹಾಪ್ರವಿಷ್ಟಾಧಿಕರಣ

**ವಿಷಯವೂ ಸಂಶಯವೂ:** "ಋತಂ ಪಿಬನ್ತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ" (ಕ. ೧-೩-೧) ಎಂಬ ಕಠವಾಕ್ಯದಲ್ಲಿ ಗುಹೆಯನ್ನು ಹೊಕ್ಕಿರುವರೆಂದು ಹೇಳಿರುವದು ಬುದ್ಧಿಜೀವರನ್ನೊ, ಜೀವಪರಮಾತ್ಮರನ್ನೊ ? ಇಲ್ಲಿ ಜೀವನನ್ನೂ ಹೇಳಬೇಕಾದದ್ದಿದೆ. ಆದ್ದರಿಂದ ಸಂಶಯವುಂಟಾಗುತ್ತದೆ.

**ಪೂರ್ವಪಕ್ಷ:** 'ಗುಹೆಯಲ್ಲಿ ಹೊಕ್ಕಿರುವವರು' ಎಂಬ ವಿಶೇಷಣವು ಸರ್ವಗತನಾದ ಪರಮಾತ್ಮನಿಗಿಂತಲೂ ಬುದ್ಧಿಜೀವರಿಗೇ ಹೊಂದುವದರಿಂದಲೂ 'ಸುಕೃತದ ಲೋಕದಲ್ಲಿ' ಎಂಬ ಕರ್ಮಗೋಚರತ್ವವು ಜೀವನಿಗೇ ಹೊಂದುವದರಿಂದಲೂ 'ನೆರಳು ಬಿಸಿಲುಗಳು' ಎಂಬುದು ಚೇತನಾಚೇತನರಾದ ಬುದ್ಧಿಜೀವರಿಗೇ ಒಪ್ಪುವದರಿಂದಲೂ ಬುದ್ಧಿಜೀವರನ್ನೇ ಇಲ್ಲಿ ಹೇಳಿದೆ.

**ಸಿದ್ಧಾಂತ:** "ಋತಂ ಪಿಬನ್ತೌ" ಜೊತೆಯಲ್ಲಿರುವರೆಂದು ಹೇಳಿರುವ ಇಬ್ಬರೂ ಸಮಾನಸ್ವಭಾವದವರಾಗಿರಬೇಕು. ಜೀವಪರಮಾತ್ಮರಿಬ್ಬರೂ ಚೇತನರಾಗಿರುವದರಿಂದ ಸಮಾನಸ್ವಭಾವದವರಾಗಿರುತ್ತಾರೆ. ಋತಪಾನವೆಂಬ ವಿಶೇಷಣದಿಂದ ಇವರಲ್ಲಿ ಒಬ್ಬನು ಜೀವನೆಂದಾಗುವದರಿಂದ ಇನ್ನೊಬ್ಬನು ಪರಮಾತ್ಮನೇ ಆಗಿರಬೇಕು. ಪರಮಾತ್ಮನು ಗುಹೆಯಲ್ಲಿರುವನೆಂದು ಶ್ರುತಿಗಳಲ್ಲಿ ಮತ್ತೆಮತ್ತೆ ಹೇಳಿದೆ. ಅವನು ಸರ್ವಗತನಾದರೂ ಅವನನ್ನು ಅಲ್ಲಿಯೇ ಅರಿತುಕೊಳ್ಳಬೇಕೆಂಬ ಕಾರಣದಿಂದ ಹೃದಯಗುಹೆಯಲ್ಲಿರುವನೆಂದು ಹೇಳಿದೆ. 'ಸುಕೃತದ ಲೋಕದಲ್ಲಿ' ಎಂಬುದು ಛತ್ರಿನ್ಯಾಯದಿಂದ ಪರಮಾತ್ಮನಿಗೂ ಆಗಬಹುದು. 'ನೆರಳುಬಿಸಿಲುಗಳು' ಎಂಬ ವಿಶೇಷಣವು

ಜೀವನು ಸಂಸಾರಿ, ಪರಮಾತ್ಮನು ಅಸಂಸಾರಿ ಎಂಬ ವೈಲಕ್ಷಣ್ಯವನ್ನು ತಿಳಿಸುತ್ತದೆ. ಇಲ್ಲಿರುವ ಜೀವಪರಮಾತ್ಮರನ್ನು ಗಂತೃಗಂತವ್ಯರೆಂಬ ವಿಶೇಷಣಗಳಿಂದ ಹೇಳಿರುವದ ರಿಂದಲೂ ಇದು ಪರಮಾತ್ಮಪ್ರಕರಣವಾಗಿರುವದರಿಂದಲೂ ಇಲ್ಲಿ ಜೀವಪರಮಾತ್ಮರನ್ನೇ ಹೇಳಿದೆ. ಆದ್ದರಿಂದ ಜೀವನ ಪರಮಾರ್ಥಸ್ವರೂಪವಾದ ಪರಮಾತ್ಮನನ್ನು ತಿಳಿಸುವದಕ್ಕೇ ಈ ವಾಕ್ಯವು ಬಂದಿದೆ.

## ೪. ಅಂತರಧಿಕರಣ

**ವಿಷಯವೂ ಸಂಶಯವೂ:** "ಯ ಏಷೋಽಕ್ಷಿಣಿ ಪುರುಷೋ ದೃಶ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ" (ಛಾಂ. ೪-೧೫-೧) ಎಂದು ಮುಂತಾಗಿರುವ ಉಪಕೋಸಲವಿದ್ಯೆಯ ವಾಕ್ಯದಲ್ಲಿ ಅಕ್ಷಿಯಲ್ಲಿರುವನೆಂದು ಹೇಳಿರುವ ಉಪಾಸ್ಯಪುರುಷನು ಛಾಯಾತ್ಮನೆ, ವಿಜ್ಞಾನಾತ್ಮನೆ, ದೇವತಾತ್ಮನೆ, ಅಥವಾ ಈಶ್ವರನೆ ?

**ಪೂರ್ವಪಕ್ಷ:** 'ದೃಶ್ಯತೇ' (ಕಾಣಿಸುತ್ತಾನೆ) ಎಂದು ಪ್ರಸಿದ್ಧವಾಗಿರುವದನ್ನು ಹೇಳಿರುವದರಿಂದ ಛಾಯಾತ್ಮನನ್ನೇ ಉಪಾಸನೆಮಾಡಬೇಕೆಂದು ಇಲ್ಲಿ ಹೇಳಿದೆ. ವಿಜ್ಞಾನಾತ್ಮನು ಕಣ್ಣಿನಿಂದ ರೂಪವನ್ನು ನೋಡುವದರಿಂದಲೂ ಆದಿತ್ಯಪುರುಷನು ರಶ್ಮಿಗಳಿಂದ ಕಣ್ಣಿನಲ್ಲಿರುವನೆಂದು ಶ್ರುತಿಯಲ್ಲಿರುವದರಿಂದಲೂ ಅವರನ್ನೂ ಬೇಕಾದರೆ ಅಕ್ಷಿಪುರುಷನೆಂದು ಭಾವಿಸಬಹುದು. ಕಣ್ಣೆಂಬ ಒಂದು ಗೊತ್ತಿನ ಸ್ಥಾನವನ್ನು ಹೇಳಿರುವದರಿಂದ ಇಲ್ಲಿ ಉಪಾಸ್ಯನೆಂದು ಹೇಳಿರುವ ಪುರುಷನು ಸರ್ವಗತನಾದ ಈಶ್ವರನಲ್ಲ.

**ಸಿದ್ಧಾಂತ:** ಆತ್ಮ, ಅಮೃತ, ಅಭಯ- ಎಂದು ಹೇಳಿರುವ ಗುಣಗಳು ಪರಮೇಶ್ವರನಿಗೆ ಮಾತ್ರ ಮುಖ್ಯವೃತ್ತಿಯಿಂದ ಹೊಂದುತ್ತವೆ. ಇಲ್ಲಿ ಅಕ್ಷಿಸ್ಥಾನವು ನಿರ್ಲೇಪವಾಗಿರುವದೆಂದು ಹೇಳಿರುವದು ಯಾವ ದೋಷವೂ ಇಲ್ಲದ ಪರಮೇಶ್ವರನಿಗೇ ಅನುಗುಣವಾಗಿದೆ. ಸಂಯದ್ವಾಮ, ವಾಮನೀ, ಭಾಮನೀ- ಎಂಬ ವಿಶೇಷಣಗಳೂ ಆತನಿಗೇ ಹೊಂದುತ್ತವೆ. ಪರಮೇಶ್ವರನಿಗೆ ಹೇಳಿರುವ ಅನೇಕಸ್ಥಾನಗಳಲ್ಲಿ ಅಕ್ಷಿಯು ಒಂದು ; ಪರಮಾತ್ಮನಿಗೆ ಉಪಾಧಿಯ ಸಂಬಂಧದಿಂದ ಸ್ಥಾನ, ನಾಮ, ರೂಪ- ಮುಂತಾದವುಗಳೆಲ್ಲವನ್ನೂ ಉಪಾಸನೆಗಾಗಿ ಹೇಳಿದರೆ ತಪ್ಪಲ್ಲ. ವಾಕ್ಯದ ಉಪಕ್ರಮದಲ್ಲಿ ಸುಖವಿಶಿಷ್ಟವಾದ ಬ್ರಹ್ಮವನ್ನೇ ಹೇಳಿರುವದರಿಂದಲೂ ಉಪಾಸನೆಗೆ ಬೇಕಾಗಿರುವ ಗತಿಯನ್ನು ಆಚಾರ್ಯನು ಹೇಳುವನೆಂದು ಅಗ್ನಿಗಳು ಉಪಕೋಸಲನಿಗೆ ಹೇಳಿರುವದರಿಂದಲೂ ಇಲ್ಲಿ ಹೇಳಿರುವ ಗತಿಯು ಬ್ರಹ್ಮೋಪಾಸಕರಿಗೆ ಶ್ರುತಿಯಲ್ಲಿ ಹೇಳಿರುವ ದೇವಯಾನವೇ ಆಗಿರುವದರಿಂದಲೂ ಬ್ರಹ್ಮವೇ ಇಲ್ಲಿ ಉಪಾಸ್ಯವೆಂದು ಹೇಳಿದೆ ಎಂದು ನಿಶ್ಚಯವಾಗುತ್ತದೆ. ಛಾಯಾತ್ಮನು ಅಕ್ಷಿಯಲ್ಲಿ ಯಾವಾಗಲೂ ಇರುವದಿಲ್ಲ ; ವಿಜ್ಞಾನಾತ್ಮನು ಶರೀರಕ್ಕೆಲ್ಲ ಸಂಬಂಧಪಟ್ಟವನಾದ್ದರಿಂದ ಬರಿಯ ಕಣ್ಣಿನಲ್ಲಿಯೇ ಇರುವನೆಂದು ಹೇಳುವದಕ್ಕಾಗುವದಿಲ್ಲ ; ಆದಿತ್ಯನು ಆತ್ಮನಲ್ಲ. ಈ ಮೂವರಿಗೂ ಇಲ್ಲಿ ಹೇಳಿರುವ ಅಮೃತತ್ವಾದಿಗುಣಗಳು ಹೊಂದುವದಿಲ್ಲ ; ಆದ್ದರಿಂದ ಈ ಉಪಕೋಸಲವಿದ್ಯೆಯಲ್ಲಿ ಅವರನ್ನು ಹೇಳಿಲ್ಲ. ಪ್ರಕೃತವಾಗಿರುವ ಬ್ರಹ್ಮಕ್ಕೇ ಅಕ್ಷಿಸ್ಥಾನವನ್ನೂ ಸಂಯದ್ವಾಮತ್ವಾದಿಗುಣಗಳನ್ನೂ ಹೇಳಿ ಅದನ್ನು ಅಲ್ಲಿ ಹಾಗೆಂದು ಉಪಾಸನೆಮಾಡಿದವರಿಗೇ ದೇವಯಾನಗತಿಯನ್ನು ಹೇಳಿದೆ ಎಂಬುದು ಯುಕ್ತ.

## ೫. ಅಂತರ್ಯಾಮ್ಯಧಿಕರಣ

**ವಿಷಯವೂ ಸಂಶಯವೂ:** "ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅನ್ತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ" (ಬೃ. ೩-೭-೩) ಎಂದು ಮುಂತಾಗಿರುವ ವಾಕ್ಯಗಳಲ್ಲಿ ಹೇಳಿರುವ ಅಂತರ್ಯಾಮಿಯು ಆಯಾ ಅಭಿಮಾನಿಯಾದ ದೇವತಾತ್ಮನೊ, ಯಾವನಾದರೊಬ್ಬ ಯೋಗಿಯೊ, ಪರಮಾತ್ಮನೊ, ಅಥವಾ ಮತ್ತೆ ಯಾವನಾದರೊಬ್ಬನೊ ?

**ಪೂರ್ವಪಕ್ಷ:** ಅಂತರ್ಯಾಮಿ ಎಂಬ ಹೆಸರು ಅಪೂರ್ವವಾಗಿರುವದರಿಂದ ಯಾವನೋ ಒಬ್ಬ ಅಪ್ರಸಿದ್ಧಪುರುಷನನ್ನು ಇಲ್ಲಿ ಹೇಳಿದೆ. ಅಥವಾ ಆಯಾ ದೇವತೆಯೋ ಒಬ್ಬ ಯೋಗಿಯೋ ಪೃಥಿವ್ಯಾದಿಗಳನ್ನು ಕಟ್ಟಿನಲ್ಲಿಟ್ಟುಕೊಂಡಿರುವವನಾಗಿರಬಹುದು. ಶರೀರೇಂದ್ರಿಯಗಳಿಲ್ಲದ ಪರಮೇಶ್ವರನು ಅಂತರ್ಯಾಮಿಯಾಗಲಾರನು

**ಸಿದ್ಧಾಂತ:** ಪರಮಾತ್ಮನು ಎಲ್ಲಕ್ಕೂ ಕಾರಣನಾಗಿರುವದರಿಂದ ಎಲ್ಲವನ್ನೂ ಕಟ್ಟಿನಲ್ಲಿಟ್ಟುಕೊಂಡಿರುತ್ತಾನೆಂದು ಹೇಳುವದು ಯುಕ್ತವಾಗಿದೆ. ಅವನು ಆತ್ಮನು, ಅಮೃತನು ಎಂದು ಹೇಳಿರುವದರಿಂದಲೂ ದೇವತೆಗಳಿಗೂ ಅವಿಜ್ಞೇಯನೆಂದಿರುವದರಿಂದಲೂ ಅದೃಷ್ಟತ್ವವೇ ಮುಂತಾದ ಧರ್ಮಗಳನ್ನು ಹೇಳಿರುವದರಿಂದಲೂ ಮತ್ತೆ ಯಾರೂ ಅಂತರ್ಯಾಮಿಯಾಗಲಾರರು. ಪರಮಾತ್ಮನಿಗೆ ಬೇರೆ ಕಾರ್ಯಕರಣಗಳು ಇಲ್ಲವಾದರೂ ಅವರವರ ಕಾರ್ಯಕರಣಗಳನ್ನುಪಯೋಗಿಸಿಕೊಂಡೇ ಅವರವರನ್ನು ನಿಯಮಿಸಬಹುದು. ಪ್ರಧಾನದಲ್ಲಿ ಅದೃಷ್ಟತ್ವವೇ ಮುಂತಾದ ಗುಣಗಳಿದ್ದರೂ ಇಲ್ಲಿ ಹೇಳಿರುವ ದ್ರಷ್ಟೃತ್ವಾದಿಗಳಿಲ್ಲ; ಶಾರೀರನಲ್ಲಿ ದ್ರಷ್ಟೃತ್ವಾದಿಗಳಿದ್ದರೂ ಅವನಲ್ಲಿಯೂ ಒಳಗಿದ್ದುಕೊಂಡು ಅವನನ್ನೂ ಅಂತರ್ಯಾಮಿಯು ನಿಯಮಿಸುತ್ತಾನೆಂದು ಇಲ್ಲಿ ಹೇಳಿದೆ. ಆದ್ದರಿಂದ ಈಶ್ವರನೇ ಇಲ್ಲಿ ಅಂತರ್ಯಾಮಿ ಎಂದು ತಿಳಿಯಬೇಕು.

## ೬. ಅದೃಶ್ಯತ್ವಾಧಿಕರಣ

**ವಿಷಯವೂ ಸಂಶಯವೂ:** "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ-ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮ್... ತದವ್ಯಯಂ ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ" (ಮುಂ. ೧-೧-೫, ೬) ಎಂಬ ವಾಕ್ಯದಲ್ಲಿರುವ ಅದೃಶ್ಯತ್ವಾದಿಗುಣಗಳುಳ್ಳ ಭೂತಯೋನಿಯು ಪ್ರಧಾನವೊ, ಶಾರೀರನೊ, ಅಥವಾ ಪರಮೇಶ್ವರನೊ ?

**ಪೂರ್ವಪಕ್ಷ:** ಭೂತಯೋನಿಗೆ ಅಚೇತನವಾದ ಜೇಡರಹುಳು, ಮನುಷ್ಯಶರೀರ-ಇವನ್ನೇ ದೃಷ್ಟಾಂತವಾಗಿ ಕೊಟ್ಟಿರುವದರಿಂದಲೂ ಅದೃಶ್ಯತ್ವವೇ ಮುಂತಾದ ಧರ್ಮಗಳೆಲ್ಲವೂ ಪ್ರಧಾನಕ್ಕೆ ಹೊಂದುವದರಿಂದಲೂ ಚೇತನಧರ್ಮವನ್ನು ಹೇಳುವ ಸರ್ವಜ್ಞನೆಂಬ ವಿಶೇಷಣವು ಮುಂದೆ "ಅಕ್ಷರಾತ್ ಪರತಃ ಪರಃ" (ಮುಂ. ೨-೧-೨) ಎಂಬ ವಾಕ್ಯದಲ್ಲಿರುವ ಅಕ್ಷರವಾದ ಪ್ರಧಾನಕ್ಕಿಂತಲೂ ಹೆಚ್ಚಿನ ಮತ್ತೊಂದು ತತ್ತ್ವಕ್ಕೆ ಹೊಂದು

ವದರಿಂದಲೂ ಪ್ರಧಾನವೇ ಇಲ್ಲಿ ಭೂತಯೋನಿಯಾದ ಅಕ್ಷರವು. ಅಥವಾ ಭೂತಯೋನಿ ಎಂದರೆ ಭೂತಗಳಿಗೆ ನಿಮಿತ್ತಕಾರಣನು ಎಂದು ಅರ್ಥಮಾಡಿದರೆ ಧರ್ಮಾಧರ್ಮಗಳಿಂದ ಭೂತಗಳಿಗೆ ಕಾರಣನಾಗಿರುವ ಶಾರೀರನೇ ಭೂತಯೋನಿಯಾಗಬಹುದು.

**ಸಿದ್ಧಾಂತ :** ಸರ್ವಜ್ಞನೆಂಬ ವಿಶೇಷಣವು ಹುಟ್ಟುವದಕ್ಕಿಲ್ಲ ಕಾರಣವಾಗಿರುವ ಪ್ರಕೃತವಾದ ಅಕ್ಷರವನ್ನೇ ಹೇಳುತ್ತಿರುವದರಿಂದ ಈ ಭೂತಯೋನಿಯು ಪ್ರಧಾನವಲ್ಲ. ಇದನ್ನು ತಿಳಿಸುವ ವಿದ್ಯೆಯನ್ನು 'ಪರವಿದ್ಯೆ', 'ಬ್ರಹ್ಮವಿದ್ಯೆ' ಎಂದು ಕರೆದಿರುವದರಿಂದಲೂ "ಅಕ್ಷರಾತ್ ಪರತಃ ಪರಃ" (ಮುಂ. ೨-೧-೨) ಎಂಬ ವಾಕ್ಯದಲ್ಲಿ ಪ್ರಕೃತವಾದ ಭೂತಯೋನಿಯು ಪ್ರಧಾನಕ್ಕಿಂತಲೂ ಬೇರೆಯಾಗಿದೆಯೆಂದೂ "ಅಪ್ರಾಣೋ ಹ್ಯಮನಾಃ" (ಮುಂ ೨-೧-೨) ಎಂಬ ವಾಕ್ಯದಲ್ಲಿ ಶಾರೀರನಿಗಿಂತ ಬೇರೆಯಾಗಿದೆಯೆಂದೂ ತಿಳಿಸಿರುವದರಿಂದಲೂ "ಅಗ್ನಿರ್ಮೂರ್ಧಾ" (ಮುಂ. ೨-೧-೪) ಎಂಬ ವಾಕ್ಯದಲ್ಲಿ ಅಥವಾ "ಪುರುಷ ಏವೇದಂ ವಿಶ್ವಂ ಕರ್ಮ" (ಮುಂ. ೨-೧-೧೦) ಎಂಬ ವಾಕ್ಯದಲ್ಲಿ ಈ ಭೂತಯೋನಿಯು ಸರ್ವಾತ್ಮಕವಾಗಿರುವನೆಂದು ರೂಪೋಪನ್ಯಾಸವನ್ನು ಮಾಡಿರುವದರಿಂದಲೂ ಈ ಭೂತಯೋನಿಯು ಪರಮೇಶ್ವರನೇ, ಪ್ರಧಾನವಲ್ಲ, ಶಾರೀರನೂ ಅಲ್ಲ- ಎಂದು ತಿಳಿಯಬೇಕು.

# ೭. ವೈಶ್ವಾನರಾಧಿಕರಣ

**ವಿಷಯವೂ ಸಂಶಯವೂ :** ಛಾಂದೋಗ್ಯದಲ್ಲಿರುವ "ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ॥ ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸಂದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ" (ಛಾಂ. ೫-೧೮-೧, ೨)- ಎಂಬ ವಾಕ್ಯದಲ್ಲಿರುವ ವೈಶ್ವಾನರನು ಜಾಠರಾಗ್ನಿಯೊ, ದೇವತೆಯೊ, ಶಾರೀರನೊ, ಅಥವಾ ಪರಮೇಶ್ವರನೊ ?

**ಪೂರ್ವಪಕ್ಷ:** ವೈಶ್ವಾನರ ಎಂಬ ಶಬ್ದವನ್ನು ಜಾಠರಾಗ್ನಿ, ಭೂತಾಗ್ನಿ, ಅಗ್ನಿದೇವತೆ- ಈ ಮೂರಕ್ಕೂ ವೇದದಲ್ಲಿ ಪ್ರಯೋಗಿಸಿದೆ. ಆದ್ದರಿಂದ ಅವುಗಳಲ್ಲಿ ಒಂದು ವೈಶ್ವಾನರನಾಗಬಹುದು. ಇಲ್ಲಿ 'ಕೋ ನ ಆತ್ಮಾ' (ನಮ್ಮ ಆತ್ಮನು ಯಾರು ?) ಎಂದು (ಛಾಂ. ೫-೧೧-೧) ಆತ್ಮಶಬ್ದದಿಂದ ಉಪಕ್ರಮಿಸಿರುವದರಿಂದಲೂ ಪ್ರಾದೇಶಮಾತ್ರ (ಚೋಟುದ್ದದವನು) ಎಂಬ ವಿಶೇಷಣವಿರುವದರಿಂದಲೂ ಶಾರೀರನಾದರೂ ಆಗಬಹುದು. ವೈಶ್ವಾನರ, ಅಗ್ನಿ- ಎಂಬ ಶಬ್ದಗಳು, ಗಾರ್ಹಪತ್ಯವೇ ಮುಂತಾದ ಅಗ್ನಿತ್ರಯವನ್ನು ಕಲ್ಪಿಸಿರುವದು, ಪ್ರಾಣಾಹುತಿಗೆ ಅಧಿಕರಣವೆಂದು ಹೇಳಿರುವದು- ಎಂಬೀ ಕಾರಣಗಳಿಂದಲೂ ವೈಶ್ವಾನರನು ಪುರುಷನ ಒಳಗೆ ಇದ್ದುಕೊಂಡಿರುವನು ಎಂದು ಹೊಂದದಿರುವದರಿಂದಲೂ ವೈಶ್ವಾನರನು ಪರಮೇಶ್ವರನಲ್ಲ

**ಸಿದ್ಧಾಂತ :** 'ಮೂರ್ಧೈವ ಸುತೇಜಾಃ' (ಸುತೇಜಸ್ತ್ವಗುಣದಿಂದ ಕೂಡಿದ ದ್ಯುಲೋಕವೇ ಮೂರ್ಧವು) ಎಂದು ಮುಂತಾಗಿರುವ ವಿಶೇಷಣವು ಸರ್ವಕಾರಣನಾಗಿರುವ

ಪರಮೇಶ್ವರನಿಗೇ ಹೊಂದುತ್ತದೆ; ಪರಮೇಶ್ವರನಿಗೇ ಈ ಬಗೆಯ ಸರ್ವಾತ್ಮತ್ವವನ್ನು ಸ್ಮೃತಿಯಲ್ಲಿ ವರ್ಣಿಸಿರುತ್ತದೆ. ಪುರುಷನೊಳಗಿರುವದೆಂಬುದು ಜಾಠರಾಗ್ನಿಪ್ರತೀಕನಾದ ಅಥವಾ ಜಾಠರಾಗ್ನ್ಯುಪಾಧಿಕನಾದ ಪರಮೇಶ್ವರನಿಗೂ ಉಪಾಸನೆಯ ನಿಮಿತ್ತದಿಂದ ಆಗಬಹುದಾಗಿದೆ. ಅವನು ಪುರುಷವಿಧನೆಂದು ಅದೇ (ಶ. ಬ್ರಾ.) ಶ್ರುತಿಯಲ್ಲಿರುವ ವಿಶೇಷಣವು ಪರಮೇಶ್ವರನಿಗೆ ಮಾತ್ರ ಹೊಂದುತ್ತದೆ; ಏಕೆಂದರೆ ಅಧಿದೈವತವಾಗಿಯೂ ಅಧ್ಯಾತ್ಮವಾಗಿಯೂ ಪರಮೇಶ್ವರನು ಮೂರ್ಧಾದಿಗಳ ಮೂಲಕ ಪುರುಷವಿಧನಾಗಿರುತ್ತಾನೆ. ಪುರುಷಾವಯವಗಳಲ್ಲಿ ಕಲ್ಪಿತವಾಗಿರುವ ಪರಮೇಶ್ವರನ ಪುರುಷವಿಧತ್ವವನ್ನು ತಿಳಿಸುವದಕ್ಕೆ ಅಥವಾ ಪುರುಷವಿಧತ್ವೋಪಾಧಿಯುಳ್ಳ ಪರಮೇಶ್ವರನ ಸಾಕ್ಷಿರೂಪವನ್ನೇ ತಿಳಿಸುವದಕ್ಕೆ "ಪುರುಷವಿಧಂ ಪುರುಷೇಽನ್ತಃ ಪ್ರತಿಷ್ಠಿತಂ ವೇದ" ಎಂದು ಶ್ರುತ್ಯಂತರದಲ್ಲಿ ಹೇಳಿದೆ ಎಂದುಕೂಡ ವಾದಿಸಬಹುದು. ಇನ್ನು 'ಪ್ರಾದೇಶಮಾತ್ರ'ನೆಂಬ ಶ್ರುತಿಯು, ಪ್ರಾದೇಶಮಾತ್ರವಾದ ಪರಿಮಾಣದಿಂದ ಪರಮೇಶ್ವರನು ಉಪಾಸಕರಿಗೆ ಅಭಿವ್ಯಕ್ತನಾಗುವದರಿಂದ ಅಥವಾ ಹೃದಯಾದಿಪ್ರದೇಶಗಳಲ್ಲಿ ಅಭಿವ್ಯಕ್ತನಾಗುವದರಿಂದ ಹೊಂದುವದೆಂದಾಗಲಿ, ಪ್ರಾದೇಶಮಾತ್ರವಾದ ಹೃದಯದಲ್ಲಿರುವ ಮನಸ್ಸಿನಿಂದ ಸ್ಮರಣೆಮಾಡಲ್ಪಡುವದರಿಂದ ಹೊಂದುವದೆಂದಾಗಲಿ, ಜಾಬಾಲಶ್ರುತಿಯಲ್ಲಿ ಹೇಳಿರುವಂತೆ ವೈಶ್ವಾನರಾವಯವಗಳನ್ನು ಪುರುಷನ ಮೂರ್ಧಾದಿಚುಬುಕಾಂತಾವಯವಗಳಲ್ಲಿ ಸಂಪಾದನೆಮಾಡಿ ಉಪಾಸನೆಮಾಡಬೇಕೆಂಬುದರಿಂದ ಹೊಂದುವದೆಂದಾಗಲಿ, ಕಲ್ಪಿಸಬಹುದು. ಆದ್ದರಿಂದ ಪ್ರಕೃತವಾಕ್ಯದಲ್ಲಿ ಉಪಾಸನೆಮಾಡಬೇಕೆಂದು ಹೇಳಿರುವ ವೈಶ್ವಾನರನು ಪರಮೇಶ್ವರನೇ.



# ಒಂದನೆಯ ಅಧ್ಯಾಯ - ಮೂರನೆಯ ಪಾದ

( ಅಸ್ಪಷ್ಟಬ್ರಹ್ಮಲಿಂಗವಾಕ್ಯಗಳ ವಿಚಾರ )

## ೧. ದ್ಯುಭ್ವಾದ್ಯಧಿಕರಣ (೧-೭)

(ಮುಂಡಕದ ೨-೨-೫ರಲ್ಲಿರುವ ದ್ಯುಲೋಕಾದಿಗಳ ಆಯತನವು ಬ್ರಹ್ಮ).

**ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ॥ ೧ ॥**

೧. ದ್ಯುಲೋಕಭೂಮ್ಯಾದಿಗಳಿಗೆ ಆಯತನವಾಗಿರುವದು (ಬ್ರಹ್ಮವು) ; ಏಕೆಂದರೆ (ಇಲ್ಲಿ) ಸ್ವಶಬ್ದವಿದೆ.

## ವಿಷಯವೂ ಸಂಶಯವೂ

( ಭಾಷ್ಯ )

**೨೨೦. ಇದಂ ಶ್ರೂಯತೇ- "ಯಸ್ಮಿನ್ ದ್ಯೌಃ ಪೃಥಿವೀಚಾನ್ತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಞ್ಚಥಾಮೃತಸ್ಯೈಷ ಸೇತುಃ" (ಮುಂ. ೨-೨-೫) ಇತಿ । ಅತ್ರ ಯದೇತತ್ ದ್ಯುಪ್ರಭೃತೀನಾಮ್ ಓತತ್ವವಚನಾತ್ ಆಯತನಂ ಕಿಂಚಿದವಗಮ್ಯತೇ ತತ್ ಕಿಂ ಪರಂ ಬ್ರಹ್ಮ ಸ್ಯಾತ್, ಆಹೋಸ್ವಿತ್ ಅರ್ಥಾನ್ತರಮ್ ಇತಿ ಸನ್ದಿಹ್ಯತೇ ॥**

( ಭಾಷ್ಯಾರ್ಥ )

"ಯಾವನಲ್ಲಿ ದ್ಯುಲೋಕವೂ ಪೃಥಿವಿಯೂ ಅಂತರಿಕ್ಷವೂ ಎಲ್ಲಾ ಪ್ರಾಣಗಳಿಂದೊಡಗೂಡಿದ ಮನಸ್ಸೂ ಹೆಣೆದುಕೊಂಡಿರುವವೋ ಆತನನ್ನೇ ಒಬ್ಬ ಆತ್ಮನೆಂದು ಅರಿತುಕೊಳ್ಳಿರಿ, ಬೇರೆಯ ಮಾತುಗಳನ್ನು ಬಿಡಿರಿ. ಅಮೃತಕ್ಕೆ ಇದೇ ಸೇತು" (ಮುಂ. ೨-೨-೫) ಎಂಬೀ (ವಾಕ್ಯವು) ಶ್ರುತಿಯಲ್ಲಿದೆ. ಇಲ್ಲಿ ದ್ಯುಲೋಕವೇ ಮುಂತಾದವುಗಳು (ಇದರಲ್ಲಿ) ಹೆಣೆದುಕೊಂಡಿರುವವೆಂದು ಹೇಳಿರುವದರಿಂದ ಯಾವದೋ ಒಂದು ಆಯತನ[1] (ವಿರಬೇಕೆಂದು) ಅರಿವಾಗು

1. ಆಶ್ರಯವಾಗಿರುವ ವಸ್ತು.

ತ್ತಿದೆಯಲ್ಲ, ಅದೇನು ಪರಬ್ರಹ್ಮವಾಗಿರಬಹುದೆ, ಅಥವಾ ಮತ್ತೆ ಯಾವದಾದರೂ ಒಂದು ಪದಾರ್ಥವೆ ? ಎಂದು ಸಂಶಯುವಾಗುತ್ತದೆ.

## ಪೂರ್ವಪಕ್ಷ: ಈ ಆಯತನವು ಪ್ರಧಾನಾದಿಗಳಲ್ಲಿ ಒಂದು

( ಭಾಷ್ಯ )

೨೨೧. ತತ್ರ ಅರ್ಥಾನ್ತರಂ ಕಿಮಪಿ ಆಯತನಂ ಸ್ಯಾತ್ ಇತಿ ಪ್ರಾಪ್ತಮ್ । ಕಸ್ಮಾತ್ ? "ಅಮೃತಸ್ಯೈಷ ಸೇತುಃ" ಇತಿ ಶ್ರವಣಾತ್ । ಪಾರವಾನ್ ಹಿ ಲೋಕೇ ಸೇತುಃ ಪ್ರಖ್ಯಾತಃ । ನ ಚ ಪರಸ್ಯ ಬ್ರಹ್ಮಣಃ ಪಾರವತ್ತ್ವಂ ಶಕ್ಯಮ್ ಅಭ್ಯುಪಗನ್ತುಮ್ । "ಅನನ್ತಮಪಾರಮ್" (ಬೃ. ೨-೪-೧೨) ಇತಿ ಶ್ರವಣಾತ್ । ಅರ್ಥಾನ್ತರೇ ಚ ಆಯತನೇ ಪರಿಗೃಹ್ಯಮಾಣೇ ಸ್ಮೃತಿಪ್ರಸಿದ್ಧಂ ಪ್ರಧಾನಂ ಪರಿಗೃಹೀತವ್ಯಮ್ । ತಸ್ಯ ಕಾರಣತ್ವಾತ್ ಆಯತನತ್ವೋಪಪತ್ತೇಃ । ಶ್ರುತಿಪ್ರಸಿದ್ಧೋ ವಾ ವಾಯುಃ ಸ್ಯಾತ್ । "ವಾಯುರ್ವೈ ಗೌತಮ ತತ್ ಸೂತ್ರಂ ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವನ್ತಿ" (ಬೃ ೩-೭-೨) ಇತಿ ವಾಯೋರಪಿ ವಿಧಾರಣತ್ವಶ್ರವಣಾತ್। ಶಾರೀರೋ ವಾ ಸ್ಯಾತ್। ತಸ್ಯಾಪಿ ಭೋಕ್ತೃತ್ವಾತ್ ಭೋಗ್ಯಂ ಪ್ರಪಞ್ಚಂ ಪ್ರತಿ ಆಯತನತ್ವೋಪಪತ್ತೇಃ ಇತಿ ॥

( ಭಾಷ್ಯಾರ್ಥ )

ಇಲ್ಲಿ ಆಯತನವು (ಬ್ರಹ್ಮವನ್ನು ಬಿಟ್ಟು) ಬೇರೆ ಯಾವದೋ ಒಂದು ಪದಾರ್ಥವಾಗಿರಬೇಕು ಎಂದು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆ ? ಎಂದರೆ "ಅಮೃತಕ್ಕೆ ಇದೇ ಸೇತು" ಎಂದು ಶ್ರುತಿಯಲ್ಲಿರುವದರಿಂದ. ಲೋಕದಲ್ಲಿ ಸೇತುವಿಗೆ ಪಾರವುಂಟು- ಎಂದು ಪ್ರಸಿದ್ಧವಾಗಿರುತ್ತದೆ. ಆದರೆ ಪರಬ್ರಹ್ಮಕ್ಕೆ ಪಾರವುಂಟೆಂದು ಒಪ್ಪುವದಕ್ಕಾಗುವದಿಲ್ಲ. "ಅನಂತವಾದದ್ದು, ಅಪಾರವಾದದ್ದು" (ಬೃ. ೨-೪-೧೨) ಎಂದು ಶ್ರುತಿಯಲ್ಲಿದೆ. ಬೇರೊಂದು ಪದಾರ್ಥವನ್ನು ಆಯತನವೆಂದು ಇಟ್ಟುಕೊಳ್ಳುವದಾದರೆ ಸ್ಮೃತಿಪ್ರಸಿದ್ಧವಾದ ಪ್ರಧಾನವನ್ನೇ ತೆಗೆದುಕೊಳ್ಳಬೇಕು ; ಏಕೆಂದರೆ (ಎಲ್ಲಕ್ಕೂ) ಕಾರಣವಾಗಿರುವದರಿಂದ (ಅದು) ಆಯತನವಾಗಬಹುದಾಗಿದೆ. ಅಥವಾ ವಾಯುವಾದರೂ[1] ಆಗಬಹುದು. ಏಕೆಂದರೆ "ಗೌತಮನೆ, ವಾಯುವೇ ಆ ಸೂತ್ರವು ; ಗೌತಮನೆ,

---

1. ಸೂತ್ರಾತ್ಮನೆಂಬ ಅಪರಬ್ರಹ್ಮವು ಎಂದರ್ಥ.

ವಾಯುವೆಂಬ ಸೂತ್ರದಿಂದಲೇ ಈ ಲೋಕವೂ ಪರಲೋಕವೂ ಸರ್ವಭೂತಗಳೂ ಕಟ್ಟಲ್ಪಟ್ಟಿವೆ" (ಬೃ. ೩-೭-೨) ಎಂದು ವಾಯುವೂ (ಎಲ್ಲವನ್ನೂ) ಎತ್ತಿ ಹಿಡಿದುಕೊಂಡಿದೆ ಎಂದು ಶ್ರುತಿಯಲ್ಲಿದೆ. ಅಥವಾ ಶಾರೀರನಾಗಬಹುದು, ಏಕೆಂದರೆ ಭೋಕ್ತೃವಾಗಿರುವದರಿಂದ ಅವನೂ ಭೋಗ್ಯಪ್ರಪಂಚಕ್ಕೆ ಆಶ್ರಯವಾಗಬಹುದು.[1]

## ಸಿದ್ಧಾಂತ: ಸ್ವಶಬ್ದವಿರುವದರಿಂದ ಈ ಆಶ್ರಯವು ಬ್ರಹ್ಮವೇ

( ಭಾಷ್ಯ )

೨೨೨. ಏವಂ ಪ್ರಾಪ್ತೇ ಇದಮಾಹ– ದ್ಯುಭ್ವಾದ್ಯಾಯತನಮ್ ಇತಿ । ದ್ಯೌಶ್ಚ ಭೂಶ್ಚ ದ್ಯುಭುವೌ। ದ್ಯುಭುವೌ ಆದೀ ಯಸ್ಯ ತದಿದಂ ದ್ಯುಭ್ವಾದಿ। ಯದೇತತ್ ಅಸ್ಮಿನ್ ವಾಕ್ಯೇ ದ್ಯೌಃ ಪೃಥಿವ್ಯನ್ತರಿಕ್ಷಂ ಮನಃ ಪ್ರಾಣಾ ಇತ್ಯೇವಮಾತ್ಮಕಂ ಜಗತ್ ಓತತ್ವೇನ ನಿರ್ದಿಷ್ಟಮ್, ತಸ್ಯ ಆಯತನಂ ಪರಂ ಬ್ರಹ್ಮ ಭವಿತುಮರ್ಹತಿ । ಕುತಃ ? ಸ್ವಶಬ್ದಾತ್ । ಆತ್ಮಶಬ್ದಾತ್ ಇತ್ಯರ್ಥಃ । ಆತ್ಮಶಬ್ದೋ ಹಿ ಇಹ ಭವತಿ– "ತಮೇವೈಕಂ ಜಾನಥ ಆತ್ಮಾನಮ್" ಇತಿ । ಆತ್ಮಶಬ್ದಶ್ಚ ಪರಮಾತ್ಮಪರಿಗ್ರಹೇ ಸಮ್ಯಕ್ ಅವಕಲ್ಪತೇ ನ ಅರ್ಥಾನ್ತರಪರಿಗ್ರಹೇ ||

( ಭಾಷ್ಯಾರ್ಥ )

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸೂತ್ರಕಾರರು) ಈ (ಸಿದ್ಧಾಂತವನ್ನು) ಹೇಳುತ್ತಾರೆ. "ದ್ಯುಭ್ವಾದ್ಯಾಯತನಮ್" ದ್ಯುಲೋಕವೂ ಭೂಲೋಕವೂ ದ್ಯುಭೂಗಳು ; ದ್ಯುಭೂಗಳು ಯಾವದಕ್ಕೆ ಆದಿಯೋ ಆ ಇದು ದ್ಯುಭ್ವಾದಿ; ಈ ವಾಕ್ಯದಲ್ಲಿ ದ್ಯುಲೋಕ, ಪೃಥಿವಿ, ಅಂತರಿಕ್ಷ, ಮನಸ್ಸು, ಪ್ರಾಣಗಳು– ಎಂಬೀ ರೂಪದ ಈ ಜಗತ್ತು ಹೆಣೆದುಕೊಂಡಿದೆಯೆಂದು ಹೇಳಿದೆಯಲ್ಲ, ಅದಕ್ಕೆ ಆಯತನವು ಪರಬ್ರಹ್ಮವೇ ಆಗಿರಬೇಕು. ಏಕೆ ? ಎಂದರೆ 'ಸ್ವಶಬ್ದವಿರುವದರಿಂದ'; ಆತ್ಮಶಬ್ದವಿರುವದರಿಂದ ಎಂದರ್ಥ. ಇಲ್ಲಿ "ಆತನನ್ನೇ ಒಬ್ಬ ಆತ್ಮನೆಂದು ಅರಿತುಕೊಳ್ಳಿರಿ" (ಮುಂ. ೨-೨-೫) ಎಂದು ಆತ್ಮಶಬ್ದವಲ್ಲವೆ, ಶ್ರುತಿಯಲ್ಲಿದೆ? ಆತ್ಮಶಬ್ದವು ಪರಮಾತ್ಮನನ್ನು ತೆಗೆದುಕೊಂಡರೆ ಚೆನ್ನಾಗಿ ಹೊಂದುತ್ತದೆಯೇ ಹೊರತು ಬೇರೊಂದು ಪದಾರ್ಥವನ್ನು ತೆಗೆದುಕೊಂಡರೆ (ಹೊಂದುವ)ದಿಲ್ಲ.

---

1. ಪೂರ್ವಪಕ್ಷದಲ್ಲಿ ಪ್ರಧಾನಾದಿಗಳನ್ನು ಹೀಗೆಂದು ಉಪಾಸನೆಮಾಡಬೇಕೆಂದು ಶ್ರುತಿಗೆ ಅರ್ಥ. ಸಿದ್ಧಾಂತದಲ್ಲಿ ಇಂಥ ಬ್ರಹ್ಮದ ಜ್ಞಾನವನ್ನು ಮಾಡಿಕೊಳ್ಳಬೇಕೆಂದು ಅರ್ಥ.

## 'ಆತನನ್ನೇ ಒಬ್ಬ ಆತ್ಮನೆಂದು ಅರಿತುಕೊಳ್ಳಿರಿ' ಎಂಬುದರ ಅರ್ಥ

( ಭಾಷ್ಯ )

೨೨೩. ಕ್ವಚಿಚ್ಚ ಸ್ವಶಬ್ದೇನೈವ ಬ್ರಹ್ಮಣಃ ಆಯತನತ್ವಂ ಶ್ರೂಯತೇ– ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ" (ಛಾಂ. ೬–೮–೪) ಇತಿ । ಸ್ವಶಬ್ದೇನೈವ ಚ ಇಹ ಪುರಸ್ತಾತ್ ಉಪರಿಷ್ಟಾಚ್ಚ ಬ್ರಹ್ಮ ಸಂಕೀರ್ತ್ಯತೇ– "ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್" (ಮುಂ. ೨–೧–೧೦) ಇತಿ । "ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾದ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ" (ಮುಂ. ೨–೨–೧೨) ಇತಿ ಚ । ತತ್ರ ತು ಆಯತನಾಯತನವದ್ಭಾವಶ್ರವಣಾತ್, ಸರ್ವಂ ಬ್ರಹ್ಮ ಇತಿ ಚ ಸಾಮಾನಾಧಿಕರಣ್ಯಾತ್, ಯಥಾ ಅನೇಕಾತ್ಮಕೋ ವೃಕ್ಷಃ ಶಾಖಾ ಸ್ಕನ್ಧೋ ಮೂಲಂ ಚ ಇತಿ, ಏವಂ ನಾನಾರಸೋ ವಿಚಿತ್ರ ಆತ್ಮಾ ಇತ್ಯಾಶಙ್ಕಾ ಸಂಭವತಿ । ತಾಂ ನಿವರ್ತಯಿತುಂ ಸಾವಧಾರಣಮ್ ಆಹ– "ತಮೇವೈಕಂ ಜಾನಥ ಆತ್ಮಾನಮ್" ಇತಿ । ಏತದುಕ್ತಂ ಭವತಿ– ನ ಕಾರ್ಯಪ್ರಪಞ್ಚವಿಶಿಷ್ಟೋ ವಿಚಿತ್ರ ಆತ್ಮಾ ವಿಜ್ಞೇಯಃ, ಕಿಂ ತರ್ಹಿ, ಅವಿದ್ಯಾಕೃತಂ ಕಾರ್ಯಪ್ರಪಞ್ಚಂ ವಿದ್ಯಯಾ ಪ್ರವಿಲಾಪಯನ್ತಃ ತಮೇವೈಕಂ ಆಯತನಭೂತಮ್ ಆತ್ಮಾನಂ ಜಾನಥ ಏಕರಸಮ್ ಇತಿ । ಯಥಾ ಯಸ್ಮಿನ್ ಆಸ್ತೇ ದೇವದತ್ತಃ ತತ್ ಆನಯ ಇತ್ಯುಕ್ತೇ ಆಸನಮೇವ ಆನಯತಿ ನ ದೇವದತ್ತಮ್, ತದ್ವತ್ ಆಯತನಭೂತಸ್ಯೈವ ಏಕರಸಸ್ಯ ಆತ್ಮನಃ ವಿಜ್ಞೇಯತ್ವಮ್ ಉಪದಿಶ್ಯತೇ । ವಿಕಾರಾನೃತಾಭಿಸನ್ಧಸ್ಯ ಚ ಅಪವಾದಃ ಶ್ರೂಯತೇ– "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ।" (ಕ. ೨–೨–೧೧) ಇತಿ । 'ಸರ್ವಂ ಬ್ರಹ್ಮ' ಇತಿ ತು ಸಾಮಾನಾಧಿಕರಣ್ಯಂ ಪ್ರಪಞ್ಚಪ್ರವಿಲಾಪನಾರ್ಥಂ, ನಾನೇಕರಸತಾಪ್ರತಿಪಾದನಾರ್ಥಮ್ । "ಸ ಯಥಾ ಸೈನ್ಧವಘನೋಽನನ್ತರೋಽಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾ ಅರೇಽಯಮಾತ್ಮಾನನ್ತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ" (ಬೃ. ೪-೫-೧೩) ಇತ್ಯೇಕರಸತಾಶ್ರವಣಾತ್ । ತಸ್ಮಾತ್ ದ್ಯುಭ್ವಾದ್ಯಾಯತನಂ ಪರಂ ಬ್ರಹ್ಮ ॥

(ಭಾಷ್ಯಾರ್ಥ)

ಮತ್ತು ಒಂದು ಕಡೆಯಲ್ಲಿ " ಎಲೈ ಸೋಮ್ಯನೆ, ಈ ಸರ್ವಪ್ರಜೆಗಳೂ ಸನ್ಮೂಲವಾಗಿವೆ, ಸದಾಯತನವಾಗಿವೆ, ಸತ್ಪ್ರತಿಷ್ಠಗಳಾಗಿವೆ" (ಛಾಂ. ೬–೮

೪) ಎಂದು ಬ್ರಹ್ಮವು ಎಲ್ಲಕ್ಕೂ ಆಯತನವೆಂದು ಸ್ವಶಬ್ದದಿಂದಲೇ[1] ಶ್ರುತಿಯಲ್ಲಿ ಹೇಳಿದೆ. ಮತ್ತು ಈ (ಉಪನಿಷತ್ತಿ)ನಲ್ಲಿ (ಇದರ) ಹಿಂದೂಮುಂದೂ ಬ್ರಹ್ಮವನ್ನು ಸ್ವಶಬ್ದದಿಂದಲೇ[2] "ಕರ್ಮವೂ ತಪಸ್ಸೂ –ಇದೆಲ್ಲವೂ ಪುರುಷನೇ, ಹೆಚ್ಚಿನ ಅಮೃತವಾದ ಬ್ರಹ್ಮವೇ" (ಮುಂ. ೨–೧–೧೦) ಎಂದೂ "ಮುಂದೆ ಇರುವ ಇದು ಅಮೃತವಾದ ಬ್ರಹ್ಮವೇ, ಹಿಂದೆ ಬ್ರಹ್ಮವೇ, ದಕ್ಷಿಣಕ್ಕೂ ಬ್ರಹ್ಮವೇ, ಉತ್ತರಕ್ಕೂ (ಬ್ರಹ್ಮವೇ)" (ಮುಂ. ೨–೨–೧೨) ಎಂದೂ ಹೇಳಿರುತ್ತದೆ. ಆದರೆ ಇಲ್ಲಿ[3] ಆಯತನ, ಆಯತನವುಳ್ಳ (ಭೂತಗಳು) ಎಂಬ (ಸಂಬಂಧ)ವನ್ನು ಹೇಳಿರುವದರಿಂದಲೂ ಎಲ್ಲವೂ ಬ್ರಹ್ಮವೇ ಎಂದು ಸಾಮಾನಾಧಿಕರಣ್ಯ(ವನ್ನು ಹೇಳಿರುವದ)ರಿಂದಲೂ ಹೇಗೆ ಕೊಂಬೆ, ಬುಡ, ಬೇರು– ಎಂದು ಮರವು ಅನೇಕಾತ್ಮವಾಗಿರುವದೋ ಹಾಗೆಯೇ ಆತ್ಮನು ನಾನಾರಸವಾಗಿ ಬಗೆಬಗೆಯಾಗಿರುವನು ಎಂಬ ಆಶಂಕೆಯು ಉಂಟಾಗಬಹುದಾಗಿದೆ; (ಆ ಶಂಕೆಯನ್ನು) ಹೋಗಲಾಡಿಸುವದಕ್ಕಾಗಿ "ಆತನನ್ನೇ ಒಬ್ಬ ಆತ್ಮನೆಂದು ಅರಿತುಕೊಳ್ಳಿರಿ" ಎಂದು (ಈ ಶ್ರುತಿಯಲ್ಲಿ) ಒತ್ತಿ ಹೇಳಿರುತ್ತದೆ. (ಈ ಶ್ರುತಿಯಲ್ಲಿ) ಇಷ್ಟನ್ನು ಹೇಳಿದಂತಾಗಿರುತ್ತದೆ: **ಕಾರ್ಯಪ್ರಪಂಚದಿಂದ ಕೂಡಿಕೊಂಡು ವಿಚಿತ್ರನಾಗಿರುವನೆಂದು ಆತ್ಮನನ್ನು ಅರಿಯಬಾರದು; ಮತ್ತೇನೆಂದರೆ ಅವಿದ್ಯಾಕೃತವಾದ ಕಾರ್ಯಪ್ರಪಂಚವನ್ನು ವಿದ್ಯೆಯಿಂದ ಕರಗಿಸಿ (ಅದಕ್ಕೆ) ಆಯತನವಾಗಿರುವ ಆತನೊಬ್ಬನನ್ನೇ, ಏಕರಸನಾದ ಆತ್ಮನೆಂದು ಅರಿತುಕೊಳ್ಳಿರಿ**[4]. ಹೇಗೆ "ದೇವದತ್ತನು ಯಾವದರಲ್ಲಿ ಕುಳಿತಿರುವನೋ ಅದನ್ನು ತೆಗೆದುಕೊಂಡು ಬಾ'' ಎಂದರೆ ಆಸನವನ್ನು ತರುತ್ತಾರೆಯೇ ಹೊರತು ದೇವದತ್ತನನ್ನು ತರುವದಿಲ್ಲವೋ ಅದರಂತೆ ಆಯತನವಾಗಿರುವ ಏಕರಸನಾದ ಆತ್ಮನನ್ನೇ ಅರಿತುಕೊಳ್ಳಬೇಕು (ಎಂದು ಇಲ್ಲಿ) ಉಪದೇಶಿ

---

1. ಬ್ರಹ್ಮವೇ ಎಲ್ಲಕ್ಕೂ ಆಯತನವೆಂದು ಈ ಶ್ರುತಿಯಲ್ಲಿ ಸ್ವಶಬ್ದದಿಂದಲೇ ಎಂದರೆ ಬ್ರಹ್ಮವಾಚಕವಾದ ಸತ್ ಎಂಬ ಶಬ್ದದಿಂದಲೇ ಸ್ಪಷ್ಟವಾಗಿ ಹೇಳಿರುತ್ತದೆ ಎಂದರ್ಥ. 'ಸ್ವಶಬ್ದಾತ್' ಎಂಬುದಕ್ಕೆ ಮತ್ತೊಂದು ವ್ಯಾಖ್ಯಾನವಿದು.

2. ಬ್ರಹ್ಮಶಬ್ದದಿಂದಲೇ ಎಂದರ್ಥ. ಸ್ವಶಬ್ದಾಚ್ಚ ಎಂಬುದಕ್ಕೆ ಇದು ಮೂರನೆಯ ವ್ಯಾಖ್ಯಾನ.

3. ಛಾಂದೋಗ್ಯದಲ್ಲಿಯೂ ಈ ಶ್ರುತಿಯಲ್ಲಿಯೂ.

4. ಏಕಮ್ ಎಂಬ ಮಾತಿನ ಮುಂದೆ ಅವಧಾರಣೆಯನ್ನು ಹೇಳುವ ಶಬ್ದವು ಯಾವದೂ ಇಲ್ಲದಿದ್ದರೂ ಏಕ– ಎಂದರೇ ಏಕರಸವಾಗಿರುವ ಎಂದರ್ಥ. ಅವನನ್ನೇ ಏಕರಸವಾಗಿರುವ ಆತ್ಮನೆಂದು ಅರಿತುಕೊಳ್ಳಿರಿ ಎಂಬುದು ವಾಕ್ಯದ ಅರ್ಥವು. ವೃಕ್ಷಸಮುದ್ರಾದಿದೃಷ್ಟಾಂತಗಳಿಂದ ಬ್ರಹ್ಮವು ನಾನಾರಸವಾಗಿರುವದೆಂದು ಅಭಿಪ್ರಾಯಪಟ್ಟಿದ್ದ ಭರ್ತೃಪ್ರಪಂಚರೇ ಮುಂತಾದವರು ಹೇಳುತ್ತಿದ್ದರು; ಅದನ್ನು ಇಲ್ಲಿ ಖಂಡಿಸಿದೆ.

ಹಿರುತ್ತದೆ. ಕಾರ್ಯವೆಂಬ ಅನೃತವನ್ನು ಮನಸ್ಸಿನಲ್ಲಿ ತಂದುಕೊಳ್ಳುವಾತನನ್ನು "ಯಾವನು ಇಲ್ಲಿ ಬೇರೆಬೇರೆಯಾಗಿರುವಂತೆ ಕಾಣುತ್ತಾನೋ ಅವನು ಸಾವಿನಿಂದ ಸಾವನ್ನು (ಮೇಲಿಂದಮೇಲೆ) ಪಡೆಯುತ್ತಿರುವನು" (ಕ.೨-೧-೧೧) ಎಂದು ನಿಂದಿಸಿರುವದು ಶ್ರುತಿಯಲ್ಲಿ (ಕಾಣುತ್ತ)ದೆ. "ಎಲ್ಲವೂ ಬ್ರಹ್ಮವೇ" ಎಂದು (ಇಲ್ಲಿ) ಸಾಮಾನಾಧಿಕರಣ್ಯವನ್ನು (ಹೇಳಿರುವದೋ) ಎಂದರೆ (ಅದು) ಪ್ರಪಂಚವನ್ನು ಪ್ರವಿಲಯಮಾಡುವದಕ್ಕೇ[1] ಹೊರತು (ಬ್ರಹ್ಮವು) ಅನೇಕ ರಸವಾಗಿರುವದೆಂದು ತಿಳಿಸುವದಕ್ಕಲ್ಲ. ಏಕೆಂದರೆ "ಹೇಗೆ ಉಪ್ಪಿನ ಹರಳು ಒಳಗೆಂಬುದಿಲ್ಲದೆ, ಹೊರಗೆಂಬುವಲ್ಲದೆ ಪೂರ್ಣವಾಗಿ ರಸದ ಗಟ್ಟಿಯೇ[2] (ಆಗಿರುವದೋ), ಹೀಗೆಯೇ ಎಲೆ (ಮೈತ್ರೇಯಿ), ಈ ಆತ್ಮನು ಒಳಗೆಂಬುದಿಲ್ಲದೆ, ಹೊರಗೆಂಬುದಿಲ್ಲದೆ, ಪೂರ್ಣವಾಗಿ ಪ್ರಜ್ಞಾನದ ಗಟ್ಟಿಯೇ ಆಗಿರುವನು" (ಬೃ. ೪-೫-೧೩) ಎಂದು (ಆತ್ಮನು) ಏಕರಸನೆಂದೇ ಶ್ರುತಿಯಲ್ಲಿ (ಹೇಳಿ)ದೆ. ಆದ್ದರಿಂದ ದ್ಯುಭ್ವಾದಿಗಳ ಆಯತನ(ವೆಂದು ಇಲ್ಲಿ ಹೇಳಿರುವದು) ಬ್ರಹ್ಮವೇ.

## ಸೇತುಶ್ರುತಿಗೆ ಗತಿ

### ( ಭಾಷ್ಯ )

೨೨೪. ಯತ್ತು ಉಕ್ತಮ್- ಸೇತುಶ್ರುತೇಃ, ಸೇತೋಶ್ಚ ಪಾರವತ್ತ್ವೋಪಪತ್ತೇಃ ಬ್ರಹ್ಮಣೋಽರ್ಥಾನ್ತರೇಣ ದ್ಯುಭ್ವಾದ್ಯಾಯತನೇನ ಭವಿತವ್ಯಮ್ ಇತಿ । ಅತ್ರೋಚ್ಯತೇ । ವಿಧಾರಣತ್ವಮಾತ್ರಮ್ ಅತ್ರ ಸೇತುಶ್ರುತ್ಯಾ ವಿವಕ್ಷ್ಯತೇ ನ ಪಾರವತ್ತ್ವಾದಿ । ನ ಹಿ ಮೃದ್ದಾರುಮಯೋ ಲೋಕೇ ಸೇತುರ್ದೃಷ್ಟಃ ಇತಿ ಅತ್ರಾಪಿ ಮೃದ್ದಾರುಮಯ ಏವ ಸೇತುರಭ್ಯುಪಗಮ್ಯತೇ । ಸೇತುಶಬ್ದಾರ್ಥೋಽಪಿ ವಿಧಾರಣತ್ವಮಾತ್ರಮೇವ ನ ಪಾರವತ್ತ್ವಾದಿ । ಷಿಞೋ ಬನ್ಧನಕರ್ಮಣಃ ಸೇತುಶಬ್ದವ್ಯುತ್ಪತ್ತೇಃ ॥ ಅಪರ ಆಹ- "ತಮೇವೈಕಂ ಜಾನಥ ಆತ್ಮಾನಮ್" ಇತಿ ಯದೇತತ್ ಸಂಕೀರ್ತಿತಂ ಆತ್ಮಜ್ಞಾನಮ್, ಯಚ್ಚೈತತ್ "ಅನ್ಯಾ ವಾಚೋ ವಿಮುಞ್ಚಥ" ಇತಿ ವಾಗ್ವಿಮೋಚನಮ್, ತದತ್ರ ಅಮೃತತ್ವಸಾಧನತ್ವಾತ್ "ಅಮೃತಸ್ಯೈಷ ಸೇತುಃ" ಇತಿ ಸೇತುಶ್ರುತ್ಯಾ ಸಂಕೀರ್ತ್ಯತೇ ನ ತು ದ್ಯುಭ್ವಾದ್ಯಾಯತನಮ್। ತತ್ರ ಯದುಕ್ತಂ ಸೇತುಶ್ರುತೇರ್ಬ್ರಹ್ಮಣೋಽರ್ಥಾನ್ತರೇಣ ದ್ಯುಭ್ವಾದ್ಯಾಯತನೇನ ಭಾವ್ಯಮ್ ಇತಿ, ಏತದಯುಕ್ತಮ್ ॥

---

1. ನಾನಾರಸವಾಗಿ ತೋರುತ್ತಿರುವ ಪ್ರಪಂಚವನ್ನು ಪ್ರಾಮಾಣಿಕವೆಂದು ಹೇಳುತ್ತಿದ್ದವರಿಗೆ ಉತ್ತರವಿದು.

2. ಉಪ್ಪಿನರಸದ ಗಟ್ಟಿಯೇ, ಎಲ್ಲೆಲ್ಲಿಯೂ ಉಪ್ಪೇ ಹೊರತು ಮತ್ತೊಂದಿಲ್ಲ.

( ಭಾಷ್ಯಾರ್ಥ )

ಇನ್ನು ಸೇತುಶ್ರುತಿ(ಯಿರುವ)ದರಿಂದಲೂ ಸೇತುವೆಯು ಪಾರವುಳ್ಳದ್ದಾಗಿರುವದೆಂಬುದೇ ಯುಕ್ತವಾದ್ದರಿಂದಲೂ (ಈ) ದ್ಯುಭ್ವಾದ್ಯಾಯತನವು. ಬ್ರಹ್ಮಕ್ಕಿಂತ ಬೇರೆಯಾಗಿಯೇ ಇರಬೇಕು– ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದಕ್ಕೆ ಹೇಳುತ್ತೇವೆ: ತಡೆದಿಟ್ಟಿರುವದೆಂಬುದು ಮಾತ್ರ ಸೇತುಶ್ರುತಿಯ ಅಭಿಪ್ರಾಯವೇ ಹೊರತು ಪಾರವುಳ್ಳದ್ದಾಗಿರುವದು ಮುಂತಾದದ್ದು (ಅಲ್ಲಿ ವಿವಕ್ಷಿತ)ವಲ್ಲ. ಲೋಕದಲ್ಲಿ ಸೇತುವು ಮಣ್ಣು, ಕಟ್ಟಿಗೆ– ಇವುಗಳಿಂದಾಗಿರುವದು ಕಂಡಿರುವದರಿಂದ[1] ಇಲ್ಲಿಯೂ ಮೃದ್ದಾರುಮಯವಾದ ಸೇತುವೇ (ಆಗಿರಬೇಕೆಂದು ಯಾರೂ) ಒಪ್ಪುವದಿಲ್ಲವಷ್ಟೆ. ಸೇತು ಎಂಬ ಶಬ್ದಕ್ಕೆ ಅರ್ಥವುಕೂಡ ಬರಿಯ ತಡೆದಿಟ್ಟಿರುವದು ಎಂದಿಷ್ಟೇ ಹೊರತು ಪಾರವುಳ್ಳದ್ದಾಗಿರುವಿಕೆ ಮುಂತಾದದ್ದಲ್ಲ; ಏಕೆಂದರೆ ಸೇತು ಎಂಬ ಶಬ್ದವು ಬಂಧನಕ್ರಿಯೆಯನ್ನು (ಹೇಳುವ) ಷಿಞ್ ಎಂಬ ಧಾತುವಿನಿಂದ ವ್ಯುತ್ಪನ್ನವಾಗಿರುತ್ತದೆ.

(ಇಲ್ಲಿ) ಮತ್ತೊಬ್ಬರು[2] ಹೇಳುತ್ತಾರೇನೆಂದರೆ "ಆತನನ್ನೇ ಒಬ್ಬ ಆತ್ಮನನ್ನಾಗಿ ಅರಿತುಕೊಳ್ಳಿರಿ" ಎಂದು ಈ ಆತ್ಮಜ್ಞಾನವನ್ನು ಹೇಳಿದೆಯಷ್ಟೆ, ಮತ್ತು ''ಮಿಕ್ಕ ಮಾತುಗಳನ್ನು ಬಿಡಿರಿ'' ಎಂದು ಮಾತುಗಳನ್ನು ಬಿಡಬೇಕೆಂದು (ಹೇಳಿದೆಯಷ್ಟೆ), ಅದು ಅಮೃತತ್ವಕ್ಕೆ ಸಾಧನವಾಗಿರುವದರಿಂದ[3] ''ಇದು ಅಮೃತಕ್ಕೆ ಸೇತು'' ಎಂದು ಸೇತುಶ್ರುತಿಯಿಂದ ಉಕ್ತವಾಗಿರುತ್ತದೆಯೇ ಹೊರತು ದ್ಯುಭ್ವಾದ್ಯಾಯತನವನ್ನು (ಸೇತುವೆಂದು) ಹೇಳಿಲ್ಲ. ಹೀಗಿರುವಲ್ಲಿ ಸೇತುಶ್ರುತಿಯಿರುವದರಿಂದ (ಈ) ಆಯತನವು ಬ್ರಹ್ಮಕ್ಕಿಂತ ಬೇರೆಯ ಪದಾರ್ಥವಾಗಿರಬೇಕು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದು ಅಯುಕ್ತವು.

## ಮುಕ್ತರು ಪಡೆಯತಕ್ಕದ್ದೆಂದು ಹೇಳಿರುವದರಿಂದಲೂ ಇದು ಬ್ರಹ್ಮವೇ

**ಮುಕ್ತೋಪಸೃಪ್ಯವ್ಯಪದೇಶಾತ್ ॥ ೨ ॥**

೨. ಮುಕ್ತೋಪಸೃಪ್ಯನೆಂದು ಹೇಳಿರುವದರಿಂದ.

---

1. ಸೇತು ಎಂದರೆ ಒಡ್ಡು, ಅಣೆಗಟ್ಟು– ಎಂದರ್ಥವೆಂದು ಇದರಿಂದ ತೋರುತ್ತದೆ.
2. ಇದು ಸ್ವವ್ಯಾಖ್ಯಾನವೇ ; ಉಪನಿಷದ್ಭಾಷ್ಯವನ್ನು ನೋಡಿ.
3. ಸೇತುವೆಂದರೆ ದಾಟುವ ಸಾಧನವೆಂದರ್ಥವೆಂದು ಭಾವ.

( ಭಾಷ್ಯ )

೨೨೫. ಇತಶ್ಚ ಪರಮೇವ ಬ್ರಹ್ಮ ದ್ಯುಭ್ವಾದ್ಯಾಯತನಮ್ | ಯಸ್ಮಾತ್ ಮುಕ್ತೋಪಸೃಪ್ಯತಾ ಅಸ್ಯ ವ್ಯಪದಿಶ್ಯಮಾನಾ ದೃಶ್ಯತೇ | ಮುಕ್ತೈಃ ಉಪ ಸೃಪ್ಯಂ ಮುಕ್ತೋಪಸೃಪ್ಯಮ್ | ದೇಹಾದಿಷು ಅನಾತ್ಮಸು 'ಅಹಮಸ್ಮಿ' ಇತ್ಯಾತ್ಮಬುದ್ಧಿರವಿದ್ಯಾ | ತತಃ ತತ್ಪೂಜನಾದೌ ರಾಗಃ, ತತ್ಪರಿಭವಾದೌ ದ್ವೇಷಃ, ತದುಚ್ಛೇದದರ್ಶನಾತ್ ಭಯಮ್, ಮೋಹಶ್ಚ– ಇತ್ಯೇವಮಯಮ್ ಅನನ್ತಭೇದೋಽನರ್ಥವ್ರಾತಃ ಸನ್ತತಃ ಸರ್ವೇಷಾಂ ನಃ ಪ್ರತ್ಯಕ್ಷಃ | ತದ್ವಿ ಪರ್ಯಯೇಣ ಅವಿದ್ಯಾರಾಗದ್ವೇಷಾದಿದೋಷಮುಕ್ತೈಃ ಉಪಸೃಪ್ಯಂ ಗಮ್ಯ ಮೇತತ್ ಇತಿ ದ್ಯುಭ್ವಾದ್ಯಾಯತನಂ ಪ್ರಕೃತ್ಯ ವ್ಯಪದೇಶೋ ಭವತಿ| ಕಥಮ್? "ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ | ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ" (ಮುಂ. ೨–೨–೮) ಇತ್ಯುಕ್ತ್ವಾ ಬ್ರವೀತಿ | "ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷ ಮುಪೈತಿ ದಿವ್ಯಮ್" (ಮುಂ. ೩–೨–೮) ಇತಿ । ಬ್ರಹ್ಮಣಶ್ಚ ಮುಕ್ತೋಪ ಸೃಪ್ಯತ್ವಂ ಪ್ರಸಿದ್ಧಂ ಶಾಸ್ತ್ರೇ– "ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ । ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ" (ಬೃ. ೪–೪–೭) ಇತ್ಯೇವಮಾದೌ | ಪ್ರಧಾನಾದೀನಾಂ ತು ನ ಕ್ವಚಿತ್ ಮುಕ್ತೋಪಸೃಪ್ಯತ್ವಮಸ್ತಿ ಪ್ರಸಿದ್ಧಮ್ । ಅಪಿ ಚ "ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಞ್ಚಥಾಮೃತಸ್ಯೈಷ ಸೇತುಃ" ಇತಿ ವಾಗ್ವಿಮೋಕಪೂರ್ವಕಂ ವಿಜ್ಞೇಯತ್ವಮ್ ಇಹ ದ್ಯುಭ್ವಾದ್ಯಾಯತನಸ್ಯ ಉಚ್ಯತೇ । ತಚ್ಚ ಶ್ರುತ್ಯನ್ತರೇ ಬ್ರಹ್ಮಣೋ ದೃಷ್ಟಮ್ "ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ | ನಾನುಧ್ಯಾಯಾದ್ಬಹೂ ಞ್ಛಬ್ದಾನ್ ವಾಚೋ ವಿಗ್ಲಾಪನಂ ಹಿ ತತ್" (ಬೃ. ೪–೪–೨೧) ಇತಿ | ತಸ್ಮಾ ದಪಿ ದ್ಯುಭ್ವಾದ್ಯಾಯತನಂ ಪರಂ ಬ್ರಹ್ಮ ॥

( ಭಾಷ್ಯಾರ್ಥ )

ಈ (ಕಾರಣ)ದಿಂದಲೂ (ಈ) ದ್ಯುಭ್ವಾದ್ಯಾಯತನವು ಪರಬ್ರಹ್ಮವೇ. ಏಕೆಂದರೆ ಇದಕ್ಕೆ ಮುಕ್ತೋಪಸೃಪ್ಯತ್ವವನ್ನು ಹೇಳಿರುವದು ಕಂಡುಬರುತ್ತದೆ. ಮುಕ್ತೋಪಸೃಪ್ಯವು, ಎಂದರೆ ಮುಕ್ತರಿಂದ ಉಪಸೃಪ್ಯವಾದದ್ದು. (ಇದರ ವಿವರ) : ದೇಹವೇ ಮುಂತಾದ ಅನಾತ್ಮಗಳಲ್ಲಿ ನಾನು (ಇವೇ) ಆಗಿರುವೆನು ಎಂಬ ಆತ್ಮಬುದ್ಧಿಯು **ಅವಿದ್ಯೆಯು**[1] ; ಅದರಿಂದ ಅವುಗಳನ್ನು ಗೌರವಿಸು

---

1. ಅಧ್ಯಾಸವೇ ಅವಿದ್ಯೆಯು.

ವದೇ ಮುಂತಾದವುಗಳಲ್ಲಿ **ರಾಗ,** ಅವುಗಳನ್ನು ತಿರಸ್ಕರಿಸುವದೇ ಮುಂತಾದದ್ದರಲ್ಲಿ **ದ್ವೇಷ,** ಅವುಗಳು ನಾಶವಾಗುವವೆಂದು ಕಂಡುಬರುವದರಿಂದ **ಭಯ,** ಮತ್ತು **ಮೋಹ**- ಎಂಬೀ ಅನಂತಪ್ರಕಾರವಾಗಿರುವ ಅನರ್ಥಸಮೂಹವು ಎಡೆಬಿಡದೆ ಆಗುತ್ತಿರುವದು ನಮ್ಮಗಳಿಗೆಲ್ಲ ಪ್ರತ್ಯಕ್ಷವಾಗಿರುತ್ತದೆ. ಇದಕ್ಕೆ ವಿಪರೀತವಾಗಿ ಅವಿದ್ಯಾರಾಗದ್ವೇಷಾದಿದೋಷಗಳಿಂದ ಮುಕ್ತರಾಗಿರುವದರಿಂದ ಉಪಸೃಪ್ಯವಾದದ್ದು[1] (ಎಂದರೆ ಅವರಿಗೆ) ಸಿಕ್ಕುವದಿದು ಎಂದು (ಈ) ದ್ಯುಭ್ವಾದ್ಯಾಯತನವನ್ನು ಕುರಿತು ಹೇಳಿರುವದಾಗಿರುತ್ತದೆ. ಹೇಗೆ? ಎಂದರೆ "ಆ ಪರಾಪರನನ್ನು ಕಂಡುಕೊಂಡರೆ ಹೃದಯಗ್ರಂಥಿಯು ಬಿಚ್ಚಿಕೊಳ್ಳುತ್ತದೆ, ಎಲ್ಲಾ ಸಂಶಯಗಳೂ ನಾಶವಾಗುತ್ತವೆ; ಈತನ ಕರ್ಮಗಳೂ ಕ್ಷಯವಾಗುತ್ತವೆ" (ಮುಂ ೨-೨-೮) ಎಂದು ಹೇಳಿ(ದ ಬಳಿಕ) "ಹಾಗೆಯೇ ಜ್ಞಾನಿಯು ನಾಮರೂಪದಿಂದ ಬಿಡುಗಡೆಯಾಗಿ ಪರಾತ್ಪರನಾದ ದಿವ್ಯಪುರುಷನನ್ನು ಸೇರುತ್ತಾನೆ" (ಮುಂ.೩-೨-೮) ಎಂದು (ಶ್ರುತಿಯಲ್ಲಿ) ಹೇಳಿರುತ್ತದೆ.[2] ಬ್ರಹ್ಮವು ಮುಕ್ತೋಪಸೃಪ್ಯವೆಂಬುದು "ಈತನ ಹೃದಯದಲ್ಲಿರುವವಲ್ಲ, (ಆ) ಕಾಮಗಳೆಲ್ಲವೂ ಯಾವಾಗ ಬಿಡುಗಡೆಯಾಗುವವೋ ಆಗ ಮರ್ತ್ಯನು ಅಮೃತನಾಗುವನು. ಇಲ್ಲಿಯೇ ಬ್ರಹ್ಮವನ್ನು ಸೇರುತ್ತಾನೆ" (ಬೃ ೪-೪-೭) ಎಂಬಿದೇ ಮುಂತಾದ ಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ.[3] ಆದರೆ ಪ್ರಧಾನಾದಿಗಳು ಮುಕ್ತೋಪಸೃಪ್ಯವೆಂದು ಎಲ್ಲಿಯೂ[4] ಪ್ರಸಿದ್ಧವಾಗಿಲ್ಲ.

ಇದಲ್ಲದೆ "ಆತನನ್ನೇ ಒಬ್ಬ ಆತ್ಮನೆಂದು ಅರಿತುಕೊಳ್ಳಿರಿ, ಮಿಕ್ಕ ಮಾತುಗಳನ್ನು ಬಿಡಿರಿ, ಅಮೃತಕ್ಕೆ ಇದೇ ಸೇತು" ಎಂದು ವಾಗ್ವಿಮೋಕಪೂರ್ವಕವಾಗಿ[5] ಅರಿತುಕೊಳ್ಳಬೇಕಾದದ್ದೆಂದು (ಈ) ದ್ಯುಭ್ವಾದ್ಯಾಯತನವನ್ನು ಹೇಳಿರುತ್ತದೆ ಅದನ್ನೂ "ಆತನನ್ನೇ ಧೀರನಾದ ಬ್ರಾಹ್ಮಣನು ಅರಿತುಕೊಂಡು

---

1. ಅವಿದ್ಯಾದಿಗಳನ್ನು ಕಳೆದುಕೊಂಡ ಬಳಿಕ ಪಡೆಯುವದಕ್ಕೆ ಪ್ರಯತ್ನವನ್ನು ಮಾಡಬೇಕೆಂದೇನೂ ಅಭಿಪ್ರಾಯವಲ್ಲ, ಪಡೆದುಕೊಂಡವರು ಅವಿದ್ಯಾದಿಮುಕ್ತರು ಎಂದೇ ಅಭಿಪ್ರಾಯ.

2. ಈ ವಾಕ್ಯದಲ್ಲಿ ಕಾಮಾದಿಗಳಿಂದಲೂ ನಾಮರೂಪಗಳಿಂದಲೂ ಮುಕ್ತನಾದವನೇ ಬ್ರಹ್ಮವನ್ನು ಸೇರುತ್ತಾನೆಂದು ಹೇಳಿದೆ. ನಾಮರೂಪಮುಕ್ತರಾಗಿಯೇ ಸೇರುತ್ತಾರೆ ಎಂದು ಸೂತ್ರಕ್ಕೆ ಅರ್ಥವನ್ನು ಹೇಳಿದಂತೆಯೂ ಆಯಿತು.

3. ಕಾಮಾದಿಮುಕ್ತರು ಬ್ರಹ್ಮವನ್ನು ಸೇರುವರು ಎಂಬುದು ಶ್ರುತಿಪ್ರಸಿದ್ಧವೆಂಬುದಕ್ಕೆ ಇದೊಂದು ಉದಾಹರಣೆ.

4. ಸಾಂಖ್ಯಶಾಸ್ತ್ರದಲ್ಲಿ ಕೂಡ ಪ್ರಸಿದ್ಧವಲ್ಲ, ಉಪನಿಷತ್ತಿನಲ್ಲಂತೂ ಅದರ ಸುದ್ದಿಲ್ಲ.

5. ಮುಕ್ತೋಪಸೃಪ್ಯವ್ಯಪದೇಶಾತ್ ಎಂಬುದಕ್ಕೆ ಇದು ಇನ್ನೊಂದು ಅರ್ಥವು.

ಪ್ರಜ್ಞೆಯನ್ನು ಮಾಡಿಕೊಳ್ಳಬೇಕು[1]; ಬಹಳ ಮಾತುಗಳನ್ನು ಚಿಂತಿಸಬಾರದು, ಏಕೆಂದರೆ ಅದು ವಾಕ್ಕಿಗೆ ಆಯಾಸವನ್ನುಂಟುಮಾಡತಕ್ಕದ್ದು" (ಬೃ. ೪-೪-೨೧) ಎಂದು ಬೇರೊಂದು ಶ್ರುತಿಯಲ್ಲಿ ಬ್ರಹ್ಮದ (ವಿಷಯಕ್ಕೇ) ಹೇಳಿರುವದು ಕಂಡುಬಂದಿರುತ್ತದೆ. ಆದ್ದರಿಂದಲೂ (ಈ) ದ್ಯುಭ್ವಾದ್ಯಾಯತನವು ಪರಬ್ರಹ್ಮವೇ.

## ನಾನುಮಾನಮತಚ್ಛಬ್ದಾತ್ ॥ ೩ ॥

೩. (ದ್ಯುಭ್ವಾದ್ಯಾಯತನವು) ಅನುಮಾನವಲ್ಲ; ಏಕೆಂದರೆ ಅದರ ಶಬ್ದವಿರುವದಿಲ್ಲ.

### ಈ ಆಯತನವು ಪ್ರಧಾನವಲ್ಲ.

( ಭಾಷ್ಯ )

೨೨೬ ಯಥಾ ಬ್ರಹ್ಮಣಃ ಪ್ರತಿಪಾದಕೋ ವೈಶೇಷಿಕೋ ಹೇತುರುಕ್ತಃ ನೈವಮ್ ಅರ್ಥಾನ್ತರಸ್ಯ ವೈಶೇಷಿಕೋ ಹೇತುಃ ಪ್ರತಿಪಾದಕೋಽಸ್ತಿ ಇತ್ಯಾಹ । ನ ಆನುಮಾನಿಕಂ ಸಾಙ್ಖ್ಯಸ್ಮೃತಿಪರಿಕಲ್ಪಿತಂ ಪ್ರಧಾನಮ್ ಇಹ ದ್ಯುಭ್ವಾದ್ಯಾಯತನತ್ವೇನ ಪ್ರತಿಪತ್ತವ್ಯಮ್ । ಕಸ್ಮಾತ್ ? ಅತಚ್ಛಬ್ದಾತ್ । ತಸ್ಯ ಅಚೇತನಸ್ಯ ಪ್ರಧಾನಸ್ಯ ಪ್ರತಿಪಾದಕಃ ಶಬ್ದಃ ತಚ್ಛಬ್ದಃ । ನ ತಚ್ಛಬ್ದಃ ಅತಚ್ಛಬ್ದಃ । ನ ಹಿ ಅತ್ರ ಅಚೇತನಸ್ಯ ಪ್ರಧಾನಸ್ಯ ಪ್ರತಿಪಾದಕಃ ಕಶ್ಚಿತ್ ಶಬ್ದಃ ಅಸ್ತಿ । ಯೇನ ಅಚೇತನಂ ಪ್ರಧಾನಂ ಕಾರಣತ್ವೇನ ಆಯತನತ್ವೇನ ವಾ ಅವಗಮ್ಯೇತ । ತದ್ವಿಪರೀತಸ್ಯ ಚೇತನಸ್ಯ ಪ್ರತಿಪಾದಕಶಬ್ದೋಽತ್ರಾಸ್ತಿ "ಯಃ ಸರ್ವಜ್ಞಃ ಸರ್ವವಿತ್" (ಮುಂ. ೧-೧-೯) ಇತ್ಯಾದಿಃ । ಅತ ಏವ ನ ವಾಯುರಪಿ ಇಹ ದ್ಯುಭ್ವಾದ್ಯಾಯತನತ್ವೇನ ಆಶ್ರೀಯತೇ ॥

( ಭಾಷ್ಯಾರ್ಥ )

ಹೇಗೆ (ಇದು) ಬ್ರಹ್ಮವೆಂದು ತಿಳಿಸಿಕೊಡತಕ್ಕ ವಿಶೇಷಹೇತುವನ್ನು[2] (ಹಿಂದೆ) ಹೇಳಲಾಯಿತೋ, ಹಾಗೆ ಮತ್ತೊಂದು ಪದಾರ್ಥವನ್ನು ತಿಳಿಸುವ ವಿಶೇಷಹೇತುವಿರುವದಿಲ್ಲ ಎಂದು (ಈಗ) ಹೇಳುತ್ತಾರೆ: (ನಾನುಮಾನಮ

---

1. ಅರಿತುಕೊಂಡು ಜ್ಞಾನನಿಷ್ಠನಾಗುವದಕ್ಕೆ ಬೇಕಾದ ನಿವೃತ್ತಿಧರ್ಮಗಳನ್ನು ಮಾಡಬೇಕು.

2. ಸ್ವಶಬ್ದವಿರುವದು, ಮುಕ್ತೋಪಸೃಪ್ಯತ್ವವನ್ನು ಹೇಳಿರುವದು- ಎಂಬ ವಿಶೇಷಹೇತುವನ್ನು

ತಚ್ಛಬ್ದಾತ್). ಅನುಮಾನದಿಂದ (ಸಾಧಿಸಬೇಕಾಗಿರುವ) ಸಾಂಖ್ಯರ ಸ್ಮೃತಿಯಲ್ಲಿ ಕಲ್ಪಿತವಾಗಿರುವ ಪ್ರಧಾನವನ್ನು ಇಲ್ಲಿ ದ್ಯುಭ್ವಾದ್ಯಾಯತನವೆಂದು ತಿಳಿಯಬಾರದು. ಏಕೆ ? ಎಂದರೆ ಅತಚ್ಛಬ್ದದಿಂದ. ಅದನ್ನು ಎಂದರೆ ಪ್ರಧಾನವನ್ನು ತಿಳಿಸಿಕೊಡುವ ಶಬ್ದವು ತಚ್ಛಬ್ದವು ; ತಚ್ಛಬ್ದವಲ್ಲದ್ದು ಅತಚ್ಛಬ್ದವು. ಇಲ್ಲಿ ಅಚೇತನವಾದ ಪ್ರಧಾನವನ್ನು ತಿಳಿಸುವ ಯಾವ ಶಬ್ದವೂ ಇರುವದೇ ಇಲ್ಲ ; ಹಾಗಿದ್ದಿದ್ದರೆ ಅಚೇತನವಾದ ಪ್ರಧಾನವು ಕಾರಣವೆಂದಾಗಲಿ ಆಯತನವೆಂದಾಗಲಿ ನಿಶ್ಚಯಿಸಬಹುದಾಗಿತ್ತು.[1] (ಆದರೆ) ಅದಕ್ಕೆ ವಿಪರೀತವಾದ ಚೇತನವನ್ನು ತಿಳಿಸುವ "ಯಾವನು ಸರ್ವಜ್ಞನೋ ಸರ್ವವಿತ್ತೋ" (ಮುಂ.೧-೧-೯) ಎಂದು ಮುಂತಾಗಿರುವ ಶಬ್ದವು ಇಲ್ಲಿರುತ್ತದೆ[2] ಆದ್ದರಿಂದಲೇ[3] ವಾಯುವೂ ಇಲ್ಲಿ ದ್ಯುಭ್ವಾದ್ಯಾಯತನವೆಂದು ಇಟ್ಟುಕೊಳ್ಳುವ(ಹಾಗಿಲ್ಲ).

## ಜೀವನೂ ದ್ಯುಭ್ವಾದ್ಯಾಯತನವಲ್ಲ

### ಪ್ರಾಣಭೃಚ್ಚ ॥ ೪ ॥

೪. ಪ್ರಾಣಭೃತ್ತೂ (ಅಲ್ಲ).

( ಭಾಷ್ಯ )

೨೨೭. ಯದ್ಯಪಿ ಪ್ರಾಣಭೃತೋ ವಿಜ್ಞಾನಾತ್ಮನಃ ಆತ್ಮತ್ವಂ ಚೇತನತ್ವಂ ಚ ಸಂಭವತಿ । ತಥಾಪಿ ಉಪಾಧಿಪರಿಚ್ಛಿನ್ನಜ್ಞಾನಸ್ಯ ಸರ್ವಜ್ಞತ್ವಾದ್ಯಸಂಭವೇ ಸತಿ ಅಸ್ಮಾದೇವ ಅತಚ್ಛಬ್ದಾತ್ ಪ್ರಾಣಭೃದಪಿ ನ ದ್ಯುಭ್ವಾದ್ಯಾಯತನತ್ವೇನ ಆಶ್ರಯಿತವ್ಯಃ । ನ ಚ ಉಪಾಧಿಪರಿಚ್ಛಿನ್ನಸ್ಯ ಅವಿಭೋಃ ಪ್ರಾಣಭೃತಃ ದ್ಯುಭ್ವಾದ್ಯಾಯತನತ್ವಮಪಿ ಸಮ್ಯಕ್ ಸಂಭವತಿ । ಪೃಥಗ್ಯೋಗಕರಣಮ್ ಉತ್ತರಾರ್ಥಮ್ ॥

( ಭಾಷ್ಯಾರ್ಥ )

ಪ್ರಾಣಭೃತ್ತಿಗೆ (ಎಂದರೆ ಪ್ರಾಣವನ್ನು ಧರಿಸಿರುವ) ವಿಜ್ಞಾನಾತ್ಮನಿಗೆ ಆತ್ಮತ್ವವೂ ಚೇತನತ್ವವೂ ಹೊಂದುತ್ತದೆಯಾದರೂ ಉಪಾಧಿಪರಿಚ್ಛಿನ್ನವಾದ ಜ್ಞಾನವುಳ್ಳ (ಅವನಿಗೆ) ಸರ್ವಜ್ಞತ್ವವೇ ಮುಂತಾದವು ಹೊಂದುವದಿಲ್ಲವಾಗಿ

---

1. ಈಕ್ಷತೇರ್ನಾಶಬ್ದಮ್ (೧-೧-೫), ಗತಿಸಾಮಾನ್ಯಾತ್ (೧-೧-೧೦) ಎಂದು ಅಚೇತನವಾದವನ್ನು ತಿರಸ್ಕರಿಸಿದ್ದನ್ನು ಇಲ್ಲಿ ಗಟ್ಟಿಗೊಳಿಸಿದೆ.

2. ಅತಚ್ಛಬ್ದವೆಂದರೆ ತಚ್ಛಬ್ದಾಭಾವವೆಂಬ ಅರ್ಥವನ್ನು ಮೊದಲು ಮಾಡಿತ್ತು ; ತದ್ವಿರುದ್ಧವಾದದ್ದನ್ನು ಹೇಳುವ ಶಬ್ದವೆಂಬ ಅರ್ಥವನ್ನು ಈಗ ಮಾಡಿದೆ.

3. ಅತಚ್ಛಬ್ದವೆಂಬ ಹೇತುವಿನಿಂದಲೇ.

ೀ ಅತಚ್ಛಬ್ದದ (ಕಾರಣ)ದಿಂದ ಪ್ರಾಣಭೃತ್ತೂ ದ್ಯುಭ್ವಾದ್ಯಾಯತನವೆಂದು ಟ್ಟುಕೊಳ್ಳುವಹಾಗಿಲ್ಲ. ಉಪಾಧಿಪರಿಚ್ಛಿನ್ನನೂ ವಿಭುವಲ್ಲವವನೂ ಆಗಿರುವ ್ರಣಭೃತ್ತಿಗೆ ದ್ಯುಭ್ವಾದ್ಯಾಯತನತ್ವವೂ ಸರಿಯಾಗಿ ಹೊಂದುವಂತಿಲ್ಲ. ಪ್ರಾಣಭೃಚ್ಚ ಎಂದು ಈ) ಸೂತ್ರವನ್ನು (ಹಿಂದಿನ ಸೂತ್ರಕ್ಕಿಂತ) ಬೇರೆಯಾಗಿ ಾಡಿಕೊಂಡಿರುವದು (ಜೀವನನ್ನು ತಿರಸ್ಕರಿಸುವ) ಮುಂದಿನ ಸೂತ್ರಗಳಲ್ಲಿ ನನನ್ನೇ ತೆಗೆದುಕೊಳ್ಳಬೇಕೆಂದು ತಿಳಿಸುವದಕ್ಕಾಗಿ.[1]

### ಭೇದವ್ಯಪದೇಶಾತ್ ॥ ೫ ॥

೫. ಭೇದವ್ಯಪದೇಶದಿಂದಲೂ (ಜೀವನು ಈ ಆಯತನವಲ್ಲ).

( ಭಾಷ್ಯ )

೨೨೮. ಕುತಶ್ಚ ನ ಪ್ರಾಣಭೃತ್ ದ್ಯುಭ್ವಾದ್ಯಾಯತನತ್ವೇನ ಆ ್ರಯಿತವ್ಯಃ ? (ಭೇದವ್ಯಪದೇಶಾತ್) । ಭೇದವ್ಯಪದೇಶಶ್ಚ ಇಹ ಭವತಿ- ತಮೇವೈಕಂ ಜಾನಥ ಆತ್ಮಾನಮ್" ಇತಿ ಜ್ಞೇಯಜ್ಞಾತೃಭಾವೇನ । ತತ್ರ ್ರಾಣಭೃತ್ ತಾವತ್ ಮುಮುಕ್ಷುತ್ವಾತ್ ಜ್ಞಾತಾ । ಪರಿಶೇಷಾತ್ ಆತ್ಮ ಬ್ದವಾಚ್ಯಂ ಬ್ರಹ್ಮ ಜ್ಞೇಯಂ ದ್ಯುಭ್ವಾದ್ಯಾಯತನಮ್ ಇತಿ ಗಮ್ಯತೇ । ಪ್ರಾಣಭೃತ್ ॥

( ಭಾಷ್ಯಾರ್ಥ )

ಮತ್ತೂ ಯಾವ ಕಾರಣದಿಂದ ಪ್ರಾಣಭೃತ್ತು ದ್ಯುಭ್ವಾದ್ಯಾಯತನ ನೆಂದು ಇಟ್ಟುಕೊಳ್ಳುವದಕ್ಕಾಗದು ? ಎಂದರೆ, (ಭೇದವ್ಯಪದೇಶಾತ್). ಇಲ್ಲಿ 'ಆತನನ್ನೇ ಒಬ್ಬ ಆತ್ಮನೆಂದು ಅರಿತುಕೊಳ್ಳಿರಿ'' ಎಂದು ಜ್ಞೇಯಜ್ಞಾತೃಭಾವ ದಿಂದ ಬೇರೆ(ಬೇರೆ)ಯಾಗಿ ಹೇಳಿರುವದಿದೆ. ಇಲ್ಲಿ ಮೊದಲನೆಯದಾಗಿ ಜೀವನು ಮುಮುಕ್ಷುವಾಗಿರುವದರಿಂದ ಜ್ಞಾತೃವು ; ಪರಿಶೇಷದಿಂದ[2] ಆತ್ಮಶಬ್ದವಾಚ್ಯ ವಾಗಿರುವ ಬ್ರಹ್ಮವು ಜ್ಞೇಯವು. (ಅದೇ) ದ್ಯುಭ್ವಾದ್ಯಾಯತನವು (ಜೀವನಲ್ಲ), ಎಂದು ಗೊತ್ತಾಗುತ್ತದೆ.

---

1. ಹೇತುವು ಒಂದೇ ಆದರೆ 'ನಾನುಮಾನಪ್ರಾಣಭೃತಾ' ಎಂದು ಹಿಂದಿನ ಸೂತ್ರ ದಲ್ಲಿಯೇ ಹೇಳಲಿಲ್ಲವೇಕೆ ? ಎಂಬ ಆಕ್ಷೇಪಕ್ಕೆ ಇದು ಪರಿಹಾರ ಮುಂದಿನ ಸೂತ್ರಗಳಲ್ಲಿ ಪ್ರಧಾನವಿಚಾರವಿಲ್ಲ, ಜೀವನ ವಿಚಾರವು ಮಾತ್ರ ಇದೆ ಎಂಬುದನ್ನು ತಿಳಿಸುವದಕ್ಕೆ ಹೀಗೆ ಬೇರೊಂದು ಸೂತ್ರವನ್ನು ಮಾಡಿಕೊಂಡಿದೆ ಎಂದು ಅಭಿಪ್ರಾಯ.

2 'ಅರಿಯಿರಿ' ಎಂದು ಜೀವನನ್ನು ಹೇಳಿದೆ; ಅವನಿಂದ ಉಳಿದಿರುವ ಪರ

**ಪ್ರಕರಣಾತ್ ॥ ೬ ॥**

೬. ಪ್ರಕರಣದಿಂದಲೂ (ಜೀವನು ಆಯತನವಲ್ಲವೆನ್ನಬೇಕು).

( ಭಾಷ್ಯ )

೨೨೯. ಕುತಶ್ಚ ನ ಪ್ರಾಣಭೃದ್ ದ್ಯುಭ್ವಾದ್ಯಾಯತನತ್ವೇನ ಆಶ್ರಯಿತವ್ಯಃ? ಪ್ರಕರಣಾತ್| ಪ್ರಕರಣಂ ಚೇದಂ ಪರಮಾತ್ಮನಃ| "ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'' (ಮುಂ. ೧-೧-೩) ಇತಿ ಏಕ ವಿಜ್ಞಾನೇನ ಸರ್ವವಿಜ್ಞಾನಾಪೇಕ್ಷಣಾತ್ | ಪರಮಾತ್ಮನಿ ಹಿ ಸರ್ವಾತ್ಮಕೇ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಸ್ಯಾತ್ ನ ಕೇವಲೇ ಪ್ರಾಣಭೃತಿ ॥

( ಭಾಷ್ಯಾರ್ಥ )

ಮತ್ತೂ ಯಾವ ಕಾರಣದಿಂದ ಪ್ರಾಣಭೃತ್ತನ್ನು ದ್ಯುಭ್ವಾದ್ಯಾಯತನವೆಂದು ಇಟ್ಟುಕೊಳ್ಳಬಾರದು ? ಎಂದರೆ (ಪ್ರಕರಣಾತ್). ಇದು ಪರಮಾತ್ಮನ ಪ್ರಕರಣವೂ ಆಗಿದೆ. ಏಕೆಂದರೆ "ಭಗವಂತನೆ, ಯಾವದನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತಂತಾಗುವದು ? (ಮುಂ. ೧-೧-೩) ಎಂದು ಒಂದರ ಅರಿವಿನಿಂದ ಎಲ್ಲದರ ಅರಿವನ್ನೂ ಬಯಸಿರುತ್ತದೆ. ಸರ್ವಾತ್ಮಕನಾದ ಪರಮಾತ್ಮನನ್ನು ಅರಿತುಕೊಂಡರೇ ಇದೆಲ್ಲವನ್ನೂ ಅರಿತಂತಾದೀತೇ ಹೊರತು ಬರಿಯ ಪ್ರಾಣಭೃತ್ತನ್ನು (ಅರಿತರೆ ಆಗ)ಲಾರದು.

**ಸ್ಥಿತ್ಯದನಾಭ್ಯಾಂ ಚ ॥ ೭ ॥**

೭. ಇರವು, ತಿನ್ನುವದು (ಇವುಗಳನ್ನು ಹೇಳಿರುವ)ದರಿಂದಲೂ (ಜೀವನು ಆಯತನವಲ್ಲ).

( ಭಾಷ್ಯ )

೨೩೦. ಕುತಶ್ಚ ನ ಪ್ರಾಣಭೃದ್ ದ್ಯುಭ್ವಾದ್ಯಾಯತನತ್ವೇನ ಆಶ್ರಯಿತವ್ಯಃ ? (ಸ್ಥಿತ್ಯದನಾಭ್ಯಾಂ ಚ) । ದ್ಯುಭ್ವಾದ್ಯಾಯತನಂ ಚ ಪ್ರಕೃತ್ಯ "ದ್ವಾ ಸುಪರ್ಣಾ ಸಯುಜಾ ಸಖಾಯಾ" (ಮುಂ. ೩-೧-೧) ಇತ್ಯತ್ರ ಸ್ಥಿತ್ಯದನೇ ನಿರ್ದಿಶ್ಯೇತೇ | "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ'' ಇತಿ ಕರ್ಮ ಫಲಾಶನಮ್, "ಅನಶ್ನನ್ನನ್ಯೋಽಭಿಚಾಕಶೀತಿ'' ಇತಿ ಔದಾಸೀನ್ಯೇನ ಅವಸ್ಥಾನಂ ಚ | ತಾಭ್ಯಾಂ ಚ ಸ್ಥಿತ್ಯದನಾಭ್ಯಾಮ್ ಈಶ್ವರಕ್ಷೇತ್ರಜ್ಞೌ ತತ್ರ ಗೃಹ್ಯೇತೇ | ಯದಿ ಚ ಈಶ್ವರೋ ದ್ಯುಭ್ವಾದ್ಯಾಯತನತ್ವೇನ ವಿವಕ್ಷಿತಃ | ತತಸ್ತಸ್ಯ ಪ್ರಕೃತಸ್ಯ ಈಶ್ವರಸ್ಯ ಕ್ಷೇತ್ರಜ್ಞಾತ್ ಪೃಥಗ್ವಚನಮ್ ಅವಕಲ್ಪತೇ । ಅನ್ಯಥಾ ಹಿ ಅಪ್ರಕೃತವಚನಮ್ ಆಕಸ್ಮಿಕಮ್ ಅಸಂಬದ್ಧಂ ಸ್ಯಾತ್ ॥

(ಭಾಷ್ಯಾರ್ಥ)

ಮತ್ತೂ ಯಾವ ಕಾರಣದಿಂದ ಪ್ರಾಣಭೃತ್ತನ್ನು ದ್ಯುಭ್ವಾದ್ಯಾಯತನವೆಂದು ಇಟ್ಟುಕೊಳ್ಳಬಾರದು ? ಎಂದರೆ (ಸ್ಥಿತ್ಯದನಾಭ್ಯಾಂ ಚ). ದ್ಯುಭ್ವಾದ್ಯಾಯತನವನ್ನು (ಹೇಳುವದಕ್ಕೆ) ಪ್ರಾರಂಭಿಸಿ "ಜೊತೆಯಲ್ಲಿಯೇ ಇರುವ ಸಖರಾಗಿರುವ ಎರಡು ಹಕ್ಕಿಗಳು" (ಮುಂ. ೩–೧–೧) ಎಂಬಲ್ಲಿ ಇರುವದು, ತಿನ್ನುವದು– ಇವನ್ನು ತಿಳಿಸಿದೆ. (ಹೇಗೆಂದರೆ) "ಅವುಗಳಲ್ಲಿ ಒಂದು ಪಿಪ್ಪಲವನ್ನು ಸವಿದು ತಿನ್ನುತ್ತದೆ" ಎಂದು ಕರ್ಮಫಲವನ್ನು ತಿನ್ನುವದು "ಇನ್ನೊಂದು ತಿನ್ನದೆ ನೋಡುತ್ತಿದೆ" ಎಂದು ಔದಾಸೀನ್ಯದಿಂದ ಇರುವದು (ಇವುಗಳನ್ನು ತಿಳಿಸಿದೆ). ಆ ಇರವುತಿನ್ನುವಿಕೆಗಳಿಂದ ಅಲ್ಲಿ ಈಶ್ವರಕ್ಷೇತ್ರಜ್ಞರನ್ನು ಗ್ರಹಿಸಬೇಕು. (ಇಲ್ಲಿ) ದ್ಯುಭ್ವಾದ್ಯಾಯತನವೆಂದು ಈಶ್ವರನನ್ನು ಹೇಳಹೊರಟಿದೆ ಎಂದರೆ, ಆಗ ಆ ಪ್ರಕೃತನಾದ ಈಶ್ವರನನ್ನು ಕ್ಷೇತ್ರಜ್ಞನಿಗಿಂತ ಬೇರೆಯಾಗಿ ಹೇಳಿರುವದು ಯುಕ್ತವಾಗುತ್ತದೆ. ಹಾಗಿಲ್ಲದಿದ್ದರೆ, ಅಪ್ರಕೃತವಾದದ್ದನ್ನು (ಹೇಳಿದಂತಾಗುವದು), ಆಕಸ್ಮಿಕವಾಗಿ (ಹೇಳಿದಂತಾಗುವದು), ಸಂಬಂಧವಿಲ್ಲದ್ದನ್ನು (ಹೇಳಿ)ದಂತಾಗುವದು.

## ಶ್ರುತಿಯಲ್ಲಿ ಜೀವನನ್ನು ಹೇಳಿರುವದೇಕೆ?

(ಭಾಷ್ಯ)

೨೩೧. ನನು ತವಾಪಿ ಕ್ಷೇತ್ರಜ್ಞಸ್ಯ ಈಶ್ವರಾತ್ ಪೃಥಗ್ವಚನಮ್ ಆಕಸ್ಮಿಕಮೇವ ಪ್ರಸಜ್ಯೇತ । ನ । ತಸ್ಯ ಅವಿವಕ್ಷಿತತ್ವಾತ್ । ಕ್ಷೇತ್ರಜ್ಞೋ ಹಿ ಕರ್ತೃತ್ವೇನ ಭೋಕ್ತೃತ್ವೇನ ಚ ಪ್ರತಿಶರೀರಂ ಬುದ್ಧ್ಯಾದ್ಯುಪಾಧಿಸಂಬದ್ಧೋ ಲೋಕತ ಏವ ಪ್ರಸಿದ್ಧಃ । ನಾಸೌ ಶ್ರುತ್ಯಾ ತಾತ್ಪರ್ಯೇಣ ವಿವಕ್ಷ್ಯತೇ । ಈಶ್ವರಸ್ತು ಲೋಕತಃ ಅಪ್ರಸಿದ್ಧತ್ವಾತ್ ಶ್ರುತ್ಯಾ ತಾತ್ಪರ್ಯೇಣ ವಿವಕ್ಷ್ಯತೇ ಇತಿ ನ ತಸ್ಯ ಆಕಸ್ಮಿಕಂ ವಚನಂ ಯುಕ್ತಮ್ ॥

(ಭಾಷ್ಯಾರ್ಥ)

(ಆಕ್ಷೇಪ):– ನಿನ್ನ (ಪಕ್ಷದಲ್ಲಿಯೂ) ಕ್ಷೇತ್ರಜ್ಞನನ್ನು ಈಶ್ವರನಿಗಿಂತ ಬೇರೆಯಾಗಿ ಹೇಳಿರುವದು ಆಕಸ್ಮಿಕವೇ ಆಗುವದಿಲ್ಲವೆ ?

(ಪರಿಹಾರ):– ಹಾಗಲ್ಲ. ಏಕೆಂದರೆ ಆ (ಕ್ಷೇತ್ರಜ್ಞ)ನನ್ನು ಹೇಳುವದರಲ್ಲಿ (ಶ್ರುತಿಗೆ) ತಾತ್ಪರ್ಯವಿಲ್ಲ. ಹೇಗೆಂದರೆ ಒಂದೊಂದು ಶರೀರದಲ್ಲಿಯೂ ಬುದ್ಧಿಯೇ ಮುಂತಾದ ಉಪಾಧಿಗೆ ಸಂಬಂಧಪಟ್ಟವನಾಗಿರುವ ಕ್ಷೇತ್ರಜ್ಞನು ಕರ್ತೃವೆಂದೂ ಭೋಕ್ತೃವೆಂದೂ ಲೋಕ(ದೃಷ್ಟಿ)ಯಿಂದಲೇ ಪ್ರಸಿದ್ಧನಾಗಿರುತ್ತಾನೆ. ಅವನನ್ನು ಶ್ರುತಿಯು ತಾತ್ಪರ್ಯದಿಂದ ಹೇಳುವದಕ್ಕೆ ಹೊರಟಿರು

ವದಿಲ್ಲ; ಆದರೆ ಈಶ್ವರನು ಲೋಕ(ದೃಷ್ಟಿಯಿಂದ) ಪ್ರಸಿದ್ಧನಾಗಿರುವದಿಲ್ಲ ವಾದ್ದರಿಂದ (ಅವನ್ನು) ಶ್ರುತಿಯು ತಾತ್ಪರ್ಯದಿಂದ ಹೇಳಬೇಕೆಂದು ಹೊರಟಿದೆ. ಆದ್ದರಿಂದ ಅವನನ್ನು ಆಕಸ್ಮಿಕವಾಗಿ ಹೇಳುವದು ಸರಿಯಲ್ಲ.[1]

## ಪೈಂಗ್ಯುಪನಿಷತ್ತಿನ ವ್ಯಾಖ್ಯಾನಕ್ಕೂ ಸೂತ್ರಕ್ಕೂ ವಿರೋಧವಿಲ್ಲ

( ಭಾಷ್ಯ )

೨೩೨ "ಗುಹಾಂ ಪ್ರವಿಷ್ಟಾವಾತ್ಮಾನೌ ಹಿ" (೧-೨-೧೧) ಇತ್ಯತ್ರಾಪಿ ಏತದ್ ದರ್ಶಿತಮ್, "ದ್ವಾ ಸುಪರ್ಣಾ" ಇತ್ಯಸ್ಯಾಮ್ ಋಚಿ ಈಶ್ವರ ಕ್ಷೇತ್ರಜ್ಞಾ ಉಚ್ಯೇತೇ ಇತಿ । ಯದಾಪಿ ಪೈಙ್ಗ್ಯುಪನಿಷತ್ಕೃತೇನ ವ್ಯಾಖ್ಯಾನೇನ ಅಸ್ಯಾಮ್ ಋಚಿ ಸತ್ತ್ವಕ್ಷೇತ್ರಜ್ಞಾ ಉಚ್ಯೇತೇ ತದಾಪಿ ನ ವಿರೋಧಃ ಕಶ್ಚಿತ್। ಕಥಮ್ ? ಪ್ರಾಣಭೃದ್ ಹಿ ಇಹ ಘಟಾದಿಚ್ಛಿದ್ರವತ್ ಸತ್ತ್ವಾದ್ಯುಪಾಧ್ಯಭಿ ಮಾನಿತ್ವೇನ ಪ್ರತಿಶರೀರಂ ಗೃಹ್ಯಮಾಣಃ ದ್ಯುಭ್ವಾದ್ಯಾಯತನಂ ನ ಭವತಿ ಇತಿ ನಿಷಿಧ್ಯತೇ । ಯಸ್ತು ಸರ್ವಶರೀರೇಷು ಉಪಾಧಿಭಿರ್ವಿನಾ ಉಪಲಕ್ಷ್ಯತೇ ಪರಮಾತ್ಮೈವ ಸ ಭವತಿ । ಯಥಾ ಘಟಾದಿಚ್ಛಿದ್ರಾಣಿ ಘಟಾದಿಭಿಃ ಉಪಾ ಧಿಭಿರ್ವಿನಾ ಉಪಲಕ್ಷ್ಯಮಾಣಾನಿ ಮಹಾಕಾಶ ಏವ ಭವನ್ತಿ, ತದ್ವತ್ । ಪ್ರಾಣಭೃತಃ ಪರಸ್ಮಾತ್ ಅನ್ಯತ್ವಾನುಪಪತ್ತೇಃ ಪ್ರತಿಷೇಧೋ ನೋಪಪದ್ಯತೇ। ತಸ್ಮಾತ್ ಸತ್ತ್ವಾದ್ಯುಪಾಧ್ಯಭಿಮಾನಿನ ಏವ ದ್ಯುಭ್ವಾದ್ಯಾಯತನತ್ವಪ್ರತಿ ಷೇಧಃ ॥

( ಭಾಷ್ಯಾರ್ಥ )

"ಗುಹಾಂ ಪ್ರವಿಷ್ಟಾವಾತ್ಮಾನೌ ಹಿ" (೧-೨-೧೧) ಎಂಬಲ್ಲಿಯೂ "ದ್ವಾ ಸುಪರ್ಣಾ" ಎಂಬೀ ಋಕ್ಕಿನಲ್ಲಿ ಈಶ್ವರಕ್ಷೇತ್ರಜ್ಞರನ್ನು ಹೇಳಿದೆ ಎಂದು ತಿಳಿಸಲಾಗಿದೆ. ಯಾವಾಗ ಪೈಂಗ್ಯುಪನಿಷತ್ತಿನಲ್ಲಿ ಮಾಡಿರುವ ವ್ಯಾಖ್ಯಾನದಂತೆ ಈ ಋಕ್ಕಿನಲ್ಲಿ ಸತ್ತ್ವಕ್ಷೇತ್ರಜ್ಞರನ್ನು ಹೇಳಿದೆ (ಎಂದು ಹಿಡಿಯುತ್ತೇವೋ) ಆಗಲೂ ಯಾವ ವಿರೋಧವೂ ಇರುವದಿಲ್ಲ. ಹೇಗೆಂದರೆ ಸತ್ತ್ವವೇ ಮುಂತಾ ದವುಗಳ ಅಭಿಮಾನಿಯಾಗಿರುವದರಿಂದ ಗಡಿಗೆಯೇ ಮುಂತಾದವುಗಳ ಬಯಲಿ ನಂತೆ ಒಂದೊಂದು ಶರೀರಕ್ಕೂ (ಬೇರೆಬೇರೆಯಾಗಿ) ಕಾಣುವ ಪ್ರಾಣಭೃತ್ತನ್ನಲ್ಲ

---

1. ಜೀವನೇ ಆಯತನವೆಂದರೆ ಈಶ್ವರನನ್ನು ಆಕಸ್ಮಿಕವಾಗಿ ಹೇಳಿದಂತೆ ಆಗು ತ್ತದೆ; ಅದು ಸರಿಯಲ್ಲ. ಈಶ್ವರನೇ ಆಯತನವೆಂದರೆ ಪ್ರಕೃತವಾಗಿರುವ ಈಶ್ವರ ನನ್ನೇ ಇಲ್ಲಿಯೂ ಹೇಳಿದಂತೆ ಆಗುತ್ತದೆ. ಜೀವನು ಪ್ರಕೃತನಲ್ಲದಿದ್ದರೂ ಲೋಕಪ್ರಸಿದ್ಧ ನಾಗಿರುವದರಿಂದ ಜೀವಸ್ವರೂಪವನ್ನು ಅನುವಾದಮಾಡಿಕೊಂಡು ಈಶ್ವರಸ್ವರೂಪವನ್ನು ಹೇಳಿದ್ದು ಯುಕ್ತವಾಗುತ್ತದೆ.

ವೆ, ಈ (ಸೂತ್ರ)ದಲ್ಲಿ ದ್ಯುಭ್ವಾದ್ಯಾಯತನವಾಗಲಾರನು ಎಂದು ಅಲ್ಲಗಳೆದಿರುವದು ? ಆದರೆ ಯಾವನು ಶರೀರಗಳಲ್ಲೆಲ್ಲ ಉಪಾಧಿಗಳನ್ನು ಬಿಟ್ಟು ಕಾಣಬರುವನೋ ಅವನು ಪರಮಾತ್ಮನೇ ಆಗಿರುತ್ತಾನೆ. ಹೇಗೆ ಗಡಿಗೆಯೇ ಮುಂತಾದ ಉಪಾಧಿಗಳನ್ನು ಬಿಟ್ಟು ಕಾಣುವ ಗಡಿಗೆಯೇ ಮುಂತಾದ ಬಯಲುಗಳು ಮಹಾಕಾಶವೇ ಆಗಿರುವವೋ ಹಾಗೆ. (ಆ ಪಕ್ಷದಲ್ಲಿ) ಪ್ರಾಣಭೃತ್ತು ಪರ( ಮಾತ್ಮ )ನಿಗಿಂತ ಬೇರೆಯಾಗಿರುವನೆಂಬುದೇ ಹೊಂದುವದಿಲ್ಲವಾದ್ದರಿಂದ (ಆಗ ಅವನನ್ನು) ಅಲ್ಲಗಳೆಯುವದೇ ಆಗುವದಿಲ್ಲ. ಆದ್ದರಿಂದ ಸತ್ತ್ವವೇ ಮುಂತಾದ ಉಪಾಧಿಗಳಲ್ಲಿ ಅಭಿಮಾನವಿರುವ (ಜೀವನನ್ನೇ) ದ್ಯುಭ್ವಾದ್ಯಾಯತನವಲ್ಲವೆಂದು (ಸೂತ್ರದಲ್ಲಿ) ಅಲ್ಲಗಳೆದಿರುವದು.

## ಈ ಅಧಿಕರಣದ ನ್ಯಾಯವು ಅದೃಶ್ಯತ್ವಾಧಿಕರಣದಲ್ಲಿ ಅಡಕವಾಗಿದೆ

( ಭಾಷ್ಯ )

೨೩೩. ತಸ್ಮಾತ್ ಪರಮೇವ ಬ್ರಹ್ಮ ದ್ಯುಭ್ವಾದ್ಯಾಯತನಮ್ । ತದೇತತ್ "ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ"(೧–೨–೨೧) ಇತ್ಯನೇನೈವ ಸಿದ್ಧಮ್ । ತಸ್ಯೈವ ಹಿ ಭೂತಯೋನಿವಾಕ್ಯಸ್ಯ ಮಧ್ಯೇ ಇದಂ ಪಠಿತಮ್ "ಯಸ್ಮಿನ್ ದ್ಯೌಃ ಪೃಥಿವೀ ಚಾನ್ತರಿಕ್ಷಮ್" ಇತಿ । ಪ್ರಪಞ್ಚಾರ್ಥಂ ತು ಪುನರುಪನ್ಯಸ್ತಮ್ ॥

(ಭಾಷ್ಯಾರ್ಥ)

ಆದ್ದರಿಂದ (ಈ) ದ್ಯುಭ್ವಾದ್ಯಾಯತನವು ಪರಬ್ರಹ್ಮವೇ. ಆ ಇದು "ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ" (೧–೨–೧೧) ಎಂಬೀ (ಅಧಿಕರಣ) ದಿಂದಲೇ ಸಿದ್ಧವಾಗಿರುತ್ತದೆ. ಅದೇ ಭೂತಯೋನಿವಾಕ್ಯದ ನಡುವೆಯಲ್ಲವೆ, ಈ "ಯಸ್ಮಿನ್ ದ್ಯೌಃ ಪೃಥಿವೀ ಚಾನ್ತರಿಕ್ಷಮ್" ಎಂಬ ವಾಕ್ಯವನ್ನು ಹೇಳಿರುತ್ತದೆ ? ಆದರೆ (ಅದನ್ನೇ) ವಿವರಿಸಿ (ತಿಳಿಸು)ವದಕ್ಕಾಗಿ (ಇಲ್ಲಿ) ಮತ್ತೆ (ಅದನ್ನೇ) ಹೇಳಿದೆ.

## ೨. ಭೂಮಾಧಿಕರಣ (೮–೯)

( ಛಾಂದೋಗ್ಯ ೭–೨೪–೧ರಲ್ಲಿರುವ ಭೂಮವು ಬ್ರಹ್ಮ )

**ಭೂಮಾ ಸಂಪ್ರಸಾದಾದಧ್ಯುಪದೇಶಾತ್ ॥ ೮ ॥**

೮. ಭೂಮವು (ಬ್ರಹ್ಮವೇ) ; ಏಕೆಂದರೆ ಸಂಪ್ರಸಾದನಿಗಿಂತ ಮುಂದೆ (ಇವನನ್ನು) ಹೇಳಿರುತ್ತದೆ.

## ವಿಷಯವೂ ಸಂಶಯವೂ

( ಭಾಷ್ಯ )

೨೩೪. ಇದಂ ಸಮಾಮನನ್ತಿ– "ಭೂಮಾ ತ್ವೇವ ವಿಜಿಜ್ಞಾಸಿತವ್ಯ ಇತಿ ಭೂಮಾನಂ ಭಗವೋ ವಿಜಿಜ್ಞಾಸ ಇತಿ ।" (ಛಾಂ. ೭–೨೩–೧) ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾಽಥ ಯತ್ರಾನ್ಯತ್ ಪಶ್ಯತ್ಯನ್ಯಚ್ಛೃಣೋತ್ಯನ್ಯದ್ ವಿಜಾನಾತಿ ತದಲ್ಪಮ್" (ಛಾಂ. ೭–೨೪–೧) ಇತ್ಯಾದಿ । ತತ್ರ ಸಂಶಯಃ । ಕಿಂ ಪ್ರಾಣೋ ಭೂಮಾ ಸ್ಯಾತ್, ಆಹೋಸ್ವಿತ್ ಪರಮಾತ್ಮಾ ? ಇತಿ ॥

( ಭಾಷ್ಯಾರ್ಥ )

ಈ (ವಾಕ್ಯವನ್ನು ಛಾಂದೋಗ್ಯದಲ್ಲಿ) ಪಠಿಸುತ್ತಾರೆ : "ಆದರೆ ಭೂಮವನ್ನೇ ವಿಜಿಜ್ಞಾಸೆಮಾಡಬೇಕು. ಪೂಜ್ಯನೆ, ಭೂಮವನ್ನು ಅರಿಯಬೇಕೆನ್ನುವೆನು" (ಛಾಂ ೭–೨೩–೧) "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ ಮತ್ತೊಂದನ್ನು ಕೇಳುವದಿಲ್ಲವೋ ಮತ್ತೊಂದನ್ನು ಅರಿಯುವದಿಲ್ಲವೋ ಅದು ಭೂಮವು ; ಇನ್ನು ಎಲ್ಲಿ ಮತ್ತೊಂದನ್ನು ಕಾಣುವನೋ ಮತ್ತೊಂದನ್ನು ಕೇಳುವನೋ ಮತ್ತೊಂದನ್ನು ಅರಿಯುವನೋ ಅದು ಅಲ್ಪವು" (ಛಾಂ. ೭–೨೪–೧) ಇತ್ಯಾದಿ. ಇಲ್ಲಿ ಸಂಶಯವೇನೆಂದರೆ ಭೂಮವೆಂದರೆ ಪ್ರಾಣವಾಗಿರಬಹುದೆ?, ಅಥವಾ ಪರಮಾತ್ಮನೆ ?[1]

## ಸಂಶಯಕ್ಕೆ ಕಾರಣ

( ಭಾಷ್ಯ )

೨೩೫. ಕುತಃ ಸಂಶಯಃ ? 'ಭೂಮಾ ಇತಿ ತಾವದ್ ಬಹುತ್ವಮ್ ಅಭಿಧೀಯತೇ । "ಬಹೋರ್ಲೋಪೋ ಭೂ ಚ ಬಹೋಃ".(ಪಾ. ೬–೪–೧೫೮) ಇತಿ ಭೂಮಶಬ್ದಸ್ಯ ಭಾವಪ್ರತ್ಯಯಾನ್ತತಾಸ್ಮರಣಾತ್ । ಕಿಮಾತ್ಮಕಂ ಪುನಸ್ತದ್ ಬಹುತ್ವಮ್?–ಇತಿ ವಿಶೇಷಾಕಾಙ್ಕ್ಷಾಯಾಂ "ಪ್ರಾಣೋ ವಾ ಆಶಾಯಾ ಭೂಯಾನ್" (ಛಾಂ. ೭–೧೫–೧) ಇತಿ ಸಂನಿಧಾನಾತ್ ಪ್ರಾಣೋ ಭೂಮಾ ಇತಿ ಪ್ರತಿಭಾತಿ । ತಥಾ ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ ಸೋಽಹಂ ಭಗವಃ ಶೋಚಾಮಿ ತಂ ಮಾ ಭಗವಾಞ್ಛೋಕಸ್ಯ ಪಾರಂ ತಾರಯತು" (ಛಾಂ. ೭–೧–೩) ಇತಿ ಪ್ರಕರಣೋತ್ಥಾನಾತ್ ಪರ

1. ಪ್ರಾಣವನ್ನು ಉಪಾಸನೆಗಾಗಿ ಭೂಮವೆಂದು ಕರೆದಿದೆಯೇ ? ಪರಮಾತ್ಮನನ್ನು ಹಾಗೆಂದು ಅರಿತುಕೊಳ್ಳಬೇಕೆಂದು ತಿಳಿಸಿದೆಯೆ ?

ಮಾತ್ಮಾ ಭೂಮಾ ಇತ್ಯಪಿ ಪ್ರತಿಭಾತಿ। ತತ್ರ ಕಸ್ಯ ಉಪಾದಾನಂ ನ್ಯಾಯ್ಯಮ್, ಕಸ್ಯ ವಾ ಹಾನಮ್ ? ಇತಿ ಭವತಿ ಸಂಶಯಃ ॥

(ಭಾಷ್ಯಾರ್ಥ)

(ಇಲ್ಲಿ) ಸಂಶಯವೇಕೆ ? ಎಂದರೆ ಮೊದಲನೆಯದಾಗಿ 'ಭೂಮಾ' ಎಂಬುದು ಬಹುತ್ವವನ್ನು ಹೇಳುತ್ತದೆ. ಏಕೆಂದರೆ "ಬಹೋರ್ಲೋಪೋ ಭೂ ಚ ಬಹೋಃ" (ಬಹು ಎಂಬ ಶಬ್ದಕ್ಕೆ ಭಾವಾರ್ಥದಲ್ಲಿ ಬರುವ 'ಇಮನಿಚ್' ಇಮನ್ ಪ್ರತ್ಯಯಕ್ಕೆ ಇಕಾರವು ಲೋಪವಾಗುತ್ತದೆ, ಬಹು ಎಂಬ ಶಬ್ದಕ್ಕೆ ಭೂ ಎಂಬಾದೇಶವು ಬರುತ್ತದೆ). (ಪಾ. ೬-೪-೧೫೮) ಎಂಬ (ಸೂತ್ರದಲ್ಲಿ) ಭೂಮಶಬ್ದವು ಭಾವಪ್ರತ್ಯಯಾಂತವಾಗಿದೆ ಎಂದು (ವ್ಯಾಕರಣ)ಸ್ಮೃತಿಯಿದೆ. ಹಾಗಾದರೆ ಆ ಬಹುತ್ವವು ಯಾವ ರೂಪವಾದದ್ದು ?- ಎಂದು ವಿಶೇಷದ ಆಕಾಂಕ್ಷೆಯು ಉಂಟಾಗಲಾಗಿ "ಪ್ರಾಣವೇ ಆಶೆಗಿಂತ ದೊಡ್ಡದು" (ಛಾಂ. ೭-೧೫-೧) ಎಂಬ ಸಂನಿಧಾನ(ದಲ್ಲಿರುವ ವಾಕ್ಯದಿಂದ) **ಪ್ರಾಣನೇ** ಭೂಮವೆಂದು ತೋರುತ್ತದೆ. ಇದರಂತೆ "ಆತ್ಮಜ್ಞಾನಿಯು ಶೋಕವನ್ನು ದಾಟುತ್ತಾನೆ ಎಂದು ತಮ್ಮಂಥವರಿಂದ ಕೇಳಿರುತ್ತೇನೆ, ಅಷ್ಟೆ. ಪೂಜ್ಯರೆ, ಆ ನಾನು ಶೋಕಿಸುತ್ತಿದ್ದೇನೆ; ಆ ನನ್ನನ್ನು ತಾವು ಶೋಕದ ಪಾರವನ್ನು ಮುಟ್ಟಿಸಬೇಕು" (ಛಾಂ. ೭-೧-೩) ಎಂದು ಪ್ರಕರಣವು ಹುಟ್ಟಿರುವದರಿಂದ ಪರಮಾತ್ಮನೇ ಭೂಮವೆಂದೂ ತೋರುತ್ತದೆ. ಇಲ್ಲಿ ಯಾವದನ್ನು ತೆಗೆದುಕೊಳ್ಳುವದು ಯುಕ್ತ, ಯಾವದನ್ನು ಬಿಡುವದು (ಯುಕ್ತ)?- ಎಂದು ಸಂಶಯವಾಗುತ್ತದೆ.

## ಪೂರ್ವಪಕ್ಷ: ಪ್ರಾಣವಿಚಾರವು ನಡೆದಿರುವದರಿಂದ ಪ್ರಾಣನೇ ಭೂಮಾ

(ಭಾಷ್ಯ)

೨೨೬. ಕಿಂ ತಾವತ್ ಪ್ರಾಪ್ತಮ್ ? ಪ್ರಾಣೋ ಭೂಮಾ ಇತಿ। ಕಸ್ಮಾತ್ ? ಭೂಯಃಪ್ರಶ್ನಪ್ರತಿವಚನಪರಂಪರಾದರ್ಶನಾತ್। ಯಥಾ ಹಿ "ಅಸ್ತಿ ಭಗವೋ ನಾಮ್ನೋ ಭೂಯಃ (ಛಾಂ. ೭-೧-೫) ಇತಿ "ವಾಗ್ವಾವ ನಾಮ್ನೋ ಭೂಯಸೀ" (ಛಾಂ. ೭-೨-೧) ಇತಿ। ತಥಾ "ಅಸ್ತಿ ಭಗವೋ ವಾಚೋ ಭೂಯಃ" (ಛಾಂ. ೭-೨-೨) ಇತಿ "ಮನೋ ವಾವ ವಾಚೋ ಭೂಯಃ" (ಛಾಂ. ೭-೩-೧) ಇತಿ ಚ ನಾಮಾದಿಭ್ಯೋ ಹಿ ಆಪ್ರಾಣಾದ್ ಭೂಯಃ ಪ್ರಶ್ನಪ್ರತಿವಚನಪ್ರವಾಹಃ ಪ್ರವೃತ್ತಃ। ನೈವಂ ಪ್ರಾಣಾತ್ ಪರಂ ಭೂಯಃ ಪ್ರಶ್ನಪ್ರತಿವಚನಂ ದೃಶ್ಯತೇ 'ಅಸ್ತಿ ಭಗವಃ ಪ್ರಾಣಾದ್ ಭೂಯಃ' ಇತಿ 'ಅಮೋ ವಾವ ಪ್ರಾಣಾದ್ ಭೂಯಃ' ಇತಿ। ಪ್ರಾಣಮೇವ ತು ನಾಮಾ

ದಿಭ್ಯ ಆಶಾಸ್ತೇಭ್ಯೋ ಭೂಯಾಂಸಂ "ಪ್ರಾಣೋ ವಾ ಆಶಾಯಾ ಭೂಯಾನ್" (ಛಾಂ. ೭-೧೫-೧) ಇತ್ಯಾದಿನಾ ಸಪ್ರಪಞ್ಚಮ್ ಉಕ್ತ್ವಾ ಪ್ರಾಣದರ್ಶಿನಶ್ಚ ಅತಿವಾದಿತ್ವಮ್ "ಅತಿವಾದ್ಯಸ್ಮೀತ್ಯತಿವಾದ್ಯಸೀತಿ ಬ್ರೂಯಾನ್ನಾಪಹ್ನುವೀತ" (ಛಾಂ. ೭-೧೫-೪) ಇತಿ ಅಭ್ಯನುಜ್ಞಾಯ "ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ'' (ಛಾಂ. ೭-೧೬-೧) ಇತಿ ಪ್ರಾಣವ್ರತಮತಿವಾದಿತ್ವಮ್ ಅನುಕೃಷ್ಯ ಅಪರಿತ್ಯಜ್ಯೈವ ಪ್ರಾಣಂ ಸತ್ಯಾದಿ ಪರಮ್ಪರಯಾ ಭೂಮಾನಮ್ ಅವತಾರಯನ್ ಪ್ರಾಣಮೇವ ಭೂಮಾನಂ ಮನ್ಯತೇ ಇತಿ ಗಮ್ಯತೇ ॥

( ಭಾಷ್ಯಾರ್ಥ )

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? ಪ್ರಾಣನೇ[1] ಭೂಮನು ಎಂದು. ಏಕೆ ? ಎಂದರೆ ಹೆಚ್ಚಿನ (ವಿಷಯದ) ಪ್ರಶ್ನೋತ್ತರಪರಂಪರೆಯು ಕಂಡುಬರುವದರಿಂದ. ಹೇಗೆ "ಪೂಜ್ಯರೆ, ನಾಮಕ್ಕಿಂತ ಹೆಚ್ಚಿನದು ಇದೆಯೆ?" (ಛಾಂ. ೭-೨-೫), ''ವಾಕ್ಕೇ ನಾಮಕ್ಕಿಂತ ಹೆಚ್ಚಿನದು" (ಛಾಂ. ೭-೨-೧) ಎಂದೂ ಮತ್ತು "ಪೂಜ್ಯರೆ, ವಾಕ್ಕಿಗಿಂತ ಹೆಚ್ಚಿನದು ಇದೆಯೆ?" (ಛಾಂ. ೭-೨-೨), "ಮನಸ್ಸೇ ವಾಕ್ಕಿಗಿಂತ ಹಚ್ಚಿನದು" (ಛಾಂ. ೭-೩-೧) ಎಂದೂ ನಾಮಾದಿಗಳಿಗಿಂತ ಹೆಚ್ಚಿನ (ವಿಷಯದ) ಪ್ರಶ್ನೋತ್ತರ ಪ್ರವಾಹವು ಪ್ರಾಣನವರೆಗೂ ಬಂದಿರುತ್ತದೆ. ಹೀಗೆ ಪ್ರಾಣನಿಗಿಂತ ಮುಂದೆ ''ಪೂಜ್ಯರೆ, ಪ್ರಾಣನಿಗಿಂತ ಹೆಚ್ಚಿನದು ಯಾವದು?" ಎಂದು '' ಇಂಥದ್ದೇ ಪ್ರಾಣನಿಗಿಂತ ಹೆಚ್ಚಿನದು '' ಎಂದು ಹೆಚ್ಚಿನ (ವಿಷಯದ) ಪ್ರಶ್ನೋತ್ತರವಿರುವದಿಲ್ಲ. ಆದರೆ ನಾಮದಿಂದ ಹಿಡಿದು ಆಶೆಯವರೆಗಿನ (ವಸ್ತುಗಳೆಲ್ಲ)ಕ್ಕಿಂತಲೂ ಪ್ರಾಣನೇ ಹೆಚ್ಚಿನವನೆಂದು "ಪ್ರಾಣನೇ ಆಶೆಗಿಂತ ಹೆಚ್ಚಿನವನು'' (ಛಾಂ. ೭-೧೫-೧) ಎಂದು ಮುಂತಾಗಿರುವ (ವಾಕ್ಯ)ದಿಂದ ವಿಸ್ತಾರವಾಗಿ ತಿಳಿಸಿ ಪ್ರಾಣದರ್ಶಿಯು ಅತಿವಾದಿಯೆಂಬುದನ್ನು[2] "ಅತಿವಾದಿಯಾಗಿರುವೆ ಎಂದು (ಅವ)ರೆಂದರೆ, ಅತಿವಾದಿಯಾಗಿರುವೆನು ಎಂದು ಹೇಳಬೇಕು, ಇಲ್ಲವೆನ್ನಬಾರದು'' (ಛಾಂ.೭-೧೫-೪) ಎಂದು ಒಪ್ಪಿಕೊಂಡು "ಆದರೆ ಯಾವನು ಸತ್ಯದಿಂದ ಅತಿವಾದವನ್ನು ಮಾಡುವನೋ ಅವನೇ ಅತಿವಾದಿಯು" (ಛಾಂ. ೭-೧೬-೧) ಎಂದು ಪ್ರಾಣವ್ರತವಾದ ಅತಿವಾದಿತ್ವವನ್ನು ಹಿಡಿದೆಳೆದು

---

1. ಸೂತ್ರಾತ್ಮನೇ.

2. ಎಲ್ಲಕ್ಕೂ ಮಿಗಿಲಾದ ತತ್ತ್ವವನ್ನವಲಂಬಿಸಿರುವನು ಎಂಬುದನ್ನು. ನಾಮಾದಿಗಳೆಲ್ಲವನ್ನೂ ಅತಿಕ್ರಮಿಸಿರುವ ಪ್ರಾಣಾತ್ಮನು ನಾನು ಎಂದು ಹೇಳುವವನೇ ಅತಿವಾದಿಯು ಎಂದು ಪೂರ್ವಪಕ್ಷಿಯ ಅಭಿಪ್ರಾಯ.

ಕೊಂಡು,[1] ಪ್ರಾಣನನ್ನು ಬಿಡದೆಯೇ ಸತ್ಯಾದಿಗಳ ಪರಂಪರೆಯಿಂದ ಭೂಮದ ಅವತರಣಿಕೆಯನ್ನು ಮಾಡಿರುವದರಿಂದ ಪ್ರಾಣನೇ ಭೂಮವೆಂದು (ಸನತ್ಕುಮಾರನು) ಅಭಿಪ್ರಾಯಪಟ್ಟಿರುತ್ತಾನೆ- ಎಂದು ನಿಶ್ಚಯವಾಗುತ್ತದೆ.

## ಭೂಮದ ಲಕ್ಷಣವೇ ಮುಂತಾದವು ಪ್ರಾಣನಿಗೂ ಹೊಂದುತ್ತವೆ

(ಭಾಷ್ಯ)

೨೩೭ ಕಥಂ ಪುನಃ ಪ್ರಾಣೇ ಭೂಮನಿ ವ್ಯಾಖ್ಯಾಯಮಾನೇ "ಯತ್ರ ನಾನ್ಯತ್ ಪಶ್ಯತಿ" (ಛಾಂ. ೭-೨೪-೧) ಇತ್ಯೇತದ್ ಭೂಮ್ನೋ ಲಕ್ಷಣಪರಂ ವಚನಂ ವ್ಯಾಖ್ಯಾಯೇತೇತಿ । ಉಚ್ಯತೇ ? ಸುಷುಪ್ತ್ಯವಸ್ಥಾಯಾಂ ಪ್ರಾಣಗ್ರಸ್ತೇಷು ಕರಣೇಷು ದರ್ಶನಾದಿವ್ಯವಹಾರನಿವೃತ್ತಿದರ್ಶನಾತ್ ಸಂಭವತಿ ಪ್ರಾಣಸ್ಯಾಪಿ "ಯತ್ರ ನಾನ್ಯತ್ ಪಶ್ಯತಿ" ಇತ್ಯೇತಲ್ಲಕ್ಷಣಮ್ । ತಥಾ ಚ ಶ್ರುತಿಃ "ನ ಶೃಣೋತಿ ನ ಪಶ್ಯತಿ" (ಪ್ರ. ೪-೨) ಇತ್ಯಾದಿನಾ ಸರ್ವಕರಣವ್ಯಾಪಾರಪ್ರತ್ಯಸ್ತಮಯರೂಪಾಂ ಸುಷುಪ್ತ್ಯವಸ್ಥಾಮ್ ಉಕ್ತ್ವಾ "ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ" (ಪ್ರ. ೪-೩) ಇತಿ ತಸ್ಯಾಮೇವ ಅವಸ್ಥಾಯಾಂ ಪಞ್ಚವೃತ್ತೇಃ ಪ್ರಾಣಸ್ಯ ಜಾಗರಣಂ ಬ್ರುವತೀ ಪ್ರಾಣಪ್ರಧಾನಾಂ ಸುಷುಪ್ತ್ಯವಸ್ಥಾಂ ದರ್ಶಯತಿ । ಯಚ್ಚೈತದ್ ಭೂಮ್ನಃ ಸುಖತ್ವಂ ಶ್ರುತಮ್- "ಯೋ ವೈ ಭೂಮಾ ತತ್ ಸುಖಮ್" (ಛಾಂ. ೭-೨೩-೧) ಇತಿ, ತದಪಿ ಅವಿರುದ್ಧಮ್ । "ಅತ್ರೈಷ ದೇವಃ ಸ್ವಪ್ನಾನ್ನ ಪಶ್ಯತ್ಯಥ ಯದೇತಸ್ಮಿಞ್ಛರೀರೇ ಸುಖಂ ಭವತಿ" (ಪ್ರ. ೪-೬) ಇತಿ ಸುಷುಪ್ತ್ಯವಸ್ಥಾಯಾಮೇವ ಸುಖಶ್ರವಣಾತ್ । ಯಚ್ಚ "ಯೋ ವೈ ಭೂಮಾ ತದಮೃತಮ್" (ಛಾಂ. ೭-೨೪-೧) ಇತಿ । ತದಪಿ ಪ್ರಾಣಸ್ಯ ಅವಿರುದ್ಧಮ್। "ಪ್ರಾಣೋ ವಾ ಅಮೃತಮ್" (ಕೌ. ೩-೨) ಇತಿ ಶ್ರುತೇಃ ॥ ಕಥಂ ಪುನಃ ಪ್ರಾಣಂ ಭೂಮಾನಂ ಮನ್ಯಮಾನಸ್ಯ "ತರತಿ ಶೋಕಮಾತ್ಮವಿತ್" (ಛಾಂ. ೭-೧-೩) ಇತ್ಯಾತ್ಮವಿವಿದಿಷಯಾ ಪ್ರಕರಣಸ್ಯ ಉತ್ಥಾನಮ್ ಉಪಪದ್ಯತೇ? ಪ್ರಾಣ ಏವೇಹ ಆತ್ಮಾ ವಿವಕ್ಷಿತಃ ಇತಿ ಬ್ರೂಮಃ । ತಥಾ ಹಿ । "ಪ್ರಾಣೋ ಹ ಪಿತಾ ಪ್ರಾಣೋ ಮಾತಾ ಪ್ರಾಣೋ ಭ್ರಾತಾ ಪ್ರಾಣಃ ಸ್ವಸಾ ಪ್ರಾಣ

---

1. ಪ್ರಾಣವಾದಿಯು ಅತಿವಾದಿಯೆಂದು ಹಿಂದೆ ಹೇಳಿದೆಯಷ್ಟೆ ; ಆ ಅತಿವಾದಿತ್ವವನ್ನು ಮಾತ್ರವಲ್ಲವೆ ಮುಂದೆ ಹೇಳುವ ಸತ್ಯಾದಿಗಳನ್ನೂ ಪ್ರಾಣೋಪಾಸಕನು ಇಟ್ಟುಕೊಳ್ಳಬೇಕು ಎಂಬುದನ್ನು ತಿಳಿಸುವವಕ್ಕೋಸ್ಕರ ಹಿಂದೆ ಹೇಳಿದ ಅತಿವಾದಿತ್ವವನ್ನೂ ಸೇರಿಸಿಕೊಂಡೇ ಶ್ರುತಿಯು ಹೊರಟಿರುತ್ತದೆ ಎಂದು ಭಾವ.

ಆಚಾರ್ಯಃ ಪ್ರಾಣೋ ಬ್ರಾಹ್ಮಣಃ" (ಛಾಂ. ೭–೧೫–೧) ಇತಿ ಪ್ರಾಣಮೇವ ಸರ್ವಾತ್ಮಾನಂ ಕರೋತಿ । "ಯಥಾ ವಾ ಅರಾ ನಾಭೌ ಸಮರ್ಪಿತಾ ಏವ ಮಸ್ಮಿನ್ ಪ್ರಾಣೇ ಸರ್ವಂ ಸಮರ್ಪಿತಮ್" (ಛಾಂ. ೭–೧೫–೧) ಇತಿ ಚ ಸರ್ವಾತ್ಮತ್ವಾರನಾಭಿನಿದರ್ಶನಾಭ್ಯಾಂ ಚ ಸಂಭವತಿ ವೈಪುಲ್ಯಾತ್ಮಿಕಾ ಭೂಮ ರೂಪತಾ ಪ್ರಾಣಸ್ಯ । ತಸ್ಮಾತ್ ಪ್ರಾಣೋ ಭೂಮಾ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :– ಪ್ರಾಣನೇ ಭೂಮವೆಂದು ವ್ಯಾಖ್ಯಾನಮಾಡುವದಾದರೆ ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ" (ಛಾಂ. ೭–೨೩–೧) ಎಂಬೀ ಭೂಮದ ಲಕ್ಷಣಪರವಾಗಿರುವ ವಚನಕ್ಕೆ ಹೇಗೆ ವ್ಯಾಖ್ಯಾನಮಾಡಬೇಕು ?

(ಪರಿಹಾರ):– ಹೇಳುತ್ತೇವೆ. ಸುಷುಪ್ತಾವಸ್ಥೆಯಲ್ಲಿ ಕರಣಗಳು ಪ್ರಾಣ ಗ್ರಸ್ತವಾಗಲಾಗಿ ನೋಟವೇ ಮುಂತಾದ ವ್ಯವಹಾರವು ತೊಲಗುವದು ಕಂಡು ಬಂದಿರುವದರಿಂದ ಪ್ರಾಣನಿಗೂ "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ" ಎಂಬೀ ಲಕ್ಷಣವು ಆಗಬಹುದು ಆದ್ದರಿಂದಲೇ ಶ್ರುತಿಯು "(ಆಗ ಈ ಪುರುಷನು) ನೋಡುವದಿಲ್ಲ, ಕೇಳುವದಿಲ್ಲ" (ಪ್ರ. ೪-೨) ಎಂದು ಮುಂತಾಗಿ ರುವ (ವಾಕ್ಯ)ದಿಂದ ಎಲ್ಲಾ ಕರಣವ್ಯಾಪಾರಗಳ ಪ್ರತ್ಯಸ್ತಮಯರೂಪವಾಗಿರುವ ಸುಷುಪ್ತ್ಯವಸ್ಥೆಯನ್ನು ಹೇಳಿ "ಈ ಪುರವಲ್ಲಿ ಪ್ರಾಣಾಗ್ನಿಗಳೇ ಎಚ್ಚರವಾಗಿರುತ್ತವೆ" (ಪ್ರ. ೪–೩) ಎಂದು ಅದೇ ಅವಸ್ಥೆಯಲ್ಲಿ ಐದು ವೃತ್ತಿಗಳ ಪ್ರಾಣವು ಎಚ್ಚೆತ್ತಿರುವದೆಂದು ಹೇಳಿರುವದರಿಂದ ಸುಷುಪ್ತ್ಯವಸ್ಥೆಯು ಪ್ರಾಣಪ್ರಧಾನ ವಾಗಿರುತ್ತದೆ ಎಂದು ತಿಳಿಸುತ್ತದೆ.

ಇನ್ನು "ಯಾವದು ಭೂಮವೋ ಅದೇ ಸುಖವು" (ಛಾಂ. ೭–೨೩–೧) ಎಂದು ಭೂಮವು ಸುಖವೆಂದು ಶ್ರುತಿಯಲ್ಲಿದೆಯಲ್ಲ, ಅದೂ ವಿರುದ್ಧವಲ್ಲ. ಏಕೆಂದರೆ "ಇಲ್ಲಿ ಈ ದೇವನು ಕನಸುಗಳನ್ನು ಕಾಣುವದಿಲ್ಲ ; ಆಗ ಈ ಶರೀರ ದಲ್ಲಿರುವ ಈ ಸುಖವಾಗುವದು" (ಪ್ರ. ೪–೬) ಎಂದು ಸುಷುಪ್ತ್ಯವಸ್ಥೆಯಲ್ಲಿ ಯೇ ಸುಖವಿರುವದೆಂದು ಶ್ರುತಿಯಲ್ಲಿ ಹೇಳಿದೆ ಇನ್ನು ಯಾವದು ಭೂಮವೋ ಅದೇ ಅಮೃತವು" (ಛಾಂ. ೭–೨೪–೧) ಎಂದಿದೆಯಲ್ಲ, ಅದೂ ಪ್ರಾಣನಿಗೆ ವಿರುದ್ಧವಲ್ಲ ; ಏಕೆಂದರೆ 'ಪ್ರಾಣನೇ ಅಮೃತವು' (ಕೌ. ೩–೨) ಎಂಬ ಶ್ರುತಿಯಿದೆ.

(ಆಕ್ಷೇಪ):– ಇನ್ನು ಪ್ರಾಣನೇ ಭೂಮವೆಂಬ ಮತವುಳ್ಳ (ನಿನಗೆ) "ಆತ್ಮನನ್ನು ಅರಿತವನು ಶೋಕವನ್ನು ದಾಟುತ್ತಾನೆ" (ಛಾಂ. ೭–೧–೩) ಎಂದು ಆತ್ಮನನ್ನು ಅರಿಯಬೇಕೆಂಬ ಇಚ್ಛೆಯನ್ನು (ತಿಳಿಸುವ)ದರಿಂದ ಪ್ರಕರಣ ವನ್ನು ಪ್ರಾರಂಭಿಸಿರುವದು ಹೇಗೆ ಹೊಂದುತ್ತದೆ?

(ಪರಿಹಾರ):- ಇಲ್ಲಿ ಪ್ರಾಣನನ್ನೇ ಆತ್ಮನೆಂದು ಹೇಳುವದಕ್ಕೆ ಹೊರಟಿದೆ ಎನ್ನುತ್ತೇವೆ. ಹೇಗೆಂದರೆ, ಪ್ರಾಣನೇ ತಂದೆ, ಪ್ರಾಣನೇ ತಾಯಿ, ಪ್ರಾಣನೇ ಒಡಹುಟ್ಟಿದವ, ಪ್ರಾಣನೇ ಒಡಹುಟ್ಟಿದವಳು, ಪ್ರಾಣನೇ ಆಚಾರ್ಯನು, ಪ್ರಾಣನೇ ಬ್ರಾಹ್ಮಣನು" (ಛಾಂ. ೭-೧೫-೧) ಎಂದು (ಶ್ರುತಿಯು) ಪ್ರಾಣನನ್ನೇ ಸರ್ವಾತ್ಮನನ್ನಾಗಿ ಮಾಡಿದೆ. "ಹೇಗೆ ಹಾರೆಕೋಲುಗಳು ಗುಂಬದಲ್ಲಿ ಸೇರಿಕೊಂಡಿರುತ್ತವೆಯೋ ಹಾಗೆ ಎಲ್ಲವೂ ಈ ಪ್ರಾಣನಲ್ಲಿ ನೇರಿಕೊಂಡಿರುತ್ತದೆ'' (ಛಾಂ. ೭-೧೫-೧) ಎಂದು ಸರ್ವಾತ್ಮತ್ವವನ್ನೂ ಅರನಾಭಿದೃಷ್ಟಾಂತವನ್ನೂ (ಕೊಟ್ಟಿರು)ವದರಿಂದ ಪ್ರಾಣನಿಗೆ ವಿಪುಲತ್ವರೂಪವಾದ ಭೂಮಗುಣತ್ವವು ಹೊಂದುವಹಾಗಿದೆ. ಆದ್ದರಿಂದ ಭೂಮವು ಪ್ರಾಣನು.

## ಸಿದ್ಧಾಂತ: ಪ್ರಾಣನಿಗಿಂತ ಬೇರೆಯದಾಗಿ ಭೂಮವನ್ನು ಹೇಳಿದೆ

( ಭಾಷ್ಯ )

೨೩೮. ಏವಂ ಪ್ರಾಪ್ತಮ್ | ತತ ಇದಮುಚ್ಯತೇ | ಪರಮಾತ್ಮೈವ ಇಹ ಭೂಮಾ ಭವಿತುಮರ್ಹತಿ ನ ಪ್ರಾಣಃ| ಕಸ್ಮಾತ್ ? ಸಂಪ್ರಸಾದಾದಧ್ಯುಪದೇಶಾತ್ | ಸಂಪ್ರಸಾದಃ ಇತಿ ಸುಷುಪ್ತಂ ಸ್ಥಾನಮ್ ಉಚ್ಯತೇ | ಸಮ್ಯಕ್ ಪ್ರಸೀದತಿ ಅಸ್ಮಿನ್ ಇತಿ ನಿರ್ವಚನಾತ್ | ಬೃಹದಾರಣ್ಯಕೇ ಚ ಸ್ವಪ್ನಜಾಗರಿತಸ್ಥಾನಾಭ್ಯಾಂ ಸಹ ಪಾಠಾತ್ | ತಸ್ಯಾಂ ಚ ಸಂಪ್ರಸಾದಾವಸ್ಥಾಯಾಂ ಪ್ರಾಣೋ ಜಾಗರ್ತೀತಿ ಪ್ರಾಣೋಽತ್ರ ಸಂಪ್ರಸಾದೋಽಭಿಪ್ರೇಯತೇ | ಪ್ರಾಣಾದೂರ್ಧ್ವಂ ಭೂಮ್ನಃ ಉಪದಿಶ್ಯಮಾನತ್ವಾತ್ ಇತ್ಯರ್ಥಃ| ಪ್ರಾಣ ಏವ ಚೇದ್ ಭೂಮಾ ಸ್ಯಾತ್ ಸ ಏವ ತಸ್ಮಾದೂರ್ಧ್ವಮ್ ಉಪದಿಶ್ಯೇತ ಇತಿ ಅಶ್ಲಿಷ್ಟಮೇವ ಏತತ್ ಸ್ಯಾತ್ | ನ ಹಿ ನಾಮ್ನೈವ ನಾಮ್ನೋ ಭೂಯ ಇತಿ ನಾಮ್ನಃ ಊರ್ಧ್ವಮ್ ಉಪದಿಷ್ಟಮ್, ಕಿಂ ತರ್ಹಿ ನಾಮ್ನೋಽನ್ಯದರ್ಥಾನ್ತರಮ್ ಉಪದಿಷ್ಟಂ ವಾಗಾಖ್ಯಮ್ 'ವಾಗ್ವಾವ ನಾಮ್ನೋ ಭೂಯಸೀ' ಇತಿ | ತಥಾ ವಾಗಾದಿಭ್ಯೋಽಪಿ ಆ ಪ್ರಾಣಾತ್ ಅರ್ಥಾನ್ತರಮೇವ ತತ್ರ ತತ್ರ ಊರ್ಧ್ವಮ್ ಉಪದಿಷ್ಟಮ್ | ತದ್ವತ್ ಪ್ರಾಣಾದೂರ್ಧ್ವಮ್ ಉಪದಿಶ್ಯಮಾನೋ ಭೂಮಾ ಪ್ರಾಣಾದರ್ಥಾನ್ತರಭೂತೋ ಭವಿತುಮರ್ಹತಿ ॥

( ಭಾಷ್ಯಾರ್ಥ )

ಹೀಗೆಂದು (ಪೂರ್ವಪಕ್ಷವು) ಬಂದೊದಗುತ್ತದೆ. ಇದಕ್ಕೆ ಈ (ಸಿದ್ಧಾಂತವನ್ನು) ಹೇಳುತ್ತೇವೆ. ಇಲ್ಲಿ ಪರಮಾತ್ಮನೇ ಭೂಮವಾಗಿರಬೇಕೇ ಹೊರತು ಪ್ರಾಣನಲ್ಲ. ಏಕೆ ? ಎಂದರೆ (ಸಂಪ್ರಸಾದಾದಧ್ಯುಪದೇಶಾತ್). ಸಂಪ್ರಸಾದ

ವೆಂದರೆ ಸುಷುಪ್ತಸ್ಥಾನವು. ಏಕೆಂದರೆ ಈ (ಅವಸ್ಥೆಯಲ್ಲಿ ಜೀವನು) ಚೆನ್ನಾಗಿ ಪ್ರಸನ್ನನಾಗುತ್ತಾನೆ[1] ಎಂದು (ಈ ಶಬ್ದದ) ನಿರ್ವಚನವಾಗುತ್ತದೆ. **ಬೃಹದಾರಣ್ಯಕದಲ್ಲಿ**[2] ಸ್ವಪ್ನಜಾಗರಿತಾವಸ್ಥೆಗಳೊಡನೆ (ಇದನ್ನು) ಹೇಳಿರುತ್ತದೆಯಾದ್ದರಿಂದಲೂ (ಹೀಗೆಂದು ತಿಳಿಯಬೇಕು). ಆ ಸಂಪ್ರಸಾದಾವಸ್ಥೆಯಲ್ಲಿ ಪ್ರಾಣನು ಎಚ್ಚರವಾಗಿರುತ್ತಾನಾದ್ದರಿಂದ ಪ್ರಾಣನನ್ನೇ ಇಲ್ಲಿ ಸಂಪ್ರಸಾದನೆಂದು ಕರೆದಿದೆ (ಆದ್ದರಿಂದ ಸಂಪ್ರಸಾದಾದಧ್ಯುಪದೇಶಾತ್ ಎಂದರೆ) ಪ್ರಾಣನಾದ ಮೇಲೆ ಭೂಮವನ್ನು ಹೇಳಿರುವದರಿಂದ ಎಂದರ್ಥ. ಪ್ರಾಣನೇ ಭೂಮವಾದರೆ ಅವನನ್ನೇ ಅವನಾದಮೇಲೆ ಉಪದೇಶಿಸಿದೆ ಎಂಬಿದು ಅಯುಕ್ತವೇ ಆದೀತು. ನಾಮಕ್ಕಿಂತ ಹೆಚ್ಚಿನದು ಎಂದು ನಾಮವಾದಮೇಲೆ ನಾಮವನ್ನೇ ಹೇಳಿಲ್ಲ, ಮತ್ತೇನೆಂದರೆ ನಾಮಕ್ಕಿಂತ ಬೇರೆಯಾಗಿರುವ ವಾಕ್ಕೆಂಬ ಮತ್ತೊಂದು ಪದಾರ್ಥವನ್ನು "ವಾಕ್ಕೇ ನಾಮಕ್ಕಿಂತ ಹೆಚ್ಚಿನದು" (ಛಾಂ. ೭-೩-೧) ಎಂದು ಹೇಳಿರುತ್ತದೆ ಅಲ್ಲವೆ? ಹೀಗೆಯೇ ವಾಗಾದಿಗಳಿಗಿಂತಲೂ ಪ್ರಾಣನವರೆಗೂ (ಅವುಗಳಿಗಿಂತ) ಬೇರೆಯಾದ ಪದಾರ್ಥವನ್ನೇ ಅಲ್ಲಲ್ಲಿ (ಆಯಾ ಪದಾರ್ಥವನ್ನು ಹೇಳಿದ)ಮೇಲೆ ಹೇಳಿರುತ್ತದೆ. ಅದರಂತೆ ಪ್ರಾಣನಾದಮೇಲೆ ಹೇಳಿರುವ ಭೂಮವು ಪ್ರಾಣನಿಗಿಂತ ಬೇರೆಯಾದ ಪದಾರ್ಥವಾಗಿರಬೇಕು.

## ಹೆಚ್ಚಿನ ವಿಷಯದ ಪ್ರಶ್ನೋತ್ತರವಿಲ್ಲದ್ದು ದೋಷವಲ್ಲ

( ಭಾಷ್ಯ )

೨೩೯. ನನ್ವಿಹ ನಾಸ್ತಿ ಪ್ರಶ್ನಃ 'ಅಸ್ತಿ ಭಗವಃ ಪ್ರಾಣಾದ್ ಭೂಯಃ' ಇತಿ । ನಾಪಿ ಪ್ರತಿವಚನಮಸ್ತಿ 'ಪ್ರಾಣಾದ್ವಾವ ಭೂಯೋಽಸ್ತಿ' ಇತಿ । ಕಥಂ ಪ್ರಾಣಾದಧಿ ಭೂಮಾ ಉಪದಿಶ್ಯತೇ ಇತ್ಯುಚ್ಯತೇ ? ಪ್ರಾಣವಿಷಯಮೇವ ಚ ಅತಿವಾದಿತ್ವಮ್ ಉತ್ತರತ್ರ ಅನುಕೃಷ್ಯಮಾಣಂ ಪಶ್ಯಾಮಃ– "ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ" (ಛಾಂ. ೭-೧೬-೧) ಇತಿ। ತಸ್ಮಾತ್ ನಾಸ್ತಿ ಪ್ರಾಣಾದಧ್ಯುಪದೇಶಃ ಇತಿ । ಅತ್ರೋಚ್ಯತೇ । ನ ತಾವತ್ ಪ್ರಾಣವಿಷಯಸ್ಯೈವ ಅತಿವಾದಿತ್ವಸ್ಯ ಏತದನುಕರ್ಷಣಮ್ ಇತಿ ಶಕ್ಯಂ ವಕ್ತುಮ್। ವಿಶೇಷವಾದಾತ್ "ಯಃ ಸತ್ಯೇನಾತಿವದತಿ" ಇತಿ । ನನು ವಿಶೇಷವಾದೋಽಪ್ಯಯಂ ಪ್ರಾಣವಿಷಯ ಏವ ಭವಿಷ್ಯತಿ । ಕಥಮ್ ? ಯಥಾ 'ಏಷೋಽಗ್ನಿಹೋತ್ರೀ ಯಃ ಸತ್ಯಂ ವದತಿ' ಇತ್ಯುಕ್ತೇ ನ ಸತ್ಯವದನೇನ ಅಗ್ನಿಹೋತ್ರಿತ್ವಮ್

---

1. ಇಂದ್ರಿಯಗಳಿಗೂ ವಿಷಯಗಳಿಗೂ ಆಗುವ ಸಂಪರ್ಕದಿಂದಾಗಿದ್ದ ಕಾಲುಷ್ಯವನ್ನು ಬಿಟ್ಟಿರುತ್ತಾನೆ.

2 ಬೃ. ೪-೩-೧೫.

ಕೇನತರ್ಹಿ, ಅಗ್ನಿಹೋತ್ರೇಣೈವ | ಸತ್ಯವದನಂ ತು ಅಗ್ನಿಹೋತ್ರಿಣೋ ವಿಶೇಷ ಉಚ್ಯತೇ । ತಥಾ "ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ" ಇತ್ಯುಕ್ತೇ ನ ಸತ್ಯವದನೇನ ಽತಿವಾದಿತ್ವಮ್, ಕೇನ ತರ್ಹಿ ಪ್ರಕೃತೇನ ಪ್ರಾಣವಿಜ್ಞಾನೇನೈವ| ಸತ್ಯವದನಂ ತು ಪ್ರಾಣವಿದೋ ವಿಶೇಷೋ ವಿವಕ್ಷ್ಯತೇ ಇತಿ | ನೇತಿ ಬ್ರೂಮಃ | ಶ್ರುತ್ಯರ್ಥಪರಿತ್ಯಾಗಪ್ರಸಙ್ಗಾತ್ | ಶ್ರುತ್ಯಾ ಹಿ ಅತ್ರ ಸತ್ಯವದನೇನ ಅತಿವಾದಿತ್ವಂ ಪ್ರತೀಯತೇ "ಯಃ ಸತ್ಯೇನಾತಿವದತಿ, ಸೋಽತಿವದತಿ" ಇತಿ | ನಾತ್ರ ಪ್ರಾಣವಿಜ್ಞಾನಸ್ಯ ಸಂಕೀರ್ತನಮಸ್ತಿ | ಪ್ರಕರಣಾತ್ ತು ಪ್ರಾಣವಿಜ್ಞಾನಂ ಸಂಬಧ್ಯೇತ। ತತ್ರ ಪ್ರಕರಣಾನುರೋಧೇನ ಶ್ರುತಿಃ ಪರಿತ್ಯಕ್ತಾ ಸ್ಯಾತ್ | ಪ್ರಕೃತವ್ಯಾವೃತ್ತ್ಯರ್ಥಶ್ಚ ತುಶಬ್ದೋ ನ ಸಂಗಚ್ಛತೇ "ಏಷ ತು ವಾ ಅತಿವದತಿ (ಛಾಂ ೭-೧೬-೧) ಇತಿ | "ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮ್" (ಛಾಂ ೭-೧೬-೧) ಇತಿ ಚ ಪ್ರಯತ್ನಾನ್ತರಕರಣಮ್ ಅರ್ಥಾನ್ತರವಿವಕ್ಷಾಂ ಸೂಚಯತಿ । ತಸ್ಮಾತ್, ಯಥಾ ಏಕವೇದಪ್ರಶಂಸಾಯಾಂ ಪ್ರಕೃತಾಯಾಮ್ "ಏಷ ತು ಮಹಾಬ್ರಾಹ್ಮಣೋ ಯಶ್ಚತುರೋ ವೇದಾನ್ ಅಧೀತೇ" ಇತಿ ಏಕವೇದೇಭ್ಯೋಽರ್ಥಾನ್ತರಭೂತಃ ಚತುರ್ವೇದಃ ಪ್ರಶಸ್ಯತೇ ತಾದೃಗೇತದ್ ದ್ರಷ್ಟವ್ಯಮ್ | ನ ಚ ಪ್ರಶ್ನಪ್ರತಿವಚನರೂಪಯೈವ ಅರ್ಥಾನ್ತರವಿವಕ್ಷಯಾ ಭವಿತವ್ಯಮ್ ಇತಿ ನಿಯಮೋಽಸ್ತಿ | ಪ್ರಕೃತಸಂಬನ್ಧಾಸಂಭವಕಾರಿತತ್ವಾತ್ ಅರ್ಥಾನ್ತರವಿವಕ್ಷಾಯಾಃ । ತತ್ರ ಪ್ರಾಣಾನ್ತಮ್ ಅನುಶಾಸನಂ ಶ್ರುತ್ವಾ ತೂಷ್ಣೀಂಭೂತಂ ನಾರದಂ ಸ್ವಯಮೇವ ಸನತ್ಕುಮಾರೋ ವ್ಯುತ್ಪಾದಯತಿ ಯತ್ ಪ್ರಾಣವಿಜ್ಞಾನೇನ ವಿಕಾರಾನೃತವಿಷಯೇಣ ಅತಿವಾದಿತ್ವಮ್, ಅನತಿವಾದಿತ್ವಮೇವ ತತ್, "ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ" ಇತಿ । ತತ್ರ ಸತ್ಯಮ್ ಇತಿ ಪರಂ ಬ್ರಹ್ಮ ಉಚ್ಯತೇ । ಪರಮಾರ್ಥರೂಪತ್ವಾತ್ | "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತಿ ಚ ಶ್ರುತ್ಯನ್ತರಾತ್ । ತಥಾ ವ್ಯುತ್ಪಾದಿತಾಯ ನಾರದಾಯ "ಸೋಽಹಂ ಭಗವಃ ಸತ್ಯೇನಾತಿವದಾನಿ" (ಛಾಂ. ೭-೧೬-೧) ಇತ್ಯೇವಂ ಪ್ರವೃತ್ತಾಯ ವಿಜ್ಞಾನಾದಿಸಾಧನಪರಂಪರಯಾ ಭೂಮಾನಮ್ ಉಪದಿಶತಿ | ತತ್ರ ಯತ್ ಪ್ರಾಣಾದಧಿ ಸತ್ಯಂ ವಕ್ತವ್ಯಂ ಪ್ರತಿಜ್ಞಾತಮ್, ತದೇವ ಇಹ ಭೂಮಾ ಇತ್ಯುಚ್ಯತೇ ಇತಿ ಗಮ್ಯತೇ | ತಸ್ಮಾತ್ ಅಸ್ತಿ ಪ್ರಾಣಾದಧಿ ಭೂಮ್ನಃ ಉಪದೇಶಃ ಇತ್ಯತಃ ಪ್ರಾಣಾದನ್ಯಃ ಪರಮಾತ್ಮಾ ಭೂಮಾ ಭವಿತುಮರ್ಹತಿ ||

( ಭಾಷ್ಯಾರ್ಥ )

(ಆಕ್ಷೇಪ) :- ಇಲ್ಲಿ "ಪೂಜ್ಯರೆ, ಪ್ರಾಣನಿಗಿಂತ ಹೆಚ್ಚಿನದು ಇದೆಯೆ ?" ಎಂಬ ಪ್ರಶ್ನೆಯಿಲ್ಲ; "ಪ್ರಾಣಕ್ಕಿಂತಲೂ ಹೆಚ್ಚಿನದು ಇದೆ" ಎಂಬ ಉತ್ತರವೂ

ಇಲ್ಲವಲ್ಲ! (ಹೀಗಿರುವಲ್ಲಿ) ಪ್ರಾಣನಾದಮೇಲೆ ಭೂಮವನ್ನು ಉಪದೇಶಿಸಿದೆ ಎಂದು ಹೇಳುವದು ಹೇಗೆ (ಸರಿ)? ಪ್ರಾಣವಿಷಯವೇ ಆಗಿರುವ ಅತಿವಾದಿತ್ವವನ್ನು "ಆದರೆ ಯಾವನು ಸತ್ಯದಿಂದ ಅತಿವಾದವನ್ನು ಮಾಡುತ್ತಾನೋ ಇವನೇ (ನಿಜವಾಗಿ) ಅತಿವಾದಮಾಡುತ್ತಾನೆ'' (ಛಾಂ. ೭-೧೬-೧) ಎಂದು ಮುಂದಕ್ಕೂ ಎಳೆದುಕೊಂಡು ಹೇಳಿರುವದು ಕಾಣಬರುತ್ತದೆ. ಆದ್ದರಿಂದ ಪ್ರಾಣನಾದಮೇಲೆ (ಭೂಮದ) ಉಪದೇಶವಿಲ್ಲವಲ್ಲ!

(ಪರಿಹಾರ) :- ಇದಕ್ಕೆ (ಪರಿಹಾರವನ್ನು) ಹೇಳುತ್ತೇವೆ. ಮೊದಲನೆಯದಾಗಿ ಇದು ಪ್ರಾಣವಿಷಯದ ಅತಿವಾದಿತ್ವವನ್ನೇ ಎಳೆದುಕೊಂಡು (ಉಪದೇಶಿಸಿದ್ದು) ಎಂದು ಹೇಳುವದಕ್ಕೆ ಆಗುವಹಾಗಿಲ್ಲ. ಏಕೆಂದರೆ (ಇಲ್ಲಿ) "ಯಾವನು ಸತ್ಯದಿಂದ ಅತಿವಾದವನ್ನು ಮಾಡುತ್ತಾನೋ" ಎಂಬ ವಿಶೇಷವನ್ನು ಹೇಳಿರುತ್ತದೆ.

(ಆಕ್ಷೇಪ) :- ಈ ವಿಶೇಷವಾದವೂ ಪ್ರಾಣವಿಷಯವೇ ಆಗಬಹುದಲ್ಲ! ಹೇಗೆಂದರೆ 'ಯಾವನು ಸತ್ಯವನ್ನು ಹೇಳುತ್ತಾನೋ ಅವನೇ ಅಗ್ನಿಹೋತ್ರಿಯು' ಎಂದರೆ ಸತ್ಯವನ್ನು ಹೇಳುವದರಿಂದ (ಅವನು) ಅಗ್ನಿಹೋತ್ರಿಯಾಗಿರುವದಿಲ್ಲ, ಮತ್ತೇತರಿಂದ ಎಂದರೆ ಅಗ್ನಿಹೋತ್ರದಿಂದಲೇ (ಅಗ್ನಿಹೋತ್ರಿಯಾಗಿರುತ್ತಾನೆ). ಸತ್ಯವನ್ನು ಹೇಳುವದೆಂಬುದೋ ಎಂದರೆ ಅಗ್ನಿಹೋತ್ರಿಯ ವಿಶೇಷವಾಗಿ ಹೇಳಿದ್ದಾಗಿದೆ, ಹಾಗೆಯೇ "ಆದರೆ ಯಾವನು ಸತ್ಯದಿಂದ ಅತಿವಾದವನ್ನು ಮಾಡುತ್ತಾನೋ ಇವನೇ (ನಿಜವಾಗಿ) ಅತಿವಾದಮಾಡುತ್ತಾನೆ'' ಎಂದರೆ ಸತ್ಯವನ್ನಾಡಿದ್ದರಿಂದ ಅತಿವಾದಿಯಾಗಿರುವದಿಲ್ಲ. ಮತ್ತೇತರಿಂದ ಎಂದರೆ ಪ್ರಕೃತವಾದ ಪ್ರಾಣವಿದ್ಯೆಯಿಂದಲೇ. ಸತ್ಯವದನವೋ ಎಂದರೆ ಪ್ರಾಣವಿದನ ವಿಶೇಷವೆಂದು ಹೇಳುವದಕ್ಕೆ (ಶ್ರುತಿ) ಹೊರಟದ್ದು. (ಅಲ್ಲವೆ)?

(ಪರಿಹಾರ) :- ಅಲ್ಲವೆನ್ನುತ್ತೇವೆ. ಏಕೆಂದರೆ (ಆಗ) ಶ್ರುತ್ಯರ್ಥವನ್ನು ಬಿಡಬೇಕಾಗುವದು. ಹೇಗೆಂದರೆ "ಯಾವನು ಸತ್ಯದಿಂದ ಅತಿವಾದವನ್ನು ಮಾಡುವನೋ ಅವನೇ (ನಿಜವಾಗಿ) ಅತಿವಾದಮಾಡುತ್ತಾನೆ'' ಎಂಬ ಶ್ರುತಿಯಿಂದ ಇಲ್ಲಿ ಸತ್ಯವದನದಿಂದಲೇ ಅತಿವಾದಿಯಾಗಿರುವನೆಂಬ ಅರಿವಾಗುತ್ತದೆ. ಇಲ್ಲಿ ಪ್ರಾಣವಿದ್ಯೆಯನ್ನು ಹೇಳಿರುವದಿಲ್ಲ. ಪ್ರಕರಣದಿಂದಲಾದರೆ ಪ್ರಾಣವಿಜ್ಞಾನವು (ಇದಕ್ಕೆ) ಸಂಬಂಧಿಸಬಹುದು- ಆಗ ಪ್ರಕರಣಕ್ಕನುಸಾರವಾಗಿ ಶ್ರುತಿಯನ್ನು ಕೈಬಿಟ್ಟಂತಾಗುವದು[1]. ಇದಲ್ಲದೆ "ಏಷ ತು ವಾ ಅತಿವದತಿ" ಎಂಬಲ್ಲಿರುವ ಪ್ರಕೃತವಾದದ್ದನ್ನು ಕೈಬಿಡುವದೆಂಬ ಅರ್ಥವುಳ್ಳ

1. ಪ್ರಕರಣಕ್ಕಿಂತ ಶ್ರುತಿ ಪ್ರಬಲವಾದ್ದರಿಂದ ಹಾಗೆ ಬಿಡುವದು ನ್ಯಾಯವಲ್ಲ.

ತು (ಆದರೆ) ಎಂಬ ಮಾತೂ (ನಿಮ್ಮ ಪಕ್ಷದಲ್ಲಿ) ಹೊಂದುವದಿಲ್ಲ. "ಆದರೆ ಸತ್ಯವನ್ನೇ ವಿಜಿಜ್ಞಾಸೆಮಾಡಬೇಕು" (ಛಾಂ. ೭-೧೬-೧) ಎಂದು ಪ್ರಯತ್ನಾಂತರವನ್ನು ಮಾಡಿರುವದೂ ಮತ್ತೊಂದು ಪದಾರ್ಥವನ್ನು ಹೇಳುವ ತಾತ್ಪರ್ಯ (ವಿದೆ ಎಂಬುದನ್ನು) ಸೂಚಿಸುತ್ತದೆ. ಆದ್ದರಿಂದ ಹೇಗೆ ಒಂದು ವೇದವನ್ನು (ಅಧ್ಯಯನಮಾಡಿರುವವರನ್ನು) ಹೊಗಳುವದು ಪ್ರಕೃತವಾಗಿರುವಲ್ಲಿ "ಆದರೆ ಯಾವನು ನಾಲ್ಕು ವೇದಗಳನ್ನು ಅಧ್ಯಯನಮಾಡಿರುವನೋ ಅವನು ಮಹಾಬ್ರಾಹ್ಮಣನು" ಎಂದು ಒಂದು ವೇದದವರಿಗಿಂತ ಬೇರೆಯಾಗಿರುವ ನಾಲ್ಕು ವೇದದವನನ್ನು ಹೊಗಳುತ್ತಾರೆಯೋ ಇದೂ ಹೀಗೆಯೇ ಎಂದು ಅರಿಯಬೇಕು. ಮತ್ತು ಪ್ರಶ್ನೋತ್ತರರೂಪದಿಂದಲೇ ಬೇರೊಂದು ಪದಾರ್ಥವನ್ನು ಹೇಳುವದಕ್ಕೆ ಹೊರಡಬೇಕೆಂಬ ನಿಯಮವೇನೂ ಇಲ್ಲ; ಏಕೆಂದರೆ ಮತ್ತೊಂದು ವಿಷಯವನ್ನು ಹೇಳುವದಕ್ಕೆ ಹೊರಟಿದೆ ಎಂಬುದಕ್ಕೆ ಪ್ರಕೃತಕ್ಕೆ ಸಂಬಂಧವಾಗುವಂತಿಲ್ಲವೆಂಬುದೊಂದೇ ಕಾರಣವಾಗಿರುತ್ತದೆ. ಇಲ್ಲಿ ಪ್ರಾಣನವರೆಗಿನ ಉಪದೇಶವನ್ನು ಕೇಳಿ ಸುಮ್ಮನಾದ **ನಾರದನಿಗೆ ಸನತ್ಕುಮಾರನು** ತಾನೇ 'ಕಾರ್ಯವಾದ ಅನೃತದ ವಿಷಯವಾದ ಪ್ರಾಣವಿಜ್ಞಾನದಿಂದಾದ ಅತಿವಾದಿತ್ವವಿದೆಯಲ್ಲ, ಅದು ಅತಿವಾದಿತ್ವವೇ ಅಲ್ಲ; ಆದರೆ ಯಾವನು ಸತ್ಯದಿಂದ ಅತಿವಾದಮಾಡುವನೋ, ಅವನೇ ನಿಜವಾಗಿ ಅತಿವಾದವನ್ನು ಮಾಡುವವನು" ಎಂದು ತಿಳಿಯಹೇಳಿರುತ್ತಾನೆ. ಇಲ್ಲಿ ಸತ್ಯವೆಂಬ (ಮಾತಿನಿಂದ) ಪರಬ್ರಹ್ಮವನ್ನು ಹೇಳಿದೆ; ಏಕೆಂದರೆ (ಅದು) ಪರಮಾರ್ಥವಾಗಿದೆ. "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (ತೈ. ೨-೧) ಎಂದು ಬೇರೊಂದು ಶ್ರುತಿಯೂ ಇದೆ. ಹಾಗೆ ತಿಳಿಸಲ್ಪಟ್ಟ ನಾರದನು "ಪೂಜ್ಯರೆ, ಆ ನಾನು ಸತ್ಯದಿಂದಲೇ ಅತಿವಾದಮಾಡಲಿಚ್ಛಿಸುವೆನು" (ಛಾಂ. ೭-೧೬-೧) ಎಂದು ಹೊರಡಲು (ಅವನಿಗೆ) ವಿಜ್ಞಾನವೇ ಮುಂತಾದ ಸಾಧನಪರಂಪರೆಯಿಂದ ಭೂಮವನ್ನು ಉಪದೇಶಿಸಿರುತ್ತಾನೆ. (ಆದ್ದರಿಂದ) ಅಲ್ಲಿ ಪ್ರಾಣನಾದ ಮೇಲೆ ಸತ್ಯವನ್ನು ಹೇಳಬೇಕೆಂದು ಪ್ರತಿಜ್ಞೆಮಾಡಿತ್ತಲ್ಲ, ಅದನ್ನೇ ಇಲ್ಲಿ ಭೂಮವೆಂದು ಕರೆದಿದೆ ಎಂದು ನಿಶ್ಚಯವಾಗುತ್ತದೆ. ಆದ್ದರಿಂದ ಪ್ರಾಣನಾದ ಮೇಲೆ ಭೂಮವನ್ನು ಉಪದೇಶಮಾಡಿದೆ ಎಂಬುದು ಉಂಟು; ಆದ್ದರಿಂದ ಪ್ರಾಣನಿಗಿಂತ ಬೇರೆಯಾದ ಪರಮಾತ್ಮನೇ ಭೂಮನಾಗಿರಬೇಕು.

## ಇಲ್ಲಿ ಹೇಳಿರುವ ಆತ್ಮತ್ವಾದಿಗಳೂ ಪರಮಾತ್ಮನಿಗೇ ಸಲ್ಲುತ್ತವೆ

(ಭಾಷ್ಯ)

೨೮೦. ಏವಂ ಚ ಇಹ ಆತ್ಮವಿವದಿಷಯಾ ಪ್ರಕರಣಸ್ಯ ಉತ್ಥಾನಮ್ **ಉಪಪನ್ನಂ ಭವಿಷ್ಯತಿ। ಪ್ರಾಣ ಏವ ಇಹ ಆತ್ಮಾ ವಿವಕ್ಷಿತಃ ಇತ್ಯೇತದಪಿ**

ನೋಪಪದ್ಯತೇ | ನ ಹಿ ಪ್ರಾಣಸ್ಯ ಮುಖ್ಯಯಾ ವೃತ್ತ್ಯಾ ಆತ್ಮತ್ವಮಸ್ತಿ | ನ ಚ ಅನ್ಯತ್ರ ಪರಮಾತ್ಮಜ್ಞಾನಾತ್ ಶೋಕವಿನಿವೃತ್ತಿರಸ್ತಿ | "ನಾನ್ಯಃ ಪನ್ಥಾ ವಿದ್ಯತೇಽಯನಾಯ" (ಶ್ವೇ. ೬-೧೫) ಇತಿ ಶ್ರುತ್ಯನ್ತರಾತ್ | "ತಂ ಮಾ ಭಗವಾಞ್ಶೋಕಸ್ಯ ಪಾರಂ ತಾರಯತು" (ಛಾಂ. ೭-೧-೩) ಇತಿ ಚೋಪಕ್ರಮ್ಯ ಉಪಸಂಹರತಿ—"ತಸ್ಮೈ ಮೃದಿತಕಷಾಯಾಯ ತಮಸಃ ಪಾರಂ ದರ್ಶಯತಿ ಭಗವಾನ್ ಸನತ್ಕುಮಾರಃ" (ಛಾಂ. ೭-೨೬-೨) ಇತಿ | 'ತಮಃ' ಇತಿ ಶೋಕಾದಿಕಾರಣಮ್ ಅವಿದ್ಯಾ ಉಚ್ಯತೇ | ಪ್ರಾಣಾನ್ತೇ ಚ ಅನುಶಾಸನೇ ನ ಪ್ರಾಣಸ್ಯ ಅನ್ಯಾಯತ್ತತಾ ಉಚ್ಯೇತ | "ಆತ್ಮತಃ ಪ್ರಾಣಃ" (ಛಾಂ. ೭-೨೬-೧) ಇತಿ ಚ ಬ್ರಾಹ್ಮಣಮ್ । ಪ್ರಕರಣಾನ್ತೇ ಪರಮಾತ್ಮವಿವಕ್ಷಾ ಭವಿಷ್ಯತಿ, ಭೂಮಾ ತು ಪ್ರಾಣ ಏವ ಇತಿ ಚೇತ್ | ನ |"ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ" (ಛಾಂ. ೭-೨೪-೧) ಇತ್ಯಾದಿನಾ ಭೂಮ್ನ ಏವ ಆಪ್ರಕರಣಸಮಾಪ್ತೇರನುಕರ್ಷಣಾತ್ | ವೈಪುಲ್ಯಾತ್ಮಿಕಾ ಚ ಭೂಮರೂಪತಾ ಸರ್ವಕಾರಣತ್ವಾತ್ ಪರಮಾತ್ಮನಃ ಸುತರಾಮ್ ಉಪಪದ್ಯತೇ ||

(ಭಾಷ್ಯಾರ್ಥ)

ಮತ್ತು ಹೀಗಾದರೆ ಆತ್ಮನನ್ನು ತಿಳಿಯಬೇಕೆಂಬ ಇಚ್ಛೆಯನ್ನು (ತಿಳಿಸು)ವದರಿಂದ ಪ್ರಕರಣವನ್ನು ಪ್ರಾರಂಭಿಸುವದು ಯುಕ್ತವಾಗುವದು. ಪ್ರಾಣನೇ ಇಲ್ಲಿ ಆತ್ಮನೆಂದು ವಿವಕ್ಷಿತನಾಗಿರುತ್ತಾನೆ ಎಂಬುದೂ ಸರಿಯಾಗುವದಿಲ್ಲ ; ಏಕೆಂದರೆ ಪ್ರಾಣನಿಗೆ ಮುಖ್ಯವೃತ್ತಿಯಿಂದ ಆತ್ಮತ್ವವಿರುವದಿಲ್ಲ[1]. ಪರಮಾತ್ಮಜ್ಞಾನವನ್ನು ಬಿಟ್ಟು ಮತ್ತೊಂದರಿಂದ ಶೋಕನಾಶವೂ ಆಗುವಹಾಗಿಲ್ಲ; ಏಕೆಂದರೆ "(ಆ ಪುರುಷನ) ಪ್ರಾಪ್ತಿಗೆ ಮತ್ತೊಂದು ಹಾದಿಯಿರುವದಿಲ್ಲ" (ಶ್ವೇ. ೬-೧೫) ಎಂದು ಬೇರೊಂದು ಶ್ರುತಿ (ಹೇಳುತ್ತದೆ). ಮತ್ತು "ಆ ನನ್ನನ್ನು ಪೂಜ್ಯರಾದ (ತಾವು) ಶೋಕದ ಪಾರವನ್ನು ಸೇರಿಸಬೇಕು'' (ಛಾಂ. ೭-೧-೩) ಎಂದು ಪ್ರಾರಂಭಿಸಿ "ಕಷಾಯವನ್ನು ಕಳೆದುಕೊಂಡಿರುವ ಆ (ನಾರದ)ನಿಗೆ ಭಗವಂತನಾದ ಸನತ್ಕುಮಾರನು ತಮಸ್ಸಿನ ಪಾರವನ್ನು ತೋರಿಸಿಕೊಡುತ್ತಾನೆ'' (ಛಾಂ.೭-೨೬-೨) –ಎಂದು ಉಪಸಂಹಾರಮಾಡಿರುತ್ತದೆ. ಶೋಕವೇ ಮುಂತಾದದ್ದಕ್ಕೆ ಕಾರಣವಾಗಿರುವ ಅವಿದ್ಯೆಯನ್ನು 'ತಮಸ್ಸು' ಎಂದಿದೆ[2]. ಉಪದೇಶವು ಪ್ರಾಣನಲ್ಲಿಯೇ ಕೊನೆಗಾಣುವ ಹಾಗಿದ್ದಿದ್ದರೆ ಪ್ರಾಣನು ಮತ್ತೊಬ್ಬನ ಅಧೀನ

1. ಗೌಣವಾಗಿ ಪ್ರಾಣನೂ ಆತ್ಮನೆನಿಸುತ್ತಾನಾದರೂ ಮುಖ್ಯಾರ್ಥವನ್ನು ಬಿಡುವದಕ್ಕೆ ಕಾರಣವಿಲ್ಲ ಎಂದು ಭಾವ.

2. ಈ ಅವಿದ್ಯೆಯನ್ನು ಕಳೆಯುವದು ಆತ್ಮಜ್ಞಾನವೇ ಹೊರತು ಪ್ರಾಣೋಪಾಸನೆಯಲ್ಲ.

ವಾಗಿರುವನೆಂದು ಹೇಳುತ್ತಿರಲಿಲ್ಲ; ಆದರೆ "ಆತ್ಮನಿಂದ ಪ್ರಾಣನು" (ಛಾಂ. ೭-೨೬-೫) ಎಂದು (ಈ) ಬ್ರಾಹ್ಮಣವು (ಹೇಳುತ್ತಿದೆ). ಪ್ರಕರಣಾಂತದಲ್ಲಿ ಪರಮಾತ್ಮನ ವಿವಕ್ಷೆ(ಯಿದೆ) ಎಂದಾಗಲಿ; (ಇಲ್ಲಿರುವ) ಭೂಮವು ಮಾತ್ರ ಪ್ರಾಣನೇ (ಎನ್ನಬಹುದಲ್ಲ) ! – ಎಂದರೆ ಹಾಗಲ್ಲ. ಏಕೆಂದರೆ "ಪೂಜ್ಯರೆ, ಆತನು ಏತರಲ್ಲಿ ನೆಲೆನಿಂತಿರುವನು ? ತನ್ನ ಮಹಿಮೆಯಲ್ಲಿ" (ಛಾಂ. ೭-೨೪-೧) ಎಂದು ಮುಂತಾಗಿರುವ (ವಾಕ್ಯದಿಂದ) ಪ್ರಕರಣವು ಮುಗಿಯುವವರೆಗೂ ಭೂಮವನ್ನೇ ಅನುಕರ್ಷಣೆಮಾಡಿರುತ್ತದೆ. ವಿಪುಲತ್ವರೂಪವಾದ ಭೂಮಸ್ವರೂಪವು ಎಲ್ಲಕ್ಕೂ ಕಾರಣನಾಗಿರುವದರಿಂದ[1] ಪರಮಾತ್ಮನಿಗೆ ಮತ್ತಷ್ಟು ಚೆನ್ನಾಗಿ ಹೊಂದುತ್ತದೆ[2].

## ಭೂಮದ ಧರ್ಮಗಳೆಲ್ಲ ಪರಮಾತ್ಮನಿಗೇ ಹೊಂದುತ್ತವೆ

**ಧರ್ಮೋಪಪತ್ತೇಶ್ಚ ॥ ೯ ॥**

೯. ಧರ್ಮಗಳು ಹೊಂದುವದರಿಂದಲೂ (ಭೂಮವು ಪರಮಾತ್ಮನೇ)

(ಭಾಷ್ಯ)

೨೪೧. ಅಪಿ ಚ ಯೇ ಭೂಮ್ನಿ ಶ್ರೂಯನ್ತೇ ಧರ್ಮಾಃ, ತೇ ಪರಮಾತ್ಮನಿ ಉಪಪದ್ಯನ್ತೇ । "ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾ" ಇತಿ ದರ್ಶನಾದಿವ್ಯವಹಾರಾಭಾವಂ ಭೂಮನಿ ಅವಗಮಯತಿ । ಪರಮಾತ್ಮನಿ ಚ ಅಯಂ ದರ್ಶನಾದಿವ್ಯವಹಾರಾಭಾವೋಽವಗತಃ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿಶ್ರುತ್ಯನ್ತರಾತ್ । ಯೋಽಪ್ಯಸೌ ಸುಷುಪ್ತಾವಸ್ಥಾಯಾಂ ದರ್ಶನಾದಿವ್ಯವಹಾರಾಭಾವ ಉಕ್ತಃ, ಸೋಽಪಿ ಆತ್ಮನ ಏವ ಅಸಙ್ಗತ್ವವಿವಕ್ಷಯಾ ಉಕ್ತಃ, ನ ಪ್ರಾಣಸ್ವಭಾವವಿವಕ್ಷಯಾ । ಪರಮಾತ್ಮಪ್ರಕರಣಾತ್, ಯದಪಿ ತಸ್ಯಾಮ್ ಅವಸ್ಥಾಯಾಂ ಸುಖಮ್ ಉಕ್ತಮ್, ತದಪಿ ಆತ್ಮನ ಏವ ಸುಖರೂಪತ್ವವಿವಕ್ಷಯಾ ಉಕ್ತಮ್ । ಯತ ಆಹ

1. ಪ್ರಾಣಸಹಿತವಾದ ಸರ್ವಕಾರ್ಯಕ್ಕೂ ಕಾರಣವಾಗಿರುವದರಿಂದ ಎಂದರ್ಥ.

2 ಪ್ರಾಣನಿಗೆ ಸ್ವಕಾರ್ಯದ ಅಪೇಕ್ಷೆಯಿಂದಾದ ವೈಪುಲ್ಯವಿದೆ; ಪರಮಾತ್ಮನಿಗೆ ನಿರತಿಶಯವಾದ ವೈಪುಲ್ಯವಿದೆ.

"ಏಷೋಽಸ್ಯ ಪರಮ ಆನನ್ದ ಏತಸ್ಯೈವಾನನ್ದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ" (ಬೃ. ೪-೩-೩೨) ಇತಿ । ಇಹಾಪಿ "ಯೋ ವೈ ಭೂಮಾ ತತ್ ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಮ್" (ಛಾಂ ೭-೨೩-೧) ಇತಿ ಸಾಮಯಸುಖನಿರಾಕರಣೇನ ಬ್ರಹ್ಮೈವ ಸುಖಂ ಭೂಮಾನಂ ದರ್ಶಯತಿ । "ಯೋ ವೈ ಭೂಮಾ ತದಮೃತಮ್" (ಛಾಂ. ೭-೨೪-೧) ಇತ್ಯಮೃತತ್ವಮಪಿ ಇಹ ಶ್ರೂಯಮಾಣಂ ಪರಮಕಾರಣಂ ಗಮಯತಿ । ವಿಕಾರಾಣಾಮ್ ಅಮೃತತ್ವಸ್ಯ ಆಪೇಕ್ಷಿಕತ್ವಾತ್, "ಅತೋಽನ್ಯದಾರ್ತಮ್" (ಬೃ. ೩-೪-೨) ಇತಿ ಚ ಶ್ರುತ್ಯನ್ತರಾತ್ । ತಥಾ ಚ ಸತ್ಯತ್ವಮ್, ಸ್ವಮಹಿಮಪ್ರತಿಷ್ಠಿತತ್ವಮ್, ಸರ್ವಗತತ್ವಮ್, ಸರ್ವಾತ್ಮತ್ವಮ್ ಇತಿ ಚೈತೇ ಧರ್ಮಾಃ ಶ್ರೂಯಮಾಣಾಃ ಪರಮಾತ್ಮನ್ಯೇವ ಉಪಪದ್ಯನ್ತೇ ನಾನ್ಯತ್ರ । ತಸ್ಮಾತ್ ಭೂಮಾ ಪರಮಾತ್ಮಾ ಇತಿ ಸಿದ್ಧಮ್ ॥

( ಭಾಷ್ಯಾರ್ಥ )

ಇದಲ್ಲದೆ ಭೂಮ(ವಿಷಯ)ದಲ್ಲಿ ಯಾವ ಧರ್ಮಗಳನ್ನು ಶ್ರುತಿಯಲ್ಲಿ ಹೇಳಿದೆಯೋ ಅವು ಪರಮಾತ್ಮನಿಗೂ ಹೊಂದುತ್ತವೆ[1]. (ಹೇಗೆಂದರೆ), "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ, ಮತ್ತೊಂದನ್ನು ಕೇಳುವದಿಲ್ಲವೋ, ಮತ್ತೊಂದನ್ನು ಅರಿಯುವದಿಲ್ಲವೋ ಅದು ಭೂಮವು" (ಛಾಂ. ೭-೨೪-೧) ಎಂದು ದರ್ಶನಾದಿವ್ಯವಹಾರವು ಭೂಮದಲ್ಲಿರುವದಿಲ್ಲವೆಂದು ಹೇಳಿದೆ(ಯಷ್ಟೆ), ಈ ದರ್ಶನಾದಿವ್ಯವಹಾರವಿಲ್ಲದಿರುವಿಕೆಯು ಪರಮಾತ್ಮನಲ್ಲಿದೆ ಎಂದು ನಿಶ್ಚಯವಾಗಿರುತ್ತದೆ; ಏಕೆಂದರೆ "ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ಕಾಣಬೇಕು ?" (ಬೃ. ೪-೫-೧೫) ಎಂದು ಮುಂತಾಗಿ ಬೇರೊಂದು ಶ್ರುತಿಯಲ್ಲಿದೆ. **ಇನ್ನು ಸುಷುಪ್ತಾವಸ್ಥೆಯಲ್ಲಿ ದರ್ಶನಾದಿವ್ಯವಹಾರವಿಲ್ಲವೆಂದು ( ಪ್ರ. ೪-೨ರಲ್ಲಿ) ಹೇಳಿದೆಯಲ್ಲ. ಅದೂ ಆತ್ಮನು ಅಸಂಗನೆಂದು ತಿಳಿಸುವದಕ್ಕೆ ಹೇಳಿದೆಯೇ ಹೊರತು ಪ್ರಾಣಸ್ವಭಾವವನ್ನು ತಿಳಿಸಬೇಕೆಂದಲ್ಲ; ಏಕೆಂದರೆ (ಅದು) ಪರಮಾತ್ಮನ ಪ್ರಕರಣವಾಗಿದೆ. ಇನ್ನು ಆ ಅವಸ್ಥೆಯಲ್ಲಿ ಸುಖವನ್ನು (ಪ್ರ. ೪-೬ರಲ್ಲಿ) ಹೇಳಿದೆಯಲ್ಲ, ಅದನ್ನೂ ಆತ್ಮನಿಗೇ ಸುಖರೂಪತ್ವವನ್ನು ತಿಳಿಸಬೇಕೆಂದು ಹೇಳಿದೆ.** ಏಕೆಂದರೆ (ಬೇರೊಂದು ಶ್ರುತಿಯಲ್ಲಿ) "ಇದೇ ಇವನ ಪರಮಾನಂದವು; ಇದೇ ಆನಂದದ ಮಾತ್ರೆಯನ್ನು

1. ಹಿಂದೆ ಭಾ. ಭಾ. ೨೩೭ರಲ್ಲಿ ಪೂರ್ವಪಕ್ಷಿಯು ಹೇಳಿರುವ ಧರ್ಮಗಳು ಪರಮಾತ್ಮನಿಗೇ ಹೆಚ್ಚು ಒಪ್ಪುತ್ತವೆಯೆಂದೂ ಇನ್ನೂ ಕೆಲವು ಧರ್ಮಗಳು ಪರಮಾತ್ಮನಿಗೇ ಸಲ್ಲುವವಾಗಿವೆಯೆಂದೂ ಈಗ ತೋರಿಸುತ್ತಾರೆ.

ಮಿಕ್ಕ ಭೂತಗಳು ಉಪಜೀವಿಸಿಕೊಂಡಿರುತ್ತವೆ.'' (ಬೃ. ೪-೩-೩೨) ಎಂದು ಹೇಳಿರುತ್ತದೆ. ಇಲ್ಲಿಯೂ "ಯಾವದು ಭೂಮವೋ ಅದೇ ಸುಖವು, ಅಲ್ಪವಾದದ್ದರಲ್ಲಿ ಸುಖವಿಲ್ಲ ಭೂಮವೇ ಸುಖವು" (ಛಾಂ. ೭-೨೩-೧) ಎಂದು ದೋಷಸಹಿತವಾದ ಸುಖವನ್ನು ನಿರಾಕರಿಸಿ ಬ್ರಹ್ಮವೇ ಸುಖವಾದ ಭೂಮವೆಂದು ತಿಳಿಸಿರುತ್ತದೆ. "ಯಾವದು ಭೂಮವೋ ಅದೇ ಅಮೃತವು" (ಛಾಂ. ೭-೨೪-೧) ಎಂದು ಅಮೃತತ್ವವನ್ನು ಶ್ರುತಿಯಲ್ಲಿ ಹೇಳಿರುವದೂ (ಭೂಮವು) ಪರಮಕಾರಣವೆಂದು ಗೊತ್ತುಪಡಿಸಿಕೊಡುತ್ತದೆ; ಏಕೆಂದರೆ ಕಾರ್ಯಗಳು ಅಮೃತವಾಗಿರುವದೆಂಬುದು ಆಪೇಕ್ಷಿಕವಾಗಿರುತ್ತದೆ[1]. "ಇದಕ್ಕಿಂತ ಬೇರೆ ಯಾದದ್ದು ನಾಶವಾಗತಕ್ಕದ್ದು" (ಬೃ. ೩-೪-೨) ಎಂದು ಬೇರೊಂದು ಶ್ರುತಿಯಿರುವದರಿಂದಲೂ (ಹೀಗೆಂದು ತಿಳಿಯಬೇಕು). ಹೀಗೆಯೇ (ಈ) ಶ್ರುತಿಯಲ್ಲಿರುವ ಸತ್ಯತ್ವ (ಛಾಂ. ೭-೧೬-೧), ಸ್ವಮಹಿಮಪ್ರತಿಷ್ಠಿತತ್ವ (ಛಾಂ. ೭-೨೪-೧), ಸರ್ವಗತತ್ವ (ಛಾಂ. ೭-೨೫-೧), ಮತ್ತು ಸರ್ವಾತ್ಮತ್ವ (ಛಾಂ. ೭-೨೫-೨) ಎಂಬೀ ಧರ್ಮಗಳೆಲ್ಲವೂ ಪರಮಾತ್ಮನಿಗೇ ಹೊಂದುತ್ತವೆಯೇ ಹೊರತು ಮತ್ತೊಂದಕ್ಕೆ (ಹೊಂದುವ)ದಿಲ್ಲ ಆದ್ದರಿಂದ[2] ಭೂಮವು ಪರಮಾತ್ಮನು ಎಂದು ಸಿದ್ಧವಾಯಿತು.

## ೩. ಅಕ್ಷರಾಧಿಕರಣ

(ಬೃಹದಾರಣ್ಯಕ ೩-೮-೮ರಲ್ಲಿ ಹೇಳಿರುವ ಅಕ್ಷರವು ಬ್ರಹ್ಮವೇ)

**ಅಕ್ಷರಮಮ್ಬರಾನ್ತಧೃತೇಃ ॥ ೧೦ ॥**

೧೦. (ಬೃಹದಾರಣ್ಯಕದ) ಅಕ್ಷರವು (ಬ್ರಹ್ಮವೇ), ಏಕೆಂದರೆ (ಅದು) ಅಂಬರದವರೆಗಿನದೆಲ್ಲವನ್ನೂ ಧರಿಸಿರುತ್ತದೆ.

### ವಿಷಯವೂ ಸಂಶಯವೂ

(ಭಾಷ್ಯ)

೨೪೨. "ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ।" (ಬೃ. ೩-೮-೭) ಸ ಹೋವಾಚೈತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದನ್ತ್ಯಸ್ಥೂಲ

---

1. ಆವು ತನ್ನ ಕಾರ್ಯಗಳ ಅಪೇಕ್ಷೆಯಿಂದ ಅಮೃತವಾಗಿರುತ್ತವೆ.

2. ಭೂಮಶ್ರುತಿ, ಆತ್ಮತ್ವಾದಿಲಿಂಗಗಳು, ಶೋಕನಾಶಕವಾದ ಆತ್ಮಜಿಜ್ಞಾಸೆಯ ಪ್ರಕರಣ – ಇವುಗಳಿರುವದರಿಂದ.

ಮನಣು" (ಬೃ. ೩-೮-೮) ಇತ್ಯಾದಿ ಶ್ರೂಯತೇ | ತತ್ರ ಸಂಶಯಃ—ಕಿಮ್ ಅಕ್ಷರಶಬ್ದೇನ ವರ್ಣ ಉಚ್ಯತೇ, ಕಿಂ ವಾ ಪರಮೇಶ್ವರ ಇತಿ ||

( ಭಾಷ್ಯಾರ್ಥ )

"ಆಕಾಶವು ಏತರಲ್ಲಿ ಓತವೂ ಪ್ರೋತವೂ[1] (ಆಗಿದೆ) ?" (ಬೃ. ೩-೮-೭) "ಆ (ಯಾಜ್ಞವಲ್ಕ್ಯನು) ಇಂತೆಂವನು ಗಾರ್ಗಿಯೆ, ಇದೇ ಆ ಅಕ್ಷರವು; (ಇದನ್ನು) ಬ್ರಾಹ್ಮಣರು ಅಸ್ಥೂಲವು ಅನಣು ... ಎಂದು ಹೇಳುತ್ತಾರೆ" (ಬೃ. ೩-೭-೮) ಎಂದು ಮುಂತಾಗಿ ಶ್ರುತಿಯಲ್ಲಿದೆ. ಅಲ್ಲಿ ಸಂಶಯವೇನೆಂದರೆ ಅಕ್ಷರಶಬ್ದದಿಂದ ವರ್ಣವನ್ನು ಹೇಳಿದೆಯೆ,[2] ಅಥವಾ ಪರಮೇಶ್ವರನನ್ನು ಹೇಳಿದೆಯೆ ?

## ಪೂರ್ವಪಕ್ಷ: ಓಂಕಾರವೇ ಈ ಅಕ್ಷರವು

( ಭಾಷ್ಯ )

೨೮೩. ತತ್ರ "ಅಕ್ಷರಸಮಾಮ್ನಾಯಃ" (ಇತ್ಯಾದೌ) ಅಕ್ಷರಶಬ್ದಸ್ಯ ವರ್ಣೇ ಪ್ರಸಿದ್ಧತ್ವಾತ್ ಪ್ರಸಿದ್ಧ್ಯತಿಕ್ರಮಸ್ಯ ಚ ಅಯುಕ್ತತ್ವಾತ್, "ಓಂಕಾರ ಏವೇದಂ ಸರ್ವಮ್" (ಛಾಂ ೨-೨೩-೩) ಇತ್ಯಾದೌ ಚ ಶ್ರುತ್ಯನ್ತರೇ ವರ್ಣಸ್ಯಾಪಿ ಉಪಾಸ್ಯತ್ವೇನ ಸರ್ವಾತ್ಮಕತ್ವಾವಧಾರಣಾತ್, ವರ್ಣ ಏವ ಅಕ್ಷರಶಬ್ದಃ ಇತಿ ||

( ಭಾಷ್ಯಾರ್ಥ )

ಇಲ್ಲಿ "ಅಕ್ಷರಸಮಾಮ್ನಾಯಃ" (?ಪಾ. ಶಿ) ಮುಂತಾದ (ಪ್ರಯೋಗದಲ್ಲಿ) ಅಕ್ಷರಶಬ್ದವು ವರ್ಣ(ವಾಚಕವೆಂದು) ಪ್ರಸಿದ್ಧವಾಗಿರುವದರಿಂದ ಪ್ರಸಿದ್ಧಿಯನ್ನು ಮೀರುವದು ಸರಿಯಲ್ಲವಾದ್ದರಿಂದಲೂ[3] "ಇದೆಲ್ಲವೂ ಓಂಕಾರವೇ" (ಛಾಂ. ೨-೨೩-೩) ಎಂದು ಮುಂತಾಗಿರುವ ಬೇರೊಂದು ಶ್ರುತಿಯಲ್ಲಿ ವರ್ಣವನ್ನು ಉಪಾಸ್ಯವೆಂಬ ಕಾರಣದಿಂದ ಸರ್ವಾತ್ಮಕವೆಂದು ಒತ್ತಿಹೇಳಿರುವದರಿಂದಲೂ ವರ್ಣನೇ ಅಕ್ಷರಶಬ್ದ(ಕ್ಕೆ ವಾಚ್ಯ) (ಎಂದು ತೋರುತ್ತದೆ)[4].

---

1 ಹಾಸುಹೊಕ್ಕಾಗಿ ಹೆಣೆದುಕೊಂಡಿದೆ.

2. ಓಂಕಾರವನ್ನು ಉಪಾಸನೆಮಾಡಬೇಕೆಂದು ಹೇಳಿದೆಯೆ ?

3 ಓಂಕಾರವನ್ನು ಅಕ್ಷರವೆನ್ನುವದು ರೂಢಾರ್ಥದಲ್ಲಿ ಇಟ್ಟುಕೊಂಡಂತೆ ಆಗುತ್ತದೆ; ಪರಮಾತ್ಮನೆನ್ನುವದಕ್ಕೆ ಯೌಗಿಕಾರ್ಥವನ್ನು ನ ಕ್ಷರತಿ (ನಾಶವಾಗುವದಿಲ್ಲ) ಎಂಬ ವ್ಯುತ್ಪತ್ತಿಯನ್ನು ಅನುಸರಿಸಿ ಇಟ್ಟುಕೊಳ್ಳಬೇಕಾಗುತ್ತದೆ. ಇವೆರಡರಲ್ಲಿ ರೂಢಿಯೇ ಪ್ರಬಲ.

4 ಆದ್ದರಿಂದ ಓಂಕಾರವು ಆಕಾಶಾತ್ಮವೂ ಆಗಿವೆಯೆಂದು ಉಪಾಸನೆಮಾಡಬೇಕು -ಎಂಬುದು ಆಕಾಶವಾಕ್ಯದ ಅಭಿಪ್ರಾಯವೆಂದು ಭಾವ.

ಏವಂ ಪ್ರಾಪ್ತೇ ಉಚ್ಯತೇ । ಪರ ಏವಾ ಆತ್ಮಾ ಅಕ್ಷರಶಬ್ದವಾಚ್ಯಃ । ಕಸ್ಮಾತ್ ? 'ಅಮ್ಬರಾನ್ತಧೃತೇಃ', ಪೃಥಿವ್ಯಾದೇರಾಕಾಶಾನ್ತಸ್ಯ ವಿಕಾರಜಾತಸ್ಯ ಧಾರಣಾತ್ । ತತ್ರ ಹಿ ಪೃಥಿವ್ಯಾದೇಃ ಸಮಸ್ತವಿಕಾರಜಾತಸ್ಯ ಕಾಲತ್ರಯ ವಿಭಕ್ತಸ್ಯ "ಆಕಾಶ ಏವ ತದೋತಂ ಪ್ರೋತಂ ಚ" (ಬೃ. ೩-೮-೭) ಇತಿ ಆಕಾಶೇ ಪ್ರತಿಷ್ಠಿತತ್ವಮ್ ಉಕ್ತ್ವಾ "ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚ" (ಬೃ. ೩-೮-೭) ಇತ್ಯನೇನ ಪ್ರಶ್ನೇನ ಇದಮಕ್ಷರಮ್ ಅವತಾರಿತಮ್ । ತಥಾ ಚ ಉಪಸಂಹೃತಮ್ "ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ" (ಬೃ. ೩-೮-೧೧) ಇತಿ । ನ ಚೇಯಮ್ ಅಮ್ಬರಾನ್ತಧೃತಿಃ ಬ್ರಹ್ಮಣೋಽನ್ಯತ್ರ ಸಂಭವತಿ । ಯದಪಿ "ಓಂಕಾರ ಏವೇದಂ ಸರ್ವಮ್" (ಛಾಂ. ೨-೨೩-೭) ಇತಿ, ತದಪಿ ಬ್ರಹ್ಮಪ್ರತಿಪತ್ತಿಸಾಧನತ್ವಾತ್ ಸ್ತುತ್ಯರ್ಥಂ ದ್ರಷ್ಟವ್ಯಮ್ । ತಸ್ಮಾತ್ 'ನ ಕ್ಷರತಿ', 'ಅಶ್ನುತೇ' ಚ ಇತಿ ನಿತ್ಯತ್ವವ್ಯಾಪಿತ್ವಾಭ್ಯಾಮ್ ಅಕ್ಷರಂ ಪರಮೇವ ಬ್ರಹ್ಮ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬರಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ- ಅಕ್ಷರಶಬ್ದವಾಚ್ಯನಾದವನು ಪರಮಾತ್ಮನೇ. ಏಕೆ ? ಎಂದರೆ (ಅಮ್ಬರಾನ್ತಧೃತೇಃ) ; ಪೃಥಿವಿಯು ಮೊದಲಾಗಿ ಆಕಾಶದವರೆಗಿನ ಕಾರ್ಯಸಮೂಹವನ್ನು (ಅದು) ಧರಿಸಿರುತ್ತದೆಯಾದ್ದರಿಂದ. ಅದು ಹೇಗೆಂದರೆ, "ಆಕಾಶದಲ್ಲಿಯೇ ಅದು ಓತವೂ ಪ್ರೋತವೂ ಆಗಿದೆ" (ಬೃ. ೩-೮-೭) ಎಂಬ (ವಾಕ್ಯದಿಂದ) ಪೃಥಿವಿಯೇ ಮುಂತಾದ ಕಾಲತ್ರಯಪ್ರವಿಭಕ್ತವಾದ ಎಲ್ಲಾ ಕಾರ್ಯಸಮೂಹವೂ ಆಕಾಶದಲ್ಲಿ ನಿಂತಿರುವದೆಂದು ಹೇಳಿದಮೇಲೆ[1] ಅಲ್ಲಿ "ಆಕಾಶವು ಏತರಲ್ಲಿ ಓತವೂ ಪ್ರೋತವೂ ಆಗಿದೆ?" (ಬೃ. ೩-೮-೭) ಎಂಬ ಪ್ರಶ್ನೆಯಿಂದ ಈ ಅಕ್ಷರಕ್ಕೆ ಅವತರಣಿಕೆಯನ್ನು (ಹೇಳಿದೆ). ಅದರಂತೆಯೇ "ಗಾರ್ಗಿಯೆ, ಈ ಅಕ್ಷರದಲ್ಲಿಯೇ ಆಕಾಶವು ಓತವೂ ಪ್ರೋತವೂ ಆಗಿರುತ್ತದೆ)[2] " (ಬೃ. ೩-೮-೧೧) ಎಂದು ಉಪಸಂಹಾರಮಾಡಿರುತ್ತದೆ. ಈ

1. 'ಯಾವದು ದ್ಯುಲೋಕದ ಆಚೆ ಇದೆಯೋ ಯಾವದು ಪೃಥಿವಿಗಿಂತ ಈಚೆಗೆ ಮತ್ತು ದ್ಯಾವಾಪೃಥಿವಿಗಳ ನಡುವೆ ಇದೆಯೋ, ಯಾವದು ಭೂತಭವಿಷ್ಯದ್ವರ್ತಮಾನವೆನ್ನುವರೋ ಅದು ಏತರಲ್ಲಿ ಓತಪ್ರೋತವಾಗಿದೆ ?" (ಬೃ. ೩-೮-೩) ಎಂಬ ಗಾರ್ಗಿಯ ಪ್ರಶ್ನೆಗೆ ವ್ಯಾಕೃತವಾಗಿರುವ ಈ ಸೂತ್ರಾತ್ಮನು 'ಅವ್ಯಾಕೃತ'ವೆಂಬ ಆಕಾಶದಲ್ಲಿ ಓತಪ್ರೋತವಾಗಿರುತ್ತಾನೆ ಎಂದು ಉತ್ತರವನ್ನು ಕೊಟ್ಟ ಬಳಿಕ ಪ್ರಕೃತಪ್ರಶ್ನೋತ್ತರಗಳು ಬಂದಿವೆ.

2. ಅವ್ಯಾಕೃತಾಕಾಶವು ಏತರಲ್ಲಿ ಓತಪ್ರೋತವಾಗಿದೆ ಎಂಬ ಉಪಕ್ರಮದ ಪ್ರಶ್ನೆಗೆ ಅನುಗುಣವಾಗಿ ಉಪಸಂಹಾರದಲ್ಲಿಯೂ ಅಕ್ಷರದಲ್ಲಿ ಓತಪ್ರೋತವಾಗಿದೆ ಎಂದು ಉತ್ತರವನ್ನು ಹೇಳಿದೆ. ಆದ್ದರಿಂದ ಪೃಥಿವ್ಯಾದಿಯಾಗಿ ಆಕಾಶದವರೆಗಿನದೆಲ್ಲವೂ ಏತರಲ್ಲಿ ಓತಪ್ರೋತವಾಗಿದೆಯೋ ಅದನ್ನೇ ಇಲ್ಲಿ ಹೇಳಬೇಕು ; ಉಪಾಸ್ಯವಾದ ಓಂಕಾರವನ್ನು ಹೇಳುವದಕ್ಕೆ ಕಾರಣವಿಲ್ಲ.

ಆಕಾಶಾಂತವಾದದ್ದನ್ನು ಧರಿಸಿರುವದೆಂಬುದು ಬ್ರಹ್ಮವನ್ನು (ಬಿಟ್ಟರೆ) ಮತ್ತೊಂದಕ್ಕೆ ಹೊಂದುವಹಾಗಿಲ್ಲ[1]. ಇನ್ನು "ಇದೆಲ್ಲವೂ ಓಂಕಾರವೇ" (ಛಾಂ. ೨-೨೩-೩) ಎಂದು (ಶ್ರುತಿಯನ್ನು ಉದಾಹರಿಸಿತ್ತಲ್ಲ), ಅದೂ (ಓಂಕಾರವು) ಬ್ರಹ್ಮಜ್ಞಾನಕ್ಕೆ[2] ಸಾಧನವಾಗಿರುವದರಿಂದ (ಅದನ್ನು) ಸ್ತುತಿಮಾಡುವದಕ್ಕೆ (ಬಂದಿದೆ ಎಂದು) ಅರಿಯಬೇಕು[3]. ಆದ್ದರಿಂದ 'ನಾಶವಾಗುವದಿಲ್ಲ' (ನ ಕ್ಷರತಿ), ಮತ್ತು (ಎಲ್ಲವನ್ನೂ) ವ್ಯಾಪಿಸಿಕೊಂಡಿದೆ (ಅಶ್ನುತೇ) ಎಂಬ (ವ್ಯುತ್ಪತ್ತಿಯಿಂದ) ನಿತ್ಯವೂ ವ್ಯಾಪಿಯೂ ಆಗಿರುವದರಿಂದ[4] (ಈ) ಅಕ್ಷರವು ಪರಬ್ರಹ್ಮವೇ.

## ಅಕ್ಷರವು ಪ್ರಧಾನವಲ್ಲ

(ಭಾಷ್ಯ)

೨೪೫. ಸ್ಯಾದೇತತ್ – ಕಾರ್ಯಸ್ಯ ಚೇತ್ ಕಾರಣಾಧೀನತ್ವಮ್ ಅಮ್ಬರಾನ್ತಧೃತಿರಭ್ಯುಪಗಮ್ಯತೇ, ಪ್ರಧಾನಕಾರಣವಾದಿನೋಽಪಿ ಇಯಮ್ ಉಪಪದ್ಯತೇ । ಕಥಮ್ ಅಮ್ಬರಾನ್ತಧೃತೇಃ ಬ್ರಹ್ಮತ್ವಪ್ರತಿಪತ್ತಿಃ ? ಅತ ಉತ್ತರಂ ಪಠತಿ—

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಅಭಿಪ್ರಾಯವು) ಇದಾಗಿರಬಹುದು : ಕಾರ್ಯವು ಕಾರಣದ ಅಧೀನವಾಗಿರುವದೇ ಅಂಬರಾಂತಧೃತಿಯಾದರೆ, ಇದು **ಪ್ರಧಾನ ಕಾರಣವಾದಿ**ಗೂ ಹೊಂದುತ್ತದೆ[5]. (ಹೀಗಿರುವಲ್ಲಿ) ಅಂಬರಾನ್ತಧೃತಿಯಿಂದ ಬ್ರಹ್ಮವೆಂಬ ತಿಳಿವಳಿಕೆ(ಯುಂಟಾಗುವದು) ಹೇಗೆ ?

ಇದಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೆ:

---

1. ಏಕೆಂದರೆ ಅವ್ಯಾಕೃತಾಕಾಶದವರೆಗಿನದೆಲ್ಲವನ್ನೂ ಧರಿಸಿರುವದು ಸರ್ವಕಾರಣನಾಗಿರುವ ಬ್ರಹ್ಮವಲ್ಲದೆ ಮತ್ತೆ ಯಾವದೂ ಆಗಿರುವದಿಲ್ಲ.

2. ಬ್ರಹ್ಮದ ಉಪಾಸನೆಗೆ.

3. ಅದರೆ ಪ್ರಕೃತದಲ್ಲಿ ಓಂಕಾರದ ಉಪಾಸನೆಯೇನೂ ಪ್ರಕೃತವಾಗಿರುವದಿಲ್ಲ.

4. ಅಂಬರಾಂತಧೃತಿಯು ಓಂಕಾರಕ್ಕೆ ಹೊಂದುವದಿಲ್ಲವಾದ್ದರಿಂದಲೂ ಬ್ರಹ್ಮಕ್ಕೆ ಹೊಂದುವದರಿಂದಲೂ ರೂಢ್ಯರ್ಥವನ್ನು ಬಿಟ್ಟು ಈ ಯೌಗಿಕಾರ್ಥವನ್ನು ಸ್ವೀಕರಿಸಬೇಕು ಎಂದು ಭಾವ.

5. ಏಕೆಂದರೆ ಪ್ರಧಾನವೂ ತನ್ನ ಕಾರ್ಯಗಳನ್ನೆಲ್ಲ ಧರಿಸಿರುತ್ತದೆ. ಆಕಾಶವೆಂಬ ಮಾತಿಗೆ ಭೂತಾಕಾಶವೆಂಬರ್ಥವನ್ನು ಮಾಡಿ ಅದರಲ್ಲಿ ಕಾಲತ್ರಯವಿಭಕ್ತವಾದ ಕಾರ್ಯವೆಲ್ಲವೂ ಇರುತ್ತದೆ ಎಂದು ಪೂರ್ವಪಕ್ಷಿಯು ಶ್ರುತಿಗೆ ಅರ್ಥಮಾಡಿರುತ್ತಾನೆ. ಅಕ್ಷರವೆಂಬ ಮಾತು ಪ್ರಧಾನಕ್ಕೂ ಯೌಗಿಕವಾಗಿ ಅನ್ವಯಿಸುತ್ತದೆ.

**ಸಾ ಚ ಪ್ರಶಾಸನಾತ್ ॥ ೧೧ ॥**

೧೧. ಆ (ಅಂಬರಾಂತಧೃತಿಯು ಪರಮೇಶ್ವರನ ಕರ್ಮವೇ); ಏಕೆಂದರೆ ಪ್ರಶಾಸನ(ವನ್ನು ಹೇಳಿದೆ.)

( ಭಾಷ್ಯ )

೨೪೬. ಸಾ ಚ ಅಮ್ಬರಾನ್ತಧೃತಿಃ ಪರಮೇಶ್ವರಸ್ಯೈವ ಕರ್ಮ । ಕಸ್ಮಾತ್ ? ಪ್ರಶಾಸನಾತ್ । ಪ್ರಶಾಸನಂ ಹಿ ಇಹ ಶ್ರೂಯತೇ--- "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚನ್ದ್ರಮಸೌ ವಿಧೃತೌ ತಿಷ್ಠತಃ" ( ಬೃ. ೩-೮-೯ ) ಇತ್ಯಾದಿ । ಪ್ರಶಾಸನಂ ಚ ಪಾರಮೇಶ್ವರಂ ಕರ್ಮ । ನಾಚೇತನಸ್ಯ ಪ್ರಧಾನಸ್ಯ ಪ್ರಶಾಸನಂ ಭವತಿ । ನ ಹಿ ಅಚೇತನಾನಾಂ ಘಟಾದಿಕಾರಣಾನಾಂ ಮೃದಾದೀನಾಂ ಘಟಾದಿವಿಷಯಂ ಪ್ರಶಾಸನಮಸ್ತಿ ॥

( ಭಾಷ್ಯಾರ್ಥ )

ಆ ಅಂಬರಾಂತಧೃತಿಯು ಪರಮೇಶ್ವರನ ಕರ್ಮವೇ. ಏಕೆ ? ಎಂದರೆ ಪ್ರಶಾಸನವನ್ನು (ಹೇಳಿರುವದರಿಂದ) "ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿ ಸೂರ್ಯಚಂದ್ರರು ಹಿಡಿದು ನಿಲ್ಲಿಸಲ್ಪಟ್ಟಿರುತ್ತಾರೆ." (ಬೃ. ೩-೮-೯) ಎಂದು ಮುಂತಾಗಿ[1] ಪ್ರಶಾಸನವನ್ನು (ಇಲ್ಲಿ) ಹೇಳಿದೆಯುಲ್ಲವೆ ? (ಈ) ಅಪ್ಪಣೆ ಮಾಡುವದೆಂಬುದು ಪರಮೇಶ್ವರನ ಕರ್ಮವು. ಅಚೇತನವಾದ ಪ್ರಧಾನಕ್ಕೆ ಅಪ್ಪಣೆಮಾಡುವದು ಇರುವಹಾಗಿಲ್ಲ ; ಅಚೇತನವಾಗಿರುವ ಗಡಿಗೆಯೇ ಮುಂತಾದವುಗಳಿಗೆ ಕಾರಣವಾಗಿರುವ ಮಣ್ಣು ಮುಂತಾದವುಗಳು ಗಡಿಗೆಯೇ ಮುಂತಾದದ್ದರ ವಿಷಯಕ್ಕೆ ಅಪ್ಪಣೆಮಾಡುವದೆಂಬುದು ಇಲ್ಲವಷ್ಟೆ.

**ಅನ್ಯಭಾವವ್ಯಾವೃತ್ತೇಶ್ಚ ॥ ೧೨॥**

೧೨. ಅನ್ಯಭಾವವ್ಯಾವೃತ್ತಿಯಿಂದಲೂ (ಹೀಗೆ).

ಅಕ್ಷರವು ಮತ್ತೆಯಾವದೂ ಆಗಲಾರದು

(ಭಾಷ್ಯ)

೨೪೭. ಅನ್ಯಭಾವವ್ಯಾವೃತ್ತೇಶ್ಚ ಕಾರಣಾತ್ ಬ್ರಹ್ಮೈವ ಅಕ್ಷರಶಬ್ದ

---

1. ಮುಂತಾಗಿ ಎಂಬ ಮಾತಿನಿಂದ ಗ್ರಹಿಸತಕ್ಕದ್ದು ಏನೆಂದರೆ: ದ್ಯಾವಾಪೃಥಿವಿಗಳು ಇದರ ಅಪ್ಪಣೆಯಿಂದಲೇ ನಿಂತಿವೆ : ನಿಮಿಷಮುಹೂರ್ತವೇ ಮುಂತಾದ ಕಾಲಗಳು ಇದರ ಅಪ್ಪಣೆಯಿಂದಲೇ ನಿಂತಿವೆ ; ಇದರ ಅಪ್ಪಣೆಯಿಂದಲೇ ನದಿಗಳು ಗೊತ್ತಾಗಿ ಕೆಲವು ಪೂರ್ವಕ್ಕೂ ಕೆಲವು ಪಶ್ಚಿಮಕ್ಕೂ ಹರಿಯುತ್ತಿವೆ ; ದಾನಮಾಡುವವರನ್ನು ಜನರು ಹೊಗಳುವದು ಇದರ ಅಪ್ಪಣೆಯಿಂದ ; ದೇವತೆಗಳು ಯಜಮಾನನನ್ನೂ ಪಿತೃಗಳು ದರ್ವೀಹೋಮವನ್ನೂ ಅನುಸರಿಸಿಕೊಂಡಿರುವದು ಇದರ ಅಪ್ಪಣೆಯಿಂದ.

ವಾಚ್ಯಮ್ । ತಸ್ಯೈವ ಅಮ್ಬರಾನ್ತಧೃತಿಃ ಕರ್ಮ ನಾನ್ಯಸ್ಯ ಕಸ್ಯಚಿತ್। ಕಿಮಿದಮ್ ಅನ್ಯಭಾವವ್ಯಾವೃತ್ತೇರಿತಿ ? ಅನ್ಯಸ್ಯ ಭಾವಃ ಅನ್ಯಭಾವಃ । ತಸ್ಮಾದ್ ವ್ಯಾವೃತ್ತಿಃ ಅನ್ಯಭಾವವ್ಯಾವೃತ್ತಿಃ ಇತಿ । ಏತದುಕ್ತಂ ಭವತಿ । ಯದನ್ಯದ್ ಬ್ರಹ್ಮಣೋಽಕ್ಷರಶಬ್ದವಾಚ್ಯಮ್ ಇಹ ಆಶಙ್ಕ್ಯತೇ ತದ್ಭಾವಾತ್ ಇದಮ್ ಅಮ್ಬರಾನ್ತವಿಧಾರಣಮ್ ಅಕ್ಷರಂ ವ್ಯಾವರ್ತಯತಿ ಶ್ರುತಿಃ "ತದ್ವಾ ಏತದಕ್ಷರಂ ಗಾರ್ಗ್ಯದೃಷ್ಟಂ ದ್ರಷ್ಟೃಶ್ರುತಂ ಶ್ರೋತ್ರಮತಂ ಮನ್ತ್ರವಿಜ್ಞಾತಂ ವಿಜ್ಞಾತೃ" (ಬೃ. ೩-೮-೧೧) ಇತಿ । ತತ್ರ ಅದೃಷ್ಟತ್ವಾದಿವ್ಯಪದೇಶಃ ಪ್ರಧಾನಸ್ಯಾಪಿ ಸಂಭವತಿ । ದ್ರಷ್ಟೃತ್ವಾದಿವ್ಯಪದೇಶಸ್ತು ನ ಸಂಭವತಿ । ಅಚೇತನತ್ವಾತ್ । ತಥಾ "ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃ ನಾನ್ಯದತೋಽಸ್ತಿ ಮನ್ತೃ ನಾನ್ಯದತೋಽಸ್ತಿ ವಿಜ್ಞಾತೃ" (ಬೃ. ೩-೮-೧೧) ಇತ್ಯಾತ್ಮಭೇದಪ್ರತಿಷೇಧಾತ್ । ನ ಶಾರೀರಸ್ಯಾಪಿ ಉಪಾಧಿಮತಃ ಅಕ್ಷರಶಬ್ದವಾಚ್ಯತ್ವಮ್ । "ಅಚಕ್ಷುಷ್ಕಮಶ್ರೋತ್ರಮವಾಗಮನಃ" (ಬೃ. ೩-೮-೮) ಇತಿ ಚ ಉಪಾಧಿಮತ್ತಾಪ್ರತಿಷೇಧಾತ್ । ನ ಹಿ ನಿರುಪಾಧಿಕಃ ಶಾರೀರೋ ನಾಮ ಭವತಿ । ತಸ್ಮಾತ್ ಪರಮೇವ ಬ್ರಹ್ಮ ಅಕ್ಷರಮ್ ಇತಿ ನಿಶ್ಚಯಃ ॥

(ಭಾಷ್ಯಾರ್ಥ)

ಅನ್ಯಭಾವವ್ಯಾವೃತ್ತಿ ಎಂಬ ಕಾರಣದಿಂದಲೂ ಬ್ರಹ್ಮವೇ (ಇಲ್ಲಿ) ಅಕ್ಷರಶಬ್ದವಾಚ್ಯವಾದದ್ದು ; ಅಂಬರಾಂತಧೃತಿಯು ಅದರದ್ದೇ ಕರ್ಮವು ಮತ್ತೆಯಾರದ್ದೂ ಅಲ್ಲ. 'ಅನ್ಯಭಾವವ್ಯಾವೃತ್ತಿಯಿಂದ ಎಂದು (ಸೂತ್ರದಲ್ಲಿ ಹೇಳಿದೆಯಲ್ಲ), ಇದು ಯಾವದು ? ಮತ್ತೊಂದರ ಭಾವವು ಅನ್ಯಭಾವವು ; ಅದರಿಂದ ಬೇರ್ಪಡಿಸುವದು ಅನ್ಯಭಾವವ್ಯಾವೃತ್ತಿಯು. (ಇಲ್ಲಿ) ಇಷ್ಟನ್ನು ಹೇಳಿದಂತಾಯಿತು : ಅಕ್ಷರಶಬ್ದವಾಚ್ಯವೆಂದು ಬ್ರಹ್ಮಕ್ಕಿಂತ ಬೇರೆಯಾಗಿ (ಯಾವ)ಯಾವದನ್ನು ಆಶಂಕಿಸಲಾಗುತ್ತದೆಯೋ ಅದರ ಸ್ವರೂಪದಿಂದ ಈ ಅಂಬರಾಂತವಾಗಿ ವಿಧಾರಣೆಮಾಡಿಕೊಂಡಿರುವ ಅಕ್ಷರವನ್ನು "ಗಾರ್ಗಿಯೆ, ಅದೇ ಈ ಅಕ್ಷರವು, ಅದೃಷ್ಟವು, ದ್ರಷ್ಟೃ ; ಅಶ್ರುತವು, ಶ್ರೋತೃ ; ಅಮತವು, ಮಂತೃ ; ಅವಿಜ್ಞಾತವು, ವಿಜ್ಞಾತೃ" (ಬೃ. ೩-೮--೧೧) ಎಂಬ ಶ್ರುತಿಯು ಬೇರ್ಪಡಿಸುತ್ತದೆ. ಇಲ್ಲಿ ಅದೃಷ್ಟ ಎಂದು ಮುಂತಾಗಿ ಹೇಳಿರುವದು ಪ್ರಧಾನಕ್ಕೂ ಆಗುತ್ತದೆ ; ಆದರೆ ದ್ರಷ್ಟೃ ಎಂದು ಮುಂತಾಗಿ ಹೇಳಿರುವದು (ಪ್ರಧಾನವು) ಅಚೇತನವಾಗಿರುವದರಿಂದ (ಅದಕ್ಕೆ) ಆಗುವಂತಿಲ್ಲ. ಹೀಗೆಯೇ "ಇದಕ್ಕಿಂತ ಬೇರೆ ದ್ರಷ್ಟೃವಿಲ್ಲ, ಇದಕ್ಕಿಂತ ಬೇರೆ ಶ್ರೋತೃವಿಲ್ಲ, ಇದಕ್ಕಿಂತ ಬೇರೆ ಮಂತೃವಿಲ್ಲ, ಇದಕ್ಕಿಂತ ಬೇರೆ ವಿಜ್ಞಾತೃವಿಲ್ಲ" (ಬೃ. ೩-೮-೧೧) ಎಂದು ಆತ್ಮಭೇದ

ವನ್ನು ಅಲ್ಲಗಳೆದಿರುವದರಿಂದ ಉಪಾಧಿಯುಳ್ಳ ಶಾರೀರನೂ ಅಕ್ಷರಶಬ್ದವಾಚ್ಯ ನಲ್ಲ[1]. "ಅಕ್ಷರವು ಚಕ್ಷುಸ್ಸಿಲ್ಲದ್ದು, ಶ್ರೋತ್ರವಿಲ್ಲದ್ದು, ವಾಕ್ಕಿಲ್ಲದ್ದು, ಮನಸ್ಸಿಲ್ಲದ್ದು" (ಬೃ. ೩-೮-೮) ಎಂದು (ಅಕ್ಷರಕ್ಕೆ) ಉಪಾಧಿಯನ್ನು ಅಲ್ಲಗಳೆದಿರುವದರಿಂದಲೂ (ಶಾರೀರನು ಅಕ್ಷರವಲ್ಲ) ; ಏಕೆಂದರೆ **ಯಾವ ಉಪಾಧಿಯೂ ಇಲ್ಲದವನು ಶಾರೀರನೆನಿಸಲಾರನು**[1]. ಆದ್ದರಿಂದ 'ಅಕ್ಷರವು' ಪರಬ್ರಹ್ಮವೇ ಎಂದು ನಿಶ್ಚಯವಾಯಿತು.

## ೪. ಈಕ್ಷತಿಕರ್ಮವ್ಯಪದೇಶಾಧಿಕರಣ

(ಪ್ರಶ್ನ ೫-೫ರಲ್ಲಿ ಓಂಕಾರದ ಮೂಲಕವಾಗಿ ಧ್ಯೇಯವಾದದ್ದು ಬ್ರಹ್ಮ)

**ಈಕ್ಷತಿಕರ್ಮವ್ಯಪದೇಶಾತ್ ಸಃ ॥ ೧೩ ॥**

೧೩. ಈಕ್ಷಣಕ್ಕೆ ಕರ್ಮವೆಂದು ಹೇಳಿರುವದರಿಂದ ಆ (ಪರಮಾತ್ಮನೇ ಓಂಕಾರದ ಮೂಲಧ್ಯೇಯನು).

### ವಿಷಯವೂ ಸಂಶಯವೂ

(ಭಾಷ್ಯ)

೨೪೮. "ಏತದ್ವೈ ಸತ್ಯಕಾಮ ಪರಂ ಚಾಪರಂ ಬ್ರಹ್ಮ ಯದೋಂಕಾರಸ್ತಸ್ಮಾದ್ ವಿದ್ವಾನೇತೇನೈವಾಯತನೇನೈಕತರಮನ್ವೇತಿ" (ಪ್ರ. ೫-೨) ಇತಿ ಪ್ರಕೃತ್ಯ ಶ್ರೂಯತೇ "ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ" (ಪ್ರ. ೫-೫) ಇತಿ । ಕಿಮ್ ಅಸ್ಮಿನ್ ವಾಕ್ಯೇ ಪರಂ ಬ್ರಹ್ಮ ಅಭಿಧ್ಯಾತವ್ಯಮ್ ಉಪದಿಶ್ಯತೇ ಆಹೋಸ್ವಿತ್ ಅಪರಮ್ ಇತಿ? "ಏತೇನೈವಾಯತನೇನ ಪರಮಪರಂ ವೈಕತರಮನ್ವೇತಿ" ಇತಿ ಪ್ರಕೃತತ್ವಾತ್ ಸಂಶಯಃ ॥

(ಭಾಷ್ಯಾರ್ಥ)

"ಸತ್ಯಕಾಮನೆ,[2] ಈ ಪರ(ಬ್ರಹ್ಮವೂ) ಅಪರಬ್ರಹ್ಮವೂ ಇದೆಯಲ್ಲ, ಇದು ಓಂಕಾರವೇ; ಆದ್ದರಿಂದ (ಹೀಗೆಂದು) ಅರಿತವನು ಇದೇ ಆಯತನದಿಂದಲೇ (ಇವೆರಡರಲ್ಲಿ) ಒಂದನ್ನು ಸೇರುತ್ತಾನೆ" (ಪ್ರ ೫-೨) ಎಂದು

1. ಶಾರೀರನು ಅಕ್ಷರವೆಂದಾದರೆ ಅಕ್ಷರಕ್ಕಿಂತಲೂ ಬೇರೆ ದ್ರಷ್ಟೃಗಳು ಇರಬೇಕಾಗುವದು ; ಏಕೆಂದರೆ ಶಾರೀರರು ಹಲವರು ಇರುತ್ತಾರೆ.

2 ಶೈಬ್ಯಸತ್ಯಕಾಮನಿಗೆ ಪಿಪ್ಪಲಾದನು ಹೇಳಿದ ಮಾತಿದು.

ಪ್ರಾರಂಭಿಸಿ "ಆದರೆ ಯಾವನು ಮೂರು ಮಾತ್ರೆಗಳ ಓಮ್ ಎಂಬ ಇದೇ ಅಕ್ಷರದಿಂದ ಈ ಪರಮಪುರುಷನನ್ನು ಅಭಿಧ್ಯಾನಮಾಡುವನೋ....'' (ಪ್ರ. ೫-೫) ಎಂದು ಶ್ರುತಿಯಲ್ಲಿದೆ. ಈ ವಾಕ್ಯದಲ್ಲಿ ಪರಬ್ರಹ್ಮವನ್ನು ಅಭಿಧ್ಯಾನ ಮಾಡಬೇಕೆಂದು ಹೇಳಿದೆಯೆ, ಅಥವಾ ಅಪರ(ಬ್ರಹ್ಮವನ್ನು ಅಭಿಧ್ಯಾನಮಾಡ ಬೇಕೆಂದು ಹೇಳಿದೆಯೆ)? 'ಇದೇ ಆಯತನದಿಂದಲೇ ಪರ, ಅಪರ- ಎಂಬೆರಡ ರಲ್ಲಿ ಒಂದನ್ನು ಸೇರುತ್ತಾನೆ' ಎಂದು ಪ್ರಕೃತವಾಗಿರುವದರಿಂದ[1] (ಈ) ಸಂಶಯ (ವುಂಟಾಗುತ್ತದೆ).

## ಪೂರ್ವಪಕ್ಷ: ಅಪರಬ್ರಹ್ಮವೇ ಓಂಕಾರಧ್ಯೇಯವು

( ಭಾಷ್ಯ )

೨೪೯. ತತ್ರ ಅಪರಮಿದಂ ಬ್ರಹ್ಮ ಇತಿ ಪ್ರಾಪ್ತಮ್ । ಕಸ್ಮಾತ್? ''ಸ ತೇಜಸಿ ಸೂರ್ಯೇ ಸಂಪನ್ನಃ'' (ಪ್ರ. ೫-೫), "ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್" (ಪ್ರ. ೫-೫) ಇತಿ ಚ ತದ್ವಿದಃ ದೇಶಪರಿಚ್ಛಿನ್ನಸ್ಯ ಫಲಸ್ಯ ಉಚ್ಯಮಾನತ್ವಾತ್ । ನ ಹಿ ಪರಬ್ರಹ್ಮವಿದ್ ದೇಶಪರಿಚ್ಛಿನ್ನಂ ಫಲಮ್ ಅಶ್ನುವೀತ ಇತಿ ಯುಕ್ತಮ್ । ಸರ್ವಗತತ್ವಾತ್ ಪರಸ್ಯ ಬ್ರಹ್ಮಣಃ । ನನು ಅಪರಬ್ರಹ್ಮಪರಿಗ್ರಹೇ ಪರಂ ಪುರುಷಂ ಇತಿ ವಿಶೇಷಣಂ ನ ಉಪಪದ್ಯತೇ । ನೈಷ ದೋಷಃ । ಪಿಣ್ಡಾಪೇಕ್ಷಯಾ ಪ್ರಾಣಸ್ಯ ಪರತ್ವೋಪಪತ್ತೇಃ ಇತಿ ॥

( ಭಾಷ್ಯಾರ್ಥ )

ಇಲ್ಲಿ ಈ ಬ್ರಹ್ಮವು ಅಪರವು ಎಂದು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆ? ಎಂದರೆ ''ಆತನು ತೇಜಸ್ಸಾದ ಸೂರ್ಯನಲ್ಲಿ ಸೇರಿಕೊಳ್ಳುತ್ತಾನೆ'' (ಪ್ರ. ೫-೫) "ಆತನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡುತ್ತಾನೆ" (ಪ್ರ. ೫-೫) ಎಂದೂ ಆ (ಬ್ರಹ್ಮ)ವನ್ನು ಉಪಾಸನೆಮಾಡಿದವನಿಗೆ ದೇಶಪರಿಚ್ಛಿನ್ನವಾದ ಫಲವನ್ನು ಇಲ್ಲಿ ಹೇಳಿರುತ್ತದೆ. ಪರಬ್ರಹ್ಮವನ್ನು ಅರಿತುಕೊಂಡವನು ದೇಶಪರಿಚ್ಛಿನ್ನನಾದ ಫಲವನ್ನು ಪಡೆಯುವನೆಂಬುದು ಸರಿಯಲ್ಲವೇ ಅಲ್ಲ; ಏಕೆಂದರೆ ಪರಬ್ರಹ್ಮವು ಸರ್ವಗತವಾಗಿರುತ್ತದೆ[2].

(ಆಕ್ಷೇಪ) :— ಅಪರಬ್ರಹ್ಮವನ್ನು (ಇಲ್ಲಿ) ತೆಗೆದುಕೊಂಡರೆ (ಈ) ''ಪರಮಪುರುಷನನ್ನು'' ಎಂಬ ವಿಶೇಷಣವು ಹೊಂದುವದಿಲ್ಲವಲ್ಲ!

---

1. ಇದುವರೆಗೆ ಉಪಾಸ್ಯವಾದದ್ದು ಬ್ರಹ್ಮವೊ, ಜೀವಾದಿಗಳೊ? ಎಂಬ ಸಂಶಯವೇ ಬರುತ್ತಿತ್ತು; ಇಲ್ಲಿ ಪರಾಪರಬ್ರಹ್ಮಗಳೆರಡೂ ಪ್ರಕೃತವಾಗಿರುವದರಿಂದ ಹೀಗೆ ಸಂಶಯವುಂಟಾಗಿದೆ.

2. ಇದು ಜ್ಞೇಯಬ್ರಹ್ಮವಾಕ್ಯವಲ್ಲವೆಂಬುದನ್ನು ಪೂರ್ವಪಕ್ಷಿಯು ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

(ಪರಿಹಾರ) :— ಇದೇನೂ ದೋಷವಲ್ಲ. ಏಕೆಂದರೆ ಪಿಂಡದ ಅಪೇಕ್ಷೆಯಿಂದ[1] ಪ್ರಾಣನು[2] ಪರನೆಂದಾಗಬಹುದು[3].

## ಸಿದ್ಧಾಂತ: ಪರಬ್ರಹ್ಮವನ್ನೇ ಧ್ಯಾನಮಾಡಬೇಕೆಂದು ಹೇಳಿದೆ

(ಭಾಷ್ಯ)

೨೫೦. ಏವಂ ಪ್ರಾಪ್ತೇ ಅಭಿಧೀಯತೇ । ಪರಮೇವ ಬ್ರಹ್ಮ ಇಹ ಅಭಿಧ್ಯಾತವ್ಯಮ್ ಉಪದಿಶ್ಯತೇ । ಕಸ್ಮಾತ್ ? ಈಕ್ಷತಿಕರ್ಮವ್ಯಪದೇಶಾತ್ । ಈಕ್ಷತಿಃ, ದರ್ಶನಮ್ । ದರ್ಶನವ್ಯಾಪ್ಯಮ್ ಈಕ್ಷತಿಕರ್ಮ । ಈಕ್ಷತಿಕರ್ಮತ್ವೇನ ಅಸ್ಯ ಅಭಿಧ್ಯಾತವ್ಯಸ್ಯ ಪುರುಷಸ್ಯ ವಾಕ್ಯಶೇಷೇ ವ್ಯಪದೇಶೋ ಭವತಿ । "ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ" (ಪ್ರ. ೫-೫) ಇತಿ । ತತ್ರ ಅಭಿಧ್ಯಾಯತೇಃ ಅತಥಾಭೂತಮಪಿ ವಸ್ತು ಕರ್ಮ ಭವತಿ । ಮನೋರಥಕಲ್ಪಿತಸ್ಯಾಪಿ ಅಭಿಧ್ಯಾಯತಿ ಕರ್ಮತ್ವಾತ್ । ಈಕ್ಷತೇಸ್ತು ತಥಾಭೂತಮೇವ ವಸ್ತು ಲೋಕೇ ಕರ್ಮ ದೃಷ್ಟಮ್ ಇತ್ಯತಃ ಪರಮಾತ್ಮೈವ ಅಯಂ ಸಮ್ಯಗ್ದರ್ಶನವಿಷಯಭೂತಃ ಈಕ್ಷತಿಕರ್ಮತ್ವೇನ ವ್ಯಪದಿಷ್ಟ ಇತಿ ಗಮ್ಯತೇ । ಸ ಏವ ಚೇಹ ಪರಪುರುಷಶಬ್ದಾಭ್ಯಾಮ್ ಅಭಿಧ್ಯಾತವ್ಯಃ ಪ್ರತ್ಯಭಿಜ್ಞಾಯತೇ । ನನು ಅಭಿಧ್ಯಾನೇ ಪರಃ ಪುರುಷ ಉಕ್ತಃ, ಈಕ್ಷಣೇ ತು ಪರಾತ್ ಪರಃ । ಕಥಮ್ ಇತರಃ ಇತರತ್ರ ಪ್ರತ್ಯಭಿಜ್ಞಾಯತ ಇತಿ ? ಅತ್ರೋಚ್ಯತೇ । ಪರಪುರುಷಶಬ್ದೌ ತಾವತ್ ಉಭಯತ್ರ ಸಾಧಾರಣೌ । ನ ಚ ಅತ್ರ ಜೀವಘನ ಶಬ್ದೇನ ಪ್ರಕೃತಃ ಅಭಿಧ್ಯಾತವ್ಯಃ ಪರಃ ಪುರುಷಃ ಪರಾಮೃಶ್ಯತೇ । ಯೇನ ತಸ್ಮಾತ್ ಪರಾತ್ ಪರೋಽಯಮ್ ಈಕ್ಷಿತವ್ಯಃ ಪುರುಷಃ ಅನ್ಯಃ ಸ್ಯಾತ್ । ಕಸ್ತರ್ಹಿ ಜೀವಘನ ಇತಿ ? ಉಚ್ಯತೇ । ಘನೋ ಮೂರ್ತಿಃ । ಜೀವಲಕ್ಷಣಃ ಘನಃ ಜೀವಘನಃ : ಸೈನ್ಧವಖಿಲ್ಯವತ್ ಯಃ ಪರಮಾತ್ಮನೋ ಜೀವರೂಪಃ ಖಿಲ್ಯಭಾವಃ ಉಪಾಧಿಕೃತಃ ಪರಶ್ಚ ವಿಷಯೇನ್ದ್ರಿಯೇಭ್ಯಃ, ಸೋಽತ್ರ ಜೀವಘನಃ ಇತಿ । ಅಪರ ಆಹ— "ಸ ಸಾಮಭಿರುನ್ನೀಯತೇ ಬ್ರಹ್ಮಲೋಕಮ್" (ಪ್ರ. ೫--೫) ಇತ್ಯತೀತಾನನ್ತರವಾಕ್ಯನಿರ್ದಿಷ್ಟಃ ಯೋ ಬ್ರಹ್ಮಲೋಕಃ, ಪರಶ್ಚ ಲೋಕಾನ್ತರೇಭ್ಯಃ, ಸೋಽತ್ರ 'ಜೀವಘನಃ' ಇತ್ಯುಚ್ಯತೇ । ಜೀವಾನಾಂ ಹಿ

---

1. ಪಿಂಡವೆಂದರೆ ಶರೀರವು; ಸಮಷ್ಟಿಸ್ಥೂಲಶರೀರೋಪಾಧಿಯುಳ್ಳ ವಿರಾಟ್ಪುರುಷನನ್ನು ಇಲ್ಲಿ ಪಿಂಡವೆಂದಿದೆ.

2. ಸಮಷ್ಟಿಪ್ರಾಣೋಪಾಧಿಕನಾದ ಸೂತ್ರಾತ್ಮನು, ಅಥವಾ ಹಿರಣ್ಯಗರ್ಭನು; ಇವನ ಲೋಕವೇ ಬ್ರಹ್ಮಲೋಕವು. ಇವನನ್ನೇ ಅಪರಬ್ರಹ್ಮವೆಂದಿರುವದು.

3 ಪರಬ್ರಹ್ಮ, ಅಪರಬ್ರಹ್ಮ- ಇವುಗಳ ವಿಷಯಕ್ಕೆ ಪೀಠಿಕೆಯನ್ನು ನೋಡಿ.

ಸರ್ವೇಷಾಂ ಕರಣಪರಿವೃತಾನಾಂ ಸರ್ವಕರಣಾತ್ಮನಿ ಹಿರಣ್ಯಗರ್ಭೇ ಬ್ರಹ್ಮಲೋಕನಿವಾಸಿನಿ ಸಂಘಾತೋಪಪತ್ತೇಃ ಭವತಿ ಬ್ರಹ್ಮಲೋಕೋ 'ಜೀವಘನಃ'। ತಸ್ಮಾತ್ ಪರೋ ಯಃ ಪರಮಾತ್ಮಾ ಈಕ್ಷಣಕರ್ಮಭೂತಃ ಸ ಏವ ಅಭಿಧ್ಯಾನೇಽಪಿ ಕರ್ಮಭೂತಃ ಇತಿ ಗಮ್ಯತೇ ॥

( ಭಾಷ್ಯ )

ಹೀಗೆಂದು (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ: **ಪರಬ್ರಹ್ಮವನ್ನೇ ಇಲ್ಲಿ ಅಭಿಧ್ಯಾನಮಾಡಬೇಕೆಂದು ಹೇಳಿದೆ**[1] (ಎಂದು ತಿಳಿಯಬೇಕು). ಏಕೆ ? ಎಂದರೆ (ಈಕ್ಷತಿಕರ್ಮವ್ಯಪದೇಶಾತ್) ಈಕ್ಷಣಕ್ಕೆ ಕರ್ಮವೆಂದು ಹೇಳಿರುವದರಿಂದ (ಸೂತ್ರದಲ್ಲಿ) ಈಕ್ಷತಿ ಎಂದರೆ ದರ್ಶನವು. ಈಕ್ಷತಿಕರ್ಮ ಎಂದರೆ ದರ್ಶನದಿಂದ ವ್ಯಾಪ್ಯವಾದದ್ದು[2]. ಈಕ್ಷತಿಕರ್ಮವೆಂದು ಈ ಅಭಿಧ್ಯಾನಮಾಡಬೇಕಾದ ಪುರುಷನನ್ನು "ಆತನು ಈ ಜೀವಘನನೆಂಬ ಪರನಿಗಿಂತ ಪರನಾದ ಪುರಿಶಯನಾದ ಪುರುಷನನ್ನು ಕಾಣುತ್ತಾನೆ " (ಪ್ರ. ೫-೫) ಎಂದು ವಾಕ್ಯಶೇಷದಲ್ಲಿ[3] ಹೇಳಿದೆ. ಇಲ್ಲಿ ಅಭಿಧ್ಯಾನಕ್ಕೆ ನಿಜವಾಗಿಲ್ಲದ ವಸ್ತುವೂ ಕರ್ಮವಾಗಬಹುದು. ಏಕೆಂದರೆ ಮನೋರಥದಿಂದ ಕಲ್ಪಿಸಿಕೊಂಡದ್ದೂ ಅಭಿಧ್ಯಾನಕ್ಕೆ ವಿಷಯವಾಗಬಹುದಾಗಿದೆ[4]. ಆದರೆ ಈಕ್ಷಣಕ್ಕೆ ಸತ್ಯವಾದ ವಸ್ತುವೇ ಕರ್ಮವಾಗಿರುವದು ಕಂಡುಬಂದಿದೆ[5]. ಆದ್ದ

1. ಪರಬ್ರಹ್ಮವು ನಿರ್ವಿಶೇಷವಾದರೂ ಅದನ್ನು ಓಂಕಾರದ ಮೂಲಕ ಧ್ಯಾನ ಮಾಡಬಹುದು ಎಂದು ಭಾವ. ನಿರ್ಗುಣಬ್ರಹ್ಮವನ್ನು ಉಪಾಸನೆಮಾಡಬಹುದೆಂದು ಸೂತ್ರದಲ್ಲಿ ಹೇಳಿರುವದು ಇದೊಂದೇ ಕಡೆ.

2. ಕಾಣುವದೆಂಬ ಕ್ರಿಯೆಗೆ ವಿಷಯವಾದದ್ದು.

3. ಪ್ರಕರಣದಿಂದ ಸಂದಿಗ್ಧವಾಗಿರುವದನ್ನು ವಾಕ್ಯಶೇಷದಿಂದ ನಿರ್ಣಯಿಸಬೇಕು ಎಂದು ಭಾವ.

4. ಶಾಲಗ್ರಾಮಾದಿಗಳನ್ನು ವಿಷ್ಣುವೆಂದು ಧ್ಯಾನಮಾಡುವಂತೆ ಒಂದು ವಸ್ತುವನ್ನು ಮತ್ತೊಂದೆಂದು ಧ್ಯಾನಿಸಬೇಕೆಂದು ವಿಧಿಸಿರಬಹುದು ; ಅಥವಾ ಒಂದು ಮೋಟುಮರವನ್ನು ಮನುಷ್ಯನೆಂದು ತಾನೇ ಭ್ರಾಂತಿಯಿಂದ ಕಲ್ಪಿಸಿಕೊಂಡು ಚಿಂತಿಸಲೂಬಹುದು. ಆದ್ದರಿಂದ ಧ್ಯಾನಕ್ಕೆ ವಿಷಯವಾದದ್ದು ಧ್ಯಾನಕ್ಕೆ ಅನುಗುಣವಾಗಿಯೇ ಇರಬೇಕೆಂಬ ನಿಯಮವಿಲ್ಲ.

5. ಹಗ್ಗದ ಹಾವು ಮುಂತಾದವೂ ಈಕ್ಷಣಕ್ಕೆ ವಿಷಯವಾಗಿರುವಂತೆ ತೋರಿದರೂ ಅಲ್ಲಿ ನಿಜವಾದ ಈಕ್ಷಣವಾಗಲಿ ನಿಜವಾದ ವಸ್ತುವಾಗಲಿ ಇರುವದಿಲ್ಲ. ನಿಜವಾದ ಈಕ್ಷಣಕ್ಕೆ ಅನುಗುಣವಾಗಿಯೇ ಅದರ ವಿಷಯವಾದ ವಸ್ತುವಿರಬೇಕೆಂದು ಇಲ್ಲಿ ಹೇಳಿದೆ.

ರಿಂದ ಸಮ್ಯಗ್ದರ್ಶನಕ್ಕೆ ವಿಷಯನಾಗಿರುವ[1] ಪರಮಾತ್ಮನನ್ನೇ ಈಕ್ಷಣಕ್ಕೆ ಕರ್ಮವೆಂದು ಹೇಳಿದೆ ಎಂದು ನಿಶ್ಚಯವಾಗುತ್ತದೆ. ಮತ್ತು ಅವನನ್ನೇ ಇಲ್ಲಿ ಪರ, ಪುರುಷ– ಎಂಬ ಶಬ್ದಗಳಿಂದ ಅಭಿಧ್ಯಾನಮಾಡಬೇಕೆಂದು ಹೇಳಿದೆ ಎಂದು ಗುರುತಿಸಬಹುದಾಗಿದೆ[2].

## ಪರಾತ್ಪರನೆಂಬ ವಿಶೇಷಣದ ಅರ್ಥ

(ಆಕ್ಷೇಪ) :— ಅಭಿಧ್ಯಾನದಲ್ಲಿ ಪರಪುರುಷನನ್ನು ಹೇಳಿದೆ; ಈಕ್ಷಣದಲ್ಲಿ ಪರಾತ್ಪರ(ಪುರುಷ)ನನ್ನು ಹೇಳಿದೆ. (ಹೀಗಿರುವಲ್ಲಿ) ಒಂದು ಕಡೆಯಲ್ಲಿ (ಹೇಳಿರುವ ಪರಮಾತ್ಮನನ್ನೇ) ಇನ್ನೊಂದು ಕಡೆಯಲ್ಲಿಯೂ (ಅಭಿಧ್ಯಾನಮಾಡಬೇಕೆಂದು ಹೇಳಿದೆಯೆಂದು) ಗುರುತಿಸುವದು ಹೇಗೆ ?[3]

(ಪರಿಹಾರ) :— ಮೊದಲನೆಯದಾಗಿ ಪರ, ಪುರುಷ– ಎಂಬ ಶಬ್ದಗಳು ಎರಡು ಕಡೆಗೂ ಸಮಾನವಾಗಿರುತ್ತವೆ. ಇಲ್ಲಿ ಜೀವಘನ ಎಂಬ ಮಾತಿನಿಂದ ಪ್ರಕೃತನಾದ ಅಭಿಧ್ಯಾನಮಾಡತಕ್ಕ ಪರಪುರುಷನನ್ನು ಪರಾಮರ್ಶಿಸಿರುವದೂ ಇಲ್ಲ; ಹಾಗಿದ್ದರೆ ಆ ಪರನಿಗಿಂತ ಪರನಾದ ಈ ಈಕ್ಷಿತವ್ಯನಾಗಿರುವ ಪುರುಷನು ಬೇರೆ ಎಂದಾಗುತ್ತಿತ್ತು.

(ಪ್ರಶ್ನೆ) ;— ಹಾಗಾದರೆ ಜೀವಘನನೆಂದರೆ ಯಾರು ?

(ಉತ್ತರ) :— ಹೇಳುತ್ತೇವೆ (ಕೇಳಿ). ಘನವೆಂದರೆ ಮೂರ್ತಿಯು. ಜೀವನೆಂಬ ಘನನೇ ಜೀವಘನನು, ಉಪ್ಪಿನ ಹರಳಿನಂತೆ ಪರಮಾತ್ಮನಿಗೆ ಜೀವರೂಪನಾದ ಖಿಲ್ಯಭಾವವು[4] ಉಪಾಧಿಯಿಂದಾಗಿರುವದಷ್ಟೆ, ಮತ್ತು ವಿಷಯೇಂದ್ರಿಯಗಳಿಗಿಂತ ಪರವಾಗಿಯೂ ಇರುವದಷ್ಟೆ, ಅದನ್ನು ಇಲ್ಲಿ ಜೀವಘನನು (ಎಂದಿದೆ). **(ಇಲ್ಲಿ) ಮತ್ತೊಬ್ಬ (ವ್ಯಾಖ್ಯಾನಕಾರನು)** ಹೇಳುತ್ತಾನೇನೆಂದರೆ, "ಅವನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡುತ್ತಾನೆ"

---

1. ಸರಿಯಾದ ವೇದಾಂತಜ್ಞಾನದಿಂದ ತಿಳಿಯಬರುವ ಎಂದರ್ಥ; ವಿಷಯನೇ ಆಗಿರಬೇಕೆಂಬುದರಲ್ಲಿ ತಾತ್ಪರ್ಯವಿಲ್ಲ.

2. 'ಜೀವಘನನೆಂಬ ಪರನಿಗಿಂತ ಪರನಾದ ಪುರುಷನನ್ನು ಕಾಣುತ್ತಾನೆ' ಎಂದು ಹೇಳಿರುವ ಪುರುಷನನ್ನೇ ಇಲ್ಲಿ ಧ್ಯಾನಮಾಡಬೇಕೆಂದು ವಿಧಿಸಿದೆ ಎಂಬುದಕ್ಕೆ ಎರಡು ಕಡೆಗೂ ಸಮಾನವಾಗಿರುವ ಪರ, ಪುರುಷ– ಎಂಬ ಗುರುತುಗಳನ್ನು ಹೇಳಿರುತ್ತಾರೆ.

3. ಮೊದಲು ಧ್ಯೇಯನೆಂದು ಹೇಳಿರುವದು ಪರಪುರುಷನು ; ಕಾಣುವ ಪುರುಷನು ಪರಪುರುಷನಿಗಿಂತ ಪರನು_ ಎಂದದ್ದರಿಂದ ಮೊದಲು ಅಪರಬ್ರಹ್ಮವನ್ನೂ ಆಮೇಲೆ ಪರಬ್ರಹ್ಮವನ್ನೂ ಹೇಳಿದೆ ಎಂದೇಕೆ ತಿಳಿಯಬಾರದು ? ಎಂದು ಆಕ್ಷೇಪ.

4. ಅಲ್ಪಭಾವವು, ಪರಿಚ್ಛಿನ್ನರೂಪವು, ಬೃ. ೨-೪_೧೨ರ ಸೂಚನೆ.

(ಪ್ರ. ೫–೫) ಎಂದು ಹಿಂದಿನ ಅನಂತರವಾಕ್ಯದಲ್ಲಿ[1] ತಿಳಿಸಿರುವ ಬ್ರಹ್ಮಲೋಕವು ಮಿಕ್ಕ ಲೋಕಗಳಿಗಿಂತ ಪರವಾಗಿಯೂ ಇದೆಯಷ್ಟೆ. ಅದನ್ನು ಇಲ್ಲಿ ಜೀವಘನವೆಂದು ಕರೆದಿದೆ. ಕರಣಗಳಿಂದ ಸುತ್ತುವರಿಯಲ್ಪಟ್ಟಿರುವ ಎಲ್ಲಾ ಜೀವರುಗಳೂ ಸರ್ವಕರಣಾತ್ಮನಾಗಿರುವ ಬ್ರಹ್ಮಲೋಕನಿವಾಸಿಯಾದ **ಹಿರಣ್ಯಗರ್ಭ**ನಲ್ಲಿ ಒಟ್ಟುಗೂಡಿರುವವೆಂಬುದು ಯುಕ್ತವಾಗಿರುವದರಿಂದ ಬ್ರಹ್ಮಲೋಕವು ಜೀವಘನ(ವೆನಿಸುವದು.)[2] ಆ (ಜೀವಘನವಾದ ಪರಕ್ಕಿಂತ) ಪರನಾಗಿ ಈಕ್ಷಣಕ್ಕೆ ಕರ್ಮವಾಗಿರುವ ಪರಮಾತ್ಮನಿದ್ದಾನಲ್ಲ, ಅವನೇ ಅಭಿಧ್ಯಾನಕ್ಕೂ (ಇಲ್ಲಿ) ಕರ್ಮವಾಗಿರುತ್ತಾನೆ ಎಂದು ನಿಶ್ಚಯವಾಗುತ್ತದೆ[3].

## ಪರಮಾತ್ಮನ ಶ್ರುತಿಲಿಂಗಗಳೂ ಇಲ್ಲಿವೆ.

(ಭಾಷ್ಯ)

೨೫೧. 'ಪರಂ ಪುರುಷಮ್' ಇತಿ ಚ ವಿಶೇಷಣಂ ಪರಮಾತ್ಮಪರಿಗ್ರಹೇ ಏವ ಅವಕಲ್ಪತೇ । ಪರೋ ಹಿ ಪುರುಷಃ ಪರಮಾತ್ಮೈವ ಭವೇತ್ ಯಸ್ಮಾತ್ ಪರಂ ಕಿಂಚಿದನ್ಯತ್ ನಾಸ್ತಿ । "ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ" (ಕ. ೧–೩–೧೧) ಇತಿ ಚ ಶ್ರುತ್ಯನ್ತರಾತ್ "ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ" ಇತಿ ಚ ವಿಭಜ್ಯ ಅನನ್ತರಮ್ ಓಂಕಾರೇಣ ಪರಂ ಪುರುಷಮ್ ಅಭಿಧ್ಯಾತವ್ಯಂ ಬ್ರುವನ್ ಪರಮೇವ ಬ್ರಹ್ಮ ಪರಂ ಪುರುಷಂ ಗಮಯತಿ । "ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಚ್ಯತೇ" (ಪ್ರ ೫–೫) ಇತಿ ಪಾಪ್ಮವಿನಿರ್ಮೋಕಫಲವಚನಂ ಪರಮಾತ್ಮಾನಮ್ ಇಹ ಅಭಿಧ್ಯಾತವ್ಯಂ ಸೂಚಯತಿ ॥

---

1. ಆ ವಾಕ್ಯಕ್ಕೂ ಈ ವಾಕ್ಯಕ್ಕೂ ನಡುವೆ ಮತ್ತೆ ಯಾವ ವಾಕ್ಯವೂ ಇಲ್ಲದ್ದರಿಂದ ಅದು ಅನಂತರವಾಕ್ಯವು.

2. ಹಿರಣ್ಯಗರ್ಭನು ಸಮಷ್ಟಿಕರಣಾತ್ಮನು, ಜೀವರು ವ್ಯಷ್ಟಿಕರಣಾತ್ಮರು. ಕಿರಣಗಳೆಲ್ಲ ಸೂರ್ಯನಲ್ಲಿ ಅಡಕವಾಗಿರುವಂತೆ ಜೀವರು ಹಿರಣ್ಯಗರ್ಭನಲ್ಲಿ ಅಡಕವಾಗಿರುತ್ತಾರೆ. ಆ ಹಿರಣ್ಯಗರ್ಭನ ಲೋಕವಾದ್ದರಿಂದ ಬ್ರಹ್ಮಲೋಕವನ್ನು ಜೀವಘನವೆಂದು ಗೌಣವೃತ್ತಿಯಿಂದ ಕರೆದಿದೆ ಎಂದು ಭಾವ. ಇಲ್ಲಿ 'ಅಪರ ಆಹ' ಎಂದು ಕೊಟ್ಟಿರುವ ಎರಡನೆಯ ವ್ಯಾಖ್ಯಾನವು ಭಾಷ್ಯಕಾರರದೇ ಎಂಬುದು ಉಪನಿಷದ್ಭಾಷ್ಯದಿಂದ ವ್ಯಕ್ತವಾಗುತ್ತದೆ. ಆದರೆ ಮೊದಲನೆಯ ವ್ಯಾಖ್ಯಾನವನ್ನು ಪೂರ್ಣವಾಗಿ ಇಲ್ಲಿ ತಿರಸ್ಕರಿಸಿದಂತೆ ಕಾಣುವದಿಲ್ಲ

3. ಈಕ್ಷಣವಾಕ್ಯದಲ್ಲಿರುವ ಪರಾತ್ಪರನೇ ಧ್ಯಾನವಾಕ್ಯದಲ್ಲಿರುವ ಪರಪುರುಷನು ಎಂದು ಗೊತ್ತಾಗುತ್ತದೆ.

(ಭಾಷ್ಯಾರ್ಥ)

'ಪರನಾಗಿರುವ ಪುರುಷನನ್ನು' ಎಂಬ ವಿಶೇಷಣವು ಪರಮಾತ್ಮನನ್ನು ತೆಗೆದುಕೊಂಡರೇ ಸರಿಯಾಗುತ್ತದೆ. ಏಕೆಂದರೆ ಪರಪುರುಷನು, ಎಂದರೆ ಯಾವನಿಗಿಂತ ಹೆಚ್ಚಾದದ್ದು ಮತ್ತೆ ಯಾವದೂ ಇಲ್ಲವೋ ಆ ಪರಮಾತ್ಮನೇ ಆಗಬೇಕು[1]. "ಪುರುಷನಿಂತ ಹೆಚ್ಚಾದದ್ದು ಯಾವದೂ ಇಲ್ಲ; ಅದೇ ಕೊನೆಯು, ಅದೇ ಹೆಚ್ಚಿನ ಗತಿಯು" (ಕ. ೧-೩-೧೧) ಎಂಬ ಬೇರೊಂದು ಶ್ರುತಿಯಿಂದಲೂ (ಇದು ಸಿದ್ಧವಾಗುತ್ತದೆ). "ಪರ(ಬ್ರಹ್ಮವೂ) ಅಪರ ಬ್ರಹ್ಮವೂ (ಈ) ಓಂಕಾರವೆಂಬುದೇ" (ಪ್ರ. ೫-೨) ಎಂದು ವಿಭಾಗಿಸಿ ಆ ಬಳಿಕ ಓಂಕಾರದಿಂದ ಪರಪುರುಷನನ್ನು ಅಭಿಧ್ಯಾನಮಾಡಬೇಕೆಂದು ಹೇಳುವ (ಪಿಪ್ಪಲಾದನು) ಪರಬ್ರಹ್ಮವೇ (ಈ) ಪರಪುರುಷನೆಂದು ತಿಳಿಸಿದಂತಾಗಿದೆ[2]. "ಹೇಗೆ ಸರ್ಪವು ಪೊರೆಯಿಂದ ಬಿಡುಗಡೆಯಾಗುವದೋ ಹೀಗೆಯೇ ಅವನು ಪಾಪದಿಂದ ಬಿಡುಗಡೆಯಾಗುತ್ತಾನೆ" (ಪ್ರ. ೫-೫) ಎಂದು ಪಾಪದಿಂದ ಬಿಡುಗಡೆಯಾಗುವದೆಂಬ ಫಲನನ್ನು ಹೇಳಿರುವದು[3] ಇಲ್ಲಿ ಅಭಿಧ್ಯಾನಮಾಡುವದು ಪರಮಾತ್ಮನನ್ನೇ ಎಂದು ತಿಳಿಸುತ್ತದೆ.

## ದೇಶಪರಿಚ್ಛಿನ್ನಫಲವನ್ನೇಕೆ ಹೇಳಿದೆ ?

(ಭಾಷ್ಯ)

೫೫೨. ಅಥ ಯದುಕ್ತಂ ಪರಮಾತ್ಮಾಭಿಧ್ಯಾಯಿನೋ ನ ದೇಶಪರಿಚ್ಛಿನ್ನಫಲಂ ಯುಜ್ಯತೇ ಇತಿ। ಅತ್ರೋಚ್ಯತೇ। ತ್ರಿಮಾತ್ರೇಣ ಓಂಕಾರೇಣ ಆಲಮ್ಬನೇನ ಪರಮಾತ್ಮಾನಂ ಅಭಿಧ್ಯಾಯತಃ ಫಲಂ ಬ್ರಹ್ಮಲೋಕಪ್ರಾಪ್ತಿಃ ಕ್ರಮೇಣ ಚ ಸಮ್ಯಗ್ದರ್ಶನೋತ್ಪತ್ತಿಃ ಇತಿ ಕ್ರಮಮುಕ್ತ್ಯಭಿಪ್ರಾಯಮೇತದ್ ಭವಿಷ್ಯತಿ ಇತ್ಯದೋಷಃ ॥

(ಭಾಷ್ಯಾರ್ಥ)

ಇನ್ನು ಪರಮಾತ್ಮನನ್ನು ಅಭಿಧ್ಯಾನಮಾಡುವವನಿಗೆ ದೇಶಪರಿಚ್ಛಿನ್ನವಾದ ಫಲವು (ಆಗುವದು) ಯುಕ್ತವಲ್ಲ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ,

---

1. ಅಪರಬ್ರಹ್ಮವನ್ನು ತೆಗೆದುಕೊಂಡರೆ ಪರ ಎಂಬ ಶಬ್ದಕ್ಕೆ ಗೌಣಾರ್ಥವನ್ನು ಕಲ್ಪಿಸಬೇಕಾಗುವದು. ಸಂಭವವಿರುವ ಕಡೆಯಲ್ಲಿ ಮುಖ್ಯಾರ್ಥವನ್ನು ತೆಗೆದುಕೊಳ್ಳುವದೇ ಯುಕ್ತ- ಎಂದು ಭಾವ.

2. ಪರಬ್ರಹ್ಮ ಎಂದು ಉಪಕ್ರಮಿಸಿ ಹೇಳುವ 'ಪರಪುರುಷನು' ಅಪರಬ್ರಹ್ಮವೆಂದು ತಿಳಿಯುವದು ಯುಕ್ತವಾಗಲಾರದು.

3. ಧರ್ಮಾಧರ್ಮಗಳ ರೂಪವಾದ ಪಾಪದಿಂದ ಬಿಡುಗಡೆಯಾಗುವದು ಬ್ರಹ್ಮಜ್ಞಾನದಿಂದಲ್ಲದೆ ಮತ್ತೇತರಿಂದಲೂ ಆಗಲಾರದು.

ಆದಕ್ಕೆ ಸಮಾಧಾನವನ್ನು ಹೇಳುತ್ತೇವೆ. ಮೂರು ಮಾತ್ರೆಗಳ ಓಂಕಾರವೆಂಬ ಆಲಂಬನದಿಂದ[1] ಪರಮಾತ್ಮನನ್ನು ಅಭಿಧ್ಯಾನಮಾಡುವವನಿಗೆ ಬ್ರಹ್ಮಲೋಕ ಪ್ರಾಪ್ತಿಯೂ (ಕಾಲ)ಕ್ರಮದಿಂದ ಸಮ್ಯಗ್ದರ್ಶನವುಂಟಾಗುವದೂ ಫಲವು[2]. ಆದ್ದರಿಂದ ಇದು ಕ್ರಮಮುಕ್ತಿಯ ಅಭಿಪ್ರಾಯದಿಂದ ಹೇಳಿವ್ಪಾದ್ದರಿಂದ (ಯಾವ) ದೋಷವೂ ಇಲ್ಲ[3].

## ೫. ದಹರಾಧಿಕರಣ (೧೪—೨೧)

( ಛಾಂದೋಗ್ಯ ೮–೧–೧ರಲ್ಲಿ ಹೇಳಿರುವ ದಹರಾಕಾಶವು ಬ್ರಹ್ಮವೇ )

**ದಹರ ಉತ್ತರೇಭ್ಯಃ ॥ ೧೪ ॥**

೧೪. ( ಛಾಂದೋಗ್ಯದಲ್ಲಿ ಹೇಳಿರುವ ) ದಹರ( ವಾದ ಆಕಾಶವು) ಮುಂದೆ ಹೇಳುವ (ಕಾರಣಗಳಿಂದ ಪರಮಾತ್ಮನೇ).

## ವಿಷಯವೂ ಸಂಶಯವೂ

( ಭಾಷ್ಯ )

೨೫೩. "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನನ್ತರಾಕಾಶಸ್ತಸ್ಮಿನ್ ಯದನ್ತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮ್" (ಛಾಂ.೮–೧–೧) ಇತ್ಯಾದಿವಾಕ್ಯಂ ಸಮಾಮ್ನಾಯತೇ । ತತ್ರ ಯೋಽಯಂ ದಹರೇ ಹೃದಯಪುಣ್ಡರೀಕೇ ದಹರ ಆಕಾಶಃ ಶ್ರುತಃ ಸ ಕಿಂ ಭೂತಾಕಾಶಃ, ಅಥವಾ ವಿಜ್ಞಾನಾತ್ಮಾ, ಅಥವಾ ಪರಮಾತ್ಮಾ ಇತಿ ಸಂಶಯ್ಯತೇ ॥

---

1. ಪ್ರತೀಕದಿಂದ ಎಂಬರ್ಥ. ಪ್ರತೀಕೋಪಾಸನೆಯಿಂದ ಬ್ರಹ್ಮಲೋಕವು ಪ್ರಾಪ್ತಿಯಾಗಲಾರದೆಂದು ಮುಂದೆ (೪–೩–೧೫ರಲ್ಲಿ) ಹೇಳಿರುವದು ಸಾಮಾನ್ಯನ್ಯಾಯ. ಆದರೆ ಪ್ರತೀಕವಾಗಿರುವ ಓಂಕಾರದಿಂದ ಬ್ರಹ್ಮಲೋಕಪ್ರಾಪ್ತಿಯಾಗುವದೆಂದು ಇಲ್ಲಿ ವಿಶೇಷ ಶ್ರುತಿಯ ಬೆಂಬಲದಿಂದ ನಿಶ್ಚಯಿಸಬೇಕಾಗಿದೆ.

2. ಜ್ಞಾನವಿಲ್ಲದೆ ಪರಬ್ರಹ್ಮದರ್ಶನವಾಗಲಿ ಧರ್ಮಾಧರ್ಮಗಳ ಬಿಡುಗಡೆಯಾಗಲಿ ಆಗುವದಾಗಿಲ್ಲವಾದ್ದರಿಂದ 'ಈಕ್ಷತೇ', 'ವಿನಿರ್ಮುಚ್ಯತೇ' ಎಂಬ ಶ್ರುತಿಗಳ ಬಲದಿಂದ ಜ್ಞಾನವೂ ಆಗುವದೆಂದು ನಿಶ್ಚಯಿಸಬೇಕು. ಮುಂದೆ ೪_೩_೧೦ರಲ್ಲಿ ಬ್ರಹ್ಮಲೋಕದಲ್ಲಿ ಜ್ಞಾನವುಂಟಾಗಬಹುದೆಂದು ಹೇಳಿದೆ.

3. ಇದು ಸದ್ಯೋಮುಕ್ತಿಗೆ ಕಾರಣವಾದ ಸಮ್ಯಗ್ಜ್ಞಾನವಲ್ಲ, ಬರಿಯ ಧ್ಯಾನವು; ಆದ್ದರಿಂದ ಗತಿಶ್ರುತಿಯಿರುವದು ವಿರುದ್ಧವಲ್ಲ ಎಂದರ್ಥ.

(ಭಾಷ್ಯಾರ್ಥ)

"ಇನ್ನು ಈ ಬ್ರಹ್ಮಪುರದಲ್ಲಿ ದಹರವಾದ[1] ಪುಂಡರೀಕ(ರೂಪ)ವಾದ ಈ ಮನೆಯಿದೆಯಲ್ಲ,[2] ಇದರೊಳಗೆ ದಹರವಾದ ಆಕಾಶ(ವಿದೆಯಲ್ಲ), ಅದರೊಳಗೆ ಇರುವದನ್ನು ಹುಡುಕಬೇಕು,[3] ಅದನ್ನೇ ವಿಜಿಜ್ಞಾಸೆಮಾಡಬೇಕು[4]." (ಛಾಂ. ೮-೧-೧) ಮುಂತಾದ (ಶ್ರುತಿ)ವಾಕ್ಯವನ್ನು ಪಠಿಸುತ್ತಾರೆ. ಇಲ್ಲಿ ದಹರವಾದ ಹೃದಯಪುಂಡರೀಕದೊಳಗೆ ಈ ದಹರವಾದ ಆಕಾಶ(ವಿದೆಯೆಂದು) ಶ್ರುತಿಯಲ್ಲಿದೆಯಷ್ಟೆ, ಅದೇನು ಭೂತಾಕಾಶವೊ, ಅಥವಾ ವಿಜ್ಞಾನಾತ್ಮನೊ, ಅಥವಾ ಪರಮಾತ್ಮನೊ?– ಎಂದು ಸಂಶಯವಾಗುತ್ತದೆ.

## ಸಂಶಯಕ್ಕೆ ಕಾರಣ

(ಭಾಷ್ಯ)

೨೫೪. ಕುತಃ ಸಂಶಯಃ ? ಆಕಾಶಬ್ರಹ್ಮಪುರಶಬ್ದಾಭ್ಯಾಮ್ ಆಕಾಶಶಬ್ದೋ ಹಿ ಅಯಂ ಭೂತಾಕಾಶೇ ಪರಸ್ಮಿಂಶ್ಚ ಪ್ರಯುಜ್ಯಮಾನೋ ದೃಶ್ಯತೇ । ತತ್ರ ಕಿಂ ಭೂತಾಕಾಶ ಏವ ದಹರಃ ಸ್ಯಾತ್ ಕಿಂ ವಾ ಪರಃ ಇತಿ ಸಂಶಯಃ । ತಥಾ ಬ್ರಹ್ಮಪುರಮ್ ಇತಿ ಕಿಂ ಜೀವೋಽತ್ರ ಬ್ರಹ್ಮನಾಮಾ, ತಸ್ಯೇದಂ ಪುರಂ ಶರೀರಂ ಬ್ರಹ್ಮಪುರಮ್, ಅಥವಾ ಪರಸ್ಯೈವ ಬ್ರಹ್ಮಣಃ ಪುರಂ ಬ್ರಹ್ಮಪುರಮ್ ಇತಿ? ತತ್ರ ಜೀವಸ್ಯ ಪರಸ್ಯ ವಾ ಅನ್ಯತರಸ್ಯ ಪುರಸ್ವಾಮಿನಃ ದಹರಾಕಾಶತ್ವೇ ಸಂಶಯಃ ॥

(ಭಾಷ್ಯಾರ್ಥ)

(ಇಲ್ಲಿ) ಸಂಶಯವೇಕೆ ? ಎಂದರೆ ಆಕಾಶ, ಬ್ರಹ್ಮಪುರ- ಎಂಬ ಶಬ್ದಗಳಿರುವದರಿಂದ. ಈ ಆಕಾಶಶಬ್ದವು ಭೂತಾಕಾಶದಲ್ಲಿಯೂ ಪರಮಾತ್ಮನಲ್ಲಿಯೂ ಪ್ರಯುಕ್ತವಾಗಿರುವದು ಕಂಡುಬರುತ್ತದೆ. ಇಲ್ಲಿ ಭೂತಾಕಾಶವೇ (ಈ) ದಹರವಾಗಿರಬಹುದೆ, ಅಥವಾ ಪರ(ಮಾತ್ಮನಾಗಿರಬಹುದೆ) ? ಎಂದು ಸಂಶಯ(ವಾಗುತ್ತದೆ). ಹೀಗೆಯೇ ಬ್ರಹ್ಮಪುರ ಎಂದಿದೆಯಲ್ಲ, ಇಲ್ಲಿ ಜೀವನೇ ಬ್ರಹ್ಮವೆಂಬ ಹೆಸರುಳ್ಳವನು, ಅವನಿಗೆ ಈ ಶರೀರವು ಪುರ(ವಾಗಿರುವದರಿಂದ) ಬ್ರಹ್ಮಪುರವು (ಎಂದಿದೆಯೆ), ಅಥವಾ ಪರಬ್ರಹ್ಮದ ಪುರ(ವಾಗಿರುವದರಿಂದ)

---

1. ಅಲ್ಪವಾದ.

2. ಹೃದಯಕಮಲವನ್ನು ಮನೆ ಎಂದು ಕರೆದಿರುವದು ಶರೀರವನ್ನು ಪುರವೆಂದು ಕರೆದಿರುವದಕ್ಕೆ ಅನುಗುಣವಾಗಿರುವದಕ್ಕೆ.

3. ಶಾಸ್ತ್ರಾಚಾರ್ಯರಿಂದ ಶ್ರವಣಮಾಡಬೇಕು.

4. ವಿಜ್ಞಾನವನ್ನು, ಎಂದರೆ ಸಾಕ್ಷಾತ್ಕಾರವನ್ನು, ಮಾಡಿಕೊಳ್ಳಬೇಕು.

ಬ್ರಹ್ಮಪುರ(ವೆಂದಿದೆಯೆ) ? ಆ (ಪಕ್ಷ)ದಲ್ಲಿ ಪುರಕ್ಕೆ ಒಡೆಯನಾಗಿರುವ ಜೀವನು ಅಥವಾ ಪರಮಾತ್ಮನು – ಇಬ್ಬರಲ್ಲೊಬ್ಬನು– ದಹರಾಕಾಶವಾಗಿರಬೇಕು ಎಂಬ (ವಿಷಯ)ದಲ್ಲಿ ಸಂಶಯವು.

## ಪೂರ್ವಪಕ್ಷ:
## ಭೂತಾಕಾಶವು ಅಥವಾ ಜೀವನು ದಹರಾಕಾಶವು

( ಭಾಷ್ಯ )

೨೫೫. ತತ್ರ ಆಕಾಶಶಬ್ದಸ್ಯ ಭೂತಾಕಾಶೇ ರೂಢತ್ವಾತ್ ಭೂತಾಕಾಶ ಏವ ದಹರಶಬ್ದಃ ಇತಿ ಪ್ರಾಪ್ತಮ್ । ತಸ್ಯ ಚ ದಹರಾಯತನಾಪೇಕ್ಷಯಾ ದಹರತ್ವಮ್ | "ಯಾವಾನ್ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶಃ'' ( ಛಾಂ. ೮–೧–೩ ) ಇತಿ ಚ ಬಾಹ್ಯಾಭ್ಯನ್ತರಭಾವಕೃತಭೇದಸ್ಯ ಉಪಮಾನೋಪಮೇಯಭಾವಃ । ದ್ಯಾವಾಪೃಥಿವ್ಯಾದಿ ಚ ತಸ್ಮಿನ್ ಅನ್ತಃ ಸಮಾಹಿತಮ್ | ಅವಕಾಶಾತ್ಮನಾ ಆಕಾಶಸ್ಯ ಏಕತ್ವಾತ್ । ಅಥವಾ ಜೀವೋ ದಹರಃ ಇತಿ ಪ್ರಾಪ್ತಮ್ | ಬ್ರಹ್ಮಪುರಶಬ್ದಾತ್ । ಜೀವಸ್ಯ ಹಿ ಇದಂ ಪುರಂ ಸತ್ ಶರೀರಂ ಬ್ರಹ್ಮಪುರಮ್ ಇತ್ಯುಚ್ಯತೇ । ತಸ್ಯ ಸ್ವಕರ್ಮಣಾ ಉಪಾರ್ಜಿತತ್ವಾತ್ । ಭಕ್ತ್ಯಾ ಚ ತಸ್ಯ ಬ್ರಹ್ಮಶಬ್ದವಾಚ್ಯತ್ವಮ್ । ನ ಹಿ ಪರಸ್ಯ ಬ್ರಹ್ಮಣಃ ಶರೀರೇಣ ಸ್ವಸ್ವಾಮಿಭಾವಃ ಸಂಬನ್ಧೋಽಸ್ತಿ | ತತ್ರ ಪುರಸ್ವಾಮಿನಃ ಪುರ್ಯೈಕದೇಶೇ ಅವಸ್ಥಾನಂ ದೃಷ್ಟಂ ಯಥಾ ರಾಜ್ಞಃ । ಮನಉಪಾಧಿಕಶ್ಚ ಜೀವಃ । ಮನಶ್ಚ ಪ್ರಾಯೇಣ ಹೃದಯೇ ಪ್ರತಿಷ್ಠಿತಮ್ ಇತ್ಯತಃ ಜೀವಸ್ಯೈವ ಇದಂ ಹೃದಯೇ ಅನ್ತರವಸ್ಥಾನಂ ಸ್ಯಾತ್ । ದಹರತ್ವಮಪಿ ತಸ್ಯೈವ ಆರಾಗ್ರೋಪಮಿತತ್ವಾತ್ ಅವಕಲ್ಪತೇ | ಆಕಾಶೋಪಮಿತತ್ವಾದಿ ಚ ಬ್ರಹ್ಮಾಭೇದವಿವಕ್ಷಯಾ ಭವಿಷ್ಯತಿ । ನ ಚ ಅತ್ರ ದಹರಸ್ಯ ಆಕಾಶಸ್ಯ ಅನ್ವೇಷ್ಟವ್ಯತ್ವಂ ವಿಜಿಜ್ಞಾಸಿತವ್ಯತ್ವಂ ಚ ಶ್ರೂಯತೇ । ''ತಸ್ಮಿನ್ ಯದನ್ತಃ" ಇತಿ ಪರವಿಶೇಷಣತ್ವೇನ ಉಪಾದಾನಾತ್" ಇತಿ ॥

( ಭಾಷ್ಯಾರ್ಥ )

ಇಲ್ಲಿ ಆಕಾಶಶಬ್ದವು ಭೂತಾಕಾಶದಲ್ಲಿ ರೂಢವಾಗಿರುವದರಿಂದ ಭೂತಾಕಾಶವನ್ನೇ ದಹರಶಬ್ದ(ದಿಂದ ಹೇಳಿದೆ) ಎಂದು (ಪೂರ್ವಪಕ್ಷವು) ಬಂದೊದಗುತ್ತದೆ. ಆ (ಭೂತಾಕಾಶವು) ದಹರವಾದ ಆಶ್ರಯದ ಅಪೇಕ್ಷೆಯಿಂದ ದಹರ(ವಾಗಿರುತ್ತದೆ[1]. "ಈ ಆಕಾಶವು ಎಷ್ಟು (ಪರಿಮಾಣವೋ), ಈ ಹೃದಯ

1. ಅಲ್ಪವಾದ ಹೃದಯದಲ್ಲಿರುವದರಿಂದ ಅಲ್ಪವೆನಿಸುವದು.

ದೊಳಗಿರುವ ಆಕಾಶವು ಅಷ್ಟೇ" (ಛಾಂ. ೮-೧-೩) ಎಂದು ಹೊರಗಿರುವದು, ಒಳಗಿರುವದು-ಎಂಬುದರಿಂದ ಭೇದವಿರುವದರಿಂದ (ಒಂದಕ್ಕೇ) ಉಪಮಾನೋಪಮೇಯಭಾವವು ಹೊಂದುತ್ತದೆ[1]. ದ್ಯಾವಾಪೃಥಿವ್ಯಾದಿಗಳು ಅದರೊಳಗೆ ಇರುತ್ತವೆ (ಎಂದು ಛಾಂ. ೮-೧-೩ರಲ್ಲಿ ಹೇಳಿರುವದೂ) ಅವಕಾಶರೂಪದಿಂದ (ಈ) ಆಕಾಶವು ಒಂದೇ ಆಗಿರುವದರಿಂದ (ಹೊಂದುತ್ತದೆ)[2].

ಅಥವಾ ಜೀವನು ದಹರ(ವಾದ ಆಕಾಶವು) ಎಂಬ (ಪೂರ್ವಪಕ್ಷವು) ಬಂದೊದಗುತ್ತದೆ ; ಏಕೆಂದರೆ (ಇಲ್ಲಿ) ಬ್ರಹ್ಮಪುರ ಎಂಬ ಶಬ್ದವಿದೆ. ಜೀವನ ಪುರವಾಗಿದ್ದುಕೊಂಡಿರುವ ಈ ಶರೀರವನ್ನೇ ಬ್ರಹ್ಮಪುರವೆಂದು ಕರೆದಿದೆ ; ಏಕೆಂದರೆ ಇದು (ಜೀವನು) ತನ್ನ ಕರ್ಮದಿಂದ ಸಂಪಾದಿಸಿದ್ದಾಗಿದೆ. ಇವನನ್ನು ಬ್ರಹ್ಮವೆಂದು ಕರೆದಿರುವದು 'ಗೌಣವೃತ್ತಿ'ಯಿಂದ[3]. ಪರಬ್ರಹ್ಮಕ್ಕೂ ಶರೀರಕ್ಕೂ ಸ್ವಸ್ವಾಮಿಭಾವಸಂಬಂಧವು ಇಲ್ಲವೇ ಇಲ್ಲ. ಇಲ್ಲಿ ಪುರದೊಡೆಯನಾದವನು ರಾಜನಂತೆ ಪುರದ ಒಂದು ಭಾಗದಲ್ಲಿ ಇರುವನೆಂಬುದು ಕಂಡಿದೆ ಮತ್ತು ಜೀವನು ಮನಸ್ಸೆಂಬ ಉಪಾಧಿಯುಳ್ಳವನು ; ಮನಸ್ಸು ಬಲುಮಟ್ಟಿಗೆ ಹೃದಯದಲ್ಲಿದ್ದುಕೊಂಡಿರುತ್ತದೆಯಾದ್ದರಿಂದ ಈ ಹೃದಯದಲ್ಲಿರುತ್ತಾನೆಂದು ಹೇಳಿರುವದು ಜೀವನ (ವಿಷಯ)ದಲ್ಲಿಯೇ ಆಗಿರಬೇಕು. ಅವನನ್ನು (ಶ್ರುತಿಯಲ್ಲಿ) ದಬ್ಬಳದ ತುದಿಗೆ ಹೋಲಿಸಿರುವದರಿಂದ[4] ದಹರತ್ವವನ್ನು (ಹೇಳುವದೂ) ಅವನಿಗೇ ಹೊಂದುತ್ತದೆ. ಆಕಾಶವನ್ನು (ಅವನಿಗೆ) ಹೋಲಿಸಿರುವದೇ ಮುಂತಾದದ್ದು[5] (ಅವನು) ಬ್ರಹ್ಮಕ್ಕಿಂತ ಬೇರೆಯಲ್ಲವೆಂದು ತಿಳಿಸುವದಕ್ಕೆ (ಎಂದೂ) ಆಗಬಹುದಾಗಿದೆ. ಇದೂ ಅಲ್ಲದೆ ದಹರವಾದ ಆಕಾಶವನ್ನು ಹುಡುಕಬೇಕೆಂದಾಗಲಿ, ವಿಜಿಜ್ಞಾಸೆಮಾಡಬೇಕೆಂದಾಗಲಿ ಇಲ್ಲಿ ಶ್ರುತಿಯಲ್ಲಿ ಹೇಳಿಲ್ಲ ; ಏಕೆಂದರೆ 'ಅದರೊಳಗೆ ಇರುವದನ್ನು' ಎಂದು (ಅದಕ್ಕಿಂತ) ಬೇರೆಯಾದದ್ದರ ವಿಶೇಷಣವಾಗಿ (ಅದನ್ನು) ತೆಗೆದುಕೊಂಡು (ಹೇಳಿದೆ)[6].

---

1. ತನ್ನನ್ನೇ ತನಗೆ ಹೋಲಿಸಬಹುದೆ ? ಎಂದರೆ ಉಪಾಧಿಕಲ್ಪಿತವಾದ ಭೇದವನ್ನಿಟ್ಟುಕೊಂಡು ಹೋಲಿಸಬಹುದು- ಎಂದು ಸಮಾಧಾನವನ್ನು ಹೇಳಿದೆ.

2. ಯಾವದಿದ್ದರೂ ಆಕಾಶದಲ್ಲಿಯೇ ಇರಬೇಕು- ಎಂದು ಇಟ್ಟುಕೊಂಡು ಉಪಾಸನೆಗಾಗಿ ಆಕಾಶವನ್ನು ಹೊಗಳಿದೆ ಎಂದು ಭಾವ.

3. ಇವನೂ ಬ್ರಹ್ಮದಂತೆ ಸಚ್ಚಿದ್ರೂಪನೆಂಬ ಕಾರಣದಿಂದ.

4. ಶ್ವೇ. ೫-೮

5. ಮುಂತಾದದ್ದು ಎಂದರೆ ದ್ಯಾವಾಪೃಥಿವ್ಯಾದಿಗಳು ಅವನಲ್ಲಿರುವದು.

6. ಆಕಾಶವು ತಾನೇ ತನ್ನೊಳಗೆ ಇರಲಾರದು.

## ಸಿದ್ಧಾಂತ: ದಹರಾಕಾಶವು ಬ್ರಹ್ಮವೇ, ಭೂತಾಕಾಶವಲ್ಲ

(ಭಾಷ್ಯ)

೨೫೬. ಅತ ಉತ್ತರಂ ಬ್ರೂಮಃ । ಪರಮೇಶ್ವರ ಏವ ಅತ್ರ ದಹರಾಕಾಶೋ ಭವಿತುಮರ್ಹತಿ, ನ ಭೂತಾಕಾಶೋ ಜೀವೋ ವಾ । ಕಸ್ಮಾತ್ ? ಉತ್ತರೇಭ್ಯೋ ವಾಕ್ಯಶೇಷಗತೇಭ್ಯೋ ಹೇತುಭ್ಯಃ । ತಥಾ ಹಿ । ಅನ್ವೇಷ್ಟವ್ಯತಯಾ ವಿಹಿತಸ್ಯ ದಹರಸ್ಯ ಆಕಾಶಸ್ಯ "ತಂ ಚೇದ್ ಬ್ರೂಯುಃ" ಇತ್ಯುಪಕ್ರಮ್ಯ "ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮ್"(ಛಾಂ ೮–೧–೨) ಇತ್ಯೇವಮ್ ಆಕ್ಷೇಪಪೂರ್ವಕಂ ಪ್ರತಿಸಮಾಧಾನವಚನಂ ಭವತಿ "ಸ ಬ್ರೂಯಾದ್ ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅನ್ತರೇವ ಸಮಾಹಿತೇ" (ಛಾಂ. ೮–೧–೩) ಇತ್ಯಾದಿ । ತತ್ರ ಪುಣ್ಡರೀಕದಹರತ್ವೇನ ಪ್ರಾಪ್ತದಹರತ್ವಸ್ಯ ಆಕಾಶಸ್ಯ ಪ್ರಸಿದ್ಧಾಕಾಶೌಪಮ್ಯೇನ ದಹರತ್ವಂ ನಿವರ್ತಯನ್ ಭೂತಾಕಾಶತ್ವಂ ದಹರಸ್ಯ ಆಕಾಶಸ್ಯ ನಿವರ್ತಯತಿ ಇತಿ ಗಮ್ಯತೇ । ಯದ್ಯಪಿ ಆಕಾಶಶಬ್ದಃ ಭೂತಾಕಾಶೇ ರೂಢಃ, ತಥಾಪಿ ತೇನೈವ ತಸ್ಯ ಉಪಮಾ ನೋಪಪದ್ಯತೇ ಇತಿ ಭೂತಾಕಾಶಶಙ್ಕಾ ನಿವರ್ತಿತಾ ಭವತಿ । ನನು ಏಕಸ್ಯಾಪಿ ಆಕಾಶಸ್ಯ ಬಾಹ್ಯಾಭ್ಯನ್ತರತ್ವಕಲ್ಪಿತೇನ ಭೇದೇನ ಉಪಮಾನೋಪಮೇಯಭಾವಃ ಸಂಭವತಿ ಇತ್ಯುಕ್ತಮ್ । ನೈವಂ ಸಂಭವತಿ । ಅಗತಿಕಾ ಹಿ ಇಯಂ ಗತಿಃ ಯತ್ ಕಾಲ್ಪನಿಕಭೇದಾಶ್ರಯಣಮ್ । ಅಪಿ ಚ ಕಲ್ಪಯಿತ್ವಾಪಿ ಭೇದಮ್ ಉಪಮಾನೋಪಮೇಯಭಾವಂ ವರ್ಣಯತಃ ಪರಿಚ್ಛಿನ್ನತ್ವಾತ್ ಆಭ್ಯನ್ತರಾಕಾಶಸ್ಯ ನ ಬಾಹ್ಯಾಕಾಶಪರಿಮಾಣತ್ವಮ್ ಉಪಪದ್ಯೇತ । ನನು ಪರಮೇಶ್ವರಸ್ಯಾಪಿ ಜ್ಯಾಯಾನಾಕಾಶಾತ್" (ಶತ. ಬ್ರಾ. ೧೦–೬–೩–೨) ಇತಿ ಶ್ರುತ್ಯನ್ತರಾತ್ ನೈವ ಆಕಾಶಪರಿಮಾಣತ್ವಮ್ ಉಪಪದ್ಯತೇ । ನೈಷ ದೋಷಃ । ಪುಣ್ಡರೀಕವೇಷ್ಟನಪ್ರಾಪ್ತದಹರತ್ವನಿವೃತ್ತಿಪರತ್ವಾತ್ ವಾಕ್ಯಸ್ಯ ನ ತಾವತ್ತ್ವಪ್ರತಿಪಾದನಪರತ್ವಮ್ । ಉಭಯಪ್ರತಿಪಾದನೇ ಹಿ ವಾಕ್ಯಂ ಭಿದ್ಯೇತ । ನ ಚ ಕಲ್ಪಿತಭೇದೇ ಪುಣ್ಡರೀಕವೇಷ್ಟಿತೇ ಆಕಾಶೈಕದೇಶೇ ದ್ಯಾವಾಪೃಥಿವ್ಯಾದೀನಾಮ್ ಅನ್ತಃಸಮಾಧಾನಮ್ ಉಪಪದ್ಯತೇ । "ಏಷ ಆತ್ಮಾಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ" (ಛಾಂ. ೮–೧–೫) ಇತಿ ಚ ಆತ್ಮತ್ವಾಪಹತಪಾಪ್ಮತ್ವಾದಯಶ್ಚ ಗುಣಾ ನ ಭೂತಾಕಾಶೇ ಸಂಭವನ್ತಿ ॥

(ಭಾಷ್ಯಾರ್ಥ)

ಇದಕ್ಕೆ ಉತ್ತರವನ್ನು ಹೇಳುತ್ತೇವೆ. ಇಲ್ಲಿ ಪರಮೇಶ್ವರನೇ ದಹರಾಕಾಶ

ವಾಗಿರಬೇಕು, ಭೂತಾಕಾಶವಾಗಲಿ ಜೀವನಾಗಲಿ (ದಹರವಾಗಲಾರರು). ಏಕೆ? ಎಂದರೆ ಮುಂದಿನ ವಾಕ್ಯಶೇಷದಲ್ಲಿರುವ ಹೇತುಗಳಿಂದ. ಹೇಗೆಂದರೆ, ಹುಡುಕಬೇಕೆಂದು ವಿಧಿಸಿರುವ[1] ದಹರಾಕಾಶವನ್ನು (ಕುರಿತು) "ಆ (ಆಚಾರ್ಯ ನನ್ನು ಕುರಿತು ಶಿಷ್ಯರು) ಹೇಗೆಂದರೆ'' ಎಂದು ಉಪಕ್ರಮಿಸಿ "ಇಲ್ಲಿ ಹುಡುಕಬೇಕಾದದ್ದು ಅಥವಾ ಅರಿತುಕೊಳ್ಳಬೇಕಾದದ್ದು ಯಾವದು ಇದೆ?" ಎಂದು ಆಕ್ಷೇಪವನ್ನು ಮಾಡಿಕೊಂಡು,[2] "ಅವನು (ಹೀಗೆಂದು) ಹೇಳಬೇಕು. ಈ ಆಕಾಶವು ಎಷ್ಟು ಇದೆಯೋ ಈ ಹೃದಯದೊಳಗಿರುವ ಆಕಾಶವು ಅಷ್ಟಿದೆ; ಇದರಲ್ಲಿ ದ್ಯಾವಾಪೃಥಿವಿಗಳೆರಡೂ ಒಳಗೇ ಇದ್ದುಕೊಂಡಿರುತ್ತವೆ...." (ಛಾಂ. ೮-೩-೨, ೩) ಎಂದು ಮುಂತಾಗಿ ಪ್ರತಿಸಮಾಧಾನ(ವನ್ನು ಹೇಳಿರುವ ವಾಕ್ಯ) ವಿದೆ. ಅಲ್ಲಿ (ಹೃದಯ)ಕಮಲದ ದಹರತ್ವದಿಂದ ಆಕಾಶಕ್ಕೂ ದಹರತ್ವವು ಬಂದೊದಗಲಾಗಿ ಪ್ರಸಿದ್ಧವಾದ ಆಕಾಶದ ಹೋಲಿಕೆಯಿಂದ (ಆ) ಅಲ್ಪತ್ವ ವನ್ನು ಅಲ್ಲಗಳೆದಿರುವದರಿಂದ (ಆ) ದಹರಾಕಾಶವು ಭೂತಾಕಾಶವೆಂಬುದನ್ನು ಅಲ್ಲಗಳೆದಿದೆ ಎಂದು ನಿಶ್ಚಯವಾಗುತ್ತದೆ. ಆಕಾಶವೆಂಬ ಶಬ್ದವೇನೋ ಭೂತಾಕಾಶದಲ್ಲಿಯೇ ರೂಢವಾಗಿದೆ; ಆದರೆ ಅದನ್ನೇ ಅದಕ್ಕೆ ಹೋಲಿಸು ವದೆಂಬುದು ಹೊಂದುವಂತಿಲ್ಲವಾದ್ದರಿಂದ (ಈ ಆಕಾಶವು) ಭೂತಾಕಾಶವೆಂಬ ಶಂಕೆಯನ್ನು ಅಲ್ಲಗಳೆದಂತಾಗಿರುತ್ತದೆ.

(ಆಕ್ಷೇಪ):- ಆಕಾಶವು ಒಂದೇ ಆಗಿದ್ದರೂ ಒಳಗಿರುವದು, ಹೊರಗಿರು ವದು (ಎಂಬ ಕಾರಣದಿಂದ) ಕಲ್ಪಿತವಾಗಿರುವ ಭೇದವಿರುವದರಿಂದ (ಅದೊಂ ದಕ್ಕೇ) ಉಪಮಾನೋಪಮೇಯಭಾವವು ಆಗಬಹುದು ಎಂದು (ಪೂರ್ವಪಕ್ಷ ದಲ್ಲಿ) ಹೇಳಿತ್ತಲ್ಲ!

(ಸಮಾಧಾನ):- ಹೀಗಾಗಲಾರದು. ಕಲ್ಪಿತವಾದ ಭೇದವನ್ನು ಇಟ್ಟುಕೊಳ್ಳುವದೆಂಬುದಿದೆಯಲ್ಲ, ಇದು ಅಗತಿಕಗತಿಯು. ಇದಲ್ಲದೆ ಭೇದವನ್ನು ಕಲ್ಪಿಸಿದರೂ (ಕಲ್ಪಿತವಾದ ಆಕಾಶಗಳಿಗೆ) ಉಪಮಾನೋಪ ಮೇಯವನ್ನು ವರ್ಣಿಸುವವನ (ಪಕ್ಷದಲ್ಲಿ) ಒಳಗಿನ ಆಕಾಶವು ಪರಿಚ್ಛಿನ್ನ ವಾಗಿರುವದರಿಂದ ಹೊರಗಿನ ಆಕಾಶದ ಪರಿಮಾಣವು (ಅದಕ್ಕೆ) ಹೊಂದ ಲಾರದು.

---

1. ದಹರಾಕಾಶವನ್ನೇ ಹುಡುಕಬೇಕೆಂದು ಇಲ್ಲಿ ವಿಧಿಸಿದೆ, ಅದಕ್ಕಿಂತ ಬೇರೆ ಯಾವದನ್ನಲ್ಲ.

2. ಹೃದಯಪುಂಡರೀಕವೇ ಸಣ್ಣದು, ಅದರಲ್ಲಿರುವ ಆಕಾಶವು ಇನ್ನೂ ಸಣ್ಣದು; ಅದರಲ್ಲಿ ಹುಡುಕಿ ಅರಿತುಕೊಳ್ಳಬೇಕಾದದ್ದೇನಿದೆ?_ ಎಂದು ಆಕ್ಷೇಪ.

(ಪೂರ್ವಪಕ್ಷ):– ಪರಮೇಶ್ವರನೂ "ಆಕಾಶಕ್ಕಿಂತ ದೊಡ್ಡವನು" (ಶತ. ಬ್ರಾ. ೧೦–೬–೩–೨) ಎಂದು ಶ್ರುತ್ಯಂತರವಿರುವದರಿಂದ ಆಕಾಶದ ಪರಿಮಾಣವು ಅವನಿಗೂ ಹೊಂದಲಾರದಲ್ಲ !

(ಸಿದ್ಧಾಂತ):– ಇದೇನೂ ದೋಷವಲ್ಲ. (ಹೃದಯ)ಪುಂಡರೀಕದ ಸುತ್ತುಗಟ್ಟಿನಿಂದ ಬಂದೊದಗಿದ ದಹರತ್ವವನ್ನು ಅಲ್ಲಗಳೆಯುವದರಲ್ಲಿಯೇ (ಈ) ವಾಕ್ಯಕ್ಕೆ ತಾತ್ಪರ್ಯವೇ ಹೊರತು ಅಷ್ಟೇ (ಪರಿಮಾಣದವನೆಂದು) ಹೇಳುವದರಲ್ಲಿ ತಾತ್ಪರ್ಯವಿಲ್ಲ. ಏಕೆಂದರೆ ಎರಡನ್ನೂ ಹೇಳಿದರೆ ವಾಕ್ಯವು ಭಿನ್ನವಾಗುವದು[1].

ಇದಲ್ಲದೆ ಕಲ್ಪಿತವಾದ ಭೇದವುಳ್ಳ (ಹೃದಯ)ಪುಂಡರೀಕವು ಸುತ್ತುಗಟ್ಟಿರುವ ಆಕಾಶದ ಒಂದು ಭಾಗದಲ್ಲಿ ದ್ಯಾವಾಪೃಥಿವ್ಯಾದಿಗಳು ಒಳಗಿದ್ದುಕೊಂಡಿರುವದು ಹೊಂದುವದಿಲ್ಲ. "ಈತನೇ ಆತ್ಮನು, ಪಾಪರಹಿತನು, ಮುಪ್ಪಿಲ್ಲದವನು, ಸಾವಿಲ್ಲದವನು, ಶೋಕವಿಲ್ಲದವನು, ಹಸಿವಿಲ್ಲದವನು, ನೀರಡಿಕೆಯಿಲ್ಲದವನು, ಸತ್ಯಕಾಮನು, ಸತ್ಯಸಂಕಲ್ಪನು...." (ಛಾಂ. ೮–೧–೫) ಎಂದು (ಹೇಳಿರುವ) ಆತ್ಮತ್ವ, ಅಪಹತಪಾಪ್ಮತ್ವ ಮುಂತಾದ ಗುಣಗಳೂ ಭೂತಾಕಾಶಕ್ಕೆ ಹೊಂದುವದಿಲ್ಲ.

## ದಹರಾಕಾಶವು ಜೀವನೂ ಅಲ್ಲ

### ( ಭಾಷ್ಯ )

೨೫೬. ಯದ್ಯಪಿ ಆತ್ಮಶಬ್ದೋ ಜೀವೇ ಸಂಭವತಿ ತಥಾಪಿ ಇತರೇಭ್ಯಃ ಕಾರಣೇಭ್ಯೋ ಜೀವಾಶಙ್ಕಾಪಿ ನಿವರ್ತಿತಾ ಭವತಿ । ನ ಹಿ ಉಪಾಧಿಪರಿಚ್ಛಿನ್ನಸ್ಯ ಆರಾಗ್ರೋಪಮಿತಸ್ಯ ಜೀವಸ್ಯ ಪುಣ್ಡರೀಕವೇಷ್ಟನಕೃತಂ ದಹರತ್ವಂ ಶಕ್ಯಂ ನಿವರ್ತಯಿತುಮ್ । ಬ್ರಹ್ಮಾಭೇದವಿವಕ್ಷಯಾ ಜೀವಸ್ಯ ಸರ್ವಗತತ್ವಾದಿ ವಿವಕ್ಷ್ಯೇತ ಇತಿ ಚೇತ್ । ಯದಾತ್ಮತಯಾ ಜೀವಸ್ಯ ಸರ್ವಗತತ್ವಾದಿ ವಿವಕ್ಷ್ಯೇತ ತಸ್ಯೈವ ಬ್ರಹ್ಮಣಃ ಸಾಕ್ಷಾತ್ ಸರ್ವಗತತ್ವಾದಿ ವಿವಕ್ಷ್ಯತಾಮ್ ಇತಿ ಯುಕ್ತಮ್ । ಯದಪ್ಯುಕ್ತಮ್ ಬ್ರಹ್ಮಪುರಮ್ ಇತಿ ಜೀವೇನ ಪುರಸ್ಯ ಉಪಲಕ್ಷಿತತ್ವಾತ್ ರಾಜ್ಞ ಇವ ಜೀವಸ್ಯೈವೇದಂ ಪುರಸ್ವಾಮಿನಃ ಪುರೈಕ

1. ಒಂದು ವಾಕ್ಯಕ್ಕೆ ಒಂದರಲ್ಲಿ ತಾತ್ಪರ್ಯವಿರಬೇಕು ; ಏಕವಾಕ್ಯವು ಕೂಡುತ್ತಿರುವಲ್ಲಿ ಎರಡು ಬೇರೆಬೇರೆಯ ವಾಕ್ಯಗಳೆಂದು ಕಲ್ಪಿಸುವದು ದೋಷವು ಎಂದು ಮೀಮಾಂಸಕರು ಹೇಳುತ್ತಾರೆ.

ದೇಶವರ್ತಿತ್ವಮ್ ಅಸ್ತು ಇತಿ, ಅತ್ರ ಬ್ರೂಮಃ | ಪರಸ್ಯೈವ ಇದಂ ಬ್ರಹ್ಮಣಃ ಪುರಂ ಸತ್ ಶರೀರಂ ಬ್ರಹ್ಮಪುರಮ್ ಇತ್ಯುಚ್ಯತೇ | ಬ್ರಹ್ಮಶಬ್ದಸ್ಯ ತಸ್ಮಿನ್ ಮುಖ್ಯತ್ವಾತ್ । ತಸ್ಯಾಪಿ ಅಸ್ತಿ ಪುರೇಣ ಅನೇನ ಸಂಬನ್ಧಃ । ಉಪಲಬ್ಧ್ಯಧಿಷ್ಠಾನತ್ವಾತ್ | "ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' (ಪ್ರ.೫-೫), "ಸವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯಃ" (ಬೃ. ೨-೫-೧೮) ಇತ್ಯಾದಿಶ್ರುತಿಭ್ಯಃ | ಅಥವಾ ಜೀವಪುರ ಏವ ಅಸ್ಮಿನ್ ಬ್ರಹ್ಮ ಸಂನಿಹಿತಮ್ ಉಪಲಕ್ಷ್ಯತೇ | ಯಥಾ ಶಾಲಗ್ರಾಮೇ ವಿಷ್ಣುಃ ಸಂನಿಹಿತ ಇತಿ ತದ್ವತ್ | "ತದ್ಯಥೇಹ ಕರ್ಮಜಿತೋ[1] ಲೋಕಃ ಕ್ಷೀಯತ ಏವಮೇವಾಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ" (ಛಾಂ. ೮-೧-೬) ಇತಿ ಚ ಕರ್ಮಣಾಮ್ ಅನ್ತವತ್ಫಲತ್ವಮ್ ಉಕ್ತ್ವಾ "ಅಥ ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸರ್ವಾನ್ ಕಾಮಾಂಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ" (ಛಾಂ. ೮-೧-೬) ಇತಿ ಪ್ರಕೃತದಹರಾಕಾಶವಿಜ್ಞಾನಸ್ಯ ಅನನ್ತಫಲತ್ವಂ ವದನ್ ಪರಮಾತ್ಮತ್ವಮ್ ಅಸ್ಯ ಸೂಚಯತಿ ||

( ಭಾಷ್ಯಾರ್ಥ )

ಆತ್ಮನೆಂಬ ಶಬ್ದವೇನೊ ಜೀವನಿಗೆ ಆಗಬಹುದಾದರೂ ಉಳಿದ ಕಾರಣಗಳಿಂದ (ದಹರಾಕಾಶವು) ಜೀವನೆಂಬ ಆಶಂಕೆಯನ್ನು ತೊಲಗಿಸಿದಂತೆ ಆಗುತ್ತದೆ. ಉಪಾಧಿಪರಿಚ್ಛಿನ್ನನಾಗಿ (ಶ್ರುತಿಯು) ದಬ್ಬಳದ ತುದಿಗೆ ಹೋಲಿಸಿರುವ ಜೀವನಿಗೆ (ಹೃದಯ)ಪುಂಡರೀಕದ ಸುತ್ತುಗಟ್ಟಿನಿಂದ ಆಗಿರುವ ದಹರತ್ವವನ್ನು ಕಳೆಯುವದು ಆಗುವದೇ ಇಲ್ಲ.

(ಆಕ್ಷೇಪ):— ಜೀವನು ಬ್ರಹ್ಮಕ್ಕಿಂತ ಬೇರೆಯಲ್ಲವೆಂಬುದನ್ನು ತಿಳಿಸುವದಕ್ಕಾಗಿ (ಅವನು) ಸರ್ವಗತನೆಂದು ಮುಂತಾಗಿ ಹೇಳಬಹುದಲ್ಲ !

(ಪರಿಹಾರ):— ಯಾವದರ ಸ್ವರೂಪದಿಂದ ಜೀವನಿಗೆ ಸರ್ವಗತತ್ವಾದಿಗಳನ್ನು ಹೇಳಬೇಕೋ ಅದೇ ಬ್ರಹ್ಮಕ್ಕೆ ನೇರಾಗಿಯೇ ಸರ್ವಗತತ್ವಾದಿಗಳನ್ನು ಹೇಳುವದಕ್ಕೆ ಬಂದಿದೆ ಎಂದಾಗುವದೇ ಯುಕ್ತವು.

ಇನ್ನು ಬ್ರಹ್ಮಪುರವೆಂಬಲ್ಲಿ ಜೀವನಿಂದೊಡಗೂಡಿಯೇ ಪುರವು ಕಂಡುಬರುತ್ತಿರುವದರಿಂದ ರಾಜನಂತೆ ಪುರದೊಡೆಯನಾದ ಜೀವನೇ ಪುರಧ ಒಂದು

1. ಇದು ಉಪನಿಷತ್ತಿನಲ್ಲಿರುವ ಪಾಠ ; ಅಲ್ಲಿ 'ಕರ್ಮಚಿತೋ' ಎಂದಿಲ್ಲ.

ಕಡೆಯಲ್ಲಿರುವನೆಂದು (ಹೇಳುವ ವಾಕ್ಯ)ವಿದು ಎಂದಾಗಲಿ[1] ಎಂದು (ಭಾ. ಭಾ. ೨೫೪ ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ ಹೇಳುತ್ತೇವೆ. ಪರಬ್ರಹ್ಮಕ್ಕೇ ಪುರವಾಗಿರುವದರಿಂದ ಈ ಶರೀರವನ್ನು ಬ್ರಹ್ಮಪುರವೆಂದು ಕರೆದಿದೆ (ಎನ್ನಬೇಕು). ಏಕೆಂದರೆ ಬ್ರಹ್ಮಶಬ್ದವು ಅದರಲ್ಲಿ ಮುಖ್ಯವಾಗಿದೆ[2]. ಆ (ಬ್ರಹ್ಮಕ್ಕೂ) ಈ ಪುರದ ಸಂಬಂಧವಿದೆ; ಏಕೆಂದರೆ (ಅದನ್ನು) ಕಾಣುವದಕ್ಕೆ (ಇದು) ಸ್ಥಾನವಾಗಿರುತ್ತದೆ[3]. "ಆತನು ಈ ಪರವಾದ ಜೀವಘನಕ್ಕಿಂತ ಪರನಾದ ಪುರಿಶಯನಾದ ಪುರುಷನನ್ನು ಕಾಣುತ್ತಾನೆ" (ಪ್ರ. ೫-೫), "ಆ ಈ ಪುರುಷನು ಎಲ್ಲಾ ಪುರಗಳಲ್ಲಿಯೂ 'ಪುರಿಶಯನು"[4] (ಬೃ. ೨-೫-೧೮) ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗಿರುತ್ತದೆ), ಅಥವಾ ಹೇಗೆ ಶಾಲಗ್ರಾಮದಲ್ಲಿ ವಿಷ್ಣುವು ಸಂನಿಹಿತನಾಗಿರುತ್ತಾನೋ ಹಾಗೆ ಈ ಜೀವಪುರದಲ್ಲಿಯೇ ಬ್ರಹ್ಮವು ಸಂನಿಹಿತವಾಗಿ ಕಂಡುಬರುತ್ತದೆ[5] (ಎಂದೂ ಹೇಳಬಹುದು). "ಅದು ಹೇಗೆಂದರೆ, ಹೇಗೆ ಇಲ್ಲಿ ಕರ್ಮಗಳಿಂದ ಗೆದ್ದುಕೊಂಡು ಲೋಕವು ಕ್ಷಯವಾಗುತ್ತದೆಯೋ ಹೀಗೆಯೇ ಅಲ್ಲಿ ಪುಣ್ಯಗಳಿಂದ ಗೆದ್ದುಕೊಂಡ ಲೋಕವು ಕ್ಷಯವಾಗುತ್ತದೆ." (ಛಾಂ. ೮-೧-೬) ಎಂದು ಕರ್ಮಗಳಿಗೆ ಕೊನೆಗಾಣುವ ಫಲವನ್ನು ಹೇಳಿ "ಇನ್ನು ಯಾರು ಇಲ್ಲಿ ಆತ್ಮನನ್ನೂ ಈ ಸತ್ಯಕಾಮಗಳನ್ನೂ ಅನುವೇದನಮಾಡಿಕೊಂಡು[6] ಹೋಗುವರೋ ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಕಾಮಚಾರವಾಗುವದು" (ಛಾಂ. ೮-೧-೬) ಎಂದು ಪ್ರಕೃತವಾಗಿರುವ ದಹರಾಕಾಶದ ಉಪಾಸನೆಗೆ ಅನಂತವಾದ ಫಲವಾಗುವದೆಂದು ಹೇಳುವದರಿಂದ ಈ (ಆಕಾಶವು) ಪರಮಾತ್ಮನೆಂದು (ಗುರುವು) ಸೂಚಿಸಿರುತ್ತಾನೆ.

---

1. ಜೀವನಿಗೆ ಸೇರಿದ್ದು ಶರೀರವು ಎಂದು ಗೊತ್ತಿರುವದರಿಂದ ಬ್ರಹ್ಮಪುರವೆಂಬ ಮಾತನ್ನು ಜೀವನ ಪುರ ಎಂಬರ್ಥದಲ್ಲಿ ತೆಗೆದುಕೊಳ್ಳಬೇಕು. ಜೀವನು ಶರೀರವನ್ನು ಪೋಷಣೆಯಿಂದ ದೊಡ್ಡದುಮಾಡುವದರಿಂದ (ಬೃಂಹಣಾತ್) ಬ್ರಹ್ಮವೆನಿಸುವನು. ಬ್ರಹ್ಮಪುರವೆಂದರೆ ಜೀವಸ್ವಾಮಿಕವಾದ ಶರೀರವು ಎಂದರ್ಥ – ಎಂದು ಭಾವ.

2. ಗೌಣಾರ್ಥಕ್ಕಿಂತ ಮುಖ್ಯಾರ್ಥವನ್ನು ತೆಗೆದುಕೊಳ್ಳುವದು ಉಚಿತ.

3. ಬ್ರಹ್ಮದ ಪುರ ಎಂಬಲ್ಲಿ ಷಷ್ಠೀವಿಭಕ್ತಿಗೆ ಸ್ವಸ್ವಾಮಿಭಾವಸಂಬಂಧವೆಂಬರ್ಥವನ್ನೇ ತೆಗೆದುಕೊಳ್ಳಬೇಕೆಂಬ ನಿಯಮವೇನೂ ಇಲ್ಲ. ಬ್ರಹ್ಮದ ಸಾಕ್ಷಾತ್ಕಾರಕ್ಕೆ ಶಕ್ಯ ಸ್ಥಾನ ಎಂಬರ್ಥವನ್ನೂ ಹೇಳಬಹುದು – ಎಂದು ಭಾವ.

4. ಒಬ್ಬೊಬ್ಬರೂ ತಮ್ಮತಮ್ಮ ಹೃದಯದಲ್ಲಿ ಪರಮಾತ್ಮನಿರುವನೆಂದು ಕಂಡುಕೊಳ್ಳಬಹುದು ಎಂದು ಭಾವ.

5. ಈ ಅರ್ಥದಲ್ಲಿ ಶರೀರವು ಜೀವನ ಪುರವೆಂದು ಒಪ್ಪಿಕೊಂಡರೂ ಬ್ರಹ್ಮಸನ್ನಿಧಿಯಿಂದ ಅದಕ್ಕೆ ಬ್ರಹ್ಮಸಂಬಂಧವು ಉಂಟು ಎಂದು ತಿಳಿಯುತ್ತದೆ.

6. ಶ್ರುತ್ಯಾಚಾರ್ಯರ ಉಪದೇಶಕ್ಕೆ ಅನುಗುಣವಾದ ಅನುಭವಕ್ಕೆ ತಂದುಕೊಂಡು ಎಂದರ್ಥ.

## ದಹರಾಕಾಶವು ಅನ್ವೇಷ್ಟವ್ಯವಲ್ಲವೆಂಬುದು ಸರಿಯಲ್ಲ

( ಭಾಷ್ಯ )

೨೫೮. ಯದಪಿ ಏತದುಕ್ತಮ್–ನ ದಹರಸ್ಯ ಆಕಾಶಸ್ಯ ಅನ್ವೇಷ್ಟವ್ಯತ್ವಂ ವಿಜಿಜ್ಞಾಸಿತವ್ಯತ್ವಂ ಚ ಶ್ರುತಮ್, ಪರವಿಶೇಷಣತ್ವೇನ ಉಪಾದಾನಾತ್ ಇತಿ। ಅತ್ರ ಬ್ರೂಮಃ । ಯದಿ ಆಕಾಶೋ ನಾನ್ವೇಷ್ಟವ್ಯತ್ವೇನ ಉಕ್ತಃ ಸ್ಯಾತ್, "ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶಃ" (ಛಾಂ. ೮–೧–೩) ಇತ್ಯಾದಿ ಆಕಾಶಸ್ವರೂಪಪ್ರದರ್ಶನಂ ನೋಪಯುಜ್ಯತೇ । ನನು ಏತದಪಿ ಅನ್ತರ್ವರ್ತಿವಸ್ತುಸದ್ಭಾವಪ್ರದರ್ಶನಾಯೈವ ಪ್ರದರ್ಶ್ಯತೇ "ತಂ ಚೇದ್ ಬ್ರೂಯುರ್ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ನನ್ತರಾಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮ್" (ಛಾಂ.೮-೧-೨) ಇತ್ಯಾಕ್ಷಿಪ್ಯ ಪರಿಹಾರಾವಸರೇ ಆಕಾಶೌಪಮ್ಯೋಪಕ್ರಮೇಣ ದ್ಯಾವಾಪೃಥಿವ್ಯಾದೀನಾಮ್ ಅನ್ತಃಸಮಾಹಿತತ್ವದರ್ಶನಾತ್ । ನೈತದೇವಮ್ । ಏವಂ ಹಿ ಸತಿ ಯದನ್ತಃಸಮಾಹಿತಂ ದ್ಯಾವಾಪೃಥಿವ್ಯಾದಿ ತದನ್ವೇಷ್ಟವ್ಯಂ ವಿಜಿಜ್ಞಾಸಿತವ್ಯಂ ಚೋಕ್ತಂ ಸ್ಯಾತ್ । ತತ್ರ ವಾಕ್ಯಶೇಷೋ ನೋಪಪದ್ಯೇತ । "ಅಸ್ಮಿನ್ ಕಾಮಾಃ ಸಮಾಹಿತಾ ಏಷ ಆತ್ಮಾ ಅಪಹತಪಾಪ್ಮಾ" (ಛಾಂ. ೮–೧–೫) ಇತಿ ಹಿ ಪ್ರಕೃತಂ ದ್ಯಾವಾಪೃಥಿವ್ಯಾದಿ ಸಮಾಧಾನಾಧಾರಮ್ ಆಕಾಶಮ್ ಆಕೃಷ್ಯ "ಅಥ ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್" (ಛಾಂ. ೮–೧–೬) ಇತಿ ಸಮುಚ್ಚಯಾರ್ಥೇನ ಚಶಬ್ದೇನ ಆತ್ಮಾನಂ ಕಾಮಾಧಾರಮ್ ಆಶ್ರಿತಾಂಶ್ಚ ಕಾಮಾನ್ ವಿಜ್ಞೇಯಾನ್ ವಾಕ್ಯಶೇಷೋ ದರ್ಶಯತಿ । ತಸ್ಮಾತ್ ವಾಕ್ಯೋಪಕ್ರಮೇಽಪಿ ದಹರ ಏವ ಆಕಾಶೋ ಹೃದಯಪುಣ್ಡರೀಕಾಧಿಷ್ಠಾನಃ ಸಹಾನ್ತಃಸ್ಥೈಃ ಸಮಾಹಿತೈಃ ಪೃಥಿವ್ಯಾದಿಭಿಃ ಸತ್ಯೈಶ್ಚ ಕಾಮೈರ್ವಿಜ್ಞೇಯ ಉಕ್ತಃ ಇತಿ ಗಮ್ಯತೇ । ಸ ಚ ಉಕ್ತೇಭ್ಯೋ ಹೇತುಭ್ಯಃ ಪರಮೇಶ್ವರ ಇತಿ ॥

(ಭಾಷ್ಯಾರ್ಥ)

ಇನ್ನು "ದಹರಾಕಾಶವನ್ನು ಹುಡುಕಬೇಕೆಂದಾಗಲಿ ಅರಿತುಕೊಳ್ಳಬೇಕೆಂದಾಗಲಿ ಶ್ರುತಿಯಲ್ಲಿ ಹೇಳಿಲ್ಲ ; ಏಕೆಂದರೆ ಅದನ್ನು ಮತ್ತೊಂದಕ್ಕೆ ವಿಶೇಷಣವಾಗಿ ತೆಗೆದುಕೊಂಡಿದೆ" ಎಂಬಿದನ್ನು (ಭಾ.ಭಾ. ೨೫೫ ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದಕ್ಕೆ ಹೇಳುತ್ತೇವೆ: ಆಕಾಶವನ್ನು ಹುಡುಕಬೇಕೆಂದು ಹೇಳಿಲ್ಲವಾದರೆ "ಈ ಆಕಾಶವು ಎಷ್ಟಿರುವದೋ ಈ ಹೃದಯದೊಳಗಿನ ಆಕಾಶವೂ ಅಷ್ಟೇ" (ಛಾಂ. ೮–೧–೩) ಎಂದು ಮುಂತಾದಿ ಆಕಾಶಸ್ವರೂಪವನ್ನು ತಿಳಿಸಿರುವದು ಉಪಯೋಗಕ್ಕೆ ಬರುವದಿಲ್ಲ.

(ಪೂರ್ವಪಕ್ಷಿ) :— ಇದನ್ನೂ ಒಳಗಿರುವ ವಸ್ತು (ನಿಜವಾಗಿ) ಇದೆ ಎಂದು ತಿಳಿಸುವದಕ್ಕಾಗಿಯೇ ತಿಳಿಸಿರುತ್ತದೆ (ಎನ್ನಬಹುದಲ್ಲ)! ಏಕೆಂದರೆ " ಆ (ಆಚಾರ್ಯನನ್ನು ಕುರಿತು ಶಿಷ್ಯರು) ಈ ಬ್ರಹ್ಮಪುರದಲ್ಲಿರುವ ಈ ದಹರವಾದ ಪುಂಡರೀಕವೇಶ್ಮವಿದೆಯಲ್ಲ, ಇದರೊಳಗೆ ದಹರವಾದ ಆಕಾಶವಿದೆಯಷ್ಟೆ, ಅಲ್ಲಿ ಹುಡುಕಬೇಕಾದದ್ದಾಗಲಿ ಅರಿತುಕೊಳ್ಳಬೇಕಾದದ್ದಾಗಲಿ ಅಂಥದ್ದು ಏನಿದೆ ? –ಎಂದು ಕೇಳಿದರೆ " (ಛಾಂ. ೮–೧–೨) ಎಂದು ಆಕ್ಷೇಪಿಸಿ ಪರಿಹರಿಸುವ ಸಮಯದಲ್ಲಿ ಆಕಾಶದ ಹೋಲಿಕೆಯನ್ನು ಪ್ರಾರಂಭಿಸಿ ದ್ಯಾವಾಪೃಥಿವ್ಯಾದಿಗಳು ಒಳಗೆ ಇರುತ್ತವೆ ಎಂದು ತಿಳಿಸಿರುತ್ತದೆ.

(ಸಿದ್ಧಾಂತಿ) :– ಇದು ಹಾಗಲ್ಲ. ಏಕೆಂದರೆ ಈ ಪಕ್ಷದಲ್ಲಿ ದ್ಯಾವಾಪೃಥಿವಿಯೇ ಮುಂತಾಗಿ ಯಾವದು ಒಳಗೆ ಇದೆಯೋ ಅದನ್ನು (ಮಾತ್ರ) ಹುಡುಕಬೇಕು ಮತ್ತು ಅರಿತುಕೊಳ್ಳಬೇಕು –ಎಂದು ಹೇಳಿದಂತೆ ಆಗುವದು. ಆಗ ವಾಕ್ಯಶೇಷವು ಹೊಂದದೆ ಹೋಗುವದು ಏಕೆಂದರೆ "ಇದರಲ್ಲಿ ಕಾಮಗಳು ಇರುತ್ತವೆ. ಈತನು ಆತ್ಮನು, ಅಪಹತಪಾಪ್ಮನು'' (ಛಾಂ ೮–೧–೫) ಎಂದು ಪ್ರಕೃತವಾಗಿರುವ ದ್ಯಾವಾಪೃಥಿವ್ಯಾದಿಗಳಿರುವದಕ್ಕೆ ಆಧಾರವಾಗಿರುವ ಆಕಾಶವನ್ನು ಎಳೆದುಕೊಂಡು "ಇನ್ನು ಯಾರು ಇಲ್ಲಿ ಆತ್ಮನನ್ನೂ ಈ ಸತ್ಯಕಾಮಗಳನ್ನೂ ಅನುವೇದನಮಾಡಿಕೊಂಡು ಹೋಗುವರೋ''(ಛಾಂ. ೮-೧-೬) ಎಂದು ಸಮುಚ್ಚಯಾರ್ಥಕವಾದ ಚಶಬ್ದದಿಂದ ಕಾಮಾಧಾರನಾದ ಆತ್ಮನನ್ನೂ (ಅವನನ್ನು) ಆಶ್ರಯಿಸಿಕೊಂಡಿರುವ ಕಾಮಗಳನ್ನೂ ಅರಿತುಕೊಳ್ಳಬೇಕೆಂದು ವಾಕ್ಯಶೇಷದಲ್ಲಿ ತಿಳಿಸಿರುತ್ತದೆ[1]. ಆದ್ದರಿಂದ ವಾಕ್ಯದ ಉಪಕ್ರಮದಲ್ಲಿಯೂ ಹೃದಯಪುಂಡರೀಕವೆಂಬ ಅಧಿಷ್ಠಾನದಲ್ಲಿರುವ ದಹರವೆಂಬ ಆಕಾಶವನ್ನೇ ಅದರೊಳಗಿರುವ ಪೃಥಿವ್ಯಾದಿಗಳೆಂಬ ಸತ್ಯಕಾಮಗಳೊಡನೆ ಅರಿತುಕೊಳ್ಳಬೇಕೆಂದು ಹೇಳಿದೆ[2] ಎಂದು ನಿಶ್ಚಯವಾಗುತ್ತದೆ. ಆ (ಆಕಾಶವು) ಹಿಂದೆ ಹೇಳಿರುವ ಕಾರಣಗಳಿಂದ ಪರಮೇಶ್ವರನೇ.

---

1. ಆತ್ಮನನ್ನೂ ಕಾಮಗಳನ್ನೂ ಅರಿತುಕೊಂಡು ಹೋಗುವವರಿಗೆ ಇಲ್ಲಿ ಫಲವನ್ನು ಹೇಳಿದೆ.

2. ಅದರೊಳಗಿರುವದನ್ನು ಎಂದರೆ ಆ ಹೃದಯಪುಂಡರೀಕದಲ್ಲಿರುವದನ್ನು ಎಂದರ್ಥ ; ಆಕಾಶವನ್ನೂ ಅದರಲ್ಲಿರುವ ದ್ಯಾವಾಪೃಥಿವ್ಯಾದಿಗಳನ್ನೂ ಅರಿತುಕೊಳ್ಳಬೇಕೆಂಬುದೇ ಉಪಕ್ರಮವಾಕ್ಯದ ಅರ್ಥವೆಂಬುದನ್ನು 'ಆತ್ಮಾನಮನುವಿದ್ಯ' ಎಂಬ ವಾಕ್ಯಶೇಷದ ಬಲದಿಂದ ಗೊತ್ತುಪಡಿಸಬೇಕು.

## ದಹರಾಕಾಶವು ಬ್ರಹ್ಮವೇ ಎಂಬುದಕ್ಕೆ ಹೇತುಗಳು

**ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಙ್ಗಂ ಚ ॥ ೧೫ ॥**

೧೫. ಗತಿಶಬ್ದಗಳಿರುವದರಿಂದ (ದಹರಾಕಾಶವು ಬ್ರಹ್ಮವು). ಹೀಗೆ ಕಂಡುಬಂದಿದೆ, (ಇದು) ಲಿಂಗವೂ ಆಗಿದೆ.

( ಭಾಷ್ಯ )

೨೫೫. ದಹರಃ ಪರಮೇಶ್ವರಃ ಉತ್ತರೇಭ್ಯೋ ಹೇತುಭ್ಯಃ ಇತ್ಯುಕ್ತಮ್ । ತ ಏವೋತ್ತರೇ ಹೇತವ ಇದಾನೀಂ ಪ್ರಪಞ್ಚ್ಯನ್ತೇ । ಇತಶ್ಚ ಪರಮೇಶ್ವರ ಏವ ದಹರಃ । ಯಸ್ಮಾತ್ ದಹರವಾಕ್ಯಶೇಷೇ ಪರಮೇಶ್ವರಸ್ಯೈವ ಪ್ರತಿಪಾದಕೌ ಗತಿಶಬ್ದೌ ಭವತಃ । "ಇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನ ವಿನ್ದನ್ತಿ" (ಛಾಂ. ೮-೩-೨) ಇತಿ । ತತ್ರ ಪ್ರಕೃತಂ ದಹರಂ ಬ್ರಹ್ಮಲೋಕಶಬ್ದೇನ ಅಭಿಧಾಯ ತದ್ವಿಷಯಾ ಗತಿಃ ಪ್ರಜಾಶಬ್ದವಾಚ್ಯಾನಾಂ ಜೀವಾನಾಮ್ ಅಭಿಧೀಯಮಾನಾ ದಹರಸ್ಯ ಬ್ರಹ್ಮತಾಂ ಗಮಯತಿ । ತಥಾ ಹಿ ಅಹರಹರ್ಜೀವಾನಾಂ ಸುಷುಪ್ತಾವಸ್ಥಾಯಾಂ ಬ್ರಹ್ಮವಿಷಯಂ ಗಮನಂ ದೃಷ್ಟಂ ಶ್ರುತ್ಯನ್ತರೇ । "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ ೬-೮-೧) ಇತ್ಯೇವಮಾದೌ। ಲೋಕೇಽಪಿ ಕಿಲ ಗಾಢಂ ಸುಷುಪ್ತಮ್ ಆಚಕ್ಷತೇ ಬ್ರಹ್ಮೀಭೂತೋ ಬ್ರಹ್ಮತಾಂ ಗತಃ ಇತಿ । ತಥಾ ಬ್ರಹ್ಮಲೋಕಶಬ್ದೋಽಪಿ ಪ್ರಕೃತೇ ದಹರೇ ಪ್ರಯುಜ್ಯಮಾನಃ ಜೀವಭೂತಾಕಾಶಶಙ್ಕಾಂ ನಿವರ್ತಯನ್ ಬ್ರಹ್ಮತಾಮ್ ಅಸ್ಯ ಗಮಯತಿ। ನನು ಕಮಲಾಸನಲೋಕಮಪಿ ಬ್ರಹ್ಮಲೋಕಶಬ್ದೋ ಗಮಯೇತ್ । ಗಮಯೇತ್ ಯದಿ ಬ್ರಹ್ಮಣೋ ಲೋಕಃ ಇತಿ ಷಷ್ಠೀಸಮಾಸವೃತ್ತ್ಯಾ ವ್ಯುತ್ಪಾದ್ಯೇತ । ಸಾಮಾನಾಧಿಕರಣ್ಯವೃತ್ತ್ಯಾ ತು ವ್ಯುತ್ಪಾದ್ಯಮಾನಃ ಬ್ರಹ್ಮೈವ ಲೋಕೋ ಬ್ರಹ್ಮಲೋಕಃ ಇತಿ ಪರಮೇವ ಬ್ರಹ್ಮ ಗಮಯಿಷ್ಯತಿ । ಏತದೇವ ಚ ಅಹರಹರ್ಬ್ರಹ್ಮಲೋಕಗಮನಂ ದೃಷ್ಟಂ ಬ್ರಹ್ಮಲೋಕಶಬ್ದಸ್ಯ ಸಾಮಾನಾಧಿಕರಣ್ಯವೃತ್ತಿಪರಿಗ್ರಹೇ ಲಿಙ್ಗಮ್ । ನ ಹಿ ಅಹರಹಃ ಇಮಾಃ ಪ್ರಜಾಃ ಕಾರ್ಯಬ್ರಹ್ಮಲೋಕಂ ಸತ್ಯಲೋಕಾಖ್ಯಂ ಗಚ್ಛನ್ತಿ ಇತಿ ಶಕ್ಯಂ ಕಲ್ಪಯಿತುಮ್ ॥

( ಭಾಷ್ಯಾರ್ಥ )

ಮುಂದೆ (ಹೇಳಿರುವ) ಹೇತುಗಳಿಂದ ದಹರ(ವಾದ ಆಕಾಶವು) ಪರಮೇಶ್ವರನೇ ಎಂದು ಹೇಳಿತ್ತು. ಅದೇ ಮುಂದಿನ ಹೇತುಗಳನ್ನು ಈಗ ವಿವರಿಸುತ್ತಾರೆ. ಈ ( ಕಾರಣ )ದಿಂದಲೂ ದಹರವು ಪರಮೇಶ್ವರನೇ ; ಏಕೆಂದರೆ

"ಈ ಪ್ರಜೆಗಳೆಲ್ಲರೂ ದಿನದಿನವೂ ಹೋಗುತ್ತಿದ್ದರೂ ಈ ಬ್ರಹ್ಮಲೋಕವನ್ನು ಪಡೆಯದೆ ಇರುವರು '' (ಛಾಂ. ೮–೩–೨) ಎಂದು ದಹರವಾಕ್ಯದ ಶೇಷದಲ್ಲಿ ಪರಮೇಶ್ವರನನ್ನು ಹೇಳುವ ಗತಿಶಬ್ದಗಳಿರುತ್ತವೆ[1]. ಇಲ್ಲಿ ಪ್ರಕೃತವಾದ ದಹರವನ್ನು ಬ್ರಹ್ಮಲೋಕವೆಂಬ ಶಬ್ದದಿಂದ ಹೇಳಿ ಅದರ ವಿಷಯವಾದ ಗತಿಯನ್ನು ಪ್ರಜಾಶಬ್ದವಾಚ್ಯರಾಗಿರುವ ಜೀವರಿಗೆ ಹೇಳಿರುವದರಿಂದ ದಹರವು, ಬ್ರಹ್ಮವೆಂದು ಗೊತ್ತುಪಡಿಸಿಕೊಡುತ್ತದೆ[2]. ಇದಕ್ಕನುಗುಣವಾಗಿ "ಸೋಮ್ಯನೆ ಆಗ ಸತ್ತಿನೊಡನೆ ಸೇರಿದವನಾಗುತ್ತಾನೆ'' (ಛಾಂ. ೬–೮–೧) ಎಂದು ಮುಂತಾಗಿರುವ ಮತ್ತೊಂದು ಶ್ರುತಿ(ವಚನ)ದಲ್ಲಿ ಸುಷುಪ್ತಾವಸ್ಥೆಯಲ್ಲಿ ಜೀವರಿಗೆ ದಿನದಿನವೂ ಬ್ರಹ್ಮವಿಷಯವಾದ ಗಮನವನ್ನು (ಹೇಳಿರುವದು)ಕಂಡುಬಂದಿದೆ[3]. **ಲೋಕದಲ್ಲಿಯೂ ಗಾಢವಾಗಿ ನಿದ್ರಿಸುತ್ತಿರುವವನನ್ನು ಬ್ರಹ್ಮೀಭೂತನಾದನು, ಬ್ರಹ್ಮತ್ವವನ್ನು ಹೊಂದಿದನು ಎಂದು ಹೇಳುತ್ತಾರಲ್ಲವೆ?**[4]

ಇದರಂತೆ ಬ್ರಹ್ಮಲೋಕ ಎಂಬ ಶಬ್ದವೂ ಪ್ರಕೃತವಾದ ದಹರದಲ್ಲಿ ಪ್ರಯುಕ್ತವಾಗಿರುವದರಿಂದ, (ಇದು) ಜೀವ ಅಥವಾ ಭೂತಾಕಾಶ– ಎಂಬಿವುಗಳಲ್ಲಿ ಒಂದಾಗಿರಬೇಕೆಂಬ ) ಶಂಕೆಯನ್ನು ತೊಲಗಿಸಿ ಈ (ಆಕಾಶವು) ಬ್ರಹ್ಮವಾಗಿರಬೇಕೆಂದು ಗೊತ್ತುಪಡಿಸಿಕೊಡುತ್ತದೆ[5].

(ಆಕ್ಷೇಪ) :– ಬ್ರಹ್ಮಲೋಕವೆಂಬ ಶಬ್ದವು ಕಮಲಾಸನ(ಬ್ರಹ್ಮನ) ಲೋಕವನ್ನೂ ತಿಳಿಸಬಹುದಲ್ಲ !

---

1. ಗತಿಯೂ ಶಬ್ದವೂ ಇವೆ. ಇವನ್ನು ಮುಂದೆ ವಿವರಿಸಿದೆ.

2. ಬ್ರಹ್ಮಲೋಕಕ್ಕೆ ಜೀವರು ಹೋಗುತ್ತಾರೆಂದು ಗತಿಯನ್ನು ಹೇಳಿದೆ ; ಆದ್ದರಿಂದ ಬ್ರಹ್ಮಲೋಕವೆಂಬ ಈ ದಹರಾಕಾಶವು ಜೀವರಿಗಿಂತ ಬೇರೆಯಾದ ಬ್ರಹ್ಮವು ಎಂದಾಯಿತು.

3. 'ದೃಷ್ಟಮ್' ಎಂಬ ಸೂತ್ರಸ್ಥಶಬ್ದದ ವಿವರಣೆಯಿದು. ಸುಷುಪ್ತಿಕಾಲಕ್ಕೆ ಸತ್ತಿನಲ್ಲಿ ಸೇರಿದವನಾಗುತ್ತಾನೆ ಎಂಬಲ್ಲಿ ಸದ್ಬ್ರಹ್ಮವನ್ನು ಹೇಳಿರುವದು ಕಂಡುಬಂದಿದೆ ; ಆದ್ದರಿಂದ ಈ ಉಪಾಸನಾವಾಕ್ಯದಲ್ಲಿಯೂ ಸುಷುಪ್ತಿಕಾಲಕ್ಕೆ ಸೇರುವನೆಂಬ ದಹರವು ಸದ್ಬ್ರಹ್ಮವೇ ಎನ್ನಬೇಕು– ಎಂದು ಭಾವ. ಜ್ಞೇಯವಾಕ್ಯದಲ್ಲಿ ಹೇಳುವ ಬ್ರಹ್ಮಕ್ಕೂ ಉಪಾಸನಾವಾಕ್ಯದಲ್ಲಿ ಹೇಳುವ ಬ್ರಹ್ಮಕ್ಕೂ ಸ್ವರೂಪದಲ್ಲಿ ಯಾವ ತಾರತಮ್ಯವೂ ಇರುವದಿಲ್ಲ. ಪೀಠಿಕೆಯನ್ನು ನೋಡಿ.

4. ಆಚಾರ್ಯರ ಕಾಲದಲ್ಲಿ ಹೀಗೆಂದು ಶಿಷ್ಟರು ಹೇಳಿಕೊಳ್ಳುತ್ತಿದ್ದರೆಂದು ತೋರುತ್ತದೆ. ಲೋಕವ್ಯವಹಾರವು ಹೀಗೆಯೇ ದೃಷ್ಟವಾಗಿದೆ– ಎಂದು ಸೂತ್ರಭಾಗಕ್ಕೆ ಇಲ್ಲಿ ಅರ್ಥಮಾಡಿದಂತಾಯಿತು.

5. ಗತಿಯನ್ನು ಹೇಳಿರುವದಲ್ಲದೆ ಬ್ರಹ್ಮಲೋಕವೆಂಬ ಶಬ್ದವನ್ನು ಪ್ರಯೋಗಿಸಿರುವದೂ ದಹರವು ಬ್ರಹ್ಮವೆಂಬುದಕ್ಕೆ ಲಿಂಗವು. ಭಾಷ್ಯದಲ್ಲಿರುವ 'ಗಮಯತಿ' ಎಂಬ ಮಾತು ಸೂತ್ರದ 'ಲಿಂಗಮ್' ಎಂಬ ಶಬ್ದವನ್ನು ಸೂಚಿಸುತ್ತದೆ ಎನ್ನಬಹುದು.

(ಪರಿಹಾರ) :— 'ಬ್ರಹ್ಮನ ಲೋಕವು' ಎಂದು ಷಷ್ಠೀಸಮಾಸವೃತ್ತಿಯಿಂದ (ಈ ಶಬ್ದದ) ವ್ಯುತ್ಪತ್ತಿಯನ್ನು ಮಾಡುವದಾದರೆ (ಅದು ಕಮಲಾಸನಲೋಕವನ್ನೂ) ತಿಳಿಸಬಹುದು. ಆದರೆ 'ಬ್ರಹ್ಮವೆಂಬ ಲೋಕವು' ಬ್ರಹ್ಮಲೋಕವು ಎಂದು ಸಾಮಾನಾಧಿಕರಣ್ಯವೃತ್ತಿಯಿಂದ ವ್ಯುತ್ಪತ್ತಿಯನ್ನು ಮಾಡಿದರೆ ಪರಬ್ರಹ್ಮವನ್ನೇ ತಿಳಿಸುತ್ತದೆ. ಪ್ರತಿದಿನವೂ ಬ್ರಹ್ಮಲೋಕಕ್ಕೆ ಗಮಿಸುವರೆಂದು (ಶ್ರುತಿಯಲ್ಲಿ) ಕಂಡುಬಂದಿರುವ ಇದೇ ಬ್ರಹ್ಮಲೋಕಶಬ್ದಕ್ಕೆ ಸಾಮಾನಾಧಿಕರಣ್ಯವೃತ್ತಿಯನ್ನು ತೆಗೆದುಕೊಳ್ಳಬೇಕೆಂಬುದಕ್ಕೆ ಲಿಂಗವಾಗಿರುತ್ತದೆ,[1] ಏಕೆಂದರೆ ದಿನದಿನವೂ ಈ ಪ್ರಜೆಗಳು **ಸತ್ಯಲೋಕ**ವೆಂಬ ಕಾರ್ಯಬ್ರಹ್ಮಲೋಕಕ್ಕೆ ಹೋಗುತ್ತಾರೆಂದು ಕಲ್ಪಿಸುವದು ಆಗಲಾರದು.

## ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ॥ ೧೬ ॥

೧೬. ಧೃತಿ ಎಂಬ ಮಹಿಮೆಯಿಂದಲೂ (ದಹರವು ಪರಮೇಶ್ವರನೇ) ; ಏಕೆಂದರೆ ಅದು ಈತನಲ್ಲಿ ಕಾಣಬರುತ್ತಿದೆ.

(ಭಾಷ್ಯ)

೨೬೦. ಧೃತೇಶ್ಚ ಹೇತೋಃ ಪರಮೇಶ್ವರ ಏವಾಯಂ ದಹರಃ । ಕಥಮ್ ? "ದಹರೋಽಸ್ಮಿನ್ನನ್ತರಾಕಾಶಃ" ಇತಿ ಹಿ ಪ್ರಕೃತ್ಯ ಆಕಾಶೌಪಮ್ಯಪೂರ್ವಕಂ ತಸ್ಮಿನ್ ಸರ್ವಸಮಾಧಾನಮ್ ಉಕ್ತ್ವಾ ತಸ್ಮಿನ್ನೇವ ಚ ಆತ್ಮಶಬ್ದಂ ಪ್ರಯುಜ್ಯ ಅಪಹತಪಾಪ್ಮತ್ವಾದಿಗುಣಯೋಗಂ ಚ ಉಪದಿಶ್ಯ ತಮೇವ ಅನತಿವೃತ್ತಪ್ರಕರಣಂ ನಿರ್ದಿಶತಿ "ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷ ಲೋಕಾನಾಮಸಂಭೇದಾಯ" (ಛಾಂ. ೮-೪-೧) ಇತಿ । ತತ್ರ ವಿಧೃತಿರಿತಿ ಆತ್ಮಶಬ್ದಸಾಮಾನಾಧಿಕರಣ್ಯಾತ್ ವಿಧಾರಯಿತಾ ಉಚ್ಯತೇ । ಕ್ತಿಚಃ ಕರ್ತರಿ ಸ್ಮರಣಾತ್ । ಯಥಾ ಉದಕಸಂತಾನಸ್ಯ ವಿಧಾರಯಿತಾ ಲೋಕೇ ಸೇತುಃ ಕ್ಷೇತ್ರಸಂಪದಾಮ್ ಅಸಂಭೇದಾಯ, ಏವಮ್ ಅಯಮ್ ಆತ್ಮಾ ಏಷಾಮ್ ಅಧ್ಯಾತ್ಮಾದಿಭೇದಭಿನ್ನಾನಾಂ ಲೋಕಾನಾಂ ವರ್ಣಾಶ್ರಮಾದೀನಾಂ ಚ ವಿಧಾರಯಿತಾ ಸೇತುಃ ಅಸಂಭೇದಾಯ, ಅಸಂಕರಾಯ ಇತಿ । ಏವಮ್ ಇಹ ಪ್ರಕೃತೇ ದಹರೇ ವಿಧಾರಣ

1. ಲಿಂಗಂ ಚ ಎಂಬುದಕ್ಕೆ ಇದೊಂದು ಅರ್ಥವು. ಬ್ರಹ್ಮಲೋಕವೆಂದರೆ ಬ್ರಹ್ಮವೆಂದು ಅರ್ಥಮಾಡುವದಕ್ಕೆ ಜೀವರು ಪ್ರತಿದಿನವೂ ಅಲ್ಲಿಗೆ ಹೋಗುವರೆಂಬುದೊಂದು ಲಿಂಗವು- ಎಂದರ್ಥ. ಮಿಕ್ಕವರು ಬ್ರಹ್ಮಲೋಕಕ್ಕೆ ಹೋದರೂ ಹೋದಂತಲ್ಲ ; ದಹರೋಪಾಸಕನೇ ನಿಜವಾಗಿ ಹೋಗುವವನು ಎಂದು ಶ್ರುತಿಯ ಅರ್ಥ.

ಲಕ್ಷಣಂ ಮಹಿಮಾನಂ ದರ್ಶಯತಿ | ಅಯಂ ಚ ಮಹಿಮಾ ಪರಮೇಶ್ವರೇ ಏವ ಶ್ರುತ್ಯನ್ತರಾತ್ ಉಪಲಭ್ಯತೇ "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚನ್ದ್ರಮಸೌ ವಿಧೃತೌ ತಿಷ್ಠತಃ" (ಬೃ. ೩-೮-೯) ಇತ್ಯಾದೇಃ । ತಥಾ ಅನ್ಯತ್ರಾಪಿ ನಿಶ್ಚಿತೇ ಪರಮೇಶ್ವರವಾಕ್ಯೇ ಶ್ರೂಯತೇ "ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ" (ಬೃ. ೪-೪-೨೨) । ಏವಂ ಧೃತೇಶ್ಚ ಹೇತೋಃ ಪರಮೇಶ್ವರ ಏವಾಯಂ ದಹರಃ ||

(ಭಾಷ್ಯಾರ್ಥ)

ಧೃತಿ ಎಂಬ ಕಾರಣದಿಂದಲೂ ಈ ದಹರವು ಪರಮೇಶ್ವರನೇ. ಹೇಗೆ? ಎಂದರೆ "ಇದರಲ್ಲಿ ದಹರವಾದ ಆಕಾಶವಿದೆಯಲ್ಲ" ಎಂದು ಪ್ರಾರಂಭಿಸಿ, ಆಕಾಶದ ಉಪಮಾನವನ್ನು ಕೊಟ್ಟು ಅದರಲ್ಲಿ ಎಲ್ಲವೂ ಇದ್ದುಕೊಂಡಿರುವದೆಂದು ಹೇಳಿ ಅದರಲ್ಲಿಯೇ ಆತ್ಮಶಬ್ದವನ್ನು ಪ್ರಯೋಗಿಸಿ, ಅಪಹತಪಾಪ್ಮತ್ವವೇ ಮುಂತಾದ ಗುಣಗಳ ಸಂಬಂಧವನ್ನೂ ತಿಳಿಸಿಕೊಟ್ಟು[1] ಪ್ರಕರಣವನ್ನು ಮೀರದೆ[2] ಆ (ಆಕಾಶ)ವನ್ನೇ "ಇನ್ನು (ಈ) ಆತ್ಮನೆಂಬುವನುಂಟಲ್ಲ, ಇವನೇ ಈ ಲೋಕಗಳು ನಾಶವಾಗದಿರುವದಕ್ಕೆ ಸೇತು, ವಿಧೃತಿಯು" (ಛಾಂ. ೮-೪-೧) ಎಂದು ಕರೆದಿರುತ್ತದೆ. ಇಲ್ಲಿ ವಿಧೃತಿ ಎಂಬುದು ಆತ್ಮಶಬ್ದದೊಡನೆ ಸಮಾನಾಧಿಕರಣವಾಗಿ (ಪ್ರಯುಕ್ತವಾಗಿರುವದರಿಂದ) ವಿಧಾರಣೆ ಮಾಡಿರುವವನನ್ನು (ಆ ಮಾತಿನಿಂದ) ಹೇಳಿರುತ್ತದೆ; ಏಕೆಂದರೆ ಕ್ತಿಚ್ ಎಂಬ ಪ್ರತ್ಯಯವು ಕರ್ತೃ(ವನ್ನು ಹೇಳುತ್ತದೆ)ಯೆಂದು ವ್ಯಾಕರಣಸ್ಮೃತಿ ಇದೆ (?). ಲೋಕದಲ್ಲಿ ಸೇತುವು ನೀರಿನ ಪ್ರವಾಹವನ್ನು ತಡೆಗಟ್ಟಿರುವದು ಹೊಲಗಳ (ಪೈರಿನ) ಸಂಪತ್ತು ನಾಶವಾಗದಿರುವದಕ್ಕೆ ಹೇಗೆ ಕಾರಣವಾಗಿರುವದೋ, ಹೀಗೆಯೇ ಈ ಆತ್ಮನು ಈ ಅಧ್ಯಾತ್ಮಾದಿಭೇದಗಳಿಂದ ಭಿನ್ನವಾಗಿರುವ ಲೋಕಗಳೂ ವರ್ಣಾಶ್ರಮಾದಿಗಳೂ ನಾಶವಾಗದಿರುವದಕ್ಕೆ ಎಂದರೆ ಸಂಕರವಾಗದೆ ಇರುವದಕ್ಕೆ, ವಿಧಾರಕನಾದ ಸೇತು (ಎಂದು ಶ್ರುತಿವಾಕ್ಯದ ಅರ್ಥ). ಹೀಗೆ ಇಲ್ಲಿ ಪ್ರಕೃತವಾಗಿರುವ ದಹರದಲ್ಲಿ ವಿಧಾರಣವೆಂಬ[3] ಮಹಿಮೆ

---

1. ಇದೆಲ್ಲ ದಹರವು ಪರಮೇಶ್ವರನೇ ಎಂಬುದಕ್ಕೆ ಗುರುತು.

2. ದಹರವಾಕ್ಯವು ಛಾಂ. ೮-೧ರಲ್ಲಿದೆ; ಈಗ ಉದಾಹರಿಸುವ ವಾಕ್ಯವು ೮-೪ರಲ್ಲಿದೆ. ಅದ್ದರಿಂದ ಇದು ಮತ್ತೊಂದರ ವಿಷಯವೆಂದು ಶಂಕಿಸಬಹುದೆಂಬ ಕಾರಣದಿಂದ ಅದೇ ಪ್ರಕರಣದಲ್ಲಿಯೇ ಇದು ಬಂದಿದೆ ಎಂದು ತಿಳಿಸಿದೆ.

3. ಸೂತ್ರದಲ್ಲಿರುವ ಧೃತಿಶಬ್ದವು ಭಾವಾರ್ಥಕಕ್ತಿನ್‌ಪ್ರತ್ಯಯಾಂತವೆಂದು ತಿಳಿಸುವದಕ್ಕೆ ಈ ವಿವರಣೆಯನ್ನು ಕೊಟ್ಟಿದೆ.

ಯನ್ನು (ಶ್ರುತಿಯು) ಹೇಳಿರುತ್ತದೆ. ಮತ್ತು ಈ ಮಹಿಮೆಯು ಪರಮೇಶ್ವರನಲ್ಲಿಯೇ (ಇದೆಯೆಂದು) "ಗಾರ್ಗಿಯೆ, ಇದೇ ಅಕ್ಷರದ ಅಪ್ಪಣೆಯಿಂದ ಸೂರ್ಯಚಂದ್ರರು ವಿಧೃತರಾಗಿ ನಿಂತಿರುತ್ತಾರೆ" (ಬೃ. ೩-೮-೯) ಎಂದು ಮುಂತಾಗಿರುವ ಮತ್ತೊಂದು ಶ್ರುತಿಯಿಂದ ಕಂಡುಬರುತ್ತದೆ. ಹಾಗೆಯೇ ಪರಮೇಶ್ವರವಾಕ್ಯವೆಂದು ನಿಶ್ಚಿತವಾಗಿರುವ ಮತ್ತೊಂದು (ಶ್ರುತಿಯಲ್ಲಿ)ಯೂ "ಈತನೇ ಸರ್ವೇಶ್ವರನು, ಈತನೇ ಭೂತಾಧಿಪತಿಯು, ಈತನೇ ಭೂತಪಾಲನು, ಈತನೇ ಈ ಲೋಕಗಳು ಸಂಭೇದವಾಗದಿರುವವಕ್ಕೆ (ಕಾರಣನಾದ) ವಿಧರಣವಾದ ಸೇತು" (ಬೃ. ೪-೪-೨೨) ಎಂದು ಹೇಳಿದೆ. ಹೀಗೆ **ಧೃತಿ** ಎಂಬ ಹೇತುವಿನಿಂದಲೂ ಈ ದಹರವು ಪರಮೇಶ್ವರನೇ.

## ಪ್ರಸಿದ್ಧೇಶ್ಚ ॥ ೧೭ ॥

೧೭. ಪ್ರಸಿದ್ಧಿಯಿಂದಲೂ (ದಹರಾಕಾಶವು ಪರಮೇಶ್ವರನೇ).

( ಭಾಷ್ಯ )

೨೬೧. ಇತಶ್ಚ ಪರಮೇಶ್ವರ ಏವ "ದಹರೋಽಸ್ಮಿನ್ನಂತರಾಕಾಶಃ" ಇತ್ಯುಚ್ಯತೇ । ಯತ್ಕಾರಣಮ್ ಆಕಾಶಶಬ್ದಃ ಪರಮೇಶ್ವರೇ ಪ್ರಸಿದ್ಧಃ । "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ" (ಛಾಂ. ೮-೧೪-೧), "ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯನ್ತೇ" (ಛಾಂ. ೧-೯-೧) ಇತ್ಯಾದಿಪ್ರಯೋಗದರ್ಶನಾತ್ । ಜೀವೇ ತು ನ ಕ್ವಚಿತ್ ಆಕಾಶಶಬ್ದಃ ಪ್ರಯುಜ್ಯಮಾನೋ ದೃಶ್ಯತೇ । ಭೂತಾಕಾಶಸ್ತು ಸತ್ಯಾಮಪಿ ಆಕಾಶಶಬ್ದಪ್ರಸಿದ್ಧೌ ಉಪಮಾನೋಪಮೇಯಭಾವಾದ್ಯಸಂಭವಾತ್ ನ ಗ್ರಹೀತವ್ಯಃ ಇತ್ಯುಕ್ತಮ್ ॥

( ಭಾಷ್ಯಾರ್ಥ )

ಈ (ಕಾರಣ)ದಿಂದಲೂ ಪರಮೇಶ್ವರನನ್ನೇ "ಇದರೊಳಗೆ ಇರುವ ದಹರಾಕಾಶವು" ಎಂದಿದೆ (ಎನ್ನಬೇಕು). ಯಾವ ಕಾರಣದಿಂದಲೆಂದರೆ, ಆಕಾಶಶಬ್ದವು ಪರಮೇಶ್ವರನಲ್ಲಿ ಪ್ರಸಿದ್ಧವಾಗಿರುತ್ತದೆ.[1] ಏಕೆಂದರೆ "ಆಕಾಶವೊಂದೇ ನಾಮರೂಪಗಳನ್ನು ನಿರ್ವಾಹಮಾಡತಕ್ಕದ್ದು" (ಛಾಂ. ೮-೧೪-೧), "ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟುತ್ತವೆ" (ಛಾಂ. ೧-೯-೧)- ಮುಂತಾದ

1. ಇದು ವೈದಿಕಪ್ರಸಿದ್ಧಿ ; ಲೌಕಿಕಪ್ರಸಿದ್ಧಿಯು ಭೂತಾಕಾಶದಲ್ಲಿಯೇ.

ಪ್ರಯೋಗವು ಕಂಡುಬರುತ್ತದೆ. ಜೀವನಲ್ಲಿಯೋ ಎಲ್ಲಿಯೂ[1] ಆಕಾಶಶಬ್ದವು ಪ್ರಯೋಗವಾದದ್ದು ಕಾಣುವದಿಲ್ಲ. ಭೂತಾಕಾಶದಲ್ಲೇನೋ ಆಕಾಶಶಬ್ದದ ಪ್ರಸಿದ್ಧಿಯಿದೆ; ಆದರೂ ಉಪಮಾನೋಪಮೇಯಭಾವವೇ ಮುಂತಾದವು ಹೊಂದುವದಿಲ್ಲವಾದ್ದರಿಂದ (ಅದನ್ನು ಇಲ್ಲಿ) ತೆಗೆದುಕೊಳ್ಳುವಹಾಗಿಲ್ಲವೆಂದು (ಹಿಂದೆ ಭಾ. ಭಾ. ೨೫೬ರಲ್ಲಿ) ಹೇಳಿದ್ದಾಗಿದೆ.

## ದಹರಾಕಾಶವು ಜೀವನಲ್ಲವೆಂಬುದಕ್ಕೆ ಹೇತುಗಳು

**ಇತರಪರಾಮರ್ಶಾತ್ ಸ ಇತಿ ಚೇನ್ನಾಸಂಭವಾತ್ ॥ ೧೮ ॥**

೧೮. ಇನ್ನೊಬ್ಬನ ಪರಾಮರ್ಶವಿರುವದರಿಂದ ಅವನು (ಆಕಾಶವಾಗಲಿ) ಎಂದರೆ ಆಗದು. ಏಕೆಂದರೆ ಸಂಭವಿಸುವದಿಲ್ಲ.

(ಭಾಷ್ಯ)

೨೬೨. ಯದಿ ವಾಕ್ಯಶೇಷಬಲೇನ ದಹರ ಇತಿ ಪರಮೇಶ್ವರಃ ಪರಿಗೃಹ್ಯೇತ, ಅಸ್ತಿ ಇತರಸ್ಯಾಪಿ ಜೀವಸ್ಯ ವಾಕ್ಯಶೇಷೇ ಪರಾಮರ್ಶಃ, "ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚ" (ಛಾಂ. ೮-೩-೪) ಇತಿ । ಅತ್ರ ಹಿ ಸಂಪ್ರಸಾದಶಬ್ದಃ ಶ್ರುತ್ಯನ್ತರೇ ಸುಷುಪ್ತಾವಸ್ಥಾಯಾಂ ದೃಷ್ಟತ್ವಾತ್ ತದವಸ್ಥಾಪನ್ನಂ ಜೀವಂ ಶಕ್ನೋತ್ಯುಪಸ್ಥಾಪಯಿತುಮ್, ನಾರ್ಥಾನ್ತರಮ್ । ತಥಾ ಶರೀರವ್ಯಪಾಶ್ರಯಸ್ಯೈವ ಜೀವಸ್ಯ ಶರೀರಾತ್ ಸಮುತ್ಥಾನಂ ಸಂಭವತಿ । ಯಥಾ ಆಕಾಶವ್ಯಪಾಶ್ರಯಾಣಾಂ ವಾಯ್ವಾದೀನಾಮ್ ಆಕಾಶಾತ್ ಸಮುತ್ಥಾನಂ ತದ್ವತ್ । ಯಥಾ ಚ ಅದೃಷ್ಟೋಽಪಿ ಲೋಕೇ ಪರಮೇಶ್ವರವಿಷಯಃ ಆಕಾಶಶಬ್ದಃ ಪರಮೇಶ್ವರಧರ್ಮಸಮಭಿವ್ಯಾಹಾರಾತ್ "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ" ಇತ್ಯೇವಮಾದೌ ಪರಮೇಶ್ವರವಿಷಯೋಽಭ್ಯುಪಗತಃ, ಏವಂ ಜೀವವಿಷಯೋಽಪಿ ಭವಿಷ್ಯತಿ । ತಸ್ಮಾದ್ ಇತರಪರಾಮರ್ಶಾತ್ "ದಹರೋಽಸ್ಮಿನ್ನನ್ತರಾಕಾಶಃ" ಇತ್ಯತ್ರ ಸ ಏವ ಜೀವ ಉಚ್ಯತೇ ಇತಿ ಚೇತ್ । ನೈತದೇವಂ ಸ್ಯಾತ್ । ಕಸ್ಮಾತ್ ? ಅಸಂಭವಾತ್ । ನ ಹಿ ಜೀವೋ ಬುದ್ಧ್ಯಾದ್ಯುಪಾಧಿಪರಿಚ್ಛೇದಾಭಿಮಾನೀ ಸನ್ ಆಕಾಶೇನ ಉಪಮೀಯೇತ । ನ ಚ ಉಪಾಧಿಧರ್ಮಾನ್ ಅಭಿಮನ್ಯ

---

1. ವೇದದಲ್ಲಾಗಲಿ ಲೋಕದಲ್ಲಾಗಲಿ.

ಮಾನಸ್ಯ ಅಪಹತಪಾಪ್ಮತ್ವಾದಯೋ ಧರ್ಮಾಃ ಸಂಭವನ್ತಿ : ಪ್ರಪಞ್ಚಿತಂ ಚೈತತ್ ಪ್ರಥಮಸೂತ್ರೇ । ಅತಿರೇಕಾಶಙ್ಕಾಪರಿಹಾರಾಯ ಅತ್ರ ತು ಪುನರುಪನ್ಯಸ್ತಮ್। ಪಠಿಷ್ಯತಿ ಚ ಉಪರಿಷ್ಟಾತ್ "ಅನ್ಯಾರ್ಥಶ್ಚ ಪರಾಮರ್ಶಃ" (೧-೩-೨೦) ಇತಿ ॥

( ಭಾಷ್ಯಾರ್ಥ )

ವಾಕ್ಯಶೇಷಬಲದಿಂದ ದಹರವೆಂದರೆ ಪರಮೇಶ್ವರನೆಂದು ಹಿಡಿಯುವ ದಾದರೆ ಇನ್ನೊಬ್ಬನಿಗೂ ಎಂದರೆ ಜೀವನಿಗೂ "ಇನ್ನು ಯಾವ ಈ ಸಂಪ್ರಸಾದ ನು ಈ ಶರೀರದಿಂದ ಎದ್ದು ಹೆಚ್ಚಿನ ಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಸಿದ್ಧನಾಗುತ್ತಾನಷ್ಟೆ, ಈತನು ಆತ್ಮನು- ಎಂದನು" (ಛಾಂ ೮-೩-೪) ಎಂದು ವಾಕ್ಯಶೇಷದಲ್ಲಿ ಪರಾಮರ್ಶವಿದೆ. ಹೇಗೆಂದರೆ ಇಲ್ಲಿ ಸಂಪ್ರಸಾದಶಬ್ದವು ಮತ್ತೊಂದು ಶ್ರುತಿಯಲ್ಲಿ[1] ಸುಷುಪ್ತಾವಸ್ಥೆಯಲ್ಲಿ (ಪ್ರಯುಕ್ತವಾಗಿರುವದು) ಕಂಡುಬಂದಿರುವದರಿಂದ ಆ ಅವಸ್ಥೆಯುಳ್ಳ ಜೀವನನ್ನು ನೆನಪಿಗೆ ತರುವದಕ್ಕೆ ಶಕ್ತವಾಗಿದೆಯೇ ಹೊರತು ಮತ್ತೊಂದು ಪದಾರ್ಥವನ್ನು (ತಿಳಿಸುವದಕ್ಕೆ ಶಕ್ತವಾ)ಗಿಲ್ಲ. ಇದರಂತೆ ಶರೀರವನ್ನಾಶ್ರಯಿಸಿಕೊಂಡಿರುವ ಜೀವನಿಗೇ ಶರೀರವನ್ನು ಬಿಟ್ಟೇಳುವದೆಂಬುದು ಹೊಂದುತ್ತದೆ. ಆಕಾಶವನ್ನಾಶ್ರಯಿಸಿ ಕೊಂಡಿರುವ ವಾಯ್ವಾದಿಗಳು ಆಕಾಶವನ್ನು ಬಿಟ್ಟೇಳುವದೆಂಬುದು ಹೇಗೆ (ಹೊಂದುತ್ತದೆಯೋ) ಹಾಗೆಯೇ ಇದು[2]. ಮತ್ತು ಹೇಗೆ ಲೋಕದಲ್ಲಿ ಆಕಾಶ ಶಬ್ದವು ಪರಮೇಶ್ವರವಿಷಯಕವೆಂದು ಕಂಡುಬಾರದೆ ಇದ್ದರೂ ಪರಮೇಶ್ವರನ ಧರ್ಮಗಳೊಡನೆ ಹೇಳಿರುವದರಿಂದ "ಆಕಾಶವೆಂಬುದೇ ನಾಮರೂಪಗಳನ್ನು ನಿರ್ವಹಿಸತಕ್ಕದ್ದು" (ಛಾಂ. ೮-೧೪-೧) ಎಂದು ಮುಂತಾಗಿರುವ (ವಾಕ್ಯಗಳಲ್ಲಿ) ಪರಮೇಶ್ವರನ ವಿಷಯವಾದದ್ದೆಂದು ಅಂಗೀಕರಿಸಲಾಗಿದೆಯೋ ಹಾಗೆಯೇ ಜೀವನ ವಿಷಯವೂ ಆಗಲಿ.[3] ಆದ್ದರಿಂದ ಇನ್ನೊಬ್ಬನ ಪರಾಮರ್ಶವಿರುವದ ರಿಂದ "ಇದರೊಳಗೆ ಇರುವ ದಹರಾಕಾಶವು" ಎಂಬಲ್ಲಿ ಅದೇ ಜೀವನನ್ನೇ ಹೇಳಿದೆ (ಎನ್ನೋಣ) ಎಂದರೆ :

---

1. ಬೃ. ೪-೩-೧೫ರಲ್ಲಿ.

2. ಶಿಶಿರಋತು ಮುಗಿಯಲು ಗಾಳಿ, ಮೋಡ, ಮಿಂಚು, ಗುಡುಗು- ಇವು ಆಕಾಶ ವನ್ನು ಬಿಟ್ಟೆದ್ದು ಸೂರ್ಯನ ಜ್ಯೋತಿಯನ್ನು ಪಡೆದು ಮತ್ತೆ ಮಳೆಗಾಲದಲ್ಲಿ ತಮ್ಮತಮ್ಮ ರೂಪನ್ನು ಪಡೆದುಕೊಳ್ಳುವಂತೆ ಎಂಬ ಹೋಲಿಕೆಯನ್ನು ಛಾಂ. ೮-೧೨-೨ರಲ್ಲಿ ಸಂಪ್ರಸಾದ ನಿಗೆ ಕೊಟ್ಟಿದೆ. ಆ ದೃಷ್ಟಾಂತಬಲದಿಂದ ಪೂರ್ವಪಕ್ಷಿಯು ಈ ಮಾತನ್ನಾಡಿರುತ್ತಾನೆ.

3. ಶರೀರದ ಸಂಬಂಧವಿರುವದರಿಂದ ಈ ಜೀವನ ಧರ್ಮದ ಬಲದ ಮೇಲೆ ಆಕಾಶ ವೆಂದರೆ ಇಲ್ಲಿ ಜೀವನೆಂದೇ ನಿರ್ಣಯಿಸಬಹುದಲ್ಲ !- ಎಂದು ಶಂಕೆ.

(ಸಿದ್ಧಾಂತ):– ಹೀಗಾಗಲಾರದು. ಏಕೆ? ಎಂದರೆ ಸಂಭವಿಸುವದಿಲ್ಲವಾದ್ದರಿಂದ. ಬುದ್ಧಿಯೇ ಮುಂತಾದ ಉಪಾಧಿಗಳ ಪರಿಚ್ಛೇದದಲ್ಲಿ ಅಭಿಮಾನಿಯಾಗಿರುವ[1] ಜೀವನನ್ನು ಆಕಾಶಕ್ಕೆ ಹೋಲಿಸುವದು ಆಗಲೇ ಆರದು, ಮತ್ತು ಉಪಾಧಿಗಳ ಧರ್ಮಗಳನ್ನು (ತನ್ನವೆಂದು) ಅಭಿಮಾನಪಡುತ್ತಿರುವವನಿಗೆ ಅಪಹತಪಾಪ್ಮತ್ವವೇ ಮುಂತಾದ ಧರ್ಮಗಳೂ ಸಂಭವಿಸುವದಿಲ್ಲ[2]. ಇದನ್ನು ಮೊದಲನೆಯ (೧-೩-೪) ಸೂತ್ರದಲ್ಲಿ (ಭಾ. ಭಾ. ೨೫೭ರಲ್ಲಿ) ವಿಸ್ತರಿಸಿ ಹೇಳಿದ್ದೂ ಆಗಿದೆ. ಆದರೆ ಇನ್ನೊಂದು ಆಶಂಕೆಯನ್ನು[3] ಪರಿಹರಿಸುವದಕ್ಕಾಗಿ ಮತ್ತೆ ಅದನ್ನು ಇಲ್ಲಿ ಹೇಳಿಕೊಂಡಿದೆ. ಮುಂದೆ (೧-೩-೨೧ರಲ್ಲಿ) "ಪರಾಮರ್ಶವು ಮತ್ತೊಂದಕ್ಕಾಗಿ" ಎಂದು (ಸೂತ್ರಕಾರರು) ಹೇಳಿಯೂ ಇರುತ್ತಾರೆ.

## ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ‖ ೧೯ ‖

೧೯. ಮುಂದಿನ (ವಾಕ್ಯದಿಂದ ದಹರವು ಜೀವನೆನ್ನಬೇಕು) ಎಂದರೆ (ಅಲ್ಲಿ) ಆವಿರ್ಭೂತಸ್ವರೂಪನಾದ (ಜೀವ)ನನ್ನೇ ಹೇಳಿದೆ.

(ಭಾಷ್ಯ)

೨೬೩. ಇತರಪರಾಮರ್ಶಾತ್ ಯಾ ಜೀವಾಶಙ್ಕಾ ಜಾತಾ ಸಾ ಅಸಂಭವಾತ್ ನಿರಾಕೃತಾ | ಅಥ ಇದಾನೀಂ ಮೃತಸ್ಯೇವ ಅಮೃತಸೇಕಾತ್ ಪುನಃ ಸಮುತ್ಥಾನಂ ಜೀವಾಶಙ್ಕಾಯಾಃ ಕ್ರಿಯತೇ ಉತ್ತರಸ್ಮಾತ್ ಪ್ರಾಜಾಪತ್ಯಾದ್ ವಾಕ್ಯಾತ್ । ತತ್ರ ಹಿ "ಯ ಆತ್ಮಾಪಹತಪಾಪ್ಮಾ...." (ಛಾಂ. ೮-೭-೧) ಇತಿ ಅಪಹತಪಾಪ್ಮತ್ವಾದಿಗುಣಕಮ್ ಆತ್ಮಾನಮ್ ಅನ್ವೇಷ್ಟವ್ಯಂ ವಿಜಿಜ್ಞಾಸಿತವ್ಯಂ ಚ ಪ್ರತಿಜ್ಞಾಯ "ಯ ಏಷೋಽಕ್ಷಿಣಿ ಪುರುಷೋ ದೃಶ್ಯತ

---

1. ಆಕಾಶವೆಂಬ ಶಬ್ದವು ಪ್ರಕೃತವಾಕ್ಯದಲ್ಲಿ ಯಾವದನ್ನು ಹೇಳುತ್ತದೆ ಎಂಬುದು ಸಂದಿಗ್ಧವಾಗಿರುತ್ತದೆಯಾದ್ದರಿಂದ ವಾಕ್ಯಶೇಷದ ಬಲದಿಂದಲೂ ನಿಶ್ಚಿತವಾದ ವೈದಿಕ ಪ್ರಯೋಗದಿಂದಲೂ ಪರಮೇಶ್ವರನನ್ನೇ ಹೇಳುತ್ತದೆ ಎಂದು ಸಿದ್ಧಾಂತಿ ನಿರ್ಣಯಿಸಿರುತ್ತಾನೆ. ಆದರೆ ವಾಕ್ಯಶೇಷದಲ್ಲಿ ಜೀವನ ಪರಾಮರ್ಶವಿರುವದರಿಂದ ಇಲ್ಲಿರುವ ಆಕಾಶಶಬ್ದವು ಜೀವವಿಷಯಕವೇ ಆಗಲಿ ಎಂದು ಪೂರ್ವಪಕ್ಷಿ ಶಂಕಿಸಿರುತ್ತಾನೆ. ಪರಿಚ್ಛಿನ್ನನಾಗಿರುವ ಜೀವನನ್ನು ಅನಂತವಾದ ಆಕಾಶಕ್ಕೆ ಹೋಲಿಸುವದಕ್ಕಾಗಲಾರದು ಎಂಬ ಬಾಧಕವನ್ನು ಈಗ ಸಿದ್ಧಾಂತಿ ತೋರಿಸುತ್ತಿದಾನೆ.

2. ಬರಿಯ ವಾಕ್ಯಶೇಷಬಲದಿಂದಲೇ ನಾವು ಆಕಾಶವನ್ನು ಬ್ರಹ್ಮವೆಂದಿಲ್ಲ; ಬ್ರಹ್ಮದ ಧರ್ಮಗಳೂ ಇಲ್ಲಿವೆ; ಆ ಧರ್ಮಗಳು ಜೀವನಿಗೆ ಹೊಂದುವದಿಲ್ಲ ಎಂದು ಭಾವ.

3. ಮುಂದಿನ ಸೂತ್ರದಲ್ಲಿ ಇದನ್ನು ಪರಿಹರಿಸಬೇಕಾಗಿದೆ.

ಏಷ ಆತ್ಮಾ" (ಛಾಂ. ೮–೭–೪) ಇತಿ ಬ್ರುವನ್ ಅಕ್ಷಿಸ್ಥಂ ದ್ರಷ್ಟಾರಂ ಜೀವಮ್ ಆತ್ಮಾನಂ ನಿರ್ದಿಶತಿ। "ಏತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ" (ಛಾಂ. ೮–೯–೩, ೮–೧೦–೪, ೮–೧೧–೩) ಇತಿ ಚ ತಮೇವ ಪುನಃಪುನಃ ಪರಾಮೃಶ್ಯ "ಯ ಏಷ ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮಾ" (ಛಾಂ. ೮–೧೦–೧) ಇತಿ। "ತದ್ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮಾ" (ಛಾಂ. ೮–೧೧–೨) ಇತಿ ಚ ಜೀವಮೇವ ಅವಸ್ಥಾನ್ತರಗತಂ ವ್ಯಾಚಷ್ಟೇ। ತಸ್ಯೈವ ಚ ಅಪಹತಪಾಪ್ಮತ್ವಾದಿ ದರ್ಶಯತಿ "ಏತದಮೃತಮಭಯಮೇತದ್ ಬ್ರಹ್ಮ" (ಛಾಂ. ೮–೭–೪, ೮–೮–೩, ೮–೧೦–೧, ೮–೧೧–೧) ಇತಿ। "ನಾಹ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ" (ಛಾಂ. ೮–೧೧–೧) ಇತಿ ಚ ಸುಷುಪ್ತಾವಸ್ಥಾಯಾಂ ದೋಷಮ್ ಉಪಲಭ್ಯ 'ಏತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ನೋ ಏವಾನ್ಯತ್ರೈತಸ್ಮಾತ್" (ಛಾಂ. ೮–೧೧–೩) ಇತಿ ಚ ಉಪಕ್ರಮ್ಯ ಶರೀರಸಂಬನ್ಧನಿನ್ದಾಪೂರ್ವಕಂ (ಛಾಂ. ೮–೧೨–೧), "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ" (ಛಾಂ. ೮–೧೨–೨) ಇತಿ ಜೀವಮೇವ ಶರೀರಾತ್ ಸಮುತ್ಥಿತಮ್ ಉತ್ತಮಪುರುಷಂ ದರ್ಶಯತಿ। ತಸ್ಮಾತ್ ಅಸ್ತಿ ಸಂಭವೋ ಜೀವೇ ಪಾರಮೇಶ್ವರಾಣಾಂ ಧರ್ಮಾಣಾಮ್। ಅತಃ "ದಹರೋಽಸ್ಮಿನ್ನನ್ತರಾಕಾಶಃ" ಇತಿ ಜೀವ ಏವೋಕ್ತಃ ಇತಿ ಚೇತ್ ಕಶ್ಚಿದ್ ಬ್ರೂಯಾತ್ ॥

(ಭಾಷ್ಯಾರ್ಥ)

ಇನ್ನೊಬ್ಬನ ಪರಾಮರ್ಶವಿರುವದರಿಂದ ಜೀವಾಶಂಕೆಯು ಉಂಟಾಯಿತಲ್ಲ, ಅದನ್ನು ಅಸಂಭವ(ವೆಂಬ ಕಾರಣ)ದಿಂದ ನಿರಾಕರಿಸಿದ್ದಾಯಿತು. ಇನ್ನು ಈಗ, ಸತ್ತವನನ್ನು ಅಮೃತವನ್ನು ಚಿಮುಕಿಸಿ (ಎಬ್ಬಿಸು)ವಂತೆ ಮುಂದೆ ಬರುವ ಪ್ರಜಾಪತಿವಾಕ್ಯದಿಂದ ಜೀವಾಶಂಕೆಯನ್ನು ಮತ್ತೆ ಎಬ್ಬಿಸುವ (ಕೆಲಸವನ್ನು) ಮಾಡಲಾಗುತ್ತದೆ.

ಹೇಗೆಂದರೆ ಆ (ಪ್ರಜಾಪತಿ)ವಾಕ್ಯದಲ್ಲಿ "ಯಾವ ಆತ್ಮನು ಅಪಹತಪಾಪ್ಮನೋ" (ಛಾಂ. ೮–೭–೧) ಎಂದು ಅಪಹತಪಾಪ್ಮತ್ವವೇ ಮುಂತಾದ ಗುಣಗಳುಳ್ಳ ಆತ್ಮನನ್ನು ಹುಡುಕಬೇಕು, ಅರಿತುಕೊಳ್ಳಬೇಕು[1] – ಎಂದು ಹೇಳಿ

1. ಅನುಭವಕ್ಕೆ ತಂದುಕೊಳ್ಳಬೇಕೆಂದು ದಹರವಾಕ್ಯದಲ್ಲಿ ಹೇಳಿರುವದು ಉಪಾಸನೆಯ ಸಾಕ್ಷಾತ್ಕಾರವು ; ಇದು ವಿಜ್ಞಾನರೂಪವಾದ ಅನುಭವ.

"ಕಣ್ಣಿನಲ್ಲಿ ಯಾವ ಈ ಪುರುಷನು ಕಾಣಿಸುತ್ತಿರುವನಲ್ಲ ಇವನೇ ಆತ್ಮನು" (ಛಾಂ. ೮–೭–೪) ಎಂದು ಹೇಳಿರುವದರಿಂದ ಕಣ್ಣಿನಲ್ಲಿರುವ ದ್ರಷ್ಟೃವಾದ[1] ಜೀವನನ್ನು ಆತ್ಮನೆಂದು (ಪ್ರಜಾಪತಿಯು) ತಿಳಿಸಿರುತ್ತಾನೆ. "ಆದರೆ ಇವನನ್ನೇ ನಿನಗೆ ಮತ್ತೂ ವಿವರಿಸಿ ತಿಳಿಸುತ್ತೇನೆ" (ಛಾಂ. ೮-೯-೩, ೮-೧೦-೪, ೮-೧೧-೩) ಎಂದು ಆ (ಜೀವ)ನನ್ನೇ ಮತ್ತೆಮತ್ತೆ ಪರಾಮರ್ಶಿಸಿ "ಯಾವ ಇವನು ಸ್ವಪ್ನದಲ್ಲಿ ಗೌರವಿಸಲ್ಪಟ್ಟವನಾಗಿ[2] ಸಂಚರಿಸುತ್ತಿರುವನೋ, ಇವನೇ ಆತ್ಮನು" (ಛಾಂ. ೮–೧೦–೧) ಎಂದೂ "ಹೀಗಿರುವಲ್ಲಿ, ಎಲ್ಲಿ ಈ (ನಿದ್ರೆಯನ್ನು) ನಿದ್ರಿಸುತ್ತಾ ಸಮಸ್ತನಾಗಿ,[3] ಸಂಪ್ರಸನ್ನನಾಗಿ[4] ಕನಸನ್ನು ಅರಿಯದಿರುವನೋ ಇವನೇ ಆತ್ಮನು" (ಛಾಂ. ೮–೧೧–೨) ಎಂದೂ ಜೀವನೇ ಬೇರೆಯ ಅವಸ್ಥೆಗಳನ್ನು ಹೊಂದಿರುವನೆಂದು ಹೇಳಿರುತ್ತಾನೆ. "ಇದು ಅಮೃತವು, ಅಭಯವು, ಇದೇ ಬ್ರಹ್ಮವು" (ಛಾಂ. ೮–೭–೪, ೮–೮–೩, ೮–೧೧–೧) ಎಂದು ಅವನಿಗೇ ಅಪಹತಪಾಪ್ಮತ್ವಾದಿ(ಧರ್ಮಗಳನ್ನು) ಹೇಳಿರುತ್ತಾನೆ. "ಈಗ ಇವನು ನಾನು ಇಂಥವನಾಗಿರುವೆನು ಎಂದು ತನ್ನನ್ನು ಅರಿಯುವದೇ ಇಲ್ಲವಲ್ಲ ! ಈ ಭೂತಗಳನ್ನೂ ಅರಿಯುವದೇ ಇಲ್ಲವಲ್ಲ !" (ಛಾಂ. ೮–೧೧–೨) ಎಂದು ಸುಷುಪ್ತಾವಸ್ಥೆಯಲ್ಲಿ ದೋಷವನ್ನು ಕಂಡು ಮತ್ತು "ಈತನನ್ನೇ ನಿನಗೆ ಮತ್ತೂ ವಿವರಿಸಿ ಹೇಳುವೆನು, ಇವನಿಗಿಂತ ಬೇರೆಯಾಗಿ (ಹೇಳುವದೇ) ಇಲ್ಲ" (ಛಾಂ. ೮–೧೧–೩) ಎಂದು ಉಪಕ್ರಮಿಸಿ ಶರೀರಸಂಬಂಧವನ್ನು ಮೊದಲು ನಿಂದಿಸಿ (ಛಾಂ. ೮–೧೨–೨) "ಈ ಸಂಪ್ರಸಾದನು ಈ ಶರೀರವನ್ನು ಬಿಟ್ಟೆದ್ದು ಹೆಚ್ಚಿನ ಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಸಿದ್ಧನಾಗುತ್ತಾನೆ, ಅವನು ಉತ್ತಮ ಪುರುಷನು" (ಛಾಂ. ೮–೧೨–೩) ಎಂದು ಜೀವನನ್ನೇ ಶರೀರವನ್ನು ಬಿಟ್ಟೆದ್ದ ಉತ್ತಮಪುರುಷನೆಂದು ಕರೆದಿರುತ್ತಾನೆ. ಆದ್ದರಿಂದ ಜೀವನಲ್ಲಿ ಪರಮೇಶ್ವರನ ಧರ್ಮಗಳಿರಬಹುದು. ಆದ್ದರಿಂದ "ಅದರೊಳಗಿರುವ ದಹರವಾದ ಆಕಾಶವು" ಎಂದು ಜೀವನನ್ನೇ ಹೇಳಿದೆ ಎಂದು ಯಾರಾದರೂ ಹೇಳಿದರೆ[5]—

---

1. ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುವ ಎಂದರ್ಥ.

2. ವಾಸನೆಯಿಂದ ಕಾಣುವ ವಿಷಯಗಳನ್ನು ಅನುಭವಿಸುತ್ತಾ ಎಂದರ್ಥ.

3. ಸಂಪೂರ್ಣನಾಗಿ, ಎಲ್ಲಾ ಕರಣಗಳನ್ನೂ ತನ್ನಲ್ಲಿಯೇ ಉಪಸಂಹರಿಸಿಕೊಂಡು.

4. ವಿಷಯಸಂಪರ್ಕದ ಕಾಲುಷ್ಯವಿಲ್ಲದವನಾಗಿ.

5. ಪ್ರಜಾಪತಿಯು ಮೊದಲು ಇಂದ್ರಿಯಗಳಿಂದ ನೋಡುತ್ತಿರುವ ಜೀವನನ್ನೂ ಆಮೇಲೆ ಕನಸುಕಾಣುತ್ತಿರುವ ಜೀವನನ್ನೂ ಬಳಿಕ ನಿದ್ರಿಸುತ್ತಿರುವ ಜೀವನನ್ನೂ ಆಮೇಲೆ ಶರೀರವನ್ನು ಬಿಟ್ಟೆದ್ದ ಜೀವನನ್ನೂ ಹೇಳಿರುತ್ತಾನೆ. ಈ ಪ್ರಕರಣದಲ್ಲಿ ಬ್ರಹ್ಮವು ಬರುವದಕ್ಕೆ ಕಾರಣವಿಲ್ಲ– ಎಂದು ಪೂರ್ವಪಕ್ಷಿಯ ಅಭಿಪ್ರಾಯ.

## ಸಿದ್ಧಾಂತ: ಪ್ರಜಾಪತಿವಾಕ್ಯದಲ್ಲಿ ಜೀವನ ಬ್ರಹ್ಮಸ್ವರೂಪವನ್ನು ಹೇಳಿದೆ

( ಭಾಷ್ಯ )

೨೬೪. ತಂ ಪ್ರತಿಬ್ರೂಯಾತ್ "ಆವಿರ್ಭೂತಸ್ವರೂಪಸ್ತು" ಇತಿ | ತುಶಬ್ದಃ ಪೂರ್ವಪಕ್ಷವ್ಯಾವೃತ್ತ್ಯರ್ಥಃ | ನೋತ್ತರಸ್ಮಾದಪಿ ವಾಕ್ಯಾತ್ ಇಹ ಜೀವಸ್ಯ ಆಶಙ್ಕಾ ಸಂಭವತಿ ಇತ್ಯರ್ಥಃ | ಕಸ್ಮಾತ್ ? ಯತಸ್ತತ್ರಾಪಿ ಆವಿರ್ಭೂತಸ್ವರೂಪೋ ಜೀವೋ ವಿವಕ್ಷ್ಯತೇ | ಆವಿರ್ಭೂತಂ ಸ್ವರೂಪಮ್ ಅಸ್ಯ ಇತಿ ಆವಿರ್ಭೂತಸ್ವರೂಪಃ | ಭೂತಪೂರ್ವಗತ್ಯಾ ಜೀವವಚನಮ್ | ಏತದುಕ್ತಂ ಭವತಿ | "ಯ ಏಷೋಽಕ್ಷಿಣಿ" (ಛಾಂ. ೮-೭-೪) ಇತಿ ಅಕ್ಷಿಲಕ್ಷಿತಂ ದ್ರಷ್ಟಾರಂ ನಿರ್ದಿಶ್ಯ ಉದಶರಾವಬ್ರಾಹ್ಮಣೇನ ಏನಂ ಶರೀರಾತ್ಮತಾಯಾ ವ್ಯುತ್ಥಾಪ್ಯ " ಏತಂ ತ್ವೇವ ತೇ '' ( ಛಾಂ. ೮-೯-೩.... ) ಇತಿ ಪುನಃಪುನಸ್ತಮೇವ ವ್ಯಾಖ್ಯೇಯತ್ವೇನ ಆಕೃಷ್ಯ ಸ್ವಪ್ನಸುಷುಪ್ತ್ಯುಪನ್ಯಾಸಕ್ರಮೇಣ "ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ'' (ಛಾಂ. ೮-೧೨-೩) ಇತಿ ಯದಸ್ಯ ಪಾರಮಾರ್ಥಿಕಂ ಸ್ವರೂಪಂ ಪರಂ ಬ್ರಹ್ಮ ತದ್ರೂಪತಯಾ ಏನಂ ಜೀವಂ ವ್ಯಾಚಷ್ಟೇ, ನ ಜೈವೇನ ರೂಪೇಣ | ಯತ್ ಪರಂಜ್ಯೋತಿರುಪಸಂಪತ್ತವ್ಯಂ ಶ್ರುತಮ್, ತತ್ ಪರಂ ಬ್ರಹ್ಮ | ತಚ್ಚ ಅಪಹತಪಾಪ್ಮತ್ವಾದಿಧರ್ಮಕಮ್ | ತದೇವ ಚ ಜೀವಸ್ಯ ಪಾರಮಾರ್ಥಿಕಂ ಸ್ವರೂಪಮ್ " ತತ್ತ್ವಮಸಿ '' ( ಛಾಂ. ೬-೮-೭ ) ಇತ್ಯಾದಿಶಾಸ್ತ್ರೇಭ್ಯಃ | ನೇತರತ್ ಉಪಾಧಿಕಲ್ಪಿತಮ್ | ಯಾವದೇವ ಹಿ ಸ್ಥಾಣಾವಿವ ಪುರುಷಬುದ್ಧಿಂ ದ್ವೈತಲಕ್ಷಣಾಮ್ ಅವಿದ್ಯಾಂ ನಿವರ್ತಯನ್ ಕೂಟಸ್ಥನಿತ್ಯದೃಕ್ಸ್ವರೂಪಮ್ ಆತ್ಮಾನಮ್ 'ಅಹಂ ಬ್ರಹ್ಮಾಸ್ಮಿ' ಇತಿ ನ ಪ್ರತಿಪದ್ಯತೇ ತಾವತ್ ಜೀವಸ್ಯ ಜೀವತ್ವಮ್ | ಯದಾ ತು ದೇಹೇನ್ದ್ರಿಯಮನೋಬುದ್ಧಿಸಙ್ಘಾತಾತ್ ವ್ಯುತ್ಥಾಪ್ಯ ಶ್ರುತ್ಯಾ ಪ್ರತಿಬೋಧ್ಯತೇ "ನಾಸಿ ತ್ವಂ ದೇಹೇನ್ದ್ರಿಯಮನೋಬುದ್ಧಿಸಙ್ಘಾತಂ, ನಾಸಿ ಸಂಸಾರೀ, ಕಿಂ ತರ್ಹಿ ತದ್ ಯತ್ಸತ್ಯಮ್ ಸ ಆತ್ಮಾ ಚೈತನ್ಯಮಾತ್ರಸ್ವರೂಪಃ ತತ್ ತ್ವಮಸಿ'' ಇತಿ ತದಾ ಕೂಟಸ್ಥನಿತ್ಯದೃಕ್ಸ್ವರೂಪಮ್ ಆತ್ಮಾನಂ ಪ್ರತಿಬುಧ್ಯ ಅಸ್ಮಾತ್ ಶರೀರಾದ್ಯಭಿಮಾನಾತ್ ಸಮುತ್ತಿಷ್ಠನ್ ಸ ಏವ ಕೂಟಸ್ಥನಿತ್ಯದೃಕ್ಸ್ವರೂಪಃ ಆತ್ಮಾ ಭವತಿ | "ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ'' (ಮುಂ. ೩-೨-೯) ಇತ್ಯಾದಿಶ್ರುತಿಭ್ಯಃ | ತದೇವ ಚ ಅಸ್ಯ ಪಾರಮಾರ್ಥಿಕಂ ಸ್ವರೂಪಂ ಯೇನ ಶರೀರಾತ್ ಸಮುತ್ಥಾಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ ||

( ಭಾಷ್ಯಾರ್ಥ )

ಅವನಿಗೆ (ಹೀಗೆ) ಉತ್ತರವನ್ನು ಹೇಳಬೇಕು: ಆವಿರ್ಭೂತಸ್ವರೂಪನನ್ನೇ (ಇಲ್ಲಿ ಹೇಳಿದೆ. ಸೂತ್ರದಲ್ಲಿರುವ) ತುಶಬ್ದವು ಪೂರ್ವಪಕ್ಷವನ್ನು ಅಲ್ಲಗಳೆಯುವದಕ್ಕೆ. ಮುಂದಿನ (ಪ್ರಜಾಪತಿ)ವಾಕ್ಯದಿಂದಲೂ ಇಲ್ಲಿ (ದಹರಾಕಾಶವು) ಜೀವನೆಂಬ ಆಶಂಕೆಯು ಉಂಟಾಗುವಹಾಗಿಲ್ಲ ಎಂದರ್ಥ. ಏಕೆ ? ಎಂದರೆ ಅಲ್ಲಿಯೂ ಆವಿರ್ಭೂತಸ್ವರೂಪನಾದ ಜೀವನನ್ನು ಹೇಳಬೇಕೆಂದು ಹೊರಟಿದೆಯಾದ್ದರಿಂದ. ಈತನ ಸ್ವರೂಪವು ( ಅಲ್ಲಿ ) ಹೊರತೋರಿಕೊಳ್ಳುವದರಿಂದ (ಇವನು) ಆವಿರ್ಭೂತಸ್ವರೂಪನು. (ಇವನನ್ನು) ಜೀವನೆಂದಿರುವದು ಭೂತಪೂರ್ವಗತಿಯಿಂದ.[1]

ಇಲ್ಲಿ ಇಷ್ಟನ್ನು ಹೇಳಿದಂತಾಗಿದೆ: "ಕಣ್ಣಿನಲ್ಲಿ ಯಾವ ಈ (ಪುರುಷನು)" (ಛಾಂ. ೮-೭-೪) ಎಂದು ಕಣ್ಣಿನಲ್ಲಿ ಕಾಣುವ ದ್ರಷ್ಟೃವನ್ನು ತಿಳಿಸಿ, **ನೀರಿನ ಶ್ರಾವೆಯ (ದೃಷ್ಟಾಂತದ) ಬ್ರಾಹ್ಮಣದಲ್ಲಿ**[2] ಇವನು ಶರೀರಾತ್ಮನೆಂಬ (ಭಾವನೆಯಿಂದ) ತಪ್ಪಿಸಿ, "ಇವನನ್ನೇ ನಿನಗೆ (ಮತ್ತೂ ವಿವರಿಸಿ ತಿಳಿಸುತ್ತೇನೆ" (ಛಾಂ. ೮-೯-೩) ಎಂದು ಮತ್ತೆಮತ್ತೆ ಅವನನ್ನೇ ವಿವರಿಸಿ ಹೇಳುವೆನೆಂದು ಎಳೆದುಕೊಂಡು ಸ್ವಪ್ನಸುಷುಪ್ತಗಳನ್ನು(ಹೇಳುವ) ಕ್ರಮದಿಂದ[3] "ಹೆಚ್ಚಿನ ಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಸಿದ್ಧನಾಗುತ್ತಾನೆ" (ಛಾಂ. ೮-೧೨-೩) ಎಂದು ಈ (ಜೀವನ) ಪಾರಮಾರ್ಥಿಕವಾದ ಸ್ವರೂಪವಾದ ಪರಬ್ರಹ್ಮವಿದೆಯಲ್ಲ, ಆ ರೂಪದಿಂದಲೇ ಈ ಜೀವನನ್ನು (ಪ್ರಜಾಪತಿಯು) ಹೇಳಿರುತ್ತಾನೆಯೇ ಹೊರತು ಜೀವರೂಪದಿಂದ (ಹೇಳಿ)ಲ್ಲ. **( ಇವನು ) ಸೇರಬೇಕಾದ ಹೆಚ್ಚಿನ ಜ್ಯೋತಿ ಎಂದು ಯಾವದನ್ನು ಶ್ರುತಿಯಲ್ಲಿ ಹೇಳಿದೆಯೋ ಅದೇ ಬ್ರಹ್ಮವು, ಅದೇ ಅಪಹತಪಾಪ್ಮತ್ವಾದಿಧರ್ಮಗಳುಳ್ಳದ್ದು. ಮತ್ತು "ಅದೇ ನೀನಾಗಿರುವೆ" (ಛಾಂ. ೬-೮-೭) ಮುಂತಾದ ಶಾಸ್ತ್ರಗಳ ಪ್ರಮಾಣದಿಂದ, ಅದೇ (ಈ) ಜೀವನ ಪಾರಮಾರ್ಥಿಕರೂಪವೇ ಹೊರತು ಉಪಾಧಿಕಲ್ಪಿತವಾದ ಮತ್ತೊಂದಲ್ಲ. ಎಲ್ಲಿಯವರೆಗೆ ಮೋಟುಮರದಲ್ಲಿ ಮನುಷ್ಯನೆಂಬ ಬುದ್ಧಿಯನ್ನು (ತೊಲಗಿಸು)ವಂತೆ ದ್ವೈತವನ್ನು ತಿಳಿಸುವ ಅವಿದ್ಯೆಯನ್ನು ತೊಲಗಿಸಿ ಕೂಟಸ್ಥನಿತ್ಯನೂ ದೃಕ್ಸ್ವರೂಪನೂ ಆಗಿರುವ ತನ್ನನ್ನು ನಾನು ಬ್ರಹ್ಮವಾಗಿರುವೆನು**

---

1. ಹಿಂದೆ ಜೀವನಾಗಿದ್ದ ಕಾರಣದಿಂದ.
2. ಛಾಂ. ೮-೮ ರಲ್ಲಿ.
3. ಬಂದಾಗುತ್ತಲೊಂದನ್ನು ಹೇಳಿದ ಮೇಲೆ.

**ಎಂದು ಅರಿತುಕೊಳ್ಳುವದಿಲ್ಲವೋ ಅಲ್ಲಿಯವರೆಗೆ ಜೀವನ ಜೀವತ್ವ (ವಿರುತ್ತದೆ). ಆದರೆ ಯಾವಾಗ ದೇಹೇಂದ್ರಿಯಮನೋಬುದ್ಧಿಗಳ ಸಂಘಾತವನ್ನು ಬಿಟ್ಟೆಬ್ಬಿಸಿ "ನೀನು ದೇಹೇಂದ್ರಿಯಮನೋಬುದ್ಧಿಗಳ ಸಂಘಾತವಲ್ಲ, ಸಂಸಾರಿಯಲ್ಲ, ಮತ್ತೇನೆಂದರೆ ಆ ಸತ್ಯನಾಗಿರುವ, ಆ ಚೈತನ್ಯಸ್ವರೂಪನಾದ ಆತ್ಮನಾಗಿರುವದಲ್ಲ, ಅದೇ ನೀನಾಗಿರುವೆ', ಎಂದು ಶ್ರುತಿಯು ತಿಳಿಸಿಕೊಡುವದೋ ಆಗ ಕೂಟಸ್ಥನಿತ್ಯನೂ ದೃಕ್ಸ್ವರೂಪನೂ ತಾನೆಂದು ಅರಿತುಕೊಂಡು ಈ ಶರೀರವೇ ಮುಂತಾದವುಗಳ ಅಭಿಮಾನವನ್ನು ಬಿಟ್ಟೆದ್ದು ಅದೇ ಕೂಟಸ್ಥನಿತ್ಯದೃಕ್ಸ್ವರೂಪನಾದ ಆತ್ಮನಾಗುತ್ತಾನೆ.** "ಯಾವನಾದರೆ ಆ ಪರಮಬ್ರಹ್ಮವನ್ನು ಅರಿತುಕೊಳ್ಳುವನೋ ಅವನು ಬ್ರಹ್ಮವೇ ಆಗುತ್ತಾನೆ" ( ಮುಂ. ೩-೨-೯ ) ಎಂಬಿದೇ ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ). (ಹೀಗೆ) ಶರೀರವನ್ನು ಬಿಟ್ಟೆದ್ದು ಯಾವ ತನ್ನ ರೂಪದಿಂದ ಸಿದ್ಧನಾಗುತ್ತಾನೋ ಅದೇ ಇವನ ಪಾರಮಾರ್ಥಿಕವಾದ ಸ್ವರೂಪವು.

## ತನ್ನ ರೂಪವನ್ನು ತಾನೇ ಪಡೆಯುವದೆಂದರೆ ಏನು?

(ಭಾಷ್ಯ)

೨೬೫. ಕಥಂ ಪುನಃ ಸ್ವಂ ಚ ರೂಪಂ ಸ್ವೇನೈವ ಚ ನಿಷ್ಪದ್ಯತೇ ಇತಿ ಸಂಭವತಿ ಕೂಟಸ್ಥನಿತ್ಯಸ್ಯ ? ಸುವರ್ಣಾದೀನಾಂ ತು ದ್ರವ್ಯಾನ್ತರಸಂಪರ್ಕಾತ್ ಅಭಿಭೂತಸ್ವರೂಪಾಣಾಮ್ ಅನಭಿವ್ಯಕ್ತಾಸಾಧಾರಣವಿಶೇಷಾಣಾಂ ಕ್ಷಾರಪ್ರಕ್ಷೇಪಾದಿಭಿಃ ಶೋಧ್ಯಮಾನಾನಾಂ ಸ್ವರೂಪೇಣ ಅಭಿನಿಷ್ಪತ್ತಿಃ ಸ್ಯಾತ್ । ತಥಾ ನಕ್ಷತ್ರಾದೀನಾಮ್ ಅಹನಿ ಅಭಿಭೂತಪ್ರಕಾಶಾನಾಮ್ ಅಭಿಭಾವಕವಿಯೋಗೇ ರಾತ್ರೌ ಸ್ವರೂಪೇಣ ಅಭಿನಿಷ್ಪತ್ತಿಃ ಸ್ಯಾತ್ । ನ ತು ತಥಾ ಆತ್ಮಚೈತನ್ಯಜ್ಯೋತಿಷೋ ನಿತ್ಯಸ್ಯ ಕೇನಚಿತ್ ಅಭಿಭವಃ ಸಂಭವತಿ । ಅಸಂಸರ್ಗಿತ್ವಾತ್ ವ್ಯೋಮ್ನ ಇವ । ದೃಷ್ಟವಿರೋಧಾಚ್ಚ । ದೃಷ್ಟಿಶ್ರುತಿಮತಿವಿಜ್ಞಾತಯೋ ಹಿ ಜೀವಸ್ಯ ಸ್ವರೂಪಮ್। ತಚ್ಚ ಶರೀರಾತ್ ಅಸಮುತ್ಥಿತಸ್ಯಾಪಿ ಜೀವಸ್ಯ ಸದಾ ನಿಷ್ಪನ್ನಮೇವ ದೃಶ್ಯತೇ । ಸರ್ವೋ ಹಿ ಜೀವಃ ಪಶ್ಯನ್, ಶೃಣ್ವನ್, ಮನ್ವಾನೋ, ವಿಜಾನನ್ ವ್ಯವಹರತಿ। ಅನ್ಯಥಾ ವ್ಯವಹಾರಾನುಪಪತ್ತೇಃ। ತಚ್ಚೇತ್ ಶರೀರಾತ್ ಸಮುತ್ಥಿತಸ್ಯ ನಿಷ್ಪದ್ಯೇತ, ಪ್ರಾಕ್ ಸಮುತ್ಥಾನಾದ್ ದೃಷ್ಟೋ ವ್ಯವಹಾರೋ ವಿರುಧ್ಯೇತ । ಅತಃ ಕಿಮಾತ್ಮಕಮಿದಂ ಶರೀರಾತ್ ಸಮುತ್ಥಾನಮ್, ಕಿಮಾತ್ಮಿಕಾ ವಾ ಸ್ವರೂಪೇಣ ಅಭಿನಿಷ್ಪತ್ತಿರಿತಿ ?

(ಭಾಷ್ಯಾರ್ಥ)

(ಆಕ್ಷೇಪ):– ಇನ್ನು ರೂಪವು ತನ್ನದೂ ಆಗಿದೆ, ಮತ್ತು ತನ್ನ (ರೂಪ) ದಿಂದಲೇ ಸಿದ್ಧನಾಗುತ್ತಾನೆ– ಎಂಬುದು ಕೂಟಸ್ಥನಿತ್ಯನಾದ (ಆತ್ಮನಿಗೆ) ಹೇಗೆ (ಹೊಂದುತ್ತದೆ) ? ಮತ್ತೊಂದು ದ್ರವ್ಯದ ಸಂಪರ್ಕದಿಂದ ಸ್ವರೂಪವು ಮಸಕಾಗಿರುವ **ಚಿನ್ನವೇ ಮುಂತಾದವು**ಗಳಿಗಾದರೆ (ಅವುಗಳ) ಅಸಾಧಾರಣವಾದ ವಿಶೇಷ(ರೂಪವು) ಹೊರತೋರಿಕೊಳ್ಳದೆ ಇರುವದರಿಂದ ಉಪ್ಪನ್ನು ಹಾಕುವದೇ ಮುಂತಾದವುಗಳಿಂದ ಶುದ್ಧಿಗೊಳಿಸಿದರೆ (ಅವು) ಸ್ವರೂಪದಿಂದ ಸಿದ್ಧವಾಗುವವು ಎಂಬುದು ಆಗಬಹುದು[1]. ಹಾಗೆಯೇ **ನಕ್ಷತ್ರಾದಿಗಳಿಗೆ** ಹಗಲು ಪ್ರಕಾಶವು ಮಂಕಾಗಿರುವದರಿಂದ ಮಂಕುಗೊಳಿಸಿದ (ಸೂರ್ಯನ ಬೆಳಕು ಹೋಗಲು (ಅವು) ರಾತ್ರಿಯಲ್ಲಿ ತಮ್ಮ ರೂಪದಿಂದ ಸಿದ್ಧವಾಗುವವೆಂಬುದು ಆಗಬಹುದು[2]. ಆದರೆ ನಿತ್ಯವಾಗಿರುವ ಆತ್ಮಚೈತನ್ಯಜ್ಯೋತಿಯು ಏತರಿಂದಲಾದರೂ ಮಂಕಾಗುವದೆಂಬುದು ಆಗುವಹಾಗಿಲ್ಲ; ಏಕೆಂದರೆ (ಆ ಜ್ಯೋತಿಯು) ಆಕಾಶದಂತೆ (ಮತ್ತೊಂದರ) ಸಂಬಂಧವಿಲ್ಲದ್ದು.

(ಅನುಭವದಲ್ಲಿ) ಕಂಡಿರುವದಕ್ಕೆ ವಿರೋಧವಾಗುವದರಿಂದಲೂ (ಈ ವಾದವು ಸರಿಯಾಗಿ ಕಾಣುವದಿಲ್ಲ). ಹೇಗೆಂದರೆ, ನೋಡುವದು, ಕೇಳುವದು, ಆಲೋಚಿಸುವದು, ಅರಿತುಕೊಳ್ಳುವದು– ಇವುಗಳಲ್ಲವೆ, ಜೀವನ ಸ್ವರೂಪವು ? ಅದು ಶರೀರವನ್ನು ಬಿಟ್ಟೇಳದೆ ಇರುವ ಜೀವನಿಗೂ ಯಾವಾಗಲೂ ಸಿದ್ಧವಾಗಿಯೇ (ಇರುವದು) ಕಂಡುಬರುತ್ತದೆ. ಏಕೆಂದರೆ ಪ್ರತಿಯೊಬ್ಬ ಜೀವನೂ ಯಾವಾಗಲೂ ನೋಡುತ್ತಾ ಕೇಳುತ್ತಾ, ಆಲೋಚಿಸುತ್ತಾ ಅರಿಯುತ್ತಾ ವ್ಯವಹಾರಮಾಡುತ್ತಿರುತ್ತಾನೆ; ಹಾಗಿಲ್ಲದಿದ್ದರೆ ವ್ಯವಹಾರವೇ ಆಗುವಹಾಗಿರುವದಿಲ್ಲ. ಆ (ಸ್ವರೂಪವು) ಶರೀರವನ್ನು ಬಿಟ್ಟಿದ್ದವನಿಗೆ ಸಿದ್ಧವಾಗುವ(ದೆನ್ನುವ)ದಾದರೆ, (ಹಾಗೆ) ಬಿಟ್ಟೇಳುವದಕ್ಕೆ ಮುಂಚೆ ಕಾಣುವ ವ್ಯವಹಾರಕ್ಕೆ ವಿರುದ್ಧವಾಗುತ್ತದೆ[3]. ಆದ್ದರಿಂದ ಶರೀರವನ್ನು ಬಿಟ್ಟೇಳುವದೆಂಬ ಇದರ ಸ್ವರೂಪವು ಯಾವದು ? ಸ್ವರೂಪದಿಂದ ಸಿದ್ಧವಾಗುವದು ಎಂಬಿದರ ಸ್ವರೂಪವಾದರೂ ಯಾವದು ?

---

1. ಸಾಧನಾನುಷ್ಠಾನವನ್ನು ಮಾಡಿದ ಬಳಿಕ ಸಂಸಾರಕಲ್ಮಷವು ಹೋಗುವದೆಂದು ಹೇಳುವ ವಾದಿಗಳ ಪಕ್ಷದಲ್ಲಿ ದೋಷವನ್ನು ಹೇಳುವದಕ್ಕೆ ಈ ದೃಷ್ಟಾಂತವನ್ನು ಕೊಟ್ಟಿದೆ. ೧-೪-೨೧ ರಲ್ಲಿ ಕೊಟ್ಟಿರುವ ಔಡುಲೋಮಿಪಕ್ಷದ ತಿರಸ್ಕಾರವಿದೆನ್ನಬಹುದು.

2. ಯಾವಾಗಲೂ ಇದ್ದುಕೊಂಡಿರುವ ಚೈತನ್ಯಸ್ವರೂಪವು ಸಂಸಾರದಶೆಯಲ್ಲಿ ಅವಿದ್ಯಾದಿಗಳಿಂದ ಮಂಕಾಗಿರುವದೆಂದು ಹೇಳುವವರ ಮತವನ್ನು ಇಲ್ಲಿ ತಳ್ಳಿಹಾಕಿದೆ.

3. ಶರೀರವನ್ನು ಬಿಟ್ಟೇಳುವದೆಂಬುದು ಬೇರೊಂದು ಅವಸ್ಥೆಯೆಂದು ಪೂರ್ವಪಕ್ಷಿ ಭಾವಿಸಿರುತ್ತಾನೆ.

# ಸಿದ್ಧಾಂತ: ಸ್ವರೂಪದಲ್ಲಿಯೇ ಇರುವ ಜೀವನು ವಿದ್ಯೆಯಿಂದ ಸ್ವರೂಪವನ್ನು ಪಡೆದುಕೊಳ್ಳುತ್ತಾನೆ

( ಭಾಷ್ಯ )

೨೬೬. ಅತ್ರೋಚ್ಯತೇ । ಪ್ರಾಗ್ ವಿವೇಕವಿಜ್ಞಾನೋತ್ಪತ್ತೇಃ ಶರೀರೇನ್ದ್ರಿಯಮನೋಬುದ್ಧಿವಿಷಯವೇದನೋಪಾಧಿಭಿಃ ಅವಿವಿಕ್ತಮಿವ ಜೀವಸ್ಯ ದೃಷ್ಟ್ಯಾದಿಜ್ಯೋತಿಃಸ್ವರೂಪಂ ಭವತಿ। ಯಥಾ ಶುದ್ಧಸ್ಯ ಸ್ಫಟಿಕಸ್ಯ ಸ್ವಾಚ್ಛ್ಯಂ ಶೌಕ್ಲ್ಯಂ ಚ ಸ್ವರೂಪಂ ಪ್ರಾಗ್ ವಿವೇಕಗ್ರಹಣಾತ್ ರಕ್ತನೀಲಾದ್ಯುಪಾಧಿಭಿರವಿವಿಕ್ತಮಿವ ಭವತಿ । ಪ್ರಮಾಣಜನಿತವಿವೇಕಗ್ರಹಣಾತ್ತು ಪರಾಚೀನಃ ಸ್ಫಟಿಕಃ ಸ್ವಾಚ್ಛ್ಯೇನ ಶೌಕ್ಲ್ಯೇನ ಚ ಸ್ವೇನ ರೂಪೇಣ ಅಭಿನಿಷ್ಪದ್ಯತೇ ಇತ್ಯುಚ್ಯತೇ ಪ್ರಾಗಪಿ ತಥೈವ ಸನ್ । ತಥಾ ದೇಹಾದ್ಯುಪಾಧ್ಯವಿವಿಕ್ತಸ್ಯೈವ[1] ಸತೋ ಜೀವಸ್ಯ ಶ್ರುತಿಕೃತಂ ವಿವೇಕವಿಜ್ಞಾನಂ ಶರೀರಾತ್ ಸಮುತ್ಥಾನಮ್, ವಿವೇಕವಿಜ್ಞಾನಫಲಂ ಸ್ವರೂಪೇಣ ಅಭಿನಿಷ್ಪತ್ತಿಃ ಕೇವಲಾತ್ಮಸ್ವರೂಪಾವಗತಿಃ । ತಥಾ ವಿವೇಕಾವಿವೇಕಮಾತ್ರೇಣೈವ ಆತ್ಮನೋಽಶರೀರತ್ವಂ ಸಶರೀರತ್ವಂ ಚ। ಮನ್ತ್ರವರ್ಣಾತ್ "ಅಶರೀರಂ ಶರೀರೇಷು" (ಕ. ೧-೨-೨೨) ಇತಿ । ಶರೀರಸ್ಥೋಽಪಿ ಕೌನ್ತೇಯ ನ ಕರೋತಿ ನ ಲಿಪ್ಯತೇ" (ಗೀ. ೧೩-೩೧) ಇತಿ ಚ ಸಶರೀರತ್ವಾಶರೀರತ್ವವಿಶೇಷಾಭಾವಸ್ಮರಣಾತ್ । ತಸ್ಮಾತ್ ವಿವೇಕವಿಜ್ಞಾನಾಭಾವಾತ್ ಅನಾವಿರ್ಭೂತಸ್ವರೂಪಃ ಸನ್ ವಿವೇಕವಿಜ್ಞಾನಾತ್ ಆವಿರ್ಭೂತಸ್ವರೂಪ ಇತ್ಯುಚ್ಯತೇ । ನ ತು ಅನ್ಯಾದೃಶೌ ಆವಿರ್ಭಾವಾನಾವಿರ್ಭಾವೌ ಸ್ವರೂಪಸ್ಯ ಸಂಭವತಃ। ಸ್ವರೂಪತ್ವಾದೇವ ॥

(ಭಾಷ್ಯಾರ್ಥ)

ಇದಕ್ಕೆ (ಸಮಾಧಾನವನ್ನು) ಹೇಳುತ್ತೇವೆ : ವಿವೇಕವಿಜ್ಞಾನವುಂಟಾಗುವ ಮುಂಚೆ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ವಿಷಯವೇದನೆ- ಎಂಬ ಉಪಾಧಿಗಳಿಂದ ಜೀವನ ದೃಷ್ಟಿಯೇ ಮುಂತಾಗಿರುವ ಜ್ಯೋತಿಯ ಸ್ವರೂಪವು ವಿಂಗಡವಾಗದಿರುವಂತೆ ಇರುತ್ತದೆ. ಹೇಗೆ ಶುದ್ಧವಾದ **ಸ್ಫಟಿಕದ** ಸ್ವರೂಪವಾದ ಸ್ವಚ್ಛತ್ವವೂ ಬಿಳುಪೂ ವಿಂಗಡಿಸಿ ಅರಿಯುವದಕ್ಕೆ ಮುಂಚೆ ಕೆಂಪು, ಕಪ್ಪು- ಮುಂತಾದ (ಬಣ್ಣದ) ಉಪಾಧಿಗಳಿಂದ ವಿಂಗಡವಾಗದಂತೆ ಇರುವದೋ ಪ್ರಮಾಣದಿಂದುಂಟಾದ ವಿವೇಕಗ್ರಹಣವಾದ ಬಳಿಕವಾದರೆ ಸ್ಫಟಿಕವು

---

1. 'ಅವಿವಿಕ್ತಸ್ಯೈವ' ಎಂಬ ಅಚ್ಚಿನ ಪಾಠವು ಸರಿಯಲ್ಲ.

ಮೊದಲೂ ಹಾಗೆಯೇ ಇದ್ದದ್ದೇ ಸ್ವಚ್ಛತ್ವ, ಬಿಳುಪು– ಎಂಬ ತನ್ನ ರೂಪದಿಂದ ಸಿದ್ಧವಾಗುತ್ತದೆ ಎನ್ನುವರೋ[1] ಹಾಗೆಯೇ **ದೇಹವೇ ಮುಂತಾದ ಉಪಾಧಿಗಳಿಂದ ವಿಂಗಡವಾಗದಂತೆ ಇರುವ[2] ಜೀವನಿಗೆ ಶ್ರುತಿಯಿಂದುಂಟಾದ ವಿವೇಕವಿಜ್ಞಾನವು ಶರೀರವನ್ನು ಬಿಟ್ಟೇಳುವದು, (ಆ) ವಿವೇಕವಿಜ್ಞಾನದ ಫಲವು ಸ್ವರೂಪದಿಂದ ಸಿದ್ಧವಾಗುವದು ಎಂದರೆ ಕೇವಲಾತ್ಮಸ್ವರೂಪವನ್ನು ಗೊತ್ತುಪಡಿಸಿಕೊಳ್ಳುವದು. ಹೀಗೆಯೇ ಬರಿಯ ವಿವೇಕ, ಅವಿವೇಕ –ಇವುಗಳಿಂದಲೇ ಆತ್ಮನು ಅಶರೀರನಾಗಿರುವದು ಮತ್ತು ಸಶರೀರನಾಗಿರುವದು.** "ಅಶರೀರನಾಗಿ ಶರೀರಗಳಲ್ಲಿರುವ" (ಕ. ೧–೨–೨೨) ಎಂಬ ಮಂತ್ರವರ್ಣದಿಂದಲೂ "ಕೌಂತೇಯನೆ, ಶರೀರದಲ್ಲಿದ್ದರೂ ಮಾಡುವದಿಲ್ಲ, ಲಿಪ್ತನಾಗುವದೂ ಇಲ್ಲ" (ಗೀ. ೧೩–೩೧) ಎಂದು ಸಶರೀರತ್ವ, ಅಶರೀರತ್ವ– ಇವುಗಳಲ್ಲಿ ವಿಶೇಷವೇನೂ ಇಲ್ಲವೆಂದು ಹೇಳುವ ಸ್ಮೃತಿಯಿಂದಲೂ (ಇದು ಸಿದ್ಧವಾಗುತ್ತದೆ.)[3] ಆದ್ದರಿಂದ ವಿವೇಕವಿಜ್ಞಾನವು ಇಲ್ಲದ್ದರಿಂದ ಹೊರತೋರಿಕೊಳ್ಳದ ಸ್ವರೂಪವುಳ್ಳವನಾಗಿದ್ದು ವಿವೇಕವಿಜ್ಞಾನದಿಂದ ಆವಿರ್ಭೂತಸ್ವರೂಪ(ನಾದನು) ಎನ್ನಿಸಿಕೊಳ್ಳುತ್ತಾನೆ. ಇಷ್ಟೇ ಹೊರತು ಬೇರೆಯ ತೆರನಾದ ಹೊರತೋರಿಕೊಳ್ಳುವದು, ತೋರಿಕೊಳ್ಳದಿರುವದು– ಇವು ಸ್ವರೂಪಕ್ಕೆ ಸಂಭವಿಸುವದಿಲ್ಲ; (ಅದು) ಸ್ವರೂಪವಾಗಿರುವದರಿಂದಲೇ (ಹೀಗೆಂದು ಏರ್ಪಡುತ್ತದೆ).[4]

---

1. ಸ್ಫಟಿಕವು ಕೆಂಪಾಗಿ ಕಾಣುವಾಗಲೂ ಕೆಂಪಾಗಿರುವದಿಲ್ಲವಾದರೂ ಅದು ಸ್ವಚ್ಛವಾಗಿ ಬೆಳ್ಳಗಿದೆ ಎಂಬ ವಿವೇಕವುಂಟಾಗಿರುವದಿಲ್ಲ; ಆದ್ದರಿಂದ ಅದರ ಸ್ವರೂಪವು ವಿಂಗಡವಾಗದಿರುವಂತೆ ಇರುತ್ತದೆ ಎಂದಿದೆ.

2. ದೃಷ್ಟಾಂತದ ಸ್ಫಟಿಕದಂತೆ ಜೀವನ ಸ್ವರೂಪವು ದೇಹಾದ್ಯುಪಾಧಿಗಳಿಂದ ವಿವಿಕ್ತವಾಗಿಲ್ಲದಂತೆ ಕಾಣುತ್ತಿರುವಾಗಲೂ ವಿಂಗಡವಾಗಿಯೇ ಇರುತ್ತದೆ; ವಿವೇಕ ವಿಜ್ಞಾನದಿಂದ ಅದು ವಿಂಗಡವಾಗಿಯೇ ಇದೆ ಎಂಬುದು ತಿಳಿದುಬರುತ್ತದೆ, ಅಷ್ಟೆ.

3. ಅಶರೀರತ್ವವನ್ನು ಹೊಗಳುವ (ಛಾಂ. ೮–೧೨–೧) ವಾಕ್ಯವಾದ ಬಳಿಕ, ಶರೀರವನ್ನು ಬಿಟ್ಟೇಳುವನೆಂಬ (ಛಾಂ. ೮–೧೨–೩) ಈ ವಾಕ್ಯವು ಬಂದಿರುವದರಿಂದ ಸತ್ತ ಬಳಿಕವೇ ಈ ಫಲವಾಗುವದೆಂದು ಶಂಕಿಸಿಯಾರೆಂದು ಈ ವಿಚಾರವನ್ನು ಇಲ್ಲಿ ಮಾಡಿದೆ.

4. ಸ್ವರೂಪದಲ್ಲಿ ಯಾವ ಹೊಸ ವಿಶೇಷವೂ ನಿಜವಾಗಿ ಉಂಟಾಗುವದಕ್ಕೆ ಅವಕಾಶವಿಲ್ಲದ್ದರಿಂದ ಇಲ್ಲಿ ಹೇಳಿರುವ ವಿಶೇಷವು ಜ್ಞಾನಾಜ್ಞಾನಕೃತವೆಂದು ಏರ್ಪಡುತ್ತದೆ ಎಂದು ಭಾವ.

## ಜೀವನು ಪರಮೇಶ್ವರನಿಗಿಂತ ಭಿನ್ನನಲ್ಲ

( ಭಾಷ್ಯ )

೨೬೭. ಏವಂ ಮಿಥ್ಯಾಜ್ಞಾನಕೃತ ಏವ ಜೀವಪರಮೇಶ್ವರಯೋ ರ್ಭೇದೋ ನ ವಸ್ತುಕೃತಃ। ವ್ಯೋಮವತ್ ಅಸಙ್ಗತ್ವಾವಿಶೇಷಾತ್| ಕುತಶ್ಚೈತ ದೇವಂ ಪ್ರತಿಪತ್ತವ್ಯಮ್? | ಯತೋ "ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ" ಇತ್ಯುಪದಿಶ್ಯ "ಏತದಮೃತಮಭಯಮೇತದ್ ಬ್ರಹ್ಮ" (ಛಾಂ. ೮-೭-೪ ) ಇತ್ಯುಪದಿಶತಿ | ಯೋಽಕ್ಷಿಣಿ ಪ್ರಸಿದ್ಧೋ ದ್ರಷ್ಟಾ ದ್ರಷ್ಟೃತ್ವೇನ ವಿಭಾವ್ಯತೇ, ಸಃ, ಅಮೃತಾಭಯಲಕ್ಷಣಾದ್ ಬ್ರಹ್ಮಣೋ ಅನ್ಯಶ್ಚೇತ್ ಸ್ಯಾತ್, ತತಃ ಅಮೃತಾಭಯಬ್ರಹ್ಮಸಾಮಾನಾಧಿಕರಣ್ಯಂ ನ ಸ್ಯಾತ್, ನಾಪಿ ಪ್ರತಿ ಚ್ಛಾಯಾತ್ಮಾ ಅಯಮ್ ಅಕ್ಷಿಲಕ್ಷಿತೋ ನಿರ್ದಿಶ್ಯತೇ | ಪ್ರಜಾಪತೇರ್ಮೃಷಾ ವಾದಿತ್ವಪ್ರಸಙ್ಗಾತ್ | ತಥಾ ದ್ವಿತೀಯೇಽಪಿ ಪರ್ಯಾಯೇ "ಯ ಏಷಃ ಸ್ವಪ್ನೇ ಮಹೀಯಮಾನಶ್ಚರತಿ" (ಛಾಂ. ೮-೧೦-೧) ಇತಿ ನ ಪ್ರಥಮ ಪರ್ಯಾಯನಿರ್ದಿಷ್ಟಾತ್ ಅಕ್ಷಿಪುರುಷಾತ್ ದ್ರಷ್ಟುರನ್ಯೋ ನಿರ್ದಿಷ್ಟಃ | "ಏತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ" (ಛಾಂ. ೮-೯-೩) ಇತ್ಯುಪಕ್ರಮಾತ್ | ಕಿಂ ಚ ಅಹಮದ್ಯ ಸ್ವಪ್ನೇ ಹಸ್ತಿನಮ್ ಅದ್ರಾಕ್ಷಮ್, ನೇದಾನೀಂ ತಂ ಪಶ್ಯಾಮಿ" ಇತಿ ದೃಷ್ಟಮೇವ ಪ್ರತಿಬುದ್ಧಃ ಪ್ರತ್ಯಾಚಷ್ಟೇ। ದ್ರಷ್ಟಾರಂ ತು ತಮೇವ ಪ್ರತ್ಯಭಿಜಾನಾತಿ "ಯ ಏವಾಹಂ ಸ್ವಪ್ನಮ್ ಅದ್ರಾಕ್ಷಮ್, ಸ ಏವಾಹಂ ಜಾಗರಿತಂ ಪಶ್ಯಾಮಿ" ಇತಿ । ತಥಾ ತೃತೀಯೇಽಪಿ ಪರ್ಯಾಯೇ "ನಾಹ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯ ಮಹಮಸ್ಮೀತಿ ನೋ ಏವೇಮಾನಿ ಭೂತಾನಿ" (ಛಾಂ. ೮-೧೧-೧) ಇತಿ ಸುಷುಪ್ತಾವಸ್ಥಾಯಾಂ ವಿಶೇಷವಿಜ್ಞಾನಾಭಾವಮೇವ ದರ್ಶಯತಿ ನ ವಿಜ್ಞಾ ತಾರಂ ಪ್ರತಿಷೇಧತಿ | ಯತ್ತು ತತ್ರ "ವಿನಾಶಮೇವಾಪೀತೋ ಭವತಿ" ಇತಿ, ತದಪಿ ವಿಶೇಷವಿಜ್ಞಾನವಿನಾಶಾಭಿಪ್ರಾಯಮೇವ, ನ ವಿಜ್ಞಾತೃವಿನಾಶಾಭಿ ಪ್ರಾಯಮ್ | "ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇಽ ವಿನಾಶಿತ್ವಾತ್" (ಬೃ. ೪-೩-೩೦) ಇತಿ ಶ್ರುತ್ಯನ್ತರಾತ್ | ತಥಾ ಚತುರ್ಥೇಽಪಿ ಪರ್ಯಾಯೇ "ಏತಂ ತ್ವೇವ ಭೂಯೋಽನುವ್ಯಾಖ್ಯಾಸ್ಯಾಮಿ ನೋ ಏವಾನ್ಯ ತ್ರೈತಸ್ಮಾತ್" (ಛಾಂ. ೮-೧೧-೩) ಇತ್ಯುಪಕ್ರಮ್ಯ "ಮಘವನ್ ಮರ್ತ್ಯಂ ವಾ ಇದಂ ಶರೀರಮ್" (ಛಾಂ. ೮-೧೨-೧) ಇತ್ಯಾದಿನಾ ಪ್ರಪಞ್ಚೇನ ಶರೀರಾದ್ಯುಪಾಧಿಸಂಬನ್ಧಪ್ರತ್ಯಾಖ್ಯಾನೇನ ಸಂಪ್ರಸಾದಶಬ್ದೋದಿತಂ ಜೀವಮ್ "ಸ್ವೇನ ರೂಪೇಣಾಭಿನಿಷ್ಪದ್ಯತೇ" (ಛಾಂ. ೮-೧೨-೩) ಇತಿ ಬ್ರಹ್ಮ ಸ್ವರೂಪಾಪನ್ನಂ ದರ್ಶಯನ್ ನ ಪರಸ್ಮಾದ್ ಬ್ರಹ್ಮಣೋಽಮೃತಾಭಯ ಸ್ವರೂಪಾತ್ ಅನ್ಯಂ ಜೀವಂ ದರ್ಶಯತಿ ॥

( ಭಾಷ್ಯಾರ್ಥ )

ಹೀಗೆ (ನೋಡಿದರೆ) ಜೀವಪರಮೇಶ್ವರರಿಗೆ (ಕಾಣುವ) ಭೇದವು ತಪ್ಪು ತಿಳಿವಳಿಕೆಯಿಂದಾದದ್ದೇ ಹೊರತು ವಸ್ತುವಿನಿಂದಾದದ್ದಲ್ಲ. ಏಕೆಂದರೆ ಆಕಾಶದಂತೆ ಅಸಂಗನಾಗಿರುವದೆಂಬುದು (ಇಬ್ಬರಿಗೂ) ಸಮಾನವಾಗಿದೆ[1]. ಇದು ಹೀಗೆಂದು ಮತ್ತೂ ಯಾವ (ಕಾರಣದಿಂದ) ತಿಳಿಯಬೇಕು ? ಎಂದರೆ "ಕಣ್ಣಿನಲ್ಲಿ ಯಾವ ಈ ಪುರುಷನು ಕಾಣಿಸುತ್ತಿರುವನಲ್ಲ" (ಛಾಂ. ೮-೭-೪) ಎಂದು ಉಪದೇಶಿಸಿ "ಇದೇ ಅಮೃತವು, ಅಭಯವು, ಇದು ಬ್ರಹ್ಮವು" (ಛಾಂ. ೮-೭-೪) ಎಂದು ತಿಳಿಸಿರುತ್ತಾನೆ. ಕಣ್ಣಿನಲ್ಲಿರುವನೆಂದು ಪ್ರಸಿದ್ಧನಾಗಿರುವ ದ್ರಷ್ಟೃವು ದ್ರಷ್ಟೃವೆಂದು ತೋರುತ್ತಿರುವನಷ್ಟೆ, ಅವನು ಅಮೃತಾಭಯಸ್ವರೂಪವಾದ ಬ್ರಹ್ಮಕ್ಕಿಂತ ಬೇರೆಯಾಗಿದ್ದರೆ ಆಗ (ಆ ಪುರುಷನಿಗೆ) ಅಮೃತಾಭಯಬ್ರಹ್ಮದೊಡನೆ ಸಾಮಾನಾಧಿಕರಣ್ಯವು ಇರುತ್ತಿರಲಿಲ್ಲ,[2] ಪ್ರತಿಚ್ಛಾಯಾತ್ಮನನ್ನೇ[3] ಅಕ್ಷಿಯಲ್ಲಿ ಕಾಣುವ ಈ (ಪುರುಷನೆಂದು) ತಿಳಿಸಿದೆ (ಎನ್ನುವಹಾಗೂ) ಇಲ್ಲ. ಏಕೆಂದರೆ (ಆಗ) ಪ್ರಜಾಪತಿಯು ಸುಳ್ಳುಹೇಳಿದಂತಾಗುವದು. ಹೀಗೆಯೇ ಎರಡನೆಯ ಸಲ "ಯಾವ ಇವನು ಕನಸಿನಲ್ಲಿ ಗೌರವಿಸಲ್ಪಟ್ಟು ಸಂಚರಿಸುತ್ತಿರುವನೋ (ಇವನೇ ಆತ್ಮನು)" (ಛಾಂ. ೮-೧೦-೧) ಎಂದು ಮೊದಲನೆಯ ಪರ್ಯಾಯದಲ್ಲಿ ಹೇಳಿರುವ ಅಕ್ಷಿಪುರುಷನಾದ ದ್ರಷ್ಟೃವಿಗಿಂತ ಬೇರೆ (ಒಬ್ಬ)ನನ್ನು ತಿಳಿಸಿರುವದಿಲ್ಲ ; ಏಕೆಂದರೆ "ಈತನನ್ನೇ ನಿನಗೆ ಮತ್ತೂ ವಿವರಿಸಿ ಹೇಳುವೆನು" (ಛಾಂ. ೮-೯-೩) ಎಂದು ಉಪಕ್ರಮಿಸಿರುತ್ತದೆ[4]. ಇದಲ್ಲದೆ 'ನಾನು ಇಂದು ಕನಸಿನಲ್ಲಿ ಆನೆಯನ್ನು ಕಂಡೆನು, ಈಗ ಅದು ಕಾಣಿಸುತ್ತಿಲ್ಲ' ಎಂದು ಎಚ್ಚತ್ತವನು (ಹಿಂದೆ ತಾನು) ಕಂಡ (ವಸ್ತು)ವನ್ನು ಮಾತ್ರ ಇಲ್ಲವೆನ್ನುತ್ತಾನೆ ; ಆದರೆ 'ಕನಸನ್ನು ಕಂಡೆನಲ್ಲ, ಅದೇ ನಾನು ಎಚ್ಚರವನ್ನು ಕಾಣುತ್ತಿದೇನೆ' ಎಂದು (ಕನಸನ್ನು) ಕಂಡವನು ತಾನೇ ಎಂದು ಗುರುತಿಸಿ ಅರಿಯುತ್ತಾನೆ. ಹೀಗೆಯೇ ಮೂರನೆಯ ಸಲವೂ "ಈಗ ಇವನು ನಾನು ಇಂಥವ

1. ಜೀವನು ದೇಹಾದಿಸಂಗವುಳ್ಳವನೆಂದಾಗಿದ್ದರೆ ಜೀವೇಶ್ವರಭೇದವು ಸ್ವಾಭಾವಿಕವೆನ್ನಬಹುದಾಗಿತ್ತು- ಎಂದು ಭಾವ.

2. ಆದ್ದರಿಂದ ಈ ಸಾಮಾನಾಧಿಕರಣ್ಯವಚನವು ಜೀವನ ಸಂಸಾರಿತ್ವವನ್ನು ಅಲ್ಲಗಳೆಯುವದಕ್ಕೆ ಬಂದಿದೆ ಎಂದು ತಿಳಿಯಬೇಕು.

3. ಅಕ್ಷಿಪುರುಷನು ಛಾಯಾತ್ಮನಲ್ಲವೆಂಬುದಕ್ಕೆ ೧-೨-೧೩ರಲ್ಲಿಯೇ ಕಾರಣವನ್ನು ಕೊಟ್ಟಿರುತ್ತದೆಯಾದರೂ ಇಲ್ಲಿ ಪ್ರಜಾಪತಿಗೆ ಸುಳ್ಳುಹೇಳಿದ ದೋಷವು ಬರುವದು ಎಂಬ ಅನಿಷ್ಟವನ್ನು ತಿಳಿಸುವದಕ್ಕಾಗಿ ಮತ್ತೊಮ್ಮೆ ಛಾಯಾತ್ಮನನ್ನು ಶಂಕಿಸಿದೆ.

4. ಆದ್ದರಿಂದ ಎಚ್ಚರಕನಸುಗಳೆರಡಕ್ಕೂ ಸಮಾನವಾಗಿರುವ ಜೀವಸ್ವರೂಪವನ್ನು ಇಲ್ಲಿ ಪ್ರಜಾಪತಿಯು ಹೇಳಿರುತ್ತಾನೆಂದಾಯಿತು.

ನಾಗಿರುವೆನು ಎಂದು ಅರಿಯುವದೇ ಇಲ್ಲವಲ್ಲ ! ಈ ಭೂತಗಳನ್ನೂ ಅರಿಯುವದೇ ಇಲ್ಲ(ವಲ್ಲ)!" (ಛಾಂ. ೮–೧೧–೧) ಎಂದು ಸುಷುಪ್ತಾವಸ್ಥೆಯಲ್ಲಿ ವಿಶೇಷವಿಜ್ಞಾನದ ಅಭಾವವನ್ನು ಮಾತ್ರ ತಿಳಿಸುತ್ತಾನೆಯೇ ಹೊರತು ಅರಿಯುವಾತನು ಇಲ್ಲವೆನ್ನುವದಿಲ್ಲ''[1]. ಇನ್ನು ಅಲ್ಲಿ "ವಿನಾಶವನ್ನೇ ಸೇರಿದವನಾಗುತ್ತಾನೆ" (ಛಾಂ.೮–೧೧–೧) ಎಂದು ಹೇಳಿದೆಯಲ್ಲ, ಅದೂ ವಿಶೇಷವಿಜ್ಞಾನವು ವಿನಾಶ(ವಾಗುವದೆಂಬ) ಅಭಿಪ್ರಾಯದಿಂದ ಹೇಳಿದ್ದೇ ಹೊರತು ಅರಿಯುವಾತನು ವಿನಾಶವಾಗಿರುತ್ತಾನೆಂಬ ಅಭಿಪ್ರಾಯ(ದಿಂದ ಹೇಳಿ)ದ್ದಲ್ಲ. ಏಕೆಂದರೆ ''ಅರಿಯುವಾತನ ಅರಿವಿಗೆ ಲೋಪವೆಂಬುದಿಲ್ಲ. ಏಕೆಂದರೆ (ಅವನು) ಅವಿನಾಶಿಯಾಗಿರುತ್ತಾನೆ" (ಬೃ. ೪–೩–೩೦) ಎಂದು ಬೇರೊಂದು ಶ್ರುತಿಯಿದೆ.[2] ಇದರಂತೆ ನಾಲ್ಕನೆಯ ಸಲವೂ "ಈತನನ್ನೇ ನಿನಗೆ ಮತ್ತೂ ವಿವರಿಸಿ ಹೇಳುವೆನು, ಈತನನ್ನು ಬಿಟ್ಟು ಇನ್ನೊಂದನ್ನು ಹೇಳುವದೇ ಇಲ್ಲ" (ಛಾಂ ೮–೧೧–೩) ಎಂದು ಉಪಕ್ರಮಿಸಿ ''ಇಂದ್ರನೆ, ಈ ಶರೀರವು ಮರ್ತ್ಯವೇ" (ಛಾಂ. ೮–೧೨–೧) ಎಂದು ಮುಂತಾಗಿರುವ (ವಾಕ್ಯ)ವಿಸ್ತಾರದಿಂದ ಶರೀರವೇ ಮುಂತಾದ ಉಪಾಧಿಗಳ ಸಂಬಂಧವನ್ನು ಅಲ್ಲಗಳೆದು ಸಂಪ್ರಸಾದನೆಂಬ ಶಬ್ದದಿಂದ ಹೇಳಲ್ಪಟ್ಟ ಜೀವನನ್ನು ''ತನ್ನ ರೂಪದಿಂದ ಸಿದ್ಧನಾಗುತ್ತಾನೆ" (ಛಾಂ. ೮–೧೨–೩) ಎಂದು ಬ್ರಹ್ಮರೂಪವನ್ನು ಹೊಂದಿರುವನೆಂದು ತಿಳಿಸುವದರಿಂದ[3] ಅಮೃತಾಭಯಸ್ವರೂಪವಾದ ಪರಬ್ರಹ್ಮಕ್ಕಿಂತ ಜೀವನು ಬೇರೆಯಲ್ಲವೆಂದು ತಿಳಿಸಿರುತ್ತಾನೆ.

## 'ಏತಂ ತ್ವೇವ' ಎಂಬಲ್ಲಿ ಪರಮಾತ್ಮಪರಾಮರ್ಶವಿಲ್ಲ

( ಭಾಷ್ಯ )

೩೮. ಕೇಚಿತ್ತು ಪರಮಾತ್ಮವಿವಕ್ಷಾಯಾಂ "ಏತಂ ತ್ವೇವ ತೇ" ಇತಿ ಜೀವಾಕರ್ಷಣಮ್ ಅನ್ಯಾಯ್ಯಂ ಮನ್ಯಮಾನಾಃ, 'ಏತಮೇವ ವಾಕ್ಯೋಪಕ್ರಮಸೂಚಿತಮ್ ಅಪಹತಪಾಪ್ಮತ್ವಾದಿಗುಣಕಮ್ ಆತ್ಮಾನಂ ತೇ ಭೂಯೋಽ

---

1. ಇದು ಇಂಥದ್ದು ಎಂದು ತಿಳಿಯುವ ವಿಜ್ಞಾನವು ಸುಷುಪ್ತಿಯಲ್ಲಿಲ್ಲವೆಂದು ಹೇಳಿರುತ್ತಾನಾದ್ದರಿಂದ ಅಲ್ಲಿಯೂ ಚಿನ್ಮಾತ್ರರೂಪದಿಂದ ಇರುತ್ತಾನೆಂದು ಹೇಳಿದಂತಾಗಿದೆ.

2. ಈ ಶ್ರುತಿಯೂ ಸುಷುಪ್ತಿಯ ವಿಷಯಕವಾದದ್ದೇ ; ಆದ್ದರಿಂದ ಪ್ರಕೃತ ವಾಕ್ಯದಲ್ಲಿ ಹೇಳಿರುವ ನಾಶವು ವಿಶೇಷಜ್ಞಾನದ್ದೇ ಹೊರತು, ಸ್ವರೂಪಜ್ಞಾನದ್ದಲ್ಲವೆಂದು ಸಿದ್ಧವಾಗುತ್ತದೆ.

3. ಸಂಪ್ರಸಾದನನ್ನೇ ಬ್ರಹ್ಮರೂಪವನ್ನು ಹೊಂದಿರುತ್ತಾನೆಂದಿರುವದರಿಂದ ಅವಸ್ಥಾತ್ರಯರಹಿತವಾದ ಬ್ರಹ್ಮಸ್ವರೂಪವೇ ಜೀವನದೆಂದು ಹೇಳಿದಂತಾಯಿತು.

ನುವ್ಯಾಖ್ಯಾಸ್ಯಾಮಿ' ಇತಿ ಕಲ್ಪಯನ್ತಿ। ತೇಷಾಮ್ 'ಏತಮ್' ಇತಿ ಸಂನಿಹಿತಾವಲಮ್ಬಿನೀ ಸರ್ವನಾಮಶ್ರುತಿಃ ವಿಪ್ರಕೃಷ್ಯೇತ। ಭೂಯಃ ಶ್ರುತಿಶ್ಚ ಉಪರುಧ್ಯೇತ। ಪರ್ಯಾಯಾನ್ತರಾಭಿಹಿತಸ್ಯ ಪರ್ಯಾಯಾನ್ತರೇ ಅನಭಿಧೀಯಮಾನತ್ವಾತ್। "ಏತಂ ತ್ವೇವ ತೇ" ಇತಿ ಚ ಪ್ರತಿಜ್ಞಾಯ ಪ್ರಾಕ್ ಚತುರ್ಥಾತ್ ಪರ್ಯಾಯಾತ್ ಅನ್ಯಮನ್ಯಂ ವ್ಯಾಚಕ್ಷಾಣಸ್ಯ ಪ್ರಜಾಪತೇಃ ಪ್ರತಾರಕತ್ವಂ ಪ್ರಸಜ್ಯೇತ। ತಸ್ಮಾತ್ ಅವಿದ್ಯಾಪ್ರತ್ಯುಪಸ್ಥಾಪಿತಮ್ ಅಪಾರಮಾರ್ಥಿಕಂ ಜೈವಂ ರೂಪಂ ಕರ್ತೃಭೋಕ್ತೃರಾಗದ್ವೇಷಾದಿದೋಷಕಲುಷಿತಮ್ ಅನೇಕಾನರ್ಥಯೋಗಿ। ತದ್ವಿಲಯನೇನ ತದ್ವಿಪರೀತಮ್ ಅಪಹತಪಾಪ್ಮತ್ವಾದಿಗುಣಕಂ ಪಾರಮೇಶ್ವರಂ ಸ್ವರೂಪಂ ವಿದ್ಯಯಾ ಪ್ರತಿಪದ್ಯತೇ[1] ಸರ್ಪಾದಿವಿಲಯನೇನೇವ ರಜ್ಜ್ವಾದೀನ್ ॥

(ಭಾಷ್ಯಾರ್ಥ)

ಆದರೆ **ಕೆಲವರು**[2] ಪರಮಾತ್ಮನನ್ನು ಹೇಳಬೇಕೆಂದು ಹೊರಟಿರುವಲ್ಲಿ "ಏತಂ ತ್ವೇವ ತೇ" (ಈತನನ್ನೇ ನಿನಗ ಹೇಳುವೆನು) ಎಂದು ಜೀವಾಕರ್ಷಣೆ (ಮಾಡಿದೆ) ಎಂಬುದು ನ್ಯಾಯವಲ್ಲವೆಂದೆಣಿಸಿ ವಾಕ್ಯದ ಉಪಕ್ರಮದಲ್ಲಿ ಸೂಚಿತವಾಗಿರುವ ಅಪಹತಪಾಪ್ಮತ್ವವೇ ಮುಂತಾದ ಗುಣಗಳುಳ್ಳ ಇದೇ (ಪರ)ಮಾತ್ಮನನ್ನು ನಿನಗೆ ಮತ್ತೂ ಹೇಳುವೆನು– ಎಂದು (ಅರ್ಥವನ್ನು) ಕಲ್ಪಿಸಿರುತ್ತಾರೆ[3]. ಅವರ (ಪಕ್ಷದಲ್ಲಿ) ಏತತ್[4] (ಇವನನ್ನು) ಎಂಬ ಹತ್ತಿರ(ವಿರುವ) ವಸ್ತುವನ್ನು ವಿಷಯೀಕರಿಸ(ಬೇಕಾದ) ಸರ್ವನಾಮಶ್ರುತಿಯು ದೂರಕ್ಕೆ ಹೋದಂತಾಗುವದು[5]. 'ಮತ್ತೂ (ಹೇಳುವೆನು)' ಎಂಬ ಶ್ರುತಿಗೆ ವಿರೋಧವಾಗುವದು; ಏಕೆಂದರೆ (ಆ ಪಕ್ಷದಲ್ಲಿ) ಒಂದು ಪರ್ಯಾಯದಲ್ಲಿ ಹೇಳಿದ ಆತ್ಮನನ್ನು ಮತ್ತೊಂದು ಪರ್ಯಾಯದಲ್ಲಿ ಹೇಳಿರುವದಿಲ್ಲ[6]. ಮತ್ತು "ಈತ

1. 'ಪ್ರತಿಪಾದ್ಯತೇ' ಎಂಬ ಪಾಠಕ್ಕಿಂತ ಇದು ಉತ್ತಮವೆಂದು ಕಲ್ಪಿಸಿದೆ. ಅನುವಾದವನ್ನೂ ಅದರ ಟಿಪ್ಪಣಿಯನ್ನೂ ನೋಡಿ.

2. ಜೀವನು ಶರೀರಪಾತವಾದ ಬಳಿಕ ಉತ್ತಮಪುರುಷನಾಗುವನು ಎಂಬವರು.

3. ಪರಮಾತ್ಮನನ್ನೇ ಹೇಳುವೆನು, ಜೀವನನ್ನು ಹೇಳುವದಿಲ್ಲ- ಎಂದರ್ಥ. ಪರಮಾತ್ಮನಲ್ಲದ ಛಾಯಾಪುರುಷ, ಸ್ವಪ್ನಪುರುಷ, ಸುಷುಪ್ತಪುರುಷ– ಇವರನ್ನು ಸ್ಥೂಲಾರುಂಧತೀನ್ಯಾಯದಿಂದ ಹೇಳಿದೆ ಎಂದು ಈ ವಾದಿಗಳ ಭಾವ.

4. ಏತತ್ ಎಂಬ ಶಬ್ದವು ತೀರ ಹತ್ತಿರವಿರುವದನ್ನೂ ಅದಸ್‌ಶಬ್ದವು ದೂರ ಇರುವದನ್ನೂ ಹೇಳುವದು– ಎಂದು ಸಂಸ್ಕೃತಭಾಷೆಯ ಮರ್ಯಾದೆ.

5. ಏತತ್ ಎಂಬ ಸರ್ವನಾಮವು ವಾಕ್ಯದಲ್ಲಿ ಹತ್ತಿರವಿರುವ ಜೀವನನ್ನು ಬಿಟ್ಟು ದೂರದಲ್ಲಿರುವ ಪರಮಾತ್ಮನನ್ನು ಪರಾಮರ್ಶಿಸುತ್ತದೆ ಎಂಬುದು ಸರಿಯಲ್ಲ.

6. ಆದ್ದರಿಂದ ಆಯಾ ಆತ್ಮರನ್ನು ಒಂದೊಂದು ಸಲವೇ ಹೇಳಿದಂತೆ ಆಗುತ್ತದೆ.

ನನ್ನೇ ನಿನಗೆ ( ಹೇಳುವೆನು ) " ಎಂದು ಪ್ರತಿಜ್ಞೆಮಾಡಿ ನಾಲ್ಕನೆಯ ಪರ್ಯಾಯಕ್ಕಿಂತ ಮೊದಲು[1] ಬೇರೆಬೇರೆಯಾ (ಆತ್ಮನನ್ನು) ಹೇಳುತ್ತಿರುವ ಪ್ರಜಾಪತಿಗೆ ಮೋಸಗಾರಿಕೆಯು ಗಂಟುಬೀಳುವದು. ಆದ್ದರಿಂದ **ಅವಿದ್ಯೆಯು ತಂದೊಡ್ಡಿರುವ ಕರ್ತೃಭೋಕ್ತೃರಾಗದ್ವೇಷಾದಿಗಳ ಕಲಂಕವುಳ್ಳ ಅನೇಕಾನರ್ಥಗಳುಳ್ಳ, ಅಪಾರಮಾರ್ಥಿಕವಾದ ಜೀವರೂಪವಿದೆಯಲ್ಲ, ಅದನ್ನು -ಸರ್ಪಾದಿಗಳನ್ನು ವಿಲಯಮಾಡಿ ಹಗ್ಗವೇ ಮುಂತಾದವನ್ನು (ತಿಳಿಯುವಂತೆ) – ವಿದ್ಯೆಯಿಂದ ವಿಲಯಮಾಡಿಕೊಂಡು[2] ಅದಕ್ಕೆ ವಿಪರೀತವಾಗಿರುವ ಅಪಹತಪಾಪ್ಮತ್ವಾದಿಗುಣಗಳುಳ್ಳ ಪರಮೇಶ್ವರ ಸ್ವರೂಪವನ್ನು (ಜೀವನು) ಅರಿತುಕೊಳ್ಳುತ್ತಾನೆ** (ಎಂಬುದೇ ಸರಿಯಾದದ್ದು[3].

## ಜೀವರೂಪವು ಪರಮಾರ್ಥವಲ್ಲ

(ಭಾಷ್ಯ)

೨೬೯. ಅಪರೇ ತು ವಾದಿನಃ ಪಾರಮಾರ್ಥಿಕಮೇವ ಜೈವಂ ರೂಪಮ್ ಇತಿ ಮನ್ಯನ್ತೇ ಅಸ್ಮದೀಯಾಶ್ಚ ಕೇಚಿತ್। ತೇಷಾಂ ಸರ್ವೇಷಾಮ್ ಆತ್ಮೈಕತ್ವಸಮ್ಯಗ್ದರ್ಶನಪ್ರತಿಪಕ್ಷಭೂತಾನಾಂ ಪ್ರತಿಬೋಧಾಯ ಇದಂ ಶಾರೀರಕಮ್ ಆರಬ್ಧಮ್, ಏಕ ಏವ ಪರಮೇಶ್ವರಃ ಕೂಟಸ್ಥನಿತ್ಯೋ ವಿಜ್ಞಾನಧಾತುಃ ಅವಿದ್ಯಯಾ ಮಾಯಯಾ ಮಾಯಾವಿವತ್ ಅನೇಕಧಾ ವಿಭಾವ್ಯತೇ ನಾನ್ಯೋ ವಿಜ್ಞಾನಧಾತುರಸ್ತಿ ಇತಿ । ಯತ್ತು ಇದಂ ಪರಮೇಶ್ವರವಾಕ್ಯೇ ಜೀವಮ್ ಆಶಙ್ಕ್ಯ ಪ್ರತಿಷೇಧತಿ ಸೂತ್ರಕಾರಃ "ನಾಸಂಭವಾತ್" (೧–೩–೧೮) ಇತ್ಯಾದಿನಾ।

---

1. ನಾಲ್ಕನೆಯ ಪರ್ಯಾಯದಲ್ಲಿ ಹೇಳಿರುವ ಉತ್ತಮಪುರುಷನು ಮಾತ್ರ ಪರಮಾತ್ಮನು ಎಂದು ಪೂರ್ವಪಕ್ಷಿಯ ಅಭಿಪ್ರಾಯ.

2. ಹುಸಿತೋರಿಕೆಯೆಂದು ನಿಶ್ಚಯಿಸಿಕೊಂಡು. ಜೀವರೂಪವನ್ನು ಹುಸಿಯೆಂದು ತಿಳಿಯುವದು, ಪರಮಾತ್ಮನನ್ನು ಅರಿತುಕೊಳ್ಳುವದು– ಇವು ಬೇರೆಬೇರೆಯ ಕ್ರಿಯೆಗಳಲ್ಲ.

3. ಈ ವಾಕ್ಯದ ಭಾಷ್ಯಮೂಲವು ಬರೆದವರ ಕೈತಪ್ಪಿನಿಂದ ಏನೋ ಹೆಚ್ಚುಕಡಿಮೆಯಾಗಿರಬೇಕೆಂದು ತೋರುತ್ತದೆ. 'ಪ್ರತಿಪಾದ್ಯತೇ', 'ರಜ್ಜ್ವಾದೀನ್'– ಇವೆರಡರಲ್ಲಿ ಒಂದು ಮಾರ್ಪಟ್ಟಿರಬೇಕು. ನಾವು 'ಪ್ರತಿಪಾದ್ಯತೇ' ಎಂಬುದನ್ನು 'ಪ್ರತಿಪದ್ಯತೇ' ಎಂದು ತಿದ್ದಿಕೊಂಡು ಅನುವಾದಮಾಡಿರುತ್ತೇವೆ. 'ರಜ್ಜ್ವಾದೀನ್' ಎಂಬುದನ್ನು 'ರಜ್ಜ್ವಾದಿ' ಎಂದು ತಿದ್ದಿದರೆ ಜೀವರೂಪವಿದೆಯಲ್ಲ, ಅದನ್ನು– ಸರ್ಪಾದಿಗಳನ್ನು ವಿಲಯಮಾಡಿ ಹಗ್ಗವೇ ಮುಂತಾದದ್ದನ್ನು ತಿಳಿಸುವಂತೆ– ವಿಲಯಮಾಡಿ ಅದಕ್ಕೆ ವಿಪರೀತವಾಗಿರುವ ಅಪಹತಪಾಪ್ಮತ್ವಾದಿಗುಣಗಳುಳ್ಳ ಪರಮೇಶ್ವರಸ್ವರೂಪವನ್ನು ವಿದ್ಯೆಯು ತಿಳಿಸುತ್ತದೆ" ಎಂದು ಕನ್ನಡಿಸಬೇಕಾಗುತ್ತದೆ.

ತತ್ರ ಅಯಮ್ ಅಭಿಪ್ರಾಯಃ ನಿತ್ಯಶುದ್ಧಬುದ್ಧಮುಕ್ತಸ್ವಭಾವೇ ಕೂಟಸ್ಥನಿತ್ಯೇ ಏಕಸ್ಮಿನ್ ಅಸಙ್ಗೇ ಪರಮಾತ್ಮನಿ ತದ್ವಿಪರೀತಂ ಜೈವಂ ರೂಪಂ ವ್ಯೋಮ್ನೀವ ತಲಮಲಾದಿ ಪರಿಕಲ್ಪಿತಮ್ । ತತ್ ಆತ್ಮೈಕತ್ವಪ್ರತಿಪಾದನಪರೈರ್ವಾಕ್ಯೈಃ ನ್ಯಾಯೋಪೇತೈಃ ದ್ವೈತವಾದಪ್ರತಿಷೇಧೈಶ್ಚ ಅಪನೇಷ್ಯಾಮಿ ಇತಿ ಪರಮಾತ್ಮನೋ ಜೀವಾತ್ ಅನ್ಯತ್ವಂ ದೃಢಯತಿ । ಜೀವಸ್ಯ ತು ನ ಪರಸ್ಮಾತ್ ಅನ್ಯತ್ವಂ ಪ್ರತಿಪಿಪಾದಯಿಷತಿ, ಕಿಂ ತು ಅನುವದತ್ಯೇವ ಅವಿದ್ಯಾಕಲ್ಪಿತಂ ಲೋಕಪ್ರಸಿದ್ಧಂ ಜೀವಭೇದಮ್ । ಏವಂ ಹಿ ಸ್ವಾಭಾವಿಕಕರ್ತೃತ್ವಭೋಕ್ತೃತ್ವಾನುವಾದೇನ ಪ್ರವೃತ್ತಾಃ ಕರ್ಮವಿಧಯೋ ನ ವಿರುಧ್ಯನ್ತೇ ಇತಿ ಮನ್ಯತೇ । ಪ್ರತಿಪಾದ್ಯಂ ತು ಶಾಸ್ತ್ರಾರ್ಥಮ್ ಆತ್ಮೈಕತ್ವಮೇವ ದರ್ಶಯತಿ "ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್'' (೧-೧-೩೦) ಇತ್ಯಾದಿನಾ । ವರ್ಣಿತಶ್ಚ ಅಸ್ಮಾಭಿಃ ವಿದ್ವದವಿದ್ವದ್ಭೇದೇನ ಕರ್ಮವಿಧಿವಿರೋಧಪರಿಹಾರಃ ॥

( ಭಾಷ್ಯಾರ್ಥ )

ಆದರೆ **ಬೇರೆಯ ವಾದಿಗಳು**[1] ಜೀವನ ರೂಪವು ಪಾರಮಾರ್ಥಿಕವೆಂದೇ ಅಭಿಪ್ರಾಯಪಡುತ್ತಾರೆ, ನಮ್ಮವರೂ ಕೆಲವರು[2] (ಹಾಗೆಂದು ಅಭಿಪ್ರಾಯಪಡುತ್ತಾರೆ). ಆತ್ಮೈಕತ್ವದರ್ಶನಕ್ಕೆ ಪ್ರತಿಪಕ್ಷವವರಾಗಿರುವ ಅವರೆಲ್ಲರ ತಿಳಿವಳಿಕೆಗಾಗಿ ಕೂಟಸ್ಥನಿತ್ಯನೂ ವಿಜ್ಞಾನಧಾತುವೂ ಆಗಿರುವ ಪರಮೇಶ್ವರನೊಬ್ಬನೇ ಅವಿದ್ಯೆಯಿಂದ- ಮಾಯೆಯಿಂದ ಮಾಯಾವಿಯು (ಅನೇಕವಾಗಿ ಕಾಣುವಂತೆ[3]- ಅನೇಕ(ವಿಧ)ವಾಗಿ ಕಾಣುತ್ತಾನೆಯೇ ಹೊರತು ಇನ್ನೊಂದು ವಿಜ್ಞಾನಧಾತುವಿಲ್ಲ- ಎಂದು (ತಿಳಿಸುವ) ಈ **ಶಾರೀರಕವನ್ನು**[4] ಪ್ರಾರಂಭಿಸಿರುತ್ತದೆ.

ಇನ್ನು ಪರಮೇಶ್ವರವಾಕ್ಯದಲ್ಲಿ (ದಹರಾಕಾಶವು) ಜೀವನಾಗಿರಬಹುದೆಂದು ಆಶಂಕೆಮಾಡಿ "ಹಾಗಲ್ಲ, ಏಕೆಂದರೆ ಸಂಭವಿಸುವದಿಲ್ಲ'' (೧-೩-೧೮)

---

1. ದ್ವೈತಿಗಳು, ವೈಶೇಷಿಕರು, ಮೀಮಾಂಸಕರು- ಮುಂತಾದವರು.

2 ವೇದಾಂತಿಗಳು ; ಈಗಿನ ವಿಶಿಷ್ಟಾದ್ವೈತಿಗಳೇ ಮುಂತಾದವರು ಇದರಲ್ಲಿ ಸೇರಿಲ್ಲ. ಪೀಠಿಕೆಯನ್ನು ನೋಡಿ.

3. ಮಾಯೆಯೇ ಅವಿದ್ಯೆ ಎಂಬ ಅಭಿಪ್ರಾಯದಿಂದ 'ಅವಿದ್ಯಯಾ ಮಾಯಯಾ' ಎಂದು ಬರೆದಿದೆ ಎಂಬ ರತ್ನಪ್ರಭಾನ್ಯಾಯನಿರ್ಣಯವ್ಯಾಖ್ಯಾನಗಳಿಗೆ ಭಾಷ್ಯಾಧಾರವಿಲ್ಲವೆಂಬುದು ಸ್ಪಷ್ಟವಾಗಿದೆ. ೨-೧-೧೪ರ ಭಾಷ್ಯವನ್ನೂ ಹಿಂದೆ ೧-೨-೬ (ಭಾ ಭಾ. ೧೫೮)ನ್ನೂ ನೋಡಿ.

4. ವೇದಾಂತಮೀಮಾಂಸಾಶಾಸ್ತ್ರವನ್ನು ಎಂದರ್ಥ. ಶಾರೀರಕನ ಅಥವಾ ಜೀವನ ಪರಮಾರ್ಥಸ್ವರೂಪವನ್ನು ನಿರ್ಣಯಿಸುವದರಿಂದ ಈ ಶಾಸ್ತ್ರಕ್ಕೆ ಈ ಹೆಸರು ಬಂದಿದೆ.

ಎಂದು ಮುಂತಾಗಿರುವ ವಾಕ್ಯದಿಂದ ಸೂತ್ರಕಾರರು ಅಲ್ಲಗಳೆದಿರುವರಲ್ಲ, ಅಲ್ಲಿ ಈ ಅಭಿಪ್ರಾಯವಿದೆ[1]: ನಿತ್ಯಶುದ್ಧಬುದ್ಧಮುಕ್ತಸ್ವಭಾವದವನಾಗಿ ಕೂಟಸ್ಥನಿತ್ಯನಾಗಿರುವ ಏಕನಾದ ಅಸಂಗನಾದ ಪರಮಾತ್ಮನಲ್ಲಿ ಅದಕ್ಕೆ ವಿಪರೀತವಾಗಿರುವ[2] ಜೀವರೂಪವು- ಆಕಾಶದಲ್ಲಿ ತಳವು ಮಲಿನವಾಗಿರುವದೇ ಮುಂತಾದದ್ದು (ಕಲ್ಪಿತ)ವಾಗಿರುವಂತೆ ಪರಿಕಲ್ಪಿತವಾಗಿರುತ್ತದೆ. ಅದನ್ನು ಆತ್ಮೈಕತ್ವಪ್ರತಿಪಾದನದಲ್ಲಿ ತಾತ್ಪರ್ಯವುಳ್ಳ ವಾಕ್ಯಗಳಿಂದಲೂ ಯುಕ್ತಿಯುಕ್ತವಾದ ದ್ವೈತವಾದಖಂಡನೆಗಳಿಂದಲೂ ಪರಿಹರಿಸುವೆನು ಎಂದು (ಸಂಕಲ್ಪಿಸಿ) ಪರಮಾತ್ಮನು ಜೀವನಿಗಿಂತ ಬೇರೆ ಎಂಬುದನ್ನು ಗಟ್ಟಿಗೊಳಿಸುತ್ತಾರೆ. ಆದರೆ ಜೀವನು ಪರಮಾತ್ಮನಿಗಿಂತ ಬೇರೆ ಎಂಬುದನ್ನು ಪ್ರತಿಪಾದಿಸಬೇಕೆಂಬ ಅಭಿಪ್ರಾಯವೇನೂ (ಅವರಿ)ಗಿರುವದಿಲ್ಲ; ಮತ್ತೇನೆಂದರೆ ಅವಿದ್ಯಾಕಲ್ಪಿತವಾಗಿರುವ ಲೋಕಪ್ರಸಿದ್ಧವಾಗಿರುವ ಜೀವಭೇದವನ್ನೇ ಸುಮ್ಮನೆ ಅನುವಾದಮಾಡಿಕೊಂಡಿರುತ್ತಾರೆ[3]. ಹೀಗಾದರೆ ಸ್ವಾಭಾವಿಕವಾಗಿರುವ ಕರ್ತೃತ್ವಭೋಕ್ತೃತ್ವವನ್ನು ಅನುವಾದಮಾಡಿಕೊಂಡು ಪ್ರವೃತ್ತವಾಗಿರುವ ಕರ್ಮವಿಧಿಗಳು ವಿರುದ್ಧವಾಗದೆ ಇರುವವು[4] ಎಂದು (ಆತನ) ಮತವು. ಆದರೆ ತಾವು ಪ್ರತಿಪಾದಿಸಬೇಕೆಂದಿರುವ ಶಾಸ್ತ್ರಾರ್ಥವು ಆತ್ಮೈಕತ್ವವೇ ಎಂಬುದನ್ನು "ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್" (ಬ್ರ. ೧-೧-೩೦) ಎಂದು ಮುಂತಾಗಿರುವ (ಸೂತ್ರಗಳಿಂದ) ತಿಳಿಸಿರು

1. 'ಜೀವನು ದಹರಾಕಾಶವಲ್ಲ' ಎಂದು ಜೀವನನ್ನು ಸೂತ್ರದಲ್ಲಿ ಅಲ್ಲಗಳೆದಿರುವದರಿಂದ ಬ್ರಹ್ಮಕ್ಕಿಂತ ಬೇರೆಯಾಗಿ ಜೀವರೂ ಇರಬೇಕಲ್ಲವೆ?- ಎಂಬ ಶಂಕೆಗೆ ಇಲ್ಲಿ ಪರಿಹಾರವನ್ನು ಹೇಳಿದೆ. ಕಲ್ಪಿತಜೀವರೂಪವುಂಟು, ಪರಮಾರ್ಥವಾಗಿಲ್ಲ ಎಂಬುದು ಉತ್ತರದ ಸಾರ.

2. ಸಂಸಾರಬಂಧಕ್ಕೆ ಸಿಕ್ಕಿರುವ ಸಕ್ರಿಯನಾದ ಅನೇಕತ್ವವುಳ್ಳ ವಿಷಯಾದಿಸಂಗವುಳ್ಳ- ಎಂದರ್ಥ.

3. ಜೀವನನ್ನು ಅನುವಾದಮಾಡಿಕೊಂಡು ಪರಮಾತ್ಮಸ್ವರೂಪವನ್ನು ತಿಳಿಸುವದೇ ಸೂತ್ರಕಾರರ ಉದ್ದೇಶವು; ಆಕಾಶವು ನೀಲವಾಗಿದೆ ಎಂದು ಕಲ್ಪಿಸುವವರ ದೃಷ್ಟಿಯನ್ನು ಅವಲಂಬಿಸಿ 'ಈ ನೀಲವಾದ ಆಕಾಶವು ಪರಮಾರ್ಥವಾಗಿ ಯಾವ ಬಣ್ಣವೂ ಇಲ್ಲದ್ದು' ಎಂದು ಹೇಳುವವನ ವಾಕ್ಯದಂತೆಯೇ ಜೀವನಿಷೇಧವಾಕ್ಯಗಳನ್ನು ಗ್ರಹಿಸಬೇಕೆಂದು ಭಾವ. ೧-೩-೬ರ ಭಾ.ಭಾ. ೧೫ಲನ್ನು ನೋಡಿ.

4. ಕರ್ಮಕಾಂಡದ ವಾಕ್ಯಗಳಿಗೆ ಕರ್ಮವೆಂಬ ಪುರುಷಾರ್ಥೋಪಾಯವನ್ನು ಹೇಳುವದರಲ್ಲಿ ತಾತ್ಪರ್ಯವಿದೆ; ಅವು ಅನುವಾದಮಾಡಿಕೊಂಡಿರುವ ಜೀವನ ಕರ್ತೃತ್ವಭೋಕ್ತೃತ್ವವು ಸತ್ಯವೆಂಬುದರಲ್ಲಿ ತಾತ್ಪರ್ಯವಿಲ್ಲ. ಬೃ. ಭಾ. ೨-೧-೨೦.

ಶ್ರುತಿ. ಕರ್ಮವಿಧಿಗಳ ವಿರೋಧ(ವಾಗುವದೆಂಬುದಕ್ಕೆ) ಪರಿಹಾರವನ್ನು ನಾವು ಜ್ಞಾನಿಗಳು ಅಜ್ಞಾನಿಗಳು -ಎಂಬ ಭೇದವನ್ನು ಕಲ್ಪಿಸಿ ಹೇಳಿಯೂ ಇರುತ್ತೇವೆ[1].

**ಅನ್ಯಾರ್ಥಶ್ಚ ಪರಾಮರ್ಶಃ ॥ ೨೦ ॥**

೨೦. (ಜೀವ)ಪರಾಮರ್ಶವು ಮತ್ತೊಂದಕ್ಕಾಗಿ.

## ದಹರವಾಕ್ಯಶೇಷದಲ್ಲಿ ಜೀವಪರಾಮರ್ಶವೇಕೆ ?

(ಭಾಷ್ಯ)

೨೭೦. ಅಥ ಯೋ ದಹರವಾಕ್ಯಶೇಷೇ ಜೀವಪರಾಮರ್ಶೋ ದರ್ಶಿತಃ "ಅಥ ಯ ಏಷ ಸಂಪ್ರಸಾದಃ" (ಛಾಂ. ೮-೩-೪) ಇತ್ಯಾದಿಃ, ಸ ದಹರೇ ಪರಮೇಶ್ವರೇ ವ್ಯಾಖ್ಯಾಯಮಾನೇ ನ ಜೀವೋಪಾಸನೋಪದೇಶಃ, ನ ಪ್ರಕೃತವಿಶೇಷೋಪದೇಶಃ ಇತ್ಯನರ್ಥಕತ್ವಂ ಪ್ರಾಪ್ನೋತೀತಿ । ಅತ ಆಹ- ಅನ್ಯಾರ್ಥೋಽಯಂ ಜೀವಪರಾಮರ್ಶಃ ನ ಜೀವಸ್ವರೂಪಪರ್ಯವಸಾಯೀ, ಕಿಂ ತರ್ಹಿ ಪರಮೇಶ್ವರಸ್ವರೂಪಪರ್ಯವಸಾಯೀ । ಕಥಮ್ ? ಸಂಪ್ರಸಾದಶಬ್ದೋದಿತೋ ಜೀವೋ ಜಾಗರಿತವ್ಯವಹಾರೇ ದೇಹೇನ್ದ್ರಿಯಪಞ್ಜರಾಧ್ಯಕ್ಷೋ ಭೂತ್ವಾ ತದ್ವಾಸನಾನಿರ್ಮಿತಾಂಶ್ಚ ಸ್ವಪ್ನಾನ್ ನಾಡೀಚರೋಽನುಭೂಯ ಶ್ರಾನ್ತಃ ಶರಣಂ ಪ್ರೇಪ್ಸುಃ, ಉಭಯರೂಪಾದಪಿ ಶರೀರಾಭಿಮಾನಾತ್ ಸಮುತ್ಥಾಯ ಸುಷುಪ್ತಾವಸ್ಥಾಯಾಂ ಪರಂಜ್ಯೋತಿಃ ಆಕಾಶಶಬ್ದಿತಂ ಪರಂ ಬ್ರಹ್ಮ ಉಪಸಂಪದ್ಯ ವಿಶೇಷವಿಜ್ಞಾನವತ್ತ್ವಂ ಚ ಪರಿತ್ಯಜ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ । ಯದಸ್ಯ ಉಪಸಂಪತ್ತವ್ಯಂ ಪರಂ ಜ್ಯೋತಿಃ, ಯೇನ ಸ್ವೇನ ರೂಪೇಣ ಅಯಮ್ ಅಭಿನಿಷ್ಪದ್ಯತೇ, ಸ ಏಷ ಆತ್ಮಾ ಅಪಹತಪಾಪ್ಮತ್ವಾದಿಗುಣಃ ಉಪಾಸ್ಯಃ ಇತ್ಯೇವಮರ್ಥೋಽಯಂ ಜೀವಪರಾಮರ್ಶಃ ಪರಮೇಶ್ವರವಾದಿನೋಽಪಿ ಉಪಪದ್ಯತೇ ॥

(ಭಾಷ್ಯಾರ್ಥ)

ಇನ್ನು ದಹರವಾಕ್ಯಶೇಷದಲ್ಲಿ "ಇನ್ನು ಯಾವ ಈ ಸಂಪ್ರಸಾದನಿರುವನಲ್ಲ...." (ಛಾಂ. ೮-೩-೪) ಎಂದು ಮುಂತಾಗಿರುವ ಜೀವಪರಾಮರ್ಶವಿದೆಯಲ್ಲ, ಅದು ದಹರಾ(ಕಾಶವು) ಪರಮೇಶ್ವರನೆಂದು ವಿವರಿಸಿದರೆ ಜೀವನನ್ನು

1. ಅಧ್ಯಾಸಭಾಷ್ಯ, ಸಮನ್ವಯಸೂತ್ರಭಾಷ್ಯ- ಇವುಗಳಲ್ಲಿ.

ಉಪಾಸನೆಮಾಡಬೇಕೆಂದು ಹೇಳಿದ್ದೂ ಅಲ್ಲ,[1] ಪ್ರಕೃತ(ವಾಗಿರುವ ಪರಮೇಶ್ವರನ) ವಿಶೇಷವನ್ನು ಹೇಳಿದ್ದೂ ಅಲ್ಲ[2]. ಎಂದಾಗಿ ವ್ಯರ್ಥವಾಗುತ್ತದೆಯಲ್ಲ[3] ! ಎಂದರೆ ಅದಕ್ಕೆ ಹೇಳುತ್ತಾರೆ :

ಈ ಜೀವಪರಾಮರ್ಶವು ಮತ್ತೊಂದು ಪ್ರಯೋಜನಕ್ಕಾಗಿ ಹೇಳಿದ್ದು. (ಇದು) ಜೀವಸ್ವರೂಪದಲ್ಲಿಯೇ ಕೊನೆಗಾಣುವದಿಲ್ಲ,[4] ಮತ್ತೇನೆಂದರೆ ಪರಮೇಶ್ವರಸ್ವರೂಪದಲ್ಲಿ ಕೊನೆಗಾಣುತ್ತದೆ. ಹೇಗೆಂದರೆ : **ಸಂಪ್ರಸಾದ ಎಂಬ ಶಬ್ದದಿಂದ ಹೇಳಿರುವ ಜೀವನು ಎಚ್ಚರದ ವ್ಯವಹಾರದಲ್ಲಿ ದೇಹೇಂದ್ರಿಯಗಳ ಪಂಜರಕ್ಕೆ ಅಧ್ಯಕ್ಷನಾಗಿದ್ದು ಅದರ ವಾಸನೆಯಿಂದುಂಟಾಗಿರುವ ಕನಸುಗಳನ್ನು ನಾಡಿಗಳಲ್ಲಿ ಸಂಚರಿಸುತ್ತಾ ಅನುಭವಿಸಿ, ಆಯಾಸದಿಂದ, ( ಒಂದು ) ಸುಖಾವಾಸವನ್ನು ಪಡೆಯಬೇಕೆಂದು ಈ ಎರಡು ಬಗೆಯ ಶರೀರಾಭಿಮಾನವನ್ನು ಬಿಟ್ಟಿದ್ದು,[5] ಸುಷುಪ್ತಾವಸ್ಥೆಯಲ್ಲಿ ಆಕಾಶವೆಂಬ ಪರಂಜ್ಯೋತಿಯಾದ ಪರಬ್ರಹ್ಮವನ್ನು ಸೇರಿಕೊಂಡು, ವಿಶೇಷವಿಜ್ಞಾನಗಳನ್ನು ಬಿಟ್ಟು, ತನ್ನ ರೂಪದಿಂದ ಸಿದ್ಧನಾಗುತ್ತಾನೆ. (ಹೀಗೆ) ಇವನು ಸೇರಿಕೊಳ್ಳಬೇಕಾದ ಪರಂಜ್ಯೋತಿಯಾವದೋ, ಯಾವ ತನ್ನ ರೂಪದಿಂದ ಇವನು ಸಿದ್ಧನಾಗುತ್ತಾನೋ, ಆ ಈ ಆತ್ಮನನ್ನೇ ಅಪಹತಪಾಪ್ಮತ್ವಾದಿಗುಣಗಳುಳ್ಳವನೆಂದು ಉಪಾಸನೆಮಾಡಬೇಕು** ಎಂದು ಹೇಳುವದಕ್ಕಾಗಿ ಈ ಜೀವಪರಾಮರ್ಶವು (ಎಂದು) ಪರಮೇಶ್ವರವಾದಿಯ (ಪಕ್ಷದಲ್ಲಿಯೂ) ಹೊಂದುತ್ತದೆ.

---

1. ಏಕೆಂದರೆ ಅದು ಸಿದ್ಧಾಂತಿಗೆ ಇಷ್ಟವಲ್ಲ.

2. ಏಕೆಂದರೆ ಇದು ಜೀವಪರಾಮರ್ಶವೆಂದೇ ಸಿದ್ಧಾಂತಿಯು ಹೇಳುತ್ತಾನೆ. 'ಪ್ರಕೃತವಿಶೇಷವೆಂದರೆ ದಹರಾಕಾಶರೂಪನಾದ ಈಶ್ವರನ ಗುಣವು ಎಂದು ರತ್ನಪ್ರಭಾ ವ್ಯಾಖ್ಯಾನ; ಪ್ರಕೃತವಾದ ವಿಶೇಷವು, ದಹರಾಕಾಶವು ಎಂದು ನ್ಯಾಯನಿರ್ಣಯ ವ್ಯಾಖ್ಯಾನವು.

3. ಪರಮೇಶ್ವರನೆಂಬ ದಹರೋಪಾಸನೆಯ ವಾಕ್ಯದಲ್ಲಿ ಅಪ್ರಕೃತವಾಗಿ ಅನುಪಯುಕ್ತವಾದ ಜೀವಪರಾಮರ್ಶವನ್ನು ಮಾಡಿದಂತೆ ಆಗುವದರಿಂದ ವ್ಯರ್ಥವಾಗುತ್ತದೆ ಎಂದು ಭಾವ. ದಹರಾಕಾಶವು ಜೀವನಾದರೆ ಸಾರ್ಥಕವಾಗುತ್ತದೆ ಎಂದು ಭಾವ.

4. ಹಾಗಿದ್ದರೆ ವ್ಯರ್ಥವಾಗುತ್ತಿತ್ತು.

5. ಸ್ಥೂಲಸೂಕ್ಷ್ಮಶರೀರಾಭಿಮಾನವಲ್ಲದೆ ಮತ್ತೊಂದು ಶರೀರಾಭಿಮಾನವೂ ಇದೆ ಎಂಬುದು ಭಾಷ್ಯಸಮ್ಮತವಲ್ಲ.

**ಅಲ್ಪಶ್ರುತೇರಿತಿ ಚೇತ್ ತದುಕ್ತಮ್ ॥ ೨೧ ॥**

೨೧. ಅಲ್ಪಶ್ರುತಿಯಿಂದ (ಪರಮೇಶ್ವರನಲ್ಲ) ಎಂದರೆ ಅದನ್ನು ಹೇಳಿದ್ದಾಗಿದೆ.

## ಅಲ್ಪತ್ವಶ್ರುತಿಯು ಪರಮೇಶ್ವರನಿಗೂ ಹೊಂದುತ್ತದೆ

( ಭಾಷ್ಯ )

೨೭೧. ಯದಪ್ಯುಕ್ತಮ್— "ದಹರೋಽಸ್ಮಿನ್ನಂತರಾಕಾಶಃ" ಇತ್ಯಾಕಾಶಸ್ಯ ಅಲ್ಪತ್ವಂ ಶ್ರೂಯಮಾಣಂ ಪರಮೇಶ್ವರೇ ನೋಪಪದ್ಯತೇ । ಜೀವಸ್ಯ ತು ಆರಾಗ್ರೋಪಮಿತಸ್ಯ ಅಲ್ಪತ್ವಮ್ ಅವಕಲ್ಪತೇ ಇತಿ, ತಸ್ಯ ಪರಿಹಾರೋ ವಕ್ತವ್ಯಃ । ಉಕ್ತೋ ಹಿ ಅಸ್ಯ ಪರಿಹಾರಃ ಪರಮೇಶ್ವರಸ್ಯ ಆಪೇಕ್ಷಿಕಮಲ್ಪತ್ವಮ್ ಅವಕಲ್ಪತೇ ಇತಿ "ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ" (೧-೨-೭) ಇತ್ಯತ್ರ । ಸ ಏವೇಹ ಪರಿಹಾರೋಽನುಸಂಧಾತವ್ಯಃ ಇತಿ ಸೂಚಯತಿ । ಶ್ರುತ್ಯೈವ ಚ ಇದಮಲ್ಪತ್ವಂ ಪ್ರತ್ಯುಕ್ತಂ ಪ್ರಸಿದ್ಧೇನ ಆಕಾಶೇನ ಉಪಮಿಮಾನಯಾ "ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽನ್ತರ್ಹೃದಯ ಆಕಾಶಃ" (ಛಾಂ. ೮-೧-೩) ಇತಿ ॥

( ಭಾಷ್ಯಾರ್ಥ )

ಇನ್ನು "ಇದರೊಳಗಿರುವ ದಹರಾಕಾಶವು" ಎಂದು ಆಕಾಶವು ಅಲ್ಪವೆಂದು ಶ್ರುತಿಯಲ್ಲಿದೆಯಲ್ಲ, ( ಅದು ) ಪರಮೇಶ್ವರನಿಗೆ ಹೊಂದುವದಿಲ್ಲ- ದಬ್ಬಳದ ತುದಿಗೆ ಹೋಲಿಸಿರುವ ಜೀವನಿಗಾದರೆ ಅಲ್ಪತ್ವವು ಹೊಂದುತ್ತದೆ ಎಂದು (ಭಾ. ಭಾ. ೨೬೫) ಹೇಳಿತ್ತಲ್ಲ, ಅದಕ್ಕೆ ಪರಿಹಾರವನ್ನು ಹೇಳಬೇಕು. "ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ" ( ೧-೨-೭ ) ಎಂಬಲ್ಲಿ ಪರಮೇಶ್ವರನಿಗೂ ಆಪೇಕ್ಷಿಕವಾದ[1] ಅಲ್ಪತ್ವವು ಹೊಂದುತ್ತದೆ ಎಂದು ಇದಕ್ಕೆ ಪರಿಹಾರವನ್ನು ಹೇಳಿಯೇ ಇದೆ. ಅದೇ ಪರಿಹಾರವನ್ನೇ ಇಲ್ಲಿ ಮನದಂದುಕೊಳ್ಳಬೇಕು. ಮತ್ತು "ಈ ಆಕಾಶವು ಎಷ್ಟಿದೆಯೋ ಹೃದಯದೊಳಗೆ ಇರುವ ಈ ಆಕಾಶವೂ ಅಷ್ಟೇ"

1. ಉಪಾಧಿಯ ಅಪೇಕ್ಷೆಯಿಂದ.

(ಛಾಂ. ೮-೧-೩) ಎಂದು ಪ್ರಸಿದ್ಧವಾದ ಭೂತಾಕಾಶಕ್ಕೆ ಹೋಲಿಸುವದರಿಂದ ಶ್ರುತಿಯೇ ಈ ಅಲ್ಪತ್ವವನ್ನು ತಿರಸ್ಕರಿಸಿಯೂ ಇದೆ[1].

## ೬. ಅನುಕೃತ್ಯಧಿಕರಣ (೨೨-೨೩)

( ಮುಂಡಕ ೨-೨-೧೧ರಲ್ಲಿ ಹೇಳಿದ ಅನುಕರಣೀಯವಸ್ತು ಬ್ರಹ್ಮವೇ )

**ಅನುಕೃತೇಸ್ತಸ್ಯ ಚ ॥ ೨೨ ॥**

೨೨, ಅನುಕೃತಿಯಿಂದಲೂ ಅದರ (ಬೆಳಕಿನಿಂದ ಬೆಳಗುವದರಿಂದಲೂ ಪರಮಾತ್ಮನೇ ).

## ವಿಷಯವೂ ಸಂಶಯವೂ

( ಭಾಷ್ಯ )

೨೭೨. "ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ। ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥" (ಮುಂ. ೨-೨-೧೧)[2] ಇತಿ ಸಮಾಮನನ್ತಿ । ಯತ್ರ ಯಂ ಭಾನ್ತಮನುಭಾತಿ ಸರ್ವಂ ಯಸ್ಯ ಚ ಭಾಸಾ ಸರ್ವಮಿದಂ ವಿಭಾತಿ, ಸ ಕಿಂ ತೇಜೋಧಾತುಃ ಕಶ್ಚಿತ್, ಉತ ಪ್ರಾಜ್ಞ ಆತ್ಮಾ ಇತಿ ವಿಚಿಕಿತ್ಸಾಯಾಂ ತೇಜೋಧಾತುಃ ಇತಿ ತಾವತ್ ಪ್ರಾಪ್ತಮ್ । ಕುತಃ? ತೇಜೋಧಾತೂನಾಮೇವ ಸೂರ್ಯಾದೀನಾಂ ಭಾನಪ್ರತಿಷೇಧಾತ್ । ತೇಜಃಸ್ವಭಾವಕಂ ಸ ಚನ್ದ್ರತಾರಕಾದಿ ತೇಜಃಸ್ವಭಾವಕ ಏವ ಸೂರ್ಯೇ ಭಾಸಮಾನೇ ಅಹನಿ ನ ಭಾಸತೇ ಇತಿ ಪ್ರಸಿದ್ಧಮ್ । ತಥಾ ಸಹ ಸೂರ್ಯೇಣ ಸರ್ವಮಿದಂ ಚನ್ದ್ರತಾರಕಾದಿ ಯಸ್ಮಿನ್ ನ ಭಾಸತೇ ಸೋಽಪಿ ತೇಜಃಸ್ವಭಾವ ಏವ ಕಶ್ಚಿತ್ ಇತ್ಯವಗಮ್ಯತೇ । ಅನುಭಾನಮಪಿ ತೇಜಃಸ್ವಭಾವಕೇ ಏವ ಉಪಪದ್ಯತೇ । ಸಮಾನಸ್ವಭಾವಕೇಷು ಅನುಕಾರದರ್ಶನಾತ್ । ಗಚ್ಛನ್ತಮ್ ಅನುಗಚ್ಛತಿ ಇತಿವತ್। ತಸ್ಮಾತ್ ತೇಜೋಧಾತುಃ ಕಶ್ಚಿತ್ ಇತಿ ॥

---

1. ಸೂತ್ರದಲ್ಲಿರುವ ಉಕ್ತಮ್ ಎಂಬುದಕ್ಕೆ ಪ್ರತ್ಯುಕ್ತಮ್ ಎಂದು ಮತ್ತೊಂದು ಅರ್ಥವನ್ನು ಮಾಡಿರುತ್ತದೆ.

2. ಈ ಸಂಖ್ಯೆಯು ಈ ಗ್ರಂಥಾವಳಿಯ ಮುಂಡಕಪಾಠದ್ದು.

(ಭಾಷ್ಯಾರ್ಥ)

"ಅಲ್ಲಿ ಸೂರ್ಯನು ಬೆಳಗುವದಿಲ್ಲ, ಚಂದ್ರತಾರಕೆಗಳು ಬೆಳಗುವದಿಲ್ಲ, ಈ ಮಿಂಚುಗಳೂ ಬೆಳಗುವದಿಲ್ಲ. ಇನ್ನು ಈ ಬೆಂಕಿ (ಬೆಳಗುವ ಮಾತು) ಎಲ್ಲಿ? ಅವನು ಬೆಳಗುವದನ್ನೇ ಅನುಸರಿಸಿ ಎಲ್ಲವೂ ಬೆಳಗುತ್ತಿರುವದು; ಅವನ ಬೆಳಕಿನಿಂದಲೇ ಇದೆಲ್ಲವೂ ಬೆಳಗುತ್ತಿರುವದು" (ಮುಂ. ೨-೨-೧೧) ಎಂದು ಪಠಿಸುತ್ತಾರೆ. ಎಲ್ಲಿ ಯಾವದು ಬೆಳಗುವದನ್ನು ಅನುಸರಿಸಿ ಎಲ್ಲವೂ ಬೆಳಗುವದೋ. ಮತ್ತು ಯಾವದರ ಬೆಳಕಿನಿಂದ ಇದೆಲ್ಲ ಬೆಳಗುತ್ತಿರುವದೋ ಅದೇನು ಯಾವದೋ ಒಂದು ತೇಜೋಧಾತುವೆ, ಅಥವಾ ಪ್ರಾಜ್ಞಾತ್ಮನೆ ?[1]– ಎಂದು ಸಂಶಯವು ಬರಲಾಗಿ—

## ಪೂರ್ವಪಕ್ಷ: ತೇಜೋಧಾತುವನ್ನೇ ಇಲ್ಲಿ ಹೇಳಿದೆ

ತೇಜೋಧಾತು(ವಿದು) ಎಂದು ಮೊದಲು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆ? ಎಂದರೆ ತೇಜೋಧಾತುಗಳೇ ಆಗಿರುವ ಸೂರ್ಯಾದಿಗಳು (ಅಲ್ಲಿ) ಬೆಳಗುವದಿಲ್ಲ ಎಂದಿರುವದರಿಂದ ತೇಜಸ್ಸಿನ ಸ್ವಭಾವವುಳ್ಳ ಚಂದ್ರತಾರಕೆಗಳೇ ಮುಂತಾದದ್ದು, ತೇಜಃಸ್ವಭಾವವುಳ್ಳ ಸೂರ್ಯನು ಬೆಳಗುತ್ತಿರುವಲ್ಲಿ ಹಗಲು(ಹೊತ್ತಿನ)ಲ್ಲಿ ಬೆಳಗದೆ ಇರುತ್ತದೆ ಎಂಬುದು ಪ್ರಸಿದ್ಧವಾಗಿರುತ್ತದೆ. ಇದರಂತೆ ಸೂರ್ಯನಿಂದೊಡಗೂಡಿದ ಈ ಚಂದ್ರತಾರೆಗಳೇ ಮುಂತಾದದ್ದೆಲ್ಲವೂ ಯಾವದರಲ್ಲಿ ಬೆಳಗುವದಿಲ್ಲವೋ ಅದು ತೇಜಃಸ್ವಭಾವವುಳ್ಳ ಯಾವದೋ ಒಂದು (ವಸ್ತು) ಎಂದು ನಿಶ್ಚಯವಾಗುತ್ತದೆ. ಅನುಸರಿಸಿ ಬೆಳಗುವದೆಂಬುದೂ ತೇಜಸ್ಸಿನ ಸ್ವಭಾವದ (ವಸ್ತುವಿಗೇ) ಹೊಂದುತ್ತದೆ; ಏಕೆಂದರೆ ಒಂದೇ ಸ್ವಭಾವವುಳ್ಳ (ವಸ್ತುಗಳಲ್ಲಿಯೇ ಒಂದನ್ನೊಂದು) ಅನುಸರಿಸುವದು ಕಂಡಿರುತ್ತದೆ. ಹೋಗುತ್ತಿರುವವನನ್ನು ಅನುಸರಿಸಿ ಹೋಗುತ್ತಾನೆ– ಎಂಬಂತೆಯೇ (ಇದು). ಆದ್ದರಿಂದ (ಇದು) ಯಾವದೋ ಒಂದು ತೇಜೋಧಾತು.

## ಸಿದ್ಧಾಂತ: ಸೂರ್ಯಾದಿಗಳನ್ನು ಬೆಳಗುವದು ಬ್ರಹ್ಮವೇ

( ಭಾಷ್ಯ )

೨೭೩. ಏವಂ ಪ್ರಾಪ್ತೇ ಬ್ರೂಮಃ। ಪ್ರಾಜ್ಞ ಏವ ಆತ್ಮಾ ಭವಿತುಮರ್ಹತಿ। ಕಸ್ಮಾತ್? ಅನುಕೃತೇಃ। ಅನುಕರಣಮ್ ಅನುಕೃತಿಃ। ಯದೇತತ್ "ತಮೇವ ಭಾನ್ತಮನುಭಾತಿ ಸರ್ವಮ್" ಇತ್ಯನುಭಾನಮ್,

1. ಪ್ರಾಜ್ಞನೆಂದರೆ ಚಿನ್ಮಾತ್ರನಾಗಿರುವ ಪರಮೇಶ್ವರನು.

ತತ್ ಪ್ರಾಜ್ಞಪರಿಗ್ರಹೇ ಅವಕಲ್ಪತೇ । "ಭಾರೂಪಃ ಸತ್ಯಸಙ್ಕಲ್ಪಃ'' (ಛಾಂ. ೩-೧೪-೨) ಇತಿ ಹಿ ಪ್ರಾಜ್ಞಮಾತ್ಮಾನಮ್ ಆಮನನ್ತಿ । ನ ತು ತೇಜೋಧಾತುಂ ಕಂಚಿತ್ ಸೂರ್ಯಾದಯೋ ಅನುಭಾನ್ತಿ ಇತಿ ಪ್ರಸಿದ್ಧಮ್ । ಸಮತ್ವಾಚ್ಚ ತೇಜೋಧಾತೂನಾಂ ಸೂರ್ಯಾದೀನಾಂ ನ ತೇಜೋಧಾತುಮ್ ಅನ್ಯಂ ಪ್ರತಿ ಅಪೇಕ್ಷಾ ಅಸ್ತಿ ಯಂ ಭಾನ್ತಮ್ ಅನುಭಾಯುಃ । ನ ಹಿ ಪ್ರದೀಪಃ ಪ್ರದೀಪಾನ್ತರಮ್ ಅನುಭಾತಿ। ಯದಪ್ಯುಕ್ತಮ್ ಸಮಾನಸ್ವಭಾವಕೇಷು ಅನುಕಾರೋ ದೃಶ್ಯತೇ ಇತಿ । ನಾಯಮ್ ಏಕಾನ್ತೋ ನಿಯಮಃ । ಭಿನ್ನಸ್ವಭಾವಕೇಷ್ವಪಿ ಹಿ ಅನುಕಾರೋ ದೃಶ್ಯತೇ । ಯಥಾ ಸುತಪ್ತೋಽಯಃಪಿಣ್ಡಃ ಅಗ್ನ್ಯನುಕೃತಿಃ, ಅಗ್ನಿಂ ದಹನ್ತಮ್ ಅನುದಹತಿ ಭೌಮಂ ವಾ ರಜಃ, ವಾಯುಂ ವಹನ್ತಮ್ ಅನುವಹತಿ ಇತಿ । 'ಅನುಕೃತೇಃ ಇತಿ ಅನುಭಾನಮ್ ಅಸೂಸುಚತ್ । 'ತಸ್ಯ ಚ' ಇತಿ ಚತುರ್ಥಂ ಪಾದಮ್ ಅಸ್ಯ ಶ್ಲೋಕಸ್ಯ ಸೂಚಯತಿ । "ತಸ್ಯ ಭಾಸಾ ಸರ್ವಮಿದಂ ವಿಭಾತಿ'' ಇತಿ । ತದ್ಧೇತುಕಂ ಭಾನಂ ಸೂರ್ಯಾದೇಃ ಉಚ್ಯಮಾನಂ ಪ್ರಾಜ್ಞಮಾತ್ಮಾನಂ ಗಮಯತಿ । "ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಮ್" (ಬೃ. ೪-೪-೧೬) ಇತಿ ಹಿ ಪ್ರಾಜ್ಞಮಾತ್ಮಾನಮ್ ಆಮನನ್ತಿ । ತೇಜೋಽನ್ತರೇಣ ಸೂರ್ಯಾದಿತೇಜೋ ವಿಭಾತಿ ಇತಿ ಅಪ್ರಸಿದ್ಧಮ್ ವಿರುದ್ಧಂ ಚ । ತೇಜೋಽನ್ತರೇಣ ತೇಜೋಽನ್ತರಸ್ಯ ಪ್ರತಿಘಾತಾತ್ ॥

( ಭಾಷ್ಯಾರ್ಥ )

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ : ಇದು ಪ್ರಾಜ್ಞನಾದ ಆತ್ಮನೇ ಆಗಿರಬೇಕು. ಏಕೆ ? ಎಂದರೆ ಅನುಕೃತಿ (ಯಿರುವದ)ರಿಂದ. ಅನುಕೃತಿ ಎಂದರೆ ಅನುಸರಿಸುವದು. "ಅವನು ಬೆಳಗುವದನ್ನೇ ಅನುಸರಿಸಿ ಎಲ್ಲವೂ ಬೆಳಗುತ್ತದೆ'' ಎಂಬೀ ಅನುಸರಿಸಿ ಬೆಳಗುವದಿದೆಯಲ್ಲ, ಇದು ಪ್ರಾಜ್ಞನನ್ನು ತೆಗೆದುಕೊಂಡರೆ ಸರಿಹೋಗುತ್ತದೆ. "ಭಾರೂಪನು, ಸತ್ಯಸಂಕಲ್ಪನು" (ಛಾಂ. ೩-೧೪-೨) ಎಂದಲ್ಲವೆ, ಪ್ರಾಜ್ಞನಾದ ಆತ್ಮನನ್ನು (ಕುರಿತು) ಪಠಿಸುತ್ತಾರೆ? ಆದರೆ ತೇಜೋಧಾತು ಯಾವದನ್ನಾದರೂ ಸೂರ್ಯಾದಿಗಳು ಅನುಸರಿಸಿ ಬೆಳಗುತ್ತಾರೆ ಎಂದೇನೂ ಪ್ರಸಿದ್ಧವಾಗಿರುವದಿಲ್ಲ. ತೇಜೋಧಾತುಗಳಾದ ಸೂರ್ಯಾದಿಗಳು (ಒಂದೇ) ಸಮವಾಗಿರುವದರಿಂದ (ಅವಕ್ಕೆ) ಮತ್ತೊಂದು ತೇಜೋಧಾತುವಿನ ಬಯಕೆಯೇ ಇರುವದಿಲ್ಲ. (ಹಾಗಿದ್ದಿದ್ದರೆ) ಅದು ಬೆಳಗುವದನ್ನು ಅನುಸರಿಸಿ (ಅವು) ಬೆಳಗಬಹುದಾಗಿತ್ತು. ಒಂದು ದೊಡ್ಡ ದೀಪವು ಮತ್ತೊಂದು ದೊಡ್ಡ ದೀಪವನ್ನು ಅನುಸರಿಸಿ ಬೆಳಗುವದಿಲ್ಲವಷ್ಟೆ.

ಇನ್ನು ಒಂದೇ ಸ್ವಭಾವ(ದ ವಸ್ತು)ಗಳಲ್ಲಿಯೇ (ಒಂದನ್ನೊಂದು) ಅನುಕರಿಸುವದು ಕಂಡಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ ; ಇದೇನೂ ಗೊತ್ತಾದ ನಿಯಮವಲ್ಲ. ಏಕೆಂದರೆ ಬೇರೆ(ಬೇರೆಯ) ಸ್ವಭಾವದ (ವಸ್ತು) ಗಳಲ್ಲಿಯೂ ಅನುಕಾರ(ವಿರುವದು) ಕಂಡುಬರುತ್ತದೆ. ಹೇಗಂದರೆ, ಚೆನ್ನಾಗಿ ಕಾಯಿಸಿದ ಕಬ್ಬಿಣದ ತುಂಡು ಬೆಂಕಿಯನ್ನು ಅನುಕರಿಸುತ್ತದೆ, ಬೆಂಕಿಯು ಸುಡುವದನ್ನನುಸರಿಸಿ (ತಾನೂ) ಸುಡುತ್ತದೆ ; ಭೂಮಿಯ ಧೂಳು ಗಾಳಿಯು ಬೀಸುವದನ್ನನುಸರಿಸಿ (ತಾನೂ) ಬೀಸಿಕೊಂಡು ಹೋಗುತ್ತದೆ.

(ಸೂತ್ರದಲ್ಲಿ) 'ಅನುಕೃತೇಃ' ಎಂಬುದು ಬೆಳಗುವದನ್ನು ಸೂಚಿಸುತ್ತದೆ. 'ತಸ್ಯ ಚ' ಎಂಬುದು "ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂಬ ಈ ಶ್ಲೋಕದ ನಾಲ್ಕನೆಯ ಪಾದವನ್ನು ಸೂಚಿಸುತ್ತದೆ. ಅದರ ನಿಮಿತ್ತದಿಂದ ಸೂರ್ಯಾದಿಗಳು ಬೆಳಗುವವೆಂದು (ಇಲ್ಲಿ) ಹೇಳಿರುವದು ಪ್ರಾಜ್ಞನಾದ ಆತ್ಮನನ್ನೇ ತಿಳಿಸಿಕೊಡುತ್ತದೆ. "ಜ್ಯೋತಿಗಳಿಗೆಲ್ಲ ಜ್ಯೋತಿಯಾದ ಆ ಅಮೃತವನ್ನು ಆಯುಸ್ಸೆಂದು ದೇವತೆಗಳು ಉಪಾಸನೆಮಾಡುತ್ತಾರೆ" (ಬೃ. ೪-೪-೧೬) ಎಂದಲ್ಲವೆ, ಪ್ರಾಜ್ಞಾತ್ಮನನ್ನು (ಶ್ರುತಿಯಲ್ಲಿ) ಪಠಿಸುತ್ತಾರೆ ? ಸೂರ್ಯನೇ ಮುಂತಾದ ತೇಜಸ್ಸು ಮತ್ತೊಂದು ತೇಜಸ್ಸಿನಿಂದ ಬೆಳಗುತ್ತದೆ ಎಂಬುದು ಪ್ರಸಿದ್ಧವಲ್ಲ ; (ಅದು) ವಿರುದ್ಧವೂ ಆಗಿರುತ್ತದೆ, ಏಕೆಂದರೆ ಒಂದು ತೇಜಸ್ಸಿನಿಂದ ಇನ್ನೊಂದು ತೇಜಸ್ಸು ಮಂಕಾಗುತ್ತದೆ.

## ಎಲ್ಲವನ್ನೂ ಬೆಳಗಬಲ್ಲದ್ದು ಪ್ರಕೃತವಾದ ಬ್ರಹ್ಮವು ಮಾತ್ರ

(ಭಾಷ್ಯ)

೨೭೪. ಅಥವಾ ನ ಸೂರ್ಯಾದೀನಾಮೇವ ಶ್ಲೋಕಪರಿಪಠಿತಾನಾಮ್ ಇದಂ ತದ್ಧೇತುಕಂ ವಿಭಾನಮ್ ಉಚ್ಯತೇ । ಕಿಂ ತರ್ಹಿ, 'ಸರ್ವಮಿದಮ್' ಇತಿ ಅವಿಶೇಷಶ್ರುತೇಃ ಸರ್ವಸ್ಯೈವ ಅಸ್ಯ ನಾಮರೂಪಕ್ರಿಯಾಕಾರಕಫಲಜಾತಸ್ಯ ಯಾ ಅಭಿವ್ಯಕ್ತಿಃ ಸಾ ಬ್ರಹ್ಮಜ್ಯೋತಿಃಸತ್ತಾನಿಮಿತ್ತಾ । ಯಥಾ ಸೂರ್ಯಾದಿಜ್ಯೋತಿಃಸತ್ತಾನಿಮಿತ್ತಾ ಸರ್ವಸ್ಯ ರೂಪಜಾತಸ್ಯ ಅಭಿವ್ಯಕ್ತಿಃ, ತದ್ವತ್ । "ನ ತತ್ರ ಸೂರ್ಯೋ ಭಾತಿ" ಇತಿ ಚ ತತ್ರಶಬ್ದಮಾಹರನ್ ಪ್ರಕೃತಗ್ರಹಣಂ ದರ್ಶಯತಿ । ಪ್ರಕೃತಂ ಚ ಬ್ರಹ್ಮ "ಯಸ್ಮಿನ್ ದ್ಯೌಃ ಪೃಥಿವೀ ಚಾನ್ತರಿಕ್ಷಮೋತಮ್" (ಮುಂ. ೨-೨-೫) ಇತ್ಯಾದಿನಾ । ಅನನ್ತರಂ ಚ "ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ । ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ" (ಮುಂ. ೨-೨-೧೦)

ಇತಿ । ಕಥಂ ಶಜ್ಜ್ಯೋತಿಷಾಂ ಜ್ಯೋತಿಃ ? ಇತ್ಯತಃ ಇದಮುತ್ಥಿತಮ್ "ನ ತತ್ರ ಸೂರ್ಯೋ ಭಾತಿ" ಇತಿ । ಯದಪ್ಯುಕ್ತಮ್– ಸೂರ್ಯಾದೀನಾಂ ತೇಜಸಾಂ ಭಾನಪ್ರತಿಷೇಧಃ ತೇಜೋಧಾತಾವೇವ ಅನ್ಯಸ್ಮಿನ್ ಅವಕಲ್ಪತೇ ಸೂರ್ಯ ಇವ ಇತರೇಷಾಮ್ ಇತಿ । ತತ್ರ ತು ಸ ಏವ ತೇಜೋಧಾತು ರನ್ಯೋ ನ ಸಂಭವತಿ ಇತಿ ಉಪಪಾದಿತಮ್ | ಬ್ರಹ್ಮಣ್ಯಪಿ ಚ ಏಷಾಂ ಭಾನಪ್ರತಿಷೇಧಃ ಅವಕಲ್ಪತೇ । ಯತಃ ಯತ್ ಉಪಲಭ್ಯತೇ ತತ್ ಸರ್ವಂ ಬ್ರಹ್ಮಣೈವ ಜ್ಯೋತಿಷಾ ಉಪಲಭ್ಯತೇ | ಬ್ರಹ್ಮ ತು ನಾನ್ಯೇನ ಜ್ಯೋತಿಷಾ ಉಪಲಭ್ಯತೇ ಸ್ವಯಂಜ್ಯೋತಿಃಸ್ವರೂಪತ್ವಾತ್, ಯೇನ ಸೂರ್ಯಾದಯ ಸ್ತಸ್ಮಿನ್ ಭಾಯುಃ । ಬ್ರಹ್ಮ ಹಿ ಅನ್ಯದ್ ವ್ಯನಕ್ತಿ ನ ತು ಬ್ರಹ್ಮ ಅನ್ಯೇನ ವ್ಯಜ್ಯತೇ | "ಆತ್ಮನೈವಾಯಂ ಜ್ಯೋತಿಷಾ ಆಸ್ತೇ" (ಬೃ. ೪-೩-೬), "ಅಗೃಹ್ಯೋ ನ ಹಿ ಗೃಹ್ಯತೇ" (ಬೃ. ೪-೨-೪) ಇತ್ಯಾದಿಶ್ರುತಿಭ್ಯಃ ॥

(ಭಾಷ್ಯಾರ್ಥ)

ಅಥವಾ ಶ್ಲೋಕದಲ್ಲಿ (ಹೆಸರಿಟ್ಟು)ಹೇಳಿರುವ ಸೂರ್ಯಾದಿಗಳು ಮಾತ್ರವೇ ಅದರ ನಿಮಿತ್ತದಿಂದ ಈ ಬೆಳಗುವಿಕೆ(ಯಾಗುವದೆಂದು ಇಲ್ಲಿ) ಹೇಳಿಲ್ಲ ; ಮತ್ತೇನೆಂದರೆ, 'ಇದೆಲ್ಲವೂ' ಎಂದು ಅವಿಶೇಷವಾಗಿ ಹೇಳಿರುವದ ರಿಂದ[1] ನಾಮ, ರೂಪ, ಕ್ರಿಯಾ, ಕಾರಕ, ಫಲ- ಇವುಗಳ ಸಮೂಹವೆಲ್ಲ ತೋರಿಕೊಳ್ಳುವದಿದೆಯಲ್ಲ, ಅದು ಬ್ರಹ್ಮವೆಂಬ ಬೆಳಕಿನ ಇರವಿನ ನಿಮಿತ್ತ ವಾದದ್ದು (ಎಂದು ಹೇಳಿದೆ). ಹೇಗೆ ಸೂರ್ಯನೇ ಮುಂತಾದ ಜ್ಯೋತಿಯ ಇರವಿನ ನಿಮಿತ್ತವಾಗಿ ರೂಪಸಮೂಹವೆಲ್ಲವೂ ತೋರಿಕೊಳ್ಳುವದೋ ಹಾಗೆ ಯೇ (ಇದನ್ನು ತಿಳಿಯಬೇಕು).

ಮತ್ತು "ಅಲ್ಲಿ ಸೂರ್ಯನು ಬೆಳಗುವದಿಲ್ಲ" ಎಂದು 'ತತ್ರ' (ಅಲ್ಲಿ) ಎಂಬ ಶಬ್ದವನ್ನು ತೆಗೆದುಕೊಂಡಿರುವದರಿಂದ ಪ್ರಕೃತವಾದದ್ದನ್ನೇ ತೆಗೆದುಕೊಳ್ಳ ಬೇಕೆಂದು ತಿಳಿಸಿರುತ್ತದೆ. "ಯಾವದರಲ್ಲಿ ದ್ಯುಲೋಕವೂ ಪೃಥಿವಿಯೂ ಅಂತರಿಕ್ಷವೂ ಓತವಾಗಿರುವದೋ" (ಮುಂ. ೨-೨-೫) ಮುಂತಾದ (ವಾಕ್ಯ ದಲ್ಲಿ) ಬ್ರಹ್ಮವೇ ಪ್ರಕೃತವಾಗಿರುತ್ತದೆ[2]. ಮತ್ತು (ಇದಕ್ಕೆ) ಹಿಂದಿನ (ವಾಕ್ಯ

1. 'ಇದೆಲ್ಲವನ್ನೂ' ಎಂಬ ಸಾಮಾನ್ಯವಾಚಕಶಬ್ದವನ್ನು ಬೆಳಕುಗಳೆಲ್ಲವನ್ನೂ ಎಂಬರ್ಥದಲ್ಲಿ ಸಂಕೋಚಪಡಿಸುವದಕ್ಕೆ ಕಾರಣವಿಲ್ಲವೆಂದು ಭಾವ.

2. ತೇಜೋಧಾತುವೇನೂ ಪ್ರಕೃತವಾಗಿಲ್ಲ. ಪ್ರಕೃತವಾಗಿರುವ ಬ್ರಹ್ಮವನ್ನು ಬಿಟ್ಟು ಅಪ್ರಕೃತವಾಗಿರುವ ತೇಜೋಧಾತುವನ್ನು ತಿಳಿಸಲು ಪ್ರಾರಂಭಿಸಿದೆ ಎಂಬುದು ಸರಿಯಲ್ಲ.

ದಲ್ಲಿಯೇ) "ಹಿರಣ್ಮಯವಾದ ಹೆಚ್ಚಿನ ಕೋಶದಲ್ಲಿ ರಜಸ್ಸಿಲ್ಲದ ನಿಷ್ಕಲವಾದ ಬ್ರಹ್ಮವು (ಇರುವದು). ಅದು ಶುಭ್ರವಾಗಿರುವದು, ಜ್ಯೋತಿಗಳಿಗೆಲ್ಲ ಜ್ಯೋತಿಯಾಗಿರುವದು, ಯಾವ ಅದನ್ನು ಆತ್ಮವಿದರು ಬಲ್ಲರು'' (ಮುಂ. ೨-೨-೧೦) ಎಂದು (ಪ್ರಕೃತವಾಗಿದೆ). ಅದು ಜ್ಯೋತಿಗಳಿಗೆಲ್ಲ ಜ್ಯೋತಿ ಎಂಬುದು ಹೇಗೆ? ಎಂಬ (ಆಕಾಂಕ್ಷೆಯುಂಟಾಗಲಾಗಿ) ಅದಕ್ಕೆ ಈ ''ಅಲ್ಲಿ ಸೂರ್ಯನು ಬೆಳಗುವದಿಲ್ಲ'' ಎಂಬ ವಾಕ್ಯವು ಎದ್ದುಕೊಂಡಿದೆ[1].

ಇನ್ನು ಸೂರ್ಯಾದಿತೇಜಸ್ಸುಗಳು (ಅಲ್ಲಿ) ಬೆಳಗುವದಿಲ್ಲವೆಂಬುದು ಮತ್ತೊಂದು ತೇಜೋಧಾತುವಿನ (ವಿಷಯ)ದಲ್ಲಿಯೇ ಹೊಂದುತ್ತದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅಲ್ಲಿಯಾದರೆ ಅಂಥ ಮತ್ತೊಂದು ತೇಜೋಧಾತುವೇ ಇರುವಹಾಗಿಲ್ಲ ಎಂದು ತೋರಿಸಿಕೊಟ್ಟದ್ದಾಗಿದೆ[2]. ಬ್ರಹ್ಮದ (ವಿಷಯದಲ್ಲಿಯೂ) ಈ (ಸೂರ್ಯಾದಿಗಳು) ಬೆಳಗುವದಿಲ್ಲವೆಂದು ಹೇಳುವದು ಯುಕ್ತವಾಗಿದೆ. ಏಕೆಂದರೆ **ಯಾವ(ಯಾವದು) ತೋರುತ್ತದೆಯೋ ಅದೆಲ್ಲ ಬ್ರಹ್ಮವೆಂಬ ಜ್ಯೋತಿಯಿಂದಲೇ ತೋರಿಬರುತ್ತದೆ; ಆದರೆ ಬ್ರಹ್ಮವು ಮತ್ತೊಂದು ಜ್ಯೋತಿಯಿಂದ ತೋರುವದಿಲ್ಲ. ಏಕೆಂದರೆ ಅದು ಸ್ವಯಂಜ್ಯೋತಿಃಸ್ವರೂಪವಾಗಿರುತ್ತದೆ**. ಹಾಗೆ (ಅದು ಮತ್ತೊಂದರಿಂದ ತೋರಬಲ್ಲದ್ದಾಗಿದ್ದಾ)ಗಿದ್ದರೆ ಸೂರ್ಯಾದಿಗಳು ಅದರ (ವಿಷಯದಲ್ಲಿ) ಬೆಳಗಬಹುದಾಗಿತ್ತು[3]. ಬ್ರಹ್ಮವೇ ಮತ್ತೊಂದನ್ನು ವ್ಯಕ್ತಗೊಳಿಸುವದೇ ಹೊರತು ಬ್ರಹ್ಮವು ಮತ್ತೊಂದರಿಂದ ವ್ಯಕ್ತವಾಗುವದಿಲ್ಲ. ''ಆತ್ಮನೆಂಬ ಜ್ಯೋತಿಯಿಂದಲೇ ಇವನು ಕುಳಿತಿರುತ್ತಾನೆ'' (ಬೃ. ೪-೩-೬), ''ಅಗೃಹ್ಯನು, ಏಕೆಂದರೆ (ಮತ್ತೊಂದರಿಂದ) ಗ್ರಹಣವಾಗುವದಿಲ್ಲ'' (ಬೃ.೪-೨-೪) ಎಂಬಿವೇ ಮುಂತಾದ ಶ್ರುತಿಗಳಿಂದ ಇದು ಸಿದ್ಧವಾಗುತ್ತದೆ.

---

1. ಹಿಂದಿನ ಮಂತ್ರದಲ್ಲಿ ಬ್ರಹ್ಮದ ವಿಷಯದ ಆಕಾಂಕ್ಷೆಯಿರುವದರಿಂದ ಅದನ್ನು ಪೂರ್ತಿಗೊಳಿಸುವ ಈ ವಾಕ್ಯವೂ ಬ್ರಹ್ಮರೂಪವೇ ಆಗಿರಬೇಕೆಂದು ನಿಶ್ಚಯವಾಗುತ್ತದೆ.

2. ಅಂಥ ತೇಜೋಧಾತುವಿದ್ದರಲ್ಲವೆ, ಇದು ತೇಜೋಧಾತುವೊ, ಬ್ರಹ್ಮವೊ ?– ಎಂಬ ಸಂಶಯವಾದರೂ ಬರುತ್ತಿತ್ತು? ಆದರೆ ಅದೇ ಪ್ರಕೃತದಲ್ಲಿಲ್ಲ.

3. ಅಲ್ಲಿ ಸೂರ್ಯಾದಿಗಳು ಬೆಳಗುವದಿಲ್ಲವೆಂದರೆ ಬ್ರಹ್ಮವನ್ನು ತೋರಿಸಿಕೊಡಲಾರವು ಎಂದೇ ಅರ್ಥ, ಬ್ರಹ್ಮವಿರುವಲ್ಲಿ ಬೆಳಗುವದಿಲ್ಲ ಎಂದರ್ಥವಲ್ಲ. ಅಲ್ಲಿ ಎಂಬುದು ವಿಷಯಸಪ್ತಮಿ.

**ಅಪಿ ಚ ಸ್ಮರ್ಯತೇ ॥ ೨೩ ॥**

೨೩. ಇದಲ್ಲದೆ ಸ್ಮೃತಿಯಲ್ಲಿಯೂ ಹೇಳಿದೆ.

## ಸ್ಮೃತಿಯಲ್ಲಿಯೂ ಈ ರೂಪವು ವರ್ಣಿತವಾಗಿರುತ್ತದೆ

( ಭಾಷ್ಯ )

೨೭೫. ಅಪಿ ಚ ಈದೃಗ್ರೂಪತ್ವಂ ಪ್ರಾಜ್ಞಸ್ಯೈವ ಆತ್ಮನಃ ಸ್ಮರ್ಯತೇ ಭಗವದ್ಗೀತಾಸು "ನ ತದ್ಭಾಸಯತೇ ಸೂರ್ಯೋ ನ ಶಶಾಙ್ಕೋ ನ ಪಾವಕಃ। ಯದ್ ಗತ್ವಾ ನ ನಿವರ್ತನ್ತೇ ತದ್ ಧಾಮ ಪರಮಂ ಮಮ" (ಗೀ. ೧೫-೬) ಇತಿ। "ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ | ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್" (ಗೀ. ೧೫-೧೨) ಇತಿ ಚ ॥

( ಭಾಷ್ಯಾರ್ಥ )

ಇದಲ್ಲದೆ ಪ್ರಾಜ್ಞನಾದ ಆತ್ಮನಿಗೇ ಇಂಥ ರೂಪವನ್ನು **ಭಗವದ್ಗೀತೆಗಳಲ್ಲಿ**[1] "ಅದನ್ನು ಸೂರ್ಯನು ಬೆಳಗುವದಿಲ್ಲ, ಶಶಾಂಕನೂ (ಬೆಳಗುವ)ದಿಲ್ಲ. ಪಾವಕನೂ (ಬೆಳಗುವ)ದಿಲ್ಲ. ಯಾವ ಸ್ಥಾನವನ್ನು ಸೇರಿದರೆ ಹಿಂತಿರಳುವದಿಲ್ಲವೋ ಅದೇ ನನ್ನ ಪರಮಸ್ಥಾನವು" (ಗೀ. ೧೫-೬) ಎಂದೂ "ಆದಿತ್ಯನಲ್ಲಿರುವ ಯಾವ ತೇಜಸ್ಸು ಜಗತ್ತೆಲ್ಲವನ್ನೂ ಬೆಳಗುತ್ತಿರುವದೋ, ಯಾವದು ಚಂದ್ರನಲ್ಲಿಯೂ ಮತ್ತು ಯಾವದು ಅಗ್ನಿಯಲ್ಲಿಯೂ (ಇರುವದೋ) ಆ ತೇಜಸ್ಸನ್ನು ನನ್ನದೆಂದು ತಿಳಿ" (ಗೀ. ೧೫-೧೨) ಎಂದೂ ಸ್ಮರಿಸಿರುತ್ತದೆ.

## ೭. ಪ್ರಮಿತಾಧಿಕರಣ (೨೪-೨೫)

(ಕಠ ೨-೪-೧೩ರಲ್ಲಿರುವ ಅಂಗುಷ್ಠಮಾತ್ರಪುರುಷನು ಪರಮಾತ್ಮನೇ)

**ಶಬ್ದಾದೇವ ಪ್ರಮಿತಃ ॥ ೨೪ ॥**

೨೪. ಶಬ್ದ(ಪ್ರಮಾಣ)ದಿಂದಲೇ (ಅಂಗುಷ್ಠದ) ಅಳತೆಯವನು (ಪರಮಾತ್ಮನು).

---

1. ಭಗವದ್ಗೀತೆಯಲ್ಲಿರುವ ಶ್ಲೋಕಗಳಿಗೆ ಗೀತೆಗಳೆಂದು ಹೆಸರು. ಅದ್ದರಿಂದ ಈ ಗ್ರಂಥವನ್ನು ಬಹುವಚನದಿಂದ ಆಚಾರ್ಯರು ಕರೆಯುತ್ತಾರೆ.

## ವಿಷಯವೂ ಸಂಶಯವೂ

( ಭಾಷ್ಯ )

೨೭೬. "ಅಙ್ಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ" (ಕ. ೨-೧-೧೨)ಇತಿ ಶ್ರೂಯತೇ | ತಥಾ "ಅಙ್ಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ| ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವ ಏತದ್ವೈ ತತ್" (ಕ. ೨-೧-೧೩) ಇತಿ ಚ ತತ್ರ ಯೋಽಯಮ್ ಅಙ್ಗುಷ್ಠಮಾತ್ರಃ ಪುರುಷಃ ಶ್ರೂಯತೇ. ಸ ಕಿಂ ವಿಜ್ಞಾನಾತ್ಮಾ ಕಿಂ ವಾ ಪರಮಾತ್ಮಾ ಇತಿ ಸಂಶಯಃ ||

( ಭಾಷ್ಯಾರ್ಥ )

"ಅಂಗುಷ್ಠಮಾತ್ರನಾದ ಪುರುಷನು ಆತ್ಮದ ಮಧ್ಯದಲ್ಲಿರುವನು" (ಕ. ೨-೧-೧೨) ಎಂದೂ, ಹಾಗೂ "ಅಂಗುಷ್ಠಮಾತ್ರನಾದ ಪುರುಷನು ಹೊಗೆಯಿಲ್ಲದ ಜ್ಯೋತಿಯಂತೆ (ಇರುವನು); ಭೂತಭವ್ಯಕ್ಕೆ ಒಡೆಯನು, ಅವನೇ ಇಂದಿಗೂ, ಅವನೇ ನಾಳೆಗೂ, ಇದೇ ಅದು." (ಕ. ೨-೧-೧೩) ಎಂದು ಶ್ರುತಿಯಲ್ಲಿದೆ. ಅಲ್ಲಿ ಈ ಅಂಗುಷ್ಠಮಾತ್ರಪುರುಷನೆಂದು ಶ್ರುತಿಯಲ್ಲಿ ಹೇಳಿದೆಯಲ್ಲ, ಇವನೇನು ವಿಜ್ಞಾನಾತ್ಮನೆ, ಅಥವಾ ಪರಮಾತ್ಮನೆ ?– ಎಂದು ಸಂಶಯವು.

## ಪೂರ್ವಪಕ್ಷ: ಅಂಗುಷ್ಠಮಾತ್ರನು ವಿಜ್ಞಾನಾತ್ಮನೇ

( ಭಾಷ್ಯ )

೨೭೭. ತತ್ರ ಪರಿಮಾಣೋಪದೇಶಾತ್ ತಾವದ್ ವಿಜ್ಞಾನಾತ್ಮಾ ಇತಿ ಪ್ರಾಪ್ತಮ್ | ನ ಹಿ ಅನನ್ತಾಯಾಮವಿಸ್ತಾರಸ್ಯ ಪರಮಾತ್ಮನಃ ಅಙ್ಗುಷ್ಠಪರಿಮಾಣಮ್ ಉಪಪದ್ಯತೇ । ವಿಜ್ಞಾನಾತ್ಮನಸ್ತು ಉಪಾಧಿಮತ್ತ್ವಾತ್ ಸಂಭವತಿ ಕಯಾಚಿತ್ ಕಲ್ಪನಯಾ ಅಙ್ಗುಷ್ಠಮಾತ್ರತ್ವಮ್| ಸ್ಮೃತೇಶ್ಚ "ಅಥ ಸತ್ಯವತಃ ಕಾಯಾತ್ ಪಾಶಬದ್ಧಂ ವಶಂ ಗತಮ್ | ಅಙ್ಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್ ॥ (ವನ. ೨೯೭-೧೭) ಇತಿ | ನ ಹಿ ಪರಮೇಶ್ವರೋ ಬಲಾದ್ ಯಮೇನ ನಿಷ್ಕ್ರಷ್ಟುಂ ಶಕ್ಯಃ । ತೇನ ತತ್ರ ಸಂಸಾರೀ ಅಙ್ಗುಷ್ಠಮಾತ್ರೋ ನಿಶ್ಚಿತಃ । ಸ ಏವ ಇಹಾಪಿ ಇತಿ ||

( ಭಾಷ್ಯಾರ್ಥ )

ಇಲ್ಲಿ ಪರಿಮಾಣವನ್ನು ಹೇಳಿರುವದರಿಂದ (ಇವನು) ವಿಜ್ಞಾನಾತ್ಮನೇ ಎಂದು ಮೊದಲು ಬಂದೊದಗುತ್ತದೆ. ಅನಂತವಾದ ಉದ್ದಗಲವುಳ್ಳ ಪರ

ಮಾತ್ರನಿಗೆ ಹೆಬ್ಬೆರಳಿನ ಪರಿಮಾಣವು ಹೊಂದುವಹಾಗೆಯೇ ಇಲ್ಲ. ವಿಜ್ಞಾನಾತ್ಮನಿಗಾದರೆ ಉಪಾಧಿಯಿರುವದರಿಂದ ಯಾವದಾದರೊಂದು ಕಲ್ಪನೆಯಿಂದ ಹೆಬ್ಬೆರಳಿನ ಗಾತ್ರದವನು ಎಂದು (ಹೇಳುವದಕ್ಕೆ) ಆಗುತ್ತದೆ. "ಬಳಿಕ ಸತ್ಯವಂತನ ಶರೀರದಿಂದ ಅಂಗುಷ್ಠಮಾತ್ರನಾದ ಪುರುಷನನ್ನು ಪಾಶದಿಂದ ಬಿಗಿದು ವಶಪಡಿಸಿಕೊಂಡು ಯಮನು ಬಲಾತ್ಕಾರದಿಂದ ಎಳೆದನು" (ವನ. ೨೯೭-೧೭) ಎಂಬ ಸ್ಮೃತಿ(ವಾಕ್ಯ)ದಿಂದಲೂ (ಇವನು ಜೀವನೇ ಆಗುತ್ತಾನೆ.) ಏಕೆಂದರೆ ಪರಮೇಶ್ವರನನ್ನು ಯಮನು ಬಲಾತ್ಕಾರದಿಂದ ಎಳೆಯುವದಕ್ಕೆ ಆಗುವಹಾಗಿಲ್ಲ; ಆದ್ದರಿಂದ ಅಲ್ಲಿ ಸಂಸಾರಿಯೇ ಅಂಗುಷ್ಠಮಾತ್ರನು ಎಂದು ನಿಶ್ಚಯವಾಗುತ್ತದೆ. ಅವನೇ ಇಲ್ಲಿಯೂ (ಆಗಿರಬೇಕು).

## ಸಿದ್ಧಾಂತ: ಅಂಗುಷ್ಠಮಾತ್ರನು ಪರಮಾತ್ಮನೇ

(ಭಾಷ್ಯ)

೨೭೮. ಏವಂ ಪ್ರಾಪ್ತೇ ಬ್ರೂಮಃ । ಪರಮಾತ್ಮೈವ ಅಯಮ್ ಅಙ್ಗುಷ್ಠಮಾತ್ರಪರಿಮಿತಃ ಪುರುಷೋ ಭವಿತುಮರ್ಹತಿ । ಕಸ್ಮಾತ್ ? ಶಬ್ದಾತ್ । "ಈಶಾನೋ ಭೂತಭವ್ಯಸ್ಯ" ಇತಿ । ನ ಹಿ ಅನ್ಯಃ ಪರಮೇಶ್ವರಾತ್ ಭೂತಭವ್ಯಸ್ಯ ನಿರಙ್ಕುಶಮ್ ಈಶಿತಾ । "ಏತದ್ವೈ ತತ್" ಇತಿ ಚ ಪ್ರಕೃತಂ ಪೃಷ್ಟಮ್ ಇಹ ಅನುಸಂದಧಾತಿ । ಏತದ್ವೈ ತತ್ ಯತ್ ಪೃಷ್ಟಂ ಬ್ರಹ್ಮ ಇತ್ಯರ್ಥಃ। ಪೃಷ್ಟಂ ಚ ಇಹ ಬ್ರಹ್ಮ- "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್‌ತತ್ ಪಶ್ಯಸಿ ತದ್ವದ" (ಕ. ೧-೨-೧೪) ಇತಿ । ಶಬ್ದಾದೇವ ಇತಿ । ಅಭಿಧಾನಶ್ರುತೇರೇವ 'ಈಶಾನಃ' ಇತಿ ಪರಮೇಶ್ವರೋಽಯಂ ಗಮ್ಯತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಈ ಹೆಬ್ಬೆರಳಿನ ಗಾತ್ರದ ಪುರುಷನು ಪರಮಾತ್ಮನೇ ಆಗಿರಬೇಕು. ಏಕೆ ? ಎಂದರೆ "ಭೂತಭವ್ಯಕ್ಕೆ ಒಡೆಯನು" ಎಂದು ಶಬ್ದವಿರುವದರಿಂದ. ಪರಮೇಶ್ವರನಿಗಿಂತ ಬೇರೆ (ಯಾವನೂ) ಭೂತಭವ್ಯವನ್ನು ನಿರಂಕುಶವಾಗಿ ಆಳುವವನು (ಇರುವದೇ) ಇಲ್ಲ. ಇದಲ್ಲದೆ "ಏತದ್ವೈ ತತ್" (ಇದೇ ಅದು) ಎಂದು (ನಚಿಕೇತನು) ಕೇಳಿರುವ ಪ್ರಕೃತವಾದ (ವಸ್ತುವನ್ನು) ಯಮನು ಪರಾಮರ್ಶಮಾಡಿರುತ್ತಾನೆ. (ನೀನು) ಕೇಳಿದ ಬ್ರಹ್ಮವಿದೆಯಲ್ಲ, ಇದೇ ಅದು ಎಂದರ್ಥ. "ಧರ್ಮಕ್ಕಿಂತ ಬೇರೆಯಾಗಿ ಅಧರ್ಮಕ್ಕಿಂತ ಬೇರೆಯಾಗಿ, ಈ

ಕೃತಾಕೃತಕ್ಕಿಂತ ಬೇರೆಯಾಗಿ, ಭೂತಕ್ಕಿಂತಲೂ ಭವ್ಯಕ್ಕಿಂತಲೂ ಬೇರೆಯಾಗಿ (ಇರುವ) ಯಾವದನ್ನು ನೀನು ಕಂಡಿರುವೆಯೋ ಅದನ್ನು ಹೇಳು" (ಕ. ೧–೨–೧೪) ಎಂದು ಇಲ್ಲಿ ಬ್ರಹ್ಮವನ್ನು ಕೇಳಿಯೂ ಇರುತ್ತದೆ. 'ಶಬ್ದದಿಂದಲೇ' ಎಂದು (ಸೂತ್ರದಲ್ಲಿರುವ ಮಾತಿಗೆ) ಈಶಾನನೆಂಬ ಅಭಿಧಾನಶ್ರುತಿಯಿಂದಲೇ[1] ಇವನು ಪರಮೇಶ್ವರನೆಂದು ನಿಶ್ಚಯವಾಗುತ್ತದೆ ಎಂದರ್ಥ.

**ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ॥ ೨೫ ॥**

೨೫. ಹೃದಯದಲ್ಲಿ(ರುವದರ) ಅಪೇಕ್ಷೆಯಿಂದಲೇ (ಈ ಪರಿಮಾಣವನ್ನು ಹೇಳಿದೆ.) ಏಕೆಂದರೆ (ಶಾಸ್ತ್ರವು) ಮನುಷ್ಯಾಧಿಕಾರವುಳ್ಳದ್ದು.

## ಪರಮಾತ್ಮನಿಗೆ ಅಂಗುಷ್ಠಪರಿಮಾಣವು ಹೇಗೆ?

(ಭಾಷ್ಯ)

೨೭೯. ಕಥಂ ಪುನಃ ಸರ್ವಗತಸ್ಯ ಪರಮಾತ್ಮನಃ ಪರಿಮಾಣೋಪದೇಶಃ ಇತಿ ? ಅತ್ರ ಬ್ರೂಮಃ । ಸರ್ವಗತಸ್ಯಾಪಿ ಪರಮಾತ್ಮನೋ ಹೃದಯೇ ಅವಸ್ಥಾನಮ್ ಅಪೇಕ್ಷ್ಯ ಅಙ್ಗುಷ್ಠಮಾತ್ರತ್ವಮಿದಮ್ ಉಚ್ಯತೇ । ಆಕಾಶಸ್ಯೇವ ವಂಶಪರ್ವಾಪೇಕ್ಷಮ್ ಅರತ್ನಿಮಾತ್ರತ್ವಮ್ । ನ ಹಿ ಅಞ್ಜಸಾ ಅತಿಮಾತ್ರಸ್ಯ ಪರಮಾತ್ಮನಃ ಅಙ್ಗುಷ್ಠಮಾತ್ರತ್ವಮ್ ಉಪಪದ್ಯತೇ । ನ ಚ ಅನ್ಯಃ ಪರಮಾತ್ಮನಃ ಇಹ ಗ್ರಹಣಮರ್ಹತಿ ಈಶಾನಶಬ್ದಾದಿಭ್ಯಃ ಇತ್ಯುಕ್ತಮ್ । ನನು ಪ್ರತಿಪ್ರಾಣಿಭೇದಂ ಹೃದಯಾನಾಮ್ ಅನವಸ್ಥಿತತ್ವಾತ್ ತದಪೇಕ್ಷಮಪಿ ಅಙ್ಗುಷ್ಠಮಾತ್ರತ್ವಂ ನೋಪಪದ್ಯತೇ ಇತಿ । ಅತಃ ಉತ್ತರಮ್ ಉಚ್ಯತೇ– 'ಮನುಷ್ಯಾಧಿಕಾರತ್ವಾತ್' ಇತಿ । ಶಾಸ್ತ್ರಂ ಹಿ ಅವಿಶೇಷಪ್ರವೃತ್ತಮಪಿ ಮನುಷ್ಯಾನೇವ ಅಧಿಕರೋತಿ । ಶಕ್ತತ್ವಾತ್ ಅರ್ಥಿತ್ವಾತ್, ಅಪರ್ಯುದಸ್ತತ್ವಾತ್, ಉಪನಯನಾದಿಶಾಸ್ತ್ರಾಚ್ಚ ಇತಿ ವರ್ಣಿತಮೇತತ್ ಅಧಿಕಾರಲಕ್ಷಣೇ (ಜೈ. ೬–೧) । ಮನುಷ್ಯಾಣಾಂ ಚ ನಿಯತಪರಿಮಾಣಃ ಕಾಯಃ । ಔಚಿತ್ಯೇನ ನಿಯತಪರಿಮಾಣಮೇವ ಚ ಏಷಾಮ್ ಅಙ್ಗುಷ್ಠಮಾತ್ರಮ್ ಹೃದಯಮ್ । ಅತಃ ಮನುಷ್ಯಾಧಿಕಾರಿತ್ವಾತ್ ಶಾಸ್ತ್ರಸ್ಯ ಮನುಷ್ಯಹೃದಯಾವಸ್ಥಾನಾಪೇಕ್ಷಮ್, ಅಙ್ಗುಷ್ಠಮಾತ್ರತ್ವಮ್ ಉಪಪನ್ನಂ ಪರಮಾತ್ಮನಃ ॥

---

1. ಈಶಾನನು, ಈಶ್ವರನು– ಎಂಬ ಹೆಸರೇ ಇದು ಪರಮೇಶ್ವರನೆಂದು ನಿಶ್ಚಯಿಸುತ್ತದೆ; ಬರಿಯ ಬ್ರಹ್ಮಧರ್ಮಲಿಂಗದಿಂದ ಗೊತ್ತುಪಡಿಸುವ ಆವಶ್ಯಕತೆಯೇನೂ ಇಲ್ಲ ಎಂದು ಭಾವ.

( ಭಾಷ್ಯಾರ್ಥ )

ಸರ್ವಗತನಾಗಿರುವ ಪರಮಾತ್ಮನಿಗೆ (ಹೀಗೆ) ಪರಿಮಾಣವನ್ನು ಹೇಳಿರುವದು ಹೇಗೆ ಸರಿ ?– ಎಂದರೆ ಅದಕ್ಕೆ ಹೇಳುತ್ತೇವೆ : ಪರಮಾತ್ಮನು ಸರ್ವಗತನಾದರೂ ಹೃದಯದಲ್ಲಿರುವದರ ಅಪೇಕ್ಷೆಯಿಂದ ಈ ಅಂಗುಷ್ಠಮಾತ್ರತ್ವವನ್ನು ಹೇಳಿದೆ. ಬಿದುರಿನ ಗೆಣ್ಣುಗಳ ಅಪೇಕ್ಷೆಯಿಂದ ಆಕಾಶಕ್ಕೆ ಚೋಟಿನ ಅಳತೆಯನ್ನು (ಹೇಳುವಂತೆಯೇ ಇದು ). ಏಕೆಂದರೆ ಅಳತೆಯಿಲ್ಲದ ಪರಮಾತ್ಮನಿಗೆ ಮುಖ್ಯವೃತ್ತಿಯಿಂದ ಅಂಗುಷ್ಠಮಾತ್ರತ್ವವು ಹೊಂದುವದಿಲ್ಲ. ಈಶಾನಶಬ್ದವೇ ಮುಂತಾದ ( ಕಾರಣ )ಗಳಿಂದ[1] ಇಲ್ಲಿ ಪರಮಾತ್ಮನನ್ನು ಬಿಟ್ಟು ಮತ್ತೊಬ್ಬರನ್ನು ತೆಗೆದುಕೊಳ್ಳುವದಕ್ಕೆ ಆಗುವಂತೆಯೇ ಇಲ್ಲ ಎಂದು ಮೇಲೆ (ಹೇಳಿರು)ತ್ತೇವೆ.

(ಆಕ್ಷೇಪ) :— ಬೇರೆಬೇರೆಯ ಪ್ರಾಣಿಗಳಿಗೆ ಹೃದಯಗಳು ವ್ಯವಸ್ಥಿತವಾಗಿ (ಇಷ್ಟೇ ಎಂದಿ)ರುವದಿಲ್ಲವಾಗಿ ಅದರ ಅಪೇಕ್ಷೆಯಿಂದಲೂ ಅಂಗುಷ್ಠಮಾತ್ರತ್ವವು ಹೊಂದುವದಿಲ್ಲವಲ್ಲ !

(ಪರಿಹಾರ) :— ಇದಕ್ಕೆ ಉತ್ತರವನ್ನು ಹೇಳುತ್ತೇವೆ (ಶಾಸ್ತ್ರವು) ಮನುಷ್ಯಾಧಿಕಾರವುಳ್ಳದ್ದಾದ್ದರಿಂದ (ಹೊಂದುತ್ತದೆ). **ಶಾಸ್ತ್ರವು ಸಾಮಾನ್ಯವಾಗಿ ಹೊರಟಿರುತ್ತದೆಯಾದರೂ ಮನುಷ್ಯರನ್ನೇ ಅಧಿಕರಿಸುತ್ತದೆ. ಏಕೆಂದರೆ (ಅವರು) ಶಕ್ತರಾಗಿರುತ್ತಾರೆ,[2] ಅರ್ಥಿಗಳಾಗಿರುತ್ತಾರೆ,[3] (ಅವರನ್ನು ಶಾಸ್ತ್ರವು) ಅಡ್ಡಿಮಾಡಿಲ್ಲ,[4] ಉಪನಯನಾದಿಶಾಸ್ತ್ರವೂ ಇದೆ**[5] ಎಂದು ಇದನ್ನು **ಅಧಿಕಾರಲಕ್ಷಣ**ದಲ್ಲಿ[6] (ಜೈ. ಸೂ. ೬–೧) ವರ್ಣಿಸಿರುತ್ತದೆ.[7] ಮನುಷ್ಯರ ಶರೀರವು (ಇಂತಿಷ್ಟೆಂದು) ಗೊತ್ತಾದ ಪರಿಮಾಣ

---

1. ಪ್ರಕೃತವಾಗಿರುವದರಿಂದಲೂ ನಚಿಕೇತನು ಇದನ್ನೇ ಕೇಳಿರುವದರಿಂದಲೂ.

2. 'ಸ್ವರ್ಗಕಾಮನು ಯಾಗಮಾಡಬೇಕು' ಎಂಬುದು ಸಾಮಾನ್ಯಶಾಸ್ತ್ರವಾದರೂ ಕೀಳುಪ್ರಾಣಿಗಳಿಗೆ ವೇದಾರ್ಥಜ್ಞಾನವೇ ಮುಂತಾದ ಸಾಮಗ್ರಿಗಳಿಲ್ಲದ್ದರಿಂದ ಕರ್ಮವನ್ನು ಮಾಡುವ ಶಕ್ತಿಯಿಲ್ಲ, ಮನುಷ್ಯನಿಗೆ ಶಕ್ತಿಯೂ ಉಂಟು.

3. ಸ್ಥಾವರಪ್ರಾಣಿಗಳಿಗೆ ಫಲದ ಅಪೇಕ್ಷೆಯಿಲ್ಲದ್ದರಿಂದ ಅಧಿಕಾರವಿಲ್ಲ ; ಮನುಷ್ಯನಿಗೆ ಫಲದಲ್ಲಿ ಅಪೇಕ್ಷೆಯೂ ಉಂಟು.

4. 'ಶೂದ್ರನು ಯಜ್ಞಕ್ಕೆ ತಕ್ಕವನಲ್ಲ' ಎಂದು ಶೂದ್ರನನ್ನು ಶಾಸ್ತ್ರವು ನಿವಾರಿಸಿದೆ. ಮನುಷ್ಯರು ಎಂದರೆ ಮಿಕ್ಕ ಮೂರು ವರ್ಣದವರು ಹೀಗೆ ನಿವಾರಿಸಲ್ಪಟ್ಟಿಲ್ಲ.

5. ಶೂದ್ರನಿಗೆ ಅಧಿಕಾರವಿಲ್ಲವೆನ್ನುವದಕ್ಕೆ ಇದು ಇನ್ನೊಂದು ಕಾರಣ. ಏಕೆಂದರೆ ಅವನಿಗೆ ಶಾಸ್ತ್ರದಲ್ಲಿ ಉಪನಯನವನ್ನು ಹೇಳಿಲ್ಲ.

6. ಪೂರ್ವಮೀಮಾಂಸಾಸೂತ್ರದಲ್ಲಿ ಕರ್ಮಕ್ಕೆ ಅಧಿಕಾರಿಗಳನ್ನು ಗೊತ್ತುಮಾಡುವ ಗ್ರಂಥಭಾಗದಲ್ಲಿ.

7. ಆದ್ದರಿಂದ ಇಲ್ಲಿ ಸೂತ್ರಕಾರರು 'ಮನುಷ್ಯಾಧಿಕಾರತ್ವಾತ್' ಎಂದು ಅವನ್ನೇ ಅನುವಾದಮಾಡಿಕೊಂಡಿರುತ್ತಾರೆಂದು ಭಾವ.

ದ್ದಾಗಿರುತ್ತದೆ. ಅದಕ್ಕೆ ತಕ್ಕಂತೆ ಇವರಿಗೆ ಗೊತ್ತಾದ ಪರಿಮಾಣವುಳ್ಳದ್ದಾಗಿಯೇ (ಇರುವ) ಹೃದಯವು ಅಂಗುಷ್ಠಮಾತ್ರವಾಗಿರುತ್ತದೆ.[1] ಆದ್ದರಿಂದ ಶಾಸ್ತ್ರವು ಮನುಷ್ಯಾಧಿಕಾರವುಳ್ಳದ್ದಾದ್ದರಿಂದ[2] ಮನುಷ್ಯರ ಹೃದಯದಲ್ಲಿರುವದರ ಅಪೇಕ್ಷೆಯಿಂದ ಪರಮಾತ್ಮನು ಅಂಗುಷ್ಠಮಾತ್ರನಾಗಿರುವನೆಂಬುದು ಹೊಂದುತ್ತದೆ.

## ಇಲ್ಲಿ ಅಂಗುಷ್ಠಮಾತ್ರತ್ವವನ್ನು ಪ್ರತಿಪಾದಿಸಿಲ್ಲ

( ಭಾಷ್ಯ )

೨೮೦. ಯದಪಿ ಉಕ್ತಮ್– ಪರಿಮಾಣೋಪದೇಶಾತ್ ಸ್ಮೃತೇಶ್ಚ ಸಂಸಾರ್ಯೇವ ಅಯಮ್ ಅಙ್ಗುಷ್ಠಮಾತ್ರಃ ಪ್ರತ್ಯೇತವ್ಯಃ ಇತಿ । ತತ್ ಪ್ರತ್ಯುಚ್ಯತೇ– "ಸ ಆತ್ಮಾ ತತ್ ತ್ವಮಸಿ" (ಛಾಂ. ೬–೮–೭) ಇತ್ಯಾದಿವತ್ ಸಂಸಾರಿಣ ಏವ ಸತಃ ಅಙ್ಗುಷ್ಠಮಾತ್ರಸ್ಯ ಬ್ರಹ್ಮತ್ವಮಿದಮ್ ಉಪದಿಶ್ಯತೇ ಇತಿ । ದ್ವಿರೂಪಾ ಹಿ ವೇದಾನ್ತವಾಕ್ಯಾನಾಂ ಪ್ರವೃತ್ತಿಃ, ಕ್ವಚಿತ್ ಪರಮಾತ್ಮಸ್ವರೂಪನಿರೂಪಣಪರಾ, ಕ್ವಚಿತ್ ವಿಜ್ಞಾನಾತ್ಮನಃ ಪರಮಾತ್ಮೈಕತ್ವೋಪದೇಶಪರಾ । ತದತ್ರ ವಿಜ್ಞಾನಾತ್ಮನಃ ಪರಮಾತ್ಮನಾ ಏಕತ್ವಮ್ ಉಪದಿಶ್ಯತೇ ನ ಅಙ್ಗುಷ್ಠಮಾತ್ರತ್ವಂ ಕಸ್ಯಚಿತ್ । ಏತಮೇವ ಅರ್ಥಂ ಪರೇಣ ಸ್ಫುಟೀಕರಿಷ್ಯತಿ –"ಅಙ್ಗುಷ್ಠಮಾತ್ರಃ ಪುರುಷೋಽನ್ತರಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ । ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಞ್ಜಾದಿವೇಷೀಕಾಂ ಧೈರ್ಯೇಣ । ತಂ ವಿದ್ಯಾಚ್ಛುಕ್ರಮಮೃತಮ್" (ಕ. ೨–೩–೧೭) ಇತಿ ॥

(ಭಾಷ್ಯಾರ್ಥ)

ಇನ್ನು ಪರಿಮಾಣವನ್ನು ಹೇಳಿರುವದರಿಂದಲೂ ಸ್ಮೃತಿಯು (ಹಾಗೆಂದು ಹೇಳುವ)ದರಿಂದಲೂ ಈ ಅಂಗುಷ್ಠಮಾತ್ರನು ಸಂಸಾರಿಯೆಂದೇ ಅರಿಯಬೇಕು – ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದಕ್ಕೆ ಉತ್ತರವನ್ನು ಹೇಳುತ್ತೇವೆ: "ಅದೇ ಆತ್ಮನು, ಅದೇ ನೀನಾಗಿರುವೆ" (ಛಾಂ. ೬–೮–೭) ಎಂಬುದೇ ಮುಂತಾದ (ವಾಕ್ಯಗಳಲ್ಲಿರುವಂತೆ) ಸಂಸಾರಿಯೇ ಆಗಿರುವ ಅಂಗುಷ್ಠಮಾತ್ರನಾದ (ಜೀವನಿಗೆ) ಈ ಬ್ರಹ್ಮತ್ವವನ್ನು ಹೇಳಿರುತ್ತದೆ. ಹೇಗೆಂದರೆ

1. ಅವರವರ ಅಂಗುಷ್ಠದ ಪರಿಮಾಣವುಳ್ಳದ್ದಾಗಿರುತ್ತದೆ.

2. ಇದು ಸಾಮಾನ್ಯವಾಗಿ ಹೇಳಿದ್ದು. ವೇದಾಂತದಲ್ಲಿ ವಿಶೇಷಾಧಿಕಾರವನ್ನು ಮುಂದಿನ ಅಧಿಕರಣಗಳಲ್ಲಿ ಹೇಳಿದೆ.

**ವೇದಾಂತವಾಕ್ಯಗಳ ಪ್ರವೃತ್ತಿಯು ಎರಡು ಬಗೆ: ಕೆಲವು ಕಡೆಗಳಲ್ಲಿ ಪರಮಾತ್ಮನ ಸ್ವರೂಪವನ್ನು ವಿಚಾರಮಾಡಿ (ತಿಳಿಸುವದರಲ್ಲಿ) ತಾತ್ಪರ್ಯವುಳ್ಳದ್ದು,[1] ಕೆಲವು ಕಡೆಗಳಲ್ಲಿ ವಿಜ್ಞಾನಾತ್ಮನಿಗೆ ಪರಮಾತ್ಮನೊಡನೆ ಐಕ್ಯವನ್ನು ಉಪದೇಶಿಸುವದರಲ್ಲಿ ತಾತ್ಪರ್ಯವುಳ್ಳದ್ದು[2].** ಹೀಗಿರುವದರಿಂದ ಇಲ್ಲಿ ವಿಜ್ಞಾನಾತ್ಮನಿಗೆ ಪರಮಾತ್ಮನೊಡನೆ ಐಕ್ಯವನ್ನು ತಿಳಿಸಿರುತ್ತದೆಯೇ ಹೊರತು ಯಾರಿಗೂ ಅಂಗುಷ್ಠಮಾತ್ರತ್ವವನ್ನು (ಹೇಳಿಲ್ಲ)[3]. ಇದೇ ಅಭಿಪ್ರಾಯವನ್ನೇ (ಶ್ರುತಿಯು) ಮುಂದೆ "ಅಂಗುಷ್ಠಮಾತ್ರಪುರುಷನಾಗಿರುವ ಅಂತರಾತ್ಮನು ಯಾವಾಗಲೂ ಜನರ ಹೃದಯದಲ್ಲಿ ಹೊಕ್ಕಿರುವನು. ಆತನನ್ನು ತನ್ನ ಶರೀರದಿಂದ ನೊಸೆಹುಲ್ಲಿನಿಂದ ಕಡ್ಡಿಯನ್ನು ತೆಗೆಯುವಂತೆ ಧೈರ್ಯದಿಂದ ತೆಗೆಯಬೇಕು. ಆತನನ್ನೇ ಶುದ್ಧನೆಂದೂ ಅಮೃತನೆಂದೂ ತಿಳಿಯಬೇಕು" (ಕ. ೨-೩-೧೭) ಎಂದು ಸ್ಫುಟಗೊಳಿಸಿರುತ್ತದೆ.

## ೮. ದೇವತಾಧಿಕರಣ (೨೬-೩೩)

(ದೇವತಾದಿಗಳಿಗೂ ಜ್ಞಾನಾಧಿಕಾರವುಂಟು)

**ತದುಪರ್ಯಪಿ ಬಾದರಾಯಣಃ ಸಂಭವಾತ್ ॥ ೨೬ ॥**

೨೯. ಅದರ ಮೇಲಿನ(ವರಿಗೂ ಶಾಸ್ತ್ರದಲ್ಲಿ ಅಧಿಕಾರವುಂಟು) ಎಂದು ಬಾದರಾಯಣನು (ಅಭಿಪ್ರಾಯಪಡುತ್ತಾನೆ): ಏಕೆಂದರೆ (ಅಧಿಕಾರವು) ಸಂಭವಿಸುತ್ತದೆ.

## ದೇವತೆಗಳಿಗೆ ವಿದ್ಯಾಧಿಕಾರವಿದೆ

(ಭಾಷ್ಯ)

೨೮೧. ಅಙ್ಗುಷ್ಠಮಾತ್ರಶ್ರುತಿಃ ಮನುಷ್ಯಹೃದಯಾಪೇಕ್ಷಯಾ ಮನುಷ್ಯಾಧಿಕಾರತ್ವಾತ್ ಶಾಸ್ತ್ರಸ್ಯ ಇತ್ಯುಕ್ತಮ್ । ತತ್ಪ್ರಸಙ್ಗೇನ ಇದಮುಚ್ಯತೇ ಬಾಢಮ್, ಮನುಷ್ಯಾನ್ ಅಧಿಕರೋತಿ ಶಾಸ್ತ್ರಮ್ । ನ ತು ಮನುಷ್ಯಾನೇವ

---

1. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ', 'ವಿಜ್ಞಾನಮಾನನ್ದಂ ಬ್ರಹ್ಮ' -ಮುಂತಾದವುಗಳ ಪ್ರವೃತ್ತಿ ಹೀಗೆ.

2. 'ತತ್ ತ್ವಮಸಿ' 'ಅಯಮಾತ್ಮಾ ಬ್ರಹ್ಮ' ಮುಂತಾದ ವಾಕ್ಯಗಳ ಪ್ರವೃತ್ತಿ ಹೀಗೆ.

3. ಅಂಗುಷ್ಠಮಾತ್ರನಾಗಿ ಕಾಣುವ ಆತ್ಮನು ತ್ರಿಕಾಲಕ್ಕೂ ಒಡೆಯನಾದ ಪರಮೇಶ್ವರನು ಎಂದು ಶ್ರುತಿಯ ಅರ್ಥ; ಸೂತ್ರವು ಅಂಗುಷ್ಠಮಾತ್ರನೆಂಬ ವಿಶೇಷಣಕ್ಕೆ ಕಾರಣವನ್ನೂ ಹೇಳಿದೆ – ಎಂದು ಭಾವ.

ಇತಿ ಇಹ ಬ್ರಹ್ಮಜ್ಞಾನೇ ನಿಯಮೋಽಸ್ತಿ । ತೇಷಾಂ ಮನುಷ್ಯಾಣಾಮ್ ಉಪರಿಷ್ಟಾತ್ ಯೇ ದೇವಾದಯಃ, ತಾನಪಿ ಅಧಿಕರೋತಿ ಶಾಸ್ತ್ರಮ್ ಇತಿ ಬಾದರಾಯಣಃ ಆಚಾರ್ಯೋ ಮನ್ಯತೇ । ಕಸ್ಮಾತ್ ? ಸಂಭವಾತ್ । ಸಂಭವತಿ ಹಿ ತೇಷಾಮಪಿ ಅರ್ಥಿತ್ವಾದ್ಯಧಿಕಾರಕಾರಣಮ್ । ತತ್ರ ಅರ್ಥಿತ್ವಂ ತಾವತ್ ಮೋಕ್ಷವಿಷಯಂ ದೇವಾದೀನಾಮಪಿ ಸಂಭವತಿ ವಿಕಾರವಿಷಯ ವಿಭೂತ್ಯನಿತ್ಯತ್ವಾಲೋಚನಾದಿನಿಮಿತ್ತಮ್ । ತಥಾ ಸಾಮರ್ಥ್ಯಮಪಿ ತೇಷಾಂ ಸಂಭವತಿ । ಮನ್ತ್ರಾರ್ಥವಾದೇತಿಹಾಸಪುರಾಣಲೋಕೇಭ್ಯೋ ವಿಗ್ರಹವತ್ತ್ವಾದ್ಯವಗಮಾತ್ । ನ ಚ ತೇಷಾಂ ಕಶ್ಚಿತ್ ಪ್ರತಿಷೇಧೋಽಸ್ತಿ । ನ ಚ ಉಪನಯನಶಾಸ್ತ್ರೇಣ ಏಷಾಮಧಿಕಾರೋ ನಿವರ್ತ್ಯೇತ । ಉಪನಯನಸ್ಯ ವೇದಾಧ್ಯಯನಾರ್ಥತ್ವಾತ್ । ತೇಷಾಂ ಚ ಸ್ವಯಂಪ್ರತಿಭಾತವೇದತ್ವಾತ್ । ಅಪಿ ಚೈಷಾಂ ವಿದ್ಯಾಗ್ರಹಣಾರ್ಥಂ ಬ್ರಹ್ಮಚರ್ಯಾದಿ ದರ್ಶಯತಿ — "ಏಕಶತಂ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ" (ಛಾಂ. ೮–೧೧–೩), "ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ" (ತೈ. ೩–೧) ಇತ್ಯಾದಿ । ಯದಪಿ ಕರ್ಮಸು ಅನಧಿಕಾರಕಾರಣಮುಕ್ತಮ್ "ನ ದೇವಾನಾಂ ದೇವತಾನ್ತರಾಭಾವಾತ್" (ಜೈ. ಸೂ. ೬–೧ ೬) ಇತಿ "ನ ಋಷೀಣಾಮಾರ್ಷೇಯಾನ್ತರಾಭಾವಾತ್" (ಜೈ. ಸೂ. ೬–೧–೭) ಇತಿ । ನ ತದ್ ವಿದ್ಯಾಸ್ವಸ್ತಿ । ನ ಹಿ ಇನ್ದ್ರಾದೀನಾಂ ವಿದ್ಯಾಸ್ವಧಿಕ್ರಿಯಮಾಣಾನಾಮ್ ಇನ್ದ್ರಾದ್ಯುದ್ದೇಶೇನ ಕಿಂಚಿತ್ ಕೃತ್ಯಮಸ್ತಿ । ನ ಚ ಭೃಗ್ವಾದೀನಾಂ ಭೃಗ್ವಾದಿಸಗೋತ್ರತಯಾ । ತಸ್ಮಾತ್ ದೇವಾದೀನಾಮಪಿ ವಿದ್ಯಾಸು ಅಧಿಕಾರಃ ಕೇನ ವಾರ್ಯತೇ ? ದೇವಾದ್ಯಧಿಕಾರೇಽಪಿ ಅಙ್ಗುಷ್ಠಮಾತ್ರಶ್ರುತಿಃ ಸ್ವಾಙ್ಗುಷ್ಠಾಪೇಕ್ಷಯಾ ನ ವಿರುಧ್ಯತೇ ॥

(ಭಾಷ್ಯಾರ್ಥ)

ಅಂಗುಷ್ಠಮಾತ್ರಶ್ರುತಿಯು ಮನುಷ್ಯರ ಹೃದಯದ ಅಪೇಕ್ಷೆಯಿಂದ (ಬಂದಿದೆ) ; ಏಕೆಂದರೆ ಶಾಸ್ತ್ರವು ಮನುಷ್ಯರನ್ನು ಅಧಿಕರಿಸಿ (ಹೊರಟಿದೆ) ಎಂದು (ಹಿಂದೆ) ಹೇಳಿದ್ದಾಗಿದೆ. ಅದರ ಪ್ರಸಂಗದಿಂದ[1] ಇದನ್ನು ಹೇಳಲಾಗುತ್ತದೆ. ನಿಜ, ಶಾಸ್ತ್ರವು ಮನುಷ್ಯರನ್ನು ಅಧಿಕರಿಸುತ್ತದೆ ; ಆದರೆ ಮನುಷ್ಯರನ್ನೇ ಅಧಿಕರಿಸುತ್ತದೆ ಎಂದು ಈ ಬ್ರಹ್ಮಜ್ಞಾನದಲ್ಲಿ ನಿಯಮವಿಲ್ಲ.

1. ಅಧಿಕಾರದ ವಿಚಾರವನ್ನು ಹೇಳುವದಕ್ಕೆ ಹೊರಟಾಗ ನೆನಪಿಗೆ ಬಂದ ದೇವಾದ್ಯಧಿಕಾರವಿಚಾರವೂ ಮಾಡತಕ್ಕದ್ದು ಎಂಬುದೇ ಪ್ರಸಂಗವು. ಈ ಅಧಿಕರಣವು ಪ್ರಾಸಂಗಿಕಸಂಗತಿಯಿಂದ ಬಂದದ್ದು. ಹಿಂದಿನಂತೆ ಸಮನ್ವಯವನ್ನು ಹೇಳುವದಕ್ಕೆ ಬಂದದ್ದಲ್ಲ ಎಂದು ಭಾವ.

ಆ ಮನುಷ್ಯರ ಮೇಲೆ ದೇವತೆಗಳೇ ಮುಂತಾದವರು ಇರುವರಲ್ಲ, ಅವರನ್ನೂ (ಈ) ಶಾಸ್ತ್ರವು **ಅಧಿಕರಿಸುತ್ತದೆ**[1] ಎಂದು **ಬಾದರಾಯಣಾಚಾರ್ಯರು**[2] ಅಭಿಪ್ರಾಯಪಡುತ್ತಾರೆ. ಏಕೆ ? ಎಂದರೆ ಸಂಭವಿಸುವದರಿಂದ. ಅವರಿಗೂ ಅರ್ಥಿತ್ವವೇ ಮುಂತಾದ ಅಧಿಕಾರಕಾರಣವು ಸಂಭವಿಸುತ್ತದೆಯಲ್ಲವೆ ? ಈ (ಕಾರಣ)ಗಳಲ್ಲಿ ಮೊದಲನೆಯದಾಗಿ ಮೋಕ್ಷದಲ್ಲಿ **ಅರ್ಥಿತ್ವವು** ಕಾರ್ಯದ ವಿಷಯವಾಗಿರುವ ವಿಭೂತಿಗಳು ಅನಿತ್ಯವೆಂಬುದನ್ನು ಆಲೋಚನೆಮಾಡುವದೇ ಮುಂತಾದ ನಿಮಿತ್ತದಿಂದ ಉಂಟಾಗಬಹುದಾಗಿದೆ[3]. ಇದರಂತೆ **ಸಾಮರ್ಥ್ಯವೂ** ಅವರಿಗೆ ಇರಬಹುದಾಗಿದೆ ; ಏಕೆಂದರೆ ಮಂತ್ರ, ಅರ್ಥವಾದ, ಇತಿಹಾಸಪುರಾಣಗಳು, ಲೋಕ (ಪ್ರಮಾಣ) – ಇವುಗಳಿಂದ **ವಿಗ್ರಹವತ್ತ್ವವೇ ಮುಂತಾದವುಗಳು**[4]. ಅವರಿಗೆ (ಉಂಟೆಂದು) ತಿಳಿಯಬರುತ್ತದೆ. ಅವರಿಗೆ (ವಿದ್ಯೆಯ ವಿಷಯಕ್ಕೆ) ಯಾವ (ಅಧಿಕಾರ)ನಿಷೇಧವೂ (ಶಾಸ್ತ್ರದಲ್ಲಿ) ಇರುವದಿಲ್ಲ[5]. ಉಪನಯನಶಾಸ್ತ್ರದಿಂದ ಇವರಿಗೆ ಅಧಿಕಾರವನ್ನು ಅಲ್ಲಗಳೆಯುವದಕ್ಕೂ ಆಗುವ ಹಾಗಿಲ್ಲ[6] ಏಕೆಂದರೆ ಉಪನಯನವು ವೇದಾಧ್ಯಯನಕ್ಕಾಗಿ (ಬೇಕಾದದ್ದು); ಆದರೆ ಆ (ದೇವತೆಗಳು) ಸ್ವಯಂಪ್ರತಿಭಾತವೇದರಾಗಿರುತ್ತಾರೆ[7]. ಇದಲ್ಲದೆ ಇವರು ವಿದ್ಯಾಗ್ರಹಣಕ್ಕಾಗಿ ಬ್ರಹ್ಮಚರ್ಯವೇ ಮುಂತಾದದ್ದನ್ನು[8] (ಮಾಡಿದರೆಂದು) "ಇಂದ್ರನು ಪ್ರಜಾಪತಿಯಲ್ಲಿ

1. ಕರ್ಮಕ್ಕೆ ತ್ರೈವರ್ಣಿಕರೇ ಅಧಿಕಾರಿಗಳು ; ಆದರೆ ಜ್ಞಾನಕ್ಕೆ, ಬೇಕಾದ ಸಾಧನಗಳಿದ್ದರೆ ಸಾಕು, ಎಲ್ಲರೂ ಅಧಿಕಾರಿಗಳಾಗುತ್ತಾರೆ – ಎಂದು ಭಾವ. ಜ್ಞಾನಕರ್ಮಸಮುಚ್ಚಯವಾದಕ್ಕೆ ಈ ಅಧಿಕರಣವು ವಿರುದ್ಧವಾಗುತ್ತದೆ.

2. ಸೂತ್ರಕಾರರೇ ತಮ್ಮ ಹೆಸರನ್ನು ಹೀಗೆ ಹೇಳಿಕೊಳ್ಳುವದು ಸೂತ್ರಗಳ ಶೈಲಿ.

3. ತಮಗೆ ಉಂಟಾಗುವ ವಿಭೂತಿಗಳು ಕಾರ್ಯವಾಗಿರುವದರಿಂದ ಅನಿತ್ಯವಾಗಿವೆ ಎಂಬುದನ್ನು ಮನದಂದುಕೊಳ್ಳುವದೂ ಅದಕ್ಕಿಂತ ಹೆಚ್ಚಿನ ಮೋಕ್ಷವಿದೆ ಎಂಬ ತಿಳಿವಳಿಕೆಯೂ ವೈರಾಗ್ಯಕ್ಕೆ ಕಾರಣವಾಗಬಹುದು, ಇದು ಋಷಿಗಳಿಗೂ ಅನ್ವಯಿಸುತ್ತದೆ. ೩–೩–೩೨ರ ಭಾಷ್ಯವನ್ನು ನೋಡಿ.

4. ಶರೀರವಿರುವದು, ಹವಿಸ್ಸನ್ನು ಭೋಗಿಸುವದು, ಐಶ್ವರ್ಯ, ಪ್ರಸನ್ನನಾಗುವದು, ಫಲವನ್ನುಕೊಡುವದು – ಇವು ವಿಗ್ರಹವತ್ತ್ವಾದಿಗಳು, ಮಂತ್ರಾದಿಪ್ರಮಾಣಗಳನ್ನು ಮುಂದೆ ೩೩ನೆಯ ಸೂತ್ರದಲ್ಲಿ ಕೊಟ್ಟಿದೆ.

5. ಶೂದ್ರರನ್ನು ತಿರಸ್ಕರಿಸುವಂತೆ ಶಾಸ್ತ್ರವು ಅವರನ್ನು ತಿರಸ್ಕರಿಸಿಲ್ಲ – ಎಂದು ಭಾವ.

6. ಉಪನಯನವಿಲ್ಲದಿದ್ದರೆ ಅಧ್ಯಯನವಿಲ್ಲ ; ಅದಿಲ್ಲದೆ ಬ್ರಹ್ಮವಿದ್ಯೆಯೂ ಇಲ್ಲ – ಎಂದು ಆಕ್ಷೇಪಿಸಬಾರದು.

7. ವೇದವು ತಾನೇ ಅವರ ಶುದ್ಧಬುದ್ಧಿಗೆ ಹೊಳೆಯುತ್ತದೆ ಎಂದರ್ಥ.

8. ಗುರುವಿನ ಬಳಿಗೆ ವಿಧಿಪೂರ್ವಕವಾಗಿ ಶಿಷ್ಯರಾಗಿ ಬರುವದು, ಶುಶ್ರೂಷೆಮಾಡುವದು – ಮುಂತಾದದ್ದನ್ನು.

ನೂರೊಂದು ವರ್ಷಗಳು ಬ್ರಹ್ಮಚರ್ಯವಾಸವನ್ನು ಮಾಡಿದನು" (ಛಾಂ. ೮-೧೧-೩), "ವಾರುಣಿ ಭೃಗುವಿದ್ದನಲ್ಲ, (ಅವನು) ವರುಣನ ಬಳಿಗೆ 'ಪೂಜ್ಯನೆ, ಬ್ರಹ್ಮವನ್ನು ತಿಳಿಸಿಕೊಡು' ಎಂದು ವಿನಯದಿಂದ ಬಳಿಸಾರಿದನು (ತೈ. ೩-೧) ಎಂದು ಮುಂತಾದ (ಶ್ರುತಿಯು) ತಿಳಿಸುತ್ತದೆ. (ಪೂರ್ವ ಮೀಮಾಂಸದಲ್ಲಿ) "ದೇವತೆಗಳಿಗೆ ಅಧಿಕಾರವಿಲ್ಲ, ಏಕೆಂದರೆ (ಉದ್ದೇಶ್ಯವಾದ ಬೇರೆಯ ದೇವತೆಗಳಿಲ್ಲ" (ಜೈ. ಸೂ ೬-೧-೬), "ಋಷಿಗಳಿಗೆ (ಅಧಿಕಾರ) ವಿಲ್ಲ, ಏಕೆಂದರೆ ಬೇರೆಯ ಋಷಿಗಳಿಲ್ಲ" (ಜೈ. ಸೂ. ೬-೧-೭) ಎಂದು ಕರ್ಮಗಳಲ್ಲಿ ಅಧಿಕಾರವಿಲ್ಲವೆಂಬುದಕ್ಕೆ ಯಾವ ಕಾರಣವನ್ನು ಹೇಳಿದೆಯೋ ಆ (ಕಾರಣವು) ವಿದ್ಯೆಗಳಲ್ಲಿರುವದಿಲ್ಲ[1]. ವಿದ್ಯೆಗಳಿಗೆ ಅಧಿಕಾರಿಗಳಾದ ಇಂದ್ರಾದಿ ಗಳಿಗೆ ಇಂದ್ರಾದಿಗಳನ್ನು ಉದ್ದೇಶಿಸಿ ಮಾಡತಕ್ಕದ್ದು ಯಾವದೂ ಇರು ವದಿಲ್ಲ[2]; ಭೃಗ್ವಾದಿಗಳಿಗೆ ಭೃಗ್ವಾದಿಗಳ ಸಗೋತ್ರರಾಗಿ (ಮಾಡತಕ್ಕದ್ದೊ ಯಾವದೂ) ಇರುವದಿಲ್ಲ. ಆದ್ದರಿಂದ ದೇವಾದಿಗಳಿಗೂ ವಿದ್ಯೆಗಳಲ್ಲಿ ಅಧಿ ಕಾರ(ವುಂಟೆಂಬುದನ್ನು) ಯಾರು ಇಲ್ಲವೆನ್ನುವರು ?

ದೇವಾದಿಗಳನ್ನು (ಶಾಸ್ತ್ರವು) ಅಧಿಕರಿಸಿದರೂ ಅಂಗುಷ್ಠಮಾತ್ರಶ್ರುತಿಯು ಅವರವರ ಅಂಗುಷ್ಠಾಪೇಕ್ಷೆಯಿಂದ (ಇರಬಹುದಾದ್ದರಿಂದ) ವಿರುದ್ಧವಾಗು ವದಿಲ್ಲ[3].

## ದೇವಾದ್ಯಧಿಕಾರದಲ್ಲಿ ಆಕ್ಷೇಪಸಮಾಧಾನಗಳು

**ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್ ||೨೭||**

೨೭. ಕರ್ಮದಲ್ಲಿ ವಿರೋಧ(ವಾಗುವದು) ಎಂದರೆ ಇಲ್ಲ ; ಏಕೆಂದರೆ ಅನೇಕಪ್ರತಿಪತ್ತಿಯು (ಶ್ರುತಿಯಲ್ಲಿ) ಕಂಡಿದೆ.

## ಆಕ್ಷೇಪ: ಕರ್ಮವಿಷಯದಲ್ಲಿ ವಿರೋಧ

(ಭಾಷ್ಯ)

**೨೮೨.** ಸ್ಯಾದೇತತ್ । ಯದಿ ವಿಗ್ರಹವತ್ತ್ವಾದ್ಯಭ್ಯುಪಗಮೇನ ದೇವಾದೀನಾಂ ವಿದ್ಯಾಸು ಅಧಿಕಾರೋ ವರ್ಣ್ಯೇತ, ವಿಗ್ರಹವತ್ತ್ವಾತ್

---

1. ಉಪಾಸನೆಗಳನ್ನೂ ಬ್ರಹ್ಮಜ್ಞಾನವನ್ನೂ ಇಲ್ಲಿ ವಿದ್ಯೆಗಳೆಂದು ಕರೆದಿದೆ.

2. ಈ ವಿಷಯಕ್ಕೆ ಮುಂದೆ ೩೧, ೩೨ನೆಯ ಸೂತ್ರಗಳ ಭಾಷ್ಯವನ್ನು ನೋಡಿ.

3. ಅಂಗುಷ್ಠಮಾತ್ರತ್ವವು ಪ್ರತಿಪಾದ್ಯವೆಂದು ಇಟ್ಟುಕೊಂಡೇ ಈ ಮಾತನ್ನು ಹೇಳಿದೆ. ಜೀವರೂಪದಿಂದ ಪರಿಚ್ಛಿನ್ನನಾಗಿ ಕಾಣುತ್ತಿರುವ ಪರಮಾತ್ಮನು ನಿಜವಾಗಿ ಅಪರಿಚ್ಛಿನ್ನನಾಗಿರುತ್ತಾನೆ ಎಂಬುದೇ ಶ್ರುತಿಯ ಅರ್ಥವೆಂದು ಹಿಂದೆ ಹೇಳಿರುವವನ್ನು ಇಲ್ಲಿಯೂ ಮನದಂದುಕೊಳ್ಳಬೇಕು.

ಋತ್ವಿಗಾದಿವತ್ ಇನ್ದ್ರಾದೀನಾಮಪಿ ಸ್ವರೂಪಸನ್ನಿಧಾನೇನ ಕರ್ಮಾಙ್ಗಭಾವೋಽಭ್ಯುಪಗಮ್ಯೇತ, ತದಾ ಚ ವಿರೋಧಃ ಕರ್ಮಣಿ ಸ್ಯಾತ್ । ನ ಹಿ ಇನ್ದ್ರಾದೀನಾಂ ಸ್ವರೂಪಸನ್ನಿಧಾನೇನ ಯಾಗೇ ಅಙ್ಗಭಾವೋ ದೃಶ್ಯತೇ । ನ ಚ ಸಂಭವತಿ । ಬಹುಷು ಯಾಗೇಷು ಯುಗಪತ್ ಏಕಸ್ಯ ಇನ್ದ್ರಸ್ಯ ಸ್ವರೂಪಸಂನಿಧಾನತಾನುಪಪಪತ್ತೇರಿತಿ ಚೇತ್ ॥

( ಭಾಷ್ಯಾರ್ಥ )

( ಆಕ್ಷೇಪಕನ ಅಭಿಪ್ರಾಯವು ) ಇದಾಗಿರಬಹುದು : ದೇವತೆಗಳಿಗೆ ವಿಗ್ರಹವತ್ತ್ವವೇ ಮುಂತಾದವುಗಳನ್ನು ಒಪ್ಪಿ (ಅವರಿಗೆ) ವಿದ್ಯೆಗಳಲ್ಲಿ ಅಧಿಕಾರವುಂಟೆಂದು ಹೇಳುವದಾದರೆ, ಶರೀರವಿರುವದರಿಂದ ಋತ್ವಿಜರೇ ಮುಂತಾದವರಂತೆ ಇಂದ್ರಾದಿಗಳೂ ಸ್ವರೂಪದಿಂದ ಹತ್ತಿರವಿದ್ದುಕೊಂಡು ಕರ್ಮಕ್ಕೆ ಅಂಗವಾಗಿರುವರೆಂದು ಒಪ್ಪಿದಂತಾಗುವದು. ಆಗ ಕರ್ಮವಿಷಯದಲ್ಲಿ ವಿರೋಧವಾಗುವದು. ಏಕೆಂದರೆ ಇಂದ್ರಾದಿಗಳು ಸ್ವರೂಪದಿಂದ ಹತ್ತಿರವಿದ್ದುಕೊಂಡು ಯಾಗದಲ್ಲಿ ಅಂಗವಾಗಿರುವದು ಕಂಡಿಲ್ಲ[1]. (ಹೀಗಿರುವದು) ಸಂಭವಿಸುವದೂ ಇಲ್ಲ ; ಏಕೆಂದರೆ ಅನೇಕ ಯಾಗಗಳಲ್ಲಿ ಒಂದೇ ಕಾಲದಲ್ಲಿ ಒಬ್ಬನೇ ಇಂದ್ರನು ಸ್ವರೂಪದಿಂದ ಹತ್ತಿರವಿರುವದು ಆಗುವದೇ ಇಲ್ಲ[2].

## ಸಿದ್ಧಾಂತ: ಇಂದ್ರಾದಿಗಳಿಗೆ ಒಬ್ಬೊಬ್ಬರಿಗೂ ಅನೇಕರೂಪಗಳಿರುವವು

( ಭಾಷ್ಯ )

೨೮೩. ನಾಯಮಸ್ತಿ ವಿರೋಧಃ । ಕಸ್ಮಾತ್ ? ಅನೇಕಪ್ರತಿಪತ್ತೇಃ । ಏಕಸ್ಯಾಪಿ ದೇವತಾತ್ಮನಃ ಯುಗಪತ್ ಅನೇಕಸ್ವರೂಪಪ್ರತಿಪತ್ತಿಃ ಸಂಭವತಿ । ಕಥಮೇತದವಗಮ್ಯತೇ ? ದರ್ಶನಾತ್ । ತಥಾ ಹಿ । "ಕತಿ ದೇವಾಃ" ಇತ್ಯುಪಕ್ರಮ್ಯ "ತ್ರಯಶ್ಚ ತ್ರೀ ಚ ಸಹಸ್ರಾ" ಇತಿ ನಿರುಚ್ಯ "ಕತಮೇ ತೇ" (ಬೃ. ೩-೯-೧) ಇತ್ಯಸ್ಯಾಂ ಪೃಚ್ಛಾಯಾಂ "ಮಹಿಮಾನ ಏವೈಷಾಮೇತೇ

1. ಜೈ. ಸೂ. ೯-೧-೬ರಿಂದ ೧೦ನೆಯ ಸೂತ್ರದವರೆಗಿನ ಭಾಷ್ಯದಲ್ಲಿ ದೇವತೆಗೆ ವಿಗ್ರಹವತ್ತ್ವಾದಿಗಳಿರುವವೆಂಬ ಪಕ್ಷವನ್ನು ಅನುವಾದಮಾಡಿಕೊಂಡು ಖಂಡಿಸಿದೆ. ಜೈ. ಸೂ. ೮-೧-೩೪ರ ಭಾಷ್ಯದಲ್ಲಿ ಯಾಗವು ದೇವತಾಪೂಜೆಯೆಂದೂ ದೇವತೆಯು ಅದರ ಫಲವನ್ನು ಕೊಡುವದೆಂದೂ ಹೇಳುವವರ ಮತವನ್ನು ಖಂಡಿಸಿದೆ.

2. ಈ ಅಭಿಪ್ರಾಯವನ್ನು ಶಬರಭಾಷ್ಯದಲ್ಲಿ ಸೂಚಿಸಿರುವಂತೆ ಕಾಣುವದಿಲ್ಲ ; ದೇವತೆಯು ಹವಿರ್ಭೋಜನವನ್ನು ಮಾಡಲಾರದೆಂಬುದಕ್ಕೆ ಇದೊಂದು ಪ್ರಬಲವಾದ ಯುಕ್ತಿ.

ತ್ರಯಸ್ತ್ರಿಂಶತ್ತ್ವೇವ ದೇವಾಃ'' (ಬೃ. ೩-೯-೨) ಇತಿ ನಿರ್ಬ್ರುವತೀ ಶ್ರುತಿಃ ಏಕೈಕಸ್ಯ ದೇವತಾತ್ಮನೋ ಯುಗಪತ್ ಅನೇಕರೂಪತಾಂ ದರ್ಶಯತಿ। ತಥಾ ತ್ರಯಸ್ತ್ರಿಂಶತೋಽಪಿ ಷಡಾದ್ಯನ್ತರ್ಭಾವಕ್ರಮೇಣ "ಕತಮ ಏಕೋ ದೇವ ಇತಿ ಪ್ರಾಣಃ" (ಬೃ. ೩-೯-೯) ಇತಿ ಪ್ರಾಣೈಕರೂಪತಾಂ ದೇವಾನಾಂ ದರ್ಶಯನ್ತೀ। ತಸ್ಯೈವ ಏಕಸ್ಯ ಪ್ರಾಣಸ್ಯ ಯುಗಪತ್ ಅನೇಕರೂಪತಾಂ ದರ್ಶಯತಿ ತಥಾ ಸ್ಮೃತಿರಪಿ- "ಆತ್ಮನೋ ವೈ ಶರೀರಾಣಿ ಬಹೂನಿ ಭರತರ್ಷಭ। ಯೋಗೀ ಕುರ್ಯಾದ್ಬಲಂ ಪ್ರಾಪ್ಯ ತೈಶ್ಚ ಸರ್ವೈರ್ಮಹೀಂ ಚರೇತ್॥" ಪ್ರಾಪ್ನುಯಾದ್ ವಿಷಯಾನ್ ಕೈಶ್ಚಿತ್ ಕೈಶ್ಚಿದುಗ್ರಂ ತಪಶ್ಚರೇತ್। ಸಂಕ್ಷಿಪೇಚ್ಚ ಪುನಸ್ತಾನಿ ಸೂರ್ಯೋ ರಶ್ಮಿಗಣಾನಿವ॥" (ಮೋ. ಧ. ೩೮೦-೨೬, ೨೭) ಇತ್ಯೇವಂಜಾತೀಯಕಾ ಪ್ರಾಪ್ತಾಣಿಮಾದ್ಯೈಶ್ವರ್ಯಾಣಾಂ ಯೋಗಿನಾಮಪಿ ಯುಗಪತ್ ಅನೇಕಶರೀರಯೋಗಂ ದರ್ಶಯತಿ। ಕಿಮು ವಕ್ತವ್ಯಮ್ ಆಜಾನಸಿದ್ಧಾನಾಂ ದೇವಾನಾಮ್। ಅನೇಕರೂಪಪ್ರತಿಪತ್ತಿಸಂಭವಾಚ್ಚ ಏಕೈಕದೇವತಾ ಬಹುಭೀ ರೂಪೈಃ ಆತ್ಮಾನಂ ಪ್ರವಿಭಜ್ಯ ಬಹುಷು ಯಾಗೇಷು ಯುಗಪತ್ ಅಙ್ಗಭಾವಂ ಗಚ್ಛತೀತಿ[1]। ಪರೈಶ್ಚ ನ ದೃಶ್ಯತೇ ಅನ್ತರ್ಧಾನಾದಿಕ್ರಿಯಾಯೋಗಾತ್ ಇತ್ಯುಪಪದ್ಯತೇ॥

( ಭಾಷ್ಯಾರ್ಥ )

ಈ ವಿರೋಧವು (ನಮ್ಮ ಮತದಲ್ಲಿ)ರುವದಿಲ್ಲ. ಏಕೆ ? ಎಂದರೆ ಅನೇಕ ಪ್ರತಿಪತ್ತಿಯಿರುವದರಿಂದ. ಒಬ್ಬನೇ ದೇವತಾತ್ಮನು ಒಂದೇ ಕಾಲದಲ್ಲಿ ಅನೇಕ ಸ್ವರೂಪಗಳನ್ನು ಪಡೆಯುವದೂ ಆಗಬಹುದು. ಇದು ಹೇಗೆ ಗೊತ್ತಾಗುತ್ತದೆ? ಎಂದರೆ ಕಂಡಿರುವದರಿಂದ[2]. ಹೇಗೆಂದರೆ "ದೇವತೆಗಳು ಎಷ್ಟು (ಮಂದಿ) ?" ಎಂದು ಉಪಕ್ರಮಿಸಿ "ಮೂರೂ ಮೂರುನೂರು, ಮೂರೂ ಮೂರು ಸಾವಿರ" ಎಂದು ಗೊತ್ತುಮಾಡಿ ಹೇಳಿ "ಅವರು ಯಾರು?" (ಬೃ. ೩-೯-೧) ಎಂದು ಪ್ರಶ್ನೆ (ಏಳಲು) "ಇವುಗಳು ಇವರ ಮಹಿಮೆಗಳೇ, ಆದರೆ (ನಿಜವಾಗಿ) ದೇವತೆಗಳು ಮೂವತ್ತು ಮೂವರೇ"[3] (ಬೃ. ೩-೯-೨) ಎಂದು ಗೊತ್ತುಮಾಡಿ ಹೇಳುವ ಶ್ರುತಿಯೂ ಒಬ್ಬೊಬ್ಬ ದೇವತಾತ್ಮನಿಗೂ ಒಂದೇ ಕಾಲದಲ್ಲಿ ಅನೇಕರೂಪಗಳಿರುವವೆಂದು ತಿಳಿಸುತ್ತದೆ. ಮೂವತ್ತು ಮೂರಕ್ಕೂ ಆರು ಮುಂತಾದ[4] (ಸಂಖ್ಯೆಯಲ್ಲಿ) ಅಡಗಿಸುವ ಕ್ರಮದಿಂದ

---

1. ಇಲ್ಲಿ 'ಇತಿ'ಯು ಬೇಕಿಲ್ಲವೆಂದು ತೋರುತ್ತದೆ.
2. ಶ್ರುತಿಯಲ್ಲಿ ಹೇಳಿರುವದು ಕಂಡಿರುವದರಿಂದ ಎಂದರ್ಥ.
3. ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಇಂದ್ರ, ಪ್ರಜಾಪತಿ.
4. ಅಗ್ನಿ, ಪೃಥಿವಿ, ವಾಯು, ಅಂತರಿಕ್ಷ, ಆದಿತ್ಯ, ದ್ಯು - ಎಂಬ ಆರು.

ಕೊನೆಗೆ "ಒಬ್ಬನೇ ದೇವನು ಯಾರು ? ಪ್ರಾಣನು" (ಬೃ. ೩-೯-೯) ಎಂದು **ಪ್ರಾಣನೆಂಬ ಒಂದೇ ರೂಪವನ್ನು ದೇವತೆಗಳಿಗೆ ತಿಳಿಸುವದರಿಂದ ಶ್ರುತಿ ಯು) ಅದೇ ಒಬ್ಬ ಪ್ರಾಣನಿಗೆ ಒಂದೇ ಕಾಲದಲ್ಲಿ ಅನೇಕರೂಪಗಳಿವೆ ಎಂದು ತಿಳಿಸುತ್ತದೆ**[1]. ಹೀಗೆಯೇ "ಎಲೈ ಭರತರ್ಷಭನೆ, **ಯೋಗಿಯು** ತನಗೇ ಅನೇಕ ಶರೀರಗಳನ್ನು ಮಾಡಿಕೊಳ್ಳುವನು, ಬಲವನ್ನು ಪಡೆದುಕೊಂಡು ಆ ಎಲ್ಲಾ (ಶರೀರ)ಗಳಿಂದಲೂ ಭೂಮಿಯನ್ನೆಲ್ಲ ಸಂಚರಿಸುವನು. ಕೆಲವು (ಶರೀರ)ಗಳಿಂದ ವಿಷಯಗಳನ್ನು ಪಡೆದು(ಕೊಂಡು ಭೋಗಿಸು)ವನು, ಕೆಲವು (ಶರೀರ)ಗಳಿಂದ ಉಗ್ರವಾದ ತಪಸ್ಸನ್ನು ಮಾಡುತ್ತಿರುವನು, ಮತ್ತೆ ಅವುಗಳನ್ನು ಸೂರ್ಯನು ರಶ್ಮಿಸಮೂಹಗಳನ್ನು (ಎಳೆದುಕೊಳ್ಳುವಂತೆ) ಹಿಂದಕ್ಕೆಳೆದುಕೊಳ್ಳುವನು." (ಮೋ. ಧ. ೩೦೦-೨೬,೨೭) ಎಂಬೀ ಜಾತಿಯ ಸ್ಮೃತಿಯೂ **ಅಣಿಮಾದ್ಯೈಶ್ವರ್ಯಗಳನ್ನು ಪಡೆದುಕೊಂಡಿರುವ ಯೋಗಿಗಳಿಗೆ ಕೂಡ** ಒಂದೇ ಕಾಲಕ್ಕೆ ಅನೇಕ ಶರೀರಗಳ ಸಂಬಂಧವನ್ನು ತಿಳಿಸುತ್ತದೆ[2]. (ಹೀಗಿರುವಲ್ಲಿ) ಜನ್ಮದಿಂದಲೇ ಸಿದ್ಧರಾಗಿರುವ ದೇವತೆಗಳ (ವಿಷಯಗಳಲ್ಲಿ) ಹೇಳುವದೇನು ?

(ಹೀಗೆ) ಅನೇಕರೂಪಗಳನ್ನು ಹೊಂದಬಹುದಾದ್ದರಿಂದ ಒಂದೊಂದು ದೇವತೆಯೂ ಅನೇಕರೂಪಗಳಿಂದ ತನ್ನನ್ನು (ತಾನು) ವಿಂಗಡಿಸಿಕೊಂಡು ಅನೇಕ ಯಾಗಗಳಲ್ಲಿ ಒಂದೇ ಕಾಲಕ್ಕೆ ಅಂಗಭಾಗವನ್ನು ಹೊಂದುವದೆಂತಲೂ ಅಂತರ್ಧಾನವೇ ಮುಂತಾದ ಕ್ರಿಯೆಗಳ ಸಂಬಂಧದಿಂದ ಮತ್ತೊಬ್ಬರಿಗೆ ಕಾಣಿಸುವದಿಲ್ಲವೆಂತಲೂ (ಹೇಳುವದು) ಯುಕ್ತವಾಗಿರುತ್ತದೆ[3].

## ಒಬ್ಬ ದೇವತೆಗೇ ಅನೇಕರು ಸ್ವತ್ವತ್ಯಾಗವನ್ನು ಮಾಡಬಹುದು

(ಭಾಷ್ಯ)

೨೮೪. "ಅನೇಕಪ್ರತಿಪತ್ತೇರ್ದರ್ಶನಾತ್" ಇತ್ಯಸ್ಯ ಅಪರಾ ವ್ಯಾಖ್ಯಾ— ವಿಗ್ರಹವತಾಮಪಿ ಕರ್ಮಾಙ್ಗಭಾವಚೋದನಾಸು ಅನೇಕಾ ಪ್ರತಿಪತ್ತಿ

---

1. ಪ್ರಾಣನು ಎಂದರೆ ಸೂತ್ರಾತ್ಮನು ಅಥವಾ ಹಿರಣ್ಯಗರ್ಭನು. ಅವನು ಸಮಷ್ಟಿರೂಪದಿಂದ ಒಬ್ಬನೇ ಆಗಿದ್ದುಕೊಂಡೇ ವ್ಯಷ್ಟಿಗಳ ರೂಪದಿಂದ ಬೇರೆಬೇರೆಯ ದೇವತೆಯಾಗಿರುವನೆಂದು ವೇದವಾದವು.

2. ಯೋಗಿಗಳು ಹೀಗೆ ಶರೀರಗಳನ್ನು ನಿರ್ಮಿಸಿಕೊಳ್ಳುವದಕ್ಕೆ ಕಾಯವ್ಯೂಹವೆಂದು ಹೆಸರು. ೪-೧-೧೫ರ ಭಾಷ್ಯವನ್ನು ನೋಡಿ.

3. ಇದು ದೇವತೆಗೆ ಇರುವ ಐಶ್ವರ್ಯವನ್ನು ಸೂಚಿಸುವ ವಾಕ್ಯ.

ದೃಶ್ಯತೇ | ಕ್ವಚಿತ್ ಏಕೋಽಪಿ ವಿಗ್ರಹವಾನ್ ಅನೇಕತ್ರ ಯುಗಪತ್ ಅಙ್ಗಭಾವಂ ನ ಗಚ್ಛತಿ । ಯಥಾ ಬಹುಭಿರ್ಭೋಜಯದ್ಭಿಃ ನೈಕೋ ಬ್ರಾಹ್ಮಣೋ ಯುಗಪದ್ ಭೋಜ್ಯತೇ | ಕ್ವಚಿಚ್ಚ ಏಕೋಽಪಿ ವಿಗ್ರಹವಾನ್ ಅನೇಕತ್ರ ಯುಗಪದ್ ಅಙ್ಗಭಾವಂ ಗಚ್ಛತಿ । ಯಥಾ ಬಹುಭಿಃ ನಮಸ್ಕುರ್ವಾಣೈಃ ಏಕೋ ಬ್ರಾಹ್ಮಣೋ ನಮಸ್ಕ್ರಿಯತೇ | ತದ್ವತ್ ಇಹ ಉದ್ದೇಶಪರಿತ್ಯಾಗಾತ್ಮಕತ್ವಾತ್ ಯಾಗಸ್ಯ ವಿಗ್ರಹವತೀಮಪಿ ಏಕಾಂ ದೇವತಾಮ್ ಉದ್ದಿಶ್ಯ ಬಹವಃ ಸ್ವಂ ಸ್ವಂ ದ್ರವ್ಯಂ ಯುಗಪತ್ ಪರಿತ್ಯಕ್ಷ್ಯನ್ತಿ ಇತಿ ವಿಗ್ರಹವತ್ತ್ವೇಽಪಿ ದೇವತಾನಾಂ ನ ಕಿಂಚಿತ್ ಕರ್ಮಣಿ ವಿರುಧ್ಯತೇ ||

( ಭಾಷ್ಯಾರ್ಥ )

" ಅನೇಕ ಪ್ರತಿಪತ್ತೇರ್ದರ್ಶನಾತ್ " ಎಂಬೀ (ಸೂತ್ರಭಾಗಕ್ಕೆ ಇದು) ಮತ್ತೊಂದು ವ್ಯಾಖ್ಯಾನವು: ಶರೀರವುಳ್ಳವರಿಗೂ ಕರ್ಮಾಂಗತ್ವವನ್ನು (ಹೇಳುವ) ವಾಕ್ಯಗಳಲ್ಲಿ ಅನೇಕಪ್ರತಿಪತ್ತಿಯು[1] ಕಂಡುಬರುತ್ತದೆ. ಕೆಲವು ಕಡೆಗಳಲ್ಲಿ ಒಬ್ಬನೇ ಶರೀರಿಯು ಅನೇಕ ಕಡೆಗಳಲ್ಲಿ ಒಂದೇ ಕಾಲದಲ್ಲಿ ಅಂಗತ್ವವನ್ನು ಹೊಂದುವದಿಲ್ಲ ; ಹೇಗೆಂದರೆ ಅನೇಕರು ಭೋಜನಮಾಡಿಸುತ್ತಿರುವಲ್ಲಿ ಒಬ್ಬನೇ ಬ್ರಾಹ್ಮಣನಿಗೆ (ಎಲ್ಲರೂ) ಒಟ್ಟಿಗೆ ಭೋಜನಮಾಡಿಸುವದು ಆಗುವದಿಲ್ಲ. (ಇನ್ನು) ಕೆಲವು ಕಡೆಗಳಲ್ಲಿ ಒಬ್ಬನೇ ಶರೀರಿಯು ಅನೇಕ ಕಡೆಗಳಲ್ಲಿ ಒಂದೇ ಕಾಲದಲ್ಲಿ ಅಂಗತ್ವವನ್ನು ಹೊಂದುತ್ತಾನೆ ; ಹೇಗೆಂದರೆ ಅನೇಕರು ನಮಸ್ಕರಿಸುತ್ತಿರುವಲ್ಲಿ ಒಬ್ಬನೇ ಬ್ರಾಹ್ಮಣನನ್ನು (ಎಲ್ಲರೂ) ಒಂದೇ ಕಾಲದಲ್ಲಿ ನಮಸ್ಕರಿಸಬಹುದು. ಅದರಂತೆ ಇಲ್ಲಿ ಯಾಗವೆಂದರೆ ಉದ್ದೇಶಪರಿತ್ಯಾಗರೂಪವಾಗಿರುವದರಿಂದ[2] (ದೇವತೆಯು) ಶರೀರವುಳ್ಳದ್ದಾದರೂ ಒಂದೇ ದೇವತೆಯನ್ನು ಉದ್ದೇಶಿಸಿ ಬಹುಜನರು ತಮ್ಮ ತಮ್ಮ ದ್ರವ್ಯವನ್ನು ಒಂದೇ ಕಾಲದಲ್ಲಿ ಬಿಡಬಹುದು. ಆದ್ದರಿಂದ ದೇವತೆಗಳಿಗೆ ವಿಗ್ರಹವತ್ತ್ವವಿದ್ದರೂ ಕರ್ಮ(ವಿಷಯದಲ್ಲಿ) ಯಾವ ವಿರೋಧವೂ ಆಗುವಂತಿಲ್ಲ.

---

1. ಅನೇಕ ಕರ್ಮಗಳಲ್ಲಿ ಒಬ್ಬನೇ ಅಂಗಭಾವವನ್ನು ಹೊಂದುವದು.

2. ದೇವತೆಯನ್ನುದ್ದೇಶಿಸಿ ತನ್ನ ದ್ರವ್ಯವನ್ನು ಬಿಡುವದೇ ತ್ಯಾಗವು ; ದೇವತೆಯು ಭೋಜನಕ್ಕೆಂದು ಹವಿಸ್ಸನ್ನು ಕೊಡುತ್ತಾರೆಂಬ ಪೂರ್ವಪಕ್ಷವನ್ನು ಜೈ. ಸೂ ೯-೧-೯ರ ಭಾಷ್ಯದಲ್ಲಿ ಖಂಡಿಸಿರುವದು ಈ ನಮ್ಮ ಪಕ್ಷಕ್ಕೇನೂ ಅಡ್ಡಿಯನ್ನು ತರುವದಿಲ್ಲ ಎಂದು ಭಾವ.

**ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್ ॥೨೮॥**

೨೮. ಶಬ್ದದಲ್ಲಿ (ವಿರೋಧವಾಗುತ್ತದೆ) ಎಂದರೆ, ಇಲ್ಲ, ಏಕೆಂದರೆ ಪ್ರತ್ಯಕ್ಷಾನುಮಾನಗಳಿಂದ ಅದರಿಂದಲೇ (ಜಗತ್ತು) ಹುಟ್ಟುತ್ತದೆ (ಎಂದು ಗೊತ್ತಾಗುತ್ತದೆ).

## ಆಕ್ಷೇಪ: ದೇವತೆಗೆ ಶರೀರವಿದ್ದರೆ ವೇದವು ಅನಿತ್ಯವಾಗುತ್ತದೆ

( ಭಾಷ್ಯ )

೨೮೫. ಮಾ ನಾಮ ವಿಗ್ರಹವತ್ತ್ವೇ ದೇವಾದೀನಾಮ್ ಅಭ್ಯುಪಗಮ್ಯಮಾನೇ ಕರ್ಮಣಿ ಕಶ್ಚಿದ್ ವಿರೋಧಃ ಪ್ರಸಙ್ಕ್ಷಿ । ಶಬ್ದೇ ತು ವಿರೋಧಃ ಪ್ರಸಜ್ಯೇತ । ಕಥಮ್ ? ಔತ್ಪತ್ತಿಕಂ ಹಿ ಶಬ್ದಸ್ಯ ಅರ್ಥೇನ ಸಂಬನ್ಧಮ್ ಆಶ್ರಿತ್ಯ 'ಅನಪೇಕ್ಷತ್ವಾತ್' (ಜೈ. ೧-೧-೫) ಇತಿ ವೇದಸ್ಯ ಪ್ರಾಮಾಣ್ಯಂ ಸ್ಥಾಪಿತಮ್ । ಇದಾನೀಂ ತು ವಿಗ್ರಹವತೀ ದೇವತಾ ಅಭ್ಯುಪಗಮ್ಯಮಾನಾ ಯದ್ಯಪಿ ಐಶ್ವರ್ಯಯೋಗಾತ್ ಯುಗಪತ್ ಅನೇಕಕರ್ಮಸಂಬನ್ಧೀನಿ ಹವೀಂಷಿ ಭುಞ್ಜೀತ, ತಥಾಪಿ ವಿಗ್ರಹಯೋಗಾತ್ ಅಸ್ಮದಾದಿವತ್ ಜನನಮರಣವತೀ ಸಾ ಇತಿ ನಿತ್ಯಸ್ಯ ಶಬ್ದಸ್ಯ ನಿತ್ಯೇನ ಅರ್ಥೇನ ನಿತ್ಯೇ ಸಂಬನ್ಧೇ ಪ್ರತೀಯಮಾನೇ ಯದ್ ವೈದಿಕೇ ಶಬ್ದೇ ಪ್ರಾಮಾಣ್ಯಂ ಸ್ಥಿತಮ್, ತಸ್ಯ ವಿರೋಧಃ ಸ್ಯಾತ್ ॥

( ಭಾಷ್ಯಾರ್ಥ )

ದೇವಾದಿಗಳಿಗೆ ಶರೀರವಿರುತ್ತದೆ ಎಂದು ಒಪ್ಪಿದರೆ ಕರ್ಮ(ದ ವಿಷಯ)ದಲ್ಲಿ ಯಾವ ವಿರೋಧವೂ ಅಂಟಿಕೊಳ್ಳದೆ ಇರಬಹುದು. ಆದರೆ ಶಬ್ದ(ದ ವಿಷಯ)ದಲ್ಲಿ ವಿರೋಧವು ಅಂಟಿಕೊಳ್ಳುವದು. ಹೇಗೆ ? ಎಂದರೆ ಶಬ್ದಕ್ಕೆ ತನ್ನ ಅರ್ಥದೊಡನೆ ಔತ್ಪತ್ತಿಕಸಂಬಂಧವನ್ನು[1] ಇಟ್ಟುಕೊಂಡು "ಅನಪೇಕ್ಷತ್ವಾತ್"[2] (ಜೈ. ೧-೧-೫) ಎಂದು ವೇದದ ಪ್ರಾಮಾಣ್ಯವನ್ನು ಸ್ಥಾಪಿಸಲಾಗಿರುತ್ತದೆ[3]. ಆದರೆ ಈಗ ದೇವತೆಗೆ ಶರೀರವಿದೆಯೆಂದು ಒಪ್ಪಿದರೆ (ಅದು) ಐಶ್ವರ್ಯದ ಸಂಬಂಧದಿಂದ ಒಂದೇ ಕಾಲದಲ್ಲಿ ಅನೇಕಕರ್ಮಗಳ ಸಂಬಂಧ

1. ಸ್ವಾಭಾವಿಕವಾದ, ಹುಟ್ಟಿದಮೇಲೆ ಹೊಸದಾಗಿ ಉಂಟಾಗುವದಲ್ಲದ ಎಂದರ್ಥ.

2. ವೇದಪ್ರಾಮಾಣ್ಯವು ಮತ್ತೊಂದು ಪ್ರಮಾಣದ ಅಪೇಕ್ಷೆಯಿಲ್ಲದೆ ಸಿದ್ಧವಾಗುವದರಿಂದ ಎಂದರ್ಥ.

3. ನಿತ್ಯವಾದ ಶಬ್ದಕ್ಕೂ ನಿತ್ಯವಾದ ಅರ್ಥಕ್ಕೂ ವಾಚ್ಯವಾಚಕಸಂಬಂಧವು ನಿತ್ಯವಾಗಿರುವದರಿಂದ ವೇದವು ತನ್ನ ಅರ್ಥವನ್ನು ತಾನೇ ತಿಳಿಸುತ್ತದೆ, ಮತ್ತೆ ಯಾವ ಪ್ರಮಾಣವನ್ನೂ ಬಯಸುವದಿಲ್ಲ ಎಂದು ಜೈ. ಸೂ. ೧-೧-೫ ರಲ್ಲಿ ಸ್ಥಾಪಿತವಾಗಿದೆ.

ವಾದ ಹವಿಸ್ಸುಗಳ ಭೋಜನವನ್ನೇನೋ ಮಾಡಬಹುದು. ಆದರೂ ಶರೀರದ ಸಂಬಂಧವಿರುವದರಿಂದ ನಮ್ಮಂಥವರ ಹಾಗೆ ಹುಟ್ಟುಸಾವುಗಳುಳ್ಳದ್ದಾಗುವದು. ಆದ್ದರಿಂದ ನಿತ್ಯವಾದ ಶಬ್ದಕ್ಕೆ ನಿತ್ಯವಾದ ಅರ್ಥದೊಡನೆ ನಿತ್ಯವಾದ ಸಂಬಂಧವು ತೋರುವದರಿಂದ ವೈದಿಕಶಬ್ದದಲ್ಲಿ ಪ್ರಾಮಾಣ್ಯವು ಸಿದ್ಧವಾಗಿತ್ತಲ್ಲ, ಅದಕ್ಕೆ ವಿರೋಧವಾಗುವದು.

## ಸಿದ್ಧಾಂತ: ನಿತ್ಯಶಬ್ದದಿಂದ ಜಗತ್ತು ಉತ್ಪನ್ನವಾಗುತ್ತದೆ

( ಭಾಷ್ಯ )

೨೮೬. **ಇತಿ ಚೇತ್, ನಾಯಮಪ್ಯಸ್ತಿ ವಿರೋಧಃ । ಕಸ್ಮಾತ್ ? ಅತಃ ಪ್ರಭವಾತ್ ।** ಅತ ಏವ ಹಿ ವೈದಿಕಾತ್ ಶಬ್ದಾತ್ ದೇವಾದಿಕಂ ಜಗತ್ ಪ್ರಭವತಿ । ನನು 'ಜನ್ಮಾದ್ಯಸ್ಯ ಯತಃ' (೧-೧-೨) ಇತ್ಯತ್ರ ಬ್ರಹ್ಮಪ್ರಭವತ್ವಂ ಜಗತಃ ಅವಧಾರಿತಮ್ । ಕಥಮಿಹ ಶಬ್ದಪ್ರಭವತ್ವಮ್ ಉಚ್ಯತೇ ? ಅಪಿ ಚ ಯದಿ ನಾಮ ವೈದಿಕಾತ್ ಶಬ್ದಾತ್ ಅಸ್ಯ ಪ್ರಭವೋಽಭ್ಯುಪಗತಃ, ಕಥಮ್ ಏತಾವತಾ ವಿರೋಧಃ ಶಬ್ದೇ ಪರಿಹೃತಃ ? ಯಾವತಾ ವಸವಃ, ರುದ್ರಾಃ, ಆದಿತ್ಯಾಃ, ವಿಶ್ವೇದೇವಾಃ, ಮರುತಃ - ಇತ್ಯೇತೇ ಅರ್ಥಾಃ ಅನಿತ್ಯಾ ಏವ । ಉತ್ಪತ್ತಿಮತ್ತ್ವಾತ್ । ತದನಿತ್ಯತ್ವೇ ಚ ತದ್ವಾಚಿನಾಂ ವೈದಿಕಾನಾಂ ವಸ್ವಾದಿಶಬ್ದಾನಾಮ್ ಅನಿತ್ಯತ್ವಂ ಕೇನ ನಿವಾರ್ಯತೇ ? ಪ್ರಸಿದ್ಧಂ ಹಿ ಲೋಕೇ ದೇವದತ್ತಸ್ಯ ಪುತ್ರೇ ಉತ್ಪನ್ನೇ 'ಯಜ್ಞದತ್ತಃ' ಇತಿ ತಸ್ಯ ನಾಮ ಕ್ರಿಯತೇ ಇತಿ । ತಸ್ಮಾತ್ ವಿರೋಧ ಏವ ಶಬ್ದೇ ಇತಿ ಚೇತ್ । ನ । ಗವಾದಿಶಬ್ದಾರ್ಥಸಂಬನ್ಧನಿತ್ಯತ್ವದರ್ಶನಾತ್ । ನ ಹಿ ಗವಾದಿವ್ಯಕ್ತೀನಾಮ್ ಉತ್ಪತ್ತಿಮತ್ತ್ವೇ ತದಾಕೃತೀನಾಮಪಿ ಉತ್ಪತ್ತಿಮತ್ತ್ವಂ ಸ್ಯಾತ್ । ದ್ರವ್ಯಗುಣಕರ್ಮಣಾಂ ಹಿ ವ್ಯಕ್ತಯ ಏವ ಉತ್ಪದ್ಯನ್ತೇ ನಾಕೃತಯಃ । ಆಕೃತಿಭಿಶ್ಚ ಶಬ್ದಾನಾಂ ಸಂಬನ್ಧಃ, ನ ವ್ಯಕ್ತಿಭಿಃ । ವ್ಯಕ್ತೀನಾಮ್ ಆನನ್ತ್ಯಾತ್ ಸಂಬನ್ಧಗ್ರಹಣಾನುಪಪತ್ತೇಃ । ವ್ಯಕ್ತಿಷು ಉತ್ಪದ್ಯಮಾನಾಸ್ವಪಿ ಆಕೃತೀನಾಂ ನಿತ್ಯತ್ವಾತ್ ನ ಗವಾದಿಶಬ್ದೇಷು ಕಶ್ಚಿದ್ ವಿರೋಧೋ ದೃಶ್ಯತೇ । ತಥಾ ದೇವಾದಿವ್ಯಕ್ತಿಪ್ರಭವಾಭ್ಯುಪಗಮೇಽಪಿ ಆಕೃತಿನಿತ್ಯತ್ವಾತ್ ನ ಕಶ್ಚಿದ್ ವಸ್ವಾದಿಶಬ್ದೇಷು ವಿರೋಧಃ ಇತಿ ದ್ರಷ್ಟವ್ಯಮ್ । ಆಕೃತಿವಿಶೇಷಸ್ತು ದೇವಾದೀನಾಂ ಮನ್ತ್ರಾರ್ಥವಾದಾದಿಭ್ಯೋ ವಿಗ್ರಹವತ್ತ್ವಾದ್ಯವಗಮಾತ್ ಅವಗನ್ತವ್ಯಃ । ಸ್ಥಾನವಿಶೇಷಸಂಬನ್ಧನಿಮಿತ್ತಾ ಇನ್ದ್ರಾದಿಶಬ್ದಾಃ ಸೇನಾಪತ್ಯಾದಿಶಬ್ದವತ್ । ತತಶ್ಚ ಯೋ ಯಸ್ತತ್ತತ್ಸ್ಥಾನಮ್ ಅಧಿರೋಹತಿ ಸ ಸ ಇನ್ದ್ರಾದಿಶಬ್ದೈಃ ಅಭಿಧೀಯತೇ

ಇತಿ ನ ದೋಷೋ ಭವತಿ । ನ ಚೇದಂ ಶಬ್ದಪ್ರಭವತ್ವಂ ಬ್ರಹ್ಮಪ್ರಭವತ್ವವತ್ ಉಪಾದಾನಕಾರಣಾಭಿಪ್ರಾಯೇಣ ಉಚ್ಯತೇ । ಕಥಂ ತರ್ಹಿ ಸ್ಥಿತೇ ವಾಚಕಾತ್ಮನಾ ನಿತ್ಯೇ ಶಬ್ದೇ ನಿತ್ಯಾರ್ಥಸಂಬನ್ಧಿನಿ ಶಬ್ದವ್ಯವಹಾರಯೋಗ್ಯಾರ್ಥವ್ಯಕ್ತಿನಿಷ್ಪತ್ತಿಃ "ಅತಃ ಪ್ರಭವಃ" ಇತ್ಯುಚ್ಯತೇ ॥

(ಭಾಷ್ಯಾರ್ಥ)

ಹೀಗೆಂದರೆ, (ಅದಕ್ಕೆ ನಮ್ಮ ಸಮಾಧಾನವೇನೆಂದರೆ) ಈ ವಿರೋಧವೂ ಇಲ್ಲ. ಏಕೆ ? ಎಂದರೆ ಇದರಿಂದ ಉಂಟಾಗುವದರಿಂದ. ಇದೇ ವೈದಿಕಶಬ್ದದಿಂದಲೇ ದೇವತೆಗಳೇ ಮುಂತಾದ ಜಗತ್ತು ಉಂಟಾಗುತ್ತದೆ.

(ಆಕ್ಷೇಪ) :– "ಜನ್ಮಾದ್ಯಸ್ಯ ಯತಃ" (೧–೧–೨) ಎಂಬಲ್ಲಿ ಜಗತ್ತು ಬ್ರಹ್ಮದಿಂದ ಉಂಟಾಗುತ್ತದೆ ಎಂದು ನಿರ್ಧರಿಸಲಾಯಿತು. (ಹೀಗಿರುವಲ್ಲಿ) ಇಲ್ಲಿ ಶಬ್ದದಿಂದ ಉಂಟಾಗುತ್ತದೆ ಎಂದು ಹೇಳುವದು ಹೇಗೆ (ಸರಿ) ? ಇದಲ್ಲದೆ ವೈದಿಕಶಬ್ದದಿಂದ ಈ (ಜಗತ್ತು) ಹುಟ್ಟುವದೆಂದು ಒಪ್ಪಿದರೆ ತಾನೆ ಅಷ್ಟಮಾತ್ರದಿಂದ ಶಬ್ದ(ವಿಷಯ)ದಲ್ಲಾಗುವ ವಿರೋಧವು ಹೇಗೆ ಪರಿಹೃತವಾಯಿತು ? ಏಕೆಂದರೆ ವಸುಗಳು, ರುದ್ರರು, ಆದಿತ್ಯರು, ವಿಶ್ವೇದೇವತೆಗಳು, ಮರುತ್ತರು – ಎಂಬೀ ಪದಾರ್ಥಗಳು ಹುಟ್ಟುವಿಕೆಯುಳ್ಳವಾಗಿರುವದರಿಂದ ಅನಿತ್ಯವೇ (ಆಗುತ್ತವೆ) ; ಅವು ಅನಿತ್ಯವಾದರೆ ಅವುಗಳನ್ನು ತಿಳಿಸುವ ವೇದದಲ್ಲಿರುವ ವಸ್ವಾದಿಶಬ್ದಗಳು ಅನಿತ್ಯವೆಂಬುದನ್ನು ಇಲ್ಲವೆಂಬುದು ಯಾವನಿಂದ ಆದೀತು ? ದೇವದತ್ತನಿಗೆ ಮಗನು ಹುಟ್ಟಿದರೆ ಯಜ್ಞದತ್ತನೆಂದು ಅವನಿಗೆ ಹೆಸರನ್ನಿಡುತ್ತಾರೆ ಎಂದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಆದ್ದರಿಂದ ಶಬ್ದವಿಷಯದಲ್ಲಿ ವಿರೋಧವೇ ಆಗುವದಲ್ಲ !

(ಪರಿಹಾರ) :– ಹಾಗಲ್ಲ. ಏಕೆಂದರೆ ಗೋಶಬ್ದವೇ ಮುಂತಾದವುಗಳಿಗೂ (ಅವುಗಳ) ಅರ್ಥಗಳಿಗೂ ಸಂಬಂಧವು ನಿತ್ಯವಾಗಿರುವದು ಕಂಡುಬಂದಿದೆ. ಹೇಗೆಂದರೆ, ಗವಾದಿವ್ಯಕ್ತಿಗಳು ಹುಟ್ಟುವದಾದರೆ ಅವುಗಳ ಆಕೃತಿಗಳೂ ಹುಟ್ಟುವವೆಂದು ಆಗಲಾರದು. ದ್ರವ್ಯಗುಣಕರ್ಮಗಳ ವ್ಯಕ್ತಿಗಳು ಮಾತ್ರ ಹುಟ್ಟುವವೇ ಹೊರತು ಆಕೃತಿಗಳು[1] ಹುಟ್ಟುವದೇ ಇಲ್ಲ ಆಕೃತಿಗಳಿಗೂ ಶಬ್ದಗಳಿಗೂ ಸಂಬಂಧವೇ ಹೊರತು ವ್ಯಕ್ತಿಗಳಿಗೂ (ಅವಕ್ಕೂ) ಸಂಬಂಧವಿರುವದಿಲ್ಲ[2]. ಏಕೆಂದರೆ ವ್ಯಕ್ತಿಗಳು ಅನಂತವಾಗಿರುವದರಿಂದ (ಅವುಗಳಿಗೂ ಶಬ್ದಗಳಿಗೂ) ಸಂಬಂಧವನ್ನು ಗ್ರಹಿಸುವದು ಆಗಲಾರದು. ವ್ಯಕ್ತಿಗಳು

1. ದ್ರವ್ಯಗುಣಕರ್ಮಗಳಲ್ಲಿರುವ ಸಾಮಾನ್ಯಕ್ಕೆ ಆಕೃತಿ ಎಂದು ಹೆಸರು. ಶ. ಭಾ. ೧–೧–೫.

2. ಶ. ಭಾ. ೧–೩–೩೩ ನೋಡಿ.

ಹುಟ್ಟುವವಾದರೂ ಆಕೃತಿಗಳು ನಿತ್ಯವಾಗಿರುವದರಿಂದ **ಗೋಶಬ್ದವೇ** ಮುಂತಾದವುಗಳ ವಿಷಯದಲ್ಲಿ ಯಾವ ವಿರೋಧವೂ ಕಾಣಿಸುವದಿಲ್ಲ. ಇದರಂತೆಯೇ ದೇವತೆಗಳೇ ಮೊದಲಾದವರ ವ್ಯಕ್ತಿಗಳು ಹುಟ್ಟುವವೆಂದು ಅಂಗೀಕರಿಸಿದರೂ (ಅವರ) ಆಕೃತಿಗಳು ನಿತ್ಯವಾಗಿರುವದರಿಂದ ವಸು ಮುಂತಾದ ಶಬ್ದಗಳಲ್ಲಿ ಯಾವ ವಿರೋಧವೂ ಇಲ್ಲವೆಂದು ತಿಳಿಯಬೇಕು. ದೇವಾದಿಗಳಿಗೂ ಒಂದೊಂದು ಆಕೃತಿಯಿರುವದೆಂಬುದನ್ನು ಮಂತ್ರ, ಅರ್ಥವಾದ- ಮುಂತಾದವುಗಳಿಂದ (ಅವರಿಗೆ) ಶರೀರವಿರುವದೇ ಮುಂತಾದವು ನಿಶ್ಚಯವಾಗುವದರಿಂದ ಗೊತ್ತುಪಡಿಸಿಕೊಳ್ಳಬೇಕು. **ಮತ್ತು ಇಂದ್ರ ಮುಂತಾದ ಶಬ್ದಗಳು ಸೇನಾಪತಿ ಮುಂತಾದ ಶಬ್ದಗಳಂತೆ ಆಯಾ ಸ್ಥಾನಗಳ ಸಂಬಂಧದ ನಿಮಿತ್ತದಿಂದ ( ಪ್ರವರ್ತಿಸುತ್ತವೆ ).** ಆದ್ದರಿಂದ ಯಾವಯಾವನು ಆ ಸ್ಥಾನವನ್ನೇರುವನೋ ಅವನವನನ್ನು ಇಂದ್ರ ಮುಂತಾದ ಶಬ್ದಗಳಿಂದ ಕರೆಯುತ್ತಾರಾಗಿ (ಇಲ್ಲಿ ಯಾವ) ದೋಷವೂ ಇರುವದಿಲ್ಲ.

ಇವಲ್ಲದೆ ಶಬ್ದದಿಂದ (ಜಗತ್ತು) ಹುಟ್ಟುವದೆಂಬಿದು ಬ್ರಹ್ಮದಿಂದ ಹುಟ್ಟುವಂತೆ (ಶಬ್ದವು) ಉಪಾದಾನಕಾರಣವೆಂಬ ಅಭಿಪ್ರಾಯದಿಂದ (ಹೇಳಿ)ದ್ದಲ್ಲ; ಮತ್ತೆ ಹೇಗೆ? ಎಂದರೆ ನಿತ್ಯವಾಗಿರುವ ಅರ್ಥಕ್ಕೆ ಸಂಬಂಧಪಟ್ಟ ವಾಚಕಸ್ವರೂಪದಿಂದ ನಿತ್ಯವಾದ ಶಬ್ದವು ಇರುತ್ತಿರುವಲ್ಲಿ ಶಬ್ದವ್ಯವಹಾರಕ್ಕೆ ಯೋಗ್ಯವಾದ ಅರ್ಥವ್ಯಕ್ತಿಯು ಉಂಟಾಗುವದನ್ನೇ 'ಇದರಿಂದ ಹುಟ್ಟುವದು' ಎಂದು ಕರೆಯುತ್ತಾರೆ.[1]

## ಶಬ್ದದಿಂದ ಜಗತ್ತು ಹುಟ್ಟುವದೆಂಬುದಕ್ಕೆ ಶ್ರುತಿಸ್ಮೃತಿಗಳು

( ಭಾಷ್ಯ )

೨೮೭. ಕಥಂ ಪುನರವಗಮ್ಯತೇ ಶಬ್ದಾತ್ ಪ್ರಭವತಿ ಜಗತ್ ಇತಿ ? ಪ್ರತ್ಯಕ್ಷಾನುಮಾನಾಭ್ಯಾಮ್ | ಪ್ರತ್ಯಕ್ಷಂ ಶ್ರುತಿಃ | ಪ್ರಾಮಾಣ್ಯಂ ಪ್ರತಿ ಅನಪೇಕ್ಷತ್ವಾತ್ | ಅನುಮಾನಂ ಸ್ಮೃತಿಃ | ಪ್ರಾಮಾಣ್ಯಂ ಪ್ರತಿ ಸಾಪೇಕ್ಷತ್ವಾತ್ | ತೇ ಹಿ ಶಬ್ದಪೂರ್ವಾಂ ಸೃಷ್ಟಿಂ ದರ್ಶಯತಃ | "ಏತೇ ಇತಿ ವೈ ಪ್ರಜಾಪತಿರ್ದೇವಾನಸೃಜತಾಸೃಗ್ರಮಿತಿ ಮನುಷ್ಯಾನಿನ್ದವ ಇತಿ ಪಿತೄಂಸ್ತಿರಃಪವಿತ್ರಮಿತಿ ಗ್ರಹಾನಾಶವ ಇತಿ ಸ್ತೋತ್ರಂ ವಿಶ್ವಾನೀತಿ ಶಸ್ತ್ರಮಭಿಸೌಭಗೇತ್ಯನ್ಯಾಃ ಪ್ರಜಾಃ" ( ?[2] ) ಇತಿ ಶ್ರುತಿಃ |

1. ಆದ್ದರಿಂದ ಶಬ್ದಕ್ಕೂ ಆಕೃತಿಗೂ ಇರುವ ನಿತ್ಯಸಂಬಂಧಕ್ಕೆ ಇದರಿಂದೇನೂ ಹಾನಿಯಿಲ್ಲ.

2. ಇದು ಯಾವ ಶ್ರುತಿ ಎಂಬುದು ತಿಳಿಯದು; ಛಂದೋಗಬ್ರಾಹ್ಮಣವೆಂದು ರತ್ನಪ್ರಭಾವ್ಯಾಖ್ಯಾನದಲ್ಲಿದೆ.

ತಥಾ ಅನ್ಯತ್ರಾಪಿ "ಸ ಮನಸಾ ವಾಚಂ ಮಿಥುನಂ ಸಮಭವತ್" (ಬೃ. ೧–೨–೪) ಇತ್ಯಾದಿನಾ ತತ್ರ ತತ್ರ ಶಬ್ದಪೂರ್ವಿಕಾ ಸೃಷ್ಟಿಃ ಶ್ರಾವ್ಯತೇ। ಸ್ಮೃತಿರಪಿ—"ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ। ಆದೌ ವೇದಮಯೀ ದಿವ್ಯಾ ಯತಃ ಸರ್ವಾಃ ಪ್ರವೃತ್ತಯಃ॥"[1] (ಮೋ. ಧ. ೨೩೨–೨೪) ಇತಿ। ಉತ್ಸರ್ಗೋಽಪ್ಯಯಂ ವಾಚಃ ಸಂಪ್ರದಾಯಪ್ರವರ್ತನಾತ್ಮಕೋ ದ್ರಷ್ಟವ್ಯಃ। ಅನಾದಿನಿಧನಾಯಾಃ ಅನ್ಯಾದೃಶಸ್ಯ ಉತ್ಸರ್ಗಸ್ಯ ಅಸಂಭವಾತ್। ತಥಾ "ನಾಮ ರೂಪಂ ಚ ಭೂತಾನಾಂ ಕರ್ಮಣಾಂ ಚ ಪ್ರವರ್ತನಮ್। ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ"[2] (ಮೋ. ಧ. ೨೩೨–೨೬) ಇತಿ। "ಸರ್ವೇಷಾಂ ತು ಸ ನಾಮಾನಿ ಕರ್ಮಾಣಿ ಚ ಪೃಥಕ್‌ಪೃಥಕ್। ವೇದಶಬ್ದೇಭ್ಯ ಏವಾದೌ ಪೃಥಕ್ಸಂಸ್ಥಾಶ್ಚ ನಿರ್ಮಮೇ"॥ (ಮನು. ೧–೨೧) ಇತಿ ಚ। ಅಪಿ ಚ ಚಿಕೀರ್ಷಿತಮ್ ಅರ್ಥಮ್ ಅನುತಿಷ್ಠನ್ ತಸ್ಯ ವಾಚಕಂ ಶಬ್ದಂ ಪೂರ್ವಂ ಸ್ಮೃತ್ವಾ ಪಶ್ಚಾತ್ ತಮರ್ಥಮ್ ಅನುತಿಷ್ಠತಿ ಇತಿ ಸರ್ವೇಷಾಂ ನಃ ಪ್ರತ್ಯಕ್ಷಮೇತತ್। ತಥಾ ಪ್ರಜಾಪತೇರಪಿ ಸ್ರಷ್ಟುಃ ಸೃಷ್ಟೇಃ ಪೂರ್ವಂ ವೈದಿಕಾಃ ಶಬ್ದಾಃ ಮನಸಿ ಪ್ರಾದುರ್ಬಭೂವುಃ। ಪಶ್ಚಾತ್ ತದನುಗತಾನ್ ಅರ್ಥಾನ್ ಸಸರ್ಜ ಇತಿ ಗಮ್ಯತೇ। ತಥಾ ಚ ಶ್ರುತಿಃ "ಸ ಭೂರಿತಿ ವ್ಯಾಹರತ್ ಸ ಭೂಮಿಮಸೃಜತ।" (ತೈ. ಬ್ರಾ. ೨–೨–೪–೨) ಇತ್ಯೇವಮಾದಿಕಾ ಭೂರಾದಿಶಬ್ದೇಭ್ಯ ಏವ ಮನಸಿ ಪ್ರಾದುರ್ಭೂತೇಭ್ಯೋ ಭೂರಾದಿಲೋಕಾನ್ ಸೃಷ್ಟಾನ್ ದರ್ಶಯತಿ॥

( ಭಾಷ್ಯಾರ್ಥ )

ಇನ್ನು ಶಬ್ದದಿಂದ ಜಗತ್ತು ಉಂಟಾಗುವದೆಂಬುದನ್ನು ಹೇಗೆ ನಿಶ್ಚಯಿಸಬೇಕು ? ಎಂದರೆ ಪ್ರತ್ಯಕ್ಷಾನುಮಾನಗಳಿಂದ. **ಪ್ರತ್ಯಕ್ಷವೆಂದರೆ ಶ್ರುತಿಯು, ಏಕೆಂದರೆ (ಅದರ) ಪ್ರಾಮಾಣ್ಯಕ್ಕೆ (ಪ್ರಮಾಣಾಂತರದ) ಅಪೇಕ್ಷೆಯಿರುವದಿಲ್ಲ. ಅನುಮಾನವೆಂದರೆ ಸ್ಮೃತಿಯು. ಏಕೆಂದರೆ (ಅದರ) ಪ್ರಾಮಾಣ್ಯಕ್ಕೆ (ಶ್ರುತಿಯ) ಅಪೇಕ್ಷೆಯಿರುತ್ತದೆ**[3]. ಇವೆರಡೂ ಶಬ್ದಪೂರ್ವಕವಾಗಿಯೇ ಸೃಷ್ಟಿ(ಯಾಯಿತೆಂದು) ತಿಳಿಸುತ್ತವೆ. 'ಏತೇ' ಎಂದೇ ಪ್ರಜಾಪತಿಯು ದೇವತೆಗಳನ್ನು ಸೃಷ್ಟಿಸಿದನು; 'ಅಸೃಗ್ರಮ್' ಎಂದು ಮನುಷ್ಯರನ್ನು, 'ಇನ್ದವಃ' ಎಂದು ಪಿತೃಗಳನ್ನು, 'ತಿರಃ ಪವಿತ್ರಮ್' ಎಂದು

---

1. ಈ ಶ್ಲೋಕದ ಉತ್ತರಾರ್ಧವು ಆಚ್ಚಿನ ಭಾರತದಲ್ಲಿಲ್ಲ.
2. ಅಚ್ಚಿನ ಭಾರತದಲ್ಲಿ ರೂಪಾಂತರದಲ್ಲಿದೆ.
3. ಶ್ರುತಿಯ ಅರ್ಥವನ್ನು ವಿವರಿಸುವದರಿಂದಲೇ ಸ್ಮೃತಿಗೆ ಪ್ರಾಮಾಣ್ಯವು.

ಗ್ರಹಗಳನ್ನು, 'ಆಶವಃ' ಎಂದು ಸ್ತೋತ್ರವನ್ನು, 'ವಿಶ್ವಾನಿ' ಎಂದು ಶಸ್ತ್ರವನ್ನು, 'ಅಭಿಸೌಭಗ' ಎಂದು ಮಿಕ್ಕ ಪ್ರಜೆಗಳನ್ನು (ಸೃಷ್ಟಿಸಿದನು)" ಎಂದು ಶ್ರುತಿ[1] (?) ಇರುವದು. ಹೀಗೆಯೇ ಮತ್ತು ಬೇರೆ (ಕಡೆ)ಯಲ್ಲಿಯೂ "ಅವನು ಮನಸ್ಸಿನಿಂದ ವಾಕ್ಕನ್ನು ಮಿಥುನಭಾವದಿಂದ ಸೇರಿದನು"[2] (ಬೃ. ೧-೨-೪) ಎಂದು ಮುಂತಾಗಿ ಅಲ್ಲಲ್ಲಿ ಶಬ್ದಪೂರ್ವಕವಾದ ಸೃಷ್ಟಿಯನ್ನೇ ಶ್ರುತಿಯಲ್ಲಿ ಹೇಳಿದೆ. "ಆದಿಯಾಗಲಿ ಅಂತವಾಗಲಿ ಇಲ್ಲದ ನಿತ್ಯವಾದ ವೇದರೂಪವಾದ ದಿವ್ಯವಾಕ್ಕನ್ನು ಸ್ವಯಂಭುವು ಮೊದಲು ಉಂಟು ಮಾಡಿದನು ; ಅದರಿಂದ ಎಲ್ಲಾ ಪ್ರವೃತ್ತಿಗಳೂ (ಆಗಿರುತ್ತವೆ. ಮೋ. ಧ. ೨೩೨-೨೪) ಎಂದು ಸ್ಮೃತಿಯೂ (ಇದೆ). ಇಲ್ಲಿ (ಹೇಳಿರುವ) ಈ ಉಂಟು ಮಾಡುವಿಕೆಯು ಸಂಪ್ರದಾಯಪ್ರವರ್ತನರೂಪವಾದದ್ದೆಂದೇ[3] ಅರಿಯಬೇಕು ; ಏಕೆಂದರೆ ಆದ್ಯಂತಗಳಿಲ್ಲದ (ವಾಕ್ಕನ್ನು) ಬೇರೆಯ ಬಗೆಯಿಂದ ಉಂಟುಮಾಡುವಿಕೆಯು[4] ಆಗುವಹಾಗಿಲ್ಲ ಹೀಗೆಯೇ "ಭೂತಗಳ ನಾಮವನ್ನೂ ರೂಪವನ್ನೂ ಕರ್ಮಗಳ ಪ್ರವೃತ್ತಿಯನ್ನೂ ಆ ಮಹೇಶ್ವರನು ಆದಿಯಲ್ಲಿ ವೇದಶಬ್ದಗಳಿಂದಲೇ ನಿರ್ಮಿಸಿದನು" (ಮೋ. ಧ. ೨೩೨-೨೫) ಎಂದೂ "ಅವನು ಎಲ್ಲರ ಬೇರೆಬೇರೆಯ ನಾಮಗಳನ್ನೂ ಕರ್ಮಗಳನ್ನೂ ಬೇರೆಬೇರೆಯಾದ

---

1. "ಏತೇ ಅಸೃಗ್ರಮಿನ್ದವಸ್ತಿರಃ ಪವಿತ್ರಮಾಶವಃ, ವಿಶ್ವಾನ್ಯಭಿಸೌಭಗಾ" ಎಂಬ (ಋ. ಸ. ಮಂ. ೯-೬೨-೧) ಮಂತ್ರದಲ್ಲಿರುವ ಪದಗಳಿಂದ ಸ್ರಷ್ಟವ್ಯಪದಾರ್ಥಗಳನ್ನು ನೆನಪಿಗೆ ತಂದುಕೊಂಡು ಸೃಷ್ಟಿಸಿದನು. ಏತೇ-ದೇವತೆಗಳು, ಅಸೃಗ್ರಮ್- ರಕ್ತಪ್ರಧಾನವಾದ ದೇಹದಲ್ಲಿ ರಮಿಸುವ ಮನುಷ್ಯರು. ಇನ್ದವಃ- ಚಂದ್ರನಲ್ಲಿರುವ ಪಿತೃಗಳು, ತಿರಃ ಪವಿತ್ರಮ್- ಪವಿತ್ರವಾದ ಸೋಮವನ್ನು ತಮ್ಮಲ್ಲಿ ಕಾಣದಂತೆ ಮಾಡುವ ಗ್ರಹಗಳೆಂಬ ಬಟ್ಟಲುಗಳು. ಆಶವಃ- ಮುಕ್ಕುಗಳನ್ನು ಪಡೆಯುವ ಗೀತಿರೂಪವಾದ ಸ್ತೋತ್ರಗಳು, ವಿಶ್ವಾನಿ- ಸ್ತೋತ್ರಾನಂತರದಲ್ಲಿ ಪ್ರಯೋಗವನ್ನು ಪ್ರವೇಶಿಸುವ ಶಸ್ತ್ರಗಳು (ಸ್ತೋತ್ರವಿಶೇಷಗಳು), ಅಭಿಸೌಭಗ- ಸೌಭಾಗ್ಯಯುಕ್ತವಾದ ಇತರರು ಎಂದಿಂತು ಒಂದೊಂದು ಪದದಿಂದ ಒಂದೊಂದು ಸ್ರಷ್ಟವ್ಯವನ್ನು ನೆನಸಿಕೊಂಡನು ಎಂದು ಈ ಛಂದೋಗಬ್ರಾಹ್ಮಣವಾಕ್ಯದ ಅರ್ಥವು ಎಂದು ರತ್ನಪ್ರಭಾವ್ಯಾಖ್ಯಾನ.

2. ಅವನು ಮನಸ್ಸಿನಿಂದ ತ್ರಯೀರೂಪವಾದ ವಾಕ್ಕನ್ನು ಕುರಿತು ಆಲೋಚಿಸಿದನು, ಎಂದರೆ ವೇದದಲ್ಲಿ ತಿಳಿಸಿರುವ ಸೃಷ್ಟಿಕ್ರಮವನ್ನು ಮನಸ್ಸಿನಿಂದ ಆಲೋಚಿಸಿದನು ಎಂದರ್ಥ.

3. ಗುರುಶಿಷ್ಯಪರಂಪರೆಯಿಂದ ಒಬ್ಬರಿಗೊಬ್ಬರು ಕೊಡುವವೇ ಸಂಪ್ರದಾಯವು.

4. ಇಲ್ಲದ್ದನ್ನು ಹೊಸದಾಗಿ ಸೃಷ್ಟಿಸುವದು.

ಆಕಾರಗಳನ್ನೂ[1] ಆದಿಯಲ್ಲಿ ವೇದಶಬ್ದಗಳಿಂದಲೇ ಸೃಷ್ಟಿಸಿದನು" (ಮನು.. ೧-೨-೧) ಎಂದೂ (ಸ್ಮೃತಿಯೂ ಇರುತ್ತದೆ).

ಇದಲ್ಲದೆ ಮಾಡಬೇಕೆಂದು ಬಯಸಿದ ಕೆಲಸವನ್ನು ಮಾಡುವವನು ಅದರ ವಾಚಕವಾದ ಶಬ್ದವನ್ನು ಮೊದಲು ನೆನಪಿಗೆ ತಂದುಕೊಂಡು ಬಳಿಕ ಆ ಕೆಲಸವನ್ನು ಮಾಡುತ್ತಾನೆಂಬುದು ನಮಗೆಲ್ಲರಿಗೂ ಪ್ರತ್ಯಕ್ಷವಾಗಿರುತ್ತದೆ. ಇದರಂತೆ ಸ್ರಷ್ಟೃವಾದ **ಪ್ರಜಾಪತಿಗೂ** ಸೃಷ್ಟಿಗೆ ಮುಂಚೆ ವೈದಿಕಶಬ್ದಗಳು ಮನಸ್ಸಿನಲ್ಲಿ ತೋರಿಕೊಂಡವು ; ಆ ಬಳಿಕ ಅವುಗಳಿಂದ ಅನುಗತವಾದ ಪದಾರ್ಥಗಳನ್ನು ಸೃಷ್ಟಿಸಿದನು ಎಂದು ನಿಶ್ಚಯವಾಗುತ್ತದೆ. ಆದ್ದರಿಂದಲೇ "ಅವನು 'ಭೂಃ' ಎಂದು ಉಚ್ಚರಿಸಿದನು, ಅವನು ಭೂಮಿಯನ್ನು ಸೃಷ್ಟಿಸಿದನು" (ತೈ. ಬ್ರಾ. ೨-೨-೪-೨) ಎಂದು ಮುಂತಾಗಿರುವ ಶ್ರುತಿಯೂ ಮನಸ್ಸಿನಲ್ಲಿ ಹೊರತೋರಿಕೊಂಡ ಭೂರಾದಿಶಬ್ದಗಳಿಂದಲೇ ಭೂರಾದಿಲೋಕಗಳ ಸೃಷ್ಟಿ(ಯಾಯಿತೆಂದು) ತಿಳಿಸುತ್ತದೆ.

## ಪೂರ್ವಪಕ್ಷ: ಶಬ್ದವು ಸ್ಫೋಟರೂಪ, ವರ್ಣಗಳು ಅನಿತ್ಯ

( ಭಾಷ್ಯ )

೨೮೮. ಕಿಮಾತ್ಮಕಂ ಪುನಃ ಶಬ್ದಮ್ ಅಭಿಪ್ರೇತ್ಯ ಇದಂ ಶಬ್ದಪ್ರಭವತ್ವಮ್ ಉಚ್ಯತೇ ? ಸ್ಫೋಟಮ್ ಇತ್ಯಾಹ । ವರ್ಣಪಕ್ಷೇ ಹಿ ತೇಷಾಮ್ ಉತ್ಪನ್ನಪ್ರಧ್ವಂಸಿತ್ವಾತ್ ನಿತ್ಯೇಭ್ಯಃ ಶಬ್ದೇಭ್ಯಃ ದೇವಾದಿವ್ಯಕ್ತೀನಾಂ ಪ್ರಭವಃ ಇತಿ ಅನುಪಪನ್ನಂ ಸ್ಯಾತ್ । ಉತ್ಪನ್ನಧ್ವಂಸಿನಶ್ಚ ವರ್ಣಾಃ । ಪ್ರತ್ಯುಚ್ಚಾರಣಮ್ ಅನ್ಯಥಾ ಚ ಅನ್ಯಥಾ ಚ ಪ್ರತೀಯಮಾನತ್ವಾತ್ । ತಥಾ ಹಿ । ಅದೃಶ್ಯಮಾನೋಽಪಿ ಪುರುಷವಿಶೇಷಃ ಅಧ್ಯಯನಧ್ವನಿಶ್ರವಣಾದೇವ ವಿಶೇಷತೋ ನಿರ್ಧಾರ್ಯತೇ 'ದೇವದತ್ತೋಽಯಮ್ ಅಧೀತೇ, 'ಯಜ್ಞದತ್ತೋಽಯಮ್ ಅಧೀತೇ' ಇತಿ । ನ ಚಾಯಂ ವರ್ಣವಿಷಯೋಽನ್ಯಥಾತ್ವಪ್ರತ್ಯಯಃ ಮಿಥ್ಯಾಜ್ಞಾನಮ್ | ಬಾಧಕಪ್ರತ್ಯಯಾಭಾವಾತ್ | ನ ಚ ವರ್ಣೇಭ್ಯಃ ಅರ್ಥಾವಗತಿರ್ಯುಕ್ತಾ | ನ ಹಿ ಏಕೈಕೋ ವರ್ಣಃ ಅರ್ಥಂ ಪ್ರತ್ಯಾಯಯೇತ್ | ವ್ಯಭಿಚಾರಾತ್ । ನ ಚ ವರ್ಣಸಮುದಾಯಪ್ರತ್ಯಯೋಽಸ್ತಿ | ಕ್ರಮವತ್ತ್ವಾದ್ ವರ್ಣಾನಾಮ್ | ಪೂರ್ವಪೂರ್ವವರ್ಣಾನುಭವಜನಿತಸಂಸ್ಕಾರಸಹಿತಃ

1. ಜಗತ್ತಿನ ನಾಮರೂಪಕರ್ಮಗಳನ್ನು ಎಂದರ್ಥ. 'ಸಂಸ್ಥಾಃ' ಎಂದರೆ ಕುಂಬಾರನು ಗಡಿಗೆಯನ್ನೇ ಮಾಡಬೇಕು, ನೇಯ್ಗೆಯವನು ಬಟ್ಟೆಯನ್ನೇ ಮಾಡಬೇಕು ಎಂಬ ವ್ಯವಸ್ಥೆಯನ್ನು -ಎಂದು ಕುಲ್ಲೂಕವ್ಯಾಖ್ಯಾನದಲ್ಲಿದೆ.

ಅನ್ತ್ಯೋ ವರ್ಣಃ ಅರ್ಥಂ ಪ್ರತ್ಯಾಯಯಿಷ್ಯತಿ ಇತಿ ಯದ್ಯುಚ್ಯೇತ, ತನ್ನ। ಸಂಬನ್ಧಗ್ರಹಣಾಪೇಕ್ಷೋ ಹಿ ಶಬ್ದಃ ಸ್ವಯಂ ಪ್ರತೀಯಮಾನಃ ಅರ್ಥಂ ಪ್ರತ್ಯಾಯಯೇತ್ ಧೂಮಾದಿವತ್। ನ ಚ ಪೂರ್ವಪೂರ್ವವರ್ಣಾನುಭವಜನಿತಸಂಸ್ಕಾರಸಹಿತಸ್ಯ ಅನ್ತ್ಯವರ್ಣಸ್ಯ ಪ್ರತೀತಿರಸ್ತಿ। ಅಪ್ರತ್ಯಕ್ಷತ್ವಾತ್ ಸಂಸ್ಕಾರಾಣಾಮ್। ಕಾರ್ಯಪ್ರತ್ಯಾಯಿತೈಃ ಸಂಸ್ಕಾರೈಃ ಸಹಿತಃ ಅನ್ತ್ಯೋ ವರ್ಣಃ ಅರ್ಥಂ ಪ್ರತ್ಯಾಯಯಿಷ್ಯತಿ ಇತಿ ಚೇತ್। ನ। ಸಂಸ್ಕಾರಕಾರ್ಯಸ್ಯಾಪಿ ಸ್ಮರಣಸ್ಯ ಕ್ರಮವರ್ತಿತ್ವಾತ್। ತಸ್ಮಾತ್ ಸ್ಫೋಟ ಏವ ಶಬ್ದಃ। ಸ ಚ ಏಕೈಕವರ್ಣಪ್ರತ್ಯಯಾಹಿತಸಂಸ್ಕಾರಬೀಜೇ ಅನ್ತ್ಯವರ್ಣಪ್ರತ್ಯಯಜನಿತಪರಿಪಾಕೇ ಪ್ರತ್ಯಯಿನಿ ಏಕಪ್ರತ್ಯಯವಿಷಯತಯಾ ಝಟಿತಿ ಪ್ರತ್ಯವಭಾಸತೇ। ನ ಚಾಯಮ್ ಏಕಪ್ರತ್ಯಯಃ ವರ್ಣವಿಷಯಾ ಸ್ಮೃತಿಃ। ವರ್ಣಾನಾಮ್ ಅನೇಕತ್ವಾತ್ ಏಕಪ್ರತ್ಯಯವಿಷಯತ್ವಾನುಪಪತ್ತೇಃ। ತಸ್ಯ ಚ ಪ್ರತ್ಯುಚ್ಚಾರಣಂ ಪ್ರತ್ಯಭಿಜ್ಞಾಯಮಾನತ್ವಾತ್ ನಿತ್ಯತ್ವಮ್। ಭೇದಪ್ರತ್ಯಯಸ್ಯ ವರ್ಣವಿಷಯತ್ವಾತ್। ತಸ್ಮಾತ್ ನಿತ್ಯಾತ್ ಶಬ್ದಾತ್ ಸ್ಫೋಟರೂಪಾತ್ ಅಭಿಧಾಯಕಾತ್ ಕ್ರಿಯಾಕಾರಕಫಲಲಕ್ಷಣಂ ಜಗತ್ ಅಭಿಧೇಯಭೂತಂ ಪ್ರಭವತಿ ಇತಿ ॥

(ಭಾಷ್ಯಾರ್ಥ)

(ಪ್ರಶ್ನೆ):- (ಹಾಗಾದರೆ) ಶಬ್ದವು ಯಾವ ಸ್ವರೂಪದ್ದೆಂದು ಇಟ್ಟುಕೊಂಡು ಈ ಶಬ್ದಪ್ರಭವತ್ವವನ್ನು[1] ಹೇಳುತ್ತೀರಿ ?

(ಸ್ಫೋಟವಾದಿ):- ಸ್ಫೋಟವೆಂದು[2] (ಇಟ್ಟುಕೊಂಡು ಹೇಳುತ್ತೇವೆ). ವರ್ಣ(ಗಳೇ ಶಬ್ದವೆಂಬ) ಪಕ್ಷದಲ್ಲಿ ಅವು ಹುಟ್ಟುತ್ತಲೇ ನಾಶವಾಗುವದರಿಂದ ನಿತ್ಯವಾದ ಶಬ್ದಗಳಿಂದ ದೇಹಾದಿಗಳೆಂಬ ವ್ಯಕ್ತಿಗಳು ಹುಟ್ಟುವದೆಂಬುದು ಅಯುಕ್ತವಾಗುವದು. ವರ್ಣಗಳು ಹುಟ್ಟುತ್ತಲೇ ನಾಶವಾಗತಕ್ಕವು ; ಏಕೆಂದರೆ ಒಂದೊಂದು ಉಚ್ಚಾರಣೆಯಲ್ಲಿಯೂ (ಅವು) ಬೇರೆಬೇರೆಯಾಗಿ ಕಾಣುತ್ತಿರುತ್ತವೆ. ಹೇಗೆಂದರೆ, (ಅಧ್ಯಯನಮಾಡುತ್ತಿರುವ) ಒಬ್ಬಾನೊಬ್ಬ ಪುರುಷನು ಕಾಣದೆ ಇರುವಾಗಲೂ ಅಧ್ಯಯನದ ಧ್ವನಿಯನ್ನು ಕೇಳುವದರಿಂದಲೇ, 'ಇಗೊ, ದೇವದತ್ತನು ಅಧ್ಯಯನಮಾಡುತ್ತಿದಾನೆ,' 'ಇಗೊ, ಯಜ್ಞದತ್ತನು

1. ಜಗತ್ತು ಶಬ್ದದಿಂದ ಹುಟ್ಟುವದೆಂಬುದನ್ನು.

2. ವರ್ಣಗಳಿಗಿಂತ ಬೇರೆಯಾಗಿರುವ ಶಬ್ದವು ; ಅದು ಅರ್ಥವನ್ನು ಸ್ಫುಟಗೊಳಿಸುವದರಿಂದ ಸ್ಫೋಟವೆನಿಸುತ್ತದೆ ಎಂದು ಭಾವ.

ಅಧ್ಯಯನಮಾಡುತ್ತಿದಾನೆ' ಎಂದು (ಇವನು) ಇಂಥವನೆಂದು ಗೊತ್ತುಮಾಡುತ್ತಾರೆ. ವರ್ಣಗಳ ವಿಷಯದಲ್ಲಿ ಅವು ಬೇರೆ(ಬೇರೆ)ಯೆಂದು (ಆಗುವ) ಈ ಅರಿವು ತಪ್ಪುತಿಳಿವಳಿಕೆ (ಎನ್ನುವದಕ್ಕೂ ಬರುವ)ದಿಲ್ಲ. ಏಕೆಂದರೆ (ಈ ತಿಳಿವಳಿಕೆಗೆ) ಬಾಧಕವಾದ ಅರಿವು ಇರುವದಿಲ್ಲ[1] ವರ್ಣಗಳಿಂದ ಅರ್ಥವನ್ನು ಅರಿಯುವೆವೆಂಬುದು ಯುಕ್ತವೂ ಅಲ್ಲ. ಹೇಗೆಂದರೆ (ಮೊದಲನೆಯದಾಗಿ) ಒಂದೊಂದು ವರ್ಣವು ಅರ್ಥವನ್ನು ತಿಳಿಸಲಾರದು; ಏಕೆಂದರೆ (ಅದರ ಪ್ರತ್ಯಾಯಕತ್ವವು) ವ್ಯಭಿಚರಿತವಾಗುತ್ತದೆ.[2] ವರ್ಣಸಮುದಾಯದ ಪ್ರತ್ಯಯವೂ ಇಲ್ಲ; ಏಕೆಂದರೆ ವರ್ಣಗಳು ಕ್ರಮವುಳ್ಳವುಗಳಾಗಿರುತ್ತವೆ.[3] ಹಿಂದುಹಿಂದಿನ ವರ್ಣದ ಅನುಭವದಿಂದುಂಟಾದ ಸಂಸ್ಕಾರದಿಂದೊಡಗೂಡಿದ ಕೊನೆಯ ವರ್ಣವು ಅರ್ಥವನ್ನು ತಿಳಿಸಲಿ, ಎನ್ನುವದಾದರೆ[4] ಅದು ಸರಿಯಲ್ಲ. ಶಬ್ದವು ತಾನೂ ತೋರಿಕೊಂಡು, ಸಂಬಂಧಗ್ರಹಣವನ್ನೂ ಅಪೇಕ್ಷಿಸಿಯಲ್ಲವೆ, ಹೊಗೆ ಮುಂತಾದವುಗಳು (ಬೆಂಕಿ ಮುಂತಾದವನ್ನು ತಿಳಿಸು)ವಂತೆ ಅರ್ಥವನ್ನು ತಿಳಿಸಬೇಕು? ಆದರೆ ಹಿಂದುಹಿಂದಿನ ವರ್ಣದ ಅನುಭವದಿಂದುಂಟಾದ ಸಂಸ್ಕಾರದಿಂದೊಡಗೂಡಿದ ಅಂತ್ಯವರ್ಣದ ಅರಿವೇ ಇರುವದಿಲ್ಲ[5]; ಏಕೆಂದರೆ ಸಂಸ್ಕಾರಗಳು ಅಪ್ರತ್ಯಕ್ಷವಾಗಿರುತ್ತವೆ. ಕಾರ್ಯದಿಂದ ತಿಳಿದುಬರುವ ಸಂಸ್ಕಾರದಿಂದೊಡಗೂಡಿದ[6] ಅಂತ್ಯವರ್ಣವು ಅರ್ಥವನ್ನು ತಿಳಿಸಲಿ, ಎಂದರೆ ಹಾಗಲ್ಲ; ಏಕೆಂದರೆ ಸಂಸ್ಕಾರದ ಕಾರ್ಯವಾದ ಸ್ಮರಣೆಯೂ ಕ್ರಮವುಳ್ಳದ್ದಾಗಿಯೇ ಇರುತ್ತದೆ.[7]

---

1. ಈ ವರ್ಣಗಳು ಬೇರೆಬೇರೆಯಲ್ಲ ಎಂಬ ಬಾಧಕಪ್ರತ್ಯಯವುಂಟಾಗಿದ್ದರೆ ಅವು ಬೇರೆಬೇರೆಯೆಂದಾಗುವ ಈ ಅರಿವು ಭ್ರಾಂತಿಯೆಂದಾಗುತ್ತಿತ್ತು.

2. ಕಮಲ ಎಂಬ ಶಬ್ದದಲ್ಲಿ ಕ ಎಂಬುದು ತಾವರೆಯನ್ನು ಹೇಳುತ್ತದೆ ಎನ್ನುವದಕ್ಕಿಲ್ಲ; ಏಕೆಂದರೆ ಕಂಟಕ ಎಂಬ ಶಬ್ದದಲ್ಲಿ ಅದಕ್ಕೆ ಮುಳ್ಳು ಎಂಬ ಮತ್ತೊಂದು ಅರ್ಥವೆಂದು ಕಲ್ಪಿಸಬೇಕಾಗುವದರಿಂದ ಇಂಥ ವರ್ಣಕ್ಕೆ ಇಂಥ ಅರ್ಥವೆಂಬ ನಿಯಮವಿಲ್ಲದೆ ಹೋಗುತ್ತದೆ- ಎಂದರ್ಥ. ಒಂದೇ ವರ್ಣವು ವಸ್ತುವನ್ನು ಹೇಳಿದರೆ ಮಿಕ್ಕ ವರ್ಣಗಳು ವ್ಯರ್ಥವೂ ಆಗುತ್ತವೆ ಎಂದು ಭಾವ.

3. ಆದ್ದರಿಂದ ವರ್ಣಗಳು ಒಟ್ಟಿಗೆ ಸೇರಿರುವ ಸಂಭವವೇ ಇಲ್ಲ.

4. ವರ್ಣದ ಅನುಭವವು ಇಲ್ಲದಿದ್ದರೂ ಅದರ ಸಂಸ್ಕಾರವಿರುತ್ತದೆ; ಹಿಂದಿನ ವರ್ಣಗಳ ಸಂಸ್ಕಾರವೂ ಅಂತ್ಯವರ್ಣವೂ ಸೇರಿದ ಸಮುದಾಯವಿರಬಹುದು_ ಎಂದು ಅಭಿಪ್ರಾಯ.

5. ಇದ್ದರೆ ಅದರಿಂದ ಅರ್ಥವು ತೋರುತ್ತದೆ ಎನ್ನಬಹುದಾಗಿತ್ತು.

6. ಸಂಸ್ಕಾರದ ಅರಿವು ಉಂಟಾಗದಿದ್ದರೂ ಅದರ ಕಾರ್ಯವಾದ ಸ್ಮರಣೆಯ ಅರಿವು ಆಗಬಹುದಲ್ಲ! –ಎಂದು ಶಂಕೆ.

7. ಆದ್ದರಿಂದ ಸ್ಮರಣೆಗಳೂ ಅಂತ್ಯವರ್ಣದ ಜೊತೆಯಲ್ಲಿರುವಂತಿಲ್ಲ.

ಆದ್ದರಿಂದ ಸ್ಫೋಟವೇ ಶಬ್ದವು. ಅದು ಒಂದೊಂದು ವರ್ಣದ ಅನುಭವದಿಂದುಂಟಾದ ಸಂಸ್ಕಾರವೆಂಬ ಬೀಜವುಳ್ಳದ್ದೂ ಕೊನೆಯ ವರ್ಣದ ಪ್ರತ್ಯಯದಿಂದುಂಟಾದ ಪರಿಪಾಕವುಳ್ಳದ್ದೂ ಆದ ಅಂತಃಕರಣದಲ್ಲಿ ಒಂದೆಂಬ ಪ್ರತ್ಯಯಕ್ಕೆ ವಿಷಯವಾಗಿ ಚಟ್ಟನೆ ತೋರಿಕೊಳ್ಳುತ್ತದೆ.[1] ಈ ಒಂದೆಂಬ ಅರಿವು ವರ್ಣಗಳ ವಿಷಯವಾದ ಸ್ಮೃತಿಯಲ್ಲ; ಏಕೆಂದರೆ ವರ್ಣಗಳು ಅನೇಕವಾಗಿರುವದರಿಂದ (ಅವು) ಒಂದೆಂಬ ಅರಿವಿಗೆ ವಿಷಯವಾಗಲಾರವು. ಆ (ಸ್ಫೋಟವು) ಒಂದೊಂದು ಉಚ್ಚಾರಣೆಯ (ಸಮಯದ)ಲ್ಲಿಯೂ (ಇದೇ ಅದು ಎಂದು) ಗೊತ್ತಾಗಿ ತಿಳಿಯಬರುತ್ತಿರುವದರಿಂದ ನಿತ್ಯವಾಗಿರುತ್ತದೆ. ಏಕೆಂದರೆ ಬೇರೆಬೇರೆ ಎಂಬ ಅರಿವಿಗೆ ವರ್ಣಗಳು ವಿಷಯವಾಗಿರುತ್ತವೆ; ಆದ್ದರಿಂದ ಸ್ಫೋಟರೂಪವಾದ ಅಭಿಧಾಯಕವಾದ ನಿತ್ಯವಾದ ಶಬ್ದದಿಂದ ಅಭಿಧೇಯವಾದ ಕ್ರಿಯಾಕಾರಕಫಲರೂಪವಾದ ಜಗತ್ತು ಉಂಟಾಗುತ್ತದೆ.

## ಸಿದ್ಧಾಂತ: ಶಬ್ದವೆಂದರೆ ವರ್ಣಗಳೇ

( ಭಾಷ್ಯ )

೨೮೯. ವರ್ಣಾ ಏವ ತು ಶಬ್ದಃ ಇತಿ ಭಗವಾನ್ ಉಪವರ್ಷಃ। ನನು ಉತ್ಪನ್ನಪ್ರಧ್ವಂಸಿತ್ವಂ ವರ್ಣಾನಾಮ್ ಉಕ್ತಮ್। ತನ್ನ। ತ ಏವ ಇತಿ ಪ್ರತ್ಯಭಿಜ್ಞಾನಾತ್। ಸಾದೃಶ್ಯಾತ್ ಪ್ರತ್ಯಭಿಜ್ಞಾನಂ ಕೇಶಾದಿಷ್ವಿವ ಇತಿ ಚೇತ್। ನ। ಪ್ರತ್ಯಭಿಜ್ಞಾನಸ್ಯ ಪ್ರಮಾಣಾನ್ತರೇಣ ಬಾಧಾನುಪಪತ್ತೇಃ। ಪ್ರತ್ಯಭಿಜ್ಞಾನಮ್ ಆಕೃತಿನಿಮಿತ್ತಮ್ ಇತಿ ಚೇತ್। ನ। ವ್ಯಕ್ತಿಪ್ರತ್ಯಭಿಜ್ಞಾನಾತ್। ಯದಿ ಹಿ ಪ್ರತ್ಯುಚ್ಚಾರಣಂ ಗವಾದಿವ್ಯಕ್ತಿವತ್ ಅನ್ಯಾ ಅನ್ಯಾಃ ವರ್ಣವ್ಯಕ್ತಯಃ ಪ್ರತೀಯೇರನ್ ತತಃ ಆಕೃತಿನಿಮಿತ್ತಂ ಪ್ರತ್ಯಭಿಜ್ಞಾನಂ ಸ್ಯಾತ್। ನ ತು ಏತದಸ್ತಿ। ವರ್ಣವ್ಯಕ್ತಯ ಏವ ಹಿ ಪ್ರತ್ಯುಚ್ಚಾರಣಂ ಪ್ರತ್ಯಭಿಜ್ಞಾಯನ್ತೇ।, 'ದ್ವಿರ್ಗೋಶಬ್ದಃ ಉಚ್ಚಾರಿತಃ' ಇತಿ ಹಿ ಪ್ರತಿಪತ್ತಿಃ, ನ ತು 'ದ್ವೌ ಗೋಶಬ್ದೌ' ಇತಿ ॥

( ಭಾಷ್ಯಾರ್ಥ )

ಆದರೆ ವರ್ಣಗಳೇ ಶಬ್ದವು ಎಂದು ಭಗವಂತನಾದ **ಉಪವರ್ಷನು**[2] (ಅಭಿಪ್ರಾಯಪಟ್ಟಿರುತ್ತಾನೆ).

---

1. ಅದು ವರ್ಣಗಳೆಲ್ಲಕ್ಕಿಂತಲೂ ಭಿನ್ನವಾಗಿಯೇ ಇರುತ್ತದೆ.

2. ಜೈ. ಸೂ, ೧-೧-೫ರ ಭಾಷ್ಯದಲ್ಲಿ ಶಬರಸ್ವಾಮಿಗಳು ಈ ಉಪವರ್ಷಮತವನ್ನು ಉದಾಹರಿಸಿ ವರ್ಣವ್ಯತಿರಿಕ್ತವಾದ ಶಬ್ದವಿದೆ ಎಂಬ ಮತವನ್ನು ಖಂಡಿಸಿರುತ್ತಾರೆ; ಪ್ರಕೃತಭಾಷ್ಯವು ಶಬರಭಾಷ್ಯವನ್ನು ಅವಲಂಬಿಸಿ ಬರೆದದ್ದು. ವ್ಯವಹಾರದಲ್ಲಿ ಮೀಮಾಂಸಕರ ಮತವನ್ನೇ ವೇದಾಂತಿಗಳೂ ಒಪ್ಪುತ್ತಾರೆ. ಉಪವರ್ಷಾಚಾರ್ಯನ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

(ಆಕ್ಷೇಪ) :– ವರ್ಣಗಳು ಹುಟ್ಟುತ್ತಲೇ ನಾಶವಾಗುವವೆಂದು (ಇದಕ್ಕೆ ಆಕ್ಷೇಪವನ್ನು) ಹೇಳಿತ್ತಲ್ಲ !

(ಪರಿಹಾರ) :– ಅದು (ಸರಿ)ಯಲ್ಲ. ಏಕೆಂದರೆ 'ಅವೇ (ಇವು)' ಎಂದು ಪ್ರತ್ಯಭಿಜ್ಞಾನವಾಗುತ್ತದೆ.[1]

(ಆಕ್ಷೇಪ) :– ತಲೆಗೂದಲು ಮುಂತಾ(ದವುಗಳ ಅರಿವಿ)ನಂತೆ ಸಾದೃಶ್ಯ ದಿಂದ (ಈ) ಪ್ರತ್ಯಭಿಜ್ಞಾನ(ವಾಗಬಹುದು).

(ಪರಿಹಾರ) :– ಹಾಗಲ್ಲ. ಏಕೆಂದರೆ ಪ್ರತ್ಯಭಿಜ್ಞಾನವು ಮತ್ತೊಂದು ಪ್ರಮಾಣದಿಂದ ಬಾಧಿತ(ವಾಗುವದೆಂಬುದು) ಸರಿಯಲ್ಲ.[2]

(ಆಕ್ಷೇಪ) :– (ಈ) ಪ್ರತ್ಯಭಿಜ್ಞಾನವು (ವರ್ಣಗಳ) ಆಕೃತಿಯ ನಿಮಿತ್ತ ದಿಂದ[3] (ಆಗುತ್ತದೆ ಎನ್ನಬಹುದು).

(ಪರಿಹಾರ) :– ಹಾಗಲ್ಲ. ಏಕೆಂದರೆ (ಇಲ್ಲಿ) ವ್ಯಕ್ತಿಗಳ ಪ್ರತ್ಯಭಿ ಜ್ಞಾನವಾಗುತ್ತದೆ. ಪ್ರತಿಯೊಂದು ಉಚ್ಚಾರಣೆಯಲ್ಲಿಯೂ ಗವಾದಿವ್ಯಕ್ತಿಗಳಂತೆ ಬೇರೆ(ಬೇರೆಯ) ವರ್ಣವ್ಯಕ್ತಿಗಳು ತೋರಿದ್ದರೆ ಆಗ ಆಕೃತಿನಿಮಿತ್ತದಿಂದ ಪ್ರತ್ಯಭಿಜ್ಞಾನ(ವಾಗಬಹುದೆಂದು) ಆಗುತ್ತಿತ್ತು. ಆದರೆ ಇದಿಲ್ಲ. ವರ್ಣ ವ್ಯಕ್ತಿಗಳೇ ಅಲ್ಲವೆ, ಒಂದೊಂದು ಉಚ್ಚಾರಣೆಯಲ್ಲಿಯೂ (ಅದೇ ಇದೆಂದು) ಗೊತ್ತಾಗಿ ತಿಳಿಯಬರುತ್ತವೆ ? 'ಗೋಶಬ್ದವನ್ನು ಎರಡು ಸಲ ಉಚ್ಚರಿಸಿದನು ಎಂದೇ ಅರಿವಾ(ಗುತ್ತದೆಯೇ) ಹೊರತು ಎರಡು ಗೋಶಬ್ದಗಳನ್ನು (ಉಚ್ಚರಿ ಸಿದನು) ಎಂದೇನೂ (ಅರಿವಾಗುವ)ದಿಲ್ಲ.

---

1. ಅದೇ ಇದು ಎಂದಾಗುವ ಅರಿವಿಗೆ ಪ್ರತ್ಯಭಿಜ್ಞಾನವೆಂದು ಹೆಸರು. ಆಗ ಉಚ್ಚರಿಸಿದ ಗಕಾರವೇ ಇದು ಎಂದು ಗುರುತಿಸುವ ಅರಿವಾಗುವದರಿಂದ ವರ್ಣಗಳಿಗೆ ನಾಶವಿಲ್ಲ ಎಂದು ಭಾವ.

2. ಅದೇ ಗಕಾರವಿದು ಎಂದು ನಿಶ್ಚಯವಾಗಿ ಗೊತ್ತುಮಾಡಿಕೊಡುವ ಪ್ರತ್ಯಭಿ ಜ್ಞಾಪ್ರತ್ಯಕ್ಷವನ್ನು ಇದು ಸಾದೃಶ್ಯದಿಂದ ಹೀಗೆ ತೋರುತ್ತಿದೆ ಎಂಬ ಅನುಮಾನದಿಂದ ಬಾಧಿಸುವದು ಸರಿಯಲ್ಲ.

3. ಗೋವುಗಳು ಬೇರೆಬೇರೆಯಾದರೂ ಗೋತ್ವವೆಂಬ ಆಕೃತಿಯು ಒಂದೇ ಆಗಿರುತ್ತದೆ. ಆದ್ದರಿಂದ ಅದೇ ಇದು ಎಂದಾಗುವ ಪ್ರತ್ಯಭಿಜ್ಞೆಗೆ ಗತ್ವಾದಿಗಳ ಏಕತ್ವ ಜ್ಞಾನವೇ ಮೂಲ, ನಿಜವಾಗಿ ವರ್ಣಗಳು ಬೇರೆಬೇರೆಯೇ ಎಂದು ಭಾವ.

# ವರ್ಣಗಳು ಬೇರೆಬೇರೆ ಎಂದು ತೋರುವದಕ್ಕೆ ನಿಮಿತ್ತ

(ಭಾಷ್ಯ)

೨೯೦. ನನು ವರ್ಣಾ ಅಪಿ ಉಚ್ಚಾರಣಭೇದೇನ ಭಿನ್ನಾಃ ಪ್ರತೀಯನ್ತೇ ದೇವದತ್ತಯಜ್ಞದತ್ತಯೋಃ ಅಧ್ಯಯನಧ್ವನಿಶ್ರವಣಾದೇವ ಭೇದಪ್ರತೀತೇಃ ಇತ್ಯುಕ್ತಮ್ । ಅತ್ರ ಅಭಿಧೀಯತೇ । ಸತಿ ವರ್ಣವಿಷಯೇ ನಿಶ್ಚಿತೇ ಪ್ರತ್ಯಭಿಜ್ಞಾನೇ ಸಂಯೋಗವಿಭಾಗಾಭಿವ್ಯಙ್ಗ್ಯತ್ವಾತ್ ವರ್ಣಾನಾಮ್ ಅಭಿವ್ಯಞ್ಜಕವೈಚಿತ್ರ್ಯನಿಮಿತ್ತಃ ಅಯಂ ವರ್ಣವಿಷಯಃ ವಿಚಿತ್ರಃ ಪ್ರತ್ಯಯಃ ನ ಸ್ವರೂಪನಿಮಿತ್ತಃ । ಅಪಿ ಚ ವರ್ಣವ್ಯಕ್ತಿಭೇದವಾದಿನಾಪಿ ಪ್ರತ್ಯಭಿಜ್ಞಾನ ಸಿದ್ಧಯೇ ವರ್ಣಾಕೃತಯಃ ಕಲ್ಪಯಿತವ್ಯಾಃ । ತಾಸು ಚ ಪರೋಪಾಧಿಕೋ ಭೇದಪ್ರತ್ಯಯಃ ಇತಿ ಅಭ್ಯುಪಗನ್ತವ್ಯಮ್ । ತತ್ ಪರಂ ವರ್ಣವ್ಯಕ್ತಿಷ್ವೇವ ಪರೋಪಾಧಿಕೋ ಭೇದಪ್ರತ್ಯಯಃ ಸ್ವರೂಪನಿಮಿತ್ತಂ ಚ ಪ್ರತ್ಯಭಿಜ್ಞಾನಮ್ ಇತಿ ಕಲ್ಪನಾಲಾಘವಮ್ । ಏಷ ಏವ ಚ ವರ್ಣವಿಷಯಸ್ಯ ಭೇದಪ್ರತ್ಯಯಸ್ಯ ಬಾಧಕಃ ಪ್ರತ್ಯಯಃ, ಯತ್ ಪ್ರತ್ಯಭಿಜ್ಞಾನಮ್ । ಕಥಂ ಹಿ ಏಕಸ್ಮಿನ್ ಕಾಲೇ ಬಹೂನಾಮ್ ಉಚ್ಚಾರಯತಾಮ್ ಏಕ ಏವ ಸನ್ ಗಕಾರಃ ಯುಗಪತ್ ಅನೇಕರೂಪಃ ಸ್ಯಾತ್, ಉದಾತ್ತಶ್ಚ ಅನುದಾತ್ತಶ್ಚ ಸ್ವರಿತಶ್ಚ, ಸಾನುನಾಸಿಕಶ್ಚ ನಿರನುನಾಸಿಕಶ್ಚ ಇತಿ ॥ ಅಥವಾ ಧ್ವನಿಕೃತೋಽಯಂ ಪ್ರತ್ಯಯಭೇದೋ ನ ವರ್ಣಕೃತಃ ಇತ್ಯದೋಷಃ । ಕಃ ಪುನರಯಂ ಧ್ವನಿರ್ನಾಮ ? ಯೋ ದೂರಾತ್ ಆಕರ್ಣಯತಃ ವರ್ಣವಿವೇಕಮ್ ಅಪ್ರತಿಪದ್ಯಮಾನಸ್ಯ ಕರ್ಣ ಪಥಮ್ ಅವತರತಿ । ಪ್ರತ್ಯಾಸೀದತಶ್ಚ ಪಟುಮೃದುತ್ವಾದಿಭೇದಂ ವರ್ಣೇಷು ಆಸಞ್ಜಯತಿ । ತನ್ನಿಬನ್ಧನಾಶ್ಚ ಉದಾತ್ತಾದಯೋ ವಿಶೇಷಾಃ, ನ ವರ್ಣ ಸ್ವರೂಪನಿಬನ್ಧನಾಃ । ವರ್ಣಾನಾಂ ಪ್ರತ್ಯುಚ್ಚಾರಣಂ ಪ್ರತ್ಯಭಿಜ್ಞಾಯ ಮಾನತ್ವಾತ್ । ಏವಂ ಚ ಸತಿ ಸಾಲಮ್ಬನಾ ಉದಾತ್ತಾದಿಪ್ರತ್ಯಯಾ ಭವಿಷ್ಯನ್ತಿ । ಇತರಥಾ ಹಿ ವರ್ಣಾನಾಂ ಪ್ರತ್ಯಭಿಜ್ಞಾಯಮಾನಾನಾಂ ನಿರ್ಭೇದ ತ್ವಾತ್ ಸಂಯೋಗವಿಭಾಗಕೃತಾಃ ಉದಾತ್ತಾದಿವಿಶೇಷಾಃ ಕಲ್ಪ್ಯೇರನ್ । ಸಂಯೋಗವಿಭಾಗಾನಾಂ ಚ ಅಪ್ರತ್ಯಕ್ಷತ್ವಾತ್ ನ ತದಾಶ್ರಯಾಃ ವಿಶೇಷಾಃ ವರ್ಣೇಷು ಅಧ್ಯವಸಿತುಂ ಶಕ್ಯನ್ತೇ ಇತ್ಯತಃ ನಿರಾಲಮ್ಬನಾ ಏವ ಏತೇ ಉದಾತ್ತಾದಿಪ್ರತ್ಯಯಾಃ ಸ್ಯುಃ । ಅಪಿ ಚ ನೈವ ಏತದಭಿನಿವೇಷ್ಟವ್ಯಮ್ ಉದಾತ್ತಾದಿಭೇದೇನ ವರ್ಣಾನಾಂ ಪ್ರತ್ಯಭಿಜ್ಞಾಯಮಾನಾನಾಂ ಭೇದೋ ಭವೇತ್ ಇತಿ । ನ ಹಿ ಅನ್ಯಸ್ಯ ಭೇದೇನ ಅನ್ಯಸ್ಯ ಅಭಿದ್ಯಮಾನಸ್ಯ ಭೇದೋ ಭವಿತು ಮರ್ಹತಿ । ನ ಹಿ ವ್ಯಕ್ತಿಭೇದೇನ ಜಾತಿಂ ಭಿನ್ನಾಂ ಮನ್ಯನ್ತೇ ॥

( ಭಾಷ್ಯಾರ್ಥ )

(ಆಕ್ಷೇಪ):– ವರ್ಣಗಳೂ ಬೇರೆಬೇರೆಯ ಉಚ್ಚಾರಣೆಯಲ್ಲಿ ಬೇರೆಬೇರೆಯಾಗಿ ತೋರುತ್ತವೆಯಲ್ಲವೆ? ಏಕೆಂದರೆ ದೇವದತ್ತ, ಯಜ್ಞದತ್ತ– (ಇಬ್ಬರೂ) ಮಾಡುವ ಅಧ್ಯಯನದ ಧ್ವನಿಯನ್ನು ಕೇಳುವದರಿಂದಲೇ (ವರ್ಣಗಳು) ಬೇರೆ ಬೇರೆಯಾಗಿ ತೋರುತ್ತವೆ ಎಂದು (ಹಿಂದೆ) ಹೇಳಿದ್ದೆವಲ್ಲ !

(ಪರಿಹಾರ):– ಇದಕ್ಕೆ ( ಸಮಾಧಾನವನ್ನು ) ಹೇಳುತ್ತೇವೆ. ವರ್ಣ ವಿಷಯದ ಪ್ರತ್ಯಭಿಜ್ಞಾನ(ವಿದೆಂದು) ನಿಶ್ಚಯವಾಗುವದರಿಂದ, ವರ್ಣಗಳು ಸಂಯೋಗವಿಭಾಗಗಳಿಂದ ಅಭಿವ್ಯಕ್ತವಾಗುವ (ಕಾರಣ)ದಿಂದ ಅಭಿವ್ಯಂಜಕ (ವಾಯುವಿನ) ವೈಚಿತ್ರ್ಯದ ನಿಮಿತ್ತದಿಂದ[1] ವರ್ಣವಿಷಯದಲ್ಲಿ ಈ ಬೇರೆ ಬೇರೆಯದೆಂಬ ಪ್ರತ್ಯಯವಾಗುವದೇ ಹೊರತು ( ವರ್ಣಗಳ ) ಸ್ವರೂಪದ ನಿಮಿತ್ತದಿಂದ ಆಗುವದಿಲ್ಲ (ಎನ್ನಬೇಕು). ಇದಲ್ಲದೆ ವರ್ಣವ್ಯಕ್ತಿಗಳು ಬೇರೆ ಬೇರೆ ಎಂಬ ವಾದಿಯೂ ಪ್ರತ್ಯಭಿಜ್ಞಾನದ ಸಿದ್ಧಿಗಾಗಿ ವರ್ಣಗಳ ಆಕೃತಿಗಳನ್ನು ಕಲ್ಪಿಸಬೇಕಾಗುವದು ; ಮತ್ತು ( ಹಾಗೆ ಕಲ್ಪಿಸಿದ ) ಆ (ಆಕೃತಿ)ಗಳಲ್ಲಿ ಮತ್ತೊಂದು ಉಪಾಧಿಯಿಂದ ಬೇರೆಬೇರೆ ಎಂಬ ಅರಿವಾಗುತ್ತದೆ ಎಂದು ಇಟ್ಟು ಕೊಳ್ಳಬೇಕಾಗುವದು. ಆದ್ದರಿಂದ (ಅದಕ್ಕಿಂತ) ವರ್ಣವ್ಯಕ್ತಿಗಳಲ್ಲಿಯೇ ಮತ್ತೊಂದು ಉಪಾಧಿಯಿಂದ ಭೇದಪ್ರತ್ಯಯವಾಗುವದೆಂದೂ ( ಅವುಗಳ ) ಸ್ವರೂಪನಿಮಿತ್ತದಿಂದ ಪ್ರತ್ಯಭಿಜ್ಞಾನ(ವಾಗುವ)ದೆಂದೂ ಕಲ್ಪನೆಯಲ್ಲಿ ಲಾಘವವನ್ನು (ಇಟ್ಟುಕೊಳ್ಳುವದೇ) ಮೇಲು.[2] ಭೇದಪ್ರತ್ಯಯವು ವರ್ಣವಿಷಯವಾದದ್ದು ಎಂಬುದಕ್ಕೆ (ಅದೇ ವರ್ಣವಿದು ಎಂಬ) ಪ್ರತ್ಯಭಿಜ್ಞಾನವೆಂಬುದೇ ಬಾಧಕವಾಗಿರುತ್ತದೆ. (ಹಾಗಿಲ್ಲದಿದ್ದರೆ) ಒಂದೇ ಕಾಲದಲ್ಲಿ ಅನೇಕರು ಉಚ್ಚರಿಸುತ್ತಿರುವಲ್ಲಿ ಗಕಾರವು (ತಾನು) ಒಂದೇ ಆಗಿದ್ದುಕೊಂಡೇ ಉದಾತ್ತವೂ ಅನುದಾತ್ತವೂ ಸ್ವರಿತವೂ ಸಾನುನಾಸಿಕವೂ ನಿರನುನಾಸಿಕವೂ (ಆಗಿದೆ) ಎಂದು ಒಂದೇ ಕಾಲಕ್ಕೆ ಅನೇಕರೂಪವುಳ್ಳದ್ದಾಗುವದು ಹೇಗೆತಾನೆ (ಸರಿಹೋದೀತು)[3]?

---

1. ವಾಯುವಿಗೂ ಅಕ್ಷರಗಳು ತೋರಿಕೊಳ್ಳುವ ತಾಲ್ವಾದಿಸ್ಥಾನಗಳಿಗೂ ಸಂಯೋಗವೂ ವಿಭಾಗವೂ ಆಗುವದರಿಂದ ಈ ಭೇದಜ್ಞಾನವಾಗುತ್ತದೆ ಎಂದರ್ಥ.

2. ಗಕಾರಗಳನ್ನೂ ಕಲ್ಪಿಸಿ ಗತ್ವವನ್ನೂ ಕಲ್ಪಿಸಿ ಗತ್ವದಲ್ಲಿ ಬೇರೊಂದು ಉಪಾಧಿಯಿಂದ ಭೇದಜ್ಞಾನವಾಗುವದೆಂದು ಕಲ್ಪಿಸುವದರಲ್ಲಿ ಗೌರವವಿದೆ ; ಒಂದೇ ಗಕಾರವೇ ಉಪಾಧಿವಶದಿಂದ ಬೇರೆಬೇರೆಯಾಗಿ ತೋರುತ್ತದೆ ಎಂದು ಕಲ್ಪಿಸುವದರಲ್ಲಿ ಲಾಘವವಿದೆ.

3. ರತ್ನಪ್ರಭಾನ್ಯಾಯನಿರ್ಣಯಗಳನ್ನನುಸರಿಸಿ ಈ ವಾಕ್ಯವನ್ನು ಕನ್ನಡಿಸಿದೆ. ಗಕಾರವು ಒಂದೇ ಎಂದು ಪ್ರತ್ಯಭಿಜ್ಞೆಯಿಂದ ನಿಶ್ಚಿತವಾಗಿರುವದರಿಂದ ಅದರಲ್ಲಿ ತೋರುವ ಭೇದವು ಔಪಾಧಿಕವೆಂದು ಕಲ್ಪಿಸುವದೇ ಯುಕ್ತ –ಎಂಬುದು ಆ ವ್ಯಾಖ್ಯಾನಕಾರರ ಅರ್ಥ. ಭಾಮತೀವ್ಯಾಖ್ಯಾನದಲ್ಲಿ ಇದು ಪ್ರತ್ಯಭಿಜ್ಞಾನದ ವಿಷಯಕ್ಕೆ ಶಂಕೆ ; ಮುಂದಿನ ವಾಕ್ಯವು ಇದಕ್ಕೆ ಪರಿಹಾರ.

ಅಥವಾ ಈ ಪ್ರತ್ಯಯಭೇದವು[1] ಧ್ವನಿಯಿಂದಾದದ್ದು, ವರ್ಣನಿಮಿತ್ತವಾದದ್ದಲ್ಲ; ಆದ್ದರಿಂದ (ಈ ನಮ್ಮ ವಾದದಲ್ಲಿ ಯಾವ) ದೋಷವೂ ಇಲ್ಲ.[2]

(ಪ್ರಶ್ನೆ) :– ಹಾಗಾದರೆ ಈ ಧ್ವನಿ ಎಂಬುದು ಯಾವದು ?

(ಉತ್ತರ) :– ದೂರದಿಂದ ಕೇಳುವಾಗ ವರ್ಣವನ್ನು (ಇಂಥದ್ದೆಂದು) ವಿಂಗಡಿಸಿ ಅರಿಯದೆ ಇರುವವನ ಕಿವಿಯ ಬದಿಗೆ ಬೀಳುವದಲ್ಲ, ಹತ್ತಿರಹತ್ತಿರಕ್ಕೆ ಬರುತ್ತಿರುವಾಗ ಗಟ್ಟಿ, ಮೆದು– ಎಂಬುದೇ ಮುಂತಾದ ಭೇದಗಳನ್ನು ವರ್ಣಗಳಿಗೆ ಅಂಟಿಸುವವಲ್ಲ, (ಅದೇ ಧ್ವನಿಯು). ಅದರ ನಿಮಿತ್ತದಿಂದಲೇ ಉದಾತ್ತಾದಿವಿಶೇಷಗಳು (ತೋರುವವೇ ಹೊರತು) ವರ್ಣಗಳ ಸ್ವರೂಪದ ನಿಮಿತ್ತದಿಂದ (ತೋರುವದಿಲ್ಲ) ; ಏಕೆಂದರೆ ವರ್ಣಗಳನ್ನು ಪ್ರತಿಯೊಂದು ಉಚ್ಚಾರಣೆಯಲ್ಲಿಯೂ (ಅವೇ) ಎಂದು ಗುರುತುಹಿಡಿಯುತ್ತೇವೆ. ಮತ್ತು ಹೀಗಾದರೆ[3] ಉದಾತ್ತವೇ ಮುಂತಾದ ಪ್ರತ್ಯಯಗಳಿಗೆ ವಿಷಯವಿದೆ ಎಂದಾಗುವದು. ಹಾಗಿಲ್ಲದಿದ್ದರೆ (ಅವೇ) ಎಂದು ಗುರುತುಹಿಡಿಯುವ ವರ್ಣಗಳಲ್ಲಿ (ಯಾವ) ಭೇದವೂ ಇಲ್ಲದಿರುವದರಿಂದ ಉದಾತ್ತಾದಿವಿಶೇಷಗಳು ಸಂಯೋಗವಿಭಾಗಗಳಿಂದಾಗುವವೆಂದು ಕಲ್ಪಿಸಬೇಕಾಗುವದು. ಮತ್ತು ಸಂಯೋಗವಿಭಾಗಗಳು ಪ್ರತ್ಯಕ್ಷವಲ್ಲವಾದ್ದರಿಂದ[4] ಅವುಗಳನ್ನು ಆಶ್ರಯಿಸಿರುವ ವಿಶೇಷಗಳು ವರ್ಣಗಳಲ್ಲಿ(ವೆ ಎಂದು) ನಿಶ್ಚಯಿಸುವದು ಆಗಲಾರದು ; ಆದ್ದರಿಂದ ಈ ಉದಾತ್ತಾದಿಪ್ರತ್ಯಯಗಳು ನಿರ್ವಿಷಯವಾಗಿಯೇ ಇರಬೇಕಾಗುವದು. ಇದೂ ಅಲ್ಲದೆ ಉದಾತ್ತವೇ ಮುಂತಾದ ಭೇದದಿಂದ (ಅವೇ ಇವೆಂದು) ಗುರುತಿಸಿ ಅರಿಯುವದಕ್ಕಾಗುವ ವರ್ಣಗಳಲ್ಲಿ ಭೇದವುಂಟಾಗುವದೆಂದು ಹಟವನ್ನು ಹಿಡಿಯಲೇಬಾರದು. ಏಕೆಂದರೆ ಒಂದರ ಭೇದದಿಂದ ಅಭಿನ್ನವಾಗಿರುವ ಮತ್ತೊಂದಕ್ಕೆ ಭೇದವು ಉಂಟಾಗಲಾರದು. ವ್ಯಕ್ತಿಯು ಬೇರೆಬೇರೆಯಾದರೆ ಜಾತಿಯೂ ಭಿನ್ನವಾಯಿತೆಂದು (ಯಾರೂ) ಭಾವಿಸುವದಿಲ್ಲವಷ್ಟೆ.[5]

---

1. ವರ್ಣಗಳಲ್ಲಿ ಇದು ಉದಾತ್ತವು, ಇದು ಅನುದಾತ್ತವು– ಎಂದು ಮುಂತಾಗಿ ಆಗುವ ಬೇರೆಬೇರೆಯ ಜ್ಞಾನವು.

2. ವರ್ಣಸ್ವರೂಪದಲ್ಲಿ ಯಾವ ಭೇದವೂ ಇಲ್ಲದ್ದರಿಂದ ವರ್ಣಗಳೇ ಶಬ್ದವೆಂಬ ಪಕ್ಷದಲ್ಲಿ ಶಬ್ದವು ಅನಿತ್ಯವಾಗುವದಿಲ್ಲ.

3. ಧ್ವನಿಯೇ ವರ್ಣಗಳಲ್ಲಿ ತೋರಿಬರುವ ಉದಾತ್ತಾದಿಭೇದಕ್ಕೆ ನಿಮಿತ್ತವೆಂದು ಒಪ್ಪಿದರೆ.

4. ವಾಯುವಾಗಲಿ, ವಾಯುಸಂಯೋಗವಾಗಲಿ, ವಾಯುವಿಭಾಗವಾಗಲಿ ಶ್ರಾವಣಪ್ರತ್ಯಕ್ಷವಲ್ಲ.

5. ಹಸುಗಳು ಬೇರೆಬೇರೆಯಾದರೂ ಗೋತ್ವವೆಂಬ ಜಾತಿಯು ಅವಕ್ಕೆಲ್ಲ ಸಮಾನವಾಗಿರುತ್ತದೆ.

# "ಒಂದು ಶಬ್ದ" ಎಂಬ ಬುದ್ಧಿಗೆ ವರ್ಣಗಳೇ ವಿಷಯ

( ಭಾಷ್ಯ )

೬೯೧. ವರ್ಣೇಭ್ಯಶ್ಚ ಅರ್ಥಪ್ರತೀತೇಃ ಸಂಭವಾತ್ ಸ್ಫೋಟಕಲ್ಪನಾ ಅನರ್ಥಿಕಾ | ನ ಕಲ್ಪಯಾಮ್ಯಹಂ ಸ್ಫೋಟಮ್, ಪ್ರತ್ಯಕ್ಷಮೇವ ತ್ವೇನಮ್ ಅವಗಚ್ಛಾಮಿ | ಏಕೈಕವರ್ಣಗ್ರಹಣಾಹಿತಸಂಸ್ಕಾರಾಯಾಂ ಬುದ್ಧೌ ಝಟಿತಿ ಪ್ರತ್ಯವಭಾಸನಾತ್ ಇತಿ ಚೇತ್ | ನ | ಅಸ್ಯಾ ಅಪಿ ಬುದ್ಧೇರ್ವರ್ಣ ವಿಷಯತ್ವಾತ್ । ಏಕೈಕವರ್ಣಗ್ರಹಣೋತ್ತರಕಾಲಾ ಹಿ ಇಯಮ್ ಏಕಾ ಬುದ್ಧಿಃ ಗೌರಿತಿ ಸಮಸ್ತವರ್ಣವಿಷಯಾ, ನಾರ್ಥಾನ್ತರವಿಷಯಾ | ಕಥಮೇತತ್ ಅವಗಮ್ಯತೇ ? ಯತಃ ಅಸ್ಯಾಮಪಿ ಬುದ್ಧೌ ಗಕಾರಾದಯೋ ವರ್ಣಾಃ ಅನುವರ್ತನ್ತೇ ನ ತು ದಕಾರಾದಯಃ | ಯದಿ ಹಿ ಅಸ್ಯಾ ಬುದ್ಧೇಃ ಗಕಾರಾದಿಭ್ಯೋಽರ್ಥಾನ್ತರಂ ಸ್ಫೋಟೋ ವಿಷಯಃ ಸ್ಯಾತ್, ತತೋ ದಕಾರಾದಯ ಇವ ಗಕಾರಾದಯೋಽಪಿ ಅಸ್ಯಾ ಬುದ್ಧೇರ್ವ್ಯಾವರ್ತೇರನ್ | ನ ತು ತಥಾ ಅಸ್ತಿ | ತಸ್ಮಾತ್ ಇಯಮೇಕಬುದ್ಧಿಃ ವರ್ಣ ವಿಷಯೈವ ಸ್ಮೃತಿಃ । ನನು ಅನೇಕತ್ವಾದ್ ವರ್ಣಾನಾಂ ನೈಕಬುದ್ಧಿವಿಷಯತಾ ಉಪಪದ್ಯತ ಇತ್ಯುಕ್ತಮ್ | ತತ್ ಪ್ರತಿಬ್ರೂಮಃ | ಸಂಭವತಿ ಅನೇಕ ಸ್ಯಾಪಿ ಏಕಬುದ್ಧಿವಿಷಯತ್ವಮ್ | ಪಙ್ಕ್ತಿಃ, ವನಮ್, ಸೇನಾ, ದಶ, ಶತಮ್, ಸಹಸ್ರಮ್ ಇತ್ಯಾದಿದರ್ಶನಾತ್ | ಯಾ ತು ಗೌರಿತಿ ಏಕೋಽಯಂ ಶಬ್ದಃ ಇತಿ ಬುದ್ಧಿಃ, ಸಾ ಬಹುಷ್ವೇವ ವರ್ಣೇಷು ಏಕಾರ್ಥಾವಚ್ಛೇದ ನಿಬನ್ಧನಾ ಔಪಚಾರಿಕೀ ವನಸೇನಾದಿಬುದ್ಧಿವದೇವ | ಅತ್ರಾಹ – ಯದಿ ವರ್ಣಾ ಏವ ಸಾಮಸ್ತ್ಯೇನ ಏಕಬುದ್ಧಿವಿಷಯತಾಮ್ ಆಪದ್ಯಮಾನಾಃ ಪದಂ ಸ್ಯುಃ | ತತೋ ಜಾರಾ ರಾಜಾ, ಕಪಿಃ, ಪಿಕಃ, ಇತ್ಯಾದಿಷು ಪದವಿಶೇಷ ಪ್ರತಿಪತ್ತಿರ್ನ ಸ್ಯಾತ್, ತ ಏವ ಹಿ ವರ್ಣಾಃ ಇತರತ್ರ ಚ ಇತರತ್ರ ಚ ಪ್ರತ್ಯವಭಾಸನ್ತೇ ಇತಿ | ಅತ್ರ ವದಾಮಃ | ಸತ್ಯಪಿ ಸಮಸ್ತವರ್ಣಪ್ರತ್ಯವ ಮರ್ಶೇ ಯಥಾ ಕ್ರಮಾನುರೋಧಿನ್ಯ ಏವ ಪಿಪೀಲಿಕಾಃ ಪಙ್ಕ್ತಿಬುದ್ಧಿಮ್ ಆರೋಹನ್ತಿ, ಏವಂ ಕ್ರಮಾನುರೋಧಿನ ಏವ ವರ್ಣಾಃ ಪದಬುದ್ಧಿಮ್ ಆರೋಕ್ಷ್ಯನ್ತಿ | ತತ್ರ ವರ್ಣಾನಾಮ್ ಅವಿಶೇಷೇಽಪಿ ಕ್ರಮವಿಶೇಷಕೃತಾ ಪದ ವಿಶೇಷಪ್ರತಿಪತ್ತಿಃ ನ ವಿರುಧ್ಯತೇ | ವೃದ್ಧವ್ಯವಹಾರೇ ಚ ಇಮೇ ವರ್ಣಾಃ ಕ್ರಮಾದ್ಯನುಗೃಹೀತಾಃ ಗೃಹೀತಾರ್ಥವಿಶೇಷಸಂಬನ್ಧಾಃ ಸನ್ತಃ ಸ್ವವ್ಯವ ಹಾರೇಽಪಿ ಏಕೈಕವರ್ಣಗ್ರಹಣಾನನ್ತರಂ ಸಮಸ್ತಪ್ರತ್ಯವಮರ್ಶಿನ್ಯಾಂ ಬುದ್ಧೌ

ತಾದೃಶಾ ಏವ ಪ್ರತ್ಯವಭಾಸಮಾನಾಃ, ತಂ ತಮ್ ಅರ್ಥಮ್ ಅವ್ಯಭಿಚಾರೇಣ ಪ್ರತ್ಯಾಯಯಿಷ್ಯನ್ತಿ ಇತಿ ವರ್ಣವಾದಿನೋ ಲಘೀಯಸೀ ಕಲ್ಪನಾ | ಸ್ಫೋಟವಾದಿನಸ್ತು ದೃಷ್ಟಹಾನಿಃ ಅದೃಷ್ಟಕಲ್ಪನಾ ಚ | ವರ್ಣಾಶ್ಚ ಇಮೇ ಕ್ರಮೇಣ ಗೃಹ್ಯಮಾಣಾಃ ಸ್ಫೋಟಂ ವ್ಯಞ್ಜಯನ್ತಿ, ಸ ಸ್ಫೋಟೋಽರ್ಥಂ ವ್ಯನಕ್ತಿ ಇತಿ ಗರೀಯಸೀ ಕಲ್ಪನಾ ಸ್ಯಾತ್ ॥ ಅಥಾಪಿ ನಾನು ಪ್ರತ್ಯುಚ್ಚಾರಣಮ್ ಅನ್ಯೇಽನ್ಯೇ ವರ್ಣಾಃ ಸ್ಯುಃ, ತಥಾಪಿ ಪ್ರತ್ಯಭಿಜ್ಞಾಲಮ್ಬನಭಾವೇನ ವರ್ಣಸಾಮಾನ್ಯಾನಾಮ್ ಅವಶ್ಯಾಭ್ಯುಪಗನ್ತವ್ಯತ್ವಾತ್ ಯಾ ವರ್ಣೇಷು ಅರ್ಥಪ್ರತಿಪಾದನಪ್ರಕ್ರಿಯಾ ರಚಿತಾ ಸಾ ಸಾಮಾನ್ಯೇಷು ಸಂಚಾರಯಿತವ್ಯಾ । ತತಶ್ಚ ನಿತ್ಯೇಭ್ಯಃ ಶಬ್ದೇಭ್ಯೋ ದೇವಾದಿವ್ಯಕ್ತೀನಾಂ ಪ್ರಭವಃ ಇತಿ ಅವಿರುದ್ಧಮ್ ॥

( ಭಾಷ್ಯಾರ್ಥ )

ಮತ್ತು ವರ್ಣಗಳಿಂದಲೇ ಅರ್ಥವು ತೋರಬಹುದಾಗಿರುವದರಿಂದ ಸ್ಫೋಟವನ್ನು ಕಲ್ಪಿಸುವದು ವ್ಯರ್ಥವು.

(ಸ್ಫೋಟವಾದಿ) :– ನಾನು ಸ್ಫೋಟವನ್ನು ಕಲ್ಪಿಸುತ್ತಿಲ್ಲ, ಆದರೆ ಅದನ್ನು ಪ್ರತ್ಯಕ್ಷವಾಗಿಯೇ ಅರಿಯುತ್ತಿದೇನೆ. ಏಕೆಂದರೆ ಒಂದೊಂದು ವರ್ಣವನ್ನು ಅರಿತದ್ದರಿಂದಾದ ಸಂಸ್ಕಾರವುಳ್ಳ ಬುದ್ಧಿಯಲ್ಲಿ (ಸ್ಫೋಟವು ತಾನೇ) ತಟ್ಟನೆ ಹೊಳೆಯುತ್ತದೆ.

(ಸಿದ್ಧಾಂತ) :— ಇಲ್ಲ. ಏಕೆಂದರೆ ಈ (ಶಬ್ದ)ಬುದ್ಧಿಯೂ ವರ್ಣ(ಗಳ) ವಿಷಯದ್ದಾಗಿರುತ್ತದೆ. ಒಂದೊಂದು ವರ್ಣವನ್ನು ಅರಿತಮೇಲೆಯೇ ಆಗುವ (ಗೌಃ) ಗೋವೆಂಬ ಈ ಒಂದು ಬುದ್ಧಿಯೂ (ಒಟ್ಟು) ಎಲ್ಲಾ ವರ್ಣಗಳ ವಿಷಯದಲ್ಲಿ (ಉಂಟಾಗುವದೇ ಹೊರತು) ಮತ್ತೊಂದು ವಸ್ತುವಿನ ವಿಷಯ(ವಾಗಿ ಉಂಟಾಗುವ)ದಿಲ್ಲ.

(ಸ್ಫೋಟವಾದಿ) :– ಇದು ಹೇಗೆ ಗೊತ್ತಾಯಿತು ?

(ಸಿದ್ಧಾಂತಿ) :– ಏಕೆಂದರೆ ಈ ಬುದ್ಧಿಯಲ್ಲಿಯೂ ಗಕಾರಾದಿವರ್ಣಗಳು ಅನುಸರಿಸಿಕೊಂಡೇ ಬಂದಿರುತ್ತವೆಯೇ ಹೊರತು ದಕಾರಾದಿಗಳು ಬಂದಿರುವದಿಲ್ಲ. ಈ ಬುದ್ಧಿಗೆ ಗಕಾರಾದಿಗಳನ್ನು ಒಟ್ಟು ಬೇರೊಂದು ವಸ್ತುವಾದ ಸ್ಫೋಟವು ವಿಷಯವಾಗಿದ್ದರೆ ಆಗ ದಕಾರಾದಿಗಳಂತೆ ಗಕಾರಾದಿಗಳೂ ಈ ಬುದ್ಧಿಯನ್ನು ಬಿಟ್ಟುಹೋಗಬೇಕಾಗಿತ್ತು. ಆದರೆ ಹಾಗಿಲ್ಲ. ಆದ್ದರಿಂದ ಈ ಒಂದೆಂಬ ಬುದ್ಧಿಯು ವರ್ಣಗಳ ವಿಷಯವಾಗಿಯೇ (ಆಗಿರುವ) ಸ್ಮೃತಿಯು.

(ಸ್ಫೋಟವಾದಿ) :– ವರ್ಣಗಳು ಅನೇಕವಾಗಿರುವದರಿಂದ (ಅವು) ಒಂದೆಂಬ ಬುದ್ಧಿಗೆ ವಿಷಯವಾಗಲಾರವೆಂದು ಹೇಳಿದ್ದೇನಲ್ಲ !

(ಸಿದ್ಧಾಂತಿ) :– ಅದಕ್ಕೆ ಉತ್ತರವನ್ನು ಹೇಳುತ್ತೇವೆ. ಅನೇಕವಾಗಿರುವದಕ್ಕೂ ಒಂದೆಂಬ ಬುದ್ಧಿಗೆ ವಿಷಯವಾಗಿರುವದೆಂಬುದು ಹೊಂದುತ್ತದೆ. ಏಕೆಂದರೆ ಸಾಲು, ಕಾಡು, ಸೇನೆ, ಹತ್ತು, ನೂರು, ಸಾವಿರ– ಮುಂತಾದ (ಬುದ್ಧಿಗಳೂ) ಕಾಣಬರುತ್ತವೆ. ಗೌಃ ಎಂಬುದು ಒಂದೇ ಶಬ್ದವು ಎಂಬ ಬುದ್ಧಿಯಿದೆಯಲ್ಲ, ಅದಾದರೋ ವನ, ಸೇನೆ– ಮುಂತಾದ ಬುದ್ಧಿಗಳಂತೆಯೇ ಅನೇಕ ವರ್ಣಗಳಲ್ಲಿಯೇ ಒಂದೇ ಅರ್ಥವನ್ನು ತಿಳಿಸುವ ನಿಮಿತ್ತದಿಂದ ಆಗಿರುವ ಗೌಣ(ಬುದ್ಧಿಯು).[1]

(ಆಕ್ಷೇಪ) :– ಇಲ್ಲಿ (ಆಕ್ಷೇಪಕನು) ಹೇಳುತ್ತಾನೇನೆಂದರೆ, ವರ್ಣಗಳೇ ಒಟ್ಟುಗೂಡಿ ಒಂದೆಂಬ ಬುದ್ಧಿಗೆ ವಿಷಯವಾಗಿ ಪದವಾಗುತ್ತವೆಯಾದರೆ, ಆಗ ಜಾರಾ, ರಾಜಾ , ಕಪಿಃ, ಪಿಕಃ – ಮುಂತಾದವುಗಳಲ್ಲಿ (ಇದು) ಬೇರೆ ಬೇರೆಯ ಪದ ಎಂಬ ಅರಿವು ಆಗದೆಹೋಗಬೇಕಾಗುವದು. ಏಕೆಂದರೆ ಅವೇ ವರ್ಣಗಳೇ ಅಲ್ಲಿಯೂ ಇಲ್ಲಿಯೂ ತೋರುತ್ತಿರುತ್ತವೆ.

(ಪರಿಹಾರ) :– ಇದಕ್ಕೆ (ಪರಿಹಾರವನ್ನು) ಹೇಳುತ್ತೇವೆ. ಒಟ್ಟು ವರ್ಣಗಳ ಪರಾಮರ್ಶವೇ (ಎರಡು ಕಡೆಯಲ್ಲಿಯೂ) ಇದ್ದರೂ ಹೇಗೆ ಕ್ರಮವನ್ನನುಸರಿಸಿರುವ ಇರುವೆಗಳೇ ಸಾಲು ಎಂಬ ಬುದ್ಧಿಗೆ ಹತ್ತುವವೋ ಹಾಗೆಯೇ (ಒಂದಾನೊಂದು) ಕ್ರಮವನ್ನನುಸರಿಸಿರುವ ವರ್ಣಗಳೇ ಪದ ಎಂಬ ಬುದ್ಧಿಗೆ ಹತ್ತುವವು. (ಹೀಗಿರು)ವಲ್ಲಿ (ಎರಡು ಕಡೆಯಲ್ಲಿಯೂ) ವರ್ಣಗಳು ಬೇರೆಯಲ್ಲದಿದ್ದರೂ ಒಂದೊಂದು ಕ್ರಮದಿಂದಾಗಿ ಒಂದೊಂದು ಪದವೆಂಬ ಬುದ್ಧಿ(ಯುಂಟಾಗುವದು) ವಿರುದ್ಧವಲ್ಲ.[2] ಮತ್ತು ದೊಡ್ಡವರ ವ್ಯವಹಾರದಲ್ಲಿ ಈ ವರ್ಣಗಳು ಕ್ರಮವೇ ಮುಂತಾದವುಗಳ ಅನುಗ್ರಹದಿಂದ ಒಂದೊಂದು ಅರ್ಥದೊಡನೆ ಸಂಬಂಧವುಳ್ಳವೆಂದು ತಿಳಿದುಬರುವದರಿಂದ ತನ್ನ ವ್ಯವಹಾರದಲ್ಲಿಯೂ ಒಂದೊಂದು ವರ್ಣವನ್ನು ಗ್ರಹಿಸಿದ ಬಳಿಕ ಎಲ್ಲವನ್ನೂ ಪರಾಮರ್ಶಿಸುವ ಬುದ್ಧಿಯಲ್ಲಿ ಹಾಗೆಯೇ ತೋರುವದರಿಂದ ಆಯಾ ಅರ್ಥವನ್ನು ತಪ್ಪದೆ ತಿಳಿಸುತ್ತವೆ[3] –ಎಂಬುದರಿಂದ ವರ್ಣವಾದಿಯ ಕಲ್ಪನೆಯು

1. ವರ್ಣಗಳು ಅನೇಕವಾಗಿರುವದರಿಂದ ಅವುಗಳಿಂದ 'ಇವು ಅನೇಕ' ಎಂಬ ಬುದ್ಧಿಯುಂಟಾಗಬೇಕಾದರೂ ಒಂದೇ ವಸ್ತುವನ್ನು ತಿಳಿಸುವದರಿಂದ 'ಇದು ಒಂದು ಪದ' ಎಂದು ಗೌಣವ್ಯವಹಾರವಾಗಿರುತ್ತದೆ ಎಂದು ಭಾವ.

2. ಜಾರಾ ಎಂಬುದು ವರ್ಣಗಳ ಒಂದು ಕ್ರಮದಿಂದ ಒಂದು ಪದವಾಗಿದೆ ; ರಾಜಾ ಎಂಬುದು ಮತ್ತೊಂದು ಕ್ರಮದಿಂದ ಮತ್ತೊಂದು ಪದವಾಗಿದೆ.

3. ಒಬ್ಬನು ಉಚ್ಚರಿಸಿದ ಒಂದು ಕ್ರಮವುಳ್ಳ ಇಂತಿಷ್ಟು ಸಂಖ್ಯೆಯ ವರ್ಣಗಳಿಂದ ಮತ್ತೊಬ್ಬನು ಇಂಥ ಪದಾರ್ಥವೆಂದು ಅರ್ಥಮಾಡಿಕೊಂಡನೆಂದು ಅವನ ವ್ಯವಹಾರದಿಂದ ಗೊತ್ತಾಗುವದರಿಂದ ತಾನು, ಮತ್ತೊಬ್ಬರು ಉಚ್ಚರಿಸಿರುವ ವರ್ಣಗಳನ್ನು ಕೇಳುವಾಗಲೂ ಅದೇ ವಸ್ತುವೇ ಆ ವರ್ಣಗಳ ಅರ್ಥವೆಂದು ಗ್ರಹಿಸುತ್ತಾನೆ ಎಂದು ಅರ್ಥ.

ಲಘುತರವಾಗಿರುತ್ತದೆ. ಅಪರೆ ಸ್ಫೋಟವಾದಿಗೆ ಕಂಡದ್ದನ್ನು ಬಿಡುವದು, ಮತ್ತು ಕಾಣದೆ ಇದ್ದದ್ದನ್ನು ಕಲ್ಪಿಸುವದು[1] –(ಎಂಬ ದೋಷವುಂಟಾಗುವದು); ಮತ್ತು ಈ ವರ್ಣಗಳು (ಒಂದು) ಕ್ರಮದಿಂದ ತಿಳಿಯಬಂದಾಗ ಸ್ಫೋಟವನ್ನು ಅಭಿವ್ಯಕ್ತಿಗೊಳಿಸುವವೆಂದೂ ಆ ಸ್ಫೋಟವು ಅರ್ಥವನ್ನು ತೋರಿಸುವದೆಂದೂ (ಹೇಳಬೇಕಾಗಿರುವದರಿಂದ) ಗುರುತರವಾದ ಕಲ್ಪನೆಯು (ಬೇಕಾ)ಗುವದು.

ಒಂದು ವೇಳೆ, ಒಂದೊಂದು ಉಚ್ಚಾರಣೆಯಲ್ಲಿ(ಯೂ) ಬೇರೆಬೇರೆಯ ವರ್ಣಗಳೇ ಉಂಟಾಗುವವು ಎಂದಾದರೂ ಆಗಲೂ (ಅವೇ ಇವು) ಎಂಬ ಪ್ರತ್ಯಭಿಜ್ಞೆಗೆ ವಿಷಯವಾಗಿ ವರ್ಣಸಾಮಾನ್ಯಗಳನ್ನು ಅವಶ್ಯವಾಗಿ ಒಪ್ಪಲೇ ಬೇಕಾಗುವವರಿಂದ, ವರ್ಣಗಳು ಅರ್ಥವನ್ನು ತಿಳಿಸುವವೆಂಬ ಪ್ರಕ್ರಿಯೆಯನ್ನು (ಮೇಲೆ) ರಚಿಸಿತ್ತಲ್ಲ, ಆ (ಪ್ರಕ್ರಿಯೆ)ಯನ್ನು ಸಾಮಾನ್ಯಗಳಿಗೇ ಸೇರಿಸ ಬಹುದು.[2] ಅವರಿಂದಲೂ ನಿತ್ಯವಾದ ಶಬ್ದಗಳಿಂದ ದೇವಾದಿವ್ಯಕ್ತಿಗಳು ಉಂಟಾಗುವವೆಂಬುದು ವಿರುದ್ಧವಲ್ಲ.[3]

## ಜಗತ್ತು ಶಬ್ದಪ್ರಭವವೆಂಬ ವಾದದಿಂದ ವೇದನಿತ್ಯತ್ವಕ್ಕೆ ಬಲ

**ಅತ ಏವ ಚ ನಿತ್ಯತ್ವಮ್ ॥ ೨೯ ॥**

೨೯. ಆದ್ದರಿಂದಲೇ (ವೇದಕ್ಕೆ) ನಿತ್ಯತ್ವವು.

( ಭಾಷ್ಯ )

೨೯೨. ಸ್ವತನ್ತ್ರಸ್ಯ ಕರ್ತುಃ ಅಸ್ಮರಣಾದಿಭಿಃ ಸ್ಥಿತೇ ವೇದಸ್ಯ ನಿತ್ಯತ್ವೇ ದೇವಾದಿವ್ಯಕ್ತಿಪ್ರಭವಾಭ್ಯುಪಗಮೇನ ತಸ್ಯ ವಿರೋಧಮ್ ಆಶಙ್ಕ್ಯ "ಅತಃ ಪ್ರಭಾವಾತ್" ಇತಿ ಪರಿಹೃತ್ಯ ಇದಾನೀಂ ತದೇವ ವೇದನಿತ್ಯತ್ವಂ ಸ್ಥಿತಂ ದ್ರಢಯತಿ "ಅತ ಏವ ನಿತ್ಯತ್ವಮ್" ಇತಿ । ಅತ ಏವ ನಿಯತಾಕೃತೇ

---

1. ವರ್ಣಗಳು ಅರ್ಥವನ್ನು ತಿಳಿಸುವವೆಂದು ಕಂಡಿರುವದನ್ನು ಬಿಡುವದು, ಕಾಣದಿದ್ದ ಸ್ಫೋಟವನ್ನು ಕಲ್ಪಿಸುವದು.

2. ವರ್ಣಗಳು ಅರ್ಥಬೋಧಕವಾಗಿವೆಯಾದ್ದರಿಂದ ಸ್ಫೋಟವು ಬೇಕಾಗಿಲ್ಲ ಎಂದು ಮುಂತಾಗಿ ಮೇಲೆ ಹೇಳಿರುವ ಯುಕ್ತಿಯನ್ನು ವರ್ಣಸಾಮಾನ್ಯಗಳಿಗೇ ಹೊಂದಿಸಿಕೊಳ್ಳಬಹುದು ಎಂದು ಭಾವ. ಇಲ್ಲಿ ವರ್ಣಗಳು ಅನಿತ್ಯವೆಂದು ಒಪ್ಪಿದರೂ ವೈಯಾಕರಣರು ಹೇಳುವ ಸ್ಫೋಟಕ್ಕೆ ಅವಕಾಶವಿಲ್ಲ ಎಂದು ಹೇಳಿರುವದು ಪ್ರೌಢಿವಾದವು.

3. ಶಬ್ದಗಳೆಂದರೆ ವರ್ಣಸಾಮಾನ್ಯಗಳು ಎಂದರೂ ಸ್ಫೋಟವಾದಿಯು ವರ್ಣಗಳು ಅನಿತ್ಯವೆಂದು ಆರೋಪಿಸಿದ್ದ ದೋಷವು ಹತ್ತುವದಿಲ್ಲ; ಆಗಲೂ ಶಬ್ದಪ್ರಭವತ್ವವಾದವು ಅವಿರುದ್ಧವಾಗಿರುತ್ತದೆ ಎಂದರ್ಥ.

ದೇವಾದೇಃ ಜಗತಃ ವೇದಶಬ್ದಪ್ರಭವತ್ವಾತ್ ವೇದಶಬ್ದೇ ನಿತ್ಯತ್ವಮಪಿ ಪ್ರತ್ಯೇತವ್ಯಮ್ । ತಥಾ ಚ ಮನ್ತ್ರವರ್ಣಃ "ಯಜ್ಞೇನ ವಾಚಃ ಪದವೀಯಮಾಯನ್ ತಾಮನ್ವವಿನ್ದನ್ ಋಷಿಷು ಪ್ರವಿಷ್ಟಾಮ್" (ಋ. ಸಂ. ೧೦-೧೭-೩) ಇತಿ ಸ್ಥಿತಾಮೇವ ವಾಚಮ್ ಅನುವಿನ್ನಾಂ ದರ್ಶಯತಿ" ವೇದವ್ಯಾಸಶ್ಚ ಏವಮೇವ ಸ್ಮರತಿ "ಯುಗಾನ್ತೇಽನ್ತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ । ಲೇಭಿರೇ ತಪಸಾ ಪೂರ್ವಮನುಜ್ಞಾತಾಃ ಸ್ವಯಂಭುವಾ" ॥ (ಮೋ. ಧ ೨೧೦-೧೯) ಇತಿ ॥

( ಭಾಷ್ಯಾರ್ಥ )

ಸ್ವತಂತ್ರವಾದ ಕರ್ತೃವನ್ನು ಸ್ಮರಿಸದಿರುವದು ಮುಂತಾದ ಕಾರಣಗಳಿಂದ ವೇದವು ನಿತ್ಯವೆಂಬುದು ಸಿದ್ಧವಾಗಿರುವಲ್ಲಿ[1] ದೇವಾದಿಗಳ ವ್ಯಕ್ತಿಗಳು ಹುಟ್ಟುವರೆಂದು ಒಪ್ಪಿದರೆ ಅದಕ್ಕೆ ವಿರೋಧ(ವಾಗುವದೆಂದು) ಶಂಕಿಸಿ 'ಅತಃ ಪ್ರಭವಾತ್" (ಶಬ್ದದಿಂದ ಹುಟ್ಟುವದರಿಂದ ವಿರೋಧವಿಲ್ಲ) ಎಂದು (ಆ ಶಂಕೆಯನ್ನು) ಪರಿಹರಿಸಿ (ಮೊದಲು) ಸಿದ್ಧವಾಗಿದ್ದ ಅದೇ ವೇದನಿತ್ಯತ್ವವನ್ನು "ಅದ್ದರಿಂದಲೇ (ವೇದಕ್ಕೆ) ನಿತ್ಯತ್ವವು" ಎಂದು ಈಗ ಗಟ್ಟಿಗೊಳಿಸಿರುತ್ತದೆ. ಆದ್ದರಿಂದಲೇ, ಎಂದರೆ ಗೊತ್ತಾದ ಆಕೃತಿಯುಳ್ಳ ದೇವಾದಿ ಜಗತ್ತು ವೇದಶಬ್ದದಿಂದ ಹುಟ್ಟುವದರಿಂದಲೇ ವೇದಶಬ್ದವು ನಿತ್ಯವಾಗಿದೆ ಎಂದೂ ತಿಳಿಯಬೇಕು. ಆದ್ದರಿಂದಲೇ ಮಂತ್ರವರ್ಣವು "ಯಜ್ಞದಿಂದ (ವೇದ)ವಾಕ್ಕನ್ನು ಪಡೆಯುವ ಯೋಗ್ಯತೆಯನ್ನು ಹೊಂದಿದರು ; (ಆ ಯೋಗ್ಯತೆಯಿಂದ) ಋಷಿಗಳಲ್ಲಿ ಪ್ರವಿಷ್ಟವಾಗಿದ್ದ ಆ (ವಾಕ್ಕನ್ನು) ಪಡೆದುಕೊಂಡರು" (ಋ. ೧೦-೭೧-೩) ಎಂದು ಇದ್ದುಕೊಂಡೇ ಇದ್ದ (ವೇದ)ವಾಕ್ಕನ್ನು ಪಡೆದುಕೊಂಡರೆಂದು ತಿಳಿಸಿದೆ. **ವೇದವ್ಯಾಸರೂ** "ಯುಗಾಂತದಲ್ಲಿ ಮರೆಯಾಗಿದ್ದ ಇತಿಹಾಸಸಹಿತವಾದ ವೇದಗಳನ್ನು ಮಹರ್ಷಿಗಳು ಪೂರ್ವದಲ್ಲಿ ಸ್ವಯಂಭು

---

1. ವೇದವನ್ನು ರಚಿಸಿದವನ ಹೆಸರನ್ನು ಅಧ್ಯಯನಮಾಡಿದವರು ನೆನಪಿಟ್ಟಿಲ್ಲ, ಶಿಷ್ಯನು ಅಧ್ಯಯನಮಾಡುವ ಮೊದಲು ಗುರು ಅಧ್ಯಯನಮಾಡಿರಲೇಬೇಕಾಗಿದೆ. ಆದ್ದರಿಂದಲೂ ವೇದದಲ್ಲಿ ಅನಿತ್ಯಪದಾರ್ಥಗಳನ್ನು ಹೇಳಿದೆ ಎಂಬುದಕ್ಕೆ ಪ್ರಮಾಣವಿಲ್ಲವಾದ್ದರಿಂದಲೂ ವೇದವು ನಿತ್ಯ, ಅಪೌರುಷೇಯ -ಎಂದು ಮೀಮಾಂಸದಲ್ಲಿ ಜೈ. ಸೂ. ೧-೧-೨೭ರಿಂದ ೩೧ರ ವರೆಗಿನ ಭಾಗದಲ್ಲಿ ಸಿದ್ಧವಾಗಿದೆ. ಇವನ್ನು ವ್ಯವಹಾರದೃಷ್ಟಿಯಿಂದ ಇಲ್ಲಿ ಅಂಗೀಕರಿಸಿದೆ. ವೇದನಿತ್ಯತ್ವವನ್ನು ಆಚಾರ್ಯರು ಸಾಧಿಸಿರುವ ಬಗೆಯನ್ನು ತೈ. ಭಾ. ೨-೩೮ ಭಾಷ್ಯದಲ್ಲಿ (ಭಾ. ಭಾ, ೫೩೩, ೧೩೪) ಕಾಣಬಹುದು.

ವಿನ ಅನುಜ್ಞೆಯಂತೆ ತಪಸ್ಸಿನಿಂದ ಪಡೆದುಕೊಂಡರು" (ಮೋ. ಧ. ೨೧೦-೧೯) ಎಂದು ಹೀಗೆಯೇ ಸ್ಮರಿಸಿರುತ್ತಾನೆ[1].

## ಸೃಷ್ಟಿಪ್ರಲಯವಾದವೂ ಶಬ್ದವಿಷಯಕ್ಕೆ ವಿರುದ್ಧವಲ್ಲ

**ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ॥ ೩೦ ॥**

೩೦. ಸಮಾನನಾಮರೂಪಗಳುಳ್ಳದ್ದಾಗಿರುವದರಿಂದ (ಸೃಷ್ಟಿಪ್ರಲಯಗಳ) ಆವೃತ್ತಿಯಾದರೂ ವಿರೋಧವಿಲ್ಲ; ಏಕೆಂದರೆ ಶ್ರುತಿಯಿಂದಲೂ ಸ್ಮೃತಿಯಿಂದಲೂ (ಹಾಗೆಂದು ಸಿದ್ಧವಾಗುತ್ತದೆ).

( ಭಾಷ್ಯ )

೨೯೩. ಅಥಾಪಿ ಸ್ಯಾತ್- ಯದಿ ಪಶ್ವಾದಿವ್ಯಕ್ತಿವತ್ ದೇವಾದಿವ್ಯಕ್ತಯೋಽಪಿ ಸನ್ತತ್ಯೈವ ಉತ್ಪದ್ಯೇರನ್ ನಿರುಧ್ಯೇರಂಶ್ಚ। ತತಃ ಅಭಿಧಾನಾಭಿಧೇಯಾಭಿಧಾತೃವ್ಯವಹಾರಾವಿಚ್ಛೇದಾತ್ ಸಂಬನ್ಧನಿತ್ಯತ್ವೇನ ವಿರೋಧಃ ಶಬ್ದೇ ಪರಿಹ್ರಿಯೇತ। ಯದಾ ತು ಖಲು ಸಕಲಂ ತ್ರೈಲೋಕ್ಯಂ ಪರಿತ್ಯಕ್ತನಾಮರೂಪಂ ನಿರ್ಲೇಪಂ ಪ್ರಲೀಯತೇ ಪ್ರಭವತಿ ಚ ಅಭಿನವಮ್ ಇತಿ ಶ್ರುತಿಸ್ಮೃತಿವಾದಾ ವದನ್ತಿ ತಥಾ ಕಥಮ್ ಅವಿರೋಧಃ ಇತಿ? ತತ್ರ ಇದಮ್ ಅಭಿಧೀಯತೇ- "ಸಮಾನನಾಮರೂಪತ್ವಾತ್" ಇತಿ। ತದಾಪಿ ಸಂಸಾರಸ್ಯ ಅನಾದಿತ್ವಂ ತಾವತ್ ಅಭ್ಯುಪಗನ್ತವ್ಯಮ್। ಪ್ರತಿಪಾದಯಿಷ್ಯತಿ ಚಾಚಾರ್ಯಃ ಸಂಸಾರಸ್ಯ ಅನಾದಿತ್ವಮ್ "ಉಪಪದ್ಯತೇ ಚಾಪ್ಯುಪಲಭ್ಯತೇ ಚ" (೨-೧-೩೬) ಇತಿ। ಅನಾದೌ ಚ ಸಂಸಾರೇ ಯಥಾ ಸ್ವಾಪಪ್ರಬೋಧಯೋಃ ಪ್ರಲಯಪ್ರಭವಶ್ರವಣೇಽಪಿ ಪೂರ್ವಪ್ರಬೋಧವದುತ್ತರಪ್ರಬೋಧೇಽಪಿ ವ್ಯವಹಾರಾತ್ ನ ಕಶ್ಚಿದ್ ವಿರೋಧಃ, ಏವಂ ಕಲ್ಪಾನ್ತರಪ್ರಭವಪ್ರಲಯಯೋರಪಿ ಇತಿ ದ್ರಷ್ಟವ್ಯಮ್। ಸ್ವಾಪಪ್ರಬೋಧಯೋಶ್ಚ ಪ್ರಲಯಪ್ರಭವೌ ಶ್ರೂಯೇತೇ "ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ ತದೈನಂ ವಾಕ್ ಸರ್ವೈರ್ನಾಮಭಿಃ ಸಹಾಪ್ಯೇತಿ ಚಕ್ಷುಃ ಸರ್ವೈ ರೂಪೈಃ ಸಹಾಪ್ಯೇತಿ ಶ್ರೋತ್ರಂ ಸರ್ವೈಃ ಶಬ್ದೈಃ ಸಹಾಪ್ಯೇತಿ ಮನಃ ಸರ್ವೈರ್ಧ್ಯಾನೈಃ ಸಹಾಪ್ಯೇತಿ ಸ ಯದಾ ಪ್ರತಿಬುಧ್ಯತೇ ಯಥಾಗ್ನೇರ್ಜ್ವಲತಃ

1. ಶ್ರುತಿಯನ್ನನುಸರಿಸಿಯೇ ಭಾರತವೂ ಹೇಳಿರುವದರಿಂದ ಅದು ಸ್ಮೃತಿಯು ಎಂಬುದನ್ನು ಇಲ್ಲಿ ಸೂಚಿಸಿದೆ.

ಸರ್ವಾ ದಿಶೋ ವಿಸ್ಫುಲಿಙ್ಗಾ ವಿಪ್ರತಿಷ್ಠೇರನ್ನೇವಮೇವೈತಸ್ಮಾದಾತ್ಮನಃ ಸರ್ವೇ ಪ್ರಾಣಾಃ ಯಥಾಯತನಂ ವಿಪ್ರತಿಷ್ಠನ್ತೇ ಪ್ರಾಣೇಭ್ಯೋ ದೇವಾ ದೇವೇಭ್ಯೋ ಲೋಕಾಃ" (ಕೌ. ೩-೩) ಇತಿ ||

(ಭಾಷ್ಯಾರ್ಥ)

ಇನ್ನು ಹೀಗೂ (ಪೂರ್ವಪಕ್ಷಿಯ ಅಭಿಪ್ರಾಯ)ವಿರಬಹುದು : ಪಶುಗಳ ಮುಂತಾದ ವ್ಯಕ್ತಿಗಳಂತೆ ದೇವಾದಿವ್ಯಕ್ತಿಗಳೂ ಸಂತತವಾಗಿಯೇ[1] ಹುಟ್ಟು ವೆಂದೂ ನಾಶವಾಗುವವೆಂದೂ ಆಗಿದ್ದರೆ, ಆಗ ಅಭಿಧಾನ, ಅಭಿಧೇಯ, ಅ ಧಾತೃ[2] -ಎಂಬ ವ್ಯವಹಾರವು ಕಡಿವಡೆಯದೆ ಇರುವದರಿಂದ (ಶಬ್ದಾರ್ಥಗಳ ಸಂಬಂಧವು ನಿತ್ಯವಾಗಿರುವದರಿಂದ ಶಬ್ದವಿಷಯದಲ್ಲಿ (ಉಂಟಾಗುವ) ವಿರೋಧ ವನ್ನು ಪರಿಹಾರಮಾಡಬಹುದಾಗಿತ್ತು. ಆದರೆ ಯಾವಾಗಲಾದರೆ ಸಕ ತ್ರೈಲೋಕ್ಯವೂ ನಾಮರೂಪಗಳನ್ನು ಬಿಟ್ಟು ಸ್ವಲ್ಪವೂ ಉಳಿಯದಂತೆ ಪ್ರಲಯ ವಾಗುವದೆಂದೂ ಹೊಸದು ಹುಟ್ಟುವದೆಂದೂ ಶ್ರುತಿಸ್ಮೃತಿವಾದಗಳು ಹೇಳ ತ್ತಿರುವವೋ, ಆಗ ವಿರೋಧವಿಲ್ಲ(ವೆನ್ನುವದು) ಹೇಗೆ ?

(ಪರಿಹಾರ) :- ಈ (ವಿಷಯ)ದಲ್ಲಿ 'ಸಮಾನನಾಮರೂಪಗಳುಳ್ಳದ್ದಾ ರಿಂದ' ಎಂಬ (ಪರಿಹಾರವನ್ನು) ಹೇಳುತ್ತೇವೆ. ಆಗಲೂ ಸಂಸಾರವು ಅನಾ ಎಂಬುದನ್ನು ಮೊದಲು ಒಪ್ಪಬೇಕು. (ಸೂತ್ರಕಾರರಾದ) ಆಚಾರ್ಯ "ಉಪಪದ್ಯತೇ ಚಾಪ್ಯುಪಲಭ್ಯತೇ ಚ" (೨-೧-೩೬) ಎಂದು ಸಂಸಾರ ಅನಾದಿತ್ವವನ್ನು ಮುಂದೆ ಪ್ರತಿಪಾದಿಸಿಯೂ ಇರುತ್ತಾರೆ. (ಹೀಗೆ) ಸಂಸಾ ವು ಅನಾದಿಯಾಗಿರುವಲ್ಲಿ, ಹೇಗೆ ತನಿನಿದ್ರೆ ಮತ್ತು ಎಚ್ಚರ -ಇ ಗಳಲ್ಲಿ ಪ್ರಲಯೋತ್ಪತ್ತಿಗಳನ್ನು ಶ್ರುತಿಯಲ್ಲಿ ಹೇಳಿದ್ದಾಗ್ಯೂ ಹಿಂದಿ ಎಚ್ಚರದಂತೆ ಮುಂದಿನ ಎಚ್ಚರದಲ್ಲಿಯೂ ವ್ಯವಹಾರವಿರುವದರಿಂ (ಯಾವ) ವಿರೋಧವೂ ಇರುವದಿಲ್ಲವೋ[3] ಹಾಗೆಯೆ ಮತ್ತೊಂದು ಕಲ್ಪದಲ್ಲಿ ಆಗುವ ಸೃಷ್ಟಿಪ್ರಲಯಗಳ (ವಿಷಯ)ದ

---

1. ವ್ಯಕ್ತಿಗಳಿಲ್ಲವೆಂಬ ಕಾಲವೇ ಇಲ್ಲದೆ.

2. ಹೆಸರು, ಹೆಸರಿಸುವ ವಸ್ತು, ಹೆಸರಿಟ್ಟು ಕರೆಯುವವನು.

3. ಸುಷುಪ್ತಿಯಲ್ಲಿ ಪ್ರಲಯವಾದರೂ ಎಚ್ಚರದಲ್ಲಿ ಅದೇ ಜಗತ್ತು ಕಾಣಬರುತ್ತ ಯಾದ್ದರಿಂದ ಅಲ್ಲಿ ಶಬ್ದಾರ್ಥಸಂಬಂಧದ ನಿತ್ಯತ್ವಕ್ಕೆ ಯಾವ ವಿರೋಧವೂ ಬರುವದಿ ಪ್ರಲಯವನ್ನು ಒಪ್ಪದ ಮೀಮಾಂಸಕರು ಕೂಡ ಸುಷುಪ್ತಿಯನ್ನು ಒಪ್ಪಲೇಬೇಕಾದ್ದರಿಂ ಈ ದೃಷ್ಟಾಂತವನ್ನು ಕೊಟ್ಟಿದೆ.

**ಯೂ ವಿರೋಧವಿಲ್ಲ) ಎಂದು ತಿಳಿಯಬೇಕು.** ತನಿನಿದ್ರೆ, ಎಚ್ಚರ – ಇವುಗಳಲ್ಲಿ ಪ್ರಲಯವೂ ಉತ್ಪತ್ತಿಯೂ ಆಗುವವೆಂದು "ಯಾವಾಗ ನಿದ್ರಿಸಿದವನು ಯಾವ ಕನಸನ್ನೂ ಕಾಣುವದಿಲ್ಲವೋ, ಆಗ ಈ ಪ್ರಾಣನಲ್ಲಿಯೇ[1] ಒಂದಾಗುತ್ತಾನೆ. ಆಗ ಇವನನ್ನು ವಾಕ್ಕು ಎಲ್ಲಾ ನಾಮಗಳೊಡನೆ (ಸೇರಿಕೊಂಡು) ಲಯವಾಗುತ್ತದೆ; ಚಕ್ಷುಸ್ಸು ಎಲ್ಲಾ ರೂಪಗಳೊಡನೆ ಲಯವಾಗುತ್ತದೆ; ಶ್ರೋತ್ರವು ಎಲ್ಲಾ ಶಬ್ದಗಳೊಡನೆ ಲಯವಾಗುತ್ತದೆ; ಮನಸ್ಸು ಎಲ್ಲಾ ಧ್ಯಾನಗಳೊಡನೆ ಲಯವಾಗುತ್ತದೆ. ಅವನು ಯಾವಾಗ ಎಚ್ಚರುವನೋ (ಆಗ) ಹೇಗೆ ಉರಿಯುವ ಬೆಂಕಿಯಿಂದ ಎಲ್ಲಾ ಕಡೆಗಳಿಗೂ ಕಿಡಿಗಳು ಹಾರಿಬರುವವೋ ಹಾಗೆಯೇ. ಈ ಆತ್ಮನಿಂದ ಎಲ್ಲಾ ಪ್ರಾಣಗಳೂ[2] ತಮ್ಮತಮ್ಮ ಸ್ಥಾನಕ್ಕೆ ಹೊರಟುಬಂದು ಸೇರುವವು; ಪ್ರಾಣಗಳಾದ ಬಳಿಕ ದೇವತೆಗಳೂ ದೇವತೆಗಳಾದ ಬಳಿಕ ಲೋಕಗಳೂ (ಹೊರಟುಬರುವವು)" ಎಂಬ (ಕೌ. ೩–೩) ಶ್ರುತಿಯಲ್ಲಿ ಹೇಳಿದೆ.

## ಹೊಸ ಕಲ್ಪದಲ್ಲಿ ಹಿಂದಿನ ಕಲ್ಪದ ಸ್ಮರಣೆಯೂ ಇರಬಹುದು

( ಭಾಷ್ಯ )

೨೯೪. ಸ್ಯಾದೇತತ್ — ಸ್ವಾಪೇ ಪುರುಷಾನ್ತರವ್ಯವಹಾರಾವಿಚ್ಛೇದಾತ್ ಸ್ವಯಂ ಚ ಸುಪ್ತಪ್ರಬುದ್ಧಸ್ಯ ಪೂರ್ವಪ್ರಬೋಧವ್ಯವಹಾರಾನುಸನ್ಧಾನಸಂಭವಾತ್ ಅವಿರುದ್ಧಮ್ । ಮಹಾಪ್ರಲಯೇ ತು ಸರ್ವವ್ಯವಹಾರೋಚ್ಛೇದಾತ್, ಜನ್ಮಾನ್ತರವ್ಯವಹಾರವಚ್ಚ ಕಲ್ಪಾನ್ತರವ್ಯವಹಾರಸ್ಯ ಅನುಸನ್ಧಾತುಮ್ ಅಶಕ್ಯತ್ವಾತ್ ವೈಷಮ್ಯಮ್ ಇತಿ । ನೈಷ ದೋಷಃ । ಸತ್ಯಪಿ ಸರ್ವವ್ಯವಹಾರೋಚ್ಛೇದಿನಿ ಮಹಾಪ್ರಲಯೇ ಪರಮೇಶ್ವರಾನುಗ್ರಹಾತ್ ಈಶ್ವರಾಣಾಂ ಹಿರಣ್ಯಗರ್ಭಾದೀನಾಂ ಕಲ್ಪಾನ್ತರವ್ಯವಹಾರಾನುಸನ್ಧಾನೋಪಪತ್ತೇಃ । ಯದ್ಯಪಿ ಪ್ರಾಕೃತಾಃ ಪ್ರಾಣಿನೋ ನ ಜನ್ಮಾನ್ತರವ್ಯವಹಾರಮ್ ಅನುಸನ್ದಧಾನಾ ದೃಶ್ಯನ್ತ ಇತಿ[3], ತಥಾಪಿ ನ ಪ್ರಾಕೃತವತ್ ಈಶ್ವರಾಣಾಂ ಭವಿತವ್ಯಮ್ । ತಥಾ ಹಿ ಪ್ರಾಣಿತ್ವಾವಿಶೇಷೇಽಪಿ ಮನುಷ್ಯಾದಿಸ್ತಮ್ಬಪರ್ಯನ್ತೇಷು ಜ್ಞಾನೈಶ್ವರ್ಯಾದಿಪ್ರತಿಬನ್ಧಃ ಪರೇಣ ಪರೇಣ

---

1. ಪರಮಾತ್ಮನಲ್ಲಿಯೇ ಎಂದರ್ಥ. ತನಿನಿದ್ರೆಯಲ್ಲಿ ಹೊರಗಿನ ಜಗತ್ತು ಹಾಗೆಯೇ ಹೊರಗೆ ಇರುವವೆಂದು ಸಾಮಾನ್ಯರ ದೃಷ್ಟಿಗೆ ತೋರಿದರೂ ಶ್ರುತಿಯ ದೃಷ್ಟಿಯಲ್ಲಿ ಆಗ ಎಲ್ಲವೂ ಪರಮಾತ್ಮನಲ್ಲಿಯೇ ಸೇರಿಕೊಂಡಿರುತ್ತದೆ.

2. ಎಲ್ಲಾ ಕರಣಗಳೂ ಎಂದರ್ಥ.

3. ಇಲ್ಲಿ 'ಇತಿ' ಇಲ್ಲದಿದ್ದರೂ ಸಾಗುತ್ತಿತ್ತು.

ಭೂಯಾನ್ ಭವನ್ ದೃಶ್ಯತೇ । ತಥಾ ಮನುಷ್ಯಾದಿಷ್ವೇವ ಹಿರಣ್ಯಗರ್ಭ ಪರ್ಯನ್ತೇಷು ಜ್ಞಾನೈಶ್ವರ್ಯಾದ್ಯಭಿವ್ಯಕ್ತಿರಪಿ ಪರೇಣ ಪರೇಣ ಭೂಯಸೀ ಭವತಿ ಇತ್ಯೇತತ್ ಶ್ರುತಿಸ್ಮೃತಿವಾದೇಷು ಅಸಕೃತ್ ಅನುಶ್ರೂಯ ಮಾಣಂ ನ ಶಕ್ಯಂ ನಾಸ್ತಿ ಇತಿ ವದಿತುಮ್ । ತತಶ್ಚ ಅತೀತಕಲ್ಪಾನುಷ್ಠಿತ ಪ್ರಕೃಷ್ಟಜ್ಞಾನಕರ್ಮಣಾಮ್ ಈಶ್ವರಾಣಾಂ ಹಿರಣ್ಯಗರ್ಭಾದೀನಾಂ ವರ್ತಮಾನಕಲ್ಪಾದೌ ಪ್ರಾದುರ್ಭವತಾಂ ಪರಮೇಶ್ವರಾನುಗೃಹೀತಾನಾಂ ಸುಪ್ತಪ್ರತಿಬುದ್ಧವತ್ ಕಲ್ಪಾನ್ತರವ್ಯವಹಾರಾನುಸನ್ಧಾನೋಪಪತ್ತಿಃ । ತಥಾ ಚ ಶ್ರುತಿಃ – "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಗ್ಂ ಹ ದೇವಮಾತ್ಮಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" (ಶ್ವೇ. ೬–೧೮) ಇತಿ । ಸ್ಮರನ್ತಿ ಚ **ಶೌನಕಾದಯಃ** ಮಧುಚ್ಛನ್ದಃಪ್ರಭೃತಿಭಿರ್ಋಷಿಭಿಃ ದಾಶ ತಯ್ಯೋ ದೃಷ್ಟಾಃ ಇತಿ । ಪ್ರತಿವೇದಂ ಚ ಏವಮೇವ ಕಾಣ್ಡರ್ಷ್ಯಾದಯಃ ಸ್ಮರ್ಯನ್ತೇ । ಶ್ರುತಿರಪಿ ಋಷಿಜ್ಞಾನಪೂರ್ವಕಮೇವ ಮನ್ತ್ರೇಣ ಅನು ಷ್ಠಾನಂ ದರ್ಶಯತಿ – "ಯೋ ಹ ವಾ ಅವಿದಿತಾರ್ಷೇಯಚ್ಛನ್ದೋದೈವತ ಬ್ರಾಹ್ಮಣೇನ ಮನ್ತ್ರೇಣ ಯಾಜಯತಿ ವಾಧ್ಯಾಪಯತಿ ವಾ ಸ್ಥಾಣುಂ ವರ್ಚ್ಛತಿ ಗರ್ತಂ ವಾ ಪ್ರತಿಪದ್ಯತೇ" ಇತ್ಯುಪಕ್ರಮ್ಯ "ತಸ್ಮಾದೇತಾನಿ ಮನ್ತ್ರೇ ಮನ್ತ್ರೇ ವಿದ್ಯಾತ್" (ಆರ್ಷೇಯಬ್ರಾ. ೧) ಇತಿ ॥

( ಭಾಷ್ಯಾರ್ಥ )

(ಆಕ್ಷೇಪ) :– ( ಪೂರ್ವಪಕ್ಷಿಯ ಮತವು ) ಹೀಗಿರಬಹುದು :– ಸುಷುಪ್ತಿಯಲ್ಲಿ ಮಿಕ್ಕ ಪುರುಷರ ವ್ಯವಹಾರವು ಕಡಿದುಹೋಗದೆ ಇರುವದ ರಿಂದಲೂ ನಿದ್ರಿಸಿ ಎಚ್ಚತ್ತ ತನಗೂ ಹಿಂದಿನ ಎಚ್ಚರದ ನೆನಪು ಇರಬಹು ದಾದ್ದರಿಂದಲೂ[1] ( ಶಬ್ದವಿಷಯದಲ್ಲಿ ಈ ವಾದವು ) ವಿರುದ್ಧವಾಗುವದಿಲ್ಲ. ಆದರೆ ಮಹಾಪ್ರಲಯದಲ್ಲಿ ಎಲ್ಲಾ ವ್ಯವಹಾರವೂ ನಾಶವಾಗುವದರಿಂದಲೂ ಮತ್ತೊಂದು ಜನ್ಮದ ವ್ಯವಹಾರ(ವನ್ನು ನೆನಪಿಡುವದಕ್ಕಾಗ)ದಂತೆ ಕಲ್ಪಾಂ ತರದ ವ್ಯವಹಾರವನ್ನು ನೆನಪಿಡುವದೂ ಆಗಲಾರದಾದ್ದರಿಂದ ( ದೃಷ್ಟಾಂತಕ್ಕೂ ದಾರ್ಷ್ಟಾಂತಿಕಕ್ಕೂ ) ಹೆಚ್ಚುಕಡಿಮೆಯಿದೆ.

(ಪರಿಹಾರ) :– ಇದು ದೋಷವಲ್ಲ. ಎಲ್ಲಾ ವ್ಯವಹಾರವನ್ನೂ ನಾಶಗೊಳಿಸುವ ಮಹಾಪ್ರಲಯವು ಆದ ಬಳಿಕವೂ **ಪರಮೇಶ್ವರನ**

---

1. ಇದು ಎಚ್ಚರದ ದೃಷ್ಟಿಯಿಂದ ಮಾಡಿರುವ ಆಕ್ಷೇಪವು.

**ಅನುಗ್ರಹದಿಂದ ಈಶ್ವರರಾಗಿರುವ ಹಿರಣ್ಯಗರ್ಭನೇ ಮೊದಲಾದವರಿಗೆ ಕಲ್ಪಾಂತರದ ವ್ಯವಹಾರದ ನೆನಪು ಇರಬಹುದಾಗಿದೆ**[1]. ಸಾಮಾನ್ಯಜೀವರು ಜನ್ಮಾಂತರದ ವ್ಯವಹಾರವನ್ನು ನೆನಪಿಗೆ ತಂದುಕೊಳ್ಳುವದು ಕಂಡುಬರುವದಿಲ್ಲವಾದರೂ ಈಶ್ವರರಾದವರು ಸಾಮಾನ್ಯರಂತೆ ಇರಬೇಕೆಂಬುದು (ಸರಿ)ಯಲ್ಲ. ಆದ್ದರಿಂದಲೇ ಪ್ರಾಣಿತ್ವವು ಸಮಾನವಾಗಿದ್ದರೂ ಮನುಷ್ಯರಿಂದ ಮೊದಲಾಗಿ ಸ್ತಂಬದವರೆಗಿನ (ಪ್ರಾಣಿಗಳಿಗೆ) ಜ್ಞಾನ, ಐಶ್ವರ್ಯ – ಮುಂತಾದವುಗಳಿಗೆ ಇರುವ ಅಡ್ಡಿಯು ಮುಂದು ಮುಂದಕ್ಕೆ (ಹೋದಂತೆ) ಹೆಚ್ಚು(ಹೆಚ್ಚಾಗಿರುವದು) ಕಂಡುಬರುತ್ತದೆ. ಹಾಗೆಯೇ (ಅದೇ) ಮನುಷ್ಯರು ಮೊದಲಾಗಿ ಹಿರಣ್ಯಗರ್ಭನವರೆಗೆ ಜ್ಞಾನ, ಐಶ್ವರ್ಯ – ಮುಂತಾದದ್ದು ತೋರಿಕೊಳ್ಳುವದೂ ಮುಂದು ಮುಂದಕ್ಕೆ (ಹೋದಂತೆ) ಹೆಚ್ಚು(ಹೆಚ್ಚಾಗಿರುವ)ದೆಂದು ಶ್ರುತಿಸ್ಮೃತಿವಾದಗಳಲ್ಲಿ ಮತ್ತೆಮತ್ತೆ ಹೇಳಿರುವದೂ ಇಲ್ಲವೆಂದು ಹೇಳುವದು ಆಗಲಾರದು ಮತ್ತು ಹೀಗಿರುವದರಿಂದ[2] ಹಿಂದಿನ ಕಲ್ಪದಲ್ಲಿ ಅನುಷ್ಠಾನಮಾಡಿದ್ದ ಹೆಚ್ಚಿನ ಜ್ಞಾನಕರ್ಮಗಳುಳ್ಳ[3] ಈಶ್ವರರಾದ ಹಿರಣ್ಯಗರ್ಭನೇ ಮೊದಲಾದವರಿಗೆ ಈಗಿನ ಕಲ್ಪದ ಆದಿಯಲ್ಲಿ (ಅವರು) ಹುಟ್ಟುವಾಗ ಪರಮೇಶ್ವರನ ಅನುಗ್ರಹದಿಂದ ನಿದ್ರಿಸಿ ಎಚ್ಚತ್ತವರಿಗೆ (ಹಿಂದಿನ ಎಚ್ಚರದ ನೆನಪಾಗುವಂತೆ) ಕಲ್ಪಾಂತರವ್ಯವಹಾರವನ್ನು ನೆನಪಿಗೆ ತಂದುಕೊಳ್ಳುವದು ಆಗಬಹುದಾಗಿರುತ್ತದೆ. ಆದ್ದರಿಂದಲೇ ಶ್ರುತಿಯು "ಯಾವನು ಬ್ರಹ್ಮನನ್ನು ಮೊದಲು ಸೃಷ್ಟಿಸುವನೋ ಯಾವನೇ ಅವನಿಗೆ ವೇದಗಳನ್ನು ಕಳುಹಿಸಿಕೊಡುವನೋ, ಆ ಆತ್ಮಬುದ್ಧಿಯನ್ನು ಪ್ರಕಾಶಗೊಳಿಸುವ ದೇವನನ್ನು ಮುಮುಕ್ಷುವಾದ ನಾನು ಶರಣುಹೊಂದಿರುತ್ತೇನೆ" (ಶ್ವೇ. ೬–೧೮) ಎಂದು (ಹೇಳುತ್ತದೆ)[4]. **ಮಧುಚ್ಛಂದನೇ** ಮುಂತಾದ ಋಷಿಗಳು ಹತ್ತು (ಮಂಡಲದ ಋಕ್ಕುಗಳನ್ನೂ) ಕಂಡುಹಿಡಿದರು[5] – ಎಂದು **ಶೌನಕನೇ** ಮೊದಲಾದವರು ಹೇಳಿರು

1. ಆದ್ದರಿಂದಲೇ ಅವರು ಆ ನೆನಪಿನ ಬಲದಿಂದ ಮತ್ತೆ ಸೃಷ್ಟಿಮಾಡುತ್ತಾರೆಂದು ಶ್ರುತಿಯಲ್ಲಿ ಹೇಳಿದೆ.

2. ವಿಜ್ಞಾನಾದಿಗಳ ತಾರತಮ್ಯವು ಜೀವರುಗಳಲ್ಲಿರುವದರಿಂದ.

3. ಉಪಾಸನೆಯ ಮತ್ತು ಕರ್ಮದ ಸಂಸ್ಕಾರವುಳ್ಳ ಎಂದರ್ಥ. ಇವುಗಳ ಫಲವಾಗಿ ಈಶ್ವರನ ಅನುಗ್ರಹದಿಂದ ಅವರಿಗೆ ಹಿಂದಿನ ಕಲ್ಪದ ಸ್ಮರಣೆಯುಂಟಾಗುತ್ತದೆ.

4. ಹಿರಣ್ಯಗರ್ಭನಿಗೆ ಪರಮೇಶ್ವರನ ಅನುಗ್ರಹದಿಂದ ಈ ಕಲ್ಪದಲ್ಲಿ ಅಧ್ಯಯನವಿಲ್ಲದೆಯೇ ವೇದಸ್ಮರಣೆಯುಂಟಾಗುವದಕ್ಕೆ ಪ್ರಮಾಣವಿದು.

5. ಸರ್ವಾನುಕ್ರಮಣಿಯಲ್ಲಿ ಋಗ್ವೇದದ ವಿಷಯವಾಗಿ ಹೀಗೆಂದು ಹೇಳಿದೆ. ಋಷಿಗಳಿಗೂ ಕಲ್ಪಾಂತರದ ಸ್ಮರಣೆಯಾಗುತ್ತದೆ ಎಂಬುದಕ್ಕೆ ಪ್ರಮಾಣವಿದು.

ತ್ತಾರೆ. ಪ್ರತಿವೇದದಲ್ಲಿದಯೂ ಹೀಗೆಯೇ **ಕಾಂಡರ್ಷಿಗಳೇ**[1] ಮುಂತಾದವನ್ನು ಸ್ಮೃತಿಗಳಲ್ಲಿ ಹೇಳಿರುತ್ತದೆ. ಶ್ರುತಿಯೂ "ಯಾವನು ಮಂತ್ರದ ಋಷಿಸಂಬಂಧ, ಛಂದಸ್ಸು, ದೇವತೆ, ಬ್ರಾಹ್ಮಣ – ಇವುಗಳನ್ನು ಅರಿಯದೆ ಯಾಗಮಾಡಿಸುತ್ತಾನೋ ಅಧ್ಯಯನಮಾಡಿಸುತ್ತಾನೋ (ಅವನು) ಸ್ಥಾಣುವನ್ನು ಸೇರುತ್ತಾನೆ, ಗರ್ತವನ್ನಾದರೂ ಹೊಂದುತ್ತಾನೆ"[2] ಎಂದು ಉಪಕ್ರಮಿಸಿ "ಆದ್ದರಿಂದ ಇವುಗಳನ್ನು ಮಂತ್ರಮಂತ್ರದಲ್ಲಿಯೂ ತಿಳಿದಿರಬೇಕು" (ಆರ್ಷೇಯಬ್ರಾ. ೧) ಎಂದು ಋಷಿಜ್ಞಾನಪೂರ್ವಕವಾಗಿಯೇ ಮಂತ್ರದಿಂದ ಅನುಷ್ಠಾನಮಾಡಬೇಕೆಂದು ತಿಳಿಸುತ್ತದೆ[3].

## ಸಮಾನನಾಮರೂಪಗಳ ಸೃಷ್ಟಿಯಾಗುವದೆಂಬುದಕ್ಕೆ ಯುಕ್ತಿಗಳು

### (ಭಾಷ್ಯ)

೨೯೫. ಪ್ರಾಣಿನಾಂ ಚ ಸುಖಪ್ರಾಪ್ತಯೇ ಧರ್ಮೋ ವಿಧೀಯತೇ ದುಃಖಪರಿಹಾರಾಯ ಚ ಅಧರ್ಮಃ ಪ್ರತಿಷಿಧ್ಯತೇ । ದೃಷ್ಟಾನುಶ್ರವಿಕಸುಖದುಃಖವಿಷಯೌ ಚ ರಾಗದ್ವೇಷೌ ಭವತಃ, ನ ವಿಲಕ್ಷಣವಿಷಯೌ ಇತ್ಯತಃ ಧರ್ಮಾಧರ್ಮಫಲಭೂತಾ ಉತ್ತರಾ ಸೃಷ್ಟಿಃ ನಿಷ್ಪದ್ಯಮಾನಾ ಪೂರ್ವಸೃಷ್ಟಿಸದೃಶ್ಯೈವ ನಿಷ್ಪದ್ಯತೇ । ಸ್ಮೃತಿಶ್ಚ ಭವತಿ – "ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್ಸೃಷ್ಟ್ಯಾಂ ಪ್ರತಿಪೇದಿರೇ । ತಾನ್ಯೇವ ತೇ ಪ್ರಪದ್ಯನ್ತೇ ಸೃಜ್ಯಮಾನಾಃ ಪುನಃ ಪುನಃ ॥ ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮೌ ಕೃತಾಕೃತೇ । ತದ್ಭಾವಿತಾಃ ಪ್ರಪದ್ಯನ್ತೇ ತಸ್ಮಾತ್ ತತ್ತಸ್ಯ ರೋಚತೇ ॥"[4] (ಮೋ. ಧ. ೨೩೨-೧೬, ೧೭) ಇತಿ। ಪ್ರಲೀಯಮಾನಮಪಿ ಚೇದಂ ಜಗಚ್ಛಕ್ತ್ಯವಶೇಷಮೇವ ಪ್ರಲೀಯತೇ । ಶಕ್ತಿಮೂಲಮೇವ ಚ ಪ್ರಭವತಿ । ಇತರಥಾ ಆಕಸ್ಮಿಕತ್ವಪ್ರಸಙ್ಗಾತ್ । ನ ಚ ಅನೇಕಾಕಾರಾಃ ಶಕ್ತಯಃ ಶಕ್ಯಾಃ ಕಲ್ಪಯಿತುಮ್ । ತತಶ್ಚ ವಿಚ್ಛಿದ್ಯವಿಚ್ಛಿದ್ಯಾಪಿ ಉದ್ಭವತಾಂ ಭೂರಾದಿಲೋಕ

---

1. ಯಜುರ್ವೇದಕ್ಕೆ ಒಂಬತ್ತು ಕಾಂಡರ್ಷಿಗಳನ್ನು ಸ್ಮೃತಿಕಾರರು ತಿಳಿಸಿರುತ್ತಾರೆ.

2. ಮೋಟುಮರವಾಗಿ ಹುಟ್ಟುತ್ತಾನೆ, ಅಥವಾ ನರಕದ ಗುಂಡಿಯೊಳಕ್ಕೆ ಬೀಳುತ್ತಾನೆ ಎಂದರ್ಥ.

3. ಋಷಿಗಳಿಗೆ ಹಿಂದಿನ ಕಲ್ಪದ ಮಂತ್ರದ ಸ್ಮರಣೆಯು ಈ ಕಲ್ಪದಲ್ಲಿ ಆಗುತ್ತದೆ ಎಂಬುದಕ್ಕೆ ಶ್ರುತಿಸ್ಮೃತಿಗಳ ಆಧಾರವಿದೆ ಎಂದಂತೆ ಆಯಿತು.

4. ಈ ಶ್ಲೋಕಗಳು ವಿ. ಪು. ೧-೫-೬೧, ೬೨ರಲ್ಲಿಯೂ ಇವೆ. ಭಾಷ್ಯಕಾರರು ಯಾವ ಗ್ರಂಥದಿಂದ ಉದಾಹರಿಸಿರುತ್ತಾರೋ ತಿಳಿಯದು.

ಪ್ರವಾಹಾಣಾಮ್, ದೇವತಿರ್ಯಙ್ಮನುಷ್ಯಲಕ್ಷಣಾನಾಂ ಚ ಪ್ರಾಣಿನಿಕಾಯಪ್ರವಾಹಾಣಾಮ್ ವರ್ಣಾಶ್ರಮಧರ್ಮಫಲವ್ಯವಸ್ಥಾನಾಂ ಚ ಅನಾದೌ ಸಂಸಾರೇ ನಿಯತತ್ವಮ್ ಇನ್ದ್ರಿಯಸಂಬಂಧನಿಯತತ್ವವತ್ ಪ್ರತ್ಯೇತವ್ಯಮ್ । ನ ಹಿ ಇನ್ದ್ರಿಯವಿಷಯಸಂಬನ್ಧಾದೇರ್ವ್ಯವಹಾರಸ್ಯ ಪ್ರತಿಸರ್ಗಮ್ ಅನ್ಯಥಾತ್ವಂ ಷಷ್ಠೇನ್ದ್ರಿಯವಿಷಯಕಲ್ಪಂ ಶಕ್ಯಮ್ ಉತ್ಪ್ರೇಕ್ಷಿತುಮ್ । ಅತಶ್ಚ ಸರ್ವಕಲ್ಪಾನಾಂ ತುಲ್ಯವ್ಯವಹಾರತ್ವಾತ್ ಕಲ್ಪಾನ್ತರವ್ಯವಹಾರಾನುಸನ್ಧಾನಕ್ಷಮತ್ವಾಚ್ಚ ಈಶ್ವರಾಣಾಮ್, ಸಮಾನನಾಮರೂಪಾ ಏವ ಪ್ರತಿಸರ್ಗಂ ವಿಶೇಷಾಃ ಪ್ರಾದುರ್ಭವನ್ತಿ । ಸಮಾನನಾಮರೂಪತ್ವಾಚ್ಚ ಆವೃತ್ತಾವಪಿ ಮಹಾಸರ್ಗಮಹಾಪ್ರಲಯಲಕ್ಷಣಾಯಾಂ ಜಗತೋಽಭ್ಯುಪಗಮ್ಯಮಾನಾಯಾಂ ನ ಕಶ್ಚಿತ್ ಶಬ್ದಪ್ರಾಮಾಣ್ಯಾದಿವಿರೋಧಃ ॥

(ಭಾಷ್ಯಾರ್ಥ)

ಜೀವರುಗಳಿಗೆ ಸುಖಪ್ರಾಪ್ತಿಗಾಗಿ ಧರ್ಮವನ್ನು ವಿಧಿಸಿರುತ್ತದೆ; ಮತ್ತು ದುಃಖಪರಿಹಾರಕ್ಕಾಗಿ ಅಧರ್ಮವನ್ನು ಪ್ರತಿಷೇಧಿಸಿರುತ್ತದೆ. (ಈ ಲೋಕದಲ್ಲಿ) ಕಂಡ (ಮತ್ತು ಶಾಸ್ತ್ರದಿಂದ) ಕೇಳಿರುವ ಸುಖದು:ಖಗಳ ವಿಷಯದಲ್ಲಿಯೇ ರಾಗದ್ವೇಷಗಳುಂಟಾಗುವವೇ ಹೊರತು ಬೇರೆಯ ಸ್ವಭಾವದ (ಸುಖದುಃಖಗಳ) ವಿಷಯದಲ್ಲಿ ಆಗಲಾರವು[1]. ಆದ್ದರಿಂದ ಧರ್ಮಾಧರ್ಮಗಳ ಫಲವಾಗಿ ಉಂಟಾಗುವ ಮುಂದಿನ ಸೃಷ್ಟಿಯು ಹಿಂದಿನ ಸೃಷ್ಟಿಯಂತೆಯೇ ಉಂಟಾಗುತ್ತದೆ (ಎನ್ನಬೇಕು)[2]. (ಹಾಗೆಂದು ಹೇಳುವ) ಸ್ಮೃತಿಯೂ ಇದೆ: "ಅವುಗಳಲ್ಲಿ ಯಾರು ಯಾವ ಕರ್ಮಗಳನ್ನು ಹಿಂದಿನ ಸೃಷ್ಟಿಯಲ್ಲಿ ಹೊಂದಿಕೊಂಡಿದ್ದರೋ, ಮತ್ತೆಮತ್ತೆ ಸೃಷ್ಟಿಯಾದಾಗಲೂ ಅವರು ಅದನ್ನೇ ಹೊಂದಿಕೊಳ್ಳುತ್ತಾರೆ. ಹಿಂಸಾಕರವಾದ ಅಥವಾ ಅಹಿಂಸಾಕರವಾದ, ಮೃದುವಾದ ಅಥವಾ ಕ್ರೂರವಾದ (ಜನ್ಮಗಳನ್ನೂ) ಧರ್ಮಾಧರ್ಮಗಳನ್ನೂ ಸತ್ಯಾನೃತಗಳನ್ನೂ ಅದೇ ಭಾವನೆಯಿಂದ ಕೂಡಿ ಪಡೆದುಕೊಳ್ಳುತ್ತಾರೆ; ಆದ್ದರಿಂದ ಅದದು ಅವನವನಿಗೆ ಇಷ್ಟವಾಗಿರುತ್ತದೆ" (ಮೋ. ಧ. ೨೩೨-೧೬, ೧೭). ಈ

---

1. ಎಂದಿಗೂ ಕಂಡು ಕೇಳದ ಸುಖವನ್ನು ಬಯಸುವದಾಗಲಿ ದುಃಖವನ್ನು ದ್ವೇಷಿಸುವದಾಗಲಿ ಆಗುವಂತಿಲ್ಲ.

2. ಹಾಗಿಲ್ಲದಿದ್ದರೆ ಈಗಿನ ಸೃಷ್ಟಿಯು ಹಿಂದಿನ ಕಲ್ಪದ ಪ್ರಾಣಿಗಳ ಧರ್ಮಾಧರ್ಮಗಳ ಫಲವಾಗಲಾರದು; ಏಕೆಂದರೆ ತಮಗೆ ಗೊತ್ತಿಲ್ಲದ ಈ ಕಲ್ಪದ ಭೋಗವನ್ನು ಆ ಕಲ್ಪದ ಪ್ರಾಣಿಗಳು ಬಯಸಿದ್ದವೆಂದು ಹೇಳುವದಕ್ಕಾಗುವದಿಲ್ಲ.

**ಜಗತ್ತು ಪ್ರಲಯವಾಗುವಾಗಲೂ (ತನ್ನ) ಶಕ್ತಿಯನ್ನು[1] ಉಳಿಸಿಕೊಂಡೇ ಪ್ರಲಯವಾಗುತ್ತದೆ; ಶಕ್ತಿಯೆಂಬ ಮೂಲದಿಂದಲೇ ಹುಟ್ಟುತ್ತದೆ (ಎನ್ನಬೇಕು). ಏಕೆಂದರೆ ಹಾಗಿಲ್ಲದಿದ್ದರೆ ಯಾವ (ಕಾರಣವೂ) ಇಲ್ಲದೆಯೇ (ಸೃಷ್ಟಿಪ್ರಲಯಗಳು) ಆಗುವವೆನ್ನಬೇಕಾದೀತು[2].** ಈ ಶಕ್ತಿಗಳು ಅನೇಕಾಕಾರವಾಗಿರುತ್ತವೆ ಎಂದು ಕಲ್ಪಿಸುವದಕ್ಕೂ ಆಗಲಾರದು[3]. ಆದ್ದರಿಂದಲೂ ಭೂರಾದಿಲೋಕಗಳ ಪ್ರವಾಹಗಳೂ, ದೇವತೆಗಳು, ತಿರ್ಯಗ್ಜಂತುಗಳು, ಮನುಷ್ಯರು– ಎಂಬ ಪ್ರಾಣಿರಾಶಿಗಳ ಪ್ರವಾಹಗಳೂ ವರ್ಣಾಶ್ರಮಧರ್ಮಫಲಗಳ ವ್ಯವಸ್ಥೆಗಳೂ ಬಿಟ್ಟುಬಿಟ್ಟು ಹುಟ್ಟುತ್ತಿದ್ದರೂ ಅನಾದಿಯಾದ ಸಂಸಾರದಲ್ಲಿ ಇಂದ್ರಿಯವಿಷಯಗಳ ಸಂಬಂಧದಂತೆ ನಿಯತವಾಗಿಯೇ ಇರುವವೆಂದು ತಿಳಿಯಬೇಕು[4]. ಇಂದ್ರಿಯವಿಷಯಸಂಬಂಧವೇ ಮುಂತಾದ[5] ವ್ಯವಹಾರವು ಒಂದೊಂದು ಸೃಷ್ಟಿಗೂ ಆರನೆಯ ಇಂದ್ರಿಯದ ವಿಷಯದಂತೆ[6] ಬೇರೆಯ ತೆರನಾಗಿಯೇ ಇರುವದೆಂದು ಊಹಿಸುವದಕ್ಕೆ ಆಗಲಾರದಷ್ಟೆ.

---

1. ಜಗತ್ತಿಗೆ ಮತ್ತೆ ಅದೇ ಆಕಾರದಲ್ಲಿ ಹುಟ್ಟುವದಕ್ಕೆ ಬೇಕಾದ ಶಕ್ತಿಯು ಪ್ರಲಯದಲ್ಲಿಯೂ ಉಳಿದಿರುತ್ತದೆ ಎಂದರ್ಥ. ಜಗತ್ತು ಮಿಥ್ಯೆ ಎಂಬ ಸಿದ್ಧಾಂತಕ್ಕೆ ಇದು ವಿರುದ್ಧವಲ್ಲ. ೩-೧-೪ರ ಭಾಷ್ಯದಲ್ಲಿ ಇದು ಸ್ಪಷ್ಟವಾಗುವದು.

2. ಶಕ್ತಿರೂಪವಾಗಿ ಕಾರಣರೂಪದಿಂದ ಉಳಿದುಕೊಳ್ಳುವದೇ ಪ್ರಲಯವು, ಶಕ್ತಿಯಿಂದ ಕಾರ್ಯರೂಪದಿಂದ ತೋರಿಕೊಳ್ಳುವದೇ ಸೃಷ್ಟಿಯು ಎನ್ನದಿದ್ದರೆ ಅಕೃತಾಭ್ಯಾಗಮ ಕೃತವಿಪ್ರಣಾಶ – ಎಂಬ ದೋಷವು ಬರುವದು, ಮೋಕ್ಷಶಾಸ್ತ್ರವು ವ್ಯರ್ಥವಾಗುವದು. ಗೀ. ಭಾ. ೮-೧೯ ನೋಡಿ.

3. ಒಂದೊಂದು ಕಾರಣಶಕ್ತಿಗೂ ಅನೇಕ ಆಕಾರಗಳು ಉಂಟು ; ಆದ್ದರಿಂದ ಒಂದೊಂದು ಸೃಷ್ಟಿಯಲ್ಲಿ ಒಂದೊಂದು ಬಗೆಯ ಕಾರ್ಯವನ್ನುಂಟುಮಾಡಬಹುದು ಎಂದು ಕಲ್ಪಿಸುವದಕ್ಕೆ ಆಗುವದಿಲ್ಲ ಎಂದಭಿಪ್ರಾಯ. ಅವಿದ್ಯೆಗಿಂತ ವ್ಯತಿರಿಕ್ತವಾದ ಶಕ್ತಿಗಳಿಲ್ಲ ಎಂಬ ನ್ಯಾ. ನಿ. ಮತ್ತು ರ. ಪ್ರ. ವ್ಯಾಖ್ಯಾನವು ಪ್ರಕೃತಕ್ಕೆ ಹೊಂದುವದಿಲ್ಲ.

4. ಮೇಲಿನ ಲೋಕಗಳೂ ಕೆಳಗಿನ ಲೋಕಗಳೂ ಪ್ರವಾಹರೂಪದಿಂದ ಪ್ರತಿಸೃಷ್ಟಿಯಲ್ಲಿಯೂ ಒಂದೇ ರೂಪವಾಗಿ ಉಂಟಾಗುತ್ತಿರುವವು. ಒಂದು ಕಲ್ಪದಲ್ಲಿ ಶ್ರೋತ್ರವು ಶಬ್ದವನ್ನು ಗ್ರಹಿಸುವದು, ಇನ್ನೊಂದರಲ್ಲಿ ಸ್ಪರ್ಶವನ್ನು ಗ್ರಹಿಸುವದು – ಎಂಬುದಿಲ್ಲ. ಇದರಂತೆಯೇ ಲೋಕಾದಿಗಳೂ ವ್ಯವಸ್ಥಿತವಾಗಿರುವವು.

5 ಪ್ರತ್ಯಕ್ಷ, ಅನುಮಾನ – ಮುಂತಾದ ಪ್ರಮಾಣಪ್ರಮೇಯವ್ಯವಹಾರವು ಪ್ರತಿಸರ್ಗಕ್ಕೂ ಬೇರೆಬೇರೆಯಾಗುವದಿಲ್ಲ.

6. ಆರನೆಯದೊಂದು ಜ್ಞಾನೇಂದ್ರಿಯವನ್ನಾಗಲಿ ಅದಕ್ಕೆ ತಕ್ಕ ಆರನೆಯ ವಿಷಯವನ್ನಾಗಲಿ ಊಹಿಸುವದಕ್ಕೆ ಬರುವದಿಲ್ಲ.

ಆದ್ದರಿಂದ (ಹೀಗೆ) ಎಲ್ಲಾ ಕಲ್ಪಗಳಲ್ಲಿಯೂ ಒಂದೇ ಬಗೆಯ ವ್ಯವಹಾರವಿರುವವರಿಂದಲೂ ಈಶ್ವರರಾದವರು ಕಲ್ಪಾಂತರದ ವ್ಯವಹಾರವನ್ನು ನೆನಪಿಡುವದಕ್ಕೆ ಶಕ್ತರಾಗಿರುವದರಿಂದಲೂ ಒಂದೊಂದು ಸೃಷ್ಟಿಯಲ್ಲಿಯೂ (ವಸ್ತು) ವಿಶೇಷಗಳು ಸಮಾನನಾಮರೂಪಗಳಾಗಿಯೇ ಉಂಟಾಗುತ್ತಿರುವವು. (ಹೀಗೆ) ಸಮಾನನಾಮರೂಪವಾಗಿರುವದರಿಂದ ಮಹಾಸರ್ಗಮಹಾಪ್ರಲಯರೂಪವಾದ ಆವೃತ್ತಿಯು ಜಗತ್ತಿಗೆ (ಆಗುವದೆಂದು) ಒಪ್ಪಿಕೊಂಡರೂ ಶಬ್ದಪ್ರಾಮಾಣ್ಯವೇ ಮುಂತಾದದ್ದರ (ವಿಷಯ)ದಲ್ಲಿ ಯಾವ ವಿರೋಧವೂ ಇರುವದಿಲ್ಲ.

## ಸೃಷ್ಟಿಗಳು ಸಮಾನನಾಮರೂಪಗಳೆಂಬುದಕ್ಕೆ ಶ್ರುತಿಸ್ಮೃತಿಗಳು

(ಭಾಷ್ಯ)

೨೯೭. ಸಮಾನನಾಮರೂಪತಾಂ ಚ ಶ್ರುತಿಸ್ಮೃತೀ ದರ್ಶಯತಃ – "ಸೂರ್ಯಾಚನ್ದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ । ದಿವಂ ಚ ಪೃಥಿವೀಂ ಚಾನ್ತರಿಕ್ಷಮಥೋ ಸ್ವಃ" (ಋ. ಸಂ. ೧೦–೧೯೦–೩) ಇತಿ । ಯಥಾ ಪೂರ್ವಸ್ಮಿನ್ ಕಲ್ಪೇ ಸೂರ್ಯಾಚನ್ದ್ರಮಃಪ್ರಭೃತಿ ಜಗತ್ ಕ್ಲೃಪ್ತಂ ತಥಾ ಅಸ್ಮಿನ್ನಪಿ ಕಲ್ಪೇ ಪರಮೇಶ್ವರೋಽಕಲ್ಪಯತ್ ಇತ್ಯರ್ಥಃ । ತಥಾ "ಅಗ್ನಿರ್ವಾ ಅಕಾಮಯತ ಅನ್ನಾದೋ ದೇವಾನಾಗ್ಂ ಸ್ಯಾಮಿತಿ । ಸ ಏತಮಗ್ನಯೇ ಕೃತ್ತಿಕಾಭ್ಯಃ ಪುರೋಡಾಶಮಷ್ಟಾಕಪಾಲಂ ನಿರವಪತ್" (ತೈ. ಬ್ರಾ. ೩–೧–೪–೧) ಇತಿ ನಕ್ಷತ್ರೇಷ್ಟಿವಿಧೌ ಯೋಽಗ್ನಿಃ ನಿರವಪದ್ ಯಸ್ಮೈ ವಾ ಅಗ್ನಯೇ ನಿರವಪತ್, ತಯೋಃ ಸಮಾನನಾಮರೂಪತಾಂ ದರ್ಶಯತಿ ಇತ್ಯೇವಂಜಾತೀಯಕಾ ಶ್ರುತಿಃ ಇಹ ಉದಾಹರ್ತವ್ಯಾ । ಸ್ಮೃತಿರಪಿ – "ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ । ಶರ್ವರ್ಯನ್ತೇ ಪ್ರಸೂತಾನಾಂ ತಾನ್ಯೇವೈಭ್ಯೋ ದದಾತ್ಯಜಃ[1] ॥ "(ಮೋ. ಧ. ೨೩೨–೨೬)" ಯಥರ್ತುಷ್ವೃತುಲಿಙ್ಗಾನಿ ನಾನಾರೂಪಾಣಿ ಪರ್ಯಯೇ । ದೃಶ್ಯನ್ತೇ ತಾನಿ ತಾನ್ಯೇವ ತಥಾಭಾವಾ ಯುಗಾದಿಷು[2] ॥" (ಮೋ.ಧ.

---

1. ನಾಮಧೇಯಾನಿ ಚರ್ಷೀಣಾಂ ಯಾಶ್ಚ ವೇದೇಷು ಸೃಷ್ಟಯಃ ।
ಶರ್ವರ್ಯನ್ತೇ ಸುಜಾತಾನಾಮನೇಭ್ಯೋ ವಿದಧಾತ್ಯಜಃ ॥ (೨೩೨–೨೬)
ಎಂದು ಅಚ್ಚಿನ ಭಾರತದ ಪಾಠ.

2. 'ತಥಾ ಬ್ರಹ್ಮಾಹವಾದಿಷು' ಅಚ್ಚಿನ ಪಾಠ. ಈ ಶ್ಲೋಕವು ವಿಷ್ಣುಪುರಾಣ ೧–೫–೬೬ರಲ್ಲಿ ಭಾಷ್ಯದಂತೆಯೇ ಇದೆ.

೨೩೨-೪೦) "ಯಥಾಭಿಮಾನಿನೋಽತೀತಾಸ್ತುಲ್ಯಾಸ್ತೇ ಸಾಂಪ್ರತೈರಿಹ । ದೇವಾ ದೇವೈರತೀತೈರ್ಹಿ ರೂಪೈರ್ನಾಮಭಿರೇವ ಚ [1]"॥ (ಮೋ. ಧ. ೨೩೨ ? ) ಇತ್ಯೇವಂಜಾತೀಯಕಾ ದ್ರಷ್ಟವ್ಯಾ ॥

( ಭಾಷ್ಯಾರ್ಥ )

(ಸೃಷ್ಟಿಗಳಲ್ಲಿ ವಿಶೇಷಗಳು) ಸಮಾನನಾಮರೂಪವುಳ್ಳವಾಗಿಯೇ (ಇರುವವೆಂಬುದನ್ನು) "ಶ್ರುತಿಸ್ಮೃತಿಗಳು ತಿಳಿಸುತ್ತವೆ. ಧಾತನು ಸೂರ್ಯಚಂದ್ರರನ್ನೂ ದ್ಯುಲೋಕವನ್ನೂ ಪೃಥಿವಿಯನ್ನೂ ಅಂತರಿಕ್ಷವನ್ನೂ ಮತ್ತು ಸ್ವರ್ಲೋಕವನ್ನೂ ಎಂದಿನಂತೆ ಉಂಟುಮಾಡಿದನು" (ಋ. ೧೦-೧೯೦-೩) ಎಂದು (ಶ್ರುತಿ ಹೇಳುತ್ತದೆ). ಹೇಗೆ ಹಿಂದಿನ ಕಲ್ಪದಲ್ಲಿ ಸೂರ್ಯಚಂದ್ರರೇ ಮುಂತಾದ ಜಗತ್ತು ಸೃಷ್ಟವಾಗಿತ್ತೋ, ಅದರಂತೆಯೇ ಈ ಕಲ್ಪದಲ್ಲಿಯೂ ಪರಮೇಶ್ವರನು ಉಂಟುಮಾಡಿದನು ಎಂದು (ಶ್ರುತಿಯ) ಅರ್ಥ. ಹೀಗೆಯೇ "ಅಗ್ನಿಯೇ ಕಾಮಿಸಿದನೇನೆಂದರೆ '(ನಾನು) ದೇವತೆಗಳ ಅನ್ನಾದನಾಗಬೇಕು' ; (ಅದಕ್ಕಾಗಿ) ಆವನು ಈ ಅಷ್ಟಾಕಪಾಲದ ಪುರೋಡಾಶವನ್ನು [2] ಅಗ್ನಿಗೂ ಕೃತ್ತಿಕಾದೇವತೆಗೂ [3] ಒಪ್ಪಿಸಿದನು" (ತೈ. ಬ್ರಾ. ೩-೧-೪-೧) ಎಂದು **ನಕ್ಷತ್ರೇಷ್ಟಿ**ವಿಧಿಯಲ್ಲಿ ಯಾವ ಅಗ್ನಿಯು ಒಪ್ಪಿಸಿದನೋ, ಮತ್ತು ಯಾವ ಅಗ್ನಿಗೆ ಒಪ್ಪಿಸಿದನೋ ಅವರಿಬ್ಬರಿಗೂ ಸಮಾನನಾಮರೂಪಗಳನ್ನೇ ಹೇಳಿರುತ್ತದೆಯಾದ್ದರಿಂದ ಈ ಜಾತಿಯ ಶ್ರುತಿಯನ್ನೂ ಇಲ್ಲಿ ಉದಾಹರಿಸಬಹುದು. "ಋಷಿಗಳಿಗೆ ಯಾವ ಯಾವ ಹೆಸರುಗಳಿ (ರುವವೋ)' ವೇದಗಳ (ವಿಷಯದಲ್ಲಿ ಅವರಿಗೆ) ಯಾವ ದೃಷ್ಟಿಗಳಿರುವವೋ,[4] ಪ್ರಲಯಾಂತದಲ್ಲಿ ಹುಟ್ಟಿದವಾಗ ಅವರಿಗೆ ಅವುಗಳನ್ನೇ ಬ್ರಹ್ಮನು ಕೊಡುತ್ತಾನೆ. ಹೇಗೆ ಋತುಗಳಲ್ಲಿ ಆಯಾ ಋತುಚಿಹ್ನೆಗಳೇ (ಆಯಾ) ಪರ್ಯಾಯದಲ್ಲಿ ಕಂಡುಬರುವವೋ ಹಾಗೆಯೇ (ಬೇರೆಬೇರೆಯ) ಯುಗಾದಿಗಳಲ್ಲಿ (ಆಯಾ) ವಸ್ತುಗಳು (ಉಂಟಾಗುವವು. ಮೋ. ಧ. ೨೩೨-೨೬-೪೦) ಹೇಗೆ ಆಗಿಹೋಗಿರುವ ಅಭಿಮಾನಿದೇವತೆಗಳು

---

1. ಅಂತರಿಕ್ಷದ ಮೇಲುಗಡೆ ಇರುವ ಲೋಕವನ್ನು ದ್ಯುಲೋಕವೆಂದೂ ಸ್ವರ್ಗವನ್ನು ಸ್ವರ್ಲೋಕವೆಂದೂ ಕರೆದಿದೆ ಎಂದು ತೋರುತ್ತದೆ.

2. ಎಂಟು ಹಂಚಿಪಿಲಿಕೆಗಳ ಮೇಲೆ ಇಟ್ಟಿರುವ ಮಂತ್ರದಿಂದ ಸಂಸ್ಕರಿಸಿರುವ ಕುದುರೆಯ ಗೊರಸಿನ ಆಕಾರದ ಹಿಟ್ಟಿನ ಮುದ್ದೆಯನ್ನು.

3. 'ಕೃತ್ತಿಕಾಭ್ಯಃ' ಎಂದು ಕೃತ್ತಿಕಾದೇವತೆಗೆ ಬಹುವಚನವನ್ನು ಪ್ರಯೋಗಿಸಿರುವದು ನಕ್ಷತ್ರಗಳು ಅನೇಕವಾಗಿರುವದರಿಂದ.

4. ದೃಷ್ಟಿ ಎಂದರೆ ಮಂತ್ರಗಳನ್ನು ಕಂಡುಕೊಳ್ಳುವದು.

ಈಗಿನವರೊಡನೆ ಸಮಾನರಾಗಿರುವರೋ (ಹಾಗೆಯೇ) ಇಲ್ಲಿಯ ದೇವತೆಗಳೂ ಆಗಿಹೋಗಿರುವ ದೇವತೆಗಳೊಡನೆ ರೂಪಗಳಿಂದಲೂ ನಾಮಗಳಿಂದಲೂ ಸಮಾನರಾಗಿರುವರು[1]" (ಮೋ. ಧ. ?) – ಎಂಬೀ ಜಾತಿಯ ಸ್ಮೃತಿಯನ್ನೂ ಇಲ್ಲಿ ಊಹಿಸಬೇಕು.

**ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ॥ ೩೧ ॥**

೩೧. ಮಧು(ವಿದ್ಯೆ)ಯೇ ಮುಂತಾದದ್ದರಲ್ಲಿ ಸಂಭವಿಸುವದಿಲ್ಲವಾದ್ದರಿಂದ (ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ) ಅಧಿಕಾರವಿಲ್ಲ ಎಂದು ಜೈಮಿನಿ (ಅಭಿಪ್ರಾಯಪಡುತ್ತಾನೆ).

## ದೇವಾದಿಗಳ ಅಧಿಕಾರದ ವಿಷಯಕ್ಕೆ ಆಕ್ಷೇಪ

(ಭಾಷ್ಯ)

೨೯೭. ಇಹ ದೇವಾದೀನಾಮಪಿ ಬ್ರಹ್ಮವಿದ್ಯಾಯಾಮ್ ಅಸ್ತ್ಯಧಿಕಾರಃ ಇತಿ ಯತ್ ಪ್ರತಿಜ್ಞಾತಮ್, ತತ್ ಪರ್ಯಾವರ್ತ್ಯತೇ । ದೇವಾದೀನಾಮ್ ಅನಧಿಕಾರಂ ಜೈಮಿನಿರಾಚಾರ್ಯೋ ಮನ್ಯತೇ । ಕಸ್ಮಾತ್ ? ಮಧ್ವಾದಿಷು ಅಸಂಭವಾತ್ । ಬ್ರಹ್ಮವಿದ್ಯಾಯಾಮ್ ಅಧಿಕಾರಾಭ್ಯುಪಗಮೇ ಹಿ ವಿದ್ಯಾತ್ವಾವಿಶೇಷಾತ್ ಮಧ್ವಾದಿವಿದ್ಯಾಸ್ವಪಿ ಅಧಿಕಾರೋಽಭ್ಯುಪಗಮ್ಯೇತ । ನ ಚೈವಂ ಸಂಭವತಿ । ಕಥಮ್ ? "ಅಸೌ ವಾ ಆದಿತ್ಯೋ ದೇವಮಧು" (ಛಾಂ. ೩-೧-೧) ಇತ್ಯತ್ರ ಮನುಷ್ಯಾಃ ಆದಿತ್ಯಂ ಮಧ್ವಧ್ಯಾಸೇನ ಉಪಾಸೀರನ್ । ದೇವಾದಿಷು ಹಿ ಉಪಾಸಕೇಷು ಅಭ್ಯುಪಗಮ್ಯಮಾನೇಷು ಆದಿತ್ಯಃ ಕಮ್ ಅನ್ಯಮ್ ಆದಿತ್ಯಮ್ ಉಪಾಸೀತ ? ಪುನಶ್ಚ ಆದಿತ್ಯವ್ಯಪಾಶ್ರಯಾಣಿ ಪಞ್ಚ ರೋಹಿತಾದೀನಿ ಅಮೃತಾನಿ ಉಪಕ್ರಮ್ಯ ವಸವಃ, ರುದ್ರಾಃ, ಆದಿತ್ಯಾಃ, ಮರುತಃ, ಸಾಧ್ಯಾಶ್ಚ ಪಞ್ಚ ದೇವಗಣಾಃ ಕ್ರಮೇಣ ತತ್ತದಮೃತಮ್ ಉಪಜೀವನ್ತಿ ಇತ್ಯುಪದಿಶ್ಯ "ಸ ಯ

---

1. ದೇವತೆಗಳ ನಾಮ, ರೂಪ, ಆಯಾ ಇಂದ್ರಿಯಗಳಲ್ಲಿ ಅಭಿಮಾನ – ಇವೆಲ್ಲವೂ ಪ್ರತಿಸೃಷ್ಟಿಯಲ್ಲಿಯೂ ಸಮಾನವಾಗಿರುವವೆಂದು ಕೊನೆಯ ವಾಕ್ಯದ ತಾತ್ಪರ್ಯ. ಹೀಗಿರುವದರಿಂದ ಮೇಲೆ ಹೇಳಿರುವಂತೆ ಶಬ್ದವಿಷಯದಲ್ಲಿ ಯಾವ ವಿರೋಧವೂ ಇಲ್ಲ. ಆದ್ದರಿಂದ ದೇವಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದು ಹೇಳಿದ್ದು ಸರಿಯೇ ಎಂದು ಭಾವ.

ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾಗ್ನಿನೈವ ಮುಖೇ ನೈತದೇವಾಮೃತಂ ದೃಷ್ಟ್ವಾ ತೃಪ್ಯತಿ" (ಛಾಂ. ೩-೬-೩....) ಇತ್ಯಾದಿನಾ ವಸ್ವಾದ್ಯುಪಜೀವ್ಯಾನಿ ಅಮೃತಾನಿ ವಿಜಾನತಾಂ ವಸ್ವಾದಿಮಹಿಮಪ್ರಾಪ್ತಿಂ ದರ್ಶಯತಿ | ವಸ್ವಾದಯಸ್ತು ಕಾನನ್ಯಾನ್ ವಸ್ವಾದೀನ್ ಅಮೃತೋಪಜೀವಿನೋ ವಿಜಾನೀಯುಃ ? ಕಂ ವಾ ಅನ್ಯಂ ವಸ್ವಾದಿಮಹಿಮಾನಂ ಪ್ರೇಪ್ಸೇಯುಃ ? ತಥಾ "ಅಗ್ನಿಃ ಪಾದೋ ವಾಯುಃ ಪಾದ ಆದಿತ್ಯಃ ಪಾದೋ ದಿಶಃ ಪಾದಃ" (ಛಾಂ. ೩-೧೮-೨) "ವಾಯುರ್ವಾವ ಸಂವರ್ಗಃ" (ಛಾಂ. ೪-೩-೧), "ಆದಿತ್ಯೋ ಬ್ರಹ್ಮೇತ್ಯಾದೇಶಃ" (ಛಾಂ. ೩-೧೯-೧) ಇತ್ಯಾದಿಷು ದೇವತಾತ್ಮೋಪಾಸನೇಷು ನ ತೇಷಾಮೇವ ದೇವತಾತ್ಮನಾಮ್ ಅಧಿಕಾರಃ ಸಂಭವತಿ | ತಥಾ "ಇಮಾವೇವ ಗೋತಮಭರದ್ವಾಜಾವಯಮೇವ ಗೋತಮೋಽಯಂ ಭರದ್ವಾಜಃ" (ಬೃ. ೨-೨-೪) ಇತ್ಯಾದಿಷು ಋಷಿಸಂಬನ್ಧೇಷು ಉಪಾಸನೇಷು ನ ತೇಷಾಮೇವ ಋಷೀಣಾಮ್ ಅಧಿಕಾರಃ ಸಂಭವತಿ ||

(ಭಾಷ್ಯಾರ್ಥ)

ಇಲ್ಲಿ ದೇವಾದಿಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರ(ವುಂಟು) ಎಂದು ಹೇಳಿತ್ತಲ್ಲ, ಅದನ್ನು ಅಲ್ಲಗಳೆಯಲಾಗುತ್ತದೆ.

ದೇವಾದಿಗಳಿಗೆ ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯನು ಅಭಿಪ್ರಾಯಪಡುತ್ತಾನೆ. ಏಕೆ ? ಎಂದರೆ ಮಧ್ವಾದಿಗಳಲ್ಲಿ ಸಂಭವಿಸುವದಿಲ್ಲವಾದ್ದರಿಂದ. ಬ್ರಹ್ಮವಿದ್ಯೆಯಲ್ಲಿ (ಅವರಿಗೆ) ಅಧಿಕಾರವನ್ನು ಒಪ್ಪಿದರೆ, (ಅವೂ) ವಿದ್ಯೆಗಳೆಂಬುದು ಸಮಾನವಾಗಿರುವದರಿಂದ ಮಧ್ವಾದಿವಿದ್ಯೆಗಳಲ್ಲಿಯೂ ಅಧಿಕಾರವನ್ನು ಒಪ್ಪಬೇಕಾಗುವದು. ಆದರೆ ಹಾಗೆ ಆಗುವದಿಲ್ಲ. (ಅದು) ಹೇಗೆ? ಎಂದರೆ, "ಈ ಆದಿತ್ಯನೇ ದೇವಮಧು" (ಛಾಂ. ೩-೧-೧) ಎಂಬಲ್ಲಿ ಮನುಷ್ಯರು ಆದಿತ್ಯನನ್ನು ಮಧುವೆಂದು ಅಧ್ಯಾಸಮಾಡಿಕೊಂಡು[1] ಉಪಾಸನೆಮಾಡಬಹುದು. ದೇವಾದಿಗಳನ್ನು ಉಪಾಸಕರೆಂದು ಒಪ್ಪಿದರೆ ಆದಿತ್ಯನು ಬೇರೆಯ ಯಾವ ಆದಿತ್ಯನನ್ನು ಉಪಾಸನೆಮಾಡಬೇಕು ?

(ಆ ಮಧುವಿದ್ಯೆಯಲ್ಲಿ) ಮತ್ತು ಆದಿತ್ಯನನ್ನು ಆಶ್ರಯಿಸಿಕೊಂಡಿರುವ ರೋಹಿತವೇ ಮುಂತಾದ ಐದು ಅಮೃತವನ್ನು ಉಪಕ್ರಮಿಸಿ (ಛಾಂ. ೩-೧-೪, ೩-೨-೩, ೩-೩-೩, ೩-೪-೩. ೩-೫-೩) ವಸುಗಳು (ಛಾಂ. ೩-೬-೧),

1. ಶಾಸ್ತ್ರದಲ್ಲಿ ಹೇಳಿರುವಂತೆ ಮಧುವೆಂಬ ದೃಷ್ಟಿಯನ್ನು ಇಟ್ಟುಕೊಂಡು ಎಂದರ್ಥ. ಭ್ರಾಂತಿಯಿಂದ ತಿಳಿದುಕೊಂಡು ಎಂದರ್ಥವಲ್ಲ.

ರುದ್ರರು (ಛಾಂ. ೩-೭-೧) ಆದಿತ್ಯರು (ಛಾಂ. ೩-೮-೧), ಮರುತ್ತರು (ಛಾಂ. ೩-೯-೧), ಸಾಧ್ಯರು (ಛಾಂ. ೩-೧೦-೧) ಎಂಬ ಐದು ದೇವಗಣಗಳು ಕ್ರಮವಾಗಿ ಆಯಾ ಅಮೃತವನ್ನು ಉಪಜೀವಿಸಿಕೊಂಡಿರುತ್ತಾರೆ ಎಂದು ಉಪದೇಶಿಸಿ "ಯಾವನು ಹೀಗೆ ಈ ಅಮೃತವನ್ನು ಅರಿತುಕೊಳ್ಳುವನೋ[1] (ಅವನು) ವಸುಗಳಲ್ಲಿ ಒಂದಾಗಿ ಅಗ್ನಿ ಎಂಬ ಮುಖದಿಂದಲೇ ಇದೇ ಅಮೃತವನ್ನು ಕಂಡು ತೃಪ್ತನಾಗುತ್ತಾನೆ" (ಛಾ. ೩-೬-೩....) ಎಂದು ಮುಂತಾದ (ವಾಕ್ಯ)ದಿಂದ ವಸ್ವಾದಿಗಳು ಉಪಜೀವಿಸಿಕೊಂಡಿರುವ ಅಮೃತಗಳನ್ನು ಅರಿತುಕೊಂಡವರಿಗೆ ವಸುಗಳೇ ಮುಂತಾದವರ ಮಹಿಮೆಯ ಪ್ರಾಪ್ತಿ(ಯಾಗುವದೆಂದು) ತಿಳಿಸಿರುತ್ತದೆ. ಆದರೆ ವಸ್ವಾದಿಗಳು (ತಮಗಿಂತ) ಬೇರೆಯಾಗಿ ಅಮೃತೋಪಜೀವಿಗಳಾದ ಯಾವ ವಸ್ವಾದಿಗಳನ್ನು ಅರಿತುಕೊಂಡಾರು? ಅಥವಾ ಮತ್ತೆ ಬೇರೆ ಯಾವ ವಸ್ವಾದಿಗಳ ಮಹಿಮೆಯನ್ನು ಪಡೆದುಕೊಂಡಾರು?

ಹೀಗೆಯೇ (ಚತುಷ್ಪಾದ್ಬ್ರಹ್ಮಕ್ಕೆ) "ಅಗ್ನಿಯು ಪಾದವು, ವಾಯುವು ಪಾದವು, ಆದಿತ್ಯನು ಪಾದವು, ದಿಕ್ಕುಗಳು ಪಾದವು" (ಛಾ. ೩-೧೮-೨), "ವಾಯುವೇ ಸಂವರ್ಗವು[2]" (ಛಾ- ೪-೩-೧), "ಆದಿತ್ಯನೇ ಬ್ರಹ್ಮವು ಎಂಬುದು ಆದೇಶವು[3]," (ಛಾಂ.೩-೧೯-೧) ಎಂಬುದೇ ಮುಂತಾದ ದೇವತಾತ್ಮೋಪಾಸನೆಗಳಲ್ಲಿ ಅದೇ ದೇವತಾತ್ಮರಿಗೆ ಅಧಿಕಾರವು ಉಂಟಾಗುವಹಾಗಿಲ್ಲ. ಹಾಗೆಯೇ "ಇವುಗಳೇ[4] ಗೋತಮಭರದ್ವಾಜರು; ಇದೇ ಗೋತಮನು, ಇದೇ ಭರದ್ವಾಜನು" (ಬೃ. ೨-೨-೪) ಎಂದು ಮುಂತಾಗಿರುವ ಋಷಿಗಳ ಸಂಬಂಧದ ಉಪಾಸನೆಗಳಲ್ಲಿ ಅದೇ ಋಷಿಗಳಿಗೆ ಅಧಿಕಾರವು ಉಂಟಾಗುವಹಾಗಿಲ್ಲ.

**ಜ್ಯೋತಿಷಿ ಭಾವಾಚ್ಚ ॥ ೩೨ ॥**

೩೨. ಜ್ಯೋತಿಯಲ್ಲಿ (ಈ ಶಬ್ದಗಳ ಪ್ರಯೋಗವು) ಇರುವದರಿಂದಲೂ (ಅಧಿಕಾರವಿಲ್ಲ).

## ಆದಿತ್ಯಾದಿಗಳು ಅಚೇತನ

(ಭಾಷ್ಯ)

೫೮. ಕುತಶ್ಚ ದೇವಾನಾಮ್ ಅನಧಿಕಾರಃ? ಯದಿದಂ ಜ್ಯೋತಿ

1. ಉಪಾಸನೆಯಿಂದ ಸಾಕ್ಷಾತ್ಕಾರಮಾಡಿಕೊಳ್ಳುವನೋ ಎಂದರ್ಥ.
2. ತನ್ನೊಳಗೆ ಅಗ್ನ್ಯಾದಿಗಳನ್ನು ಸೇರಿಸಿಕೊಳ್ಳುವ ದೇವತೆ.
3. ಉಪದೇಶವು.
4. ಕಿವಿಗಳೇ.

ರ್ಮಣ್ಡಲಂ ದ್ಯುಸ್ಥಾನಮ್ ಅಹೋರಾತ್ರಾಭ್ಯಾಂ ಬಮ್ಭ್ರಮತ್ ಜಗತ್ ಅವಭಾಸಯತಿ ತಸ್ಮಿನ್ ಆದಿತ್ಯಾದಯೋ ದೇವತಾವಚನಾಃ ಶಬ್ದಾಃ ಪ್ರಯುಜ್ಯನ್ತೇ । ಲೋಕಪ್ರಸಿದ್ಧೇಃ ವಾಕ್ಯಶೇಷಪ್ರಸಿದ್ಧೇಶ್ಚ । ನ ಚ ಜ್ಯೋತಿರ್ಮಣ್ಡಲಸ್ಯ ಹೃದಯಾದಿನಾ ವಿಗ್ರಹೇಣ ಚೇತನತಯಾ ಅರ್ಥಿತ್ವಾದಿನಾ ವಾ ಯೋಗೋಽವಗನ್ತುಂ ಶಕ್ಯತೇ । ಮೃದಾದಿವತ್ ಅಚೇತನತ್ವಾವಗಮಾತ್ । ಏತೇನ ಅಗ್ನ್ಯಾದಯೋ ವ್ಯಾಖ್ಯಾತಾಃ ॥

( ಭಾಷ್ಯಾರ್ಥ )

ದೇವಾದಿಗಳಿಗೆ ಅಧಿಕಾರವಿಲ್ಲವೆಂಬುದಕ್ಕೆ ಮತ್ತು ಯಾವ ಕಾರಣವಿದೆ ಎಂದರೆ, ಆಕಾಶದ ಮೇಲುಗಡೆಯಲ್ಲಿ ಹಗಲೂ ಇರುಳೂ[1] ತಿರುಗುತ್ತಾ ಜಗತ್ತನ್ನು ಬೆಳಗುತ್ತಿರುವ ಈ ಜ್ಯೋತಿರ್ಮಂಡಲವಿದೆಯಲ್ಲ, ಇದರಲ್ಲಿಯೇ ದೇವತಾವಾಚಕಗಳಾದ ಆದಿತ್ಯಾದಿಶಬ್ದಗಳನ್ನು ಪ್ರಯೋಗಿಸಿರುತ್ತದೆ. ಲೋಕಪ್ರಸಿದ್ಧಿಯಿಂದಲೂ ವಾಕ್ಯಶೇಷಪ್ರಸಿದ್ಧಿಯಿಂದಲೂ[2] (ಹೀಗೆಂದು ನಿಶ್ಚಯಿಸಬಹುದು). ಜ್ಯೋತಿರ್ಮಂಡಲಕ್ಕೆ ಹೃದಯವೇ ಮುಂತಾದವುಗಳಿಂದ ಕೂಡಿದ ಶರೀರದ, ಚೈತನ್ಯದ ಅಥವಾ ಅರ್ಥಿತ್ವಾದಿಗಳ ಸಂಬಂಧವುಂಟೆಂದು ನಿಶ್ಚಯಿಸುವದು ಆಗಲಾರದು; ಏಕೆಂದರೆ (ಅದು) ಮಣ್ಣು ಮುಂತಾದವುಗಳಂತೆ ಅಚೇತನವೆಂದು ನಿಶ್ಚಯವಾಗಿರುತ್ತದೆ[3]. ಇದರಿಂದ ಅಗ್ನಿ ಮುಂತಾದವುಗಳೂ (ಅನಧಿಕಾರಿಗಳೆಂದು) ಹೇಳಿದಂತೆ ಆಯಿತು[4].

## ದೇವತೆಗಳು ಚೇತನವುಳ್ಳವರೆಂಬುದಕ್ಕೆ ಪ್ರಮಾಣವಿಲ್ಲ

( ಭಾಷ್ಯ )

೨೯. ಸ್ಯಾದೇತತ್ । ಮನ್ತ್ರಾರ್ಥವಾದೇತಿಹಾಸಪುರಾಣಲೋಕೇಭ್ಯೋ ದೇವಾದೀನಾಂ ವಿಗ್ರಹವತ್ತ್ವಾದ್ಯವಗಮಾತ್ ಅಯಮ್ ಅದೋಷಃ

---

1. ಒಂದು ಕಡೆಯಲ್ಲಿ ರಾತ್ರಿಯಾಗಿರುವಾಗ ಇನ್ನೊಂದು ಕಡೆಯಲ್ಲಿ ಸೂರ್ಯನ ಬೆಳಕಿರುತ್ತದೆ.

2. ವಾಕ್ಯಶೇಷದಲ್ಲಿ ರಶ್ಮಿಗಳನ್ನು ಹೇಳಿರುವದರಿಂದಲೂ (ಛಾ. ೩-೧-೨) ಉದಯಾಸ್ತಮಯಗಳನ್ನು ಹೇಳಿರುವದರಿಂದಲೂ (ಛಾ. ೩-೬-೪) ಇದು ಸೂರ್ಯಮಂಡಲದ ವಿಷಯವೆಂದು ನಿಶ್ಚಯವಾಗುತ್ತದೆ.

3. ಆದ್ದರಿಂದ ಬ್ರಹ್ಮವಿದ್ಯೆಗೆ ಅಧಿಕಾರಿಯೆಂದು ಕಲ್ಪಿಸುವ ಚೇತನದೇವತೆಯೇ ಇಲ್ಲ.

4. ಅಗ್ನಿ ಮುಂತಾದ ಶಬ್ದಗಳೂ ಬೆಂಕಿಯೇ ಮುಂತಾದ ಅಚೇತನವಸ್ತುಗಳನು ಹೇಳುತ್ತವೆ.

ಇತಿ । ನೇತ್ಯುಚ್ಯತೇ । ನ ಹಿ ತಾವತ್ ಲೋಕೋ ನಾಮ ಕಿಂಚಿತ್ ಸ್ವತನ್ತ್ರಂ ಪ್ರಮಾಣಮಸ್ತಿ । ಪ್ರತ್ಯಕ್ಷಾದಿಭ್ಯ ಏವ ಹಿ ಅವಿಚಾರಿತವಿಶೇಷೇಭ್ಯಃ ಪ್ರಮಾಣೇಭ್ಯಃ ಪ್ರಸಿಧ್ಯನ್ ಅರ್ಥೋ ಲೋಕಾತ್ ಪ್ರಸಿಧ್ಯತಿ ಇತ್ಯುಚ್ಯತೇ । ನ ಚ ಅತ್ರ ಪ್ರತ್ಯಕ್ಷಾದೀನಾಮ್ ಅನ್ಯತಮಂ ಪ್ರಮಾಣಮ್ ಅಸ್ತಿ । ಇತಿಹಾಸಪುರಾಣಮಪಿ ಪೌರುಷೇಯತ್ವಾತ್ ಪ್ರಮಾಣಾನ್ತರಮೂಲಮ್ ಆಕಾಙ್ಕ್ಷತಿ । ಅರ್ಥವಾದಾ ಅಪಿ ವಿಧಿನಾ ಏಕವಾಕ್ಯತ್ವಾತ್ ಸ್ತುತ್ಯರ್ಥಾಃ ಸನ್ತೋ ನ ಪಾರ್ಥಗರ್ಥ್ಯೇನ ದೇವಾದೀನಾಂ ವಿಗ್ರಹಾದಿಸದ್ಭಾವೇ ಕಾರಣಭಾವಂ ಪ್ರತಿಪದ್ಯನ್ತೇ । ಮನ್ತ್ರಾ ಅಪಿ ಶ್ರುತ್ಯಾದಿವಿನಿಯುಕ್ತಾಃ ಪ್ರಯೋಗಸಮವಾಯಿನೋಽಭಿಧಾನಾರ್ಥಾಃ ನ ಕಸ್ಯಚಿತ್ ಅರ್ಥಸ್ಯ ಪ್ರಮಾಣಮ್ ಇತ್ಯಾಚಕ್ಷತೇ । ತಸ್ಮಾತ್ ಅಭಾವೋ ದೇವಾದೀನಾಮ್ ಅಧಿಕಾರಸ್ಯ ॥

( ಭಾಷ್ಯಾರ್ಥ )

(ಸಿದ್ಧಾಂತಿಯ ಅಭಿಪ್ರಾಯವು) ಇದಾಗಿರಬಹುದು : ಮಂತ್ರಗಳು, ಅರ್ಥವಾದಗಳು, ಇತಿಹಾಸಪುರಾಣಲೋಕಗಳೆಂಬ (ಪ್ರಮಾಣ)ಗಳಿಂದ[1] ದೇವಾದಿಗಳಿಗೆ ವಿಗ್ರಹವತ್ತ್ವವೇ ಮುಂತಾದದ್ದುಂಟೆಂದು ನಿಶ್ಚಯವಾಗುವದರಿಂದ (ಸಿದ್ಧಾಂತದಲ್ಲಿ) ದೋಷವಿಲ್ಲ.

(ಆದರೆ ನಾವು) ಇದು ಸರಿಯಲ್ಲವೆನ್ನುತ್ತೇವೆ. ಏಕೆಂದರೆ ಮೊದಲನೆಯದಾಗಿ **ಲೋಕ**ವೆಂಬ ಸ್ವತಂತ್ರವಾದ ಯಾವ ಪ್ರಮಾಣವೂ ಇರುವದಿಲ್ಲ. ಇಂಥದ್ದೆಂದು ವಿಚಾರಮಾಡಿ (ನಿಶ್ಚಯವಾಗದೆ ಇರುವ) ಪ್ರತ್ಯಕ್ಷಾದಿಪ್ರಮಾಣಗಳಿಂದ ಪ್ರಸಿದ್ಧವಾಗುವ ವಿಷಯವನ್ನೇ ಲೋಕದಿಂದ ಪ್ರಸಿದ್ಧವಾಗಿದೆ ಎನ್ನುತ್ತಾರೆ; ಆದರೆ ಇಲ್ಲಿ ಪ್ರತ್ಯಕ್ಷಾದಿಗಳಲ್ಲಿ[2] ಯಾವದೊಂದು ಪ್ರಮಾಣವೂ ಇರುವದಿಲ್ಲ. **ಇತಿಹಾಸಪುರಾಣ**ವೂ ಪೌರುಷೇಯವಾಗಿರುವದರಿಂದ[3] ತನಗೆ

---

1. ಮಂತ್ರಗಳಲ್ಲಿಯೂ ಅರ್ಥವಾದಗಳಲ್ಲಿಯೂ ದೇವತೆಗೆ ಕೈ, ಮುಷ್ಟಿ, ಕೊರಳು-ಮುಂತಾದ ಅವಯವಗಳನ್ನು ಹೇಳಿದೆ ; ದೇವತೆಯು ಹವಿಸ್ಸನ್ನು ಭೋಗಿಸುವದೆಂದೂ ಎಲ್ಲವನ್ನೂ ಆಳುವ ಐಶ್ವರ್ಯವುಳ್ಳದ್ದೆಂದೂ ಪ್ರಸನ್ನವಾಗಿ ಕರ್ಮಫಲವನ್ನು ಕೊಡುವದೆಂದೂ ಹೇಳಿವೆ ಇತಿಹಾಸಪುರಾಣಗಳಲ್ಲಿ ದೇವತೆಗಳು ಚೇತನರೆಂದು ತಿಳಿಸಿವೆ. ಲೋಕದಲ್ಲಿ ಜನರು ಯಮನಿಗೆ ದಂಡ, ವರುಣನಿಗೆ ಪಾಶ, ಇಂದ್ರನಿಗೆ ವಜ್ರ -ಹೀಗೆ ಆಯುಧಗಳನ್ನು ಚಿತ್ರಗಳಲ್ಲಿ ಬರೆದು ತೋರಿಸುತ್ತಾರೆ. ಆದ್ದರಿಂದ ಚೇತನರಾದ ದೇವತೆಗಳು ಉಂಟು - ಎಂದು ಭಾವ. ಜೈ. ಸೂ. ೯-೧-೬ರಿಂದ ಅರವರೆಗಿನ ಪೂರ್ವಪಕ್ಷವಿದು.

2. ಪ್ರತ್ಯಕ್ಷ, ಅನುಮಾನ, ಉಪಮಾನ, ಅರ್ಥಾಪತ್ತಿ -ಇವುಗಳಲ್ಲಿ.

3. ಪೌರುಷೇಯಗ್ರಂಥಕ್ಕೆ ಕರ್ತೃವಾದ ಪುರುಷನ ದೋಷವು ಅಂಟಿಕೊಂಡಿರುವದರಿಂದ ಅದು ವೇದದಂತೆ ನಿರಪೇಕ್ಷವಾಗಿ ಪ್ರಮಾಣವಾಗಲಾರದು

ಮೂಲವಾಗಿರುವ ಪ್ರಮಾಣಾಂತರವನ್ನು[1] ಬಯಸುತ್ತದೆ. **ಅರ್ಥವಾದಗಳೂ** ವಿಧಿಯೊಡನೆ ಏಕವಾಕ್ಯವಾಗಿ ಸ್ತುತ್ಯರ್ಥವಾಗಿರುವವಾದ್ದರಿಂದ ಬೇರೆಯ ಅರ್ಥವುಳ್ಳವಾಗಿ ದೇವಾದಿಗಳಿಗೆ ವಿಗ್ರಹಾದಿಗಳು ಉಂಟೆಂಬುದಕ್ಕೆ **ಕಾರಣತ್ವವನ್ನು**[2] ಪಡೆಯಲಾರವು. **ಮಂತ್ರಗಳೂ** ಶ್ರುತಿಯೇ ಮುಂತಾದವುಗಳಿಂದ[3] (ಕರ್ಮಗಳಲ್ಲಿ) ವಿನಿಯುಕ್ತವಾಗಿರುವದರಿಂದ ಪ್ರಯೋಗಸಂಬದ್ಧವಾಗಿರುವದನ್ನೇ[4] ಹೇಳುತ್ತವೆಯೇ ಹೊರತು ಯಾವದೊಂದು ವಸ್ತುವಿಗೂ ಪ್ರಮಾಣವಲ್ಲ (ಎಂದು ಮೀಮಾಂಸಕರು) ಹೇಳುತ್ತಾರೆ. ಆದ್ದರಿಂದ ದೇವಾದಿಗಳಿಗೆ ಅಧಿಕಾರವಿಲ್ಲ[5].

**ಭಾವಂ ತು ಬಾದರಾಯಣೋಽಸ್ತಿ ಹಿ ॥ ೩೩ ॥**

೩೩. ಆದರೆ (ದೇವಾದಿಗಳಿಗೂ ಅಧಿಕಾರ)ವಿದೆ ಎಂದು ಬಾದರಾಯಣನು (ಅಭಿಪ್ರಾಯಪಡುತ್ತಾನೆ); ಏಕೆಂದರೆ (ಅದು) ಉಂಟು.

## ಸಿದ್ಧಾಂತ: ದೇವಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟು

( ಭಾಷ್ಯ )

೩೦೦. ತುಶಬ್ದಃ ಪೂರ್ವಪಕ್ಷಂ ವ್ಯಾವರ್ತಯತಿ । ಬಾದರಾಯಣಸ್ತು ಆಚಾರ್ಯಃ ಭಾವಮ್ ಅಧಿಕಾರಸ್ಯ ದೇವಾದೀನಾಮಪಿ ಮನ್ಯತೇ । ಯದ್ಯಪಿ

---

1. ಲೌಕಿಕವಸ್ತುವಾದರೆ ಪ್ರತ್ಯಕ್ಷಾದಿಗಳನ್ನೂ ಅಲೌಕಿಕವಾದರೆ ವೇದವಚನವನ್ನೂ ಬಯಸುತ್ತವೆ.

2. ಪ್ರಮಾಣತ್ವವನ್ನು ಎಂದರ್ಥ. ಅರ್ಥವಾದಕ್ಕೂ ಸ್ವತಂತ್ರವಾಗಿ ಬೇರೊಂದು ಅರ್ಥವನ್ನು ಕಲ್ಪಿಸಿದರೆ ವಾಕ್ಯಭೇದವಾಗುವದೆಂದು ಭಾವ. ಜೈ. ೯-೧-೯ರಲ್ಲಿ ದೇವತೆಗಳಿಗೆ ವಿಗ್ರಹವತ್ತ್ವಾದಿಗಳುಂಟೆಂಬುದನ್ನು ವಿಸ್ತಾರವಾಗಿ ಖಂಡಿಸಿರುವದನ್ನು ನೋಡಿರಿ.

3. ಶ್ರುತಿಲಿಂಗಾದಿಗಳಿಂದ ಈ ಮಂತ್ರವನ್ನು ಈ ಕರ್ಮಕ್ಕೆ ವಿನಿಯೋಗಿಸಬೇಕು ಎಂದು ತಿಳಿಯಬರುತ್ತದೆ.

4. ಪ್ರಯೋಗವಿಧಿಯಿಂದ ಮಂತ್ರಗಳು ಗೊತ್ತಾಗುತ್ತವೆ. ಆದ್ದರಿಂದ ಅವು ಪ್ರಯೋಗಕ್ಕೆ ಸಂಬದ್ಧವಾದ ಕರ್ಮವನ್ನಾಗಲಿ ವಸ್ತುವನ್ನಾಗಲಿ ಹೇಳಬಹುದು; ಪ್ರಯೋಗಸಂಬದ್ಧವಲ್ಲದ ಅದೃಷ್ಟವಾಗಿರುವ ದೇವತಾದಿಗಳನ್ನು ಹೇಳಲಾರವು. ದೇವತೆಗಳಿರಬೇಕೆಂಬುದಿಷ್ಟೇ ಇಲ್ಲಿ ಬೇಕಲ್ಲದೆ ಅವರಿಗೆ ವಿಗ್ರಹವತ್ತ್ವಾದಿಗಳೂ ಇರಬೇಕೆಂದೂ ಅವಶ್ಯವಲ್ಲ.

5. ಶಬ್ದವೇ ದೇವತೆ, ಬೇರೆಯ ದೇವತೆಯೇ ಇಲ್ಲ ಎಂಬ ಪಕ್ಷವು ಕೂಡ ಶಾ. ಭಾ. ೧೦-೪-೨೩ರಲ್ಲಿ ಕಾಣಬರುತ್ತದೆ.

ಮಧ್ವಾದಿವಿದ್ಯಾಸು ದೇವತಾದಿವ್ಯಾಮಿಶ್ರಾಸು ಅಸಂಭವೋಽಧಿಕಾರಸ್ಯ, ತಥಾಪಿ ಅಸ್ತಿ ಹಿ ಶುದ್ಧಾಯಾಂ ಬ್ರಹ್ಮವಿದ್ಯಾಯಾಂ ಸಂಭವಃ | ಅರ್ಥಿತ್ವಸಾಮರ್ಥ್ಯಾ ಪ್ರತಿಷೇಧಾದ್ಯಪೇಕ್ಷತ್ವಾತ್ ಅಧಿಕಾರಸ್ಯ । ನ ಚ ಕ್ವಚಿತ್ ಅಸಂಭವಃ ಇತ್ಯೇತಾವತಾ ಯತ್ರ ಸಂಭವಃ ತತ್ರಾಪಿ ಅಧಿಕಾರೋಽಪೋದ್ಯೇತ | ಮನುಷ್ಯಾಣಾಮಪಿ ನ ಸರ್ವೇಷಾಂ ಬ್ರಾಹ್ಮಣಾದೀನಾಂ ಸರ್ವೇಷು ರಾಜಸೂಯಾದಿಷು ಅಧಿಕಾರಃ ಸಂಭವತಿ । ತತ್ರ ಯೋ ನ್ಯಾಯಃ ಸೋಽತ್ರಾಪಿ ಭವಿಷ್ಯತಿ ॥

(ಭಾಷ್ಯಾರ್ಥ)

(ಇಲ್ಲಿ) ತುಶಬ್ದವು ಪೂರ್ವಪಕ್ಷವನ್ನು ಸರಿಯಲ್ಲವೆನ್ನುತ್ತದೆ. ಆದರೆ ಬಾದರಾಯಣಾಚಾರ್ಯರು ದೇವಾದಿಗಳಿಗೆ ಅಧಿಕಾರವು ಉಂಟೆಂದು[1] ಅಭಿಪ್ರಾಯಪಡುತ್ತಾರೆ. ಮಧು(ವಿದ್ಯೆಯೇ) ಮುಂತಾದ ವಿದ್ಯೆಗಳು ದೇವತಾದಿಮಿಶ್ರವಾಗಿರುವದರಿಂದ (ಅವುಗಳಲ್ಲೇನೋ) ಅಧಿಕಾರವು ಸಂಭವಿಸುವದಿಲ್ಲ. ಆದರೂ ಶುದ್ಧವಾದ ಬ್ರಹ್ಮವಿದ್ಯೆಯಲ್ಲಿ[2] ಅಧಿಕಾರದ ಸಂಭವವು ಉಂಟೇ ಉಂಟು ; ಏಕೆಂದರೆ **ಅಧಿಕಾರಕ್ಕೆ ಅರ್ಥಿತ್ವ, ಸಾಮರ್ಥ್ಯ, ಪ್ರತಿಷೇಧಿಸದೆ ಇರುವದು –ಮುಂತಾದವುಗಳು ಬೇಕು**[3]. ಎಲ್ಲಿಯೋ ಒಂದು ಕಡೆ ಅಸಂಭವವೆಂಬಿಷ್ಟರಿಂದ ಎಲ್ಲಿ ಸಂಭವವಿದೆಯೋ ಅಲ್ಲಿಯೂ ಅಧಿಕಾರವನ್ನು ಅಲ್ಲಗಳೆಯುವದು ಆಗಲಾರದು. ಮನುಷ್ಯರಲ್ಲಿ ಬ್ರಾಹ್ಮಣರೇ ಮುಂತಾದ ಎಲ್ಲರಿಗೂ **ರಾಜಸೂಯವೇ** ಮುಂತಾದ ಎಲ್ಲಾ (ಕರ್ಮಗಳಲ್ಲಿಯೂ) ಅಧಿಕಾರವು ಸಂಭವಿಸುವದಿಲ್ಲ. ಅಲ್ಲಿ ಯಾವ ನ್ಯಾಯವೋ ಅದು ಇಲ್ಲಿಯೂ ಆಗಬಹುದಾಗಿದೆ[4].

## ದೇವಾದಿಗಳಿಗೆ ಅಧಿಕಾರವನ್ನು ಸೂಚಿಸುವ ವಚನಗಳು

( ಭಾಷ್ಯ )

೩೦೧. ಬ್ರಹ್ಮವಿದ್ಯಾಂ ಚ ಪ್ರಕೃತ್ಯ ಭವತಿ ದರ್ಶನಂ ಶ್ರೌತಂ ದೇವಾದ್ಯಧಿಕಾರಸ್ಯ ಸೂಚಕಮ್—"ತದ್ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ

---

1. 'ಅಸ್ತಿ ಹಿ' ಎಂಬುದರ ಅರ್ಥವಿದು.

2. ನಿರ್ಗುಣಬ್ರಹ್ಮಜ್ಞಾನದಲ್ಲಿ.

3. ಹೀಗೆಂದು ಮೀಮಾಂಸಕರೂ ಒಪ್ಪಿರುತ್ತಾರೆ.

4. ಅಸ್ತಿ ಹಿ ಎಂಬುದಕ್ಕೆ ಶ್ರುತಿಸ್ಮೃತಿವಚನವೂ ಇದೆ ಎಂದು ಮತ್ತೊಂದು ವ್ಯಾಖ್ಯಾನ.

ತದಭವತ್ ತಥರ್ಷೀಣಾಂ ತಥಾ ಮನುಷ್ಯಾಣಾಮ್" (ಬೃ. ೧-೪-೧೦) ಇತಿ | "ತೇ ಹೋಚುರ್ಹನ್ತ ತಮಾತ್ಮಾನಮನ್ವಿಚ್ಛಾಮೋ ಯಮಾತ್ಮಾನಮನ್ವಿಷ್ಯ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನಿತೀನ್ದ್ರೋ ಹ ವೈ ದೇವಾನಾಮಭಿಪ್ರವವ್ರಾಜ ವಿರೋಚನೋಽಸುರಾಣಾಮ್" (ಛಾಂ. ೮-೭-೨) ಇತ್ಯಾದಿ ಚ | ಸ್ಮಾರ್ತಮಪಿ ಗಾನ್ಧರ್ವಯಾಜ್ಞವಲ್ಕ್ಯಸಂವಾದಾದಿ ||

( ಭಾಷ್ಯಾರ್ಥ )

ಮತ್ತು ಬ್ರಹ್ಮವಿದ್ಯೆಯ ಪ್ರಕರಣದಲ್ಲಿ "ಅದನ್ನು ದೇವತೆಗಳಲ್ಲಿ ಯಾವ ಯಾವನು ಅರಿತುಕೊಂಡನೋ ಅವನೇ ಅದಾದನು; ಋಷಿಗಳಲ್ಲಿಯೂ ಹಾಗೆಯೇ, ಮನುಷ್ಯರಲ್ಲಿಯೂ ಹಾಗೆಯೇ" (ಬೃ ೧-೪-೧೦) ಎಂದೂ "ಆ (ದೇವಾಸುರರು) ಇಂತೆಂದರು : ಯಾವ ಆತ್ಮನನ್ನು ಹುಡುಕಿ (ಅರಿತವನು) ಎಲ್ಲಾ ಲೋಕಗಳನ್ನೂ ಎಲ್ಲಾ ಕಾಮಗಳನ್ನೂ ಪಡೆದುಕೊಳ್ಳುತ್ತಾನೋ ಆ ಆತ್ಮನನ್ನು ಹುಡುಕೋಣ, ಎಂದು ದೇವತೆಗಳಲ್ಲಿ ಇಂದ್ರನೇ ಹೊರಟನು, ಅಸುರರಲ್ಲಿ ವಿರೋಚನನು (ಹೊರಟನು)" (ಛಾಂ. ೮-೭-೨) ಎಂದು ಮುಂತಾಗಿಯೂ ದೇವಾದಿಗಳಿಗೆ ಅಧಿಕಾರವನ್ನು ಸೂಚಿಸುವ ಶ್ರುತಿಯ ದರ್ಶನವೂ ಇರುತ್ತದೆ. **ಗಂಧರ್ವನಿಗೂ ಯಾಜ್ಞವಲ್ಕ್ಯನಿಗೂ (ಆದ) ಸಂವಾದವೇ** ಮುಂತಾದ ಸ್ಮಾರ್ತದರ್ಶನವೂ ಇದೆ[1].

## ಆದಿತ್ಯಾದಿಗಳು ಚೇತನರೆಂಬುದಕ್ಕೆ ಪ್ರಮಾಣ

( ಭಾಷ್ಯ )

೩೦೨. ಯದಪ್ಯುಕ್ತಮ್ 'ಜ್ಯೋತಿಷಿ ಭಾವಾಚ್ಚ' ಇತಿ | ಅತ್ರ ಬ್ರೂಮಃ – ಜ್ಯೋತಿರಾದಿವಿಷಯಾ ಅಪಿ ಆದಿತ್ಯಾದಯಃ ದೇವತಾವಚನಾಃ ಶಬ್ದಾಃ ಚೇತನಾವನ್ತಮ್ ಐಶ್ವರ್ಯಾದ್ಯುಪೇತಂ ತಂ ತಂ ದೇವತಾತ್ಮಾನಂ ಸಮರ್ಪಯನ್ತಿ | ಮನ್ತ್ರಾರ್ಥವಾದಾದಿಷು ತಥಾ ವ್ಯವಹಾರಾತ್ । ಅಸ್ತಿ ಹಿ ಐಶ್ವರ್ಯಯೋಗಾತ್ ದೇವತಾನಾಂ ಜ್ಯೋತಿರಾದ್ಯಾತ್ಮಭಿಶ್ಚ ಅವಸ್ಥಾತುಂ ಯಥೇಷ್ಟಂ ಚ ತಂ ತಂ ವಿಗ್ರಹಂ ಗ್ರಹೀತುಂ ಸಾಮರ್ಥ್ಯಮ್ | ತಥಾ ಹಿ ಶ್ರೂಯತೇ ಸುಬ್ರಹ್ಮಣ್ಯಾರ್ಥವಾದೇ– ಮೇಧಾತಿಥೇರ್ಮೇಷೇತಿ | ಮೇಧಾತಿಥಿಂ ಹ ಕಾಣ್ವಾಯನಮಿನ್ದ್ರೋ ಮೇಷೋ ಭೂತ್ವಾ ಜಹಾರ "[2]

---

1. ವಿಶ್ವಾವಸುವೆಂಬ ಗಂಧರ್ವರಾಜನು ಕೇಳಿದ ಪ್ರಶ್ನೆಗೆ ಯಾಜ್ಞವಲ್ಕ್ಯನು ಉತ್ತರವನ್ನು ಹೇಳಿದನು ಎಂದು ಮೋ. ಧ. ೩೧೮-೨೬ರಿಂದ ಹಿಡಿದು ಕೆಲವು ಶ್ಲೋಕಗಳಲ್ಲಿ ತಿಳಿಸಿದೆ. ಇದರಿಂದ ಗಂಧರ್ವನೂ ತತ್ತ್ವವಿಚಾರವನ್ನು ಮಾಡಿದನೆಂದಾಯಿತು.

2. ಈ ವಾಕ್ಯದ ಅನುವಾದದ ಕೆಳಗಿನ ಟಿಪ್ಪಣಿಯನ್ನು ನೋಡಿರಿ.

(ಷಡ್ವಿಂಶ. ಬ್ರಾ. ೧-೧) ಇತಿ । ಸ್ಮರ್ಯತೇ ಚ "ಆದಿತ್ಯಃ ಪುರುಷೋ ಭೂತ್ವಾ ಕುನ್ತೀಮುಪಜಗಾಮ ಹ" (?)[1] ಇತಿ । ಮೃದಾದಿಷ್ವಪಿ ಚೇತನಾ ಅಧಿಷ್ಠಾತಾರೋಽಭ್ಯುಪಗಮ್ಯನ್ತೇ-"ಮೃದಬ್ರವೀತ್" (ಶತ.ಬ್ರಾ.೬-೧-೩-೨) "ಆಪೋಽಬ್ರುವನ್" ( ಶತ. ಬ್ರಾ. ೬-೧-೩-೪ ) ಇತ್ಯಾದಿದರ್ಶನಾತ್ । ಜ್ಯೋತಿರಾದೇಸ್ತು ಭೂತಧಾತೋಃ ಆದಿತ್ಯಾದಿಷು ಅಚೇತನತ್ವಮ್ ಅಭ್ಯುಪಗಮ್ಯತೇ । ಚೇತನಾಸ್ತು ಅಧಿಷ್ಠಾತಾರೋ ದೇವತಾತ್ಮಾನಃ । ಮನ್ತ್ರಾರ್ಥವಾದಾದಿವ್ಯವಹಾರಾತ್ ಇತ್ಯುಕ್ತಮ್ ॥

(ಭಾಷ್ಯಾರ್ಥ)

ಇನ್ನು "ಜ್ಯೋತಿಷಿ ಭಾವಾಚ್ಚ" (ಜ್ಯೋತಿಯಲ್ಲಿ ಈ ಶಬ್ದಪ್ರಯೋಗವಿದೆ) ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದಕ್ಕೆ ಹೇಳುತ್ತೇವೆ. ಆದಿತ್ಯಾದಿ ದೇವತಾವಾಚಕ(ಶಬ್ದಗಳು) ಜ್ಯೋತಿಯೇ ಮುಂತಾದದ್ದರ ವಿಷಯವಾಗಿರುವವಾದರೂ ಚೇತನವುಳ್ಳ ಐಶ್ವರ್ಯವೇ ಮುಂತಾದವುಗಳಿಂದೊಡಗೂಡಿದ ಆಯಾ ದೇವತಾತ್ಮನನ್ನು ತಿಳಿಸುತ್ತವೆ (ಎಂದೊಪ್ಪಬೇಕು); ಏಕೆಂದರೆ ಮಂತ್ರಗಳು, ಅರ್ಥವಾದಗಳು, ಮುಂತಾದವುಗಳಲ್ಲಿ ಹಾಗೆ ವ್ಯವಹಾರವನ್ನು ಮಾಡಿರುತ್ತದೆ. ಐಶ್ವರ್ಯದ ಸಂಬಂಧದಿಂದ ದೇವತೆಗಳಿಗೆ ಜ್ಯೋತಿರಾದಿ ರೂಪದಿಂದ ಇದ್ದುಕೊಂಡಿರುವದಕ್ಕೂ (ಅದೇ ಕಾಲದಲ್ಲಿ) ಇಷ್ಟಬಂದಂತೆ ಆಯಾ ಶರೀರವನ್ನು ಧರಿಸುವದಕ್ಕೂ ಸಾಮರ್ಥ್ಯವು ಇದ್ದೇ ಇರುತ್ತದೆ[2]. ಅದ್ದರಿಂದ **ಸುಬ್ರಹ್ಮಣ್ಯಾರ್ಥವಾದದಲ್ಲಿ** 'ಮೇಧಾತಿಥಿಯ ಮೇಷನೆ', ಎಂದು (ಹೇಳಿದೆಯಷ್ಟೆ, ಅದರ ಅಭಿಪ್ರಾಯವೇನೆಂದರೆ) ಕಾಣ್ವಾಯನ ಮೇಧಾತಿಥಿಯನ್ನು ಇಂದ್ರನು ಮೇಷನಾಗಿ ಅಪಹರಿಸಿದನು ಎಂದರ್ಥ"(ಷಡ್ವಿಂಶ ಬ್ರಾ. ೧-೧) ಎಂದು ಶ್ರುತಿಯಲ್ಲಿ[3] ಹೇಳಿರುತ್ತದೆ. "ಆದಿತ್ಯನು ಮನುಷ್ಯನಾಗಿ

---

1. ಇದು ಮಹಾಭಾರತದಲ್ಲಿ ನಮಗೆ ಸಿಕ್ಕಿಲ್ಲ.

2. ಅಸ್ತಿ ಹಿ ಎಂಬುವಕ್ಕೆ ಮತ್ತೊಂದು ವ್ಯಾಖ್ಯಾನವಿದು.

3. ಇದು ಯಾವ ಶ್ರುತಿಯ ವ್ಯಾಖ್ಯಾನವೆಂಬುದು ತಿಳಿಯದು. ಜೈ. ಸೂ. ೯-೧-೪೨ರ ಭಾಷ್ಯದಲ್ಲಿ 'ಸುಬ್ರಹ್ಮಣ್ಯಾನಿಗದವು' ಜ್ಯೋತಿಷ್ಟೋಮದಲ್ಲಿದೆ ಎಂದು ಬರೆದಿದೆ. ತೈತ್ತಿರೀಯ ಆರಣ್ಯಕದಲ್ಲಿ ಈ ಆಹ್ವಾನಮಂತ್ರವು ಹೀಗಿದೆ. "ಸುಬ್ರಹ್ಮಣ್ಯೋಗ್ಂ ಸುಬ್ರಹ್ಮಣ್ಯೋಗ್ಂ ಸುಬ್ರಹ್ಮಣ್ಯೋಮ್ । ಇನ್ದ್ರಾಗಚ್ಛ ಹರಿವ ಆಗಚ್ಛ ಮೇಧಾತಿಥೇಃ । ಮೇಷ ವೃಷಣಶ್ವಸ್ಯ ಮೇನೇ । ಗೌರಾವಸ್ಕನ್ದಿನ್ನಹಲ್ಯಾಯೈ ಜಾರ । ಕೌಶಿಕಬ್ರಾಹ್ಮಣ ಗೌತಮ ಬ್ರುವಾಣ ॥" (ತೈ. ಆ. ೧-೧೨-೫೮, ೫೯) ಬ್ರಾಹ್ಮಣವಾಕ್ಯವನ್ನು ಸಾಯಣ ಭಾಷ್ಯದಲ್ಲಿ ಹೀಗೆ ಬರೆದಿದೆ: "ಹರಿವ ಆಗಚ್ಛೇತಿ ಪೂರ್ವಪಕ್ಷಾಪರಪಕ್ಷೌ ವಾ ಇನ್ದ್ರಸ್ಯ ಹರೀ ತಾಭ್ಯಾಂ ಹ್ಯೇಷ ಸರ್ವಂ ಹರತೀತಿ । ಮೇಧಾತಿಥೇರ್ಮೇಷೇತಿ ಮೇಧಾತಿಥಿಂ

ಕುಂತಿಯ ಬಳಿಗೆ ಬಂದನು" (?) ಎಂದು ಸ್ಮೃತಿಯಲ್ಲಿಯೂ ಇದೆ[1]. ಮಣ್ಣು ಮುಂತಾದವುಗಳಲ್ಲಿಯೂ ಚೇತನರಾದ ಅಧಿಷ್ಠಾತೃ(ದೇವತೆಗಳುಂಟೆಂದು ನಾವು) ಒಪ್ಪುತ್ತೇವೆ; ಏಕೆಂದರೆ "ಮಣ್ಣು ಹೇಳಿತು" (ಶತ.ಬ್ರಾ. ೬-೧-೩-೨), "ಅಪ್ಪು ಹೇಳಿತು" (ಶತ. ಬ್ರಾ. ೬-೧-೩-೪) ಎಂದು ಮುಂತಾಗಿ (ಶ್ರುತಿಯಲ್ಲಿರುವದು) ಕಂಡುಬರುತ್ತದೆ[2]. ಆದಿತ್ಯಾದಿಗಳಲ್ಲಿರುವ ಜ್ಯೋತಿಯೇ ಮುಂತಾದ ಭೂತಧಾತುವಿಗಾದರೋ ಅಚೇತನತ್ವವನ್ನು ಒಪ್ಪಿಯೇ ಇರುತ್ತೇವೆ. (ಅವುಗಳ) ಅಧಿಷ್ಠಾತೃಗಳಾದ ದೇವತಾತ್ಮರುಗಳು ಮಾತ್ರ ಚೇತನ(ರೂಪರು) ; ಏಕೆಂದರೆ ಮಂತ್ರಗಳು, ಅರ್ಥವಾದಗಳು- ಮುಂತಾದವುಗಳಲ್ಲಿ (ಹಾಗೆಂದು) ವ್ಯವಹಾರವಿದೆ ಎಂದು ಹೇಳಿದ್ದಾಗಿದೆ.

## ಅನ್ಯಾರ್ಥವಾಗಿರುವ ಮಂತ್ರಾದಿಗಳೂ ದೇವತೆಯನ್ನು ಹೇಳಬಹುದು

( ಭಾಷ್ಯ )

೩೦೩. ಯದಪ್ಯುಕ್ತಮ್- ಮನ್ತ್ರಾರ್ಥವಾದಯೋರನ್ಯಾರ್ಥತ್ವಾತ್ ನ ದೇವತಾವಿಗ್ರಹಾದಿಪ್ರಕಾಶನಸಾಮರ್ಥ್ಯಮ್ ಇತಿ | ಅತ್ರ ಬ್ರೂಮಃ। ಪ್ರತ್ಯಯಾಪ್ರತ್ಯಯೌ ಹಿ ಸದ್ಭಾವಾಸದ್ಭಾವಯೋಃ ಕಾರಣಮ್, ನಾನ್ಯಾರ್ಥತ್ವಮ್ ಅನನ್ಯಾರ್ಥತ್ವಂ ವಾ | ತಥಾ ಹಿ ಅನ್ಯಾರ್ಥಮಪಿ ಪ್ರಸ್ಥಿತಃ ಪಥಿ ಪತಿತಂ ತೃಣಪರ್ಣಾದಿ ಅಸ್ತೀತ್ಯೇವ ಪ್ರತಿಪದ್ಯತೇ। ಅತ್ರಾಹ - ವಿಷಮ ಉಪನ್ಯಾಸಃ। ತತ್ರ ಹಿ ತೃಣಪರ್ಣಾದಿವಿಷಯಂ ಪ್ರತ್ಯಕ್ಷಂ ಪ್ರವೃತ್ತಮಸ್ತಿ ಯೇನ ತದಸ್ತಿತ್ವಂ ಪ್ರತಿಪದ್ಯತೇ | ಅತ್ರ ಪುನರ್ವಿಧ್ಯುದ್ದೇಶೈಕವಾಕ್ಯಭಾವೇನ ಸ್ತುತ್ಯರ್ಥೇ ಅರ್ಥವಾದೇ ನ ಪಾರ್ಥಗರ್ಥ್ಯೇನ ವೃತ್ತಾನ್ತವಿಷಯಾ[3] ಪ್ರವೃತ್ತಿಃ ಶಕ್ಯಾಽಧ್ಯವಸಾತುಮ್ | ನ ಹಿ ಮಹಾವಾಕ್ಯೇ ಅರ್ಥಪ್ರತ್ಯಾಯಕೇ ಅವಾನ್ತರವಾಕ್ಯಸ್ಯ ಪೃಥಕ್ಪ್ರತ್ಯಾಯಕತ್ವಮಸ್ತಿ| ಯಥಾ 'ನ ಸುರಾಂ ಪಿಬೇತ್' ಇತಿ ನಞ್ವತಿವಾಕ್ಯೇ ಪದತ್ರಯಸಂಬನ್ಧಾತ್ ಸುರಾಪಾನಪ್ರತಿಷೇಧ ಏವ ಏಕೋಽರ್ಥೋಽವಗಮ್ಯತೇ

---

ಕಾಣ್ವಾಯನಿಂ ಮೇಷೋ ಭೂತ್ವಾ ಜಹಾರ। ವೃಷಣಶ್ವಸ್ಯ ಮೇನ ಇತಿ ವೃಷಣಶ್ವಸ್ಯ ಮೇನಕಾ ನಾಮ ದುಹಿತಾ ತಾಮಿನ್ದ್ರಶ್ಚಕಮೇ। ಗೌರಾವಸ್ಕನ್ದಿನ್ನಿತಿ ಗೌರಮೃಗೋ ಭೂತ್ವಾ ರಾಜಾನಂ ಪಿಬತಿ ." ಇದೇ ವಾಕ್ಯವು ಜೈ. ೯-೧-೪೩ರ ಭಾಷ್ಯದಲ್ಲಿ ಉದಾಹೃತವಾಗಿದ್ದು ಸ್ವಲ್ಪ ಹೆಚ್ಚು ಕಡಿಮೆಯಾಗಿದೆ.

1. ಆದ್ದರಿಂದ ಸೂರ್ಯನು ಚೇತನನೆಂದಾಯಿತು.

2. ಆದ್ದರಿಂದ ಆದಿತ್ಯಾದಿಗಳು ಮೃದಾದಿಗಳಂತೆ ಅಚೇತನರೆಂಬ ಅನುಮಾನವು ಸಲ್ಲದು.

3. ಇಲ್ಲಿ 'ವೃತ್ತಾರ್ಥ' ಎಂದೇ ಭಾಷ್ಯಕಾರರು ಬರೆದಿದ್ದರೂ ಇರಬಹುದೆಂದು ಕಾಣುತ್ತದೆ.

ನ ಪುನಃ 'ಸುರಾಂ ಪಿಬೇತ್' ಇತಿ ಪದದ್ವಯಸಂಬನ್ಧಾತ್ ಸುರಾಪಾನವಿಧಿರಪಿ ಇತಿ। ಅತ್ರೋಚ್ಯತೇ| ವಿಷಮ ಉಪನ್ಯಾಸಃ| ಯುಕ್ತಂ ಯತ್ ಸುರಾಪಾನಪ್ರತಿಷೇಧೇ ಪದಾನ್ವಯಸ್ಯ ಏಕತ್ವಾತ್ ಅವಾನ್ತರವಾಕ್ಯಾರ್ಥಸ್ಯ ಅಗ್ರಹಣಮ್। ವಿಧ್ಯುದ್ದೇಶಾರ್ಥವಾದಯೋಸ್ತು ಅರ್ಥವಾದಸ್ಥಾನಿ ಪದಾನಿ ಪೃಥಗನ್ವಯವೃತ್ತಾನ್ತವಿಷಯಂ ಪ್ರತಿಪದ್ಯ ಅನನ್ತರಂ ಕೈಮರ್ಥ್ಯವಶೇನ ಕಾಮಂ ವಿಧೇಃ ಸ್ತಾವಕತ್ವಂ ಪ್ರತಿಪದ್ಯನ್ತೇ| ಯಥಾ ಹಿ "ವಾಯವ್ಯಂ ಶ್ವೇತಮಾಲಭೇತ ಭೂತಿಕಾಮಃ" (ತೈ. ಸಂ. ೨-೧-೧) ಇತ್ಯತ್ರ ವಿಧ್ಯುದ್ದೇಶವರ್ತಿನಾಂ ವಾಯವ್ಯಾದಿಪದಾನಾಂ ವಿಧಿನಾ ಸಂಬನ್ಧಃ, ನೈವಂ "ವಾಯುರ್ವೈ ಕ್ಷೇಪಿಷ್ಠಾ ದೇವತಾ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ಭೂತಿಂ ಗಮಯತಿ" (ತೈ. ಸಂ. ೨-೧-೧) ಇತ್ಯೇಷಾಮ್ ಅರ್ಥವಾದಗತಾನಾಂ ಪದಾನಾಮ್ | ನ ಹಿ ಭವತಿ 'ವಾಯುರ್ವಾ ಆಲಭೇತ' ಇತಿ[1], 'ಕ್ಷೇಪಿಷ್ಠಾ ದೇವತಾ ವಾ ಆಲಭೇತ' ಇತ್ಯಾದಿ | ವಾಯುಸ್ವಭಾವಸಂಕೀರ್ತನೇನ ತು ಅವಾನ್ತರಮ್ ಅನ್ವಯಂ ಪ್ರತಿಪದ್ಯ 'ಏವಂವಿಶಿಷ್ಟದೈವತ್ಯಮಿದಂ ಕರ್ಮ' ಇತಿ ವಿಧಿಂ ಸ್ತುವನ್ತಿ। ತದ್ ಯತ್ರ ಸೋಽವಾನ್ತರವಾಕ್ಯಾರ್ಥಃ ಪ್ರಮಾಣಾನ್ತರಗೋಚರೋ ಭವತಿ ತತ್ರ ತದನುವಾದೇನ ಅರ್ಥವಾದಃ ಪ್ರವರ್ತತೇ। ಯತ್ರ ಪ್ರಮಾಣಾನ್ತರವಿರುದ್ಧಂ ತತ್ರ ತದನುವಾದೇನ ಅರ್ಥವಾದಃ ಪ್ರವರ್ತತೇ। ಯತ್ರ ಪ್ರಮಾಣಾನ್ತರವಿರುದ್ಧಃ ತತ್ರ ಗುಣವಾದೇನ। ಯತ್ರ ತು ತದುಭಯಂ ನಾಸ್ತಿ, ತತ್ರ ಕಿಂ ಪ್ರಮಾಣಾನ್ತರಾಭಾವಾದ್ ಗುಣವಾದಃ ಸ್ಯಾತ್, ಆಹೋಸ್ವಿತ್ ಪ್ರಮಾಣಾನ್ತರಾವಿರೋಧಾದ್ ವಿದ್ಯಮಾನವಾದಃ? ಇತಿ ಪ್ರತೀತಿಶರಣೈಃ ವಿದ್ಯಮಾನವಾದ ಆಶ್ರಯಣೀಯೋ ನ ಗುಣವಾದಃ | ಏತೇನ ಮನ್ತ್ರೋ ವ್ಯಾಖ್ಯಾತಃ। ಅಪಿ ಚ ವಿಧಿಭಿರೇವ ಇನ್ದ್ರಾದಿದೈವತ್ಯಾನಿ ಹವೀಂಷಿ ಚೋದಯದ್ಭಿಃ ಅಪೇಕ್ಷಿತಮ್ ಇನ್ದ್ರಾದೀನಾಂ ಸ್ವರೂಪಮ್ | ನ ಹಿ ಸ್ವರೂಪರಹಿತಾ ಇನ್ದ್ರಾದಯಃ ಚೇತಸಿ ಆರೋಪಯಿತುಂ ಶಕ್ಯನ್ತೇ | ನ ಚ ಚೇತಸಿ ಅನಾರೂಢಾಯೈ ತಸ್ಯೈ ತಸ್ಯೈ ದೇವತಾಯೈ ಹವಿಃ ಪ್ರದಾತುಂ ಶಕ್ಯತೇ| ಶ್ರಾವಯತಿ ಚ "ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ ತಾಂ ಧ್ಯಾಯೇದ್ ವಷಟ್ಕರಿಷ್ಯನ್" (ಐ. ಬ್ರಾ. ೩-೮-೧) ಇತಿ| ನ ಚ ಶಬ್ದಮಾತ್ರಮ್ ಅರ್ಥಸ್ವರೂಪಂ ಸಂಭವತಿ | ಶಬ್ದಾರ್ಥಯೋರ್ಭೇದಾತ್ । ತತ್ರ ಯಾದೃಶಂ ಮನ್ತ್ರಾರ್ಥವಾದಯೋಃ ಇನ್ದ್ರಾದೀನಾಂ ಸ್ವರೂಪಮ್, ನ ತತ್ ತಾದೃಶಂ ಶಬ್ದಪ್ರಮಾಣಕೇನ ಪ್ರತ್ಯಾಖ್ಯಾತುಂ ಯುಕ್ತಮ್ । ಇತಿಹಾಸಪುರಾಣಮಪಿ ವ್ಯಾಖ್ಯಾತೇನ ಮಾರ್ಗೇಣ ಸಂಭವನ್ಮನ್ತ್ರಾರ್ಥವಾದಮೂಲತ್ವಾತ್ ಪ್ರಭವತಿ ದೇವತಾವಿಗ್ರಹಾದಿ ಸಾಧಯಿತುಮ್ ॥

---

1. ಇಲ್ಲಿ 'ಇತಿ' ಇಲ್ಲದಿದ್ದರೂ ಸಾಗುತ್ತಿತ್ತೆಂದು ಕಾಣುತ್ತದೆ.

( ಭಾಷ್ಯಾರ್ಥ )

ಇನ್ನು ಮಂತ್ರಾರ್ಥವಾದಗಳಿಗೆ ಬೇರೆಯ ತಾತ್ಪರ್ಯವಿರುವದರಿಂದ ದೇವತೆಗಳಿಗೆ ವಿಗ್ರಹಾದಿಗಳಿರುವವೆಂಬುದನ್ನು ತಿಳಿಸುವ ಸಾಮರ್ಥ್ಯವಿಲ್ಲ ಎಂದು ( ಪೂರ್ವಪಕ್ಷದಲ್ಲಿ ) ಹೇಳಿತ್ತಷ್ಟೆ. ಅದಕ್ಕೆ ಹೇಳುತ್ತೇವೆ: ( ಶಬ್ದದಿಂದ ) **ಜ್ಞಾನವಾಗುವದು, ಅಥವಾ ಆಗದಿರುವದು- ಇವು (ವಸ್ತು) ಇರುವದಕ್ಕೂ ಇಲ್ಲದ್ದಕ್ಕೂ ಕಾರಣವೇ ಹೊರತು ಮತ್ತೊಂದಕ್ಕಾಗಿ ಬಂದಿರುವದು, ಅಥವಾ ಮತ್ತೊಂದಕ್ಕಾಗಿ ಬಾರದಿರುವದು- ಎಂಬುದಲ್ಲ**[1]. ಆದ್ದರಿಂದಲೇ ಮತ್ತೊಂದಕ್ಕೋಸ್ಕರ ಹೊರಟವನೂ ದಾರಿಯಲ್ಲಿ ಬಿದ್ದಿರುವ ಹುಲ್ಲುಕಡ್ಡಿ, ಎಲೆ- ಮುಂತಾದದ್ದನ್ನು ಇದೆಯೆಂದೇ ತಿಳಿಯುತ್ತಾನೆ.

(ಆಕ್ಷೇಪ) :— ಇಲ್ಲಿ (ಪೂರ್ವಪಕ್ಷಿ) ಹೇಳುತ್ತಾನೆ. ದೃಷ್ಟಾಂತವು ಸಮನಲ್ಲ. ಏಕೆಂದರೆ ಆ ( ದೃಷ್ಟಾಂತ )ದಲ್ಲಿ ತೃಣಪರ್ಣಾದಿವಿಷಯ:ದಲ್ಲಿ ಪ್ರತ್ಯಕ್ಷವು ಪ್ರವೃತ್ತವಾಗಿರುತ್ತದೆ; ಅದರಿಂದ ಅದು ಇದೆ ಎಂದು ನಿಶ್ಚಯಿಸಿಕೊಳ್ಳುತ್ತಾನೆ. ಆದರೆ ಇಲ್ಲಿಯೋ ಎಂದರೆ ವಿಧಿವಾಕ್ಯದೊಡನೆ ಏಕವಾಕ್ಯತೆಯಿರುವದರಿಂದ ಅರ್ಥವಾದವು ಸ್ತುತಿಗಾಗಿ ( ಬಂದಿದೆ ಎಂದಾಗಿರು )ವಲ್ಲಿ (ಅದಕ್ಕೆ) ಬೇರೊಂದು ಅರ್ಥವನ್ನು (ಕೊಟ್ಟು) ಇರುವ ವಸ್ತುವಿನ ವಿಷಯದಲ್ಲಿ ಪ್ರವೃತ್ತಿ(ಯುಂಟೆಂದು) ನಿಶ್ಚಯಿಸುವದು ಆಗಲಾರದು. ಮಹಾವಾಕ್ಯವು[2] ಅರ್ಥವನ್ನು ತಿಳಿಸುವಲ್ಲಿ ಅವಾಂತರವಾಕ್ಯಕ್ಕೂ[3] ಬೇರೆಯಾಗಿ (ಅರ್ಥವನ್ನು) ತಿಳಿಸುವದೆಂಬುದು ಇರುವದೇ ಇಲ್ಲ. ಹೇಗೆಂದರೆ "ನ ಸುರಾಂ ಪಿಬೇತ್" (ಹೆಂಡವನ್ನು ಕುಡಿಯತಕ್ಕದ್ದಲ್ಲ) ಎಂದು ನಞ್‌ಶಬ್ದವುಳ್ಳ ವಾಕ್ಯದಲ್ಲಿ ಮೂರು ಪದಗಳ ಸಂಬಂಧದಿಂದ ಸುರಾಪಾನಪ್ರತಿಷೇಧವೆಂಬ ಒಂದೇ ಅರ್ಥವೇ ಗೊತ್ತಾಗುವದೇ ಹೊರತು 'ಸುರಾಂ ಪಿಬೇತ್' (ಹೆಂಡವನ್ನು ಕುಡಿಯತಕ್ಕದ್ದು) ಎಂದು ಎರಡು ಪದಗಳ ಸಂಬಂಧದಿಂದ ಸುರಾಪಾನವಿಧಿಯನ್ನೂ (ನಿಶ್ಚಯಿಸುವದಕ್ಕೆ) ಆಗುವದಿಲ್ಲ.

(ಪರಿಹಾರ) :— ಇದಕ್ಕೆ ಹೇಳುತ್ತೇವೆ. ದೃಷ್ಟಾಂತವು ಸಮನಲ್ಲ. ಸುರಾಪಾನಪ್ರತಿಷೇಧವಿಷಯದಲ್ಲಿ ಪದಾನ್ವಯವು ಒಂದೇ ಆಗಿರುವದರಿಂದ ಅವಾಂತರವಾಕ್ಯದ ಅರ್ಥವನ್ನು ಗ್ರಹಿಸಬಾರದೆಂಬುದು ಯುಕ್ತ

---

1. ಪದಾರ್ಥವಾಗಿರುವ ವಾಕ್ಯವೂ ತನ್ನ ಅರ್ಥವನ್ನು ಬೇರೆಯಾಗಿ ತಿಳಿಸುವ ಹಾಗಿದ್ದರೆ ಆ ವಿಷಯದಲ್ಲಿ ಪ್ರಮಾಣವೇ ಎಂದರ್ಥ.

2. ಒಟ್ಟುವಾಕ್ಯ. 3. ಉಪವಾಕ್ಯ, ಒಳವಾಕ್ಯ.

ವಾಗಿರುತ್ತದೆ. ಆದರೆ ವಿಧಿವಾಕ್ಯ, ಅರ್ಥವಾದ– ಇವುಗಳ ವಿಷಯ ದಲ್ಲಿಯೋ ಎಂದರೆ ಅರ್ಥವಾದದಲ್ಲಿರುವ ಪದಗಳು ಭೂತವಸ್ತುವಿಷಯದಲ್ಲಿ ಬೇರೆ ಅನ್ವಯವನ್ನು ಪಡೆದು ಆಮೇಲೆ ಕೈಮರ್ಥ್ಯವಶದಿಂದ[1] ಅವಶ್ಯವಾಗಿ ವಿಧಿಯನ್ನು ಹೊಗಳುವ (ಸ್ವರೂಪ)ವನ್ನು ಪಡೆದುಕೊಳ್ಳಬಹುದು. ಹೇಗೆ "ವಾಯವ್ಯಂ ಶ್ವೇತಮಾಲಭೇತ ಭೂತಿಕಾಮಃ" ಭೂತಿಕಾಮನಾದವನು ವಾಯುದೇವತಾಕವಾಗಿ ಬಿಳಿಯ ಪಶುವನ್ನು ಬಲಿಕೊಡಬೇಕು. (ತೈ. ಸಂ. ೨–೧–೧) ಎಂಬಲ್ಲಿ ವಿಧ್ಯುದ್ದೇಶ(ವಾಕ್ಯ)ದಲ್ಲಿರುವ 'ವಾಯವ್ಯವೇ ಮುಂತಾದ ಪದಗಳಿಗೆ ವಿಧಿಯೊಡನೆ ಸಂಬಂಧವಿರುತ್ತದೆಯೋ, 'ವಾಯುರ್ವೈ ಕ್ಷೇಪಿಷ್ಠಾ ದೇವತಾ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವೈನಂ ಭೂತಿಂ ಗಮಯತಿ" (ತೈ. ಸಂ. ೨–೧–೧ ವಾಯುವೇ ಕ್ಷಿಪ್ರತಮವಾದ ದೇವತೆಯು ; ವಾಯುವನ್ನೇ ತನ್ನ ಭಾಗದಿಂದ ಬಳಿಸಾರುತ್ತಾನೆ, ಆತನೇ ಇವನನ್ನು ಭೂತಿಯನ್ನು ಹೊಂದಿಸುತ್ತಾನೆ) ಎಂಬ ಅರ್ಥವಾದದಲ್ಲಿರುವ ಈ ಪದಗಳಿಗೂ ಹಾಗೆ (ವಿಧಿಯೊಡನೆ) ಸಂಬಂಧವಿರುವದಿಲ್ಲ. "ವಾಯುರ್ವಾ ಆಲಭೇತ" (ವಾಯುವೇ ಬಲಿಯೊಪ್ಪಿಸಬೇಕು) ಎಂದಾಗಲಿ, "ಕ್ಷೇಪಿಷ್ಠಾ ವಾ ದೇವತಾ ಆಲಭೇತ" (ಕ್ಷಿಪ್ರವಾದ ದೇವತೆಯೇ ಬಲಿಯೊಪ್ಪಿಸಬೇಕು) ಎಂದು ಮುಂತಾಗಿಯಾಗಲಿ (ಅನ್ವಯ)ವಾಗುವದೇ ಇಲ್ಲ. ಆದರೆ ವಾಯುವಿನ ಸ್ವಭಾವವನ್ನು ಹೇಳುವದರ ಮೂಲಕ ಅವಾಂತರವಾದ ಅನ್ವಯವನ್ನು ಹೊಂದಿ[2] 'ಇಂಥ ವಿಶಿಷ್ಟದೇವತೆಯುಳ್ಳದ್ದು ಈ ಕರ್ಮವು' ಎಂದು ವಿಧಿ ಯನ್ನು ಹೊಗಳುತ್ತವೆ. **ಆದ್ದರಿಂದ ಎಲ್ಲಿ ಆ ಅವಾಂತರವಾಕ್ಯದ ಅರ್ಥವು ಮತ್ತೊಂದು ಪ್ರಮಾಣಕ್ಕೆ ವಿಷಯವಾಗಿರುವದೋ ಅಲ್ಲಿ ಅದನ್ನು ಅನುವಾದಮಾಡಿಕೊಂಡು ಅರ್ಥವಾದವು ಪ್ರವರ್ತಿಸು ತ್ತದೆ[3] ; ಎಲ್ಲಿ ಇನ್ನೊಂದು ಪ್ರಮಾಣಕ್ಕೆ ವಿರುದ್ಧವಾಗಿರುವದೋ ಅಲ್ಲಿ ಗುಣವಾದದಿಂದ[4] ಪ್ರವರ್ತಿಸುತ್ತದೆ. ಎಲ್ಲಿ ಇವೆರಡೂ ಇಲ್ಲ**

---

1. ಏತಕ್ಕೋಸ್ಕರ ?– ಎಂಬ ಆಕಾಂಕ್ಷೆಯಿಂದ.

2. ಒಳವಾಕ್ಯದಲ್ಲಿ ಒಂದು ಅನ್ವಯವನ್ನು ಹೊಂದಿದ ಬಳಿಕವೇ ವಿಧಿಗೆ ಸಂಬಂಧ ಪಡಬೇಕು ಎಂದರ್ಥ.

3. 'ಅಗ್ನಿರ್ಹಿಮಸ್ಯ ಭೇಷಜಮ್' ಎಂಬ ವಾಕ್ಯವು ತಿಳಿಸುವ– ಬೆಂಕಿಯು ಚಳಿಯನ್ನು ಕಳೆಯುವದೆಂಬ– ಅರ್ಥವು ಬೇರೊಂದು ಪ್ರಮಾಣದಿಂದ ತಿಳಿಯಬರುವ ದರಿಂದ, ಇದು ಅನುವಾದವು.

4. 'ಆದಿತ್ಯೋ ಯೂಪಃ' ಎಂಬ ವಾಕ್ಯವು ತಿಳಿಸುವ – ಯೂಪವು ಸೂರ್ಯ ನೆಂಬ– ಅರ್ಥವು ಪ್ರಮಾಣಾಂತರಕ್ಕೆ ವಿರುದ್ಧವಾಗಿರುವದರಿಂದ ಸೂರ್ಯನಂತೆ ಹೊಳೆ ಯುತ್ತದೆ ಎಂದು ತಿಳಿಸುವ ಗುಣವಾದವಿದು.

**ವೋ ಅಲ್ಲಿ ಪ್ರಮಾಣಾಂತರವಿಲ್ಲದ್ದರಿಂದ ಗುಣವಾದವಾಗಬೇಕೊ, ಅಥವಾ ಪ್ರಮಾಣಾಂತರಕ್ಕೆ ವಿರೋಧವಿಲ್ಲದ್ದರಿಂದ ವಿದ್ಯಮಾನವಾದವಾಗಬೇಕೊ ?– ಎಂಬ (ಶಂಕೆಯುಂಟಾಗಲು) ಪ್ರತೀತಿಶರಣರಾದವರು[1] ವಿದ್ಯಮಾನವಾದವನ್ನೇ ಇಟ್ಟುಕೊಳ್ಳಬೇಕೇ ಹೊರತು ಗುಣವಾದವನ್ನು (ಇಟ್ಟುಕೊಳ್ಳಬಾರದು)**[2]. ಇದರಿಂದ ಮಂತ್ರ(ವಿಚಾರವನ್ನೂ) ವಿವರಿಸಿದಂತೆ ಆಯಿತು.

ಇದಲ್ಲದೆ ಇಂದ್ರನೇ ಮುಂತಾದ ದೇವತೆಗಳಿಗೆ ಹವಿಸ್ಸನ್ನು (ಕೊಡಬೇಕೆಂದು) ವಿಧಿಸುವ ವಿಧಿಗಳೇ ಇಂದ್ರಾದಿದೇವತೆಗಳಿಗೆ ಸ್ವರೂಪವಿರಬೇಕೆಂದು ಬಯಸುತ್ತವೆ. ಏಕೆಂದರೆ ಸ್ವರೂಪವಿಲ್ಲದ ಇಂದ್ರಾದಿಗಳನ್ನು ಚಿತ್ತದಲ್ಲಿ ಹತ್ತಿಸಿಕೊಳ್ಳುವದಕ್ಕೆ ಆಗಲಾರದು. ಚಿತ್ತದಲ್ಲಿ ಹತ್ತಿಸಿಕೊಳ್ಳದೆ ಇರುವ ಆಯಾ ದೇವತೆಗೆ ಹವಿಸ್ಸನ್ನು ಕೊಡುವದೂ ಆಗುವದಿಲ್ಲ. "ಯಾವ ದೇವತೆಗೋಸ್ಕರ ಹವಿಸ್ಸನ್ನು ಗ್ರಹಿಸಲಾಗುವದೋ ಆ ( ದೇವತೆಯನ್ನು ) ವಷಟ್ಕಾರವನ್ನು ಹೇಳುತ್ತಾ (ಮನಸ್ಸಿನಲ್ಲಿ) ಧ್ಯಾನಿಸಬೇಕು." (ಐ. ಬ್ರಾ. ೩–೮–೧) ಎಂದು ಶ್ರುತಿಯಲ್ಲಿ ಹೇಳಿಯೂ ಇದೆ. **ಬರಿಯ ಶಬ್ದವೇ ಪದಾರ್ಥದ ಸ್ವರೂಪವಾಗುವಂತಿಲ್ಲ ; ಏಕೆಂದರೆ ಶಬ್ದಾರ್ಥಗಳಿಗೆ ಭೇದವಿರುತ್ತದೆ**[3]. ಹೀಗಿರುವಲ್ಲಿ ಮಂತ್ರಾರ್ಥವಾದಗಳಲ್ಲಿ ಇಂದ್ರಾದಿಗಳಿಗೆ ಯಾವ ಸ್ವರೂಪವು ನಿಶ್ಚಿತವಾಗಿರುತ್ತದೆಯೋ, ಅಂಥ ಆ (ಸ್ವರೂಪ)ವನ್ನು ತಿರಸ್ಕರಿಸುವದು ಶಬ್ದವನ್ನು ಪ್ರಮಾಣವೆಂದು ಹಿಡಿದಿರುವವರಿಗೆ[4] ಯುಕ್ತವಲ್ಲ; ಇತಿಹಾಸಪುರಾಣವುಕೂಡ (ನಾವು) ವಿವರಿಸಿರುವ ಮಾರ್ಗದಿಂದ ಮಂತ್ರಾರ್ಥವಾದಗಳೆಂಬ ಸಂಭಾವಿತವಾದ (ಶ್ರುತಿ) ಮೂಲವುಳ್ಳದ್ದಾದ್ದರಿಂದ ದೇವತಾವಿಗ್ರಹಾದಿಗಳನ್ನು ಸಾಧಿಸಿಕೊಡುವುದಕ್ಕೆ ಶಕ್ತವಾಗಿರುತ್ತದೆ.

---

1. ಶಬ್ದಪ್ರಮಾಣದಿಂದ ತಿಳಿಯಬಂದದ್ದು ಯಥಾರ್ಥವೆಂದು ಒಪ್ಪುವವರು.

2. ದೇವತೆಗಳಿಗೆ ವಿಗ್ರಹವತ್ತ್ವಾದಿಗಳನ್ನು ತಿಳಿಸುವ ವಾಕ್ಯಗಳು ಪ್ರಮಾಣಾಂತರಸಿದ್ಧವಾದದ್ದನ್ನಾಗಲಿ ವಿರುದ್ಧವಾದದ್ದನ್ನಾಗಲಿ ಹೇಳುವದಿಲ್ಲ ; ಆದ್ದರಿಂದ ದೇವತೆಗಳಿಗೆ ವಿಗ್ರಹಾದಿಗಳುಂಟೆಂದು ವಾಕ್ಯಾನುಸಾರವಾಗಿ ಭೂತಾರ್ಥವಾದವೆಂದೇ ತಿಳಿಯಬೇಕು.

3. ಶಬ್ದವೇ ದೇವತೆ ಎಂಬ ಮೀಮಾಂಸಕರ ಮತವನ್ನು ಇಲ್ಲಿ ತಿರಸ್ಕರಿಸಿದೆ, ಜೈ. ೧೦–೪–೨೩ ರ ಭಾಷ್ಯವನ್ನು ನೋಡಿ.

4. ಪೂರ್ವಮೀಮಾಂಸಕರು ಮುಂತಾದವರಿಗೆ.

# ದೇವತಾದಿಗಳಿಗೆ ಸ್ವರೂಪವುಂಟೆಂಬುದಕ್ಕೆ ಪ್ರತ್ಯಕ್ಷಾದಿಪ್ರಮಾಣ

(ಭಾಷ್ಯ)

೩೦೪. ಪ್ರತ್ಯಕ್ಷಾದಿಮೂಲಮಪಿ ಸಂಭವತಿ । ಭವತಿ ಹಿ ಅಸ್ಮಾಕಮ್ ಅಪ್ರತ್ಯಕ್ಷಮಪಿ ಚಿರನ್ತನಾನಾಂ ಪ್ರತ್ಯಕ್ಷಮ್ । ತಥಾ ಚ ವ್ಯಾಸಾದಯೋ ದೇವಾದಿಭಿಃ ಪ್ರತ್ಯಕ್ಷಂ ವ್ಯವಹರನ್ತಿ ಇತಿ ಸ್ಮರ್ಯತೇ । ಯಸ್ತು ಬ್ರೂಯಾತ್ ಇದಾನೀಂತನಾನಾಮಿವ ಪೂರ್ವೇಷಾಮಪಿ ನಾಸ್ತಿ ದೇವಾದಿಭಿರ್ವ್ಯವಹರ್ತುಂ ಸಾಮರ್ಥ್ಯಮ್ ಇತಿ । ಸ ಜಗದ್ವೈಚಿತ್ರ್ಯಂ ಪ್ರತಿಷೇಧೇತ್ । ಇದಾನೀಮಿವ ಚ ನಾನ್ಯದಾಪಿ ಸಾರ್ವಭೌಮಃ ಕ್ಷತ್ರಿಯೋಽಸ್ತಿ ಇತಿ ಬ್ರೂಯಾತ್ । ತತಶ್ಚ ರಾಜಸೂಯಾದಿಚೋದನಾ ಉಪರುನ್ಧ್ಯಾತ್ । ಇದಾನೀಮಿವ ಚ ಕಾಲಾನ್ತರೇಽಪಿ ಅವ್ಯವಸ್ಥಿತಪ್ರಾಯಾನ್ ವರ್ಣಾಶ್ರಮಧರ್ಮಾನ್ ಪ್ರತಿಜಾನೀತ । ತತಶ್ಚ ವ್ಯವಸ್ಥಾವಿಧಾಯಿ ಶಾಸ್ತ್ರಮ್ ಅನರ್ಥಕಂ ಸ್ಯಾತ್ । ತಸ್ಮಾತ್ ಧರ್ಮೋತ್ಕರ್ಷವಶಾತ್ ಚಿರನ್ತನಾಃ ದೇವಾದಿಭಿಃ ಪ್ರತ್ಯಕ್ಷಂ ವ್ಯವಜಹ್ರುಃ ಇತಿ ಶ್ಲಿಷ್ಯತೇ । ಅಪಿ ಚ ಸ್ಮರನ್ತಿ– "ಸ್ವಾಧ್ಯಾಯಾದಿಷ್ಟ ದೇವತಾಸಂಪ್ರಯೋಗಃ" (ಯೋ. ಸೂ. ೨–೪೪) ಇತ್ಯಾದಿ । ಯೋಗೋಽಪಿ ಅಣಿಮಾದ್ಯೈಶ್ವರ್ಯಪ್ರಾಪ್ತಿಫಲಃ ಸ್ಮರ್ಯಮಾಣಃ ನ ಶಕ್ಯತೇ ಸಾಹಸಮಾತ್ರೇಣ ಪ್ರತ್ಯಾಖ್ಯಾತುಮ್ । ಶ್ರುತಿಶ್ಚ ಯೋಗಮಾಹಾತ್ಮ್ಯಂ ಪ್ರಖ್ಯಾಪಯತಿ –"ಪೃಥಿವ್ಯಪ್ತೇಜೋಽನಿಲಖೇ ಸಮುತ್ಥಿತೇ ಪಞ್ಚಾತ್ಮಕೇ ಯೋಗಗುಣೇ ಪ್ರವೃತ್ತೇ । ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಮ್" (ಶ್ವೇ. ೨–೧೨) ಇತಿ । ಋಷೀಣಾಮಪಿ ಮನ್ತ್ರಬ್ರಾಹ್ಮಣದರ್ಶಿನಾಂ ಸಾಮರ್ಥ್ಯಮ್ ನಾಸ್ಮದೀಯೇನ ಸಾಮರ್ಥ್ಯೇನ ಉಪಮಾತುಂ ಯುಕ್ತಮ್ । ತಸ್ಮಾತ್ ಸಮೂಲಮ್ ಇತಿಹಾಸಪುರಾಣಮ್ । ಲೋಕಪ್ರಸಿದ್ಧಿರಪಿ ನ ಸತಿ ಸಂಭವೇ ನಿರಾಲಮ್ಬನಾ ಅಧ್ಯವಸಾತುಂ ಯುಕ್ತಾ ॥

(ಭಾಷ್ಯಾರ್ಥ)

(ಇತಿಹಾಸಪುರಾಣಕ್ಕೆ) ಪ್ರತ್ಯಕ್ಷವೇ ಮುಂತಾದ ಮೂಲವೂ ಇರಬಹುದಾಗಿದೆ. **ನಮಗೆ ಅಪ್ರತ್ಯಕ್ಷವಾದದ್ದು ಕೂಡ ಹಿಂದಿನವರಿಗೆ ಪ್ರತ್ಯಕ್ಷವಾಗಿರುತ್ತದೆ.** ಆದ್ದರಿಂದಲೇ **ವ್ಯಾಸಾದಿಗಳು** ದೇವಾದಿಗಳೊಡನೆ ಪ್ರತ್ಯಕ್ಷವಾಗಿ ವ್ಯವಹಾರಮಾಡುತ್ತಿದ್ದರೆಂದು ಸ್ಮೃತಿಯಲ್ಲಿದೆ. ಯಾವನಾದರೆ ಈಗಿನವರಂತೆ ಹಿಂದಿ

ನವರಿಗೂ ದೇವಾದಿಗಳೊಡನೆ ವ್ಯವಹರಿಸುವ ಸಾಮರ್ಥ್ಯವಿರಲಿಲ್ಲ ಎನ್ನುವನೋ, ಅವನು ಜಗತ್ತಿನ ವೈಚಿತ್ರ್ಯವನ್ನು ಅಲ್ಲಗಳೆದಾನು ಈಗಿನಂತೆ ಮತ್ತೆಯಾವಾಗಲೂ **ಸಾರ್ವಭೌಮನಾದ** ಕ್ಷತ್ರಿಯನು ಇರಲಿಲ್ಲ ಎಂದಾನು; ಆದರಿಂದ ರಾಜಸೂಯ ವೇ ಮುಂತಾದ ವಿಧಿಯೂ ವಿರುದ್ಧವಾದೀತು. ಮತ್ತು (ಅಂಥವನು) ಈಗಿನಂತೆ ಮತ್ತೊಂದು ಕಾಲದಲ್ಲಿಯೂ ವರ್ಣಾಶ್ರಮಧರ್ಮಗಳು ಅವ್ಯವಸ್ಥಿತಪ್ರಾಯ ವಾಗಿದ್ದವೆಂದು ಪ್ರತಿಜ್ಞೆಮಾಡಿಯಾನು ; ಅದರಿಂದ (ವರ್ಣಾಶ್ರಮ) ವ್ಯವಸ್ಥೆ ಯನ್ನು ವಿಧಿಸುವ ಶಾಸ್ತ್ರವು ವ್ಯರ್ಥವಾದೀತು. **ಆದ್ದರಿಂದ ಧರ್ಮದ ಅತಿಶಯ ದಿಂದ ಹಿಂದಿನವರು ದೇವಾದಿಗಳೊಡನೆ ಪ್ರತ್ಯಕ್ಷವಾಗಿ ವ್ಯವಹರಿಸು ತ್ತಿದ್ದರು ಎಂಬುದೇ ಯುಕ್ತವಾಗಿರುತ್ತದೆ.** ಇದೂ ಅಲ್ಲದೆ, "ಮಂತ್ರಜಪ ದಿಂದ ಇಷ್ಟದೇವತೆಯ ಪ್ರತ್ಯಕ್ಷವು" (ಯೋ. ಸೂ. ೨-೪೪) ಎಂದು ಮುಂತಾಗಿ **(ಯೋಗ) ಸ್ಮೃತಿಯಲ್ಲಿ**[1] **ಹೇಳಿರುತ್ತದೆ. ಅಣಿಮಾ ಮುಂತಾದ ಐಶ್ವರ್ಯಪ್ರಾಪ್ತಿಯು ಫಲವುಳ್ಳದ್ದೆಂದು ಸ್ಮೃತಿಯಲ್ಲಿ ಹೇಳಿರುವ ಯೋಗವನ್ನು ಸಾಹಸಮಾತ್ರದಿಂದ ತಿರಸ್ಕರಿಸುವದು ಆಗಲಾರದು.** "ಪಂಚಾತ್ಮಕವಾದ ಪೃಥಿವ್ಯಪ್ತೇಜೋನಿಲಾಕಾಶ (ಸಮೂಹವು) ಎದ್ದುಕೊಳ್ಳ ಲಾಗಿ, ಯೋಗಗುಣವು ಉಂಟಾಗಲಾಗಿ ಆ ಯೋಗಾಗ್ನಿಮಯವಾದ ಶರೀರ ವನ್ನು ಹೊಂದಿದವನಿಗೆ ರೋಗವಿಲ್ಲ, ಮುಪ್ಪಿಲ್ಲ, ಸಾವಿಲ್ಲ"[2] (ಶ್ವೇ ೨-೧೨) ಎಂದು ಶ್ರುತಿಯೂ ಯೋಗದ ಮಾಹಾತ್ಮ್ಯವನ್ನು ಕೊಂಡಾಡುತ್ತದೆ. ಮಂತ್ರ ಬ್ರಾಹ್ಮಣಗಳನ್ನು ಕಂಡುಹಿಡಿದ ಋಷಿಗಳ ಸಾಮರ್ಥ್ಯವನ್ನು ನಮ್ಮಸಾಮರ್ಥ್ಯಕ್ಕೆ ಹೋಲಿಸುವದೂ ಯುಕ್ತವಲ್ಲ. ಆದ್ದರಿಂದ ಇತಿಹಾಸಪುರಾಣಗಳಿಗೆ ಮೂಲ ವುಂಟು. ಲೋಕಪ್ರಸಿದ್ಧಿಯನ್ನು ಕೂಡ ಸಂಭವವಿರುವಲ್ಲಿ (ಅದು) ನಿರ್ವಿಷಯ ವೆಂದು ನಿಶ್ಚಯಿಸುವದು ಯುಕ್ತವಲ್ಲ.

---

1. ಯೋಗವು ಶ್ರುತವಿರುದ್ಧವಾಗದ ಕಡೆಯಲ್ಲಿ ಪ್ರಮಾಣವೆಂಬುದನ್ನು 'ಸ್ಮೃತಿ' ಎಂಬ ಶಬ್ದವು ಸೂಚಿಸುತ್ತದೆ.

2. ಅಂಗಾಲಿನಿಂದ ಮೊಳಕಾಲವರೆಗೆ ಪೃಥ್ವಿ, ಮೊಳಕಾಲಿಂದ ಹೊಕ್ಕುಳವರೆಗೆ ಅಪ್ಪು, ಹೊಕ್ಕುಳಿನಿಂದ ಕುತ್ತಿಗೆಯುವರೆಗೆ ತೇಜಸ್ಸು, ಕುತ್ತಿಗೆಯಿಂದ ಕೂದಲು ಹುಟ್ಟುವ ಸ್ಥಳದವರೆಗೆ ವಾಯು, ಅಲ್ಲಿಂದ ಬ್ರಹ್ಮರಂಧ್ರದವರೆಗೆ ಆಕಾಶ – ಹೀಗೆ ಪಂಚಭೂತಾತ್ಮಕ ಸಮುದಾಯವನ್ನು ಧಾರಣೆಯಿಂದ ವಶಗೊಳಿಸಿಕೊಂಡು, ಅಣಿಮಾದಿಯೋಗವುಂಟಾಗಲು, ಯೋಗಾಭಿವ್ಯಕ್ತವಾದ ತೇಜೋಮಯಶರೀರವನ್ನು ಪಡೆದವನಿಗೆ ಮುಪ್ಪುಮುಂತಾದವುಗಳ ಸಂಬಂಧವಿಲ್ಲ ಎಂದು ಶ್ರುತಿಯ ಅರ್ಥ. ನ್ಯಾ. ನಿ ವ್ಯಾಖ್ಯಾನ.

## ಉಪಸಂಹಾರ: ದೇವತಾದಿಗಳಿಗೆ ವಿದ್ಯೆಯಲ್ಲಿ ಅಧಿಕಾರವುಂಟು

(ಭಾಷ್ಯ)

೩೦೫. ತಸ್ಮಾತ್ ಉಪಪನ್ನಃ ಮನ್ತ್ರಾದಿಭ್ಯೋ ದೇವಾದೀನಾಂ ವಿಗ್ರಹವತ್ತ್ವಾದ್ಯವಗಮಃ । ತತಶ್ಚ ಅರ್ಥಿತ್ವಾದಿಸಂಭವಾತ್ ಉಪಪನ್ನೋ ದೇವಾದೀನಾಮಪಿ ಬ್ರಹ್ಮವಿದ್ಯಾಯಾಮ್ ಅಧಿಕಾರಃ । ಕ್ರಮಮುಕ್ತಿದರ್ಶನಾನ್ಯಪಿ ಏವಮೇವೋಪಪದ್ಯನ್ತೇ ॥

(ಭಾಷ್ಯಾರ್ಥ)

ಆದ್ದರಿಂದ ಮಂತ್ರಾದಿ(ಪ್ರಮಾಣ)ಗಳಿಂದ ದೇವಾದಿಗಳಿಗೆ ವಿಗ್ರಹವತ್ತ್ವವೇ ಮುಂತಾದದ್ದುಂಟೆಂದು ನಿಶ್ಚಯಿಸುವದು ಯುಕ್ತವಾಗಿದೆ ಮತ್ತು ಅದರಿಂದ ಅರ್ಥಿತ್ವವೇ ಮುಂತಾದವುಗಳು (ಅವರಿಗೆ) ಇರಬಹುದಾಗುವದರಿಂದ ದೇವಾದಿಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟು (ಎಂದು ನಿಶ್ಚಯಿಸಬೇಕು). ಕ್ರಮಮುಕ್ತಿಯನ್ನು ಹೇಳುವ ಶ್ರುತಿಗಳೂ ಹೀಗಾದರೇ ಯುಕ್ತವಾಗುತ್ತವೆ[1].

## ೯. ಅಪಶೂದ್ರಾಧಿಕರಣ (೩೪-೩೮)

(ಶೂದ್ರರಿಗೆ ವೇದಮೂಲಕವಾಗಿ ಜ್ಞಾನಾಧಿಕಾರವಿಲ್ಲ)

**ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ ॥೩೪॥**

೩೪. ಆ ಅನಾದರಶ್ರವಣದಿಂದ ಇವನಿಗೆ ಶೋಕ(ವುಂಟಾಯಿತು). ಏಕೆಂದರೆ ತದಾದ್ರವಣದಿಂದ ಸೂಚಿತವಾಗುತ್ತದೆ.

## ಪೂರ್ವಪಕ್ಷ: ಶೂದ್ರನಿಗೂ ವಿದ್ಯೆಯಲ್ಲಿ ಅಧಿಕಾರವುಂಟು

(ಭಾಷ್ಯ)

೩೦೬. ಯಥಾ ಮನುಷ್ಯಾಧಿಕಾರನಿಯಮಮ್ ಅಪೋಹ್ಯ ದೇವಾದೀನಾಮಪಿ ವಿದ್ಯಾಸು ಅಧಿಕಾರ ಉಕ್ತಃ, ತಥೈವ ದ್ವಿಜಾತ್ಯಧಿಕಾರನಿಯಮಾ

1. ಬ್ರಹ್ಮಲೋಕಾದಿಗಳನ್ನು ಪಡೆದವರಿಗೆ ಜ್ಞಾನದಿಂದ ಮುಕ್ತಿಯಾಗುವದೆಂದು ಹೇಳಿರುವದರಿಂದಲೂ ದೇವಾದಿಗಳಿಗೆ ಅಧಿಕಾರವುಂಟೆಂದಾಗುತ್ತದೆ ಎಂದು ಭಾವ.

ಪವಾದೇನ ಶೂದ್ರಸ್ಯಾಪಿ ಅಧಿಕಾರಃ ಸ್ಯಾತ್ ಇತ್ಯೇತಾಮ್ ಆಶಙ್ಕಾಂ ನಿವರ್ತಯಿತುಮ್ ಇದಮಧಿಕರಣಮ್ ಆರಭ್ಯತೇ । ತತ್ರ ಶೂದ್ರಸ್ಯಾಪಿ ಅಧಿಕಾರಃ ಸ್ಯಾತ್ ಇತಿ ತಾವತ್ ಪ್ರಾಪ್ತಮ್ । ಅರ್ಥಿತ್ವಸಾಮರ್ಥ್ಯಯೋಃ ಸಂಭವಾತ್ । "ತಸ್ಮಾಚ್ಛೂದ್ರೋ ಯಜ್ಞೇಽನವಕ್ಲೃಪ್ತಃ" (ತೈ. ಸಂ. ೭-೧-೧-೬) ಇತಿವತ್ "ಶೂದ್ರೋ ವಿದ್ಯಾಯಾಮನವಕ್ಲೃಪ್ತಃ" ಇತಿ ಚ ನಿಷೇಧಾಶ್ರವಣಾತ್ । ಯಚ್ಚ ಕರ್ಮಸು ಅನಧಿಕಾರಕಾರಣಂ ಶೂದ್ರಸ್ಯ ಅನಗ್ನಿತ್ವಮ್ ನ ತದ್ವಿದ್ಯಾಸು ಅಧಿಕಾರಸ್ಯ ಅಪವಾದಕಂ ಲಿಙ್ಗಮ್ । ನ ಹಿ ಆಹವನೀಯಾದಿರಹಿತೇನ ವಿದ್ಯಾ ವೇದಿತುಂ ನ ಶಕ್ಯತೇ । ಭವತಿ ಚ ಲಿಙ್ಗಂ ಶೂದ್ರಾಧಿಕಾರಸ್ಯ ಉಪೋದ್ಬಲಕಮ್ । ಸಂವರ್ಗವಿದ್ಯಾಯಾಂ ಹಿ ಜಾನಶ್ರುತಿಂ ಪೌತ್ರಾಯಣಂ ಶುಶ್ರೂಷುಂ ಶೂದ್ರಶಬ್ದೇನ ಪರಾಮೃಶತಿ– "ಅಹ ಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತು" (ಛಾಂ. ೪-೨-೩) ಇತಿ । ವಿದುರಪ್ರಭೃತಯಶ್ಚ ಶೂದ್ರಯೋನಿಪ್ರಭವಾ ಅಪಿ ವಿಶಿಷ್ಟವಿಜ್ಞಾನಸಂಪನ್ನಾಃ ಸ್ಮರ್ಯನ್ತೇ । ತಸ್ಮಾತ್ ಅಧಿಕ್ರಿಯತೇ ಶೂದ್ರೋ ವಿದ್ಯಾಸು ಇತಿ ॥

(ಭಾಷ್ಯಾರ್ಥ)

ಹೇಗೆ ಮನುಷ್ಯರಿಗೇ ಅಧಿಕಾರವೆಂಬ ನಿಯಮವನ್ನು ಅಲ್ಲಗಳೆದು ದೇವಾದಿಗಳಿಗೂ ವಿದ್ಯೆಗಳಲ್ಲಿ[1] ಅಧಿಕಾರವನ್ನು ಹೇಳಲಾಯಿತೋ ಹಾಗೆಯೇ ದ್ವಿಜಾತಿಗಳಿಗೇ ಅಧಿಕಾರವೆಂಬ ನಿಯಮವನ್ನು ಅಲ್ಲಗಳೆದು ಶೂದ್ರನಿಗೂ ಅಧಿಕಾರವಿರಬಹುದಲ್ಲ !– ಎಂಬೀ ಆಶಂಕೆಯನ್ನು ಕಳೆಯುವದಕ್ಕೆ ಈ ಅಧಿಕರಣವನ್ನು ಆರಂಭಿಸಲಾಗಿದೆ.

ಇಲ್ಲಿ ಶೂದ್ರನಿಗೂ ಅಧಿಕಾರವಿರಬಹುದೆಂದು ಮೊದಲು (ಪೂರ್ವಪಕ್ಷವು) ಬಂದೊದಗುತ್ತದೆ. ಏಕೆಂದರೆ ಅರ್ಥಿತ್ವಸಾಮರ್ಥ್ಯಗಳು[2] (ಅವನಿಗೂ) ಇರಬಹುದಾಗಿರುತ್ತದೆ. "ಆದ್ದರಿಂದ ಶೂದ್ರನು ಯಜ್ಞಕ್ಕೆ ತಕ್ಕವನಲ್ಲ"

1. ಹಿಂದೆ ೧-೩-೩೩ ಭಾ. ಭಾ. ೩೦ರಲ್ಲಿ ದೇವತಾದಿಗಳು ಮಧ್ವಾದಿವಿದ್ಯೆಗಳಲ್ಲಿ ಅನಧಿಕಾರಿಗಳಾದರೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರಿಗಳಾಗಲಿ ಎಂದದ್ದು ಪ್ರೌಢಿವಾದ ; ಸಗುಣವಿದ್ಯೆಗಳಲ್ಲಿಯೂ ಅಧಿಕಾರವಿಲ್ಲವೆಂಬುದರಲ್ಲಿ ತಾತ್ಪರ್ಯವಿಲ್ಲ ಎಂದು 'ವಿದ್ಯಾಸು' ಎಂಬ ಬಹುವಚನದಿಂದ ಗೊತ್ತಾಗುತ್ತದೆ. ಆದಿತ್ಯಾದಿಗಳಿಗೆ ಆದಿತ್ಯಾದಿಸಂಬಂಧವಿರುವ ಉಪಾಸನೆಗಳಲ್ಲಿ ಅಧಿಕಾರವಿಲ್ಲದಿದ್ದರೂ ಅಂಥ ಸಂಬಂಧವಿಲ್ಲದ ಸಗುಣವಿದ್ಯೆಗಳಲ್ಲಿ ಅಧಿಕಾರವಿರಬಹುದು ಎಂದು ಭಾವವಿರಬಹುದು.

2. ಶೂದ್ರನೂ ಮೋಕ್ಷಕಾರಣವಾದ ಜ್ಞಾನವನ್ನು ಬಯಸುತ್ತಾನೆ ; ವಿಚಾರವನ್ನು ಮಾಡುವದಕ್ಕೆ ಅವನಿಗೂ ಸಾಮರ್ಥ್ಯವಿರಬಹುದು.

(ತೈ. ಸಂ. ೭–೧–೧–೬) ಎಂಬಂತೆ "ಶೂದ್ರನು ವಿದ್ಯೆಗೆ ತಕ್ಕವನಲ್ಲ" ಎಂಬ ನಿಷೇಧವು ಶ್ರುತಿಯಲ್ಲಿಲ್ಲವಾದ್ದರಿಂದ (ಅಧಿಕಾರವಿರಬಹುದು). ಇನ್ನು ಶೂದ್ರನಿಗೆ ಕರ್ಮಗಳಲ್ಲಿ ಅಧಿಕಾರವಿಲ್ಲವೆಂಬುದಕ್ಕೆ ಅಗ್ನಿಯಿಲ್ಲವೆಂಬ ಕಾರಣ ವಿದೆಯಲ್ಲ[1], ಅದು ವಿದ್ಯೆಗಳಲ್ಲಿ ಅಧಿಕಾರವನ್ನು ಅಲ್ಲಗಳೆಯುವಂಥ ಲಿಂಗವಲ್ಲ. ಏಕೆಂದರೆ ಆಹವನೀಯವೇ ಮುಂತಾದ (ಅಗ್ನಿ)ಯಿಲ್ಲದವನಿಗೆ ವಿದ್ಯೆಯನ್ನು ಅರಿತುಕೊಳ್ಳುವದು ಆಗಲಾರದೆಂಬುದಿಲ್ಲ.

ಇದಲ್ಲದೆ ಶೂದ್ರನಿಗೆ ಅಧಿಕಾರ(ವುಂಟೆಂಬುದಕ್ಕೆ) ಉಪೋದ್ಬಲಕವಾದ ಲಿಂಗವೂ (ಶ್ರುತಿಯಲ್ಲಿ) ಇದೆ. ಹೇಗೆಂದರೆ ಸಂವರ್ಗವಿದ್ಯೆಯಲ್ಲಿ ಶ್ರವಣಕ್ಕೆ ಬಂದಿರುವ **ಪೌತ್ರಾಯಣಜಾನಶ್ರುತಿ**ಯನ್ನು (ರೈಕ್ವನು) "ಎಲಾ ಶೂದ್ರ, ಹಾರದೊಡನೆ ಕೂಡಿದ ಧನವು, ಗೋಗಳೊಡನೆ, ನಿನಗೇ ಇರಲಿ" (ಛಾಂ. ೪–೨–೩) ಎಂದು ಶೂದ್ರಶಬ್ದದಿಂದ ಪರಾಮರ್ಶಿಸಿರುತ್ತಾನೆ. **ವಿದುರನೇ** ಮುಂತಾದವರು ಶೂದ್ರಯೋನಿಯಲ್ಲಿ ಹುಟ್ಟಿದವರಾದರೂ ಅಸಾಧಾರಣವಿಜ್ಞಾನದಿಂದೊಡಗೂಡಿದವರಾಗಿದ್ದರೆಂದು ಸ್ಮೃತಿಯಲ್ಲಿದೆ. ಆದ್ದರಿಂದ ಶೂದ್ರನು ವಿದ್ಯೆಗಳಲ್ಲಿ ಅಧಿಕಾರಿಯಾಗಿರುತ್ತಾನೆ.

## ಸಿದ್ಧಾಂತ: ಶೂದ್ರನಿಗೆ ವೈದಿಕವಿದ್ಯೆಯಲ್ಲಿ ಅಧಿಕಾರವಿಲ್ಲ

( ಭಾಷ್ಯ )

೩೦೭. ಏವಂ ಪ್ರಾಪ್ತೇ ಬ್ರೂಮಃ– ನ ಶೂದ್ರಸ್ಯ ಅಧಿಕಾರಃ । ವೇದಾಧ್ಯಯನಾಭಾವಾತ್ । ಅಧೀತವೇದೋ ಹಿ ವಿದಿತವೇದಾರ್ಥೋ ವೇದಾರ್ಥೇಷು ಅಧಿಕ್ರಿಯತೇ । ನ ಚ ಶೂದ್ರಸ್ಯ ವೇದಾಧ್ಯಯನಮ್ ಅಸ್ತಿ । ಉಪನಯನಪೂರ್ವಕತ್ವಾದ್ ವೇದಾಧ್ಯಯನಸ್ಯ । ಉಪನಯನಸ್ಯ ಚ ವರ್ಣತ್ರಯವಿಷಯತ್ವಾತ್ । ಯತ್ತು ಅರ್ಥಿತ್ವಮ್, ನ ತತ್ ಅಸತಿ ಸಾಮರ್ಥ್ಯೇ ಅಧಿಕಾರಕಾರಣಂ ಭವತಿ । ಸಾಮರ್ಥ್ಯಮಪಿ ನ ಲೌಕಿಕಂ ಕೇವಲಮ್ ಅಧಿಕಾರಕಾರಣಂ ಭವತಿ । ಶಾಸ್ತ್ರೀಯೇ ಅರ್ಥೇ ಶಾಸ್ತ್ರೀಯಸ್ಯ ಸಾಮರ್ಥ್ಯಸ್ಯ ಅಪೇಕ್ಷಿತತ್ವಾತ್ । ಶಾಸ್ತ್ರೀಯಸ್ಯ ಚ ಸಾಮರ್ಥ್ಯಸ್ಯ ಅಧ್ಯಯನ ನಿರಾಕರಣೇನ ನಿರಾಕೃತತ್ವಾತ್ । ಯಚ್ಚ ಇದಂ "ಶೂದ್ರೋ ಯಜ್ಞೇಽನವಕ್ಲೃಪ್ತಃ" (ತೈ. ಸಂ. ೭–೧–೧–೬) ಇತಿ, ತತ್ ನ್ಯಾಯಪೂರ್ವಕತ್ವಾತ್ ವಿದ್ಯಾಯಾಮಪಿ ಅನವಕ್ಲೃಪ್ತತ್ವಂ ದ್ಯೋತಯತಿ । ನ್ಯಾಯಸ್ಯ ಸಾಧಾರಣತ್ವಾತ್ ॥

1. ಜೈ. ಸೂ. ೬–೧–೨೬ರ ಭಾಷ್ಯವನ್ನು ನೋಡಿ. ವಸಂತದಲ್ಲಿ ಬ್ರಾಹ್ಮಣನು ಅಗ್ನಿಯನ್ನು ಆಧಾನಮಾಡಬೇಕು. ಗ್ರೀಷ್ಮದಲ್ಲಿ ಕ್ಷತ್ರಿಯನು, ಶರದೃತುವಿನಲ್ಲಿ ವೈಶ್ಯನು ಆಧಾನಮಾಡಬೇಕು– ಎಂದು ವೇದವಿಧಿಯಿದೆ. ಶೂದ್ರನಿಗೆ ಹೀಗೆ ಅಗ್ನಿಯಿಲ್ಲ.

( ಭಾಷ್ಯಾರ್ಥ )

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ; ಶೂದ್ರನಿಗೆ ಅಧಿಕಾರವಿಲ್ಲ; ಏಕೆಂದರೆ (ಅವನಿಗೆ) ವೇದಾಧ್ಯಯನ ವಿಲ್ಲ. ವೇದವನ್ನು ಅಧ್ಯಯನಮಾಡಿ ವೇದಾರ್ಥವನ್ನು ತಿಳಿದುಕೊಂಡವ ನಲ್ಲವೆ, ವೇದಾರ್ಥಗಳಲ್ಲಿ[1] ಅಧಿಕಾರಿಯಾಗುತ್ತಾನೆ? ಶೂದ್ರನಿಗೆ ವೇದಾ ಧ್ಯಯನವೇ ಇಲ್ಲ; ಏಕೆಂದರೆ ವೇದಾಧ್ಯಯನವು ಉಪನಯನಪೂರ್ವಕವಾಗಿ (ಆಗ)ತಕ್ಕದ್ದು, ಉಪನಯನವು ವರ್ಣತ್ರಯದವರ ವಿಷಯವಾಗಿರುತ್ತದೆ[2]. ಇನ್ನು ಅರ್ಥಿತ್ವವಿದೆಯಲ್ಲ, ಅದು ಸಾಮರ್ಥ್ಯವಿಲ್ಲದೆ ಅಧಿಕಾರಕ್ಕೆ ಕಾರಣವಾಗು ವದಿಲ್ಲ; ಸಾಮರ್ಥ್ಯವೂ ಬರಿಯ ಲೌಕಿಕವಾದರೆ[3] ಅಧಿಕಾರಕ್ಕೆ ಕಾರಣ ವಾಗುವದಿಲ್ಲ; ಏಕೆಂದರೆ ಶಾಸ್ತ್ರೀಯವಾದ ವಿಷಯದಲ್ಲಿ ಶಾಸ್ತ್ರೀಯವಾದ ಸಾಮರ್ಥ್ಯವು ಬೇಕಾಗುತ್ತದೆ. ಶಾಸ್ತ್ರೀಯವಾದ ಸಾಮರ್ಥ್ಯವನ್ನು ಅಧ್ಯಯನ ವನ್ನು ನಿರಾಕರಣೆಮಾಡಿ ನಿರಾಕರಿಸಿದ್ದಾಗಿದೆ. ಇನ್ನು "ಶೂದ್ರನು ಯಜ್ಞಕ್ಕೆ ತಕ್ಕವನಲ್ಲ" (ತೈ. ಸಂ. ೭-೧-೧-೬) ಎಂಬುದಿದೆಯಲ್ಲ, ಅದು ನ್ಯಾಯ ಪೂರ್ವಕವಾಗಿರುವದರಿಂದ[4] (ಶೂದ್ರನು) ವಿದ್ಯೆಗೂ ತಕ್ಕವನಲ್ಲವೆಂಬುದನ್ನೇ ತೋರಿಸುತ್ತದೆ ; ಏಕೆಂದರೆ ನ್ಯಾಯವು (ಎರಡಕ್ಕೂ) ಸಮಾನವಾಗಿರುತ್ತದೆ.

## ಸಂವರ್ಗವಿದ್ಯೆಯಲ್ಲಿ ಶೂದ್ರನ ವಿಚಾರವಿಲ್ಲ

(ಭಾಷ್ಯ)

೨೦೮. ಯತ್ಪುನಃ ಸಂವರ್ಗವಿದ್ಯಾಯಾಂ ಶೂದ್ರಶಬ್ದಶ್ರವಣಂ ಲಿಙ್ಗಂ ಮನ್ಯಸೇ, ನ ತಲ್ಲಿಙ್ಗಮ್ । ನ್ಯಾಯಾಭಾವಾತ್ । ನ್ಯಾಯೋಕ್ತೇ ಹಿ ಲಿಙ್ಗ

---

1. ಕರ್ಮ, ಉಪಾಸನೆ, ಜ್ಞಾನ- ಇವುಗಳಲ್ಲಿ.

2. ಬ್ರಾಹ್ಮಣನಿಗೆ ವಸಂತದಲ್ಲಿ, ಕ್ಷತ್ರಿಯನಿಗೆ ಗ್ರೀಷ್ಮದಲ್ಲಿ, ವೈಶ್ಯನಿಗೆ ಶರದೃತು ವಿನಲ್ಲಿ ಉಪನಯನಮಾಡಿಸಬೇಕು- ಎಂದು ಮೂರು ವರ್ಣದವರಿಗೆ ಮಾತ್ರ ಉಪ ನಯನವಿದೆ.

3. ಶಾಸ್ತ್ರವಚನವಿಲ್ಲದಿದ್ದರೂ ತಾನೇ ಉಪನಯನವನ್ನು ಮಾಡಿಕೊಳ್ಳಲಿ, ತಾನೇ ಅಧ್ಯಯನವನ್ನು ಮಾಡಲಿ- ಎಂದು ಯಾರಾದರೂ ಶಂಕಿಸಬಹುದು. ಆದರೆ ಅದು ಲೌಕಿಕಸಾಮರ್ಥ್ಯವಾದೀತೇ ಹೊರತು ಶಾಸ್ತ್ರೀಯಸಾಮರ್ಥ್ಯವಾಗದು. ಜೈ. ಸೂ. ೬-೧-೩೪, ೩೬, ३೭- ಇವುಗಳ ಭಾಷ್ಯವನ್ನು ನೋಡಿ.

4. ಉಪನಯನವಿಲ್ಲದ್ದರಿಂದ ಅಧ್ಯಯನವಿಲ್ಲ; ಅಧ್ಯಯನವಿಲ್ಲದ್ದರಿಂದ ಯಜ್ಞ ವಿಲ್ಲ ಎಂಬುದು ನ್ಯಾಯವು. ಈ ವಾಕ್ಯದಲ್ಲಿ ಬ್ರಾಹ್ಮಣಾದಿವರ್ಣತ್ರಯದವರನ್ನು ಸೃಷ್ಟಿಮಾಡಿದ ಬಳಿಕ ಪ್ರಜಾಪತಿಯು ಆಯಾ ದೇವತೆಗಳನ್ನು ಸೃಷ್ಟಿಮಾಡಿದನೆಂದೂ ಆದರೆ ಶೂದ್ರನನ್ನು ಸೃಷ್ಟಿಸಿದ ಬಳಿಕ ದೇವತೆಗಳನ್ನು ಸೃಷ್ಟಿಸಲಿಲ್ಲವಾದ್ದರಿಂದ ಶೂದ್ರನು ಯಜ್ಞಕ್ಕೆ ಅರ್ಹನಲ್ಲವೆಂದೂ ಹೇಳಿದೆ.

ದರ್ಶನಂ ದ್ಯೋತಕಂ ಭವತಿ । ನ ಚಾತ್ರ ನ್ಯಾಯೋಽಸ್ತಿ । ಕಾಮಂ ಚ ಅಯಂ ಶೂದ್ರಶಬ್ದಃ ಸಂವರ್ಗವಿದ್ಯಾಯಾಮೇವ ಏಕಸ್ಯಾಂ ಶೂದ್ರಮ್ ಅಧಿಕುರ್ಯಾತ್ ತದ್ವಿಷಯತ್ವಾತ್, ನ ಸರ್ವಾಸು ವಿದ್ಯಾಸು । ಅರ್ಥವಾದಸ್ಥತ್ವಾತ್ತು ನ ಕ್ವಚಿದಪಿ ಅಯಂ ಶೂದ್ರಮ್ ಅಧಿಕರ್ತುಮ್ ಉತ್ಸಹತೇ | ಶಕ್ಯತೇ ಚ ಅಯಂ ಶೂದ್ರಶಬ್ದೋಽಧಿಕೃತವಿಷಯೋ ಯೋಜಯಿತುಮ್ | ಕಥಮಿತಿ ? ಉಚ್ಯತೇ | "ಕಮ್ವರ ಏನಮೇತತ್ಸನ್ತಂ ಸಯುಗ್ವಾನಮಿವ ರೈಕ್ವಮಾತ್ಥ" (ಛಾಂ. ೪-೧-೩) ಇತ್ಯಸ್ಮಾತ್ ಹಂಸವಾಕ್ಯಾತ್ ಆತ್ಮನೋಽನಾದರಂ ಶ್ರುತವತೋ ಜಾನಶ್ರುತೇಃ ಪೌತ್ರಾಯಣಸ್ಯ ಶುಗುತ್ಪೇದೇ | ತಾಮ್ ಋಷಿಃ ರೈಕ್ವಃ ಶೂದ್ರಶಬ್ದೇನ ಸೂಚಯಾಂಬಭೂವ ಆತ್ಮನಃ ಪರೋಕ್ಷಜ್ಞತಾಖ್ಯಾಪನಾಯ ಇತಿ ಗಮ್ಯತೇ | ಜಾತಿಶೂದ್ರಸ್ಯ ಅನಧಿಕಾರಾತ್ । ಕಥಂ ಪುನಃ ಶೂದ್ರಶಬ್ದೇನ ಶುಕ್ ಉತ್ಪನ್ನಾ ಸೂಚ್ಯತ ಇತಿ ? ಉಚ್ಯತೇ । ತದಾದ್ರವಣಾತ್ । ಶುಚಮ್ ಅಭಿದುದ್ರಾವ, ಶುಚಾ ವಾ ಅಭಿದುದ್ರುವೇ ಶುಚಾ ವಾ ರೈಕ್ವಮ್ ಅಭಿದುದ್ರಾವೇತಿ ಶೂದ್ರಃ । ಅವಯವಾರ್ಥಸಂಭವಾತ್, ರೂಢ್ಯರ್ಥಸ್ಯ ಚ ಅಸಂಭವಾತ್ । ದೃಶ್ಯತೇ ಚ ಅಯಮರ್ಥಃ ಅಸ್ಯಾಮ್ ಆಖ್ಯಾಯಿಕಾಯಾಮ್ ॥

(ಭಾಷ್ಯಾರ್ಥ)

ಇನ್ನು ಸಂವರ್ಗವಿದ್ಯೆಯಲ್ಲಿ ಶೂದ್ರಶಬ್ದವು ಶ್ರುತಿಯಲ್ಲಿದೆಯಲ್ಲ, (ಅದು ಈ ವಿಷಯಕ್ಕೆ) ಲಿಂಗವೆಂದು ಎಣಿಸಿರುವೆಯಷ್ಟೆ, ಅದು ನಿಜವಾಗಿ ಲಿಂಗವಲ್ಲ; ಏಕೆಂದರೆ (ಅದಕ್ಕೆ) ನ್ಯಾಯವಿಲ್ಲ. ನ್ಯಾಯಪೂರ್ವಕವಾಗಿ ಹೇಳಿದ (ವಿಷಯ)ದಲ್ಲಲ್ಲವೆ, ಲಿಂಗವನ್ನು (ವೇದದಲ್ಲಿ) ಕಂಡದ್ದು ದ್ಯೋತಕವಾಗುವದು ? ಆದರೆ ಇಲ್ಲಿ ನ್ಯಾಯವಿಲ್ಲ[1]. ಈ ಶೂದ್ರಶಬ್ದವು ಸಂವರ್ಗವಿದ್ಯೆಯಲ್ಲೊಂದರಲ್ಲಿ ಶೂದ್ರನಿಗೆ ಅಧಿಕಾರವನ್ನು ಕೊಟ್ಟರೂ ಕೊಡಬಹುದು; ಏಕೆಂದರೆ (ಅದು) ಅವನ ವಿಷಯದ್ದಾಗಿದೆ. (ಆದರೆ) ಎಲ್ಲಾ ವಿದ್ಯೆಗಳಲ್ಲಿಯೂ (ಅಧಿಕಾರವನ್ನು ಕೊಡ)ಲಾರದು. ಆದರೆ (ಈ ಶಬ್ದವು) ಅರ್ಥವಾದದಲ್ಲಿರುವದರಿಂದ[2] ಯಾವ (ವಿದ್ಯೆ)ಯಲ್ಲಿಯೂ ಈ ಶಬ್ದವು (ಶೂದ್ರನಿಗೆ ಅಧಿಕಾರವನ್ನು) ಕೊಡಲಾರದು. ಇದಲ್ಲದೆ ಈ ಶೂದ್ರಶಬ್ದವನ್ನು ಅಧಿಕೃತನಾದವನ ವಿಷಯದಲ್ಲಿಯೇ ಹೊಂದಿಸುವದಕ್ಕೂ ಬರುತ್ತದೆ. ಹೇಗೆ ? ಎಂದರೆ ಹೇಳುವೆವು: "ಎಲಾ, ಇವನು ಯಾವನಾಗಿರುವನೆಂದು ಬಂಡಿಯೊಡನಿರುವ ರೈಕ್ವನಂತೆ (ಇವನನ್ನು ಎಣಿಸಿ) ಈ (ಮಾತ)ನ್ನಾಡುತ್ತಿರುವೆ ?"

1. ಶೂದ್ರನಿಗೇ ಹೇಳಿದ್ದು ಈ ವಿದ್ಯೆ ಎಂಬುದಕ್ಕೆ ಯಾವ ಯುಕ್ತಿಯೂ ಇಲ್ಲ.

2. ಅರ್ಥವಾದವು ಅನ್ಯಪರವಾದರೂ ತನ್ನ ಸ್ವತಂತ್ರವಾದ ಅವಾಂತರಾರ್ಥವನ್ನೂ ಹೇಳಬಹುದೆಂದು ಹಿಂದೆ ಭಾ. ಭಾ. ೩೦೩ರಲ್ಲಿ ಹೇಳಿದೆಯಾದರೂ ಇಲ್ಲಿ ಯಾವ ಅರ್ಥವನ್ನೂ ಹೇಳುವಂತಿಲ್ಲವೆಂದು ಭಾವ.

(ಛಾಂ. ೪–೧–೩) ಎಂಬೀ ಹಂಸವಚನದಿಂದ[1] ತನ್ನ ಅನಾದಾರವನ್ನು ಕೇಳಿದ ಜಾನಶ್ರುತಿ ಪೌತ್ರಾಯಣನಿಗೆ ಶೋಕವು ಉಂಟಾಯಿತು. ಅದನ್ನು ಋಷಿಯಾದ ರೈಕ್ವನು ತಾನು ಪರೋಕ್ಷಜ್ಞಾನಿಯೆಂದು ತೋರಿಸುವದಕ್ಕಾಗಿ ಈ ಶೂದ್ರಶಬ್ದದಿಂದ ಸೂಚಿಸಿದನು ಎಂದು ನಿಶ್ಚಯವಾಗುತ್ತದೆ ; ಏಕೆಂದರೆ ಜಾತಿಶೂದ್ರನ ಪ್ರಕರಣವಿದಲ್ಲ[2]. ಶೋಕವುಂಟಾಯಿತೆಂಬುದನ್ನು ಶೂದ್ರ ಶಬ್ದದಿಂದ ಹೇಗೆ ಸೂಚಿಸಿದೆ ?– ಎಂದರೆ ಹೇಳುವೆವು. (ತದಾದ್ರವಣಾತ್) ತದಾದ್ರವಣದಿಂದ. (ಶುಚಮ್ ಅಭಿದುದ್ರಾವ) ಶೋಕವನ್ನು ಓಡಿಬಂದು ಸೇರಿದನು, (ಶುಚಾ ವಾ ಅಭಿದುದ್ರುವೇ) ಅಥವಾ ಶೋಕದಿಂದ ಓಡಿದನು. (ಶುಚಾ ವಾ ರೈಕ್ವಮ್ ಅಭಿದುದ್ರಾವ) ಅಥವಾ ಶೋಕದಿಂದ ರೈಕ್ವನನ್ನು ಬಳಿಸಾರಿದನು ; ಆದ್ದರಿಂದ(ಇವನು) ಶೂದ್ರನು (ಎಂದು ಸೂಚಿಸುತ್ತದೆ ಎನ್ನಬೇಕು). ಏಕೆಂದರೆ (ಈ ಶಬ್ದದ) ಅವಯವಾರ್ಥವು (ಇಲ್ಲಿ) ಹೊಂದುತ್ತದೆ, ಮತ್ತು ರೂಢ್ಯರ್ಥವು ಹೊಂದುವದಿಲ್ಲ[3]. ಈ ವಿಷಯವು ಈ ಕಥೆಯಲ್ಲಿ ಕಂಡುಬರುತ್ತಲೂ ಇದೆ[4].

## ಜಾನಶ್ರುತಿಯು ಕ್ಷತ್ರಿಯನೆಂಬುದಕ್ಕೆ ಗುರುತು

**ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಙ್ಗಾತ್ ॥ ೩೫ ॥**

೩೫. ಮುಂದೆ ಚೈತ್ರರಥನೊಡನೆ (ಹೇಳಿರುವ) ಲಿಂಗದಿಂದ ಕ್ಷತ್ರಿಯನೆಂದು ನಿಶ್ಚಯವಾಗುವದರಿಂದಲೂ (ಹೀಗೆ).

---

1. ಹಂಸರೂಪರಾದ ಋಷಿಗಳು ಜಾನಶ್ರುತಿಯು ಬಹುದಾನವನ್ನು ಮಾಡುತ್ತಿದ್ದದ್ದನ್ನು ಕಂಡು ಅವನ ಮೇಲಿನ ಕರುಣೆಯಿಂದ ಅರಮನೆಯ ಉಪ್ಪರಿಗೆಯಮೇಲೆ ಹಾರಿಹೋಗುತ್ತಿರುವಲ್ಲಿ ಒಂದು ಹಂಸವು ಇನ್ನೊಂದನ್ನು ಕುರಿತು "ಎಲಾ, ಜಾನಶ್ರುತಿಯ ಅನ್ನದಾನಮಹಿಮೆಯ ಪ್ರಭಾವದ ಜ್ಯೋತಿಯ ಕಡೆಗೆ ಕಾಲುನೀಡಬೇಡ, ಸುಟ್ಟೀತು" ಎನ್ನಲು ಆ ಇನ್ನೊಂದು ಹಂಸವು ನುಡಿದ ಮರುಮಾತಿದು.

2. ಜಾನುಶ್ರುತಿಯು ಕ್ಷತ್ರಿಯನೆಂಬುದಕ್ಕೆ ಇಲ್ಲಿ ಗುರುತುಗಳಿವೆ ; ಆದ್ದರಿಂದ ಜಾತಿಶೂದ್ರನ ಪ್ರಕರಣವಲ್ಲ ಎಂದರ್ಥ. 'ಜಾತಿಶೂದ್ರನಿಗೆ ಅಧಿಕಾರವಿಲ್ಲ' ಎಂದು ಈ ವಾಕ್ಯವನ್ನು ಕನ್ನಡಿಸುವದು ಸರಿಯಲ್ಲ ; ಏಕೆಂದರೆ ಶೂದ್ರನಿಗೆ ಅಧಿಕಾರವಿದೆಯೆ ಇಲ್ಲವೆ ?– ಎಂಬುದೇ ಇಲ್ಲಿ ವಿವಾದವಿಷಯ.

3. ರೂಢ್ಯರ್ಥವೆಂದರೆ ಜಾನಶ್ರುತಿಯು ಶೂದ್ರನೆಂಬುದು ಜಾನಶ್ರುತಿಯ ವರ್ಣನೆಗೆ ಹೊಂದುವದಿಲ್ಲ. ಅವಯವಾರ್ಥವು ಎಂದರೆ ಜಾನಶ್ರುತಿಗೆ ಶೋಕವಾಯಿತೆಂಬುದು.

4. ಈ ವಿಷಯವು ಎಂದರೆ ಜಾನಶ್ರುತಿಯು ಶೂದ್ರನಾಗಿರಲಾರನು, ಅವನಿಗೆ ಶೋಕವಾದ್ದರಿಂದಲೇ ಶೂದ್ರನೆಂದು ಕರೆದಿರಬೇಕು ಎನ್ನುವದು.

( ಭಾಷ್ಯ )

೩೦೯. ಇತಶ್ಚ ನ ಜಾತಿಶೂದ್ರೋ ಜಾನಶ್ರುತಿಃ । ಯತ್ಕಾರಣಂ ಪ್ರಕರಣನಿರೂಪಣೇನ ಕ್ಷತ್ರಿಯತ್ವಮ್ ಅಸ್ಯ ಉತ್ತರತ್ರ ಚೈತ್ರರಥೇನ ಅಭಿಪ್ರತಾರಿಣಾ ಕ್ಷತ್ರಿಯೇಣ ಸಮಭಿವ್ಯಾಹಾರಾತ್ ಲಿಙ್ಗಾತ್ ಗಮ್ಯತೇ। ಉತ್ತರತ್ರ ಹಿ ಸಂವರ್ಗವಿದ್ಯಾವಾಕ್ಯಶೇಷೇ ಚೈತ್ರರಥಿಃ ಅಭಿಪ್ರತಾರೀ ಕ್ಷತ್ರಿಯಃ ಸಂಕೀರ್ತ್ಯತೇ– "ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾಕ್ಷಸೇನಿಂ ಪರಿವಿಷ್ಯಮಾಣೌ ಬ್ರಹ್ಮಚಾರೀ ಬಿಭಿಕ್ಷೇ" ( ಛಾಂ. ೪-೩-೫ ) ಇತಿ । ಚೈತ್ರರಥಿತ್ವಂ ಚಾಭಿಪ್ರತಾರಿಣಃ ಕಾಪೇಯಯೋಗಾದವಗನ್ತವ್ಯಮ್। ಕಾಪೇಯಯೋಗೋ ಹಿ ಚಿತ್ರರಥಸ್ಯ ಅವಗತಃ "ಏತೇನ ವೈ ಚಿತ್ರರಥಂ ಕಾಪೇಯಾ ಅಯಾಜಯನ್" ( ತಾಂ. ಬ್ರಾ. ೨೦-೧೨-೫.) ಸಮಾನಾನ್ವಯಾನಾಂ ಚ ಪ್ರಾಯೇಣ ಸಮಾನಾನ್ವಯಾ ಯಾಜಕಾ ಭವನ್ತಿ । "ತಸ್ಮಾಚ್ಚೈತ್ರರಥಿರ್ನಾಮೈಕಃ ಕ್ಷತ್ರಪತಿರಜಾಯತ" (ತಾಂ. ಬ್ರಾ. ೨೦-೧೨-೧೫ ?) ಇತಿ ಚ ಕ್ಷತ್ರಪತಿತ್ವಾವಗಮಾತ್ ಕ್ಷತ್ರಿಯತ್ವಮಸ್ಯ ಅವಗನ್ತವ್ಯಮ್। ತೇನ ಕ್ಷತ್ರಿಯೇಣ ಅಭಿಪ್ರತಾರಿಣಾ ಸಹ ಸಮಾನಾಯಾಂ ವಿದ್ಯಾಯಾಂ ಸಂಕೀರ್ತನಂ ಜಾನಶ್ರುತೇರಪಿ ಕ್ಷತ್ರಿಯತ್ವಂ ಸೂಚಯತಿ । ಸಮಾನಾನಾಮೇವ ಹಿ ಪ್ರಾಯೇಣ ಸಮಭಿವ್ಯಾಹಾರಾ ಭವನ್ತಿ । ಕ್ಷತ್ತೃಪ್ರೇಷಣಾದ್ಯೈಶ್ವರ್ಯಯೋಗಾಚ್ಚ ಜಾನಶ್ರುತೇಃ ಕ್ಷತ್ರಿಯತ್ವಾವಗತಿಃ । ಅತಃ ನ ಶೂದ್ರಸ್ಯ ಅಧಿಕಾರಃ ॥

(ಭಾಷ್ಯಾರ್ಥ)

ಈ ಕಾರಣದಿಂದಲೂ ಜಾನಶ್ರುತಿಯು ಜಾತಿಶೂದ್ರನಲ್ಲ. ಯಾವ ಕಾರಣದಿಂದ ಎಂದರೆ (ಈ) ಪ್ರಕರಣವನ್ನು ಪರೀಕ್ಷಿಸುವದರಿಂದ ಇವನು ಕ್ಷತ್ರಿಯನೆಂಬುದು ಮುಂದೆ ಕ್ಷತ್ರಿಯನಾದ ಚೈತ್ರರಥನೊಡನೆ, ಎಂದರೆ ಅಭಿಪ್ರತಾರಿಯೊಡನೆ ಜೊತೆಯಲ್ಲಿ ಹೇಳಿರುವ ಲಿಂಗದಿಂದ[1] ನಿಶ್ಚಯವಾಗುತ್ತದೆ. ಮುಂದೆ ಸಂವರ್ಗವಿದ್ಯೆಯ ವಾಕ್ಯಶೇಷದಲ್ಲಿ "ಆ ಬಳಿಕ ಶೌನಕ ಕಾಪೇಯನನ್ನೂ ಅಭಿಪ್ರತಾರಿ ಕಾಕ್ಷಸೇನಿಯನ್ನೂ (ಅಡಿಗೆಯವನು ಅವರಿಗೆ) ಬಡಿಸುತ್ತಿದ್ದಾಗ ಬ್ರಹ್ಮಚಾರಿಯು ಭಿಕ್ಷೆಬೇಡಿದನು" (ಛಾಂ. ೪-೩-೫) ಎಂದು ಅಭಿಪ್ರತಾರಿ ಎಂಬ ಕ್ಷತ್ರಿಯನಾದ ಚೈತ್ರರಥಿಯನ್ನು[2] ಹೇಳಿರುತ್ತದೆ. ಅಭಿಪ್ರತಾರಿಯು ಚೈತ್ರರಥಿ ಎಂಬುದನ್ನು ಕಾಪೇಯನ ಸಂಬಂಧದಿಂದ ನಿಶ್ಚ

1. ಅಭಿಪ್ರತಾರಿಯೊಡನೆ ಇವನನ್ನು ಹೇಳಿದೆ ಎಂದು ಅಕ್ಷರಾರ್ಥವನ್ನು ತೆಗೆದುಕೊಳ್ಳಬಾರದು. ಮುಂದೆ ಇದು ಸ್ಪಷ್ಟವಾಗುವದು.

2. ಸೂತ್ರದಲ್ಲಿರುವ ಚೈತ್ರರಥನೆಂಬ ಮಾತು ಚೈತ್ರರಥಿ ಎಂಬದರ ಬದಲಾಗಿ ಬಂದಿರುತ್ತದೆ.

ಯಿಸಬೇಕಾಗಿದೆ. "ಈ (ಯಾಗದಿಂದ) ಚಿತ್ರರಥನನ್ನು ಕಾಪೇಯರು ಯಾಜನಮಾಡಿಸಿದರು" (ತಾಂ. ಬ್ರಾ. ೨೦-೧೨-೫) ಎಂಬಲ್ಲಿ ಚಿತ್ರರಥನಿಗೆ ಕಾಪೇಯಸಂಬಂಧವು ನಿಶ್ಚಯವಾಗಿರುತ್ತದೆ[1]. ಅದೇ ವಂಶದವರಿಗೆ ಬಲುಮಟ್ಟಿಗೆ ಅದೇ ವಂಶದವರೇ ಯಾಜಕರಾಗಿರುತ್ತಾರೆ[2]. "ಅವನಿಂದ ಚೈತ್ರರಥಿ ಎಂಬ ಒಬ್ಬ ಕ್ಷತ್ರಪತಿಯು ಹುಟ್ಟಿದನು" (ತಾಂ ಬ್ರಾ. ೨೦-೧೨-೫ ?)[3] ಎಂಬಲ್ಲಿ ಕ್ಷತ್ರಪತಿಯೆಂದು ನಿಶ್ಚಯವಾಗುವದರಿಂದಲೂ ಇವನು ಕ್ಷತ್ರಿಯನೆಂದು ಅರಿಯಬೇಕು. ಆ ಕ್ಷತ್ರಿಯನಾದ ಅಭಿಪ್ರತಾರಿಯೊಡನೆ ಅದೇ (ಸಂವರ್ಗ)ವಿದ್ಯೆಯಲ್ಲಿ ಹೇಳಿರುವದು ಜಾನಶ್ರುತಿಯು ಕ್ಷತ್ರಿಯನೆಂಬುದನ್ನು ಸೂಚಿಸುತ್ತದೆ. ಸಮಾನರಾದವರನ್ನೇ ಅಲ್ಲವೆ, ಬಲುಮಟ್ಟಿಗೆ ಒಟ್ಟಿಗೆ ಹೇಳುವ (ವಾಕ್ಯ)ಗಳು ಬರುವವು ?[4] ಕ್ಷತ್ತೃವನ್ನು[5] ಕಳುಹಿಸಿಕೊಟ್ಟದ್ದು ಮುಂತಾದ ಐಶ್ವರ್ಯದ ಸಂಬಂಧದಿಂದಲೂ[6] ಜಾನಶ್ರುತಿಯು ಕ್ಷತ್ರಿಯನೆಂದು ನಿಶ್ಚಯವಾಗುತ್ತದೆ. ಆದ್ದರಿಂದ ಶೂದ್ರನಿಗೆ (ಬ್ರಹ್ಮವಿದ್ಯೆಯಲ್ಲಿ) ಅಧಿಕಾರವಿಲ್ಲ.

---

1. ಚಿತ್ರರಥನಿಗೆ ಕಾಪೇಯರು ಯಾಜಕರೆಂದದ್ದರಿಂದ ಚೈತ್ರರಥಿಗೂ ಕಾಪೇಯರು ಯಾಜಕರಾದರು.

2. ಆದ್ದರಿಂದ ಕಾಪೇಯನೊಡನೆ ಇಲ್ಲಿ ಹೇಳಿದ ಅಭಿಪ್ರತಾರಿಯು ಚೈತ್ರರಥಿಯಾದನು.

3. ಚಿತ್ರರಥನು ಕ್ಷತ್ರಿಯನಾದ್ದರಿಂದ ಅವನ ವಂಶದವನಾದ ಚೈತ್ರರಥಿಯೂ ಕ್ಷತ್ರಿಯನು ಎಂದು ಭಾವ. ಇಲ್ಲಿ ಕೊಟ್ಟಿರುವ ಮೂಲವಾಕ್ಯವು ತಾಂಡ್ಯಬ್ರಾಹ್ಮಣದಲ್ಲಿ "ತಸ್ಮಾತ್ ಚೈತ್ರರಥೀನಾಮೇಕಃ ಕ್ಷತ್ರಪತಿರ್ಜಾಯತೇ" ಎಂದಿದೆ ; ಅದಕಾರಣದಿಂದ ಈಗಲೂ ಚಿತ್ರರಥನ ವಂಶದವರಲ್ಲಿ ಒಬ್ಬ ರಾಜನೇ ಕ್ಷತ್ರಪತಿಯಾಗುತ್ತಾನೆ, ಬಲಾಧಿಪತಿಯಾಗಿರುತ್ತಾನೆ - ಎಂದು ಆ ವಾಕ್ಯಕ್ಕೆ ಭಾಷ್ಯವಿದೆ. ವಾಕ್ಯದ ನಿಜವಾದ ರೂಪವು ಯಾವದೋ, ಭಾಷ್ಯಕಾರರು ಮತ್ತೆ ಯಾವದಾದರೊಂದು ಬೇರೆಯ ಕಡೆಯಿಂದಲೇ ಈ ವಾಕ್ಯವನ್ನು ಉದಾಹರಿಸಿರುತ್ತಾರೋ ತಿಳಿಯದು.

4. ಈ ಸೂತ್ರದ ಭಾಷ್ಯದಲ್ಲಿ ಜಾನಶ್ರುತಿಯು ಕ್ಷತ್ರಿಯನೆನ್ನುವದಕ್ಕೆ ಕೊಟ್ಟಿರುವ ಮುಖ್ಯಹೇತು ಅಭಿಪ್ರತಾರಿಯು ಚೈತ್ರರಥಿ ಎಂಬ ಕ್ಷತ್ರಿಯನೆಂಬುದು. ಇದನ್ನು ಸಿದ್ಧಪಡಿಸುವ ಯುಕ್ತಿಗಳು ಯಾವವೂ ಅಷ್ಟು ಪ್ರಬಲವಾಗಿರುವಂತೆ ಕಾಣುವದಿಲ್ಲ. ಪ್ರಾಯೇಣ ಎಂಬ ಮಾತು ಈ ದೌರ್ಬಲ್ಯವನ್ನು ಸೂಚಿಸುವದಿಲ್ಲವೆ ? ಎಂಬುದನ್ನು ವಿದ್ವಾಂಸರು ವಿಮರ್ಶಿಸಬೇಕು.

5. ಸೂತನನ್ನು.

6. ಇದು ಸೂತ್ರದಲ್ಲಿರುವ ಚಕಾರದ ಅರ್ಥವೆಂದು ಭಾವಿಸಬಹುದು. ಇದೊಂದೇ ಇಲ್ಲಿ ಪ್ರಬಲವಾಗಿರುವ ಯುಕ್ತಿ. ಇಲ್ಲಿ 'ಮುಂತಾದ' ಎಂಬ ಮಾತಿನಿಂದ ಗೋವುಗಳನ್ನು ದಾನಕ್ಕೆ ತಂದದ್ದೇ ಮುಂತಾದದ್ದನ್ನು ಊಹಿಸಬೇಕು.

**ಸಂಸ್ಕಾರಪರಾಮರ್ಶಾತ್ ತದಭಾವಾಲಾಪಾಚ್ಚ || ೩೬ ||**

೩೬. ಸಂಸ್ಕಾರವನ್ನು ಪರಾಮರ್ಶಿಸಿರುವದರಿಂದಲೂ (ಶೂದ್ರನಿಗೆ) ಅದು ಇಲ್ಲವೆಂದು ಹೇಳಿರುವದರಿಂದಲೂ (ಹೀಗೆ).

## ಶೂದ್ರನಿಗೆ ಸಂಸ್ಕಾರವಿಲ್ಲ

(ಭಾಷ್ಯ)

೩೧೦. ಇತಶ್ಚ ನ ಶೂದ್ರಸ್ಯ ಅಧಿಕಾರಃ । ಯದ್ ವಿದ್ಯಾಪ್ರದೇಶೇಷು ಉಪನಯನಾದಯಃ ಸಂಸ್ಕಾರಾಃ ಪರಾಮೃಶ್ಯನ್ತೇ "ತಂ ಹೋಪನಿನ್ಯೇ" (ಶತ. ಬ್ರಾ. ೧೧-೫-೩-೧೩), ಅಧೀಹಿ ಭಗವ ಇತಿ ಹೋಪಸಸಾರ" (ಛಾಂ. ೭-೧-೧), "ಬ್ರಹ್ಮಪರಾ ಬ್ರಹ್ಮನಿಷ್ಠಾಃ ಪರಂ ಬ್ರಹ್ಮಾನ್ವೇಷಮಾಣಾಃ ಏಷ ಹ ವೈ ತತ್ ಸರ್ವಂ ವಕ್ಷ್ಯತೀತಿ ತೇ ಹ ಸಮಿತ್ಪಾಣಯೋ ಭಗವನ್ತಂ ಪಿಪ್ಪಲಾದಮುಪಸನ್ನಾಃ" (ಪ್ರ.೧-೧) ಇತಿ ಚ । "ತಾನ್ ಹಾನುಪನೀಯೈವ" (ಛಾಂ. ೫-೧೧-೭) ಇತ್ಯಪಿ ಪ್ರದರ್ಶಿತೈವ ಉಪನಯನಪ್ರಾಪ್ತಿರ್ಭವತಿ । ಶೂದ್ರಸ್ಯ ಸಂಸ್ಕಾರಾಭಾವೋಽಭಿಲಪ್ಯತೇ, "ಶೂದ್ರಶ್ಚತುರ್ಥೋ ವರ್ಣ ಏಕಜಾತಿಃ" (ಗೌ. ಧ. ೨-೧-೫೧)[1] ಇತಿ ಏಕಜಾತಿತ್ವಸ್ಮರಣಾತ್ "ನ ಶೂದ್ರೇ ಪಾತಕಂ ಕಿಂಚಿನ್ನ ಚ ಸಂಸ್ಕಾರಮರ್ಹತಿ" (ಮನು. ೧೦-೧೨೬) ಇತ್ಯಾದಿಭಿಶ್ಚ ||

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಶೂದ್ರನಿಗೆ ಅಧಿಕಾರವಿಲ್ಲ. ಏಕೆಂದರೆ ವಿದ್ಯೆಗಳನ್ನು (ಹೇಳುವ) ಸ್ಥಲಗಳಲ್ಲಿ **ಉಪನಯನವೇ** ಮುಂತಾದ[2] ಸಂಸ್ಕಾರಗಳು "ಆತನಿಗೆ ಉಪನಯನವನ್ನು ಮಾಡಿಸಿದನು" (ಶತ. ಬ್ರಾ. ೧೧-೫-೩-೧೩) ಎಂದೂ "ಅಧೀಹಿ ಭಗವಃ" (ಪೂಜ್ಯನೆ, ತತ್ತ್ವವನ್ನು ಹೇಳಿಕೊಡು) ಎಂಬ (ಮಂತ್ರವನ್ನುಚ್ಚರಿಸುತ್ತಾ) ಬಳಿಸಾರಿದನು (ಛಾಂ. ೭-೧-೧) ಎಂದೂ "ಬ್ರಹ್ಮಪರರಾಗಿ ಬ್ರಹ್ಮನಿಷ್ಠರಾಗಿ ಪರಬ್ರಹ್ಮವನ್ನು ಹುಡುಕಿಕೊಂಡು ಈತನೇ

---

1 ಮೈಸೂರು ಸಂಸ್ಕರಣದ ಗೌತಮಸೂತ್ರದಲ್ಲಿ ಇದನ್ನು ಎರಡು ಸೂತ್ರಗಳಾಗಿ ಒಡೆದಿದೆ.

2 ವಿದ್ಯೆಗಾಗಿ ಉಪನಯನ, ವಿಧಿವತ್ತಾಗಿ ಗುರುವಿನ ಉಪಸತ್ತಿ, ಮಂತ್ರೋಚ್ಚಾರ– ಇವುಗಳು ಯಾವವೂ ಶೂದ್ರನಿಗಿಲ್ಲ

ಅದೆಲ್ಲವನ್ನೂ ಹೇಳುವನು ಎಂದು ಅವರು ಸಮಿತ್ಪಾಣಿಗಳಾಗಿ ಭಗವಂತನಾದ ಪಿಪ್ಪಲಾದನನ್ನು ಬಳಿಸಾರಿದರು" (ಪ್ರ. ೧-೧) ಎಂದೂ ಪರಾಮರ್ಶವಾಗಿರುತ್ತವೆ. "ಅವರನ್ನು ಉಪನಯನಮಾಡದೆಯೇ (ಇದನ್ನು ಹೇಳಿದನು. ಛಾಂ. ೫-೧೧-೭) ಎಂಬಲ್ಲಿಯೂ ಉಪನಯನವು ಬಂದೊದಗಿತ್ತೆಂಬುದನ್ನು ತಿಳಿಸಿದಂತೆಯೇ ಆಗಿದೆ[1].

ಆದರೆ ಶೂದ್ರನಿಗೆ ಸಂಸ್ಕಾರವಿಲ್ಲವೆಂದು "ಶೂದ್ರನು ನಾಲ್ಕನೆಯ ವರ್ಣದವನು, (ಅವನು) ಏಕಜಾತಿಯು'' (ಗೌ. ಧ. ೨-೧-೫೧) ಎಂದು ಅವನು ಒಂದೇ ಜನ್ಮವುಳ್ಳವನು[2] ಎಂದು ಸ್ಮೃತಿಯಿರುವದರಿಂದಲೂ "ಶೂದ್ರನ ವಿಷಯದಲ್ಲಿ ಯಾವದೂ ಪಾಪವಲ್ಲ, (ಅವನು) ಸಂಸ್ಕಾರಕ್ಕೂ ತಕ್ಕವನಲ್ಲ'' (ಮನು. ೧೦-೧೨೬) ಇದೇ ಮುಂತಾದ (ವಚನ)ಗಳಿಂದಲೂ (ಗೊತ್ತಾಗುತ್ತದೆ).

**ತದಭಾವನಿರ್ಧಾರಣೇ ಚ ಪ್ರವೃತ್ತೇಃ || ೩೭ ||**

೩೭. ಅವನಲ್ಲವೆಂದು ನಿಶ್ಚಯಿಸಿದ ಬಳಿಕ (ಉಪನಯನಕ್ಕೆ) ತೊಡಗಿರುವದರಿಂದಲೂ (ಹೀಗೆ).

## ಶೂದ್ರನಿಗೆ ವಿದ್ಯಾಧಿಕಾರವಿಲ್ಲವೆಂಬುದಕ್ಕೆ ಬೇರೆಯ ಕಾರಣಗಳು

( ಭಾಷ್ಯ )

೩೧೧. ಇತಶ್ಚ ನ ಶೂದ್ರಸ್ಯ ಅಧಿಕಾರಃ। ಯತ್ ಸತ್ಯವಚನೇನ ಶೂದ್ರತ್ವಾಭಾವೇ ನಿರ್ಧಾರಿತೇ ಜಾಬಾಲಂ ಗೌತಮಃ ಉಪನೇತುಮ್ ಅನುಶಾಸಿತುಂ ಚ ಪ್ರವವೃತೇ "ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧಂ ಸೋಮ್ಯಾಹರೋಪ ತ್ವಾ ನೇಷ್ಯೇ ನ ಸತ್ಯಾದಗಾಃ" (ಛಾಂ. ೪-೪-೫) ಇತಿ ಶ್ರುತಿಲಿಙ್ಗಾತ್ ||

---

1. ಅಶ್ವಪತಿಯು ಕ್ಷತ್ರಿಯನಾದ್ದರಿಂದ ಬ್ರಾಹ್ಮಣರಿಗೆ ಉಪನಯನಮಾಡಿಸದೆಯೇ ವೈಶ್ವಾನರವಿದ್ಯೆಯನ್ನು ತಿಳಿಸಿಕೊಟ್ಟನು ಎಂದು ಶ್ರುತಿಯು ಹೇಳುವದರಿಂದ ಇಂಥ ಸಂದರ್ಭದಲ್ಲಿ ಉಪನಯನವು ಆವಶ್ಯವೆಂದು ಸೂಚಿಸಿದಂತೆ ಆಯಿತು ಎಂದು ಅರ್ಥ.

2. ದ್ವಿಜನಲ್ಲ, ಉಪನಯನಾದಿಸಂಸ್ಕಾರಗಳಿಗೆ ತಕ್ಕವನಲ್ಲ ಎಂದರ್ಥ.

( ಭಾಷ್ಯಾರ್ಥ )

ಈ ಕಾರಣದಿಂದಲೂ ಶೂದ್ರನಿಗೆ ಅಧಿಕಾರವಿಲ್ಲ; ಏಕೆಂದರೆ ಸತ್ಯವನ್ನು ಆಡಿದ್ದರಿಂದ ಶೂದ್ರನಲ್ಲವೆಂದು ನಿಶ್ಚಯಿಸಿದ ಬಳಿಕ ಜಾಬಾಲನನ್ನು ಗೌತಮನು ಉಪನಯನಮಾಡುವದಕ್ಕೂ (ಅವನಿಗೆ) ಉಪದೇಶಮಾಡುವದಕ್ಕೂ ಹೊರಟನು. "ಅಬ್ರಾಹ್ಮಣನು ಇದನ್ನು ಹೇಳಲಾರನು; ಸೋಮ್ಯ, ಸಮಿತ್ತನ್ನು ತೆಗೆದುಕೊಂಡು ಬಾ, ನಿನಗೆ ಉಪನಯನಮಾಡುವೆನು, (ನೀನು) ಸತ್ಯವನ್ನು (ಬಿಟ್ಟು) ಹೋಗಿರುವದಿಲ್ಲ'' ( ಛಾಂ. ೪-೪-೫ ) ಎಂಬ ಶ್ರುತಿಲಿಂಗದಿಂದ (ಹೀಗೆಂದು ಗೊತ್ತಾಗುತ್ತದೆ).

**ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ॥ ೩೮ ॥**

೩೮. ಶ್ರವಣ, ಅಧ್ಯಯನ, ಅರ್ಥ- ಇವುಗಳನ್ನು ಕೂಡದೆಂದಿರುವ ಸ್ಮೃತಿಯಿಂದಲೂ (ಹೀಗೆ).

(ಭಾಷ್ಯ)

೩೧೨. ಇತಶ್ಚ ನ ಶೂದ್ರಸ್ಯ ಅಧಿಕಾರಃ | ಯದಸ್ಯ ಸ್ಮೃತೇಃ ಶ್ರವಣಾಧ್ಯಾಯನಾರ್ಥಪ್ರತಿಷೇಧೋ ಭವತಿ | ವೇದಶ್ರವಣಪ್ರತಿಷೇಧಃ, ವೇದಾಧ್ಯಯನಪ್ರತಿಷೇಧಃ ತದರ್ಥಜ್ಞಾನಾನುಷ್ಠಾನಯೋಶ್ಚ ಪ್ರತಿಷೇಧಃ ಶೂದ್ರಸ್ಯ ಸ್ಮರ್ಯತೇ । ಶ್ರವಣಪ್ರತಿಷೇಧಸ್ತಾವತ್ "ಅಥಾಸ್ಯ ವೇದಮುಪಶೃಣ್ವತಸ್ತ್ರಪುಜತುಭ್ಯಾಂ ಶ್ರೋತ್ರಪ್ರತಿಪೂರಣಮ್" (ಗೌ. ಧ. ೨-೩-೪) ಇತಿ | "ಪದ್ಯು ಹ ವಾ ಏತಚ್ಛ್ಮಶಾನಂ ಯಚ್ಛೂದ್ರಸ್ತಸ್ಮಾಚ್ಛೂದ್ರಸಮೀಪೇ ನಾಧ್ಯೇತವ್ಯಮ್'' (?) ಇತಿ ಚ । ಅತ ಏವಾಧ್ಯಯನಪ್ರತಿಷೇಧಃ । ಯಸ್ಯ ಹಿ ಸಮೀಪೇಽಪಿ ನಾಧ್ಯೇತವ್ಯಂ ಭವತಿ ಸ ಕಥಮಶ್ರುತಮ್ ಅಧೀಯೀತ ? ಭವತಿ ಚ ''ವೇದೋಚ್ಚಾರಣೇ[1] ಜಿಹ್ವಾಚ್ಛೇದೋ ಧಾರಣೇ ಶರೀರಭೇದಃ'' (ಗೌ.ಧ. ೨-೩-೪) ಇತಿ । ಅತ ಏವ ಚ ಅರ್ಥಾತ್ ಅರ್ಥಜ್ಞಾನಾನುಷ್ಠಾನಯೋಃ ಪ್ರತಿಷೇಧೋ ಭವತಿ ''ನ ಶೂದ್ರಾಯ ಮತಿಂ ದದ್ಯಾತ್" (ಮನು. ೪-೮೦) "ದ್ವಿಜಾತೀನಾಮಧ್ಯಯನಮಿಜ್ಯಾ ದಾನಮ್'' (ಗೌ. ಧ. ೨-೧-೧) ಇತಿ ಚ ॥

---

1. ಅಚ್ಚಿನ ಗೌ. ಧ. ಸೂತ್ರದಲ್ಲಿ 'ವೇದೋಚ್ಚಾರಣೇ' ಎಂದು ಪಾಠವಿಲ್ಲ, 'ಉದಾಹರಣೇ' ಎಂದಿದೆ.

(ಭಾಷ್ಯಾರ್ಥ)

ಈ ಕಾರಣದಿಂದಲೂ ಶೂದ್ರನಿಗೆ ಅಧಿಕಾರವಿಲ್ಲ; ಏಕೆಂದರೆ ಸ್ಮೃತಿಯಲ್ಲಿ ಶ್ರವಣಾಧ್ಯಯನಾರ್ಥದ ಪ್ರತಿಷೇಧವಿರುತ್ತದೆ. ಶೂದ್ರನು ವೇದವನ್ನು ಶ್ರವಣಮಾಡಕೂಡದೆಂದಿರುವದು, ವೇದಾಧ್ಯಯನವನ್ನು ಮಾಡಕೂಡದೆಂದಿರುವದು, ಅರ್ಥವನ್ನು ತಿಳಿದುಕೊಳ್ಳುವದೂ ಅನುಷ್ಠಾನಮಾಡುವದೂ ಕೂಡದೆಂದಿರುವದು– (ಇವೆಲ್ಲ) ಸ್ಮೃತಿಯಲ್ಲಿದೆ. ಮೊದಲನೆಯದಾಗಿ ಶ್ರವಣಪ್ರತಿಷೇಧವು (ಹೇಗೆಂದರೆ) : "ಇನ್ನು ಇವನು ವೇದವನ್ನು ಉಪಶ್ರವಣಮಾಡಿದರೆ (ಕರಗಿಸಿದ) ಸೀಸ, ಅರಗು– ಇವುಗಳಿಂದ ಕಿವಿಯನ್ನು ತುಂಬಬೇಕು" (ಗೌ. ಧ. ೨–೩–೪) ಎಂದೂ "ಶೂದ್ರನೆಂಬವನಿದಾನಲ್ಲ, ಅವನು ಕಾಲುಳ್ಳ[1] ಶ್ಮಶಾನವು; ಆದ್ದರಿಂದ ಶೂದ್ರನ ಬಳಿಯಲ್ಲಿ ಅಧ್ಯಯನ ಮಾಡಬಾರದು" (?)[2] ಎಂದೂ (ಇದೆ). ಆದ್ದರಿಂದಲೇ ಅಧ್ಯಯನವನ್ನೂ ಪ್ರತಿಷೇಧಿಸಿದೆ (ಎನ್ನಬೇಕು). ಏಕೆಂದರೆ ಯಾವನ ಬಳಿಯಲ್ಲಿಯೂ ಅಧ್ಯಯನ ಮಾಡಬಾರದಾಗಿರುವದೋ ಅವನು ಶ್ರವಣಮಾಡದಿರುವದನ್ನು ಹೇಗೆ ಅಧ್ಯಯನಮಾಡಿಯಾನು ? "ವೇದೋಚ್ಚಾರಣೆಯನ್ನು ಮಾಡಿದರೆ ನಾಲಗೆಯನ್ನು ಕತ್ತರಿಸಬೇಕು , (ಪಾರಮಾಡಿ) ಧರಿಸಿದ್ದರೆ ಶರೀರವನ್ನು ಕತ್ತರಿಸಿಬಿಡಬೇಕು" (ಗೌ. ಧ. ೨–೩–೪) ಎಂದೂ (ಸ್ಮೃತಿ) ಇದೆ. ಆದ್ದರಿಂದಲೇ ಅರ್ಥಜ್ಞಾನ, ಅನುಷ್ಠಾನ– ಇವೆರಡನ್ನೂ ಅರ್ಥವಶದಿಂದ ಪ್ರತಿಷೇಧಮಾಡಿದಂತಾಗುತ್ತದೆ[3]. "ಶೂದ್ರನಿಗೆ (ವೇದಾರ್ಥದ) ತಿಳಿವಳಿಕೆಯನ್ನು ಕೊಡ

---

1. 'ಪದ್ಮು' ಎಂದು ಶಾಂಕರಭಾಷ್ಯದಲ್ಲಿರುವ ಪಾಠಕ್ಕೆ ನ್ಯಾ.ನಿ. ಮತ್ತು ರ.ಪ್ರ. ವ್ಯಾಖ್ಯಾನಗಳಂತೆ ಅರ್ಥವಿದು. ಆದರೆ ಜೈ.ಸೂ. ೬–೧–೩೮ರ ಭಾಷ್ಯದಲ್ಲಿ 'ಯದ್ಮು' ಎಂಬ ಪಾಠವಿದೆ. ಭಾಮತೀವ್ಯಾಖ್ಯಾನದಲ್ಲಾಗಲಿ ಅದರ ಉಪವ್ಯಾಖ್ಯಾನಗಳಲ್ಲಾಗಲಿ ಈ ವಾಕ್ಯದ ಪರಾಮರ್ಶವಿಲ್ಲ.

2. ಈ ವಾಕ್ಯದ ಹಿಂದುಮುಂದಿನ ವಾಕ್ಯಗಳು ಸ್ಮೃತಿವಾಕ್ಯಗಳಾಗಿರುವದರಿಂದಲೂ ಈ ಸೂತ್ರವೂ ಸ್ಮೃತಿಯನ್ನೇ ಪರಾಮರ್ಶಿಸಿರುವದರಿಂದಲೂ ಇದು ಸ್ಮೃತಿವಾಕ್ಯವೆಂದು ಭಾಷ್ಯಕಾರರು ಉದಾಹರಿಸಿರಬೇಕೆಂದು ತೋರುತ್ತದೆ. ಆದರೆ ನಮಗೆ ಸಿಕ್ಕಿರುವ ಯಾವ ಸ್ಮೃತಿಯಲ್ಲಿಯೂ ಈ ವಾಕ್ಯವು ಕಾಣಿಸುವದಿಲ್ಲ. ಜೈ. ಸೂ. ೬–೧–೩೮ರ ಭಾಷ್ಯದಲ್ಲಿ ಉದಾಹರಿಸಿರುವ ವಾಕ್ಯವು "ಯದ್ಮುವಾ.... ನಾಧ್ಯೇಯಮ್" ಎಂದಿದೆ. ಆ ವಾಕ್ಯವು ಸ್ಮೃತಿ ಎಂದು ಉದಾಹೃತವಾಗಿರುವದೆಂದು ಹೇಳುವದಕ್ಕೆ ಆಗುವದಿಲ್ಲ.

3. ವೇದಾಧ್ಯಯನನಿಷೇಧದಿಂದಲೇ ತತ್ಪೂರ್ವಕವಾದ ಜ್ಞಾನ, ಅನುಷ್ಠಾನ– ಇವುಗಳನ್ನೂ ನಿಷೇಧಿಸಿದಂತೆ ಆಗಿರುತ್ತದೆ.

ಬಾರದು" (ಮನು. ೪-೮೦), "ದ್ವಿಜಾತಿಯವರಿಗೆ ಅಧ್ಯಯನ, ಯಾಗ, ದಾನ (-ಇವು ಧರ್ಮಗಳು)" (ಗೌ. ಧ. ೨-೧-೧) ಎಂದೂ (ಸ್ಮೃತಿಯಿದೆ).

## ಶೂದ್ರರಿಗೂ ಬ್ರಹ್ಮಜ್ಞಾನಕ್ಕೆ ಅಧಿಕಾರ

( ಭಾಷ್ಯ )

೩೧೩. ಯೇಷಾಂ ಪುನಃ ಪೂರ್ವಕೃತಸಂಸ್ಕಾರವಶಾತ್ **ವಿದುರ** ಧರ್ಮವ್ಯಾಧಪ್ರಭೃತೀನಾಂ ಜ್ಞಾನೋತ್ಪತ್ತಿಃ, ತೇಷಾಂ ನ ಶಕ್ಯತೇ ಫಲ ಪ್ರಾಪ್ತಿಃ ಪ್ರತಿಷೇದ್ಧುಮ್ । ಜ್ಞಾನಸ್ಯ ಐಕಾನ್ತಿಕಫಲತ್ವಾತ್, "ಶ್ರಾವಯೇ ಚ್ಚತುರೋ ವರ್ಣಾನ್" (ಮೋ.ಧ. ೩೨೭-೪೯) ಇತಿ ಚ ಇತಿಹಾಸಪುರಾಣಾಧಿ ಗಮೇ ಚಾತುರ್ವರ್ಣ್ಯಸ್ಯ ಅಧಿಕಾರಸ್ಮರಣಾತ್ । ವೇದಪೂರ್ವಕಸ್ತು ನಾಸ್ತಿ ಅಧಿಕಾರಃ ಶೂದ್ರಾಣಾಮ್ ಇತಿ ಸ್ಥಿತಮ್ ॥

( ಭಾಷ್ಯಾರ್ಥ )

ಆದರೆ **ವಿದುರ, ಧರ್ಮವ್ಯಾಧ - ಮುಂತಾದ ಯಾರಿಗೆ ಹಿಂದೆ ಮಾಡಿದ (ಕರ್ಮಗಳ) ಸಂಸ್ಕಾರದ ವಶದಿಂದ ಜ್ಞಾನವು ಉಂಟಾಗಿರು ವದೋ ಅವರಿಗೆ ಫಲವು ದೊರಕಿರುವದೆಂಬುದನ್ನು ಇಲ್ಲವೆನ್ನುವದ ಕ್ಕಾಗಲಾರದು.** ಏಕೆಂದರೆ ಜ್ಞಾನಕ್ಕೆ ಫಲವು ಗೊತ್ತಾಗಿ ಆಗಿಯೇ ತೀರು ತ್ತದೆ[1]. **"ನಾಲ್ಕು ವರ್ಣದವರಿಗೂ ಶ್ರವಣಮಾಡಿಸಬೇಕು.** (ಮೋ. ಧ. ೩೨೭-೪೯) ಎಂದು ಇತಿಹಾಸಪುರಾಣಗಳನ್ನು (ಅರಿತುಕೊಳ್ಳುವ) ವಿಷಯ ದಲ್ಲಿ ನಾಲ್ಕು ವರ್ಣಕ್ಕೂ ಅಧಿಕಾರ(ವಿದೆಯೆಂದು) ಸ್ಮೃತಿಯಿರುವದರಿಂದಲೂ (ಜ್ಞಾನಮೂಲಕವಾಗಿ ಶೂದ್ರನಿಗೆ ಮುಕ್ತಿಯುಂಟು)[2]. ವೇದಪೂರ್ವಕವಾಗಿ ಮಾತ್ರ (ಬ್ರಹ್ಮವಿದ್ಯೆಯಲ್ಲಿ) ಶೂದ್ರನಿಗೆ ಅಧಿಕಾರವಿಲ್ಲ ಎಂದು ಈ (ಅಧಿಕರಣ ದಲ್ಲಿ) ಸಿದ್ಧವಾಗಿರುತ್ತದೆ.

---

1. ಇಂಥ ಜಾತಿಯವರ ಜ್ಞಾನಕ್ಕೆ ಮೋಕ್ಷವಿಲ್ಲ ಎಂದು ನಿಯಮಿಸುವದಕ್ಕೆ ಆಗುವದಿಲ್ಲ.

2. ಇತಿಹಾಸಪುರಾಣಗಳಲ್ಲಿ ವೇದೋಪದೇಶವೇ ಇರುವದರಿಂದ ಬ್ರಹ್ಮಾತ್ಮ ಜ್ಞಾನವು ಆ ಮೂಲಕವೂ ಆಗಬಹುದು.

## ೧೦. ಕಂಪನಾಧಿಕರಣ

(ಕಠೋಪನಿಷತ್ತಿನ ೨-೩-೨ರಲ್ಲಿರುವ ಪ್ರಾಣನು ಬ್ರಹ್ಮವೇ).

**ಕಮ್ಪನಾತ್ ॥ ೩೯ ॥**

೩೯. ಕಂಪಿಸುವಿಕೆಯನ್ನು (ಹೇಳಿರುವದ)ರಿಂದ (ಪ್ರಾಣವು ಬ್ರಹ್ಮವು).

### ವಿಷಯವೂ ಸಂಶಯವೂ

(ಭಾಷ್ಯ)

೩೧೮. ಅವಸಿತಃ ಪ್ರಾಸಙ್ಗಿಕೋಽಧಿಕಾರವಿಚಾರಃ ಪ್ರಕೃತಾಮೇವ ಇದಾನೀಂ ವಾಕ್ಯಾರ್ಥವಿಚಾರಣಾಂ ಪ್ರವರ್ತಯಿಷ್ಯಾಮಃ । "ಯದಿದಂ ಕಿಂ ಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್ ! ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವನ್ತಿ ।" (ಕಾ. ೨-೩-೨) ಇತ್ಯೇತದ್ ವಾಕ್ಯಂ 'ಏಜೃ ಕಮ್ಪನೇ' ಇತಿ ಧಾತ್ವರ್ಥಾನುಗಮಾತ್ ಲಕ್ಷಿತಮ್ । ಅಸ್ಮಿನ್ ವಾಕ್ಯೇ ಸರ್ವಮಿದಂ ಜಗತ್ ಪ್ರಾಣಾಶ್ರಯಂ ಸ್ಪನ್ದತೇ, ಮಹಚ್ಚ ಕಿಂಚಿದ್ ಭಯಕಾರಣಂ ವಜ್ರಶಬ್ದಿತಮ್ ಉದ್ಯತಮ್, ತದ್ವಿಜ್ಞಾನಾಚ್ಚ ಅಮೃತತ್ವಪ್ರಾಪ್ತಿಃ ಇತಿ ಶ್ರೂಯತೇ । ತತ್ರ ಕೋಽಸೌ ಪ್ರಾಣಃ, ಕಿಂ ತದ್ ಭಯಾನಕಂ ವಜ್ರಮ್ ಇತ್ಯಪ್ರತಿಪತ್ತೇರ್ವಿಚಾರೇ ಕ್ರಿಯಮಾಣೇ–

(ಭಾಷ್ಯಾರ್ಥ)

ಪ್ರಸಂಗದಿಂದ ಬಂದ ಅಧಿಕಾರವಿಚಾರವು ಮುಗಿಯಿತು. ಈಗ ಪ್ರಕೃತವಾಗಿರುವ ವಾಕ್ಯದ ಅರ್ಥವಿಚಾರವನ್ನೇ (ಮುಂದಕ್ಕೆ) ನಡೆಯಿಸುವೆವು.

"ಯಾವ ಈ ಜಗತ್ತೆಲ್ಲವೂ (ಯಾವ) ಪ್ರಾಣ(ನಿರುವದರಿಂದಲೇ) ಹೊರಕ್ಕೆ ಬಂದು ಕಂಪಿಸುತ್ತಿರುವದೋ, (ಯಾವದು) ದೊಡ್ಡಭಯವೋ ಎತ್ತಿದ ವಜ್ರವೋ, ಯಾರು ಅದನ್ನು ಅರಿತುಕೊಳ್ಳುವರೋ (ಅವರು) ಅಮೃತರಾಗುವರು" (ಕ. ೨-೩-೨) ಎಂಬೀ ವಾಕ್ಯವು ಏಜೃಕಮ್ಪನೇ ಎಂಬ ಧಾತ್ವರ್ಥವನ್ನನುಸರಿಸಿ (ಸೂತ್ರದಲ್ಲಿ) ಲಕ್ಷಿತವಾಗಿರುತ್ತದೆ[1]. ಈ (ಶ್ರುತಿ)ವಾಕ್ಯದಲ್ಲಿ

---

1. ವಿಷಯವಾಕ್ಯವಾಗಿ ಲಕ್ಷಣೆಯಿಂದ ಸೂಚಿತವಾಗಿದೆ.

ಈ ಜಗತ್ತೆಲ್ಲವೂ ಪ್ರಾಣನನ್ನು ಆಶ್ರಯಿಸಿಕೊಂಡು ವ್ಯಾಪಾರಮಾಡುತ್ತಿರುವದು; ಮತ್ತು ಭಯಕ್ಕೆ ಕಾರಣವಾಗಿ ವಜ್ರ ಎಂಬ ಹೆಸರಿನಿಂದ ಕರೆಯಲ್ಪಟ್ಟಿರುವ ಯಾವದೋ ಒಂದು ದೊಡ್ಡ(ವಸ್ತುವು) ಮೇಲಕ್ಕೆತ್ತಲ್ಪಟ್ಟಿರುತ್ತದೆ, ಮತ್ತು ಅದರ ವಿಜ್ಞಾನದಿಂದ ಅಮೃತತ್ವವು ದೊರಕುತ್ತದೆ –ಎಂದು ಹೇಳಲ್ಪಟ್ಟಿರುತ್ತದೆ ಇಲ್ಲಿ ಈ ಪ್ರಾಣನು ಯಾರು ? ಆ ಭಯಾನಕವಾದ ವಜ್ರವು ಯಾವದು ? –ಎಂಬುದು ತಿಳಿಯದಿರುವದರಿಂದ ವಿಚಾರವನ್ನು ಮಾಡಿದರೆ—

## ಪೂರ್ವಪಕ್ಷ: ವಾಯು, ವಜ್ರ ಎಂಬಿವು ಆಯಾ ಹೆಸರಿನ ವಸ್ತುಗಳು

(ಭಾಷ್ಯ)

೩೧೫. ಪ್ರಾಪ್ತಂ ತಾವತ್ ಪ್ರಸಿದ್ಧೇಃ ಪಞ್ಚವೃತ್ತಿರ್ವಾಯುಃ ಪ್ರಾಣಃ ಇತಿ| ಪ್ರಸಿದ್ಧೇರೇವ ಚ ಅಶನಿರ್ವಜ್ರಂ ಸ್ಯಾತ್| ವಾಯೋಶ್ಚ ಇದಂ ಮಾಹಾತ್ಮ್ಯಂ ಸಂಕೀರ್ತ್ಯತೇ| ಕಥಮ್ ? ಸರ್ವಮಿದಂ ಜಗತ್ ಪಞ್ಚವೃತ್ತೌ ವಾಯೌ ಪ್ರಾಣಶಬ್ದಿತೇ ಪ್ರತಿಷ್ಠಾಯ ಏಜತಿ। ವಾಯುನಿಮಿತ್ತಮೇವ ಚ ಮಹದ್ ಭಯಾನಕಂ ವಜ್ರಮ್ ಉದ್ಯಮ್ಯತೇ। ವಾಯೌ ಹಿ ಪರ್ಜನ್ಯಭಾವೇನ ವಿವರ್ತಮಾನೇ ವಿದ್ಯುತ್ಸ್ತನಯಿತ್ನುವೃಷ್ಟ್ಯಶನಯಃ ವಿವರ್ತನ್ತೇ ಇತ್ಯಾಚಕ್ಷತೇ| ವಾಯುವಿಜ್ಞಾನಾದೇವ ಚ ಇದಮ್ ಅಮೃತತ್ವಮ್| ತಥಾ ಹಿ ಶ್ರುತ್ಯನ್ತರಮ್—"ವಾಯುರೇವ ವ್ಯಷ್ಟಿರ್ವಾಯುಃ ಸಮಷ್ಟಿರಪ ಪುನರ್ಮೃತ್ಯುಂ ಜಯತಿ ಯ ಏವಂ ವೇದ" (ಬೃ. ೩–೩–೨) ಇತಿ | ತಸ್ಮಾತ್ ವಾಯುರಯಮ್ ಇಹ ಪ್ರತಿಪತ್ತವ್ಯಃ ಇತಿ ||

( ಭಾಷ್ಯಾರ್ಥ )

(ಲೋಕ)ಪ್ರಸಿದ್ಧಿಯಿಂದ ಐದು ವೃತ್ತಿಗಳ ವಾಯುವು ಪ್ರಾಣನು ಎಂಬ (ಪೂರ್ವಪಕ್ಷವು) ಮೊದಲು ಬಂದೊದಗುತ್ತದೆ. ಪ್ರಸಿದ್ಧಿಯಿಂದಲೇ ವಜ್ರವೆಂದರೆ ಸಿಡಿಲು ಆಗಿರಬೇಕು. ಮತ್ತು ವಾಯುವಿಗೇ ಈ ಮಾಹಾತ್ಮ್ಯವನ್ನು ಹೇಳಿರುತ್ತದೆ. ಹೇಗೆ? ಎಂದರೆ, ಈ ಜಗತ್ತೆಲ್ಲವೂ ಪ್ರಾಣನೆಂಬ ಶಬ್ದದಿಂದ ಹೇಳಿರುವ ಐದು ವೃತ್ತಿಗಳ ವಾಯುವಿನಲ್ಲಿ ಇದ್ದುಕೊಂಡೇ (ತನ್ನ) ಕೆಲಸವನ್ನು ಮಾಡುತ್ತಿರುವದು, ವಾಯು(ವೆಂಬ) ನಿಮಿತ್ತದಿಂದಲೇ ದೊಡ್ಡ ಭಯಂಕರವಾದ ವಜ್ರವು ಎತ್ತಿಹಿಡಿಯಲ್ಪಡುತ್ತದೆ. ವಾಯುವು ಮೋಡದ ರೂಪದಿಂದ ಮಾರ್ಪಡಲಾಗಿ ಮಿಂಚು, ಗುಡುಗು, ಮಳೆ, ಸಿಡಿಲು (ಇವುಗಳೂ)

ಉಂಟಾಗುವವು ಎಂದು (ಜನರು) ಹೇಳುತ್ತಾರಲ್ಲವೆ ? ಈ (ವಾಕ್ಯದಲ್ಲಿ ಹೇಳಿರುವ) ಅಮೃತತ್ವವೂ ವಾಯುವಿನ ಜ್ಞಾನದಿಂದಲೇ (ಆಗುತ್ತದೆ). ಹಾಗೆಂದಲ್ಲವೆ, "ವಾಯುವೇ ವ್ಯಷ್ಟಿಯು, ವಾಯುವೇ ಸಮಷ್ಟಿಯು ; ಯಾವನು ಹೀಗೆಂದು ತಿಳಿಯುವನೋ ಅವನು ಪುನರ್ಮೃತ್ಯುವನ್ನು ಜಯಿಸುವನು"[1] (ಬೃ. ೩-೩-೨) ಎಂಬ ಬೇರೊಂದು ಶ್ರುತಿ (ಹೇಳಿರುತ್ತದೆ) ? ಆದ್ದರಿಂದ ಈ (ಪ್ರಾಣನು) ವಾಯು ಎಂದು ಇಲ್ಲಿ ತಿಳಿದುಕೊಳ್ಳಬೇಕು.

## ಸಿದ್ಧಾಂತ: ಪ್ರಾಣವೂ ವಜ್ರವೂ ಬ್ರಹ್ಮವೇ

( ಭಾಷ್ಯ )

೩೧೬. ಏವಂ ಪ್ರಾಪ್ತೇ ಬ್ರೂಮಃ। ಬ್ರಹ್ಮೈವೇದಮ್ ಇಹ ಪ್ರತಿಪತ್ತವ್ಯಮ್ | ಕುತಃ ? ಪೂರ್ವೋತ್ತರಾಲೋಚನಾತ್ | ಪೂರ್ವೋತ್ತರಯೋರ್ಹಿ ಗ್ರನ್ಥಭಾಗಯೋಃ ಬ್ರಹ್ಮೈವ ನಿರ್ದಿಶ್ಯಮಾನಮ್ ಉಪಲಭಾಮಹೇ | ಇಹೈವ ಕಥಮ್ ಅಕಸ್ಮಾತ್ ಅನ್ತರಾಲೇ ವಾಯುಂ ನಿರ್ದಿಶ್ಯಮಾನಂ ಪ್ರತಿಪದ್ಯೇಮಹಿ? ಪೂರ್ವತ್ರ ತಾವತ್ "ತದೇವ ಶುಕ್ರಂ ತದ್ ಬ್ರಹ್ಮ ತದೇವಾಮೃತಮುಚ್ಯತೇ। ತಸ್ಮಿಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ" (ಕ. ೨-೩-೧) ಇತಿ ಬ್ರಹ್ಮ ನಿರ್ದಿಷ್ಟಮ್ | ತದೇವ ಇಹಾಪಿ ಸಂನಿಧಾನಾತ್ ಜಗತ್ಸರ್ವಂ ಪ್ರಾಣೇ ಏಜತಿ ಇತಿ ಚ ಲೋಕಾಶ್ರಯತ್ವಪ್ರತ್ಯಭಿಜ್ಞಾನಾತ್ ನಿರ್ದಿಷ್ಟಮ್ ಇತಿ ಗಮ್ಯತೇ | ಪ್ರಾಣಶಬ್ದೋಽಪ್ಯಯಂ ಪರಮಾತ್ಮನ್ಯೇವ ಪ್ರಯುಕ್ತಃ 'ಪ್ರಾಣಸ್ಯ ಪ್ರಾಣಮ್' (ಬೃ. ೪-೪-೧೮) ಇತಿ ದರ್ಶನಾತ್| ಏಜಯಿತೃತ್ವಮಪೀದಂ ಪರಮಾತ್ಮನ ಏವ ಉಪಪದ್ಯತೇ ನ ವಾಯುಮಾತ್ರಸ್ಯ | ತಥಾ ಚ ಉಕ್ತಮ್ "ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ| ಇತರೇಣ ತು ಜೀವನ್ತಿ ಯಸ್ಮಿನ್ನೇತಾವುಪಾಶ್ರಿತೌ" (ಕ. ೧-೨-೫) ಇತಿ। ಉತ್ತರತ್ರಾಪಿ "ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ| ಭಯಾದಿನ್ದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಞ್ಚಮಃ" (ಕ. ೨-೬-೩) ಇತಿ ಬ್ರಹ್ಮೈವ ನಿರ್ದೇಕ್ಷ್ಯತೇ ನ ವಾಯುಃ| ಸವಾಯುಕಸ್ಯ ಜಗತೋ ಭಯಹೇತುತ್ವಾಭಿಧಾನಾತ್ | ತದೇವ ಇಹಾಪಿ ಸಂನಿಧಾನಾತ್ 'ಮಹದ್ಭಯಮ್', 'ವಜ್ರಮುದ್ಯತಮ್' ಇತಿ ಚ ಭಯಹೇತುತ್ವಪ್ರತ್ಯಭಿ

1. ಈ ಶ್ರುತಿಯು ಸೂತ್ರಾತ್ಮನ ವಿಷಯದಲ್ಲಿ ಹೇಳಿದೆ. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ –ಎಂಬ ಮೂರು ರೂಪದಿಂದಲೂ ವಾಯುವೇ ಇರುವದರಿಂದ ವಾಯುವನ್ನೇ ಹೀಗೆ ಉಪಾಸನೆಮಾಡಬೇಕು ಎಂಬುದು ಪೂರ್ವಪಕ್ಷಿಯ ಭಾವ.

ಜ್ಞಾನಾತ್ ನಿರ್ದಿಷ್ಟಮ್ ಇತಿ ಗಮ್ಯತೇ। ವಜ್ರಶಬ್ದೋಽಪ್ಯಯಂ ಭಯಹೇತುತ್ವಸಾಮಾನ್ಯಾತ್ ಪ್ರಯುಕ್ತಃ। ಯಥಾ ಹಿ ವಜ್ರಮುದ್ಯತಂ ಮಮೈವ ಶಿರಸಿ ನಿಪತೇತ್ ಯದ್ಯಹಮ್ ಅಸ್ಯ ಶಾಸನಂ ನ ಕುರ್ಯಾಮ್ ಇತ್ಯನೇನ ಭಯೇನ ಜನಃ ನಿಯಮೇನ ರಾಜಾದಿಶಾಸನೇ ಪ್ರವರ್ತತೇ ಏವಮ್ ಇದಮ್ ಅಗ್ನಿವಾಯುಸೂರ್ಯಾದಿಕಂ ಜಗತ್ ಅಸ್ಮಾದೇವ ಬ್ರಹ್ಮಣೋ ಬಿಭ್ಯತ್, ನಿಯಮೇನ ಸ್ವವ್ಯಾಪಾರೇ ಪ್ರವರ್ತತೇ ಇತಿ ಭಯಾನಕಂ ವಜ್ರೋಪಮಿತಂ ಬ್ರಹ್ಮ। ತಥಾ ಚ ಬ್ರಹ್ಮವಿಷಯಂ ಶ್ರುತ್ಯನ್ತರಮ್—"ಭೀಷಾಸ್ಮಾದ್ ವಾತಃ ಪವತೇ। ಭೀಷೋದೇತಿ ಸೂರ್ಯಃ। ಭೀಷಾಸ್ಮಾದಗ್ನಿಶ್ಚೇನ್ದ್ರಶ್ಚ। ಮೃತ್ಯುರ್ಧಾವತಿ ಪಞ್ಚಮಃ॥ (ತೈ ೨-೮) ಇತಿ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಇದಕ್ಕೆ ಈ ಸಿದ್ಧಾಂತವನ್ನು) ಹೇಳುತ್ತೇವೆ. ಇಲ್ಲಿ ಇದು ಬ್ರಹ್ಮವೆಂದೇ ತಿಳಿಯಬೇಕು. ಏಕೆ? ಎಂದರೆ ಹಿಂದುಮುಂದಿನ (ಸಂದರ್ಭವನ್ನು) ಆಲೋಚಿಸುವದರಿಂದ (ಹಾಗೆಂದು) ಸಿದ್ಧವಾಗುತ್ತದೆ). ಹಿಂದುಮುಂದಿನ ಗ್ರಂಥಭಾಗಗಳಲ್ಲಿ ಬ್ರಹ್ಮವನ್ನೇ ತಿಳಿಸಿರುವದು ಕಂಡುಬರುತ್ತದೆಯಲ್ಲವೆ? (ಹೀಗಿರುವಲ್ಲಿ) ಇಲ್ಲಿ ಮಾತ್ರ ಹೇಗೆ ಇದ್ದಕ್ಕಿದ್ದಹಾಗೆ ನಡುವೆ ವಾಯುವನ್ನು ಹೇಳಿದೆ ಎಂದು ತಿಳಿಯೋಣ? ಮೊದಲನೆಯದಾಗಿ ಹಿಂದಿನ (ಗ್ರಂಥದಲ್ಲಿ) "ಅದೇ ಶುದ್ಧವಾದದ್ದು, ಅದೇ ಬ್ರಹ್ಮವು, ಅದೇ ಅಮೃತವೆನಿಸುವದು. ಅದರಲ್ಲಿ ಎಲ್ಲಾ ಲೋಕಗಳೂ ಆಶ್ರಯಿಸಿರುವವು. ಅದನ್ನು ಯಾವನೂ ಮೀರಿಹೋಗಲಾರನು." (ಕ. ೨-೩-೧) ಎಂದು ಬ್ರಹ್ಮವನ್ನು ತಿಳಿಸಿದೆ; ಇಲ್ಲಿಯೂ ಸಂನಿಧಿಯಿಂದಲೂ 'ಜಗತ್ತೆಲ್ಲವೂ ಪ್ರಾಣನಲ್ಲಿ ಅಲುಗಾಡುತ್ತಿರುವದು' ಎಂದು ಲೋಕಗಳಿಗೆ ಆಶ್ರಯವಾಗಿರುವದೆಂಬ ಹೆಗ್ಗುರುತಿನಿಂದಲೂ[1] ಅದನ್ನೇ ತಿಳಿಸಿದೆ ಎಂದು ನಿಶ್ಚಯವಾಗುತ್ತದೆ.

ಈ ಪ್ರಾಣಶಬ್ದವನ್ನು ಪರಮಾತ್ಮನಲ್ಲಿಯೇ ಉಪಯೋಗಿಸಿದೆ; ಏಕೆಂದರೆ "ಪ್ರಾಣಕ್ಕೂ ಪ್ರಾಣವು" (ಬೃ. ೪-೪-೧೮) ಎಂದು (ಈ ಶಬ್ದವನ್ನು ಈ ಅರ್ಥದಲ್ಲಿ ಪ್ರಯೋಗಿಸಿರುವದು) ಕಂಡುಬರುತ್ತದೆ. ಈ ಅಲುಗಾಡುವದೆಂಬುದೂ ಪರಮಾತ್ಮನಿಗೇ ಹೊಂದುತ್ತದೆಯೇ ಹೊರತು ಬರಿಯ ವಾಯುವಿಗೆ

1. 'ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ' ಎಂಬುದನ್ನೇ 'ಜಗತ್ಸರ್ವಂ ಪ್ರಾಣ ಏಜತಿ' ಎಂದು ಬೇರೆ ಮಾತಿನಿಂದ ಹೇಳಿದೆ ಎಂದು ಭಾವ.

(ಹೊಂದುವದಿಲ್ಲ). ಆದ್ದರಿಂದಲೇ "ಯಾವ ಮರ್ತ್ಯನಾಗಲಿ ಪ್ರಾಣದಿಂದ ಜೀವಿಸಿರುವದಿಲ್ಲ, ಅಪಾನದಿಂದಲೂ (ಜೀವಿಸಿರುವದಿಲ್ಲ). ಯಾವನಲ್ಲಿ ಇವೆರಡೂ ಆಶ್ರಯಿಸಿಕೊಂಡಿರುತ್ತ ಆ ಇನ್ನೊಬ್ಬನಿಂದ ಜೀವಿಸಿರುತ್ತಾರೆ" (ಕ. ೨-೨-೫) ಎಂದು ಹೇಳಿದೆ. (ಈ ವಾಕ್ಯದ) ಮುಂದೆಯೂ "ಈತನ ಭಯದಿಂದ ಅಗ್ನಿಯು ಸುಡುತ್ತಾನೆ, ಭಯದಿಂದ ಸೂರ್ಯನು ಬಿಸಿಲು ಕಾಯಿಸುತ್ತಾನೆ; ಇಂದ್ರನೂ ವಾಯುವೂ (ಈತನ ಭಯದಿಂದಲೇ ಕೆಲಸ ಮಾಡುತ್ತಾರೆ). ಐದನೆಯವನಾದ ಮೃತ್ಯುವೂ ಓಡುತ್ತಾನೆ" (ಕ. ೨-೬-೩) ಎಂದು ಬ್ರಹ್ಮವನ್ನೇ ತಿಳಿಸಲಾಗಿದೆಯೇ ಹೊರತು ವಾಯುವನ್ನಲ್ಲ. ಏಕೆಂದರೆ ವಾಯುಸಹಿತವಾದ ಜಗತ್ತಿಗೇ ಭಯಹೇತುವೆಂದು (ಇಲ್ಲಿ) ತಿಳಿಸಿರುತ್ತದೆ. ಅದನ್ನೇ ಇಲ್ಲಿಯೂ ಸಂನಿಧಿಯಿಂದ ಭಯಕ್ಕೆ ಕಾರಣವೆಂಬ ಗುರುತಿರುವದರಿಂದ[1] ಮಹದ್ಭಯವೆಂದೂ ಉದ್ಯತವಾದ ವಜ್ರವೆಂದೂ ತಿಳಿಸಿದೆ ಎಂದು ಗೊತ್ತಾಗುತ್ತದೆ.

ಈ ವಜ್ರಶಬ್ದವು ಕೂಡ ಭಯಕ್ಕೆ ಕಾರಣವಾಗಿರುವದೆಂಬ ಹೋಲಿಕೆಯಿಂದ (ಬ್ರಹ್ಮವನ್ನು ತಿಳಿಸುವದಕ್ಕೆ) ಪ್ರಯೋಗಿಸಿರುತ್ತದೆ. ಹೇಗೆ ಎತ್ತಿದ ವಜ್ರಾಯುಧವು ಈತನ ಅಪ್ಪಣೆಯನ್ನು ನಾನು ಪಾಲಿಸದಿದ್ದರೆ, ನನ್ನ ತಲೆಯಮೇಲೆಯೇ ಬಿದ್ದೀತು ಎಂಬೀ ಭಯದಿಂದ ಗೊತ್ತಾಗಿ ರಾಜನೇ ಮೊದಲಾದವರ ಅಪ್ಪಣೆಯಂತೆ ಜನರು ನಡೆಯುವರೋ, ಹಾಗೆ ಈ ಅಗ್ನಿ, ವಾಯು, ಸೂರ್ಯ- ಮುಂತಾದ ಜಗತ್ತು ಇದೇ ಬ್ರಹ್ಮಕ್ಕೆ ಹೆದರಿಕೊಂಡು ಗೊತ್ತಾಗಿ ತನ್ನ ವ್ಯಾಪಾರದಲ್ಲಿ ತೊಡಗಿರುತ್ತದೆಯಾದ್ದರಿಂದ ಬ್ರಹ್ಮವು ಭಯಂಕರವಾಗಿ ವಜ್ರದಂತಿರುವದು. ಆದ್ದರಿಂದಲೇ "ಈತನ ಭಯದಿಂದ ವಾಯು ಬೀಸುತ್ತಾನೆ, ಭಯದಿಂದ ಸೂರ್ಯನು ಹುಟ್ಟುತ್ತಾನೆ ಈತನ ಭಯದಿಂದ ಅಗ್ನಿಯೂ ಇಂದ್ರನೂ (ಕೆಲಸಮಾಡುತ್ತಾರೆ), ಮೃತ್ಯು ಐದನೆಯವನಾಗಿ ಓಡುತ್ತಾನೆ" (ತೈ. ೨-೮) ಎಂದು ಬ್ರಹ್ಮವಿಷಯಕವಾದ ಬೇರೊಂದು ಶ್ರುತಿಯಿದೆ.

## ಅಮೃತತ್ವಫಲವೂ ಇದು ಬ್ರಹ್ಮವೆಂದು ತಿಳಿಸುತ್ತದೆ

(ಭಾಷ್ಯ)

೩೦೭. ಅಮೃತತ್ವಫಲಶ್ರವಣಾದಪಿ ಬ್ರಹ್ಮೈವೇದಮ್ ಇತಿ ಗಮ್ಯತೇ। ಬ್ರಹ್ಮಜ್ಞಾನಾದ್ ಹಿ ಅಮೃತತ್ವಪ್ರಾಪ್ತಿಃ। "ತಮೇವ ವಿದಿತ್ವಾತಿಮೃತ್ಯು

---

1 ಲೋಕಾಶ್ರಯತ್ವವನ್ನು ಹಿಂದೆ ಹೇಳಿರುವಂತೆ ಭಯಕಾರಣತ್ವವನ್ನು ಮುಂದಿನ ವಾಕ್ಯದಲ್ಲಿ ಪರಮಾತ್ಮನ ವಿಷಯದಲ್ಲಿಯೇ ಹೇಳಿದೆ ಎಂದು ಭಾವ.

ಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ" (ಶ್ವೇ. ೬-೧೫) ಇತಿ ಮನ್ತ್ರವರ್ಣಾತ್ | ಯತ್ತು ವಾಯುವಿಜ್ಞಾನಾತ್ ಕ್ವಚಿತ್ ಅಮೃತತ್ವಮ್ ಅಭಿಹಿತಮ್, ತತ್ ಆಪೇಕ್ಷಿತಮ್ । ತತ್ರೈವ ಪ್ರಕರಣಾನ್ತರಕರಣೇನ ಪರಮಾತ್ಮಾನಮ್ ಅಭಿಧಾಯ "ಅತೋಽನ್ಯದಾರ್ತಮ್" (ಬೃ. ೩-೪-೨) ಇತಿ ವಾಯ್ವಾದೇರಾರ್ತತ್ವಾಭಿಧಾನಾತ್ ||

(ಭಾಷ್ಯಾರ್ಥ)

ಅಮೃತತ್ವವೆಂಬ ಫಲವನ್ನು ಶ್ರುತಿಯಲ್ಲಿ ಹೇಳಿರುವದರಿಂದಲೂ ಇದು ಬ್ರಹ್ಮವೇ ಎಂದು ಗೊತ್ತಾಗುತ್ತದೆ. ಬ್ರಹ್ಮಜ್ಞಾನದಿಂದಲೇ ಅಮೃತತ್ವದ ಪ್ರಾಪ್ತಿಯಾಗುವದು. ಏಕೆಂದರೆ "ಆತನನ್ನೇ ಅರಿತುಕೊಂಡರೆ ಅತಿಮೃತ್ಯುವನ್ನು ಹೊಂದುತ್ತಾನೆ, (ಅದನ್ನು) ಹೊಂದುವದಕ್ಕೆ ಮತ್ತೆ ಯಾವ ಹಾದಿಯೂ ಇರುವದಿಲ್ಲ" (ಶ್ವೇ. ೬-೧೫) ಎಂದು ಮಂತ್ರವರ್ಣವಿದೆ. ಇನ್ನು **ವಾಯುವಿನ ಉಪಾಸನೆಯಿಂದ ಒಂದು ಕಡೆಯಲ್ಲಿ ಅಮೃತತ್ವವನ್ನು ಹೇಳಿದೆಯಲ್ಲ,**[1] **ಅದು ಆಪೇಕ್ಷಿಕವಾದ (ಅಮೃತತ್ವವು)**[2] ; ಏಕೆಂದರೆ ಅಲ್ಲಿಯೇ ಮತ್ತೊಂದು ಪ್ರಕರಣವನ್ನು ಮಾಡಿ ಪರಮಾತ್ಮನನ್ನು ಹೇಳಿ "ಇದಕ್ಕಿಂತ ಬೇರೆಯಾದದ್ದು ನಾಶವಾಗತಕ್ಕದ್ದು" (ಬೃ. ೩-೪-೨) ಎಂದು ವಾಯ್ವಾದಿಗಳು ನಾಶವಾಗತಕ್ಕದ್ದೆಂದು ಹೇಳಿದೆ.

(ಭಾಷ್ಯ)

೩೧೮. ಪ್ರಕರಣಾದಪಿ ಅತ್ರ ಪರಮಾತ್ಮನಿಶ್ಚಯಃ | "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ | ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ ಪಶ್ಯಸಿ ತದ್ವದ" (ಕ. ೧-೨-೧೪) ಇತಿ ಪರಮಾತ್ಮನಃ ಪೃಷ್ಟತ್ವಾತ್ ||

( ಭಾಷ್ಯಾರ್ಥ )

ಪ್ರಕರಣದಿಂದಲೂ ಇಲ್ಲಿ (ಇದು) ಪರಮಾತ್ಮನೇ ಎಂದು ನಿಶ್ಚಯವಾಗುತ್ತದೆ. ಏಕೆಂದರೆ, "ಧರ್ಮಕ್ಕಿಂತ ಬೇರೆಯಾಗಿ ಅಧರ್ಮಕ್ಕಿಂತ ಬೇರೆಯಾಗಿ ಈ ಕೃತಾಕೃತಕ್ಕಿಂತ[3] ಬೇರೆಯಾಗಿ ಭೂತಕ್ಕಿಂತಲೂ ಭವ್ಯಕ್ಕಿಂತಲೂ ಬೇರೆಯಾಗಿ ಯಾವದನ್ನು ನೀನು ಕಂಡಿರುವೆಯೋ ಅದನ್ನು ಹೇಳು" (ಕ. ೧-೨-೧೪) ಎಂದು ಪರಮಾತ್ಮನನ್ನೇ (ಈ ಪ್ರಕರಣದಲ್ಲಿ) ಕೇಳಲಾಗಿದೆ.

---

1. ಬೃ. ೩-೩-೨ರಲ್ಲಿ.

2. ಇಲ್ಲಿ 'ಅಪಪುನರ್ಮೃತ್ಯುಮ್' ಎಂದಿದೆ; ಆದ್ದರಿಂದ ಪರಮಮೃತ್ಯುವನ್ನು ದಾಟುತ್ತಾನೆ ಎಂಬ ಅಭಿಪ್ರಾಯವಿಲ್ಲ ಎಂದು ಭಾಮತೀವ್ಯಾಖ್ಯಾನ. ಭಾಷ್ಯದಲ್ಲಿ ಈ ಸೂಚನೆಯಿಲ್ಲ.

3. ಕಾರ್ಯಕಾರಣಗಳಿಗಿಂತ.

## ೧೧. ಜ್ಯೋತಿರಧಿಕರಣ

(ಛಾಂ. ೮-೧೨-೩ರಲ್ಲಿರುವ ಜ್ಯೋತಿಯು ಬ್ರಹ್ಮವೇ)

**ಜ್ಯೋತಿರ್ದರ್ಶನಾತ್ ॥ ೪೦ ॥**

೪. ಜ್ಯೋತಿಯು (ಬ್ರಹ್ಮವೇ) ; ಏಕೆಂದರೆ (ಹಾಗೆಂದು) ಕಂಡಿದೆ.

### ವಿಷಯವೂ ಸಂಶಯವೂ

( ಭಾಷ್ಯ )

೩೯. ಏಷ ಸಂಪ್ರಸಾದೋಽಸ್ಮಾಚ್ಛರೀರಾದ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" (ಛಾಂ. ೮-೧೨-೩) ಇತಿ ಶ್ರೂಯತೇ । ತತ್ರ ಸಂಶಯ್ಯತೇ— ಕಿಂ ಜ್ಯೋತಿಃಶಬ್ದಂ ಚಕ್ಷುರ್ವಿಷಯ ತಮೋಽಪಹಂ ತೇಜಃ, ಕಿಂ ವಾ ಪರಂ ಬ್ರಹ್ಮ ಇತಿ ?

( ಭಾಷ್ಯಾರ್ಥ )

"ಈ ಸಂಪ್ರಸಾದನು ಶರೀರದಿಂದ ಎದ್ದು ಹೆಚ್ಚಿನ ಜ್ಯೋತಿಯನ್ನು ಸೇರಿ ತನ್ನ ರೂಪದಿಂದ ಸಿದ್ಧನಾಗುತ್ತಾನೆ" (ಛಾಂ. ೮-೧೨-೩) ಎಂದು ಶ್ರುತಿಯಲ್ಲಿದೆ. (ಅಲ್ಲಿ ಹೀಗೆ) ಸಂಶಯವುಂಟಾಗುತ್ತದೆ: ಇಲ್ಲಿ ಜ್ಯೋತಿ ಎಂಬ ಹೆಸರಿನ (ಪದಾರ್ಥವು) ಕಣ್ಣಿಗೆ ವಿಷಯವಾದ (ವಸ್ತುವಿನ) ಕತ್ತಲೆಯನ್ನು ಕಳೆದುಹಾಕುವ ಬೆಳಕೆ, ಅಥವಾ ಪರಬ್ರಹ್ಮವೆ ?

### ಪೂರ್ವಪಕ್ಷ: ತೇಜಸ್ಸೆಂದರೆ ಇಲ್ಲಿ ಬೆಳಕು

( ಭಾಷ್ಯ )

೩೨೦. ಕಿಂ ತಾವತ್ ಪ್ರಾಪ್ತಮ್ ? ಪ್ರಸಿದ್ಧಮೇವ ತೇಜೋ ಜ್ಯೋತಿಃಶಬ್ದಮಿತಿ। ಕುತಃ ? ತತ್ರ ಜ್ಯೋತಿಃಶಬ್ದಸ್ಯ ರೂಢತ್ವಾತ್ । "ಜ್ಯೋತಿಶ್ಚರಣಾಭಿಧಾನಾತ್" (೧-೧-೨೪) ಇತ್ಯತ್ರ ಹಿ ಪ್ರಕರಣಾತ್ ಜ್ಯೋತಿಃಶಬ್ದಃ ಸ್ವಾರ್ಥಂ ಪರಿತ್ಯಜ್ಯ ಬ್ರಹ್ಮಣಿ ವರ್ತತೇ। ನ ಚ ಇಹ ತದ್ವತ್ ಕಿಂಚಿತ್ ಸ್ವಾರ್ಥಪರಿತ್ಯಾಗೇ ಕಾರಣಂ ದೃಶ್ಯತೇ। ತಥಾ ಚ ನಾಡೀಖಣ್ಡೇ—"ಅಥ ಯತ್ರೈತದಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ" (ಛಾಂ. ೮-೬-೫) ಇತಿ ಮುಮುಕ್ಷೋಃ ಆದಿತ್ಯಪ್ರಾಪ್ತಿರಭಿಹಿತಾ। ತಸ್ಮಾತ್ ಪ್ರಸಿದ್ಧಮೇವ ತೇಜೋ ಜ್ಯೋತಿಃಶಬ್ದಮ್ ಇತಿ ॥

(ಭಾಷ್ಯಾರ್ಥ)

(ಇಲ್ಲಿ) ಮೊದಲು ಯಾವ (ಪೂರ್ವಪಕ್ಷವು) ಬಾದೊದಗುತ್ತದೆ? ಪ್ರಸಿದ್ಧವಾಗಿರುವ ಬೆಳಕೇ ಜ್ಯೋತಿಃಶಬ್ದದಿಂದ ಹೇಳಿರುವ (ಪದಾರ್ಥವು). ಏಕೆ? ಎಂದರೆ ಜ್ಯೋತಿ ಎಂಬ ಶಬ್ದವು ಅದರ (ವಿಷಯದ)ಲ್ಲಿ ರೂಢವಾಗಿರುತ್ತದೆಯಾದ್ದರಿಂದ. "ಜ್ಯೋತಿಶ್ಚರಣಾಭಿಧಾನಾತ್" (೧-೧-೨೪) ಎಂಬಲ್ಲಿ ಪ್ರಕರಣದಿಂದಲ್ಲವೆ, ಜ್ಯೋತಿ ಎಂಬ ಶಬ್ದವು ತನ್ನ ಅರ್ಥವನ್ನು ಬಿಟ್ಟು ಬ್ರಹ್ಮದಲ್ಲಿ ವೃತ್ತಿಯುಳ್ಳದ್ದಾಗಿರುತ್ತದೆ (ಎಂದು ತೀರ್ಮಾನಿಸಲಾಯಿತು)? ಆದರೆ ಇಲ್ಲಿ ಅದರಂತೆ (ಜ್ಯೋತಿಃಶಬ್ದವು) ತನ್ನ ಅರ್ಥವನ್ನು ಬಿಡಬೇಕೆಂಬುದಕ್ಕೆ ಯಾವ ಕಾರಣವೂ ಕಾಣುವದಿಲ್ಲ. ಆದ್ದರಿಂದಲೇ **ನಾಡೀಖಂಡ**ದಲ್ಲಿ[1] "ಇನ್ನು ಯಾವಾಗ ಈ ಶರೀರವನ್ನು ಬಿಟ್ಟು ಮೇಲಕ್ಕೇರುವನೋ ಆಗ ಇದೇ ರಶ್ಮಿಗಳ ಮೂಲಕವಾಗಿ ಮೇಲಕ್ಕೆ ಏರುತ್ತಾನೆ; (ಅವನು ಓಂ! ಎಂದು ಮೇಲಕ್ಕೆ ಹೋಗುತ್ತಾನೆ, ಅವನು ಮನಸ್ಸು ಹಾಕುವಷ್ಟರಲ್ಲಿ ಆದಿತ್ಯನನ್ನು ಸೇರುತ್ತಾನೆ. (ಛಾಂ. ೮-೬-೫) ಎಂದು ಮುಮುಕ್ಷುವಿಗೆ ಆದಿತ್ಯಪ್ರಾಪ್ತಿಯನ್ನು ಹೇಳಿರುತ್ತದೆ. ಆದ್ದರಿಂದ ಪ್ರಸಿದ್ಧವಾಗಿರುವ ಬೆಳಕನ್ನೇ ಜ್ಯೋತಿಃಶಬ್ದ(ದಿಂದ ಇಲ್ಲಿ ಹೇಳಿರುತ್ತದೆ).

## ಸಿದ್ಧಾಂತ: ಈ ಜ್ಯೋತಿಯು ಬ್ರಹ್ಮವೇ

(ಭಾಷ್ಯ)

೩೨೧. ಏವಂ ಪ್ರಾಪ್ತೇ ಬ್ರೂಮಃ। ಪರಮೇವ ಬ್ರಹ್ಮ ಜ್ಯೋತಿಃಶಬ್ದಮ್। ಕಸ್ಮಾತ್? ದರ್ಶನಾತ್। ತಸ್ಯ ಹಿ ಇಹ ಪ್ರಕರಣೇ ವಕ್ತವ್ಯತ್ವೇನ ಅನುವೃತ್ತಿರ್ದೃಶ್ಯತೇ। "ಯ ಆತ್ಮಾಽಪಹತಪಾಪ್ಮಾ" (ಛಾಂ. ೮-೭-೧) ಇತಿ ಅಪಹತಪಾಪ್ಮತ್ವಾದಿಗುಣಕಸ್ಯ ಆತ್ಮನಃ ಪ್ರಕರಣಾದೌ ಅನ್ವೇಷ್ಟವ್ಯತ್ವೇನ ವಿಜಿಜ್ಞಾಸಿತವ್ಯತ್ವೇನ ಚ ಪ್ರತಿಜ್ಞಾನಾತ್। "ಏತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ" (ಛಾಂ. ೮-೯-೩) ಇತಿ ಚ ಅನುಸಂಧಾನಾತ್। "ಅಶರೀರಂ ವಾವ ಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ" (ಛಾಂ. ೮-೧೨-೧) ಇತಿ ಚ ಅಶರೀರತಾಯೈ ಜ್ಯೋತಿಃಸಂಪತ್ತೇರಸ್ಯ ಅಭಿಧಾನಾತ್। ಬ್ರಹ್ಮಭಾವಾಚ್ಚ ಅನ್ಯತ್ರ ಅಶರೀರತಾನುಪಪತ್ತೇಃ "ಪರಂ ಜ್ಯೋತಿಃ" (ಛಾಂ. ೮-೧೨-೩), "ಸ ಉತ್ತಮಃ ಪುರುಷಃ" (ಛಾಂ. ೮-೧೨-೩) ಇತಿ ಚ ವಿಶೇಷಣಾತ್॥

---

1. ಸುಷುಮ್ನಾನಾಡಿಯ ಮೂಲಕವಾಗಿ ಉತ್ಕ್ರಮಣಮಾಡುವವನು ಅಮೃತತ್ವವನ್ನು ಪಡೆಯುವನೆಂದು ತಿಳಿಸುವ ೮-೬ನೆಯ ಖಂಡದಲ್ಲಿ ಎಂದರ್ಥ.

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಇದಕ್ಕೆ ಸಿದ್ಧಾಂತವನ್ನು) ಹೇಳುತ್ತೇವೆ: ಪರಬ್ರಹ್ಮವೇ (ಇಲ್ಲಿ) ಜ್ಯೋತಿಃಶಬ್ದ(ದಿಂದ ಹೇಳಿರತಕ್ಕದ್ದು). ಏಕೆ ? ಎಂದರೆ (ಹಾಗೆಂದು) ಕಂಡಿರುವದರಿಂದ. ಆ (ಪರಬ್ರಹ್ಮಕ್ಕೇ) ಅಲ್ಲವೆ, ಈ ಪ್ರಕರಣದಲ್ಲಿ ಹೇಳತಕ್ಕದ್ದೆಂದು ಅನುವೃತ್ತಿಯು ಕಂಡುಬರುತ್ತದೆ [1]? "ಅಪಹತನಾದ ಆತ್ಮನಿದಾನಲ್ಲ, (ಅವನನ್ನು ಹುಡುಕಬೇಕು, ಅರಿತುಕೊಳ್ಳಬೇಕು)" (ಛಾಂ. ೮-೭-೧) ಎಂದು ಅಪಹತಪಾಪ್ಮತ್ವವೇ ಮುಂತಾದ ಗುಣಗಳುಳ್ಳ [2] ಆತ್ಮನನ್ನೇ (ಈ) ಪ್ರಕರಣದ ಆದಿಯಲ್ಲಿ ಹುಡುಕಬೇಕೆಂದೂ ಅರಿತುಕೊಳ್ಳಬೇಕೆಂದೂ ಪ್ರತಿಜ್ಞೆಮಾಡಿರುವದರಿಂದಲೂ "ಈತನನ್ನೇ ನಿನಗೆ ಮತ್ತೆ ವಿವರಿಸಿ ಹೇಳುವೆನು" (ಛಾಂ. ೮-೯-೩) ಎಂದು ಪರಾಮರ್ಶಿಸಿರುವದರಿಂದಲೂ "ಅಶರೀರನೇ ಆಗಿರುವಾತನನ್ನು ಪ್ರಿಯಾಪ್ರಿಯಗಳು ಸೋಕುವದಿಲ್ಲ" (ಛಾಂ. ೮-೧೨-೧) ಎಂದು ಅಶರೀರತ್ವಕ್ಕಾಗಿ ಜ್ಯೋತಿಃಸಂಪತ್ತಿಯನ್ನು ಹೇಳಿರುವದರಿಂದಲೂ ಬ್ರಹ್ಮಭಾವಕ್ಕಿಂತ ಬೇರೆಯಾಗಿ ಎಲ್ಲಿಯೂ ಅಶರೀರತ್ವವೆಂಬುದು ಹೊಂದುವಹಾಗಿಲ್ಲವಾದ್ದರಿಂದಲೂ "ಹೆಚ್ಚಿನ ಜ್ಯೋತಿಯು" (ಛಾಂ. ೮-೧೨-೩) (ಎಂದೂ) "ಅವನು ಉತ್ತಮಪುರುಷನು" (ಛಾಂ.೮-೧೨-೩) ಎಂದೂ (ಜ್ಯೋತಿಗೆ) ವಿಶೇಷಣವನ್ನು ಕೊಟ್ಟಿರುವದರಿಂದಲೂ (ಹೀಗೆಂದು ನಿಶ್ಚಯಿಸಬೇಕು).

## ನಾಡೀಖಂಡದಲ್ಲಿ ಹೇಳಿರುವದು ಸಾಪೇಕ್ಷಮುಕ್ತಿ

(ಭಾಷ್ಯ)

೩೨೨. ಯತ್ತು ಉಕ್ತಮ್ ಮುಮುಕ್ಷೋಃ ಆದಿತ್ಯಪ್ರಾಪ್ತಿಃ ಅಭಿಹಿತಾ ಇತಿ। ನಾಸೌ ಆತ್ಯನ್ತಿಕೋ ಮೋಕ್ಷಃ। ಗತ್ಯುತ್ಕ್ರಾನ್ತಿಸಂಬನ್ಧಾತ್। ನ ಹಿ ಆತ್ಯನ್ತಿಕೇ ಮೋಕ್ಷೇ ಗತ್ಯುತ್ಕ್ರಾನ್ತೀ ಸ್ತಃ ಇತಿ ವಕ್ಷ್ಯಾಮಃ॥

(ಭಾಷ್ಯಾರ್ಥ)

ಇನ್ನು ಮುಮುಕ್ಷುವಿಗೆ (ನಾಡೀಖಂಡದಲ್ಲಿ) ಆದಿತ್ಯಪ್ರಾಪ್ತಿಯನ್ನು ಹೇಳಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಆತ್ಯಂತಿಕಮುಕ್ತಿ

---

1. ತಾತ್ಪರ್ಯದಿಂದ ಹೇಳತಕ್ಕದ್ದೆಂದು ಉಪಕ್ರಮದಿಂದ ಕೊನೆಯವರೆಗೂ ಕಂಡುಬರುತ್ತದೆ.

2. ಇವು ಆತ್ಮನ ಸ್ವರೂಪಕ್ಕೇ ಸೇರಿಲ್ಲವಾದ್ದರಿಂದ ನಿಜವಾಗಿ ಗುಣಗಳಲ್ಲ ಎಂಬುದನ್ನು ೪-೪-೬ರ ಭಾಷ್ಯದಲ್ಲಿ ಸ್ಪಷ್ಟಪಡಿಸಿರುತ್ತದೆ.

ಯಲ್ಲ[1]; ಏಕೆಂದರೆ (ಅಲ್ಲಿ)ಗತಿ, ಉತ್ಕ್ರಾಂತಿ –ಇವುಗಳ ಸಂಬಂಧವಿರುತ್ತದೆ. ಆತ್ಯಂತಿಕಮೋಕ್ಷದಲ್ಲಿ ಗತ್ಯುತ್ಕ್ರಾಂತಿಗಳು ಇಲ್ಲವೆಂದು (ಮುಂದೆ) ತಿಳಿಸುವೆವು[2].

## ೧೨. ಅರ್ಥಾಂತರತ್ವವ್ಯಪದೇಶಾಧಿಕರಣ

(ಛಾಂ. ೮–೧೪–೧ರಲ್ಲಿ ಹೇಳಿರುವ ಆಕಾಶವು ಬ್ರಹ್ಮವೇ)

**ಆಕಾಶೋಽರ್ಥಾನ್ತರತ್ವಾದಿವ್ಯಪದೇಶಾತ್ ॥ ೪೧ ॥**

೪೧. (ಛಾಂದೋಗ್ಯ ೮–೧೪–೧ರಲ್ಲಿ) ಆಕಾಶವೆಂದರೆ (ಬ್ರಹ್ಮವೇ); ಏಕೆಂದರೆ ಅರ್ಥಾಂತರತ್ವವೇ ಮುಂತಾದದ್ದನ್ನು ಹೇಳಿದೆ.

## ವಿಷಯವೂ ಸಂಶಯವೂ

( ಭಾಷ್ಯ )

೩೨೩. "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ ಬ್ರಹ್ಮ ತದಮೃತಂ ಸ ಆತ್ಮಾ" (ಛಾಂ. ೮–೧೪–೧) ಇತಿ ಶ್ರೂಯತೇ। ತತ್ ಕಿಮ್ ಆಕಾಶಶಬ್ದಂ ಪರಂ ಬ್ರಹ್ಮ, ಕಿಂ ವಾ ಪ್ರಸಿದ್ಧಮೇವ ಭೂತಾಕಾಶಮ್ ಇತಿ ವಿಚಾರೇ–

( ಭಾಷ್ಯಾರ್ಥ )

"ಆಕಾಶವೆಂಬುದೇ ನಾಮರೂಪಗಳನ್ನು ನಿರ್ವಾಹಮಾಡತಕ್ಕದ್ದು. ಅವುಗಳು ಯಾವದರೊಳಗೆ ಇರುವವೋ ಅದು ಬ್ರಹ್ಮವು, ಅದೇ ಅಮೃತವು, ಅದೇ ಆತ್ಮನು" (ಛಾಂ. ೮–೧೪–೧) ಎಂದು ಶ್ರುತಿಯಿದೆ. ಆ ಆಕಾಶಶಬ್ದ (ವಾಚ್ಯವಾದದ್ದು) ಪರಬ್ರಹ್ಮವೊ, ಅಥವಾ ಪ್ರಸಿದ್ಧವೇ ಆಗಿರುವ ಭೂತಾಕಾಶವೊ ? –ಎಂದು ವಿಚಾರವಾಗಲಾಗಿ–

---

1. 'ಅತ್ಯಂತಿಕಮುಕ್ತಿ' ಎಂದರೆ ಜ್ಞಾನವಾದ ಕೂಡಲೆ ಆಗುವ ಪುನರಾವೃತ್ತಿಯಿಲ್ಲದ ಮುಕ್ತಿ; ಇದನ್ನು ಸದ್ಯೋಮುಕ್ತಿ ಎಂದೂ ಕರೆಯುವರು. ಮುಖ್ಯಾರ್ಥದಲ್ಲಿ ಇದೇ ಮುಕ್ತಿ. ಪ್ರಕೃತದಲ್ಲಿ ಹೇಳಿರುವದು ಆಪೇಕ್ಷಿಕಮುಕ್ತಿ ಎಂದರೆ ಇತರ ಸದ್ಗತಿಗಳಿಗೆ ಹೋಲಿಸಿದರೆ ಹೆಚ್ಚುಕಾಲವಿರುವದರಿಂದ ಮುಕ್ತಿ ಎನಿಸಿದೆ.

2. ಮುಂದೆ ೪–೨–೧೩, ೪–೩–೭, ೪–೩–೧೪ –ಇವುಗಳ ಭಾಷ್ಯವನ್ನು ನೋಡಿರಿ.

## ಪೂರ್ವಪಕ್ಷ: ಇಲ್ಲಿ ಹೇಳಿರುವದು ಭೂತಾಕಾಶವೇ

(ಭಾಷ್ಯ)

೩೨೮ ಭೂತಪರಿಗ್ರಹೋ ಯುಕ್ತಃ। ಆಕಾಶಶಬ್ದಸ್ಯ ತಸ್ಮಿನ್ ರೂಢತ್ವಾತ್, ನಾಮರೂಪನಿರ್ವಹಣಸ್ಯ ಚ ಅವಕಾಶದಾನದ್ವಾರೇಣ ತಸ್ಮಿನ್ ಯೋಜಯಿತುಂ ಶಕ್ಯತ್ವಾತ್, ಸ್ರಷ್ಟೃತ್ವಾದೇಶ್ಚ ಸ್ಪಷ್ಟಸ್ಯ ಬ್ರಹ್ಮಲಿಙ್ಗಸ್ಯ ಅಶ್ರವಣಾತ್ ಇತಿ ॥

(ಭಾಷ್ಯಾರ್ಥ)

ಭೂತವನ್ನು ತೆಗೆದುಕೊಳ್ಳುವದೇ ಯುಕ್ತವು. ಏಕೆಂದರೆ ಆಕಾಶಶಬ್ದವು ಅದರಲ್ಲಿ ರೂಢವಾಗಿರುತ್ತದೆ; ನಾಮರೂಪಗಳ ನಿರ್ವಾಹವೆಂಬಿದನ್ನು, ಅವಕಾಶವನ್ನು ಕೊಡುವದರ ಮೂಲಕ ಅದಕ್ಕೆ ಹೊಂದಿಸಬಹುದಾಗಿರುತ್ತದೆ; (ಜಗತ್ತನ್ನು) ಸೃಷ್ಟಿಸುವದೇ ಮುಂತಾದ ಸ್ಪಷ್ಟವಾದ ಬ್ರಹ್ಮಲಿಂಗವು ಶ್ರುತಿಯಲ್ಲಿಲ್ಲವೂ ಇಲ್ಲ.

## ಸಿದ್ಧಾಂತ: ಅರ್ಥಾಂತರತ್ವವನ್ನು ಹೇಳುವದರಿಂದ ಇದು ಬ್ರಹ್ಮ

(ಭಾಷ್ಯ)

೩೨೯. ಏವಂ ಪ್ರಾಪ್ತೇ ಇದಮುಚ್ಯತೇ— ಪರಮೇವ ಬ್ರಹ್ಮ ಇಹ ಆಕಾಶಶಬ್ದಂ ಭವಿತುಮರ್ಹತಿ। ಕಸ್ಮಾತ್? ಅರ್ಥಾನ್ತರತ್ವಾದಿವ್ಯಪದೇಶಾತ್। "ತೇ ಯದನ್ತರಾ ತದ್ಬ್ರಹ್ಮ" ಇತಿ ಹಿ ನಾಮರೂಪಾಭ್ಯಾಮ್ ಅರ್ಥಾನ್ತರಭೂತಮ್ ಆಕಾಶಂ ವ್ಯಪದಿಶತಿ। ನ ಚ ಬ್ರಹ್ಮಣೋಽನ್ಯತ್ ನಾಮರೂಪಾಭ್ಯಾಮ್ ಅರ್ಥಾನ್ತರಂ ಸಂಭವತಿ। ಸರ್ವಸ್ಯ ವಿಕಾರಜಾತಸ್ಯ ನಾಮರೂಪಾಭ್ಯಾಮೇವ ವ್ಯಾಕೃತತ್ವಾತ್। ನಾಮರೂಪಯೋರಪಿ ನಿರ್ವಹಣಂ ನಿರಙ್ಕುಶಂ ನ ಬ್ರಹ್ಮಣೋಽನ್ಯತ್ರ ಸಂಭವತಿ। "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" (ಛಾಂ. ೬-೩-೨) ಇತ್ಯಾದಿ ಬ್ರಹ್ಮಕರ್ತೃಕತ್ವಶ್ರವಣಾತ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಈ (ಸಿದ್ಧಾಂತವನ್ನು) ಹೇಳುತ್ತೇವೆ: ಆಕಾಶ ಎಂಬ ಶಬ್ದ(ದಿಂದ ಹೇಳಿರುವದು) ಪರಬ್ರಹ್ಮವೇ ಆಗಿರಬೇಕು. ಏಕೆ? ಎಂದರೆ ಅರ್ಥಾಂತರತ್ವವೇ ಮುಂತಾದದ್ದನ್ನು

ಹೇಳಿರುವದರಿಂದ. "ಅವುಗಳಿಗಿಂತ ಬೇರೆ ಯಾವದಿದೆಯೋ ಅದು ಬ್ರಹ್ಮವು" ಎಂದು ನಾಮರೂಪಗಳಿಗಿಂತ ಆಕಾಶವು ಬೇರೆ ಎಂದು ಹೇಳಿದೆಯಲ್ಲವೆ? ಬ್ರಹ್ಮವನ್ನು ಬಿಟ್ಟರೆ ಮತ್ತೆ ಯಾವದೂ ನಾಮರೂಪಗಳಿಗಿಂತ ಬೇರೆಯಾದದ್ದು ಇರುವಹಾಗಿಲ್ಲ; ಏಕೆಂದರೆ ಕಾರ್ಯಸಮೂಹವೆಲ್ಲವೂ ನಾಮರೂಪಗಳಿಂದಲೇ ವ್ಯಾಕೃತವಾಗಿರುತ್ತದೆ. ನಾಮರೂಪಗಳನ್ನು ತಡೆಯಿಲ್ಲದೆ ನಿರ್ವಾಹಮಾಡ ತಕ್ಕದ್ದು ಬ್ರಹ್ಮಕ್ಕಿಂತ ಬೇರೆಯಾಗಿ ಯಾವದರಲ್ಲಿಯೂ ಇರುವದಿಲ್ಲ. "ಈ ಜೀವವೆಂಬ ರೂಪದಿಂದ ಅನುಪ್ರವೇಶಮಾಡಿ ನಾಮರೂಪಗಳನ್ನು ವ್ಯಾಕರಣಮಾಡುವೆನು'' (ಛಾಂ. ೬-೩-೨) ಎಂದು ಮುಂತಾಗಿರುವ (ವಾಕ್ಯದಿಂದ ನಾಮರೂಪವ್ಯಾಕರಣವು) ಬ್ರಹ್ಮಕರ್ತೃಕವೆಂದೇ ಶ್ರುತಿಯಲ್ಲಿರುವದರಿಂದಲೂ ಹೀಗೆ.

## ಇದು ಬ್ರಹ್ಮವೆಂಬುದಕ್ಕೆ ಮತ್ತೆ ಕೆಲವು ಲಿಂಗಗಳು

(ಭಾಷ್ಯ)

೩೨೬. . ನನು ಜೀವಸ್ಯಾಪಿ ಪ್ರತ್ಯಕ್ಷಂ ನಾಮರೂಪವಿಷಯಂ ನಿರ್ವೋಢೃತ್ವಮಸ್ತಿ | ಬಾಢಮ್ ಅಸ್ತಿ | ಅಭೇದಸ್ತು ಇಹ ವಿವಕ್ಷಿತಃ | ನಾಮರೂಪ ನಿರ್ವಹಣಾಭಿಧಾನಾದೇವ ಚ ಸ್ರಷ್ಟೃತ್ವಾದಿ ಬ್ರಹ್ಮಲಿಙ್ಗಮ್ ಅಭಿಹಿತಂ ಭವತಿ । ''ತದ್ಬ್ರಹ್ಮ ತದಮೃತಂ ಸ ಆತ್ಮಾ" (ಛಾಂ. ೮-೧೪-೧) ಇತಿ ಚ ಬ್ರಹ್ಮವಾದಸ್ಯ ಲಿಙ್ಗಾನಿ | "ಆಕಾಶಸ್ತಲ್ಲಿಙ್ಗಾತ್'' (೧-೧-೨೨) ಇತ್ಯಸ್ಯೈವ ಅಯಂ ಪ್ರಪಞ್ಚಃ ॥

(ಭಾಷ್ಯಾರ್ಥ)

(ಆಕ್ಷೇಪ):— ಜೀವನಿಗೂ ನಾಮರೂಪಗಳನ್ನು ನಿರ್ವಾಹಮಾಡುವದೆಂಬುದು ಇದೆ ಎಂಬುದು ಪ್ರತ್ಯಕ್ಷವಾಗಿದೆಯಲ್ಲ !

(ಪರಿಹಾರ):— ಇದೆ, ನಿಜ. ಆದರೆ (ಜೀವಬ್ರಹ್ಮರಿಗೆ) ಅಭೇದವನ್ನೇ ಇಲ್ಲಿ ತಿಳಿಸಬೇಕೆಂದಿರುತ್ತದೆ[1].

ನಾಮರೂಪಗಳ ನಿರ್ವಹಣವನ್ನು ಹೇಳಿರುವದರಿಂದಲೇ ಸ್ರಷ್ಟೃತ್ವವೇ ಮುಂತಾದ ಬ್ರಹ್ಮಲಿಂಗವನ್ನು ಹೇಳಿದಂತೆ ಆಯಿತು[2]. "ಅದೇ ಬ್ರಹ್ಮವು, ಅದೇ ಅಮೃತವು, ಅದೇ ಆತ್ಮನು" ಎಂದು (ಇಲ್ಲಿ ಹೇಳಿರುವವೂ) ಬ್ರಹ್ಮ

1. ಆದ್ದರಿಂದ ಜೀವರೂಪದಲ್ಲಿ ಬ್ರಹ್ಮವೇ ನಾಮರೂಪಗಳನ್ನು ವ್ಯಾಕರಣ ಮಾಡುತ್ತದೆ.

2. ಸ್ರಷ್ಟೃತ್ವಾದಿಗಳನ್ನು ಹೇಳಿಲ್ಲ ಎಂಬ ಪೂರ್ವಪಕ್ಷಕ್ಕೆ ಸಮಾಧಾನವಿದು.

ವಾದಕ್ಕೆ ಲಿಂಗಗಳಾಗಿರುತ್ತವೆ[1]. "ಆಕಾಶಸ್ತಲ್ಲಿಙ್ಗಾತ್" (೧-೧-೨) ಎಂಬ (ಅಧಿಕರಣ)ದ್ದೇ ಇದು ವಿವರ(ವಾಗಿರುತ್ತದೆ)[2].

## ೧೩. ಸುಷುಪ್ತ್ಯುತ್ಕ್ರಾಂತ್ಯಧಿಕರಣ ೪೨-೪೩

(ಬೃಹದಾರಣ್ಯಕದಲ್ಲಿ ಹೇಳಿರುವ ವಿಜ್ಞಾನಮಯಪುರುಷನು ಬ್ರಹ್ಮವು)

**ಸುಷುಪ್ತ್ಯುತ್ಕ್ರಾನ್ತ್ಯೋರ್ಭೇದೇನ ॥ ೪೨ ॥**

೪೨. ಸುಷುಪ್ತ್ಯುತ್ಕ್ರಾಂತಿಗಳಲ್ಲಿ (ಜೀವನಿಗಿಂತ) ಬೇರೆಯಾಗಿ (ಉಪದೇಶಿಸಿರುವದರಿಂದ ಇದು ಬ್ರಹ್ಮವೇ).

### ವಿಷಯವೂ ಸಂಶಯವೂ

(ಭಾಷ್ಯ)

೩೨೭. 'ವ್ಯಪದೇಶಾತ್' ಇತ್ಯನುವರ್ತತೇ। ಬೃಹದಾರಣ್ಯಕೇ ಷಷ್ಠೇ ಪ್ರಪಾಠಕೇ "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ" (ಬೃ. ೪-೩-೭) ಇತ್ಯುಪಕ್ರಮ್ಯ ಭೂಯಾನ್ ಆತ್ಮವಿಷಯಃ ಪ್ರಪಞ್ಚಃ ಕೃತಃ ತತ್ ಕಿಂ ಸಂಸಾರಿಸ್ವರೂಪಮಾತ್ರಾನ್ವಾಖ್ಯಾನಪರಂ ವಾಕ್ಯಮ್, ಉತ ಅಸಂಸಾರಿಸ್ವರೂಪಪ್ರತಿಪಾದನಪರಮ್ ? ಇತಿ ಸಂಶಯಃ ॥

(ಭಾಷ್ಯಾರ್ಥ)

'ವ್ಯಪದೇಶಾತ್' ಎಂಬ (ಮಾತು ಹಿಂದಿನ ಸೂತ್ರದಿಂದ ಇಲ್ಲಿಯೂ) ಅನುಸರಿಸಿಕೊಂಡು ಬಂದಿರುತ್ತದೆ. ಬೃಹದಾರಣ್ಯಕದ ಆರನೆಯ[3] ಪ್ರಪಾಠಕದಲ್ಲಿ "ಆತ್ಮನು ಈ ವಿಜ್ಞಾನಮಯನಿದಾನಲ್ಲ (ಅವನೇ)" (ಬೃ. ೪-೩-೭) ಎಂದು ಉಪಕ್ರಮಿಸಿ ಆತ್ಮನ ಸಂಸಾರಿಸ್ವರೂಪವನ್ನು ಮಾತ್ರ ಅನುವಾದ

---

1. ಆಕಾಶಕ್ಕೆ ಇವು ಲಿಂಗಗಳಾಗಲಾರವು ಎಂದಭಿಪ್ರಾಯ.

2. ಆ ಸೂತ್ರದ ಭಾಷ್ಯದಲ್ಲಿ ಈ ವಾಕ್ಯವು ಬ್ರಹ್ಮಪರವೆಂದು ಸಿದ್ಧವಾಗಿಟ್ಟುಕೊಂಡಿತ್ತು. ಈಗ ಅದನ್ನು ಸ್ಪಷ್ಟಪಡಿಸಿದೆ. ಬ್ರಹ್ಮ, ಅಮೃತ, ಆತ್ಮ-ಎಂಬ ಮಾತುಗಳಿಂದ ಇದು ಬ್ರಹ್ಮವೆಂದು ಸ್ಪಷ್ಟಪಡಿಸಿದೆ.

3. ಅರಣ್ಯಕಕ್ರಮದಿಂದ ಆರನೆಯ ಅಧ್ಯಾಯ; ಉಪನಿಷತ್ಕ್ರಮದಿಂದ ನಾಲ್ಕನೆಯ ಅಧ್ಯಾಯ.

ಮಾಡಿದ ವಾಕ್ಯವೋ, ಅಥವಾ ಅಸಂಸಾರಿಸ್ವರೂಪವನ್ನು ಪ್ರತಿಪಾದನೆಮಾಡು ವದರಲ್ಲಿ ತಾತ್ಪರ್ಯವುಳ್ಳದ್ದೋ ? —ಎಂದು ಸಂಶಯವು.

## ಪೂರ್ವಪಕ್ಷ: ಇದು ಸಂಸಾರಿಸ್ವರೂಪವರ್ಣನೆ

( ಭಾಷ್ಯ )

೩೨೮. ಕಿಂ ತಾವತ್ ಪ್ರಾಪ್ತಮ್ ? ಸಂಸಾರಿಸ್ವರೂಪಮಾತ್ರವಿಷಯ ಮೇವ ಇತಿ। ಕುತಃ ? ಉಪಕ್ರಮೋಪಸಂಹಾರಾಭ್ಯಾಮ್ । ಉಪಕ್ರಮೇ ‘‘ ಯೋಽಯಂ ವಿಜ್ಞಾನಮಯಃ ಪ್ರಾಣೇಷು ’’ ಇತಿ ಶಾರೀರಲಿಙ್ಗಾತ್, ಉಪಸಂಹಾರೇ ಚ ‘‘ ಸದಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನ ಮಯಃ ಪ್ರಾಣೇಷು ’’ (ಬೃ. ೪-೪-೨೨) ಇತಿ ತದಪರಿತ್ಯಾಗಾತ್, ಮಧ್ಯೇಽಪಿ ಬುದ್ಧಾನ್ತಾದ್ಯವಸ್ಥೋಪನ್ಯಾಸೇನ ತಸ್ಯೈವ ಪ್ರಪಞ್ಚನಾತ್ ಇತಿ ||

( ಭಾಷ್ಯಾರ್ಥ )

ಮೊದಲು ಯಾವ ( ಪೂರ್ವಪಕ್ಷವು ) ಬಂದೊದಗುತ್ತದೆ ? (ಇದು) ಸಂಸಾರಿಸ್ವರೂಪಮಾತ್ರದ ವಿಷಯದ (ವಾಕ್ಯವು) ಎಂದು (ತೋರುತ್ತದೆ). ಏಕೆ ? ಎಂದರೆ ಉಪಕ್ರಮೋಪಸಂಹಾರಗಳಿಂದ ಉಪಕ್ರಮದಲ್ಲಿ “ಪ್ರಾಣ ಗಳೊಳಗೆ ಈ ವಿಜ್ಞಾನಮಯನಿರುವನಲ್ಲ” ಎಂದು ಶಾರೀರನ ಲಿಂಗವಿರುವದ ರಿಂದಲೂ ಉಪಸಂಹಾರದಲ್ಲಿ “ಪ್ರಾಣಗಳೊಳಗೆ ಈ ವಿಜ್ಞಾನಮಯನಿರುವ ನಲ್ಲ, ಅವನೇ ಈ ದೊಡ್ಡ, ಅಜನಾದ ಆತ್ಮನು” (ಬೃ. ೪-೪-೨೨) ಎಂದು ಆ (ಲಿಂಗ)ವನ್ನು ಬಿಡದೆ ಇರುವದರಿಂದಲೂ ನಡುವೆಯೂ ಎಚ್ಚರವೇ ಮುಂತಾದ ಅವಸ್ಥೆಗಳನ್ನು ಹೇಳಿ ಅದನ್ನೇ ವಿಸ್ತರಿಸಿರುವದರಿಂದಲೂ (ಹೀಗೆಂದು ನಿಶ್ಚಯವಾಗುತ್ತದೆ).

## ಸಿದ್ಧಾಂತ: ಇದು ಪರಮೇಶ್ವರನನ್ನು ತಿಳಿಸುವ ವಾಕ್ಯ

(ಭಾಷ್ಯ)

೩೨೯. ಏವಂ ಪ್ರಾಪ್ತೇ ಬ್ರೂಮಃ | ಪರಮೇಶ್ವರೋಪದೇಶಪರ ಮೇವೇದಂ ವಾಕ್ಯಮ್ ನ ಶಾರೀರಮಾತ್ರಾನ್ವಾಖ್ಯಾನಪರಮ್ । ಕಸ್ಮಾತ್ ? ಸುಷುಪ್ತೌ ಉತ್ಕ್ರಾನ್ತೌ ಚ ಶಾರೀರಾದ್ ಭೇದೇನ ಪರಮೇಶ್ವರಸ್ಯ ವ್ಯಪ ದೇಶಾತ್ । ಸುಷುಪ್ತೌ ತಾವತ್ “ಅಯಂ ಪುರುಷಃ ಪ್ರಾಜ್ಞೇನಾತ್ಮನಾ

ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಮ್" (ಬೃ. ೪-೩-೨೧) ಇತಿ ಶಾರೀರಾದ್ ಭೇದೇನ ಪರಮೇಶ್ವರಂ ವ್ಯಪದಿಶತಿ। ತತ್ರ ಪುರುಷಃ ಶಾರೀರಃ ಸ್ಯಾತ್ । ತಸ್ಯ ವೇದಿತೃತ್ವಾತ್ । ಬಾಹ್ಯಾಭ್ಯನ್ತರವೇದನಪ್ರಸಙ್ಗೇ ಸತಿ ತತ್ಪ್ರತಿಷೇಧಸಂಭವಾತ್ । ಪ್ರಾಜ್ಞಃ ಪರಮೇಶ್ವರಃ । ಸರ್ವಜ್ಞತ್ವಲಕ್ಷಣಯಾ ಪ್ರಜ್ಞಯಾ ನಿತ್ಯಮ್ ಅವಿಯೋಗಾತ್ । ತಥಾ ಉತ್ಕ್ರಾನ್ತಾವಪಿ "ಅಯಂ ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾಽನ್ವಾರೂಢ ಉತ್ಸರ್ಜನ್ ಯಾತಿ" (ಬೃ. ೪-೩-೩೫) ಇತಿ ಜೀವಾದ್ ಭೇದೇನ ಪರಮೇಶ್ವರಂ ವ್ಯಪದಿಶತಿ। ತತ್ರಾಪಿ ಶಾರೀರೋ ಜೀವಃ ಸ್ಯಾತ್ । ಶರೀರಸ್ವಾಮಿತ್ವಾತ್ । ಪ್ರಾಜ್ಞಸ್ತು ಸ ಏವ ಪರಮೇಶ್ವರಃ । ತಸ್ಮಾತ್ ಸುಷುಪ್ತ್ಯುತ್ಕ್ರಾನ್ತ್ಯೋಃ ಭೇದೇನ ವ್ಯಪದೇಶಾತ್ ಪರಮೇಶ್ವರ ಏವ ಅತ್ರ ವಿವಕ್ಷಿತಃ ಇತಿ ಗಮ್ಯತೇ ॥

( ಭಾಷ್ಯಾರ್ಥ )

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಈ ವಾಕ್ಯವು ಪರಮೇಶ್ವರನನ್ನು ತಿಳಿಸುವದರಲ್ಲಿಯೇ ತಾತ್ಪರ್ಯವುಳ್ಳದ್ದೇ ಹೊರತು ಬರಿಯ ಶಾರೀರನನ್ನು ಅನುವಾದಮಾಡುವದರಲ್ಲಿ ತಾತ್ಪರ್ಯವುಳ್ಳದ್ದಲ್ಲ. ಏಕೆ? -ಎಂದರೆ ಸುಷುಪ್ತಿಯಲ್ಲಿಯೂ ಉತ್ಕ್ರಾಂತಿಯಲ್ಲಿಯೂ ಶಾರೀರನಿಗಿಂತ ಬೇರೆಯಾಗಿ ಪರಮೇಶ್ವರನನ್ನು ಹೇಳಿರುವದರಿಂದ[1]. ಮೊದಲನೆಯದಾಗಿ ಸುಷುಪ್ತಿಯಲ್ಲಿ "ಈ ಪುರುಷನು ಪ್ರಾಜ್ಞನೆಂಬ ಆತ್ಮನಿಂದ ಆಲಿಂಗಿತನಾಗಿ ಹೊರಗಿನದೇನನ್ನೂ ಅರಿಯದೆ ಇರುತ್ತಾನೆ, ಒಳಗಿನದನ್ನೂ (ಅರಿಯದೆ) (ಇರುತ್ತಾನೆ) (ಬೃ. ೪-೩-೨೧)" ಎಂದು ಶಾರೀರನಿಗಿಂತ ಬೇರೆಯಾಗಿ ಪರಮೇಶ್ವರನನ್ನು ಹೇಳಿರುತ್ತದೆ. ಅಲ್ಲಿ 'ಪುರುಷ'ನೆಂದರೆ ಶಾರೀರನಾಗಿರಬೇಕು, ಏಕೆಂದರೆ (ಅವನು) ಅರಿಯುವವನಾಗಿರುವದರಿಂದ ಹೊರಗೂ ಒಳಗೂ ಅರಿಯುವ ಪ್ರಸಂಗವು (ಅವನಿಗೆ) ಇರುವದರಿಂದಲೇ ಅದನ್ನು ಅಲ್ಲಗಳೆದಿರುವದು ಹೊಂದುತ್ತದೆ[2]. **ಪ್ರಾಜ್ಞನೆಂದರೆ ಪರಮೇಶ್ವರನು, ಏಕೆಂದರೆ ಸರ್ವಜ್ಞಸ್ವರೂಪವಾದ ಪ್ರಜ್ಞೆಯನ್ನು (ಬಿಟ್ಟು ಅವನು)**

---

1. ಸಂಸಾರಿಸ್ವರೂಪಕ್ಕಿಂತ ಬೇರೆಯಾದ ಅಸಂಸಾರಿಸ್ವರೂಪವನ್ನು ಹೇಳಿರುವದರಿಂದ ಎಂದರ್ಥ; ಜೀವನಿಗಿಂತ ಪರಮೇಶ್ವರನು ಬೇರೆ ಎಂದು ಹೇಳಿರುವದರಿಂದ ಎಂದೇನೂ ಅಭಿಪ್ರಾಯವಿಲ್ಲ.

2. ಪ್ರಜ್ಞೆಯು ಎಂದರೆ ಚೈತನ್ಯವು ಅವನ ಸ್ವರೂಪವೇ ಆಗಿರುತ್ತದೆಯಾದ್ದರಿಂದ ಅವನು ಪ್ರಾಜ್ಞನು ಎಂದರ್ಥ. ಸುಷುಪ್ತಿಯಲ್ಲಿರುವ ಆತ್ಮಸ್ವರೂಪವು ಪ್ರಾಯಿಕವಾಗಿ ಅಜ್ಞನಾಗಿರುವದರಿಂದ ಪ್ರಾಜ್ಞ ಎಂಬ ಹೆಸರು ಅದಕ್ಕೆ ಬಂದಿದೆ ಎಂಬ ಈಚಿನ ಕೆಲವರು ವೇದಾಂತಿಗಳ ಅಭಿಪ್ರಾಯವು ಭಾಷ್ಯಸಮ್ಮತವಲ್ಲ. ಮಾಂ. ಭಾ. ೫ನ್ನು ನೋಡಿ.

**ಯೂವಾಗಲೂ ಅಗಲಿರುವದಿಲ್ಲ.** ಇದರಂತೆ ಉತ್ಕ್ರಾಂತಿಯಲ್ಲಿಯೂ "ಈ ಶಾರೀರ ಆತ್ಮನು ಪ್ರಾಜ್ಞಾತ್ಮನಿಂದ ಅನ್ವಾರೂಢನಾಗಿ (ಕೂಗುಗಳನ್ನು) ಹಾಕಿಕೊಳ್ಳುತ್ತಾ ಹೋಗುತ್ತಾನೆ" (ಬೃ. ೪-೩-೩೫) ಎಂದು ಜೀವನಿಗಿಂತ ಬೇರೆಯಾಗಿ ಪರಮೇಶ್ವರನನ್ನು ಹೇಳಿರುತ್ತದೆ. ಅಲ್ಲಿಯೂ ಶಾರೀರನೆಂದರೆ ಜೀವನಾಗಿರಬೇಕು ; ಏಕೆಂದರೆ (ಅವನು) ಶರೀರಕ್ಕೆ ಒಡೆಯನಾಗಿರುತ್ತಾನೆ. ಪ್ರಾಜ್ಞನಾದರೋ ಆದೇ ಪರಮೇಶ್ವರನು. ಆದ್ದರಿಂದ (ಹೀಗೆ) ಸುಷುಪ್ತ್ಯುತ್ಕ್ರಾಂತಿಗಳಲ್ಲಿ ಬೇರೆಯಾಗಿ ಹೇಳಿರುವದರಿಂದ ಪರಮೇಶ್ವರನೇ ವಿವಕ್ಷಿತನಾಗಿರುತ್ತಾನೆ ಎಂದು ಗೊತ್ತಾಗುತ್ತದೆ.

## ಶಾರೀರಾತ್ಮಲಿಂಗಗಳಿಗೆ ಗತಿ

( ಭಾಷ್ಯ )

೩೩೦. ಯದುಕ್ತಮ್ ಆದ್ಯನ್ತಮಧ್ಯೇಷು ಶಾರೀರಲಿಙ್ಗಾತ್ ತತ್ಪರತ್ವಮ್ ಅಸ್ಯ ವಾಕ್ಯಸ್ಯ ಇತಿ। ಅತ್ರ ಬ್ರೂಮಃ। ಉಪಕ್ರಮೇ ತಾವತ್ "ಯೋಽಯಂ ವಿಜ್ಞಾನಮಯಃ ಪ್ರಾಣೇಷು" ಇತಿ ನ ಸಂಸಾರಿಸ್ವರೂಪಂ ವಿವಕ್ಷಿತಮ್ ಕಿಂ ತರ್ಹಿ ಅನೂದ್ಯ ಸಂಸಾರಿಸ್ವರೂಪಂ ಪರೇಣ ಬ್ರಹ್ಮಣಾ ಅಸ್ಯ ಏಕತಾಂ ವಿವಕ್ಷತಿ। ಯತೋ "ಧ್ಯಾಯತೀವ ಲೇಲಾಯತೀವ" ( ಬೃ. ೪-೩-೭ ) ಇತ್ಯೇವಮಾದ್ಯುತ್ತರಗ್ರನ್ಥಪ್ರವೃತ್ತಿಃ ಸಂಸಾರಿಧರ್ಮನಿರಾಕರಣಪರಾ ಲಕ್ಷ್ಯತೇ। ತಥಾ ಉಪಸಂಹಾರೇಽಪಿ ಯಥೋಪಕ್ರಮಮೇವ ಉಪಸಂಹರತಿ—"ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು" (ಬೃ. ೪-೪-೨೨) ಇತಿ। ಯೋಽಯಂ ವಿಜ್ಞಾನಮಯಃ ಪ್ರಾಣೇಷು ಸಂಸಾರೀ ಲಕ್ಷ್ಯತೇ ಸ ವಾ ಏಷ ಮಹಾನಜ ಆತ್ಮಾ ಪರಮೇಶ್ವರಃ ಏವ ಅಸ್ಮಾಭಿಃ ಪ್ರತಿಪಾದಿತಃ ಇತ್ಯರ್ಥಃ ॥

( ಭಾಷ್ಯಾರ್ಥ )

ಮೊದಲುಕೊನೆನಡುವೆಗಳಲ್ಲಿ ಶಾರೀರನ ಲಿಂಗವಿರುವದರಿಂದ ಈ ವಾಕ್ಯವು ಅವನ(ನ್ನು ಹೇಳುವದರಲ್ಲಿ) ತಾತ್ಪರ್ಯವುಳ್ಳದ್ದು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಆದಕ್ಕೆ ಹೇಳುತ್ತೇವೆ: ಮೊದಲನೆಯದಾಗಿ ಉಪಕ್ರಮದಲ್ಲಿ "ಪ್ರಾಣಗಳೊಳಗೆ ಈ ವಿಜ್ಞಾನಮಯನಾಗಿರುವನಲ್ಲ" ಎಂಬ (ವಾಕ್ಯದಲ್ಲಿ) ಸಂಸಾರಿಸ್ವರೂಪವು ವಿವಕ್ಷಿತವಾಗಿಲ್ಲ ; ಮತ್ತೇನೆಂದರೆ ಸಂಸಾರಿಸ್ವರೂಪವನ್ನು ಅನುವಾದಮಾಡಿಕೊಂಡು ಇವನಿಗೂ ಪರಬ್ರಹ್ಮಕ್ಕೂ ಐಕ್ಯವನ್ನು ಹೇಳಬೇಕೆಂದು ಹೊರಟಿರುತ್ತದೆ (ಎಂದು ಅರಿಯಬೇಕು). ಏಕೆಂದರೆ "ಚಿಂತಿಸು

ವಂತೆಯೂ ಸಂಚರಿಸುವಂತೆಯೂ ಇರುತ್ತಾನೆ"[1] (ಬೃ. ೪–೩–೭) ಇದೇ ಮುಂತಾದ ಮುಂದಿನ ಗ್ರಂಥವು ಸಂಸಾರಿಧರ್ಮವನ್ನು ನಿರಾಕರಿಸುವ ತಾತ್ಪರ್ಯದಿಂದ ಹೊರಟಿರುವಂತೆ ಕಂಡುಬರುತ್ತದೆ, ಹೀಗೆಯೇ ಉಪಸಂಹಾರ ದಲ್ಲಿಯೂ "ಪ್ರಾಣಗಳೊಳಗೆ ಈ ವಿಜ್ಞಾನಮಯನಿರುವನಲ್ಲ, ಅವನೇ ಈ ದೊಡ್ಡ, ಅಜನಾದ, ಆತ್ಮನು'' (ಬೃ. ೪–೪–೨೨) ಎಂದು ಉಪಕ್ರಮ ದಂತೆಯೇ ಮುಗಿಸಿರುತ್ತದೆ. ಪ್ರಾಣಗಳೊಡನೆ ಈ ವಿಜ್ಞಾನಮಯನು ಸಂಸಾರಿ ಯಾಗಿ ಕಾಣುತ್ತಿರುವನಲ್ಲ, ಅವನೇ ಈ ನಾವು ತಿಳಿಸಿರುವ ದೊಡ್ಡ, ಅಜ ನಾದ, ಆತ್ಮನು, (ಅವನು) ಪರಮೇಶ್ವರನೇ ಎಂದರ್ಥ.

## ಅವಸ್ಥೆಗಳನ್ನು ಹೇಳಿರುವದು ಅಸಂಸಾರಿತ್ವವನ್ನು ತಿಳಿಸುವದಕ್ಕೇ

(ಭಾಷ್ಯ)

೩೩೧. ಯಸ್ತು ಮಧ್ಯೇ ಬುದ್ಧಾನ್ತಾದ್ಯವಸ್ಥೋಪನ್ಯಾಸಾತ್ ಸಂಸಾರಿ ಸ್ವರೂಪವಿವಕ್ಷಾಂ ಮನ್ಯತೇ । ಸ ಪ್ರಾಚೀಮಪಿ ದಿಶಂ ಪ್ರಸ್ಥಾಪಿತಃ ಪ್ರತೀಚೀ ಮಪಿ ದಿಶಂ ಪ್ರತಿಷ್ಠೇತ । ಯತೋ ನ ಬುದ್ಧಾನ್ತಾದ್ಯವಸ್ಥೋಪನ್ಯಾಸೇನ ಅವಸ್ಥಾವತ್ತ್ವಂ ಸಂಸಾರಿತ್ವಂ ವಾ ವಿವಕ್ಷತಿ । ಕಿಂ ತರ್ಹಿ ಅವಸ್ಥಾ ರಹಿತತ್ವಮ್ ಅಸಂಸಾರಿತ್ವಂ ಚ । ಕಥಮೇತತ್ ಅವಗಮ್ಯತೇ ? ಯದ್ "ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹಿ'' (ಬೃ. ೪–೩–೧೪, ೧೫, ೧೬) ಇತಿ ಪದೇ ಪದೇ ಪೃಚ್ಛತಿ, ಯಚ್ಚ "ಅನನ್ವಾಗತಸ್ತೇನ ಭವತ್ಯಸಙ್ಗೋ ಹ್ಯಯಂ ಪುರುಷಃ" (ಬೃ. ೪–೩–೧೫, ೧೬) ಇತಿ ಪದೇ ಪದೇ ಪ್ರತಿವಕ್ತಿ । "ಅನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ ತೀರ್ಣೋ ಹಿ ತದಾ ಸರ್ವಾಞ್ಶೋಕಾನ್ ಹೃದಯಸ್ಯ ಭವತಿ" (ಬೃ. ೪–೩–೨೨) ಇತಿ ಚ । ತಸ್ಮಾತ್ ಅಸಂಸಾರಿಸ್ವರೂಪಪ್ರತಿಪಾದನಪರಮೇವ ಏತದ್ವಾಕ್ಯಮ್ ಇತ್ಯನಗನ್ತವ್ಯಮ್ ॥

(ಭಾಷ್ಯಾರ್ಥ)

ಯಾವನಾದರೆ ನಡುವೆ ಎಚ್ಚರವೇ ಮುಂತಾದ ಅವಸ್ಥೆಗಳನ್ನು ಹೇಳಿರು ವದರಿಂದ ಸಂಸಾರಿಸ್ವರೂಪವನ್ನು ಹೇಳಬೇಕೆಂದು ಹೊರಟದೆ ಎಂದು ತಿಳಿಯು

---

1. ಅಂತೆ ಎಂದಿರುವದರಿಂದ ಪರಮಾರ್ಥವಾಗಿ ಆತ್ಮನಿಗೆ ಜ್ಞಾನೇಂದ್ರಿಯ ಕರ್ಮೇಂದ್ರಿಯವ್ಯಾಪಾರರೂಪವಾದ ಸಂಸಾರವು ಇಲ್ಲ ಎಂದಂತೆ ಆಯಿತು.

ತ್ತಾನೋ, ಅವನು ಪೂರ್ವದಿಕ್ಕಿಗೆ (ತಿರುಗಿಸಿ) ಹೊರಡಿಸಿದರೂ ಪಶ್ಚಿಮದಿಕ್ಕಿಗೆ ಹೊರಟಾನು.[1] ಏಕೆಂದರೆ **ಎಚ್ಚರವೇ ಮುಂತಾದ ಅವಸ್ಥೆಗಳನ್ನು ಹೇಳಿರುವದರಿಂದ ಶ್ರುತಿಯು (ಆತ್ಮನಿಗೆ) ಅವಸ್ಥಾವತ್ತ್ವವನ್ನಾಗಲಿ ಸಂಸಾರಿತ್ವವನ್ನಾಗಲಿ ಹೇಳಬೇಕೆಂದು ಹೊರಟಿಲ್ಲ; ಮತ್ತೇನೆಂದರೆ ಅವಸ್ಥಾರಹಿತನೆಂದೂ ಅಸಂಸಾರಿಯೆಂದೂ (ಹೇಳುವದಕ್ಕೆ ಹೊರಟಿದೆ)**[2]. ಇದು ಹೇಗೆ ಗೊತ್ತಾಯಿತು ? ಎಂದರೆ "ಇನ್ನುಮೇಲೆ ವಿಮೋಕ್ಷಕ್ಕೇ (ಉಪಾಯವನ್ನು) ಹೇಳು" (ಬೃ. ೪-೩ ೧೪, ೧೫, ೧೬) ಎಂದು ಮತ್ತೆಮತ್ತೆ (ಜನಕನು) ಕೇಳಿರುತ್ತಾನೆ[3]. "ಆದರಿಂದ ಅಂಟಿಕೊಳ್ಳದೆ ಇರುತ್ತಾನೆ, ಈ ಪುರುಷನು ಅಸಂಗನಲ್ಲವೆ ?" (ಬೃ. ೪-೩-೧೫, ೧೬) ಎಂದೂ "ಪುಣ್ಯದಿಂದ ಅಂಟಿಕೊಳ್ಳದೆ, ಪಾಪದಿಂದ ಅಂಟಿಕೊಳ್ಳದೆ, ಆಗ ಹೃದಯದ ಶೋಕಗಳನ್ನೆಲ್ಲ ದಾಟಿರುತ್ತಾನಲ್ಲವೆ ?" (ಬೃ. ೪-೩-೫) ಎಂದೂ ಮತ್ತೆಮತ್ತೆ (ಯಾಜ್ಞವಲ್ಕ್ಯನು) ಉತ್ತರಕೊಟ್ಟಿರುತ್ತಾನೆ[4].

ಆದ್ದರಿಂದ ಈ ವಾಕ್ಯವು ಅಸಂಸಾರಿಸ್ವರೂಪವನ್ನು ಪ್ರತಿಪಾದನಮಾಡುವದರಲ್ಲಿಯೇ ತಾತ್ಪರ್ಯವುಳ್ಳದ್ದು ಎಂದು ನಿಶ್ಚಯಿಸಬೇಕು.

**ಪತ್ಯಾದಿಶಬ್ದೇಭ್ಯಃ ॥ ೪೩ ॥**

೪೩. ಪತ್ಯಾದಿಶಬ್ದಗಳಿಂದಲೂ (ಹೀಗೆಂದು ತಿಳಿಯಬೇಕು).

## ಇದು ಅಸಂಸಾರಿತ್ವವರ್ಣನೆ ಎಂಬುದಕ್ಕೆ ಬೇರೆಯ ಲಿಂಗಗಳು

( ಭಾಷ್ಯ )

೩೩೭. ಇತಶ್ಚ ಅಸಂಸಾರಿಸ್ವರೂಪಪ್ರತಿಪಾದನಪರಮೇವ ಏತದ್ವಾಕ್ಯಮ್

---

1. ಶ್ರುತಿಯು ಹೇಳುವದಕ್ಕೆ ಅತ್ಯಂತವಿರುದ್ಧವಾಗಿ ಪೂರ್ವಪಕ್ಷಿಯು ತಿಳಿದುಕೊಂಡಿರುತ್ತಾನೆ ಎಂದು ಅಭಿಪ್ರಾಯ.

2. ಅವಸ್ಥೆಗಳು ಬೇರ್ಪಡುತ್ತಿದ್ದರೂ ಆತ್ಮನ ಚೈತನ್ಯಸ್ವರೂಪವು ಇದ್ದಂತೆ ಇರುವದರಿಂದ ಅವಸ್ಥೆಗಳಾಗಲಿ ಯಾವದಾದರೊಂದು ಅವಸ್ಥೆಯಲ್ಲಿ ಕಾಣುವ ಸಂಸಾರಿತ್ವವಾಗಲಿ ಆತ್ಮನಿಗೆ ನಿಜವಾಗಿ ಅಂಟಿಕೊಂಡಿರುವದಿಲ್ಲ ಎಂದು ತಿಳಿಸುವದೇ ಅವಸ್ಥಾಶ್ರುತಿಯ ಉದ್ದೇಶವೆಂದು ಭಾವ. ಮಾಂ. ಭಾ. ೭ (ಭಾ. ಭಾ. ೪೧).

3. ಆದ್ದರಿಂದ ಇಲ್ಲಿ ಸಂಸಾರಿತ್ವವು ವಿವಕ್ಷಿತವಲ್ಲ.

4. ಆದ್ದರಿಂದ ಪುಣ್ಯಾಪುಣ್ಯಸಂಬಂಧವಿಲ್ಲದ ಆತ್ಮನನ್ನೇ ಇಲ್ಲಿ ಹೇಳಬೇಕೆಂದು ಹೊರಟಿದೆ ಎಂದಾಯಿತು. ಆತ್ಮನಿಗೆ ಅವಸ್ಥೆಯ ಧರ್ಮಗಳು ಸೇರಿರುವದಿಲ್ಲವೆಂದು ತಿಳಿಸುವದೇ ಶ್ರುತಿಯ ಉದ್ದೇಶವೇ ಹೊರತು ಅವಸ್ಥಾವತ್ತ್ವವನ್ನು ಹೇಳುವವಲ್ಲ ಎಂದು ಇದರಿಂದ ಗೊತ್ತಾಗುತ್ತದೆ.

ಇತ್ಯವಗನ್ತವ್ಯಮ್ । ಯದಸ್ಮಿನ್ ವಾಕ್ಯೇ ಪತ್ಯಾದಯಃ ಶಬ್ದಾ ಅಸಂಸಾರಿಸ್ವರೂಪಪ್ರತಿಪಾದನಪರಾಃ ಸಂಸಾರಿಸ್ವಭಾವಪ್ರತಿಷೇಧನಾಶ್ಚ ಭವನ್ತಿ । "ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧೀನಪತಿಃ" (ಬೃ. ೪-೪-೨೨) ಇತ್ಯೇವಂಜಾತೀಯಕಾಃ ಅಸಂಸಾರಿಸ್ವಭಾವಪ್ರತಿಪಾದನಪರಾಃ । "ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ ಕನೀಯಾನ್" (ಬೃ. ೪-೪-೨೨) ಇತ್ಯೇವಂಜಾತೀಯಕಾಃ ಸಂಸಾರಿಸ್ವಭಾವಪ್ರತಿಷೇಧನಾಃ। ತಸ್ಮಾತ್ ಅಸಂಸಾರೀ ಪರಮೇಶ್ವರ ಇಹೋಕ್ತಃ ಇತ್ಯವಗಮ್ಯತೇ ॥

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಅಸಂಸಾರಿಸ್ವರೂಪವನ್ನು ಪ್ರತಿಪಾದನೆಮಾಡುವದರಲ್ಲಿಯೇ ಈ ವಾಕ್ಯಕ್ಕೆ ತಾತ್ಪರ್ಯವಿದೆ ಎಂದು ನಿರ್ಣಯಿಸಬೇಕು. ಏಕೆಂದರೆ ಈ ವಾಕ್ಯದಲ್ಲಿ 'ಪತಿ' ಮುಂತಾದ ಅಸಂಸಾರಿಸ್ವರೂಪವನ್ನು ಪ್ರತಿಪಾದಿಸುವ ಶಬ್ದಗಳೂ ಸಂಸಾರಿಸ್ವಭಾವವನ್ನು ಅಲ್ಲಗಳೆಯುವ (ಶಬ್ದಗಳೂ) ಇರುತ್ತವೆ. "ಸರ್ವವನ್ನೂ ವಶದಲ್ಲಿಟ್ಟುಕೊಂಡಿರುವವನು, ಸರ್ವವನ್ನೂ ಆಳುವವನು, ಸರ್ವಕ್ಕೂ ಅಧಿಪತಿಯು" (ಬೃ. ೪-೪-೨೨) ಎಂಬೀ ಜಾತಿಯವು ಅಸಂಸಾರಿಸ್ವಭಾವವನ್ನು ತಿಳಿಸುವದರಲ್ಲಿ ತಾತ್ಪರ್ಯವುಳ್ಳವು ; "ಅವನು ಒಳ್ಳೆಯ ಕರ್ಮದಿಂದ ದೊಡ್ಡವನಾಗುವದಿಲ್ಲ, ಕೆಟ್ಟ ಕರ್ಮದಿಂದಲೂ ಸಣ್ಣವನಾಗುವದೇ ಇಲ್ಲ" (ಬೃ. ೪-೪-೨೨) ಎಂಬೀ ಜಾತಿಯವು ಸಂಸಾರಿಸ್ವಭಾವವನ್ನು ಅಲ್ಲಗಳೆಯುವ (ವಾಕ್ಯಗಳು).

ಆದ್ದರಿಂದ ಇಲ್ಲಿ ಅಸಂಸಾರಿಯಾದ ಪರಮೇಶ್ವರನನ್ನೇ ಹೇಳಿದೆ ಎಂದಾಯಿತು.

---

# ಅಧಿಕರಣಗಳ ಸಾರ

## ೧. ದ್ಯುಭ್ವಾದ್ಯಧಿಕರಣ

**ವಿಷಯವೂ ಸಂಶಯವೂ:** "ಯಸ್ಮಿನ್ ದ್ಯೌಃ ಪೃಥಿವೀ ಚಾನ್ತರಿಕ್ಷಮ್ .." (ಮುಂ. ೨-೨-೫) ಎಂಬ ಮುಂಡಕವಾಕ್ಯದಲ್ಲಿ ದ್ಯುಲೋಕಾದಿಗಳಿಗೆ ಆಶ್ರಯವೆಂದು ಹೇಳಿರುವದು ಪರಬ್ರಹ್ಮವೊ, ಬೇರೊಂದು ಪದಾರ್ಥವೊ ?

**ಪೂರ್ವಪಕ್ಷ:** ಇದನ್ನು ಸೇತುವೆಂದು ಕರೆದಿರುವದರಿಂದ ಇದು ಬ್ರಹ್ಮವಾಗಲಾರದು. ಎಲ್ಲಕ್ಕೂ ಕಾರಣವೆಂದು ಸಾಂಖ್ಯರು ಒಪ್ಪಿರುವ ಪ್ರಧಾನ, ಅಥವಾ ಎಲ್ಲವನ್ನೂ ಹಿಡಿದೆತ್ತಿರುವನೆಂದು ಶ್ರುತಿಯಲ್ಲಿ ಹೇಳಿರುವ ಸಮಷ್ಟಿವಾಯು ಅಥವಾ ಭೋಕ್ತೃವಾದ ಶಾರೀರ – ಇವುಗಳಲ್ಲಿ ಯಾವದೋ ಒಂದನ್ನು ಇಲ್ಲಿ ಹೇಳಿದೆ ಎನ್ನಬಹುದು.

**ಸಿದ್ಧಾಂತ:** ಇಲ್ಲಿ 'ತಮೇವೈಕಂ ಜಾನಥ ಆತ್ಮಾನಮ್' ಎಂದು ಆತ್ಮಶಬ್ದವಿರುವದರಿಂದಲೂ ಸದ್ರೂಪವಾದ ಬ್ರಹ್ಮವೇ ಜಗತ್ತಿಗೆ ಆಶ್ರಯವೆಂದು ಛಾಂದೋಗ್ಯದಲ್ಲಿ ಹೇಳಿರುವದರಿಂದಲೂ ಇದು ಬ್ರಹ್ಮವೇ. ಇಲ್ಲಿ ಆಶ್ರಯಾಶ್ರಯಿಭಾವವು ವಿವಕ್ಷಿತವಾಗಿಲ್ಲ. ಕಾರ್ಯಪ್ರಪಂಚವನ್ನು ಲಯಮಾಡಿ ಆತ್ಮನೊಬ್ಬನನ್ನೇ ತಿಳಿದುಕೊಳ್ಳಬೇಕೆಂದು ಹೇಳಿದೆ. ಸೇತು ಎಂಬುದು ಎಲ್ಲವನ್ನೂ ತಡೆದಿಟ್ಟಿರುವದೆಂಬ ಬ್ರಹ್ಮಧರ್ಮವನ್ನು ಹೇಳುತ್ತದೆ ; ಅಥವಾ ಆತ್ಮಜ್ಞಾನವನ್ನೂ ಅನಾತ್ಮಗಳ ಮಾತನ್ನು ಬಿಡುವಿಕೆಯನ್ನೂ ಅಮೃತಕ್ಕೆ ಸೇತು ಎಂದು ಹೇಳಿದೆ. ಆದ್ದರಿಂದ ಸೇತುಶ್ರುತಿಯು ಬ್ರಹ್ಮವಾದಕ್ಕೆ ಅಡ್ಡಿಯುಲ್ಲ. ರಾಗಾದಿಕ್ಲೇಶಗಳಿಂದ ಮುಕ್ತರಾದವರೇ ಇದನ್ನು ಪಡೆದುಕೊಳ್ಳಬಹುದೆಂದು ಹೇಳಿರುವದರಿಂದಲೂ ಇದು ಬ್ರಹ್ಮವೇ. ಅಚೇತನನಾದ ಪ್ರಧಾನವನ್ನು ತಿಳಿಸುವ ಶಬ್ದವು ಯಾವದೂ ಇಲ್ಲಿಲ್ಲ ; ಚೇತನವನ್ನು ತಿಳಿಸುವ ಸರ್ವಜ್ಞನೆಂಬ ಶಬ್ದವು ಇದೆ. ಆದ್ದರಿಂದ ಇದು ಪ್ರಧಾನವಲ್ಲ. ವಾಯುವಾಚಕವಾದ ಶಬ್ದವು ಯಾವದೂ ಇಲ್ಲದ್ದರಿಂದ ಇದು ವಾಯುವೂ ಅಲ್ಲ. ಜೀವನನ್ನು ಅನುವಾದಮಾಡಿಕೊಂಡು ಅವನಿಗಿಂತ ಬೇರೆಯಾಗಿರುವ ಈಶ್ವರನನ್ನು ಹೇಳಿರುವದರಿಂದ ಇಲ್ಲಿ ಜೀವನನ್ನೂ ಹೇಳಿಲ್ಲ.

## ೨. ಭೂಮಾಧಿಕರಣ

**ವಿಷಯವೂ ಸಂಶಯವೂ:** ಛಾಂದೋಗ್ಯದಲ್ಲಿ "ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ...." ಎಂಬ ವಾಕ್ಯದಲ್ಲಿ ಹೇಳಿರುವ ಭೂಮವು ಪ್ರಾಣನೊ, ಪರಬ್ರಹ್ಮವೊ ?

**ಪೂರ್ವಪಕ್ಷ:** ಇಲ್ಲಿ ಒಂದಕ್ಕಿಂತ ಒಂದು ಹೆಚ್ಚಿನದನ್ನು ಕೇಳುತ್ತಲೂ ಹೇಳುತ್ತಲೂ ಬಂದಿದೆ. ಪ್ರಾಣನನ್ನು ಹೇಳಿದಮೇಲೆ ಪ್ರಾಣನಿಗಿಂತ ಹೆಚ್ಚಿನದು ಇದೆಯೆ ?

ಎಂದು ಕೇಳಿಲ್ಲ. ಇಂಥದ್ದೊಂದು ಇದೆ ಎಂದು ಉತ್ತರವನ್ನೂ ಕೊಟ್ಟಿಲ್ಲ. ಭೂಮಕ್ಕೆ ಹೇಳಿರುವ ದ್ವಿತೀಯವಸ್ತುವಿಲ್ಲದಿರುವದೇ ಮುಂತಾದ ಧರ್ಮಗಳು ಸುಷುಪ್ತ್ಯವಸ್ಥೆಯಲ್ಲಿರುವ ಪ್ರಾಣನಿಗೂ ಹೊಂದುತ್ತದೆ. ಆದ್ದರಿಂದ ಪ್ರಾಣನೇ ಭೂಮವು.

ಸಿದ್ಧಾಂತ : ನಾಮಾದಿಗಳಿಗಿಂತ ಮುಂದೆ ಹೇಳಿರುವ ವಾಕ್ಕು ಮುಂತಾದವುಗಳು ಅವಕ್ಕಿಂತ ಬೇರೆಯಾಗಿರುವಂತೆ ಪ್ರಾಣನಿಗಿಂತ ಮುಂದೆ ಹೇಳಿರುವ ಭೂಮವು ಪ್ರಾಣನಿಗಿಂತ ಬೇರೆಯಾಗಿರಬೇಕೆಂದು ಏರ್ಪಡುತ್ತದೆ. "ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ" ಎಂಬ ವಾಕ್ಯದಲ್ಲಿ ಹೇಳಿರುವ ಅತಿವಾದಿತ್ವವು ಸತ್ಯದಿಂದ ಅತಿವಾದಿಯಾಗಿರುವವನಿಗೆ ಹೊಂದುತ್ತದೆಯೇ ಹೊರತು ಪ್ರಾಣವಿಜ್ಞಾನಿಗೆ ಹೊಂದುವದಿಲ್ಲ. ಇಲ್ಲಿ 'ತು' ಎಂಬ ಶಬ್ದವು ಪ್ರಕರಣಭೇದವನ್ನು ಸೂಚಿಸುತ್ತದೆ. ಇಲ್ಲಿ ಹೇಳಿರುವ ಆತ್ಮತ್ವಾದಿಗಳೂ ಶೋಕನಾಶಕತ್ವವೂ ಮಿಕ್ಕ ಧರ್ಮಗಳೂ ಪರಮಾತ್ಮನಿಗೇ ಹೊಂದುತ್ತವೆ. ಆದ್ದರಿಂದ ಭೂಮವು ಪರಮಾತ್ಮನೇ.

## ೩. ಅಕ್ಷರಾಧಿಕರಣ

ವಿಷಯವೂ ಸಂಶಯವೂ : ಬೃಹದಾರಣ್ಯಕದ "ಸ ಹೋವಾಚೈತದ್ವೈ ತದಕ್ಷರಂ ಗಾರ್ಗಿ (೩-೮-೮) ಎಂಬ ವಾಕ್ಯದಲ್ಲಿ ಹೇಳಿರುವ ಅಕ್ಷರವು ಓಂಕಾರವೆ, ಪರಮೇಶ್ವರನೆ ?

ಪೂರ್ವಪಕ್ಷ : ಅಕ್ಷರಶಬ್ದವು ವರ್ಣದಲ್ಲಿ ರೂಢವಾಗಿರುವದರಿಂದಲೂ ಓಂಕಾರವನ್ನು ಶ್ರುತಿಯಲ್ಲಿ ಉಪಾಸನೆಗಾಗಿ ಸರ್ವಾತ್ಮಕವೆಂದು ಹೊಗಳಿರುವದು ಕಂಡಿರುವದರಿಂದಲೂ ಓಂಕಾರವೇ ಈ ಅಕ್ಷರವು.

ಸಿದ್ಧಾಂತ : ಅವ್ಯಾಕೃತಾಕಾಶದವರೆಗಿನದೆಲ್ಲವೂ ಈ ಅಕ್ಷರದಲ್ಲಿ ಓತಪ್ರೋತವಾಗಿರುವದೆಂದು ಹೇಳಿರುವದರಿಂದ ಬ್ರಹ್ಮವೇ ಅಕ್ಷರವು ಓಂಕಾರವನ್ನು ಸರ್ವಾತ್ಮಕವೆಂದು ಶ್ರುತಿಯಲ್ಲಿ ಹೊಗಳಿರುವದು ನಿಜ; ಆದರೆ ಹಾಗೆ ಹೊಗಳಿರುವದು ಓಂಕಾರವು ಬ್ರಹ್ಮಜ್ಞಾನಕ್ಕೆ ಉಪಾಯವೆಂಬ ಕಾರಣದಿಂದ. ನಾಶವಾಗುವದಲ್ಲ, ಎಲ್ಲವನ್ನೂ ವ್ಯಾಪಿಸಿಕೊಂಡಿದೆ ಎಂಬರ್ಥದಲ್ಲಿ ಅಕ್ಷರ ಎಂಬ ಹೆಸರು ಬ್ರಹ್ಮಕ್ಕೂ ಸಲ್ಲುತ್ತದೆ. ಸೂರ್ಯಚಂದ್ರಾದಿಗಳನ್ನೂ ಇದು ತನ್ನ ಅಪ್ಪಣೆಯಂತೆ ನಡೆಸುತ್ತದೆ ಎಂದು ಹೇಳಿರುವದರಿಂದ ಇದು ಚೇತನವು, ಅಚೇತನವಾದ ಪ್ರಧಾನವಲ್ಲ. "ಇದಕ್ಕಿಂತ ಬೇರೆ ದ್ರಷ್ಟೃವಿಲ್ಲ" ಎಂದು ಆತ್ಮಭೇದವನ್ನು ಅಲ್ಲಗಳೆದಿರುವದರಿಂದಲೂ ಚಕ್ಷುರಾದಿಗಳಿಲ್ಲವೆಂದು ಉಪಾಧಿಗಳನ್ನು ಅಲ್ಲಗಳೆದಿರುವದರಿಂದಲೂ ಇದು ಜೀವನೂ ಅಲ್ಲ.

## ೪. ಈಕ್ಷತಿಕರ್ಮವ್ಯಪದೇಶಾಧಿಕರಣ

ವಿಷಯವೂ ಸಂಶಯವೂ : "ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ" (ಪ್ರ. ೫-೫) ಎಂಬ ಪ್ರಶ್ನೋಪನಿಷತ್ತಿನ ವಾಕ್ಯದಲ್ಲಿ ಅಭಿಧ್ಯಾನಕ್ಕೆ ಕರ್ಮವು ಪರಬ್ರಹ್ಮವೊ, ಅಪರಬ್ರಹ್ಮವೊ ?

**ಪೂರ್ವಪಕ್ಷ:** ಇದು ಅಪರಬ್ರಹ್ಮವೇ. ಏಕೆಂದರೆ ಸೂರ್ಯನಲ್ಲಿ ಸೇರಿಕೊಳ್ಳುವದು, ಬ್ರಹ್ಮಲೋಕಕ್ಕೆ ಹೋಗುವದು -ಎಂಬ ದೇಶಪರಿಚ್ಛಿನ್ನವಾದ ಫಲವನ್ನು ಇಲ್ಲಿ ಹೇಳಿರುತ್ತದೆ. "ಪರಂ ಪುರುಷಮ್" ಎಂಬಲ್ಲಿ ಪರ ಎಂಬ ವಿಶೇಷಣವಿರುವದು ನಿಜ; ಆದರೆ ವಿರಾಟ್ಪುರುಷನ ಅಪೇಕ್ಷೆಯಿಂದ ಅಪರಬ್ರಹ್ಮವೂ ಪರವೆನಿಸಬಹುದಾಗಿದೆ.

**ಸಿದ್ಧಾಂತ:** ಇದು ಪರಬ್ರಹ್ಮವೇ. ಏಕೆಂದರೆ "ಪರಾತ್ಪರಂ ಪುರುಷಮೀಕ್ಷತೇ" (೫-೫) ಎಂದು ನೋಡುವದೆಂಬ ಕ್ರಿಯೆಗೆ ಕರ್ಮವೆಂದು ಪುರುಷನನ್ನು ಹೇಳಿರುತ್ತದೆ. "ಜೀವಘನನಾದ ಪರನಿಗಿಂತ ಪರನಾದ ಪುರುಷನನ್ನು ಕಾಣುತ್ತಾನೆ" ಎಂಬ ವಾಕ್ಯವಿದೆಯಷ್ಟೆ: ಅದಕ್ಕೆ ಜೀವಘನನಿಗಿಂತ ಅಥವಾ ಬ್ರಹ್ಮಲೋಕಕ್ಕಿಂತ ಹೆಚ್ಚಿನವನಾದ ಪುರುಷನನ್ನು ಕಾಣುತ್ತಾನೆ ಎಂದರ್ಥ. ಫಲವಾಕ್ಯದಲ್ಲಿ "ಪರಪುರುಷನನ್ನು ಕಾಣುತ್ತಾನೆ" ಎಂದು ಹೇಳಿರುವದರಿಂದ ಅವನನ್ನೇ ಅಭಿಧ್ಯಾನಮಾಡಬೇಕೆಂದು ಪ್ರಕೃತಶ್ರುತಿಯಲ್ಲಿ ಹೇಳಿದೆ ಎಂದು ತಿಳಿಯುವದೇ ಯುಕ್ತ. ಓಂಕಾರದ ಮೂಲಕವಾಗಿ ಮಾಡುವ ಧ್ಯಾನವಿದಾದ್ದರಿಂದ, ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಜ್ಞಾನವನ್ನು ಪಡೆದು ಕ್ರಮಮುಕ್ತಿಯನ್ನು ಪಡೆದುಕೊಳ್ಳುತ್ತಾನೆ. ಆದ್ದರಿಂದ ಇಲ್ಲಿ ದೇಶಪರಿಚ್ಛಿನ್ನವಾದ ಫಲವನ್ನು ಹೇಳಿರುವದು ಸಿದ್ಧಾಂತಕ್ಕೆ ವಿರುದ್ಧವಲ್ಲ.

# ೫. ದಹರಾಧಿಕರಣ

**ವಿಷಯವೂ ಸಂಶಯವೂ:** "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಃ" (ಛಾಂ. ೮-೧-೧) ಎಂದು ಉಪಾಸ್ಯವಾಗಿ ಹೇಳಿರುವ ದಹರಾಕಾಶವು ಭೂತಾಕಾಶವೆ, ವಿಜ್ಞಾನಾತ್ಮನೆ, ಅಥವಾ ಪರಮಾತ್ಮನೆ ?

**ಪೂರ್ವಪಕ್ಷ:** ಆಕಾಶಶಬ್ದವು ಭೂತಾಕಾಶದಲ್ಲಿ ರೂಢವಾಗಿರುವದರಿಂದ ಭೂತಾಕಾಶವನ್ನೇ ಇಲ್ಲಿ ಹೇಳಿದೆ. ಆಧ್ಯಾತ್ಮಿಕ, ಆಧಿಭೌತಿಕ -ಎಂಬ ಭೇದದಿಂದ ಆಕಾಶವನ್ನೇ ಆಕಾಶಕ್ಕೆ ಹೋಲಿಸಬಹುದಾದ್ದರಿಂದ ಹೃದಯಾಕಾಶವನ್ನು ಹೊರಗಿನ ಆಕಾಶಕ್ಕೆ ಹೋಲಿಸಿರುವ ವಾಕ್ಯವೇನೂ ಈ ನಮ್ಮ ಮತಕ್ಕೆ ವಿರುದ್ಧವಲ್ಲ. ಅಥವಾ ಜೀವನೇ ದಹರಾಕಾಶವು. ಶರೀರವನ್ನು 'ಬ್ರಹ್ಮಪುರ' ಎಂದು ಇಲ್ಲಿ ಕರೆದಿರುವದು ಜೀವನಿಗೆ ಹೊಂದುತ್ತದೆ, ಶರೀರದ ಒಡೆತನವಿಲ್ಲದ ಬ್ರಹ್ಮಕ್ಕೆ ಹೊಂದುವದಿಲ್ಲ. ಜೀವನನ್ನು ಬ್ರಹ್ಮವೆಂದು ಕರೆದಿರುವದೂ ಆಕಾಶಕ್ಕೆ ಹೋಲಿಸಿರುವ ಅವನು ಬ್ರಹ್ಮಕ್ಕಿಂತ ಬೇರೆಯಲ್ಲ ಎಂದು ತಿಳಿಸುವದಕ್ಕೆ. ಜೀವನಿಗೆ ಮನಸ್ಸು ಉಪಾಧಿಯಾಗಿರುವದರಿಂದಲೂ ಮನಸ್ಸು ಬಲುಮಟ್ಟಿಗೆ ಹೃದಯದಲ್ಲಿಯೇ ಇರುವದರಿಂದಲೂ ದಹರಾಕಾಶರೂಪನಾದ ಜೀವನು ಹೃದಯದೊಳಗೆ ಇರುತ್ತಾನೆಂದು ಹೇಳಿರುವದೂ ಹೊಂದುತ್ತದೆ. ಇದೂ ಅಲ್ಲದೆ ಪ್ರಕೃತವಾಕ್ಯದಲ್ಲಿ ಆಕಾಶವನ್ನು ಉಪಾಸನೆಮಾಡಬೇಕೆಂದೇನೂ ಹೇಳಿಲ್ಲ; ಅದರಲ್ಲಿರುವದನ್ನು ಉಪಾಸನೆ ಮಾಡಬೇಕೆಂದಿದೆ. ಆದ್ದರಿಂದ ಜೀವನೇ ದಹರವು, ಅದರಲ್ಲಿರುವ ಬ್ರಹ್ಮವನ್ನು ಉಪಾಸನೆಮಾಡಬೇಕು ಎಂದೂ ವಾಕ್ಯಕ್ಕೆ ಅರ್ಥವನ್ನು ಮಾಡಬಹುದು.

**ಸಿದ್ಧಾಂತ:** ಬ್ರಹ್ಮವೇ ದಹರಾಕಾಶವು. ಏಕೆಂದರೆ 'ಹೃದಯವು ದಹರವಾಗಿದೆ. ಅದರಲ್ಲಿರುವ ಆಕಾಶವು ಇನ್ನೂ ಅಲ್ಪವಾಗಿದೆ; ಅಲ್ಲಿ ಉಪಾಸನೆಮಾಡತಕ್ಕದ್ದು ಯಾವ

ದಿದೆ ?' ಎಂಬ ಆಕ್ಷೇಪವನ್ನು ತೆಗೆದು ಅದರಲ್ಲಿ ದ್ಯಾವಾಪೃಥಿವಿಗಳೆರಡೂ ಇವೆ- ಎಂದು ಮುಂತಾಗಿ ಅಲ್ಪತ್ವಪರಿಹಾರವನ್ನು ಹೇಳಿರುವದರಿಂದ ಇದು ಭೂತಾಕಾಶವಾಗಲಾರದು. ಕಲ್ಪಿತ ಭೇದವನ್ನು ಆಕಾಶಕ್ಕೆ ಒಪ್ಪಿದರೂ ಹೃದಯದ ಆಕಾಶವು ಹೊರಗಿನ ಆಕಾಶಕ್ಕೆ ಸಮವಾಗಲಾರದು. ಆದ್ದರಿಂದ ದಹರಾಕಾಶವು ಭೂತಾಕಾಶವೆಂದಿಟ್ಟುಕೊಂಡರೆ ಈ ಎರಡು ಆಕಾಶಗಳೂ ಸಮವಾಗಿರುತ್ತವೆ ಎಂದಿರುವ ಶ್ರುತಿಯು ಹೊಂದುಗೆಯಾಗುವದಿಲ್ಲ. ಜೀವನೂ ದಹರಾಕಾಶವಲ್ಲ. ಏಕೆಂದರೆ ಜೀವನು ಪರಿಚ್ಛಿನ್ನನಾಗಿರುತ್ತಾನಾದ್ದರಿಂದ ಅಲ್ಪತ್ವವನ್ನು ಅಲ್ಲಗಳೆದು ದಹರವು ಹೊರಗಿನ ಆಕಾಶಕ್ಕೆ ಸಮವೆಂದು ಹೇಳುವ ಶ್ರುತಿಯು ಜೀವನ ವಿಷಯದಲ್ಲಿ ಹೊಂದುಗಡೆಯಾಗದೆ ಹೋಗುತ್ತದೆ. ಬ್ರಹ್ಮವು ಹೃದಯದಲ್ಲಿ ಸಾಕ್ಷಾತ್ಕಾರವಾಗುವದರಿಂದ, ಅಥವಾ ಶಾಲಿಗ್ರಾಮದಲ್ಲಿ ವಿಷ್ಣುವಿನಂತೆ ಅಲ್ಲಿ ಉಪಾಸ್ಯವಾಗಿರುವದರಿಂದ, ಹೃದಯವನ್ನು ಬ್ರಹ್ಮಪುರವೆಂದು ಮುಖ್ಯಾರ್ಥದಲ್ಲಿಯೇ ಕರೆಯಬಹುದಾಗಿದೆ. ದಹರಾಕಾಶವು ಉಪಾಸ್ಯವಲ್ಲ ಎಂದು ಪೂರ್ವಪಕ್ಷಿ ಹೇಳಿರುವದು ಸರಿಯಲ್ಲ. ಏಕೆಂದರೆ ದಹರಾಕಾಶವೇ ಆತ್ಮನು ; ಆ ಆತ್ಮನನ್ನೂ ದಹರದಲ್ಲಿರುವ ಸತ್ಯಕಾಮತ್ವಾದಿಗಳನ್ನೂ ಉಪಾಸನೆಯಿಂದ ಸಾಕ್ಷಾತ್ಕರಿಸಿಕೊಂಡವರಿಗೆ ಎಲ್ಲಾ ಲೋಕಗಳಲ್ಲಿಯೂ ಕಾಮಚಾರವುಂಟಾಗುವದು ಎಂದು ಶ್ರುತಿಯಲ್ಲಿದೆ. ಪ್ರಕೃತವಾದ ದಹರವನ್ನು ಬ್ರಹ್ಮಲೋಕವೆಂದು ಕರೆದಿರುತ್ತದೆ ; ಅದು ಲೋಕಗಳು ನಾಶವಾಗದಿರುವಂತೆ ನೋಡಿಕೊಳ್ಳುವ ವಿಧೃತಿಯಾಗಿದೆ ಎಂದು ಹೊಗಳಿರುವದೂ ಇದು ಬ್ರಹ್ಮವೇ ಎಂಬುದಕ್ಕೆ ಬೆಂಬಲವಾದ ಲಿಂಗವು. ಆಕಾಶಶಬ್ದವು ಶ್ರುತಿಯಲ್ಲಿ ಬ್ರಹ್ಮವೆಂಬರ್ಥದಲ್ಲಿ ಪ್ರಸಿದ್ಧವಾಗಿರುತ್ತದೆ, ಯಾದ್ದರಿಂದಲೂ ಇದು ಬ್ರಹ್ಮವೇ. ಆಕಾಶದ ಹೋಲಿಕೆ, ಅಪಹತಪಾಪ್ಮತ್ವಾದಿಗಳು -ಯಾವವೂ ಜೀವನಿಗೆ ಹೊಂದುವದಿಲ್ಲ. 'ಮುಂದೆ ಪ್ರಜಾಪತಿವಾಕ್ಯದಲ್ಲಿ ಅವಸ್ಥಾತ್ರಯಪರೀಕ್ಷೆಯ ಮೂಲಕವಾಗಿ ಜೀವನಲ್ಲಿ ಅಪಹತಪಾಪ್ಮತ್ವವೇ ಮುಂತಾದವುಗಳು ಇರುವವೆಂದು ತೋರಿಸಿಕೊಟ್ಟಿರುವದು ನಿಜ; ಆದರೆ ಆ ವಾಕ್ಯವು ಜೀವನನ್ನು ಅವಸ್ಥಾತೀತವಾದ ಬ್ರಹ್ಮಸ್ವರೂಪದಿಂದ ತಿಳಿಸುವದಕ್ಕೇ ಬಂದಿರುತ್ತದೆ. ಬ್ರಹ್ಮವು ಸರ್ವಗತವಾಗಿರುವದರಿಂದ ದಹರಾಕಾಶವು ಹೇಗಾದೀತೆಂದು ಶಂಕಿಸಬಾರದು ; ಏಕೆಂದರೆ ಉಪಾಸನೆಗಾಗಿ ಅದನ್ನು ಉಪಾಧಿವಶದಿಂದ ದಹರಾಕಾಶವೆಂದು ಶ್ರುತಿಯು ತಿಳಿಸಿರುತ್ತದೆ.

## ೬. ಅನುಕೃತ್ಯಧಿಕರಣ

**ವಿಷಯವೂ ಸಂಶಯವೂ :** "ನ ತತ್ರ ಸೂರ್ಯೋ ಭಾತಿ ನ ಚನ್ದ್ರತಾರಕಂ ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ । ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ" (ಮುಂ. ೨-೨-೧೧) ಎಂಬ ಮುಂಡಕವಾಕ್ಯದಲ್ಲಿ ಅದು ಬೆಳಗುವದನ್ನನುಸರಿಸಿ ಎಲ್ಲವೂ ಬೆಳಗುತ್ತದೆ, ಅದರ ಬೆಳಕಿನಿಂದ ಎಲ್ಲವೂ ಬೆಳಗುತ್ತದೆ- ಎಂದು ವರ್ಣಿಸಿರುವದು ಯಾವದಾದರೊಂದು ತೇಜೋಧಾತುವೆ, ಅಥವಾ ಚೈತನ್ಯರೂಪನಾದ ಪರಮಾತ್ಮನೆ ?

**ಪೂರ್ವಪಕ್ಷ :** 'ಅಲ್ಲಿ ಸೂರ್ಯನು ಬೆಳಗುವದಿಲ್ಲ' ಎಂದು ಮುಂತಾಗಿ ತೇಜೋಧಾತುಗಳನ್ನೇ ಬೆಳಗುವದಿಲ್ಲವೆಂದು ಹೇಳಿರುವದರಿಂದಲೂ ತೇಜೋಧಾತುಗಳು ತೇಜೋಧಾತುವನ್ನೇ ಅನುಸರಿಸಿ ಬೆಳಗುವವೆಂಬುದು ಯುಕ್ತವಾಗಿರುವದರಿಂದಲೂ ಇದು ತೇಜೋಧಾತುವೇ.

**ಸಿದ್ಧಾಂತ :** ಇದು ಪರಮಾತ್ಮನೇ. ಒಂದು ದೀಪವು ಮತ್ತೊಂದು ದೀಪವನ್ನನುಸರಿಸಿ ಬೆಳಗುವದಿಲ್ಲವಾದ್ದರಿಂದ ತೇಜೋಧಾತುಗಳು ಅನುಸರಿಸಿ ಬೆಳಗುವದಕ್ಕೆ ಮತ್ತೊಂದು ತೇಜೋಧಾತು ಬೇಕೆನ್ನುವದು ಸರಿಯಲ್ಲ. ಒಂದು ತೇಜಸ್ಸಿನಿಂದ ಮತ್ತೊಂದು ಮಂಕಾಗುವದು ಕಂಡಿದೆಯೇ ಹೊರತು ಅದನ್ನನುಸರಿಸಿ ಬೆಳಗುವದು ಕಂಡಿಲ್ಲ. ಪರಮಾತ್ಮನು ಭಾರೂಪನೆಂದು ಶ್ರುತ್ಯಂತರದಲ್ಲಿದೆ. ಕಬ್ಬಿಣವು ಭಿನ್ನಸ್ವಭಾವಕವಾದ ಅಗ್ನಿಯನ್ನನುಸರಿಸಿ ಸುಡುವದು ಕಂಡುಬರುವದರಿಂದ ಭಿನ್ನಸ್ವಭಾವಕನಾದ ಚಿದಾತ್ಮನನ್ನನುಸರಿಸಿ ಸೂರ್ಯಾದಿಗಳು ಬೆಳಗುವದೆಂಬುದು ವಿರುದ್ಧವಲ್ಲ. 'ಅವರ ಬೆಳಕಿನಿಂದ ಎಲ್ಲವೂ ಬೆಳಗುತ್ತದೆ' ಎಂದಿರುವದರಿಂದ ಸೂರ್ಯಾದಿಗಳು ಮಾತ್ರ ಅವರಿಂದ ಬೆಳಗುತ್ತಾರೆಂದು ಕಲ್ಪಿಸುವದೂ ಸರಿಯಲ್ಲ. ಬ್ರಹ್ಮಚೈತನ್ಯವು ಎಲ್ಲವನ್ನೂ ತೋರಿಸಿಕೊಡುತ್ತದೆ, ಅದನ್ನು ಯಾವದೂ ತೋರಿಸಿಕೊಡಲಾರದು ; ಆದ್ದರಿಂದ ಅದನ್ನು 'ಸೂರ್ಯಾದಿಗಳು ಬೆಳಗುವದಿಲ್ಲ ಎಂಬುದೂ ಯುಕ್ತವಾಗಿದೆ. ಭಗವದ್ಗೀತೆಯಲ್ಲಿಯೂ ಪ್ರಾಜ್ಞಾತ್ಮನಿಗೇ ಇಂಥ ಪ್ರಕಾಶರೂಪವನ್ನು ಹೇಳಿದೆ.

## ೭. ಪ್ರಮಿತಾಧಿಕರಣ

**ವಿಷಯವೂ ಸಂಶಯವೂ:** "ಅಂಗುಷ್ಠಮಾತ್ರಃ ಪುರುಷಃ" (ಕ. ೨-೧-೧೨, ೨-೧-೧೦) ಎಂಬ ಕಠವಾಕ್ಯಗಳಲ್ಲಿ ಹೇಳಿರುವ ಪುರುಷನು ಜೀವನೊ, ಪರಮಾತ್ಮನೊ ?

**ಪೂರ್ವಪಕ್ಷ:** ಪರಿಮಾಣವು ಸೋಪಾಧಿಕನಾದ ಜೀವನಿಗೆ ಒಪ್ಪುತ್ತದೆಯೇ ಹೊರತು ಅನಂತನಾದ ಪರಮಾತ್ಮನಿಗೆ ಒಪ್ಪುವದಿಲ್ಲ, ಅಪ್ಪರಿಂದ ಇವನು ಜೀವನೇ.

**ಸಿದ್ಧಾಂತ :** ವಾಕ್ಯಶೇಷದಲ್ಲಿ 'ಭೂತಭವ್ಯಕ್ಕೆ ಈಶಾನನು' ಎಂದು ಬ್ರಹ್ಮವನ್ನು ತಿಳಿಸುವ ಈಶಾನನೆಂಬ ಶಬ್ದವೇ ಇರುವದರಿಂದಲೂ 'ಇದೇ ಅದು' ಎಂದು ಪ್ರಕೃತವಾದ ಬ್ರಹ್ಮವನ್ನೇ ಪರಾಮರ್ಶಿಸಿರುವದರಿಂದಲೂ ಇದು ಬ್ರಹ್ಮವೇ. ಶಾಸ್ತ್ರಾಧಿಕಾರಿಗಳಾದ ಮನುಷ್ಯರ ಹೃದಯವೆಂಬ ಉಪಾಧಿಯ ವಶದಿಂದ ಅಲ್ಲಿರುವ ಪರಮಾತ್ಮನಿಗೂ ಅಂಗುಷ್ಠ ಪರಿಮಾಣವನ್ನು ಹೇಳಿರುತ್ತದೆಯಾದ್ದರಿಂದ ಪರಮಾತ್ಮನ ಅನಂತತ್ವಕ್ಕೆ ಹಾನಿಯಿಲ್ಲ. ಜೀವನು ಅಂಗುಷ್ಠಮಾತ್ರನಾದರೂ ಪರಮಾರ್ಥವಾಗಿ ಪರಮಾತ್ಮನೇ ಎಂಬುದನ್ನು ಈ ಶ್ರುತಿಯು ತಿಳಿಸುತ್ತದೆಯಾದ್ದರಿಂದ ಯಾರಿಗೂ ಪರಿಮಾಣವನ್ನು ಹೇಳುವದಕ್ಕೆ ಬಂದಿರುವದೇ ಇಲ್ಲ.

## ೮. ದೇವತಾಧಿಕರಣ

**ವಿಷಯವೂ ಸಂಶಯವೂ:** ಶಾಸ್ತ್ರವು ಮನುಷ್ಯರಿಗೆ ಎಂದು ಹಿಂದಿನ ಸೂತ್ರದಲ್ಲಿ ಹೇಳಿದೆ. ಮನುಷ್ಯರಿಗೆ ಮಾತ್ರವೇ ಈ ಶಾಸ್ತ್ರದಲ್ಲಿ ಅಧಿಕಾರವೊ, ದೇವಾದಿಗಳಿಗೂ ಉಂಟೊ ?

**ಪೂರ್ವಪಕ್ಷ:** ದೇವತೆಗಳಿಗೆ ಶರೀರಾದಿಗಳಿಲ್ಲ. ಶರೀರಾದಿಗಳು ಅವರಿಗಿದ್ದರೆ ಅವರು ಎಲ್ಲಾ ಕರ್ಮಗಳಲ್ಲಿಯೂ ಸಂನಿಹಿತವಾಗಿದ್ದು ಕರ್ಮಕ್ಕೆ ಅಂಗವಾಗಿರುವರೆಂದು

ಒಪ್ಪಬೇಕಾಗುವದು. ಅದನ್ನು ಯಾರೂ ಕಂಡಿಲ್ಲ. ಶರೀರವಿದ್ದರೆ ಅವರಿಗೆ ಜನನ ಮರಣಗಳು ಎಂದಾಗುವದು. ಆಗ ನಿತ್ಯವಾದ ಶಬ್ದಕ್ಕೂ ನಿತ್ಯವಾದ ಅರ್ಥಕ್ಕೂ ನಿತ್ಯ ಸಂಬಂಧವಿರುತ್ತದೆ ಎಂಬ ಸಿದ್ಧಾಂತಕ್ಕೆ ಹಾನಿ ಬರುವದು; ಪ್ರಲಯದಲ್ಲಿ ಎಲ್ಲವೂ ನಿರ್ಲೇಪವಾಗಿ ನಾಶವಾಗುವದರಿಂದಲೂ ಈ ಸಿದ್ಧಾಂತಕ್ಕೆ ಹಾನಿಯಾಗುವದು. ಆದಿತ್ಯಾದಿ ದೇವತೆಗಳಿಗೆ ಆದಿತ್ಯಾದಿಗಳನ್ನು ಉಪಾಸನೆಮಾಡುವ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರವೂ ಇರುವಹಾಗಿಲ್ಲ. ನಿಜವಾಗಿ ನೋಡಿದರೆ ಸೂರ್ಯಮಂಡಲಕ್ಕಿಂತ ಬೇರೆಯಾದ ಆದಿತ್ಯನೆಂಬ ದೇವತೆಯೇ ಇಲ್ಲ. ಈ ಎಲ್ಲಾ ಕಾರಣಗಳಿಂದ ದೇವಾದಿಗಳಿಗೆ ಅಧಿಕಾರವಿಲ್ಲ.

ಸಿದ್ಧಾಂತ: ದೇವತೆಗಳಿಗೆ ಶರೀರವುಂಟೆಂದು ಮಂತ್ರ, ಅರ್ಥವಾದ, ಇತಿಹಾಸ, ಪುರಾಣ, ಲೋಕಪ್ರಸಿದ್ಧಿ- ಇವುಗಳಿಂದ ಸಿದ್ಧವಾಗುತ್ತದೆ. ಅವರಿಗೆ ಅರ್ಥಿತ್ವಾದಿಯಾದ ಅಧಿಕಾರಕಾರಣವೂ ಉಂಟು. ಆದ್ದರಿಂದ ಅವರಿಗೂ ವಿದ್ಯೆಯಲ್ಲಿ ಅಧಿಕಾರವಿದೆ. ಉಪನಯನವಿಲ್ಲದಿದ್ದರೂ ಅವರು ಸ್ವಯಂಪ್ರತಿಭಾತವೇದರಾಗಿರುವದರಿಂದ ಅಧಿಕಾರಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

ದೇವತೆಗಳಿಗೆ ಶರೀರಾದಿಗಳುಂಟು ಎಂದು ತಿಳಿದಮಾತ್ರದಿಂದ ಕರ್ಮವಿಷಯದಲ್ಲಿ ಯಾವ ವಿರೋಧವೂ ಇರುವದಿಲ್ಲ; ಏಕೆಂದರೆ ದೇವತೆಯು ತನಗೆ ಸಹಜವಾಗಿರುವ ಸಿದ್ಧಿಯಿಂದ ಒಂದೇ ಕಾಲದಲ್ಲಿ ಅನೇಕ ರೂಪಗಳನ್ನು ಧರಿಸಿ ಅನೇಕ ಯಾಗಗಳಲ್ಲಿ ಅಂಗವಾಗಬಹುದು, ತನಗೆ ಅಂತರ್ಧಾನಾದಿ ಶಕ್ತಿಯಿರುವದರಿಂದ ಮತ್ತೊಬ್ಬರಿಗೆ ಕಾಣಿಸದೆಯೂ ಇರಬಹುದು. ಇದಲ್ಲದೆ ಯಾಗವೆಂದರೆ ದೇವತೆಗಳನ್ನುದ್ದೇಶಿಸಿ ಮಾಡುವ ದ್ರವ್ಯತ್ಯಾಗವು; ಆದ್ದರಿಂದ ಒಬ್ಬ ದೇವತೆಯನ್ನುದ್ದೇಶಿಸಿ ಅನೇಕರು ಏಕಕಾಲದಲ್ಲಿ ತಮ್ಮತಮ್ಮ ದ್ರವ್ಯವನ್ನು ತ್ಯಾಗಮಾಡುವದಕ್ಕೆ ಅಡ್ಡಿಯಿರುವದಿಲ್ಲ. ಇದರಂತೆ ಶಬ್ದವಿಷಯದಲ್ಲಿಯೂ ಯಾವ ವಿರೋಧವೂ ಇಲ್ಲ. ಏಕೆಂದರೆ ಇಂದ್ರಾದಿವ್ಯಕ್ತಿಗಳು ಹುಟ್ಟುವವಾದರೂ ಅವುಗಳ ಆಕೃತಿಗಳು ಹುಟ್ಟುವದಿಲ್ಲ; ಆದ್ದರಿಂದ ಶಬ್ದಾರ್ಥಸಂಬಂಧವು ನಿತ್ಯವಾಗಿರುವದೆಂಬ ಸಿದ್ಧಾಂತಕ್ಕೆ ಇದು ವಿರುದ್ಧವಾಗುವದಿಲ್ಲ, ವೇದನಿತ್ಯತ್ವಕ್ಕೂ ವಿರುದ್ಧವಾಗುವದಿಲ್ಲ. ವೇದಶಬ್ದಗಳನ್ನು ಸ್ಮರಿಸಿಕೊಂಡೇ ಸೃಷ್ಟಿಕರ್ತನು ಸೃಷ್ಟಿಸುವನೆಂದು ವೇದವು ಹೇಳುತ್ತಿರುವದರಿಂದಲೂ ಸೃಷ್ಟಿಪ್ರಲಯಗಳು ಮತ್ತೆಮತ್ತೆ ಆಗುತ್ತಿರುವವಾದರೂ ಪ್ರತಿಯೊಂದು ಸೃಷ್ಟಿಯಲ್ಲಿಯೂ ಸಮಾನನಾಮರೂಪಗಳ ವಸ್ತುಗಳೇ ಸೃಷ್ಟಿಯಾಗುತ್ತಿರುವದರಿಂದಲೂ ಸಿದ್ಧಾಂತದಲ್ಲಿ ಯಾವ ವಿರೋಧವೂ ಇರುವದಿಲ್ಲ.

ಆದಿತ್ಯಾದಿಸಂಬದ್ಧವಾದ ಮಧ್ವಾದಿವಿದ್ಯೆಗಳಲ್ಲಿ ಆದಿತ್ಯಾದಿಗಳಿಗೆ ಅಧಿಕಾರವಿಲ್ಲದಿದ್ದರೂ ಶುದ್ಧಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವದಕ್ಕೆ ಅಡ್ಡಿಯಿರುವದಿಲ್ಲ. ದೇವತೆಗಳಿಗೂ ಋಷಿಗಳಿಗೂ ವಿದ್ಯೆಯಲ್ಲಿ ಅಧಿಕಾರವುಂಟೆಂದು ಸೂಚಿಸುವ ಶ್ರುತಿವಾಕ್ಯವೂ ಇದೆ. ಆದಿತ್ಯಾದಿಶಬ್ದಗಳು ಸೂರ್ಯಮಂಡಲವೇ ಮುಂತಾದವುಗಳನ್ನು ಹೇಳುವವೆಂಬುದು ನಿಜ. ಆದರೆ ಚೇತನಾವಂತರಾದ ದೇವತೆಗಳನ್ನು ಅವು ಹೇಳುವವೆಂಬುದು ಮಂತ್ರಾರ್ಥವಾದಗಳಿಂದ ತಿಳಿದುಬರುತ್ತದೆ. ಅರ್ಥವಾದವೇ ಮುಂತಾದ ವಾಕ್ಯಗಳು ಅನ್ಯಪರವಾಗಿದ್ದರೂ ಅವಾಂತರತಾತ್ಪರ್ಯದಿಂದ ತಮ್ಮತಮ್ಮ ಅರ್ಥವನ್ನೂ ತಿಳಿಸಬಹುದು.

ಹಿಂದಿನ ಕಾಲದವರು ದೇವತೆಗಳೊಡನೆ ವ್ಯವಹಾರಮಾಡುತ್ತಿದ್ದರೆಂದೂ ಸ್ಮೃತಿಯಲ್ಲಿದೆ. ಆದ್ದರಿಂದ ದೇವತೆಗಳಿದ್ದಾರೆ; ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟು.

## ೯. ಅಪಶೂದ್ರಾಧಿಕರಣ

**ವಿಷಯವೂ ಸಂಶಯವೂ :** ದೇವತಾಧಿಕಾರಪ್ರಸಂಗದಿಂದ ಈ ವಿಚಾರವು ಬಂದಿರುತ್ತದೆ. ಉಪನಯನವಿಲ್ಲದ ಅಮನುಷ್ಯರಾದ ದೇವತೆಗಳಿಗೂ ಅಧಿಕಾರವಿರುವದಾದರೆ ಶೂದ್ರರಿಗೂ ಇರಬಹುದೆಂದು ತೋರುತ್ತದೆ. ಶೂದ್ರರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆ, ಇಲ್ಲವೆ ?

**ಪೂರ್ವಪಕ್ಷ :** ಶೂದ್ರನಿಗೆ ವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಶ್ರುತಿಯಲ್ಲಿ ಹೇಳಿಲ್ಲ. ಶೂದ್ರನಿಗೆ ಅಗ್ನಿಯಿಲ್ಲದ್ದರಿಂದ ಯಜ್ಞದಲ್ಲಿ ಅಧಿಕಾರವಿಲ್ಲವೆಂದು ಶ್ರುತಿಯಲ್ಲಿ ಹೇಳಿದ್ದು ಯುಕ್ತ ; ಆದರೆ ಅಗ್ನಿಯು ವಿದ್ಯೆಗೆ ಬೇಕಿರುವದಿಲ್ಲ. ಸಂವರ್ಗವಿದ್ಯೆಯಲ್ಲಿ ಬ್ರಹ್ಮವಿದ್ಯೆಯನ್ನು ಶೂದ್ರನಿಗೆ ಉಪದೇಶಿಸಿದ ಸಂದರ್ಭವಿದೆ. ಶೂದ್ರನಿಗೆ ಅರ್ಥಿತ್ವಸಾಮರ್ಥ್ಯಗಳು ಇರಬಹುದಾಗಿವೆ. ಶೂದ್ರಯೋನಿಯಲ್ಲಿ ಹುಟ್ಟಿದ ವಿದುರನೇ ಮುಂತಾದವರು ಮಹಾಜ್ಞಾನಿಗಳಾಗಿದ್ದರೆಂದು ಸ್ಮೃತಿಯಲ್ಲಿದೆ. ಆದ್ದರಿಂದ ಶೂದ್ರನಿಗೂ ಅಧಿಕಾರವುಂಟು.

**ಸಿದ್ಧಾಂತ :** ಶೂದ್ರನಿಗೆ ಅಧಿಕಾರವಿಲ್ಲ. ಏಕೆಂದರೆ ಅವನಿಗೆ ವೇದಾಧ್ಯಯನವಿಲ್ಲದ್ದರಿಂದ ಶಾಸ್ತ್ರೀಯವಾದ ಸಾಮರ್ಥ್ಯವಿಲ್ಲ; ಆದ್ದರಿಂದ ಬರಿಯ ಅರ್ಥಿತ್ವವು ಪ್ರಯೋಜನಕ್ಕೆ ಬರುವದಿಲ್ಲ. ಶೂದ್ರನಿಗೆ ಯಜ್ಞದಲ್ಲಿ ಅಧಿಕಾರವಿಲ್ಲವೆಂಬುದಕ್ಕೆ ವೇದಾಧ್ಯಯನವಿಲ್ಲವೆಂಬ ನ್ಯಾಯವಿರುತ್ತದೆ; ಆ ನ್ಯಾಯವು ವಿದ್ಯೆಗೂ ಅಧಿಕಾರವಿಲ್ಲವೆಂಬುದಕ್ಕೆ ದ್ಯೋತಕವಾಗಬಹುದಾಗಿದೆ.

ಸಂವರ್ಗವಿದ್ಯೆಯಲ್ಲಿರುವ ಶೂದ್ರಶಬ್ದವು ಅಧಿಕಾರವನ್ನು ಸೂಚಿಸುವ ಅಂಗವಾಗಲಾರದು ; ಏಕೆಂದರೆ ಅದಕ್ಕೆ ಬೆಂಬಲವಾಗಿ ನ್ಯಾಯವಿರುವದಿಲ್ಲ. ಕ್ಷತ್ರಿಯನಾದ್ದರಿಂದ ಅಧಿಕಾರಿಯಾಗಿದ್ದ ಜಾನಶ್ರುತಿಯನ್ನೇ ರೈಕ್ವನು ಶೂದ್ರನೆಂದು ಶೋಕದಿಂದ ತನ್ನ ಬಳಿಗೆ ಬಂದನೆಂಬುದು ತನಗೆ ತಿಳಿದಿರುವದೆಂಬ ಪರೋಕ್ಷಜ್ಞಾನವನ್ನು ಹೊರಪಡಿಸುವದಕ್ಕಾಗಿ ಕರೆದಿರುತ್ತಾನೆ ಎಂದು ಈ ಶೂದ್ರಶಬ್ದವನ್ನು ಯೌಗಿಕಾರ್ಥದಲ್ಲಿಯೇ ಹೊಂದಿಸಿಕೊಳ್ಳುವದಕ್ಕೂ ಬರುತ್ತದೆ. ಕ್ಷತ್ತೃಪ್ರೇಷಣವೇ ಮುಂತಾದ ಗುರುತುಗಳಿಂದ ಜಾನಶ್ರುತಿಯು ಕ್ಷತ್ರಿಯನೆಂಬುದು ಸ್ಪಷ್ಟವಾಗಿರುತ್ತದೆ. ಆದ್ದರಿಂದ ಶೂದ್ರನಿಗೆ ವಿದ್ಯೆಯಲ್ಲಿ ಅಧಿಕಾರವುಂಟೆಂಬುದಕ್ಕೆ ಶ್ರುತಿಯ ಲಿಂಗವಿಲ್ಲ. ಬ್ರಹ್ಮವಿದ್ಯೆಯನ್ನು ಉಪದೇಶಿಸುವಾಗ ಉಪನಯನಾದಿಸಂಸ್ಕಾರಗಳನ್ನು ಮಾಡಿಸಿದ ಪರಾಮರ್ಶವು ಶ್ರುತಿಯಲ್ಲಿವೆ ; ಶೂದ್ರನು ಶ್ರವಣಾಧ್ಯಯನಾದಿಗಳನ್ನು ಮಾಡಕೂಡದೆಂಬ ನಿಷೇಧವು ಸ್ಮೃತಿಯಲ್ಲಿದೆ.

ವಿದುರಾದಿಗಳು ಜ್ಞಾನಿಗಳಾಗಿದ್ದರೆಂಬುದನ್ನು ನಾವು ಅಲ್ಲಗಳೆಯುವದಿಲ್ಲ. ಶೂದ್ರರಿಗೂ ಜ್ಞಾನದ ಫಲವು ಅವಶ್ಯವಾಗಿ ಉಂಟಾಗುತ್ತದೆ. ಇತಿಹಾಸಪುರಾಣವನ್ನು

ಶ್ರವಣಮಾಡುವದಕ್ಕೆ ಶೂದ್ರನಿಗೂ ಅಧಿಕಾರವುಂಟು; ಅದ್ದರಿಂದ ಅವುಗಳ ಮೂಲಕ ವಾಗಿ ಅವರಿಗೂ ಜ್ಞಾನವೂ ಅದರ ಫಲವೂ ಉಂಟಾಗಬಹುದು.

## ೧೦. ಕಂಪನಾಧಿಕರಣ

**ವಿಷಯವೂ ಸಂಶಯವೂ:** "ಯದಿದಂ ಕಿಂ ಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್। ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವನ್ತಿ ॥" (ಕ. ೨-೩-೨) ಎಂಬಲ್ಲಿ ಹೇಳಿದ ಪ್ರಾಣವೂ ವಜ್ರವೂ ಯಾವದು?

**ಪೂರ್ವಪಕ್ಷ:** ಪಂಚವೃತ್ತಿಗಳುಳ್ಳ ವಾಯುವೇ ಪ್ರಾಣ, ಸಿಡಿಯೇ ವಜ್ರವಾಯು ವನ್ನಾಶ್ರಯಿಸಿ ಎಲ್ಲವೂ ಅಲುಗಾಡುತ್ತದೆಯೆಂದೂ ವಾಯುವು ಮೋಡವಾಗುವಾಗ ಸಿಡಿಲೇ ಉಂಟಾಗುವದೆಂದೂ ಇಲ್ಲಿ ವಾಯುವಿನ ಮಾಹಾತ್ಮ್ಯವನ್ನು ಹೇಳಿದೆ. ವಾಯುವಿನ ಉಪಾಸನೆಯಿಂದಲೇ ಅಮೃತತ್ವವನ್ನು ಇಲ್ಲಿ ಹೇಳಿದೆ, "ವಾಯುಜ್ಞಾನದಿಂದ ಪುನರ್ಮೃತ್ಯುವನ್ನು ಜಯಿಸುತ್ತಾರೆ" ಎಂಬ ಬೃಹದಾರಣ್ಯಕವಾಕ್ಯವೂ ಇದಕ್ಕೆ ಅನುಗುಣ ವಾಗಿದೆ.

**ಸಿದ್ಧಾಂತ:** ಹಿಂದುಮುಂದಿನ ಗ್ರಂಥಭಾಗದಲ್ಲಿ ಬ್ರಹ್ಮವನ್ನೇ ಹೇಳಿರುವದರಿಂದ ಇಲ್ಲಿಯೂ ಪ್ರಾಣ, ವಜ್ರ-ಎಂಬ ಮಾತುಗಳಿಂದ ಬ್ರಹ್ಮವನ್ನೇ ಹೇಳಿದೆ ಎಂಬುದು ಯುಕ್ತ. "ಪ್ರಾಣಸ್ಯ ಪ್ರಾಣಮ್" ಮುಂತಾದ ಶ್ರುತಿಗಳಲ್ಲಿ ಪ್ರಾಣಶಬ್ದವನ್ನು ಬ್ರಹ್ಮ ವೆಂಬರ್ಥದಲ್ಲಿ ಉಪಯೋಗಿಸಿರುತ್ತದೆ. ಪ್ರಾಣನಲ್ಲಿದ್ದುಕೊಂಡು ಅಲುಗಾಡುತ್ತದೆ ಎಂದರೆ ಪರಮಾತ್ಮನನ್ನು ಆಶ್ರಯಿಸಿಕೊಂಡು ಬಾಳುತ್ತದೆ ಎಂದರ್ಥ. ಮುಂದೆ (೨-೨-೫) ಇದಕ್ಕೆ ಬೆಂಬಲವನ್ನು ಕೊಡುವ ವಾಕ್ಯವಿದೆ. ವಜ್ರವೆಂಬುದು ಭಯಹೇತುತ್ವವನ್ನು ತಿಳಿಸುತ್ತದೆ. ಬ್ರಹ್ಮವೇ ಭಯಹೇತು ಎಂದು ಮುಂದೆ (೨-೬-೩) ಹೇಳಿಯೂ ಇದೆ. ಅಮೃತತ್ವವೆಂಬ ಫಲವನ್ನು ಹೇಳಿರುವದರಿಂದಲೂ ಇದು ಬ್ರಹ್ಮವಿಷಯದ ವಾಕ್ಯವೆನ್ನಬೇಕು. ವಾಯು ಜ್ಞಾನದಿಂದ ಆಗುವ ಅಮೃತತ್ವವು ಆಪೇಕ್ಷಿಕವಾದ್ದರಿಂದ ಮುಖ್ಯಾರ್ಥದ ಅಮೃತತ್ವವನ್ನು ಬಿಟ್ಟು ಅದನ್ನು ಗ್ರಹಿಸುವದು ಯುಕ್ತವಾಗುವದಿಲ್ಲ. ಈ ಪ್ರಕರಣವು ಬ್ರಹ್ಮದ್ದೇ ಆದ್ದರಿಂದಲೂ ಈ ವಾಕ್ಯವು ಬ್ರಹ್ಮವನ್ನು ಹೇಳುತ್ತದೆ ಎಂದು ನಿಶ್ಚಯಿಸಬೇಕು.

## ೧೧. ಜ್ಯೋತಿರಧಿಕರಣ

**ವಿಷಯವೂ ಸಂಶಯವೂ:** "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" (ಛಾಂ. ೮-೧೨-೩) ಎಂಬ ಪ್ರಜಾಪತಿವಾಕ್ಯದಲ್ಲಿ ಜ್ಯೋತಿಯೆಂಬುದು ಬೆಳಕೆ, ಅಥವಾ ಪರಬ್ರಹ್ಮವೆ?

**ಪೂರ್ವಪಕ್ಷ:** ಇದು ಪ್ರಸಿದ್ಧವಾದ ಬೆಳಕೇ. ಇಲ್ಲಿ ಬೆಳಕೆಂಬ ರೂಢಿಯ ಅರ್ಥ ವನ್ನು ಬಿಡಬೇಕೆಂಬುದಕ್ಕೆ ಪ್ರಕರಣವೇ ಮುಂತಾದ ಯಾವ ಕಾರಣವೂ ಇರುವದಿಲ್ಲ ಹಿಂದಿನ ನಾಡೀಖಂಡದಲ್ಲಿ ಮುಮುಕ್ಷುವಾದವನಿಗೆ ಆದಿತ್ಯಪ್ರಾಪ್ತಿಯನ್ನು ಹೇಳಿರುವದೂ ಇಲ್ಲಿ ಜ್ಯೋತಿ ಎಂದರೆ ಬೆಳಕೇ ಎಂಬುದಕ್ಕೆ ಸಾಧಕವಾಗಿರುತ್ತದೆ.

ಸಿದ್ಧಾಂತ : ಇಲ್ಲಿ ಜ್ಯೋತಿ ಎಂಬರೆ ಬ್ರಹ್ಮವೇ. ಏಕೆಂದರೆ ಇದು ಬ್ರಹ್ಮದ ವಿಷಯವನ್ನು ಹೇಳುವ ಪ್ರಕರಣವೆಂಬುದನ್ನು ಉಪಕ್ರಮದಲ್ಲಿ ಅಪಹತಪಾಪ್ಮತ್ವಾದಿಗುಣಗಳುಳ್ಳ ಆತ್ಮನನ್ನು ಹುಡುಕಿ ಅರಿಯಬೇಕೆಂದು ಹೇಳಿರುವದು, "ಇವನನ್ನೇ ನಿನಗೆ ಮತ್ತು ಹೇಳುತ್ತೇನೆ" ಎಂದು ಪರಾಮರ್ಶಿಸಿರುವದು, ಜ್ಯೋತಿಯನ್ನು ಸೇರುವದು ಅಶರೀರತ್ವಕ್ಕೋಸ್ಕರ ಎಂಬುದನ್ನು ಅಶರೀರನಿಗೆ ಪ್ರಿಯಾಪ್ರಿಯಗಳ ಸೋಂಕಿಲ್ಲವೆಂಬ ವಾಕ್ಯದಿಂದ ತಿಳಿಸಿರುವದು– ಇವುಗಳಿಂದ ಗೊತ್ತು ಮಾಡಬಹುದಾಗಿದೆ. 'ಪರಂ ಜ್ಯೋತಿಃ' "ಉತ್ತಮಃ ಪುರುಷಃ" ಎಂಬ ವಿಶೇಷಣಗಳೂ ಇದು ಬ್ರಹ್ಮವೆಂಬುದಕ್ಕೆ ಲಿಂಗವಾಗಿವೆ. ಆದಿತ್ಯಪ್ರಾಪ್ತಿಯನ್ನು ಹೇಳುವ ವಾಕ್ಯವು ಆತ್ಯಂತಿಕಮೋಕ್ಷವಿಷಯವಲ್ಲ; ಪ್ರಕೃತ ವಾಕ್ಯವು ಆತ್ಯಂತಿಕ ಮುಕ್ತಿಯನ್ನು ಕೊಡುವ ಬ್ರಹ್ಮಜ್ಞಾನದ ವಾಕ್ಯವು. ಆದ್ದರಿಂದ ಪೂರ್ವಾಪರವಿರೋಧವಿಲ್ಲ.

## ೧೨. ಅರ್ಥಾಂತರವ್ಯಪದೇಶಾಧಿಕರಣ

ವಿಷಯವೂ ಸಂಶಯವೂ: "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ" (ಛಾಂ. ೮-೧೪-೧) ಎಂಬ ವಾಕ್ಯದಲ್ಲಿರುವ ಆಕಾಶವು ಪರಬ್ರಹ್ಮವೊ, ಭೂತಾಕಾಶವೊ ?

ಪೂರ್ವಪಕ್ಷ : ಆಕಾಶಶಬ್ದವು ಭೂತಾಕಾಶದಲ್ಲಿಯೇ ರೂಢವಾಗಿರುವದರಿಂದಲೂ ನಾಮರೂಪನಿರ್ವಹಣವೆಂಬುದು ಅವಕಾಶವನ್ನು ಕೊಡುವದರ ಮೂಲಕ ಆಕಾಶಕ್ಕೂ ಹೊಂದುವದರಿಂದಲೂ ಇದು ಭೂತಾಕಾಶವೇ. ಇದು ಬ್ರಹ್ಮವೆಂಬುದಕ್ಕೆ ಸ್ಪಷ್ಟವಾದ ಬ್ರಹ್ಮಲಿಂಗವು ಯಾವದೂ ಇಲ್ಲ.

ಸಿದ್ಧಾಂತ : ಇದು ಪರಬ್ರಹ್ಮವೇ. ಏಕೆಂದರೆ ಈ ಆಕಾಶವು ನಾಮರೂಪಗಳಿಗಿಂತ ಬೇರೆಯಾಗಿರುವ ವಸ್ತುವೆಂದು ಹೇಳಿದೆ. ಬ್ರಹ್ಮವನ್ನು ಬಿಟ್ಟರೆ ಮತ್ತೆ ಯಾವದೂ ನಾಮರೂಪಗಳಿಗಿಂತ ಬೇರೆಯಾಗಿರಲಾರದು. ನಾಮರೂಪನಿರ್ವಹಣವೂ ಬ್ರಹ್ಮಕ್ಕೇ ನಿರಂಕುಶವಾಗಿ ಹೊಂದುತ್ತದೆ. ಜೀವನಿಗೂ ನಾಮರೂಪನಿರ್ವಹಣವು ಕಂಡಿದೆಯಾದರೂ ಬ್ರಹ್ಮವೇ ಜೀವರೂಪದಿಂದ ನಾಮರೂಪನಿರ್ವಾಹವನ್ನು ಮಾಡುತ್ತಿರುವದೆಂದು ಹೇಳುವದಕ್ಕೇ ಶ್ರುತಿಯು ಬಂದಿರುವದರಿಂದ ಅದೇನೂ ಬ್ರಹ್ಮವಾದಕ್ಕೆ ಬಾಧಕವಲ್ಲ. ಈ ನಾಮರೂಪನಿರ್ವಾಹವನ್ನು ಹೇಳಿದ್ದರಿಂದಲೇ ಸ್ರಷ್ಟೃತ್ವಾದಿಗಳನ್ನೂ ಹೇಳಿದಂತೆ ಆಗಿದೆ. "ಅದು ಬ್ರಹ್ಮವು, ಅದು ಅಮೃತವು, ಅದು ಆತ್ಮನು" ಎಂದು ಹೇಳಿರುವವೂ ಬ್ರಹ್ಮವಾದಕ್ಕೆ ಲಿಂಗಗಳಾಗಿರುತ್ತವೆ.

## ೧೩. ಸುಷುಪ್ತ್ಯುತ್ಕ್ರಾಂತ್ಯಧಿಕರಣ

ವಿಷಯವೂ ಸಂಶಯವೂ : ಬೃಹದಾರಣ್ಯಕೋಪನಿಷತ್ತಿನಲ್ಲಿ "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು" (ಬೃ. ೪-೩-೭) ಎಂದು ಮೊದಲಾಗಿರುವ ಆತ್ಮನಿರೂಪಣೆಯು ಸಂಸಾರಿಸ್ವರೂಪವನ್ನು ಅನುವಾದಮಾಡುತ್ತದೆಯೊ, ಅಥವಾ ಅಸಂಸಾರಿಸ್ವರೂಪವನ್ನು ತಿಳಿಸಿಕೊಡುತ್ತದೆಯೊ ?

**ಪೂರ್ವಪಕ್ಷ:** ಉಪಕ್ರಮದಲ್ಲಿಯೂ ಉಪಸಂಹಾರದಲ್ಲಿಯೂ "ವಿಜ್ಞಾನಮಯಃ ಪ್ರಾಣೇಷು" (ಬೃ. ೪-೩-೭, ೪-೪-೨೨) ಎಂಬ ವಿಶೇಷಣವಿರುವದರಿಂದಲೂ ನಡುವೆ ಜಾಗರಿತಾದ್ಯವಸ್ಥೆಗಳನ್ನು ಹೇಳಿರುವದರಿಂದಲೂ ಇದು ಜೀವನ ವರ್ಣನೆ.

**ಸಿದ್ಧಾಂತ:** ಇದು ಅಸಂಸಾರಿಯಾದ ಪರಮೇಶ್ವರನ ಸ್ವರೂಪವನ್ನು ತಿಳಿಸುತ್ತದೆ. ಏಕೆಂದರೆ ಸುಷುಪ್ತಿ, ಉತ್ಕ್ರಾಂತಿ– ಇವುಗಳಲ್ಲಿ ಜೀವನಿಗಿಂತ ವ್ಯತಿರಿಕ್ತನೆಂದು ಪರಮೇಶ್ವರನನ್ನು ತಿಳಿಸಿದೆ. ಹೇಗೆಂದರೆ, ಸುಷುಪ್ತಿಯಲ್ಲಿ "ಈ ಪುರುಷನು ಪ್ರಾಜ್ಞನಿಂದ ಆಲಿಂಗಿತವಾಗಿರುವದರಿಂದ ಒಳಗುಹೊರಗುಗಳನ್ನು ಅರಿಯದೆ ಇರುತ್ತಾನೆ" ಎಂದಿದೆ. ಇಲ್ಲಿ ಪುರುಷನೆಂದರೆ ಜೀವನು; ಏಕೆಂದರೆ ಅವನೇ ಜ್ಞಾತೃಸ್ವಭಾವವುಳ್ಳವನು. ಇದರಂತೆ ಉತ್ಕ್ರಾಂತಿಯಲ್ಲಿ "ಈ ಶಾರೀರನಾದ ಆತ್ಮನು ಪ್ರಾಜ್ಞನಿಂದ ಅನ್ವಾರೂಢನಾಗಿ ಕೂಗು ಹಾಕುತ್ತಾ ಹೋಗುವನು" ಎಂದಿದೆ. ಇಲ್ಲಿ ಶಾರೀರನೆಂದರೆ ಶರೀರಸ್ವಾಮಿಯಾದ ಜೀವನು. ಈ ಎರಡು ಸಂದರ್ಭಗಳಲ್ಲಿಯೂ ಜೀವವ್ಯತಿರಿಕ್ತವಾದ ಪ್ರಾಜ್ಞಸ್ವರೂಪವನ್ನು ತಿಳಿಸಿದೆ. ಇಲ್ಲಿ ಪ್ರಾಜ್ಞನೆಂದರೆ ಪರಮೇಶ್ವರನು; ಏಕೆಂದರೆ ಸರ್ವಜ್ಞತ್ವಸ್ವರೂಪವಾದ ಪ್ರಜ್ಞೆಯು ಯಾವಾಗಲೂ ಅವನ ಸ್ವರೂಪವಾಗಿರುತ್ತದೆ. ಉಪಕ್ರಮದಲ್ಲಿಯೂ ಉಪಸಂಹಾರದಲ್ಲಿಯೂ ಸಂಸಾರಿಸ್ವರೂಪವನ್ನು ವರ್ಣಿಸಿರುವದು ನಿಜ; ಆದರೆ ಶ್ರುತಿಯು ಆ ಸ್ವರೂಪವನ್ನು ಅನುವಾದಮಾಡಿಕೊಂಡು ಪ್ರಾಜ್ಞನಾದ ಪರಮೇಶ್ವರನಿಗೂ ಅವನಿಗೂ ಐಕ್ಯವನ್ನು ಹೇಳುವದಕ್ಕೆ ಹೊರಟಿದೆ. ಉಪಕ್ರಮದಲ್ಲಿ "ಧ್ಯಾಯತೀವ ಲೇಲಾಯತೀವ" ಎಂದು ಜ್ಞಾನಕರ್ಮೇಂದ್ರಿಯಗಳ ವ್ಯಾಪಾರಗಳು ಆತ್ಮನಿಗೆ ಸೇರಿಲ್ಲವೆಂದಿದೆ; ಉಪಸಂಹಾರದಲ್ಲಿ ಈ ವಿಜ್ಞಾನಮಯನೇ "ಮಹಾನ್, ಅಜ, ಆತ್ಮ" ಎಂದು ಬಣ್ಣಿಸಿದೆ. ನಡುವೆ ಅವಸ್ಥಾತ್ರಯವನ್ನು ಹೇಳಿರುವದೂ ಅವಸ್ಥಾರಹಿತವಾದ ಅಸಂಸಾರಿಸ್ವರೂಪವನ್ನು ತಿಳಿಸುವದಕ್ಕೇ ಎಂಬುದು "ವಿಮೋಕ್ಷಕ್ಕೇ ಹೇಳು" ಎಂಬ ಜನಕನ ಪ್ರಶ್ನೆಯಿಂದಲೂ "ಪುಣ್ಯಪಾಪಗಳಿಂದ ಅನನ್ವಾಗತನಾಗಿರುತ್ತಾನೆ" ಎಂಬ ಯಾಜ್ಞವಲ್ಕ್ಯನ ಉತ್ತರದಿಂದಲೂ ವ್ಯಕ್ತವಾಗುತ್ತದೆ. ಈ ಆತ್ಮನು "ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ, ಎಲ್ಲಕ್ಕೂ ಒಡೆಯನು, ಎಲ್ಲಕ್ಕೂ ಅಧಿಪತಿಯು, ಒಳ್ಳೆಯ ಕರ್ಮದಿಂದ ಹೆಚ್ಚುವದಿಲ್ಲ, ಕೆಟ್ಟದ್ದರಿಂದ ಕುಗ್ಗುವದಿಲ್ಲ" ಎಂದು ಅಸಂಸಾರಿಸ್ವಭಾವವನ್ನು ತಿಳಿಸುವ ಮತ್ತು ಸಂಸಾರಿಸ್ವಭಾವವನ್ನು ಅಲ್ಲಗಳೆಯುವ ಮಾತುಗಳೂ ಇದು ಅಸಂಸಾರಿಯಾದ ಪರಮೇಶ್ವರನನ್ನು ಹೇಳುವ ವಾಕ್ಯವೆಂಬುದನ್ನು ಬಲಪಡಿಸುತ್ತವೆ.

---

# ಒಂದನೆಯ ಅಧ್ಯಾಯ - ನಾಲ್ಕನೆಯ ಪಾದ

## (ಪ್ರಧಾನಕಾರಣವಾದವು ಶ್ರುತಿಸಿದ್ಧವಲ್ಲವೆಂಬುದರ ವಿವರ)

## ಮುಂದಿನ ಗ್ರಂಥದ ಸಂಬಂಧ

( ಭಾಷ್ಯ )

೩೩೩. ಬ್ರಹ್ಮಜಿಜ್ಞಾಸಾಂ ಪ್ರತಿಜ್ಞಾಯ ಬ್ರಹ್ಮಣೋ ಲಕ್ಷಣಮುಕ್ತಮ್ '' ಜನ್ಮಾದ್ಯಸ್ಯ ಯತಃ'' (೧-೧-೨) ಇತಿ ತಲ್ಲಕ್ಷಣಂ ಪ್ರಧಾನಸ್ಯಾಪಿ ಸಮಾನಮ್ ಇತ್ಯಾಶಙ್ಕ್ಯ ತತ್ ಅಶಬ್ದತ್ವೇನ ನಿರಾಕೃತಮ್ "ಈಕ್ಷತೇರ್ನಾಶಬ್ದಮ್" (೧-೧-೫) ಇತಿ । ಗತಿಸಾಮಾನ್ಯಂ ಚ ವೇದಾನ್ತವಾಕ್ಯಾನಾಂ ಬ್ರಹ್ಮಕಾರಣವಾದಂ ಪ್ರತಿಪದ್ಯತೇ ನ ಪ್ರಧಾನಕಾರಣವಾದಂ ಪ್ರತಿ ಇತಿ ಪ್ರಪಞ್ಚಿತಂ ಗತೇನ ಗ್ರನ್ಥೇನ । ಇದಂ ತ್ವಿದಾನೀಮ್ ಅವಶಿಷ್ಟಮ್ ಆಶಙ್ಕ್ಯತೇ— ಯದುಕ್ತಂ ಪ್ರಧಾನಸ್ಯ ಅಶಬ್ದತ್ವಮ್, ತದಸಿದ್ಧಮ್ । ಕಾಸುಚಿತ್ ಶಾಖಾಸು ಪ್ರಧಾನಸಮರ್ಪಣಾಭಾಸಾನಾಂ ಶಬ್ದಾನಾಂ ಶ್ರೂಯಮಾಣತ್ವಾತ್ । ಅತಃ ಪ್ರಧಾನಸ್ಯ ಕಾರಣತ್ವಂ ವೇದಸಿದ್ಧಮೇವ ಮಹದ್ಭಿಃ ಪರಮರ್ಷಿಭಿಃ ಕಪಿಲಪ್ರಭೃತಿಭಿಃ ಪರಿಗೃಹೀತಮ್ ಇತಿ ಪ್ರಸಜ್ಯತೇ। ತದ್ ಯಾವತ್ ತೇಷಾಂ ಶಬ್ದಾನಾಮ್ ಅನ್ಯಪರತ್ವಂ ನ ಪ್ರತಿಪಾದ್ಯತೇ, ತಾವತ್ ಸರ್ವಜ್ಞಂ ಬ್ರಹ್ಮ ಜಗತಃ ಕಾರಣಮ್ ಇತಿ ಪ್ರತಿಪಾದಿತಮಪಿ ಆಕುಲೀಭವೇತ್ । ಅತಸ್ತೇಷಾಮ್ ಅನ್ಯಪರತ್ವಂ ದರ್ಶಯಿತುಂ ಪರಃ ಸನ್ದರ್ಭಃ ಪ್ರವರ್ತತೇ ॥

( ಭಾಷ್ಯಾರ್ಥ )

ಬ್ರಹ್ಮಜಿಜ್ಞಾಸೆಯನ್ನು (ಮಾಡುತ್ತೇವೆಂದು) ಪ್ರತಿಜ್ಞೆಯನ್ನು ಮಾಡಿ "ಜನ್ಮಾದ್ಯಸ್ಯ ಯತಃ" (೧-೧-೨) ಎಂದು ಬ್ರಹ್ಮದ ಲಕ್ಷಣವನ್ನು ಹೇಳಿದ್ದಾಯಿತು. ಆ ಲಕ್ಷಣವು ಪ್ರಧಾನಕ್ಕೂ ಸಮಾನವಾಗಿದೆಯಲ್ಲ !– ಎಂದು ಆಶಂಕಿಸಿ ಅದನ್ನು ಅಶಬ್ದವೆಂಬ (ಕಾರಣ)ದಿಂದ[1] "ಈಕ್ಷತೇರ್ನಾಶಬ್ದಮ್" (೧-೧-೫) ಎಂದು ತಳ್ಳಿಹಾಕಿದ್ದಾಯಿತು. ವೇದಾಂತವಾಕ್ಯಗಳ ಗತಿ ಸಾಮಾನ್ಯವು ಬ್ರಹ್ಮಕಾರಣವಾದಕ್ಕೆ ಇದೆಯೇ ಹೊರತು ಪ್ರಧಾನಕಾರಣ ವಾದಕ್ಕಿಲ್ಲ ಎಂದು ಹಿಂದಿನ ಗ್ರಂಥದಲ್ಲಿ ವಿವರಿಸಿ ತಿಳಿಸಿದ್ದಾಯಿತು. ಆದರೆ

1. ಶಬ್ದಪ್ರಮಾಣಕವಲ್ಲವೆಂಬ ಕಾರಣದಿಂದ.

ಇನ್ನು ಉಳಿದಿರುವ ಇದೊಂದನ್ನು (ಇಲ್ಲಿ) ಆಶಂಕಿಸಲಾಗುತ್ತದೆ, ಪ್ರಧಾನವು ಆಶಬ್ದವು ಎಂದು ಹೇಳಿದಿರಲ್ಲ, ಅದು ಅಸಿದ್ಧ ; ಏಕೆಂದರೆ ಕೆಲವು ಶಾಖೆಗಳಲ್ಲಿ ಪ್ರಧಾನವನ್ನು ತಿಳಿಸುವಂತಿರುವ ಶಬ್ದಗಳು ಶ್ರುತಿಯಲ್ಲಿರುತ್ತವೆ. ಆದ್ದರಿಂದ ಪ್ರಧಾನವು ಕಾರಣವೆಂಬುದು ವೇದಸಿದ್ಧವಾಗಿಯೇ ಇದ್ದು ಪರಮರ್ಷಿಗಳಾದ ಕಪಿಲಾದಿಗಳಿಂದ ಸ್ವೀಕೃತವಾಗಿರುತ್ತದೆ ಎಂದಾಗುತ್ತದೆ. ಆದ್ದರಿಂದ ಆ ಶಬ್ದಗಳು ಅನ್ಯಪರವೆಂದು ಎಲ್ಲಿಯವರೆಗೆ (ನಾವು) ಪ್ರತಿಪಾದಿಸುವದಿಲ್ಲವೋ ಅಲ್ಲಿಯವರೆಗೆ ಸರ್ವಜ್ಞನಾದ ಬ್ರಹ್ಮವೇ ಜಗತ್ಕಾರಣವು ಎಂದು ಪ್ರತಿಪಾದಿತವಾಗಿದ್ದರೂ ಆಕುಲವಾಗಿರುವದು[1]. ಆದ್ದರಿಂದ ಅವುಗಳು ಅನ್ಯಪರವೆಂದು ತಿಳಿಸುವದಕ್ಕೆ ಮುಂದಿನ ಸಂದರ್ಭವು ಹೊರಟಿರುತ್ತದೆ.

## ೧. ಆನುಮಾನಿಕಾಧಿಕರಣ (ಸೂ. ೧-೭)

(ಕಠ ೧-೩-೧೧ರಲ್ಲಿ ಸಾಂಖ್ಯರ ಮಹದವ್ಯಕ್ತಪುರುಷರನ್ನು ಹೇಳಿಲ್ಲ)

**ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕ ವಿನ್ಯಸ್ತಗೃಹೀತೇರ್ದರ್ಶಯತಿ ಚ ॥ ೧ ॥**

೧. ಆನುಮಾನಿಕವೂ ಕೆಲವರ (ಶಾಖೆಯಲ್ಲಿದೆ) ಎಂದರೆ ಇಲ್ಲ ; ಏಕೆಂದರೆ ರೂಪದಲ್ಲಿಟ್ಟಿರುವ ಶರೀರವನ್ನು (ಇಲ್ಲಿ) ಗ್ರಹಿಸಬೇಕು. (ಶ್ರುತಿಯು ಅದನ್ನು) ತಿಳಿಸುತ್ತಲೂ ಇದೆ.

## ಪೂರ್ವಪಕ್ಷ: ಪ್ರಧಾನವೂ ಒಂದು ಶಾಖೆಯಲ್ಲಿ ಉಕ್ತವಾಗದೆ

( ಭಾಷ್ಯ )

೩೩೪. ಆನುಮಾನಿಕಮಪಿ ಅನುಮಾನನಿರೂಪಿತಮಪಿ ಪ್ರಧಾನಮ್ ಏಕೇಷಾಂ ಶಾಖಿನಾಂ ಶಬ್ದವತ್ ಉಪಲಭ್ಯತೇ । ಕಾಠಕೇ ಹಿ ಪಠ್ಯತೇ । "ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ" (೧-೩-೧೧) ಇತಿ । ತತ್ರ ಯ ಏವ ಯನ್ನಾಮಾನೋ ಯತ್ಕ್ರಮಾಶ್ಚ ಮಹದವ್ಯಕ್ತಪುರುಷಾಃ ಸ್ಮೃತಿಪ್ರಸಿದ್ಧಾಃ, ತ ಏವ ಇಹ ಪ್ರತ್ಯಭಿಜ್ಞಾಯನ್ತೇ । ತತ್ರ 'ಅವ್ಯಕ್ತಮ್' ಇತಿ ಸ್ಮೃತಿಪ್ರಸಿದ್ಧೇಃ, ಶಬ್ದಾದಿಹೀನತ್ವಾಚ್ಚ ನ ವ್ಯಕ್ತಮ್ ಅವ್ಯಕ್ತಮ್

1. ಸಾಂಖ್ಯರ ಸಿದ್ಧಾಂತವೂ ಆಗಬಹುದೆಂದಾಗುವದರಿಂದ ವೇದಾಂತಸಿದ್ಧಾಂತವೇ ಕಡೆಯ ಮಾತೆಂದು ನಿರ್ಣಯವಾಗದೆ ಹೋಗುವದು ಎಂದರ್ಥ.

ಇತಿ ವ್ಯುತ್ಪತ್ತಿಸಂಭವಾತ್, ಸ್ಮೃತಿಪ್ರಸಿದ್ಧಂ ಪ್ರಧಾನಮ್ ಅಭಿಧೀಯತೇ | ಅತಃ ತಸ್ಯ ಶಬ್ದವತ್ತ್ವಾತ್ ಅಶಬ್ದತ್ವಮ್ ಅನುಪಪನ್ನಮ್ | ತದೇವ ಚ ಜಗತಃ ಕಾರಣಂ ಶ್ರುತಿಸ್ಮೃತಿನ್ಯಾಯಪ್ರಸಿದ್ಧಿಭ್ಯಃ ಇತಿ ಚೇತ್ ||

(ಭಾಷ್ಯಾರ್ಥ)

ಆನುಮಾನಿಕವೂ ಎಂದರೆ ಅನುಮಾನದಿಂದ ಗೊತ್ತುಮಾಡಿರುವ ಪ್ರಧಾನವೂ ಕೆಲವು ಶಾಖೆಯವರ ಶಬ್ದ(ಪ್ರಮಾಣ)ವುಳ್ಳದ್ದೆಂದು ಕಂಡು ಬರುತ್ತದೆ. ಹೇಗೆಂದರೆ, ಕಾಠಕದಲ್ಲಿ "ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ" (ಕ. ೧-೩-೧೧) ಎಂದು ಪಠಿತವಾಗಿರುತ್ತದೆ. ಅಲ್ಲಿ ಯಾವ ಹೆಸರಿನಲ್ಲಿ ಯಾವ ಕ್ರಮದಲ್ಲಿ ಯಾವ ಮಹದವ್ಯಕ್ತಪುರುಷರು (ಸಾಂಖ್ಯ) ಸ್ಮೃತಿಪ್ರಸಿದ್ಧರಾಗಿರುವರೋ ಅವರನ್ನೇ ಇಲ್ಲಿ ಗುರುತಿಸಿ ಅರಿಯಬಹುದಾಗಿದೆ[1]. (ಸಾಂಖ್ಯ)ಸ್ಮೃತಿಯಲ್ಲಿ (ಅವ್ಯಕ್ತವೆಂಬ ಹೆಸರಿನಿಂದ) ಪ್ರಸಿದ್ಧವಾಗಿರುವದರಿಂದಲೂ ಶಬ್ದಾದಿಗಳಿಲ್ಲದ್ದರಿಂದ[2] ವ್ಯಕ್ತವಲ್ಲದ್ದು ಅವ್ಯಕ್ತವು ಎಂಬ ವ್ಯುತ್ಪತ್ತಿಯೂ ಹೊಂದುವದರಿಂದಲೂ ಇಲ್ಲಿ ಅವ್ಯಕ್ತವೆಂದು (ಸಾಂಖ್ಯ) ಸ್ಮೃತಿಪ್ರಸಿದ್ಧವಾದ ಪ್ರಧಾನವನ್ನು ಹೇಳಿರುತ್ತದೆ. ಅದು ಶಬ್ದ(ಪ್ರಮಾಣ)ವುಳ್ಳದ್ದಾದ್ದರಿಂದ, ಅಶಬ್ದವೆನ್ನುವದು ಯುಕ್ತವಲ್ಲ. ಮತ್ತು ಶ್ರುತಿ, ಸ್ಮೃತಿ, ನ್ಯಾಯ- (ಇವುಗಳಿಂದ) ಪ್ರಸಿದ್ಧವಾಗಿರುವದರಿಂದ ಅದೇ ಜಗತ್ತಿಗೆ ಕಾರಣವು ಎಂದರೆ—

## ಸಿದ್ಧಾಂತ: ಈ ಅವ್ಯಕ್ತವು ಪ್ರಧಾನವೆಂಬುದಕ್ಕೆ ಪ್ರಮಾಣವಿಲ್ಲ

(ಭಾಷ್ಯ)

೩೩೪. ನೈತದೇವಮ್ । ನ ಹಿ ಏತತ್ ಕಾಠಕಂ ವಾಕ್ಯಂ ಸ್ಮೃತಿಪ್ರಸಿದ್ಧಯೋಃ ಮಹದವ್ಯಕ್ತಯೋಃ ಅಸ್ತಿತ್ವಪರಮ್ | ನ ಹಿ ಅತ್ರ ಯಾದೃಶಂ ಸ್ಮೃತಿಪ್ರಸಿದ್ಧಂ ಸ್ವತನ್ತ್ರಂ ಕಾರಣಂ ತ್ರಿಗುಣಂ ಪ್ರಧಾನಂ ತಾದೃಶಂ ಪ್ರತ್ಯಭಿಜ್ಞಾಯತೇ । ಶಬ್ದಮಾತ್ರಂ ಹಿ ಅತ್ರ ಅವ್ಯಕ್ತಮ್ ಇತಿ ಪ್ರತ್ಯಭಿಜ್ಞಾಯತೇ |

---

1. ಮಹತ್ತಿಗಿಂತ ಅದರ ಕಾರಣವಾದ ಅವ್ಯಕ್ತವು ಹೆಚ್ಚು, ಅವ್ಯಕ್ತಕ್ಕಿಂತ ಚೇತನನಾದ ಪುರುಷನು ಹೆಚ್ಚು - ಎಂದು ಸಾಂಖ್ಯರು ಹೇಳುತ್ತಾರೆ. ಇವನ್ನು ಅವೇ ಹೆಸರಿನಿಂದ ಅದೇ ಕ್ರಮದಲ್ಲಿ ಶ್ರುತಿ ಹೇಳಿದೆ.

2. ಪ್ರಧಾನದಲ್ಲಿ ಯಾವ ಶಬ್ದಾದಿಗಳೂ ಇರುವದಿಲ್ಲ; ಅದು ಪಂಚಭೂತಗಳ ರೂಪವಾಗಿ ಪರಿಣಮಿಸಿದ ಮೇಲೆ ಅದರಲ್ಲಿ ಶಬ್ದಾದಿಗಳು ತೋರಿಕೊಳ್ಳುವವು.

ಸ ಚ ಶಬ್ದಃ ನ ವ್ಯಕ್ತಮ್ ಅವ್ಯಕ್ತಮ್ ಇತಿ ಯೌಗಿಕತ್ವಾತ್ ಅನ್ಯಸ್ಮಿನ್ನಪಿ ರೂಢಃ | ಸೂಕ್ಷ್ಮೇ ಸುದುರ್ಲಕ್ಷ್ಯೇ ಚ ಪ್ರಯುಜ್ಯತೇ। ನ ಚಾಯಂ ಕಸ್ಮಿಂಶ್ಚಿತ್ ರೂಢಃ| ಯಾ ತು ಪ್ರಧಾನವಾದಿನಾಂ ರೂಢಿಃ ಸಾ ತೇಷಾಮೇವ ಪಾರಿಭಾಷಿಕೀ ಸತೀ ನ ವೇದಾರ್ಥನಿರೂಪಣೇ ಕಾರಣಭಾವಂ ಪ್ರತಿಪದ್ಯತೇ | ನ ಚ ಕ್ರಮ ಮಾತ್ರಸಾಮಾನ್ಯಾತ್ ಸಮಾನಾರ್ಥಪ್ರತಿಪತ್ತಿರ್ಭವತಿ ಅಸತಿ ತದ್ರೂಪಪ್ರತ್ಯಭಿಜ್ಞಾನೇ। ನ ಹಿ ಅಶ್ವಸ್ಥಾನೇ ಗಾಂ ಪಶ್ಯನ್ ಅಶ್ವೋಽಯಮ್ ಇತಿ ಅಮೂಢೋಽಧ್ಯವಸ್ಯತಿ ||

(ಭಾಷ್ಯಾರ್ಥ)

ಇದು ಹೀಗಲ್ಲ. ಏಕೆಂದರೆ ಈ ಕಾಠಕವಾಕ್ಯವು (ಸಾಂಖ್ಯ)ಸ್ಮೃತಿ ಪ್ರಸಿದ್ಧವಾದ ಮಹದವ್ಯಕ್ತಗಳು ಇವೆ ಎಂಬುದನ್ನು ತಾತ್ಪರ್ಯದಿಂದ (ಹೇಳುವದಕ್ಕೆ) ಬಂದಿಲ್ಲ. ಪ್ರಧಾನವು ತ್ರಿಗುಣವುಳ್ಳ ಸ್ವತಂತ್ರವಾದ[1] ಕಾರಣವೆಂದು ಹೇಗೆ (ಸಾಂಖ್ಯ)ಸ್ಮೃತಿಯಲ್ಲಿ ಪ್ರಸಿದ್ಧವಾಗಿದೆಯೋ ಹಾಗೆ ಇಲ್ಲಿ ಗುರುತಿಸಿ ಅರಿಯುವದಕ್ಕೆ ಬರುವಂತಿಲ್ಲ[2]. ಅವ್ಯಕ್ತ ಎಂಬ ಶಬ್ದವೊಂದೇ ಇಲ್ಲಿ ಕಾಣ ಬರುತ್ತದೆ. ಆ ಶಬ್ದವನ್ನು ವ್ಯಕ್ತವಲ್ಲದ್ದು ಅವ್ಯಕ್ತವು ಎಂದು ಯೌಗಿಕವಾಗಿರುವದರಿಂದ, (ಇದನ್ನು) ಸೂಕ್ಷ್ಮವಾಗಿ, ಕಾಣುವದು ಬಹಳ ಕಷ್ಟವಾಗಿರುವ, ಬೇರೆ (ಯಾವದಾದರೊಂದು ತತ್ತ್ವ)ದಲ್ಲಿಯೂ ಪ್ರಯೋಗಿಸಬಹುದಾಗಿದೆ. ಈ ಶಬ್ದವು ಯಾವದೊಂದು (ಗೊತ್ತಾದ ಪದಾರ್ಥ)ದಲ್ಲಿಯೂ ರೂಢವಾಗಿರುವದಿಲ್ಲ[3]. ಇನ್ನು ಪ್ರಧಾನವಾದಿಗಳ (ಪ್ರಕ್ರಿಯೆಯಲ್ಲಿ) ರೂಢಿಯಿದೆಯಷ್ಟೆ, ಅದು ಅವರದೇ ಪಾರಿಭಾಷಿಕವಾಗಿರುವದರಿಂದ ವೇದಾರ್ಥವನ್ನು ಗೊತ್ತುಪಡಿಸುವದಕ್ಕೆ ಸಾಧನತ್ವವನ್ನು ಹೊಂದಲಾರದು[4]. ಅಂಥ ರೂಪದ್ದು ಎಂದು ಗೊತ್ತಾಗದೆ ಇರುವಲ್ಲಿ ಬರಿಯ ಕ್ರಮದ ಹೋಲಿಕೆಯಿಂದ ಅದೇ ಪದಾರ್ಥ

---

1. ತಾನೇ ಜಗತ್ತಾಗಿ ಪರಿಣಮಿಸುವ.

2. ಏಕೆಂದರೆ ಈ ಸಂದರ್ಭದಲ್ಲಿ ಪರಮಾತ್ಮನ ಸಂಬಂಧವಿಲ್ಲದ ಸ್ವತಂತ್ರವಾದ ಜಗತ್ಕಾರಣವನ್ನು ಹೇಳಿದೆ ಎಂಬುದಕ್ಕೆ ಯಾವ ಗುರುತೂ ಇರುವದಿಲ್ಲ.

3. ಹಾಗಿದ್ದರೆ ಈ ಶಬ್ದವನ್ನು ಯೌಗಿಕಾರ್ಥದಲ್ಲಿ ತೆಗೆದುಕೊಳ್ಳಬಾರದೆಂದು ಹೇಳಬಹುದಾಗಿತ್ತು. ಆದ್ದರಿಂದ ಇಲ್ಲಿ ಪ್ರಕರಣಕ್ಕೆ ಹೊಂದುವಂತೆ ಈ ಶಬ್ದವನ್ನು ಯೌಗಿಕಾರ್ಥದಲ್ಲಿಯೇ ತೆಗೆದುಕೊಳ್ಳಬೇಕಾಯಿತು- ಎಂದು ಭಾವ.

4. ಹಾಗಾದರೆ ವೈಯಾಕರಣರು ಒಪ್ಪಿರುವ ಗುಣ, ವೃದ್ಧಿ- ಮುಂತಾದ ಶಬ್ದಗಳಿಗೆ ವೇದದಲ್ಲಿ ಅದೇ ಅರ್ಥವೆಂದಾಗಬೇಕಾಗುವದು ಎಂದು ಭಾವ.

ವೆಂಬ ಅರಿವು ಉಂಟಾಗಲಾರದು[1]. ಕುದುರೆಯ ಸ್ಥಾನದಲ್ಲಿ ಎತ್ತನ್ನು ಕಂಡರೆ ಮೂಢನಲ್ಲದವನು (ಯಾವನೂ) ಇದು ಕುದುರೆ ಎಂದು ನಿಶ್ಚಯಿಸಲಾರನಷ್ಟೆ.

## ಇಲ್ಲಿ ಅವ್ಯಕ್ತವೆಂದರೆ ರಥವೆಂದು ಕಲ್ಪಿಸಿರುವ ಶರೀರವು

( ಭಾಷ್ಯ )

೩೩೬. ಪ್ರಕರಣನಿರೂಪಣಾಯಾಂ ಚ ಅತ್ರ ನ ಪರಪರಿಕಲ್ಪಿತಂ ಪ್ರಧಾನಂ ಪ್ರತೀಯತೇ | ಶರೀರರೂಪಕವಿನ್ಯಸ್ತಗೃಹೀತೇಃ | ಶರೀರಂ ಹಿ ಅತ್ರ ರಥರೂಪಕವಿನ್ಯಸ್ತಮ್ ಅವ್ಯಕ್ತಶಬ್ದೇನ ಪರಿಗೃಹ್ಯತೇ | ಕುತಃ ? ಪ್ರಕರಣಾತ್, ಪರಿಶೇಷಾಚ್ಚ | ತಥಾ ಹಿ ಅನನ್ತರಾತೀತೋ ಗ್ರನ್ಥಃ ಆತ್ಮ ಶರೀರಾದೀನಾಂ ರಥಿರಥಾದಿರೂಪಕಕ್ಲೃಪ್ತಿಂ ದರ್ಶಯತಿ– "ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು । ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ | ಇನ್ದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ | ಆತ್ಮೇನ್ದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ" || (ಕ. ೧-೩-೩, ೪) ಇತಿ | ತೈಶ್ಚ ಇನ್ದ್ರಿಯಾದಿಭಿಃ ಅಸಂಯತೈಃ ಸಂಸಾರಮ್ ಅಧಿಗಚ್ಛತಿ । ಸಂಯತೈಸ್ತು ಅಧ್ವನಃ ಪಾರಂ ತದ್ವಿಷ್ಣೋಃ ಪರಮಂ ಪದಮ್ ? ಆಪ್ನೋತಿ ಇತಿ ದರ್ಶಯಿತ್ವಾ ಕಿಂ ತತ್ ಅಧ್ವನಃ ಪಾರಂ ವಿಷ್ಣೋಃ ಪರಮಂ ಪದಮ್ ? ಇತ್ಯಸ್ಯಾಮ್ ಆಕಾಙ್ಕ್ಷಾಯಾಮ್, ತೇಭ್ಯ ಏವ ಪ್ರಕೃತೇಭ್ಯಃ ಇನ್ದ್ರಿಯಾದಿಭ್ಯಃ ಪರತ್ವೇನ ಪರಮಾತ್ಮಾನಮ್ ಅಧ್ವನಃ ಪಾರಂ ವಿಷ್ಣೋಃ ಪರಮಂ ಪದಂ ದರ್ಶಯತಿ— "ಇನ್ದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ | ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ | ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ | ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ'' (ಕ. ೧-೩-೧೦, ೧೧) ಇತಿ | ತತ್ರ ಯ ಏವ ಇನ್ದ್ರಿಯಾದಯಃ ಪೂರ್ವಸ್ಯಾಂ ರಥರೂಪಕಕಲ್ಪನಾಯಾಂ ಅಶ್ವಾದಿಭಾವೇನ ಪ್ರಕೃತಾಃ, ತ ಏವ ಇಹ ಪರಿಗೃಹ್ಯನ್ತೇ ಪ್ರಕೃತಹಾನಾಪ್ರಕೃತಪ್ರಕ್ರಿಯಾಪರಿಹಾರಾಯ | ತತ್ರ ಇನ್ದ್ರಿಯಮನೋಬುದ್ಧಯಸ್ತಾವತ್ ಪೂರ್ವತ್ರ ಇಹ ಚ ಸಮಾನಶಬ್ದಾ ಏವ | ಅರ್ಥಾ ಯೇ ಶಬ್ದಾದಯೋ ವಿಷಯಾಃ ಇನ್ದ್ರಿಯಹಯಗೋಚರತ್ವೇನ ನಿರ್ದಿಷ್ಟಾಃ, ತೇಷಾಂ ಚ ಇನ್ದ್ರಿಯೇಭ್ಯಃ ಪರತ್ವಮ್ | ಇನ್ದ್ರಿಯಾಣಾಂ ಗ್ರಹತ್ವಂ, ವಿಷಯಾ

1. ಸಾಂಖ್ಯರ ಸ್ಮೃತಿಯಲ್ಲಿ ಮಹದವ್ಯಕ್ತಪುರುಷರು ಯಾವ ಕ್ರಮದಲ್ಲಿ ಉಕ್ತರಾಗಿರುವರೋ ಅದೇ ಕ್ರಮದಲ್ಲಿ ಶ್ರುತಿಯಲ್ಲಿರುತ್ತಾರೆ ಎಂದ ಮಾತ್ರದಿಂದ ಅವರೇ ಇವರು ಎನ್ನುವದಕ್ಕಾಗಲಾರದು ಎಂದರ್ಥ.

ಣಾಮ್ ಅತಿಗ್ರಹತ್ವಮ್– ಇತಿ ಶ್ರುತಿಪ್ರಸಿದ್ಧೇಃ ॥ ವಿಷಯೇಭ್ಯಶ್ಚ ಮನಸಃ ಪರತ್ವಮ್, ಮನೋಮೂಲತ್ವಾದ್ ವಿಷಯೇನ್ದ್ರಿಯವ್ಯವಹಾರಸ್ಯ । ಮನಸಸ್ತು ಪರಾ ಬುದ್ಧಿಃ ಬುದ್ಧಿಂ ಹಿ ಆರುಹ್ಯ ಭೋಗ್ಯಜಾತಂ ಭೋಕ್ತಾರಮ್ ಉಪಸರ್ಪತಿ । ಬುದ್ಧೇರಾತ್ಮಾ ಮಹಾನ್ ಪರಃ । ಯಃ ಸ "ಆತ್ಮಾನಂ ರಥಿನಂ ವಿದ್ಧಿ" ಇತಿ ರಥಿತ್ವೇನ ಉಪಕ್ಷಿಪ್ತಃ । ಕುತಃ ? ಆತ್ಮಶಬ್ದಾತ್ । ಭೋಕ್ತುಶ್ಚ ಭೋಗೋಪಕರಣಾತ್ ಪರತ್ವೋಪಪತ್ತೇಃ । ಮಹತ್ತ್ವಂ ಚ ಅಸ್ಯ ಸ್ವಾಮಿತ್ವಾತ್ ಉಪಪನ್ನಮ್ । ಅಥವಾ "ಮನೋ ಮಹಾನ್ ಮತಿರ್ಬ್ರಹ್ಮಾ ಪೂರ್ಬುದ್ಧಿಃ ಖ್ಯಾತಿರೀಶ್ವರಃ । ಪ್ರಜ್ಞಾ ಸಂವಿಚ್ಚಿತಿಶ್ಚೈವ ಸ್ಮೃತಿಶ್ಚ ಪರಿಪಠ್ಯತೇ" ॥ (?) [1] ಇತಿ ಸ್ಮೃತೇಃ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಗ್ಂಶ್ಚ ಪ್ರಹಿಣೋತಿ ತಸ್ಮೈ" (ಶ್ವೇ. ೬–೧೮) ಇತಿ ಚ ಶ್ರುತೇಃ ಯಾ ಪ್ರಥಮಜಸ್ಯ ಹಿರಣ್ಯಗರ್ಭಸ್ಯ ಬುದ್ಧಿಃ ಸಾ ಸರ್ವಾಸಾಂ ಬುದ್ಧೀನಾಂ ಪರಾ ಪ್ರತಿಷ್ಠಾ । ಸೇಹ 'ಮಹಾನಾತ್ಮಾ' ಇತ್ಯುಚ್ಯತೇ । ಸಾ ಚ ಪೂರ್ವತ್ರ ಬುದ್ಧಿಗ್ರಹಣೇನೈವ ಗೃಹೀತಾ ಸತೀ ಹಿರುಕ್ ಇಹ ಉಪದಿಶ್ಯತೇ । ತಸ್ಯಾ ಅಪಿ ಅಸ್ಮದೀಯಾಭ್ಯೋ ಬುದ್ಧಿಭ್ಯಃ ಪರತ್ವೋಪಪತ್ತೇಃ । ಏತಸ್ಮಿಂಸ್ತು ಪಕ್ಷೇ ಪರಮಾತ್ಮವಿಷಯೇಣೈವ ಪರೇಣ ಪುರುಷಗ್ರಹಣೇನ ರಥಿನಃ ಆತ್ಮನೋ ಗ್ರಹಣಂ ದ್ರಷ್ಟವ್ಯಮ್ । ಪರಮಾರ್ಥತಃ ಪರಮಾತ್ಮವಿಜ್ಞಾನಾತ್ಮನೋಃ ಭೇದಾಭಾವಾತ್ । ತದೇವಂ ಶರೀರಮೇವ ಏಕಂ ಪರಿಶಿಷ್ಯತೇ । ಇತರಾಣಿ ಇನ್ದ್ರಿಯಾದೀನಿ ಪ್ರಕೃತಾನ್ಯೇವ ಪರಮಪದದಿದರ್ಶಯಿಷಯಾ ಸಮನುಕ್ರಾಮನ್ ಪರಿಶಿಷ್ಯಮಾಣೇನ ಇಹ ಅನ್ತ್ಯೇನ ಅವ್ಯಕ್ತಶಬ್ದೇನ ಪರಿಶಿಷ್ಯಮಾಣಂ ಪ್ರಕೃತಂ ಶರೀರಂ ದರ್ಶಯತಿ ಇತಿ ಗಮ್ಯತೇ ॥

( ಭಾಷ್ಯಾರ್ಥ )

ಪ್ರಕರಣವನ್ನು ಪರೀಕ್ಷಿಸಿ ನೋಡಿದರೂ ಇಲ್ಲಿ ಪರ(ವಾದಿ)ಗಳು ಕಲ್ಪಿಸಿರುವ ಪ್ರಧಾನವು ಕಾಣಬರುವದಿಲ್ಲ. ಏಕೆಂದರೆ (ಇಲ್ಲಿ) ಶರೀರರೂಪಕ

---

1. ಅಚ್ಚಿನ ಭಾರತದಲ್ಲಿ ಈ ಅನುಕ್ರಮದ ಶ್ಲೋಕವು ನಮಗೆ ಸಿಕ್ಕಿರುವದಿಲ್ಲ. ಆದರೆ ಇದೇ ಅಭಿಪ್ರಾಯದ ಈ ಶ್ಲೋಕಗಳು ಕಂಡುಬಂದಿರುತ್ತವೆ:

೧. ಮಹಾನಾತ್ಮಾ ಮತಿರ್ಬ್ರಹ್ಮಾ ವಿಶ್ವಃ ಶಮ್ಭುಃ ಸ್ವಯಂಭವಃ ।
ಬುದ್ಧಿಃ ಪ್ರಜ್ಞೋಪಲಬ್ಧಿಶ್ಚ ಸಂವಿತ್ ಖ್ಯಾತಿರ್ಧೃತಿಃ – ಅನು. ೧೪–೪೧೬ ।

೨. ಮಹಾನಾತ್ಮಾ ಮತಿರ್ವಿಷ್ಣು ರ್ಜಿಷ್ಣುಃ ಶಮ್ಭುಶ್ಚ ವೀರ್ಯವಾನ್ ।
ಬುದ್ಧಿಃ ಪ್ರಜ್ಞೋಪಲಬ್ಧಿಶ್ಚ ತಥಾ ಖ್ಯಾತಿರ್ಧೃತಿಃ ಸ್ಮೃತಿಃ ॥
ಪರ್ಯಾಯ ವಾಚಕೈಃ ಶಬ್ದೈರ್ಮಹಾನಾತ್ಮಾ ವಿಭಾವ್ಯತೇ ॥
ಅಶ್ವ. ೪೦–೨

ವಿನ್ಯಸ್ತಗ್ರಹಣವಿದೆ ( ಇದರ ವಿವರಣೆ ) : ಇಲ್ಲಿ ರಥರೂಪಕದಲ್ಲಿಟ್ಟಿರುವ ಶರೀರವನ್ನೇ ಅವ್ಯಕ್ತಶಬ್ದದಿಂದ ತೆಗೆದುಕೊಳ್ಳಬೇಕು[1]. ಏಕೆ ? ಎಂದರೆ ಪ್ರಕರಣದಿಂದ ಮತ್ತು ಪರಿಶೇಷದಿಂದ. ಹೇಗೆಂದರೆ ಇದರ ಹಿಂದೆಯೇ ಆಗಿ ಹೋಗಿರುವ ಗ್ರಂಥವು "ಆತ್ಮನನ್ನು ರಥಿಯೆಂದು ತಿಳಿ, ಶರೀರವೆಂದರೆ ರಥವೆಂದೇ (ತಿಳಿ). ಬುದ್ಧಿಯನ್ನಾದರೆ ಸಾರಥಿಯೆಂದು ತಿಳಿ ಮನಸ್ಸನ್ನು ಕಡಿವಾಣವೆಂದೇ (ತಿಳಿ) ಬಲ್ಲವರು ಇಂದ್ರಿಯಗಳನ್ನು ಕುದುರೆಗಳು ಎನ್ನು ವರು, ವಿಷಯಗಳು ಅವುಗಳ ಗೋಚರ(ವೆನ್ನುವರು), ಆತ್ಮ,[2] ಇಂದ್ರಿಯಗಳು ಮನಸ್ಸು– (ಇವುಗಳಿಂದ) ಕೂಡಿದಾತನನ್ನು ಭೋಕ್ತ ಎಂದು ಕರೆಯುತ್ತಾರೆ" (ಕ. ೧–೩–೩೪) ಎಂದು ಆತ್ಮಶರೀರಾದಿಗಳನ್ನು ರಥ, ರಥಿ –ಎಂದು ಮುಂತಾಗಿ ರೂಪಕವನ್ನು ಕಲ್ಪಿಸಿ ತೋರಿಸಿರುತ್ತದೆ. ಆ ಇಂದ್ರಿಯಗಳೇ ಮುಂತಾದವು ಗಳನ್ನು ಬಿಗಿಹಿಡಿಯದಿದ್ದರೆ ಸಂಸಾರವನ್ನು ಪಡೆಯುತ್ತಾನೆ, ಬಿಗಿಹಿಡಿದು ಕೊಂಡರೆ ದಾರಿಯ ಕೊನೆಯಲ್ಲಿರುವ ಆ ವಿಷ್ಣುವಿನ ಪರಮಪದವನ್ನು ಪಡೆದುಕೊಳ್ಳುತ್ತಾನೆ[3] ಎಂದು ತಿಳಿಸಿ ಆ ದಾರಿಯ ಕೊನೆಯಲ್ಲಿರುವ ವಿಷ್ಣುವಿನ ಪರಮಪದವೆಂಬುದು ಯಾವದು ?– ಎಂಬ ಆಕಾಂಕ್ಷೆಯುಂಟಾಗ ಲಾಗಿ ಪ್ರಕೃತವಾಗಿರುವ ಅದೇ ಇಂದ್ರಿಯಾದಿಗಳಿಗಿಂತ ಹೆಚ್ಚಾಗಿರುವ ಪರಮಾತ್ಮನೇ ದಾರಿಯ ಕೊನೆಯಲ್ಲಿರುವ ವಿಷ್ಣುವಿನ ಪರಮಪದವು ಎಂದು "ಇಂದ್ರಿಯಗಳಿಗಿಂತ ಅರ್ಥಗಳು ಹೆಚ್ಚಿನವು, ಮತ್ತು ಅರ್ಥಗಳಿಗಿಂತ ಮನಸ್ಸು ಹೆಚ್ಚಿನದು ; ಮನಸ್ಸಿಗಿಂತ ಬುದ್ಧಿಯು ಹೆಚ್ಚಿನದು ; ಬುದ್ಧಿಗಿಂತ ಮಹಾನ್ ಆತ್ಮನು ಹೆಚ್ಚಿನವನು. (ಆ) ಮಹತ್ತಿಗಿಂತ ಅವ್ಯಕ್ತವು ಹೆಚ್ಚಿನದು, ಅವ್ಯಕ್ತ ಕ್ಕಿಂತ ಪುರುಷನು ಹೆಚ್ಚಿನವನು. ಪುರುಷನಿಗಿಂತ ಯಾವದೂ ಹೆಚ್ಚಿನದಿಲ್ಲ ; ಅವನೇ ಕೊನೆ, ಅವನೇ ಪರಗತಿ" (ಕ. ೧–೩–೧೦, ೧೧) ಎಂಬ (ವಾಕ್ಯವು) ತಿಳಿಸುತ್ತದೆ. ಇಲ್ಲಿ ಯಾವ ಇಂದ್ರಿಯಾದಿಗಳನ್ನೇ ಹಿಂದಿನ ರಥರೂಪಕ ಕಲ್ಪನೆಯಲ್ಲಿ ಕುದುರೆ ಮುಂತಾದ ರೂಪದಿಂದ ಪ್ರಕ್ರಮಮಾಡಿದೆಯೋ ಅವುಗಳನ್ನೇ ಇಲ್ಲಿಯೂ, ಪ್ರಕೃತವನ್ನು ಬಿಟ್ಟು ಅಪ್ರಕೃತವಾದದ್ದನ್ನು

---

1. ಶರೀರಂ ಚ ತತ್ ರೂಪಕವಿನ್ಯಸ್ತಂ ಚ ಶರೀರರೂಪಕವಿನ್ಯಸ್ತಮ್ । ತಸ್ಯ ಗೃಹೀತೇಃ ಎಂದು ಸೂತ್ರಭಾಗವನ್ನು ಇಲ್ಲಿ ಬಿಡಿಸಿತೋರಿಸಿರುತ್ತಾರೆ

2. ಶರೀರ.

3. ಕ. ೧-೩-೭ರಿಂದ ೯ರ ವರೆಗಿನ ಗ್ರಂಥದ ಅರ್ಥವಿದು. ಪ್ರಕರಣವು ಶರೀರೇಂದ್ರಿಯಾದಿಗಳ ಮೂಲಕ ಪರಮಾತ್ಮನನ್ನು ತಿಳಿಸುವದಕ್ಕೆ ಹೊರಟಿದೆ ಎಂಬುದನ್ನು ತಿಳಿಸುವದಕ್ಕೆ ಈ ಗ್ರಂಥದ ಉಪನ್ಯಾಸವನ್ನು ಮಾಡಿದೆ.

ಪ್ರಾರಂಭಿಸುವ(ದೆಂಬ ದೋಷವನ್ನು) ಪರಿಗ್ರಹಿಸಿಕೊಳ್ಳುವದಕ್ಕಾಗಿ[1] ಪರಿಗ್ರಹಿಸಬೇಕಾಗಿದೆ.

ಮೊದಲನೆಯದಾಗಿ ಇವುಗಳಲ್ಲಿ ಇಂದ್ರಿಯಗಳು, ಮನಸ್ಸು, ಬುದ್ಧಿ- ಇವುಗಳಿಗೆ ಹಿಂದೆಯೂ ಇಲ್ಲಿಯೂ ಅದೇ ಹೆಸರುಗಳೇ ಇರುತ್ತವೆ. ಅರ್ಥಗಳೆಂಬ ಶಬ್ದಾದಿವಿಷಯಗಳನ್ನು ಇಂದ್ರಿಯಗಳೆಂಬ ಕುದುರೆಗಳಿಗೆ ಗೋಚರವೆಂದು ಹಿಂದೆ ಹೇಳಿತ್ತಷ್ಟೆ, ಅವು ಇಂದ್ರಿಯಗಳಿಗಿಂತ ಹೆಚ್ಚಿನವು ಎಂದಿರುವದು "ಇಂದ್ರಿಯಗಳು ಗ್ರಹ, ವಿಷಯಗಳು ಅತಿಗ್ರಹ" (ಬೃ. ೩-೨-೨ರಿಂದ ೯) ಎಂಬ ಶ್ರುತಿಪ್ರಸಿದ್ಧಿಯಿಂದ, ಮತ್ತು ವಿಷಯಗಳಿಗಿಂತ ಮನಸ್ಸು ಹೆಚ್ಚಿನದು ಎಂದಿರುವದು ವಿಷಯೇಂದ್ರಿಯವ್ಯವಹಾರವು ಮನೋಮೂಲವಾಗಿರುವದರಿಂದ. ಮನಸ್ಸಿಗಿಂತಲಾದರೆ ಬುದ್ಧಿಯು ಹೆಚ್ಚಿನದು; ಏಕೆಂದರೆ ಭೋಗ್ಯಸಮೂಹವು ಬುದ್ಧಿಯನ್ನು ಹತ್ತಿಕೊಂಡೇ ಭೋಕ್ತೃವಿನ ಬಳಿಗೆ ಬಂದು (ಸೇರು)ತ್ತದೆ[2]. ಬುದ್ಧಿಗಿಂತ ಮಹಾನ್ ಆತ್ಮನು ಹೆಚ್ಚಿನವನು. "ಆತ್ಮನನ್ನು ರಥಿಯೆಂದು ತಿಳಿ" ಎಂದು (ಹಿಂದೆ) ರಥಿ ಎಂತ ಸೂಚಿತನಾಗಿದ್ದನಲ್ಲ, ಅವನೇ ಇವನು. (ಇದು) ಏತರಿಂದ (ಗೊತ್ತು)?[3] ಎಂದರೆ (ಇಲ್ಲಿ) ಆತ್ಮಶಬ್ದವಿರುವದರಿಂದ[4]. ಭೋಕ್ತೃವು ಭೋಗೋಪಕರಣಕ್ಕಿಂತ ಹೆಚ್ಚಿನವನು ಎಂಬುದು ಯುಕ್ತವೂ ಆಗಿರುತ್ತದೆ[5]. ಇವನು 'ಮಹಾನ್'[6] (ಎಂದಿರುವದೂ) ಇವನು ಶರೀರಕರಣಗಳಿಗೆ ಒಡೆಯನಾಗಿರುವದರಿಂದ ಯುಕ್ತವಾಗಿರುತ್ತದೆ. ಅಥವಾ "ಮನೋ ಮಹಾನ್ ಮತಿರ್ಬ್ರಹ್ಮಾ ಪೂರ್ಬುದ್ಧಿಃ ಖ್ಯಾತಿರೀಶ್ವರಃ। ಪ್ರಜ್ಞಾ ಸಂವಿಚ್ಚಿತಿಶ್ಚೈವ ಸ್ಮೃತಿಶ್ಚ ಪರಿಪಠ್ಯತೇ" (ಮನಃ, ಮಹಾನ್, ಮತಿಃ, ಬ್ರಹ್ಮಾ, ಪೂಃ, ಬುದ್ಧಿಃ, ಖ್ಯಾತಿಃ, ಈಶ್ವರಃ, ಪ್ರಜ್ಞಾ, ಸಂವಿತ್,

---

1. ಪೂರ್ವಪಕ್ಷವಲ್ಲಿ ಪ್ರಕೃತವಾಗಿರುವ ಇಂದ್ರಿಯಾದಿಗಳನ್ನು ಬಿಟ್ಟು ಅಪ್ರಕೃತವಾಗಿರುವ ಮಹದವ್ಯಕ್ತಪುರುಷರನ್ನು ಹೇಳುವದಕ್ಕಾರಂಭಿಸಿದಂತೆ ಆಗಿರುತ್ತದೆ ಎಂದು ಭಾವ.

2. ಭೋಗವನ್ನು ಅನುಭವಿಸುವದು ಬುದ್ಧಿಯ ಮೂಲಕವೇ, ಆತ್ಮನು ನೇರಾಗಿ ಭೋಗಿಸುವದಿಲ್ಲ.

3 ಸಾಂಖ್ಯರ ಮಹತ್ತತ್ತ್ವವನ್ನೇ ಇಲ್ಲಿ ಹೇಳಿದೆ ಎಂದೇಕೆ ತಿಳಿಯಬಾರದು?- ಎಂದು ಪ್ರಶ್ನೆ.

4. ಮಹತ್ತತ್ತ್ವವು ಮುಖ್ಯಾರ್ಥದಲ್ಲಿ ಆತ್ಮನಾಗಲಾರದು.

5. ಕರ್ತೃವಿಗಾಗಿ ಕರಣವಿರುವದರಿಂದ ಕರಣರೂಪವಾದ ಬುದ್ಧಿಗಿಂತ ಕರ್ತೃವಾದ ಜೀವನು ಹೆಚ್ಚಿನವನೆಂದು ಯುಕ್ತ ಎಂದು ಭಾವ.

6. ಮಹಾನ್ ಎಂಬುದು ಮಹತ್ತತ್ತ್ವಕ್ಕೇ ಮುಖ್ಯಾರ್ಥದಲ್ಲಿ ಹೊಂದುತ್ತದೆಯಲ್ಲ! ಎಂಬ ಆಕ್ಷೇಪಕ್ಕೆ ಪರಿಹಾರವಿದು.

ಚಿತಿಃ, ಸ್ಮೃತಿ ಎಂದೂ ಹೇಳಲ್ಪಡುತ್ತದೆ) ಎಂಬ **ಸ್ಮೃತಿ** (?)ಯಿಂದಲೂ "ಯಾವನು ಬ್ರಹ್ಮನನ್ನು ಮೊದಲು ಸೃಷ್ಟಿಮಾಡುವನೋ, ಮತ್ತು ಯಾವನು ಅವನಿಗೆ ವೇದಗಳನ್ನು ಕಳುಹಿಸಿಕೊಡುವನೋ" (ಶ್ವೇ. ೬-೧-೮) ಎಂಬ ಶ್ರುತಿಯಿಂದಲೂ **ಮೊದಲು ಹುಟ್ಟುವ ಹಿರಣ್ಯಗರ್ಭನ ಬುದ್ಧಿಯುಂಟಲ್ಲ, ಅದು ಎಲ್ಲಾ ಬುದ್ಧಿಗಳಿಗೂ ಹೆಚ್ಚಿನ ಆಶ್ರಯವಾಗಿರುತ್ತದೆ**[1]. **ಅದನ್ನೇ ಇಲ್ಲಿ ಮಹಾನ್ ಆತ್ಮಾ ಎಂದಿರುತ್ತದೆ**. ಅದನ್ನು ಹಿಂದೆ ಬುದ್ಧಿಯನ್ನು ತೆಗೆದುಕೊಂಡದ್ದರಿಂದಲೇ ತೆಗೆದುಕೊಂಡಂತಾಗಿತ್ತು. ಇಲ್ಲಿ ಬೇರೆಯಾಗಿ ತಿಳಿಸಿರುತ್ತದೆ; ಏಕೆಂದರೆ ಅದೂ ನಮ್ಮ ಬುದ್ಧಿಗಳಿಗಿಂತ ಹೆಚ್ಚಿನದಾಗಿರಬಹುದಾಗಿದೆ[2]. ಈ ಪಕ್ಷದಲ್ಲಾದರೆ ಪರಮಾತ್ಮವಿಷಯನಾಗಿರುವ ಪುರುಷ(ಶಬ್ದವನ್ನು) ಗ್ರಹಿಸಿದ್ದರಿಂದಲೇ ರಥಿಯಾದ ಆತ್ಮನನ್ನು ತೆಗೆದುಕೊಂಡಂತೆ ಆಯಿತೆಂದು ತಿಳಿಯಬೇಕು; ಏಕೆಂದರೆ ನಿಜವಾಗಿ ಪರಮಾತ್ಮ ವಿಜ್ಞಾನಾತ್ಮರುಗಳಿಗೆ ಭೇದವಿರುವದಿಲ್ಲ[3].

ಈ ರೀತಿಯಲ್ಲಿ ಶರೀರವೊಂದೇ ಉಳಿದುಕೊಳ್ಳುತ್ತದೆ[4]. ಪ್ರಕೃತವೇ ಆಗಿರುವ ಉಳಿದ ಇಂದ್ರಿಯಾದಿಗಳನ್ನೇ ಪರಮಪದವನ್ನು ತೋರಿಸಿಕೊಡಬೇಕೆಂಬ ಇಚ್ಛೆಯಿಂದ ಒಂದಾಗುತ್ತಲೊಂದಾಗಿ ಹೇಳಿರುವದರಿಂದ ಉಳಿದಿರುವ ಕೊನೆಯ ಅವ್ಯಕ್ತ ಎಂಬ ಶಬ್ದದಿಂದ ಉಳಿದಿರುವ ಪ್ರಕೃತಶರೀರವನ್ನೇ ಇಲ್ಲಿ ಹೇಳಿರುತ್ತದೆ ಎಂದು ಗೊತ್ತಾಗುತ್ತದೆ.

## ಅಧ್ಯಾತ್ಮಯೋಗವನ್ನು ಹೇಳಿರುವದರಿಂದಲೂ ಈ ಅವ್ಯಕ್ತವು ಶರೀರವೇ

(ಭಾಷ್ಯ)

೩೩೭. ಶರೀರೇನ್ದ್ರಿಯಮನೋಬುದ್ಧಿವಿಷಯವೇದನಾಸಂಯುಕ್ತಸ್ಯ ಹಿ ಅವಿದ್ಯಾವತೋ ಭೋಕ್ತುಃ ಶರೀರಾದೀನಾಂ ರಥಾದಿರೂಪಕಕಲ್ಪನಯಾ ಸಂಸಾರಮೋಕ್ಷಗತಿನಿರೂಪಣೇನ ಪ್ರತ್ಯಗಾತ್ಮಬ್ರಹ್ಮಾವಗತಿರಿಹ ವಿವಕ್ಷಿತಾ ।

---

1. ನಮ್ಮ ಬುದ್ಧಿಗಳೆಲ್ಲ ಆ ಹಿರಣ್ಯಗರ್ಭನ ಬುದ್ಧಿಯ ಅಂಶಗಳೇ.
2. ಆಶ್ರಯವಾದ ಹಿರಣ್ಯಗರ್ಭನ ಬುದ್ಧಿಯು ಅದನ್ನು ಆಶ್ರಯಿಸಿಕೊಂಡಿರುವ ವ್ಯಷ್ಟಿಬುದ್ಧಿಗಳಿಗಿಂತ ಹೆಚ್ಚಿನದು ಎಂದು ಭಾವ.
3. ಆದ್ದರಿಂದ ಪುರುಷಶಬ್ದದಿಂದಲೇ ಜೀವನನ್ನು ಹೇಳಿದಂತಾಯಿತು.
4. ಪರಿಶೇಷದಿಂದ ಶರೀರವೇ ಅವ್ಯಕ್ತವೆಂದು ಗೊತ್ತಾಗುತ್ತದೆ ಎಂದು ಮೇಲೆ ಹೇಳಿರುವದು ಈ ಕಾರಣದಿಂದಲೇ.

ತಥಾ ಚ "ಏಷ ಸರ್ವೇಷು ಭೂತೇಷು ಗೂಢೋತ್ಮಾ ನ ಪ್ರಕಾಶತೇ। ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ" (ಕ. ೧-೩-೧೨) ಇತಿ ವೈಷ್ಣವಸ್ಯ ಪರಮಪದಸ್ಯ ದುರವಗಮತ್ವಮ್ ಉಕ್ತ್ವಾ ತದವಗಮಾರ್ಥಂ ಯೋಗಂ ದರ್ಶಯತಿ– "ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ। ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇಚ್ಛಾನ್ತ ಆತ್ಮನಿ॥" (ಕ. ೧-೩-೧೩) ಏತದುಕ್ತಂ ಭವತಿ। ವಾಚಂ ಮನಸಿ ಸಂಯಚ್ಛೇತ್, ವಾಗಾದಿಬಾಹ್ಯೇನ್ದ್ರಿಯವ್ಯಾಪಾರಮ್ ಉತ್ಸೃಜ್ಯ ಮನೋಮಾತ್ರೇಣ ಅವತಿಷ್ಠೇತ। ಮನೋಽಪಿ ವಿಷಯವಿಕಲ್ಪಾಭಿಮುಖಂ ವಿಕಲ್ಪದೋಷದರ್ಶನೇನ ಜ್ಞಾನಶಬ್ದೋದಿತಾಯಾಂ ಬುದ್ಧೌ ಅಧ್ಯವಸಾಯಸ್ವಭಾವಾಯಾಂ ಧಾರಯೇತ್। ತಾಮಪಿ ಬುದ್ಧಿಂ ಮಹತಿ ಆತ್ಮನಿ ಭೋಕ್ತರಿ ಅಗ್ರ್ಯಾಯಾಂ ವಾ ಬುದ್ಧೌ ಸೂಕ್ಷ್ಮತಾಪಾದನೇನ ನಿಯಚ್ಛೇತ್। ಮಹಾನ್ತಂ ತು ಆತ್ಮಾನಂ ಶಾನ್ತೇ ಆತ್ಮನಿ ಪ್ರಕರಣವತಿ ಪರಸ್ಮಿನ್ ಪುರುಷೇ ಪರಸ್ಯಾಂ ಕಾಷ್ಠಾಯಾಂ ಪ್ರತಿಷ್ಠಾಪಯೇತ್ ಇತಿ ಚ[1]। ತದೇವಂ ಪೂರ್ವಾಪರಾಲೋಚನಾಯಾಂ ನಾಸ್ತ್ಯತ್ರ ಪರಪರಿಕಲ್ಪಿತಸ್ಯ ಪ್ರಧಾನಸ್ಯ ಅವಕಾಶಃ॥

(ಭಾಷ್ಯಾರ್ಥ)

**ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ವಿಷಯವೇದನೆ– ಇವುಗಳಿಂದ ಕೂಡಿರುವ ಅವಿದ್ಯಾವಂತನಾದ ಭೋಕ್ತೃವಿನ ಶರೀರಾದಿಗಳನ್ನು ರಥವೇ ಮುಂತಾದದ್ದೆಂದು ರೂಪಕವನ್ನು ಕಲ್ಪಿಸಿ ಸಂಸಾರಮೋಕ್ಷಗತಿಗಳನ್ನು ನಿಶ್ಚಯಿಸುವದರ ಮೂಲಕ ಪ್ರತ್ಯಗಾತ್ಮ(ರೂಪವಾದ) ಬ್ರಹ್ಮವನ್ನು ಗೊತ್ತುಪಡಿಸುವದೇ ಇಲ್ಲಿ ವಿವಕ್ಷಿತವಾಗಿರುತ್ತದೆ[2].** ಆದ್ದರಿಂದಲೇ "ಸರ್ವಭೂತಗಳಲ್ಲಿಯೂ ಗೂಢನಾಗಿರುವ(ದರಿಂದ)ಲೂ ಈ ಆತ್ಮನು ಬೆಳಗುವದಿಲ್ಲ. ಆದರೆ ಸೂಕ್ಷ್ಮವಾದ ಅಗ್ರ್ಯಬುದ್ಧಿಯಿಂದ (ನೋಡುವ) ಸೂಕ್ಷ್ಮದರ್ಶಿಗಳಿಗೆ ಕಾಣುತ್ತಾನೆ" (ಕ. ೧-೩-೧೨) ಎಂದು ವೈಷ್ಣವಪರಮಪದವನ್ನು[3] ಅರಿತುಕೊಳ್ಳುವದು ಕಷ್ಟವೆಂದು ಹೇಳಿ "ವಿವೇಕಿಯಾದವನು ವಾಕ್ಕನ್ನು ಮನಸ್ಸಿನಲ್ಲಿ ಹಿಡಿದಿಡಬೇಕು, ಅದನ್ನು ಜ್ಞಾನಾತ್ಮನಲ್ಲಿ ಹಿಡಿದಿಡಬೇಕು, ಜ್ಞಾನಾ(ತ್ಮ)ನನ್ನು ಮಹತ್ತಿನಲ್ಲಿ ಹಿಡಿದಿಡಬೇಕು, ಅದನ್ನು

---

1 ಇಲ್ಲಿ ಚ ಬೇಕಿಲ್ಲವೆಂದು ಕಾಣುತ್ತದೆ.

2. ಪ್ರಧಾನವನ್ನು ಹೇಳುವ ಪ್ರಕರಣವಿದಲ್ಲ.

3. ಆ ಪರಮಾತ್ಮನನ್ನು.

ಶಾಂತಾತ್ಮನಲ್ಲಿ ಹಿಡಿದಿಡಬೇಕು'' (ಕ. ೧-೩-೧೩) ಎಂದು ಅದನ್ನು ಅರಿತುಕೊಳ್ಳುವದಕ್ಕೆ **ಯೋಗವನ್ನೂ**[1] ತಿಳಿಸುತ್ತದೆ.

**(ಈ ಶ್ರುತಿಯಲ್ಲಿ) ಇಷ್ಟನ್ನು ಹೇಳಿದಂತಾಗಿರುತ್ತದೆ: ವಾಕ್ಕನ್ನು ಮನಸ್ಸಿನಲ್ಲಿ ಸಂಯಮಮಾಡಬೇಕು, ಎಂದರೆ ವಾಕ್ಕೇ ಮುಂತಾದ ಹೊರಗಿನ ಇಂದ್ರಿಯಗಳ ವ್ಯಾಪಾರವನ್ನು ಬಿಟ್ಟು ಬರಿಯ ಮನಸ್ಸಾಗಿ ನಿಲ್ಲಬೇಕು. ವಿಷಯಗಳನ್ನು ವಿಕಲ್ಪಿಸಿರುವ ಕಡೆಗೆ ತಿರುಗುವ ಮನಸ್ಸನ್ನೂ ವಿಕಲ್ಪಗಳಲ್ಲಿರುವ ದೋಷವನ್ನೂ ಕಂಡುಕೊಂಡು ಜ್ಞಾನವೆಂಬ ಶಬ್ದಕ್ಕೆ ವಾಚ್ಯವಾಗಿರುವ ನಿಶ್ಚಯಸ್ವಭಾವದ ಬುದ್ಧಿಯಲ್ಲಿ ನಿಲ್ಲಿಸಿಕೊಳ್ಳಬೇಕು. ಆ ಬುದ್ಧಿಯನ್ನೂ ಮಹಾ ಆತ್ಮನಲ್ಲಿ ಎಂದರೆ ಭೋಕ್ತೃವಿನಲ್ಲಿ ಅಥವಾ ಮೊದಲು ಹುಟ್ಟಿದ (ಹಿರಣ್ಯಗರ್ಭನ) ಬುದ್ಧಿಯಲ್ಲಿ ಸೂಕ್ಷ್ಮವಾಗಿಸಿಕೊಂಡು, ನಿಲ್ಲಿಸಿಕೊಳ್ಳಬೇಕು. ಮಹಾ ಆತ್ಮನನ್ನಾದರೋ ಶಾಂತಾತ್ಮನಲ್ಲಿ ಎಂದರೆ (ಈ) ಪ್ರಕರಣಕ್ಕೆ ಸೇರಿರುವ, (ಎಲ್ಲಕ್ಕೂ) ತೀರ ಕೊನೆಯವನಾದ, ಪರಮಪುರುಷನಲ್ಲಿ ನಿಲ್ಲಿಸಿಕೊಳ್ಳಬೇಕು ಎಂದು (ಅರ್ಥ).**

ಅಂತೂ ಹೀಗೆ ಹಿಂದುಮುಂದಿನ (ಸಂದರ್ಭವನ್ನು) ಆಲೋಚಿಸಿದರೆ ಪರ(ವಾದಿಗಳಾದ ಸಾಂಖ್ಯರು) ಕಲ್ಪಿಸಿರುವ ಪ್ರಧಾನಕ್ಕೆ ಅವಕಾಶವಿರುವದಿಲ್ಲ.

**ಸೂಕ್ಷ್ಮಂ ತು ತದರ್ಹತ್ವಾತ್ ॥ ೨ ॥**

೨. ಸೂಕ್ಷ್ಮವನ್ನೇ (ಇಲ್ಲಿ ಅವ್ಯಕ್ತವೆಂದಿದೆ); ಏಕೆಂದರೆ (ಅದು) ಆ (ಶಬ್ದಕ್ಕೆ) ಯೋಗ್ಯವಾಗಿರುತ್ತದೆ.

## ಶರೀರವನ್ನು ಅವ್ಯಕ್ತವೆಂದಿರುವದು ಭೂತಸೂಕ್ಷ್ಮದ ದೃಷ್ಟಿಯಿಂದ

**( ಭಾಷ್ಯ )**

**೩೩೮. ಉಕ್ತಮೇತತ್ ಪ್ರಕರಣಪರಿಶೇಷಾಭ್ಯಾಂ ಶರೀರಂ ಅವ್ಯಕ್ತಶಬ್ದಂ ನ ಪ್ರಧಾನಮ್ ಇತಿ। ಇದಮ್ ಇದಾನೀಮ್ ಆಶಙ್ಕ್ಯತೇ– ಕಥಮ್**

---

**1. ನಿದಿಧ್ಯಾಸನವನ್ನೂ ಎಂದರ್ಥ. ಗೀತೆಯ ಆರನೆಯ ಅಧ್ಯಾಯದಲ್ಲಿ ಹೇಳಿರುವ ಧ್ಯಾನಯೋಗವೂ, ಮಾಂಡೂಕ್ಯಕಾರಿಕೆಯ ೩-೪೦ರಿಂದ ೪೬ರ ವರೆಗಿನ ಗ್ರಂಥಭಾಗದಲ್ಲಿ ಹೇಳಿರುವ ಮನೋನಿಗ್ರಹವೂ ಇದೇ ಆಧ್ಯಾತ್ಮಯೋಗವು. ಪೀಠಿಕೆಯನ್ನು ನೋಡಿ.**

ಅವ್ಯಕ್ತಶಬ್ದಾರ್ಹತ್ವಂ ಶರೀರಸ್ಯ ? ಯಾವತಾ ಸ್ಥೂಲತ್ವಾತ್ ಸ್ಪಷ್ಟತರಮಿದಂ ಶರೀರಂ ವ್ಯಕ್ತಶಬ್ದಾರ್ಹಮ್, ಅಸ್ಪಷ್ಟವಚನಸ್ತು ಅವ್ಯಕ್ತಶಬ್ದಃ ಇತಿ | ಅತಃ ಉತ್ತರಮ್ ಉಚ್ಯತೇ– ಸೂಕ್ಷ್ಮಂ ತು ಇಹ ಕಾರಣಾತ್ಮನಾ ಶರೀರಂ ವಿವಕ್ಷ್ಯತೇ ಸೂಕ್ಷ್ಮಸ್ಯ ಅವ್ಯಕ್ತಶಬ್ದಾರ್ಹತ್ವಾತ್ । ಯದ್ಯಪಿ ಸ್ಥೂಲಮಿದಂ ಶರೀರಂ ನ ಸ್ವಯಮ್ ಅವ್ಯಕ್ತಶಬ್ದಮ್ ಅರ್ಹತಿ ತಥಾಪಿ ತಸ್ಯ ತು ಆರಮ್ಭಕಂ ಭೂತಸೂಕ್ಷ್ಮಮ್ ಅವ್ಯಕ್ತಶಬ್ದಮ್ ಅರ್ಹತಿ | ಪ್ರಕೃತಿಶಬ್ದಶ್ಚ ವಿಕಾರೇ ದೃಷ್ಟಃ | ಯಥಾ ಗೋಭಿಃ ಶ್ರೀಣೀತ ಮತ್ಸರಮ್" (ಋ. ಸಂ. ೯–೪೬–೪) ಇತಿ । ಶ್ರುತಿಶ್ಚ "ತದ್ಧೇದಂ ತರ್ಹ್ಯವ್ಯಾಕೃತಮಾಸೀತ್" (ಬೃ. ೧–೪–೭) ಇತಿ ಇದಮೇವ ವ್ಯಾಕೃತನಾಮರೂಪವಿಭಿನ್ನಂ ಜಗತ್ ಪ್ರಾಗವಸ್ಥಾಯಾಂ ಪರಿತ್ಯಕ್ತವ್ಯಾಕೃತನಾಮರೂಪಂ ಬೀಜಶಕ್ತ್ಯವಸ್ಥಮ್ ಅವ್ಯಕ್ತಶಬ್ದಯೋಗ್ಯಂ ದರ್ಶಯತಿ ॥

(ಭಾಷ್ಯಾರ್ಥ)

ಪ್ರಕರಣಪರಿಶೇಷಗಳಿಂದ ಶರೀರವನ್ನೇ ಅವ್ಯಕ್ತಶಬ್ದ(ದಿಂದ ಹೇಳಿದೆ). ಪ್ರಧಾನವನ್ನಲ್ಲ ಎಂಬಿವನ್ನು ಹೇಳಿದ್ದಾಯಿತು. ಈಗ ಇವನ್ನು ಆಶಂಕೆ ಮಾಡಲಾಗುತ್ತದೆ. ಶರೀರವು ಅವ್ಯಕ್ತಶಬ್ದಕ್ಕೆ ತಕ್ಕದ್ದೆಂಬುದು ಹೇಗೆ ? ಏಕೆಂದರೆ ಸ್ಥೂಲವಾಗಿರುವದರಿಂದ ಈ ಶರೀರವು ಸ್ಪಷ್ಟತರವಾಗಿದೆಯಾಗಿ ವ್ಯಕ್ತ ಎಂಬ ಶಬ್ದಕ್ಕೆ ತಕ್ಕದ್ದು ; ಅವ್ಯಕ್ತಶಬ್ದವಾದರೋ ಅಸ್ಪಷ್ಟವಾದದ್ದನ್ನು (ಹೇಳುತ್ತದೆಯಲ್ಲ) ![1]

ಇದಕ್ಕೆ ಉತ್ತರವನ್ನು ಹೇಳಲಾಗುತ್ತದೆ : ಕಾರಣರೂಪದಿಂದ ಸೂಕ್ಷ್ಮವಾಗಿರುವ ಶರೀರವನ್ನೇ ಇಲ್ಲಿ (ಅವ್ಯಕ್ತಶಬ್ದದಿಂದ) ಹೇಳಬೇಕೆಂದಿರುತ್ತದೆ. ಏಕೆಂದರೆ ಸೂಕ್ಷ್ಮವು ಅವ್ಯಕ್ತಶಬ್ದಕ್ಕೆ ತಕ್ಕದ್ದಾಗಿರುತ್ತದೆ. ಈ ಸ್ಥೂಲ ಶರೀರವು ತಾನೇ ಅವ್ಯಕ್ತಶಬ್ದಕ್ಕೆ ತಕ್ಕದ್ದಲ್ಲವೆಂಬುದು ನಿಜ; ಆದರೂ ಅದಕ್ಕೆ ಕಾರಣವಾದ[2] ಭೂತಸೂಕ್ಷ್ಮವು[3] ಅವ್ಯಕ್ತಶಬ್ದಕ್ಕೆ ತಕ್ಕದ್ದಾಗಿರುತ್ತದೆ.

---

1. ಪ್ರಧಾನವು ಅವ್ಯಕ್ತವು, ಮಹದಾದಿಗಳು ವ್ಯಕ್ತ, ಪುರುಷನು ಜ್ಞಸ್ವರೂಪನು_ ಎಂದು ವಿಂಗಡಿಸಿ ತಿಳಿದುಕೊಂಡರೆ ಕೈವಲ್ಯವಾಗುವದೆಂದು ಸಾಂಖ್ಯರ ಮತ. ಆದ್ದರಿಂದ ಶರೀರವು ವ್ಯಕ್ತವಾಗಿದೆ, ಇಂದ್ರಿಯಗಳಿಗೆ ಕಾಣುತ್ತದೆ ; ಇದನ್ನು ಅವ್ಯಕ್ತವೆನ್ನುವದು ಹೇಗೆ ? ಎಂದು ಸಾಂಖ್ಯನ ಆಕ್ಷೇಪ.

2. ಆರಂಭಕ ಎಂಬ ಶಬ್ದವನ್ನು ಕಾರಣ ಎಂಬರ್ಥದಲ್ಲಿ ಭಾಷ್ಯಕಾರರು ಪ್ರಯೋಗಿಸುವರು. ಇದು ವೈಶೇಷಿಕರ ಪಾರಿಭಾಷಿಕಪದವೆಂದು ಭ್ರಮಿಸಕೂಡದು.

3. ಭೂತಗಳು ಹುಟ್ಟುವದಕ್ಕೆ ಬೇಕಾದ ಸೂಕ್ಷ್ಮಕಾರಣವಾದ ಅವ್ಯಾಕೃತವು.

ಕಾರಣ(ವಾಚಕ)ಶಬ್ದವನ್ನು ಕಾರ್ಯದಲ್ಲಿ (ಪ್ರಯೋಗಿಸುವದು) ಕಂಡಿದೆ ; ಉದಾಹರಣೆಗೆ "ಗೋಭಿಃ ಶ್ರೀಣೀತ ಮತ್ಸರಮ್, (ಋ. ಸಂ. ೯-೪೬-೪) ಗೋವುಗಳಿಂದ ಮತ್ಸರವನ್ನು ಮಿಶ್ರಮಾಡಬೇಕು[1] ಎಂಬಲ್ಲಿ ಹಾಗೆ ಪ್ರಯೋಗಿಸಿದೆ. "ಆಗ ಈ (ಜಗತ್ತು) ಅವ್ಯಾಕೃತವಾಗಿತ್ತು" (ಬೃ. ೧-೪-೭) ಎಂದು ಶ್ರುತಿಯೂ ನಾಮರೂಪಗಳಿಂದ ಬಿಡಿಬಿಡಿಯಾಗಿ ವಿಂಗಡಿಸಿಕೊಂಡಿರುವ ಇದೇ ಜಗತ್ತು ಹಿಂದಿನ ಅವಸ್ಥೆಯಲ್ಲಿ ಬಿಡಿಬಿಡಿಯಾದ ನಾಮರೂಪಗಳನ್ನು ಬಿಟ್ಟು ಬೀಜಶಕ್ತಿಯ ಅವಸ್ಥೆಯಲ್ಲಿ (ಇತ್ತು ಎಂದು ಅದನ್ನು) ಅವ್ಯಕ್ತ ಎಂಬ ಶಬ್ದಕ್ಕೆ ತಕ್ಕದ್ದೆಂದು ತಿಳಿಸುತ್ತದೆ.

**ತದಧೀನತ್ವಾದರ್ಥವತ್ ॥ ೩ ॥**

೩. ಅವನಿಗೆ ಅಧೀನವಾಗಿರುವದರಿಂದ (ಇದು) ಅರ್ಥವತ್ತಾಗಿರುತ್ತದೆ.

## ಅವ್ಯಾಕೃತವು ಪ್ರಧಾನವಲ್ಲ

(ಭಾಷ್ಯ)

೩೭೯. ಅತ್ರಾಹ । ಯದಿ ಜಗದಿದಮ್ ಅನಭಿವ್ಯಕ್ತನಾಮರೂಪಂ ಬೀಜಾತ್ಮಕಂ ಪ್ರಾಗವಸ್ಥಮ್ ಅವ್ಯಕ್ತಶಬ್ದಾರ್ಹಮ್ ಅಭ್ಯುಗಮ್ಯೇತ, ತದಾತ್ಮನಾ ಚ ಶರೀರಸ್ಯಾಪಿ ಅವ್ಯಕ್ತಶಬ್ದಾರ್ಹತ್ವಂ ಪ್ರತಿಜ್ಞಾಯೇತ, ಸ ಏವ ತರ್ಹಿ ಪ್ರಧಾನಕಾರಣವಾದಃ ಏವಂ ಸತಿ ಆಪದ್ಯೇತ । ಅಸ್ಯೈವ ಜಗತಃ ಪ್ರಾಗವಸ್ಥಾಯಾಃ ಪ್ರಧಾನತ್ವೇನ ಅಭ್ಯುಪಗಮಾತ್ ಇತಿ । ಅತ್ರೋಚ್ಯತೇ— ಯದಿ ವಯಂ ಸ್ವತನ್ತ್ರಾಂ ಕಾಂಚಿತ್ ಪ್ರಾಗವಸ್ಥಾಂ ಜಗತಃ ಕಾರಣತ್ವೇನ ಅಭ್ಯುಪಗಚ್ಛೇಮ ಪ್ರಸಞ್ಜಯೇಮ ತದಾ ಪ್ರಧಾನಕಾರಣವಾದಮ್ । ಪರಮೇಶ್ವರಾಧೀನಾ ತು ಇಯಮ್ ಅಸ್ಮಾಭಿಃ ಪ್ರಾಗವಸ್ಥಾ ಜಗತಃ ಅಭ್ಯುಪಗಮ್ಯತೇ । ನ ಸ್ವತನ್ತ್ರಾ । ಸಾ ಚ ಅವಶ್ಯಾಭ್ಯುಪಗನ್ತವ್ಯಾ । ಅರ್ಥವತೀ ಹಿ ಸಾ । ನ ಹಿ ತಯಾ ವಿನಾ ಪರಮೇಶ್ವರಸ್ಯ ಸ್ರಷ್ಟೃತ್ವಂ ಸಿಧ್ಯತಿ । ಶಕ್ತಿರಹಿತಸ್ಯ ತಸ್ಯ ಪ್ರವೃತ್ತ್ಯನುಪಪತ್ತೇಃ । ಮುಕ್ತಾನಾಂ ಚ ಪುನರನುತ್ಪತ್ತಿಃ । ಕುತಃ ? ವಿದ್ಯಯಾ ತಸ್ಯಾ ಬೀಜಶಕ್ತೇರ್ದಾಹಾತ್ । ಅವಿದ್ಯಾತ್ಮಿಕಾ ಹಿ ಬೀಜಶಕ್ತಿಃ ಅವ್ಯಕ್ತಶಬ್ದನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಾಯಿ

1. ಸೋಮಕ್ಕೆ ಹಾಲನ್ನು ಬೆರೆಯಿಸಬೇಕು ಎಂದರ್ಥ. ಇಲ್ಲಿ ಗೋವೆಂಬ ಪ್ರಕೃತಿವಾಚಕವನ್ನು ಹಾಲೆಂಬ ವಿಕಾರವನ್ನು ತಿಳಿಸುವದಕ್ಕೆ ಪ್ರಯೋಗಿಸಿರುತ್ತದೆ.

ಮಹಾಸುಪ್ತಿಃ । ಯಸ್ಯಾಂ ಸ್ವರೂಪಪ್ರತಿಬೋಧರಹಿತಾಃ ಶೇರತೇ ಸಂಸಾ ಣೋ ಜೀವಾಃ । ತದೇತತ್ ಅವ್ಯಕ್ತಂ ಕ್ವಚಿತ್ ಆಕಾಶಶಬ್ದನಿರ್ದಿಷ್ಟಮ್– "ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ" (ಬೃ. ೩–೮–೧೧ ಇತಿ ಶ್ರುತೇಃ । ಕ್ವಚಿತ್ ಅಕ್ಷರಶಬ್ದೋದಿತಮ್—"ಅಕ್ಷರಾತ್ ಪರತಃ ಪರಃ (ಮುಂ. ೨–೧–೨) ಇತಿ ಶ್ರುತೇಃ । ಕ್ವಚಿತ್ ಮಾಯಾ ಇತಿ ಸೂಚಿತಮ್– "ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್" (ಶ್ವೆ. ೪–೧೦) ಇತಿ ಮನ್ತ್ರವರ್ಣಾತ್ । ಅವ್ಯಕ್ತಾ ಹಿ ಸಾ ಮಾಯಾ ತತ್ತ್ವಾನ್ಯತ್ವನಿರೂಪಣಸ್ಯ ಅಶಕ್ಯತ್ವಾತ್ । ತದಿದಂ "ಮಹತಃ ಪ ಮವ್ಯಕ್ತಮ್" ಇತ್ಯುಕ್ತಮ್ ಅವ್ಯಕ್ತಪ್ರಭವತ್ವಾನ್ಮಹತಃ, ಯದಾ ಹೈರಣ ಗರ್ಭೀ ಬುದ್ಧಿಃ ಮಹಾನ್ ॥

( ಭಾಷ್ಯಾರ್ಥ )

(ಆಕ್ಷೇಪ) : ಇಲ್ಲಿ (ಪೂರ್ವಪಕ್ಷಿಯು) ಹೇಳುತ್ತಾನೆಂದರೆ, ಈ ಜಗತ ನಾಮರೂಪಗಳು ಅಭಿವ್ಯಕ್ತವಾಗದೆ ಬೀಜರೂಪವಾಗಿ (ಸೃಷ್ಟಿಗೆ) ಹಿಂದಿ ಅವಸ್ಥೆಯಲ್ಲಿ(ರುವಾಗ) ಅವ್ಯಕ್ತಶಬ್ದಕ್ಕೆ ತಕ್ಕದ್ದಾಗಿರುವದೆಂದು ಒಪ್ಪಿದ ಮತ್ತು ಆ ರೂಪದಿಂದ ಶರೀರವೂ ಅವ್ಯಕ್ತಶಬ್ದಕ್ಕೆ ತಕ್ಕದ್ದೆಂದು ಹೇಳು ದಾದರೆ, ಆಗ ಅದೇ ಪ್ರಧಾನಕಾರಣವಾದವೇ ಬಂದೊದಗುವದು. ಏಕೆಂದ ಇದೇ ಜಗತ್ತಿನ (ಸೃಷ್ಟಿಗೆ) ಹಿಂದಿನ ಅವಸ್ಥೆಯನ್ನೇ (ಸಾಂಖ್ಯರು) ಪ್ರಧಾ ವೆಂದು ಒಪ್ಪಿರುತ್ತಾರೆ[1].

(ಪರಿಹಾರ) :– ಇದಕ್ಕೆ (ಸಮಾಧಾನವನ್ನು) ಹೇಳುತ್ತೇವೆ. ಸ್ವತಂ ವಾಗಿರುವ ಯಾವದಾದರೊಂದು ಪ್ರಾಗವಸ್ಥೆಯು ಜಗತ್ತಿಗೆ ಕಾರಣವೆಂ ನಾವು ಒಪ್ಪಿದ್ದರೆ, ಆಗ ಪ್ರಧಾನಕಾರಣವಾದವನ್ನೇ ತಂದೊಡ್ಡಿದಂತೆ ಆ ತ್ತಿತ್ತು. ಆದರೆ ಈ ಜಗತ್ತಿನ ಪ್ರಾಗವಸ್ಥೆಯು ಪರಮೇಶ್ವರನಿಗೆ ಅಧೀ ವಾಗಿರುತ್ತದೆ[2] ಎಂದು ನಾವು ಒಪ್ಪಿರುತ್ತೇವೆಯೇ ಹೊರತು ಸ್ವತಂತ್ರ(ವೆಂ ಒಪ್ಪಿರುವ)ದಿಲ್ಲ. ಇದನ್ನು ಅವಶ್ಯವಾಗಿ ಒಪ್ಪಬೇಕು. ಏಕೆಂದರೆ ಇ ಸಾರ್ಥಕವಾಗಿರುತ್ತದೆ. ಅದಿಲ್ಲದೆ ಪರಮೇಶ್ವರನಿಗೆ ಸ್ರಷ್ಟೃತ್ವವೇ ಸಿದ್ಧಿ

---

1. ಪ್ರಧಾನವೂ ಜಗತ್ತಿನ ಪ್ರಾಗವಸ್ಥೆ, ಅವ್ಯಾಕೃತವೂ ಪ್ರಾಗವಸ್ಥೆ ; ಅವ್ಯಾಕೃ ವೆಂಬ ನಾಮಾಂತರದಿಂದಲೇ ವೇದಾಂತವು ಸಾಂಖ್ಯರ ಪ್ರಧಾನವಾದಕ್ಕಿಂತ ಹೇಗೆ ಭಿ ವಾದೀತು ?_ ಎಂದು ಆಕ್ಷೇಪ.

2. ಪ್ರಧಾನವು ತಾನೇ ಪರಿಣಮಿಸುತ್ತದೆ, ಅವ್ಯಾಕೃತವನ್ನು ಈಶ್ವರನು ನಾಮರೂ ಗಳಾಗಿ ವಿಂಗಡಿಸುತ್ತಾನೆ. ಹೀಗೆ ಸ್ವತಂತ್ರವಾದ ತತ್ತ್ವವೊಂದು, ಪರತಂತ್ರವಾದ ಮತ್ತೊಂದು.

ವದಿಲ್ಲ; ಏಕೆಂದರೆ ಶಕ್ತಿರಹಿತನಾದರೆ ಅವನು (ಸೃಷ್ಟಿಯಲ್ಲಿ) ತೊಡಗಲಾರನು[1] (ಮತ್ತು ಇದನ್ನು ಒಪ್ಪಿದರೆ) ಮುಕ್ತರು ಮತ್ತೆ ಹುಟ್ಟುವಹಾಗಿಲ್ಲ. ಏಕೆ? ಎಂದರೆ ವಿದ್ಯೆಯಿಂದ ಆ ಬೀಜಶಕ್ತಿಯು ಸುಟ್ಟುಹೋಗಿರುತ್ತದೆ. ಏಕೆಂದರೆ ಅವ್ಯಕ್ತಶಬ್ದದಿಂದ ಹೇಳಿರುವ (ಈ) ಬೀಜಶಕ್ತಿಯು ಅವಿದ್ಯಾತ್ಮಕವಾಗಿ,[2] ಪರಮೇಶ್ವರನನ್ನು ಆಶ್ರಯಿಸಿರುವ ಮಾಯಾಮಯವಾದ ಮಹಾಸುಪ್ತಿಯಲ್ಲವೆ? ಆದರಲ್ಲಿ ಸಂಸಾರಿಗಳಾದ ಜೀವರು ತಮ್ಮ ರೂಪದ ಅರಿವಿಲ್ಲದೆ ನಿದ್ರಿಸುತ್ತಿರುವರು[3]. ಆ ಈ ಅವ್ಯಕ್ತವನ್ನು ಒಂದೊಂದು ಕಡೆಯಲ್ಲಿ ಆಕಾಶಶಬ್ದದಿಂದ ತಿಳಿಸಿದೆ; "ಎಲೌ ಗಾರ್ಗಿಯೆ, ಈ ಅಕ್ಷರದಲ್ಲಿಯೇ ಆಕಾಶವು ಓತವಾಗಿಯೂ ಪ್ರೋತವಾಗಿಯೂ ಇರುತ್ತದೆ"[4] (ಬೃ. ೩-೮-೧೧) ಎಂಬ ಶ್ರುತಿಯಿಂದ (ಇದು ಆಕಾಶಶಬ್ದವಾಚ್ಯವೆಂದು ಗೊತ್ತಾಗುತ್ತದೆ). ಒಂದೊಂದು ಕಡೆಯಲ್ಲಿ ಅಕ್ಷರವೆಂಬ ಶಬ್ದದಿಂದ ನಿರ್ದಿಷ್ಟವಾಗಿರುತ್ತದೆ; "ಪರವಾದ ಅಕ್ಷರಕ್ಕಿಂತಲೂ ಪರನಾದವನು"[5] (ಮುಂ. ೨-೧-೨) ಎಂಬ ಶ್ರುತಿಯಿಂದ (ಇದು ಅಕ್ಷರಶಬ್ದ

---

1. ಪರಮೇಶ್ವರನು ಜಗತ್ಕಾರಣನೆಂಬುದು ಈ ಶಕ್ತಿಯ ಮೂಲಕ, ನಿರ್ವಿಶೇಷನಾದ್ದರಿಂದ ಅವನು ಸ್ವತಃ ಕಾರಣವಾಗಲಾರನು. ಅವಿದ್ಯಾಶಕ್ತಿಯು ಪ್ರತಿಜೀವರಿಗೂ ಒಂದೊಂದು ಎಂದು ಭಾಮತೀಕಾರರೂ ಅದು ತನ್ನ ಅನೇಕ ಶಕ್ತಿಗಳಿಂದ ವಿಚಿತ್ರ ಕಾರ್ಯಗಳನ್ನು ಮಾಡುವದೆಂದು ನ್ಯಾಯನಿರ್ಣಯಕಾರರೂ ಬರೆದಿರುವದಕ್ಕೆ ಪ್ರಕೃತ ಭಾಷ್ಯದಲ್ಲಿ ಆಧಾರವಿಲ್ಲ. ಪೀಠಿಕೆಯನ್ನು ನೋಡಿ.

2. ಪ್ರಧಾನವು ಪರಮಾರ್ಥವಾದ್ದರಿಂದ ಮತ್ತೆ ಮತ್ತೆ ಜಗತ್ತಾಗಿ ಪರಿಣಮಿಸುತ್ತಲೇ ಇರಬೇಕು; ಆದರೆ ಅವ್ಯಾಕೃತವು ಅವಿದ್ಯಾಕಲ್ಪಿತವಾದ್ದರಿಂದ ಅಜ್ಞರ ದೃಷ್ಟಿಯಿಂದ ಪರಿಣಮಿಸುತ್ತದೆ, ಜ್ಞಾನದಿಂದ ಅದೇ ಬಾಧಿತವಾಗುತ್ತದೆ.

3. ಇದು ಅವಿದ್ಯಕವೆಂದು ಅರಿತುಕೊಳ್ಳದೆ ಇರುವ ಜೀವರು ಈಶ್ವರನು ತಮಗಿಂತ ಬೇರೆ ಎಂದೂ ತಾವು ಅಲ್ಪಜ್ಞರಾದ ಸಂಸಾರಿಗಳೆಂದೂ ತಿಳಿದುಕೊಂಡು ಜನನಮರಣಗಳ ಮಾಯಾಸ್ವಪ್ನವನ್ನು ಕಾಣುತ್ತಿರುವರು. ಮಾಂ. ಕಾ. ೧-೧೬ರ ಭಾಷ್ಯವನ್ನು ನೋಡಿ. ಪರಮೇಶ್ವರಾಶ್ರಯಾ ಎಂಬ ವಿಶೇಷಣವು ತಮ್ಮ ಸಿದ್ಧಾಂತಕ್ಕೆ ವಿರುದ್ಧವಾಗುವದರಿಂದ ಭಾಮತೀಕಾರರು 'ಅವಿದ್ಯೆಯು ಜೀವಾಶ್ರಯವಾಗಿದ್ದರೂ ನಿಮಿತ್ತವಾಗಿಯೂ ವಿಷಯವಾಗಿಯೂ ಈಶ್ವರನನ್ನು ಆಶ್ರಯಿಸಿರುತ್ತದೆ'– ಎಂದು ಬರೆಯುತ್ತಾರೆ. ಆದರೆ ಅವಿದ್ಯಾಮಾಯೆಗಳನ್ನು ಭಾಷ್ಯದಲ್ಲಿ ಬೇರೆಬೇರೆಯಾಗಿ ತಿಳಿಸಿರುವದಕ್ಕೆ ಈ ವ್ಯಾಖ್ಯಾನವು ವಿರುದ್ಧವಾಗಿರುತ್ತದೆ. ಮುಂದೆ ೩೪೧ರಲ್ಲಿ ಅಭೇದೋಪಚಾರದಿಂದ ಎಂಬುದರ ಟಿಪ್ಪಣಿಯನ್ನು ನೋಡಿ.

4. ಹಾಸುಹೊಕ್ಕಾಗಿ ಹೆಣೆದುಕೊಂಡಿರುತ್ತದೆ; ಅದಕ್ಕಿಂತ ಬೇರೆಯಾಗಿ ಬಿಡಿಸಿ ಹೇಳುವದಕ್ಕೆ ಬರುವದಿಲ್ಲ ಎಂದು ಶ್ರುತ್ಯರ್ಥ.

5. ತನ್ನ ಕಾರ್ಯವಾದ ಜಗತ್ತಿಗಿಂತಲೂ ಅವ್ಯಾಕೃತವು ಪರವು, ಅದಕ್ಕಿಂತಲೂ ಪರಮೇಶ್ವರನು ಪರನು ಎಂದರ್ಥ.

ವಾಚ್ಯವೆಂದು ಗೊತ್ತಾಗುತ್ತದೆ). ಕೆಲವು ಕಡೆಗಳಲ್ಲಿ **ಮಾಯೆ** ಎಂದು ಸೂಚಿತವಾಗಿರುತ್ತದೆ; "ಪ್ರಕೃತಿಯನ್ನು ಮಾಯೆ ಎಂದು ತಿಳಿಯಬೇಕು, ಮಹೇಶ್ವರನನ್ನು ಮಾಯಿಯೆಂದು (ತಿಳಿಯಬೇಕು)"[1] (ಶ್ವೇ. ೪-೧೦) ಎಂಬ ಮಂತ್ರವರ್ಣದಿಂದ (ಹೀಗೆಂದು ತಿಳಿಯಬರುತ್ತದೆ). ಈ ಮಾಯೆಯು **ಅವ್ಯಕ್ತವು**; ಏಕೆಂದರೆ ಆ (ಪರಮೇಶ್ವರ)ನೆಂದಾಗಲಿ (ಅವನಿಗಿಂತ) ಬೇರೆ ಎಂದಾಗಲಿ ಗೊತ್ತುಪಡಿಸಿ ಹೇಳಲು ಅಶಕ್ಯವಾಗಿರುತ್ತದೆ[2]. ಯಾವಾಗ ಹಿರಣ್ಯಗರ್ಭನ ಬುದ್ಧಿಯೇ ಮಹಾನ್ (ಆತ್ಮ ಎಂದು ಇಟ್ಟುಕೊಳ್ಳುವೆವೋ ಆ ಪಕ್ಷದಲ್ಲಿ)[3] "ಮಹತ್ತಿಗಿಂತ ಅವ್ಯಕ್ತವು ಹೆಚ್ಚಿನದು" ಎಂಬಲ್ಲಿ ಇಂಥ ಈ (ಅವ್ಯಾಕೃತವನ್ನೇ) ಹೇಳಿರುತ್ತದೆ (ಎನ್ನಬೇಕು); ಏಕೆಂದರೆ ಮಹತ್ತು ಅವ್ಯಕ್ತದಿಂದ ಉಂಟಾಗಿರುತ್ತದೆ.

## ಅವ್ಯಾಕೃತವೆಂದರೆ ಅವಿದ್ಯೆಯೆಂದೂ ಅರ್ಥಮಾಡಬಹುದು

(ಭಾಷ್ಯ)

೩೪೦. ಯದಾ ತು ಜೀವೋ ಮಹಾನ್ ತದಾಪಿ ಅವ್ಯಕ್ತಾಧೀನತ್ವಾತ್ ಜೀವಭಾವಸ್ಯ 'ಮಹತಃ ಪರಮವ್ಯಕ್ತಮ್' ಇತ್ಯುಕ್ತಮ್ | ಅವಿದ್ಯಾ ಹಿ ಅವ್ಯಕ್ತಮ್ | ಅವಿದ್ಯಾವತ್ತ್ವೇನೈವ ಜೀವಸ್ಯ ಸರ್ವಃ ಸಂವ್ಯವಹಾರಃ ಸನ್ತತೋ ವರ್ತತೇ ||

---

1. ಜಗತ್ಕಾರಣವಾದ ಅವ್ಯಕ್ತವು ಅಥವಾ ಅವ್ಯಾಕೃತವು ಮಾಯೆಯೆಂದೂ ಪರಮೇಶ್ವರನು ಆ ಮಾಯೆಯನ್ನು ತನ್ನ ವಶದಲ್ಲಿಟ್ಟುಕೊಂಡಿರುವನೆಂದೂ ತಿಳಿಯಬೇಕು ಎಂದರ್ಥ.

2. **ಅವ್ಯಕ್ತವೆಂಬ** ಶಬ್ದವನ್ನು ಉಪಯೋಗಿಸಿರುವದಕ್ಕೆ ಅನಿರ್ವಚನೀಯತ್ವವೇ ನಿಮಿತ್ತ ಎಂದರ್ಥ. ತನ್ನ ರೂಪದಿಂದ ಅನಿರ್ವಚನೀಯವಾಗಿ ಅಪರಮಾರ್ಥವಾಗಿದ್ದರೂ ಪರಮಾತ್ಮರೂಪದಿಂದ ಅದು ಪರಮಾರ್ಥವೇ ಆಗಿದೆ. ನೀರುನೊರೆಗಳ ದೃಷ್ಟಾಂತದಿಂದ ನಾಮರೂಪಮಾಯೆಯನ್ನು 'ತತ್ತ್ವಾನ್ಯತ್ವಾಭ್ಯಾಮನಿರ್ವಚನೀಯ'ವೆಂದಿರುವದನ್ನೂ ಅವಿದ್ಯಾಕಲ್ಪಿತವೆಂದಿರುವದನ್ನೂ ಬೃ. ಭಾ. ೨-೪-೧೦, ೩-೫-೧- ಇವುಗಳಲ್ಲಿ ಕಾಣಬಹುದು.

3. ಭಾ. ಭಾ. ೩೩೬ರಲ್ಲಿ 'ಮಹಾನ್ ಆತ್ಮಾ' ಎಂಬ ಮಾತಿಗೆ ಕೊಟ್ಟಿರುವ ಎರಡನೆಯ ಅರ್ಥವನ್ನು ತೆಗೆದುಕೊಳ್ಳುವಾಗ ಎಂದರ್ಥ.

(ಭಾಷ್ಯಾರ್ಥ)

ಆದರೆ ಯಾವಾಗ ಮಹಾನ್ (ಆತ್ಮಾ)ನೆಂದರೆ ಜೀವ(ನೆಂದು ಇಟ್ಟುಕೊಳ್ಳುವೆವೋ)[1] ಆಗಲೂ ಜೀವಭಾವವು ಅವ್ಯಕ್ತಾಧೀನವಾಗಿರುವದರಿಂದ[2] "ಮಹತ್ತಿಗಿಂತಲೂ ಅವ್ಯಕ್ತವು ಹೆಚ್ಚಿನದು" ಎಂದು ಹೇಳಿದೆ (ಎನ್ನಬೇಕು). ಏಕೆಂದರೆ (ಆ ಪಕ್ಷದಲ್ಲಿ) ಅವಿದ್ಯೆಯೇ **ಅವ್ಯಕ್ತವು**[3]; ಅವಿದ್ಯೆಯುಳ್ಳವನಾಗಿರುವದರಿಂದಲೇ ಜೀವನ ಎಲ್ಲಾ ವ್ಯವಹಾರವೂ ಸಂತತವಾಗಿ (ಸಾಗಿರುತ್ತದೆ)[4].

## ಶರೀರವನ್ನೇ ಅವ್ಯಕ್ತವೆಂದು ಹಿಡಿಯುವದಕ್ಕೆ ಕಾರಣ

(ಭಾಷ್ಯ)

೩೪೧. ಮಹತಃ ಪರತ್ವಮ್ ಅಭೇದೋಪಚಾರಾತ್ ತದ್ವಿಕಾರೇ ಶರೀರೇ ಪರಿಕಲ್ಪ್ಯತೇ | ಶರೀರವತ್ ಇನ್ದ್ರಿಯಾದೀನಾಂ ತದ್ವಿಕಾರತ್ವಾವಿಶೇಷೇ ಶರೀರಸ್ಯೈವ ಅಭೇದೋಪಚಾರಾತ್ ಅವ್ಯಕ್ತಶಬ್ದೇನ ಗ್ರಹಣಮ್ ಇನ್ದ್ರಿಯಾದೀನಾಂ ಸ್ವಶಬ್ದೈರೇವ ಗೃಹೀತತ್ವಾತ್, ಪರಿಶಿಷ್ಟತ್ವಾಚ್ಚ ಶರೀರಸ್ಯ||

(ಭಾಷ್ಯಾರ್ಥ)

(ಅವ್ಯಾಕೃತಕ್ಕೂ ಶರೀರಕ್ಕೂ) ಅಭೇದೋಪಚಾರದಿಂದ[5] (ಇದು) ಮಹತ್ತಿಗಿಂತ ಹೆಚ್ಚಿನದೆಂದು ಶರೀರದಲ್ಲಿ ಕಲ್ಪಿಸಿರುತ್ತದೆ. ಶರೀರದಂತೆ

---

1. ಭಾ. ಭಾ. ೩೩೬ರಲ್ಲಿ ಮಹಾನ್ ಆತ್ಮಾ ಎಂಬ ಮಾತಿಗೆ ಕೊಟ್ಟದ್ದ ಮೊದಲನೆಯ ಅರ್ಥವಿದು

2. 'ತದಧೀನತ್ವಾತ್' ಎಂಬ ಸೂತ್ರಕ್ಕೆ ಇದು ಮತ್ತೊಂದು ವ್ಯಾಖ್ಯಾನವು. ಜೀವತ್ವವು ಅವಿದ್ಯಾಧೀನವಾಗಿರುವವರಿಂದ ಅದರ ಅಂಗೀಕಾರವು ಸಾರ್ಥಕವಾಗಿರುತ್ತದೆ ಎಂದು ಸೂತ್ರದ ಅರ್ಥ.

3. ಏಕೆಂದರೆ ತಾನು ಕಾಣಿಸಿಕೊಳ್ಳದೆಯೇ ಅವಿದ್ಯೆಯು ಜೀವನ ಜೀವತ್ವಕ್ಕೆ ಕಾರಣವಾಗಿರುತ್ತದೆ ಎಂದು ಭಾವ.

4. ಅವಿದ್ಯೆಯನ್ನೊಪ್ಪದಿದ್ದರೆ 'ಬ್ರಹ್ಮಸ್ವರೂಪದವನೇ ಆಗಿರುವ ಜೀವನಿಗೆ ಜನನ ಮರಣ, ಕರ್ತೃತ್ವ ಭೋಕ್ತೃತ್ವ, ಗತ್ಯಾಗತ್ಯಾದಿಗಳನ್ನು ಹೇಳುವದಕ್ಕೆ ಬರುವದಿಲ್ಲ ಎಂದು ಭಾವ. ಈ ಪಕ್ಷದಲ್ಲಿ "ಸೂಕ್ಷ್ಮಂ ತು ತದರ್ಹತ್ವಾತ್" ಎಂಬ ಸೂತ್ರಕ್ಕೆ ಶರೀರಕ್ಕೆ ಕಾರಣವಾಗಿರುವ ಅವಿದ್ಯೆಯೇ ಅವ್ಯಕ್ತಶಬ್ದಾರ್ಥವಾಗಿರುವದರಿಂದಲೂ ಶರೀರವು ಅವಿದ್ಯೆಯಿಂದಲೇ ಕಲ್ಪಿತವಾಗಿರುವದರಿಂದಲೂ ಅದನ್ನು ಅವ್ಯಕ್ತವೆನ್ನಬಹುದು ಎಂದು ಭಾಷ್ಯವನ್ನು ಕಲ್ಪಿಸಿಕೊಳ್ಳಬೇಕು.

5. ಕಾರ್ಯಕಾರಣಗಳಿಗೆ ಅಭೇದೋಪಚಾರದಿಂದ ಎಂದರ್ಥ. ಇದು ಅವ್ಯಾಕೃತ ಪಕ್ಷದಲ್ಲಿ. ಅವಿದ್ಯಾಪಕ್ಷದಲ್ಲಾದರೆ ಕಲ್ಪಕಕಲ್ಪಿತಗಳಿಗೆ ಅಭೇದೋಪಚಾರದಿಂದ ಎಂದು ಅರ್ಥವನ್ನು ಮಾಡಬೇಕು ಮುಂದಿರುವ 'ವಿಕಾರ' ಎಂಬ ಮಾತಿಗೆ ಆ ಪಕ್ಷದಲ್ಲಿ ಕಲ್ಪಿತ ಎಂದರ್ಥ. ಅವ್ಯಾಕೃತವನ್ನೇ 'ಅವಿದ್ಯಾಶಕ್ತಿಮಾಯಾದಿಶಬ್ದವಾಚ್ಯಾ' ಎಂದು ಭಾಮತೀಕಾರರು ಬರೆದಿರುವದು ಪ್ರಕೃತಭಾಷ್ಯದ ಎರಡು ವರ್ಣಕಗಳ ವಿಭಾಗವನ್ನು ಕಡೆಗಣಿಸಿದಂತಾಗಿದೆ. ಪೀಠಿಕೆಯನ್ನು ನೋಡಿ.

ಇಂದ್ರಿಯಾದಿಗಳೂ ಅವರ ಕಾರ್ಯವೆಂಬುದು ಸಮಾನವಾಗಿದ್ದರೂ ಶರೀರವನ್ನೇ ಅಭೇದೋಪಚಾರದಿಂದ ಅವ್ಯಕ್ತಶಬ್ದದಿಂದ ಗ್ರಹಿಸಿರುವದು (ಏಕೆಂದರೆ) ಇಂದ್ರಿಯಾದಿಗಳನ್ನು (ಇಲ್ಲಿ) ತಮ್ಮತಮ್ಮ ಶಬ್ದಗಳಿಂದಲೇ ಗ್ರಹಿಸಿದ್ದಾಗಿದೆ, ಮತ್ತು ಶರೀರವು ಉಳಿದುಕೊಂಡಿರುತ್ತದೆ[1].

## ಈ ಎರಡು ಸೂತ್ರಗಳಿಗೆ ವೃತ್ತಿಕಾರರ ವ್ಯಾಖ್ಯಾನ

(ಭಾಷ್ಯ)

೩೪೨. ಅನ್ಯೇ ತು ವರ್ಣಯನ್ತಿ– ದ್ವಿವಿಧಂ ಹಿ ಶರೀರಂ ಸ್ಥೂಲಂ ಸೂಕ್ಷ್ಮಂ ಚ । ಸ್ಥೂಲಂ ಯದಿದಮ್ ಉಪಲಭ್ಯತೇ । ಸೂಕ್ಷ್ಮಂ ಯತ್ ಉತ್ತರತ್ರ ವಕ್ಷ್ಯತೇ– ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಮ್ (೩-೧-೧) ಇತಿ । ತಚ್ಚ ಉಭಯಮಪಿ ಶರೀರಮ್ ಅವಿಶೇಷಾತ್ ಪೂರ್ವತ್ರ ರಥತ್ವೇನ ಸಂಕೀರ್ತಿತಮ್ । ಇಹ ತು ಸೂಕ್ಷ್ಮಮ್ ಅವ್ಯಕ್ತಶಬ್ದೇನ ಪರಿಗೃಹ್ಯತೇ । ಸೂಕ್ಷ್ಮಸ್ಯ ಅವ್ಯಕ್ತಶಬ್ದಾರ್ಹತ್ವಾತ್ । ತದಧೀನತ್ವಾಚ್ಚ ಬನ್ಧಮೋಕ್ಷವ್ಯವಹಾರಸ್ಯ ಜೀವಾತ್ ತಸ್ಯ ಪರತ್ವಮ್ । ಯಥಾ ಅರ್ಥಾಧೀನತ್ವಾತ್ ಇನ್ದ್ರಿಯವ್ಯಾಪಾರಸ್ಯ ಇನ್ದ್ರಿಯೇಭ್ಯಃ ಪರತ್ವಮ್ ಅರ್ಥಾನಾಮ್ ಇತಿ ॥

(ಭಾಷ್ಯಾರ್ಥ)

**ಬೇರೆ (ಕೆಲವರು ವೃತ್ತಿಕಾರರು** ಸೂತ್ರಾರ್ಥವನ್ನು) ವರ್ಣಿಸಿರುವದು ಹೇಗೆಂದರೆ, ಶರೀರವು ಸ್ಥೂಲವೆಂದೂ ಸೂಕ್ಷ್ಮವೆಂದೂ ಎರಡೇ ವಿಧವಾಗಿದೆ. ಈ ಕಾಣುತ್ತದೆಯಲ್ಲ, (ಇದು) ಸ್ಥೂಲ; ಮುಂದೆ "ತದನ್ತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ" ಎಂಬ (ಸೂತ್ರದಲ್ಲಿ) ಹೇಳಿದೆಯಲ್ಲ, (ಅದು) ಸೂಕ್ಷ್ಮವು. ಈ ಎರಡು ಬಗೆಯ ಶರೀರವನ್ನೂ ಸಮಾನವಾಗಿಯೇ ಹಿಂದೆ ರಥವೆಂದು ಹೇಳಿರುತ್ತದೆ. ಆದರೆ ಇಲ್ಲಿ ಅವ್ಯಕ್ತಶಬ್ದದಿಂದ ಸೂಕ್ಷ್ಮವನ್ನೇ ತೆಗೆದುಕೊಂಡಿದೆ. ಏಕೆಂದರೆ ಸೂಕ್ಷ್ಮವು ಅವ್ಯಕ್ತಶಬ್ದಕ್ಕೆ ತಕ್ಕದ್ದಾಗಿದೆ[3]. ಬಂಧಮೋಕ್ಷವ್ಯವಹಾರವು ಆ (ಸೂಕ್ಷ್ಮಶರೀರಕ್ಕೆ) ಅಧೀನವಾಗಿರು

---

1. ಭಾ. ಭಾ. ೩೩೬ರಲ್ಲಿ ವರ್ಣಿಸಿರುವದನ್ನು ಇಲ್ಲಿ ಮನಸ್ಸಿಗೆ ತಂದುಕೊಳ್ಳಬೇಕು.

2. ಈ ವೃತ್ತಿಕಾರರೂ ಎರಡೇ ಶರೀರಗಳನ್ನು ಒಪ್ಪಿರುತ್ತಾರೆ. ಕಾರಣಶರೀರವನ್ನು ಹೇಳಿಲ್ಲ.

3. ಇದು 'ಸೂಕ್ಷ್ಮಂ ತು ತದರ್ಹತ್ವಾತ್' ಎಂಬ ಸೂತ್ರದ ವ್ಯಾಖ್ಯಾನ.

ವವರಿಂಪ (ಅದು) ಜೀವನಿಗಿಂತಲೂ ಹೆಚ್ಚಿನದು[1]. ಹೇಗೆ ಇಂದ್ರಿಯ ವ್ಯಾಪಾರವು (ಇಂದ್ರಿಯಾ)ರ್ಥಗಳಿಗೆ ಆಧೀನವಾಗಿರುವದರಿಂದ ಅರ್ಥಗಳು ಇಂದ್ರಿಯಗಳಿಗಿಂತ ಹೆಚ್ಚು (ಎಂದು ಶ್ರುತಿಯಲ್ಲಿ ಹೇಳಿದೆಯೋ ಹಾಗೆಯೇ ಇದು)[2].

## ವೃತ್ತಿಕಾರಮತದ ವಿಮರ್ಶೆ

೩೪೩. ತೈಸ್ತು ಏತದ್ವಕ್ತವ್ಯಮ್ – ಅವಿಶೇಷೇಣ ಶರೀರದ್ವಯಸ್ಯ ಪೂರ್ವತ್ರ ರಥತ್ವೇನ ಸಂಕೀರ್ತಿತತ್ವಾತ್ ಸಮಾನಯೋಃ ಪ್ರಕೃತತ್ವಪರಿಶಿಷ್ಟತ್ವಯೋಃ ಕಥಂ ಸೂಕ್ಷ್ಮಮೇವ ಶರೀರಮ್ ಇಹ ಗೃಹ್ಯತೇ, ನ ಪುನಃ ಸ್ಥೂಲಮಪಿ ಇತಿ। ಆಮ್ನಾತಸ್ಯ ಅರ್ಥಂ ಪ್ರತಿಪತ್ತುಂ ಪ್ರಭವಾಮಃ, ನಾಮ್ನಾತಂ ಪರ್ಯನುಯೋಕ್ತುಮ್। ಆಮ್ನಾತಂ ಚ ಅವ್ಯಕ್ತಪದಂ ಸೂಕ್ಷ್ಮಮೇವ ಪ್ರತಿಪಾದಯಿತುಂ ಶಕ್ನೋತಿ ನೇತರತ್। ವ್ಯಕ್ತತ್ವಾತ್ ತಸ್ಯ, ಇತಿ ಚೇತ್। ನ। ಏಕವಾಕ್ಯತಾಧೀನತ್ವಾತ್ ಅರ್ಥಪ್ರತಿಪತ್ತೇಃ। ನ ಹಿ ಇಮೇ ಪೂರ್ವೋತ್ತರೇ ಆಮ್ನಾತೇ ಏಕವಾಕ್ಯತಾಮ್ ಅನಾಪದ್ಯ ಕಂಚಿತ್ ಅರ್ಥಂ ಪ್ರತಿಪಾದಯತಃ। ಪ್ರಕೃತಹಾನಾಪ್ರಕೃತಪ್ರಕ್ರಿಯಾಪ್ರಸಙ್ಗಾತ್। ನ ಚ ಆಕಾಙ್ಕ್ಷಾಮ್ ಅನ್ತರೇಣ ಏಕವಾಕ್ಯತಾಪ್ರತಿಪತ್ತಿಃ ಅಸ್ತಿ। ತತ್ರ ಅವಿಶಿಷ್ಟಾಯಾಂ ಶರೀರದ್ವಯಸ್ಯ ಗ್ರಾಹ್ಯತ್ವಾಕಾಙ್ಕ್ಷಾಯಾಂ ಯಥಾಕಾಙ್ಕ್ಷಂ ಸಂಬನ್ಧೇ ಅನಭ್ಯುಪಗಮ್ಯಮಾನೇ ಏಕವಾಕ್ಯತೈವ ಬಾಧಿತಾ ಭವತಿ। ಕುತ ಆಮ್ನಾತಸ್ಯ ಅರ್ಥಪ್ರತಿಪತ್ತಿಃ? ನ ಚೈವಂ ಮನ್ತವ್ಯಮ್– ದುಃಶೋಧತ್ವಾತ್ ಸೂಕ್ಷ್ಮಸ್ಯೈವ ಶರೀರಸ್ಯ ಇಹ ಗ್ರಹಣಮ್। ಸ್ಥೂಲಸ್ಯ ತು ದೃಷ್ಟಬೀಭತ್ಸತಯಾ ಸುಶೋಧತ್ವಾತ್ ಅಗ್ರಹಣಮ್ ಇತಿ। ಯತೋ ನೈವ ಇಹ ಶೋಧನಂ ಕಸ್ಯಚಿತ್ ವಿವಕ್ಷ್ಯತೇ। ನ ಹಿ ಅತ್ರ ಶೋಧನವಿಧಾಯಿ ಕಿಂಚಿತ್ ಆಖ್ಯಾತಮ್ ಅಸ್ತಿ। ಅನನ್ತರನಿರ್ದಿಷ್ಟತ್ವಾತ್ ತು ಕಿಂ ತದ್ ವಿಷ್ಣೋಃ ಪರಮಂ ಪದಮ್ ಇತಿ ಇದಮ್ ಇಹ ವಿವಕ್ಷ್ಯತೇ। ತಥಾ ಹಿ ಇದಮ್ ಅಸ್ಮಾತ್ ಪರಮ್ ಇದಮ್ ಅಸ್ಮಾತ್ ಪರಮ್ ಇತ್ಯುಕ್ತ್ವಾ "ಪುರುಷಾನ್ನ ಪರಂ ಕಿಂಚಿತ್"

---

1. 'ತದಧೀನತ್ವಾತ್' ಎಂಬ ಸೂತ್ರಭಾಗದ ವ್ಯಾಖ್ಯಾನವಿದು; ಯಾವದು ಯಾವದರ ಅಧೀನವಾಗಿದೆಯೋ ಆದಕ್ಕಿಂತ ಅದು ಹೆಚ್ಚು ಎಂಬುದು ಯುಕ್ತ ಎಂದು ಭಾವ.

2. ಇದು ಅರ್ಥವತ್ ಎಂಬ ಸೂತ್ರಭಾಗದ ವ್ಯಾಖ್ಯಾನ. ಭಾಷ್ಯಕಾರರಂತೆ 'ಅರ್ಥವತ್' ಎಂಬುದಕ್ಕೆ 'ಸಪ್ರಯೋಜನವು' ಎಂದು ಇವರು ವ್ಯಾಖ್ಯಾನಮಾಡಿಲ್ಲ; ಶ್ರುತಿಯಲ್ಲಿ ಅರ್ಥಾಃ ಎಂದಿರುವದನ್ನು ಅನುಸರಿಸಿ ವಿವರಿಸಿರುತ್ತಾರೆ.

(ಕ. ೧-೩-೧೧) ಇತ್ಯಾಹ । ಸರ್ವಥಾಪಿ ತು ಆನುಮಾನಿಕನಿರಾಕರಣೋಪಪತ್ತೇಃ ತಥಾ ನಾಮ ಅಸ್ತು, ನ ನಃ ಕಿಂಚಿತ್ ಛಿದ್ಯತೇ ॥

(ಭಾಷ್ಯಾರ್ಥ)

ಆದರೆ ಎರಡು ಶರೀರಗಳೂ ಹಿಂದಿನ (ಗ್ರಂಥದಲ್ಲಿ) ರಥವೊಂದು ಸಮನಾಗಿಯೇ ಹೇಳಿರುವಲ್ಲಿ, ಪ್ರಕೃತವಾಗಿರುವುದೂ ಉಳಿದಿರುವುದೂ (ಎರಡಕ್ಕೂ) ಸಮಾನವಾಗಿರುವಲ್ಲಿ, ಸೂಕ್ಷ್ಮಶರೀರವನ್ನೇ ಇಲ್ಲಿ ಏತಕ್ಕೆ ತೆಗೆದುಕೊಂಡಿರುತ್ತದೆ, ಸ್ಥೂಲವನ್ನು (ಏಕೆ ತೆಗೆದುಕೊಂಡಿಲ್ಲ) ? ಎಂಬುದನ್ನು ಅವರು ಹೇಳಬೇಕಾಗಿರುತ್ತದೆ.

(ವೃತ್ತಿಕಾರ):- ಶ್ರುತಿಯಲ್ಲಿ ಹೇಳಿರುವದರ ಅರ್ಥವನ್ನು ತಿಳಿದುಕೊಳ್ಳುವದಕ್ಕೆ ನಮ್ಮಿಂದ ಆದೀತೇ ಹೊರತು ಶ್ರುತಿಯಲ್ಲಿ ಹೇಳಿರುವವರಮೇಲೆ ಆಕ್ಷೇಪವನ್ನು ಮಾಡುವದಕ್ಕೆ ಆಗುವದಿಲ್ಲ. ಶ್ರುತಿಯಲ್ಲಿ ಹೇಳಿರುವ ಅವ್ಯಕ್ತಪದವು ಸೂಕ್ಷ್ಮ(ಶರೀರ)ವನ್ನು ಹೇಳಲಾಪದೇ ಹೊರತು ಇನ್ನೊಂದನ್ನು (ಹೇಳ)ಲಾರದು ; ಏಕೆಂದರೆ ಅದು ವ್ಯಕ್ತವಾಗಿರುತ್ತದೆ[1].

(ಭಾಷ್ಯಕಾರ) :- ಹಾಗಲ್ಲ. ಏಕೆಂದರೆ ಅರ್ಥವನ್ನು ತಿಳಿದುಕೊಳ್ಳುವದೆಂಬುದು ಏಕವಾಕ್ಯತೆಗೆ ಅಧೀನವಾಗಿರುತ್ತದೆ. ಹಿಂದುಮುಂದಿನ (ಗ್ರಂಥಭಾಗದಲ್ಲಿ) **ಶ್ರುತಿಯಲ್ಲಿ ಹೇಳಿರುವ ಈ (ಮಾತುಗಳಿಗೆ) ಏಕವಾಕ್ಯತೆಯು ಆಗದೆಯೇ (ಇವು) ಯಾವದೊಂದು ಅರ್ಥವನ್ನೂ ತಿಳಿಸುವ ಹಾಗೆಯೇ ಇಲ್ಲ; ಏಕೆಂದರೆ (ಹಾಗೆ ಸ್ವತಂತ್ರವಾಗಿ ತಿಳಿಸುವದಾದರೆ) ಪ್ರಕೃತವಾದದ್ದನ್ನು ಬಿಟ್ಟು ಅಪ್ರಕೃತವಾದದ್ದನ್ನು ಪ್ರಾರಂಭಿಸಬಹುದಾಗಿರುತ್ತದೆ**[2]. ಆದರೆ ಆಕಾಂಕ್ಷೆಯಿಲ್ಲದೆ ಏಕವಾಕ್ಯತೆಯ ಅರಿವು ಆಗುವಂತೆ ಇಲ್ಲ. ಇಲ್ಲಿ ಎರಡು ಶರೀರಗಳನ್ನೂ ತೆಗೆದುಕೊಳ್ಳಬೇಕೆಂಬ ಆಕಾಂಕ್ಷೆಯು ಸಮಾನವಾಗಿರುವಲ್ಲಿ, ಆಕಾಂಕ್ಷೆಗೆ ಅನುಗುಣವಾಗಿ ಸಂಬಂಧವನ್ನು ಒಪ್ಪದಿದ್ದರೆ ಏಕವಾಕ್ಯತೆಯೇ ತಪ್ಪಿಹೋಗುತ್ತದೆ, (ಇನ್ನು) ಶ್ರುತಿ

---

1. ಅವ್ಯಕ್ತಪದವೇ ಸ್ಥೂಲಶರೀರವನ್ನು ಬಿಡುವದಕ್ಕೆ ಕಾರಣ ಎಂದು ವೃತ್ತಿಕಾರರ ಆಶಯ.

2. ಹಿಂದುಮುಂದಿನ ಗ್ರಂಥಭಾಗವನ್ನು ಹೊಂದಿಸಿದಮೇಲಲ್ಲವೆ, ಅವ್ಯಕ್ತಶಬ್ದದ ಅರ್ಥವನ್ನು ನಿರ್ಣಯಿಸಬೇಕಾದದ್ದು? ಹಾಗಿಲ್ಲದಿದ್ದರೆ ಅದು ಅಪ್ರಕೃತವಾದ ಪ್ರಧಾನವನ್ನೂ ಹೇಳುತ್ತದೆ ಎಂದರೆ ಏನು ತಪ್ಪು ?- ಎಂದು ಆಕ್ಷೇಪ.

ಹೇಳಿದ್ದನ್ನು ತಿಳಿದುಕೊಳ್ಳುವಪೆಲ್ಲಿ (ಬಂತು) ?[1] ( ಸೂಕ್ಷ್ಮಶರೀರವನ್ನು ) ಬೇರ್ಪಡಿಸಿ ತೋರಿಸುವದು ಕಷ್ಟವಾಗಿರುವದರಿಂದ ಇಲ್ಲಿ ಸೂಕ್ಷ್ಮವನ್ನೇ ತೆಗೆದುಕೊಂಡಿರುತ್ತದೆ ; ಸ್ಥೂಲಶರೀರವಾದರೋ ಬೀಭತ್ಸವಾಗಿರುವದು ಕಂಡೇ ಇರುವದರಿಂದ ಸುಲಭವಾಗಿ ಬೇರ್ಪಡಿಸಿ ತೋರಿಸಬಹುದಾದ್ದರಿಂದ (ಅದನ್ನು ಇಲ್ಲಿ) ತೆಗೆದುಕೊಂಡಿಲ್ಲ– ಎಂದೂ ಭಾವಿಸುವಹಾಗಿಲ್ಲ. ಏಕೆಂದರೆ ಇಲ್ಲಿ ಯಾವದೊಂದನ್ನೂ ಬೇರ್ಪಡಿಸಿ ತಿಳಿಸಬೇಕೆಂಬ ವಿವಕ್ಷೆಯೇ ಇರುವದಿಲ್ಲ. ಏಕೆಂದರೆ ಇಲ್ಲಿ ಬೇರ್ಪಡಿಸಿ ಹೇಳುವ ಯಾವ ಮಾತೂ ಇರುವದಿಲ್ಲ ; ಮತ್ತೇನೆಂದರೆ ಹಿಂದೆ ಹೇಳಿರುವದರಿಂದ ಆ ವಿಷ್ಣುವಿನ ಪರಮಪದವು ಯಾವದು ? ಎಂಬಿದನ್ನೇ ಇಲ್ಲಿ ಹೇಳಬೇಕೆಂದು ಹೊರಟಿರುತ್ತದೆ[2]. (ಅದು) ಹೇಗೆಂದರೆ ಇದು ಇದಕ್ಕಿಂತ ಹೆಚ್ಚಿನದು, ಇದು ಇದಕ್ಕಿಂತ ಹೆಚ್ಚಿನದು– ಎಂದು ಹೇಳಿ "ಪುರುಷನಿಗಿಂತ ಯಾವದೂ ಹೆಚ್ಚಿನದಿಲ್ಲ" (ಕ. ೧–೩–೧೧) ಎಂದು (ಶ್ರುತಿ) ಹೇಳುತ್ತದೆ.

ಇದು ಹೇಗೇ ಆದರೂ ಆನುಮಾನಿಕವನ್ನು ನಿರಾಕರಣಮಾಡುವದು ಹೊಂದುವದರಿಂದ ಹೀಗೂ ಆಗಲಿ, ನಮ್ಮದೇನೂ ಕೆಡುವದಿಲ್ಲ[3].

**ಜ್ಞೇಯತ್ವಾವಚನಾಚ್ಚ ॥ ೪ ॥**

೪. (ಅವ್ಯಕ್ತವು) ಜ್ಞೇಯವೆಂದು ಹೇಳದಿರುವದರಿಂದಲೂ (ಅದು ಪ್ರಧಾನವಲ್ಲ).

## ಅವ್ಯಕ್ತವು ಜ್ಞಾತವ್ಯವೆಂದು ಹೇಳಿಲ್ಲವಾದ್ದರಿಂದಲೂ ಇದು ಪ್ರಧಾನವಲ್ಲ

( ಭಾಷ್ಯ )

೩೪೪. ಜ್ಞೇಯತ್ವೇನ ಚ ಸಾಙ್ಖ್ಯೈಃ ಪ್ರಧಾನಂ ಸ್ಮರ್ಯತೇ ಗುಣ

---

1. ನಮ್ಮ ಪಕ್ಷದಲ್ಲಾದರೆ ಹಿಂದೆಯೂ ಈಗಲೂ ಶರೀರವನ್ನೇ ಹೇಳಿದೆ ಎಂದು ಪ್ರಕರಣಪರಿಶೇಷಗಳಿಂದ ಗೊತ್ತುಮಾಡಿದ ಬಳಿಕ ಶರೀರಕ್ಕೆ ಅವ್ಯಕ್ತಶಬ್ದವಾಚ್ಯತ್ವವು ಹೇಗೆ ?_ ಎಂಬ ಆಕ್ಷೇಪವೊಂದು ಉಳಿದುಕೊಳ್ಳುತ್ತದೆ. ಅದಕ್ಕೆ 'ಸೂಕ್ಷ್ಮಂ ತು' ಎಂಬ ಸೂತ್ರವು ಪರಿಹಾರವನ್ನು ಹೇಳುತ್ತದೆಯಾದ್ದರಿಂದ ಯಾವ ಆಕ್ಷೇಪವೂ ಇರುವದಿಲ್ಲ.

2. ಹಿಂದೆ ೯ನೆಯ ಮಂತ್ರದಲ್ಲಿ ತಿಳಿಸಿದ್ದರ ವಿವರವು ಪ್ರಕೃತವಾಗಿದೆ. ಸ್ಥೂಲ ಸೂಕ್ಷ್ಮಶರೀರಗಳ ವಿವೇಚನೆಯು ಪ್ರಕೃತವಾಗಿಲ್ಲ ; ಅದನ್ನು ಹೇಳುವ ಶಬ್ದವೂ ಇಲ್ಲಿಲ್ಲ ಎಂದರ್ಥ.

3. ಅವ್ಯಕ್ತಶಬ್ದವು ಪ್ರಧಾನವನ್ನು ಹೇಳುವದಿಲ್ಲವೆಂಬುದು ನಿಮಗೂ ಒಪ್ಪಿತವಾದ್ದರಿಂದ ನಿಮ್ಮ ವ್ಯಾಖ್ಯಾನವೇ ಆದರೂ ನಮ್ಮ ಮತಕ್ಕೆ ಅಡ್ಡಿಯಿಲ್ಲ ಎಂದರ್ಥ. ಇಲ್ಲಿ 'ಹಾಗೂ ಆಗಲಿ' ಎಂಬುದು ಅರ್ಧಾಂಗೀಕಾರವೇ ; ಏಕೆಂದರೆ ವೃತ್ತಿಕಾರಮತದಲ್ಲಿ ದೋಷವನ್ನು ತೋರಿಸಿದ್ದಾಗಿದೆ.

ಪುರುಷಾನ್ತರಜ್ಞಾನಾತ್ ಕೈವಲ್ಯಮ್ ಇತಿ ವದದ್ಭಿಃ। ನ ಹಿ ಗುಣ ಸ್ವರೂಪಮ್ ಅಜ್ಞಾತ್ವಾ ಗುಣೇಭ್ಯಃ ಪುರುಷಸ್ಯ ಅನ್ತರಂ ಶಕ್ಯಂ ಜ್ಞಾತುಮ್ ಇತಿ। ಕ್ವಚಿಚ್ಚ ವಿಭೂತಿವಿಶೇಷಪ್ರಾಪ್ತಯೇ ಪ್ರಧಾನಂ ಜ್ಞೇಯಂ ಇತಿ ಸ್ಮರನ್ತಿ। ನ ಚ ಇದಮ್ ಇಹ ಅವ್ಯಕ್ತಂ ಜ್ಞೇಯತ್ವೇನ ಉಚ್ಯತೇ। ಪದಮಾತ್ರಂ ಹಿ ಅವ್ಯಕ್ತಶಬ್ದಃ। ನೇಹ ಅವ್ಯಕ್ತಂ ಜ್ಞಾತವ್ಯಮ್ ಉಪಾಸಿ ತವ್ಯಂ ಚ ಇತಿ ವಾಕ್ಯಮ್ ಅಸ್ತಿ। ನ ಚ ಅನುಪದಿಷ್ಟಪದಾರ್ಥಜ್ಞಾನಂ ಪುರುಷಾರ್ಥಮ್ ಇತಿ ಶಕ್ಯಂ ಪ್ರತಿಪತ್ತುಮ್। ತಸ್ಮಾದಪಿ ನಾವ್ಯಕ್ತಶಬ್ದೇನ ಪ್ರಧಾನಮ್ ಅಭಿಧೀಯತೇ। ಅಸ್ಮಾಕಂ ತು ರಥರೂಪಕಕ್ಲಿಪ್ತಶರೀರಾದ್ಯನು ಸರಣೇನ ವಿಷ್ಣೋರೇವ ಪರಮಂ ಪದಂ ದರ್ಶಯಿತುಮ್ ಅಯಮ್ ಉಪನ್ಯಾಸಃ ಇತಿ ಅನವದ್ಯಮ್ ॥

(ಭಾಷ್ಯಾರ್ಥ)

ಸಾಂಖ್ಯರು "ಗುಣಪುರುಷಾಂತರಜ್ಞಾನದಿಂದ ಕೈವಲ್ಯವು (ದೊರೆಯು ವದು)" (?)[1] ಎಂದು ಹೇಳುತ್ತಾರಾದ್ದರಿಂದ ಪ್ರಧಾನವನ್ನು (ಅವರು) ಜ್ಞೇಯವೆಂದು (ತಮ್ಮ) ಸ್ಮೃತಿಯಲ್ಲಿ ಹೇಳಿದಾ(ರೆಂದಾಗುತ್ತದೆ). ಏಕೆಂದರೆ ಗುಣಗಳ ಸ್ವರೂಪವನ್ನು ತಿಳಿದುಕೊಳ್ಳದೆ ಗುಣಗಳಿಗೂ ಪುರುಷನಿಗೂ ಇರುವ ಅಂತರವನ್ನು ತಿಳಿಯುವದಕ್ಕೆ ಶಕ್ಯವಾಗುವದಿಲ್ಲ. ಮತ್ತು ಕೆಲವು ವಿಭೂತಿ ಗಳನ್ನು ಪಡೆದುಕೊಳ್ಳುವದಕ್ಕಾಗಿ ಪ್ರಧಾನವನ್ನು ಅರಿತುಕೊಳ್ಳಬೇಕು ಎಂದು (ತಮ್ಮ) ಸ್ಮೃತಿಯಲ್ಲಿ ಒಂದು ಕಡೆಯಲ್ಲಿ ಹೇಳಿಕೊಂಡಿರುತ್ತಾರೆ[2]. ಆದರೆ ಇಲ್ಲಿ ಈ ಅವ್ಯಕ್ತವು ಜ್ಞೇಯವೆಂದು ಹೇಳಿರುವದಿಲ್ಲ. ಅವ್ಯಕ್ತ ಎಂಬ ಮಾತು ಬರಿಯ (ಒಂದು) ಪದವು; ಇಲ್ಲಿ ಅವ್ಯಕ್ತವನ್ನು ಅರಿತುಕೊಳ್ಳಬೇಕು ಅಥವಾ[3] ಉಪಾಸನೆಮಾಡಬೇಕು ಎಂಬ ವಾಕ್ಯವಿರುವದಿಲ್ಲ. (ಶ್ರುತಿಯಲ್ಲಿ) ಹೇಳದೆ ಇರುವ ಪದಾರ್ಥದ ಜ್ಞಾನವು ಪುರುಷಾರ್ಥ(ವನ್ನು ಕೊಡುತ್ತದೆ) ಎಂದು ತಿಳಿಯುವದಕ್ಕೆ ಆಗುವಂತಿಲ್ಲ[4]. ಆದ್ದರಿಂದಲೂ ಅವ್ಯಕ್ತಶಬ್ದದಿಂದ ಪ್ರಧಾನ ವನ್ನು ಹೇಳಿಲ್ಲ(ವೆಂದಾಯಿತು).

---

1. ಈ ವಚನವು ಕಾರಿಕೆಯಲ್ಲಿಲ್ಲ.
2. ಇದೂ ಕಾರಿಕೆಯಲ್ಲಿಲ್ಲ.
3. ಮೂಲದಲ್ಲಿರುವ 'ಚ' ಎಂಬುದು ವಾ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಭಾವಿಸಬೇಕು ಅಥವಾ 'ವಾ' ಎಂದೇ ಮೂಲದಲ್ಲಿ ಭಾಷ್ಯಕಾರರು ಬರೆದಿದ್ದರೂ ಇರಬಹುದು.
4. ಕೈವಲ್ಯವು ವಚನದ ಅರ್ಥಜ್ಞಾನದಿಂದ ಆಗತಕ್ಕದ್ದು.

ನಮ್ಮ ಪಕ್ಷದಲ್ಲಾದರೋ ರಥರೂಪಕದಲ್ಲಿ ಕಲ್ಪಿಸಿರುವ ಶರೀರವೇ ಮುಂತಾದವುಗಳನ್ನು ಅನುಸರಿಸಿಕೊಂಡು ವಿಷ್ಣುವಿನ ಪರಮಪದವನ್ನೇ ಹೇಳುವದಕ್ಕೆ ಈ (ಅವ್ಯಕ್ತವನ್ನು) ಹೇಳಿದೆಯಾದ್ದರಿಂದ (ಯಾವ) ದೋಷವೂ ಇಲ್ಲ[1].

**ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್ ॥ ೫ ॥**

೫. (ಪ್ರಧಾನವನ್ನು) ಹೇಳಿದೆ ಎಂದರೆ, ಇಲ್ಲ; ಏಕೆಂದರೆ ಪ್ರಕರಣದಿಂದ ಅದು ಪ್ರಾಜ್ಞನೇ.

## ಪೂರ್ವಪಕ್ಷ: ಅಶಬ್ದಾದಿಧರ್ಮಗಳಿಂದ ಪ್ರಧಾನವನ್ನು ಹೇಳಿದೆ

(ಭಾಷ್ಯ)

೩೪೫. ಅತ್ರಾಹ ಸಾಙ್ಖ್ಯಃ– 'ಜ್ಞೇಯತ್ವಾವಚನಾತ್' ಇತಿ ಅಸಿದ್ಧಮ್ । ಕಥಮ್ ? ಶ್ರೂಯತೇ ಹಿ ಉತ್ತರತ್ರ ಅವ್ಯಕ್ತಶಬ್ದೋದಿತಸ್ಯ ಪ್ರಧಾನಸ್ಯ ಜ್ಞೇಯತ್ವವಚನಮ್ "ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂ ನಿತ್ಯಮಗನ್ಧವಚ್ಚ ಯತ್ । ಅನಾದ್ಯನನ್ತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ॥" (ಕ. ೨-೩-೧೫) ಇತಿ । ಅತ್ರ ಹಿ ಯಾದೃಶಂ ಶಬ್ದಾದಿಹೀನಂ ಪ್ರಧಾನಂ ಮಹತಃ ಪರಂ ಸ್ಮೃತೌ ನಿರೂಪಿತಮ್, ತಾದೃಶಮೇವ ನಿಚಾಯ್ಯತ್ವೇನ ನಿರ್ದಿಷ್ಟಮ್ । ತಸ್ಮಾತ್ ಪ್ರಧಾನಮೇವೇದಮ್ । ತದೇವ ಚ ಅವ್ಯಕ್ತಶಬ್ದನಿರ್ದಿಷ್ಟಮ್ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):— ಇಲ್ಲಿ ಸಾಂಖ್ಯನು ಹೇಳುತ್ತಾನೇನೆಂದರೆ "ಜ್ಞೇಯತ್ವಾವಚನಾತ್" (ಅವ್ಯಕ್ತವು ಜ್ಞೇಯವೆಂದು ಹೇಳಿಲ್ಲ) ಎಂಬುದು ಅಸಿದ್ಧವು. (ಅದು) ಹೇಗೆ" ಎಂದರೆ, ಮುಂದೆ "ಅಶಬ್ದವೂ ಅಸ್ಪರ್ಶವೂ ಅರೂಪವೂ ಅವ್ಯಯವೂ ಮತ್ತು ಅರಸವೂ ಯಾವಾಗಲೂ ಅಗಂಧವೂ, ಆಗಿ ಅನಾದ್ಯನಂತ ವಾಗಿ ಮಹತ್ತಿಗಿಂತ ಹೆಚ್ಚಿನದಾಗಿ ನಿತ್ಯವಾಗಿರುತ್ತದೆಯಲ್ಲ, ಅದನ್ನು

1. ಅವ್ಯಕ್ತವನ್ನು ಜ್ಞೇಯವೆಂದು ಹೇಳಿಲ್ಲ ಎಂಬ ದೋಷವು ನಮ್ಮ ಪಕ್ಷದಲ್ಲಿಲ್ಲ; ಅವ್ಯಕ್ತವನ್ನು ಹೇಳಿದ್ದು ವ್ಯರ್ಥವೆಂಬ ದೋಷವೂ ಇಲ್ಲ.

ಅರಿತುಕೊಂಡರೆ ಮೃತ್ಯುಮುಖದಿಂದ ಬಿಡುಗಡೆಯನ್ನು ಹೊಂದುತ್ತಾನೆ" (ಕ. ೨–೩–೧೫) ಎಂದು ಅವ್ಯಕ್ತಶಬ್ದದಿಂದ ಉಕ್ತವಾಗಿರುವ ಪ್ರಧಾನವು ಜ್ಞೇಯವೆಂದು ಹೇಳುವ ವಚನವು ಶ್ರುತಿಯಲ್ಲಿದೆ. ಇಲ್ಲಿ ಶಬ್ದಾದಿಗಳಿಲ್ಲದ ಮಹತ್ತಿಗಿಂತಲೂ ಹೆಚ್ಚಾದ ಪ್ರಧಾನವು ಹೇಗೆ (ಸಾಂಖ್ಯ)ಸ್ಮೃತಿಯಲ್ಲಿ ನಿರೂಪಿತವಾಗಿರುತ್ತದೆಯೋ ಹಾಗೆಯೇ ಅರಿತುಕೊಳ್ಳಬೇಕೆಂದು ತಿಳಿಸಿರುತ್ತದೆ ಯಲ್ಲವೆ? ಆದ್ದರಿಂದ ಇದು ಪ್ರಧಾನವೇ; ಅದನ್ನೇ (ಇಲ್ಲಿ) ಅವ್ಯಕ್ತ ಶಬ್ದದಿಂದ ಹೇಳಿದೆ.

## ಸಿದ್ಧಾಂತ: ಇಲ್ಲಿ ಹೇಳಿರುವದು ಪರಮಾತ್ಮನನ್ನು

(ಭಾಷ್ಯ)

೩೪೬. ಅತ್ರ ಬ್ರೂಮಃ– ನೇಹ ಪ್ರಧಾನಂ ನಿಚಾಯ್ಯತ್ವೇನ ನಿರ್ದಿಷ್ಟಮ್ | ಪ್ರಾಜ್ಞೋ ಹಿ ಇಹ ಪರಮಾತ್ಮಾ ನಿಚಾಯ್ಯತ್ವೇನ ನಿರ್ದಿಷ್ಟಃ ಇತಿ ಗಮ್ಯತೇ | ಕುತಃ ? ಪ್ರಕರಣಾತ್ | ಪ್ರಾಜ್ಞಸ್ಯ ಹಿ ಪ್ರಕರಣಂ ವಿತತಂ ವರ್ತತೇ | "ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ" (ಕ. ೧–೩–೧೧) ಇತ್ಯಾದಿನಿರ್ದೇಶಾತ್ | "ಏಷ ಸರ್ವೇಷು ಭೂತೇಷು ಗೂಢೋತ್ಮಾ ನ ಪ್ರಕಾಶತೇ" (ಕ. ೧–೩–೧೨) ಇತಿ ಚ ದುರ್ಜ್ಞಾನತ್ವವಚನೇನ ತಸ್ಯೈವ ಜ್ಞೇಯತ್ವಾಕಾಙ್ಕ್ಷಣಾತ್ | "ಯಚ್ಛೇದ್ ವಾಙ್ಮನಸೀ ಪ್ರಾಜ್ಞಃ" (ಕ. ೧–೩–೧೩) ಇತಿ ಚ ತಜ್ಜ್ಞಾನಾಯೈವ ವಾಗಾದಿ ಸಂಯಮಸ್ಯ ವಿಹಿತತ್ವಾತ್ | ಮೃತ್ಯುಮುಖಪ್ರಮೋಕ್ಷಣಫಲತ್ವಾಚ್ಚ | ನ ಹಿ ಪ್ರಧಾನಮಾತ್ರಂ ನಿಚಾಯ್ಯ ಮೃತ್ಯುಮುಖಾತ್ ಪ್ರಮುಚ್ಯತೇ ಇತಿ ಸಾಙ್ಖ್ಯೈರಿಷ್ಯತೇ | ಚೇತನಾತ್ಮವಿಜ್ಞಾನಾದ್ ಹಿ ಮೃತ್ಯುಮುಖಾತ್ ಪ್ರಮುಚ್ಯತೇ ಇತಿ ತೇಷಾಮ್ ಅಭ್ಯುಪಗಮಃ | ಸರ್ವೇಷು ವೇದಾನ್ತೇಷು ಪ್ರಾಜ್ಞಸ್ಯೈವ ಆತ್ಮನಃ ಅಶಬ್ದಾದಿಧರ್ಮತ್ವಮ್ ಅಭಿಲಪ್ಯತೇ | ತಸ್ಮಾತ್ ನ ಪ್ರಧಾನಸ್ಯ ಅತ್ರ ಜ್ಞೇಯತ್ವಮ್, ಅವ್ಯಕ್ತಶಬ್ದನಿರ್ದಿಷ್ಟತ್ವಂ ವಾ ||

(ಭಾಷ್ಯಾರ್ಥ)

(ಪರಿಹಾರ):– ಇದಕ್ಕೆ (ಪರಿಹಾರವನ್ನು) ಹೇಳುತ್ತೇವೆ. ಇಲ್ಲಿ ಪ್ರಧಾನ ವನ್ನು ಅರಿತುಕೊಳ್ಳಬೇಕೆಂದು ಹೇಳಿರುವದಿಲ್ಲ; ಪ್ರಾಜ್ಞನಾದ[1] ಪರಮಾತ್ಮ

1. ಪ್ರಾಜ್ಞನೆಂಬ ಶಬ್ದವನ್ನು ಸರ್ವಜ್ಞನಾದ ಈಶ್ವರನು ಎಂಬರ್ಥದಲ್ಲಿಯೇ ಸೂತ್ರದಲ್ಲಿ ಪ್ರಯೋಗಿಸಿರುತ್ತದೆ; ಈಚಿನ ವೇದಾಂತಿಗಳು ಕೆಲವರಂತೆ 'ಅಜ್ಞನಾದ ಸುಷುಪ್ತಾತ್ಮನು' ಎಂಬ ಅಸ್ವಾಭಾವಿಕವಾದ ಅರ್ಥದಲ್ಲಿ ಪ್ರಯೋಗಿಸುವದಿಲ್ಲ ಎಂಬುದನ್ನು ಲಕ್ಷಿಸಬೇಕು.

ನನ್ನೇ ಇಲ್ಲಿ ಅರಿತುಕೊಳ್ಳಬೇಕೆಂದು ಹೇಳಿದೆ ಎಂದು ಗೊತ್ತಾಗುವಂತಿದೆ. (ಅದು) ಹೇಗೆ? ಎಂದರೆ ಪ್ರಕರಣದಿಂದ. ''ಪುರುಷನಿಗಿಂತ ಹೆಚ್ಚಿನದು ಯಾವದೂ ಇಲ್ಲ; ಅವನೇ ಕೊನೆಯು, ಅವನೇ ಪರಗತಿಯು'' (ಕ. ೧–೩–೧೧) ಎಂದು ಮುಂತಾಗಿ ತಿಳಿಸಿರುವದರಿಂದಲೂ ''ಸರ್ವಭೂತಗಳಲ್ಲಿ ಗೂಢನಾಗಿರುವದರಿಂದ ಈ ಆತ್ಮನು ಬೆಳಗುವದಿಲ್ಲ'' (ಕ. ೧–೩–೧೨) ಎಂದು ಆತನನ್ನು ತಿಳಿದುಕೊಳ್ಳುವದು ಕಷ್ಟವೆಂದು ಹೇಳಿರುವದರಿಂದ ಅವನೇ ಜ್ಞೇಯವೆಂದು ಆಕಾಂಕ್ಷೆಯುಂಟಾಗುವದರಿಂದಲೂ ''ವಿವೇಕಿಯಾದವನು ವಾಕ್ಕನ್ನು ಮನಸ್ಸಿನಲ್ಲಿ ಬಿಗಿಹಿಡಿದಿರಬೇಕು'' (ಕ. ೧–೩–೧೩) ಎಂದು ಆ (ಆತ್ಮ)ಜ್ಞಾನಕ್ಕೋಸ್ಕರವೇ ವಾಗಾದಿಗಳ ಸಂಯಮವನ್ನು ವಿಧಿಸಿರುವದರಿಂದಲೂ ಪ್ರಾಜ್ಞನ ಪ್ರಕರಣವೇ (ಇಲ್ಲಿ) ಬಿಡದೆ (ಸಾಗಿ)ರುತ್ತದೆ. (ಈ ಜ್ಞಾನಕ್ಕೆ) ಮೃತ್ಯುಮುಖದಿಂದ ಬಿಡುಗಡೆಯನ್ನು ಹೊಂದುವದು ಎಂಬ ಫಲ(ವನ್ನು ಹೇಳಿರುವ)ದರಿಂದಲೂ (ಹೀಗೆಂದೇ ತಿಳಿಯಬೇಕು). ಏಕೆಂದರೆ ಬರಿಯ ಪ್ರಧಾನವನ್ನು ಅರಿತುಕೊಂಡಮಾತ್ರದಿಂದ ಮೃತ್ಯುಮುಖದಿಂದ ಬಿಡುಗಡೆಹೊಂದುತ್ತಾರೆಂದು (ಸಾಂಖ್ಯ)ರು ಒಪ್ಪುವದಿಲ್ಲ; ಚೇತನಾತ್ಮನ ವಿಜ್ಞಾನದಿಂದಲೇ ಮೃತ್ಯುಮುಖದಿಂದ ಬಿಡುಗಡೆಯಾಗುವದೆಂದೇ ಅವರ ಅಂಗೀಕಾರ(ವಿರುತ್ತದೆ). ಎಲ್ಲಾ ವೇದಾಂತಗಳಲ್ಲಿಯೂ ಪ್ರಾಜ್ಞನಾದ ಆತ್ಮನೇ ಅಶಬ್ದಾದಿಧರ್ಮಗಳುಳ್ಳವನೆಂದು ಹೇಳಿರುತ್ತದೆ[1]. ಆದ್ದರಿಂದ ಪ್ರಧಾನವು (ಇಲ್ಲಿ) ಜ್ಞೇಯವಲ್ಲ, (ಅದನ್ನು) ಅವ್ಯಕ್ತಶಬ್ದದಿಂದ ತಿಳಿಸಿಯೂ ಇಲ್ಲ.

**ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ ॥ ೬ ॥**

೬. ಹೀಗಿರುವದರಿಂದ[2] ಮೂರನ್ನೇ ಹೇಳಿದೆ. ಪ್ರಶ್ನೆಯನ್ನೂ ಮಾಡಿದೆ.

## ಪ್ರಶ್ನೋತ್ತರಗಳಿಂದಲೂ ಅವ್ಯಕ್ತವು ಪ್ರಧಾನವಲ್ಲವೆಂದಾಗುತ್ತದೆ

(ಭಾಷ್ಯ)

೩೪೭. ಇತಶ್ಚ ನ ಪ್ರಧಾನಸ್ಯ ಅವ್ಯಕ್ತಶಬ್ದವಾಚ್ಯತ್ವಂ ಜ್ಞೇಯತ್ವಂ ವಾ । ಯಸ್ಮಾತ್ ತ್ರಯಾಣಾಮೇವ ಪದಾರ್ಥಾನಾಮ್ ಅಗ್ನಿಜೀವ

1. ಕೇ. ೧–೫ರಿಂದ ೯, ಮುಂ. ೩–೧–೬, ಮಾಂ. ೭, ತೈ. ೨–೭, ಬೃ. ೪–೮–೮ ಇವುಗಳನ್ನು ನೋಡಿ.

2. ಏವಂ ಎಂಬುದಕ್ಕೆ ಪ್ರಧಾನಕ್ಕೆ ಹೀಗಿಲ್ಲ ಎಂದು ವ್ಯಾಖ್ಯಾನಕಾರರ ಅರ್ಥ. ಆದರೆ ಆ ಅರ್ಥವು ಏವಕಾರದಿಂದಲೇ ಸಿದ್ಧವಾಗುತ್ತಿದೆ.

ಪರಮಾತ್ಮನಾಮ್ ಅಸ್ಮಿನ್ ಗ್ರನ್ಥೇ ಕಠವಲ್ಲೀಷು ವರಪ್ರದಾನಸಾಮರ್ಥ್ಯಾತ್ ವಕ್ತವ್ಯತಯಾ ಉಪನ್ಯಾಸೋ ದೃಶ್ಯತೇ| ತದ್ವಿಷಯ ಏವ ಚ ಪ್ರಶ್ನಃ। ನಾತೋಽನ್ಯಸ್ಯ ಪ್ರಶ್ನಃ ಉಪನ್ಯಾಸೋ ವಾ ಅಸ್ತಿ| ತತ್ರ ತಾವತ್ "ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತ್ವಂ ಶ್ರದ್ದಧಾನಾಯ ಮಹ್ಯಮ್ ॥" (ಕ. ೧-೧-೧೩) ಇತಿ ಅಗ್ನಿವಿಷಯಃ ಪ್ರಶ್ನಃ। "ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ। ಏತದ್ವಿದ್ಯಾಮನುಶಿಷ್ಟಸ್ತ್ವಯಾಹಂ ವರಾಣಾಮೇಷ ವರಸ್ತೃತೀಯಃ ॥" (ಕ. ೧-೧-೨೦) ಇತಿ ಜೀವವಿಷಯಃ ಪ್ರಶ್ನಃ| "ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್। ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ ತತ್ ಪಶ್ಯಸಿ ತದ್ವದ ॥" (ಕ. ೧-೨-೧೪) ಇತಿ ಪರಮಾತ್ಮವಿಷಯಃ| ಪ್ರತಿವಚನಮಪಿ | "ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ" (ಕ. ೧-೧-೧೫) ಇತಿ ಅಗ್ನಿವಿಷಯಮ್ । "ಹನ್ತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ | ಯೋನಿಮನ್ಯೇ ಪ್ರಪದ್ಯನ್ತೇ ಶರೀರತ್ವಾಯ ದೇಹಿನಃ| ಸ್ಥಾಣುಮನ್ಯೇಽನುಸಂಯನ್ತಿ ಯಥಾಕರ್ಮ ಯಥಾಶ್ರುತಮ್ |" (ಕ. ೨-೫-೬, ೭) ಇತಿ ವ್ಯವಹಿತಂ ಜೀವವಿಷಯಮ್। "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ॥" (ಕ. ೧-೨-೧೮) ಇತ್ಯಾದಿಬಹುಪ್ರಪಞ್ಚಂ ಪರಮಾತ್ಮವಿಷಯಮ್। ನೈವಂ ಪ್ರಧಾನವಿಷಯಃ ಪ್ರಶ್ನೋಽಸ್ತಿ। ಅಪೃಷ್ಟತ್ವಾಚ್ಚ ಅನುಪನ್ಯಸನೀಯತ್ವಂ ತಸ್ಯ ಇತಿ ॥

( ಭಾಷ್ಯಾರ್ಥ )

ಈ (ಕಾರಣ)ದಿಂದಲೂ ಪ್ರಧಾನವು ಅವ್ಯಕ್ತಶಬ್ದವಾಚ್ಯವಲ್ಲ, ಜ್ಞೇಯವೂ ಅಲ್ಲ. ಏಕೆಂದರೆ ಅಗ್ನಿ, ಜೀವ, ಪರಮಾತ್ಮ – ಎಂಬೀ ಮೂರೇ ಪದಾರ್ಥಗಳನ್ನೇ ಈ ಗ್ರಂಥದಲ್ಲಿ ಕಠವಲ್ಲಿಗಳಲ್ಲಿ ವರಪ್ರದಾನಸಾಮರ್ಥ್ಯದಿಂದ ಹೇಳತಕ್ಕದ್ದಾಗಿ ತಿಳಿಸಿರುವದು ಕಂಡುಬರುತ್ತದೆ, ಅವುಗಳ ವಿಷಯದಲ್ಲಿಯೇ ಪ್ರಶ್ನವಿದೆ. ಇದಕ್ಕಿಂತ ಬೇರೆ (ಯಾವದೊಂದರ)ಪ್ರಶ್ನೆಯಾಗಲಿ ವಿವರವಾಗಲಿ ಇರುವದಿಲ್ಲ. ಇವುಗಳಲ್ಲಿ ಮೊದಲನೆಯದಾಗಿ "ಮೃತ್ಯುವೆ, ಆ ನೀನು ಸ್ವರ್ಗ್ಯವಾದ ಅಗ್ನಿಯನ್ನು ತಿಳಿದಿರುವೆ; ಶ್ರದ್ಧೆಯುಳ್ಳ ನನಗೆ ಅವನನ್ನು ತಿಳಿಸಿಕೊಡು" (ಕ. ೧-೧-೧೩) ಎಂಬಿದು ಅಗ್ನಿವಿಷಯದ ಪ್ರಶ್ನೆ. "ಸತ್ತ ಮನುಷ್ಯನ ವಿಷಯದಲ್ಲಿ –ಇದಾನೆಂದು ಕೆಲವರು, ಇವನು ಇರುವದಿಲ್ಲವೆಂದು ಕೆಲವರು– ಈ ಸಂಶಯವುಂಟಷ್ಟೆ, ನಿನ್ನಿಂದ ಶಿಕ್ಷಿತನಾಗಿ ನಾನು ಇದನ್ನು ಅರಿತುಕೊಳ್ಳಬೇಕು.

ವರಗಳಲ್ಲಿ ಈ ವರವು ಮೂರನೆಯದು'' (ಕ. ೧-೧-೨೦) ಎಂಬುದು **ಜೀವವಿಷಯದ (ಪ್ರಶ್ನೆ)**. "ಧರ್ಮಕ್ಕಿಂತ ಬೇರೆ, ಅಧರ್ಮಕ್ಕಿಂತ ಬೇರೆ, ಈ ಕೃತಾಕೃತಕ್ಕಿಂತ ಬೇರೆ, ಭೂತಕ್ಕಿಂತಲೂ ಭವ್ಯಕ್ಕಿಂತಲೂ ಬೇರೆ – ಯಾವ ಇಂಥದ್ದನ್ನು (ನೀನು) ಅರಿತಿರುವೆಯೋ ಅದನ್ನು (ನನಗೆ) ಹೇಳು" (ಕ. ೧-೨-೧೪) ಎಂಬುದು **ಪರಮಾತ್ಮವಿಷಯದ (ಪ್ರಶ್ನೆ)**. **ಉತ್ತರವೂ** (ಹೀಗೆಯೇ). "ಆ ಲೋಕಾದಿಯಾದ ಅಗ್ನಿಯನ್ನು ಅವನಿಗೆ ಹೇಳಿದನು. ಇಟ್ಟಿಗೆಗಳು ಯಾವವು, ಎಷ್ಟು ಮತ್ತು ಹೇಗೆ (ಅವನ್ನುಪಯೋಗಿಸಬೇಕು ಎಂಬುದನ್ನು) ಅವನಿಗೆ ಹೇಳಿಕೊಟ್ಟನು" (ಕ. ೧-೧-೧೫) ಎಂಬುದು **ಅಗ್ನಿವಿಷಯವಾದದ್ದು**. "ಅಪ್ಪ, ಈ ಗುಹ್ಯವಾದ ಸನಾತನಬ್ರಹ್ಮವನ್ನು ನಿನಗೆ ತಿಳಿಸಿಕೊಡುವೆನು. ಮತ್ತು ಮರಣವನ್ನು ಹೊಂದಿ ಆತ್ಮನು ಹೇಗಾಗುವನೋ (ಅದನ್ನೂ) ಹೇಳಿಕೊಡುವೆನು ಕೆಲವರು ದೇಹಿಗಳು ಶರೀರವನ್ನು ಪಡೆಯುವದಕ್ಕೆ (ಮನುಷ್ಯ) ಯೋನಿಯನ್ನು ಪಡೆಯುವರು; ಇನ್ನು ಕೆಲವರು (ತಮ್ಮ) ಕರ್ಮವಿದ್ದಂತೆಯೂ ಜ್ಞಾನವಿದ್ದಂತೆಯೂ ಸ್ಥಾವರ(ಜನ್ಮ)ವನ್ನು ಪಡೆಯುವರು" (ಕ. ೧-೨-೧೮) ಎಂದು (ಮುಂದೆ) ವ್ಯವಹಿತವಾಗಿರುವದು **ಜೀವನ ವಿಷಯವಾದದ್ದು**. "(ಆ) ಸರ್ವಜ್ಞನು ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ" (ಕ. ೧-೨-೧೮) ಎಂದು ಮುಂತಾಗಿ ಬಹುವಿಸ್ತಾರವಾಗಿರುವದು **ಪರಮಾತ್ಮವಿಷಯವಾದದ್ದು**. (ಇಲ್ಲಿ) ಹೀಗೆ ಪ್ರಧಾನವಿಷಯವಾದ ಪ್ರಶ್ನೆಯಿಲ್ಲ; ಕೇಳದೆ ಇರುವದರಿಂದ ಅದನ್ನು ಹೇಳಬೇಕಾದದ್ದೂ ಇರುವದಿಲ್ಲ.

## ಆಕ್ಷೇಪ: ಪರಮಾತ್ಮಪ್ರಶ್ನೆಯು ಯಮನು ಕೊಟ್ಟ ವರಕ್ಕಿಂತ ಬೇರೆ

( ಭಾಷ್ಯ )

೩೪೮. ಅತ್ರಾಹ – ಯೋಽಯಮ್ ಆತ್ಮವಿಷಯಃ ಪ್ರಶ್ನಃ 'ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತಿ' (ಇತಿ)[1] ಕಿಂ ಸ ಏವಾಯಮ್ 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್' ಇತಿ ಪುನರನುಕೃಷ್ಯತೇ, ಕಿಂ ವಾ ತತೋಽನ್ಯೋಽಯಮ್ ಅಪೂರ್ವಃ ಪ್ರಶ್ನಃ ಉತ್ಥಾಪ್ಯತೇ ಇತಿ? ಕಿಂ ಚಾತಃ? ಸ ಏವಾಯಂ ಪ್ರಶ್ನಃ ಪುನರನುಕೃಷ್ಯತೇ ಇತಿ ಯದಿ ಉಚ್ಯೇತ, ದ್ವಯೋರಾತ್ಮವಿಷಯಯೋಃ ಪ್ರಶ್ನಯೋಃ ಏಕತಾಪತ್ತೇಃ ಅಗ್ನಿವಿಷಯ ಆತ್ಮವಿಷಯಶ್ಚ ದ್ವಾವೇವ ಪ್ರಶ್ನೌ ಇತ್ಯತಃ ನ ವಕ್ತವ್ಯಂ ತ್ರಯಾಣಾಂ ಪ್ರಶ್ನೋಪನ್ಯಾಸಾ

1. ಇಲ್ಲಿ ಒಂದು 'ಇತಿ' ಯು ಬೇಕೆಂತ ಕಾಣುತ್ತದೆ.

ಇತಿ | ಅಥ ಅನ್ಯೋಽಯಮ್ ಅಪೂರ್ವಃ ಪ್ರಶ್ನಃ ಉತ್ಥಾಪ್ಯತೇ ಇತಿ ಉಚ್ಯೇತ, ತತೋ ಯಥೈವ ವರಪ್ರದಾನವ್ಯತಿರೇಕೇಣ ಪ್ರಶ್ನಕಲ್ಪನಾಯಾಮ್ ಅದೋಷಃ, ಏವಂ ಪ್ರಶ್ನವ್ಯತಿರೇಕೇಣಾಪಿ ಪ್ರಧಾನೋಪನ್ಯಾಸಕಲ್ಪನಾಯಾಮ್ ಅದೋಷಃ ಸ್ಯಾತ್ ಇತಿ ||

(ಭಾಷ್ಯಾರ್ಥ)

(ಸಾಂಖ್ಯ) :– ಇಲ್ಲಿ (ಸಾಖ್ಯನು) ಕೇಳುತ್ತಾನೆ: "ಸತ್ತ ಮನುಷ್ಯನ ವಿಷಯದಲ್ಲಿ – ಇದಾನೆಂದು (ಕೆಲವರು)" (ಕ. ೧–೧–೨೦) ಎಂಬ ಈ ಆತ್ಮ ವಿಷಯದ ಪ್ರಶ್ನೆಯಿದೆಯಲ್ಲ, ಆ ಇವನ್ನೇ "ಧರ್ಮಕ್ಕಿಂತ ಬೇರೆ, ಅಧರ್ಮ ಕ್ಕಿಂತ ಬೇರೆ," (ಕ. ೧–೨–೧೪) ಎಂದು ಎಳೆದುಕೊಂಡಿದೆಯೊ, ಅಥವಾ ಅದಕ್ಕಿಂತ ಬೇರೆಯಾಗಿ ಈ ಅಪೂರ್ವಪ್ರಶ್ನೆಯನ್ನು ಎಬ್ಬಿಸಿದೆಯೊ ?

(ಸಿದ್ಧಾಂತಿ) :– ಈ (ವಿಚಾರ)ದಿಂದ ಏನು (ಪ್ರಯೋಜನ) ?

(ಸಾಂಖ್ಯ) :– ಅದೇ ಈ ಪ್ರಶ್ನೆಯನ್ನು ಮತ್ತೆ ಎಳೆದುಕೊಂಡಿದೆ ಎಂದು ಹೇಳಿದರೆ (ಆಗ) ಆತ್ಮವಿಷಯವಾದ ಎರಡು ಪ್ರಶ್ನೆಗಳೂ ಒಂದಾಗಿಬಿಡು ವದರಿಂದ ಅಗ್ನಿವಿಷಯವಾದದ್ದು, ಆತ್ಮವಿಷಯವಾದದ್ದು (ಎಂದು) ಎರಡೇ ಪ್ರಶ್ನೆಗಳಾಗುವದರಿಂದ ಮೂರು (ವಿಷಯಗಳ) ಪ್ರಶ್ನೋತ್ತರಗಳು ಎಂದು (ಸೂತ್ರದಲ್ಲಿ) ಹೇಳಬಾರದು (ಎಂದಾಗುವದು). ಹಾಗಿಲ್ಲದೆ ಬೇರೆಯಾಗಿಯೇ ಈ ಅಪೂರ್ವಪ್ರಶ್ನೆಯನ್ನೆಬ್ಬಿಸಿದೆ ಎಂದು ಹೇಳುವದಾದರೆ, ಆಗ ವರಪ್ರದಾನ ವಿಲ್ಲದೆ ಪ್ರಶ್ನೆಯನ್ನು ಕಲ್ಪಿಸುವದರಲ್ಲಿ ಹೇಗೆ ದೋಷವಿಲ್ಲವೋ ಹಾಗೆಯೇ ಪ್ರಶ್ನೆಯಿಲ್ಲದೆ ಪ್ರಧಾನವನ್ನು ಹೇಳಿರುತ್ತದೆ ಎಂದು ಕಲ್ಪಿಸುವದರಲ್ಲಿಯೂ ದೋಷವಿಲ್ಲವಾಗುವದು.

## ಸಮಾಧಾನ: ಜೀವಪರಮಾತ್ಮರಿಗೆ ಭೇದ ವಿಲ್ಲದ್ದರಿಂದ ಬೇರೆ ಪ್ರಶ್ನೆಯಿಲ್ಲ

(ಭಾಷ್ಯ)

೩೪೯. ಅತ್ರೋಚ್ಯತೇ | ನೈವಂ ವಯಮಿಹ ವರಪ್ರದಾನವ್ಯತಿ ರೇಕೇಣ ಪ್ರಶ್ನಂ ಕಂಚಿತ್ ಕಲ್ಪಯಾಮಃ | ವಾಕ್ಯೋಪಕ್ರಮಸಾಮರ್ಥ್ಯಾತ್ | ವರಪ್ರದಾನೋಪಕ್ರಮಾ ಹಿ ಮೃತ್ಯುನಚಿಕೇತಃಸಂವಾದರೂಪಾ ವಾಕ್ಯಪ್ರವೃತ್ತಿಃ ಆಸಮಾಪ್ತೇಃ ಕಠವಲ್ಲೀನಾಂ ಲಕ್ಷ್ಯತೇ | ಮೃತ್ಯುಃ ಕಿಲ ನಚಿಕೇತಸೇ

ಪಿತ್ರಾ ಪ್ರಹಿತಾಯ ತ್ರೀನ್ ವರಾನ್ ಪ್ರದದೌ । ನಚಿಕೇತಾಃ ಕಿಲ ತೇಷಾಂ ಪ್ರಥಮೇನ ವರೇಣ ಪಿತುಃ ಸೌಮನಸ್ಯಂ ವವ್ರೇ । ದ್ವಿತೀಯೇನ ಅಗ್ನಿವಿದ್ಯಾಮ್, ತೃತೀಯೇನ ಆತ್ಮವಿದ್ಯಾಮ್ । "ಯೇಯಂ ಪ್ರೇತೇ (ಕ. ೧-೧ ೨೦) ವರಾಣಾಮೇಷ ವರಸ್ತೃತೀಯಃ" (ಕ. ೧-೧-೨೦) ಇತಿ ಲಿಙ್ಗಾತ್ । ತತ್ರ ಯದಿ "ಅನ್ಯತ್ರ ಧರ್ಮಾತ್" (ಕ. ೧-೨-೧೪) ಇತಿ ಅನ್ಯೋಽಯಮ್ ಅಪೂರ್ವಃ ಪ್ರಶ್ನಃ ಉತ್ಥಾಪ್ಯೇತ, ತತೋ ವರಪ್ರದಾನ ವ್ಯತಿರೇಕೇಣಾಪಿ ಪ್ರಶ್ನಕಲ್ಪನಾತ್ ವಾಕ್ಯಂ ಬಾಧ್ಯೇತ । ನನು ಪ್ರಷ್ಟವ್ಯ ಭೇದಾತ್ ಅಪೂರ್ವೋಽಯಂ ಪ್ರಶ್ನೋ ಭವಿತುಮರ್ಹತಿ । ಪೂರ್ವೋ ಹಿ ಪ್ರಶ್ನೋ ಜೀವವಿಷಯಃ । ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತಿ ನಾಸ್ತೀತಿ ವಿಚಿಕಿತ್ಸಾಭಿಧಾನಾತ್ । ಜೀವಶ್ಚ ಧರ್ಮಾದಿಗೋಚರತ್ವಾತ್ ನ 'ಅನ್ಯತ್ರ ಧರ್ಮಾತ್' ಇತಿ ಪ್ರಶ್ನಮ್ ಅರ್ಹತಿ । ಪ್ರಾಜ್ಞಸ್ತು ಧರ್ಮಾದ್ಯ ತೀತತ್ವಾತ್ 'ಅನ್ಯತ್ರ ಧರ್ಮಾತ್' ಇತಿ ಪ್ರಶ್ನಮ್ ಅರ್ಹತಿ । ಪ್ರಶ್ನ ಚ್ಛಾಯಾ ಚ ನ ಸಮಾನಾ ಲಕ್ಷ್ಯತೇ । ಪೂರ್ವಸ್ಯ ಅಸ್ತಿತ್ವನಾಸ್ತಿತ್ವವಿಷಯ ತ್ವಾತ್, ಉತ್ತರಸ್ಯ ಚ ಧರ್ಮಾದ್ಯತೀತವಸ್ತುವಿಷಯತ್ವಾತ್ । ತಸ್ಮಾತ್ ಪ್ರತ್ಯಭಿಜ್ಞಾನಾಭಾವಾತ್ ಪ್ರಶ್ನಭೇದಃ । ನ ಪೂರ್ವಸ್ಯೈವ ಉತ್ತರತ್ರಾನು ಕರ್ಷಣಮ್ ಇತಿ ಚೇತ್ । ನ । ಜೀವಪ್ರಾಜ್ಞಯೋರೇಕತ್ವಾಭ್ಯುಪ ಗಮಾತ್ । ಭವೇತ್ ಪ್ರಷ್ಟವ್ಯಭೇದಾತ್ ಪ್ರಶ್ನಭೇದಃ ಯದಿ ಅನ್ಯೋ ಜೀವಃ ಪ್ರಾಜ್ಞಾತ್ ಸ್ಯಾತ್ । ನ ತು ಅನ್ಯತ್ವಮ್ ಅಸ್ತಿ । "ತತ್ತ್ವಮಸಿ" (ಛಾಂ. ೬-೮-೭) ಇತ್ಯಾದಿಶ್ರುತಿಭ್ಯಃ । ಇಹ ಚ 'ಅನ್ಯತ್ರ ಧರ್ಮಾತ್' ಇತ್ಯಸ್ಯ ಪ್ರಶ್ನಸ್ಯ ಪ್ರತಿವಚನಂ "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್" (ಕ. ೧-೨-೧೮) ಇತಿ ಜನ್ಮಮರಣಪ್ರತಿಷೇಧೇನ ಪ್ರತಿ ಪಾದ್ಯಮಾನಂ ಶಾರೀರಪರಮೇಶ್ವರಯೋಃ ಅಭೇದಂ ದರ್ಶಯತಿ । ಸತಿ ಹಿ ಪ್ರಸಙ್ಗೇ ಪ್ರತಿಷೇಧೋ ಭಾಗೀ ಭವತಿ । ಪ್ರಸಙ್ಗಶ್ಚ ಜನ್ಮಮರಣಯೋಃ ಶರೀರಸಂಸ್ಪರ್ಶಾತ್ ಶಾರೀರಸ್ಯ ಭವತಿ ನ ಪರಮೇಶ್ವರಸ್ಯ । ತಥಾ "ಸ್ವಪ್ನಾನ್ತಂ ಜಾಗರಿತಾನ್ತಂ ಚೋಭೌ ಯೇನಾನುಪಶ್ಯತಿ । ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥" (ಕ. ೨-೪-೪) ಇತಿ ಸ್ವಪ್ನಜಾಗರಿತ ದೃಶಃ ಜೀವಸ್ಯೈವ ಮಹತ್ತ್ವವಿಭುತ್ವವಿಶೇಷಣಸ್ಯ ಮನನೇನ ಶೋಕವಿಚ್ಛೇದಂ ದರ್ಶಯನ್ ನ ಪ್ರಾಜ್ಞಾತ್ ಅನ್ಯೋ ಜೀವಃ ಇತಿ ದರ್ಶಯತಿ । ಪ್ರಾಜ್ಞ ವಿಜ್ಞಾನಾದ್ ಹಿ ಶೋಕವಿಚ್ಛೇದಃ ಇತಿ ವೇದಾನ್ತಸಿದ್ಧಾನ್ತಃ । ತಥಾ ಅಗ್ರೇ "ಯದೇವೇಹ ತದಮುತ್ರ ಯದಮುತ್ರ ತದನ್ವಿಹ । ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಕ. ೨-೪-೧೦) ಇತಿ ಜೀವಪ್ರಾಜ್ಞಭೇದದೃಷ್ಟಿಮ್ ಅಪವದತಿ ॥

(ಭಾಷ್ಯಾರ್ಥ)

ಇದಕ್ಕೆ (ಸಮಾಧಾನವನ್ನು) ಹೇಳುತ್ತೇವೆ : ಹೀಗೆ ನಾವು ಇಲ್ಲಿ ವರಪ್ರದಾನವಿಲ್ಲದೆ ಯಾವ ಪ್ರಶ್ನೆಯನ್ನೂ ಕಲ್ಪಿಸಿರುವದಿಲ್ಲ ವಾಕ್ಯದ ಉಪಕ್ರಮದ ಸಾಮರ್ಥ್ಯದಿಂದ (ಇದೇ ಸರಿ). ಏಕೆಂದರೆ ಕಠವಲ್ಲಿಗಳ ಸಮಾಪ್ತಿಯಾಗುವವರೆಗಿನ ವಾಕ್ಯಪ್ರವೃತ್ತಿಯು ಮೃತ್ಯುನಚಿಕೇತರ ಸಂವಾದ ರೂಪವಾಗಿದ್ದು ವರಪ್ರದಾನವೇ (ಅದಕ್ಕೆ) ಉಪಕ್ರಮವೆಂದು ಕಂಡುಬರುತ್ತದೆ. (ಹೇಗೆಂದರೆ), ತಂದೆಯು ಕಳುಹಿಸಿಕೊಟ್ಟ ನಚಿಕೇತನಿಗೆ ಮೃತ್ಯುವು ಮೂರು ವರಗಳನ್ನು ಕೊಟ್ಟನಷ್ಟೆ. ನಚಿಕೇತನು ಅವುಗಳಲ್ಲಿ ಮೊದಲನೆಯ ವರದಿಂದ ತಂದೆಯ ಪ್ರಸನ್ನತೆಯನ್ನು ಬೇಡಿಕೊಂಡನು ; ಎರಡನೆಯ ವರದಿಂದ ಅಗ್ನಿವಿದ್ಯೆಯನ್ನು (ಬೇಡಿಕೊಂಡನು); ಮೂರನೆಯ (ವರ)ದಿಂದ ಆತ್ಮವಿದ್ಯೆಯನ್ನು (ಬೇಡಿಕೊಂಡನು). 'ಸತ್ತವನ ವಿಷಯದಲ್ಲಿ ಈ (ಸಂಶಯ) ವಿದೆಯಷ್ಟೆ.... ವರಗಳಲ್ಲಿ ಇದು ಮೂರನೆಯ ವರವು" (ಕ. ೧-೧-೨೦) ಎಂಬ ಲಿಂಗದಿಂದ (ಇದು ಸ್ಪಷ್ಟವಾಗುತ್ತದೆ). (ಹೀಗಿರುವಲ್ಲಿ) ಇಲ್ಲಿ ಧರ್ಮಕ್ಕಿಂತ ಬೇರೆ (ಕ. ೧-೨-೧೪) ಎಂಬಿದನ್ನು ಅಪೂರ್ವಪ್ರಶ್ನೆಯಾಗಿ ಎಬ್ಬಿಸಿದೆ ಎಂದರೆ, ಆಗ ವರಪ್ರದಾನವಿಲ್ಲದೆಯೇ ಪ್ರಶ್ನೆಯನ್ನು ಕಲ್ಪಿಸುವದರಿಂದ (ಈ) ವಾಕ್ಯವು ಬಾಧಿತವಾಗುವದು.

(ಆಕ್ಷೇಪ):- ಕೇಳುವ (ವಿಷಯವು) ಬೇರೆಯಾಗಿರುವದರಿಂದ ಈ ಪ್ರಶ್ನೆಯು ಅಪೂರ್ವವಾಗಿರಬೇಕು. ಏಕೆಂದರೆ "ಸತ್ತ ಮನುಷ್ಯನ ವಿಷಯದಲ್ಲಿ ಇರುತ್ತಾನೊ, ಇಲ್ಲವೊ ?- ಎಂಬೀ ಸಂಶಯವುಂಟಷ್ಟೆ" ಎಂದು ಸಂಶಯವನ್ನು ಹೇಳಿರುವದರಿಂದ ಹಿಂದಿನ ಪ್ರಶ್ನೆಯು ಜೀವನ ವಿಷಯವಾದದ್ದು. (ಆ) ಜೀವನು ಧರ್ಮಾದಿಗೋಚರನಾಗಿರುವದರಿಂದ 'ಧರ್ಮಕ್ಕಿಂತ ಬೇರೆ' ಎಂಬ ಪ್ರಶ್ನೆಗೆ ತಕ್ಕವನಾಗಿಲ್ಲ. ಪ್ರಾಜ್ಞನಾದರೋ ಧರ್ಮಾದಿಗಳನ್ನು ಮೀರಿರುವದರಿಂದ 'ಧರ್ಮಕ್ಕಿಂತ ಬೇರೆ' ಎಂಬ ಪ್ರಶ್ನೆಗೆ ತಕ್ಕವನಾಗಿರುತ್ತಾನೆ. ಪ್ರಶ್ನೆಯ ಛಾಯೆಯೂ ಹಾಗೆಯೇ ( ಇರುವಂತೆ ) ಕಾಣಿಸುವದಿಲ್ಲ; ಏಕೆಂದರೆ ಹಿಂದೆ 'ಇದಾನೊ, ಇಲ್ಲವೊ ? -ಎಂಬ ವಿಷಯವಾಗಿ (ಕೇಳಿದೆ). ಆದ್ದರಿಂದ (ಅದೇ ಇದೆಂದು) ಗುರುತಿಸುವಹಾಗಿಲ್ಲವಾದ್ದರಿಂದ ಪ್ರಶ್ನೆಗಳು ಬೇರೆಯೇ, ಹಿಂದಿನ (ಪ್ರಶ್ನೆ)ಯನ್ನೇ ಮುಂದೆ ಎಳೆದುಕೊಂಡಿಲ್ಲ (ಎನ್ನಬೇಕು)[1].

---

1. ನಿರೀಶ್ವರಸಾಂಖ್ಯನು ಈ ಆಕ್ಷೇಪವನ್ನು ತರುವದಕ್ಕೆ ಆಗುವಹಾಗಿಲ್ಲವಾದರೂ ಸೇಶ್ವರಸಾಂಖ್ಯನು ತರಬಹುದಾಗಿದೆ.

(ಪರಿಹಾರ):– ಹಾಗಲ್ಲ. ಏಕೆಂದರೆ, ಜೀವಪ್ರಾಜ್ಞರಿಗೆ ಏಕತ್ವವನ್ನೇ (ನಾವು) ಒಪ್ಪಿರುತ್ತೇವೆ. ಜೀವನು ಪ್ರಾಜ್ಞನಿಗಿಂತ ಬೇರೆಯಾಗಿದ್ದರೆ ಕೇಳತಕ್ಕ (ವಿಷಯ)ಗಳು ಬೇರೆಯಾದ್ದರಿಂದ ಪ್ರಶ್ನೆಗಳು ಬೇರೆ ಎಂದಾದೀತು. ಆದರೆ (ಅವನು) ಬೇರೆ ಎಂಬುದಿಲ್ಲ. ಏಕೆಂದರೆ 'ಅದೇ ನೀನು' (ಛಾಂ. ೬–೮–೭) ಎಂದು ಮುಂತಾದ ಬೇರೆ ಶ್ರುತಿ(ವಚನ)ಗಳಿರುತ್ತವೆ. ಇಲ್ಲಿಯೂ 'ಧರ್ಮಕ್ಕಿಂತ ಬೇರೆ' ಎಂಬೀ ಪ್ರಶ್ನೆಯ ಉತ್ತರವನ್ನು "(ಈ) ಸರ್ವಜ್ಞನು ಹುಟ್ಟುವದಿಲ್ಲ, ಸಾಯುವುದೂ ಇಲ್ಲ" ಎಂದು ಹುಟ್ಟುಸಾವುಗಳನ್ನು ಅಲ್ಲಗಳೆದೇ ಪ್ರತಿಪಾದಿಸುವದು ಶಾರೀರಪರಮೇಶ್ವರರಿಗೆ ಅಭೇದವನ್ನೇ ತಿಳಿಸುತ್ತದೆ. ಏಕೆಂದರೆ (ಹುಟ್ಟುಸಾವುಗಳ) ಪ್ರಸಂಗವಿದ್ದರಲ್ಲವೆ, (ಅವುಗಳನ್ನು) ಅಲ್ಲಗಳೆಯುವದು ಯುಕ್ತವಾಗುತ್ತದೆ? ಹುಟ್ಟುಸಾವುಗಳ ಪ್ರಸಂಗವಂತೂ ಶರೀರದ ಸಂಬಂಧವಿರುವದರಿಂದ ಶಾರೀರನಿಗೇ ಇದ್ದೀತೇ ಹೊರತು ಪರಮೇಶ್ವರನಿಗೆ ಇರುವಹಾಗಿಲ್ಲ. ಇದರಂತೆ "ಸ್ವಪ್ನಾಂತ, ಜಾಗರಿತಾಂತ– ಈ ಎರಡನ್ನೂ ಯಾವನಿಂದ ಅರಿತುಕೊಳ್ಳುತ್ತಾರೋ (ಆ) ದೊಡ್ಡವನಾದ ವಿಭುವಾದ ಆತ್ಮನನ್ನು ಅರಿತುಕೊಂಡ ಧೀರನು ಶೋಕಿಸುವದಿಲ್ಲ" (ಕ. ೨–೪–೪) ಎಂದು ಎಚ್ಚರಕನಸುಗಳನ್ನು ಕಾಣುವ ಜೀವನಿಗೇ ಮಹತ್ತ್ವವಿಭುತ್ವವಿಶೇಷಣ(ವಿರುವದೆಂಬುದನ್ನು) ಅರಿತುಕೊಂಡರೆ ಶೋಕವು ನಾಶವಾಗುವದೆಂದು ತಿಳಿಸುವದರಿಂದ ಜೀವನು ಪ್ರಾಜ್ಞನಿಗಿಂತ ಬೇರೆಯಲ್ಲ ಎಂದು ತಿಳಿಸಿದೆ (ಎನ್ನಬೇಕು)[1]. ಏಕೆಂದರೆ **ಪ್ರಾಜ್ಞನ ವಿಜ್ಞಾನದಿಂದಲೇ ಶೋಕವು ನಾಶವಾಗುವದು ಎಂಬುದೇ ವೇದಾಂತಸಿದ್ಧಾಂತವು.** ಇದರಂತೆ ಮುಂದೆ "ಯಾವದು ಇಲ್ಲಿರುವದೋ, ಅದೇ ಅಲ್ಲಿರುವದು; ಯಾವದು ಅಲ್ಲಿರುವದೋ ಅದೇ ಇಲ್ಲಿ(ಉಪಾಧಿ)ಗೆ ಅನುಗುಣವಾಗಿರುವದು. ಯಾವನು ಇಲ್ಲಿ ಬೇರೆಬೇರೆಯಾಗಿರುವಂತೆ ಕಾಣುವನೋ ಅವನು ಸಾವಿನಮೇಲೆ ಸಾವನ್ನು ಪಡೆಯುವನು" (ಕ. ೨–೧–೧೦) ಎಂದು ಜೀವಪ್ರಾಜ್ಞರು ಬೇರೆ ಎಂಬ ದೃಷ್ಟಿಯನ್ನು ಅಲ್ಲಗಳೆದಿರುತ್ತದೆ.

## ಯಮನು ಪ್ರಶ್ನೆಯನ್ನು ಹೊಗಳಿರುವದರಿಂದಲೂ ಇದು ಹೊಸ ಪ್ರಶ್ನೆಯಲ್ಲ

(ಭಾಷ್ಯ)

೩೫೦. ತಥಾ ಜೀವವಿಷಯಸ್ಯ ಅಸ್ತಿತ್ವನಾಸ್ತಿತ್ವಪ್ರಶ್ನಸ್ಯಾನನ್ತರಮ್ "ಅನ್ಯಂ ವರಂ ನಚಿಕೇತೋ ವೃಣೀಷ್ವ" (ಕ. ೧–೧–೨೧) ಇತ್ಯಾರಭ್ಯ

1. 'ತತ್ತ್ವಮಸಿ' ಎಂಬ ಶ್ರುತಿಯನ್ನು ಹಿಂದೆ ಹೇಳಿತ್ತು. ಈಶ್ವರನಿಗೇ ಜೀವಧರ್ಮಗಳನ್ನು ಹೇಳಿರುವದೆಂಬ ಲಿಂಗವನ್ನು ಈ ಎರಡು ವಾಕ್ಯಗಳಲ್ಲಿ ತಿಳಿಸಿದೆ.

ಮೃತ್ಯುನಾ ತೈಸ್ತೈಃ ಕಾಮೈಃ ಪ್ರಲೋಭ್ಯಮಾನೋಽಪಿ ನಚಿಕೇತಾ ಯದಾ ನ ಚಚಾಲ, ತದಾ ಏವಂ ಮೃತ್ಯುಃ ಅಭ್ಯುದಯನಿಃಶ್ರೇಯಸವಿಭಾಗ ಪ್ರದರ್ಶನೇನ ವಿದ್ಯಾವಿದ್ಯಾವಿಭಾಗಪ್ರದರ್ಶನೇನ ಚ "ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ ನ ತ್ವಾ ಕಾಮಾ ಬಹವೋಽಲೋಲುಪನ್ತ" (ಕ.೧-೨-೪) ಇತಿ ಪ್ರಶಸ್ಯ ಪ್ರಶ್ನಮಪಿ ತದೀಯಂ ಪ್ರಶಂಸನ್ ಯತ್ ಉವಾಚ "ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಮ್ । ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ'' (ಕ. ೧-೨-೧೨) ಇತಿ, ತೇನಾಪಿ ಜೀವ ಪ್ರಾಜ್ಞಯೋಃ ಅಭೇದ ಏವ ಇಹ ವಿವಕ್ಷಿತಃ ಇತಿ ಗಮ್ಯತೇ । ಯತ್ಪ್ರಶ್ನ ನಿಮಿತ್ತಾಂ ಚ ಪ್ರಶಂಸಾಂ ಮಹತೀಂ ಮೃತ್ಯೋಃ ಪ್ರತ್ಯಪದ್ಯತ ನಚಿಕೇತಾಃ, ಯದಿ ತಂ ವಿಹಾಯ ಪ್ರಶಂಸಾನನ್ತರಮ್ ಅನ್ಯಮೇವ ಪ್ರಶ್ನಮ್ ಉಪ ಕ್ಷಿಪೇತ್ ಅಸ್ಥಾನ ಏವ ಸಾ ಸರ್ವಾ ಪ್ರಶಂಸಾ ಪ್ರಸಾರಿತಾ ಸ್ಯಾತ್। ತಸ್ಮಾತ್ 'ಯೇಽಯಂ ಪ್ರೇತೇ' ಇತ್ಯಸ್ಯೈವ ಪ್ರಶ್ನಸ್ಯ ಏತದನುಕರ್ಷಣಮ್ 'ಅನ್ಯತ್ರ ಧರ್ಮಾತ್' ಇತಿ ॥

(ಭಾಷ್ಯಾರ್ಥ)

ಇದರಂತೆ ಜೀವವಿಷಯದಲ್ಲಿ ಇದಾನೊ, ಇಲ್ಲವೊ ?- ಎಂಬ ಪ್ರಶ್ನೆ ಯಾದ ಬಳಿಕ "ನಚಿಕೇತನೆ, ಮತ್ತೊಂದು ವರವನ್ನು ಕೇಳಿಕೊ'' (ಕ. ೧-೧-೨೧) ಎಂಬುದರಿಂದ ಹಿಡಿದು ಮೃತ್ಯುವು ಆಯಾ ಕಾಮಗಳ ಆಶೆಯನ್ನು ತೋರಿಸಿದರೂ ನಚಿಕೇತನು ಯಾವಾಗ ಕದಲಲಿಲ್ಲವೋ, ಆಗ ಮೃತ್ಯುವು ಅಭ್ಯುದಯನಿಃಶ್ರೇಯಸಗಳ ವಿವೇಕವನ್ನು ತಿಳಿಸುವದರ ಮೂಲಕವೂ ವಿದ್ಯಾ ವಿದ್ಯೆಗಳ ವಿವೇಕವನ್ನು ತಿಳಿಸುವದರ ಮೂಲಕವೂ "ನಚಿಕೇತನಾದ (ನೀನು) ವಿದ್ಯೆಯನ್ನೇ ಬಯಸುವವನೆಂದು ತಿಳಿಯುತ್ತೇನೆ; (ಏಕೆಂದರೆ) ನಿನ್ನನ್ನು ಬಹಳ ಕಾಮಗಳು ಸೆಳೆಯಲಿಲ್ಲ" (ಕ. ೧-೨-೪) ಎಂದು ಹೊಗಳಿ ಅವನ ಪ್ರಶ್ನೆಯನ್ನೂ ಹೊಗಳುತ್ತಾ "ಆ ದುರ್ದರ್ಶನಾದ, ಗುಹೆಯನ್ನು ಒಳ ಹೊಕ್ಕಿರುವ, ಗಹ್ವರೇಷ್ಠನಾದ ಪುರಾಣನಾದ ದೇವನನ್ನು ಧೀರನಾದವನು ಅಧ್ಯಾತ್ಮಯೋಗದ ಪ್ರಾಪ್ತಿಯಿಂದ ತಿಳಿದುಕೊಂಡು ಹರ್ಷಶೋಕಗಳನ್ನು ಬಿಡುವನು" (ಕ. ೧-೨-೧೨) ಎಂದು ಹೇಳಿದನಲ್ಲ, ಅದರಿಂದಲೂ ಇಲ್ಲಿ ಜೀವಪ್ರಾಜ್ಞರಿಗೆ ಅಭೇದವೇ ವಿವಕ್ಷಿತವಾಗಿದೆ ಎಂದು ನಿಶ್ಚಯವಾಗುತ್ತದೆ. ಮತ್ತು ಯಾವ ಪ್ರಶ್ನೆಯ ನಿಮಿತ್ತವಾಗಿ ಮೃತ್ಯುವಿನಿಂದ ಹೆಚ್ಚಿನ ಹೊಗಳಿಕೆ ಯನ್ನು ನಚಿಕೇತನು ಪಡೆದುಕೊಂಡನೋ ಅದನ್ನು ಬಿಟ್ಟು (ಹಾಗೆ) ಹೊಗಳಿದ ಬಳಿಕ ಬೇರೆಯೇ (ಒಂದು) ಪ್ರಶ್ನೆಯನ್ನು ಹಾಕಿದರೆ ಆ ಹೊಗಳಿಕೆಯೆಲ್ಲವೂ

ಅಯೋಗ್ಯವಾದ ವಿಷಯದಲ್ಲಿಯೇ ಬಿತ್ತರಿಸಿದಂತೆ ಆಗಿಬಿಟ್ಟೀತು. ಆದ್ದರಿಂದ "ಸತ್ತವನ ವಿಷಯದಲ್ಲಿ ಈ ಸಂಶಯವಿದೆಯಲ್ಲ" ಎಂದು (ಹಿಂದೆ ಕೇಳಿದ) ಆ (ಪ್ರಶ್ನೆಯನ್ನೇ) "ಧರ್ಮಕ್ಕಿಂತ ಬೇರೆ'' ಎಂದು ಈಗ ಎಳೆದುಕೊಂಡಿದೆ (ಎನ್ನುವದೇ ಸರಿ).

## ಎರಡನೆಯ ಆತ್ಮಪ್ರಶ್ನೆಯಲ್ಲಿ ಕಾಣುವ ವೈಲಕ್ಷಣ್ಯಕ್ಕೆ ಗತಿ

( ಭಾಷ್ಯ )

೩೫೧. ಯತ್ತು ಪ್ರಶ್ನಚ್ಛಾಯಾವೈಲಕ್ಷಣ್ಯಮ್ ಉಕ್ತಮ್, ತತ್ ಅದೂಷಣಮ್, ತದೀಯಸ್ಯೈವ ವಿಶೇಷಸ್ಯ ಪುನಃ ಪೃಚ್ಛ್ಯಮಾನತ್ವಾತ್ । ಪೂರ್ವತ್ರ ಹಿ ದೇಹಾದಿವ್ಯತಿರಿಕ್ತಸ್ಯ ಆತ್ಮನಃ ಅಸ್ತಿತ್ವಂಪೃಷ್ಟಮ್, ಉತ್ತರತ್ರ ತು ತಸ್ಯೈವ ಅಸಂಸಾರಿತ್ವಂ ಪೃಚ್ಛ್ಯತೇ ಇತಿ। ಯಾವದ್ ಹಿ ಅವಿದ್ಯಾ ನ ನಿವರ್ತತೇ ತಾವದ್ ಧರ್ಮಾದಿಗೋಚರತ್ವಂ ಜೀವಸ್ಯ ಜೀವತ್ವಂ ಚ ನ ನಿವರ್ತತೇ। ತನ್ನಿವೃತ್ತೌ ತು ಪ್ರಾಜ್ಞ ಏವ 'ತತ್ ತ್ವಮಸಿ' ಇತಿ ಶ್ರುತ್ಯಾ ಪ್ರತ್ಯಾಯ್ಯತೇ । ನ ಚ ಅವಿದ್ಯಾವತ್ತ್ವೇ ತದಪಗಮೇ ಚ ವಸ್ತುನಃ ಕಶ್ಚಿದ್ ವಿಶೇಷೋಽಸ್ತಿ । ಯಥಾ ಕಶ್ಚಿತ್ ಸಂತಮಸೇ ಪತಿತಾಂ ಕಾಂಚಿದ್ ರಜ್ಜುಮ್ ಅಹಿಂ ಮನ್ಯಮಾನಃ ಭೀತೋ ವೇಪಮಾನಃ ಪಲಾಯತೇ ತಂ ಚ ಅಪರೋ ಬ್ರೂಯಾತ್ ಮಾ ಭೈಷೀಃ ನಾಯಮಹಿಃ, ರಜ್ಜುರೇವ, ಇತಿ । ಸ ಚ ತತ್ ಉಪಶ್ರುತ್ಯ ಅಹಿಕೃತಂ ಭಯಮ್ ಉತ್ಸೃಜೇತ್ ವೇಪಥುಂ ಪಲಾಯನಂ ಚ । ನ ತು ಅಹಿಬುದ್ಧಿಕಾಲೇ ತದಪಗಮಕಾಲೇ ಚ ವಸ್ತುನಃ ಕಶ್ಚಿದ್ ವಿಶೇಷಃ ಸ್ಯಾತ್ । ತಥೈವ ಏತದಪಿ ದ್ರಷ್ಟವ್ಯಮ್ । ತತಶ್ಚ "ನ ಜಾಯತೇ ಮ್ರಿಯತೇ ವಾ" (೧-೨-೧೮) ಇತ್ಯೇವಮಾದ್ಯಪಿ ಭವತಿ ಅಸ್ತಿತ್ವಪ್ರಶ್ನಸ್ಯ ಪ್ರತಿವಚನಮ್ ॥

( ಭಾಷ್ಯಾರ್ಥ )

ಇನ್ನು ಪ್ರಶ್ನಚ್ಛಾಯೆಯಲ್ಲಿ ವೈಲಕ್ಷಣ್ಯ(ವಿದೆಯೆಂದು ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು (ನಮ್ಮ ಪಕ್ಷದ) ದೂಷಣವಲ್ಲ. ಏಕೆಂದರೆ ಅದೇ (ವಿಷಯದ) ವಿಶೇಷವನ್ನು ಮತ್ತೆ ಕೇಳಿರುತ್ತದೆ. ಹೇಗೆಂದರೆ ಹಿಂದೆ ದೇಹವೇ ಮುಂತಾದವುಗಳಿಗಿಂತ ವ್ಯತಿರಿಕ್ತನಾದ ಆತ್ಮನು ಇದ್ದಾನೆಯೆ ? (ಎಂಬುದನ್ನು) ಕೇಳಿಬಿಟ್ಟಿದೆ ; ಮುಂದೆಯಾದರೋ ಅವನಿಗೇ ಅಸಂಸಾರಿತ್ವವು (ಹೇಗೆ ಎಂಬುದನ್ನು) ಕೇಳಿದೆ. ಎಲ್ಲಿಯವರೆಗೆ ಅವಿದ್ಯೆಯು ತೊಲಗುವ

ದಿಲ್ಲವೋ ಅಲ್ಲಿಯವರೆಗೆ ಧರ್ಮಾದಿಗೋಚರನಾಗಿರುವದೆಂಬುದೂ ಜೀವತ್ವವೂ ತೊಲಗುವದಿಲ್ಲ. ಅದು ತೊಲಗಿದರೋ, ಪ್ರಾಜ್ಞನನ್ನೇ 'ಅದು ನೀನಾಗಿರುವೆ' ಎಂದು ಶ್ರುತಿಯು ತಿಳಿಸಿಕೊಡುತ್ತದೆ. **ಅವಿದ್ಯೆಗೆ ವಿಷಯವಾಗಿರುವ ಲ್ಲಾಗಲಿ ಅದು ತೊಲಗುವಲ್ಲಾಗಲಿ ವಸ್ತುವಿಗೆ ಯಾವ ವಿಶೇಷವೂ ಇರುವದಿಲ್ಲ. ಹೇಗೆಂದರೆ ನಸುಗತ್ತಲೆಯಲ್ಲಿ ಬಿದ್ದಿರುವ ಒಂದಾನೊಂದು ಹಗ್ಗವನ್ನು ಹಾವೆಂದು ಭಾವಿಸಿಕೊಂಡು ಒಬ್ಬನು ಹೆದರಿಕೆಯಿಂದ ನಡುಗುತ್ತಾ ಓಡುತ್ತಾನೆ. ಅವನನ್ನು (ಕುರಿತು) ಮತ್ತೊಬ್ಬನು "ಅಂಜದಿರು; ಇದು ಹಾವಲ್ಲ, ಹಗ್ಗವೇ" ಎಂದು ಹೇಳುತ್ತಾನೆ. ಅವನು ಅದನ್ನು ಕೇಳಿ ಹಾವಿನಿಂದಾಗಿದ್ದ ಅಂಜಿಕೆಯನ್ನೂ ನಡುಕವನ್ನೂ ಓಟವನ್ನೂ ಬಿಟ್ಟುಬಿಡುತ್ತಾನೆ. ಆದರೆ ಹಾವೆಂದು ತಿಳಿದ ಕಾಲದಲ್ಲಾಗಲಿ ಆ ತಿಳಿವಳಿಕೆಯು ತೊಲಗಿದ ಕಾಲದಲ್ಲಾಗಲಿ ವಸ್ತುವಿನಲ್ಲಿ ಯಾವದೊಂದು ವಿಶೇಷವೂ ಆಗುವದಿಲ್ಲ.** (ಅಲ್ಲವೆ?) **ಇದೂ ಅದರಂತೆಯೇ ಎಂದರಿಯಬೇಕು.** ಇದರಿಂದ "ಹುಟ್ಟುವದಿಲ್ಲ, ಸಾಯುವದೂ ಇಲ್ಲ" (೧-೨-೧೮) ಎಂಬುದೇ ಮುಂತಾದದ್ದು (ಆತ್ಮನು) ಇದಾನೆಯೆ? ಎಂಬ ಪ್ರಶ್ನೆಗೆ ಉತ್ತರವೇ ಆಗುತ್ತದೆ.

## ಸೂತ್ರದಲ್ಲಿ ಮೂರು ವಿಷಯಗಳ ಪ್ರಶ್ನೆ ಎಂಬದ್ದು ಹೇಗೆ?

(ಭಾಷ್ಯ)

೩೫೨. ಸೂತ್ರಂ ತು ಅವಿದ್ಯಾಕಲ್ಪಿತಜೀವಪ್ರಾಜ್ಞಭೇದಾಪೇಕ್ಷಯಾ ಯೋಜಯಿತವ್ಯಮ್ । ಏಕತ್ವೇಽಪಿ ಹಿ ಆತ್ಮವಿಷಯಸ್ಯ ಪ್ರಶ್ನಸ್ಯ ಪ್ರಾಯಣಾವಸ್ಥಾಯಾಂ ದೇಹವ್ಯತಿರಿಕ್ತಾಸ್ತಿತ್ವಮಾತ್ರವಿಚಿಕಿತ್ಸನಾತ್ ಕರ್ತೃತ್ವಾದಿಸಂಸಾರಸ್ವಭಾವಾನಪೋಹನಾಚ್ಚ ಪೂರ್ವಸ್ಯ ಪರ್ಯಾಯಸ್ಯ ಜೀವವಿಷಯತ್ವಮ್ ಉತ್ಪ್ರೇಕ್ಷ್ಯತೇ । ಉತ್ತರಸ್ಯ ತು ಧರ್ಮಾದ್ಯತ್ಯಯಸಂಕೀರ್ತನಾತ್ ಪ್ರಾಜ್ಞವಿಷಯತ್ವಮ್ ಇತಿ । ತತಶ್ಚ ಯುಕ್ತಾ ಅಗ್ನಿಜೀವಪರಮಾತ್ಮಕಲ್ಪನಾ । ಪ್ರಧಾನಕಲ್ಪನಾಯಾಂ ತು ನ ವರಪ್ರದಾನಮ್ ನ ಪ್ರಶ್ನಃ, ನ ಪ್ರತಿವಚನಮ್ ಇತಿ ವೈಷಮ್ಯಮ್ ॥

(ಭಾಷ್ಯಾರ್ಥ)

. ಸೂತ್ರವಾದರೆ ಅವಿದ್ಯಾಕಲ್ಪಿತವಾದ ಜೀವಪ್ರಾಜ್ಞಭೇದದ ಅಪೇಕ್ಷೆಯಿಂದ[1] (ಹೇಳಿದ್ದೆಂದು) ಹೊಂದಿಸಬೇಕು. ಆತ್ಮವಿಷಯದ ಪ್ರಶ್ನೆಯು

---

1. ಜೀವಪ್ರಾಜ್ಞರು ನಿಜವಾಗಿ ಇಬ್ಬರಲ್ಲವಾದರೂ ಅವಿದ್ಯಾಕಲ್ಪನೆಯಿಂದ ಜನರು ಇಬ್ಬರೆಂತ ವ್ಯವಹರಿಸುವದನ್ನು ಇಟ್ಟುಕೊಂಡು ಎಂದರ್ಥ.

ಒಂದೇ ಆದರೂ ಸಾಯುವ ಅವಸ್ಥೆಯಲ್ಲಿ ದೇಹಕ್ಕಿಂತ ಬೇರೆಯಾಗಿ ಇದಾನೆಯೆ ?– ಎಂಬಿಷ್ಟನ್ನೇ ಸಂಶಯಪಟ್ಟಿರುವವರಿಂದಲೂ ಕರ್ತೃತ್ವವೇ ಮುಂತಾದ ಸಂಸಾರಸ್ವಭಾವವನ್ನು ಕಳೆದುಹಾಕಿರುವದಿಲ್ಲವಾದ್ದರಿಂದಲೂ ಮೊದಲನೆಯ ಸಲದ (ಪ್ರಶ್ನೆಯು) ಜೀವವಿಷಯವೆಂದು ಊಹಿಸಬೇಕಾಗಿದೆ ; ಮುಂದಿನ (ಪ್ರಶ್ನೆ)ಯೋ ಎಂದರೆ ಧರ್ಮವೇ ಮುಂತಾದದ್ದನ್ನು ಮೀರಿರುವ ವಿಷಯವನ್ನು ಹೇಳಿರುವದರಿಂದ ಪ್ರಾಜ್ಞವಿಷಯಕ(ವೆಂದು ಊಹಿಸಬೇಕಾಗಿದೆ). ಅದರಿಂದ ಅಗ್ನಿ, ಜೀವ, ಪರಮಾತ್ಮ– (ಎಂದು ಮೂರು ವಿಷಯಗಳ ಪ್ರಶ್ನೆಗಳೆಂದು) ಕಲ್ಪಿಸಿರುವದು ಯುಕ್ತವಾಗಿರುತ್ತದೆ. ಆದರೆ ಪ್ರಧಾನಕಲ್ಪನೆಯ (ವಿಷಯದಲ್ಲಿಯೋ) ಎಂದರೆ ವರಪ್ರದಾನವೂ ಇಲ್ಲ, ಪ್ರಶ್ನೆಯೂ ಇಲ್ಲ, ಉತ್ತರವೂ ಇಲ್ಲ , ಆದ್ದರಿಂದ (ಇವೆರಡು ಕಲ್ಪನೆಗಳಿಗೂ) ಹೆಚ್ಚುಕಡಿಮೆ(ಯಿದೆ).

## ಮಹದ್ವಚ್ಚ ॥ ೭ ॥

೭. ಮತ್ತು ಮಹತ್ತಿನಂತೆ (ಅವ್ಯಕ್ತವೂ ಸಾಂಖ್ಯರದಲ್ಲ).

## ಮಹತ್ತಿನಂತೆಯೇ ಅವ್ಯಕ್ತವು ಸಾಂಖ್ಯಪ್ರಕ್ರಿಯೆಗೆ ಸೇರಿಲ್ಲ

(ಭಾಷ್ಯ)

೩೫೩ ಯಥಾ ಮಹಚ್ಛಬ್ದಃ ಸಾಙ್ಖ್ಯೈಃ ಸತ್ತಾಮಾತ್ರೇಽಪಿ ಪ್ರಥಮಜೇ ಪ್ರಯುಕ್ತೋ ನ ತಮೇವ ವೈದಿಕೇಽಪಿ ಪ್ರಯೋಗೇ ಅಭಿಧತ್ತೇ । "ಬುದ್ಧೇರಾತ್ಮಾ ಮಹಾನ್ ಪರಃ" (ಕ. ೧–೩–೧೦), "ಮಹಾನ್ತಂ ವಿಭುಮಾತ್ಮಾನಮ್" (ಕ. ೧–೨–೨೨), "ವೇದಾಹಮೇತಂ ಪುರುಷಂ ಮಹಾನ್ತಮ್" (ಶ್ವೇ ೩–೮) ಇತ್ಯೇವಮಾದಾ ಆತ್ಮಶಬ್ದಪ್ರಯೋಗಾದಿಭ್ಯೋ ಹೇತುಭ್ಯಃ । ತಥಾ ಅವ್ಯಕ್ತಶಬ್ದೋಽಪಿ ನ ವೈದಿಕೇ ಪ್ರಯೋಗೇ ಪ್ರಧಾನಮ್ ಅಭಿಧಾತುಮರ್ಹತಿ । ಅತಶ್ಚ ನಾಸ್ತಿ ಆನುಮಾನಿಕಸ್ಯ ಶಬ್ದವತ್ತ್ವಮ್ ॥

(ಭಾಷ್ಯಾರ್ಥ)

ಹೇಗೆ ಮಹತ್ತೆಂಬ ಶಬ್ದವನ್ನು ಸಾಂಖ್ಯರು ಮೊದಲು ಹುಟ್ಟುವ ಸತ್ತಾಮಾತ್ರ (ವಸ್ತು ತಿಳಿಸುವದಕ್ಕೆ) ಪ್ರಯೋಗಮಾಡಿದರೂ "ಬುದ್ಧಿಗಿಂತ ಮಹಾನ್ ಆತ್ಮನು ಹೆಚ್ಚಿನವನು" (ಕ. ೧–೩–೧೦), "ಮಹಾನ್ತನಾದ ವಿಭುವಾದ ಆತ್ಮನನ್ನು" (ಕ. ೧–೨–೨೨), "ಈ ಮಹಾಪುರುಷನನ್ನು ನಾನು ಬಲ್ಲೆನು" (ಶ್ವೇ. ೩–೮) ಎಂದು ಮುಂತಾದ (ವಾಕ್ಯಗಳಲ್ಲಿ) ಆತ್ಮಶಬ್ದವನ್ನು

ಪ್ರಯೋಗಿಸಿರುವದೇ ಮುಂತಾದ ಕಾರಣಗಳಿಂದ, (ಆತ್ಮಶಬ್ದವು) ವೈದಿಕ ಪ್ರಯೋಗದಲ್ಲಿಯೂ ಅದನ್ನೇ ಹೇಳುವದಿಲ್ಲವೋ,[1] ಹಾಗೆಯೇ ಅವ್ಯಕ್ತಶಬ್ದವೂ ವೈದಿಕಪ್ರಯೋಗದಲ್ಲಿ ಪ್ರಧಾನವನ್ನು ಹೇಳಲಾರದು. ಆದ್ದರಿಂದಲೂ ಆನುಮಾನಿಕ(ವಾದ ಪ್ರಧಾನವು) ಶಬ್ದ(ಪ್ರಮಾಣ)ವುಳ್ಳದ್ದೆಂಬುದು (ಸ)ಯುಲ್ಲ.

## ೨. ಚಮಸಾಧಿಕರಣ ( ೮–೧೦ )

(ಶ್ವೇ. ೪–೫ರಲ್ಲಿ 'ಅಜಾ' ಎಂಬ ಮಾತು ಭೂತತ್ರಯಲಕ್ಷಣವಾದ ಪ್ರಕೃತಿಯನ್ನು ಹೇಳುತ್ತದೆ).

**ಚಮಸವದವಿಶೇಷಾತ್ ॥ ೮ ॥**

೮. ಚಮಸದಂತೆ ಅವಿಶೇಷವಾಗಿರುವದರಿಂದ (ಅಜಾಶಬ್ದವು ಪ್ರಧಾನವಾಚಕವಲ್ಲ.

### ಪೂರ್ವಪಕ್ಷ: ಪ್ರಧಾನವನ್ನೂ ಶ್ವೇತಾಶ್ವತರದಲ್ಲಿ ಹೇಳಿದೆ

( ಭಾಷ್ಯ )

೩೫೮. ಪುನರಪಿ ಪ್ರಧಾನವಾದೀ ಅಶಬ್ದತ್ವಂ ಪ್ರಧಾನಸ್ಯ ಅಸಿದ್ಧಮ್ ಇತ್ಯಾಹ । ಕಸ್ಮಾತ್ ? ಮನ್ತ್ರವರ್ಣಾತ್ "ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ । ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ" (ಶ್ವೇ. ೪–೫) ಇತಿ । ಅತ್ರ ಹಿ ಮನ್ತ್ರೇ ಲೋಹಿತಶುಕ್ಲಕೃಷ್ಣಶಬ್ದೈಃ ರಜಃಸತ್ತ್ವತಮಾಂಸ್ಯಭಿಧೀಯನ್ತೇ । ಲೋಹಿತಂ ರಜಃ ।

---

1. ಮಹತ್ತನ್ನು ಸತ್ತಾಮಾತ್ರವೆಂದು ಭಾಷ್ಯಕಾರರು ಏತಕ್ಕೆ ಕರೆದಿರುವರೋ ತಿಳಿಯದು. ವ್ಯಾಖ್ಯಾನಗಳಲ್ಲಿ ಈ ವಿಷಯಕ್ಕೆ ಐಕಮತ್ಯವಿಲ್ಲ. (೧) ಸತ್ತ್ವಪ್ರಧಾನವಾದ ಪ್ರಕೃತಿಯ ಮೊದಲನೆಯ ಪರಿಣಾಮ, ನಿರ್ವಿಕಲ್ಪಕಬುದ್ಧಿ ಎಂದು ರ॥ ಪ್ರ॥ ; 'ಪುರುಷಾರ್ಥವು ಮಹತ್ತೆಂಬ ಬುದ್ಧಿಯ ಕಾರ್ಯವಾಗಿರುವದರಿಂದ ಫಲದ ಕಾರಣವನ್ನು ಸತ್ತೆಂದಿದೆ. ಮಹತ್ತು ಪ್ರತ್ಯಕ್ಷವಲ್ಲವೆಂಬುವನ್ನು ತಿಳಿಸುವದಕ್ಕೆ ಮಾತ್ರಶಬ್ದವು ಬಂದಿದೆ ಎಂದು ನ್ಯಾ॥ ನಿ॥ ; ಶಬ್ದಾದಿಗಳನ್ನು ಭೋಗಿಸುವದು, ಸತ್ತ್ವಪುರುಷರನ್ನು ಬೇರ್ಪಡಿಸುವದು ಎಂದು ಪುರುಷಾರ್ಥಕ್ರಿಯೆಯು ಮಹತ್ತೆಂಬ ಬುದ್ಧಿಯಲ್ಲಿ ಸಮಾಪ್ತಿಯಾಗುತ್ತವೆಯಾದ್ದರಿಂದ ಮಹತ್ತತ್ತ್ವವನ್ನು ಸತ್ತಾಮಾತ್ರವೆಂದಿದೆ- ಎಂದು ಭಾಮತೀವ್ಯಾಖ್ಯಾನ.

ರಞ್ಜನಾತ್ಮಕತ್ವಾತ್ | ಶುಕ್ಲಂ ಸತ್ತ್ವಮ್ । ಪ್ರಕಾಶಾತ್ಮಕತ್ವಾತ್ | ಕೃಷ್ಣಂ ತಮಃ | ಆವರಣಾತ್ಮಕತ್ವಾತ್ । ತೇಷಾಂ ಸಾಮ್ಯಾವಸ್ಥಾ ಅವಯವ ಧರ್ಮೈಃ ವ್ಯಪದಿಶ್ಯತೇ 'ಲೋಹಿತಶುಕ್ಲಕೃಷ್ಣಾ' ಇತಿ | ನ ಜಾಯತೇ ಇತಿ ಚ ಅಜಾ ಸ್ಯಾತ್ | "ಮೂಲಪ್ರಕೃತಿರವಿಕೃತಿಃ" (ಸಾಂ ಕಾಂ. ೩ ) ಇತ್ಯಭ್ಯುಪಗಮಾತ್ | ನನು ಅಜಾಶಬ್ದಃ ಛಾಗಾಯಾಂ ರೂಢಃ। ಬಾಢಮ್। ಸಾ ತು ರೂಢಿರಿಹ ನಾಶ್ರಯಿತುಂ ಶಕ್ಯಾ | ವಿದ್ಯಾಪ್ರಕರಣಾತ್ | ಸಾ ಚ ಬಹ್ವೀಃ ಪ್ರಜಾಃ ತ್ರೈಗುಣ್ಯಾನ್ವಿತಾಃ ಜನಯತಿ | ತಾಂ ಪ್ರಕೃತಿಮ್ ಅಜ ಏಕಃ ಪುರುಷಃ ಜುಷಮಾಣಃ ಪ್ರೀಯಮಾಣಃ ಸೇವಮಾನೋ ವಾ ಅನುಶೇತೇ | ತಾಮೇವ ಅವಿದ್ಯಯಾ ಆತ್ಮತ್ವೇನ ಉಪಗಮ್ಯ 'ಸುಖೀ,' 'ದುಃಖೀ' 'ಮೂಢೋಽಹಮ್' ಇತಿ ಅವಿವೇಕತಯಾ[1] ಸಂಸರತಿ । ಅನ್ಯಃ ಪುನರಜಃ ಪುರುಷಃ ಉತ್ಪನ್ನವಿವೇಕಜ್ಞಾನಃ ವಿರಕ್ತಃ, ಜಹಾತಿ ಏನಾಂ ಪ್ರಕೃತಿಂ ಭುಕ್ತಭೋಗಾಂ ಕೃತಭೋಗಾಪವರ್ಗಾಂ ಪರಿತ್ಯಜತಿ । ಮುಚ್ಯತೇ ಇತ್ಯರ್ಥಃ । ತಸ್ಮಾತ್ ಶ್ರುತಿಮೂಲೈವ ಪ್ರಧಾನಾದಿಕಲ್ಪನಾ ಕಾಪಿಲಾನಾಮ್ ಇತಿ ||

(ಭಾಷ್ಯಾರ್ಥ)

ಈಗ ಮತ್ತೂ ಪ್ರಧಾನವಾದಿಯು ಪ್ರಧಾನವು ಅಶಬ್ದವೆಂಬುದು ಅಸಿದ್ಧ ವೆನ್ನುತ್ತಾನೆ. ಅದೇಕೆ ? ಎಂದರೆ "ಕೆಂಪು, ಬಿಳಿದು, ಕಪ್ಪು– (ಈ) ರೂಪ ವಾಗಿರುವ, ಸರೂಪರಾದ ಬಹುಪ್ರಜೆಗಳನ್ನು ಸೃಷ್ಟಿಸುತ್ತಿರುವ, ಒಂದು ಅಜೆಯನ್ನು ಹೊಂದಿಕೊಂಡು ಒಂದು ಅಜನು ಜೊತೆಯಲ್ಲಿ ಮಲಗಿರುತ್ತದೆ; ಭುಕ್ತಭೋಗವಾದ ಈ (ಅಜೆಯನ್ನು) ಇನ್ನೊಂದು ಅಜನು ಬಿಡುತ್ತದೆ" (ಶ್ವೇ. ೪-೫) ಎಂದು ಮಂತ್ರವರ್ಣವಿರುವದರಿಂದ ಹೇಗೆಂದರೆ ಈ ಮಂತ್ರ ದಲ್ಲಿ ಕೆಂಪು, ಬಿಳಿದು, ಕಪ್ಪು– ಎಂಬ ಮಾತುಗಳಿಂದ ರಜಸ್ಸು, ಸತ್ತ್ವ, ತಮಸ್ಸು – ಇವುಗಳನ್ನು ಹೇಳಿರುತ್ತದೆ. (ಇಲ್ಲಿ) ಕೆಂಪೆಂದರೆ ರಜಸ್ಸು; ಏಕೆಂದರೆ (ಅದು) ರಂಗುಮಾಡುವದಾಗಿರುತ್ತದೆ. ಬಿಳಿದೆಂದರೆ ಸತ್ತ್ವವು ಏಕೆಂದರೆ (ಅದು) ಪ್ರಕಾಶಸ್ವರೂಪವಾಗಿರುತ್ತದೆ. ಕಪ್ಪು ಎಂದರೆ ತಮಸ್ಸು ; ಏಕೆಂದರೆ (ಅದು) ಆವರಣರೂಪವಾಗಿರುತ್ತದ. ಈ (ಸತ್ತ್ವರಜಸ್ತಮಸ್ಸುಗಳ) ಸಾಮ್ಯಾವಸ್ಥೆ(ಯಾದ ಪ್ರಧಾನವನ್ನು) 'ಲೋಹಿತಶುಕ್ಲಕೃಷ್ಣ' ಎಂದು ಶ್ರುತಿ ಯಲ್ಲಿ(ಅದರ)ಅವಯವಧರ್ಮಗಳಿಂದ ಹೇಳಿರುತ್ತದೆ. (ಅದು) ಹುಟ್ಟುವದಿಲ್ಲ ವಾದ್ದರಿಂದ 'ಅಜಾ' ಎಂದಾಗಬಹುದು ; "ಮೂಲಪ್ರಕೃತಿಯು ವಿಕೃತಿಯಲ್ಲ" (ಸಾಂ. ಕಾ. ೩ ) ಎಂದು (ಸಾಂಖ್ಯರು) ಒಪ್ಪಿರುವದರಿಂದ (ಈ ಅರ್ಥವನ್ನು ಮಾಡಬಹುದು). ಅಜಾಶಬ್ದವು ಹೆಣ್ಣಾಡಿನಲ್ಲಿ ರೂಢವಾಗಿದೆಯಲ್ಲ !– ಎಂದು

1. 'ಅವಿವೇಕಿತಯಾ' ಎಂದಿದ್ದರೆ ಮೇಲು.

(ಆಕ್ಷೇಪಿಸಬಹುದು). (ಅದು) ಸಿಜ. ಆದರೆ ಆ ರೂಢಿಯನ್ನು ಇ ಆಶ್ರಯಿಸುವದಕ್ಕೆ ಬರುವದಿಲ್ಲ; ಏಕೆಂದರೆ (ಇದು) ಜ್ಞಾನಪ್ರಕರಣವಾಗಿ ತ್ತದೆ. ಇನ್ನು ಆ (ಅಜೆಯು ಸರೂಪರಾದ) ತ್ರೈಗುಣ್ಯದಿಂದ ಕೂಡಿದ ಬಹ ಪ್ರಜೆಗಳನ್ನು ಉಂಟುಮಾಡುತ್ತದೆ. ಆ ಪ್ರಕೃತಿಯನ್ನು ಒಂದು ಅಜ ಎಂದರೆ ಒಬ್ಬ ಪುರುಷನು ಹೊಂದಿಕೊಂಡು ಎಂದರೆ ಪ್ರೀತಿಯಿಂದ ಆಥ ಸೇವಿಸುತ್ತಾ[1] ಹತ್ತಿರ ಮಲಗಿಕೊಂಡಿರುತ್ತಾನೆ; ಎಂದರೆ ಅದನ್ನೇ ಅವಿ ಯಿಂದ ತಾನೆಂದು ಇಟ್ಟುಕೊಂಡು ನಾನು ಸುಖಿಯು, ದುಃಖಿಯು ಮೂಢನು ಎಂದೂ ಅವಿವೇಕದಿಂದ ಸಂಸಾರದಲ್ಲಿ ತೊಳಲುತ್ತಾನೆ. ಆದ ಇನ್ನೊಂದು ಅಜನು ಎಂದರೆ ವಿವೇಕಜ್ಞಾನವುಂಟಾಗಿರುವ ವಿರಕ್ತನಾ ಪುರುಷನು ಭುಕ್ತಭೋಗವಾದ, ಎಂದರೆ ಭೋಗಾಪವರ್ಗಗಳನ್ನು ಮಾ ಕೊಟ್ಟಿರುವ,[2] ಈ ಪ್ರಕೃತಿಯನ್ನು ಬಿಡುತ್ತಾನೆ, ಮುಕ್ತನಾಗುತ್ತಾನೆ ಎಂದರ್ಥ. ಆದ್ದರಿಂದ ಕಾಪಿಲರು ಪ್ರಧಾನವೇ ಮುಂತಾದದ್ದನ್ನು ಕಲ್ಪಿಸಿ ವದು ಶ್ರುತಿಮೂಲದಿಂದಲೇ (ಆಗಿರುತ್ತದೆ).

## ಸಿದ್ಧಾಂತ: ಅಜಾ ಎಂಬ ಶಬ್ದವು ಸಾಮಾನ್ಯವಾಚಕ

( ಭಾಷ್ಯ )

೩೫೫. ಏವಂ ಪ್ರಾಪ್ತೇ ಬ್ರೂಮಃ । ನಾನೇನ ಮನ್ತ್ರೇಣ ಶ್ರು ಮತ್ತ್ವಂ ಸಾಙ್ಖ್ಯವಾದಸ್ಯ ಶಕ್ಯಮ್ ಆಶ್ರಯಿತುಮ್ । ನ ಹಿ ಅಯ ಮನ್ತ್ರಃ ಸ್ವಾತನ್ತ್ರ್ಯೇಣ ಕಂಚಿದಪಿ ವಾದಂ ಸಮರ್ಥಯಿತುಮ್ ಉತ್ಸಹತೇ ಸರ್ವತ್ರಾಪಿ ಯಯಾಕಯಾಚಿತ್ ಕಲ್ಪನಯಾ ಅಜಾತ್ವಾದಿಸಂಪಾದನೋಃ ಪತ್ತೇಃ ಸಾಙ್ಖ್ಯವಾದ ಏವ ಇಹ ಅಭಿಪ್ರೇತಃ ಇತಿ ವಿಶೇಷಾವಧಾರಣಕಾರಣ ಭಾವಾತ್ । ಚಮಸವತ್ । ಯಥಾ ಹಿ "ಅರ್ವಾಗ್ಬಿಲಶ್ಚಮಸ ಊರ್ಧ್ವ ಬುಧ್ನಃ" ಇತ್ಯಸ್ಮಿನ್ ಮನ್ತ್ರೇ ಸ್ವಾತನ್ತ್ರ್ಯೇಣ ಅಯಂ ನಾಮ ಅಸ ಚಮಸೋಽಭಿಪ್ರೇತಃ ಇತಿ ನ ಶಕ್ಯತೇ ನಿರೂಪಯಿತುಮ್। ಸರ್ವತ್ರಾಪಿ ಯಥಾಕಥಂಚಿತ್ ಅರ್ವಾಗ್ಬಿಲತ್ವಾದಿಕಲ್ಪನೋಪಪತ್ತೇಃ । ಏವಮ್ ಇಹಾಪಿ ಅವಿಶೇಷಃ ಅಜಾಮೇಕಾಮ್ ಇತ್ಯಸ್ಯ ಮನ್ತ್ರಸ್ಯ । ನಾಸ್ಮಿನ್ ಮನ್ತ್ರೇ ಪ್ರಧಾನಮೇವ ಅಜಾ ಅಭಿಪ್ರೇತಾ ಇತಿ ಶಕ್ಯತೇ ನಿಯನ್ತುಮ್ ॥

---

1 ಜುಷೀ ಪ್ರೀತಿಸೇವನಯೋಃ ಎಂಬ ಧಾತುವಿನ ಅರ್ಥಗಳೆರಡನ್ನೂ ಇಲ್ಲಿ ತೆಗೆದ ಕೊಂಡಿದೆ.

2 ಪ್ರಕೃತಿಯಿಂದಲೇ ಪುರುಷನಿಗೆ ಭೋಗಾಪವರ್ಗಗಳಾಗುವವು ಎಂದು ಭಾವ.

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಈ ಮಂತ್ರದಿಂದ ಸಾಂಖ್ಯವಾದಕ್ಕೆ ಶ್ರುತಿ(ಪ್ರಮಾಣ)ವಿದೆ ಎಂದು ಇಟ್ಟುಕೊಳ್ಳುವದಕ್ಕೆ ಆಗಲಾರದು. ಈ ಮಂತ್ರವು ತಾನೊಂದೇ ಯಾವದೊಂದು ವಾದವನ್ನೂ ಸಮರ್ಥಿಸಲೇ ಆರದು. ಏಕೆಂದರೆ ಯಾವದಾವರೊಂದು ಕಲ್ಪನೆಯಿಂದ ಅಜೆಯಾಗಿರುವದು ಮುಂತಾದದ್ದನ್ನು ಎಲ್ಲಕ್ಕೂ ಹೊಂದಿಸಬಹುದಾಗಿರುವದರಿಂದ ಸಾಂಖ್ಯವಾದವೇ ಇಲ್ಲಿ ಅಭಿಪ್ರೇತವಾಗಿದೆ ಎಂದು ಗೊತ್ತಾಗಿ ನಿಶ್ಚಯಿಸುವದಕ್ಕೆ ಕಾರಣವಿರುವದಿಲ್ಲ. ಚಮಸನಂತೆಯೇ ಇದು. "ಕೆಳಕ್ಕೆ ಬಾಯಿಯೂ ಮೇಲಕ್ಕೆ ತಳವೂ ಇರುವ ಚಮಸವು" (ಬೃ. ೨-೨-೩) ಎಂಬ ಮಂತ್ರದಲ್ಲಿ ಎಲ್ಲಾ (ಚಮಸಕ್ಕೂ) ಹೇಗೋ ಮಾಡಿ ಈ ಕೆಳಕ್ಕೆ ಬಾಯಿಯಿರುವದೇ ಮುಂತಾದದ್ದನ್ನು ಹೊಂದಿಸಬಹುದಾದ್ದರಿಂದ ಈ ಚಮಸವೆಂಬುದು ಇಂಥದ್ದೇ ಎಂದು (ಇಷ್ಟರಿಂದಲೇ) ಸ್ವತಂತ್ರವಾಗಿ ಗೊತ್ತುಪಡಿಸುವದಕ್ಕೆ ಹೇಗೆ ಆಗುವದಿಲ್ಲವೋ ಹಾಗೆಯೇ ಇಲ್ಲಿಯೂ "ಅಜಾಮೇಕಾಮ್" ಎಂಬೀ ಮಂತ್ರವೂ ಅವಿಶೇಷವಾಗಿರುತ್ತದೆ. ಈ ಮಂತ್ರದಲ್ಲಿ ಪ್ರಧಾನವೇ ಅಜಾ (ಎಂಬ ಶಬ್ದದಿಂದ) ಅಭಿಪ್ರೇತವಾಗಿದೆ ಎಂದು ಗೊತ್ತುಪಡಿಸುವದಕ್ಕೆ ಆಗುವಂತಿಲ್ಲ.

**ಜ್ಯೋತಿರುಪಕ್ರಮಾ ತು ತಥಾ ಹ್ಯಧೀಯತ ಏಕೇ ॥ ೯ ॥**

೯. ಜ್ಯೋತಿಯೇ ಮುಂತಾದ (ರೂಪದ ಪ್ರಕೃತಿಯೇ ಅಜೆಯು); ಏಕೆಂದರೆ ಕೆಲವರು ಹಾಗೆಂದು ಅಧ್ಯಯನಮಾಡುತ್ತಾರೆ.

## ತೇಜೋಽಬನ್ನರೂಪವಾದ ಪ್ರಕೃತಿಯೇ ಅಜಾಶಬ್ದವಾಚ್ಯವಾದದ್ದು

(ಭಾಷ್ಯ)

**೩೫೬. ತತ್ರ ತು "ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ" (ಬೃ. ೨-೨-೩) ಇತಿ ವಾಕ್ಯಶೇಷಾತ್ ಚಮಸವಿಶೇಷಪ್ರತಿಪತ್ತಿರ್ಭವತಿ । ಇಹ ಪುನಃ ಕೇಯಮ್ ಅಜಾ ಪ್ರತಿಪತ್ತವ್ಯಾ ಇತಿ? ಅತ್ರ ಬ್ರೂಮಃ । ಪರಮೇಶ್ವರಾತ್ ಉತ್ಪನ್ನಾ ಜ್ಯೋತಿಃಪ್ರಮುಖಾ ತೇಜೋಽಬನ್ನಲಕ್ಷಣಾ ಚತುರ್ವಿಧಸ್ಯ ಭೂತಗ್ರಾಮಸ್ಯ ಪ್ರಕೃತಿಭೂತಾ ಇಯಮ್ ಅಜಾ**

ಪ್ರತಿಪತ್ತವ್ಯಾ। ತುಶಬ್ದಃ ಅವಧಾರಣಾರ್ಥಃ। ಭೂತತ್ರಯಲಕ್ಷಣೈವ ಇಯಮ್ ಅಜಾ ವಿಜ್ಞೇಯಾ ನ ಗುಣತ್ರಯಲಕ್ಷಣಾ। ಕಸ್ಮಾತ್? ತಥಾ ಹಿ ಏಕೇ ಶಾಖಿನಃ ತೇಜೋಽಬನ್ನಾನಾಂ ಪರಮೇಶ್ವರಾತ್ ಉತ್ಪತ್ತಿಮ್ ಆಮ್ನಾಯ ತೇಷಾಮೇವ ರೋಹಿತಾದಿರೂಪತಾಮ್ ಆಮನನ್ತಿ– "ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ ಕೃಷ್ಣಂ ತದನ್ನಸ್ಯ" (ಛಾಂ. ೬-೪-೧) ಇತಿ। ತಾನ್ಯೇವ ಇಹ ತೇಜೋಽಬನ್ನಾನಿ ಪ್ರತ್ಯಭಿಜ್ಞಾಯನ್ತೇ ರೋಹಿತಾದಿಶಬ್ದಸಾಮಾನ್ಯಾತ್। ರೋಹಿತಾದೀನಾಂ ಚ ಶಬ್ದಾನಾಂ ರೂಪವಿಶೇಷೇಷು ಮುಖ್ಯತ್ವಾತ್ ಭಾಕ್ತತ್ವಾಚ್ಚ ಗುಣವಿಷಯತ್ವಸ್ಯ। ಅಸಂದಿಗ್ಧೇನ ಚ ಸನ್ದಿಗ್ಧಸ್ಯ ನಿಗಮನಂ ನ್ಯಾಯ್ಯಂ ಮನ್ಯನ್ತೇ॥ ತಥಾ ಇಹಾಪಿ "ಬ್ರಹ್ಮವಾದಿನೋ ವದನ್ತಿ। ಕಿಂ ಕಾರಣಂ ಬ್ರಹ್ಮ" (ಶ್ವೇ. ೧-೧) ಇತ್ಯುಪಕ್ರಮ್ಯ 'ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್"(ಶ್ವೇ.೧-೩) ಇತಿ ಪಾರಮೇಶ್ವರ್ಯಾಃ ಶಕ್ತೇಃ ಸಮಸ್ತಜಗದ್ವಿಧಾಯಿನ್ಯಾ ವಾಕ್ಯೋಪಕ್ರಮೇ ಅವಗಮಾತ್, ವಾಕ್ಯಶೇಷೇಽಪಿ "ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್" (ಶ್ವೇ. ೪-೧೦) ಇತಿ, "ಯೋ ಯೋನಿಂ ಯೋನಿಮಧಿತಿಷ್ಠತ್ಯೇಕಃ" (ಶ್ವೇ. ೪-೧೧) ಇತಿ ಚ ತಸ್ಯಾ ಏವಾವಗಮಾನ್ನ ಸ್ವತನ್ತ್ರಾ ಕಾಚಿತ್ ಪ್ರಕೃತಿಃ ಪ್ರಧಾನಂ ನಾಮ ಅಜಾಮನ್ತ್ರೇಣ ಆಮ್ನಾಯತೇ ಇತಿ ಶಕ್ಯತೇ ವಕ್ತುಮ್। ಪ್ರಕರಣಾತ್ ತು ಸೈವ ದೈವೀ ಶಕ್ತಿಃ ಅವ್ಯಾಕೃತನಾಮರೂಪಾ ನಾಮರೂಪಯೋಃ ಪ್ರಾಗವಸ್ಥಾ ಅನೇನಾಪಿ ಮನ್ತ್ರೇಣ ಆಮ್ನಾಯತೇ ಇತ್ಯುಚ್ಯತೇ। ತಸ್ಯಾಶ್ಚ ಸ್ವವಿಕಾರವಿಷಯೇಣ ತ್ರೈರೂಪ್ಯೇಣ ತ್ರೈರೂಪ್ಯಮ್ ಉಕ್ತಮ್॥

( ಭಾಷ್ಯಾರ್ಥ )

ಆದರೆ ಆ (ಬೃಹದಾರಣ್ಯಕಮಂತ್ರ)ದಲ್ಲಿ "ಈ ಶಿರಸ್ಸೇ ಆ (ಚಮಸವು) ಇದೇ ಅಲ್ಲವೆ, ಕೆಳಕ್ಕೆ ಬಾಯಿಯುಳ್ಳ ಮೇಲಕ್ಕೆ ತಳವುಳ್ಳ ಚಮಸವು?" (ಬೃ. ೨-೨-೩) ಎಂಬ ವಾಕ್ಯಶೇಷದಿಂದ ಒಂದಾನೊಂದು ಗೊತ್ತಾದ ಚಮಸದ ಅರಿವಾಗುತ್ತದೆ. ಆದರೆ ಇಲ್ಲಿ ಈ ಅಜೆ ಎಂದು ಅರಿತುಕೊಳ್ಳಬೇಕಾದದ್ದು ಯಾವದು? ಎಂದರೆ ಆದಕ್ಕೆ ಹೇಳುತ್ತೇವೆ:

ಪರಮೇಶ್ವರನಿಂದ ಹುಟ್ಟಿದ ಜ್ಯೋತಿಯೇ ಮುಂತಾದ, ಎಂದರೆ ತೇಜೋಽಬನ್ನಸ್ವರೂಪವಾದ, ನಾಲ್ಕು ಬಗೆಯ ಭೂತಗ್ರಾಮಕ್ಕೆ ಕಾರಣ[1]

---

1. ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ– ಎಂಬ ನಾಲ್ಕು ಬಗೆಯ ಪ್ರಾಣಿವರ್ಗಕ್ಕೆ ತೇಜೋಽಬನ್ನರೂಪವಾದ ಭೂತಗಳೇ ಕಾರಣ.

ವಾಗಿರುವದೇ ಈ ಅಜೆ ಎಂದು ಅರಿಯಬೇಕು. ಈ (ಸೂತ್ರದಲ್ಲಿರುವ) ತು ಶಬ್ದವು ಅವಧಾರಣಾರ್ಥವುಳ್ಳದ್ದು; ಈ ಅಜೆ ಎಂಬುದು ಭೂತತ್ರಯಸ್ವರೂಪವಾದದ್ದೇ ಹೊರತು ಗುಣತ್ರಯಸ್ವರೂಪವಾದದ್ದಲ್ಲ.[1] ಏಕೆ? ಎಂದರೆ ಹಾಗೆಂದು ಒಂದು ಶಾಖೆಯವರು ತೇಜೋಽಬನ್ನಗಳಿಗೆ ಪರಮೇಶ್ವರನಿಂದ ಉತ್ಪತ್ತಿಯನ್ನು ಹೇಳಿದ ಬಳಿಕ "ಅಗ್ನಿಯ ಕೆಂಪುಬಣ್ಣವಿದೆಯಲ್ಲ, ಆ ಬಣ್ಣವು ತೇಜಸ್ಸಿನದು; ಬಿಳಿಯ (ಬಣ್ಣ)ವಿದೆಯಲ್ಲ, ಅದು ಅಪ್ಪಿನದು; ಕಪ್ಪು(ಬಣ್ಣವಿದೆ)ಯಲ್ಲ, ಅದು ಅನ್ನದ್ದು" (ಛಾಂ. ೬-೪-೧) ಎಂದು ಅವುಗಳಿಗೆ ಕೆಂಪು ಮುಂತಾದ ಬಣ್ಣವನ್ನು ಪಠಿಸಿರುತ್ತಾರೆ. ರೋಹಿತ (ಕೆಂಪು) ಮುಂತಾದ ಶಬ್ದಗಳು (ಎರಡು ಕಡೆಯಲ್ಲಿಯೂ) ಸಮಾನವಾಗಿರುವದರಿಂದ ಇಲ್ಲಿಯೂ ಅದೇ ತೇಜೋಽಬನ್ನಗಳನ್ನು ಗುರುತಿಸಿ ಅರಿಯಬಹುದಾಗಿದೆ; ಏಕೆಂದರೆ ರೋಹಿತವೇ ಮುಂತಾದ ಶಬ್ದಗಳು ಆಯಾ ಬಣ್ಣಗಳಲ್ಲಿ ಮುಖ್ಯ(ವೃತ್ತಿಯುಳ್ಳ)ವಾಗಿರುತ್ತವೆ: (ಸತ್ತ್ವಾದಿ) ಗುಣವಿಷಯವಾದರೆ ಗೌಣವಾಗುತ್ತವೆ. ಅಸಂದಿಗ್ಧವಾದದ್ದರಿಂದ ಸಂದಿಗ್ಧವಾದದ್ದನ್ನು ನಿಶ್ಚಯಿಸುವದು ಯುಕ್ತ[2]ವೆಂದು (ಮೀಮಾಂಸಕರು) ಅಭಿಪ್ರಾಯಪಡುತ್ತಾರೆ.

ಹಾಗೆಯೇ ಇಲ್ಲಿಯೂ "ಬ್ರಹ್ಮವಾದಿಗಳು ಹೇಳುತ್ತಾರೇನೆಂದರೆ: ಬ್ರಹ್ಮವು ಕಾರಣವೆ?"[3] (ಶ್ವೇ. ೧-೧) ಎಂದು ಉಪಕ್ರಮಿಸಿ "ಅವರು ಧ್ಯಾನಯೋಗವನ್ನು ಅನುಸರಿಸಿ ತನ್ನ ಗುಣಗಳಿಂದ[4] (ಕೂಡಿ) ನಿಗೂಢವಾಗಿರುವ ದೇವಾತ್ಮಶಕ್ತಿಯನ್ನು ಕಂಡುಕೊಂಡರು" (ಶ್ವೇ. ೧-೩) ಎಂದು ಸಮಸ್ತ ಜಗತ್ತನ್ನೂ ವ್ಯವಸ್ಥೆಗೊಳಿಸುವ ಪರಮೇಶ್ವರಶಕ್ತಿ ಎಂದು ವಾಕ್ಯದ ಉಪಕ್ರಮದಲ್ಲಿ ನಿಶ್ಚಯವಾಗಿರುವದರಿಂದ ವಾಕ್ಯಶೇಷದಲ್ಲಿಯೂ "ಪ್ರಕೃತಿಯನ್ನು ಮಾಯೆಯೆಂದು ತಿಳಿಯಬೇಕು, ಮಹೇಶ್ವರನನ್ನಾದರೆ ಮಾಯಿ ಎಂದು ತಿಳಿಯ

---

1. ಸತ್ತ್ವಾದಿಗುಣಗಳನ್ನು ಇಲ್ಲಿ ನಿರಾಕರಿಸಿದಂತೆ ಕಂಡರೂ ಅದರಲ್ಲಿ ತಾತ್ಪರ್ಯವಿಲ್ಲ. ಪೀಠಿಕೆಯನ್ನು ನೋಡಿ.

2. ಛಾಂದೋಗ್ಯಶ್ರುತಿಯು ಭೂತತ್ರಯವನ್ನು ತಿಳಿಸುವದಕ್ಕೆ ರೋಹಿತಾದಿ ಶಬ್ದಗಳನ್ನು ಪ್ರಯೋಗಿಸಿದೆ ಎಂಬುದು ಅಸಂದಿಗ್ಧವಾಗಿದೆ. ಆದ್ದರಿಂದ ಇಲ್ಲಿಯೂ ಆ ಶಬ್ದಗಳಿಗೆ ಅದೇ ಅರ್ಥವನ್ನು ಮಾಡುವದು ಯುಕ್ತ.

3. 'ಕಿಂಕಾರಣಮ್' ಎಂಬುದನ್ನು ಒಂದು ಪದವೆಂದು ಭಾವಿಸಿ ವ್ಯಾಖ್ಯಾನಕಾರರು ಬ್ರಹ್ಮಕ್ಕೆ ಉಪಕರಣವು ಯಾವದು? ಎಂಬರ್ಥವನ್ನು ತೆಗೆದಿರುತ್ತಾರೆ. ಆದರೆ ಈ ಮಂತ್ರದ ವಾಕ್ಯಶೇಷದಲ್ಲಿ ಅದಕ್ಕೆ ಪುಷ್ಟಿ ಇರುವಂತೆ ಕಾಣುವದಿಲ್ಲ.

4. ಸೃಷ್ಟ್ಯಾದಿಗಳನ್ನು ಮಾಡಬಲ್ಲ ಧರ್ಮಗಳಿಂದೊಡಗೂಡಿ ಎಂದರ್ಥ. ಸತ್ತ್ವಾದಿಗುಣಗಳಿಂದೊಡಗೂಡಿ ಎಂದು ರ॥ ಪ್ರ॥

ಬೇಕು)" (ಶ್ವೇ. ೪–೧೨), "ಯಾವನು ಯೋನಿಯೋನಿಯನ್ನೂ[1] ತಾನೊಬ್ಬನೇ ಮೇಲಿದ್ದು ಆಳುತ್ತಿರುವನೋ" (ಶ್ವೇ. ೪–೧೧) ಎಂದು ಅದೇ ನಿಶ್ಚಯವಾಗುತ್ತಿರುವದರಿಂದಲೂ ಸ್ವತಂತ್ರವಾದ ಪ್ರಧಾನವೆಂಬ ಒಂದಾನೊಂದು ಪ್ರಕೃತಿಯನ್ನು ಅಜಾಮಂತ್ರದಿಂದ ಪಠಿಸಿದೆ ಎಂದು ಹೇಳುವದಕ್ಕೆ ಆಗಲಾರದು.[2] ಆದರೆ ಪ್ರಕರಣದಿಂದ ಅವ್ಯಾಕೃತನಾಮರೂಪಗಳುಳ್ಳ ನಾಮರೂಪಗಳ ಪ್ರಾಗವಸ್ಥೆಯಾದ[3] ಅದೇ ದೈವಶಕ್ತಿಯೇ ಈ ಮಂತ್ರದಿಂದಲೂ ಪಠಿತವಾಗಿದೆ ಎನ್ನುತ್ತೇವೆ. ಆ (ಶಕ್ತಿಗೆ) ತನ್ನ ಕಾರ್ಯ(ಗಳಾದ ತೇಜೋಬನ್ನಗಳ) ವಿಷಯವಾದ ತ್ರೈರೂಪ್ಯದಿಂದ (ಇಲ್ಲಿ) ತ್ರೈರೂಪ್ಯವನ್ನು ಹೇಳಿರುತ್ತದೆ.[4]

## ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ॥ ೧೦ ॥

೧೦. ಮಧ್ವಾದಿಗಳಂತೆ (ಇದೂ) ಕಲ್ಪನೋಪದೇಶವಾದ್ದರಿಂದ ವಿರೋಧವಲ್ಲ.

## ತೇಜೋಬನ್ನಪ್ರಕೃತಿಗೆ ಅಜಾ ಎಂಬ ಹೆಸರು ಹೇಗೆ?

(ಭಾಷ್ಯ)

೩೫೭. ಕಥಂ ಪುನಸ್ತೇಜೋಽಬನ್ನಾತ್ಮನಾ ತ್ರೈರೂಪ್ಯೇಣ ತ್ರಿರೂಪಾ ಅಜಾ ಪ್ರತಿಪತ್ತುಂ ಶಕ್ಯತೇ? ಯಾವತಾ ನ ತಾವತ್ ತೇಜೋಬನ್ನೇಷು

1. ಇಲ್ಲಿ 'ಯೋನಿಂ ಯೋನಿಮ್' ಎಂದು ದ್ವಿರುಕ್ತಿ ಬಂದಿರುವದೇತಕ್ಕೆಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಮತಭೇದವಿದೆ. ಅವಿದ್ಯಾಶಕ್ತಿಯು ಒಬ್ಬೊಬ್ಬ ಜೀವನಿಗೆ ಒಂದೊಂದರಂತೆ ಇರುವದರಿಂದ ವೀಪ್ಸಾರ್ಥದಲ್ಲಿ ದ್ವಿರುಕ್ತಿ ಬಂದಿದೆ ಎಂದು ಭಾಮತೀಕಾರರು. ಮಾಯೆಯು ಒಂದಾದರೂ ಅದರ ಅಂಶಗಳಾದ ಅವಿದ್ಯೆಗಳು ಜೀವರಿಗೆ ಉಪಾಧಿಗಳಾಗಿ ಅನೇಕವಾಗಿವೆ. ಆದ್ದರಿಂದ ವೀಪ್ಸಾರ್ಥದಲ್ಲಿ ದ್ವಿರುಕ್ತಿ ಎಂದು ರ॥ ಪ್ರ॥; ಅವಿದ್ಯಾಶಕ್ತಿಯು ಒಂದಾದರೂ ಕಾರ್ಯಗಳು ಬೇರೆಬೇರೆಯಿರುವದರಿಂದ ವೀಪ್ಸೆ ಬಂದಿದೆ ಎಂದು ನ್ಯಾ॥ ನಿ॥ ಶಕ್ತಿಯು ಸರ್ವಕಾರಣವಾದರೂ ಅದರ ಕಾರ್ಯಗಳಾದ ಅವಾಂತರ ಕಾರಣಗಳು ವ್ಯವಹಾರದೃಷ್ಟಿಯಿಂದ ಅನೇಕವಾಗಿರುತ್ತವೆ; ಯಾವ ಕಾರಣವನ್ನು ತೆಗೆದುಕೊಂಡರೂ ಅದಕ್ಕೆ ಅಧಿಷ್ಠಾತೃವು ಈಶ್ವರನೇ ಎಂಬುದು ಶ್ರುತ್ಯರ್ಥವೆಂದು ತೋರುತ್ತದೆ.

2. 'ದೇವಾತ್ಮಶಕ್ತಿಮ್', 'ಮಾಯಿನಂ ತು ಮಹೇಶ್ವರಮ್', 'ಅಧಿತಿಷ್ಠತ್ಯೇಕಃ' ಎಂಬ ಮಾತುಗಳಿಂದ ಈಶ್ವರಶಕ್ತಿಯಾದ ಪ್ರಕೃತಿಯೇ ಇಲ್ಲಿ ಪ್ರಕೃತವಾಗಿರುತ್ತದೆ ಎಂಬುದು ಸ್ಪಷ್ಟವಾಗಿದೆ, ಸ್ವತಂತ್ರವಾದ ಪ್ರಕೃತಿಯು ಪ್ರಕೃತವಲ್ಲ ಎಂದರ್ಥ.

3. ಹಿಂದೆ ೧–೪–೩ (ಭಾ.ಭಾ. ೩೪೯ರಲ್ಲಿ) ಹೇಳಿದ ಶಕ್ತಿಯೇ ಇದು.

4. ಕಾರ್ಯವಾದ ತೇಜೋಬನ್ನಗಳ ರೂಪವನ್ನೇ ಕಾರಣವಾದ ಶಕ್ತಿಗೂ ಹೇಳಿರುತ್ತದೆ ಎಂದು ಭಾವ.

ಅಜಾಕೃತಿರಸ್ತಿ। ನ ಚ ತೇಜೋಽಬನ್ನಾನಾಂ ಜಾತಿಶ್ರವಣಾತ್ ಅಜಾತಿನಿಮಿತ್ತೋಽಪಿ ಅಜಾಶಬ್ದಃ ಸಂಭವತಿ ಇತಿ। ಅತ ಉತ್ತರಂ ಪಠತಿ। ನಾಯಮ್ ಅಜಾಕೃತಿನಿಮಿತ್ತಃ ಅಜಾಶಬ್ದಃ। ನಾಪಿ ಯೌಗಿಕಃ। ಕಿಂ ತರ್ಹಿ ಕಲ್ಪನೋಪದೇಶೋಽಯಮ್। ಅಜಾರೂಪಕಕ್ಲೃಪ್ತಿಃ ತೇಜೋಽಬನ್ನಲಕ್ಷಣಾಯಾಃ ಚರಾಚರಯೋನೇಃ ಉಪದಿಶ್ಯತೇ। ಯಥಾ ಹಿ ಲೋಕೇ ಯದೃಚ್ಛಯಾ ಕಾಚಿತ್ ಅಜಾ ರೋಹಿತಶುಕ್ಲಕೃಷ್ಣವರ್ಣಾ ಸ್ಯಾತ್ ಬಹುಬರ್ಕರಾ ಸರೂಪಬರ್ಕರಾ ಚ, ತಾಂ ಚ ಕಶ್ಚಿದಜಃ ಜುಷಮಾಣೋಽನುಶಯೀತ, ಕಶ್ಚಿಚ್ಚ ಏನಾಂ ಭುಕ್ತಭೋಗಾಂ ಜಹ್ಯಾತ್, ಏವಮ್ ಇಯಮಪಿ ತೇಜೋಽಬನ್ನಲಕ್ಷಣಾ ಭೂತಪ್ರಕೃತಿಃ ತ್ರಿವರ್ಣಾ ಬಹುಸರೂಪಂ ಚರಾಚರಲಕ್ಷಣಂ ವಿಕಾರಜಾತಂ ಜನಯತಿ। ಅವಿದುಷಾ ಚ ಕ್ಷೇತ್ರಜ್ಞೇನ ಉಪಭುಜ್ಯತೇ, ವಿದುಷಾ ಚ ಪರಿತ್ಯಜ್ಯತೇ ಇತಿ। ನ ಚ ಇದಮಾಶಙ್ಕಿತವ್ಯಮ್ ಏಕಃ ಕ್ಷೇತ್ರಜ್ಞಃ ಅನುಶೇತೇ ಅನ್ಯಃ ಜಹಾತಿ ಇತ್ಯತಃ ಕ್ಷೇತ್ರಜ್ಞಭೇದಃ ಪಾರಮಾರ್ಥಿಕಃ ಪರೇಷಾಮ್ ಇಷ್ಟಃ ಪ್ರಾಪ್ನೋತಿ ಇತಿ। ನ ಹಿ ಇಯಂ ಕ್ಷೇತ್ರಜ್ಞಭೇದಪ್ರತಿಪಿಪಾದಯಿಷಾ ಕಿಂ ತು[1] ಬನ್ಧಮೋಕ್ಷವ್ಯವಸ್ಥಾಪ್ರತಿಪಿಪಾದಯಿಷಾ ತು ಏಷಾ। ಪ್ರಸಿದ್ಧಂ ತು ಭೇದಮ್ ಅನೂದ್ಯ ಬನ್ಧಮೋಕ್ಷವ್ಯವಸ್ಥಾ ಪ್ರತಿಪಾದ್ಯತೇ। ಭೇದಸ್ತು ಉಪಾಧಿನಿಮಿತ್ತಃ ಮಿಥ್ಯಾಜ್ಞಾನಕಲ್ಪಿತಃ, ನ ಪಾರಮಾರ್ಥಿಕಃ। "ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ" ಇತ್ಯಾದಿಶ್ರುತಿಭ್ಯಃ। ಮಧ್ವಾದಿವತ್। ಯಥಾ ಆದಿತ್ಯಸ್ಯ ಅಮಧುನೋ ಮಧುತ್ವಮ್। ವಾಚಶ್ಚ ಅಧೇನೋರ್ಧೇನುತ್ವಮ್ ದ್ಯುಲೋಕಾದೀನಾಂ ಚ ಅನಗ್ನೀನಾಮ್ ಅಗ್ನಿತ್ವಮ್। ಇತ್ಯೇವಂಜಾತೀಯಕಂ ಕಲ್ಪ್ಯತೇ। ಏವಮ್ ಇದಮ್ ಅನಜಾಯಾ ಅಜಾತ್ವಂ ಕಲ್ಪ್ಯತೇ ಇತ್ಯರ್ಥಃ। ತಸ್ಮಾತ್ ಅವಿರೋಧಸ್ತೇಜೋಽಬನ್ನೇಷು ಅಜಾಶಬ್ದಪ್ರಯೋಗಸ್ಯ ॥

(ಭಾಷ್ಯಾರ್ಥ)

(ಆಕ್ಷೇಪ):– ತೇಜೋಽಬನ್ನಗಳ ರೂಪದಿಂದ ತ್ರೈರೂಪ್ಯವಿರುವದರಿಂದ ಮೂರು ರೂಪವುಳ್ಳ (ಇದೇ) ಅಜೆ ಎಂದು ಅರಿತುಕೊಳ್ಳುವದು ಹೇಗಾದೀತು ? ಏಕೆಂದರೆ ತೇಜೋಽಬನ್ನಗಳಲ್ಲಿ ಆಡಿನ ಆಕಾರವಿಲ್ಲ ; ತೇಜೋಽಬನ್ನಗಳು ಹುಟ್ಟಿರುವವೆಂದು ಶ್ರುತಿಯಿರುವದರಿಂದ ಅಜಾಶಬ್ದವು ಹುಟ್ಟುವದಿಲ್ಲವೆಂಬ ನಿಮಿತ್ತದಿಂದ ಬಂದದ್ದು ಎಂದು ಹೇಳುವದಕ್ಕೂ ಇಲ್ಲವಲ್ಲ !

(ಪರಿಹಾರ):– ಇದಕ್ಕೆ ಉತ್ತರವನ್ನು (ಸೂತ್ರಕಾರರು) ಹೇಳುತ್ತಾರೆ. (ಏನೆಂದರೆ) ಈ ಅಜಾಶಬ್ದವು ಅಜಾಕಾರದ ನಿಮಿತ್ತದಿಂದ ಬಂದದ್ದಲ್ಲ,

---

1. ಕಿಂ ತು ಎಂಬ ಅನ್ವಯವು ಇಲ್ಲದಿದ್ದರೂ ಸಾಗುತ್ತದೆ. ಏಕೆಂದರೆ ಮುಂದೆ ಪ್ರತಿಪಿಪಾದಯಿಷಾ ತು ಎಂಬಲ್ಲಿ ತು ಇದೆ.

ಯೌಗಿಕವೂ ಅಲ್ಲ ; ಮತ್ತೇನೆಂದರೆ ಇದು ಕಲ್ಪನೋಪದೇಶವು. ಚರಾಚರ ಪ್ರಾಣಿಗಳಿಗೆ ಕಾರಣವಾಗಿರುವ ತೇಜೋಽಬನ್ನ(ರೂಪವಾದ ಪ್ರಕೃತಿಗೆ) ಆಡಿನ ರೂಪಕವನ್ನು ಕಲ್ಪಿಸಿ (ಇಲ್ಲಿ) ಹೇಳಿರುತ್ತದೆ. (ಹೇಗೆಂದರೆ) ಹೇಗೆ ಲೋಕದಲ್ಲಿ ಆಕಸ್ಮಾತ್ತಾಗಿ ಒಂದು ಆಡು ಕೆಂಪು, ಬಿಳುಪು, ಕಪ್ಪು ಬಣ್ಣ(ಗಳಿಂದ ಕೂಡಿ) ದ್ದಾಗಿರಬಹುದೋ ಬಹಳ ಮರಿಗಳುಳ್ಳದ್ದೂ ತನ್ನಂತೆಇರುವ ಮರಿಗಳುಳ್ಳದ್ದೂ ಆಗಿರಬಹುದೋ, ಮತ್ತು ಅದನ್ನು ಪ್ರೀತಿಸುವ ಒಂದು ಹೋತನು ಅದರ ಬಳಿಯಲ್ಲಿ ಮಲಗಿರಬಹುದೋ, ಮತ್ತು ಇನ್ನೊಂದು ಈ ಭೋಗವನ್ನು ಅನುಭವಿಸಿರುವ (ಆಡನ್ನು) ಬಿಟ್ಟುಬಿಡಬಹುದೋ, ಹಾಗೆಯೇ ಇಲ್ಲಿಯೂ ಈ ತೇಜೋಽಬನ್ನರೂಪವಾದ ಭೂತಪ್ರಕೃತಿಯು ಮೂರು ಬಣ್ಣದ್ದು, ಬಹಳವಾಗಿ ತನ್ನ ರೂಪವುಳ್ಳ ಚರಾಚರರೂಪವಾದ ಕಾರ್ಯಸಮೂಹವನ್ನು ಹಡೆಯುತ್ತದೆ ; ಅಜ್ಞಾನಿಯಾದ ಕ್ಷೇತ್ರಜ್ಞನು (ಇದನ್ನು) ಅನುಭವಿಸುತ್ತಾನೆ, ಮತ್ತು ಜ್ಞಾನಿಯಾದ (ಕ್ಷೇತ್ರಜ್ಞನು) ಬಿಟ್ಟುಬಿಡುತ್ತಾನೆ ಎಂದು (ಕಲ್ಪಿತ ರೂಪಕದ ಅಭಿಪ್ರಾಯವು).[1]

ಒಬ್ಬ ಕ್ಷೇತ್ರಜ್ಞನು ಹತ್ತಿರ ಮಲಗಿರುತ್ತಾನೆ, ಇನ್ನೊಬ್ಬನು ಬಿಡುತ್ತಾನೆ ಎಂದದ್ದರಿಂದ ಕ್ಷೇತ್ರಜ್ಞರು ನಿಜವಾಗಿಯೂ ಬೇರೆಯಾಗಿರುತ್ತಾರೆಂದು ಪರ (ವಾದಿಗಳಿಗೆ) ಇಷ್ಟವಾದದ್ದು (ಸರಿಯೆಂ)ದಾಗುವದೆಂದು ಆಶಂಕಿಸಬಾರದು[2]. ಏಕೆಂದರೆ ಇದು ಕ್ಷೇತ್ರಜ್ಞರು ಬೇರೆಬೇರೆ ಎಂದು ಹೇಳುವದಕ್ಕೆ ಬಂದದ್ದಲ್ಲ ; ಮತ್ತೇನೆಂದರೆ ಪ್ರಸಿದ್ಧವಾದ ಭೇದವನ್ನು ಅನುವಾದಮಾಡಿಕೊಂಡು ಇದು ಬಂಧಮೋಕ್ಷಗಳ ವ್ಯವಸ್ಥೆಯನ್ನು ತಿಳಿಸುವದಕ್ಕೆ ಬಂದದ್ದು[3]. **ಭೇದ**

---

1. ಇಲ್ಲಿ ಸೂತ್ರಕಾರರಿಗೆ ಅವಾಂತರಪ್ರಕೃತಿಯಾದ ತೇಜೋಽಬನ್ನವೂ ಭಾಷ್ಯಕಾರರಿಗೆ ಅವ್ಯಾಕೃತವೂ ಅಜಾಶಬ್ದದಿಂದ ಅಭಿಪ್ರೇತವಾಗಿದೆ ಎಂದು ರ||ಪ್ರ|| ವ್ಯಾಖ್ಯಾನದಲ್ಲಿ ಕಲ್ಪಿಸಿರುವ ಮತಭೇದವನ್ನೇನೂ ಒಪ್ಪಬೇಕಾದದ್ದಿಲ್ಲ. ಪ್ರಕರಣದಿಂದ ಅವ್ಯಾಕೃತವೇ ಇಷ್ಟವಾಗಿದೆ. ಕಾರ್ಯವಾದ ತೇಜೋಽಬನ್ನರೂಪಪ್ರಕೃತಿಗೆ ಕಲ್ಪನೆಯಿಂದ ಕೊಟ್ಟಿರುವ 'ಅಜಾ' ಎಂಬ ಹೆಸರನ್ನು ಕಾರಣವಾದ ಅವ್ಯಾಕೃತಕ್ಕೂ ಉಪಯೋಗಿಸಿದೆ. ಕಾರ್ಯವಾದ ತೇಜೋಽಬನ್ನಕ್ಕಾದರೂ ಅಜಾತ್ವವು ಹೇಗೆ ಸಲ್ಲುತ್ತದೆ?– ಎಂಬ ಆಕ್ಷೇಪಕ್ಕೆ ಸೂತ್ರದಲ್ಲಿ ಪರಿಹಾರವನ್ನು ಹೇಳಿದೆ. ಹಿಂದೆ ಕಾರಣವಾಚಿಯಾದ ಅವ್ಯಕ್ತಶಬ್ದವನ್ನು ಕಾರ್ಯವಾದ ಶರೀರಕ್ಕೆ ಉಪಯೋಗಿಸಿದ್ದಂತೆ ಇಲ್ಲಿ ಕಾರ್ಯವಾಚಕವನ್ನು ಕಾರಣಕ್ಕೆ ಉಪಯೋಗಿಸಿದೆ ಎಂಬುದು ಸಿದ್ಧಾಂತಿಯ ಭಾವ.

2. ಸಾಂಖ್ಯರಿಗೆ ಇಷ್ಟವಾದ ಆತ್ಮನಾನಾತ್ವವೇನೂ ಸಿದ್ಧಿಸುವದಿಲ್ಲ ಎಂದರ್ಥ.

3. ಏಕಾತ್ಮವಾದದಲ್ಲಿ ಒಬ್ಬನಿಗೆ ಬಂಧ, ಮತ್ತೊಬ್ಬನಿಗೆ ಮೋಕ್ಷ– ಎಂಬ ವ್ಯವಸ್ಥೆ ಹೇಗೆ ?– ಎಂಬುದನ್ನು ತಿಳಿಸತಕ್ಕದ್ದು ಎಂದರ್ಥ.

**ವಾದರೋ ಉಪಾಧಿಯು ನಿಮಿತ್ತವಾದದ್ದು, ಮಿಥ್ಯಾಜ್ಞಾನಕಲ್ಪಿತ ವಾದದ್ದೇ ಹೊರತು ಪಾರಮಾರ್ಥಿಕವಲ್ಲ**[1]. "ಒಬ್ಬನೇ ದೇವನು ಸರ್ವಭೂತಗಳಲ್ಲಿಯೂ ಅಡಗಿರುತ್ತಾನೆ. (ಅವನು) ಸರ್ವವ್ಯಾಪಿಯು, ಎಲ್ಲಾ ಭೂತಗಳಿಗೂ ಒಳಗಿರುವ ಆತ್ಮನು." (ಶ್ವೇ. ೬-೧೧) ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ).

ಮಧ್ವಾದಿಗಳಂತೆಯೇ (ಇದು ಕಲ್ಪನೋಪದೇಶವು). ಆದಿತ್ಯನು ಮಧು ವಲ್ಲದಿದ್ದರೂ ಮಧುವೆಂದು (ಛಾಂ. ೩-೧-೧), ವಾಕ್ಕು ಧೇನುವಲ್ಲದಿದ್ದರೂ ಧೇನುವೆಂದು (ಬೃ. ೫-೮-೧) ದ್ಯುಲೋಕಾದಿಗಳು ಅಗ್ನಿಯಲ್ಲದಿದ್ದರೂ ಅಗ್ನಿ ಯೆಂದು (ಬೃ. ೬-೨-೯ರಿಂದ ೧೩ರವರೆಗೆ; ಛಾಂ. ೫-೪ರಿಂದ ೮ರವರೆಗೆ) ಮುಂತಾಗಿ ಹೇಗೆ ಕಲ್ಪಿತವಾಗಿದೆಯೋ ಹಾಗೆಯೇ ಆಡಲ್ಲದಿದ್ದರೂ ಆಡು ಎಂದು (ಇಲ್ಲಿ) ಕಲ್ಪಿಸಿದೆ ಎಂದರ್ಥ. ಆದ್ದರಿಂದ ತೇಜೋಽಬನ್ನಗಳಲ್ಲಿ ಅಜಾ ಶಬ್ದವನ್ನು ಪ್ರಯೋಗಮಾಡಿರುವದರಲ್ಲಿ (ಯಾವ) ವಿರೋಧವೂ ಇಲ್ಲ.

## ೩. ಸಂಖ್ಯೋಪಸಂಗ್ರಹಾಧಿಕರಣ (ಸೂ.೧೧-೧೩)

(ಬೃ.೪-೪-೧೭ರಲ್ಲಿರುವ ಪಂಚಪಂಚಜನಾ ಎಂಬುದು ಸಾಂಖ್ಯರ ತತ್ತ್ವಗಳಲ್ಲ)

**ನ ಸಙ್ಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ॥೧೧॥**

೧೧. ಸಂಖ್ಯೆಯಿಂದ ಉಪಸಂಗ್ರಹವಾಗಿದೆಯೆಂಬದರಿಂದ ಲೂ (ಶಬ್ದಪ್ರಮಾಣಕತ್ವ)ವಿಲ್ಲ; ಏಕೆಂದರೆ ನಾನಾಭಾವವಿದೆ, ಮತ್ತು ಅತಿರೇಕವಿದೆ.

## ಪೂರ್ವಪಕ್ಷ: ಪ್ರಧಾನಾದಿಗಳಿಗೂ ಶ್ರುತಿಪ್ರಮಾಣವಿದೆ

(ಭಾಷ್ಯ)

೩೫೮. ಏವಂ ಪರಿಹೃತೇಽಪಿ ಅಜಾಮನ್ತ್ರೇ ಪುನಃ ಅನ್ಯಸ್ಮಾತ್ ಮನ್ತ್ರಾತ್ ಸಾಙ್ಖ್ಯಃ ಪ್ರತ್ಯವತಿಷ್ಠತೇ । "ಯಸ್ಮಿನ್ ಪಞ್ಚ ಪಞ್ಚ ಜನಾ ಆಕಾಶಶ್ಚ ಪ್ರತಿಷ್ಠಿತಃ। ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽ ಮೃತಮ್" (ಬೃ. ೪-೪-೧೭) ಇತ್ಯಸ್ಮಿನ್ ಮನ್ತ್ರೇ 'ಪಞ್ಚಪಞ್ಚಜನಾ' ಇತಿ ಪಞ್ಚಸಙ್ಖ್ಯಾವಿಷಯಾ ಅಪರಾ ಪಞ್ಚಸಙ್ಖ್ಯಾ ಶ್ರೂಯತೇ ಪಞ್ಚ

1. ಈ ಉಪಾಧಿಗಳೂ ಅವಿದ್ಯಾಕಲ್ಪಿತವೇ. ೩-೨-೧೫, ಮಾಂ. ಕಾ. ಭಾ. ೩-೫ (ಭಾ. ಭಾ. ೧೩೮) ನೋಡಿ.

ಶಬ್ದದ್ವಯದರ್ಶನಾತ್ । ತ ಏತೇ ಪಞ್ಚಪಞ್ಚಕಾಃ ಪಞ್ಚವಿಂಶತಿಃ ಸಂಪದ್ಯನ್ತೇ । ತಥಾ ಪಞ್ಚವಿಂಶತಿಸಙ್ಖ್ಯಯಾ ಯಾವನ್ತಃ ಸಙ್ಖ್ಯೇಯಾ ಆಕಾಙ್ಕ್ಷ್ಯನ್ತೇ ತಾವನ್ತ್ಯೇವ ಚ ತತ್ತ್ವಾನಿ ಸಾಙ್ಖ್ಯೈಃ ಸಙ್ಖ್ಯಾಯನ್ತೇ । "ಮೂಲಪ್ರಕೃತಿರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಃ ಸಪ್ತ । ಷೋಡಶಕಸ್ತು ವಿಕಾರೋ ನ ಪ್ರಕೃತಿರ್ನ ವಿಕೃತಿಃ ಪುರುಷಃ" (ಸಾಂ. ಕಾ. ೩) ಇತಿ । ತಯಾ ಶ್ರುತಿಪ್ರಸಿದ್ಧಯಾ ಪಞ್ಚವಿಂಶತಿಸಙ್ಖ್ಯಯಾ ತೇಷಾಂ ಸ್ಮೃತಿಪ್ರಸಿದ್ಧಾನಾಂ ಪಞ್ಚವಿಂಶತಿತತ್ತ್ವಾನಾಮ್ ಉಪಸಙ್ಗ್ರಹಾತ್ ಪ್ರಾಪ್ತಂ ಪುನಃ ಶ್ರುತಿಮತ್ತ್ವಮೇವ ಪ್ರಧಾನಾದೀನಾಮ್ ॥

(ಭಾಷ್ಯಾರ್ಥ)

ಹೀಗೆ ಅಜಾಮಂತ್ರವನ್ನು ಬಗೆಹರಿಸಿದರೂ ಮತ್ತೂ ಇನ್ನೊಂದು ಮಂತ್ರದ (ಬಲ)ದಿಂದ ಸಾಂಖ್ಯನು ಎದುರಾಗುತ್ತಾನೆ. "ಯಾವನಲ್ಲಿ ಪಾಂಚಪಂಚಜನರೂ ಆಕಾಶವೂ ನಿಂತಿರುವವೋ ಆ ಆತ್ಮನನ್ನೇ ಅಮೃತಬ್ರಹ್ಮವೆಂದು ನಾನು ಎಣಿಸುತ್ತೇನೆ, (ಅದನ್ನು) ಅರಿತು ಅಮೃತನಾಗಿರುವೆನು". (ಬೃ. ೪-೪-೧೭) ಎಂಬೀ ಮಂತ್ರದಲ್ಲಿ ಪಂಚಪಾಂಚಜನರು ಎಂದು ಪಾಂಚಸಂಖ್ಯೆಯ ವಿಷಯವಾದ ಇನ್ನೊಂದು ಪಂಚಸಂಖ್ಯೆಯನ್ನು ಹೇಳಿದೆ. ಏಕೆಂದರೆ (ಇಲ್ಲಿ) ಪಂಚ ಎಂಬ ಎರಡು ಶಬ್ದಗಳು ಕಾಣುತ್ತವೆ. ಆ ಇವು ಐದು ಐದುಗಳಾದ್ದರಿಂದ ಇಪ್ಪತ್ತೈದಾಗುತ್ತವೆ. ಇದಕ್ಕನುಗುಣವಾಗಿ ಇಪ್ಪತ್ತೈದು ಸಂಖ್ಯೆಯಿಂದ ಎಷ್ಟು ಸಂಖ್ಯೇಯಗಳ ಆಕಾಂಕ್ಷೆಯಾಗುವದೋ ಅಷ್ಟೇ ತತ್ತ್ವಗಳನ್ನು ಸಾಂಖ್ಯರು ಲೆಕ್ಕಮಾಡಿ ಹೇಳುತ್ತಾರೆ. "ಮೂಲಪ್ರಕೃತಿಯು ಅವಿಕೃತಿಯು ; ಮಹತ್ತೇ ಮುಂತಾದ ಪ್ರಕೃತಿವಿಕೃತಿಗಳು ಏಳು ; ಹದಿನಾರು (ಸೇರಿರುವ ಗುಂಪು) ವಿಕಾರವು ; ಪುರುಷನು ಪ್ರಕೃತಿಯೂ ಇಲ್ಲ, ವಿಕೃತಿಯೂ ಇಲ್ಲ" (ಸಾಂ. ಕಾ. ೩).[1] ಈ ಶ್ರುತಿಪ್ರಸಿದ್ಧವಾದ ಇಪ್ಪತ್ತೈದೆಂಬ ಸಂಖ್ಯೆಯಿಂದ ಆ (ಸಾಂಖ್ಯ)ಸ್ಮೃತಿಪ್ರಸಿದ್ಧವಾದ ಇಪ್ಪತ್ತೈದು ತತ್ತ್ವಗಳನ್ನು ಸಂಗ್ರಹಿಸಿ (ಹೇಳಿ)ರುವದರಿಂದ ಪ್ರಧಾನಾದಿಗಳು ಶ್ರುತಿ(ಪ್ರಮಾಣಕ)ವೆಂದೇ (ಪೂರ್ವಪಕ್ಷವು) ಬಂದೊದಗುತ್ತದೆ.

---

1. ಮೂಲಪ್ರಕೃತಿಯು. ಯಾವುದರ ಕಾರ್ಯವೂ ಅಲ್ಲ. ಮಹತ್ತು, ಅಹಂಕಾರ, ತನ್ಮಾತ್ರೆಗಳು ಐದು- ಇವೇಳೂ ಪ್ರಕೃತಿವಿಕೃತಿಗಳು ಎಂದರೆ ಕಾರಣಕಾರ್ಯಗಳು. ಇವುಗಳಲ್ಲಿ ಹಿಂದುಹಿಂದಿನದಕ್ಕೆ ಮುಂದಿನದು ಕಾರ್ಯವು ; ಎಂದರೆ ಮಹತ್ತಿಗೆ ಅಹಂಕಾರ, ಅಹಂಕಾರಕ್ಕೆ ತನ್ಮಾತ್ರೆಗಳು ಕಾರ್ಯಗಳು. ತನ್ಮಾತ್ರೆಗಳು ಸ್ಥೂಲಭೂತಕ್ಕೆ ಕಾರಣ. ಪಂಚಭೂತಗಳೂ ಏಕಾದಶೇಂದ್ರಿಯಗಳೂ ವಿಕಾರವೇ, ಕಾರ್ಯವೇ, ಪ್ರಕೃತಿಯಲ್ಲ, ಪುರುಷನು ಪ್ರಕೃತಿಯೂ ಅಲ್ಲ, ವಿಕೃತಿಯೂ ಅಲ್ಲ ; ಅವನು ಕಾರ್ಯಕಾರಣಗಳಿಗಿಂತ ಭಿನ್ನನು ಎಂದು ಕಾರಿಕೆಯ ಅರ್ಥ.

## ಸಿದ್ಧಾಂತ: ಸಾಂಖ್ಯರ ತತ್ತ್ವಗಳು ಇಪ್ಪೈದಾಗಿಲ್ಲ

(ಭಾಷ್ಯ)

೩೫೯. ತತೋ ಬ್ರೂಮಃ | ನ ಸಂಖ್ಯೋಪಸಂಗ್ರಹಾದಪಿ ಪ್ರಧಾನಾದೀನಾಂ ಶ್ರುತಿಮತ್ತ್ವಂ ಪ್ರತಿ ಆಶಾ ಕರ್ತವ್ಯಾ | ಕಸ್ಮಾತ್? ನಾನಾಭಾವಾತ್ | ನಾನಾ ಹಿ ಏತಾನಿ ಪಂಚವಿಂಶತಿಸ್ತತ್ತ್ವಾನಿ | ನೈಷಾಂ ಪಞ್ಚಶಃ ಪಞ್ಚಶಃ ಸಾಧಾರಣೋ ಧರ್ಮೋಽಸ್ತಿ | ಯೇನ ಪಞ್ಚವಿಂಶತೇರನ್ತರಾಲೇ ಪರಾಃ ಪಞ್ಚ ಪಞ್ಚ ಸಂಖ್ಯಾ ನಿವಿಶೇರನ್ | ನ ಹಿ ಏಕನಿಬನ್ಧನಮನ್ತರೇಣ ನಾನಾಭೂತೇಷು ದ್ವಿತ್ವಾದಿಕಾಃ ಸಂಖ್ಯಾ ನಿವಿಶನ್ತೇ | ಅಥೋಚ್ಯೇತ— ಪಂಚವಿಂಶತಿಸಂಖ್ಯೈವ ಇಯಮ್ ಅವಯವದ್ವಾರೇಣ ಲಕ್ಷ್ಯತೇ ಯಥಾ “ಪಞ್ಚ ಸಪ್ತ ಚ ವರ್ಷಾಣಿ ನವವರ್ಷ ಶತಕ್ರತುಃ” (?) ಇತಿ ದ್ವಾದಶವಾರ್ಷಿಕೀಮ್ ಅನಾವೃಷ್ಟಿಂ ಕಥಯನ್ತಿ ತದ್ವತ್ ಇತಿ | ತದಪಿ ನೋಪಪದ್ಯತೇ | ಅಯಮೇವ ಅಸ್ಮಿನ್ ಪಕ್ಷೇ ದೋಷಃ ಯತ್ ಲಕ್ಷಣಾ ಆಶ್ರಯಣೀಯಾ ಸ್ಯಾತ್ | ಪರಶ್ಚಾತ್ರ ಪಞ್ಚಶಬ್ದಃ ಜನಶಬ್ದೇನ ಸಮಸ್ತಃ ‘ಪಞ್ಚಜನಾಃ’ ಇತಿ | ಪಾರಿಭಾಷಿಕೇಣ ಸ್ವರೇಣ ಏಕಪದತ್ವನಿಶ್ಚಯಾತ್ | ಪ್ರಯೋಗಾನ್ತರೇ ಚ “ಪಞ್ಚಾನಾಂ ತ್ವಾ ಪಞ್ಚಜನಾನಾಮ್” (ತೈ.ಸಂ ೧-೬-೨) ಇತಿ ಏಕಪದ್ಯೈಕಸ್ವರ್ಯೈಕವಿಭಕ್ತಿಕತ್ವಾವಗಮಾತ್ | ಸಮಸ್ತತ್ವಾಚ್ಚ ನ ವೀಪ್ಸಾ ಪಞ್ಚ ಪಞ್ಚ ಇತಿ | ನ ಚ ಪಞ್ಚಕದ್ವಯಗ್ರಹಣಂ ಪಞ್ಚಪಞ್ಚ ಇತಿ | ನ ಚ ಪಞ್ಚಸಙ್ಖ್ಯಯಾ ಏಕಸ್ಯಾಃ ಪಞ್ಚಸಙ್ಖ್ಯಯಾ ಪರಯಾ ವಿಶೇಷಣಂ ಪಞ್ಚಪಞ್ಚಕಾಃ ಇತಿ | ಉಪಸರ್ಜನಸ್ಯ ವಿಶೇಷಣೇನ ಅಸಂಯೋಗಾತ್ | ನನು ಆಪನ್ನಪಞ್ಚಸಙ್ಖ್ಯಾಕಾ ಜನಾ ಏವ ಪುನಃ ಪಞ್ಚಸಙ್ಖ್ಯಯಾ ವಿಶೇಷ್ಯಮಾಣಾಃ ಪಞ್ಚವಿಂಶತಿಃ ಪ್ರತ್ಯೇಷ್ಯನ್ತೇ ಯಥಾ ‘ಪಞ್ಚ ಪಞ್ಚಪೂಲ್ಯಃ’ ಇತಿ ಪಞ್ಚವಿಂಶತಿಪೂಲಾಃ ಪ್ರತೀಯನ್ತೇ, ತದ್ವತ್ | ನೇತಿ ಬ್ರೂಮಃ | ಯುಕ್ತಂ ಯತ್ ಪಞ್ಚಪೂಲೀಶಬ್ದಸ್ಯ ಸಮಾಹಾರಾಭಿಪ್ರಾಯತ್ವಾತ್ ಕತಿ?– ಇತಿ ಸತ್ಯಾಂ ಭೇದಾಕಾಙ್ಕ್ಷಾಯಾಂ ‘ಪಞ್ಚ ಪಞ್ಚಪೂಲ್ಯಃ’ ಇತಿ ವಿಶೇಷಣಮ್ | ಇಹ ತು ‘ಪಞ್ಚ ಜನಾಃ’ ಇತಿ ಆದಿತ ಏವ ಭೇದೋಪಾದಾನಾತ್ ಕತಿ?–ಇತಿ ಅಸತ್ಯಾಂ ಭೇದಾಕಾಙ್ಕ್ಷಾಯಾಂ ನ ಪಞ್ಚ ಪಞ್ಚಜನಾಃ ಇತಿ ವಿಶೇಷಣಂ ಭವೇತ್ | ಭವದಪಿ ಇದಂ ವಿಶೇಷಣಂ ಪಞ್ಚಸಙ್ಖ್ಯಾಯಾ ಏವ ಭವೇತ್ | ತತ್ರ ಚ ಉಕ್ತೋ ದೋಷಃ | ತಸ್ಮಾತ್ ಪಞ್ಚ ಪಞ್ಚಜನಾಃ ಇತಿ ನ ಪಞ್ಚವಿಂಶತಿತತ್ತ್ವಾಭಿಪ್ರಾಯಮ್ ||

( ಭಾಷ್ಯಾರ್ಥ )

ಇದಕ್ಕೆ (ಪರಿಹಾರವನ್ನು) ಹೇಳುತ್ತೇವೆ. ಸಂಖ್ಯೋಪಸಂಗ್ರಹದಿಂದಲೂ ಪ್ರಧಾನಾದಿಗಳು ಶ್ರುತಿ(ಪ್ರಮಾಣಕ)ವೆಂಬ ಆಶೆಯನ್ನು ಮಾಡಿಕೊಳ್ಳಬಾರದು. ಏಕೆ ? ಎಂದರೆ ನಾನಾಭಾವವಿರುವದರಿಂದ. ಈ ಇಪ್ಪತ್ತೈದು ತತ್ತ್ವಗಳು ನಾನಾ(ರೂಪ)ವಾಗಿರುತ್ತವೆಯೇ ಹೊರತು ಇವುಗಳಿಗೆ ಐದೈದಾಗಿ ಸಾಧಾರಣ ಧರ್ಮವು ಇರುವದಿಲ್ಲ[1]. ಹಾಗಿದ್ದರೆ ಇಪ್ಪತ್ತೈದರೊಳಗೇ ಬೇರೆಯ ಐದು ಐದು ಸಂಖ್ಯೆಗಳನ್ನು ಸೇರಿಸಿಕೊಳ್ಳಬಹುದಾಗಿತ್ತು. ಒಂದೇ ಕಾರಣವಿಲ್ಲದೆ ನಾನಾರೂಪವಾಗಿರುವ (ವಸ್ತುಗಳಲ್ಲಿ) ಎರಡು ಮುಂತಾದ ಸಂಖ್ಯೆಗಳನ್ನು ಸೇರಿಸುವದಿಲ್ಲವಷ್ಟೆ[2]. ಇನ್ನು "ಪಂಚ ಸಪ್ತ ಚ ವರ್ಷಾಣಿ ನವವರ್ಷ ಶತಕ್ರತುಃ" (?) (ಐದೂ ಏಳು ವರ್ಷಗಳವರೆಗೆ ಇಂದ್ರನು ಮಳೆಗರೆಯಲಿಲ್ಲ) ಎಂದು ಹನ್ನೆರಡು ವರ್ಷದ ಅನಾವೃಷ್ಟಿಯನ್ನು ಹೇಳುವರಲ್ಲ, ಹಾಗೆಯೇ ಈ ಇಪ್ಪತ್ತೈದು ಸಂಖ್ಯೆಯನ್ನೇ ಅವಯವದ್ವಾರದಿಂದ ಲಕ್ಷಣಾವೃತ್ತಿಯಿಂದ ಹೇಳಿದೆ– ಎಂದು (ಪೂರ್ವಪಕ್ಷಿಯು) ಹೇಳಬಹುದು. ಅದೂ ಹೊಂದುವದಿಲ್ಲ. (ಏಕೆಂದರೆ) ಈ ಪಕ್ಷದಲ್ಲಿ ಲಕ್ಷಣೆಯನ್ನು ಅನುಸರಿಸಬೇಕಾಗುವದೆಂಬುದೇ ದೋಷವು[3]. ಇಲ್ಲಿ ಎರಡನೆಯ ಪಂಚಶಬ್ದವು ಜನಶಬ್ದದೊಡನೆ 'ಪಞ್ಚ

---

1. ಕಾರಿಕೆಯಲ್ಲಿರುವ ಇಪ್ಪತ್ತೈದು ತತ್ತ್ವಗಳನ್ನು ಪ್ರಕೃತಿ, ಮಹತ್ತು; ಅಹಂಕಾರ, ಎರಡು ತನ್ಮಾತ್ರೆಗಳು; ತನ್ಮಾತ್ರೆಗಳು ಮೂರು, ವಿಕಾರಗಳಲ್ಲಿ ಎರಡು; ವಿಕಾರಗಳಲ್ಲಿ ಮುಂದಿನ ಐದು (ತೇಜಸ್ಸು, ವಾಯು, ಆಕಾಶ, ಇಂದ್ರಿಯಗಳಲ್ಲಿ ಎರಡು); ಮುಂದಿನ ಐದು ಇಂದ್ರಿಯಗಳು; ಉಳಿದ ನಾಲ್ಕು ಇಂದ್ರಿಯಗಳು, ಪುರುಷ– ಹೀಗೆ ವಿಂಗಡಿಸಿದರೆ ಆಗುವ ಐದು ಗುಂಪುಗಳಲ್ಲಿ ಯಾವದೊಂದು ಗುಂಪನ್ನೂ ಇಂಥ ದ್ರವ್ಯ, ಗುಣ, ಅಥವಾ ಕರ್ಮ ಎಂದು ಮುಂತಾಗಿ ಯಾವದೊಂದು ಸಾಧಾರಣಧರ್ಮದ ಹೆಸರಿನಿಂದಲೂ ಕರೆಯುವದಕ್ಕೆ ಬರುವದಿಲ್ಲ ಎಂದರ್ಥ. ಭಾಮತೀವ್ಯಾಖ್ಯಾನದಲ್ಲಿ (೧) ಸತ್ತ್ವರಜಸ್ತಮೋಗುಣಗಳು, ಮಹದಹಂಕಾರಗಳು; (೨) ಪ್ರಥಿವ್ಯಪ್ತೇಜೋವಾಯು ಘ್ರಾಣಗಳು; (೩) ರಸನಚಕ್ಷುಸ್ತ್ವಕ್ಶ್ರೋತ್ರವಾಕ್ಕುಗಳು; (೪) ಪಾಣಿಪಾದ ಪಾಯೂಪಸ್ಥಮನಸ್ಸು– ಇವುಗಳಲ್ಲಿ ಸಮಾನಧರ್ಮವಿಲ್ಲವೆಂದು ಬರೆದಿದೆ. ರತ್ನಪ್ರಭಾ ವ್ಯಾಖ್ಯಾನದಲ್ಲಿ ಬೇರೆಯಾಗಿಯೇ ಬರೆದಿದೆ.

2. ಒಂದಕ್ಕೊಂದಕ್ಕೆ ಸಮಾನಧರ್ಮವಿಲ್ಲದಿರುವಾಗ ಬೇರೆಬೇರೆಯಾಗಿರುವ ವಸ್ತುಗಳನ್ನು ಎರಡೆರಡಾಗಿ ಅಥವಾ ಮೂರುಮೂರಾಗಿ, ಅಥವಾ ನಾಲ್ಕುನಾಲ್ಕಾಗಿ ಹೀಗೆಲ್ಲ ವಿಂಗಡಿಸುವದಕ್ಕೆ ಕಾರಣವೇ ಇಲ್ಲ ಎಂದರ್ಥ.

3. ಅವಯವದಿಂದ ಅವಯವಿಯನ್ನು ತಿಳಿಸುವದು ಲಕ್ಷಣೆ. ಮುಖ್ಯಾರ್ಥವು ಹೊಂದುವಾಗ ಲಕ್ಷಣೆಯನ್ನು ಸ್ವೀಕರಿಸುವದು ಯುಕ್ತವಲ್ಲ.

ಜನಾಃ' ಎಂದು ಸಮಾನವಾಗಿರುತ್ತದೆ; ಏಕೆಂದರೆ ಪಾರಿಭಾಷಿಕಸ್ವರದಿಂದ[1] (ಇದು) ಒಂದು ಪದವೆಂದು ನಿಶ್ಚಯವಾಗುತ್ತದೆ "ಪಞ್ಚಾನಾಂ ತ್ವಾ ಪಞ್ಚ ಜನಾನಾಮ್" (ತೈ. ಸಂ. ೧-೬-೨) (ಯಂತ್ರದಂತಿರುವ ಶರೀರವು ಇಹಪರ ಭೋಗಸಮರ್ಥವಾಗಿರಲೆಂದು) "ಐದುಮಂದಿ ಪಂಚಜನ (ದೇವತೆಗಳಿಗಾಗಿ) ನಿನ್ನನ್ನು (ಸ್ವೀಕರಿಸುತ್ತೇನೆ)"[2]- ಎಂಬ ಮತ್ತೊಂದು ಪ್ರಯೋಗದಲ್ಲಿ (ಈ ಎರಡೂ ಸೇರಿ) ಒಂದೇ ಪದವಾಗಿ ಒಂದೇ ಸ್ವರವಾಗಿ ಒಂದೇ ವಿಭಕ್ತಿ ಯುಳ್ಳವಾಗಿರುವವೆಂದು ಗೊತ್ತಾಗಿರುವದರಿಂದಲೂ (ಹೀಗೆನ್ನಬೇಕು. ಹೀಗೆ) ಸಮಸ್ತವಾಗಿರುವದರಿಂದ ಐದು ಐದು ಎಂದು ವೀಪ್ಸೆಯಾಗುವದಿಲ್ಲ. ಐದು ಐದು - ಎಂದು ಎರಡು ಪಂಚಕಗಳನ್ನೂ (ಇಲ್ಲಿ) ತೆಗೆದುಕೊಳ್ಳ ಲಾಗುವದಿಲ್ಲ. (ಇವುಗಳಲ್ಲಿ) ಒಂದು ಪಂಚಸಂಖ್ಯೆಗೆ ಮತ್ತೊಂದು ಪಂಚ ಸಂಖ್ಯೆಯನ್ನು ವಿಶೇಷಣವನ್ನು ಮಾಡಿ ಐದು ಪಂಚಕಗಳು ಎಂದು (ಅರ್ಥ ವನ್ನು ಮಾಡುವದಕ್ಕೂ ಬರುವ)ದಿಲ್ಲ; ಏಕೆಂದರೆ (ಸಮಾಸದಲ್ಲಿ) ಉಪಸರ್ಜನ ವಾಗಿರುವ (ಪಂಚಶಬ್ದವು ಪಂಚ) ಎಂಬ ವಿಶೇಷಣದೊಡನೆ ಕೂಡುವ ಹಾಗಿಲ್ಲ. ಐದು ಸಂಖ್ಯೆಯವರಾದ ಮೇಲೆ (ಅದೇ) ಜನರೇ ಪಂಚಸಂಖ್ಯೆ ಎಂಬ ವಿಶೇಷಣದಿಂದೊಡಗೂಡಿದರೆ ಇಪ್ಪತ್ತೈದು ಎಂಬ ಅರಿವಾಗಬಹುದಲ್ಲ! ಹೇಗೆ ಐದು ಪಂಚಪೂಲಿಗಳು ಎಂದರೆ ಇಪ್ಪತ್ತೈದು ಸಿವುಡುಗಳ ಜ್ಞಾನವಾಗ

1. ಈ ಮಂತ್ರದಲ್ಲಿ ಮೊದಲನೆಯ ಪಂಚಶಬ್ದವು ಆದ್ಯುದಾತ್ತ, ಎರಡನೆಯದ ಸರ್ವಾನುದಾತ್ತ, ಜನಶಬ್ದವು ಅನ್ತೋದಾತ್ತವು. ಆದ್ದರಿಂದ ಎರಡನೆಯ ಪಂಚಶಬ್ದವೂ ಜನಶಬ್ದವೂ ಸೇರಿ ಸಮಾಸವಾಗದಿದ್ದರೆ ಕೊನೆಯ ಅಕಾರವು ಉದಾತ್ತವೂ, ಮಿಕ್ಕದ್ದೆಲ್ಲ ವೂ ಅನುದಾತ್ತವೂ ಆಗಲು ಕಾರಣವಿಲ್ಲ, ಸಮಾಸವು ಮಾತ್ರ ಅಂತೋದಾತ್ತವಾಗು ತ್ತದೆ ಎಂಬ ಸೂತ್ರವಿದೆ. ಯಾವ ವರ್ಣವು ಸ್ವರಿತವೆಂದು ಅಥವಾ ಉದಾತ್ತವೆಂದು ವಿಧಿಸಿವೆಯೋ ಅದನ್ನು ಬಿಟ್ಟು ಮಿಕ್ಕದ್ದೆಲ್ಲವೂ ಅನುದಾತ್ತವಾಗುವದೆಂದೂ ಸೂತ್ರವಿದೆ. ಶತಪಥಬ್ರಾಹ್ಮಣದ ಸ್ವರವನ್ನು ವಿಧಾನಮಾಡುವ ಭಾಷಿಕ ಎಂಬ ಗ್ರಂಥದಲ್ಲಿ "ಸ್ವರಿತೋಽ ನುದಾತ್ತೋ ವಾ" ಎಂಬ ಸೂತ್ರವಿದೆ; ಮಂತ್ರದಶೆಯಲ್ಲಿ ಸ್ವರಿತವಾಗಲಿ ಅನುದಾತ್ತ ವಾಗಲಿ ಇದ್ದರೆ ಅದು ಬ್ರಾಹ್ಮಣದಶೆಯಲ್ಲಿ ಉದಾತ್ತವಾಗುತ್ತದೆ ಎಂದು ಅದರ ಅರ್ಥ. ಇದರಿಂದ ಕೊನೆಯ ನಕಾರದ ಮೇಲಿರುವ ಅಕಾರಕ್ಕಿಂತ ಮೊದಲಿರುವ ಅನುದಾತ್ತ ಗಳೆಲ್ಲ ಬ್ರಾಹ್ಮಣದಲ್ಲಿ ಉದಾತ್ತವಾಗಬೇಕಾಯಿತು. 'ಉದಾತ್ತಮನುದಾತ್ತಮನನ್ತ್ಯಮ್' ಎಂಬ ಸೂತ್ರದಿಂದ ಅನಂತ್ಯವಾದ ಮತ್ತೊಂದಕ್ಕೆ ಸೇರಿ ಉಚ್ಚರಿಸುವ ಉದಾತ್ತಕ್ಕೆ ಅನುದಾತ್ತವಾಗುವದಾದ್ದರಿಂದ ಅಕಾರಕ್ಕೆ ಎಂಬದರೊಡನೆ ಸೇರಿ ಉಚ್ಚರಿಸುವದರಿಂದ ಉದಾತ್ತವಾದ ಅಕಾರವು ಅನುದಾತ್ತವಾಯಿತು. ಅಂತೋದಾತ್ತಸ್ವರವೇ ಪಾರಿ ಭಾಷಿಕವು ಎಂಬ ವ್ಯಾಖ್ಯಾನ ಸರಿಯಲ್ಲ. ಈ ಪಾರಿಭಾಷಿಕಸ್ವರದಿಂದ ಇದು ಒಂದೇ ಪದವೆಂದು ನಿಶ್ಚಯವಾಗುತ್ತದೆ ನ್ಯಾ|| ನಿ||.

2. ಯಜಮಾನನು ಆಜ್ಯವನ್ನು ಕುರಿತು ಹೇಳುವ ಮಂತ್ರವಿದು.

ವದೋ ಹಾಗೇಯೋ (ಆಗಬಹುದಲ್ಲ) ! ಎಂದರೆ (ಆಗ)ಲಾರದು ಎನ್ನು ತ್ತೇವೆ. ಪಂಚಪೂಲೀಶಬ್ದವು ಸಮಾಹಾರವನ್ನು ತಿಳಿಸುವದಕ್ಕೆ (ಬಂದಿರು)ವದ ರಿಂದ ಎಷ್ಟು ಎಂಬ ಭೇದದ ಆಕಾಂಕ್ಷೆಯುಂಟಾಗಲಾಗಿ, 'ಐದು ಪಂಚಪೂಲಿ ಗಳು' ಎಂದು ವಿಶೇಷಣವು (ಬರುವ)ದೆಂಬುದು ಯುಕ್ತವು. ಆದರೆ ಇಲ್ಲಿ ಐದು ಜನರು ಎಂದು ಮೊದಲೇ ಭೇದವನ್ನು ತೆಗೆದುಕೊಂಡು (ಹೇಳಿರು) ವದರಿಂದ ಮತ್ತೆ ಭೇದಾಕಾಂಕ್ಷೆಯುಂಟಾಗುವದಿಲ್ಲವಾದ್ದರಿಂದ ಐದು ಐದು ಜನರು ಎಂದು ವಿಶೇಷಣವು ಆಗಲಾರದು. ಈ ವಿಶೇಷಣವು ಆದರೂ ಐದು ಎಂಬ ಸಂಖ್ಯೆಗೇ ಆದೀತು ; ಆ (ಪಕ್ಷ)ದಲ್ಲಿ ದೋಷವನ್ನು ( ಆಗಲೇ ) ಹೇಳಿದ್ದಾಗಿದೆ. ಆದ್ದರಿಂದ 'ಪಞ್ಚಪಞ್ಚಜನಾಃ' ಎಂಬುದು ಇಪ್ಪತ್ತೈದು ತತ್ತ್ವಗಳನ್ನು ತಿಳಿಸುವ ಅಭಿಪ್ರಾಯದ ವಾಕ್ಯವಲ್ಲ.

## ಸಾಂಖ್ಯನು ಇಪ್ಪತ್ತೈದಕ್ಕಿಂತ ಹೆಚ್ಚು ತತ್ತ್ವಗಳನ್ನು ಒಪ್ಪಬೇಕಾಗುತ್ತದೆ.

( ಭಾಷ್ಯ )

೩೬೦. ಅತಿರೇಕಾಚ್ಚ ನ ಪಞ್ಚವಿಂಶತಿತತ್ತ್ವಾಭಿಪ್ರಾಯಮ್ । ಅತಿ ರೇಕೋ ಹಿ ಭವತಿ ಆತ್ಮಾಕಾಶಾಭ್ಯಾಂ ಪಞ್ಚವಿಂಶತಿಸಙ್ಖ್ಯಾಯಾಃ । ಆತ್ಮಾ ತಾವತ್ ಇಹ ಪ್ರತಿಷ್ಠಾಂ ಪ್ರತಿ ಆಧಾರತ್ವೇನ ನಿರ್ದಿಷ್ಟಃ । ಯಸ್ಮಿನ್ ಇತಿ ಸಪ್ತಮೀಸೂಚಿತಸ್ಯ "ತಮೇವ ಮನ್ಯ ಆತ್ಮಾನಮ್" ಇತಿ ಆತ್ಮತ್ವೇನ ಅನುಕರ್ಷಣಾತ್ । ಆತ್ಮಾ ಚ ಚೇತನಃ ಪುರುಷಃ । ಸ ಚ ಪಞ್ಚವಿಂಶತೌ ಅನ್ತರ್ಗತ ಏವ ಇತಿ ನ ತಸ್ಯೈವ ಆಧಾರತ್ವಮ್ ಆಧೇಯತ್ವಂ ಚ ಯುಜ್ಯತೇ। ಅರ್ಥಾನ್ತರಪರಿಗ್ರಹೇ ಚ ತತ್ತ್ವಸಙ್ಖ್ಯಾತಿರೇಕಃ ಸಿದ್ಧಾನ್ತವಿರುದ್ಧಃ ಪ್ರಸಜ್ಯೇತ। ತಥಾ "ಆಕಾಶಶ್ಚ ಪ್ರತಿಷ್ಠಿತಃ" ಇತಿ ಆಕಾಶಸ್ಯಾಪಿ ಪಞ್ಚವಿಂಶತೌ ಅನ್ತರ್ಗತಸ್ಯ ನ ಪೃಥಗುಪಾದಾನಂ ನ್ಯಾಯ್ಯಮ್ । ಅರ್ಥಾನ್ತರಪರಿಗ್ರಹೇ ಚ ಉಕ್ತಂ ದೂಷಣಮ್ ॥

( ಭಾಷ್ಯಾರ್ಥ )

ಹೆಚ್ಚಾಗುವದರಿಂದಲೂ (ಈ ವಾಕ್ಯವು) ಇಪ್ಪತ್ತೈದು ತತ್ತ್ವಗಳಲ್ಲಿ ಅಭಿಪ್ರಾಯವುಳ್ಳದ್ದಲ್ಲ. ಹೇಗೆಂದರೆ ಆತ್ಮಾಕಾಶಗಳು (ಸೇರಿದರೆ) ಇಪ್ಪತ್ತೈದು ಸಂಖ್ಯೆಗಿಂತ ಹೆಚ್ಚಾಗುತ್ತದೆ. ಮೊದಲನೆಯದಾಗಿ ಆತ್ಮನು (ಪಂಚಜನರ ಮತ್ತು ಆಕಾಶದ) ಪ್ರತಿಷ್ಠೆಗೆ ಆಧಾರನೆಂದು ತಿಳಿಸಿದೆ. ಏಕೆಂದರೆ 'ಯಾವನಲ್ಲಿ' ಎಂದು ಸಪ್ತಮೀಸೂಚಿತವಾದದ್ದನ್ನು "ಅವನನ್ನೇ ಆತ್ಮನೆಂದು ಎಣಿಸುತ್ತೇನೆ"

ಎಂದು ಆತ್ಮನೆಂದು ಎಳೆದುಕೊಂಡು (ಹೇಳಿದೆ). ಆತ್ಮನೆಂದರೆ ಚೇತನನಾದ ಪುರುಷನು; ಆ (ಪುರುಷನು ಸಾಂಖ್ಯರ) ಇಪ್ಪತ್ತೈದು (ತತ್ತ್ವಗಳಲ್ಲಿ) ಸೇರಿಕೊಂಡೇ ಇರುತ್ತಾನಾದ್ದರಿಂದ ಅವನಿಗೆ ಆಧಾರತ್ವವೂ ಆಧೇಯತ್ವವೂ ಹೊಂದುವಹಾಗಿಲ್ಲ. (ಆತ್ಮನು) ಬೇರೆಯ ಪದಾರ್ಥವೆಂದು ಹಿಡಿದರೆ ತತ್ತ್ವಗಳ ಸಂಖ್ಯೆಗಿಂತ ಹೆಚ್ಚಾಗಿ ಸಿದ್ಧಾಂತವಿರುದ್ಧವಾಗುವದು. ಇದರಂತೆ "ಆಕಾಶವೂ ಪ್ರತಿಷ್ಠಿತವಾಗಿದೆ" ಎಂದು ಇಪ್ಪತ್ತೈದು ತತ್ತ್ವಗಳಲ್ಲಿಯೇ ಸೇರಿರುವ ಆಕಾಶವನ್ನೂ ಬೇರೆಯಾಗಿ ತೆಗೆದುಕೊಂಡಿರುವದು ನ್ಯಾಯವಲ್ಲ. (ಅದು) ಬೇರೆಯ ಪದಾರ್ಥವೇ ಎಂದರೆ ದೂಷಣವನ್ನು (ಆಗಲೆ) ಹೇಳಿದ್ದಾಗಿದೆ[1].

## 'ಪಞ್ಚಪಞ್ಚಜನಾಃ' ಎಂಬುದರ ಸರಿಯಾದ ಅರ್ಥ

( ಭಾಷ್ಯ )

೩೬೧. ಕಥಂ ಚ ಸಙ್ಖ್ಯಾಮಾತ್ರಶ್ರವಣೇ ಸತಿ ಅಶ್ರುತಾನಾಂ ಪಞ್ಚವಿಂಶತಿತತ್ತ್ವಾನಾಮ್ ಉಪಸಂಗ್ರಹಃ ಪ್ರತೀಯತೇ? ಜನಶಬ್ದಸ್ಯ ತತ್ತ್ವೇಷು ಅರೂಢತ್ವಾತ್ । ಅರ್ಥಾನ್ತರೋಪಸಂಗ್ರಹೇಽಪಿ ಸಙ್ಖ್ಯೋಪಪತ್ತೇಃ । ಕಥಂ ತರ್ಹಿ 'ಪಞ್ಚಪಞ್ಚಜನಾ' ಇತಿ ? ಉಚ್ಯತೇ । "ದಿಕ್ಸಙ್ಖ್ಯೇ ಸಂಜ್ಞಾಯಾಮ್" ( ಪಾ. ೨-೧-೫೦ ) ಇತಿ ವಿಶೇಷಣಸ್ಮರಣಾತ್ ಸಂಜ್ಞಾಯಾಮೇವ ಪಞ್ಚಶಬ್ದಸ್ಯ ಜನಶಬ್ದೇನ ಸಮಾಸಃ । ತತಶ್ಚ ರೂಢತ್ವಾಭಿಪ್ರಾಯೇಣೈವ ಕೇಚಿತ್ ಪಞ್ಚಜನಾ ನಾಮ ವಿವಕ್ಷ್ಯನ್ತೇ ನ ಸಾಙ್ಖ್ಯತತ್ತ್ವಾಭಿಪ್ರಾಯೇಣ । ತೇ ಕತಿ ? ಇತ್ಯಸ್ಯಾಮ್ ಆಕಾಙ್ಕ್ಷಾಯಾಂ ಪುನಃ 'ಪಞ್ಚ' ಇತಿ ಪ್ರಯುಜ್ಯತೇ । ಪಞ್ಚಜನಾ ನಾಮ ಯೇ ಕೇಚಿತ್ ತೇ ಚ ಪಞ್ಚೈವ ಇತ್ಯರ್ಥಃ । ಸಪ್ತರ್ಷಯಃ ಸಪ್ತ ಇತಿ ಯಥಾ ॥

(ಭಾಷ್ಯಾರ್ಥ)

ಇದಲ್ಲದೆ ಬರಿಯ ಸಂಖ್ಯೆಯು ಶ್ರುತಿಯಲ್ಲಿರುವಲ್ಲಿ ಶ್ರುತಿಯಲ್ಲಿಲ್ಲದ ಇಪ್ಪತ್ತೈದು ತತ್ತ್ವಗಳನ್ನು (ಇಲ್ಲಿ) ಉಪಸಂಗ್ರಹಿಸಿದೆ (ಎಂದು) ಹೇಗೆತಾನೆ ತಿಳಿಯಲಾದೀತು ? ಏಕೆಂದರೆ ಜನಶಬ್ದವು ತತ್ತ್ವಗಳಲ್ಲಿ ರೂಢವಲ್ಲ, ಮತ್ತೆ (ಯಾವದಾದರೂ) ಬೇರೆ ಪದಾರ್ಥಗಳನ್ನು ಉಪಸಂಗ್ರಹಿಸಿದೆ (ಎಂದರೂ ಈ) ಸಂಖ್ಯೆಯು ಹೊಂದುತ್ತದೆ.

---

1. ಇಪ್ಪತ್ತೈದಕ್ಕಿಂತ ಹೆಚ್ಚು ತತ್ತ್ವಗಳೆಂದಾಗಿ ಸಿದ್ಧಾಂತಕ್ಕೆ ವಿರುದ್ಧವಾಗುವದು ಎಂಬ ದೋಷವನ್ನು ಆಗಲೇ ಹೇಳಿದ್ದಾಗಿದೆ ಎಂದರ್ಥ.

(ಸಾಂಖ್ಯ):- ಹಾಗಾದರೆ 'ಪಂಚಪಂಚಜನಾಃ' ಎಂದು (ಇಲ್ಲಿ ಪ್ರಯೋಗಿಸಿರುವದು) ಹೇಗೆ ?

(ವೇದಾಂತಿ):- ಹೇಳುತ್ತೇವೆ (ಕೇಳು). "ದಿಕ್ಸಙ್ಖ್ಯೇ ಸಂಜ್ಞಾಯಾಮ್" (ಪಾ.ಸೂ. ೨-೧-೫೦)[1] ಎಂದು ವಿಶೇಷಣವು ಸ್ಮೃತಿಯಲ್ಲಿರುವದರಿಂದ ಸಂಜ್ಞೆಯನ್ನು ತಿಳಿಸುವದಕ್ಕೆ ಪಂಚಶಬ್ದವು ಜನಶಬ್ದದೊಡನೆ ಸಮಾಸ(ವಾಗಿರುತ್ತದೆ). ಆದ್ದರಿಂದ (ಶಬ್ದವು) ರೂಢವೆಂಬ ಅಭಿಪ್ರಾಯದಿಂದಲೇ 'ಪಂಚಜನರು' ಎಂಬ ಹೆಸರಿನಿಂದ ಯಾರನ್ನೋ (ಇಲ್ಲಿ) ತಿಳಿಸುವದಕ್ಕೆ (ಬಂದಿದೆಯೇ ಹೊರತು) ಸಾಂಖ್ಯರ ತತ್ತ್ವಗಳನ್ನು (ತಿಳಿಸಬೇಕೆಂಬ) ಅಭಿಪ್ರಾಯದಿಂದಲ್ಲ. ಅವರು ಎಷ್ಟು(ಮಂದಿ) ? ಎಂಬೀ ಆಕಾಂಕ್ಷೆಯುಂಟಾಗಲಾಗಿ ಮತ್ತೆ 'ಪಂಚ' (ಎಂಬ ಮಾತನ್ನು) ಪ್ರಯೋಗಿಸಿದೆ. ಪಂಚಜನರೆಂಬವರು ಯಾರೇ ಆಗಲಿ, ಅವರು ಐವರೇ ಎಂದರ್ಥ. 'ಸಪ್ತರ್ಷಿಗಳು ಏಳು ಮಂದಿ' ಎಂಬಂತೆಯೇ (ಇದು).

**ಪ್ರಾಣಾದಯೋ ವಾಕ್ಯಶೇಷಾತ್ ॥ ೧೨ ॥**

೧೨. ಪ್ರಾಣಾದಿಗಳೇ (ಪಂಚಜನರು) ; ವಾಕ್ಯಶೇಷದಿಂದ (ಇದು ಗೊತ್ತಾಗುತ್ತದೆ).

## ಪಂಚಜನರೆಂದರೆ ಯಾರು ?

**( ಭಾಷ್ಯ )**

**೩೬೨. ಕೇ ಪುನಸ್ತೇ ಪಞ್ಚಜನಾ ನಾಮ ಇತಿ ? ತದುಚ್ಯತೇ— "ಯಸ್ಮಿನ್ ಪಞ್ಚ ಪಞ್ಚಜನಾಃ" ಇತ್ಯತ್ರ ಉತ್ತರಸ್ಮಿನ್ ಮನ್ತ್ರೇ ಬ್ರಹ್ಮಸ್ವರೂಪನಿರೂಪಣಾಯ ಪ್ರಾಣಾದಯಃ ಪಞ್ಚ ನಿರ್ದಿಷ್ಟಾಃ "ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಯೇ ಮನೋ ವಿದುಃ" (ಬೃ. ಮಾ. ೪-೪-೧೮) ಇತಿ । ತೇಽತ್ರ ವಾಕ್ಯಶೇಷಗತಾಃ ಸಂನಿಧಾನಾತ್ ಪಞ್ಚಜನಾ ವಿವಕ್ಷ್ಯನ್ತೇ। ಕಥಂ ಪುನಃ ಪ್ರಾಣಾದಿಷು ಜನಶಬ್ದಪ್ರಯೋಗಃ ? ತತ್ತ್ವೇಷು ವಾ ಕಥಂ ಜನಶಬ್ದ**

---

1. ದಿಗ್ವಾಚಕಗಳೂ ಸಂಖ್ಯಾವಾಚಕಗಳೂ ವಿಶೇಷಣವಿಶೇಷ್ಯಭಾವದಿಂದ ಸಮಾನವಾದರೆ ಸಂಜ್ಞೆ(ಸಂಕೇತನಾಮ)ವಾಗುವ ಸಂದರ್ಭದಲ್ಲಿಯೇ ಎಂದು ಸೂತ್ರದ ಅಭಿಪ್ರಾಯವು.

ಪ್ರಯೋಗಃ ? ಸಮಾನೇ ತು ಪ್ರಸಿದ್ಧ್ಯತಿಕ್ರಮೇ ವಾಕ್ಯಶೇಷವಶಾತ್ ಪ್ರಾಣಾದಯ ಏವ ಗ್ರಹೀತವ್ಯಾ ಭವನ್ತಿ। ಜನಸಂಬನ್ಧಾಚ್ಚ ಪ್ರಾಣಾದಯೋ ಜನಶಬ್ದಭಾಜೋ ಭವನ್ತಿ। ಜನವಚನಶ್ಚ ಪುರುಷಶಬ್ದಃ ಪ್ರಾಣೇಷು ಪ್ರಯುಕ್ತಃ "ತೇ ವಾ ಏತೇ ಪಞ್ಚ ಬ್ರಹ್ಮಪುರುಷಾಃ" (ಛಾಂ. ೩-೧೩-೬) ಇತ್ಯತ್ರ। "ಪ್ರಾಣೋ ಹ ಪಿತಾ ಪ್ರಾಣೋ ಹ ಮಾತಾ" (ಛಾಂ. ೭-೧೫-೧) ಇತ್ಯಾದಿ ಚ ಬ್ರಾಹ್ಮಣಮ್। ಸಮಾಸಬಲಾಚ್ಚ ಸಮುದಾಯಸ್ಯ ರೂಢತ್ವಮ್ ಅವಿರುದ್ಧಮ್। ಕಥಂ ಪುನಃ ಅಸತಿ ಪ್ರಥಮಪ್ರಯೋಗೇ ರೂಢಿಃ ಶಕ್ಯಾ ಆಶ್ರಯಿತುಮ್ ? ಶಕ್ಯಾ ಉದ್ಭಿದಾದಿವತ್ ಇತ್ಯಾಹ। ಪ್ರಸಿದ್ಧಾರ್ಥಸಂನಿಧಾನೇ ಹಿ ಅಪ್ರಸಿದ್ಧಾರ್ಥಃ ಶಬ್ದಃ ಪ್ರಯುಜ್ಯಮಾನಃ ಸಮಭಿವ್ಯಾಹಾರಾತ್ ತದ್ವಿಷಯೋ ನಿಯಮ್ಯತೇ। ಯಥಾ "ಉದ್ಭಿದಾ ಯಜೇತ", "ಯೂಪಂ ಛಿನತ್ತಿ", "ವೇದಿಂ ಕರೋತಿ" ಇತಿ। ತಥಾ ಅಯಮಪಿ ಪಞ್ಚಜನಶಬ್ದಃ ಸಮಾಸಾನ್ವಾಖ್ಯಾನಾತ್ ಅವಗತಸಂಜ್ಞಾಭಾವಃ ಸಂಜ್ಞ್ಯಾಕಾಙ್ಕ್ಷೀ ವಾಕ್ಯಶೇಷಸಮಭಿವ್ಯಾಹೃತೇಷು ಪ್ರಾಣಾದಿಷು ವರ್ತಿಷ್ಯತೇ ॥

(ಭಾಷ್ಯಾರ್ಥ)

ಹಾಗಾದರೆ ಆ ಪಂಚಜನರೆಂಬವರು ಯಾರು? ಎಂದರೆ (ಸೂತ್ರಕಾರರು) ಹೇಳುತ್ತಾರೆ: "ಯಸ್ಮಿನ್ ಪಞ್ಚ ಪಞ್ಚಜನಾಃ" ಎಂಬೀ (ವಾಕ್ಯದ) ಮುಂದಿನ ಮಂತ್ರದಲ್ಲಿ ಬ್ರಹ್ಮಸ್ವರೂಪವನ್ನು ಗೊತ್ತುಪಡಿಸುವದಕ್ಕಾಗಿ "ಪ್ರಾಣಕ್ಕೆ ಪ್ರಾಣವು, ಚಕ್ಷುಸ್ಸಿಗೆ ಚಕ್ಷುಸ್ಸು, ಮತ್ತು ಶ್ರೋತ್ರಕ್ಕೆ ಶ್ರೋತ್ರವು, ಅನ್ನಕ್ಕೆ ಅನ್ನವು, ಮನಸ್ಸಿಗೆ ಮನಸ್ಸು– ಎಂದು ಯಾರು ಅರಿಯುವರೋ...." (ಬೃ. ಮಾ. ೪-೪-೨೧) ಎಂದು ಪ್ರಾಣವೇ ಮುಂತಾದ ಐದನ್ನು ಹೇಳಿರುತ್ತದೆ. ವಾಕ್ಯಶೇಷದಲ್ಲಿರುವ ಆ (ಪ್ರಾಣಾದಿಗಳೇ) ಹತ್ತಿರವಿರುವದರಿಂದ ಇಲ್ಲಿ ಪಂಚಜನರೆಂದು ವಿವಕ್ಷಿತವಾಗಿರುತ್ತವೆ.

(ಆಕ್ಷೇಪ) :– ಆದರೆ ಪ್ರಾಣಾದಿಗಳಲ್ಲಿ ಜನಶಬ್ದವನ್ನು[1] ಪ್ರಯೋಗಿಸಿರುವದು ಹೇಗೆ (ಸರಿ) ?

(ಪರಿಹಾರ) :– ತತ್ತ್ವಗಳಲ್ಲಾದರೂ ಜನಶಬ್ದವನ್ನು ಹೇಗೆ ಪ್ರಯೋಗಿ(ಸಿದೆ ಎನ್ನುವರಿ) ? ಪ್ರಸಿದ್ಧಿಯನ್ನು ಮೀರುವದು (ಎರಡು ಪಕ್ಷಕ್ಕೂ)

1. ಪಂಚಜನಶಬ್ದವನ್ನು ಅಥವಾ ಪಂಚಜನ ಎಂಬ ಮಾತಿನಲ್ಲಿರುವ ಜನಶಬ್ದವನ್ನು ಪ್ರಾಣಾದಿಗಳನ್ನು ಹೇಳುವದಕ್ಕೆ ಉಪಯೋಗಿಸುವದು ಸರಿಯಲ್ಲ; ಏಕೆಂದರೆ ಪ್ರಾಣಾದಿಗಳು ಜನರಲ್ಲ ಎಂದು ಆಕ್ಷೇಪ.

ಸಮಾನವಾಗಿರುವಲ್ಲಿ ವಾಕ್ಯಶೇಷವಶದಿಂದ ಪ್ರಾಣಾದಿಗಳನ್ನೇ ಗ್ರಹಿಸಬೇಕಾಗುತ್ತದೆ. ಜನರಿಗೆ ಸಂಬಂಧಪಟ್ಟಿರುವದರಿಂದಲೂ ಪ್ರಾಣಾದಿಗಳು ಜನಶಬ್ದಕ್ಕೆ ತಕ್ಕವಾಗಿರುತ್ತವೆ. ಜನರನ್ನು ಹೇಳುವ ಪುರುಷಶಬ್ದವನ್ನು "ಆ ಇವರೇ ಐವರು ಬ್ರಹ್ಮಪುರುಷರು" (ಛಾಂ. ೩-೧೩-೬) ಎಂಬಲ್ಲಿ ಪ್ರಾಣಗಳಲ್ಲಿ ಪ್ರಯೋಗಿಸಿರುತ್ತದೆ. "ಪ್ರಾಣವೇ ತಂದೆ, ಪ್ರಾಣವೇ ತಾಯಿ" (ಛಾಂ. ೭-೧೫-೧) ಎಂದು ಮುಂತಾಗಿ (ಛಾಂದೋಗ್ಯ)ಬ್ರಾಹ್ಮಣ(ವಾಕ್ಯವೂ ಇದೆ). ಸಮಾಸಬಲದಿಂದ ಒಟ್ಟು(ಪದವು ಪ್ರಾಣಾದಿಗಳಲ್ಲಿ) ರೂಢವಾಗಿರುವದೂ ವಿರುದ್ಧವಲ್ಲ[1].

(ಆಕ್ಷೇಪ) :- ಮೊದಲಿನ ಪ್ರಯೋಗವಿಲ್ಲದಿರುವಾಗ ರೂಢಿಯನ್ನು ಆಶ್ರಯಿಸುವದು ಹೇಗೆ ಸಾಧ್ಯ(ವಾದೀತು) ?

(ಪರಿಹಾರ) :- ಉದ್ಭಿದಾದಿಗಳಂತೆ (ರೂಢಿಯನ್ನು ಆಶ್ರಯಿಸಬಹುದು) ಎನ್ನುತ್ತಾನೆ, (ಸಿದ್ಧಾಂತಿ)[2]. "ಉದ್ಭಿದಾ ಯಜೇತ" (ಉದ್ಭಿತ್ತಿನಿಂದ ಯಾಗ ಮಾಡಬೇಕು), "ಯೂಪಂ ಛಿನತ್ತಿ" (ಯೂಪವನ್ನು ಕತ್ತರಿಸುತ್ತಾನೆ), "ವೇದಿಂ ಕರೋತಿ" (ವೇದಿಯನ್ನು ಮಾಡುತ್ತಾನೆ)[3] -ಎಂಬಂತೆ ಪ್ರಸಿದ್ಧವಾದ ಅರ್ಥದ (ಶಬ್ದದ) ಹತ್ತಿರ ಅಪ್ರಸಿದ್ಧವಾದ ಅರ್ಥವುಳ್ಳ ಶಬ್ದವನ್ನು ಪ್ರಯೋಗಮಾಡಿದರೆ, (ಎರಡನ್ನೂ) ಜೊತೆಯಲ್ಲಿ ಹೇಳಿದ್ದರಿಂದ ಆ ವಿಷಯದ್ದೆಂದು ಗೊತ್ತಾಗುತ್ತದೆ. ಇದರಂತೆ ಈ ಪಂಚಜನಶಬ್ದವೂ ಸಮಾಸವನ್ನು (ವ್ಯಾಕರಣದಲ್ಲಿ) ಹೇಳಿರುವದರಿಂದ (ಇದು) ಸಂಜ್ಞೆಯೆಂದು ನಿಶ್ಚಯವಾಗಲಾಗಿ (ಇದಕ್ಕೆ) ಸಂಜ್ಞಿ (ಯಾವದೆಂಬ) ಆಕಾಂಕ್ಷೆಯುಂಟಾಗಲು ವಾಕ್ಯಶೇಷದಲ್ಲಿ ಜೊತೆಯಲ್ಲಿ ಹೇಳಿರುವ ಪ್ರಾಣಾದಿಗಳಲ್ಲಿ ವೃತ್ತಿಯುಳ್ಳದ್ದಾಗಬಹುದು.

## ಪಞ್ಚಜನಾ ಎಂಬ ಮಾತಿಗೆ ಬೇರೆಯ ಅರ್ಥಗಳು

( ಭಾಷ್ಯ )

೩೬೩. ಕೈಶ್ಚಿತ್ತು ದೇವಾಃ, ಪಿತರಃ, ಗನ್ಧರ್ವಾಃ, ಅಸುರಾಃ, ರಕ್ಷಾಂಸಿ ಚ ಪಞ್ಚಪಞ್ಚಜನಾ ವ್ಯಾಖ್ಯಾತಾಃ । ಅನ್ಯೈಶ್ಚ ಚತ್ವಾರೋ ವರ್ಣಾಃ

1. ಸಮಾಸವು ಒಂದಾನೊಂದು ಸಂಕೇತನಾಮವನ್ನು ಹೇಳುತ್ತದೆ ಎಂದು ಗೊತ್ತಾಗಿರುವದರಿಂದ ಯೌಗಿಕಾರ್ಥವನ್ನು ಇಟ್ಟುಕೊಂಡು ಪ್ರಧಾನಾದಿಗಳೆಂಬ ಅರ್ಥವನ್ನು ಮಾಡುವದಕ್ಕೆ ಬರುವದಿಲ್ಲ; ಅದನ್ನು ಸಪ್ತರ್ಷಿ ಮುಂತಾದ ರೂಢನಾಮವೆಂದೇ ಇಟ್ಟುಕೊಳ್ಳಬೇಕು.

2. ಲೋಕದಲ್ಲಿ ರೂಢಿಯಿಲ್ಲದಿದ್ದರೂ 'ವೇದದಲ್ಲಿ ಅದನ್ನು ರೂಢನಾಮವಾಗಿ ಉಪಯೋಗಿಸಬಹುದು ಎಂದು ಭಾವ.

3. ಈ ವಾಕ್ಯಗಳು ಎಲ್ಲಿ ಪ್ರಯೋಗವಾಗಿವೆಯೋ ತಿಳಿಯದು.

ನಿಷಾದಪಞ್ಚಮಾಃ ಪರಿಗೃಹೀತಾಃ । ಕ್ವಚಿಚ್ಚ "ಯತ್ ಪಾಞ್ಚಜನ್ಯಯಾ ವಿಶಾ" (ಋ. ಸಂ. ೮–೫೩–೭) ಇತಿ ಪ್ರಜಾಪರಃ ಪ್ರಯೋಗಃ ಪಞ್ಚಜನ ಶಬ್ದಸ್ಯ ದೃಶ್ಯತೇ । ತತ್ಪರಿಗ್ರಹೇಽಪಿ ಇಹ ನ ಕಶ್ಚಿತ್ ವಿರೋಧಃ । ಆಚಾರ್ಯಸ್ತು ನ ಪಞ್ಚವಿಂಶತೇಸ್ತತ್ತ್ವಾನಾಮ್ ಇಹ ಪ್ರತೀತಿರಸ್ತಿ ಇತ್ಯೇವಂಪರತಯಾ "ಪ್ರಾಣಾದಯೋ ವಾಕ್ಯಶೇಷಾತ್" ಇತಿ ಜಗಾದ ॥

(ಭಾಷ್ಯಾರ್ಥ)

ಆದರೆ **ಕೆಲವರು**[1] ದೇವತೆಗಳು, ಪಿತೃಗಳು, ಗಂಧರ್ವರು, ಅಸುರರು, ರಾಕ್ಷಸರು– ಎಂಬವರು ಐವರು ಪಂಚಜನರು ಎಂದು ವಿವರಿಸಿರುತ್ತಾರೆ. **ಮತ್ತೆ ಕೆಲವರು** ನಾಲ್ಕು ವರ್ಣದವರು, ನಿಷಾದನೆಂಬ ಐದನೆಯವನು[2] (ಇವರನ್ನು ಪಂಚಜನರೆಂದು) ಹಿಡಿದಿರುತ್ತಾರೆ. ಒಂದು ಕಡೆಯಲ್ಲಿ "ಪುರುಷ ರೂಪವಾದ ಪಾಂಚಜನ್ಯರಿಂದ (ಘೋಷಗಳು ಸೃಷ್ಟವಾದವು)" (ಋ. ಸಂ. ೮–೫೩–೭) ಎಂದು ಪಂಚಜನಶಬ್ದವನ್ನು ಪ್ರಜಾಪರವಾಗಿ (ಪ್ರಯೋಗಿಸಿರುವದು) ಕಾಣಬರುತ್ತದೆ; ಅದನ್ನು ತೆಗೆದುಕೊಂಡರೂ ಇಲ್ಲಿ ಯಾವ ವಿರೋಧವೂ ಇರುವದಿಲ್ಲ. ಆದರೆ (ಸೂತ್ರಕಾರರಾದ) ಆಚಾರ್ಯರು ಇಲ್ಲಿ ಇಪ್ಪತ್ತೈದು ತತ್ತ್ವಗಳೆಂಬ ಅರಿವು ಆಗುವದಿಲ್ಲ ಎಂಬದರಲ್ಲಿ ತಾತ್ಪರ್ಯದಿಂದ 'ಪ್ರಾಣಾದಯೋ ವಾಕ್ಯಶೇಷಾತ್' ಎಂದು ಹೇಳಿರುತ್ತಾರೆ.

**ಜ್ಯೋತಿಷೈಕೇಷಾಮಸತ್ಯನ್ನೇ ॥ ೧೩ ॥**

೧೩. ಒಂದು (ಶಾಖೆಯವರ ಪಾಠ)ದಲ್ಲಿ ಅನ್ನವಿಲ್ಲದಿರುವಲ್ಲಿ ಜ್ಯೋತಿಯಿಂದ (ಪೂರ್ತಿಮಾಡಿಕೊಳ್ಳಬಹುದು).

## ಕಾಣ್ವಪಾಠದಲ್ಲಿ ಪಂಚಜನರು ಯಾರು?

(ಭಾಷ್ಯ)

**೩೬೪.** ಭವೇಯುಸ್ತಾವತ್ ಪ್ರಾಣಾದಯಃ ಪಞ್ಚಜನಾಃ ಮಾಧ್ಯಂ

---

1. ಇಲ್ಲಿ ಉದಾಹರಿಸಿರುವ ಪಕ್ಷಗಳೆರಡೂ ಕೆಲವರು ಆಚಾರ್ಯರವಾದರೂ ಅವು ಸರಿಯಲ್ಲ ; ಪ್ರಾಣಾದಿಗಳೇ ಪಂಚಜನರು – ಎಂದು ಭಾಮತೀವ್ಯಾಖ್ಯಾನದಲ್ಲಿದೆ. ಆದರೆ ಪಂಚಜನಶಬ್ದದ ಅರ್ಥದ ವಿಷಯದಲ್ಲಿ ಭಾಷ್ಯಕಾರರಿಗೆ ನಿರ್ಭರವಿಲ್ಲವೆಂಬುದು 'ತತ್ಪರಿಗ್ರಹೇಽಪಿ ನ ಕಶ್ಚಿದ್ವಿರೋಧಃ' ಎಂಬ ವಾಕ್ಯದಿಂದ ಗೊತ್ತಾಗುತ್ತದೆ. ಬೃಹದಾರಣ್ಯಕದಲ್ಲಿ ಇವೆರಡು ಪಕ್ಷಗಳನ್ನೂ ಅಂಗೀಕರಿಸಿಯೂ ಇದೆ.

2. ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನು. ಇಲ್ಲಿ ಚಂಡಾಲನನು ಸೇರಿಸಿಲ್ಲವೆಂಬುದನ್ನು ಲಕ್ಷಿಸತಕ್ಕದ್ದಾಗಿದೆ.

ದಿನಾನಾಂ ಯೇಽನ್ನಂ ಪ್ರಾಣಾದಿಷು ಆಮನನ್ತಿ। ಕಾಣ್ವಾನಾಂ ತು ಕಥಂ ಪ್ರಾಣಾದಯಃ ಪಞ್ಚ ಜನಾಃ ಭವೇಯುರ್ಯೇಽನ್ನಂ ಪ್ರಾಣಾದಿಷು ನಾಮನನ್ತಿ ಇತಿ? ಅತ ಉತ್ತರಂ ಪಠತಿ — (ಜ್ಯೋತಿಷೈಕೇಷಾಮಸತ್ಯನ್ನೇ) | ಅಸತ್ಯಪಿ ಕಾಣ್ವಾನಾಮನ್ನೇ ಜ್ಯೋತಿಷಾ ತೇಷಾಂ ಪಞ್ಚಸಙ್ಖ್ಯಾ ಪೂರ್ಯೇತ| ತೇಽಪಿ ಹಿ "ಯಸ್ಮಿನ್ ಪಞ್ಚ ಪಞ್ಚ ಜನಾಃ" ಇತ್ಯತಃ ಪೂರ್ವಸ್ಮಿನ್ ಮನ್ತ್ರೇ ಬ್ರಹ್ಮಸ್ವರೂಪನಿರೂಪಣಾಯೈವ ಜ್ಯೋತಿರಧೀಯತೇ— "ತದ್ದೇವಾ ಜ್ಯೋತಿಷಾಂ ಜ್ಯೋತಿಃ" ಇತಿ| ಕಥಂ ಪುನಃ ಉಭಯೇಷಾಮಪಿ ತುಲ್ಯವತ್ ಇದಂ ಜ್ಯೋತಿಃ ಪಠ್ಯಮಾನಂ ಸಮಾನಮನ್ತ್ರಗತಯಾ ಪಞ್ಚಸಙ್ಖ್ಯಯಾ ಕೇಷಾಂಚಿತ್ ಗೃಹ್ಯತೇ ಕೇಷಾಂಚಿತ್ ನ ಇತಿ? ಅಪೇಕ್ಷಾಭೇದಾತ್ ಇತ್ಯಾಹ| ಮಾಧ್ಯಂದಿನಾನಾಂ ಹಿ ಸಮಾನಮನ್ತ್ರಪಠಿತಪ್ರಾಣಾದಿಪಞ್ಚಜನಲಾಭಾತ್ ನಾಸ್ಮಿನ್ ಮನ್ತ್ರಾನ್ತರಪಠಿತೇ ಜ್ಯೋತಿಷಿ ಅಪೇಕ್ಷಾ ಭವತಿ। ತದಲಾಭಾತ್ ತು ಕಾಣ್ವಾನಾಂ ಭವತ್ಯಪೇಕ್ಷಾ | ಅಪೇಕ್ಷಾಭೇದಾಚ್ಚ ಸಮಾನೇಽಪಿ ಮನ್ತ್ರೇ ಜ್ಯೋತಿಷೋ ಗ್ರಹಣಾಗ್ರಹಣೇ। ಯಥಾ ಸಮಾನೇಽಪಿ ಅತಿರಾತ್ರೇ ವಚನಭೇದಾತ್ ಷೋಡಶಿನೋ ಗ್ರಹಣಾಗ್ರಹಣೇ ತದ್ವತ್। ತದೇವಂ ನ ತಾವತ್ ಶ್ರುತಿಪ್ರಸಿದ್ಧಿಃ ಕಾಚಿತ್ ಪ್ರಧಾನವಿಷಯಾ ಅಸ್ತಿ| ಸ್ಮೃತಿನ್ಯಾಯಪ್ರಸಿದ್ಧೀ ತು ಪರಿಹರಿಷ್ಯೇತೇ ||

( ಭಾಷ್ಯಾರ್ಥ )

(ಆಕ್ಷೇಪ):— ಮಾಧ್ಯಂದಿನರ ಪಾಠದಲ್ಲಿ ಪ್ರಾಣಾದಿಗಳು ಪಂಚಜನವಾಗಬಹುದು; ಏಕೆಂದರೆ ಅವರು ಪ್ರಾಣಾದಿಗಳೊಳಗೆ ಅನ್ನವನ್ನು ಪಠಿಸುತ್ತಾರೆ. ಆದರೆ ಅನ್ನವನ್ನು ಪ್ರಾಣಾದಿಗಳೊಳಗೆ ಪಠಿಸದೆ ಇರುವ ಕಾಣ್ವರ ಪಾಠದಲ್ಲಿ ಪ್ರಾಣಾದಿಗಳು ಹೇಗೆ ಪಂಚಜನರಾದಾವು ?

(ಪರಿಹಾರ):— ಇದಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೆ. (ಜ್ಯೋತಿಷೈಕೇಷಾಮಸತ್ಯನ್ನೇ). ಕಾಣ್ವರ ಪಾಠದಲ್ಲಿ ಅನ್ನವು ಇಲ್ಲದಿದ್ದರೂ ಅವರ (ಪಾಠ)ದಲ್ಲಿ ಜ್ಯೋತಿಯಿಂದ ಪಂಚಸಂಖ್ಯೆಯನ್ನು ಪೂರೈಸಿಕೊಳ್ಳಬಹುದು. ಏಕೆಂದರೆ "ಯಸ್ಮಿನ್ ಪಞ್ಚ ಪಞ್ಚ ಜನಾಃ" (ಬೃ. ೪-೪-೧೭) ಎಂಬುದಕ್ಕಿಂತ ಹಿಂದಿನ ಮಂತ್ರದಲ್ಲಿ ಬ್ರಹ್ಮಸ್ವರೂಪವನ್ನು ಗೊತ್ತುಪಡಿಸುವದಕ್ಕಾಗಿಯೇ "ಜ್ಯೋತಿಗಳಿಗೂ ಜ್ಯೋತಿಯಾಗಿರುವ ಅದನ್ನು ದೇವತೆಗಳು (ಆಯುಸ್ಸೆಂದು ಉಪಾಸನೆಮಾಡುತ್ತಾರೆ)" (ಬೃ. ೪-೪-೧೬) ಎಂದು ಜ್ಯೋತಿಯನ್ನು ಅಧ್ಯಯನಮಾಡುತ್ತಾರೆ.

(ಆಕ್ಷೇಪ) :– ಇಬ್ಬರಿಗೂ ಸಮಾನವಾಗಿಯೇ ಪಾಠದಲ್ಲಿರುವ ಈ ಜ್ಯೋತಿಯನ್ನು ಒಂದೇ ಮಂತ್ರದಲ್ಲಿರುವ ಐದೆಂಬ ಸಂಖ್ಯೆಯಿಂದ ಒಬ್ಬರು ತೆಗೆದುಕೊಳ್ಳುವದೂ ಇನ್ನೊಬ್ಬರೂ ತೆಗೆದುಕೊಳ್ಳದೆ ಇರುವದೂ ಹೇಗೆ?

(ಪರಿಹಾರ) :– ಅಪೇಕ್ಷಾಭೇದದಿಂದ (ಇದಾಗಬಹುದು) ಎನ್ನುತ್ತಾನೆ, (ಸಿದ್ಧಾಂತಿ). ಹೇಗೆಂದರೆ, ಮಾಧ್ಯಂದಿನರಿಗೆ ಅದೇ ಮಂತ್ರದಲ್ಲಿ ಹೇಳಿದ ಪ್ರಾಣವೇ ಮುಂತಾದ ಪಂಚಜನರು ಸಿಕ್ಕಿರುವವರಿಂದ ಈ (ಪಾಠ)ದಲ್ಲಿ ಮತ್ತೊಂದು ಮಂತ್ರದಲ್ಲಿ ಪಠಿಸಿರುವ ಜ್ಯೋತಿಯು ಅಪೇಕ್ಷೆಯಿರುವದಿಲ್ಲ; ಆದರೆ ಅದು ಸಿಕ್ಕದೆ ಇರುವದರಿಂದ ಕಾಣ್ವರಿಗೆ (ಅದರ) ಅಪೇಕ್ಷೆಯಾಗುತ್ತದೆ. (ಹೀಗೆ) ಅಪೇಕ್ಷಾಭೇದವಿರುವದರಿಂದ ಅದೇ ಮಂತ್ರದಲ್ಲಿಯೇ ಜ್ಯೋತಿಯನ್ನು ತೆಗೆದುಕೊಳ್ಳುವದು ತೆಗೆದುಕೊಳ್ಳದಿರುವದು (ಇವು ಆಗಬಹುದಾಗಿರುತ್ತದೆ). ಹೇಗೆ ವಚನಭೇದದಿಂದ ಒಂದೇ ಅತಿರಾತ್ರದಲ್ಲಿಯೂ ಷೋಡಶಿಯನ್ನು ತೆಗೆದುಕೊಳ್ಳುವದು, ತೆಗೆದುಕೊಳ್ಳದಿರುವದು – ಇವು (ಆಗಬಹುದೋ) ಅದರಂತೆಯೇ ಇದು[1].

ಅಂತೂ ಈ ರೀತಿಯಲ್ಲಿ, ಮೊದಲನೆಯದಾಗಿ ಪ್ರಧಾನವಿಷಯದಲ್ಲಿ ಶ್ರುತಿಪ್ರಸಿದ್ಧಿಯಿಲ್ಲ (ಎಂದಾಯಿತು). ಸ್ಮೃತಿನ್ಯಾಯಪ್ರಸಿದ್ಧಿಗಳನ್ನಾದರೆ ಮುಂದೆ ಪರಿಹರಿಸಲಾಗುವದು.

---

1. ಅತಿರಾತ್ರವು ಕ್ರಿಯೆಯಾದ್ದರಿಂದ ಅದರಲ್ಲಿ ವಿಕಲ್ಪವಾಗಬಹುದು, ವಸ್ತುವಿಷಯದಲ್ಲಿ ಹೇಗೆ? –ಎಂಬ ಶಂಕೆಗೆ ದೃಷ್ಟಿಕ್ರಿಯೆಯಲ್ಲಿ ವಸ್ತುವಿಷಯವಾದ ವಿಕಲ್ಪವೂ ಆಗಬಹುದು ಎಂದು ನ್ಯಾ॥ ನಿ॥; 'ಮನಸಾನುದ್ರಷ್ಟವ್ಯಮ್' (ಬೃ. ೪-೪-೧೯) ಎಂಬುದು ಧ್ಯಾನಕ್ರಿಯೆಯಾದ್ದರಿಂದ ವಿಕಲ್ಪವು ಇರಬಹುದು ಎಂದು ರ॥ ಪ್ರ॥ ಪರಿಹಾರವನ್ನು ಬರೆದಿವೆ ಆದರೆ ಜ್ಞಾನದ ವಿಷಯಕ್ಕೆ ವಿಕಲ್ಪಕ್ಕೆ ಅವಕಾಶವಿಲ್ಲ; ಪ್ರಷ್ಟವ್ಯಮ್ ಎಂಬುದು ಧ್ಯಾನಕ್ರಿಯೆಯೂ ಅಲ್ಲ. ದೃಷ್ಟಾಂತದಲ್ಲಿ ವಚನಭೇದದಿಂದ ಗ್ರಹಣಾಗ್ರಹಣಗಳು ಆಗುವಂತೆ ದಾರ್ಷ್ಟಾಂತಿಕದಲ್ಲಿ ಅಪೇಕ್ಷಾಭೇದದಿಂದ ಜ್ಯೋತಿಯನ್ನು ಸೇರಿಸುವದೂ ಬಿಡುವದೂ ಆಗಬಹುದು –ಎಂದಿಷ್ಟೇ ಭಾಷ್ಯಕಾರರ ಅಭಿಪ್ರಾಯವೆಂದು ತೋರುತ್ತದೆ. 'ಬ್ರಹ್ಮಸ್ವರೂಪನಿರೂಪಣಾಯೈವ ಜ್ಯೋತಿರಧೀಯತೇ' ಎಂಬ ಭಾಷ್ಯವಾಕ್ಯವು ಇದು ವಸ್ತುನಿರೂಪಣವೆಂಬುದನ್ನು ಗಟ್ಟಿಗೊಳಿಸುತ್ತದೆ. ಈಶಾವಾಸ್ಯದಲ್ಲಿ 'ವಿದ್ಯಾಂ ಚಾವಿದ್ಯಾಂ ಚ ಎಂಬ ಮಂತ್ರಕ್ಕೆ ಶಾಖಾಭೇದದಿಂದ ಎರಡು ಅರ್ಥಗಳನ್ನು ಹೇಳಿರುವದನ್ನು ಇದಕ್ಕೆ ಹೋಲಿಸಬಹುದು.

## ೪. ಕಾರಣತ್ವಾಧಿಕರಣ (ಸೂ. ೧೪-೧೫)

(ಬ್ರಹ್ಮವೇ ಜಗತ್ಕಾರಣವೆಂದು ಎಲ್ಲಾ ಶ್ರುತಿಗಳಲ್ಲಿಯೂ ಹೇಳಿದೆ)

**ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ॥ ೧೪ ॥**

೧೪. ಆಕಾಶಾದಿಗಳಲ್ಲಿ (ವಿಗಾನವೆಂದರೂ ಅವುಗಳ) ಕಾರಣವಾಗಿ (ಬ್ರಹ್ಮವನ್ನು ಒಂದು ಕಡೆಯಲ್ಲಿ) ಹೇಳಿದಂತೆಯೇ (ಮಿಕ್ಕ ಎಲ್ಲಾ ಕಡೆಯಲ್ಲಿಯೂ) ಹೇಳಿರುವವರಿಂದ (ಗತಿಸಾಮಾನ್ಯವಿದೆ).

### ಪೂರ್ವಪಕ್ಷ: ಗತಿಸಾಮಾನ್ಯವು ಸಿದ್ಧವಾಗಲ್ಲ

(ಭಾಷ್ಯ)

೩೬೫. ಪ್ರತಿಪಾದಿತಂ ಬ್ರಹ್ಮಣೋ ಲಕ್ಷಣಮ್ । ಪ್ರತಿಪಾದಿತಂ ಚ ಬ್ರಹ್ಮವಿಷಯಂ ಗತಿಸಾಮಾನ್ಯಂ ವೇದಾನ್ತವಾಕ್ಯಾನಾಮ್ । ಪ್ರತಿಪಾದಿತಂ ಚ ಪ್ರಧಾನಸ್ಯ ಅಶಬ್ದತ್ವಮ್ । ತತ್ರ ಇದಮಪರಮ್ ಆಶಙ್ಕ್ಯತೇ । ನ ಜನ್ಮಾದಿಕಾರಣತ್ವಂ ಬ್ರಹ್ಮಣೋ ಬ್ರಹ್ಮವಿಷಯಂ ವಾ ಗತಿಸಾಮಾನ್ಯಂ ವೇದಾನ್ತವಾಕ್ಯಾನಾಂ ಪ್ರತಿಪಾದಯಿತುಂ ಶಕ್ಯಮ್ । ಕಸ್ಮಾತ್ ? ವಿಗಾನದರ್ಶನಾತ್ । ಪ್ರತಿವೇದಾನ್ತಂ ಹಿ ಅನ್ಯಾನ್ಯಾ ಸೃಷ್ಟಿಃ ಉಪಲಭ್ಯತೇ ಕ್ರಮಾದಿವೈಚಿತ್ರ್ಯಾತ್ । ತಥಾ ಹಿ — ಕ್ವಚಿತ್ "ಆತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತಿ ಆಕಾಶಾದಿಕಾ ಸೃಷ್ಟಿಃ ಆಮ್ನಾಯತೇ । ಕ್ವಚಿತ್ ತೇಜಆದಿಕಾ "ತತ್ತೇಜೋಽಸೃಜತ" (ಛಾಂ. ೬-೨-೩) ಇತಿ । ಕ್ವಚಿತ್ ಪ್ರಾಣಾದಿಕಾ "ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಮ್" (ಪ್ರ. ೬-೪) ಇತಿ । ಕ್ವಚಿತ್ ಅಕ್ರಮೇಣೈವ ಲೋಕಾನಾಮ್ ಉತ್ಪತ್ತಿರಾಮ್ನಾಯತೇ "ಸ ಇಮಾಲ್ಲೋಕಾನ್ನಸೃಜತ । ಅಮ್ಭೋ ಮರೀಚೀರ್ಮರಮಾಪಃ" (ಐ. ೪-೧) ಇತಿ । ತಥಾ ಕ್ವಚಿತ್ ಅಸತ್ಪೂರ್ವಿಕಾ ಸೃಷ್ಟಿಃ ಪಠ್ಯತೇ "ಅಸದ್ವಾ ಇದಮಗ್ರ ಆಸೀತ್ತತೋ ವೈ ಸದಜಾಯತ" (ತೈ. ೨-೭) ಇತಿ । "ಅಸದೇವೇದಮಗ್ರ ಆಸೀತ್ತತ್ ಸದಾಸೀತ್ ತತ್ಸಮಭವತ್" (ಛಾಂ. ೩-೧೯-೧) ಇತಿ ಚ । ಕ್ವಚಿತ್ ಅಸದ್ವಾದನಿರಾಕರಣೇನ ಸತ್ಪೂರ್ವಿಕಾ ಪ್ರಕ್ರಿಯಾ ಪ್ರತಿಜ್ಞಾಯತೇ "ತದ್ಧೈಕ ಆಹುರಸದೇವೇದಮಗ್ರ ಆಸೀತ್" ಇತ್ಯುಪಕ್ರಮ್ಯ "ಕುತಸ್ತು ಖಲು ಸೋಮ್ಯೈವಂ ಸ್ಯಾದಿತಿ ಹೋವಾಚ ಕಥಮಸತಃ ಸಜ್ಜಾಯೇತೇತಿ ಸತ್ತ್ವೇವ ಸೋಮ್ಯೇದಮಗ್ರ ಆಸೀತ್" (ಛಾಂ. ೬-೨-೧,೨) ಇತಿ । ಕ್ವಚಿತ್ ಸ್ವಯಂಕರ್ತೃಕೈವ

ವ್ಯಾಕ್ರಿಯಾ ಜಗತೋ ನಿಗದ್ಯತೇ "ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ ತನ್ನಾಮರೂಪಾಭ್ಯಾಮೇವ ವ್ಯಾಕ್ರಿಯತ" (ಬೃ. ೧-೪-೭) ಇತಿ । ಏವಮ್ ಅನೇಕಧಾ ವಿಪ್ರತಿಪತ್ತೇರ್ವಸ್ತುನಿ ಚ ವಿಕಲ್ಪಸ್ಯಾನುಪಪತ್ತೇಃ ನ ವೇದಾನ್ತವಾಕ್ಯಾನಾಂ ಜಗತ್ಕಾರಣಾವಧಾರಣಪರತಾ ನ್ಯಾಯ್ಯಾ । ಸ್ಮೃತಿನ್ಯಾಯಪ್ರಸಿದ್ಧಿಭ್ಯಾಂ ತು ಕಾರಣಾನ್ತರಪರಿಗ್ರಹೋ ನ್ಯಾಯ್ಯಃ ಇತಿ ॥

( ಭಾಷ್ಯಾರ್ಥ )

ಬ್ರಹ್ಮದ ಲಕ್ಷಣವನ್ನು ಪ್ರತಿಪಾದಿಸಿದ್ದಾಯಿತು[1]. ಬ್ರಹ್ಮವಿಷಯದ ಗತಿಸಾಮಾನ್ಯವನ್ನು ಪ್ರತಿಪಾದಿಸಿದ್ದಾಯಿತು[2]. ಪ್ರಧಾನವು ಅಶಬ್ದವೆಂಬುದನ್ನೂ ಪ್ರತಿಪಾದಿಸಿದ್ದಾಯಿತು[3]. ಇಲ್ಲಿ ಈ ಇನ್ನೊಂದು ಶಂಕೆಯನ್ನು ಮಾಡಲಾಗುತ್ತದೆ[4]. ಬ್ರಹ್ಮವು ಜನ್ಮಾದಿಕಾರಣವೆಂಬುದನ್ನಾಗಲಿ, ವೇದಾಂತವಾಕ್ಯಗಳಿಗೆ ಗತಿಸಾಮಾನ್ಯವನ್ನಾಗಲಿ ನಿಶ್ಚಯಿಸುವದಕ್ಕೆ ಆಗಲಾರದು. ಏಕೆ? ಎಂದರೆ ವಿಗಾನವು[5] ಕಂಡುಬರುತ್ತದೆಯಾದ್ದರಿಂದ. ಒಂದೊಂದು ವೇದಾಂತದಲ್ಲಿಯೂ[6] ಕ್ರಮವೇ ಮುಂತಾದ ವೈಚಿತ್ರ್ಯದಿಂದ ಬೇರೆ ಬೇರೆ (ಬಗೆಯ) ಸೃಷ್ಟಿಯೇ ಕಾಣಬರುತ್ತದೆ. ಹೇಗೆಂದರೆ ಒಂದು ಕಡೆಯಲ್ಲಿ "ಆತ್ಮನಿಂದ ಆಕಾಶವು ಹುಟ್ಟಿತು" (ತೈ. ೨-೧) ಎಂದು ಆಕಾಶಾದಿಕವಾದ ಸೃಷ್ಟಿಯನ್ನು ಹೇಳಿದೆ. ಒಂದು ಕಡೆಯಲ್ಲಿ "ಅದು ತೇಜಸ್ಸನ್ನು ಸೃಷ್ಟಿಸಿತು" (ಛಾಂ. ೬-೨-೩) ಎಂದು ತೇಜಆದಿ (ಸೃಷ್ಟಿಯನ್ನು ಹೇಳಿದೆ). ಒಂದು ಕಡೆಯಲ್ಲಿ "ಅವನು ಪ್ರಾಣವನ್ನು ಸೃಷ್ಟಿಸಿದನು. ಪ್ರಾಣದಿಂದ ಶ್ರದ್ಧೆಯನ್ನು (ಸೃಷ್ಟಿಸಿದನು)" (ಪ್ರ. ೬-೪) ಎಂದು ಪ್ರಾಣಾದಿಕವಾದ (ಸೃಷ್ಟಿಯನ್ನು ಹೇಳಿದೆ). ಒಂದು ಕಡೆಯಲ್ಲಿ ಕ್ರಮವಿಲ್ಲದೆಯೇ "ಅವನು ಅಂಭ, ಮರೀಚಿ, ಮರ, ಅಪ್ಪು – ಈ ಲೋಕಗಳನ್ನು ಸೃಷ್ಟಿಸಿದನು" (ಐ. ೧-೧) ಎಂದು ಲೋಕಗಳ ಉತ್ಪತ್ತಿಯನ್ನು ಹೇಳಿದೆ. ಇದರಂತೆ[7] ಒಂದು ಕಡೆಯಲ್ಲಿ "ಇದು ಮೊದಲು ಅಸತ್ತೇ ಆಗಿತ್ತು,

---

1. ಜಗತ್ಕಾರಣವಾಕ್ಯಗಳು ಬ್ರಹ್ಮವನ್ನೇ ಹೇಳುತ್ತವೆ ಎಂದು ತೋರಿಸಿ ಬ್ರಹ್ಮವು ಜಗಜ್ಜನ್ಮಾದಿಕಾರಣವೆಂಬ ಲಕ್ಷಣವನ್ನು ಪ್ರತಿಪಾದಿಸಿದಂತಾಯಿತು.

2. ಕಾರಣವು ಜಡವಲ್ಲ, ಜೀವನಲ್ಲ– ಎಂದು ತೋರಿಸಿದ್ದರಿಂದ ಗತಿಸಾಮಾನ್ಯವನ್ನು ಪ್ರತಿಪಾದಿಸಿದಂತಾಯಿತು.

3. ಪ್ರಧಾನವನ್ನು ಹೇಳುವಂತೆ ಕಾಣುವ ವಾಕ್ಯಗಳಲ್ಲಿ ನಿಜವಾಗಿ ಪ್ರಧಾನವನ್ನು ಹೇಳಿಲ್ಲ ಎಂದು ತಿಳಿಸಿ ಅದಕ್ಕೆ ಶ್ರುತಿಪ್ರಮಾಣವಿಲ್ಲವೆಂಬುದನ್ನು ಪ್ರತಿಪಾದಿಸಿದ್ದಾಯಿತು.

4. ಆಕ್ಷೇಪಸಂಗತಿಯಿಂದ ಈ ಅಧಿಕರಣವು ಹೊರಟಿದೆ ಎಂದು ಭಾವ.

5. ವಿರುದ್ಧವಾದ ಮಾತು. 6. ಉಪನಿಷತ್ತಿನಲ್ಲಿಯೂ.

7. ಕಾರ್ಯವಿಗಾನದಂತೆ ಕಾರಣವಿಗಾನವೂ ಇದೆ ಎಂದು ತೋರಿಸುವದಕ್ಕೆ ಪೂರ್ವಪಕ್ಷಿ ಹೊರಟಿರುತ್ತಾನೆ.

ಅದರಿಂದಲೇ ಸತ್ತು ಹುಟ್ಟಿತು" (ತೈ ೨-೭) ಎಂದು ಅಸತ್ಪೂರ್ವಕವಾದ ಸೃಷ್ಟಿಯನ್ನು ಹೇಳಿದೆ. ಒಂದು ಕಡೆಯಲ್ಲಿ "ಅಲ್ಲಿ ಕೆಲವರು ಇದು ಮೊದಲು ಅಸತ್ತೇ ಆಗಿತ್ತು ಎಂದು ಹೇಳುತ್ತಾರೆ" (ಛಾಂ. ೬-೨-೧) ಎಂದು ಉಪಕ್ರಮಿಸಿ 'ಸೋಮ್ಯನೆ, ಹೇಗೆತಾನೆ ಇದು ಆದೀತು ? ಎಂದನು. ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು ? ಸೋಮ್ಯನೆ, ಇದು ಮೊದಲು ಸತ್ತೇ ಆಗಿತ್ತು" (ಛಾಂ. ೬-೨-೨) ಎಂದು ಅಸದ್ವಾದವನ್ನು ನಿರಾಕರಿಸಿ ಸತ್ಪೂರ್ವಕವಾದ ಪ್ರಕ್ರಿಯೆಯನ್ನು ಹೇಳಿರುತ್ತದೆ. "ಅಲ್ಲಿ ಆಗ ಇದು ಅವ್ಯಾಕೃತವಾಗಿತ್ತು, ಅದು ನಾಮರೂಪಗಳಿಂದಲೇ ವ್ಯಾಕರಣವಾಯಿತು" (ಬೃ. ೧-೪-೭) ಎಂದು ಜಗತ್ತು ತಾನೇ ವ್ಯಾಕ್ರಿಯೆಯನ್ನು ಮಾಡಿಕೊಂಡಿತೆಂದು ಹೇಳಿದೆ. ಹೀಗೆ ಅನೇಕ ವಿಧವಾದ ವಿರುದ್ಧಪ್ರತಿಪತ್ತಿಯುಂಟಾಗುತ್ತಿರುವದರಿಂದಲೂ[1] ವಸ್ತುವಿನಲ್ಲಿ ವಿಕಲ್ಪವು ಹೊಂದುವದಾಗಿಲ್ಲವಾದ್ದರಿಂದಲೂ[2] ವೇದಾಂತವಾಕ್ಯಗಳಿಗೆ ಜಗತ್ಕಾರಣವನ್ನು ಗೊತ್ತುಪಡಿಸುವದರಲ್ಲಿ ತಾತ್ಪರ್ಯವಿದೆ ಎಂಬುದು ಯುಕ್ತವಲ್ಲ[3]. ಸ್ಮೃತಿ, ನ್ಯಾಯ – ಇವುಗಳಿಂದ ಪ್ರಸಿದ್ಧವಾಗುವದರಿಂದ[4] ಮತ್ತೊಂದು ಕಾರಣವನ್ನೇ ತೆಗೆದುಕೊಳ್ಳುವದು ನ್ಯಾಯ[5].

## ಸಿದ್ಧಾಂತಿ: ಕಾರಣದ ವಿಷಯದಲ್ಲಿ ವಿಗಾನವಿಲ್ಲ

(ಭಾಷ್ಯ)

೩೬೬. ಏವಂ ಪ್ರಾಪ್ತೇ ಬ್ರೂಮಃ। ಸತ್ಯಪಿ ಪ್ರತಿವೇದಾನ್ತಂ ಸೃಜ್ಯಮಾನೇಷು ಆಕಾಶಾದಿಷು ಕ್ರಮಾದಿದ್ವಾರಕೇ ವಿಗಾನೇ ನ ಸ್ರಷ್ಟರಿ ಕಿಂಚಿತ್ ವಿಗಾನಮ್ ಅಸ್ತಿ। ಕುತಃ? ಯಥಾವ್ಯಪದಿಷ್ಟೋಕ್ತೇಃ। ಯಥಾಭೂತೋ

---

1. ವಾಕ್ಯದಿಂದ ಆಗುವ ಜ್ಞಾನಗಳು ಒಂದಕ್ಕೊಂದು ವಿರುದ್ಧವಾಗಿವೆ.

2. ವಸ್ತುವು ಹಾಗೂ ಇರಬಹುದು, ಹೀಗೂ ಇರಬಹುದು –ಎಂದು ಹೇಳುವದಕ್ಕೆ ಬರುವದಿಲ್ಲವೆಂಬುದನ್ನು ವೇದಾಂತಿಗಳಂತೆ ಸಾಂಖ್ಯನೂ ಒಪ್ಪಿರುತ್ತಾನೆ. ಇದು ಎಲ್ಲರೂ ಒಪ್ಪತಕ್ಕ ನ್ಯಾಯವಾಗಿದೆ.

3. ಬ್ರಹ್ಮಕಾರಣವಾದದಲ್ಲಿಯೇ ಶ್ರುತಿಗೆ ತಾತ್ಪರ್ಯವಿದೆ ಎಂದಾಗಿದ್ದರೆ ಪ್ರಧಾನಕಾರಣವಾದವು ಶ್ರುತಿವಿರುದ್ಧವೆಂದು ಬಿಡಬಹುದಾಗಿತ್ತು. ಶ್ರುತಿಗೆ ವಿರುದ್ಧವೂ ಅಲ್ಲದೆ ಸ್ಮೃತಿಯುಕ್ತಿಗಳಿಗೂ ಸಮ್ಮತವಾದ ಪ್ರಧಾನವನ್ನೇಕೆ ಬಿಡಬೇಕು ? –ಎಂದು ಆಕ್ಷೇಪ

4. ಇಲ್ಲಿ ಸಾಂಖ್ಯರ ಸ್ಮೃತಿಯುಕ್ತಿಗಳನ್ನೇ ಪರಾಮರ್ಶಿಸಿದೆ. ಇವನ್ನು ಮುಂದಿನ ಅಧ್ಯಾಯದಲ್ಲಿ ಖಂಡಿಸಿದೆ.

5. ಪ್ರಧಾನವನ್ನು ತೆಗೆದುಕೊಳ್ಳಬೇಕು ಎಂದರ್ಥ. ಶ್ರುತಿಸಮನ್ವಯವು ಬ್ರಹ್ಮದಲ್ಲಿ ಎಂದು ನಿಶ್ಚಯಿಸುವದಕ್ಕೆ ಈ ಆಕ್ಷೇಪವನ್ನೂ ಪರಿಹರಿಸುವದು ಅವಶ್ಯವಾಗಿದೆ ಎಂದು ಭಾವ.

ಹಿ ಏಕಸ್ಮಿನ್ ವೇದಾನ್ತೇ ಸರ್ವಜ್ಞಃ ಸರ್ವೇಶ್ವರಃ ಸರ್ವಾತ್ಮಾ ಏಕೋಽದ್ವಿತೀಯಃ ಕಾರಣತ್ವೇನ ವ್ಯಪದಿಷ್ಟಃ, ತಥಾಭೂತ ಏವ ವೇದಾನ್ತಾನ್ತರೇಷ್ವಪಿ ವ್ಯಪದಿಶ್ಯತೇ। ತತ್ ಯಥಾ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತಿ। ಅತ್ರ ತಾವತ್ ಜ್ಞಾನಶಬ್ದೇನ ಪರೇಣ ಚ ತದ್ವಿಷಯೇಣ ಕಾಮಯಿತೃತ್ವವಚನೇನ ಚೇತನಂ ಬ್ರಹ್ಮ ನ್ಯರೂಪಯತ್। ಅಪರಪ್ರಯೋಜ್ಯತ್ವೇನ ಈಶ್ವರಂ ಕಾರಣಮ್ ಅಬ್ರವೀತ್। ತದ್ವಿಷಯೇಣೈವ ಪರೇಣ ಆತ್ಮಶಬ್ದೇನ ಶರೀರಾದಿಕೋಶಪರಂಪರಯಾ ಚ ಅನ್ತರನುಪ್ರವೇಶನೇನ ಸರ್ವೇಷಾಮ್ ಅನ್ತಃ ಪ್ರತ್ಯಗಾತ್ಮಾನಂ ನಿರಧಾರಯತ್ । "ಬಹುಸ್ಯಾಂ ಪ್ರಜಾಯೇಯ" (ತೈ. ೨-೬) ಇತಿ ಚ ಆತ್ಮವಿಷಯೇಣ ಬಹುಭವನಾನುಶಂಸನೇನ ಸೃಜ್ಯಮಾನಾನಾಂ ವಿಕಾರಾಣಾಂ ಸ್ರಷ್ಟುಃ ಅಭೇದಮ್ ಅಭಾಷತ। ತಥಾ "ಇದಂ ಸರ್ವಮಸೃಜತ। ಯದಿದಂ ಕಿಂ ಚ" (ತೈ. ೨-೬) ಇತಿ ಸಮಸ್ತಜಗತ್ಸೃಷ್ಟಿನಿರ್ದೇಶೇನ ಪ್ರಾಕ್ಸೃಷ್ಟೇಃ ಅದ್ವಿತೀಯಂ ಸ್ರಷ್ಟಾರಮ್ ಆಚಷ್ಟೇ । ತದತ್ರ ಯಲ್ಲಕ್ಷಣಂ ಬ್ರಹ್ಮಕಾರಣತ್ವೇನ ವಿಜ್ಞಾತಂ ತಲ್ಲಕ್ಷಣಮೇವ ಅನ್ಯತ್ರಾಪಿ ವಿಜ್ಞಾಯತೇ — "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ. ೬-೨-೧) "ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ। ತತ್ತೇಜೋಽಸೃಜತ" (ಛಾಂ. ೬-೨-೩) ಇತಿ। ತಥಾ "ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ ಕಿಂಚನ ಮಿಷತ್। ಸ ಈಕ್ಷತ ಲೋಕಾನ್ನು ಸೃಜೈ" (ಐ. ೪-೧,೨) ಇತಿ ಚ । ಏವಂಜಾತೀಯಕಸ್ಯ ಕಾರಣಸ್ವರೂಪನಿರೂಪಣಸ್ಯ ವಾಕ್ಯಜಾತಸ್ಯ ಪ್ರತಿವೇದಾನ್ತಮ್ ಅವಿಗೀತಾರ್ಥತ್ವಾತ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಸೃಷ್ಟಿಸಲ್ಪಡುವ ಆಕಾಶಾದಿಗಳ (ವಿಷಯದ)ಲ್ಲಿ ಕ್ರಮವೇ ಮುಂತಾದದ್ದರ ವಿಗಾನವಿದ್ದರೂ ಸ್ರಷ್ಟೃವಿನ ವಿಷಯದಲ್ಲಿ ಯಾವ ವಿಗಾನವೂ ಇರುವದಿಲ್ಲ. ಏಕೆ? ಎಂದರೆ ಯಥಾವ್ಯಪದಿಷ್ಟೋಕ್ತಿಯಿರುವದರಿಂದ. (ಇದರ ವಿವರ) : ಒಂದು ವೇದಾಂತದಲ್ಲಿ ಎಂಥ ಸರ್ವಜ್ಞನೂ ಸರ್ವೇಶ್ವರನೂ ಸರ್ವಾತ್ಮನೂ, ತನಗೆರಡನೆಯದಿಲ್ಲದ ಒಬ್ಬನೇ ಒಬ್ಬನೂ[1] (ಆದ ಪರಮಾತ್ಮನು) ಜಗತ್ತಿಗೆ ಕಾರಣನೆಂದು ಉಕ್ತ

1. ಅದ್ವಿತೀಯಬ್ರಹ್ಮವೇ ಜಗತ್ಕಾರಣವೆಂದು ಬರೆದಿರುವದನ್ನು ಲಕ್ಷಿಸಬೇಕು.

ನಾಗಿರುತ್ತಾನೋ, ಅಂಥವನೇ ಬೇರೆ ವೇದಾಂತಗಳಲ್ಲಿಯೂ ಉಕ್ತನಾಗಿರುತ್ತಾನೆ. ಅದು ಹೇಗೆಂಪರೆ ಮೊದಲನೆಯದಾಗಿ (೧) "ಸತ್ಯಂ ಜ್ಞಾನಮನನ್ತಂ ಬ್ರಹ್ಮ'' (ತೈ. ೨-೧) ಎಂಬಲ್ಲಿ ಜ್ಞಾನಶಬ್ದವಿರುವದರಿಂದಲೂ ಮುಂದೆ ಅದರ ವಿಷಯವಾಗಿ ಕಾಮಯಿತೃತ್ವವನ್ನು ಹೇಳಿರುವದರಿಂದಲೂ ಚೇತನವಾದ ಬ್ರಹ್ಮವನ್ನು ತಿಳಿಸಿದೆ. ಮತ್ತೊಬ್ಬರಿಂದ ಪ್ರೇರಿತನಾಗಿರುವದರಿಂದ ಕಾರಣವು ಈಶ್ವರನು[1] ಎಂದು ಹೇಳಿದೆ. ಅದರ ವಿಷಯವಾಗಿಯೇ ಮುಂದೆ ಆತ್ಮಶಬ್ದ (ವಿರುವದ)ರಿಂದಲೂ ಕೋಶಪರಂಪರೆಯಿಂದ ಒಳಗೆ ಹೊಗಿಸುವದರಿಂದಲೂ ಎಲ್ಲರಿಗೂ ಒಳಗಿರುವ ಆತ್ಮನೇ (ಅದೆಂದು) ನಿಶ್ಚಯಿಸಿರುತ್ತದೆ. "ಬಹು ಸ್ಯಾಂ ಪ್ರಜಾಯೇಯ'' (ತೈ. ೨-೬) ಎಂದು ತನ್ನ ವಿಷಯದಲ್ಲಿ ಬಹುವಾಗುವಿಕೆಯನ್ನು ಹೇಳಿರುವದರಿಂದ ಸೃಷ್ಟಿಸಲ್ಪಡುವ ಕಾರ್ಯಗಳು ಸ್ರಷ್ಟೃವಿಗಿಂತ ಭಿನ್ನವಲ್ಲವೆಂದು ಹೇಳಿದೆ. ಹಾಗೂ "ಇದಂ ಸರ್ವಮಸೃಜತ। ಯದಿದಂ ಕಿಂಚ'' (ತೈ. ೨-೬) ಎಂದು ಸಮಸ್ತಜಗತ್ತನ್ನೂ ಸೃಷ್ಟಿ(ಮಾಡಿದನೆಂದು) ಹೇಳಿದ್ದರಿಂದ ಸೃಷ್ಟಿಗೆ ಪೂರ್ವದಲ್ಲಿ ಸ್ರಷ್ಟೃವು ಅದ್ವಿತೀಯನಾಗಿದ್ದನೆಂದು ಹೇಳಿದೆ(ಯೆಂದಾಗುತ್ತದೆ). ಹೀಗೆ ಇಲ್ಲಿ ಯಾವ ಸ್ವರೂಪದ ಬ್ರಹ್ಮವು ಕಾರಣವೆಂದು ತಿಳಿದುಬರುತ್ತದೆಯೋ ಅದೇ ಸ್ವರೂಪದ (ಬ್ರಹ್ಮ)ವೇ (೨) "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ ೬-೨-೧) "ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ। ತತ್ತೇಜೋಽಸೃಜತ" (ಛಾಂ. ೬-೨-೩) "ಸೋಮ್ಯನೆ, ಇದು ಮೊದಲು ತನಗೆರಡನೆಯದಿಲ್ಲದ ಸತ್ತೆಂದೇ ಆಗಿತ್ತು" (ಛಾಂ. ೬-೨-೧) "ಅದು ಬಹುವಾಗುವೆನು, ಹುಟ್ಟುವೆನು ಎಂದು ಆಲೋಚಿಸಿ ನೋಡಿತು. ಅದು ತೇಜಸ್ಸನ್ನು ಸೃಜಿಸಿತು" (ಛಾಂ. ೬-೨-೩) ಎಂದು ಮತ್ತೊಂದು ಕಡೆಯಲ್ಲಿಯೂ ತಿಳಿದುಬರುತ್ತದೆ. ಮತ್ತು "ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್। ಸ ಈಕ್ಷತ ಲೋಕಾನ್ನು ಸೃಜೈ" (ಐ. ೪-೧-೧.೨) -ಇದು ಮೊದಲು ಆತ್ಮನೇ ಆಗಿತ್ತು, ಮತ್ತೊಂದು ಅಲುಗಾಡುವದು ಯಾವದೂ ಇರಲಿಲ್ಲ. ಅವನು ಲೋಕವನ್ನು ಸೃಷ್ಟಿಮಾಡುವೆನು ಎಂದು (ಯೋಚಿಸಿ) ನೋಡಿದನು -ಎಂದೂ (ಮತ್ತೊಂದು ಕಡೆಯಲ್ಲಿದೆ). ಇಂಥ ಜಾತಿಯ, ಕಾರಣಸ್ವರೂಪವನ್ನು ಗೊತ್ತುಪಡಿಸುವದರಲ್ಲಿ ತಾತ್ಪರ್ಯವುಳ್ಳ, ವಾಕ್ಯಸಮೂಹವು ಪ್ರತಿವೇದಾಂತದಲ್ಲಿಯೂ ಅವಿರುದ್ಧವಾದ ಅರ್ಥವನ್ನೇ (ಹೇಳುತ್ತಿರು)ವದರಿಂದ (ನಮ್ಮ ಅಭಿಪ್ರಾಯವು ಸರಿಯಾಗಿರುತ್ತದೆ).

---

1. ಈಶ್ವರನು ಎಂಬ ಶಬ್ದವನ್ನು ಅದ್ವಿತೀಯಬ್ರಹ್ಮಕ್ಕೆ ಉಪಯೋಗಿಸಿದೆ ಎಂಬುದನ್ನು ಲಕ್ಷಿಸಬೇಕು. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

## ಕಾರ್ಯವಿಷಯದ ವಿಗಾನವೂ ಇಲ್ಲ, ಇದ್ದರೂ ಚಿಂತೆಯಿಲ್ಲ

( ಭಾಷ್ಯ )

೩೬೭ ಕಾರ್ಯವಿಷಯಂ ತು ವಿಗಾನಂ ದೃಶ್ಯತೇ ಕ್ವಚಿತ್ ಆಕಾಶಾದಿಕಾ ಸೃಷ್ಟಿಃ ಕ್ವಚಿತ್ ತೇಜಆದಿಕಾ ಇತ್ಯೇವಂಜಾತೀಯಕಮ್ । ನ ಚ ಕಾರ್ಯವಿಷಯೇಣ ವಿಗಾನೇನ ಕಾರಣಮಪಿ ಬ್ರಹ್ಮ ಸರ್ವವೇದಾನ್ತೇಷು ಅವಿಗೀತಮ್ ಅಧಿಗಮ್ಯಮಾನಮ್ ಅವಿವಕ್ಷಿತಂ ಭವಿತುಮರ್ಹತಿ ಇತಿ ಶಕ್ಯತೇ ವಕ್ತುಮ್ । ಅತಿಪ್ರಸಙ್ಗಾತ್ । ಸಮಾಧಾಸ್ಯತಿ ಚ ಆಚಾರ್ಯಃ ಕಾರ್ಯವಿಷಯಮಪಿ ವಿಗಾನಂ "ನ ವಿಯದಶ್ರುತೇಃ" (೨-೩-೧) ಇತ್ಯಾರಭ್ಯ। ಭವೇದಪಿ ಕಾರ್ಯಸ್ಯ ವಿಗೀತತ್ವಮ್ । ಅಪ್ರತಿಪಾದ್ಯತ್ವಾತ್ । ನ ಹಿ ಅಯಂ ಸೃಷ್ಟ್ಯಾದಿಪ್ರಪಞ್ಚಃ ಪ್ರತಿಪಿಪಾದಯಿಷಿತಃ। ನ ಹಿ ತತ್ಪ್ರತಿಬದ್ಧಃ ಕಶ್ಚಿತ್ ಪುರುಷಾರ್ಥಃ ದೃಶ್ಯತೇ ಶ್ರೂಯತೇ ವಾ । ನ ಚ ಕಲ್ಪಯಿತುಂ ಶಕ್ಯತೇ । ಉಪಕ್ರಮೋಪಸಂಹಾರಾಭ್ಯಾಂ ತತ್ರ ತತ್ರ ಬ್ರಹ್ಮವಿಷಯೈರ್ವಾಕ್ಯೈಃ ಸಾಕಮ್ ಏಕವಾಕ್ಯತಾಯಾ ಗಮ್ಯಮಾನತ್ವಾತ್ । ದರ್ಶಯತಿ ಚ ಸೃಷ್ಟ್ಯಾದಿಪ್ರಪಞ್ಚಸ್ಯ ಬ್ರಹ್ಮಪ್ರತಿಪತ್ತ್ಯರ್ಥತಾಮ್ "ಅನ್ನೇನ ಸೋಮ್ಯ ಶುಙ್ಗೇನಾಪೋ ಮೂಲಮನ್ವಿಚ್ಛಾದ್ಭಿಃ ಸೋಮ್ಯ ಶುಙ್ಗೇನ ತೇಜೋ ಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಙ್ಗೇನ ಸನ್ಮೂಲಮನ್ವಿಚ್ಛ" (ಛಾಂ.೬-೮-೪) ಇತಿ। ಮೃದಾದಿದೃಷ್ಟಾನ್ತೈಶ್ಚ ಕಾರ್ಯಸ್ಯ ಕಾರಣೇನ ಅಭೇದಂ ವದಿತುಂ ಸೃಷ್ಟ್ಯಾದಿಪ್ರಪಞ್ಚಃ ಶ್ರಾವ್ಯತೇ ಇತಿ ಗಮ್ಯತೇ। ತಥಾ ಚ ಸಂಪ್ರದಾಯ ವಿದೋ ವದನ್ತಿ "ಮೃಲ್ಲೋಹವಿಸ್ಫುಲಿಙ್ಗಾದ್ಯೈಃ ಸೃಷ್ಟಿರ್ಯಾ ಚೋದಿತಾನ್ಯಥಾ। ಉಪಾಯಃ ಸೋಽವತಾರಾಯ ನಾಸ್ತಿ ಭೇದಃ ಕಥಂಚನ ॥" (ಮಾಂ. ಕಾ. ೩-೧೫) ಇತಿ। ಬ್ರಹ್ಮಪ್ರತಿಪತ್ತಿಪ್ರತಿಬದ್ಧಂ ತು ಫಲಂ ಶ್ರೂಯತೇ "ಬ್ರಹ್ಮವಿದಾಪ್ನೋತಿ ಪರಮ್।" (ತೈ. ೨-೧), "ತರತಿ ಶೋಕಮಾತ್ಮವಿತ್" (ಛಾಂ. ೭-೧-೩), "ತಮೇವ ವಿದಿತ್ವಾತಿಮೃತ್ಯುಮೇತಿ" (ಶ್ವೇ. ३-೮) ಇತಿ। ಪ್ರತ್ಯಕ್ಷಾವಗಮಂ ಚ ಇದಂ ಫಲಮ್। "ತತ್ತ್ವಮಸಿ" (ಛಾಂ. ೬-೮-೭) ಇತಿ ಅಸಂಸಾರ್ಯಾತ್ಮತ್ವಪ್ರತಿಪತ್ತೌ ಸತ್ಯಾಂ ಸಂಸಾರ್ಯಾತ್ಮತ್ವವ್ಯಾವೃತ್ತೇಃ ॥

(ಭಾಷ್ಯಾರ್ಥ)

ಕಾರ್ಯದ ವಿಷಯದಲ್ಲಾದರೆ ಒಂದು ಕಡೆಯಲ್ಲಿ ಆಕಾಶಾದಿಕಸೃಷ್ಟಿ, ಒಂದು ಕಡೆಯಲ್ಲಿ ತೇಜಆದಿಕಸೃಷ್ಟಿ -ಎಂಬೀ ಜಾತಿಯ ವಿಗಾನವು ಕಂಡು

ಬರುತ್ತದೆ, (ನಿಜ); ಆದರೆ ಕಾರ್ಯವಿಷಯದ ವಿಗಾನದಿಂದ ಕಾರಣವಾದ ಬ್ರಹ್ಮವು ಸರ್ವವೇದಾಂತಗಳಲ್ಲಿಯೂ ಯಾವ ವಿರೋಧವೂ ಇಲ್ಲವೆ ತಿಳಿಯ ಬರುತ್ತಿರುವಲ್ಲಿ (ಅದೂ) ಅವಿವಕ್ಷಿತವಾಗಿರಬೇಕೆಂದು ಹೇಳುವದಕ್ಕಾಗುವದಿಲ್ಲ. ಏಕೆಂದರೆ (ಆಗ) ಅತಿಪ್ರಸಂಗವಾಗುವದು.[1] **ಕಾರ್ಯವಿಷಯದಲ್ಲಿರುವ ವಿಗಾನಕ್ಕೆ ಕೂಡ ಆಚಾರ್ಯರು "ನ ವಿಯದಶ್ರುತೇಃ" (೨-೩-೧) ಎಂಬ (ಸೂತ್ರ)ದಿಂದ ಹಿಡಿದು** (ಮುಂದಿನ ಗ್ರಂಥದಲ್ಲಿ) **ಸಮಾಧಾನವನ್ನು ಹೇಳುವರು.**[2] (ಇದಲ್ಲದೆ) **ಕಾರ್ಯವು ಪ್ರತಿಪಾದ್ಯವಲ್ಲದ್ದರಿಂದ (ಅದರ ವಿಷಯಕ್ಕೆ) ವಿಗಾನವಿದ್ದರೂ ಇರಬಹುದು.** ಹೇಗೆಂದರೆ **ಈ ಸೃಷ್ಟಿಯೇ ಮುಂತಾದ (ವಿವರವನ್ನು ಶ್ರುತಿಯಲ್ಲಿ) ಪ್ರತಿಪಾದಿಸುವ ಅಭಿಪ್ರಾಯವಿಲ್ಲ; ಏಕೆಂದರೆ ಅದರಿಂದಾಗುವ ಪುರುಷಾರ್ಥವು ಯಾವದೂ ಕಾಣಿಸುವದೂ ಇಲ್ಲ, ಶ್ರುತಿಯಲ್ಲಿ ಹೇಳಿಯೂ ಇಲ್ಲ. (ಇದಕ್ಕೆ ಯಾವ ಪುರುಷಾರ್ಥವನ್ನಾದರೂ) ಕಲ್ಪಿಸುವದೂ ಆಗುವದಿಲ್ಲ. ಏಕೆಂದರೆ ಉಪಕ್ರಮೋಪಸಂಹಾರಗಳಿಂದ ಅಲ್ಲಲ್ಲಿರುವ ಬ್ರಹ್ಮವಿಷಯದ ವಾಕ್ಯಗಳೊಡನೆ (ಸೃಷ್ಟಿವಾಕ್ಯಗಳಿಗೆ) ಏಕವಾಕ್ಯತೆಯು (ಇರುವದು) ಗೊತ್ತಾಗುತ್ತದೆ.** "ಸೋಮ್ಯನೆ, ಅನ್ನನೆಂಬ ಕಾರ್ಯದಿಂದ ಅಪ್ಪೆಂಬ ಮೂಲವನ್ನು ಹುಡುಕಿಕೊ, ಅಪ್ಪೆಂಬ ಕಾರ್ಯದಿಂದ ತೇಜವೆಂಬ ಮೂಲವನ್ನು ಹುಡುಕಿಕೊ, ಸೋಮ್ಯನೆ, ತೇಜಸ್ಸೆಂಬ ಕಾರ್ಯದಿಂದ ಸತ್ತೆಂಬ ಮೂಲವನ್ನು ಹುಡುಕಿಕೊ" (ಛಾಂ ೬-೮-೪) ಎಂದು **ಸೃಷ್ಟಿಯೇ ಮುಂತಾದ ವಿವರಕ್ಕೆ ಬ್ರಹ್ಮಜ್ಞಾನವೇ ಪ್ರಯೋಜನವೆಂಬುದನ್ನು (ಶ್ರುತಿಯು) ತಿಳಿಸಿಯೂ ಇರುತ್ತದೆ.** ಕಾರ್ಯವು ಕಾರಣಕ್ಕಿಂತ ಬೇರೆಯಲ್ಲವೆಂಬುದನ್ನು ತಿಳಿಸುವದಕ್ಕಾಗಿಯೇ ಸೃಷ್ಟ್ಯಾದಿವಿವರವನ್ನು ಶ್ರುತಿಯಲ್ಲಿ ಹೇಳಿದೆ ಎಂಬುದು ಮೃದಾದಿದೃಷ್ಟಾಂತಗಳಿಂದಲೂ ಗೊತ್ತಾಗುತ್ತದೆ. ಆದ್ದರಿಂದಲೇ

---

1. ಈ ಅಧ್ಯಾಯದಲ್ಲಿ ಕಾರ್ಯವಿಷಯದ ವಿಗಾನಕ್ಕೆ ಸಮಾಧಾನವನ್ನು ಹೇಳುವ ಕಾರಣವಿಲ್ಲ; ಏಕೆಂದರೆ ಅದ್ವಿತೀಯಬ್ರಹ್ಮವು ಜಗಜ್ಜನ್ಮಾದಿಕಾರಣವಾಗಿದೆ, ಅದರಲ್ಲಿಯೇ ಶ್ರುತಿಸಮನ್ವಯ -ಎಂಬಿದೇ ಈ ಅಧ್ಯಾಯದ ಅರ್ಥ. ಕಾರ್ಯವು ಬ್ರಹ್ಮಜ್ಞಾನಾರ್ಥವಾಗಿರುವದರಿಂದಲೂ ಅದು ಮಿಥ್ಯೆಯೆಂದು ಜಿಜ್ಞಾಸಾಸೂತ್ರ, ಜನ್ಮಾದಿಸೂತ್ರಗಳಲ್ಲಿ ಸೂಚಿತವಾಗಿಯೇ ಇರುವದರಿಂದಲೂ ಅದರ ವಿಗಾನವು ಇದ್ದರೂ ಚಿಂತೆಯಿಲ್ಲ. ಇದನ್ನು ತಿಳಿಸುವದಕ್ಕೆ ಮುಂದಿನ ಭಾಷ್ಯವಾಕ್ಯವು ಬಂದಿದೆ ಎರಡನೆಯ ಅಧ್ಯಾಯದಲ್ಲೇಕೆ ಇದರ ವಿಚಾರವು ಬಂದಿದೆ ಎಂಬುದಕ್ಕೆ ೨-೩-೧ರ ಭಾಷ್ಯವನ್ನು ನೋಡಿ.

2. ಆದ್ದರಿಂದ ಇಲ್ಲಿ ವಿಗಾನವನ್ನು ಅಂಗೀಕರಿಸಿ ಉತ್ತರ ಹೇಳಿದೆ ಎಂದು ತಿಳಿಯಬೇಕು.

**ಸಂಪ್ರದಾಯವನ್ನು ಬಲ್ಲವರು**[1] "ಮಣ್ಣು, ಕಬ್ಬಿಣ, ಕಿಡಿ -ಮುಂತಾದ (ದೃಷ್ಟಾಂತಗಳಿಂದ) ಬೇರೆಬೇರೆಯಾಗಿ ಸೃಷ್ಟಿಯನ್ನು ಹೇಳಿದೆಯಷ್ಟೆ, ಅದು (ಅದ್ವೈತಜ್ಞಾನಕ್ಕೆ ಬುದ್ಧಿಯನ್ನು) ಇಳಿಸುವದಕ್ಕೆ ಉಪಾಯವೇ. (ಆದ್ದರಿಂದ) ಹೇಗೂ ಭೇದವಿರುವದಿಲ್ಲ' (ಮಾಂ. ಕಾ. ೩-೧೫) ಎಂದು ಹೇಳಿರುತ್ತಾರೆ.

ಅವರೆ ಬ್ರಹ್ಮಜ್ಞಾನದಿಂದಾಗುವ ಫಲವನ್ನು "ಬ್ರಹ್ಮವನ್ನು ಅರಿತು ಕೊಂಡವನು ಪರಮಪುರುಷಾರ್ಥವನ್ನು ಪಡೆದುಕೊಳ್ಳುತ್ತಾನೆ" (ತೈ. ೨-೧), "ಆತ್ಮನನ್ನು ಅರಿತುಕೊಂಡವನು ಶೋಕವನ್ನು ದಾಟುತ್ತಾನೆ" (ಛಾಂ. ೭-೧-೩) "ಆತನನ್ನೇ ಅರಿತುಕೊಂಡರೆ ಅತಿಮೃತ್ಯುವನ್ನು ಹೊಂದುತ್ತಾನೆ'' (ಶ್ವೇ.೩-೮) ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಮತ್ತು **ಈ ಫಲವು ಪ್ರತ್ಯಕ್ಷವಾಗಿ ಗೊತ್ತುಮಾಡಿಕೊಳ್ಳಬಹುದಾದದ್ದೂ** (ಆಗಿದೆ); **ಏಕೆಂದರೆ "ಅದೇ ನೀನಾಗಿರುವೆ'' (ಛಾಂ. ೬-೮-೭) ಎಂದು ಅಸಂಸಾರ್ಯಾತ್ಮಭಾವವನ್ನು ಅರಿತುಕೊಂಡರೆ ಸಂಸಾರ್ಯಾತ್ಮತ್ವವು ತೊಲಗುತ್ತದೆ.**[2]

**ಸಮಾಕರ್ಷಾತ್ ॥ ೧೫ ॥**

೧೫. ಎಳೆದುಕೊಂಡು (ಹೇಳುವ)ದರಿಂದ (ಇದು ಅಸತ್ತಲ್ಲ).

## ಅಸತ್ಕಾರಣಶ್ರುತಿಯ ಅರ್ಥ

(ಭಾಷ್ಯ)

೩೬೮. ಯತ್ ಪುನಃ ಕಾರಣವಿಷಯಂ ವಿಗಾನಂ ದರ್ಶಿತಮ್ ''ಅಸದ್ವಾ ಇದಮಗ್ರ ಆಸೀತ್" (ತೈ. ೨-೭) ಇತ್ಯಾದಿ, ತತ್ ಪರಿಹರ್ತವ್ಯಮ್। ಅತ್ರೋಚ್ಯತೇ । "ಅಸದ್ವಾ ಇದಮಗ್ರ ಆಸೀತ್'' (ತೈ. ೨-೭) ಇತಿ ನಾತ್ರ ಅಸತ್ ನಿರಾತ್ಮಕಂ ಕಾರಣತ್ವೇನ ಶ್ರಾವ್ಯತೇ। ಯತಃ ''ಅಸನ್ನೇವ ಸ ಭವತಿ। ಅಸದ್ ಬ್ರಹ್ಮೇತಿ ವೇದ ಚೇತ್। ಅಸ್ತಿ ಬ್ರಹ್ಮೇತಿ ಚೇದ್ವೇದ । ಸನ್ತಮೇನಂ ತತೋ ವಿದುಃ" (ತೈ. ೨-೬) ಇತಿ ಅಸದ್ವಾದಾಪವಾದೇನ ಅಸ್ತಿತ್ವಲಕ್ಷಣಂ ಬ್ರಹ್ಮ ಅನ್ನಮಯಾದಿಕೋಶಪರಂಪರಯಾ ಪ್ರತ್ಯಗಾತ್ಮಾನಂ

---

1. ಗೌಡಪಾದರವರು. ಇವರ ವಿಷಯಕ್ಕೆ ಪೀಠಿಕೆಯನ್ನು ನೋಡಿ.

2. ಹೀಗೆ ಜ್ಞಾನದ ಪ್ರಯೋಜನವಾದ ಅಜ್ಞಾನತತ್ಕಾರ್ಯನಿವೃತ್ತಿಯು ದೃಷ್ಟವೂ ಶ್ರುತವೂ ಆಗಿರುತ್ತವೆ ; ಸೃಷ್ಟ್ಯಾದಿಜ್ಞಾನದ ಪ್ರಯೋಜನವು ಅನುಭವದಲ್ಲಿಲ್ಲ, ಶ್ರುತಿಯಲ್ಲಿಯೂ ಇಲ್ಲ, ಕಲ್ಪಿಸುವದಕ್ಕೂ ಬರುವದಿಲ್ಲ. ಆದ್ದರಿಂದ ಕಾರ್ಯವಿಷಯದ ವಿಗಾನವಿದ್ದರೂ ಬಾಧಕವಿಲ್ಲ -ಎಂದು ಉಪಸಂಹಾರಮಾಡಿದಂತೆ ಆಯಿತು.

ನಿರ್ಧಾರ್ಯ "ಸೋಽಕಾಮಯತ" (ತೈ ೨-೬) ಇತಿ ತಮೇವ ಪ್ರಕೃತಂ ಸಮಾಕೃಷ್ಯ ಸಪ್ರಪಞ್ಚಾಂ ಸೃಷ್ಟಿಂ ತಸ್ಮಾತ್ ಶ್ರಾವಯಿತ್ವಾ "ತತ್ಸತ್ಯಮಿತ್ಯಾಚಕ್ಷತೇ" (ತೈ.೨-೬) ಇತಿ ಚ ಉಪಸಂಹೃತ್ಯ "ತದಪ್ಯೇಷ ಶ್ಲೋಕೋ ಭವತಿ" (ತೈ. ೨-೬) ಇತಿ ತಸ್ಮಿನ್ನೇವ ಪ್ರಕೃತೇ ಅರ್ಥೇ ಶ್ಲೋಕಮ್ ಉದಾಹರತಿ— "ಅಸದ್ವಾ ಇದಮಗ್ರ ಆಸೀತ್" (ತೈ. ೨-೭) ಇತಿ । ಯದಿ ತು ಅಸತ್ ನಿರಾತ್ಮಕಮ್ ಅಸ್ಮಿನ್ ಶ್ಲೋಕೇ ಅಭಿಪ್ರೇಯೇತ, ತತಃ ಅನ್ಯಸಮಾಕರ್ಷಣೇ ಅನ್ಯಸ್ಯ ಉದಾಹರಣಾತ್ ಅಸಂಬದ್ಧಂ ವಾಕ್ಯಮ್ ಆಪದ್ಯೇತ | ತಸ್ಮಾತ್ ನಾಮರೂಪವ್ಯಾಕೃತವಸ್ತುವಿಷಯಃ ಪ್ರಾಯೇಣ ಸಚ್ಛಬ್ದಃ ಪ್ರಸಿದ್ಧಃ ಇತಿ ತದ್ವ್ಯಾಕರಣಾಭಾವಾಪೇಕ್ಷಯಾ ಪ್ರಾಗುತ್ಪತ್ತೇಃ ಸದೇವ ಬ್ರಹ್ಮ ಅಸದಿವ ಆಸೀತ್ ಇತಿ ಉಪಚರ್ಯತೇ ॥

(ಭಾಷ್ಯಾರ್ಥ)

ಇನ್ನು "ಇದು ಮೊದಲು ಅಸತ್ತೇ ಆಗಿತ್ತು" (ತೈ. ೨-೭) ಎಂದು ಮುಂತಾದ ಕಾರಣವಿಷಯದ ವಿಗಾನವನ್ನು (ಪೂರ್ವಪಕ್ಷಿಯು) ತೋರಿಸಿದ್ದನಷ್ಟೆ, ಅದಕ್ಕೆ ಪರಿಹಾರವನ್ನು ಹೇಳಬೇಕಾದದ್ದಿದೆ. ಅದಕ್ಕೆ (ಈ ಪರಿಹಾರವನ್ನು) ಹೇಳುತ್ತೇವೆ: ("ಸಮಾಕರ್ಷಾತ್"). "ಇದು ಮೊದಲು ಅಸತ್ತೇ ಆಗಿತ್ತು" (ತೈ. ೨-೭) ಎಂದು ನಿರಾತ್ಮಕವಾದ ಅಸತ್ತು[1] (ಜಗತ್ತಿಗೆ) ಕಾರಣವೆಂದು ಇಲ್ಲಿ ಶ್ರುತಿಯಲ್ಲಿ ಹೇಳಿಲ್ಲ. ಏಕೆಂದರೆ "ಬ್ರಹ್ಮವು ಇಲ್ಲವೆಂದು ತಿಳಿದರೆ ಅವನು ಇಲ್ಲವೇ ಆಗುವನು ; ಬ್ರಹ್ಮವು ಇದೆ ಎಂದು ತಿಳಿದನಾದರೆ ಆದರಿಂದ ಇವನು ಇರುವನೆಂದು ತಿಳಿಯುವರು" (ತೈ. ೨-೬) ಎಂದು ಅಸದ್ವಾದವನ್ನು ಹಳಿದು, ಇದೆ ಎಂಬ ಸ್ವರೂಪದ ಬ್ರಹ್ಮವನ್ನು ಅನ್ನಮಯಾದಿ ಕೋಶಗಳ ಪರಂಪರೆಯಿಂದ ಪ್ರತ್ಯಗಾತ್ಮನೆಂದು ನಿಶ್ಚಯಿಸಿ "ಅವನು ಇಚ್ಛಿಸಿದನು" (ತೈ. ೨-೬) ಎಂದು ಪ್ರಕೃತನಾದ ಆ (ಪರಮಾತ್ಮನನ್ನೇ) ಎಳೆದುಕೊಂಡು ಅವನಿಂದ (ಆದ) ಸೃಷ್ಟಿಯನ್ನು ವಿವರಸಹಿತವಾಗಿ ತಿಳಿಸಿ "ಅದನ್ನು ಸತ್ಯವೆಂದು ಕರೆಯುವರು" ( ತೈ. ೨-೬ ) ಎಂದು ಉಪಸಂಹಾರ ಮಾಡಿ ಅದೇ ಪ್ರಕೃತವಾದ ಅರ್ಥದಲ್ಲಿ "ಅದರಲ್ಲಿಯೇ ಈ ಶ್ಲೋಕವು ಇರುತ್ತದೆ" ಎಂದು " ಇದು ಮೊದಲು ಅಸತ್ತೇ ಆಗಿತ್ತು " (ತೈ. ೨-೭) ಎಂಬೀ ಶ್ಲೋಕವನ್ನು ಉದಾಹರಿಸಿರುತ್ತದೆ. ಆದರೆ ನಿರಾತ್ಮಕವಾದ ಅಸತ್ತೇ ಈ

---

1. ಶೂನ್ಯವು ಎಂದರ್ಥ. ರಜ್ಜುಸರ್ಪವೇ ಮುಂತಾದವುಗಳಂತೆ ವಿಕಲ್ಪವಲ್ಲ, ಇದು ನಿರಾಸ್ಪದವಾದದ್ದು ಎಂದು ತಿಳಿಸುವದಕ್ಕೆ ನಿರಾತ್ಮಕವಾದ ಎಂಬ ವಿಶೇಷಣವನ್ನು ಉಪಯೋಗಿಸಿದೆ.

ಶ್ಲೋಕದಲ್ಲಿ ಅಭಿಪ್ರೇತವಾಗಿದ್ದರೆ ಆಗ ಒಂದನ್ನು ಎಳೆದುಕೊಂಡು (ಹೇಳುವಾಗ) ಮತ್ತೊಂದನ್ನು ಉದಾಹರಿಸುವದರಿಂದ (ಈ) ವಾಕ್ಯವು ಅಸಂಬದ್ಧವಾಗುತ್ತಿತ್ತು. **ಆದ್ದರಿಂದ ಪ್ರಾಯಿಕವಾಗಿ ಸತ್ತೆಂಬ ಶಬ್ದವು ನಾಮರೂಪಗಳಿಂದ ವ್ಯಾಕೃತವಾದ ವಸ್ತುವಿನ ವಿಷಯವೆಂದು ಪ್ರಸಿದ್ಧವಾಗಿರುವದರಿಂದ ಆ (ನಾಮರೂಪ)ವ್ಯಾಕರಣವು ಆಗಿರಲಿಲ್ಲವೆಂಬ ಅಪೇಕ್ಷೆಯಿಂದ ಬ್ರಹ್ಮವು ಸತ್ತಾಗಿದ್ದರೂ ಸೃಷ್ಟಿಗಿಂತ ಮುಂಚೆ ಅಸತ್ತಿನಂತೆ ಇತ್ತು ಎಂದು ಉಪಚಾರಕ್ಕೆ ಹೇಳಿರುತ್ತದೆ.**[1]

(ಭಾಷ್ಯ)

೩೬೯ ಏಷೈವ "ಅಸದೇವೇದಮಗ್ರ ಆಸೀತ್" (ಛಾಂ. ೩-೧೯-೧) ಇತ್ಯತ್ರಾಪಿ ಯೋಜನಾ । "ತತ್ಸದಾಸೀತ್" ಇತಿ ಸಮಾಕರ್ಷಣಾತ್ । ಅತ್ಯನ್ತಾಭಾವಾಭ್ಯುಪಗಮೇ ಹಿ 'ತತ್ಸದಾಸೀತ್' ಇತಿ ಕಿಂ ಸಮಾಕೃಷ್ಯೇತ ? "ತದ್ಧೈಕ ಆಹುರಸದೇವೇದಮಗ್ರ ಆಸೀತ್" (ಛಾಂ. ೬-೨-೧) ಇತ್ಯತ್ರಾಪಿ ನ ಶ್ರುತ್ಯನ್ತರಾಭಿಪ್ರಾಯೇಣ ಅಯಮೇಕೀಯಮತೋಪನ್ಯಾಸಃ । ಕ್ರಿಯಾಯಾಮಿವ ವಸ್ತುನಿ ವಿಕಲ್ಪಸ್ಯ ಅಸಂಭವಾತ್ । ತಸ್ಮಾತ್ ಶ್ರುತಿಪರಿಗೃಹೀತಸತ್ಪಕ್ಷದಾರ್ಢ್ಯಾಯೈವ ಅಯಂ ಮನ್ದಮತಿಪರಿಕಲ್ಪಿತಸ್ಯ ಅಸತ್ಪಕ್ಷಸ್ಯ ಉಪನ್ಯಸ್ಯ ನಿರಾಸಃ ಇತಿ ದ್ರಷ್ಟವ್ಯಮ್ । "ತದ್ಧೇದಂ ತರ್ಹ್ಯವ್ಯಾಕೃತಮಾಸೀತ್" (ಬೃ. ೧-೪-೭) ಇತ್ಯತ್ರಾಪಿ ನ ನಿರಧ್ಯಕ್ಷಸ್ಯ ಜಗತೋ ವ್ಯಾಕರಣಂ ಕಥ್ಯತೇ । "ಸ ಏಷ ಇಹ ಪ್ರವಿಷ್ಟ ಆನಖಾಗ್ರೇಭ್ಯಃ" (ಬೃ. ೧-೪-೭) ಇತಿ ಅಧ್ಯಕ್ಷಸ್ಯ ವ್ಯಾಕೃತಕಾರ್ಯಾನುಪ್ರವೇಶಿತ್ವೇನ ಸಮಾಕರ್ಷಾತ್ । ನಿರಧ್ಯಕ್ಷೇ ವ್ಯಾಕರಣಾಭ್ಯುಪಗಮೇ ಹಿ ಅನನ್ತರೇಣ ಪ್ರಕೃತಾವಲಮ್ಬಿನಾ 'ಸಃ' ಇತ್ಯನೇನ ಸರ್ವನಾಮ್ನಾ ಕಃ ಕಾರ್ಯಾನುಪ್ರವೇಶಿತ್ವೇನ ಸಮಾಕೃಷ್ಯೇತ? ಚೇತನಸ್ಯ ಚ ಅಯಮಾತ್ಮನಃ ಶರೀರೇ ಅನುಪ್ರವೇಶಃ ಶ್ರೂಯತೇ । ಪ್ರವಿಷ್ಟಸ್ಯ ಚೇತನತ್ವಶ್ರವಣಾತ್ "ಪಶ್ಯಂಶ್ಚಕ್ಷುಃ ಶೃಣ್ವಞ್ಶ್ರೋತ್ರಂ ಮನ್ವಾನೋ ಮನಃ" (ಬೃ. ೧-೪-೭) ಇತಿ । ಅಪಿ ಚ ಯಾದೃಶಮ್ ಇದಮ್ ಅದ್ಯತ್ವೇ ನಾಮರೂಪಾಭ್ಯಾಂ ವ್ಯಾಕ್ರಿಯಮಾಣಂ ಜಗತ್ ಸಾಧ್ಯಕ್ಷಂ ವ್ಯಾಕ್ರಿಯತೇ,

1. ಮೊದಲಿದ್ದ ನೀರು ಆಮೇಲೆ ನೀರು ನೊರೆ ಮುಂತಾಗಿ ಆಗುವಂತೆ ಸೃಷ್ಟಿಗೆ ಮೊದಲು ಬ್ರಹ್ಮವು ಒಂದೇ ಆಗಿದ್ದು ಸೃಷ್ಟಿಯಾದ ಬಳಿಕ ನಾಮರೂಪಗಳಿಂದ ಬಿಡಿಬಿಡಿಯಾಗಿ ವಿಂಗಡಿಸಿ ತೋರಿಕೊಳ್ಳುತ್ತದೆ. ಅದು ವ್ಯಾಕೃತವು; ಅದಕ್ಕೆ ಹೋಲಿಸಿದರೆ ಮೊದಲಿದ್ದ ಬ್ರಹ್ಮವು ಅವ್ಯಾಕೃತವು, ಅಸತ್ತು. ಐ. ಭಾ. ೧-೧; ತೈ. ಭಾ. ೨-೬; ಛಾಂ. ಭಾ. ೩-೧೯-೧, ೬-೨-೧, ೮-೧೪-೧; ಬೃ. ಭಾ. ೧-೪-೭, ೩-೫-೧; ಗೀ. ಭಾ. ೯-೧೯ನ್ನು ನೋಡಿರಿ.

ಏವಮ್ ಆದಿಸರ್ಗೇಽಪಿ ಇತಿ ಗಮ್ಯತೇ। ದೃಷ್ಟವಿಪರೀತಕಲ್ಪನಾನುಪಪತ್ತೇಃ ಶ್ರುತ್ಯನ್ತರಮಪಿ "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೆ ವ್ಯಾಕರವಾಣಿ" (ಛಾಂ. ೬-೩-೨) ಇತಿ ಸಾಧ್ಯಕ್ಷಾಮೇವ ಜಗತೊ ವ್ಯಾಕ್ರಿಯಾಂ ದರ್ಶಯತಿ। 'ವ್ಯಾಕ್ರಿಯತ' ಇತ್ಯಪಿ ಕರ್ಮಕರ್ತರಿ ಲಕಾರ ಸತ್ಯೇವ ಪರಮೇಶ್ವರೇ ವ್ಯಾಕರ್ತರಿ ಸೌಕರ್ಯಮ್ ಅಪೇಕ್ಷ್ಯ ದ್ರಷ್ಟವ್ಯಃ ಯಥಾ ಲೂಯತೇ ಕೇದಾರಃ ಸ್ವಯಮೇವ ಇತಿ ಸತ್ಯೇವ ಪೂರ್ಣಕೆ ಲವಿತರಿ। ಯದ್ವಾ ಕರ್ಮಣ್ಯೇವ ಏಷ ಲಕಾರಃ ಅರ್ಥಾಕ್ಷಿಪ್ತಂ ಕರ್ತಾರಮ ಅಪೇಕ್ಷ್ಯ ದ್ರಷ್ಟವ್ಯಃ। ಯಥಾ ಗಮ್ಯತೇ ಗ್ರಾಮಃ ಇತಿ ॥

(ಭಾಷ್ಯಾರ್ಥ)

"ಇದು ಮೊದಲು ಅಸತ್ತೇ ಆಗಿತ್ತು" (ಛಾಂ. ೩-೧೯-೧) ಎಂಬಲ್ಲಿಯು ಇದೇ ಯೋಜನೆ(ಯನ್ನು ಮಾಡಿಕೊಳ್ಳಬೇಕು). ಏಕೆಂದರೆ "ಅದು ಸತ್ತಾ ಗಿತ್ತು" (ಛಾಂ. ೩-೧೯-೧) ಎಂದು (ಅಲ್ಲಿಯೂ ಸತ್ತನ್ನು) ಎಳೆದುಕೊಂಡ (ಹೇಳಿದೆ). ಅತ್ಯಂತವಾಗಿ ಅಭಾವ(ವೇ ಆಗಿತ್ತೆಂದು) ಇಟ್ಟುಕೊಂಡರೆ 'ಅದ ಸತ್ತಾಗಿತ್ತು ಎಂದು ಯಾವದನ್ನು ಎಳೆದುಕೊಂಡು ಹೇಳಲಾದೀತು? "ಇದ ಮೊದಲು ಅಸತ್ತೇ ಆಗಿತ್ತು ಎಂದು ಕೆಲವರು ಹೇಳುತ್ತಾರೆ" (ಛಾಂ. ೬-೨-೧ ಎಂಬಲ್ಲಿಯೂ ಮತ್ತೊಂದು ಶ್ರುತಿಯ(ನ್ನು ಪರಾಮರ್ಶಿಸುವ) ಅಭಿಪ್ರಾಯ ದಿಂದ[1] ಈ ಕೆಲವರ ಮತವನ್ನು ಹೇಳಿಲ್ಲ; ಏಕೆಂದರೆ **ಕ್ರಿಯೆಯಲ್ಲಿರುವಂ ವಸ್ತುವಿನಲ್ಲಿ ವಿಕಲ್ಪವಿರುವ ಸಂಭವವಿಲ್ಲ.**[2] ಆದ್ದರಿಂದ ಶ್ರುತಿಯು ತೆಗೆದುಕೊಂಡಿರುವ ಸತ್ಯತ್ವವನ್ನು ಗಟ್ಟಿಗೊಳಿಸುವದಕ್ಕಾಗಿಯೇ ಅಲ್ಪಬುದ್ಧಿ ಯುಳ್ಳವರು ಕಲ್ಪಿಸಿಕೊಂಡಿರುವ ಅಸತ್ಪಕ್ಷವನ್ನು[3] ಹೇಳಿ ಈ ನಿರಾಕರಣೆಯನು ಮಾಡಿದೆ ಎಂದು ಭಾವ.

"ಅಲ್ಲಿ ಆಗ ಇದು ಅವ್ಯಾಕೃತವೇ ಆಗಿತ್ತು" (ಬೃ. ೧-೪-೭) ಎಂಬಲ್ಲಿ ಯೂ (ಯಾವ) ಅಧ್ಯಕ್ಷನೂ ಇಲ್ಲದ ಜಗತ್ತು (ತಾನೇ) ವ್ಯಾಕರಣವಾಯಿತೆಂದ

---

1. ತೈ. ೨-೭, ಛಾಂ. ೩-೧೯-೧ ಇವುಗಳನ್ನು ಇಲ್ಲಿ ಪರಾಮರ್ಶಿಸಿಲ್ಲ

2. ಕ್ರಿಯೆಯನ್ನು ಹಾಗೂ ಮಾಡಬಹುದು, ಹೀಗೂ ಮಾಡಬಹುದು- ಎಂ ವಿಕಲ್ಪವು ಆಗಬಹುದು. ಆದರೆ ವಸ್ತುವು ಆ ಶ್ರುತಿಯಂತೆ ಸತ್ತು, ಈ ಶ್ರುತಿಯಂ ಅಸತ್ತು- ಎಂದು ವಿಕಲ್ಪಿಸುವದಕ್ಕೆ ಆಗುವದಿಲ್ಲ ಎಂದರ್ಥ. ವಸ್ತುವಿನ ವಿಷಯದ ವಿಕಲ್ಪವಿಲ್ಲವೆಂದು ಆಚಾರ್ಯರು ಅಲ್ಲಲ್ಲಿ ಹೇಳಿರುವದನ್ನು ಶ್ರುತಿಪ್ರಮಾಣದಿಂದ ಹಾಗು ಇರಬಹುದು, ಹೀಗೂ ಇರಬಹುದು- ಎನ್ನುವ ವಾದಿಗಳು ಕಡೆಗಣಿಸಿರುತ್ತಾರೆಂದ ಇದರಿಂದ ಸ್ಪಷ್ಟವಾಗುತ್ತದೆ.

3. ಬೌದ್ಧರ ಅಸದ್ವಾದವನ್ನು.

ಹೇಳಿರುವದಿಲ್ಲ. ಏಕೆಂದರೆ "ಆ ಈತನು ಉಗುರುಗಳ ತುದಿಗಳವರೆಗೂ ಇಲ್ಲಿ ಹೊಕ್ಕಿರುತ್ತಾನೆ" (ಬೃ. ೧-೪-೭) ಎಂದು ಅಧ್ಯಕ್ಷನು ವ್ಯಾಕೃತ ಕಾರ್ಯವನ್ನು ಒಳಹೊಕ್ಕಿರುತ್ತಾನೆಂದು ಎಳೆದುಕೊಂಡು ಹೇಳಿದೆ. ಯಾವ ಅಧ್ಯಕ್ಷನೂ ಇಲ್ಲದ (ಜಗತ್ತು ತಾನೇ) ವ್ಯಾಕರಣವಾಯಿತೆಂದು ಒಪ್ಪುವದಾದರೆ ಮುಂದೆ (ಬಂದಿರುವ) ಪ್ರಕೃತಾವಲಂಬಿಯಾದ 'ಸಃ' (ಆತನು) ಎಂಬೀ ಸರ್ವನಾಮದಿಂದ ಯಾವನು ಕಾರ್ಯಾನುಪ್ರವೇಶಿಯೆಂದು ಎಳೆದು (ತಿಳಿಸುವದ)ಕ್ಕಾದೀತು? ಶರೀರದೊಳಗೆ ಒಳಹೊಕ್ಕಿರುವನೆಂದು ಶ್ರುತಿಯಲ್ಲಿ ಹೇಳಿರುವ ಇದು ಚೇತನನಾದ ಆತ್ಮನ (ವಿಷಯವೇ); ಏಕೆಂದರೆ "ನೋಡುವದರಿಂದ ನೋಟಕನು, ಕೇಳುವದರಿಂದ ಕೇಳುವವನು, ಮನನಮಾಡುವದರಿಂದ ಮಂತೃ"[1] (ಬೃ. ೧-೪-೭) ಎಂಬ ಶ್ರುತಿ(ವಾಕ್ಯದಲ್ಲಿ) ಪ್ರವಿಷ್ಟನಾಗಿರುವವನು ಚೇತನನೆಂದೇ ಹೇಳಿರುತ್ತದೆ.[2] ಇದೂ ಅಲ್ಲದೆ ಹೇಗೆ ಈಗ ನಾಮರೂಪಗಳಿಂದ ವಿಂಗಡವಾಗುತ್ತಿರುವ ಜಗತ್ತು ಸಾಧ್ಯಕ್ಷವಾಗಿಯೇ ವಿಂಗಡವಾಗುತ್ತಿರುವದೋ[3] ಇದರಂತೆಯೇ ಮೊದಲಿನ ಸೃಷ್ಟಿಯಲ್ಲಿಯೂ (ಇದ್ದಿರಬೇಕು) ಎಂದು ನಿಶ್ಚಯಿಸಬೇಕಾಗಿದೆ; ಏಕೆಂದರೆ **ಕಂಡದ್ದಕ್ಕೆ ವಿರುದ್ಧವಾಗಿ ಕಲ್ಪಿಸುವದು ಸರಿಯಾಗುವದಿಲ್ಲ**[4] ಮತ್ತೊಂದು ಶ್ರುತಿಯೂ "ಈ ಜೀವನೆಂಬ ಆತ್ಮನ (ರೂಪ)ದಿಂದ ಒಳಹೊಕ್ಕು ನಾಮರೂಪಗಳನ್ನು ವಿಂಗಡಿಸುವೆನು" (ಛಾಂ. ೬-೩-೭) ಎಂದು ಸಾಧ್ಯಕ್ಷವಾಗಿಯೇ ಜಗತ್ತಿನ ವ್ಯಾಕರಣವಾಗುವದೆಂದು ತಿಳಿಸುತ್ತಿದೆ. 'ವ್ಯಾಕ್ರಿಯತ' (ವಿಂಗಡವಾಯಿತು) ಎಂದು **ಕರ್ಮಕರ್ತರಿ ಲಕಾರವನ್ನು** ಉಪಯೋಗಿಸಿರುವದು ವಾಕರ್ತೃವಾದ ಪರಮೇಶ್ವರನು ಇರುತ್ತಿರುವಾಗಲೇ ಸೌಕರ್ಯದ ಅಪೇಕ್ಷೆಯಿಂದ ತಿಳಿಯಬೇಕು. ಹೇಗೆ 'ಲೂಯತೇ ಕೇದಾರಃ ಸ್ವಯಮೇವ' ಗದ್ದೆಯು ತಾನೇ ಕಟಾವಾಗುತ್ತದೆ- ಎಂದು ಕ್ರಿಯೆಯನ್ನು ಪೂರ್ತಿಗೊಳಿಸುವ ಕಟಾವುಮಾಡುವವನು ಇರುತ್ತಿರುವಾಗಲೇ (ಪ್ರಯೋಗವಾಗುತ್ತದೆಯೋ ಹಾಗೆಯೇ ಇದು).

---

1. ಇಲ್ಲಿ ಚಕ್ಷುಸ್ಸು, ಮನಃ- ಮುಂತಾದ ಶಬ್ದಗಳು ಕರ್ತ್ರರ್ಥದಲ್ಲಿ ಪ್ರಯೋಗವಾಗಿವೆ; ಈ ಉಪನಿಷತ್ತಿನ ಭಾಷ್ಯವನ್ನು ನೋಡಿ.

2. 'ಚಕ್ಷುಃ' ಮುಂತಾದ ಶಬ್ದಗಳು ಕರ್ತೃವಚನಗಳಾದ್ದರಿಂದ ಚೇತನವಾಚಿಗಳು; ಮುಂದೆ ಆತ್ಮನೆಂದೇ ಉಪಾಸನೆಮಾಡಬೇಕು ಎಂಬುದರಿಂದಲೂ ಪ್ರವಿಷ್ಟನು ಚೇತನನೇ.

3. ಕುಂಬಾರನೆಂಬ ಅಧ್ಯಕ್ಷನು ಇರುವಾಗಲೇ ಮಣ್ಣು ಮಡಕೆಕುಡಿಕೆ ಮುಂತಾದವುಗಳಾಗುವದು. ಇದು ದೃಷ್ಟಾಂತವು.

4. ದೃಷ್ಟಾಂತವಿಲ್ಲದೆ ಅಥವಾ ದೃಷ್ಟಾಂತಕ್ಕೆ ವಿರುದ್ಧವಾಗಿ ಅನುಮಾನಿಸುವದು ಸರಿಯಲ್ಲ; ಬೆಟ್ಟದಲ್ಲಿ ಹೊಗೆಯಿರುವದರಿಂದ ಅದರೊಳಗೆ ನೀರಿರಬೇಕು - ಎಂಬ ಅನುಮಾನವು ಎಂದಿಗೂ ಸರಿಯಾದ ತರ್ಕವಾಗಲಾರದು.

ಯಾವಾಗ **ಈ ಲಕಾರವು ಕರ್ಮಣಿ**(ಪ್ರಯೋಗ)ವೇ ಆಗಿರುವದೋ ಆಗ ಅರ್ಥಾಕ್ಷಿಪ್ತವಾದ ಕರ್ತೃವಿನ ಅಪೇಕ್ಷೆಯಿಂದ ಎಂದು ತಿಳಿಯಬೇಕು. ಹೇಗೆ ಗಮ್ಯತೇ ಗ್ರಾಮಃ' ಊರು ಹೊಂದಲ್ಪಡುತ್ತದೆ[1] (ಎನ್ನುವರೋ ಹಾಗೆಯೇ ಇದು).

## ೫. ಬಾಲಾಕ್ಯಧಿಕರಣ (ಸೂ.೧೬–೧೮)

(ಕೌ. ೪–೧೮ರಲ್ಲಿ ಯಸ್ಯ ವೈತತ್ಕರ್ಮ ಎಂದು ಪರಮಾತ್ಮನನ್ನು ಹೇಳಿದೆ).

**ಜಗದ್ವಾಚಿತ್ವಾತ್ || ೧೬ ||**

೧೬. (ಕರ್ಮಶಬ್ದವು) ಜಗದ್ವಾಚಿಯಾಗಿರುವದರಿಂದ (ಇಲ್ಲಿ ಹೇಳಿರುವದು ಬ್ರಹ್ಮವೇ).

### ವಿಷಯವೂ ಸಂಶಯವೂ

( ಭಾಷ್ಯ )

೩೭೦. ಕೌಷೀತಕಿಬ್ರಾಹ್ಮಣೇ ಬಾಲಾಕ್ಯಜಾತಶತ್ರುಸಂವಾದೇ ಶ್ರೂಯತೇ—"ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ವೈತತ್ ಕರ್ಮ ಸ ವೇದಿತವ್ಯಃ"[2] (ಕೌ. ಬ್ರಾ. ೪–೧೮) ಇತಿ । ತತ್ರ ಕಿಂ ಜೀವೋ ವೇದಿತವ್ಯತ್ವೇನ ಉಪದಿಶ್ಯತೇ, ಉತ ಮುಖ್ಯಃ ಪ್ರಾಣಃ, ಉತ ಪರಮಾತ್ಮಾ ಇತಿ ಸಂಶಯಃ ||

( ಭಾಷ್ಯಾರ್ಥ )

**ಕೌಷೀತಕಿಬ್ರಾಹ್ಮಣದಲ್ಲಿ ಬಾಲಾಕ್ಯಜಾತಶತ್ರುಸಂವಾದದಲ್ಲಿ "ಎಲೈ ಬಾಲಾಕಿಯೆ, ಯಾವನೇ ಈ ಪುರುಷರ ಕರ್ತನೋ, ಯಾವನದೇ ಈ ಕರ್ಮವೋ, ಅವನನ್ನೇ ಅರಿಯತಕ್ಕದ್ದು" (ಕೌ.೪–೧೮)** ಎಂದು ಶ್ರುತಿಯಿದೆ. **ಅಲ್ಲಿ** ಜೀವನನ್ನು ಅರಿಯುತಕ್ಕದ್ದು ಎಂದು ತಿಳಿಸಿದೆಯೆ, ಅಥವಾ ಮುಖ್ಯಪ್ರಾಣನನ್ನು (ತಿಳಿಸಿದೆಯೆ), ಅಥವಾ ಪರಮಾತ್ಮನನ್ನೆ? –ಎಂಬುದು ಸಂಶಯವು.

---

1. ಕರ್ಮಕರ್ತರಿ ಪ್ರಯೋಗವೂ ಕರ್ತೃವೂ ಕರ್ಮವೂ ಒಬ್ಬನೇ ಎಂಬುದನ್ನು ಹೇಳುತ್ತದೆ. ಆದರೂ ಗದ್ದೆ ಕಟಾವಾಗುತ್ತದೆ ಎಂಬಲ್ಲಿ ಕಟಾವುಮಾಡುವವರು ಬೇರೆ ಇದ್ದೇ ಇರಬೇಕೆಂದು ಸ್ಪಷ್ಟವಾಗಿದೆ. 'ಈ ಲೇಖಿನಿ ಚೆನ್ನಾಗಿ ಬರೆಯುತ್ತದೆ' ಎಂಬ ಪ್ರಯೋಗವನ್ನು ಇದಕ್ಕೆ ಹೋಲಿಸಿರಿ. ಕರ್ಮಣಿಪ್ರಯೋಗದಲ್ಲಿ ಕರ್ತೃವನ್ನು ಹೇಳದಿದ್ದರೂ ಅಧ್ಯಾಹಾರಮಾಡಿಕೊಳ್ಳಬೇಕಾಗಿರುತ್ತದೆ.

2. ಇಲ್ಲಿ ಕೊಟ್ಟಿರುವ ಸಂಖ್ಯೆಗಳು ನಿ॥ ಪಾಠದವು. ಆ॥ ಪಾಠದಲ್ಲಿ ಇದು ಆರಣ್ಯಕದ ೪ರನೆಯ ಅಧ್ಯಾಯದ ೧೯ನೆಯ ಮಂತ್ರ. ಅಲ್ಲಿ "ಸ ವೈ ವೇದಿತವ್ಯಃ" ಎಂದಿದೆ.

## ಪೂರ್ವಪಕ್ಷ: ಜೀವಮುಖ್ಯಪ್ರಾಣರಲ್ಲಿ ಒಬ್ಬರನ್ನು ಹೇಳಿದೆ

( ಭಾಷ್ಯ )

೩೭೧. ಕಿಂ ತಾವತ್ ಪ್ರಾಪ್ತಮ್ ? ಪ್ರಾಣಃ ಇತಿ। ಕುತಃ ? "ಯಸ್ಯ ವೈತತ್ ಕರ್ಮ" ಇತಿ ಶ್ರವಣಾತ್। ಪರಿಸ್ಪನ್ದಲಕ್ಷಣಸ್ಯ ಚ ಕರ್ಮಣಃ ಪ್ರಾಣಾಶ್ರಯತ್ವಾತ್ । ವಾಕ್ಯಶೇಷೇ ಚ "ಅಥಾಸ್ಮಿನ್ ಪ್ರಾಣ ಏವೈಕಧಾ ಭವತಿ" (ಕೌ. ೪-೧೯) ಇತಿ ಪ್ರಾಣಶಬ್ದದರ್ಶನಾತ್। ಪ್ರಾಣಶಬ್ದಸ್ಯ ಚ ಮುಖ್ಯೇ ಪ್ರಾಣೇ ಪ್ರಸಿದ್ಧತ್ವಾತ್। ಯೇ ಚೈತೇ ಪುರಸ್ತಾತ್ ಬಾಲಾಕಿನಾ "ಆದಿತ್ಯೇ ಪುರುಷಃ" (ಕೌ. ೪-೨),[1] "ಚನ್ದ್ರಮಸಿ ಪುರುಷಃ' (ಕೌ. ೪-೩) ಇತ್ಯೇವಮಾದಯಃ ಪುರುಷಾಃ ನಿರ್ದಿಷ್ಟಾಃ। ತೇಷಾಮಪಿ ಭವತಿ ಪ್ರಾಣಃ ಕರ್ತಾ। ಪ್ರಾಣಾವಸ್ಥಾವಿಶೇಷತ್ವಾತ್ ಆದಿತ್ಯಾದಿದೇವತಾತ್ಮನಾಮ್ । "ಕತಮ ಏಕೋ ದೇವ ಇತಿ ಪ್ರಾಣ ಇತಿ ಸ ಬ್ರಹ್ಮ ತ್ಯದಿತ್ಯಾಚಕ್ಷತೇ" (ಬೃ. ೩-೯-೯) ಇತಿ ಶ್ರುತ್ಯನ್ತರಪ್ರಸಿದ್ಧೇಃ। ಜೀವೋ ವಾ ಅಯಮಿಹ ವೇದಿತವ್ಯತಯಾ ಉಪದಿಶ್ಯತೇ। ತಸ್ಯಾಪಿ ಧರ್ಮಾಧರ್ಮಲಕ್ಷಣಂ ಕರ್ಮ ಶಕ್ಯತೇ ಶ್ರಾವಯಿತುಮ್ "ಯಸ್ಯ ವೈತತ್ ಕರ್ಮ" ಇತಿ। ಸೋಽಪಿ ಭೋಕ್ತೃತ್ವಾತ್ ಭೋಗೋಪಕರಣಭೂತಾನಾಮ್ ಏತೇಷಾಂ ಪುರುಷಾಣಾಂ ಕರ್ತಾ ಉಪಪದ್ಯತೇ। ವಾಕ್ಯಶೇಷೇ ಚ ಜೀವಲಿಙ್ಗಮ್ ಅವಗಮ್ಯತೇ। ಯತ್ಕಾರಣಂ ವೇದಿತವ್ಯತಯಾ ಉಪನ್ಯಸ್ತಸ್ಯ ಪುರುಷಾಣಾಂ ಕರ್ತುಃ ವೇದನಾಯ ಉಪೇತಂ ಬಾಲಾಕಿಂ ಪ್ರತಿ ಬುಬೋಧಯಿಷುಃ ಅಜಾತಶತ್ರುಃ ಸುಪ್ತಂ ಪುರುಷಮ್ ಆಮನ್ತ್ರ್ಯ ಆಮನ್ತ್ರಣಶಬ್ದಾಶ್ರವಣಾತ್ ಪ್ರಾಣಾದಿವ್ಯತಿರಿಕ್ತಂ ಅಭೋಕ್ತೃತ್ವಂ ಪ್ರತಿಬೋಧ್ಯ ಯಷ್ಟಿಘಾತೋತ್ಥಾನಾತ್ ಪ್ರಾಣಾದೀನಾಮ್ ಜೀವಂ ಭೋಕ್ತಾರಂ ಪ್ರತಿಬೋಧಯತಿ। ತಥಾ ಪರಸ್ತಾದಪಿ ಜೀವಲಿಙ್ಗಮ್ ಅವಗಮ್ಯತೇ "ತದ್ಯಥಾ ಶ್ರೇಷ್ಠೀ ಸ್ವೈರ್ಭುಙ್ಕ್ತೇ ಯಥಾ ವಾ ಸ್ವಾಃ ಶ್ರೇಷ್ಠಿನಂ ಭುಞ್ಜನ್ತ್ಯೇವಮೇವೈಷ ಪ್ರಜ್ಞಾತ್ಮೈತೈರಾತ್ಮಭಿರ್ಭುಙ್ಕ್ತೇ ಏವಮೇವೈತೇ ಆತ್ಮಾನ ಏತಮಾತ್ಮಾನಂ ಭುಞ್ಜನ್ತಿ (ಕೌ. ೪-೨೦)[2] ಇತಿ। ಪ್ರಾಣಭೃತ್ತ್ವಾಚ್ಚ ಜೀವಸ್ಯ ಉಪಪನ್ನಂ ಪ್ರಾಣಶಬ್ದತ್ವಮ್ । ತಸ್ಮಾತ್ ಜೀವಮುಖ್ಯಪ್ರಾಣಯೋರನ್ಯತರ ಇಹ ಗ್ರಹಣೀಯೋ ನ ಪರಮೇಶ್ವರಃ। ತಲ್ಲಿಙ್ಗಾನವಗಮಾತ್ ಇತಿ ॥

---

1. ಆ॥ ಪಾಠದಲ್ಲಿ ೬-೩ ಈ ಪಾಠವಲ್ಲಿ "ಆದಿತ್ಯೇ ಬೃಹಚ್ಚನ್ದ್ರಮಸ್ಯನ್ನಮ್" ಎಂದು ಮುಂತಾಗಿರುವದು ಉಪನಿಷದ್ವಾಕ್ಯವೆಂದು ಗಣಿಸಿದ್ದರಿಂದ ಸಂಖ್ಯೆಯು ಒಂದೊಂದು ಹೆಚ್ಚಾಗಿದೆ ಎಂದು ತೋರುತ್ತದೆ.

2. "ತದ್ಯಥಾ ಶ್ರೇಷ್ಠೈಃ ಸ್ವೈರ್ಭುಙ್ಕ್ತೇ ಯಥಾ ವಾ ಶ್ರೇಷ್ಠಿನಂ ಸ್ವಾಭುಞ್ಜನ್ತೇ" -ಎ:ಬ ಸಿ॥ ಪಾಠವು ತಪ್ಪು.

(ಭಾಷ್ಯಾರ್ಥ)

ಇಲ್ಲಿ ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? (ಇವನು) ಪ್ರಾಣನು ಎಂದು. ಏಕೆ? ಎಂದರೆ "ಇದು ಯಾವನದೇ ಕರ್ಮವೊ" ಎಂದು ಶ್ರುತಿಯಲ್ಲಿದ್ದು ಚಲನರೂಪವಾದ ಕರ್ಮವು ಪ್ರಾಣವನ್ನು ಆಶ್ರಯಿಸಿರುವದರಿಂದಲೂ[1] ವಾಕ್ಯಶೇಷದಲ್ಲಿ "ಆಗ ಈ ಪ್ರಾಣನಲ್ಲಿಯೇ ಒಂದಾಗುತ್ತಾನೆ" (ಕೌ. ೪-೧೯) ಎಂದು ಪ್ರಾಣಶಬ್ದವು ಕಾಣಬರುವದರಿಂದಲೂ (ಈ) ಪ್ರಾಣಶಬ್ದವು ಮುಖ್ಯಪ್ರಾಣವಲ್ಲಿಯೇ ಪ್ರಸಿದ್ಧವಾಗಿರುವದರಿಂದಲೂ ಮತ್ತು ಬಾಲಾಕಿಯು ಹಿಂದೆ "ಆದಿತ್ಯನಲ್ಲಿರುವ ಪುರುಷನು" (ಕೌ. ೪-೩) "ಚಂದ್ರನಲ್ಲಿ ಪುರುಷನು" (ಕೌ. ೪-೩) ಎಂದು ಮುಂತಾದ ಪುರುಷರನ್ನು ಹೇಳಿದ್ದನಲ್ಲ, ಅವರಿಗೂ ಪ್ರಾಣನು ಕರ್ತೃವಾಗಬಹುದು. ಏಕೆಂದರೆ "ಒಬ್ಬನೇ ದೇವನು. ಯಾರು? ಪ್ರಾಣನು. ಅವನೇ ಬ್ರಹ್ಮವು, 'ತ್ಯತ್' ಎಂದು (ಅವನನ್ನು) ಕರೆಯುತ್ತಾರೆ." (ಬೃ. ೩-೯-೯) ಎಂದು ಬೇರೊಂದು ಶ್ರುತಿಯಲ್ಲಿ ಪ್ರಸಿದ್ಧವಾಗಿರುವಂತೆ ಆದಿತ್ಯಾದಿದೇವತೆಗಳು ಪ್ರಾಣನ ಅವಸ್ಥಾವಿಶೇಷಗಳಾಗಿರುವದರಿಂದಲೂ (ಹೀಗೆಂದು ನಿಶ್ಚಯಿಸಬೇಕು).

ಅಥವಾ ಇಲ್ಲಿ ಅರಿಯತಕ್ಕದ್ದೆಂದು ಹೇಳಿದೆ(ಯಲ್ಲ), ಇವನು ಜೀವನು (ಎನ್ನಬಹುದು). ಏಕೆ? ಎಂದರೆ "ಈ ಕರ್ಮವು ಯಾರದೋ" ಎಂದು ಧರ್ಮಾಧರ್ಮರೂಪವಾದ ಕರ್ಮವನ್ನು ಶ್ರುತಿಯಲ್ಲಿ ಹೇಳಿದೆ (ಎನ್ನು)ವದಕ್ಕೂ ಬರುತ್ತದೆ. ಆ (ಜೀವ)ನೂ ಭೋಕ್ತೃವಾಗಿರುವದರಿಂದ ಭೋಗೋಪಕರಣರಾಗಿರುವ ಈ ಪುರುಷರ ಕರ್ತೃ ಎಂದು (ಹೇಳುವದು) ಯುಕ್ತವಾಗುತ್ತದೆ. ಇದಲ್ಲದೆ ವಾಕ್ಯಶೇಷದಲ್ಲಿ ಜೀವಲಿಂಗವು (ಇದೆ ಎಂದು) ನಿಶ್ಚಯವಾಗುತ್ತದೆ. ಏಕೆಂದರೆ ಅರಿಯತಕ್ಕದ್ದೆಂದು ಹೇಳಿರುವ, ಪುರುಷರ ಕರ್ತೃವನ್ನು ಅರಿತುಕೊಳ್ಳುವದಕ್ಕಾಗಿ ಬಳಿಸಾರಿದ ಬಾಲಾಕಿಗೆ[2] ತಿಳಿಯಪಡಿಸು

---

1. ಪರಿಣಾಮ (ಮಾರ್ಪಡುವಿಕೆ), ಪರಿಸ್ಪಂದ (ಚಲಿಸುವಿಕೆ) -ಎಂದು ಕರ್ಮವು ಎರಡು ಬಗೆ. ಚಲನೆಯು ಪ್ರಾಣದಿಂದ ಆಗುವದರಿಂದ ಪ್ರಾಣದ್ದು ಎಂದು ಶ್ರುತಿಯಲ್ಲಿ ಹೇಳಿದೆ ಎಂದು ಭಾವ.

2 ಈ ಭಾಗದ ಆ॥ ಪಾಠವು ಹೀಗಿದೆ: "ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ವೈತತ್ ಕರ್ಮ ಸ ವೈ ವೇದಿತವ್ಯಸ್ತತ ಉ ಹ ಬಾಲಾಕಿಃ ಸಮಿತ್ಪಾಣಿಃ ಪ್ರತಿಚಕ್ರಮ ಉಪಾಯಾನೀತಿ ತಂಹೋವಾಚಾಜಾತಶತ್ರುಃ ಪ್ರತಿಲೋಮರೂಪ ಮೇತನ್ಮನ್ಯೇ ಯತ್ ಕ್ಷತ್ರಿಯೋ ಬ್ರಾಹ್ಮಣಮುಪನಯತೇ ಹಿ ವ್ಯೇವ ತ್ವಾ ಜ್ಞಪಯಿಷ್ಯಾಮೀತಿ ತಂ ಹ ಪಾಣಾವಭಿಪದ್ಯ ಪ್ರವವ್ರಾಜ ತೌ ಹ ಸುಪ್ತಂ ಪುರುಷಮಾಜಗ್ಮತುಸ್ತಂಹಾಜಾತಶತ್ರುರಾಮಂತ್ರಯಾಂ ಚಕ್ರೇ ಬೃಹತ್ಪಾಂಡರವಾಸಃ ಸೋಮ ರಾಜನ್ನಿತಿ ಸ ಉ ಹ ಶಿಶ್ಯ ಏವ ತತ ಉಹೈನಂ ಯಷ್ಟ್ಯಾ ವಿಚಿಕ್ಷೇಪ ಸ ತತ ಏವ ಸಮುತ್ತಸ್ಥೌ ತಂ ಹೋವಾಚಾಜಾತಶತ್ರುಃ ಕ್ವೈಷ ಏತದ್ಬಾಲಾಕೇ ಪುರುಷೋಽಶಯಿಷ್ಟ ಕ್ವೈತದಭೂತ್ ಕುತ ಏತದಾಗಾದಿತಿ ತದುಹ ಬಾಲಾಕಿರ್ನ ವಿಜಜ್ಞೇ". ಇಲ್ಲಿ ದಪ್ಪಕ್ಷರದಲ್ಲಿರುವ ಭಾಗಗಳಲ್ಲಿ ಪಾಠಾಂತರಗಳಿವೆ.

ವದಕ್ಕಾಗಿ ಅಜಾತಶತ್ರುವು ಸುಪ್ತಪುರುಷನನ್ನು (ಕೂಗಿ) ಕರೆದು, ಕರೆದ ಶಬ್ದ ವನ್ನು ಕೇಳದೆ ಇದ್ದದ್ದರಿಂದ ಪ್ರಾಣಾದಿಗಳು ಭೋಕ್ತೃವಲ್ಲವೆಂದು ತಿಳಿಸಿಕೊಟ್ಟು, ದೊಣ್ಣೆಯಿಂದ ಹೊಡೆದೆಬ್ಬಿಸಿ ಪ್ರಾಣಾದಿಗಳಿಗಿಂತ ಬೇರೆಯಾದ ಜೀವನೇ ಭೋಕ್ತೃವೆಂದು ತಿಳಿಸಿಕೊಟ್ಟಿರುತ್ತಾನೆ. ಮುಂದೂ "ಅಲ್ಲಿ ಶ್ರೇಷ್ಠಿಯು ಹೇಗೆ ತನ್ನವರಿಂದ ಭೋಗಿಸುವನೋ ಅಥವಾ ಹೇಗೆ ತನ್ನವರು ಶ್ರೇಷ್ಠಿಯನ್ನು ಭೋಗಿಸುವರೋ ಹೀಗೆಯೇ ಈ ಪ್ರಜ್ಞಾತ್ಮನು ಈ ಆತ್ಮರಿಂದ ಭೋಗಿಸುವನು, ಹೀಗೆಯೇ ಈ ಆತ್ಮರು ಈ ಆತ್ಮನನ್ನು ಭೋಗಿಸುವರು" (ಕೌ. ೪-೨೦) ಎಂದು ಜೀವಲಿಂಗ(ವಿರುವದು) ಗೊತ್ತಾಗುತ್ತದೆ. ಜೀವನು ಪ್ರಾಣಧಾರಿ ಯಾಗಿರುವದರಿಂದ (ಅವನನ್ನು) ಪ್ರಾಣಶಬ್ದ(ದಿಂದ ಕರೆದಿರುವದು) ಹೊಂದುತ್ತದೆ.

ಆದ್ದರಿಂದ ಜೀವಮುಖ್ಯಪ್ರಾಣರೊಳಗೆ ಯಾವನಾದರೊಬ್ಬನನ್ನು ಗ್ರಹಿಸಬೇಕು, ಪರಮೇಶ್ವರನನ್ನಲ್ಲ; ಏಕೆಂದರೆ (ಇಲ್ಲಿ) ಅವನ ಲಿಂಗ(ವಿರು ವದು) ನಿಶ್ಚಯವಾಗಿಲ್ಲ.[1]

## ಸಿದ್ಧಾಂತ: ಉಪಕ್ರಮಸಾಮರ್ಥ್ಯದಿಂದ ಪರಮೇಶ್ವರನೆಂದೇ ತಿಳಿಯಬೇಕು

(ಭಾಷ್ಯ)

೩೭೨. ಏವಂ ಪ್ರಾಪ್ತೇ ಬ್ರೂಮಃ –ಪರಮೇಶ್ವರ ಏವಾಯಮೇತೇಷಾಂ ಪುರುಷಾಣಾಂ ಕರ್ತಾ ಸ್ಯಾತ್ । ಕಸ್ಮಾತ್ ? ಉಪಕ್ರಮಸಾಮರ್ಥ್ಯಾತ್। ಇಹ ಹಿ ಬಾಲಾಕಿಃ ಅಜಾತಶತ್ರುಣಾ ಸಹ "ಬ್ರಹ್ಮ ತೇ ಬ್ರವಾಣಿ" (ಕೌ. ೪-೧) ಇತಿ ಸಂವದಿತುಮ್ ಉಪಚಕ್ರಮೇ, ಸ ಚ ಕತಿಚಿತ್ ಆದಿತ್ಯಾ ದ್ಯಧಿಕರಣಾನ್ ಪುರುಷಾನ್ ಅಮುಖ್ಯಬ್ರಹ್ಮದೃಷ್ಟಿಭಾಜಃ ಉಕ್ತ್ವಾ ತೂಷ್ಣೀಂ ಬಭೂವ । ತಮ್ ಅಜಾತಶತ್ರುಃ "ಮೃಷಾ ವೈ ಖಲು ಮಾ ಸಂವದಿಷ್ಠಾ ಬ್ರಹ್ಮ ತೇ ಬ್ರವಾಣಿ"[2] (ಕೌ. ೪-೧೮) ಇತಿ ಅಮುಖ್ಯಬ್ರಹ್ಮವಾದಿತಯಾ ಅಪೋದ್ಯ ತತ್ಕರ್ತಾರಮ್ ಅನ್ಯಂ ವೇದಿತವ್ಯತಯಾ ಉಪಚಿಕ್ಷೇಪ | ಯದಿ ಸೋಽಪಿ ಅಮುಖ್ಯಬ್ರಹ್ಮದೃಷ್ಟಿಭಾಕ್ ಸ್ಯಾತ್ ಉಪಕ್ರಮೋ ಬಾಧ್ಯೇತ |

---

1. ಇದುವರೆಗೆ ನಿಶ್ಚಿತಬ್ರಹ್ಮಲಿಂಗವಿರುವ ವಾಕ್ಯಗಳ ಸಮನ್ವಯವನ್ನು ಹೇಳಿ ದ್ದಾಯಿತು. ಇಲ್ಲಿ ಜೀವಮುಖ್ಯಪ್ರಾಣಲಿಂಗಗಳಿವೆಯೇ ಹೊರತು ಯಾವ ಬ್ರಹ್ಮ ಲಿಂಗಗಳೂ ಇಲ್ಲ. ಆದ್ದರಿಂದ ಈ ವಾಕ್ಯಕ್ಕೆ ಬ್ರಹ್ಮದಲ್ಲಿ ಸಮನ್ವಯವಿಲ್ಲ ಎಂದು ಭಾವ.

2. ಇಲ್ಲಿ ಒಂದು ಇತಿಯು ಶ್ರುತಿಯ ಕೊನೆಯಲ್ಲಿ ಬಿಟ್ಟುಹೋಗಿದೆ.

ತಸ್ಮಾತ್ ಪರಮೇಶ್ವರ ಏವ ಅಯಂ ಭವಿತುಮರ್ಹತಿ | ಕರ್ತೃತ್ವಂ ಚ ಏತೇಷಾಂ ಪುರುಷಾಣಾಂ ನ ಪರಮೇಶ್ವರಾತ್ ಅನ್ಯಸ್ಯ ಸ್ವಾತನ್ತ್ರ್ಯೇಣ ಅವಕಲ್ಪತೇ ||

( ಭಾಷ್ಯಾರ್ಥ )

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ: ಈ ಪುರುಷರ ಕರ್ತನೆಂಬ ಈತನು ಪರಮೇಶ್ವರನೇ ಆಗಿರಬೇಕು. ಏಕೆ ? ಎಂದರೆ ಉಪಕ್ರಮಸಾಮರ್ಥ್ಯದಿಂದ. ಹೇಗೆಂದರೆ ಇಲ್ಲಿ ಬಾಲಾಕಿಯು ಅಜಾತಶತ್ರುವಿನೊಡನೆ "ನಿನಗೆ ಬ್ರಹ್ಮವನ್ನು ಹೇಳುವೆನು" (ಕೌ. ೪-೧) ಎಂದು ಸಂವಾದವನ್ನು ಮಾಡುವದಕ್ಕೆ ಉಪಕ್ರಮಿಸಿದನು. ಅವನು ಆದಿತ್ಯನೇ ಮುಂತಾದ ಅಧಿಕರಣಗಳುಳ್ಳ ಅಮುಖ್ಯಬ್ರಹ್ಮದೃಷ್ಟಿಗೆ ತಕ್ಕವರಾಗಿರುವ ಕೆಲವರು ಪುರುಷರನ್ನು ಹೇಳಿ ಸುಮ್ಮನಾದನು. (ಕೌ. ೪-೧೮)[1] ಅವನನ್ನು ಅಜಾತಶತ್ರುವು "ನಿನಗೆ ಬ್ರಹ್ಮವನ್ನು ಹೇಳುವೆನೆಂದು ನನಗೆ ಸುಳ್ಳನ್ನೇ ಹೇಳಿದೆಯಲ್ಲ ! " (ಕೌ. ೪-೧೮) ಎಂದು ಅಮುಖ್ಯಬ್ರಹ್ಮರನ್ನು ಹೇಳಿದನೆಂಬ (ಕಾರಣದಿಂದ) ನಿಂದಿಸಿ ಆ (ಅಮುಖ್ಯಬ್ರಹ್ಮರ) ಕರ್ತೃವಾದ ಮತ್ತೊಬ್ಬ (ಆತ್ಮನನ್ನು) ಅರಿಯತಕ್ಕದ್ದು ಎಂದು (ಅವನ) ಮುಂದಿರಿಸಿದನು. (ಹೀಗಿರುವಲ್ಲಿ) ಆ (ಆತ್ಮನೂ) ಅಮುಖ್ಯಬ್ರಹ್ಮದೃಷ್ಟಿಗೆ ತಕ್ಕವನಾದರೆ ಉಪಕ್ರಮವು ಬಾಧಿತವಾದೀತು. (ಇದು ಸರಿಯಲ್ಲ). ಆದ್ದರಿಂದ ಇವನು ಪರಮೇಶ್ವರನೇ ಆಗಿರಬೇಕು. ಈ ಪುರುಷರ ಕರ್ತೃವಾಗಿರುವದೆಂಬುದೂ ಪರಮೇಶ್ವರನನ್ನು ಬಿಟ್ಟರೆ ಮತ್ತೊಬ್ಬನಿಗೆ ಸ್ವತಂತ್ರವಾಗಿ ಹೊಂದುವದಿಲ್ಲ.

## ಇಲ್ಲಿ ಜಗತ್ಕರ್ತೃತ್ವವೆಂಬ ಬ್ರಹ್ಮಲಿಂಗವಿದೆ

(ಭಾಷ್ಯ)

೩೭೩. "ಯಸ್ಯ ವೈತತ್ ಕರ್ಮ" ಇತ್ಯಪಿ ನಾಯಂ ಪರಿಸ್ಪನ್ದಲಕ್ಷಣಸ್ಯ ಧರ್ಮಾಧರ್ಮಲಕ್ಷಣಸ್ಯ ವಾ ಕರ್ಮಣೋ ನಿರ್ದೇಶಃ । ತಯೋಃ ಅನ್ಯತರಸ್ಯಾಪಿ ಅಪ್ರಕೃತತ್ವಾತ್, ಅಸಂಶಬ್ದಿತತ್ವಾಚ್ಚ । ನಾಪಿ ಪುರುಷಾಣಾಮ್ ಅಯಂ ನಿರ್ದೇಶಃ । "ಏತೇಷಾಂ ಪುರುಷಾಣಾಂ ಕರ್ತಾ" ಇತ್ಯೇವ ತೇಷಾಂ ನಿರ್ದಿಷ್ಟತ್ವಾತ್ । ಲಿಙ್ಗವಚನವಿಗಾನಾಚ್ಚ । ನಾಪಿ ಪುರುಷವಿಷಯಸ್ಯ ಕರೋತ್ಯರ್ಥಸ್ಯ ಕ್ರಿಯಾಫಲಸ್ಯ ವಾ ಅಯಂ ನಿರ್ದೇಶಃ । ಕರ್ತೃಶಬ್ದೇನೈವ ತಯೋಃ ಉಪಾತ್ತತ್ವಾತ್ । ಪಾರಿಶೇಷ್ಯಾತ್ ಪ್ರತ್ಯಕ್ಷಸಂನಿಹಿತಂ ಜಗತ್

1. ಆ|| ೬-೧೯.

ಸರ್ವನಾಮ್ನಾ ಏತಚ್ಛಬ್ದೇನ ನಿರ್ದಿಶ್ಯತೇ। ಕ್ರಿಯತೇ ಇತಿ ಚ ತದೇವ ಜಗತ್ ಕರ್ಮ। ನನು ಜಗದಪಿ ಅಪ್ರಕೃತಮಸಂಶಬ್ದಿತಂ ಚ। ಸತ್ಯಮೇತತ್। ತಥಾಪಿ ಅಸತಿ ವಿಶೇಷೋಪಾದಾನೇ ಸಾಧಾರಣೇನ ಅರ್ಥೇನ ಸಂನಿಧಾನೇನ ಸಂನಿಹಿತವಸ್ತುಮಾತ್ರಸ್ಯ ಅಯಂ ನಿರ್ದೇಶಃ ಇತಿ ಗಮ್ಯತೇ, ನ ವಿಶಿಷ್ಟಸ್ಯ ಕಸ್ಯಚಿತ್। ವಿಶೇಷಸಂನಿಧಾನಾಭಾವಾತ್। ಪೂರ್ವತ್ರ ಚ ಜಗದೇಕದೇಶಭೂತಾನಾಂ ಪುರುಷಾಣಾಂ ವಿಶೇಷೋಪಾದಾನಾತ್ ಅವಿಶೇಷಿತಂ ಜಗದೇವ ಇಹ ಉಪಾದೀಯತೇ ಇತಿ ಗಮ್ಯತೇ। ಏತದುಕ್ತಂ ಭವತಿ। ಯ ಏತೇಷಾಂ ಪುರುಷಾಣಾಂ ಜಗದೇಕದೇಶಭೂತಾನಾಂ ಕರ್ತಾ— ಕಿಮನೇನ ವಿಶೇಷೇಣ? ಯಸ್ಯ ಕೃತ್ಸ್ನಮೇವ ಜಗತ್ ಅವಿಶೇಷಿತಂ ಕರ್ಮ ಇತಿ। ವಾಶಬ್ದಃ ಏಕದೇಶಾವಚ್ಛಿನ್ನಕರ್ತೃತ್ವವ್ಯಾವೃತ್ತ್ಯರ್ಥಃ। ಯೇ ಬಾಲಾಕಿನಾ ಬ್ರಹ್ಮತ್ವಾಭಿಮತಾಃ ಪುರುಷಾಃ ಕೀರ್ತಿತಾಃ, ತೇಷಾಮ್ ಅಬ್ರಹ್ಮತ್ವಖ್ಯಾಪನಾಯ ವಿಶೇಷೋಪಾದಾನಮ್। ಏವಂ ಬ್ರಾಹ್ಮಣಪರಿವ್ರಾಜಕನ್ಯಾಯೇನ ಸಾಮಾನ್ಯವಿಶೇಷಾಭ್ಯಾಂ ಜಗತಃ ಕರ್ತಾ ವೇದಿತವ್ಯತಯಾ ಉಪದಿಶ್ಯತೇ। ಪರಮೇಶ್ವರಶ್ಚ ಸರ್ವಜಗತಃ ಕರ್ತಾ ಸರ್ವವೇದಾನ್ತೇಷು ಅವಧಾರಿತಃ ॥

( ಭಾಷ್ಯಾರ್ಥ )

"ಇದು ಯಾವನದೇ ಕರ್ಮವೋ" ಎಂಬಿದೂ ಚಲನರೂಪವಾದ ಅಥವಾ ಧರ್ಮಾಧರ್ಮಲಕ್ಷಣರೂಪವಾದ ಕರ್ಮದ ನಿರ್ದೇಶವಲ್ಲ. ಏಕೆಂದರೆ ಅವೆರಡರಲ್ಲಿ ಯಾವದೊಂದೂ ಪ್ರಕೃತವಾಗಿಲ್ಲ, (ಯಾವದೊಂದನ್ನೂ ಅದರ) ಶಬ್ದದಿಂದ ಹೇಳಿಯೂ ಇಲ್ಲ. ಇದು (ಆದಿತ್ಯಾದಿ)ಪುರುಷರ ನಿರ್ದೇಶವೂ ಅಲ್ಲ. ಏಕೆಂದರೆ "ಈ ಪುರುಷರ ಕರ್ತೃ" ಎಂದೇ ಅವರನ್ನು ತಿಳಿಸಿರುತ್ತದೆ. ಲಿಂಗವಚನಗಳ ಹೊಂದುಗಡೆಯಿಲ್ಲದ್ದರಿಂದಲೂ[1] (ಪುರುಷರ ನಿರ್ದೇಶವಲ್ಲ). ಪುರುಷವಿಷಯಕವಾದ ಮಾಡು ಎಂಬರ್ಥದ (ಕ್ರಿಯೆಯು) ಅಥವಾ (ಆ) ಕ್ರಿಯೆಯ ಫಲದ ನಿರ್ದೇಶವೂ ಇದಲ್ಲ; ಏಕೆಂದರೆ ಅವೆರಡನ್ನೂ 'ಕರ್ತೃ' ಎಂಬ ಶಬ್ದದಿಂದಲೇ ತೆಗೆದುಕೊಂಡದ್ದಾಗಿದೆ. ಆದ್ದರಿಂದ ಪರಿಶೇಷ(ನ್ಯಾಯ)ದಿಂದ ಪ್ರತ್ಯಕ್ಷವಾಗಿ ಹತ್ತಿರವಾಗಿರುವ ಜಗತ್ತನ್ನೇ 'ಇದು' ಎಂಬ ಸರ್ವನಾಮಶಬ್ದದಿಂದ ತಿಳಿಸಿರುತ್ತದೆ (ಎಂದು ನಿಶ್ಚಯಿಸಬೇಕು). ಕ್ರಿಯತೇ (ಮಾಡಲ್ಪಡುತ್ತದೆ), ಆದ್ದರಿಂದ ಅದೇ ಜಗತ್ತೇ (ಇಲ್ಲಿ) ಕರ್ಮವು.

(ಆಕ್ಷೇಪ):– ಜಗತ್ತು (ಇಲ್ಲಿ) ಪ್ರಕೃತವಾಗಿಲ್ಲ, ಶಬ್ದದಿಂದ (ಉಕ್ತ)ವಾಗಿಯೂ ಇಲ್ಲವಲ್ಲ!

1. ಪುರುಷರನ್ನು ಹೇಳುವ ಶಬ್ದವು ಪುಲ್ಲಿಂಗ ಬಹುವಚನ, ಕರ್ಮಶಬ್ದವು ನಪುಂಸಕಲಿಂಗ, ಏಕವಚನ.

(ಸಮಾಧಾನ):- ಇದು ನಿಜ. ಆದರೂ (ಇಂಥದ್ದೆಂಬ) ವಿಶೇಷವನ್ನು ತೆಗೆದುಕೊಂಡು (ಹೇಳದೆ ಇರು)ವಲ್ಲಿ ಸಂನಿಧಾನವೆಂಬ ಸಾಧಾರಣವಾದ ಅರ್ಥವು (ಇದು ಎಂಬ ಸರ್ವನಾಮಕ್ಕೆ ಆಗುವ)ದರಿಂದ ಹತ್ತಿರವಿರುವ ವಸ್ತು ಸಾಮಾನ್ಯದ ನಿರ್ದೇಶವಿದು, ಇಂಥದ್ದೆಂದು ಗೊತ್ತಾದ ಯಾವ (ವಸ್ತುವಿನ ನಿರ್ದೇಶವೂ) ಅಲ್ಲ- ಎಂದು ನಿಶ್ಚಯುವಾಗುತ್ತದೆ; ಏಕೆಂದರೆ ವಿಶೇಷ (ವಸ್ತುವನ್ನು ಯಾವವನ್ನೂ) ಸಮೀಪ(ದಲ್ಲಿ ಹೇಳಿರು)ವದಿಲ್ಲ. ಇದಲ್ಲದೆ ಹಿಂದೆ ಜಗತ್ತಿನ ಒಂದು ಭಾಗವಾದ ಪುರುಷರನ್ನು ವಿಶೇಷವಾಗಿ ತೆಗೆದುಕೊಂಡಿರು ವದರಿಂದ ಯಾವ ವಿಶೇಷವೂ ಇಲ್ಲದೆ (ಇಡಿಯ) ಜಗತ್ತನ್ನೇ ಇಲ್ಲಿ ತೆಗೆದು ಕೊಂಡು (ಹೇಳಿದೆ) ಎಂದು ನಿಶ್ಚಯವಾಗುತ್ತದೆ. ಇಷ್ಟನ್ನು ಹೇಳಿದಂತಾಯಿತು: ಯಾವನು ಜಗತ್ತಿನ ಒಂದು ಭಾಗವಾಗಿರುವ ಈ ಪುರುಷರಿಗೆ ಕರ್ತೃವೋ- ಹೀಗೆ ವಿಶೇಷವಾಗಿ ಹೇಳಿದ್ದರಿಂದ ಏನು (ಪ್ರಯೋಜನ) ? ಯಾವನಿಗೆ ಯಾವ ವಿಶೇಷವೂ ಇಲ್ಲದ ಇಡಿಯ ಜಗತ್ತೇ ಕರ್ಮವೋ ಎಂದು (ಅಭಿಪ್ರಾಯ. ಮೂಲದಲ್ಲಿರುವ) ವಾಶಬ್ದವು- ಒಂದು ಭಾಗವೆಂದು ಅಳತೆಯಾಗಿರುವ (ವಸ್ತುಗಳ) ಕರ್ತೃತ್ವವಲ್ಲವೆನ್ನುವದಕ್ಕೆ (ಬಂದಿದೆ): ಬಾಲಾಕಿಯು ಬ್ರಹ್ಮ ವೆಂಬ ಅಭಿಪ್ರಾಯದಿಂದ ಯಾವ ಪುರುಷರನ್ನು ಹೇಳಿದ್ದಾನೋ ಅವರು ಬ್ರಹ್ಮ ವಲ್ಲವೆಂದು ತಿಳಿಸುವದಕ್ಕೆ (ಈ ಪುರುಷರ ಕರ್ತೃ ಎಂದು) ವಿಶೇಷವನ್ನು ತೆಗೆದುಕೊಂಡು (ಹೇಳಿದೆ).[1] ಹೀಗೆ **ಬ್ರಾಹ್ಮಣಪರಿವ್ರಾಜಕನ್ಯಾಯ**ದಿಂದ[2] ಸಾಮಾನ್ಯವಿಶೇಷರೂಪದಿಂದ ಜಗತ್ತಿನ ಕರ್ತೃವನ್ನೇ (ಇಲ್ಲಿ) ಅರಿಯತಕ್ಕ ದ್ದೆಂದು ಹೇಳಿರುತ್ತದೆ. ಪರಮೇಶ್ವರನೇ ಸರ್ವಜಗತ್ತಿಗೂ ಕರ್ತೃವೆಂದು ಸರ್ವವೇದಾಂತಗಳಲ್ಲಿಯೂ ನಿರ್ಧರಿಸಲ್ಪಟ್ಟಿರುತ್ತದೆ.[3]

---

1 'ಯಸ್ಯ ವಾ ಏತತ್ಕರ್ಮ' ಎಂಬಲ್ಲಿ ಸಾಮಾನ್ಯವಾಗಿ ಜಗತ್ತನ್ನು ತೆಗೆದುಕೊಂಡಿವೆ ಯಾದರೆ 'ಏತೇಷಾಂ ಪುರುಷಾಣಾಂ ಕರ್ತಾ' ಎಂದು ವಿಶೇಷವಾಗಿ ಪುರುಷರನ್ನು ವಿಂಗಡಿಸಿ ಹೇಳಿರುವದು ವ್ಯರ್ಥವಲ್ಲವೆ ? ಎಂಬ ಶಂಕೆಗೆ ಪರಿಹಾರವಿದು.

2. ಪರಿವ್ರಾಜಕನು ಬ್ರಾಹ್ಮಣರಲ್ಲಿ ಸೇರಿದ್ದರೂ "ಬ್ರಾಹ್ಮಣರನ್ನೂ ಪರಿವ್ರಾಜಕ ರನ್ನೂ ಕರೆದುಕೊಂಡು ಬಾ" ಎಂದು ವಿಶೇಷವಾಗಿ ಹೇಳುವಂತೆ ಜಗತ್ತನ್ನು ಸಾಮಾನ್ಯ ವಾಗಿಯೂ ಪುರುಷರನ್ನು ವಿಶೇಷವಾಗಿಯೂ ಹೇಳಿದೆ ಎಂದು ಭಾವ. ಇದು ಯಜ್ಞೋಪ ವೀತಾದಿಗಳನ್ನು ಇಟ್ಟುಕೊಂಡಿರುವ ಸಂನ್ಯಾಸಿಗಳ ವಿಷಯ; ಏಕೆಂದರೆ ಪರಮಹಂಸನು ವರ್ಣಾಶ್ರಮಾದಿಗಳ ಅಭಿಮಾನವನ್ನು ತೊರೆದಿರುತ್ತಾನೆ.

3. ಆದ್ದರಿಂದ 'ಯಸ್ಯ ವೈತತ್ ಕರ್ಮ' ಎಂಬುದೇ ಲಿಂಗವಾಯಿತು. ಎಂದು ಭಾವ.

**ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇತ್ ತದ್ವ್ಯಾಖ್ಯಾತಮ್ ॥೧೭॥**

೧೭. ಜೀವ, ಮುಖ್ಯಪ್ರಾಣ- ಇವುಗಳ ಲಿಂಗವೂ ಇರುವದರಿಂದ (ಇದು ಸರಿ)ಯಲ್ಲ ಎಂದರೆ, ಅದನ್ನು (ಆಗಲೆ) ಹೇಳಿದ್ದಾಗಿದೆ.

## ಜೀವಮುಖ್ಯಪ್ರಾಣಗಳು ಇಲ್ಲಿ ವಿವಕ್ಷಿತವೆಂದರೆ ದೋಷ

( ಭಾಷ್ಯ )

೩೭೪ ಅಥ ಯದುಕ್ತಮ್ ವಾಕ್ಯಶೇಷಗತಾತ್ ಜೀವಲಿಙ್ಗಾತ್ ಮುಖ್ಯಪ್ರಾಣಲಿಙ್ಗಾಚ್ಚ ತಯೋರೇವ ಅನ್ಯತರಸ್ಯ ಇಹ ಗ್ರಹಣಂ ನ್ಯಾಯ್ಯಮ್ ನ ಪರಮೇಶ್ವರಸ್ಯ ಇತಿ। ತತ್ ಪರಿಹರ್ತವ್ಯಮ್। ಯತ್ರೋಚ್ಯತೇ- ಪರಿಹೃತಂ ಚೈತತ್ "ನೋಪಾಸಾತ್ರೈವಿಧ್ಯಾತ್ ಆಶ್ರಿತತ್ವಾತ್ ಇಹ ತದ್ಯೋಗಾತ್" (ಸೂ. ೧-೧-೩೧) ಇತ್ಯತ್ರ। ತ್ರಿವಿಧಂ ಹಿ ಅತ್ರ ಉಪಾಸನಮ್ ಏವಂ ಸತಿ ಪ್ರಸಜ್ಯೇತ ಜೀವೋಪಾಸನಮ್, ಮುಖ್ಯಪ್ರಾಣೋಪಾಸನಮ್, ಬ್ರಹ್ಮೋಪಾಸನಂ ಚ ಇತಿ। ನ ಚೈತತ್ ನ್ಯಾಯ್ಯಮ್। ಉಪಕ್ರಮೋಪಸಂಹಾರಾಭ್ಯಾಂ ಹಿ ಬ್ರಹ್ಮವಿಷಯತ್ವಮ್ ಅಸ್ಯ ವಾಕ್ಯಸ್ಯ ಅವಗಮ್ಯತೇ। ತತ್ರ ಉಪಕ್ರಮಸ್ಯ ತಾವತ್ ಬ್ರಹ್ಮವಿಷಯತ್ವಂ ದರ್ಶಿತಮ್। ಉಪಸಂಹಾರಸ್ಯಾಪಿ ನಿರತಿಶಯಫಲಶ್ರವಣಾತ್ ಬ್ರಹ್ಮವಿಷಯತ್ವಂ ದೃಶ್ಯತೇ "ಸರ್ವಾನ್ ಪಾಪ್ಮನೋಽಪಹತ್ಯ ಸರ್ವೇಷಾಂ ಚ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೇತಿ ಯ ಏವಂ ವೇದ" (ಕೌ. ೪-೨೦) ಇತಿ ॥

(ಭಾಷ್ಯಾರ್ಥ)

ಇನ್ನು ವಾಕ್ಯಶೇಷದಲ್ಲಿರುವ ಜೀವಲಿಂಗದಿಂದಲೂ ಮುಖ್ಯಪ್ರಾಣಲಿಂಗದಿಂದಲೂ ಅವುಗಳಲ್ಲಿಯೇ ಒಂದನ್ನು ಇಲ್ಲಿ ಹಿಡಿಯುವದು ಯುಕ್ತವೇ ಹೊರತು ಪರಮೇಶ್ವರನನ್ನು (ಹಿಡಿಯುವದು ಯುಕ್ತ)ವಲ್ಲ ಎಂದು (ಪೂರ್ವಪಕ್ಷದಲ್ಲಿ ಹೇಳಿತ್ತಲ್ಲ, ಅದನ್ನು ಪರಿಹರಿಸಬೇಕಾಗಿದೆ.

ಅದಕ್ಕೆ ಈ ಪರಿಹಾರವನ್ನು ಹೇಳುತ್ತೇವೆ: ಇದನ್ನು "ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್" (೧-೧-೩೧) ಎಂಬಲ್ಲಿ ಪರಿಹರಿಸಿದ್ದಾಗಿದೆ. ಏಕೆಂದರೆ ಹೀಗಾದರೆ ಜೀವೋಪಾಸನೆ, ಮುಖ್ಯಪ್ರಾಣೋಪಾಸನೆ, ಬ್ರಹ್ಮೋಪಾಸನೆ – ಎಂದು ಮೂರು ವಿಧವಾದ ಉಪಾಸನೆಯೆಂದು ಆಗಬೇಕಾಗುವದು.[1] ಆದರೆ ಅದು ನ್ಯಾಯವಲ್ಲ; ಏಕೆಂದರೆ ಉಪಕ್ರಮೋಪಸಂ

---

1. 'ನೋಪಾಸಾತ್ರೈವಿಧ್ಯಾತ್' ಎಂಬ ಸೂತ್ರಭಾಗದ ಎರಡನೆಯ ವರ್ಣಕವು ಪ್ರಕೃತಕ್ಕೆ ಹೊಂದುವದಿಲ್ಲವಾದ್ದರಿಂದ ಇಲ್ಲಿ ಅದನ್ನು ಪರಾಮರ್ಶಿಸಿಲ್ಲ.

ಹಾರಗಳಿಂದ ಈ ವಾಕ್ಯವು ಬ್ರಹ್ಮವಿಷಯವಾದದ್ದೆಂದು ನಿರ್ಣಯವಾಗುತ್ತದೆ. ಇಲ್ಲಿ ಮೊದಲನೆಯದಾಗಿ ಉಪಕ್ರಮವು ಬ್ರಹ್ಮವಿಷಯವಾದದ್ದೆಂಬುದನ್ನು (ಆಗಲೆ) ತೋರಿಸಿಕೊಟ್ಟದ್ದಾಗಿದೆ.[1] ಉಪಸಂಹಾರವೂ (ಹಾಗೆಯೇ). "ಹೀಗೆಂದು ತಿಳಿದುಕೊಂಡನು, ಎಲ್ಲಾ ಪಾಪಗಳನ್ನೂ ನಾಶಮಾಡಿಕೊಂಡು[2] ಎಲ್ಲಾಭೂತಗಳಲ್ಲಿ ಶ್ರೇಷ್ಠತ್ವವನ್ನೂ[3] ಸ್ವಾರಾಜ್ಯವನ್ನೂ[4] ಆಧಿಪತ್ಯವನ್ನೂ[5] ಪಡೆದುಕೊಳ್ಳುವನು" (ಕೌ. ೪-೨೦) ಎಂದು ಮಿಗಿಲಿಲ್ಲದ ಫಲವನ್ನು ಶ್ರುತಿಯಲ್ಲಿ ಹೇಳಿರುವದರಿಂದ (ಅದು) ಬ್ರಹ್ಮವಿಷಯವಾಗಿಯೇ ಇದೆ ಎಂದು ಕಂಡುಬರುತ್ತದೆ.[6]

## ಈ ಅಧಿಕರಣವು ಪ್ರತರ್ದನಾಧಿಕರಣದಲ್ಲಿ ಅಡಕವಾಗಲಾರದು

(ಭಾಷ್ಯ)

೩೭೫. ನನು ಏವಂ ಸತಿ ಪ್ರತರ್ದನವಾಕ್ಯನಿರ್ಣಯೇನೈವ ಇದಮಪಿ ವಾಕ್ಯಂ ನಿರ್ಣೀಯೇತ| ನ ನಿರ್ಣೀಯತೇ। "ಯಸ್ಯ ವೈತತ್ ಕರ್ಮ" ಇತ್ಯಸ್ಯ ಬ್ರಹ್ಮವಿಷಯತ್ವೇನ ತತ್ರ ಅನಿರ್ಧಾರಿತತ್ವಾತ್। ತಸ್ಮಾತ್ ಅತ್ರ ಜೀವಮುಖ್ಯಪ್ರಾಣಶಙ್ಕಾ ಪುನರುತ್ಪದ್ಯಮಾನಾ ನಿವರ್ತ್ಯತೇ। ಪ್ರಾಣಶಬ್ದೋಽಪಿ ಬ್ರಹ್ಮವಿಷಯೋ ದೃಷ್ಟಃ "ಪ್ರಾಣಬನ್ಧನಂ ಹಿ ಸೋಮ್ಯ ಮನಃ" (ಛಾ. ೬-೮-೨) ಇತ್ಯತ್ರ। ಜೀವಲಿಙ್ಗಮಪಿ ಉಪಕ್ರಮೋಪಸಂಹಾರಯೋಃ ಬ್ರಹ್ಮವಿಷಯತ್ವಾತ್ ಅಭೇದಾಭಿಪ್ರಾಯೇಣ ಯೋಜಯಿತವ್ಯಮ್ ॥

(ಭಾಷ್ಯಾರ್ಥ)

(ಆಕ್ಷೇಪ) :- ಹೀಗಾದರೆ ಪ್ರತರ್ದನವಾಕ್ಯದ ನಿರ್ಣಯದಿಂದಲೇ ಈ ವಾಕ್ಯವೂ ನಿರ್ಣೀತವಾದಂತಾಗುವದಿಲ್ಲವೆ ?

---

1. "ಉಪಕ್ರಮಸಾಮರ್ಥ್ಯದಿಂದ" (೩೭೨ ಭಾ. ಭಾ.) ಎಂಬಲ್ಲಿ ಇದನ್ನು ತೋರಿಸಿಕೊಟ್ಟದ್ದಾಗಿದೆ.

2. ಧರ್ಮಾಧರ್ಮರೂಪವಾದ ಎಲ್ಲಾ ಪಾಪಗಳನ್ನೂ ನಾಶಪಡಿಸಿಕೊಳ್ಳುವದು ಬ್ರಹ್ಮಜ್ಞಾನದಿಂದಲೇ ; ಆದ್ದರಿಂದ ಇದು ಬ್ರಹ್ಮವಿಷಯವಾದ ವಾಕ್ಯವು.

3. ಗುಣಗಳಿಂದಾದ ಹೆಚ್ಚುಗಾರಿಕೆಯನ್ನು.

4. ಮತ್ತೊಬ್ಬರಿಗೆ ಅಧೀನವಾಗಿಲ್ಲದಿರುವಿಕೆಯನ್ನು.

5. ಸ್ವತಂತ್ರವಾಗಿ ಆಳುವಿಕೆಯನ್ನು.

6. ಇಲ್ಲಿ ಹೇಳಿರುವ ಶ್ರೇಷ್ಠತ್ವಾದಿಗಳು ವಾಕ್ಯವು ಬ್ರಹ್ಮವಿಷಯವೆಂಬುದನ್ನೇ ತಿಳಿಸುತ್ತವೆ -ಎಂದು ಭಾವ.

(ಪರಿಹಾರ) :- (ಇದು ಅದರಿಂದ) ನಿರ್ಣಯವಾಗುವದಿಲ್ಲ. ಏಕೆಂದರೆ "ಯಸ್ಯ ವೈತತ್ ಕರ್ಮ" ಎಂಬೀ (ವಾಕ್ಯವು) ಬ್ರಹ್ಮವಿಷಯ ಎಂದು ಅಲ್ಲಿ ನಿರ್ಣಯಿಸಿರುವದಿಲ್ಲ.[1] ಆದ್ದರಿಂದ ಇಲ್ಲಿ ಜೀವಮುಖ್ಯಪ್ರಾಣಗಳ ಶಂಕೆಯು ಮತ್ತೆ ಉಂಟಾಗುವದರಿಂದ (ಅದನ್ನು) ತೊಲಗಿಸಲಾಗಿರುತ್ತದೆ.

"ಸೋಮ್ಯನೆ, ಮನಸ್ಸು ಪ್ರಾಣಬಂಧನವಲ್ಲವೆ?" (ಛಾಂ. ೬-೮-೨) ಎಂಬಲ್ಲಿ ಪ್ರಾಣಶಬ್ದವೂ ಬ್ರಹ್ಮವಿಷಯವಾಗಿರುವದು ಕಂಡುಬಂದಿದೆ. ಉಪಕ್ರಮೋಪಸಂಹಾರಗಳು ಬ್ರಹ್ಮವಿಷಯಕವಾಗಿರುವದರಿಂದ (ಜೀವಬ್ರಹ್ಮಗಳಿಗೆ) ಅಭೇದವೆಂಬ ಅಭಿಪ್ರಾಯದಿಂದ ಜೀವಲಿಂಗವೂ (ಇರಬಹುದೆಂದು) ಹೊಂದಿಸಬೇಕು.[2]

**ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ॥**

೧೮. (ಜೀವಪರಾಮರ್ಶವು) ಅನ್ಯಾರ್ಥವಾಗಿಯೇ ಎಂದಿರುತ್ತದೆ; ಏಕೆಂದರ ಪ್ರಶ್ನೋತ್ತರಗಳಿಂದ (ಹಾಗೆಂದು ಸಿದ್ಧವಾಗುತ್ತದೆ). ಇದಲ್ಲದೆ ಹೀಗೆಂದು ಕೆಲವರು (ಶಾಖೆಯವರು ಪಠಿಸುತ್ತಲಿದ್ದಾರೆ) ಎಂದು ಜೈಮಿನಿಯು (ಅಭಿಪ್ರಾಯಪಡುತ್ತಾನೆ).

## ಇಲ್ಲಿರುವ ಜೀವಪರಾಮರ್ಶವು ಬ್ರಹ್ಮಜ್ಞಾನಕ್ಕಾಗಿ

(ಭಾಷ್ಯ)

**೩೭೬.** ಅಪಿ ಚ ನೈವಾತ್ರ ವಿವದಿತವ್ಯಮ್ ಜೀವಪ್ರಧಾನಂ ವಾ ಇದಂ ವಾಕ್ಯಂ ಸ್ಯಾತ್ ಬ್ರಹ್ಮಪ್ರಧಾನಂ ವಾ ಇತಿ। ಯತಃ ಅನ್ಯಾರ್ಥಂ ಜೀವಪರಾಮರ್ಶಂ ಬ್ರಹ್ಮಪ್ರತಿಪತ್ತ್ಯರ್ಥಮ್ ಅಸ್ಮಿನ್ ವಾಕ್ಯೇ ಜೈಮಿನಿರಾಚಾರ್ಯೋ ಮನ್ಯತೇ। ಕಸ್ಮಾತ್ ? ಪ್ರಶ್ನವ್ಯಾಖ್ಯಾನಾಭ್ಯಾಮ್ । ಪ್ರಶ್ನಸ್ತಾವತ್ ಸುಪ್ತಪುರುಷಪ್ರತಿಬೋಧನೇನ ಪ್ರಾಣಾದಿವ್ಯತಿರಿಕ್ತೇ ಜೀವೇ ಪ್ರತಿ

---

1. ಕರ್ಮಶಬ್ದವು ಚಲನೆ, ಧರ್ಮಾಧರ್ಮಗಳು ಎಂಬರ್ಥದಲ್ಲಿ ರೂಢವಾಗಿರುತ್ತದೆ. ಯೌಗಿಕವಾಗಿ 'ಮಾಡಲ್ಪಡತಕ್ಕ ಕಾರ್ಯ' ಎಂಬ ಗೌಣಾರ್ಥವಲ್ಲಿ ಏಕೆ ತೆಗೆದುಕೊಳ್ಳಬೇಕು ? -ಎಂಬ ಶಂಕೆಯು ಇಲ್ಲಿ ಉಂಟಾಗಬಹುದಷ್ಟೆ; ಆದಕ್ಕೆ ಪರಿಹಾರವು ಆ ಅಧಿಕರಣದಲ್ಲಿಲ್ಲ ಎಂದರ್ಥ.

2. ಇದು ಬ್ರಹ್ಮವಿಷಯಕವೆಂದು ನಿಶ್ಚಯವಾಗಿರುವದರಿಂದ ಜೀವಲಿಂಗವನ್ನೂ ಹೇಗೋ ಮಾಡಿ ಬ್ರಹ್ಮಕ್ಕೇ ಹೊಂದಿಸಿಕೊಳ್ಳಬೇಕು ಎಂದು ಅಭಿಪ್ರಾಯ.

ಬೋಧಿತೇ, ಪುನರ್ಜೀವವ್ಯತಿರಿಕ್ತವಿಷಯೋ ದೃಶ್ಯತೇ "ಕ್ವೈಷ ಏತದ್ಬಾಲಾಕೇ ಪುರುಷೋಽಶಯಿಷ್ಟ ಕ್ವ ವಾ ಏತದಭೂತ್ ಕುತ ಏತದಾಗಾತ್" (ಕೌ. ೪-೧೯) ಇತಿ । ಪ್ರತಿವಚನಮಪಿ "ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ" ಇತ್ಯಾದಿ, "ಏತಸ್ಮಾದಾತ್ಮನಃ ಪ್ರಾಣಾ ಯಥಾಯತನಂ ವಿಪ್ರತಿಷ್ಠನ್ತೇ ಪ್ರಾಣೇಭ್ಯೋ ದೇವಾ ದೇವೇಭ್ಯೋ ಲೋಕಾಃ'' (ಕೌ. ೪-೨೦) ಇತಿ ಚ। ಸುಷುಪ್ತಿಕಾಲೇ ಚ ಪರೇಣ ಬ್ರಹ್ಮಣಾ ಜೀವಃ ಏಕತಾಂ ಗಚ್ಛತಿ, ಪರಸ್ಮಾಚ್ಚ ಬ್ರಹ್ಮಣಃ ಪ್ರಾಣಾದಿಕಂ ಜಗತ್ ಜಾಯತೇ ಇತಿ ವೇದಾನ್ತಮರ್ಯಾದಾ। ತಸ್ಮಾತ್ ಯತ್ರಾಸ್ಯ ಜೀವಸ್ಯ ನಿಃಸಂಬೋಧತಾ ಸ್ವಚ್ಛತಾರೂಪಃ ಸ್ವಾಪಃ ಉಪಾಧಿಜನಿತವಿಶೇಷವಿಜ್ಞಾನರಹಿತಂ ಸ್ವರೂಪಮ್, ಯತಸ್ತದ್ಭ್ರಂಶರೂಪಮ್ ಆಗಮನಮ್, ಸೋಽತ್ರ ಪರಮಾತ್ಮಾ ವೇದಿತವ್ಯತಯಾ ಶ್ರಾವಿತಃ ಇತಿ ಗಮ್ಯತೇ ||

( ಭಾಷ್ಯಾರ್ಥ )

ಇದಲ್ಲದೆ ಈ ವಾಕ್ಯವು ಜೀವಪ್ರಧಾನವಾಗಿರಬಹುದೆ, ಅಥವಾ ಬ್ರಹ್ಮಪ್ರಧಾನವಾಗಿರಬಹುದೆ ? -ಎಂಬೀ (ವಿಷಯದಲ್ಲಿ) ವಿವಾದಮಾಡುವಂತೆಯೇ ಇಲ್ಲ. ಏಕೆಂದರೆ ಈ ವಾಕ್ಯದಲ್ಲಿರುವ ಜೀವಪರಾಮರ್ಶವು ಅನ್ಯಾರ್ಥವಾಗಿರುತ್ತದೆ, ಎಂದರೆ ಬ್ರಹ್ಮಜ್ಞಾನಾರ್ಥವಾಗಿರುತ್ತದೆ ಎಂದು **ಜೈಮಿನಿ** ಎಂಬ ಆಚಾರ್ಯರು ಅಭಿಪ್ರಾಯಪಡುತ್ತಾರೆ. ಏತರಿಂದ? ಎಂದರೆ ಪ್ರಶ್ನೋತ್ತರಗಳಿರುವದರಿಂದ. ಮೊದಲನೆಯದಾಗಿ ನಿದ್ರಿಸುತ್ತಿದ್ದ ಮನುಷ್ಯನನ್ನು ಎಬ್ಬಿಸಿದ್ದರಿಂದ ಪ್ರಾಣಾದಿಗಳಿಗಿಂತ ಬೇರೆಯಾಗಿರುವ ಜೀವನನ್ನು ತಿಳಿಸಿದಮೇಲೆ ಮತ್ತೆ ಜೀವವ್ಯತಿರಿಕ್ತವಾದ (ಬ್ರಹ್ಮ)ವಿಷಯದಲ್ಲಿ "ಬಾಲಾಕಿಯೆ, ಈ ಪುರುಷನು ಎಲ್ಲಿ ಹೇಗೆ ನಿದ್ರಿಸಿದನು ? ಅಥವಾ ಎಲ್ಲಿದ್ದುಕೊಂಡಿದ್ದನು ? ಎಲ್ಲಿಂದ ಹೀಗೆ ಬಂದನು ? " (ಕೌ. ೪-೧೯) ಎಂಬ ಪ್ರಶ್ನೆಯು ಕಂಡುಬರುತ್ತದೆ. "ಯಾವಾಗ ನಿದ್ರಿಸಿದವನು ಯಾವ ಕನಸನ್ನೂ ಕಾಣುವದಿಲ್ಲವೋ ಆಗ ಈ ಪ್ರಾಣನಲ್ಲಿಯೇ ಒಂದಾಗುತ್ತಾನೆ" ಎಂದು ಮುಂತಾಗಿಯೂ "ಈ ಆತ್ಮನಿಂದ ಪ್ರಾಣಗಳು (ತಮ್ಮ ತಮ್ಮ) ಸ್ಥಾನವನ್ನು ಅನುಸರಿಸಿ ಬಂದು ಸೇರುತ್ತವೆ. ಪ್ರಾಣಗಳ ಹಿಂದೆ ದೇವತೆಗಳು, ದೇವತೆಗಳ ಹಿಂದೆ ಲೋಕಗಳು, ಹೊರಟು ಬರುತ್ತವೆ" (ಕೌ. ೪-೨೦) ಎಂದೂ ಉತ್ತರವೂ (ಕಂಡುಬರುತ್ತದೆ). **ಸುಷುಪ್ತಿಕಾಲದಲ್ಲಿ ಜೀವನು ಪರಬ್ರಹ್ಮದೊಡನೆ ಏಕತ್ವವನ್ನು ಹೊಂದುತ್ತಾನೆ, ಮತ್ತು ಪರಬ್ರಹ್ಮದಿಂದಲೇ ಪ್ರಾಣವೇ ಮುಂತಾದ**

**ಜಗತ್ತು ಉಂಟಾಗುತ್ತಿರುವದು ಎಂಬುದು ವೇದಾಂತಮರ್ಯಾದೆ.[1] ಆದ್ದರಿಂದ ಯಾವನಲ್ಲಿ ಜೀವನಿಗೆ ಅರಿವಿಲ್ಲದ ಸ್ವಚ್ಛತ್ವರೂಪವಾದ ನಿದ್ರೆಯುಂಟಾಗುವದೋ[2], ಉಪಾಧಿಯಿಂದುಂಟಾದ ವಿಶೇಷ ವಿಜ್ಞಾನರಹಿತವಾದ ಸ್ವರೂಪವಿರುವದೋ[3], ಯಾವನತ್ತಲಿಂದ ಆ (ಸ್ವರೂಪ)ದಿಂದ ಜಾರಿಬೀಳುವ ರೂಪದ ಬರುವಿಕೆಯುಂಟಾಗುವದೋ[4], ಆ ಪರಮಾತ್ಮನನ್ನೇ ಇಲ್ಲಿ ತಿಳಿಯತಕ್ಕದ್ದೆಂದು ಶ್ರುತಿಯಲ್ಲಿ ಹೇಳಿದೆ ಎಂದು ನಿಶ್ಚಯವಾಗುತ್ತದೆ.**

## ಈ ಅರ್ಥಕ್ಕೆ ಬೃಹದಾರಣ್ಯಕದ ಸಂವಾದವಿದೆ

(ಭಾಷ್ಯ)

೩೭೭. ಅಪಿ ಚ ಏವಮೇಕೇ ಶಾಖಿನೋ ವಾಜಸನೇಯಿನಃ ಅಸ್ಮಿನ್ನೇವ ಬಾಲಾಕ್ಯಜಾತಶತ್ರುಸಂವಾದೇ ಸ್ಪಷ್ಟಂ ವಿಜ್ಞಾನಮಯಶಬ್ದೇನ ಜೀವಮ್ ಆಮ್ನಾಯ ತದ್ವ್ಯತಿರಿಕ್ತಂ ಪರಮಾತ್ಮಾನಮ್ ಆಮನನ್ತಿ — "ಯ ಏಷ ವಿಜ್ಞಾನಮಯಃ ಪುರುಷಃ ಕ್ವೈಷ ತದಾಭೂತ್ ಕುತ ಏತದಾಗಾತ್" (ಬೃ. ೨–೧–೧೬) ಇತಿ ಪ್ರಶ್ನೇ। ಪ್ರತಿವಚನೇಽಪಿ "ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿಞ್ಛೇತೇ" (ಬೃ. ೨–೧–೧೭) ಇತಿ। ಆಕಾಶಶಬ್ದಶ್ಚ ಪರಮಾತ್ಮನಿ ಪ್ರಯುಕ್ತಃ "ದಹರೋಽಸ್ಮಿನ್ನನ್ತರಾಕಾಶಃ" (ಛಾಂ. ೮–೧–೧) ಇತ್ಯತ್ರ। "ಸರ್ವ ಏತೇ ಆತ್ಮಾನೋ ವ್ಯುಚ್ಚರನ್ತಿ" (ಬೃ. ಮಾ. ೨–೧–೨೦) ಇತಿ ಚ ಉಪಾಧಿ

---

1. ಈ ಅಭಿಪ್ರಾಯದ ವಿಷಯಕ್ಕೆ ಈಚಿನ ವೇದಾಂತಿಗಳು ಹೇಳುವದನ್ನು ಪೀಠಿಕೆಯಲ್ಲಿ ವಿಮರ್ಶಿಸಿದೆ.

2. ಅರಿವಿಲ್ಲದಿರುವದಕ್ಕೆ ಕಾರಣವನ್ನು ೩–೨–೭ರ ಭಾಷ್ಯದಲ್ಲಿ ಕೊಟ್ಟಿದೆ. "ಸ್ವಚ್ಛತಾರೂಪದಂತೆ ಇರುವ ರೂಪವು, ಸ್ವಚ್ಛತೆಯೇ ಅಲ್ಲ; ಏಕೆಂದರೆ ಅಲ್ಲಿ ಲಯ, ವಿಕ್ಷೇಪಸಂಸ್ಕಾರ –ಇವುಗಳು ಇರುತ್ತವೆ. ವ್ಯಕ್ತವಾಗಿ ವ್ಯಾಪಾರಮಾಡುತ್ತಿರುವ ವಿಕ್ಷೇಪವಿಲ್ಲವೆಂಬ ಮಾತ್ರದಿಂದ ಸ್ವಚ್ಛರೂಪಕ್ಕೆ ಹೋಲಿಸಿದೆ" ಎಂದು ಭಾಮತೀವ್ಯಾಖ್ಯಾನ. ಈ ವ್ಯಾಖ್ಯಾನವನ್ನು ಒಪ್ಪಿದರೆ ಅಧಿಕರಣದ ನ್ಯಾಯವೇ ಹಾರಿಹೋಗುವದು. ಪೀಠಿಕೆಯನ್ನು ನೋಡಿ.

3. ಬರಿಯ ಚೈತನ್ಯಸ್ವರೂಪವಿರುವದೋ ಎಂದರ್ಥ. ಎಲ್ಲಿದ್ದುಕೊಂಡಿದ್ದನು ?- ಎಂಬ ಪ್ರಶ್ನೆಗೆ ಉತ್ತರವಿದು. ಈಗಲೂ ಚೈತನ್ಯರೂಪದಲ್ಲಿಯೇ ಇದ್ದರೂ ಬೇರೊಂದು ರೂಪವನ್ನು ಹೊಂದಿದಂತೆ ಆಗಿರುತ್ತದೆ. ೩–೨–೭ರ ಭಾಷ್ಯವನ್ನು ನೋಡಿ.

4. ಚಿನ್ಮಾತ್ರಸ್ವಚ್ಛತಾರೂಪದಿಂದ ಭ್ರಂಶನಾದಂತೆ ಉಪಾಧಿಯಿಂದ ಕಾಣಬರುತ್ತಿರುವದೇ ಅಲ್ಲಿಂದ ಬರುವದು. ಆತ್ಮನಿಗೆ ನಿಜವಾಗಿ ಹೋಗುವದಾಗಲಿ ಬರುವದಾಗಲಿ ಇಲ್ಲ.

ಮತಾಮಾತ್ಮನಾಮ್ ಅನ್ಯತೋ ವ್ಯುಚ್ಚರಣಮ್ ಆಮನನ್ತಿ ಪರಮಾತ್ಮಾನ ಮೇವ ಕಾರಣತ್ವೇನ ಆಮನನ್ತಿ ಇತಿ ಗಮ್ಯತೇ। ಪ್ರಾಣನಿರಾಕರಣಸ್ಯಾಪಿ ಸುಷುಪ್ತಪುರುಷೋತ್ಥಾಪನೇನ ಪ್ರಾಣಾದಿವ್ಯತಿರಿಕ್ತೋಪದೇಶಃ ಅಭ್ಯುಚ್ಚಯಃ॥

(ಭಾಷ್ಯಾರ್ಥ)

ಇದಲ್ಲದೆ ಹೀಗೆ ಕೆಲವು ಶಾಖೆಯವರು, ಎಂದರೆ ವಾಜಸನೇಯಿಗಳು ಇದೇ ಬಾಲಾಕ್ಯಜಾತಶತ್ರುಸಂವಾದದಲ್ಲಿ ಸ್ಪಷ್ಟವಾಗಿ 'ವಿಜ್ಞಾನಮಯ' ಎಂಬ ಶಬ್ದದಿಂದ ಜೀವನನ್ನು ಹೇಳಿ ಅವನಿಗಿಂತ ವ್ಯತಿರಿಕ್ತನಾದ ಪರಮಾತ್ಮನನ್ನು "ಈ ವಿಜ್ಞಾನಮಯಪುರುಷನಿದಾನಲ್ಲ, ಇವನು ಆಗ ಎಲ್ಲಿದ್ದನು ? ಎಲ್ಲಿಂದ ಹೀಗೆ ಬಂದನು ?" (ಬೃ. ೨-೧-೧೬) ಎಂದು ಪ್ರಶ್ನೆಯಲ್ಲಿ ಪಠಿಸುತ್ತಾರೆ. ಉತ್ತರದಲ್ಲಿಯೂ "ಹೃದಯದೊಳಗೆ ಈ ಆಕಾಶವಿದೆಯಲ್ಲ, ಅದರಲ್ಲಿ ನಿದ್ರಿಸುತ್ತಾನೆ" (ಬೃ. ೨-೧-೧೭) ಎಂದು (ಪಠಿಸುತ್ತಾರೆ). "ಇದರೊಳಗಿನ ದಹರವಾದ ಆಕಾಶವು'' (ಛಾಂ. ೮-೧-೧) ಎಂಬಲ್ಲಿ ಆಕಾಶಶಬ್ದವನ್ನು ಪರಮಾತ್ಮನಲ್ಲಿ ಪ್ರಯೋಗಿಸಿರುತ್ತದೆ. "ಈ ಆತ್ಮರುಗಳೆಲ್ಲರೂ ಹೊರಕ್ಕೆ ಬರುತ್ತಾರೆ" (ಬೃ. ಮಾ. ೨-೧-೨೦) ಎಂದು ಉಪಾಧಿಯುಳ್ಳ[1] ಆತ್ಮರುಗಳು ಮತ್ತೊಬ್ಬನಿಂದ ಹೊರಟುಬರುತ್ತಾರೆಂದು ಪಠಿಸುತ್ತಿರುವದರಿಂದ ಪರಮಾತ್ಮನೇ (ಅವನಿಗೆ) ಕಾರಣನೆಂದು ಪಠಿಸುತ್ತಾರೆ ಎಂದು ನಿಶ್ಚಯವಾಗುತ್ತದೆ.

ನಿದ್ರಿಸಿದ ಪುರುಷನನ್ನು ಎಬ್ಬಿಸಿದ್ದರಿಂದ ಪ್ರಾಣಾದಿಗಳಿಗಿಂತ ಬೇರೆಯಾಗಿರುವ (ಪರಮಾತ್ಮನನ್ನು) ಉಪದೇಶಿಸಿರುವದು ಪ್ರಾಣನಿರಾಕರಣೆಗೆ ಮತ್ತೊಂದು ಕಾರಣವಾಗುತ್ತದೆ.

## ೬. ವಾಕ್ಯಾನ್ವಯಾಧಿಕರಣ (ಸೂ. ೧೯-೨೨)

(ಬೃಹದಾರಣ್ಯಕ ೨-೪-೫ರಲ್ಲಿ ಹೇಳಿರುವದು ಪರಮಾತ್ಮನನ್ನೇ)

**ವಾಕ್ಯಾನ್ವಯಾತ್ ॥ ೧೯ ॥**

೧೯. ವಾಕ್ಯಾನ್ವಯದಿಂದ (ದ್ರಷ್ಟವ್ಯನೆಂದು ಮುಂತಾಗಿ ಹೇಳಿರುವವನು ಪರಮಾತ್ಮನೇ).

## ವಿಷಯವೂ ಸಂಶಯವೂ

(ಭಾಷ್ಯ)

೩೭೮. ಬೃಹದಾರಣ್ಯಕೇ ಮೈತ್ರೇಯಿಬ್ರಾಹ್ಮಣೇ ಅಧೀಯತೇ "ನ ವಾ

1. ಜೀವರುಗಳಿಗೆ ಉತ್ಪತ್ತಿಯಿಲ್ಲವಾದರೂ ಉಪಾಧಿಗಳ ಮೂಲಕ ಉತ್ಪತ್ತಿಯನ್ನು ಹೇಳಿದೆ ಎಂದರ್ಥ. ಮಾಂ. ಕಾ. ಭಾ. ೩-೩ ನೋಡಿ.

ಅರೇ ಪತ್ಯುಃ ಕಾಮಾಯ" (ಬೃ. ೨-೪-೫ ; ೪-೫-೬) ಇತ್ಯುಪಕ್ರಮ್ಯ, "ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಮ್" (ಬೃ. ೨-೪-೫) ಇತಿ। ತತ್ರ ಏತದ್ ವಿಚಿಕಿತ್ಸ್ಯತೇ—ಕಿಂ ವಿಜ್ಞಾನಾತ್ಮೈವ ಅಯಂ ದ್ರಷ್ಟವ್ಯಶ್ರೋತವ್ಯತ್ವಾದಿರೂಪೇಣ ಉಪದಿಶ್ಯತೇ ಆಹೋಸ್ವಿತ್ ಪರಮಾತ್ಮಾ ಇತಿ। ಕುತಃ ಪುನರೇಷಾ ವಿಚಿಕಿತ್ಸಾ ? ಪ್ರಿಯಸಂಸೂಚಿತೇನ ಆತ್ಮನಾ ಭೋಕ್ತ್ರಾ ಉಪಕ್ರಮಾತ್ ವಿಜ್ಞಾನಾತ್ಮೋಪದೇಶಃ ಇತಿ ಪ್ರತಿಭಾತಿ। ತಥಾ ಆತ್ಮವಿಜ್ಞಾನೇನ ಸರ್ವವಿಜ್ಞಾನೋಪದೇಶಾತ್ ಪರಮಾತ್ಮೋಪದೇಶಃ ಇತಿ॥

(ಭಾಷ್ಯಾರ್ಥ)

ಬೃಹದಾರಣ್ಯಕದಲ್ಲಿ ಮೈತ್ರೇಯಿಬ್ರಾಹ್ಮಣದಲ್ಲಿ "ಎಲೆ, ಪತಿಯ ಕಾಮಕ್ಕಾಗಿ (ಪತಿಯು ಪ್ರಿಯನಾಗುವ)ದಿಲ್ಲ" (ಬೃ. ೨-೪-೫) ಎಂದು ಉಪಕ್ರಮಿಸಿ "ಎಲೆ, ಎಲ್ಲದರ ಕಾಮಕ್ಕಾಗಿ ಎಲ್ಲವೂ ಪ್ರಿಯವಾಗುವದಿಲ್ಲ; ಮತ್ತೇತಕ್ಕೆಂದರೆ ಆತ್ಮನ ಕಾಮಕ್ಕಾಗಿ ಎಲ್ಲವೂ ಪ್ರಿಯವಾಗಿರುತ್ತದೆ. ಎಲೆ, ಆತ್ಮನನ್ನೇ ಕಂಡುಕೊಳ್ಳಬೇಕು, ಕೇಳಬೇಕು, ವಿಚಾರಿಸಬೇಕು, ಚಿಂತಿಸಬೇಕು ; ಎಲೆ ಆತ್ಮನನ್ನು ಕಂಡುಕೊಳ್ಳುವದರಿಂದ, (ಆತ್ಮನ) ಶ್ರವಣದಿಂದ, ಮನನದಿಂದ, ವಿಜ್ಞಾನದಿಂದ ಇದೆಲ್ಲವೂ ವಿದಿತವಾಗುವದು" (ಬೃ. ೨-೪-೫) ಎಂದು ಅಧ್ಯಯನ ಮಾಡುತ್ತಾರೆ.

ಇಲ್ಲಿ ದ್ರಷ್ಟವ್ಯ, ಶ್ರೋತವ್ಯ ಮುಂತಾದ ರೂಪದಿಂದ ಉಪದೇಶಿಸಿರುವ ಇವನು ವಿಜ್ಞಾನಾತ್ಮನೇಯೊ, ಅಥವಾ ಪರಮಾತ್ಮನೊ? –ಎಂಬುದರ (ವಿಷಯಕ್ಕೆ) ಸಂಶಯವುಂಟಾಗುತ್ತದೆ.

(ಪ್ರಶ್ನೆ) :– ಈ ಸಂಶಯವು ಏತರಿಂದ (ಉಂಟಾಗುತ್ತದೆ) ?

(ಉತ್ತರ) :– ಪ್ರಿಯ(ವಸ್ತುಗಳಿಂದ) ಸಂಸೂಚಿತವಾದ ಭೋಕ್ತೃವಾದ ಆತ್ಮನಿಂದ ಉಪಕ್ರಮಿಸಿರುವದರಿಂದ ವಿಜ್ಞಾನಾತ್ಮನನ್ನು ಉಪದೇಶಿಸಿದೆ ಎಂದು ತೋರುತ್ತದೆ. ಆತ್ಮವಿಜ್ಞಾನದಿಂದ ಎಲ್ಲವನ್ನೂ ಅರಿತಂತಾಗಬಹುದೆಂದು ತಿಳಿಸಿರುವದರಿಂದ ಪರಮಾತ್ಮನನ್ನು ಉಪದೇಶಿಸಿದೆ ಎಂದು ತೋರುತ್ತದೆ.

# ಪೂರ್ವಪಕ್ಷ: ಉಪಕ್ರಮಸಾಮರ್ಥ್ಯದಿಂದ ಇದು ಜೀವನೆಂದು ತಿಳಿಯಬೇಕು

(ಭಾಷ್ಯ)

೩೭೯. ಕಿಂ ತಾವತ್ ಪ್ರಾಪ್ತಮ್ ? ವಿಜ್ಞಾನಾತ್ಮೋಪದೇಶಃ ಇತಿ । ಕಸ್ಮಾತ್ ? ಉಪಕ್ರಮಸಾಮರ್ಥ್ಯಾತ್ । ಪತಿಜಾಯಾಪುತ್ರವಿತ್ತಾದಿಕಂ ಹಿ ಭೋಗ್ಯಭೂತಂ ಸರ್ವಂ ಜಗತ್ ಆತ್ಮಾರ್ಥತಯಾ ಪ್ರಿಯಂ ಭವತಿ ಇತಿ ಪ್ರಿಯಸಂಸೂಚಿತಂ ಭೋಕ್ತಾರಮ್ ಆತ್ಮಾನಮ್ ಉಪಕ್ರಮ್ಯ ಅನನ್ತರಮ್ ಇದಮ್ ಆತ್ಮನಃ ದರ್ಶನಾದಿ ಉಪದಿಶ್ಯಮಾನಂ ಕಸ್ಯ ಅನ್ಯಸ್ಯ ಆತ್ಮನಃ ಸ್ಯಾತ್ ? ಮಧ್ಯೇಽಪಿ "ಇದಂ ಮಹದ್ಭೂತಮನನ್ತಮಪಾರಂ ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತಿ" (ಬೃ. ೨-೪-೧೨) ಇತಿ ಪ್ರಕೃತಸ್ಯೈವ ಮಹತೋ ಭೂತಸ್ಯ ದ್ರಷ್ಟವ್ಯಸ್ಯ ಭೂತೇಭ್ಯಃ ಸಮುತ್ಥಾನಂ ವಿಜ್ಞಾನಾತ್ಮಭಾವೇನ ಬ್ರುವನ್ ವಿಜ್ಞಾನಾತ್ಮನ ಏವೇದಂ ದ್ರಷ್ಟವ್ಯತ್ವಂ ದರ್ಶಯತಿ । ತಥಾ "ವಿಜ್ಞಾತಾರಮರೇ ಕೇನ ವಿಜಾನೀಯಾತ್" (ಬೃ. ೨-೪-೧೪) ಇತಿ ಕರ್ತೃವಚನೇನ ಶಬ್ದೇನ ಉಪಸಂಹರನ್ ವಿಜ್ಞಾನಾತ್ಮಾನಮೇವ ಇಹ ಉಪದಿಷ್ಟಂ ದರ್ಶಯತಿ । ತಸ್ಮಾತ್ ಆತ್ಮವಿಜ್ಞಾನೇನ ಸರ್ವವಿಜ್ಞಾನವಚನಂ ಭೋಕ್ತ್ರರ್ಥತ್ವಾತ್ ಭೋಗ್ಯಜಾತಸ್ಯ ಔಪಚಾರಿಕಂ ದ್ರಷ್ಟವ್ಯಮ್ ಇತಿ ॥

(ಭಾಷ್ಯಾರ್ಥ)

ಮೊದಲು ಯಾವ (ಪೂರ್ವಪಕ್ಷವು) ಬಂದೊದಗುತ್ತದೆ? (ಇದು) ವಿಜ್ಞಾನಾತ್ಮೋಪದೇಶವೆಂದು. ಏಕೆ? ಎಂದರೆ ಉಪಕ್ರಮಸಾಮರ್ಥ್ಯದಿಂದ[1]. ಗಂಡ, ಹೆಂಡತಿ, ಮಗ, ವಿತ್ತ – ಮುಂತಾದ ಭೋಗ್ಯವಾಗಿರುವ ಜಗತ್ತೆಲ್ಲವೂ ಆತ್ಮನಿಗೋಸ್ಕರವೇ ಪ್ರಿಯವಾಗಿರುತ್ತದೆ ಎಂದು ಪ್ರಿಯಸೂಚಿತನಾಗಿರುವ ಭೋಕ್ತೃವಾದ ಆತ್ಮನನ್ನು ಉಪಕ್ರಮಿಸಿದ ಬಳಿಕವೇ ಆತ್ಮನ ಈ ದರ್ಶನವೇ ಮುಂತಾದದ್ದನ್ನು ಉಪದೇಶಿಸಿರುವದು ಮತ್ತೆ ಯಾವ ಆತ್ಮನ (ಉಪದೇಶ) ವಾದೀತು? ನಡುವೆಯೂ "ಈ ಅನಂತವೂ ಅಪಾರವೂ ಆಗಿರುವ ದೊಡ್ಡ ಭೂತವು ವಿಜ್ಞಾನದ ಗಟ್ಟಿಯೇ (ಆಗಿರುತ್ತದೆ, ಇದು) ಈ ಭೂತಗಳಿಂದ ಮೇಲಕ್ಕೆದ್ದು ಅವುಗಳನ್ನೇ ಅನುಸರಿಸಿ ನಾಶವಾಗುತ್ತದೆ. (ಹಾಗೆ) ಹೊರಟು

1. ಉಪಕ್ರಮಸಾಮರ್ಥ್ಯದಿಂದ ಹಿಂದಿನ ಅಧಿಕರಣದಲ್ಲಿ ಪರಮಾತ್ಮನೆಂದು ನಿಶ್ಚಯಿಸಿರುವಂತೆ ಇಲ್ಲಿಯೂ ಜೀವಪರನೆಂದು ನಿಶ್ಚಯಿಸಬೇಕು ಎಂದು ಭಾವ.

ಹೋದ ಬಳಿಕ ಜ್ಞಾನವಿರುವದಿಲ್ಲ" (ಬೃ. ೨-೪-೧೨) ಎಂದು ಪ್ರಕೃತವಾಗಿರುವ ದ್ರಷ್ಟವ್ಯವಾದ ಮಹದ್ಭೂತವನ್ನೇ ಭೂತಗಳಿಂದ ವಿಜ್ಞಾನಾತ್ಮರೂಪದಿಂದ ಮೇಲಕ್ಕೇಳುವದೆಂದು ಹೇಳಿರುವದರಿಂದ (ಯಾಜ್ಞವಲ್ಕ್ಯನು) ಈ ದ್ರಷ್ಟವ್ಯವೆಂದು ಹೇಳಿದ್ದು ವಿಜ್ಞಾನಾತ್ಮನನ್ನೇ ಎಂದು ತಿಳಿಸಿರುತ್ತಾನೆ. ಹಾಗೂ "ಎಲೆ ವಿಜ್ಞಾತೃವನ್ನು ಏತರಿಂದ ಅರಿತುಕೊಂಡಾನು ?" (ಬೃ. ೨-೪-೧೦) ಎಂದು ಕರ್ತೃವಾಚಕವಾದ (ವಿಜ್ಞಾತೃ)ಶಬ್ದದಿಂದ ಉಪಸಂಹಾರಮಾಡಿರುವದರಿಂದ ಇಲ್ಲಿ ಉಪದೇಶಮಾಡಿರುವದು ವಿಜ್ಞಾನಾತ್ಮನನ್ನೇ ಎಂದು ತಿಳಿಸಿರುತ್ತಾನೆ. ಆದ್ದರಿಂದ ಆತ್ಮವಿಜ್ಞಾನದಿಂದ ಎಲ್ಲವನ್ನೂ ಅರಿತಂತಾಗುವದೆಂದು ಹೇಳುವದು ಭೋಗ್ಯಜಾತವು ಭೋಕ್ತೃವಿಗೋಸ್ಕರವಿದೆಯೆಂಬ ಕಾರಣದಿಂದ ಉಪಚಾರಕ್ಕಾಗಿ (ಹೇಳಿದ್ದು) ಎಂದು ತಿಳಿಯಬೇಕು.

## ಸಿದ್ಧಾಂತ: ವಾಕ್ಯದ ಅನ್ವಯದಿಂದ ಇದು ಪರಮಾತ್ಮನೆಂದು ಗೊತ್ತಾಗುತ್ತದೆ

( ಭಾಷ್ಯ )

೩೮೦. ಏವಂ ಪ್ರಾಪ್ತೇ ಬ್ರೂಮಃ। ಪರಮಾತ್ಮೋಪದೇಶ ಏವಾಯಮ್। ಕಸ್ಮಾತ್? ವಾಕ್ಯಾನ್ವಯಾತ್ । ವಾಕ್ಯಂ ಹಿ ಇದಂ ಪೌರ್ವಾಪರ್ಯೇಣ ಅಪೇಕ್ಷ್ಯಮಾಣಂ ಪರಮಾತ್ಮಾನಂ ಪ್ರತಿ ಅನ್ವಿತಾವಯವಂ ಲಕ್ಷ್ಯತೇ । ಕಥಮಿತಿ ? ತದುಪಪಾದ್ಯತೇ । "ಅಮೃತತ್ವಸ್ಯ ತು ನಾಶಾಸ್ತಿ ವಿತ್ತೇನ" (ಬೃ. ೨-೪-೨) ಇತಿ ಯಾಜ್ಞವಲ್ಕ್ಯಾತ್ ಉಪಶ್ರುತ್ಯ "ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ ಯದೇವ ಭಗವಾನ್ ವೇದ ತದೇವ ಮೇ ಬ್ರೂಹಿ" (ಬೃ. ೨-೪-೩) ಇತಿ ಅಮೃತತ್ವಮ್ ಆಶಾಸಾನಾಯೈ ಮೈತ್ರೇಯ್ಯೈ ಯಾಜ್ಞವಲ್ಕ್ಯಃ ಆತ್ಮವಿಜ್ಞಾನಮಿದಮ್ ಉಪದಿಶತಿ। ನ ಚ ಅನ್ಯತ್ರ ಪರಮಾತ್ಮವಿಜ್ಞಾನಾತ್ ಅಮೃತತ್ವಮ್ ಅಸ್ತಿ ಇತಿ ಶ್ರುತಿಸ್ಮೃತಿವಾದಾಃ ವದನ್ತಿ । ತಥಾ ಚ ಆತ್ಮವಿಜ್ಞಾನೇನ ಸರ್ವವಿಜ್ಞಾನಮ್ ಉಚ್ಯಮಾನಂ ನಾನ್ಯತ್ರ ಪರಮಕಾರಣವಿಜ್ಞಾನಾತ್ ಮುಖ್ಯಮ್ ಅವಕಲ್ಪತೇ । ನ ಚೈತತ್ ಔಪಚಾರಿಕಮ್ ಆಶ್ರಯಿತುಂ ಶಕ್ಯಮ್ । ಯತ್ಕಾರಣಮ್ ಆತ್ಮವಿಜ್ಞಾನೇನ ಸರ್ವವಿಜ್ಞಾನಂ ಪ್ರತಿಜ್ಞಾಯ ಅನನ್ತರೇಣ ಗ್ರನ್ಥೇನ ತದೇವ ಉಪಪಾದಯತಿ–"ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾತ್ಮನೋ ಬ್ರಹ್ಮ ವೇದ" (ಬೃ. ೨-೪-೬) ಇತ್ಯಾದಿನಾ । ಯೋ ಹಿ ಬ್ರಹ್ಮಕ್ಷತ್ರಾದಿಕಂ ಜಗತ್ ಆತ್ಮನೋಽನ್ಯತ್ರ ಸ್ವಾತನ್ತ್ರ್ಯೇಣ ಲಬ್ಧಸದ್ಭಾವಂ ಪಶ್ಯತಿ ತಂ ಮಿಥ್ಯಾದರ್ಶಿನಂ ತದೇವ ಮಿಥ್ಯಾದೃಷ್ಟಂ ಬ್ರಹ್ಮಕ್ಷತ್ರಾದಿಕಂ ಜಗತ್ ಪರಾಕರೋತಿ ಇತಿ ಭೇದದೃಷ್ಟಿಮ್-

ಅಪೋದ್ಯ "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬) ಇತಿ ಸರ್ವಸ್ಯ ವಸ್ತುಜಾತಸ್ಯ ಆತ್ಮಾವ್ಯತಿರೇಕಮ್ ಅವತಾರಯತಿ | ದುನ್ದುಭ್ಯಾದಿ ದೃಷ್ಟಾನ್ತೈಶ್ಚ (ಬೃ. ೨-೪-೭,೮,೯) ತಮೇವ ಅವ್ಯತಿರೇಕಂ ದ್ರಢಯತಿ | "ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದಃ" (ಬೃ. ೨-೪-೧೦, ೪-೫-೧೧) ಇತ್ಯಾದಿನಾ ಚ ಪ್ರಕೃತಸ್ಯ ಆತ್ಮನಃ ನಾಮರೂಪಕರ್ಮಪ್ರಪಞ್ಚ ಕಾರಣತಾಂ ವ್ಯಾಚಕ್ಷಾಣಃ ಪರಮಾತ್ಮಾನಮೇನಂ ಗಮಯತಿ। ತಥೈವ ಏಕಾಯನಪ್ರಕ್ರಿಯಾಯಾಮಪಿ (ಬೃ. ೨-೪-೧೧, ೪-೫-೧೨) ಸವಿಷಯಸ್ಯ ಸೇನ್ದ್ರಿಯಸ್ಯ ಸಾನ್ತಃಕರಣಸ್ಯ ಪ್ರಪಞ್ಚಸ್ಯೈಕಾಯನಮ್ ಅನನ್ತರಮ್ ಅಬಾಹ್ಯಂ ಕೃತ್ಸ್ನಂ ಪ್ರಜ್ಞಾನಘನಂ ವ್ಯಾಚಕ್ಷಾಣಃ ಪರಮಾತ್ಮಾನಮೇನಂ ಗಮಯತಿ | ತಸ್ಮಾತ್ ಪರಮಾತ್ಮನ ಏವಾಯಂ ದರ್ಶನಾದ್ಯುಪದೇಶಃ ಇತಿ ಗಮ್ಯತೇ ||

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಇದು ಪರಮಾತ್ಮನ ಉಪದೇಶವೇ. ಏಕೆ ? ಎಂದರೆ ವಾಕ್ಯಾನ್ವಯವಿರುವದರಿಂದ. ಈ ವಾಕ್ಯದ ಹಿಂದುಮುಂದಿನ (ಸಂದರ್ಭ)ವನ್ನು ನೋಡಿದರೆ ಈ ವಾಕ್ಯದ ಅವಯವಗಳು ಪರಮಾತ್ಮನ ವಿಷಯದಲ್ಲಿ ಅನ್ವಿತವಾಗಿರುವದು ಕಂಡುಬರುತ್ತದೆ. ಅದು ಹೇಗೆ ? ಎಂದರೆ ಅದನ್ನು ತೋರಿಸಿಕೊಡುತ್ತೇವೆ. ''ಆದರೆ ವಿತ್ತದಿಂದ ಅಮೃತತ್ವದ ಆಶೆಯಿಲ್ಲ'' (ಬೃ. ೨-೪-೨) ಎಂದು ಯಾಜ್ಞವಲ್ಕ್ಯನಿಂದ ಕೇಳಿ (ತಿಳಿದುಕೊಂಡು) ''ಯಾವದರಿಂದ ನಾನು ಅಮೃತಳಾಗಲಾರೆನೋ ಅದರಿಂದ ನಾನು ಏನು ಮಾಡಿಕೊಂಡೇನು ? ಪೂಜ್ಯನಾದ ನಿನಗೆ ಯಾವದು ತಿಳಿದಿದೆಯೋ ಅದನ್ನೇ ನನಗೆ ಹೇಳು'' (ಬೃ. ೨-೪-೩) ಎಂದು ಅಮೃತತ್ವವನ್ನು ಬಯಸಿದ ಮೈತ್ರೇಯಿಗೆ ಯಾಜ್ಞವಲ್ಕ್ಯನು ಈ ಆತ್ಮವಿಜ್ಞಾನವನ್ನು ಉಪದೇಶಿಸಿರುತ್ತಾನೆ. ಪರಮಾತ್ಮವಿಜ್ಞಾನವನ್ನು ಬಿಟ್ಟರೆ ಮತ್ತೆಲ್ಲಿಯೂ ಅಮೃತತ್ವವು (ದೊರಕುವಹಾ)ಗಿಲ್ಲವೆಂದು ಶ್ರುತಿಸ್ಮೃತಿವಾದಗಳು ಹೇಳುತ್ತಿರುತ್ತವೆ. ಇದರಂತೆ ಆತ್ಮವಿಜ್ಞಾನದಿಂದ ಎಲ್ಲವನ್ನೂ ಅರಿತುಕೊಂಡಂತಾಗುವದೆಂದು ಹೇಳಿರುವದು ಪರಮಕಾರಣವಾದ (ಆತ್ಮನ) ವಿಜ್ಞಾನದಿಂದಲ್ಲದೆ ಮತ್ತೆಲ್ಲಿಯೂ ಮುಖ್ಯವಾಗಿ ಹೊಂದುವದಿಲ್ಲ. ಇದು ಔಪಚಾರಿಕವೆಂದು ಇಟ್ಟುಕೊಳ್ಳುವದೂ ಆಗಲಾರದು ; ಏಕೆಂದರೆ ಆತ್ಮವಿಜ್ಞಾನದಿಂದ ಸರ್ವವಿಜ್ಞಾನ(ವಾಗುವದೆಂದು) ಹೇಳಿ (ಆದರ) ಮುಂದಿನ ಗ್ರಂಥದಲ್ಲಿ ''ಯಾವನು ಆತ್ಮನಿಗಿಂತ ಬೇರೆಯಾಗಿ ಬ್ರಾಹ್ಮಣಜಾತಿ (ಇರುವದೆಂದು) ತಿಳಿಯುವನೋ ಅವನನ್ನು (ಆ) ಬ್ರಾಹ್ಮಣಜಾತಿಯು ತಿರಸ್ಕರಿಸು

ವದು'' (ಬೃ. ೨-೪-೬) ಎಂದು ಮುಂತಾದ (ವಾಕ್ಯದಿಂದ) ಅದನ್ನೇ ತೋರಿಸಿಕೊಟ್ಟಿರುತ್ತಾನೆ. ಯಾವನು ಬ್ರಹ್ಮಕ್ಷತ್ರಾದಿಯಾದ ಜಗತ್ತು ಆತ್ಮನಿಗಿಂತ ಬೇರೆಯಾಗಿ ಮತ್ತೊಂದು ಕಡೆಯಲ್ಲಿ ಇರವನ್ನು ಪಡೆದಿರುವದೆಂದು ತಿಳಿಯುವನೋ ಆ ಮಿಥ್ಯಾದರ್ಶಿಯನ್ನು ಅದೇ ಮಿಥ್ಯಾದೃಷ್ಟವಾದ (ಆ) ಬ್ರಹ್ಮಕ್ಷತ್ರಾದಿಜಗತ್ತು ನಿರಾಕರಿಸುತ್ತದೆ ಎಂದು ಭೇದದೃಷ್ಟಿಯನ್ನು ನಿಂದಿಸಿ "ಇದೆಲ್ಲವೂ ಈ ಆತ್ಮನೆಂಬುದೇ'' (ಬೃ. ೨-೪-೬) ಎಂದು ಎಲ್ಲಾ ವಸ್ತುಜಾತವೂ ಆತ್ಮನಿಗಿಂತ ಅಭಿನ್ನವಾಗಿರುವದೆಂಬುದಕ್ಕೆ ಅವತರಣಿಕೆಯನ್ನು ಮಾಡಿರುತ್ತಾನೆ, ಮತ್ತು ದುಂದುಭಿಯೇ ಮುಂತಾದ ದೃಷ್ಟಾಂತಗಳಿಂದ[1] (ಬೃ. ೨-೪-೭,೮,೯) ಅದೇ ಅಭೇದವನ್ನೇ ಗಟ್ಟಿಗೊಳಿಸಿರುತ್ತಾನೆ. ಮತ್ತು "ಈ ಋಗ್ವೇದವು (ಮುಂತಾದದ್ದು) ಈ ದೊಡ್ಡಭೂತದ ಉಸಿರು'' (ಬೃ. ೨-೪-೧೦,೪-೫-೧೧) ಎಂದು ಮುಂತಾಗಿರುವ ಗ್ರಂಥದಿಂದ ಪ್ರಕೃತನಾಗಿರುವ ಆತ್ಮನು ನಾಮರೂಪಕರ್ಮಪ್ರಪಂಚಕ್ಕೆ[2] ಕಾರಣವಾಗಿರುವನೆಂದು ಹೇಳುವದರಿಂದಲೂ ಇವನು ಪರಮಾತ್ಮನೆಂದು ತಿಳಿಸಿರುತ್ತಾನೆ. ಇದರಂತೆಯೇ **ಏಕಾಯನಪ್ರಕ್ರಿಯೆಯಲ್ಲಿಯೂ** (ಬೃ. ೨-೪-೧೧, ೪-೫-೧೨) ವಿಷಯಗಳಿಂದಲೂ ಇಂದ್ರಿಯಗಳಿಂದಲೂ ಅಂತಃಕರಣಗಳಿಂದಲೂ ಕೂಡಿದ ಪ್ರಪಂಚಕ್ಕೆ ಒಂದೇ ಅಯನವಾಗಿರುವ[3] (ತತ್ತ್ವವು) ಒಳಗಿಲ್ಲದ್ದೂ ಹೊರಗಿಲ್ಲದ್ದೂ ಪೂರ್ಣವೂ ಪ್ರಜ್ಞಾನಘನವೂ (ಆಗಿದೆ) ಎಂದು ಹೇಳಿರುವದರಿಂದ ಇವನು ಪರಮಾತ್ಮನೇ ಎಂದು ತಿಳಿಸಿರುತ್ತಾನೆ. ಆದ್ದರಿಂದ ಈ ದರ್ಶನವೇ ಮುಂತಾದದ್ದನ್ನು ಹೇಳಿರುವದು ಪರಮಾತ್ಮನ ವಿಷಯವೇ ಎಂದು ನಿಶ್ಚಯವಾಗುತ್ತದೆ.

---

1. ಸಾಮಾನ್ಯಕ್ಕಿಂತ ವಿಶೇಷಗಳು ಬೇರೆಯಿಲ್ಲವೆಂದು ತಿಳಿಸುವದರ ಮೂಲಕ ಸ್ಥಿತಿಕಾಲದಲ್ಲಿ ಬ್ರಹ್ಮಕ್ಕಿಂತ ಜಗತ್ತು ಬೇರೆಯಿಲ್ಲವೆಂಬುದನ್ನು ಈ ದೃಷ್ಟಾಂತಗಳು ತಿಳಿಸುವವು.

2. ಈ ಸಂದರ್ಭವು ಬೃಹದಾರಣ್ಯಕದಲ್ಲಿ ಎರಡನೆಯ ಅಧ್ಯಾಯದಲ್ಲಿಯೂ ನಾಲ್ಕನೆಯ ಅಧ್ಯಾಯದಲ್ಲಿಯೂ ಬಂದಿದೆ. ಇಲ್ಲಿರುವ ವಾಕ್ಯಗಳು ಬಹುಮಟ್ಟಿಗೆ ಎರಡನೆಯ ಅಧ್ಯಾಯಕ್ಕೆ ಅನುಗುಣವಾಗಿ ಕಂಡದ್ದರಿಂದ ನಾವು ಆ ಅಧ್ಯಾಯದ ಸಂಖ್ಯೆಗಳನ್ನೇ ತೋರಿಸಿರುತ್ತೇವೆ. ಆದರೆ ನಾಮರೂಪಕರ್ಮವೆಂಬ ವಿಶೇಷಣವು ೪-೫-೧೧ಕ್ಕೆ ಹೆಚ್ಚು ಒಪ್ಪುತ್ತದೆ. ಏಕೆಂದರೆ ಋಗ್ವೇದಾದಿನಾಮವನ್ನೂ 'ಇಷ್ಟಂ ಹುತಂ' ಎಂದು ಕರ್ಮವನ್ನೂ 'ಅಯಂ ಚ ಲೋಕಃ' ಎಂದು ಮುಂತಾಗಿ ರೂಪವನ್ನೂ ಅಲ್ಲಿ ತಿಳಿಸಿರುತ್ತದೆ. ಎರಡನೆಯ ಅಧ್ಯಾಯದಲ್ಲಿ ನಾಮವನ್ನು ಮಾತ್ರ ಉಪಲಕ್ಷಣವಾಗಿ ಹೇಳಿದೆ.

3. ಲಯಸ್ಥಾನವಾಗಿರುವ ಎಂದರ್ಥ.

## ಉಪಕ್ರಮದಲ್ಲಿ ಪ್ರಿಯಸಂಸೂಚಿತನಾದ ಆತ್ಮನನ್ನೇಕೆ ಹೇಳಿದೆ?

( ಭಾಷ್ಯ )

೩೮೧. ಯತ್ ಪುನರುಕ್ತಮ್ — ಪ್ರಿಯಸಂಸೂಚಿತೋಪಕ್ರಮಾತ್ ವಿಜ್ಞಾನಾತ್ಮನ ಏವಾಯಂ ದರ್ಶನಾದ್ಯುಪದೇಶಃ ಇತಿ | ಅತ್ರ ಬ್ರೂಮಃ—

( ಭಾಷ್ಯಾರ್ಥ )

ಇನ್ನು ಪ್ರಿಯಸಂಸೂಚಿತನಾದ (ವಿಜ್ಞಾನಾತ್ಮನನ್ನು) ಉಪಕ್ರಮ(ದಲ್ಲಿ ಹೇಳಿರುವದ)ರಿಂದ ವಿಜ್ಞಾನಾತ್ಮನನ್ನೇ ದರ್ಶನಮಾಡಬೇಕು ಎಂದು ಮುಂತಾಗಿ ಈ ಉಪದೇಶವು (ಹೇಳುತ್ತದೆ) ಎಂದು ಪೂರ್ವಪಕ್ಷದಲ್ಲಿ ಹೇಳಿತ್ತಷ್ಟೆ, ಈ (ವಿಷಯ)ದಲ್ಲಿ (ಸಿದ್ಧಾಂತ)ವನ್ನು ಹೇಳುತ್ತೇವೆ :-

**ಪ್ರತಿಜ್ಞಾಸಿದ್ಧೇರ್ಲಿಙ್ಗಮಾಶ್ಮರಥ್ಯಃ || ೨೦ ||**

೨೦. ಪ್ರತಿಜ್ಞಾಸಿದ್ಧಿಯ ಲಿಂಗ(ವಿದೆಂದು) ಆಶ್ಮರಥ್ಯನು (ಅಭಿಪ್ರಾಯಪಡುತ್ತಾನೆ).

( ಭಾಷ್ಯ )

೩೮೨. ಅಸ್ತ್ಯತ್ರ ಪ್ರತಿಜ್ಞಾ ''ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'' (ಬೃ. ೨-೪-೫, ೪-೫-೬), "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬, ೪-೫-೭) ಇತಿ ಚ | ತಸ್ಯಾಃ ಪ್ರತಿಜ್ಞಾಯಾಃ ಸಿದ್ಧಿಂ ಸೂಚಯತಿ ಏತಲ್ಲಿಙ್ಗಂ ಯತ್ ಪ್ರಿಯಸಂಸೂಚಿತಸ್ಯ ಆತ್ಮನೋ ದ್ರಷ್ಟವ್ಯತ್ವಾದಿಸಂಕೀರ್ತನಮ್ | ಯದಿ ಹಿ ವಿಜ್ಞಾನಾತ್ಮಾ ಪರಮಾತ್ಮನೋಽನ್ಯಃ ಸ್ಯಾತ್, ತತಃ ಪರಮಾತ್ಮವಿಜ್ಞಾನೇಽಪಿ ವಿಜ್ಞಾನಾತ್ಮಾನ ವಿಜ್ಞಾತ ಇತಿ ಏಕವಿಜ್ಞಾನೇನ ಸರ್ವವಿಜ್ಞಾನಂ ಯತ್ ಪ್ರತಿಜ್ಞಾತಂ ತದ್ ಹೀಯೇತ | ತಸ್ಮಾತ್ ಪ್ರತಿಜ್ಞಾಸಿದ್ಧ್ಯರ್ಥಂ ವಿಜ್ಞಾನಾತ್ಮಪರಮಾತ್ಮನೋಃ ಅಭೇದಾಂಶೇನ ಉಪಕ್ರಮಣಮ್ ಇತಿ ಆಶ್ಮರಥ್ಯಃ ಆಚಾರ್ಯೋ ಮನ್ಯತೇ ||

(ಭಾಷ್ಯಾರ್ಥ)

"ಇಲ್ಲಿ ಆತ್ಮನನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತಂತಾಗುತ್ತದೆ" (ಬೃ ೨-೪-೫, ೪-೫-೬) ಎಂದೂ "ಇದೆಲ್ಲವೂ ಈ ಆತ್ಮನೆಂಬುದೇ" (ಬೃ ೨-೪-೬, ೪-೫-೭) ಎಂದೂ ಇಲ್ಲಿ ಪ್ರತಿಜ್ಞೆ ಇರುತ್ತದೆ. ಪ್ರಿಯಸಂಸೂಚಿತ

ನಾದ ಆತ್ಮನನ್ನು 'ಕಾಣಬೇಕು' ಎಂದು ಮುಂತಾಗಿ ಹೇಳಿರುವದೆಂಬೀ ಲಿಂಗವು ಆ ಪ್ರತಿಜ್ಞೆಯ ಸಿದ್ಧಿಯನ್ನು ಸೂಚಿಸುತ್ತದೆ. ವಿಜ್ಞಾನಾತ್ಮನು ಪರಮಾತ್ಮನಿಗಿಂತ ಭಿನ್ನನಾಗಿದ್ದರೆ, ಆಗ ಪರಮಾತ್ಮನನ್ನು ಅರಿತರೂ ವಿಜ್ಞಾನಾತ್ಮನನ್ನು ಅರಿತಂತಾಗುವದಿಲ್ಲವಾದ್ದರಿಂದ ಒಂದನ್ನು ಅರಿತಿದ್ದರಿಂದ ಎಲ್ಲವನ್ನೂ ಅರಿತುಕೊಳ್ಳಬಹುದೆಂದು ಪ್ರತಿಜ್ಞೆಮಾಡಿತ್ತಲ್ಲ, ಅದನ್ನು ಕೈಬಿಟ್ಟಂತೆ ಆದೀತು. ಆದ್ದರಿಂದ **ಪ್ರತಿಜ್ಞೆಯು ಸಿದ್ಧಿಯಾಗುವದಕ್ಕಾಗಿ ವಿಜ್ಞಾನಾತ್ಮ ಪರಮಾತ್ಮರ ಅಭೇದಾಂಶದಿಂದ ಉಪಕ್ರಮಿಸಿದೆ ಎಂದು ಆಶ್ಮರಥ್ಯನೆಂಬ ಆಚಾರ್ಯನು ಅಭಿಪ್ರಾಯಪಟ್ಟಿರುತ್ತಾನೆ.**

**ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ॥ ೨೧ ॥**

೨೧. (ಶರೀರದಿಂದ) ಹೊರಟುಹೋಗುವವನಿಗೆ ಈ ಸ್ವರೂಪವಾಗುವದರಿಂದ (ಹೀಗೆ ಉಪಕ್ರಮಿಸಿದೆ) ಎಂದು ಔಡುಲೋಮಿಯು.

(ಭಾಷ್ಯ)

೩೮೩. ವಿಜ್ಞಾನಾತ್ಮನ ಏವ ದೇಹೇನ್ದ್ರಿಯಮನೋಬುದ್ಧಿಸಙ್ಘಾತೋಪಾಧಿಸಂಪರ್ಕಾತ್ ಕಲುಷೀಭೂತಸ್ಯ ಜ್ಞಾನಧ್ಯಾನಾದಿಸಾಧನಾನುಷ್ಠಾನಾತ್ ಸಂಪ್ರಸನ್ನಸ್ಯ ದೇಹಾದಿಸಙ್ಘಾತಾತ್ ಉತ್ಕ್ರಮಿಷ್ಯತಃ ಪರಮಾತ್ಮೈಕ್ಯೋಪಪತ್ತೇಃ ಇದಮ್ ಅಭೇದೇನ ಉಪಕ್ರಮಣಮ್ ಇತಿ ಔಡುಲೋಮಿರಾಚಾರ್ಯೋ ಮನ್ಯತೇ। ಶ್ರುತಿಶ್ಚ ಏವಂ ಭವತಿ—"ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" (ಛಾಂ. ೮-೧೨-೩) ಇತಿ। ಕ್ವಚಿಚ್ಚ ಜೀವಾಶ್ರಯಮಪಿ ನಾಮರೂಪಂ ನದೀನಿದರ್ಶನೇನ ಜ್ಞಾಪಯತಿ—"ಯಥಾ ನದ್ಯಃ ಸ್ಯನ್ದಮಾನಾಂ ಸಮುದ್ರೇಽಸ್ತಂ ಗಚ್ಛನ್ತಿ ನಾಮರೂಪೇ ವಿಹಾಯ। ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್" (ಮುಂ. ೩-೨-೮) ಇತಿ। ಯಥಾ ಲೋಕೇ ನದ್ಯಃ ಸ್ವಾಶ್ರಯಮೇವ ನಾಮರೂಪಂ ವಿಹಾಯ ಸಮುದ್ರಮ್ ಉಪಯನ್ತಿ, ಏವಂ ಜೀವೋಽಪಿ ಸ್ವಾಶ್ರಯಮೇವ ನಾಮರೂಪಂ ವಿಹಾಯ ಪರಂ ಪುರುಷಮ್ ಉಪೈತಿ ಇತಿ ಹಿ ತತ್ರಾರ್ಥಃ ಪ್ರತೀಯತೇ ದೃಷ್ಟಾನ್ತದಾರ್ಷ್ಟಾನ್ತಿಕಯೋಸ್ತುಲ್ಯತಾಯೈ ॥

(ಭಾಷ್ಯಾರ್ಥ)

**ವಿಜ್ಞಾನಾತ್ಮನೇ ದೇಹ, ಇಂದ್ರಿಯ, ಮನ, ಬುದ್ಧಿ –ಇವುಗಳ ಸಂಘಾತವೆಂಬ ಉಪಾಧಿಯ ಸಂಪರ್ಕದಿಂದ ಕಲ್ಮಷವಾಗಿದ್ದು,**

**ಜ್ಞಾನಧ್ಯಾನಗಳೇ ಮುಂತಾದ ಸಾಧನಗಳ ಅನುಷ್ಠಾನದಿಂದ ನಿರ್ಮಲನಾಗಿ ದೇಹಾದಿಗಳ ಸಂಘಾತ(ವನ್ನು ಬಿಟ್ಟು) ಹೊರಡುವಾಗ ಪರಮಾತ್ಮನೊಡನೆ ಐಕ್ಯವಾಗಬಹುದಾದ್ದರಿಂದ ಈ (ರೀತಿಯಲ್ಲಿ) ಅಭೇದ(ರೂಪ)ದಿಂದ ಉಪಕ್ರಮಿಸಿದೆ ಎಂದು ಔಡುಲೋಮಿ ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.** "ಈ ಸಂಪ್ರಸಾದನು ಈ ಶರೀರವನ್ನು ಬಿಟ್ಟೆದ್ದು ಪರಂಜ್ಯೋತಿಯನ್ನು ಸೇರಿಕೊಂಡು ತನ್ನ ರೂಪದಿಂದ ಸಿದ್ಧನಾಗುತ್ತಾನೆ" (ಛಾಂ ೮-೧೨-೩) ಎಂಬ ಶ್ರುತಿಯೂ ಹೀಗೆ ಹೇಳುತ್ತದೆ. ಮತ್ತು ಒಂದು ಕಡೆಯಲ್ಲಿ "ಹೇಗೆ ಹರಿಯುವ ನದಿಗಳು ನಾಮರೂಪಗಳನ್ನು ಬಿಟ್ಟು ಸಮುದ್ರದಲ್ಲಿ ಅಸ್ತವಾಗುವವೋ, ಹಾಗೆ ಜ್ಞಾನಿಯು ನಾಮರೂಪದಿಂದ ಬಿಡುಗಡೆಯಾಗಿ ಪರಾತ್ಪರನಾದ ದಿವ್ಯಪುರುಷನನ್ನು ಬಂದು ಸೇರುತ್ತಾನೆ" (ಮುಂ. ೩-೨-೮) ಎಂದು ಜೀವಾಶ್ರಯವಾದ[1] ನಾಮರೂಪಗಳನ್ನು ನದೀದೃಷ್ಟಾಂತದಿಂದ ತಿಳಿಸಿರುತ್ತದೆ ; ಹೇಗೆ ಲೋಕದಲ್ಲಿ ನದಿಗಳು ತಮ್ಮನ್ನೇ ಆಶ್ರಯಿಸಿರುವ ನಾಮರೂಪವನ್ನು ಬಿಟ್ಟು ಸಮುದ್ರವನ್ನು ಬಂದು ಸೇರುವವೋ, ಹೀಗೆಯೇ ಜೀವನೂ ತನ್ನನ್ನೇ ಆಶ್ರಯಿಸಿರುವ ನಾಮರೂಪವನ್ನು ಬಿಟ್ಟು ಪರಮಪುರುಷನನ್ನು ಬಂದು ಸೇರುತ್ತಾನೆ –ಎಂದಲ್ಲವೆ, ದೃಷ್ಟಾಂತದಾರ್ಷ್ಟಾಂತಿಕಗಳ ಸಾದೃಶ್ಯಕ್ಕಾಗಿ, ಆ (ಶ್ರುತಿ)ಯಲ್ಲಿ ಅರ್ಥವನ್ನು ತಿಳಿಯಬೇಕಾಗಿದೆ ?

**ಅವಸ್ಥಿತೇರಿತಿ ಕಾಶಕೃತ್ಸ್ನಃ ‖ ೨೨ ‖**

೨೨. (ಈ ವಿಜ್ಞಾನಾತ್ಮರೂಪದಿಂದ) ಇದ್ದುಕೊಂಡಿರುವದರಿಂದ (ಹೀಗೆ ಉಪಕ್ರಮಿಸಿದೆ) ಎಂದು ಕಾಶಕೃತ್ಸ್ನನು (ಅಭಿಪ್ರಾಯಪಡುತ್ತಾನೆ).

( ಭಾಷ್ಯ )

೩೮೪. **ಅಸ್ಯೈವ ಪರಮಾತ್ಮನಃ ಅನೇನಾಪಿ ವಿಜ್ಞಾನಾತ್ಮಭಾವೇನ ಅವಸ್ಥಾನಾತ್ ಉಪಪನ್ನಮಿದಮ್ ಅಭೇದೇನ ಉಪಕ್ರಮಣಮ್ ಇತಿ ಕಾಶಕೃತ್ಸ್ನಃ ಆಚಾರ್ಯೋ ಮನ್ಯತೇ । ತಥಾ ಚ ಬ್ರಾಹ್ಮಣಮ್—"ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" (ಛಾಂ. ೬-೩-೨) ಇತ್ಯೇವಂಜಾತೀಯಕಂ ಪರಸ್ಯೈವ ಆತ್ಮನಃ ಜೀವಭಾವೇನ ಅವಸ್ಥಾನಂ**

---

1. ಜೀವನಲ್ಲಿ ಉಪಾಧಿಸಂಪರ್ಕದಿಂದ ಕಲ್ಮಷವು ತೋರುತ್ತಿರುವದೆಂದು ಹಿಂದೆ ಹೇಳಿತ್ತು ; ಜೀವನ ಸ್ವರೂಪದಲ್ಲಿಯೇ ನಾಮರೂಪಗಳೆಂಬ ಕಲ್ಮಷವು ಇರುವದೆಂದೂ ಮಣ್ಣಿನ ಕಪ್ಪು ಪಾಕದಿಂದ ಹೋಗಿ ಅದು ಕೆಂಪಾಗುವಂತೆ ಜೀವನ ಕಲ್ಮಷವು ಜ್ಞಾನಧ್ಯಾನಾದಿಗಳಿಂದ ತೊಳೆದುಹೋಗುವವೆಂದೂ ಈಗ ಹೇಳಿದೆ.

ದರ್ಶಯತಿ | ಮನ್ತ್ರವರ್ಣಶ್ಚ "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಭಿವದನ್ ಯದಾಸ್ತೇ" (ತೈ. ಆ. ೩-೧೨) ಇತ್ಯೇವಂಜಾತೀಯಕಃ। ನ ಚ ತೇಜಃಪ್ರಭೃತೀನಾಂ ಸೃಷ್ಟೌ ಜೀವಸ್ಯ ಪೃಥಕ್ಸೃಷ್ಟಿಃ ಶ್ರುತಾ। ಯೇನ ಪರಸ್ಮಾದಾತ್ಮನೋಽನ್ಯಃ ತದ್ವಿಕಾರೋ ಜೀವಃ ಸ್ಯಾತ್ ||

(ಭಾಷ್ಯಾರ್ಥ)

ಇದೇ ಪರಮಾತ್ಮನೇ ಈ ವಿಜ್ಞಾನಾತ್ಮರೂಪದಿಂದಲೂ ಇದ್ದುಕೊಂಡಿರುವದರಿಂದ **ಈ (ರೀತಿಯಲ್ಲಿ) ಅಭೇದರೂಪದಿಂದ ಉಪಕ್ರಮ(ವನ್ನು ಮಾಡಿದೆ) ಎಂದು ಕಾಶಕೃತ್ಸ್ನನೆಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.** ಆದ್ದರಿಂದಲೇ "ಈ ಜೀವಾತ್ಮನ ರೂಪದಿಂದ ಒಳಹೊಕ್ಕು ನಾಮರೂಪಗಳನ್ನು ವ್ಯಾಕರಣಮಾಡುವೆನು" (ಛಾಂ. ೬-೩-೨) ಎಂಬೀ ಜಾತಿಯ ಬ್ರಾಹ್ಮಣವು ಪರಮಾತ್ಮನೇ ಜೀವಭಾವದಿಂದ ಇದ್ದುಕೊಂಡಿರುತ್ತಾನೆಂದು ತಿಳಿಸುತ್ತದೆ. "ಸರ್ವರೂಪಗಳನ್ನೂ ಸೃಷ್ಟಿಸಿ (ಅವುಗಳಿಗೆ) ನಾಮರೂಪಗಳನ್ನು ಕೊಟ್ಟು ಯಾವನು (ಹೆಸರಿನಿಂದ) ಕರೆಯುತ್ತಿರುವನೋ" (ತೈ. ಆ. ೩-೧೨-೭) ಎಂಬೀ ಜಾತಿಯ ಮಂತ್ರವರ್ಣವೂ (ಹಾಗೆಂದು ಹೇಳುತ್ತಿರುವದು). ತೇಜಸ್ಸೇ ಮುಂತಾದವುಗಳ ಸೃಷ್ಟಿಯ(ನ್ನು ಹೇಳುವ)ಲ್ಲಿ ಜೀವನ ಸೃಷ್ಟಿಯನ್ನು ಬೇರೆಯಾಗಿ ಶ್ರುತಿಯಲ್ಲಿ ಹೇಳಿಯೂ ಇಲ್ಲ; ಹಾಗಿದ್ದರೆ ಜೀವನು ಪರಮಾತ್ಮನಿಗಿಂತ ಬೇರೆಯಾಗಿ (ಅವನ) ಕಾರ್ಯ(ವಾಗಿರುತ್ತಾನೆಂದು) ಆಗಬಹುದಾಗಿತ್ತು.

## ಜೀವಪರಮಾತ್ಮರ ಸಂಬಂಧದ ವಿಷಯದಲ್ಲಿ ಮತಭೇದಗಳು

(ಭಾಷ್ಯ)

೩೮೫. ಕಾಶಕೃತ್ಸ್ನಸ್ಯ ಆಚಾರ್ಯಸ್ಯ ಅವಿಕೃತಃ ಪರಮೇಶ್ವರೋ ಜೀವೋ ನಾನ್ಯಃ ಇತಿ ಮತಮ್ | ಆಶ್ಮರಥ್ಯಸ್ಯ ತು ಯದ್ಯಪಿ ಜೀವಸ್ಯ ಪರಸ್ಮಾತ್ ಅನನ್ಯತ್ವಮ್ ಅಭಿಪ್ರೇತಮ್, ತಥಾಪಿ 'ಪ್ರತಿಜ್ಞಾಸಿದ್ಧೇಃ' ಇತಿ ಸಾಪೇಕ್ಷತ್ವಾಭಿಧಾನಾತ್ ಕಾರ್ಯಕಾರಣಭಾವಃ ಕಿಯಾನಪಿ ಅಭಿಪ್ರೇತಃ ಇತಿ ಗಮ್ಯತೇ | ಔಡುಲೋಮಿಪಕ್ಷೇ ಪುನಃ ಸ್ಪಷ್ಟಮೇವ ಅವಸ್ಥಾನ್ತರಾಪೇಕ್ಷೌ ಭೇದಾಭೇದೌ ಗಮ್ಯೇತೇ | ತತ್ರ ಕಾಶಕೃತ್ಸ್ನೀಯಂ ಮತಂ ಶ್ರುತ್ಯನುಸಾರೀ ಇತಿ ಗಮ್ಯತೇ। ಪ್ರತಿಪಿಪಾದಯಿಷಿತಾರ್ಥಾನುಸಾರಾತ್। 'ತತ್ತ್ವಮಸಿ' ಇತ್ಯಾದಿಶ್ರುತಿಭ್ಯಃ। ಏವಂ ಚ ಸತಿ ತಜ್ಜ್ಞಾನಾತ್ ಅಮೃತತ್ವಮ್

ಅನಕಲ್ಪತೇ । ವಿಕಾರಾತ್ಮಕತ್ವೇ ಹಿ ಜೀವಸ್ಯ ಅಭ್ಯುಪಗಮ್ಯಮಾನೇ ವಿಕಾರಸ್ಯ ಪ್ರಕೃತಿಸಂಬನ್ಧೇ ಪ್ರಲಯಪ್ರಸಙ್ಗಾತ್ ನ ತಜ್ಜ್ಞಾನಾತ್ ಅಮೃತತ್ವಮ್ ಅವಕಲ್ಪೇತ । ಅತಶ್ಚ ಸ್ವಾಶ್ರಯಸ್ಯ ನಾಮರೂಪಸ್ಯ ಅಸಂಭವಾತ್ ಉಪಾಧ್ಯಾಶ್ರಯಂ ನಾಮರೂಪಂ ಜೀವೇ ಉಪಚರ್ಯತೇ । ಅತ ಏವ ಉತ್ಪತ್ತಿರಪಿ ಜೀವಸ್ಯ ಕ್ವಚಿತ್ ಅಗ್ನಿವಿಸ್ಫುಲಿಙ್ಗೋದಾಹರಣೇನ ಶ್ರಾವ್ಯಮಾಣಾ ಉಪಾಧ್ಯಾಶ್ರಯೈವ ವೇದಿತವ್ಯಾ ॥

(ಭಾಷ್ಯಾರ್ಥ)

**ಕಾಶಕೃತ್ಸ್ನನೆಂಬ ಆಚಾರ್ಯನ (ಮತದಲ್ಲಿ) ಜೀವನು (ಯಾವ) ವಿಕಾರವನ್ನೂ ಹೊಂದದಿರುವ ಪರಮೇಶ್ವರನೇ[1], ಮತ್ತೊಬ್ಬನಲ್ಲ. ಆಶ್ಮರಥ್ಯನಿಗಾದರೋ ಜೀವನು ಪರ(ಮೇಶ್ವರನಿ)ಗಿಂತ ಬೇರೆಯಲ್ಲ ವೆಂಬುದೇ ಅಭಿಪ್ರಾಯವು; ಆದರೂ 'ಪ್ರತಿಜ್ಞಾಸಿದ್ಧಿಯ (ಲಿಂಗವು)' ಎಂದು ಸಾಪೇಕ್ಷಕವಾಗಿ ಹೇಳಿರುವದರಿಂದ ಸ್ವಲ್ಪ ಕಾರ್ಯಕಾರಣ ಭಾವವೂ[2] ಅಭಿಪ್ರೇತವಾಗಿದೆ ಎಂದು ತೋರುತ್ತದೆ. ಔಡುಲೋಮಿ ಪಕ್ಷದಲ್ಲಂತೂ ಬೇರೆಬೇರೆಯ ಅವಸ್ಥೆಗಳ ಅಪೇಕ್ಷೆಯಿಂದ ಭೇದಾಭೇದ ಗಳುಂಟು ಎಂದು ಸ್ಪಷ್ಟವಾಗಿಯೇ ತೋರುತ್ತದೆ.[3]** ಇವುಗಳಲ್ಲಿ ಕಾಶಕೃತ್ಸ್ನನ ಮತವು ಶ್ರುತ್ಯನುಸಾರವಾಗಿದೆ ಎಂದು ನಿಶ್ಚಯಿಸಬೇಕಾಗಿದೆ; ಏಕೆಂದರೆ ಅದು (ಶ್ರುತಿಯಲ್ಲಿ) ಪ್ರತಿಪಾದಿಸಬೇಕೆಂದಿರುವ ಅರ್ಥಕ್ಕೆ ಅನುಸಾರ ವಾಗಿರುತ್ತದೆ. "ಅದೇ ನೀನಾಗಿರುವೆ" (ಛಾಂ. ೬-೭-೮) ಎಂದು ಮುಂತಾಗಿ ರುವ ಶ್ರುತಿಗಳಿಂದ (ಇದು ಗೊತ್ತಾಗುತ್ತದೆ). ಮತ್ತು ಹೀಗಾದರೇ "ಜ್ಞಾನ ದಿಂದ ಅಮೃತತ್ವ(ವುಂಟಾಗುವದೆಂಬುದು) ಹೊಂದುತ್ತದೆ.[4] ಹೇಗೆಂದರೆ,

---

1. ಬಂಧಾವಸ್ಥೆಯಲ್ಲಿರುವ ಜೀವನು ಈಗಲೂ ನಿತ್ಯಮುಕ್ತನಾದ ಪರಮೇಶ್ವರನೇ.

2. ಭೇದಾಭೇದಗಳೆರಡೂ ಸತ್ಯ. ಈಗ ಕಾರ್ಯವಾಗಿ ಜೀವನಾಗಿರುತ್ತಾನೆ, ಆದ್ದರಿಂದ ಪರಮೇಶ್ವರನಿಗಿಂತ ಬೇರೆಯೂ ಆಗಿರುತ್ತಾನೆ. ಆದರೆ ಮೋಕ್ಷದಲ್ಲಿ ಮಾತ್ರ ಅಭೇದವೊಂದೇ ಇರುತ್ತದೆ ಎಂದು ಭಾವ.

3. ಈಗ ಜೀವನೇ, ಪರಮೇಶ್ವರನಲ್ಲ; ಮುಕ್ತನಾದಾಗ ಪರಮೇಶ್ವರನೇ ಜೀವ ನಲ್ಲ. ಮೋಕ್ಷದಲ್ಲಿ ಜೀವೇಶ್ವರರಿಗೆ ಅಭೇದವನ್ನೊಪ್ಪದವರು ಯಾರೂ ಇಲ್ಲವೆಂಬುದನ್ನು ಇಲ್ಲಿ ಲಕ್ಷ್ಯವಿಡಬೇಕು. ಈ ವಿಷಯದಲ್ಲಿ ಪೀಠಿಕೆಯನ್ನು ನೋಡಿ.

4. ಈಗಲೇ ಜೀವೇಶ್ವರರಿಗೆ ಪರಮಾರ್ಥವಾಗಿ ಅಭೇದವಿದೆ ಎಂದರೇ ಜ್ಞಾನದಿಂದ 'ನಾನು ನಿತ್ಯಮುಕ್ತನಾದ ಈಶ್ವರನು' ಎಂಬ ಅರಿವಾಗಿ ಅಜ್ಞಾನದಿಂದಾಗಿದ್ದ ಸಂಸಾರಿತ್ವ ಬಂಧವು ಹೋಗುತ್ತದೆ. ಬಂಧವು ಸತ್ಯವಾದರೆ ಅದು ಎಂದಿಗೂ ಹೋಗದು-ಎಂದು ಭಾವ.

ಜೀವನು (ಬ್ರಹ್ಮದ) ಕಾರ್ಯರೂಪನು ಎಂದು ಸ್ವೀಕರಿಸುವದಾದರೆ ಕಾರ್ಯವು (ತನ್ನ) ಕಾರಣದೊಡನೆ ಸಂಬದ್ಧವಾದಾಗ ನಾಶವಾಗಿಬಿಡಬೇಕಾಗುವದರಿಂದ ಅದರ ಜ್ಞಾನದಿಂದ ಅಮೃತತ್ವವಾಗುವದೆಂಬುದು ಹೊಂದಲಾರದು.[1] ಆದ್ದರಿಂದಲೇ ತನ್ನನ್ನಾಶ್ರಯಿಸಿರುವ ನಾಮರೂಪವು (ಜೀವರಿಗೆ) ಸಂಭವಿಸುವದಿಲ್ಲವಾಗಿ[2] ಉಪಾಧಿಯಲ್ಲಿರುವ ನಾಮರೂಪವನ್ನೇ ಜೀವನದೆಂದು ಉಪಚಾರಕ್ಕಾಗಿ ಹೇಳಿದೆ (ಎನ್ನಬೇಕು). ಈ (ಕಾರಣ)ದಿಂದಲೇ[3] ಕೆಲವು ಕಡೆಗಳಲ್ಲಿ ಬೆಂಕಿಯ ಕಿಡಿಗಳ ಉದಾಹರಣೆಯಿಂದ ಜೀವನಿಗೆ ಉತ್ಪತ್ತಿಯನ್ನು ಶ್ರುತಿಯಲ್ಲಿ ಹೇಳಿರುವದೂ ಉಪಾಧಿಯನ್ನು ಆಶ್ರಯಿಸಿದ (ಉತ್ಪತ್ತಿಯೇ) ಎಂದು ತಿಳಿಯಬೇಕು.[4]

## ಭೂತಗಳನ್ನು ಬಿಟ್ಟು ವಿಜ್ಞಾನಾತ್ಮರೂಪದಿಂದ ಏಳುವನೆಂಬ ಶ್ರುತಿಯ ಅರ್ಥವೇನು?

( ಭಾಷ್ಯ )

೩೮೬. ಯದಪ್ಯುಕ್ತಮ್ — ಪ್ರಕೃತಸ್ಯೈವ ಮಹತೋ ಭೂತಸ್ಯ ದ್ರಷ್ಟವ್ಯಸ್ಯ ಭೂತೇಭ್ಯಃ ಸಮುತ್ಥಾನಂ ವಿಜ್ಞಾನಾತ್ಮಭಾವೇನ ದರ್ಶಯನ್ ವಿಜ್ಞಾನಾತ್ಮನ ಏವ ಇದಂ ದ್ರಷ್ಟವ್ಯತ್ವಂ ದರ್ಶಯತಿ ಇತಿ, ತತ್ರಾಪಿ ಇಯಮೇವ ತ್ರಿಸೂತ್ರೀ ಯೋಜಯಿತವ್ಯಾ । "ಪ್ರತಿಜ್ಞಾಸಿದ್ಧೇರ್ಲಿಙ್ಗಮಾಶ್ಮರಥ್ಯಃ"। ಇದಮತ್ರ ಪ್ರತಿಜ್ಞಾತಮ್—"ಆತ್ಮನಿ ವಿದಿತೇ ಸರ್ವಂ ವಿದಿತಂ", "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬) ಇತಿ ಚ । ಉಪಪಾದಿತಂ ಚ ಸರ್ವಸ್ಯ ನಾಮರೂಪಕರ್ಮಪ್ರಪಞ್ಚಸ್ಯ ಏಕಪ್ರಸವತ್ವಾತ್, ಏಕಪ್ರಲಯತ್ವಾಚ್ಚ ದುನ್ದುಭ್ಯಾದಿದೃಷ್ಟಾನ್ತೈಶ್ಚ ಕಾರ್ಯಕಾರಣಯೋಃ ಅವ್ಯತಿರೇಕಪ್ರತಿಪಾದನಾತ್ । ತಸ್ಯಾ ಏವ ಪ್ರತಿಜ್ಞಾಯಾಃ ಸಿದ್ಧಿಂ ಸೂಚಯತಿ ಏತಲ್ಲಿಙ್ಗಂ ಯನ್ಮಹತೋ ಭೂತಸ್ಯ ದ್ರಷ್ಟವ್ಯಸ್ಯ ಭೂತೇಭ್ಯಃ ಸಮುತ್ಥಾನಂ ವಿಜ್ಞಾನಾತ್ಮಭಾವೇನ ಕಥಿತಮ್ ಇತಿ ಆಶ್ಮರಥ್ಯ ಆಚಾರ್ಯೋ ಮನ್ಯತೇ । ಅಭೇದೇ ಹಿ ಸತಿ ಏಕವಿಜ್ಞಾನೇನ ಸರ್ವವಿಜ್ಞಾನಂ ಪ್ರತಿಜ್ಞಾತಮ್ ಅವಕಲ್ಪತೇ ಇತಿ ।

---

1. ಮಡಕೆಯು ಮಣ್ಣಾದಾಗ ಮಡಕೆಯಿರುವದಿಲ್ಲ; ಹೀಗೆಯೇ ಜೀವನು ಬ್ರಹ್ಮವಾದಾಗ ಜೀವನಿರುವದಿಲ್ಲ. ಆಗ ಜೀವನಿಗೆ ಜ್ಞಾನದಿಂದ ಮೋಕ್ಷ ಎಂಬ ಮಾತು ಸುಳ್ಳಾಗುವದು.

2. ಜೀವನಿಗೇ ನಾಮರೂಪವು ಸೇರಿದ್ದರೆ ನಾಮರೂಪಗಳ ನಾಶದಿಂದ ಜೀವನೂ ನಾಶವಾಗಬೇಕಾಗುತ್ತದೆಯಾದ್ದರಿಂದ ಅವನಿಗೆ ಸ್ವತಃ ನಾಮರೂಪಗಳು ಸಂಭವಿಸುವದಿಲ್ಲ.

3. ಸ್ವತಃ ಉತ್ಪತ್ತಿಯಿದ್ದರೆ ಅನಿತ್ಯತ್ವವು ಗಂಟುಬೀಳುವದರಿಂದಲೇ.

4. ಇದನ್ನು ಮುಂದೆ ಸೂತ್ರಕಾರರು ೨-೩-೧೭ರಲ್ಲಿ ನಿರ್ಣಯಿಸಿರುತ್ತಾರೆ.

"ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ" । ಉತ್ಕ್ರಮಿಷ್ಯತೋ ವಿಜ್ಞಾನಾತ್ಮನಃ ಜ್ಞಾನಧ್ಯಾನಾದಿಸಾಮರ್ಥ್ಯಾತ್ ಸಂಪ್ರಸನ್ನಸ್ಯ ಪರೇಣ ಆತ್ಮನಾ ಐಕ್ಯಸಂಭವಾತ್ ಇದಮ್ ಅಭೇದಾಭಿಧಾನಮ್ ಇತಿ ಔಡುಲೋಮಿ ರಾಚಾರ್ಯೋ ಮನ್ಯತೇ । "ಅವಸ್ಥಿತೇರಿತಿ ಕಾಶಕೃತ್ಸ್ನಃ" । ಅಸ್ಯೈವ ಪರಮಾತ್ಮನಃ ಅನೇನಾಪಿ ವಿಜ್ಞಾನಾತ್ಮಭಾವೇನ ಅವಸ್ಥಾನಾತ್ ಉಪಪನ್ನ ಮಿದಮ್ ಅಭೇದಾಭಿಧಾನಮ್ ಇತಿ ಕಾಶಕೃತ್ಸ್ನ ಆಚಾರ್ಯೋ ಮನ್ಯತೇ । ನನು ಉಚ್ಛೇದಾಭಿಧಾನಮ್ ಏತತ್ "ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತಿ" (ಬೃ. ೨-೪-೧೨) ಇತಿ, ಕಥಮ್ ಅಭೇದಾಭಿಧಾನಮ್ ? ನೈಷ ದೋಷಃ । ವಿಶೇಷವಿಜ್ಞಾನವಿನಾಶಾಭಿ ಪ್ರಾಯಮೇತತ್ ವಿನಾಶಾಭಿಧಾನಮ್, ನಾತ್ಮೋಚ್ಛೇದಾಭಿಪ್ರಾಯಮ್ । "ಅತ್ರೈವ ಮಾ ಭಗವಾನಮೂಮುಹನ್ನ ಪ್ರೇತ್ಯ ಸಂಜ್ಞಾಸ್ತಿ" (ಬೃ.೨-೪-೧೩) ಇತಿ ಪರ್ಯನುಯುಜ್ಯ ಸ್ವಯಮೇವ ಶ್ರುತ್ಯಾ ಅರ್ಥಾನ್ತರಸ್ಯ ದರ್ಶಿತತ್ವಾತ್ –"ನ ವಾ ಅರೇಽಹಂ ಮೋಹಂ ಬ್ರವೀಮ್ಯವಿನಾಶೀ ವಾ ಅರೇಽಯಮಾತ್ಮಾನು ಚ್ಛಿತ್ತಿಧರ್ಮಾ ಮಾತ್ರಾಸಂಸರ್ಗಸ್ತ್ವಸ್ಯ ಭವತಿ" (ಬೃ. ೪-೫-೧೪ ?)[1] ಇತಿ । ಏತದುಕ್ತಂ ಭವತಿ—ಕೂಟಸ್ಥನಿತ್ಯ ಏವ ಅಯಂ ವಿಜ್ಞಾನಘನ ಆತ್ಮಾ ನಾಸ್ಯ ಉಚ್ಛೇದಪ್ರಸಙ್ಗೋಽಸ್ತಿ । ಮಾತ್ರಾಭಿಸ್ತು ಅಸ್ಯ ಭೂತೇನ್ದ್ರಿಯ ಲಕ್ಷಣಾಭಿಃ ಅವಿದ್ಯಾಕೃತಾಭಿಃ ಅಸಂಸರ್ಗೋ ವಿದ್ಯಯಾ ಭವತಿ । ಸಂಸರ್ಗಾ ಭಾವೇ ಚ ತತ್ಕೃತಸ್ಯ ವಿಶೇಷವಿಜ್ಞಾನಸ್ಯ ಅಭಾವಾತ್ ನ ಪ್ರೇತ್ಯ ಸಂಜ್ಞಾ ಅಸ್ತೀತ್ಯುಕ್ತಮ್ ಇತಿ ॥

( ಭಾಷ್ಯಾರ್ಥ )

ಇನ್ನು ದ್ರಷ್ಟವ್ಯನೆಂದು ಪ್ರಕೃತವಾಗಿರುವ ಮಹದ್ಭೂತವೇ ಭೂತಗಳ (ನ್ನು ಬಿಟ್ಟು) ವಿಜ್ಞಾನಾತ್ಮರೂಪದಿಂದ ಏಳುವದೆಂದು ತಿಳಿಸಿರುವದರಿಂದ ಈ ದ್ರಷ್ಟವ್ಯನೆಂದು ಹೇಳಿರುವದು ವಿಜ್ಞಾನಾತ್ಮನನ್ನೇ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಆ (ವಿಷಯದಲ್ಲಿಯೂ) ಇದೇ ತ್ರಿಸೂತ್ರಿಯನ್ನು ಹೊಂದಿಸಿ ಕೊಳ್ಳಬೇಕು. (ಹೇಗೆಂದರೆ) :

**"ಪ್ರತಿಜ್ಞಾಸಿದ್ಧೇರ್ಲಿಙ್ಗಮಾಶ್ಮರಥ್ಯಃ"** (೨೦). ಇಲ್ಲಿ "ಆತ್ಮನನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತೆ ಆಗುತ್ತದೆ" ಎಂದೂ "ಇದೆಲ್ಲವೂ ಈ ಆತ್ಮನೆಂಬುದೇ" (ಬೃ. ೨-೪-೬) ಎಂದೂ ಈ ಪ್ರತಿಜ್ಞೆಯನ್ನು ಮಾಡಿರುತ್ತದೆ. ನಾಮರೂಪಕರ್ಮಪ್ರಪಂಚವೆಲ್ಲವೂ ಒಂದರಿಂದಲೇ ಹುಟ್ಟುವದರಿಂದಲೂ

1. ಇದು ಮಾಧ್ಯಂದಿನ ಪಾಠ.

ಒಂದರಲ್ಲಿಯೇ ಲಯವಾಗುವದರಿಂದಲೂ ದುಂದುಭ್ಯಾದಿದೃಷ್ಟಾಂತಗಳಿಂದ ಕಾರ್ಯಕಾರಣಗಳು ಬೇರೆಯಲ್ಲವೆಂದು ಹೇಳಿರುವದರಿಂದಲೂ (ಇದನ್ನು) ಯುಕ್ತಿಯಿಂದ ತೋರಿಸಿಯೂ ಕೊಟ್ಟಿರುತ್ತದೆ. ದ್ರಷ್ಟವ್ಯವಾದ ಮಹದ್ಭೂತವು ಭೂತಗಳೊಳಗಿಂದ ವಿಜ್ಞಾನಾತ್ಮರೂಪದಿಂದ ಏಳುವದೆಂದು ಹೇಳಿರುವ ಈ ಲಿಂಗವು ಅದೇ ಪ್ರತಿಜ್ಞೆಯ ಸಿದ್ಧಿಯನ್ನು ಸೂಚಿಸುತ್ತದೆ ಎಂದು **ಆಶ್ಮರಥ್ಯ**ನೆಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ. ಅಭೇದವಿದ್ದರೇ ಅಲ್ಲವೆ, ಒಂದರ ಅರಿವಿನಿಂದ ಎಲ್ಲವನ್ನೂ ಅರಿಯಬಹುದೆಂದು ಪ್ರತಿಜ್ಞೆಮಾಡಿರುವದು ಹೊಂದುತ್ತದೆ ? ಆದ್ದರಿಂದ (ಹೀಗೆಂದು ತಿಳಿಯಬೇಕು ಎಂದು ಆ ಆಚಾರ್ಯನ ಮತವು).

**"ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ"** (೨೧) (ದೇಹವನ್ನು ಬಿಟ್ಟು) ತೆರಳುವ ವಿಜ್ಞಾನಾತ್ಮನು ಜ್ಞಾನಧ್ಯಾನಾದಿಗಳ ಸಾಮರ್ಥ್ಯದಿಂದ ನಿರ್ಮಲನಾಗಿ ಪರಮಾತ್ಮನೊಡನೆ ಐಕ್ಯವನ್ನು ಹೊಂದಬಹುದಾಗಿರುವದರಿಂದ ಈ ಅಭೇದವನ್ನು ಹೇಳಿದೆ ಎಂದು **ಔಡುಲೋಮಿ** ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.

**"ಅವಸ್ಥಿತೇರಿತಿ ಕಾಶಕೃತ್ಸ್ನಃ"** (೨೨) ಇದೇ ಪರಮಾತ್ಮನೇ ಈ ವಿಜ್ಞಾನಾತ್ಮರೂಪದಿಂದಲೂ ಇರುವದರಿಂದ ಈ ಅಭೇದವನ್ನು ಹೇಳಿರುವದು ಹೊಂದುತ್ತದೆ ಎಂದು **ಕಾಶಕೃತ್ಸ್ನ**ನೆಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ.[1]

(ಆಕ್ಷೇಪ) :- "ಈ ಭೂತಗಳೊಳಗಿಂತ ಮೇಲಕ್ಕೆದ್ದು ಅವುಗಳನ್ನೇ ಅನುಸರಿಸಿ ಲಯವಾಗುತ್ತಾನೆ" (ಬೃ. ೨-೪-೧೨) ಎಂಬಿದು ನಾಶವನ್ನು ಹೇಳುತ್ತದೆ. ಇದು ಅಭೇದವನ್ನು ಹೇಳುತ್ತದ್ದೆ ಎಂಬಿದು ಹೇಗೆ ?

(ಸಮಾಧಾನ) :- ಇದೇನೂ ದೋಷವಲ್ಲ. ಈ ವಿನಾಶವನ್ನು ಹೇಳಿರುವದು ವಿಶೇಷವಿಜ್ಞಾನದ ವಿನಾಶವನ್ನು ಹೇಳುತ್ತದೆಯೇ ಹೊರತು ಆತ್ಮನ ನಾಶವನ್ನು ಹೇಳುವದಿಲ್ಲ.[2] "ಪೂಜ್ಯರಾದ ತಾವು (ಶರೀರದಿಂದ) ಹೊರಟು ಹೋದ ಬಳಿಕ ಜ್ಞಾನವಿರುವದಿಲ್ಲ ಎಂದು ಇದರ (ವಿಷಯ)ದಲ್ಲಿಯೇ ನನ್ನನ್ನು ಮೋಹಗೊಳಿಸಿರುವಿರಿ" (ಬೃ. ೨-೪-೧೩) ಎಂದು ಪ್ರಶ್ನೆಯನ್ನು ಹಾಕಿ

---

1. ಇಲ್ಲಿಯೂ ಅಶ್ಮರಥ್ಯನು ಭೇದಾಭೇದವಾದಿಯೂ, ಔಡುಲೋಮಿಯು ಸಂಸಾರದಲ್ಲಿ ಭೇದವನ್ನೂ ಮೋಕ್ಷದಲ್ಲಿ ಅಭೇದವನ್ನೂ ಹೇಳುವವನು, ಕಾಶಕೃತ್ಸ್ನನು ನಿತ್ಯಾಭೇದವಾದಿಯು -ಎಂಬುದು ಸ್ಪಷ್ಟ.

2. ಸುಷುಪ್ತಿಯಲ್ಲಿ ಬಿಡಿಯರಿವು ನಾಶವಾಗುವಂತೆ ಕೈವಲ್ಯದಲ್ಲಿಯೂ ಆಗುತ್ತದೆ -ಎಂದು ಭಾವ.

ಶ್ರುತಿಯು ತಾನೇ "ಎಲೆ, ನಾನು ಮೋಹವನ್ನು ಹೇಳುತ್ತಿಲ್ಲ; ಎಲೆ ಈ ಆತ್ಮನು ಅವಿನಾಶಿಯು, ನಾಶವಾಗುವ ಧರ್ಮವುಳ್ಳವನಲ್ಲ; ಆದರೆ ಇವನಿಗೆ ಮಾತ್ರಾಸಂಸರ್ಗವು ಆಗುತ್ತದೆ'' (ಬೃ. ೪-೫-೧೪ ?) ಎಂದು ಬೇರೊಂದರ್ಥವನ್ನು ತಿಳಿಸಿರುತ್ತದೆ. (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ: ಈ ವಿಜ್ಞಾನಘನನಾದ ಆತ್ಮನು ಕೂಟಸ್ಥನಿತ್ಯನೇ, ಇವನಿಗೆ ನಾಶವಾಗುವ ಪ್ರಸಕ್ತಿಯೇ ಇಲ್ಲ. ಆದರೆ ಅವಿದ್ಯಾಕೃತವಾದ ಭೂತೇಂದ್ರಿಯಗಳೆಂಬ ಮಾತ್ರೆಗಳ ಸಂಬಂಧಾಭಾವವು ವಿದ್ಯೆಯಿಂದ ಆಗುತ್ತದೆ. (ಆ) ಸಂಬಂಧವು ಇಲ್ಲವಾಗಲು ಅದರಿಂದಾಗಿರುವ ವಿಶೇಷವಿಜ್ಞಾನವೂ ಇರುವದಿಲ್ಲವಾದ್ದರಿಂದ (ಶರೀರವನ್ನು ಬಿಟ್ಟು) ತೆರಳಿದ ಬಳಿಕ ಜ್ಞಾನವಿರುವದಿಲ್ಲ.

## ವಿಜ್ಞಾತೃ ಎಂಬ ಕರ್ತೃವಾಚಕಶಬ್ದದ ಗತಿ

### ( ಭಾಷ್ಯ )

೩೮೭. ಯದಪ್ಯುಕ್ತಮ್ "ವಿಜ್ಞಾತಾರಮರೇ ಕೇನ ವಿಜಾನೀಯಾತ್" ಇತಿ ಕರ್ತೃವಚನೇನ ಶಬ್ದೇನ ಉಪಸಂಹಾರಾತ್ ವಿಜ್ಞಾನಾತ್ಮನ ಏವೇದಂ ದ್ರಷ್ಟವ್ಯತ್ವಮಿತಿ, ತದಪಿ ಕಾಶಕೃತ್ಸ್ನೀಯೇನೈವ ದರ್ಶನೇನ ಪರಿಹರಣೀಯಮ್। ಅಪಿ ಚ "ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ'' (ಬೃ. ೪-೫-೧) ಇತ್ಯಾರಭ್ಯ ಅವಿದ್ಯಾವಿಷಯೇ ತಸ್ಯೈವ ದರ್ಶನಾದಿಲಕ್ಷಣಂ ವಿಶೇಷವಿಜ್ಞಾನಂ ಪ್ರಪಞ್ಚ್ಯ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿನಾ ವಿದ್ಯಾವಿಷಯೇ ತಸ್ಯೈವ ದರ್ಶನಾದಿಲಕ್ಷಣಸ್ಯ ವಿಶೇಷವಿಜ್ಞಾನಸ್ಯ ಅಭಾವಮ್ ಅಭಿದಧಾತಿ। ಪುನಶ್ಚ ವಿಷಯಾಭಾವೇಽಪಿ ಆತ್ಮಾನಂ ವಿಜಾನೀಯಾತ್ ಇತ್ಯಾಶಙ್ಕ್ಯ "ವಿಜ್ಞಾತಾರಮರೇ ಕೇನ ವಿಜಾನೀಯಾತ್" (ಬೃ ೪-೫-೧೫) ಇತ್ಯಾಹ। ತತಶ್ಚ ವಿಶೇಷವಿಜ್ಞಾನಾಭಾವೋಪಪಾದನಪರತ್ವಾತ್ ವಾಕ್ಯಸ್ಯ ವಿಜ್ಞಾನಧಾತುರೇವ ಕೇವಲಃ ಸನ್ ಭೂತಪೂರ್ವಗತ್ಯಾ ಕರ್ತೃವಚನೇನ ತೃಚಾ ನಿರ್ದಿಷ್ಟ ಇತಿ ಗಮ್ಯತೇ। ದರ್ಶಿತಂ ತು ಪುರಸ್ತಾತ್ ಕಾಶಕೃತ್ಸ್ನೀಯಸ್ಯ ಪಕ್ಷಸ್ಯ ಶ್ರುತಿಮತ್ತ್ವಮ್ ॥

### ( ಭಾಷ್ಯಾರ್ಥ )

ಇನ್ನು "ಎಲೆ, ವಿಜ್ಞಾತೃವನ್ನು ಏತರಿಂದ ಅರಿತುಕೊಂಡಾನು ?' (ಬೃ. ೪-೫-೧೫) ಎಂದು ಕರ್ತೃತ್ವವಾಚಕಶಬ್ದದಿಂದ ಉಪಸಂಹಾರಮಾಡಿರವದರಿಂದ ಈ ದ್ರಷ್ಟವ್ಯನೆಂದು (ಉಪದೇಶಿಸಿರುವದೂ) ವಿಜ್ಞಾನಾತ್ಮನನ್ನೆ

ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದನ್ನೂ ಕಾಶಕೃತ್ಸ್ನನ ದರ್ಶನದಿಂದಲೇ ಪರಿಹರಿಸಬೇಕು.[1] ಇದಲ್ಲದೆ "ಎಲ್ಲಿ ದ್ವೈತದಂತೆ[2] ಇರುವದೋ ಅಲ್ಲಿ ಒಬ್ಬನು ಇನ್ನೊಬ್ಬನನ್ನು ಕಾಣುತ್ತಾನೆ" (ಬೃ. ೪-೫-೧೫) ಎಂಬುದರಿಂದ ಹಿಡಿದು ಅವಿದ್ಯಾವಿಷಯದಲ್ಲಿ ಅವನಿಗೇ ಕಾಣುವದೇ ಮುಂತಾದ ವಿಶೇಷ ವಿಜ್ಞಾನ(ವಿರುವದೆಂದು) ವಿಸ್ತರಿಸಿ ಹೇಳಿ "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ನೋಡಿಯಾನು ?" (ಬೃ. ೪-೫-೧೫) ಎಂದು ಮುಂತಾಗಿ ವಿದ್ಯಾವಿಷಯದಲ್ಲಿ ಕಾಣುವದೇ ಮುಂತಾದ ವಿಜ್ಞಾನದ ಅಭಾವವನ್ನು ಹೇಳಿರುತ್ತಾನೆ. ಮತ್ತು ವಿಷಯವಿಲ್ಲ ದಿದ್ದರೂ ತನ್ನನ್ನು ಅರಿತುಕೊಳ್ಳಬಹುದೆಂದು ಶಂಕಿಸಿ "ಎಲೆ, ವಿಜ್ಞಾತೃವನ್ನು ಏತರಿಂದ ಅರಿತಾನು ?" (ಬೃ. ೪-೫-೧೫) ಎಂದು ಹೇಳಿರುತ್ತಾನೆ ಆದ್ದ ರಿಂದ ವಿಶೇಷವಿಜ್ಞಾನವು ಇಲ್ಲವೆಂದು ತೋರಿಸಿಕೊಡುವದರಲ್ಲಿಯೇ[3] ವಾಕ್ಯಕ್ಕೆ ತಾತ್ಪರ್ಯವಿರುವದರಿಂದ ಕೇವಲ ವಿಜ್ಞಾನಧಾತುವೇ[4] ಆಗಿದ್ದರೂ ಭೂತ ಪೂರ್ವಗತಿಯಿಂದ[5] ಕರ್ತೃವಾಚಕವಾದ ತೃಚ್(ಪ್ರತ್ಯಯ)ದಿಂದ ತಿಳಿಸ ಲ್ಪಟ್ಟಿರುತ್ತಾನೆ ಎಂದು ನಿಶ್ಚಯವಾಗುತ್ತದೆ. ಕಾಶಕೃತ್ಸ್ನನ ಪಕ್ಷವು ಶ್ರುತಿ (ಪ್ರಮಾಣಕ)ವೆಂಬುದನ್ನು ಹಿಂದೆ ತೋರಿಸಿಕೊಟ್ಟೇ ಇರುತ್ತದೆ.

## ಜೀವಪರಮಾತ್ಮರ ಭೇದವು ಪರಮಾರ್ಥವಲ್ಲ

(ಭಾಷ್ಯ)

೫೮೮. ಅತಶ್ಚ ವಿಜ್ಞಾನಾತ್ಮಪರಮಾತ್ಮನೋಃ ಅವಿದ್ಯಾಪ್ರತ್ಯುಪಸ್ಥಾಪಿತ ನಾಮರೂಪರಚಿತದೇಹಾದ್ಯುಪಾಧಿನಿಮಿತ್ತೋ ಭೇದಃ ನ ಪಾರಮಾರ್ಥಿಕಃ ಇತ್ಯೇಷೋಽರ್ಥಃ ಸರ್ವೈರ್ವೇದಾನ್ತವಾದಿಭಿಃ ಅಭ್ಯುಪಗನ್ತವ್ಯಃ । "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ. ೬-೨-೧), "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ಬ್ರಹ್ಮೈವೇದಂ

---

1. ಪರಮಾತ್ಮನೇ ಜೀವಭಾವದಿಂದ ಇದ್ದುಕೊಂಡಿರುವದರಿಂದ ಜೀವನನ್ನು ಹೇಳುವ ವಿಜ್ಞಾತೃಶಬ್ದವನ್ನೂ ಅವನಿಗೆ ಉಪಯೋಗಿಸಬಹುದಾಗಿದೆ-ಎಂದು ಪರಿಹಾರ ವನ್ನು ಹೇಳಬೇಕೆಂದು ಭಾವ.

2. 'ದ್ವೈತದಂತೆ' ಎಂದಿರುವದರಿಂದ ದ್ವೈತವು ಕಲ್ಪಿತವೆಂದಾಯಿತು.

3. ನಿಜವಾಗಿಯೂ ವಿಜ್ಞಾತೃವೆಂದು ಹೇಳುವದರಲ್ಲಲ್ಲ.

4. ಚೈತನ್ಯಸ್ವರೂಪನಾಗಿರುವವನೇ.

5. ತತ್ತ್ವಜ್ಞಾನವಾಗುವದಕ್ಕೆ ಮೊದಲು ಅವಿದ್ಯೆಯಿಂದ ಜ್ಞಾನಕ್ಕೆ ಕರ್ತೃವಾಗಿ ತೋರುತ್ತಿದ್ದನೆಂಬ ಕಾರಣದಿಂದ.

ಸರ್ವಮ್"[1] (?) "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬), "ನಾನ್ಯೋಽತೋಽಸ್ತಿ ದ್ರಷ್ಟಾ" (ಬೃ. ೩-೭-೨೩), "ನಾನ್ಯದತೋಽಸ್ತಿ ದ್ರಷ್ಟೃ" (ಬೃ. ೩-೮-೧೧) ಇತ್ಯೇವಂರೂಪಾಭ್ಯಃ ಶ್ರುತಿಭ್ಯಃ । ಸ್ಮೃತಿಭ್ಯಶ್ಚ "ವಾಸುದೇವಃ ಸರ್ವಮಿತಿ" (ಗೀ. ೭-೧೯), "ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್" (ಗೀ. ೧೩-೨೭) ಇತ್ಯೇವಂರೂಪಾಭ್ಯಃ | ಭೇದದರ್ಶನಾಪವಾದಾಚ್ಚ—"ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ" (ಬೃ. ೧-೪-೧೦), "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಬೃ. ೪-೪-೧೯) ಇತ್ಯೇವಂಜಾತೀಯಕಾತ್ । "ಸ ವಾ ಏಷ ಮಹಾನಜ ಆತ್ಮಾಜರೋಽಮರೋಽಮೃತೋಽಭಯೋ ಬ್ರಹ್ಮ" (ಬೃ. ೪-೪-೨೫) ಇತಿ ಚ ಆತ್ಮನಿ ಸರ್ವವಿಕ್ರಿಯಾಪ್ರತಿಷೇಧಾತ್ | ಅನ್ಯಥಾ ಚ ಮುಮುಕ್ಷೂಣಾಂ ನಿರಪವಾದವಿಜ್ಞಾನಾನುಪಪತ್ತೇಃ । ಸುನಿಶ್ಚಿತಾರ್ಥತ್ವಾನುಪಪತ್ತೇಶ್ಚ | ನಿರಪವಾದಂ ಹಿ ವಿಜ್ಞಾನಂ ಸರ್ವಾಕಾಙ್ಕ್ಷಾನಿವರ್ತಕಮ್ ಆತ್ಮವಿಷಯಂ ಇಷ್ಯತೇ| "ವೇದಾನ್ತವಿಜ್ಞಾನಸುನಿಶ್ಚಿತಾರ್ಥಾಃ" (ಮುಂ. ೩-೨-೬) ಇತಿ ಚ ಶ್ರುತೇಃ | "ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭) ಇತಿ ಚ| ಸ್ಥಿತಪ್ರಜ್ಞಲಕ್ಷಣಸ್ಮೃತೇಶ್ಚ | ಸ್ಥಿತೇ ಚ ಕ್ಷೇತ್ರಜ್ಞಪರಮಾತ್ಮೈಕತ್ವವಿಷಯೇ ಸಮ್ಯಗ್ದರ್ಶನೇ ಕ್ಷೇತ್ರಜ್ಞಃ ಪರಮಾತ್ಮಾ ಇತಿ ನಾಮಮಾತ್ರಭೇದಾತ್ ಕ್ಷೇತ್ರಜ್ಞೋಽಯಂ ಪರಮಾತ್ಮನೋ ಭಿನ್ನಃ ಪರಮಾತ್ಮಾ ಅಯಂ ಕ್ಷೇತ್ರಜ್ಞಾತ್ ಭಿನ್ನಃ ಇತ್ಯೇವಂಜಾತೀಯಕಃ ಆತ್ಮಭೇದವಿಷಯೋ ನಿರ್ಬನ್ಧೋ ನಿರರ್ಥಕಃ | ಏಕೋ ಹಿ ಅಯಮಾತ್ಮಾ ನಾಮಮಾತ್ರಭೇದೇನ ಬಹುಧಾ ಅಭಿಧೀಯತೇ ಇತಿ| ನ ಹಿ "ಸತ್ಯಂ ಜ್ಞಾನಮನನ್ತಂ ಬ್ರಹ್ಮ। ಯೋ ವೇದ ನಿಹಿತಂ ಗುಹಾಯಾಮ್" (ತೈ. ೨-೧) ಇತಿ ಕಾಂಚಿದೇವ ಏಕಾಂ ಗುಹಾಮ್ ಅಧಿಕೃತ್ಯ ಏತದುಕ್ತಮ್ | ನ ಚ ಬ್ರಹ್ಮಣೋಽನ್ಯೋ ಗುಹಾಯಾಂ ನಿಹಿತೋಽಸ್ತಿ | "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨-೬) ಇತಿ ಸ್ರಷ್ಟುರೇವ ಪ್ರವೇಶಶ್ರವಣಾತ್ । ಯೇ ತು ನಿರ್ಬನ್ಧಂ ಕುರ್ವನ್ತಿ ತೇ ವೇದಾನ್ತಾರ್ಥಂ ಬಾಧಮಾನಾಃ ಶ್ರೇಯೋದ್ವಾರಂ ಸಮ್ಯಗ್ದರ್ಶನಮೇವ ಬಾಧನ್ತೇ। ಕೃತಕಮ್ ಅನಿತ್ಯಂ ಚ ಮೋಕ್ಷಂ ಕಲ್ಪಯನ್ತಿ | ನ್ಯಾಯೇನ ಚ ನ ಸಂಗಚ್ಛನ್ತೇ ಇತಿ ॥

---

1. ಇದು ಯಾವ ಶ್ರುತಿ ಎಂಬುದು ತಿಳಿಯಲಿಲ್ಲ, ಮುಂಡಕದಲ್ಲಿ "ಬ್ರಹ್ಮೈವೇದಂ ವಿಶ್ವಮ್" ಎಂದಿದೆ. ಆಚಾರ್ಯರ ಮುಂಡಕಪಾಠವೇ 'ಸರ್ವಮ್' ಎಂದಿದೆಯೋ ಇದು ಬೇರೊಂದು ಉಪನಿಷತ್ತಿನ ವಾಕ್ಯವೋ ತಿಳಿಯದು ಗೀ. ಭಾ. ೧೩-೧೫, ತೈ. ಭಾ. ೧-೧೧, (ಭಾ. ಭಾ. ೭೭) ಸೂ. ಭಾ, ೨-೧-೧೪ –ಇವುಗಳಲ್ಲೆಲ್ಲ 'ಸರ್ವಮ್' ಎಂದೇ ಉದಾಹೃತವಾಗಿದೆ.

( ಭಾಷ್ಯಾರ್ಥ )

**ಆದ್ದರಿಂದಲೂ ವಿಜ್ಞಾನಾತ್ಮಪರಮಾತ್ಮರುಗಳಿಗೆ (ಕಾಣುವ) ಭೇದವು ಅವಿದ್ಯೆಯು ತಂದೊಡ್ಡಿದ ನಾಮರೂಪಗಳಿಂದಾಗಿರುವ ದೇಹಾದ್ಯುಪಾಧಿಗಳ ನಿಮಿತ್ತದಿಂದಾಗಿರುವದೇ ಹೊರತು ಪಾರಮಾರ್ಥಿಕವಲ್ಲ -ಎಂಬೀ ವಿಷಯವನ್ನು ಎಲ್ಲಾ ವೇದಾಂತವಾದಿಗಳೂ ಒಪ್ಪಬೇಕು.** "ಸೋಮ್ಯನೆ, ಮೊದಲು ತನಗೆರಡನೆಯದಿಲ್ಲದ ಸತ್ತು ಒಂದೇ ಇತ್ತು" (ಛಾಂ ೬-೨-೧), "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) "ಇದೆಲ್ಲವೂ ಬ್ರಹ್ಮವೇ" (?), "ಇದೆಲ್ಲವೂ ಈ ಆತ್ಮನೆಂಬುವನೇ" (ಬೃ.೨-೪-೬) "ಇವನಿಗಿಂತ ಬೇರೆ ದ್ರಷ್ಟೃವಿಲ್ಲ" (ಬೃ. ೩-೭-೨೩), "ಇದಕ್ಕಿಂತ ಬೇರೆ ದ್ರಷ್ಟೃವಾಗಿರುವದು ಇಲ್ಲ" (ಬೃ. ೩-೮-೧೧) -ಎಂಬೀ ರೂಪದ ಶ್ರುತಿಗಳಿಂದ (ಹೀಗೆಂದು ಸಿದ್ಧವಾಗುತ್ತದೆ). "ವಾಸುದೇವನೇ ಎಲ್ಲವೂ ಎಂದು...." (ಗೀ. ೭-೧೯), ಮತ್ತು "ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನನ್ನು ನಾನೆಂದು ತಿಳಿದುಕೊ" (ಗೀ. ೧೩-೨) "ಸರ್ವಭೂತಗಳಲ್ಲಿಯೂ ಸಮನಾಗಿ ಇದ್ದುಕೊಂಡಿರುವ ಪರಮೇಶ್ವರನನ್ನು" (ಗೀ. ೧೩-೨೭) ಎಂಬೀ ರೂಪದ ಸ್ಮೃತಿಗಳಿಂದಲೂ (ಹೀಗೆಂದು ಸಿದ್ಧವಾಗುತ್ತದೆ). "ಈ ದೇವತೆ ಬೇರೆ, ನಾನು ಬೇರೆಯಾಗಿರುವೆನು ಎಂದು (ಉಪಾಸನೆಮಾಡುವನಲ್ಲ), ಅವನು ಪಶುವಿನಂತೆ (ತತ್ತ್ವವನ್ನು) ಅರಿಯನು" (ಬೃ. ೧-೪-೧೦) "ಯಾವನು ಇಲ್ಲಿ ನಾನಾ ಇರುವಂತೆ ಕಾಣುವನೋ ಅವನು ಸಾವಿನಮೇಲೆ ಸಾವನ್ನು ಪಡೆಯುವನು" (ಬೃ. ೪-೪-೧೯) ಎಂಬೀ ಜಾತಿಯ ಭೇದದರ್ಶನನಿಂದೆಯಿಂದಲೂ (ಹೀಗೆಂದು ಸಿದ್ಧವಾಗುತ್ತದೆ). "ಆ ಈ ಆತ್ಮನೇ ದೊಡ್ಡವನು, ಅಜನು, ಅಜರನು, ಅಮರನು, ಅಮೃತನು, ಬ್ರಹ್ಮವು" (ಬೃ. ೪-೪-೨೫) ಎಂದು ಆತ್ಮನಲ್ಲಿ ಎಲ್ಲಾ ವಿಕಾರಗಳನ್ನೂ ಅಲ್ಲಗಳೆದಿರುವದರಿಂದಲೂ (ಹೀಗೆಂದು ಸಿದ್ಧವಾಗುತ್ತದೆ). ಹೀಗಲ್ಲದಿದ್ದರೆ ಮುಮುಕ್ಷುಗಳಿಗೆ ಅಬಾಧಿತವಾದ ವಿಜ್ಞಾನವು ಆಗುವಂತಿಲ್ಲ, ವಿಷಯವನ್ನು ಸುನಿಶ್ಚಿತವಾಗಿ (ತಿಳಿದುಕೊಳ್ಳುವದೂ) ಆಗುವಂತಿಲ್ಲ. **ಆತ್ಮವಿಷಯವಾದ ವಿಜ್ಞಾನವು ಅಬಾಧಿತವಾಗಿಯೂ ಎಲ್ಲಿ ಆಕಾಂಕ್ಷೆಗಳನ್ನೂ ತೊಲಗಿಸುವದಾಗಿಯೂ ಇರಬೇಕೆಂದಲ್ಲವೆ, (ವೇದಾಂತಿಗಳಿಗೆ) ಇಷ್ಟವಾಗಿರುವದು ?** "ವೇದಾಂತವಿಜ್ಞಾನದಿಂದ ಸುನಿಶ್ಚಿತಾರ್ಥರಾದ" (ಮುಂ. ೩-೨-೬) ಎಂದೂ "ಅಲ್ಲಿ ಏಕತ್ವವನ್ನು ಕಂಡುಕೊಂಡವರಿಗೆ ಯಾವ ಮೋಹವು, ಯಾವ ಶೋಕವು?" (ಈ. ೭) ಎಂದೂ ಶ್ರುತಿಯಿರುವದರಿಂದ (ಹೀಗೆಂದು ಸಿದ್ಧವಾಗುತ್ತದೆ). ಸ್ಥಿತಪ್ರಜ್ಞನ ಲಕ್ಷಣವನ್ನು (ಹೇಳುವ) ಸ್ಮೃತಿಯಿಂದಲೂ[1] (ಇದು ಸಿದ್ಧವಾಗುತ್ತದೆ).

---

1. ಜ್ಞಾನವು ನಿಲುಗಡೆಗೆ ಬಂದವನೇ ಸ್ಥಿತಪ್ರಜ್ಞನು. ಭೇದವೂ ಉಂಟು, ಅಭೇದವೂ ಉಂಟು- ಎಂಬ ಮತದಲ್ಲಿ ಸ್ಥಿತಪ್ರಜ್ಞೆಯೇ ಇರುವದಿಲ್ಲ- ಎಂದು ಭಾವ.

ಕ್ಷೇತ್ರಜ್ಞಪರಮಾತ್ಮೈಕತ್ವವಿಷಯಕವಾದ ಸಮ್ಯಗ್ದರ್ಶನವಿರುತ್ತಿರುವಲ್ಲಿ ಕ್ಷೇತ್ರಜ್ಞ, ಪರಮಾತ್ಮ– ಎಂಬುದು ನಾಮಮಾತ್ರದ ಭೇದವಾಗಿರುವದರಿಂದ ಈ ಕ್ಷೇತ್ರಜ್ಞನು ಪರಮಾತ್ಮನಿಗಿಂತ ಭಿನ್ನನು, ಈ ಪರಮಾತ್ಮನು ಕ್ಷೇತ್ರಜ್ಞನಿಗಿಂತ ಭಿನ್ನನು– ಎಂಬೀ ಜಾತಿಯ[1] ಆತ್ಮಭೇದವಿಷಯಕವಾದ ನಿರ್ಬಂಧವು ನಿರರ್ಥಕವು.[2] ಏಕೆಂದರೆ ಈ ಆತ್ಮನು ಒಬ್ಬನೇ ಆಗಿದ್ದು ಬರಿಯ ನಾಮದ ಭೇದದಿಂದ ಬಲುಬಗೆಯಾಗಿ ಕರೆಯಲ್ಪಡುತ್ತಿದಾನೆ. "ಸತ್ಯವೂ ಜ್ಞಾನವೂ ಅನಂತವೂ ಆಗಿರುವ ಬ್ರಹ್ಮವು ಗುಹೆಯಲ್ಲಿ ನಿಹಿತವಾಗಿರುವದನ್ನು ಯಾವಾತನು ಅರಿತುಕೊಳ್ಳುವನೋ" (ತೈ. ೨–೧) ಎಂಬೀ (ವಾಕ್ಯದಲ್ಲಿ) ಯಾವದೋ ಒಂದು (ಗೊತ್ತಾಗಸ) ಗುಹೆಯನ್ನು ಕುರಿತು ಹೇಳಿರುವದೇ ಇಲ್ಲ. ಬ್ರಹ್ಮಕ್ಕಿಂತ ಬೇರೆ (ಯಾವನೊಬ್ಬನೂ) ಗುಹೆಯಲ್ಲಿ ನಿಹಿತನಾಗಿರುವದೂ ಇಲ್ಲ.[3] "ಅದನ್ನು ಸೃಷ್ಟಿಸಿ ಅದೇ ಒಳಹೊಕ್ಕಿತು" (ತೈ. ೨–೬) ಎಂದು ಸೃಷ್ಟಿಕರ್ತನೇ ಪ್ರವೇಶಿಸಿರುತ್ತಾನೆಂದು ಶ್ರುತಿಯಲ್ಲಿ ಹೇಳಿರುತ್ತದೆ. ಯಾರಾದರೆ (ಕ್ಷೇತ್ರಜ್ಞೇಶ್ವರರು ಬೇರೆಬೇರೆ ಎಂದು) ನಿರ್ಬಂಧವನ್ನು ಮಾಡುವರೋ ಅವರು ವೇದಾಂತಾರ್ಥವನ್ನು ಬಾಧಿಸುತ್ತಾರಾದ್ದರಿಂದ ಮೋಕ್ಷದ್ವಾರವಾದ ಸಮ್ಯಗ್ದರ್ಶನವನ್ನೇ ಬಾಧಿಸಿದವರಾಗುತ್ತಾರೆ.[4] ಮೋಕ್ಷವು ಕೃತಕವೂ ಅನಿತ್ಯವೂ

---

1. ಜೀವನು ಮತ್ತೊಬ್ಬ ಜೀವನಿಗಿಂತ ಬೇರೆ ಎಂಬ ನಿರ್ಬಂಧವನ್ನೂ ಇಲ್ಲಿ ಸೇರಿಸಿಕೊಳ್ಳಬೇಕೆಂಬುದನ್ನು 'ಈ ಜಾತಿಯ' ಎಂಬ ಮಾತು ಸೂಚಿಸುವದು.

2. ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಆತ್ಮನಿರುತ್ತಾನೆಂದರ್ಥ. "ನಿಜವಾಗಿ ಜೀವಪರಮೇಶ್ವರರಿಗೆ ಭೇದವಿಲ್ಲದಿದ್ದರೂ ಅನಿರ್ವಚನೀಯವಾದ ಅನಾದ್ಯವಿದ್ಯೆ– ಎಂಬ ಉಪಾಧಿಭೇದದಿಂದ 'ಈ ಪರಮಾತ್ಮನು ಶುದ್ಧವಿಜ್ಞಾನಾನಂದಸ್ವಭಾವನು, ಈ ಜೀವನು ಅವಿದ್ಯಾಶೋಕದುಃಖಾದ್ಯುಪದ್ರವಗಳುಳ್ಳವನು' ಎಂದು ಕಾಲ್ಪನಿಕವಾದ ಭೇದಬುದ್ಧಿಯೂ ವ್ಯಪದೇಶವೂ ಆಗಬಹುದು. ಅವಿದ್ಯೆಯು ವಿದ್ಯಾಸ್ವರೂಪನಾದ ಪರಮಾತ್ಮನಲ್ಲಿರಲಾರದು; ಆದರೂ ಅವನ ಪ್ರತಿಬಿಂಬದಂತಿರುವ ಜೀವರುಗಳ ಮೂಲಕ ಪರಮಾತ್ಮನಿಗೂ ಸೇರಿದಂತೆ ವ್ಯವಹಾರವಾಗುತ್ತದೆ. ಜೀವವಿಭಾಗ, ಅವಿದ್ಯೆ –ಇವುಗಳಿಗೆ ಅನ್ಯೋನ್ಯಾಶ್ರಯವಾಯಿತಲ್ಲ! –ಎಂದು ಶಂಕಿಸಬಾರದು; ಏಕೆಂದರೆ ಇವೆರಡೂ ಬೀಜಾಂಕುರಗಳಂತೆ ಅನಾದಿಯಾಗಿವೆ" –ಎಂದು ಭಾಮತೀವ್ಯಾಖ್ಯಾನದಲ್ಲಿದೆ. ಇದಕ್ಕೆ ಭಾಷ್ಯದ ಆಧಾರವಿಲ್ಲ. ಜೀವವಿಭಾಗವೂ ಅವಿದ್ಯೆಯೂ ಕಾಲಾಶ್ರಿತವೆಂಬುದು ಯುಕ್ತಿವಿರುದ್ಧವೂ ಆಗಿರುತ್ತದೆ. ಪೀಠಿಕೆಯನ್ನು ನೋಡಿ.

3. ಗುಹೆಯಲ್ಲಿರುವವನು ಜೀವನು, ಬ್ರಹ್ಮವಲ್ಲ ಎಂಬ ಶಂಕೆಗೆ ಇದು ಪರಿಹಾರವು.

4. "ಬ್ರಹ್ಮವನ್ನು ಅರಿತುಕೊಂಡವನು ಬ್ರಹ್ಮವೇ ಆಗುತ್ತಾನೆ" ಎಂಬ ಶ್ರುತಿಯು ಅಪ್ರಮಾಣವಾಗುವದು.

ಆಗಿರುವದೆಂದು ಕಲ್ಪಿಸಿದವರಾಗುತ್ತಾರೆ.[1] ನ್ಯಾಯಕ್ಕೆ ಹೊಂದುವದೂ ಇಲ್ಲ.[2]

## ೭. ಪ್ರಕೃತ್ಯಧಿಕರಣ (ಸೂ೦. ೨೩-೨೭)

(ಬ್ರಹ್ಮವು ಜಗತ್ತಿಗೆ ಉಪಾದಾನವೂ ನಿಮಿತ್ತವೂ ಆಗಿದೆ)

**ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್ ॥ ೨೩ ॥**

೨೩. (ಬ್ರಹ್ಮವು) ಪ್ರಕೃತಿಯೂ (ಆಗಿದೆ). ಪ್ರತಿಜ್ಞೆಗೂ ದೃಷ್ಟಾಂತಕ್ಕೂ ಅವಿರೋಧ(ವಾಗುವದ)ಕ್ಕಾಗಿ (ಹೀಗೆಂದು ಒಪ್ಪಬೇಕು).

## ಬ್ರಹ್ಮಲಕ್ಷಣದ ವಿಷಯದಲ್ಲಿ ಸಂಶಯ

(ಭಾಷ್ಯ)

೩೮೯. ಯಥಾ ಅಭ್ಯುದಯಹೇತುತ್ವಾತ್ ಧರ್ಮೋ ಜಿಜ್ಞಾಸ್ಯಃ ಏವಂ ನಿಃಶ್ರೇಯಸಹೇತುತ್ವಾತ್ ಬ್ರಹ್ಮಜಿಜ್ಞಾಸ್ಯಮ್ ಇತ್ಯುಕ್ತಮ್ । ಬ್ರಹ್ಮ ಚ "ಜನ್ಮಾದ್ಯಸ್ಯ ಯತಃ" (೧-೧-೨) ಇತಿ ಲಕ್ಷಿತಮ್। ತಚ್ಚ ಲಕ್ಷಣಂ ಘಟರುಚಕಾದೀನಾಂ ಮೃತ್ಸುವರ್ಣಾದಿವತ್ ಪ್ರಕೃತಿತ್ವೇ ಕುಲಾಲಸುವರ್ಣಕಾರಾದಿವತ್ ನಿಮಿತ್ತತ್ವೇ ಚ ಸಮಾನಮ್ ಇತ್ಯತೋ ಭವತಿ ವಿಮರ್ಶಃ ಕಿಮಾತ್ಮಕಂ ಪುನಃ ಬ್ರಹ್ಮಣಃ ಕಾರಣತ್ವಂ ಸ್ಯಾತ್ ಇತಿ ॥

(ಭಾಷ್ಯಾರ್ಥ)

ಹೇಗೆ ಅಭ್ಯುದಯಕ್ಕೆ ಕಾರಣವಾಗಿರುವದರಿಂದ ಧರ್ಮವನ್ನು ಜಿಜ್ಞಾಸೆ ಮಾಡಬೇಕೋ, ಹಾಗೆ ನಿಃಶ್ರೇಯಸಕ್ಕೆ[3] ಕಾರಣವಾಗಿರುವದರಿಂದ ಬ್ರಹ್ಮವನ್ನು ಜಿಜ್ಞಾಸೆಮಾಡಬೇಕು ಎಂದು ಹೇಳಿದ್ದಾಯಿತು. ಬ್ರಹ್ಮಕ್ಕೆ ''ಜನ್ಮಾದ್ಯಸ್ಯ ಯತಃ'' ಯಾವದರಿಂದ ಈ ಜಗತ್ತಿನ ಜನ್ಮಾದಿಗಳಾಗುವವೋ ಅದು ಬ್ರಹ್ಮವು (೧ ೧-೨) ಎಂದು ಲಕ್ಷಣವನ್ನೂ ಹೇಳಿದ್ದಾಯಿತು. ಆ ಲಕ್ಷಣವು ಗಡಿಗೆ, ಅಸಲಿ ಮುಂತಾದವುಗಳಿಗೆ ಮಣ್ಣು, ಚಿನ್ನ ಮುಂತಾದವುಗಳಂತೆ ಪ್ರಕೃತಿಯಾಗಿದ್ದರೂ ಕುಂಬಾರ, ಅಕ್ಕಸಾಲೆ ಮುಂತಾದವರಂತೆ ನಿಮಿತ್ತವಾಗಿದ್ದರೂ (ಎರಡಕ್ಕೂ) ಸಮಾನವಾಗಿರುವದರಿಂದ ಬ್ರಹ್ಮದ ಕಾರಣತ್ವವು ಎಂಥದ್ದು ಆಗಿರಬೇಕು ? -ಎಂಬ ಸಂಶಯವುಂಟಾಗುತ್ತದೆ.

---

1. ಏಕೆಂದರೆ ಅವರ ಪಕ್ಷದಲ್ಲಿ ಮೋಕ್ಷವು ಹೊಸದಾಗಿ ಉಂಟಾಗತಕ್ಕದ್ದು ಎಂದಾಗುತ್ತವೆ. 'ತತ್ತ್ವಮಸಿ' ಎಂಬ ಶ್ರುತಿಗೂ ಅವರ ಪಕ್ಷಕ್ಕೆ ವಿರುದ್ಧ.
2. ಆರಬ್ಧವಾದದ್ದು ಅನಿತ್ಯ ಎಂಬ ಯುಕ್ತಿಗೂ ಅವರ ಮತವು ವಿರುದ್ಧ.
3. ಮೋಕ್ಷಕ್ಕೆ.

# ಪೂರ್ವಪಕ್ಷ: ಬ್ರಹ್ಮವು ಜಗತ್ತಿಗೆ ನಿಮಿತ್ತವೇ

(ಭಾಷ್ಯ)

೩೯೦. ತತ್ರ ನಿಮಿತ್ತಕಾರಣಮೇವ ತಾವತ್ ಕೇವಲಂ ಸ್ಯಾತ್ ಇತಿ ಪ್ರತಿಭಾತಿ। ಕಸ್ಮಾತ್ ? ಈಕ್ಷಾಪೂರ್ವಕಕರ್ತೃತ್ವಶ್ರವಣಾತ್। ಈಕ್ಷಾ ಪೂರ್ವಕಂ ಹಿ ಬ್ರಹ್ಮಣಃ ಕರ್ತೃತ್ವಮ್ ಅವಗಮ್ಯತೇ "ಸ ಈಕ್ಷಾಂಚಕ್ರೇ। ಸ ಪ್ರಾಣಮಸೃಜತ" (ಪ್ರ. ೬-೩,೪) ಇತ್ಯಾದಿಶ್ರುತಿಭ್ಯಃ। ಈಕ್ಷಾಪೂರ್ವಕಂ ಚ ಕರ್ತೃತ್ವಂ ನಿಮಿತ್ತಕಾರಣೇಷ್ವೇವ ಕುಲಾಲಾದಿಷು ದೃಷ್ಟಮ್। ಅನೇಕ ಕಾರಕಪೂರ್ವಿಕಾ ಚ ಕ್ರಿಯಾಫಲಸಿದ್ಧಿರ್ಲೋಕೇ ದೃಷ್ಟಾ। ಸ ಚ ನ್ಯಾಯಃ ಆದಿಕರ್ತರ್ಯಪಿ ಯುಕ್ತಃ ಸಂಕ್ರಮಯಿತುಮ್। ಈಶ್ವರತ್ವಪ್ರಸಿದ್ಧೇಶ್ಚ। ಈಶ್ವರಾಣಾಂ ಹಿ ರಾಜವೈವಸ್ವತಾದೀನಾಂ ನಿಮಿತ್ತಕಾರಣತ್ವಮೇವ ಕೇವಲಂ ಪ್ರತೀಯತೇ ತದ್ವತ್। ಪರಮೇಶ್ವರಸ್ಯಾಪಿ ನಿಮಿತ್ತಕಾರಣತ್ವಮೇವ ಯುಕ್ತಂ ಪ್ರತಿಪತ್ತುಮ್। ಕಾರ್ಯಂ ಚ ಇದಂ ಜಗತ್ ಸಾವಯವಮ್, ಅಚೇತನಮ್, ಅಶುದ್ಧಂ ಚ ದೃಶ್ಯತೇ। ಕಾರಣೇನಾಪಿ ತಸ್ಯ ತಾದೃಶೇನೈವ ಭವಿತವ್ಯಮ್। ಕಾರ್ಯಕಾರಣಯೋಃ ಸಾರೂಪ್ಯದರ್ಶನಾತ್। ಬ್ರಹ್ಮ ಚ ನೈವಂಲಕ್ಷಣಮ್ ಅವಗಮ್ಯತೇ। "ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್" (ಶ್ವೇ. ೬-೧೯) ಇತ್ಯಾದಿಶ್ರುತಿಭ್ಯಃ। ಪಾರಿಶೇಷ್ಯಾತ್ ಬ್ರಹ್ಮಣೋಽನ್ಯತ್ ಉಪಾದಾನಕಾರಣಮ್ ಅಶುದ್ಧ್ಯಾದಿಗುಣಕಂ ಸ್ಮೃತಿಪ್ರಸಿದ್ಧಮ್ ಅಭ್ಯುಪಗನ್ತವ್ಯಮ್। ಬ್ರಹ್ಮಕಾರಣತ್ವಶ್ರುತೇಃ ನಿಮಿತ್ತತ್ವಮಾತ್ರೇ ಪರ್ಯವಸಾನಾತ್ ಇತಿ ॥

(ಭಾಷ್ಯಾರ್ಥ)

ಇಲ್ಲಿ (ಬರಿಯ) ನಿಮಿತ್ತಕಾರಣವೇ ಆಗಿರಬೇಕೆಂದು ಮೊದಲು ತೋರುತ್ತದೆ. ಏಕೆ ? ಎಂದರೆ ಯೋಚಿಸಿನೋಡುವದರ ಮೂಲಕ (ಬ್ರಹ್ಮವು) ಕರ್ತೃವಾಗಿರುವದೆಂದು ಶ್ರುತಿಯಲ್ಲಿ ಹೇಳಿರುವದರಿಂದ. "ಅವನು ಯೋಚಿಸಿ ನೋಡಿದನು; ಅವನು ಪ್ರಾಣವನ್ನು ಸೃಷ್ಟಿಸಿದನು" (ಪ್ರ. ೬-೩,೪) ಮುಂತಾದ ಶ್ರುತಿಗಳಿಂದ ಬ್ರಹ್ಮವು ಈಕ್ಷಾಪೂರ್ವಕವಾದ ಕರ್ತೃವೆಂದಲ್ಲವೆ, ತಿಳಿಯಬರುತ್ತದೆ ? ಈಕ್ಷಾಪೂರ್ವಕವಾದ ಕರ್ತೃತ್ವವು ನಿಮಿತ್ತಕಾರಣವಾಗಿರುವ ಕುಂಬಾರನೇ ಮೊದಲಾದವರಲ್ಲಿಯೇ ಕಂಡಿರುತ್ತದೆ[1], ಕ್ರಿಯೆಯ ಫಲವು ಸಿದ್ಧಿಯಾಗುವದು ಅನೇಕಕಾರಕಗಳ ಮೂಲಕ ಎಂದು ಲೋಕದಲ್ಲಿ ಕಂಡಿದೆ; ಈ ನ್ಯಾಯು

1. ಕುಂಬಾರನೇ ಮಡಿಕೆಯಾದದ್ದು ಕಂಡುಬಂದಿಲ್ಲ.

ವನ್ನು ಆದಿಕರ್ತೃವಾದ (ಈಶ್ವರ)ನಿಗೂ ಹೊಂದಿಸುವದು ಯುಕ್ತವಾಗಿರುತ್ತದೆ.[1] ಈಶ್ವರನೆಂದು ಪ್ರಸಿದ್ಧನಾಗಿರುವದರಿಂದಲೂ ಹೀಗೆ. ಈಶ್ವರರಾಗಿರುವ **ರಾಜವೈವಸ್ವತನೇ** ಮೊದಲಾದವರಲ್ಲಿ (ಬರಿಯ) ನಿಮಿತ್ತಕಾರಣತ್ವವೇ ಕಂಡುಬರುತ್ತದೆ. ಅದರಂತೆ ಪರಮೇಶ್ವರನಿಗೂ ನಿಮಿತ್ತಕಾರಣತ್ವವು ಮಾತ್ರ ಇದೆ ಎಂದು ತಿಳಿಯುವದು ಯುಕ್ತವಾಗಿರುತ್ತದೆ.[2] ಮತ್ತು ಕಾರ್ಯವಾದ ಈ ಜಗತ್ತು[3] ಸಾವಯವವಾಗಿಯೂ ಅಚೇತನವಾಗಿಯೂ ಅಶುದ್ಧವಾಗಿಯೂ ಇರುವದು ಕಂಡುಬರುತ್ತದೆ; ಅದರ ಕಾರಣವೂ ಅಂಥದ್ದೇ ಆಗಿರಬೇಕು. ಏಕೆಂದರೆ ಕಾರ್ಯಕಾರಣಗಳಿಗೆ ಸಾರೂಪ್ಯವಿರುವದು (ಲೋಕದಲ್ಲಿ) ಕಂಡುಬರುತ್ತದೆ.[4] ಆದರೆ ಬ್ರಹ್ಮವು ಇಂಥ ಲಕ್ಷಣದ್ದಲ್ಲವೆಂದು "ನಿಷ್ಕಲವು, ನಿಷ್ಕ್ರಿಯವು, ಶಾಂತವು, ನಿರಂಜನವು" (ಶ್ವೇ. ೬-೧೯) ಎಂದು ಮುಂತಾಗಿರುವ ಶ್ರುತಿಗಳಿಂದ ನಿಶ್ಚಿತವಾಗಿರುತ್ತದೆ. ಪರಿಶೇಷನ್ಯಾಯದಿಂದ ಬ್ರಹ್ಮಕ್ಕಿಂತ ಬೇರೆಯಾದ, ಅಶುದ್ಧಿಯೇ ಮುಂತಾದ ಗುಣಗಳುಳ್ಳ ಸ್ಮೃತಿಪ್ರಸಿದ್ಧವಾದ ಉಪಾದಾನಕಾರಣವನ್ನು[5] ಒಪ್ಪಬೇಕು; ಏಕೆಂದರೆ ಬ್ರಹ್ಮವು (ಜಗತ್ತಿಗೆ) ಕಾರಣವೆಂಬ ಶ್ರುತಿಯು ನಿಮಿತ್ತತ್ವಮಾತ್ರದಲ್ಲಿ ಮುಗಿಯುತ್ತದೆ.[6]

---

1. ಈಶ್ವರನು ಕರ್ತೃವಾಗಿರುತ್ತಾನೆ; ಅವನಿಗೆ ಕುಂಬಾರನೇ ಮುಂತಾದವರಂತೆ ಕರ್ಮಕರಣಾದಿಕಾರಕಗಳೂ ಸೃಷ್ಟಿಗೆ ಬೇಕು ಎಂದು ಕಲ್ಪಿಸುವದು ದೃಷ್ಟಾನುಸಾರವಾಗುತ್ತದೆ.

2. ಸಾಮಾನ್ಯನಾದ ಈಶ್ವರನೇ ತನಗೆ ಇಷ್ಟವಾದ ವಸ್ತುಗಳನ್ನು ಮಾಡಿಕೊಳ್ಳುವದಕ್ಕೆ ತಾನೇ ಮಾರ್ಪಡುವದಿಲ್ಲ; ಇನ್ನು ಪರಮೇಶ್ವರನು ಮಾರ್ಪಟ್ಟಾನೆ? -ಎಂದು ಭಾವ.

3. ಇಲ್ಲಿಯವರೆಗೂ ಕಾರಣಸ್ವಭಾವವನ್ನು ಪರೀಕ್ಷಿಸಿ ತರ್ಕಿಸಿದ್ದಾಯಿತು. ಇನ್ನು ಮುಂದೆ ಕಾರ್ಯವಾದ ಜಗತ್ತಿನ ಸ್ವಭಾವದಿಂದಲೂ ಈಶ್ವರನು ಉಪಾದಾನಕಾರಣವಲ್ಲವೆಂದು ತರ್ಕಿಸಲಾಗುವದು.

4. ಪೂರ್ವಪಕ್ಷಿಯು ಲೋಕದಲ್ಲಿ ಕಂಡಿರುವದರ ಬಲದಿಂದ ಜಗತ್ಕಾರಣಸ್ವರೂಪವನ್ನು ತರ್ಕಿಸುತ್ತಿದ್ದಾನೆಂಬುದನ್ನು ಲಕ್ಷಿಸಬೇಕು.

5. ಪ್ರಧಾನವನ್ನು ಎಂದರ್ಥ. ಅಣ್ವಾದಿಕಾರಣವಾದಿಗಳೂ ಈ ಯುಕ್ತಿಗಳನ್ನು ತಮ್ಮ ಮತಕ್ಕೆ ಉಪಯೋಗಿಸಿಕೊಳ್ಳಬಹುದಾದರೂ ಪ್ರಧಾನಕ್ಕೆ ಇರುವಷ್ಟು ಬಲವು ಅವರ ವಾದಕ್ಕೆ ಇರುವದಿಲ್ಲವೆಂಬುದು ಮುಂದೆ ಗೊತ್ತಾಗುವದು.

6. ಬ್ರಹ್ಮವು ಉಪಾದಾನವೆಂದು ಶ್ರುತಿಯಲ್ಲಿ ಹೇಳಿಲ್ಲ; ಅದು ಉಪಾದಾನವಾಗಲು ತಕ್ಕದ್ದೂ ಅಲ್ಲ. ಬ್ರಹ್ಮವು ಬರಿಯ ನಿಮಿತ್ತವೇ ಎಂದಾದರೆ ಪ್ರಧಾನಾದಿಗಳೇ ಉಪಾದಾನವೆಂಬ ವಾದಕ್ಕೆ ಅವಕಾಶವು ದೊರೆಯುತ್ತದೆ. ಆಗ ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣವಾಗಲಿ ಗತಿಸಾಮಾನ್ಯವಾಗಲಿ ಬ್ರಹ್ಮಕ್ಕೆ ಹೊಂದುವದಿಲ್ಲ ಎಂಬುದು ಪೂರ್ವಪಕ್ಷಕ್ಕೆ ಪ್ರಯೋಜನವು.

# ಸಿದ್ಧಾಂತ: ಬ್ರಹ್ಮವು ಜಗತ್ತಿಗೆ ಉಪಾದಾನವೂ ನಿಮಿತ್ತವೂ ಆಗಿದೆ

( ಭಾಷ್ಯ )

೩೯೧. ಏವಂ ಪ್ರಾಪ್ತೇ ಬ್ರೂಮಃ । ಪ್ರಕೃತಿಶ್ಚ ಉಪಾದಾನಕಾರಣಂ ಚ ಬ್ರಹ್ಮ ಅಭ್ಯುಪಗನ್ತವ್ಯಮ್, ನಿಮಿತ್ತಕಾರಣಂ ಚ । ನ ಕೇವಲಂ ನಿಮಿತ್ತ ಕಾರಣಮೇವ । ತಸ್ಮಾತ್ ? ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್ | ಏವಂ ಪ್ರತಿಜ್ಞಾದೃಷ್ಟಾನ್ತೌ ಶ್ರೌತೌ ನೋಪರುಧ್ಯೇತೇ| ಪ್ರತಿಜ್ಞಾ ತಾವತ್– "ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿ ಜ್ಞಾತಂ ವಿಜ್ಞಾತಮ್" (ಛಾಂ. ೬–೧–೩) ಇತಿ । ತತ್ರ ಚ ಏಕೇನ ವಿಜ್ಞಾತೇನ ಸರ್ವಮನ್ಯತ್ ಅವಿಜ್ಞಾತಮಪಿ ವಿಜ್ಞಾತಂ ಭವತಿ ಇತಿ ಪ್ರತೀಯ ತೇ । ತಚ್ಚ ಉಪಾದಾನಕಾರಣವಿಜ್ಞಾನೇ ಸರ್ವವಿಜ್ಞಾನಂ ಸಂಭವತಿ | ಉಪಾದಾನಕಾರಣಾವ್ಯತಿರೇಕಾತ್ ಕಾರ್ಯಸ್ಯ | ನಿಮಿತ್ತಕಾರಣಾವ್ಯತಿರೇಕಸ್ತು ಕಾರ್ಯಸ್ಯ ನಾಸ್ತಿ, ಲೋಕೇ ತಕ್ಷ್ಣಃ ಪ್ರಸಾದವ್ಯತಿರೇಕದರ್ಶನಾತ್ । ದೃಷ್ಟಾನ್ತೇಽಪಿ "ಯಥಾ ಸೋಮ್ಯೈಕೇನ ಮೃತ್ಪಿಣ್ಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" (ಛಾಂ. ೬–೧–೪) ಇತಿ ಉಪಾದಾನಕಾರಣಗೋಚರ ಏವ ಆಮ್ನಾ ಯತೇ | ತಥಾ "ಏಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್" (ಛಾಂ. ೬–೧–೫), "ಏಕೇನ ನಖನಿಕೃನ್ತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್" (ಛಾಂ. ೬–೧–೬) ಇತಿ ಚ | ತಥಾ ಅನ್ಯತ್ರಾಪಿ "ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" (ಮುಂ. ೧–೧–೩) ಇತಿ ಪ್ರತಿಜ್ಞಾ | "ಯಥಾ ಪೃಥಿವ್ಯಾಮೋಷಧಯಃ ಸಂಭವನ್ತಿ" (ಮುಂ. ೧–೧–೭) ಇತಿ ದೃಷ್ಟಾನ್ತಃ | ತಥಾ "ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ಸರ್ವಂ ವಿದಿತಮ್" (ಬೃ. ೪–೫–೬) ಇತಿ ಪ್ರತಿಜ್ಞಾ । "ಸ ಯಥಾ ದುನ್ದುಭೇರ್ಹನ್ಯಮಾನಸ್ಯ ನ ಬಾಹ್ಯಾ ಞ್ಛಬ್ದಾಞ್ಛಕ್ನುಯಾದ್ ಗ್ರಹಣಾಯ ದುನ್ದುಭೇಸ್ತು ಗ್ರಹಣೇನ ದುನ್ದುಭ್ಯಾ ಘಾತಸ್ಯ ವಾ ಶಬ್ದೋ ಗೃಹೀತಃ" (ಬೃ. ೪–೫–೮) ಇತಿ ದೃಷ್ಟಾನ್ತಃ | ಏವಂ ಯಥಾಸಂಭವಂ ಪ್ರತಿವೇದಾನ್ತಂ ಪ್ರತಿಜ್ಞಾದೃಷ್ಟಾನ್ತೌ ಪ್ರಕೃತಿತ್ವಸಾಧನೌ ಪ್ರತ್ಯೇತವ್ಯೌ । ಯತಃ ಇತೀಯಂ ಪಞ್ಚಮೀ "ಯತೋ ವಾ ಇಮಾನಿ ಭೂತಾನಿ ಜಾಯನ್ತೇ" (ತೈ. ೩-೧) ಇತ್ಯತ್ರ "ಜನಿಕರ್ತುಃ ಪ್ರಕೃತಿಃ" (ಪಾ. ಸೂ. ೧–೪–೩೦) ಇತಿ ವಿಶೇಷಸ್ಮರಣಾತ್ ಪ್ರಕೃತಿಲಕ್ಷಣ ಏವ

ಅಪಾದಾನೇ ದ್ರಷ್ಟವ್ಯಾ । ನಿಮಿತ್ತತ್ತ್ವಂ ತು ಅಧಿಷ್ಠಾತ್ರನ್ತರಾಭಾವಾತ್ ಅಧಿಗನ್ತವ್ಯಮ್ । ಯಥಾ ಹಿ ಲೋಕೇ ಮೃತ್ಸುವರ್ಣಾದಿಕಮ್ ಉಪಾದಾನ ಕಾರಣಂ ಕುಲಾಲಸುವರ್ಣಕಾರಾದೀನ್ ಅಧಿಷ್ಠಾತೄನ್ ಅಪೇಕ್ಷ್ಯಪ್ರವರ್ತತೇ ನೈವಂ ಬ್ರಹ್ಮಣಃ ಉಪಾದಾನಕಾರಣಸ್ಯ ಸತೋಽನ್ಯಃ ಅಧಿಷ್ಠಾತಾ ಅಪೇಕ್ಷ್ಯೋಽಸ್ತಿ । ಪ್ರಾಗುತ್ಪತ್ತೇಃ 'ಏಕಮೇವಾದ್ವಿತೀಯಮ್' ಇತ್ಯವಧಾರಣಾತ್ । ಅಧಿಷ್ಠಾತ್ರನ್ತರಾಭಾವೋಽಪಿ ಪ್ರತಿಜ್ಞಾ ದೃಷ್ಟಾನ್ತಾನುಪರೋಧಾದೇವ ಉದಿತೋ ವೇದಿತವ್ಯಃ। ಅಧಿಷ್ಠಾತರಿ ಹಿ ಉಪಾದಾನಾತ್ ಅನ್ಯಸ್ಮಿನ್ ಅಭ್ಯುಪ ಗಮ್ಯಮಾನೇ ಪುನರಪಿ ಏಕವಿಜ್ಞಾನೇನ ಸರ್ವವಿಜ್ಞಾನಸ್ಯ ಅಸಂಭವಾತ್ ಪ್ರತಿಜ್ಞಾದೃಷ್ಟಾನ್ತೋಪರೋಧ ಏವ ಸ್ಯಾತ್ । ತಸ್ಮಾತ್ ಅಧಿಷ್ಠಾ ತ್ರನ್ತರಾಭಾವಾತ್ ಆತ್ಮನಃ ಕರ್ತೃತ್ವಮ್ ಉಪಾದಾನಾನ್ತರಾಭಾವಾಚ್ಚ ಪ್ರಕೃತಿತ್ವಮ್ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ (ಸಿದ್ಧಾಂತವನ್ನು) ಹೇಳುತ್ತೇವೆ. ಬ್ರಹ್ಮವು ಪ್ರಕೃತಿಯೂ ಎಂದರೆ ಉಪಾದಾನಕಾರಣವೂ ನಿಮಿತ್ತಕಾರಣವೂ (ಆಗಿದೆ ಎಂದು) ಒಪ್ಪಬೇಕು, ಬರಿಯ ನಿಮಿತ್ತಕಾರಣವೇ ಅಲ್ಲ. ಏಕೆ ? ಎಂದರೆ ಪ್ರತಿಜ್ಞಾದೃಷ್ಟಾಂತಗಳಿಗೆ ಅವಿರೋಧಕ್ಕಾಗಿ. (ಇದರ ವಿವರ) : ಹೀಗಾದರೆ ಶ್ರುತಿಯಲ್ಲಿರುವ ಪ್ರತಿಜ್ಞಾದೃಷ್ಟಾಂತಗಳು ವಿರುದ್ಧವಾಗು ವದಿಲ್ಲ. (ಹೇಗೆಂದರೆ) : ಮೊದಲನೆಯದಾಗಿ "ಯಾವದರಿಂದ ಅಶ್ರುತವಾದದ್ದು ಶ್ರುತವೂ, ಅನುತವಾದದ್ದು ಮತವೂ, ಅವಿಜ್ಞಾತವಾದದ್ದು ವಿಜ್ಞಾತವೂ ಆಗುತ್ತದೆಯೋ ಆ ಆದೇಶವನ್ನು ಕೇಳಿದೆಯೊ ?" (ಛಾಂ. ೬-೧-೩) ಎಂದು **ಪ್ರತಿಜ್ಞೆ.** ಅಲ್ಲಿ ಒಂದನ್ನು ಅರಿತುಕೊಂಡರೆ ಅರಿತುಕೊಳ್ಳದೆ ಇರುವ ಮಿಕ್ಕದ್ದೆಲ್ಲವೂ ಅರಿತದ್ದಾಗುತ್ತದೆ ಎಂದು ತೋರುತ್ತದೆ. ಮತ್ತು ಈ ಎಲ್ಲದರ ವಿಜ್ಞಾನವೆಂಬುದು ಉಪಾದಾನಕಾರಣವನ್ನು ಅರಿತುಕೊಂಡರೆ ಆಗುತ್ತದೆ; ಏಕೆಂದರೆ ಕಾರ್ಯವು ಉಪಾದಾನಕಾರಣಕ್ಕಿಂತ ಅಭಿನ್ನವಾಗಿರುತ್ತದೆ. ಆದರೆ ಕಾರ್ಯವು ನಿಮಿತ್ತಕಾರಣಕ್ಕಿಂತ ಬೇರೆಯಿಲ್ಲವೆಂಬುದಿಲ್ಲ; ಏಕೆಂದರೆ ಲೋಕ ದಲ್ಲಿ ಬಡಗಿಗಿಂತ ಉಪ್ಪರಿಗೆಯ ಮನೆಯು ಬೇರೆಯಾಗಿರುವದು ಕಂಡುಬರುತ್ತದೆ. **ದೃಷ್ಟಾಂತವೂ** "ಸೋಮ್ಯನೆ, ಹೇಗೆ ಒಂದು ಮಣ್ಣಿನ ಮುದ್ದೆಯಿಂದ ಮಣ್ಣಿನಿಂದಾದದ್ದೆಲ್ಲವೂ ಅರಿತದ್ದಾಗುತ್ತದೆಯೋ, ಕಾರ್ಯವೆಂಬುದು ಮಾತಿನಿಂದಾಗಿರುವ ಹೆಸರು ಮಾತ್ರವೋ, ಮಣ್ಣೆಂಬುದೇ ಸತ್ಯವೋ" (ಛಾಂ. ೬-೧-೪) ಎಂದೂ "ಒಂದು ಚಿನ್ನದ ಗಟ್ಟಿಯಿಂದ ಚಿನ್ನದಿಂದಾದದ್ದೆಲ್ಲವೂ (ಹೇಗೆ) ಅರಿತದ್ದಾಗುವದೋ" (ಛಾಂ. ೬-೧-೫) ಎಂದೂ "ಒಂದು ಉಗುರು

ಕತ್ತರಿಯಿಂದ[1] ಕಬ್ಬಿಣದಿಂದಾಗಿರುವದೆಲ್ಲವೂ ಅರಿತದ್ದಾಗುವದೋ" (ಛಾಂ. ೬-೧-೬) ಎಂದೂ ಉಪಾದಾನಕಾರಣವಿಷಯದಲ್ಲಿಯೇ ಪಠಿತವಾಗಿರುತ್ತದೆ. ಇದರಂತೆ ಮತ್ತೊಂದು (ಶ್ರುತಿ)ಯಲ್ಲಿಯೂ "ಪೂಜ್ಯನೆ, ಯಾವದನ್ನು ಅರಿತುಕೊಂಡರೆ ಇದೆಲ್ಲವನ್ನೂ ಅರಿತುಕೊಂಡಂತಾಗುವದು?" (ಮುಂ. ೧-೧-೩) ಎಂದು **ಪ್ರತಿಜ್ಞೆ**. "ಭೂಮಿಯಲ್ಲಿ ಹೇಗೆ ಮರಗಿಡಗಳು ಉಂಟಾಗುವವೋ" (ಮುಂ. ೧-೧-೭) ಎಂದು **ದೃಷ್ಟಾಂತ**. ಹಾಗೂ "ಎಲೆ, ಆತ್ಮನನ್ನು ಕಂಡುಕೊಂಡರೆ, ಮನನಮಾಡಿದರೆ, ಅರಿತುಕೊಂಡರೆ ಇದೆಲ್ಲವನ್ನೂ ಅರಿತಂತೆ" (ಬೃ. ೪-೫-೬) ಎಂದು **ಪ್ರತಿಜ್ಞೆ**. "ಅದು ಹೇಗೆಂದರೆ ದುಂದುಭಿಯನ್ನು ಹೊಡೆಯುತ್ತಿರುವಾಗ ಹೊರಗಿನ ಶಬ್ದಗಳನ್ನು ಗ್ರಹಿಸುವದಕ್ಕೆ ಆಗುವದಿಲ್ಲ. ಆದರೆ ದುಂದುಭಿಯನ್ನು ಹೊಡೆಯುವದರಿಂದಾದ (ಶಬ್ದಸಾಮಾನ್ಯವನ್ನು ಗ್ರಹಿಸಿ) ದುಂದುಭಿ(ಶಬ್ದಸಾಮಾನ್ಯದ ವಿಶೇಷಗಳೆಂದು) ಗ್ರಹಿಸಿದರೆ (ಆ) ಶಬ್ದವನ್ನು ಗ್ರಹಿಸಿದಂತಾಗುವದು." (ಬೃ. ೪-೫-೮) ಎಂದು **ದೃಷ್ಟಾಂತ.** ಹೀಗೆ (ಅಲ್ಲಲ್ಲಿಗೆ) ತಕ್ಕಂತೆ ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಪ್ರತಿಜ್ಞಾದೃಷ್ಟಾಂತಗಳು (ಬ್ರಹ್ಮವು ಜಗತ್ತಿಗೆ) ಪ್ರಕೃತಿ ಎಂಬುದನ್ನು ಸಾಧಿಸಿಕೊಡುತ್ತವೆ ಎಂದು ತಿಳಿಯಬೇಕು.

"ಯಾವದರಿಂದ ಈ ಭೂತಗಳು ಹುಟ್ಟುತ್ತವೆಯೋ" (ತೈ ೩-೧) ಎಂಬಲ್ಲಿ 'ಯಾವದರಿಂದ' (ಯತಃ) ಎಂಬೀ ಪಂಚಮಿಯು ಪ್ರಕೃತಿರೂಪವಾದ ಅಪಾದಾನವನ್ನೇ ತಿಳಿಸುತ್ತದೆ ಎಂದರಿಯಬೇಕು. ಏಕೆಂದರೆ "ಜನಿಕರ್ತುಃ ಪ್ರಕೃತಿಃ" (ಪಾ. ಸೂ. ೧-೪--೩೦) ಹುಟ್ಟುವ ವಸ್ತುವಿನ ಉಪಾದಾನಕಾರಣವು ಅಪಾದಾನವೆನಿಸುವದು ಎಂಬ ವಿಶೇಷಸ್ಮೃತಿಯಿದೆ.

(ಬ್ರಹ್ಮವು) ನಿಮಿತ್ತವೆಂಬುದನ್ನಾದರೋ ಮತ್ತೊಬ್ಬ ಅಧಿಷ್ಠಾತೃವಿಲ್ಲದ್ದರಿಂದ[2] ಗೊತ್ತುಮಾಡಿಕೊಳ್ಳಬೇಕು. ಲೋಕದಲ್ಲಿ ಮಣ್ಣು, ಚಿನ್ನ– ಮುಂತಾದ ಉಪಾದಾನಕಾರಣವು ಹೇಗೆ ಕುಂಬಾರ, ಅಕ್ಕಸಾಲೆ– ಮೊದಲಾದ ಅಧಿಷ್ಠಾತೃಗಳನ್ನು ಬಯಸಿಯೇ ತೊಡಗುವದೋ ಹಾಗೆ ಉಪಾದಾನಕಾರಣವಾಗಿರುವ ಬ್ರಹ್ಮಕ್ಕೆ ಮತ್ತೊಬ್ಬ ಅಧಿಷ್ಠಾತೃವನ್ನು ಬಯಸತಕ್ಕದ್ದು ಇರುವದಿಲ್ಲ. ಏಕೆಂದರೆ ಸೃಷ್ಟಿಗಿಂತ ಮುಂಚೆ (ಸತ್ತು) ಒಂದೇ ಅದ್ವಿತೀಯ(ವಾಗಿರುತ್ತದೆ) ಎಂದು (ಶ್ರುತಿಯಲ್ಲಿ) ಒತ್ತಿ ಹೇಳಿರುತ್ತದೆ. ಮತ್ತೊಬ್ಬ ಅಧಿಷ್ಠಾತೃವು ಇರುವದಿಲ್ಲವೆಂಬುದೂ ಪ್ರತಿಜ್ಞಾದೃಷ್ಟಾಂತಗಳಿಗೆ ' ವಿರೋಧವಿಲ್ಲದಿರುವದ

1. ಇದನ್ನು ಕಬ್ಬಿಣದ ತುಂಡಿಗೆ ಉಪಲಕ್ಷಣವಾಗಿ ಹೇಳಿದೆ. ಒಂದು ಉಗುರುಕತ್ತರಿಯು ಕಬ್ಬಿಣದ್ದೆಂದು ತಿಳಿದರೆ ಕಬ್ಬಿಣದ ವಿಕಾರವೆಲ್ಲವನ್ನು ತಿಳಿದಂತೆ ಎಂದರ್ಥ.

2. ಮೇಲಿದ್ದು ಅದನ್ನುಪಯೋಗಿಸುವ ಕರ್ತೃವಿಲ್ಲದ್ದರಿಂದ ಎಂದರ್ಥ.

ಕ್ಕಾಗಿಯೇ (ಎಂದು) ಹೇಳಿದಂತಾಯಿತೆಂದು ತಿಳಿಯಬೇಕು. ಹೇಗೆಂದರೆ ಉಪಾದಾನಕ್ಕಿಂತಲೂ ಬೇರೆಯಾಗಿ ಅಧಿಷ್ಠಾತೃವನ್ನು ಒಪ್ಪಿದರೆ ಒಂದನ್ನರಿತು ಕೊಂಡರೆ ಎಲ್ಲವನ್ನೂ ಅರಿತುಕೊಂಡಂತಾಗುವದು ಆಗುವಹಾಗಿಲ್ಲವಾದ್ದರಿಂದ[1] ಪ್ರತಿಜ್ಞಾದೃಷ್ಟಾಂತಗಳಿಗೆ ಮತ್ತೂ ವಿರೋಧವೇ ಆಗಿಬಿಟ್ಟೀತು. ಆದ್ದರಿಂದ (ತನಗೆ) ಮತ್ತೊಬ್ಬ ಅಧಿಷ್ಠಾತೃವಿಲ್ಲದ್ದರಿಂದ ಆತ್ಮನು ಜಗತ್ತಿಗೆ ಕರ್ತೃವು, ಮತ್ತೊಂದು ಉಪಾದಾನವಿಲ್ಲದ್ದರಿಂದ ಪ್ರಕೃತಿಯು.

## ಅಭಿಧ್ಯೋಪದೇಶಾಚ್ಚ ॥ ೨೪ ॥

೨೪. ಯೋಚನೆಯನ್ನು ಉಪದೇಶಿಸಿರುವದರಿಂದಲೂ (ಬ್ರಹ್ಮವು ಪ್ರಕೃತಿ).

## ಬ್ರಹ್ಮವು ಉಪಾದಾನಕಾರಣವೆಂಬುದಕ್ಕೆ ಕಾರಣಾಂತರಗಳು

(ಭಾಷ್ಯ)

೬೯೨. ಕುತಶ್ಚ ಆತ್ಮನಃ ಕರ್ತೃತ್ವಪ್ರಕೃತಿತ್ವೇ? (ಅಭಿಧ್ಯೋಪದೇಶಾಚ್ಚ) । ಅಭಿಧ್ಯೋಪದೇಶಶ್ಚ ಆತ್ಮನಃ ಕರ್ತೃತ್ವಪ್ರಕೃತಿತ್ವೇ ಗಮಯತಿ "ಸೋಽಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ" (ತೈ. ೨-೬) । "ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ"[2] (ಛಾಂ. ೬-೨-೩) ಇತಿ ಚ । ತತ್ರ ಅಭಿಧ್ಯಾನಪೂರ್ವಿಕಾಯಾಃ ಸ್ವಾತಂತ್ರ್ಯಪ್ರವೃತ್ತೇಃ ಕರ್ತಾ ಇತಿ ಗಮ್ಯತೇ। 'ಬಹು ಸ್ಯಾಮ್' ಇತಿ ಪ್ರತ್ಯಗಾತ್ಮವಿಷಯತ್ವಾತ್ ಬಹುಭವನಾಭಿಧ್ಯಾನಸ್ಯ ಪ್ರಕೃತಿರಿತ್ಯಪಿ ಗಮ್ಯತೇ ॥

(ಭಾಷ್ಯಾರ್ಥ)

ಆತ್ಮನಿಗೆ ಕರ್ತೃತ್ವಪ್ರಕೃತಿತ್ವ(ಗಳೆರಡೂ ಉಂಟೆಂಬುದು) ಮತ್ತೂ ಏತರಿಂದ? ಎಂದರೆ (ಅಭಿಧ್ಯೋಪದೇಶದಿಂದ), "ಬಹುವಾಗುವೆನು ಉತ್ಪತ್ತಿಯಾಗುವೆನು- ಎಂದು ಅವನು ಇಚ್ಛೈಸಿದನು"(ತೈ. ೨-೬)ಎಂದೂ "ಬಹುವಾಗುವೆನು, ಉತ್ಪತ್ತಿಯಾಗುವೆನು- ಎಂದು ಅದು ಯೋಚಿಸಿಕೊಂಡಿತು" (ಛಾಂ. ೬-೨-೩) ಎಂದೂ ಯೋಚನೆಯನ್ನು ಉಪದೇಶಿಸಿರುವದರಿಂದ

1. ಏಕೆಂದರೆ ಉಪಾದಾನದಿಂದ ಕಾರ್ಯವನ್ನು ಅರಿತರೂ ಅಧಿಷ್ಠಾತೃವನ್ನು ಅರಿತಂತೆ ಆಗದೆ ಹೋಗುವದು.

2. ಇಲ್ಲಿ ಒಂದು ಇತಿಯು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿದೆ ಎಂದ ತೋರುವದು.

ಆತ್ಮನಿಗೆ ಕರ್ತೃತ್ವಪ್ರಕೃತಿತ್ವಗಳುಂಟೆಂದು ತಿಳಿಸುತ್ತದೆ. ಇಲ್ಲಿ ಯೋಚಿಸಿ ನೋಡುವದರ ಮೂಲಕ ಸ್ವತಂತ್ರವಾಗಿ ತೊಡಗಿದ್ದರಿಂದ ಕರ್ತೃವೆಂದು ಗೊತ್ತಾಗುತ್ತದೆ. 'ಬಹುವಾಗುವೆನು' ಎಂದು ಬಹುವಾಗುವ ಯೋಚನೆಯನ್ನು ಪ್ರತ್ಯಗಾತ್ಮನ ವಿಷಯದಲ್ಲಿ ಹೇಳಿರುವದರಿಂದ ಪ್ರಕೃತಿ ಎಂದು ಗೊತ್ತಾಗುತ್ತದೆ.

**ಸಾಕ್ಷಾಚ್ಚೋಭಯಾಮ್ನಾನಾತ್ ॥ ೨೫ ॥**

೨೫. ಸಾಕ್ಷಾತ್ತಾಗಿ ಎರಡನ್ನೂ ಹೇಳಿರುವದರಿಂದಲೂ (ಹೀಗೆ).

(ಭಾಷ್ಯ)

೩೯೩. ಪ್ರಕೃತಿತ್ವಸ್ಯ ಅಯಮ್ ಅಭ್ಯುಚ್ಚಯಃ | ಇತಶ್ಚ ಪ್ರಕೃತಿ ರ್ಬ್ರಹ್ಮ। ಯತ್ಕಾರಣಂ ಸಾಕ್ಷಾದ್ ಬ್ರಹ್ಮೈವ ಕಾರಣಮ್ ಉಪಾದಾಯ ಉಭೌ ಪ್ರಭವಪ್ರಲಯೌ ಆಮ್ನಾಯೇತೇ—"ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯನ್ತೇ। ಆಕಾಶಂ ಪ್ರತ್ಯಸ್ತಂ ಯನ್ತಿ" (ಛಾಂ. ೧-೯-೧) ಇತಿ। ಯದ್ ಹಿ ಯಸ್ಮಾತ್ ಪ್ರಭವತಿ, ಯಸ್ಮಿಂಶ್ಚ ಪ್ರಲೀಯತೇ ತತ್ ತಸ್ಯ ಉಪಾದಾನಂ ಪ್ರಸಿದ್ಧಮ್ । ಯಥಾ ವ್ರೀಹಿಯವಾದೀನಾಂ ಪೃಥಿವೀ | 'ಸಾಕ್ಷಾತ್' ಇತಿ ಚ ಉಪಾದಾನಾನ್ತರಾನುಪಾದಾನಂ ದರ್ಶಯತಿ 'ಆಕಾಶಾದೇವ' ಇತಿ | ಪ್ರತ್ಯಸ್ತಮಯಶ್ಚ ನೋಪಾದಾನಾತ್ ಅನ್ಯತ್ರ ಕಾರ್ಯಸ್ಯ ದೃಷ್ಟಃ ॥

(ಭಾಷ್ಯಾರ್ಥ)

ಪ್ರಕೃತಿ ಎಂಬುದಕ್ಕೆ ಇದು ಮತ್ತೊಂದು (ಕಾರಣವು). ಈ (ಕಾರಣ) ದಿಂದಲೂ ಬ್ರಹ್ಮವು ಪ್ರಕೃತಿಯು; ಏಕೆಂದರೆ ನೇರಾಗಿ ಬ್ರಹ್ಮವನ್ನೇ ಕಾರಣ ವೆಂದು ತೆಗೆದುಕೊಂಡು "ಈ ಭೂತಗಳೆಲ್ಲವೂ ಆಕಾಶದಿಂದಲೇ ಹುಟ್ಟುತ್ತವೆ; ಆಕಾಶದಲ್ಲಿಯೇ ಪ್ರತ್ಯಸ್ತಮಯವಾಗುತ್ತವೆ[1]" (ಛಾಂ. ೧-೯-೧) ಎಂದು ಸೃಷ್ಟಿಪ್ರಲಯಗಳೆರಡನ್ನೂ ಹೇಳಿರುತ್ತದೆ. ಯಾವದು ಯಾವದರಿಂದ ಉಂಟಾಗುವದೋ, ಯಾವದರಲ್ಲಿ ಪ್ರಲಯವೂ ಆಗುವದೋ, ಅದು ಅದಕ್ಕೆ ಉಪಾದಾನವೆಂದು ಪ್ರಸಿದ್ಧವಾಗಿರುತ್ತದೆ. ಉದಾಹರಣೆಗೆ ಬತ್ತ, ಜವೆಗೋಧಿ -ಮುಂತಾದವುಗಳಿಗೆ ಪೃಥಿವಿಯು (ಉಪಾದಾನವು. ಸೂತ್ರದಲ್ಲಿ) 'ಸಾಕ್ಷಾತ್ತಾಗಿ' ಎಂದು (ಹೇಳಿರುವದು) 'ಆಕಾಶದಿಂದಲೇ' (ಎಂದು) ಮತ್ತೊಂದು ಉಪಾದಾನ ವನ್ನು ತೆಗೆದುಕೊಂಡಿಲ್ಲವೆಂಬುದನ್ನು ತಿಳಿಸುತ್ತದೆ. ಪ್ರತ್ಯಸ್ತಮಯವೆಂಬುದೂ ಉಪಾದಾನವನ್ನುಬಿಟ್ಟರೆ ಮತ್ತೇತರಲ್ಲಿಯೂ ಕಾರ್ಯಕ್ಕೆ (ಆಗುವದು) ಕಂಡಿಲ್ಲ.

1. ಪ್ರಲಯವಾಗುತ್ತದೆ.

## ಆತ್ಮಕೃತೇಃ ಪರಿಣಾಮಾತ್ ‖ ೨೬ ‖

೨೬. ಪರಿಣಾಮದಿಂದ (ಬ್ರಹ್ಮವು) ತನ್ನನ್ನು ತಾನೇ ಮಾಡಿಕೊಂಡಿತೆಂಬುದರಿಂದ (ಅದು ಪ್ರಕೃತಿಯು).

( ಭಾಷ್ಯ )

೩೯೪. ಇತಶ್ಚ ಪ್ರಕೃತಿರ್ಬ್ರಹ್ಮ । ಯತ್ಕಾರಣಂ ಬ್ರಹ್ಮಪ್ರಕ್ರಿಯಾಯಾಂ "ತದಾತ್ಮಾನಂ ಸ್ವಯಮಕುರುತ" (ತೈ. ೨-೭) ಇತಿ ಆತ್ಮನಃ ಕರ್ಮತ್ವಂ ಕರ್ತೃತ್ವಂ ಚ ದರ್ಶಯತಿ । 'ಆತ್ಮಾನಮ್' ಇತಿ ಕರ್ಮತ್ವಮ್ 'ಸ್ವಯಮಕುರುತ' ಇತಿ ಕರ್ತೃತ್ವಮ್ । ಕಥಂ ಪುನಃ ಪೂರ್ವಸಿದ್ಧಸ್ಯ ಸತಃ ಕರ್ತೃತ್ವೇನ ವ್ಯವಸ್ಥಿತಸ್ಯ ಕ್ರಿಯಮಾಣತ್ವಂ ಶಕ್ಯಂ ಸಂಪಾದಯಿತುಮ್? 'ಪರಿಣಾಮಾತ್' ಇತಿ ಬ್ರೂಮಃ । ಪೂರ್ವಸಿದ್ಧೋಽಪಿ ಹಿ ಸನ್ ಆತ್ಮಾ ವಿಶೇಷೇಣ ವಿಕಾರಾತ್ಮನಾ ಪರಿಣಮಯಾಮಾಸ ಆತ್ಮಾನಮ್ ಇತಿ । ವಿಕಾರಾತ್ಮನಾ ಚ ಪರಿಣಾಮೋ ಮೃದಾದ್ಯಾಸು ಪ್ರಕೃತಿಷು ಉಪಲಬ್ಧಃ । 'ಸ್ವಯಮ್' ಇತಿ ಚ ವಿಶೇಷಣಾತ್ ನಿಮಿತ್ತಾನ್ತರಾನಪೇಕ್ಷತ್ವಮಪಿ ಪ್ರತೀಯತೇ । 'ಪರಿಣಾಮಾತ್' ಇತಿ ವಾ ಪೃಥಕ್ಸೂತ್ರಮ್। ತಸ್ಯ ಏಷೋಽರ್ಥಃ । ಇತಶ್ಚ ಪ್ರಕೃತಿರ್ಬ್ರಹ್ಮ । ಯತ್ಕಾರಣಂ ಬ್ರಹ್ಮಣ ಏವ ವಿಕಾರಾತ್ಮನಾ ಪರಿಣಾಮಃ ಸಾಮಾನಾಧಿಕರಣ್ಯೇನ ಆಮ್ನಾಯತೇ --"ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ" (ತೈ. ೨-೬) ಇತ್ಯಾದಿನಾ ಇತಿ ॥

( ಭಾಷ್ಯಾರ್ಥ )

ಈ ಕಾರಣದಿಂದಲೂ ಬ್ರಹ್ಮವು ಪ್ರಕೃತಿಯು, ಏಕೆಂದರೆ ಬ್ರಹ್ಮಪ್ರಕ್ರಿಯೆಯಲ್ಲಿ "ಅದು ತನ್ನನ್ನು ತಾನೇ ಮಾಡಿಕೊಂಡಿತು" (ತೈ. ೨-೭) ಎಂದು ಆತ್ಮನಿಗೆ ಕರ್ಮತ್ವವನ್ನೂ ಕರ್ತೃತ್ವವನ್ನೂ (ಶ್ರುತಿಯಲ್ಲಿ) ತಿಳಿಸಿದೆ. 'ತನ್ನನ್ನು' ಎಂದು ಕರ್ಮತ್ವವನ್ನೂ 'ತಾನೇ ಮಾಡಿಕೊಂಡಿತು' ಎಂದು ಕರ್ತೃತ್ವವನ್ನೂ (ತಿಳಿಸಿದೆ).

(ಆಕ್ಷೇಪ) :- ಮೊದಲೇ ಇದ್ದುಕೊಂಡಿರುವ ಕರ್ತೃವೆಂದು ಗೊತ್ತಾಗಿರುವ (ಬ್ರಹ್ಮಕ್ಕೆ) ಮಾಡಲ್ಪಡುವದೆಂಬುದನ್ನು ಉಂಟುಮಾಡುವದಕ್ಕೆ ಹೇಗೆ ತಾನೆ ಶಕ್ಯ ?

(ಪರಿಹಾರ) : ಪರಿಣಾಮದಿಂದ ಎಂದು ಹೇಳುತ್ತೇವೆ. ಆತ್ಮನು ಮೊದಲೇ ಸಿದ್ಧನಾಗಿರುವನಾದರೂ ವಿಶೇಷವಾದ ಕಾರ್ಯರೂಪದಿಂದ ತನ್ನನ್ನು (ತಾನು) ಮಾರ್ಪಡಿಸಿಕೊಂಡನು. ಆದ್ದರಿಂದ (ಇದು ಸಾಧ್ಯವು). ಕಾರ್ಯ

ರೂಪದಿಂದ ಪರಿಣಾಮವಾಗುವದು ಮಣ್ಣು ಮುಂತಾದ ಪ್ರಕೃತಿಗಳಲ್ಲಿ ಕಂಡಿರುತ್ತದೆ. 'ತಾನೇ' (ಮಾಡಿಕೊಂಡಿತು) ಎಂಬ ವಿಶೇಷಣವಿರುವದರಿಂದ ಮತ್ತೊಂದು ನಿಮಿತ್ತವು ಬೇಕಿಲ್ಲವೆಂದೂ ಗೊತ್ತಾಗುತ್ತದೆ.

ಅಥವಾ **'ಪರಿಣಾಮಾತ್' ಎಂಬುದು ಬೇರೊಂದು ಸೂತ್ರವು.** ಅದಕ್ಕೆ ಇದು ಅರ್ಥವು ; ಈ ಕಾರಣದಿಂದಲೂ ಬ್ರಹ್ಮವು ಪ್ರಕೃತಿಯು ; ಏಕೆಂದರೆ ಬ್ರಹ್ಮಕ್ಕೇ ಕಾರ್ಯರೂಪದಿಂದ ಪರಿಣಾಮವು ಸಾಮಾನಾಧಿಕರಣ್ಯದಿಂದ "ಸತ್ತೂ ತ್ಯತ್ತೂ ಆಯಿತು, ನಿರುಕ್ತವೂ ಅನಿರುಕ್ತವೂ (ಆಯಿತು)" (ತೈ. ೨-೬) ಎಂದು ಮುಂತಾದ (ವಾಕ್ಯ)ದಿಂದ ಪಠಿತವಾಗಿರುತ್ತದೆ.

## ಯೋನಿಶ್ಚ ಹಿ ಗೀಯತೇ ॥ ೨೭ ॥

೨೭. ಯೋನಿಯೆಂದೂ ಹೇಳಲ್ಪಡುತ್ತದೆ.

(ಭಾಷ್ಯ)

೩೯೫. ಇತಶ್ಚ ಪ್ರಕೃತಿರ್ಬ್ರಹ್ಮ। ಯತ್ಕಾರಣಂ ಬ್ರಹ್ಮ ಯೋನಿರಿತ್ಯಪಿ ಪಠ್ಯತೇ ವೇದಾನ್ತೇಷು "ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್" (ಮುಂ. ೩-೧-೩) ಇತಿ, "ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ" (ಮುಂ. ೧-೧-೧೬) ಇತಿ ಚ । ಯೋನಿಶಬ್ದಶ್ಚ ಪ್ರಕೃತಿವಚನಃ ಸಮಧಿಗತೋ ಲೋಕೇ "ಪೃಥಿವೀ ಯೋನಿರೋಷಧಿವನಸ್ಪತೀನಾಮ್"[1] (?) ಇತಿ ; ಸ್ತ್ರೀಯೋನೇರಪಿ ಅಸ್ತ್ಯೇವ ಅವಯುವದ್ವಾರೇಣ ಗರ್ಭಂ ಪ್ರತಿ ಉಪಾದಾನ ಕಾರಣತ್ವಮ್ । ಕ್ವಚಿತ್ ಸ್ಥಾನವಚನೋಽಪಿ ಯೋನಿಶಬ್ದೋ ದೃಷ್ಟಃ – "ಯೋನಿಷ್ಟ ಇನ್ದ್ರ ನಿಷದೇ ಅಕಾರಿ" (ಋ. ಸಂ. ೧-೧೦೪-೧) ಇತಿ। ವಾಕ್ಯಶೇಷಾತ್ ತು ಅತ್ರ ಪ್ರಕೃತಿವಚನತಾ ಪರಿಗೃಹ್ಯತೇ "ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ "(ಮುಂ. ೧-೧-೭) ಇತ್ಯೇವಂಜಾತೀಯಕಾತ್ । ಏವಂ ಪ್ರಕೃತಿತ್ವಂ ಬ್ರಹ್ಮಣಃ ಪ್ರಸಿದ್ಧಮ್ ॥

(ಭಾಷ್ಯಾರ್ಥ)

**ಈ (ಕಾರಣ)ದಿಂದಲೂ ಬ್ರಹ್ಮವು ಪ್ರಕೃತಿಯು ;** ಏಕೆಂದರೆ "ಕರ್ತೃವಾದ ಈಶನಾದ ಬ್ರಹ್ಮಯೋನಿ(ಯಾದ ಪುರುಷನನ್ನು)" (ಮುಂ. ೩-೧-೩) ಎಂದೂ " ಈ ಭೂತಯೋನಿಯನ್ನು ಧೀರರು ಎಲ್ಲೆಲ್ಲಿಯೂ ಕಾಣುತ್ತಾರೆ ". (ಮು. ೧-೧-೬) ಎಂದೂ ವೇದಾಂತಗಳಲ್ಲಿ ಬ್ರಹ್ಮವು ಯೋನಿಯೆಂದು ಕೂಡ

1. ಇಲ್ಲಿ ಯಾವ ವಾಕ್ಯವನ್ನಾದರೂ ಉದಾಹರಿಸಿದೆಯೋ ಇಲ್ಲವೋ ತಿಳಿಯದು.

ಪಠಿತವಾಗಿರುತ್ತದೆ. 'ಪೃಥಿವಿಯು ಗಿಡಮರಗಳಿಗೆ ಯೋನಿಯು' (?) ಎಂದು ಲೋಕದಲ್ಲಿ ಯೋನಿಶಬ್ದವನ್ನು ಪ್ರಕೃತಿವಚನವಾಗಿ ( ಪ್ರಯೋಗಿಸುವದು ) ತಿಳಿದುಬಂದಿರುತ್ತದೆ. ಸ್ತ್ರೀಯೋನಿಯೂ ಅವಯವಗಳ ದ್ವಾರದಿಂದ ಗರ್ಭಕ್ಕೆ ಉಪಾದಾನಕಾರಣವಾಗಿರುತ್ತದೆ. ಒಂದು ಕಡೆಯಲ್ಲಿ "ಇಂದ್ರನೆ, ನಿನಗೆ ಕೂತುಕೊಳ್ಳುವದಕ್ಕೆ ಯೋನಿಯು ಮಾಡಲ್ಪಟ್ಟಿರುತ್ತದೆ" (ಋ. ಸಂ. ೧-೧೦೪-೧) ಎಂದು ಯೋನಿಶಬ್ದವು ಸ್ಥಾನವಾಚಕವಾಗಿರುವದೂ ಕಂಡಿರುತ್ತದೆ. ಆದರೆ ಇಲ್ಲಿ "ಹೇಗೆ ಜೇಡರಹುಳವು ಸೃಷ್ಟಿಮಾಡುತ್ತಲೂ ಹಿಂತೆಗೆದುಕೊಳ್ಳುತ್ತಲೂ ಇರುವದೋ" (ಮುಂ. ೧-೧-೭) ಎಂಬೀ ಜಾತಿಯ ವಾಕ್ಯಶೇಷದಿಂದ (ಈ ಶಬ್ದವು) ಪ್ರಕೃತಿವಾಚಕವೆಂದು ಸ್ವೀಕರಿಸಬೇಕಾಗಿದೆ.

ಈ ರೀತಿಯಲ್ಲಿ ಬ್ರಹ್ಮವು ಪ್ರಕೃತಿಯೆಂದು ಸಿದ್ಧವಾಯಿತು.

## ಈಕ್ಷಾಪೂರ್ವಕಕರ್ತೃತ್ವವಿದ್ದರೂ ಬರಿಯ ನಿಮಿತ್ತವಲ್ಲ

( ಭಾಷ್ಯ )

೩೯೬. ಯತ್ಪುನಃ ಇದಮುಕ್ತಮ್ ಈಕ್ಷಾಪೂರ್ವಕಂ ಕರ್ತೃತ್ವಂ ನಿಮಿತ್ತಕಾರಣೇಷ್ವೇವ ಕುಲಾಲಾದಿಷು ಲೋಕೇ ದೃಷ್ಟಮ್, ನೋಪಾದಾನೇಷು ಇತ್ಯಾದಿ। ತತ್ ಪ್ರತ್ಯುಚ್ಯತೇ— ನ ಲೋಕವತ್ ಇಹ ಭವಿತವ್ಯಮ್ | ನ ಹಿ ಅಯಮ್ ಅನುಮಾನಗಮ್ಯೋಽರ್ಥಃ। ಶಬ್ದಗಮ್ಯತ್ವಾತ್ ತು ಅಸ್ಯಾರ್ಥಸ್ಯ .ಯಥಾಶಬ್ದಮ್ ಇಹ. ಭವಿತವ್ಯಮ್ | ಶಬ್ದಶ್ಚ ಈಕ್ಷಿತುರೀಶ್ವರಸ್ಯ ಪ್ರಕೃತಿತ್ವಂ ಪ್ರತಿಪಾದಯತಿ ಇತ್ಯವೋಚಾಮ | ಪುನಶ್ಚ ಏತತ್ ಸರ್ವಂ ವಿಸ್ತರೇಣ ಪ್ರತಿವಕ್ಷ್ಯಾಮಃ ||

(ಭಾಷ್ಯಾರ್ಥ)

ಇನ್ನು ಈಕ್ಷಾಪೂರ್ವಕವಾಗಿರುವ ಕರ್ತೃತ್ವವು ನಿಮಿತ್ತಕಾರಣವಾಗಿರುವ ಕುಲಾಲಾದಿಗಳಲ್ಲಿಯೇ ಲೋಕದಲ್ಲಿ ಕಂಡಿದೆಯೇ ಹೊರತು ಉಪಾದಾನಗಳಲ್ಲಿ (ಕಂಡುಬರು)ವದಿಲ್ಲ ಎಂಬೀ ( ಪೂರ್ವಪಕ್ಷವನ್ನು ) ಹೇಳಿತ್ತಷ್ಟೆ, ಅದಕ್ಕೆ ಪ್ರತ್ಯುತ್ತರವನ್ನು ಹೇಳುತ್ತೇವೆ. **ಇಲ್ಲಿ ಲೋಕದಲ್ಲಿರುವಂತೆಯೇ ಇರಬೇಕೆಂಬುದಿಲ್ಲ; ಏಕೆಂದರೆ ಈ ಅರ್ಥವು ಅನುಮಾನಗಮ್ಯವಾದದ್ದಲ್ಲ.**[1] **ಈ ಅರ್ಥವು ಶಬ್ದದಿಂದ ತಿಳಿಯಬೇಕಾದದ್ದರಿಂದ ಶಬ್ದಕ್ಕನು**

1. ಅನುಮಾನಗಮ್ಯವಾದದ್ದಾದರೆ ದೃಷ್ಟಬಲದಿಂದ ಕಲ್ಪಿಸಿದ ವ್ಯಾಪ್ತಿಯ ಆಶ್ರಯದಿಂದಲೇ ಅನುಮಿತಿಯುಂಟಾಗುವದರಿಂದ ಆದಕ್ಕೆ ದೃಷ್ಟಾಂತವೇ ಮುಖ್ಯ.

**ಗುಣವಾಗಿಯೇ ಇರಬೇಕು.**[1] ಶಬ್ದವು ಈಕ್ಷಿತೃವಾದ ಈಶ್ವರನಿಗೆ ಪ್ರಕೃತಿತ್ವವನ್ನು ಪ್ರತಿಪಾದಿಸುತ್ತದೆ ಎಂದು ಹೇಳಿರುತ್ತೇವೆ[2] ಮತ್ತೊಮ್ಮೆ[3] ಇದೆಲ್ಲಕ್ಕೂ ವಿಸ್ತಾರವಾಗಿ ಪ್ರತ್ಯುತ್ತರವನ್ನು ಹೇಳುವೆವು.

## ೮. ಸರ್ವವ್ಯಾಖ್ಯಾನಾಧಿಕರಣ

(ಅಣ್ವಾದಿಗಳೂ ಜಗತ್ಕಾರಣವಲ್ಲ)

**ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ || ೨೮ ||**

೨೮. ಇದರಿಂದ ಎಲ್ಲವೂ ವ್ಯಾಖ್ಯಾತವಾದವು, ವ್ಯಾಖ್ಯಾತವಾದವು.

## ಅಣ್ವಾದಿಕಾರಣವಾದಗಳಿಗೂ ಸಾಂಖ್ಯಖಂಡನೆಯು ಹೊಂದುತ್ತದೆ

(ಭಾಷ್ಯ)

೩೯೭. "ಈಕ್ಷತೇರ್ನಾಶಬ್ದಮ್" (೧-೧-೫) ಇತ್ಯಾರಭ್ಯ ಪ್ರಧಾನಕಾರಣವಾದಃ ಸೂತ್ರೈರೇವ ಪುನಃ ಪುನಃ ಆಶಙ್ಕ್ಯ ನಿರಾಕೃತಃ | ತಸ್ಯ ಹಿ ಪಕ್ಷಸ್ಯ ಉಪೋದ್ಬಲಕಾನಿ ಕಾನಿಚಿತ್ ಲಿಙ್ಗಾಭಾಸಾನಿ ವೇದಾನ್ತೇಷು ಆಪಾತೇನ ಮನ್ದಮತೀನ್ ಪ್ರತಿಭಾನ್ತಿ ಇತಿ। ಸ ಚ ಕಾರ್ಯಕಾರಣಾನನ್ಯತ್ವಾಭ್ಯುಪಗಮಾತ್ ಪ್ರತ್ಯಾಸನ್ನೋ ವೇದಾಂತವಾದಸ್ಯ। ದೇವಲಪ್ರಭೃತಿಭಿಶ್ಚ ಕೈಶ್ಚಿತ್ ಧರ್ಮಸೂತ್ರಕಾರೈಃ ಸ್ವಗ್ರನ್ಥೇಷು ಆಶ್ರಿತಃ | ತೇನ ತತ್ಪ್ರತಿಷೇಧೇ ಯತ್ನೋಽತೀವ ಕೃತಃ ನಾಣ್ವಾದಿಕಾರಣವಾದಪ್ರತಿಷೇಧೇ | ತೇಽಪಿ ತು ಬ್ರಹ್ಮಕಾರಣವಾದಪಕ್ಷಸ್ಯ ಪ್ರತಿಪಕ್ಷತ್ವಾತ್ ಪ್ರತಿಷೇದ್ಧವ್ಯಾಃ। ತೇಷಾಮಪಿ ಉಪೋದ್ಬಲಕಂ ವೈದಿಕಂ ಕಿಂಚಿಲ್ಲಿಙ್ಗಮ್ ಆಪಾತೇನ ಮನ್ದಮತೀನ್ ಪ್ರತಿಭಾಯಾತ್ ಇತಿ | ಅತಃ ಪ್ರಧಾನಮಲ್ಲನಿಬರ್ಹಣನ್ಯಾಯೇನ ಅತಿದಿಶತಿ |

1. ಶಬ್ದದಿಂದಲೇ ತಿಳಿಯಬೇಕಾದದ್ದನ್ನು ತರ್ಕದಿಂದ ತಿಳಿಯುವದಕ್ಕಾಗುವದಿಲ್ಲ. ವೇದಾಂತವಾಕ್ಯವು ಅನುಭವಕ್ಕೆ ಅನುಗುಣವಾಗಿ ಹೇಳುವವನ್ನು ಯುಕ್ತಿಯಿಂದ ತಿರಸ್ಕರಿಸುವದು ಸರಿಯೂ ಅಲ್ಲ.

2. ಪ್ರತಿಜ್ಞಾದೃಷ್ಟಾಂತಗಳು ಪ್ರಕೃತಿತ್ವಕ್ಕೆ ಅನುಗುಣವಾಗಿವೆ ಎಂದು ತಿಳಿಸಿದ್ದಾಗಿದೆ.

3. ಮುಂದಿನ ಅಧ್ಯಾಯದಲ್ಲಿ.

ಏತೇನ ಪ್ರಧಾನಕಾರಣವಾದಪ್ರತಿಷೇಧನ್ಯಾಯಕಲಾಪೇನ ಸರ್ವೇ ಅಣ್ವಾದಿಕಾರಣವಾದಾ ಅಪಿ ಪ್ರತಿಷಿದ್ಧತಯಾ ವ್ಯಾಖ್ಯಾತಾ ವೇದಿತವ್ಯಾಃ । ತೇಷಾಮಪಿ ಪ್ರಧಾನವದಶಬ್ದತ್ವಾತ್ ಶಬ್ದವಿರೋಧಿತ್ವಾಚ್ಚ ಇತಿ । 'ವ್ಯಾಖ್ಯಾತಾ ವ್ಯಾಖ್ಯಾತಾ' ಇತಿ ಪದಾಭ್ಯಾಸಃ ಅಧ್ಯಾಯಪರಿಸಮಾಪ್ತಿಂ ದ್ಯೋತಯತಿ ||

( ಭಾಷ್ಯಾರ್ಥ )

'ಈಕ್ಷತೇರ್ನಾಶಬ್ದಮ್' (೧–೧–೫) ಎಂಬ (ಸೂತ್ರ)ದಿಂದ ಹಿಡಿದು ಪ್ರಧಾನಕಾರಣವಾದವನ್ನು ಸೂತ್ರಗಳಿಂದಲೇ[1] ಮತ್ತೆ ಮತ್ತೆ ಆಶಂಕಿಸಿ ನಿರಾಕರಿಸಿದ್ದಾಗಿದೆ. ಏಕೆಂದರೆ ಆ ಪಕ್ಷಕ್ಕೆ ಬಲವನ್ನು ಕೊಡುವ ಕೆಲವು ಲಿಂಗಾಭಾಸಗಳು ವೇದಾಂತಗಳಲ್ಲಿ (ತಟ್ಟನೆ) ಅಲ್ಪಬುದ್ಧಿಯುಳ್ಳವರಿಗೆ ತೋರುತ್ತವೆ.[2] **ಆ (ಪ್ರಧಾನ)ವಾದವು ಕಾರ್ಯಕಾರಣಾನನ್ಯತ್ವವನ್ನು[3] ಅಂಗೀಕರಿಸಿರುವದರಿಂದ ವೇದಾಂತವಾದಕ್ಕೆ ಹತ್ತಿರವಾಗಿರುತ್ತದೆ.**[4] **ದೇವಲನೇ** ಮುಂತಾದ ಧರ್ಮಸೂತ್ರಕಾರರು[5] ತಮ್ಮ ಗ್ರಂಥಗಳಲ್ಲಿ ಇದನ್ನು ಆಶ್ರಯಿಸಿಯೂ (ಇರುತ್ತಾರೆ). ಆದ್ದರಿಂದ ಅದನ್ನು ಖಂಡಿಸುವದರಲ್ಲಿ ಹೆಚ್ಚಾದ ಯತ್ನವನ್ನು ಮಾಡಿದೆಯೇ ಹೊರತು ಅಣ್ವಾದಿಕಾರಣವಾದಗಳನ್ನು[6] ಖಂಡಿಸುವವರಲ್ಲಿ (ಪ್ರಯತ್ನವನ್ನು ಮಾಡ)ಲಿಲ್ಲ.

ಆದರೆ ಬ್ರಹ್ಮಕಾರಣವಾದಕ್ಕೆ ಪ್ರತಿಪಕ್ಷಗಳಾಗಿರುವದರಿಂದ ಅವನ್ನೂ ಖಂಡಿಸಬೇಕು. ಏಕೆಂದರೆ ಅವಕ್ಕೂ ಬಲವನ್ನು ಕೊಡುವ ಯಾವದಾದರೂ ವೈದಿಕಲಿಂಗವು (ತಟ್ಟನೆ) ಅಲ್ಪಬುದ್ಧಿಯವರಿಗೆ ತೋರಬಹುದು. ಆದ್ದರಿಂದ **ಪ್ರಧಾನಮಲ್ಲನಿಬರ್ಹಣನ್ಯಾಯದಿಂದ**[7] ಅತಿದೇಶವನ್ನು ಮಾಡುತ್ತಾರೆ.[8]

1. ಸೂತ್ರಕಾರರು ಪ್ರಧಾನವಾದವನ್ನು ನೇರಾಗಿ ಖಂಡಿಸಿರುತ್ತಾರೆ. ಬರಿಯ ಸೂಚನೆಯಿಂದ ವ್ಯಾಖ್ಯಾನಕಾರರಿಗೆ ಈ ಕೆಲಸವನ್ನು ಬಿಟ್ಟಿಲ್ಲ.

2. ಅವುಗಳನ್ನು ಪರಿಹರಿಸದೆ ಇದ್ದರೆ 'ಲಕ್ಷಣಸಮನ್ವಯಗಳು ಬ್ರಹ್ಮದಲ್ಲಿಯೇ', 'ಗತಿಸಾಮಾನ್ಯವಿದೆ' ಎಂಬುದು ಸಿದ್ಧವಾಗುತ್ತಿರಲಿಲ್ಲ.

3. ಪ್ರಧಾನವೆಂಬ ಕಾರಣವೇ ಮಹದಾದಿಕಾರ್ಯರೂಪವನ್ನು ಪಡೆಯುತ್ತದೆ. ಎಂಬುದು ಸಾಂಖ್ಯರ ಕಾರ್ಯಕಾರಣಾನನ್ಯತ್ವವಾದವು ವೇದಾಂತಿಗಳು ಕಾರ್ಯವು ಕಾರಣಕ್ಕಿಂತ ಬೇರೆಯಾಗಿಲ್ಲವೆನ್ನುತ್ತಾರೆ. ೨–೧–೧೪ರ ಭಾಷ್ಯವನ್ನು ನೋಡಿರಿ.

4. ಸತ್ಕಾರ್ಯವಾದಕ್ಕೆ ಅನುಗುಣವಾಗಿರುವವರಿಂದ ವೇದಾಂತಕ್ಕೆ ಹತ್ತಿರವಾಗಿವೆ.

5. ದೇವಲಧರ್ಮಸೂತ್ರವು ಅಚ್ಚಾಗಿಲ್ಲ.

6. ಅಣುಕಾರಣವಾದ, ಅಸದ್ವಾದ, ಸ್ವಭಾವವಾದ – ಮುಂತಾದವನ್ನು.

7. ಮುಖ್ಯನಾದ ಜಟ್ಟಿಯನ್ನು ಗೆದ್ದರೆ ಅವನ ಶಿಷ್ಯರನ್ನೂ ಗೆದ್ದಂತೆಯೇ ಎಂಬ ನ್ಯಾಯದಿಂದ. 'ಪ್ರಧಾನಮಲ್ಲ' ಎಂಬ ಮಾತನ್ನು ಪ್ರಧಾನಕ್ಕಾಗಿ ಕಾದಾಡುವ 'ಸಾಂಖ್ಯವಾದಿ ಎಂದರ್ಥದಲ್ಲಿಯೂ ಶ್ಲೇಷೆಯಿಂದ ಪ್ರಯೋಗಿಸಿದೆ.

8. ಹಿಂದಿನ ಯುಕ್ತಿಗಳನ್ನು ಅವಕ್ಕೂ ಹೊಂದಿಸುತ್ತಾರೆ.

ಇದರಿಂದ ಎಂದರೆ ಪ್ರಧಾನಕಾರಣವನ್ನು ಖಂಡಿಸುವ ಯುಕ್ತಿಸಮೂಹದಿಂದ ಅಣ್ವಾದಿಕಾರಣವಾದಗಳೆಲ್ಲವನ್ನೂ ಖಂಡಿಸಿದೇವೆಂದು ಹೇಳಿದಂತಾಯಿತೆಂದು ತಿಳಿಯಬೇಕು. ಏಕೆಂದರೆ ಅವೂ ಪ್ರಧಾನವಾದದಂತೆ ಅಶಬ್ದವಾಗಿವೆ, ಶಬ್ದಕ್ಕೆ ವಿರೋಧಿಗಳೂ ಆಗಿವೆ. (ಸೂತ್ರದಲ್ಲಿ) 'ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂದು (ವ್ಯಾಖ್ಯಾತಾ ಎಂಬ) ಪದವನ್ನು ಮತ್ತೆ ಹೇಳಿರುವದು ಅಧ್ಯಾಯ ಪರಿಸಮಾಪ್ತಿಯನ್ನು ತಿಳಿಸುತ್ತದೆ.

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ
ಶ್ರೀಮಚ್ಛಂಕರಭಗವತ್ಪೂಜ್ಯಪಾದಕೃತೌ ಶಾರೀರಕಮೀಮಾಂಸಾಭಾಷ್ಯೇ
ಪ್ರಥಮಾಧ್ಯಾಯಃ



# ಅಧಿಕರಣಗಳ ಸಾರ

## ೧. ಆನುಮಾನಿಕಾಧಿಕರಣ

**ವಿಷಯವೂ ಸಂಶಯವೂ :** 'ಮಹತಃ ಪರಮವ್ಯಕ್ತಮ್' (ಕ. ೧-೩-೧೧) ಎಂಬ ಕಠೋಪನಿಷದ್ವಾಕ್ಯದಲ್ಲಿ ಅವ್ಯಕ್ತಶಬ್ದವು ಪ್ರಧಾನವನ್ನು ಹೇಳುತ್ತದೆಯೆ, ಇಲ್ಲವೆ ?

**ಪೂರ್ವಪಕ್ಷ :** ಸಾಂಖ್ಯಸ್ಮೃತಿಯಲ್ಲಿರುವ ಮಹತ್ತು, ಅವ್ಯಕ್ತ, ಪುರುಷ- ಈ ತತ್ತ್ವಗಳನ್ನು ಅದೇ ಹೆಸರಿನಿಂದ, ಅದೇ ಕ್ರಮದಲ್ಲಿ, ಹೇಳಿರುವದರಿಂದ ಅವ್ಯಕ್ತವು ಪ್ರಧಾನವೇ.

**ಸಿದ್ಧಾಂತ :** ಇಲ್ಲಿ ಅವ್ಯಕ್ತವೆಂಬ ಶಬ್ದಮಾತ್ರವಿದೆ. ಈ ಶಬ್ದವು ಸ್ವತಂತ್ರವಾದ ತ್ರಿಗುಣಾತ್ಮಕಪ್ರಧಾನವನ್ನು ಹೇಳುವದಿಲ್ಲ, ಶರೀರವನ್ನು ಹೇಳುತ್ತದೆ. ಏಕೆಂದರೆ ಹಿಂದೆ "ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು" (ಕ. ೧-೩-೩) ಎಂದು ಮುಂತಾಗಿ ರೂಪಕದಲ್ಲಿ ಹೇಳಿರುವ ಪದಾರ್ಥಗಳನ್ನೇ "ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ" (೧-೩-೧೦) ಎಂದು ಮುಂತಾಗಿರುವ ವಾಕ್ಯದಲ್ಲಿ ಹೇಳಿರುತ್ತದೆ. ಆ ಇಂದ್ರಿಯಾದಿಗಳನ್ನೇ ಇಲ್ಲಿ ಪರಮಪದವನ್ನು ತಿಳಿಸುವದಕ್ಕಾಗಿ ಹೇಳಿರುವದರಿಂದ ಅಲ್ಲಿ ಪ್ರಕೃತವಾಗಿರುವ ಶರೀರವನ್ನೇ ಇಲ್ಲಿ ಅವ್ಯಕ್ತಶಬ್ದದಿಂದ ಹೇಳಿದೆ ಎಂದು ಪರಿಶೇಷನ್ಯಾಯದಿಂದ ತಿಳಿಯಬಹುದಾಗಿದೆ. ಮುಂದೆ ಆ ಪರಮಪದವಾದ ಪರಮಾತ್ಮನನ್ನು ತಿಳಿಯುವದಕ್ಕೆ ಅಧ್ಯಾತ್ಮಯೋಗವನ್ನು ತಿಳಿಸಿರುತ್ತದೆ; ಅಲ್ಲಿಯೂ ಮಹಾನಾತ್ಮಾ ಎಂಬ ಶಬ್ದದಿಂದ ಭೋಕ್ತೃವನ್ನು ಅಥವಾ ಹಿರಣ್ಯಗರ್ಭನ ಬುದ್ಧಿಯನ್ನು ತಿಳಿಸಿದೆ. ಆದ್ದರಿಂದಲೂ ಇಲ್ಲಿ ಅವ್ಯಕ್ತವೆಂದರೆ ಶರೀರವೇ. ನಿಜವಾಗಿ ಅವ್ಯಕ್ತವೆಂದರೆ ಮಹತ್ತಿಗಿಂತ- ಎಂದರೆ ಜೀವನಿಗಿಂತ ಅಥವಾ ಸಮಷ್ಟಿಬುದ್ಧಿಗಿಂತ- ಹೆಚ್ಚಿನದಾದ ಅವಿದ್ಯೆ ಅಥವಾ ಮಾಯೆ. ಪ್ರಕೃತದಲ್ಲಿ ಆ ಅವಿದ್ಯೆಯ ಅಥವಾ ಮಾಯೆಯ ಕಾರ್ಯವಾದ ಶರೀರವನ್ನೇ ಕಾರಣವಾಚಕವಾದ ಅವ್ಯಕ್ತಶಬ್ದದಿಂದ ಹೇಳಿರುತ್ತದೆ. ಅವ್ಯಕ್ತಶಬ್ದವಾಚಕವಾದ ಮಾಯೆಯೇ ಪ್ರಧಾನವಾಗಲಿ ಎನ್ನುವದು ಸರಿಯಲ್ಲ; ಏಕೆಂದರೆ ಪ್ರಧಾನದಂತೆ ಮಾಯೆಯು ಸ್ವತಂತ್ರವಾಗಿರುವದಿಲ್ಲ, ಪರಮಾತ್ಮನ ಅಧೀನವಾಗಿರುತ್ತದೆ. ಅವ್ಯಕ್ತಶಬ್ದವಾಚ್ಯವಾದ ಮಾಯೆಯನ್ನು (ಅಥವಾ ಅವಿದ್ಯೆಯನ್ನು) ಅವಶ್ಯವಾಗಿ ಅಂಗೀಕರಿಸಬೇಕು ; ಏಕೆಂದರೆ ಅದರಿಂದಲೇ ಈಶ್ವರನ ಸ್ರಷ್ಟೃತ್ವವು (ಅಥವಾ ಜೀವರ ಬನ್ಧಮೋಕ್ಷವ್ಯವಹಾರವು) ಸಿದ್ಧವಾಗುತ್ತದೆ. ಆ ಅವ್ಯಕ್ತದ ಕಾರ್ಯದ ಶರೀರವನ್ನೂ ಅಭೇದೋಪಚಾರದಿಂದ ಇಲ್ಲಿ ಅವ್ಯಕ್ತವೆಂದು ಅಂಗೀಕರಿಸಿದೆಯೇ ಹೊರತು ಪ್ರಧಾನವನ್ನಲ್ಲ.

ಸಾಂಖ್ಯರ ಪ್ರಧಾನವು ಜ್ಞೇಯವಾಗಿದೆ; ಇಲ್ಲಿ ಅವ್ಯಕ್ತವನ್ನು ಜ್ಞೇಯವೆಂದಿಲ್ಲ. ಅಶಬ್ದಮಸ್ಪರ್ಶಮ್ ಎಂದು ಮುಂತಾಗಿರುವ ತತ್ತ್ವವನ್ನು ಜ್ಞೇಯವೆಂದು ಇಲ್ಲಿ

ಹೇಳಿರುವದು ನಿಜ; ಆದರೆ ಆ ತತ್ತ್ವವು ಪರಮಾತ್ಮನೇ, ಪ್ರಧಾನವಲ್ಲ. ಇದಲ್ಲದೆ ಅಗ್ನಿ, ಜೀವ, ಪರಮಾತ್ಮ- ಎಂಬ ಮೂರು ವಿಷಯದ ಪ್ರಶ್ನೆಯೂ ಉತ್ತರವೂ ಇದೆ; ಇಲ್ಲಿ ಪ್ರಧಾನವನ್ನು ನಚಿಕೇತನು ಕೇಳಿರುವದಿಲ್ಲವಾದ್ದರಿಂದ ಅದನ್ನು ಯಮನು ಹೇಳಬೇಕಾದದ್ದೂ ಇಲ್ಲ. ಮಹತ್ ಎಂಬ ಶಬ್ದವೂ ಇಲ್ಲಿದೆ, ಆದರೆ ಆತ್ಮಶಬ್ದವೇ ಮುಂತಾದವುಗಳ ಜೊತೆಯಲ್ಲಿರುವದರಿಂದ ಅದು ಸಾಂಖ್ಯರ ಮಹತ್ತತ್ತ್ವವನ್ನು ಹೇಳುವದಿಲ್ಲವೆಂದು ಸ್ಪಷ್ಟವಾಗಿದೆ, ಅದರಂತೆ ಅವ್ಯಕ್ತಶಬ್ದದಿಂದ ಪ್ರಧಾನವನ್ನೂ ಹೇಳಿಲ್ಲವೆಂಬುದು ಯುಕ್ತವಾಗಿದೆ.

**ಪ್ರಯೋಜನ:** ಈ ಪಾದದಲ್ಲಿ ಮೊದಲನೆಯ ಮೂರು ಅಧಿಕರಣಗಳಲ್ಲಿಯೂ ಪ್ರಧಾನವು ವೇದಪ್ರಮಾಣಕವೆಂದು ಸಾಧಿಸುವದು ಪೂರ್ವಪಕ್ಷದ ಗುರಿಯು.

## ೨. ಚಮಸಾಧಿಕರಣ

**ವಿಷಯವೂ ಸಂಶಯವೂ:** "ಅಜಾಮೇಕಾಮ್" (ಶ್ವೇ.೪-೫)ಎಂಬ ಶ್ವೇತಾಶ್ವತರ ವಾಕ್ಯದಲ್ಲಿ ಅಜಾಶಬ್ದದಿಂದ ಹೇಳಿರುವದು ಪ್ರಧಾನವೊ, ಅಲ್ಲವೊ?

**ಪೂರ್ವಪಕ್ಷ:** ಇಲ್ಲಿ ಕೆಂಪು, ಬಿಳುಪು, ಕಪ್ಪು- ಎಂಬ ವಿಶೇಷಣಗಳಿರುವದರಿಂದ ರಜಸ್ಸು, ಸತ್ತ್ವ, ತಮಸ್ಸು- ಎಂಬ ಗುಣಗಳುಳ್ಳ ಪ್ರಧಾನವನ್ನೇ ಹೇಳಿದೆ. ಅದು ಪ್ರಕೃತಿಯು, ವಿಕೃತಿಯಲ್ಲ ಎಂದು ಸಾಂಖ್ಯರು ಅಂಗೀಕರಿಸುತ್ತಾರಾದ್ದರಿಂದ ಅದನ್ನು ಅಜಾ (ಹುಟ್ಟುವದಲ್ಲ) ಎಂದು ಕರೆದಿದೆ. ಅವಿದ್ಯೆಯಿಂದ ಪ್ರಧಾನಸಕ್ತನಾದ ಜೀವನು ಸಂಸಾರವನ್ನು ಹೊಂದುತ್ತಾನೆಂದೂ ವಿವೇಕಿಯಾದ ಜೀವನು ಅದನ್ನು ಬಿಟ್ಟುಬಿಡುತ್ತಾನೆಂದೂ ವರ್ಣಿಸಿದೆ. ಆದ್ದರಿಂದ ಇಲ್ಲಿ ಅಜಾ ಎಂದರೆ ಪ್ರಧಾನವೇ.

**ಸಿದ್ಧಾಂತ:** ಅಜಾ ಎಂಬ ಶಬ್ದವಿದ್ದಮಾತ್ರದಿಂದ ಪ್ರಧಾನವೆಂದು ನಿರ್ಣಯಿಸುವದಕ್ಕಾಗುವದಿಲ್ಲ. "ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ" (ಬೃ.೨-೨-೩) ಎಂಬ ವಾಕ್ಯದಲ್ಲಿರುವ ಚಮಸಶಬ್ದದಂತೆ ಇದೂ ಸಾಮಾನ್ಯವಾಚಕವಾಗಿದೆ. ಅಲ್ಲಿ ವಾಕ್ಯಶೇಷದಿಂದ ಚಮಸವೆಂಬುದು ಶಿರಸ್ಸೆಂದು ಗೊತ್ತಾಗುತ್ತದೆ; ಇಲ್ಲಿ ಛಾಂದೋಗ್ಯದಲ್ಲಿ ಹೇಳಿರುವ ತೇಜೋಽಬನ್ನರೂಪವಾದ ಪ್ರಕೃತಿಯನ್ನೇ ಹೇಳಿದೆ ಎಂಬುದು ತೇಜಆದಿಗಳ ವರ್ಣಗಳಾದ ಶುಕ್ಲಾದಿಗಳನ್ನೇ ಜಗತ್ಕಾರಣವಾದ ಪರಮಾತ್ಮನ ಶಕ್ತಿಗೆ ಹೇಳಿರುವದರಿಂದ ಗೊತ್ತಾಗುತ್ತದೆ. ಶಕ್ತಿಯ ಕಾರ್ಯವಾದ ತೇಜೋಽಬನ್ನಗಳ ಬಣ್ಣವನ್ನು ಲಕ್ಷ್ಯದಲ್ಲಿಟ್ಟು ಶಕ್ತಿಯೂ ಆ ಮೂರು ಬಣ್ಣಗಳುಳ್ಳದ್ದೆಂದು ಹೇಳಿರುವದು ಯುಕ್ತವಾಗಿರುತ್ತದೆ. ತೇಜೋಽಬನ್ನವು ಕಾರ್ಯವಾಗಿರುವದರಿಂದ ಅದನ್ನು ಅಜಾ (ಹುಟ್ಟುವದಲ್ಲ) ಎಂದು ಕರೆಯುವದು ಸರಿಯಲ್ಲ ಎಂದು ಆಕ್ಷೇಪಿಸಬಾರದು. ಆಡಿನ ಹೋಲಿಕೆಯನ್ನು ಕೊಟ್ಟು ಅದನ್ನು ಅಜಾ ಎಂದು ಕರೆದಿರುವದರಿಂದ ಇಲ್ಲಿ ಯಾವ ದೋಷವೂ ಇಲ್ಲ. ಅದನ್ನು ಅವಿವೇಕಿಯಾದ ಜೀವನು ಸೇವಿಸಿ ಸಂಸಾರದಲ್ಲಿ ತೊಳಲುತ್ತಾನೆಂದೂ ವಿವೇಕಿಯಾದವನು ಬಿಟ್ಟು ಮುಕ್ತನಾಗುತ್ತಾನೆಂದೂ ಇಲ್ಲಿ ಹೇಳಿರುತ್ತದೆ. ಮಧುವಲ್ಲದ ಆದಿತ್ಯಾದಿಗಳನ್ನು 'ಮಧು' ಎಂದು ಮುಂತಾಗಿ ಕಲ್ಪಿಸಿರುವಂತೆ ಇಲ್ಲಿ ತೇಜೋಽಬನ್ನಾತ್ಮಕ ಪ್ರಕೃತಿಯನ್ನು 'ಅಜಾ' ಎಂದು ಕಲ್ಪಿಸಿದೆಯಾದ್ದರಿಂದ ಇಲ್ಲಿ ಪ್ರಧಾನವಾದಕ್ಕೆ ಅವಕಾಶವಿಲ್ಲ.

# ೩. ಸಂಖ್ಯೋಪಸಂಗ್ರಹಾಧಿಕರಣ

**ವಿಷಯವೂ ಸಂಶಯವೂ:** "ಯಸ್ಮಿನ್ ಪಞ್ಚ ಪಞ್ಚ ಜನಾಃ" (ಬೃ. ೪-೪-೧೭) ಎಂಬ ಮಂತ್ರದಲ್ಲಿ ಪ್ರಧಾನವಾದಕ್ಕೆ ಅವಕಾಶವಿದೆಯೆ, ಇಲ್ಲವೆ ?

**ಪೂರ್ವಪಕ್ಷ:** ಸಾಂಖ್ಯರು ಇಪ್ಪತ್ತೈದು ತತ್ತ್ವಗಳನ್ನು ಒಪ್ಪಿರುತ್ತಾರೆ: ಇಲ್ಲಿ 'ಪಞ್ಚ ಪಞ್ಚ ಜನಾಃ' ಎಂದಿರುವದರಿಂದ ಇಪ್ಪತ್ತೈದನ್ನೇ ಹೇಳಿದೆ. ಆದ್ದರಿಂದ ಸಾಂಖ್ಯವಾದವೇ ಇದು

**ಸಿದ್ಧಾಂತ:** ಇಲ್ಲಿ ಸಾಂಖ್ಯಪ್ರಕ್ರಿಯೆಯಿಲ್ಲ. ಏಕೆಂದರೆ ಸಾಂಖ್ಯರ ಇಪ್ಪತ್ತೈದು ತತ್ತ್ವವನ್ನು ಐದು ಪಂಚಕಗಳಾಗಿ ವಿಂಗಡಿಸುವದಕ್ಕೆ ಬರುವದಿಲ್ಲ; ಇಲ್ಲಿ ಐದು ಐದು ಎಂದು ಕಂಡುಬರುತ್ತಿವೆ ತತ್ತ್ವಗಳನ್ನು 'ಪಂಚಪಂಚಜನ' ಎಂದರೆ ಅವಯವ ದ್ವಾರವಾಗಿ ಲಕ್ಷಣೆಯಿಂದ ಹೇಳಿದೆ ಎನ್ನಬೇಕಾಗುತ್ತದೆ. ಮುಖ್ಯಾರ್ಥವು ಹೊಂದು ವಾಗ ಲಕ್ಷಣೆಯನ್ನು ಅಂಗೀಕರಿಸುವದು ಸರಿಯಲ್ಲ. ಇದೂ ಅಲ್ಲದೆ 'ಪಞ್ಚಜನಾಃ' ಎಂಬುದು ಸಮಸ್ತಪದವೆಂದು ಭಾಷಿಕಸ್ವರದಿಂದಲೂ ತೈತ್ತಿರೀಯದ 'ಪಞ್ಚಾನಾಂ ತ್ವಾ ಪಞ್ಚಜನಾನಾಮ್' ಎಂಬ ಪ್ರಯೋಗದಿಂದಲೂ ಸ್ಪಷ್ಟವಾಗುತ್ತದೆ. ಆದ್ದರಿಂದ ಐದು ಐದು ಎಂದು ವಿಶೇಷ್ಯವಿಶೇಷಣಭಾವವನ್ನು ಕಲ್ಪಿಸುವದಕ್ಕಾಗುವದಿಲ್ಲ. ಪಞ್ಚ ಜನಾಃ ಎಂಬುದು ಪಞ್ಚಪೂಲೀಶಬ್ದದಂತೆ ಸಮಾಹಾರವನ್ನು ಹೇಳುವದಿಲ್ಲವಾದ್ದರಿಂದಲೂ ಇಲ್ಲಿ ಇಪ್ಪತ್ತೈದು ಎಂಬರ್ಥವು ಸಿಕ್ಕುವದಿಲ್ಲ. ಅಂತೂ ಸಾಂಖ್ಯರ ಇಪ್ಪತ್ತೈದು ತತ್ತ್ವಗಳು ಬೇರೆಬೇರೆಯಾಗಿದ್ದು ಐದು ಪಂಚಕಗಳಾಗುವಂತಿಲ್ಲವಾದ್ದರಿಂದ ಮಂತ್ರ ದಲ್ಲಿರುವದು ಅವುಗಳ ವಿಷಯವೆನ್ನುವದಕ್ಕಿಲ್ಲ.

ಇದೂ ಅಲ್ಲದೆ ಆತ್ಮ, ಆಕಾಶ- ಇವುಗಳನ್ನು ಬಿಟ್ಟೇ ಇಲ್ಲಿ 'ಪಞ್ಚಪಞ್ಚಜನಾಃ' ಎಂದು ಪ್ರಯೋಗಿಸಿದೆ. "ಯಾವ ಆತ್ಮನಲ್ಲಿ ಪಂಚ ಪಂಚಜನರೂ ಆಕಾಶವೂ ಇದೆಯೋ ಅವನನ್ನು ಅರಿತವನು ಅಮೃತನಾಗುವನು" ಎಂಬುದು ಮಂತ್ರದ ಅರ್ಥವು. ಆದ್ದರಿಂದ ಆತ್ಮನೂ ಆಕಾಶವೂ ಸೇರಿದರೆ ಇಪ್ಪತ್ತೇಳಾಗಬೇಕಾಗುವದರಿಂದಲೂ ಇದು ಸಾಂಖ್ಯರ ತತ್ತ್ವಗಳನ್ನು ಹೇಳುವದಿಲ್ಲ.

ಇಲ್ಲಿ ಹೇಳಿರುವ ಪಂಚಜನರು ಎಂಬುದು 'ಸಪ್ತರ್ಷಿಗಳು' ಎಂಬಂತೆ ಸಂಜ್ಞಾರ್ಥಕ ವಾದ ಶಬ್ದವು ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ, ಮನಸ್ಸು- ಎಂಬ ವಾಕ್ಯಶೇಷದಲ್ಲಿರುವ ಪಂಚಜನರನ್ನು ಹೇಳಿದೆ ಎನ್ನುವದೇ ಯುಕ್ತ. ಕಾಣ್ವಪಾಠದಲ್ಲಿ ಅನ್ನ ಎಂಬುದಿಲ್ಲ; ಅಲ್ಲಿ ಜ್ಯೋತಿ ಎಂಬ ತತ್ತ್ವವನ್ನು ಹಿಂದಿನ ವಾಕ್ಯದಿಂದ ಸೇರಿಸಿಕೊಂಡು ಅರ್ಥಮಾಡ ಬಹುದು. ಅಂತೂ ಇಲ್ಲಿ ಪ್ರಧಾನವಾದಕ್ಕೆ ಅವಕಾಶವೇ ಇಲ್ಲ.

# ೪. ಕಾರಣತ್ವಾಧಿಕರಣ

**ವಿಷಯವೂ ಸಂಶಯವೂ:** ಬ್ರಹ್ಮಕ್ಕೆ ಜನ್ಮಾದಿಕಾರಣತ್ವವೂ ಗತಿಸಾಮಾನ್ಯವೂ ಹಿಂದಿನ ಗ್ರಂಥಭಾಗದಲ್ಲಿ ಉಕ್ತವಾಗಿದೆಯಷ್ಟೆ. ಆದ್ದರಿಂದ ಬ್ರಹ್ಮದಲ್ಲಿಯೇ ವೇದಾಂತ ವಾಕ್ಯಗಳ ತಾತ್ಪರ್ಯವಿರುವದೆಂದು ಹೇಳಬಹುದೊ, ಇಲ್ಲವೊ ?

**ಪೂರ್ವಪಕ್ಷ :—** ಹೇಳಕೂಡದು. ಏಕೆಂದರೆ ಸೃಷ್ಟಿಕ್ರಮವನ್ನು ಒಂದೊಂದು ಉಪನಿಷತ್ತಿನಲ್ಲಿ ಒಂದೊಂದು ಬಗೆಯಾಗಿ ಹೇಳಿದೆ. ಸೃಷ್ಟಿಗೆ ಆಕಾಶವು ಮೊದಲೆಂದು ಒಂದು ಕಡೆ, ತೇಜವು ಮೊದಲೆಂದು ಒಂದು ಕಡೆ, ಪ್ರಾಣವು ಮೊದಲೆಂದು ಒಂದು ಕಡೆ, ಯಾವ ಕ್ರಮವೂ ಇಲ್ಲದೆ ಲೋಕಗಳು ಸೃಷ್ಟವಾಗಿವೆ ಎಂದು ಒಂದು ಕಡೆ, ಅಸತ್ತಿನಿಂದ ಸೃಷ್ಟಿಯಾಗಿವೆ ಎಂದು ಒಂದು ಕಡೆ, ತಾನೇ ಜಗತ್ತು ಸೃಷ್ಟಿಯಾಗಿದೆ ಎಂದು ಒಂದು ಕಡೆ- ಹೀಗೆಲ್ಲ ಹೇಳಿರುವದರಿಂದ ಬ್ರಹ್ಮವೇ ಜಗತ್ಕಾರಣವೆಂಬುದಕ್ಕೆ ವೇದಾಂತ ಪ್ರಮಾಣವಿಲ್ಲ. ಆದ್ದರಿಂದ ಸ್ಮೃತಿಯುಕ್ತಿಗಳ ಆಶ್ರಯದಿಂದ ಪ್ರಧಾನಾದಿಕಾರಣವಾದ ವನ್ನು ಒಪ್ಪಬೇಕು.

**ಸಿದ್ಧಾಂತ :—** ಕಾರ್ಯದ ವಿಷಯದಲ್ಲಿ ವಿಗಾನವಿದ್ದರೂ ಕಾರಣವು ಬ್ರಹ್ಮವೇ ಎಂಬ ವಿಷಯದಲ್ಲಿ ಗತಿಸಾಮಾನ್ಯವಿದೆ. ಇದನ್ನೇ ಪ್ರತಿವೇದಾಂತದಲ್ಲಿಯೂ ತಾತ್ಪರ್ಯ ದಿಂದ ಹೇಳಿದೆ. ಕಾರ್ಯವಿಷಯದಲ್ಲಿ ವಿಗಾನವಿದ್ದ ಮಾತ್ರದಿಂದ ಕಾರಣವಾದ ಬ್ರಹ್ಮ ವನ್ನು ತಾತ್ಪರ್ಯದಿಂದ ವೇದಾಂತವಾಕ್ಯಗಳು ಹೇಳುತ್ತಿರುವದನ್ನು ಅಲ್ಲಗಳೆಯುವದು ಯುಕ್ತವಲ್ಲ. ಇದಲ್ಲದೆ ಕಾರ್ಯವಿಷಯದಲ್ಲಿಯೂ ವಿಗಾನವಿಲ್ಲವೆಂಬುದನ್ನು ಮುಂದೆ ಸೂತ್ರಕಾರರು ತೋರಿಸಿಕೊಡುತ್ತಾರೆ. ಆ ವಿಷಯದಲ್ಲಿ ಒಂದು ವೇಳೆ ವಿಗಾನವಿದ್ದರೂ ಬಾಧಕವಿಲ್ಲ. ಏಕೆಂದರೆ ಸೃಷ್ಟಿಜ್ಞಾನದಿಂದ ಯಾವ ಫಲವಾದರೂ ಆಗುವದೆಂದು ಶ್ರುತಿ ಯಲ್ಲಿ ಹೇಳಿರುವದಿಲ್ಲ. ಸೃಷ್ಟಿಯನ್ನು ಬ್ರಹ್ಮಜ್ಞಾನಕ್ಕೇ ಉಪಾಯವಾಗಿ ಹೇಳಿರುತ್ತದೆ. ಬ್ರಹ್ಮಜ್ಞಾನದಿಂದಲಾದರೆ ಪರಮಪುರುಷಾರ್ಥವುಂಟಾಗುವದೆಂದು ಶ್ರುತಿಯಲ್ಲಿ ಹೇಳಿರು ತ್ತದೆ; ಅದು ಅನುಭವಕ್ಕೆ ಬರುವ ಫಲವೂ ಆಗಿರುತ್ತದೆ.

ಅಸತ್ತು ಕಾರಣವೆಂದು ಶ್ರುತಿಯಲ್ಲಿ ಹೇಳಿಲ್ಲ; ಕೆಲವು ಕಡೆಯಲ್ಲಿ ಅಸದ್ವಾದ ವನ್ನು ಖಂಡಿಸಿದೆ. ಇನ್ನು ಕೆಲವು ಕಡೆಗಳಲ್ಲಿ ಅವ್ಯಾಕೃತವನ್ನೇ ಅಸತ್ತೆಂದು ಕರೆದಿದೆ. ಜಗತ್ತು ನಾಮರೂಪಗಳಾಗಿ ತಾನೇ ವ್ಯಾಕೃತವಾಯಿತು ಎಂದು ಶ್ರುತಿಯಲ್ಲಿ ಹೇಳಿರುವ ಕಡೆಯಲ್ಲಿ ವ್ಯಾಕರಣಕರ್ತೃವಾದ ಈಶ್ವರನನ್ನು ಇಟ್ಟುಕೊಂಡೇ ಹಾಗೆಂದು ಹೇಳಿರು ತ್ತದೆ.

ಆದ್ದರಿಂದ ಬ್ರಹ್ಮಕಾರಣವಾದವು ಶ್ರುತಿಸಿದ್ಧವಾಗಿದೆ; ಬ್ರಹ್ಮದ ವಿಷಯದಲ್ಲಿ ಶ್ರುತಿಗಳ ಗತಿಸಾಮಾನ್ಯವೂ ಇದೆ

## ೫. ಬಾಲಾಕ್ಯಧಿಕರಣ

**ವಿಷಯವೂ ಸಂಶಯವೂ :** "ಯೋ ವೈ ಏತೇಷಾಂ ಪುರುಷಾಣಾಂ ಕರ್ತಾ ಯಸ್ಯ ವೈ ತತ್ ಕರ್ಮ ಸ ವೇದಿತವ್ಯಃ" (ಕೌ. ೪-೧೯) ಎಂಬ ವಾಕ್ಯದಲ್ಲಿ ಜ್ಞೇಯ ವೆಂದು ಹೇಳಿರುವದು ಜೀವನನ್ನೋ, ಪ್ರಾಣನನ್ನೋ, ಪರಮಾತ್ಮನನ್ನೋ ?

**ಪೂರ್ವಪಕ್ಷ :** ಕರ್ಮವೆಂದರೆ ಚಲನೆಯು. ಇದು ಪ್ರಾಣಕ್ಕೆ ಹೊಂದುತ್ತದೆ ಆದಿತ್ಯಾದಿಪುರುಷರಿಗೆ ಪ್ರಾಣನೂ ಕರ್ತನಾಗಬಹುದು. ಸುಷುಪ್ತಿಯಲ್ಲಿ ಜೀವನು ಪ್ರಾಣನೊಡನೆ ಒಂದಾಗುತ್ತಾನೆ ಎಂದು ಪ್ರಾಣಶಬ್ದವಿದೆ. ಅಥವಾ ಜೀವನಿಗೆ ಧರ್ಮಾ ಧರ್ಮರೂಪವಾದ ಕರ್ಮವುಂಟು; ಅವನು ಭೋಕ್ತೃವಾದ್ದರಿಂದ ಭೋಗೋಪ

ಕರಣವಾಗಿರುವ ಪುರುಷರ ಕರ್ತೃವೂ ಆಗಬಹುದು. ನಿದ್ರಿಸುತ್ತಿದ್ದ ಪುರುಷನನ್ನು ಎಬ್ಬಿಸಿ ಪ್ರಾಣನಿಗಿಂತ ಬೇರೆಯಾದ ಭೋಕ್ತೃವನ್ನು ಅಜಾತಶತ್ರುವು ತೋರಿಸಿಕೊಟ್ಟನೆಂದಿರುವದರಿಂದ ಇದು ಜೀವನೇ ಎನ್ನಬಹುದು. ಇವನು ಪ್ರಾಣಧಾರಣೆಮಾಡಿಕೊಂಡಿರುವದರಿಂದ ಪ್ರಾಣನೆಂದೂ ಕರೆಯಬಹುದು. ಅಂತೂ ಜೀವಮುಖ್ಯಪ್ರಾಣರಲ್ಲಿ ಒಬ್ಬನು ಪುರುಷರ ಕರ್ತನು; ಪರಮಾತ್ಮನಲ್ಲ, ಏಕೆಂದರೆ ಇಲ್ಲಿ ಪರಮಾತ್ಮಲಿಂಗವೇ ಇಲ್ಲ.

ಸಿದ್ಧಾಂತ:- ಇಲ್ಲಿ ಉಪಕ್ರಮದಲ್ಲಿ 'ಬ್ರಹ್ಮವನ್ನು ಹೇಳುತ್ತೇನೆ' ಎಂದು ಬಾಲಾಕಿ ಪ್ರಾರಂಭಿಸಿರುತ್ತಾನೆ; 'ಬ್ರಹ್ಮವನ್ನು ಹೇಳುತ್ತೇನೆಂದು ಸುಳ್ಳುಹೇಳಿದೆಯಲ್ಲ!' ಎಂದು ಅಜಾತಶತ್ರು ಹಂಗಿಸಿರುತ್ತಾನೆ, ಆಮೇಲೆ ಪುರುಷರ ಕರ್ತೃವನ್ನು ಹೇಳಿರುತ್ತಾನೆ. ಆದ್ದರಿಂದ ಉಪಕ್ರಮದ ಬಲದಿಂದ ಇದು ಬ್ರಹ್ಮವೇ ಆಗಿರಬೇಕೆಂದು ನಿಶ್ಚಯವಾಗುತ್ತದೆ. ಆದಿತ್ಯಾದಿ ಪುರುಷರ ಕರ್ತೃ ಎಂಬುದು ಪರಮೇಶ್ವರನಿಗೇ ಒಪ್ಪುತ್ತದೆ. 'ಇದು ಯಾರ ಕರ್ಮವೋ' ಎಂದಿರುವದು ಚಲನರೂಪವಾದ ಅಥವಾ ಧರ್ಮಾಧರ್ಮರೂಪವಾದ ಕರ್ಮವಲ್ಲ; ಮಾಡಲ್ಪಡುವ ಜಗದ್ರೂಪವಾದ ಕರ್ಮವು. ಈಶ್ವರನು ಈ ಪುರುಷರಿಗೆ- ಅಥವಾ ಇವರಿಗೇ ಏಕೆ? ಇಡಿಯ ಜಗತ್ತಿಗೇ— ಕರ್ತೃ ಎಂದು ಅಜಾತಶತ್ರು ಹೇಳಿರುತ್ತಾನೆ.

ಜೀವಮುಖ್ಯಪ್ರಾಣಲಿಂಗಗಳೂ ಇಲ್ಲವೆ?- ಎಂದರೆ ಮೂರು ಬೇರೆಬೇರೆಯ ಉಪಾಸನೆಗಳನ್ನು ಇಲ್ಲಿ ಹೇಳಿದೆ ಎಂದು ಒಪ್ಪಬೇಕಾಗುವದರಿಂದ ಇದು ಸರಿಯಲ್ಲ ಉಪಕ್ರಮೋಪಸಂಹಾರಗಳಿಂದ ಇದು ಬ್ರಹ್ಮವಿಷಯವೇ ಎಂದು ನಿರ್ಣಯವಾಗುತ್ತದೆ. ಆದ್ದರಿಂದ ಇಲ್ಲಿರುವ ಪ್ರಾಣಶಬ್ದವು ಬ್ರಹ್ಮಪದವು. ಜೀವಲಿಂಗವು ಬ್ರಹ್ಮಾಭೇದಾಭಿಪ್ರಾಯದಿಂದ ಬ್ರಹ್ಮಕ್ಕೇ ಅನ್ವಯಿಸತಕ್ಕದ್ದು. ಅಥವಾ ಇಲ್ಲಿರುವ ಜೀವಪರಾಮರ್ಶವು ಬ್ರಹ್ಮಜ್ಞಾನಕ್ಕಾಗಿಯೇ ಎಂಬುದು "ಈ ಪುರುಷನು ಎಲ್ಲಿ ಮಲಗಿದ್ದನು, ಎಲ್ಲಿ ಹೀಗೆ ಇರುತ್ತಿದ್ದನು, ಎಲ್ಲಿಂದ ಹೀಗೆ ಬಂದನು?" ಎಂಬ ಪ್ರಶ್ನೆಯಿಂದಲೂ "ಸುಷುಪ್ತಿಯಲ್ಲಿ ಈ ಪ್ರಾಣನಲ್ಲಿಯೇ ಒಂದಾಗುತ್ತಾನೆ, ಈ ಆತ್ಮನಿಂದಲೇ ಪ್ರಾಣಾದಿಗಳು ಹೊರಟು ಬರುತ್ತಾರೆ"- ಎಂಬ ಪ್ರತಿವಚನದಿಂದಲೂ ಸ್ಪಷ್ಟವಾಗುತ್ತದೆ. ಆದ್ದರಿಂದ ಸುಷುಪ್ತಿಯಲ್ಲಿ ಪ್ರಾಣಜೀವರುಗಳಿಗಿಂತ ವ್ಯತಿರಿಕ್ತವಾದ ಬ್ರಹ್ಮದಲ್ಲಿಯೇ ಸೇರಿಕೊಂಡಿದ್ದು ಅದರಿಂದಲೇ ಎಲ್ಲವೂ ಎಚ್ಚರದಲ್ಲಿ ಹೊರಕ್ಕೆ ಬರುತ್ತದೆ ಎಂಬ ವೇದಾಂತಸಿದ್ಧಾಂತವನ್ನೇ ಇಲ್ಲಿ ಹೇಳಿರುತ್ತದೆ ಎಂದು ತಿಳಿಯಬೇಕು.

## ೬. ವಾಕ್ಯಾನ್ವಯಾಧಿಕರಣ

**ವಿಷಯವೂ ಸಂಶಯವೂ:** ಮೈತ್ರೇಯೀಬ್ರಾಹ್ಮಣದಲ್ಲಿ "ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ" ಎಂದು ಮುಂತಾಗಿರುವ ವಾಕ್ಯವಿದೆ. ಅಲ್ಲಿ "ಆತ್ಮನ ಕಾಮಕ್ಕಾಗಿಯೇ ಎಲ್ಲವೂ ಪ್ರಿಯವಾಗುತ್ತದೆ. ಆತ್ಮನೇ ದ್ರಷ್ಟವ್ಯನು, ಶ್ರೋತವ್ಯನು, ಮಂತವ್ಯನು, ನಿದಿಧ್ಯಾಸಿತವ್ಯನು; ಎಲೆ ಮೈತ್ರೇಯಿ, ಆತ್ಮನ ದರ್ಶನದಿಂದ, ಶ್ರವಣದಿಂದ, ಮತಿಯಿಂದ, ವಿಜ್ಞಾನದಿಂದ- ಇದೆಲ್ಲವೂ ವಿದಿತವಾಗುವದು" (ಬೃ. ೨-೪-೫) ಎಂದು ಹೇಳಿರುತ್ತದೆ. ಈ ವಾಕ್ಯವು ವಿಜ್ಞಾನಾತ್ಮವಿಷಯವೋ, ಪರಮಾತ್ಮವಿಷಯವೋ?

**ಪೂರ್ವಪಕ್ಷ:** ಪ್ರಿಯಸಂಸೂಚಿತವಾದ ಭೋಕ್ತೃವಾದ ಆತ್ಮನನ್ನೇ ಉಪಕ್ರಮಿಸಿ ಈ ಆತ್ಮದರ್ಶನಾದಿಗಳನ್ನು ಹೇಳಿರುವದರಿಂದ ವಿಜ್ಞಾನಾತ್ಮನನ್ನೇ ಹೇಳಿದೆ ಎನ್ನಬೇಕು. "ಈ ಮಹದ್ಭೂತವು ಅನಂತವು, ಅಪಾರವು, (ಇದು) ಈ ಭೂತಗಳೊಳಗಿಂದ ಎದ್ದು ಅವುಗಳನ್ನೇ ಅನುಸರಿಸಿ ನಾಶವಾಗುತ್ತದೆ'' ಎಂದು ವಿಜ್ಞಾತೃಸ್ವರೂಪವನ್ನೇ ಹೇಳಿದೆ. ''ಎಲೆ, ವಿಜ್ಞಾತೃವನ್ನು ಏತರಿಂದ ಅರಿತಾನು ?" ಎಂದು ಕರ್ತೃವಾಚಕ ತೃಚ್ಪ್ರತ್ಯಯದ ವಿಜ್ಞಾತೃಶಬ್ದವನ್ನು ಉಪಯೋಗಿಸಿರುವದರಿಂದಲೂ ಇದು ವಿಜ್ಞಾನಮಯನೆಂದು ಗೊತ್ತಾಗುತ್ತದೆ. ಆದಕಾರಣ ವಿಜ್ಞಾನಾತ್ಮನು ಭೋಕ್ತೃವಾಗಿರುವದರಿಂದಲೂ ಭೋಕ್ತೃವಿಗಾಗಿಯೇ ಭೋಗ್ಯವೆಲ್ಲವೂ ಇದ್ದುಕೊಂಡಿರುವದರಿಂದಲೂ ಆತ್ಮವಿಜ್ಞಾನದಿಂದ ಎಲ್ಲವನ್ನೂ ಅರಿತುಕೊಂಡಂತಾಗುವದೆಂದು ಹೇಳಿದೆ ಎನ್ನಬೇಕು.

**ಸಿದ್ಧಾಂತ:** ಈ ವಾಕ್ಯದ ಅವಯವಗಳೆಲ್ಲ ಪರಮಾತ್ಮನಲ್ಲಿಯೇ ಅನ್ವಿತವಾಗಿರುವದರಿಂದ ಇದು ಪರಮಾತ್ಮೋಪದೇಶವೇ. ಹೇಗೆಂದರೆ (೧) ಯಾಜ್ಞವಲ್ಕ್ಯನು ವಿತ್ತದಿಂದ ಅಮೃತತ್ವವು ಸಿಕ್ಕುವ ಆಶೆಯಿಲ್ಲವೆಂದು ಹೇಳಲು ಅಮೃತತ್ವಕಾರಣವನ್ನೇ ಹೇಳು ಎಂದು ಮೈತ್ರೇಯಿ ಕೇಳಿರುತ್ತಾಳೆ. ಆದ್ದರಿಂದ ಇದು ಪರಮಾತ್ಮವಿಚಾರ. (೨) ಆತ್ಮವಿಜ್ಞಾನದಿಂದ ಸರ್ವವನ್ನೂ ತಿಳಿದಂತಾಗುವದೆಂದು ಯಾಜ್ಞವಲ್ಕ್ಯನು ಹೇಳಿರುವದು ಪರಮಾತ್ಮನ ವಿಷಯದಲ್ಲಿಯೇ ಮುಖ್ಯಾರ್ಥದಿಂದ ಹೊಂದುತ್ತದೆ. (೩) ಇದೆಲ್ಲವೂ ಈ ಆತ್ಮನೇ ಎಂದು ಜಗತ್ತೆಲ್ಲವೂ ಆತ್ಮನಿಗಿಂತ ಬೇರೆಯಿಲ್ಲವೆಂದು ಹೇಳಿದೆ; ದುಂದುಭ್ಯಾದಿದೃಷ್ಟಾಂತಗಳಿಂದ ಇದನ್ನೇ ಗಟ್ಟಿಗೊಳಿಸಿವೆ. (೪) ನಾಮರೂಪಕರ್ಮಾತ್ಮಕವಾದ ಋಗ್ವೇದಾದಿಜಗತ್ತು ಈ ಆತ್ಮನ ಉಸಿರೆಂದು ಹೇಳಿದೆ. (೫) ವಿಷಯ, ಇಂದ್ರಿಯ, ಅಂತಃಕರಣ- ಇವೆಲ್ಲವೂ ಸೇರಿದ ಜಗತ್ತು ಅನಂತರವೂ ಅಬಾಹ್ಯವೂ ಆಗಿರುವ ಪರಿಪೂರ್ಣವಾದ ಒಂದರಲ್ಲಿ ಲಯವಾಗುವದೆಂದು ಹೇಳಿರುತ್ತದೆ.

ಇಲ್ಲಿ ಪ್ರಿಯಸಂಸೂಚಿತನಾದ ಜೀವನ ಉಪಕ್ರಮವಿದೆಯಲ್ಲ !- ಎಂಬ ಶಂಕೆಗೆ ಮೂರು ಜನ ಆಚಾರ್ಯರು ಮೂರು ವಿಧವಾಗಿ ಸಮಾಧಾನವನ್ನು ಕೊಟ್ಟಿರುತ್ತಾರೆ. (೧) ಏಕವಿಜ್ಞಾನದಿಂದ ಸರ್ವವಿಜ್ಞಾನವಾಗುವದು, ಇದೆಲ್ಲವೂ ಆತ್ಮನೇ ಎಂಬ ಪ್ರತಿಜ್ಞೆಯ ಸಿದ್ಧಿಗಾಗಿ ಜೀವಬ್ರಹ್ಮರ ಅಭೇದಾಂಶವನ್ನು ಉಪಕ್ರಮದಲ್ಲಿ ಹೇಳಿದೆ ಎಂದು ಆಶ್ಮರಥ್ಯನು ; (೨) ಜ್ಞಾನಧ್ಯಾನಗಳಿಂದ ಸಂಸ್ಕೃತನಾದ ಜೀವನು ಸತ್ತಬಳಿಕ ಪರಮಾತ್ಮನಲ್ಲಿ ಐಕ್ಯವನ್ನು ಪಡೆಯುವನಾದ್ದರಿಂದ ಹೀಗೆ ಉಪಕ್ರಮಿಸಿದೆ ಎಂದು ಔಡುಲೋಮಿ; (೩) ಪರಮಾತ್ಮನೇ ಈಗಲೂ ಅವಿದ್ಯೆಯಿಂದ ಜೀವರೂಪನಾಗಿ ಕಾಣುತ್ತಿರುವನಾದ್ದರಿಂದ ಹೀಗೆಂದು ಉಪಕ್ರಮಿಸಿದೆ ಎಂದು ಕಾಶಕೃತ್ಸ್ನ. ಈ ಮೂರರಲ್ಲಿ ಕೊನೆಯದೇ ವೇದಾಂತಸಿದ್ಧಾಂತವು ; ಏಕೆಂದರೆ ಹಾಗೆ ಒಪ್ಪದಿದ್ದರೆ ಜ್ಞಾನದಿಂದ ಮೋಕ್ಷವೆಂಬುದನ್ನೂ ಮೋಕ್ಷವು ನಿತ್ಯವೆಂಬುದನ್ನೂ ಆತ್ಮನ ಸ್ವಭಾವವೇ ಎಂಬುದನ್ನೂ ತಿರಸ್ಕರಿಸಬೇಕಾಗುವದು.

## ೭. ಪ್ರಕೃತ್ಯಧಿಕರಣ

**ವಿಷಯವೂ ಸಂಶಯವೂ :** ಬ್ರಹ್ಮವು ಜಗತ್ಕಾರಣವು ಎಂದು ಹೇಳುವ ವಾಕ್ಯಗಳು ಬರಿಯ ನಿಮಿತ್ತಕಾರಣವನ್ನು ಹೇಳುವವೊ, ಅಥವಾ ಉಪಾದಾನಕಾರಣವನ್ನು ಹೇಳುವವೊ ?

**ಪೂರ್ವಪಕ್ಷ:** ಬರಿಯ ನಿಮಿತ್ತಕಾರಣವನ್ನೇ ಹೇಳುತ್ತವೆ. ಏಕೆಂದರೆ ಬ್ರಹ್ಮವು ಕುಂಬಾರನೇ ಮುಂತಾದವರಂತೆ ಯೋಚಿಸಿ ಸೃಷ್ಟಿಸಿತು ಎಂದು ಶ್ರುತಿಯಲ್ಲಿ ಹೇಳಿದೆ, ಒಂದು ಕ್ರಿಯೆಗೆ ಅನೇಕ ಕಾರಕಗಳು ಬೇಕೆಂಬುದು ಲೋಕದಲ್ಲಿ ಕಂಡಿದೆ. ಈಶ್ವರರಾದ ರಾಜವೈವಸ್ವತನೇ ಮುಂತಾದವರು ನಿಮಿತ್ತಕಾರಣರಾಗಿರುವದರಿಂದ ಪರಮೇಶ್ವರನೂ ನಿಮಿತ್ತಕಾರಣವಾಗಿರಬೇಕು. ಕಾರ್ಯವು ತನ್ನ ಉಪಾದಾನಕಾರಣಕ್ಕೆ ಸದೃಶವಾಗಿರಬೇಕು. ಪ್ರಕೃತದಲ್ಲಿ ಕಾರ್ಯವಾದ ಜಗತ್ತು ಸಾವಯವ, ಅಚೇತನ, ಅಶುದ್ಧ; ಅದಕ್ಕೆ ನಿರವಯವವೂ ಚೇತನವೂ ಶುದ್ಧವೂ ಆಗಿರುವ ಬ್ರಹ್ಮವು ಉಪಾದಾನಕಾರಣವಾಗಲಾರದು. ಆದ್ದರಿಂದ ಪ್ರಧಾನವೇ ಮುಂತಾದವುಗಳಲ್ಲಿ ಒಂದು ಉಪಾದಾನಕಾರಣವೆಂದೂ ಬ್ರಹ್ಮವು ನಿಮಿತ್ತಕಾರಣವೆಂದೂ ಒಪ್ಪುವದು ಯುಕ್ತ.

**ಸಿದ್ಧಾಂತ:** ಬ್ರಹ್ಮವು ಉಪಾದಾನವೂ ಆಗಿದೆ. ಏಕೆಂದರೆ ಒಂದನ್ನು ಅರಿತರೆ ಎಲ್ಲವನ್ನೂ ಅರಿತಂತೆ ಆಗುವದೆಂಬ ಪ್ರತಿಜ್ಞೆಯೂ ಮಣ್ಣು, ಮಡಕೆ- ಮುಂತಾದವುಗಳ ದೃಷ್ಟಾಂತವೂ ಶ್ರುತಿಯಲ್ಲಿವೆ. ಇದು ಉಪಾದಾನಕಾರಣಕ್ಕೇ ಹೊಂದುತ್ತದೆ. ಆದ್ದರಿಂದ ಬ್ರಹ್ಮವು ಉಪಾದಾನವು. ಆದರೆ ಜಗತ್ತನ್ನು ಸೃಷ್ಟಿಸುವಾಗ ಬ್ರಹ್ಮವು- ಮಣ್ಣು, ಚಿನ್ನ ಮುಂತಾದವುಗಳಂತೆ- ಮತ್ತೊಬ್ಬ ಅಧಿಷ್ಠಾತೃವನ್ನು ಬಯಸಿತೆಂದು ಶ್ರುತಿಯಲ್ಲಿಲ್ಲವಾದ್ದರಿಂದ ಅದು ನಿಮಿತ್ತವೂ ಆಗಿರಬೇಕು. ಬ್ರಹ್ಮವು ಯೋಚಿಸಿನೋಡಿ ಎಲ್ಲವೂ ಆಯಿತೆಂದು ಹೇಳಿರುವದರಿಂದಲೂ ಅದರಿಂದಲೇ ಜಗತ್ತಿನ ಸೃಷ್ಟಿಯೂ ಅದರಲ್ಲಿಯೇ ಪ್ರಲಯವೂ ಆಗುವದೆಂದಿರುವದರಿಂದಲೂ ಬ್ರಹ್ಮವು ತನ್ನನ್ನು ತಾನೇ ಮಾಡಿಕೊಂಡಿತು ಎಂದು ಹೇಳಿರುವದರಿಂದಲೂ ಅದು ಜಗತ್ತಿಗೆ ಯೋನಿ ಎಂದು ಹೇಳಿರುವದರಿಂದಲೂ ಬ್ರಹ್ಮವು ಜಗತ್ತಿಗೆ ಉಪಾದಾನವೂ ಆಗಿದೆ ಎಂದು ಒಪ್ಪಬೇಕು. ಪೂರ್ವಪಕ್ಷದಲ್ಲಿ ಹೇಳಿರುವ ಯುಕ್ತಿಗಳು ಶ್ರುತಿವಿರುದ್ಧವಾಗಿರುವದರಿಂದ ಒಪ್ಪತಕ್ಕವಲ್ಲ.

## ೮. ಸರ್ವವ್ಯಾಖ್ಯಾನಾಧಿಕರಣ

**ವಿಷಯವೂ ಸಂಶಯವೂ:** ಜಗತ್ತಿಗೆ ಅಣುವೇ ಮುಂತಾದವು ಕಾರಣವೆಂಬುದು ಶ್ರುತಿಸಿದ್ಧವೆ, ಅಲ್ಲವೆ?

**ಪೂರ್ವಪಕ್ಷ:** ಅವಕ್ಕೂ ಶ್ರುತಿಲಿಂಗಗಳಿರುವದರಿಂದ ಅವೂ ಕಾರಣವಾಗಬಹುದು.

**ಸಿದ್ಧಾಂತ:** ಅನೇಕ ವೈದಿಕಲಿಂಗಗಳು ಇರುವಂತೆ ತೋರುವ, ಸ್ಮೃತಿಕಾರರೂ ಕೆಲವಂಶಗಳಲ್ಲಿ ಒಪ್ಪಿರುವ ಪ್ರಧಾನಕಾರಣವಾದವೇ ಶ್ರುತ್ಯನುಸಾರಿಯಲ್ಲವೆಂದು ನಿರಾಕರಿಸಿದ್ದಾಗಿದೆ. ಹೀಗಿರುವಲ್ಲಿ ಯಾವ ಶಬ್ದಪ್ರಮಾಣವೂ ಇಲ್ಲದ, ವೇದವಿರುದ್ಧವೇ ಆಗಿರುವ, ಯಾವ ಸ್ಮೃತಿಕಾರರೂ ಅಂಗೀಕರಿಸದ, ಆ ಅಣ್ವಾದಿಕಾರಣವಾದಗಳು ಶ್ರುತಿಸಿದ್ಧವಲ್ಲವೆಂಬುದನ್ನು ಹೇಳತಕ್ಕದ್ದೇನಿದೆ? ಅವುಗಳನ್ನು ಸಾಂಖ್ಯಖಂಡನೆಯಿಂದಲೇ ಖಂಡಿಸಿದಂತೆ ಆಗಿದೆ. ಆದ್ದರಿಂದ ಬ್ರಹ್ಮವೇ ಜಗತ್ಕಾರಣವು; ಅದರಲ್ಲಿಯೇ ಗತಿಸಾಮಾನ್ಯವಿದೆ- ಎಂಬುದು ನಿರಾತಂಕವಾಗಿದೆ.

---

# ಎರಡನೆಯ ಅಧ್ಯಾಯ- ಒಂದನೆಯ ಪಾದ

(ವೇದಾಂತವು ಸಾಂಖ್ಯಾದಿಸ್ಮೃತಿಯುಕ್ತಿಗಳಿಗೆ
ವಿರುದ್ಧವೆಂಬ ಶಂಕೆಯ ಪರಿಹಾರ)

## ಎರಡನೆಯ ಅಧ್ಯಾಯದ ಸಂಬಂಧ

(ಭಾಷ್ಯ)

೩೯೮. ಪ್ರಥಮೇ ಅಧ್ಯಾಯೇ ಸರ್ವಜ್ಞಃ ಸರ್ವೇಶ್ವರೋ ಜಗತಃ ಉತ್ಪತ್ತಿಕಾರಣಮ್ ಮೃತ್ಸುವರ್ಣಾದಯ ಇವ ಘಟರುಚಕಾದೀನಾಮ್ । ಉತ್ಪನ್ನಸ್ಯ ಜಗತಃ ನಿಯನ್ತೃತ್ವೇನ ಸ್ಥಿತಿಕಾರಣಮ್, ಮಾಯಾವೀವ ಮಾಯಾಯಾಃ । ಪ್ರಸಾರಿತಸ್ಯ ಚ ಜಗತಃ ಪುನಃ ಸ್ವಾತ್ಮನ್ಯೇವ ಉಪಸಂಹಾರಕಾರಣಮ್ । ಅವನಿರಿವ ಚತುರ್ವಿಧಸ್ಯ ಭೂತಗ್ರಾಮಸ್ಯ । ಸ ಏವ ಚ ಸರ್ವೇಷಾಂ ನ ಆತ್ಮಾ ಇತ್ಯೇತತ್ ವೇದಾನ್ತವಾಕ್ಯಸಮನ್ವಯಪ್ರತಿಪಾದನೇನ ಪ್ರತಿಪಾದಿತಮ್ । ಪ್ರಧಾನಾದಿಕಾರಣವಾದಾಶ್ಚ ಅಶಬ್ದತ್ವೇನ ನಿರಾಕೃತಾಃ । ಇದಾನೀಂ ಸ್ವಪಕ್ಷೇ ಸ್ಮೃತಿನ್ಯಾಯವಿರೋಧಪರಿಹಾರಃ, ಪ್ರಧಾನಾದಿವಾದಾನಾಂ ಚ ನ್ಯಾಯಾಭಾಸೋಪಬೃಂಹಿತತ್ವಮ್, ಪ್ರತಿವೇದಾನ್ತಂ ಚ ಸೃಷ್ಟ್ಯಾದಿಪ್ರಕ್ರಿಯಾಯಾ ಅವಿಗೀತತ್ವಮ್ ಇತ್ಯಸ್ಯ ಅರ್ಥಜಾತಸ್ಯ ಪ್ರತಿಪಾದನಾಯ ದ್ವಿತೀಯೋಽಧ್ಯಾಯಃ ಆರಭ್ಯತೇ ||

(ಭಾಷ್ಯಾರ್ಥ)

ಒಂದನೆಯ ಅಧ್ಯಾಯದಲ್ಲಿ ಸರ್ವಜ್ಞನಾದ ಸರ್ವೇಶ್ವರನು ಜಗತ್ತಿಗೆ ಮಣ್ಣು, ಚಿನ್ನ- ಮುಂತಾದವುಗಳು ಗಡಿಗೆ, ಅಸಲಿ ಮುಂತಾದವುಗಳಿಗೆ (ಕಾರಣವಾಗಿರು)ವಂತೆ ಉತ್ಪತ್ತಿಕಾರಣವು ; ಹುಟ್ಟಿದ ಜಗತ್ತನ್ನು ಕಟ್ಟಿನಲ್ಲಿಟ್ಟಿರುವದರಿಂದ ಮಾಯಾವಿಯು ಮಾಯೆಗೆ (ಕಾರಣವಾಗಿರು)ವಂತೆ ಸ್ಥಿತಿಕಾರಣವು ; ಮತ್ತು ಹರಡಿರುವ ಜಗತ್ತಿಗೆ ಭೂಮಿಯು ನಾಲ್ಕುಬಗೆಯ ಭೂತಸಮೂಹಕ್ಕೆ (ಕಾರಣವಾಗಿರು)ವಂತೆ ಆತ್ಮನಲ್ಲಿಯೇ ಅಡಗಿಸಿಕೊಳ್ಳುವ ಕಾರಣವು ; ಆತನೇ ನಮ್ಮಗಳೆಲ್ಲರ ಆತ್ಮನು- ಎಂದು ವೇದಾಂತವಾಕ್ಯಗಳ ಸಮನ್ವಯವನ್ನು

ತೋರಿಸುವದರ ಮೂಲಕ ತಿಳಿಸಿಕೊಟ್ಟದ್ದಾಯಿತು.[1] ಪ್ರಧಾನವೇ ಮುಂತಾದವು (ಜಗತ್ತಿಗೆ) ಕಾರಣವೆಂಬ ವಾದಗಳು ಅಶಬ್ದ(ವಾಗಿವೆ) ಎಂದು ನಿರಾಕರಿಸಿದ್ದೂ ಆಯಿತು.

ಈಗ ತಮ್ಮ ಪಕ್ಷದಲ್ಲಿ ಸ್ಮೃತಿನ್ಯಾಯಗಳಿಗೆ ವಿರೋಧವನ್ನು ಪರಿಹರಿಸುವದು, ಪ್ರಧಾನವೇ ಮುಂತಾದವು ಕಾರಣವೆಂಬ ವಾದಗಳಿಗೆ ಬೆಂಬಲವಾಗಿರುವವು ನ್ಯಾಯಾಭಾಸಗಳೆಂಬುದು, ಪ್ರತಿಯೊಂದು ಉಪನಿಷತ್ತಿನಲ್ಲಿಯೂ (ಇರುವ) ಸೃಷ್ಟಿಯೇ ಮುಂತಾದ ಪ್ರಕ್ರಿಯೆಗಳಿಗೆ ವಿಗಾನವಿಲ್ಲವೆಂಬುದು ಎಂಬೀ ಅರ್ಥಜಾತವನ್ನು ಪ್ರತಿಪಾದಿಸುವದಕ್ಕಾಗಿ ಎರಡನೆಯ ಅಧ್ಯಾಯವನ್ನು ಆರಂಭಿಸಿರುತ್ತದೆ.

## ೧. ಸ್ಮೃತ್ಯಧಿಕರಣ (ಸೂ. ೧-೨)

(ವೇದಾಂತವು ಸಾಂಖ್ಯಸ್ಮೃತಿಗೆ ವಿರುದ್ಧವಲ್ಲ)

**ಸ್ಮೃತ್ಯನವಕಾಶದೋಷಪ್ರಸಙ್ಗ ಇತಿ ಚೇನ್ನಾನ್ಯಸ್ಮೃತ್ಯನವಕಾಶ ಪ್ರಸಙ್ಗಾತ್ ॥ ೧ ॥**

೧. ಸ್ಮೃತಿಗೆ ಅವಕಾಶವಿಲ್ಲದೆಹೋಗುವ ದೋಷವು ಬರುವದಲ್ಲ !- ಎಂದರೆ ಹಾಗಲ್ಲ, ಏಕೆಂದರೆ ಬೇರೆ ಸ್ಮೃತಿಗಳಿಗೆ ಅವಕಾಶವಿಲ್ಲದೆ ಹೋಗುವದು.

## ಪೂರ್ವಪಕ್ಷ: ವೇದಾಂತವು ಸಾಂಖ್ಯಸ್ಮೃತಿವಿರುದ್ಧ

(ಭಾಷ್ಯ)

೪೯. ತತ್ರ ಪ್ರಥಮಂ ತಾವತ್ ಸ್ಮೃತಿವಿರೋಧಮ್ ಉಪನ್ಯಸ್ಯ ಪರಿಹರತಿ । ಯದುಕ್ತಂ ಬ್ರಹ್ಮೈವ ಸರ್ವಜ್ಞಂ ಜಗತಃ ಕಾರಣಮ್ ಇತಿ । ತತ್ ಅಯುಕ್ತಮ್ । ಕುತಃ? ಸ್ಮೃತ್ಯನವಕಾಶದೋಷಪ್ರಸಙ್ಗಾತ್ । ಸ್ಮೃತಿಶ್ಚ ತನ್ತ್ರಾಖ್ಯಾ ಪರಮರ್ಷಿಪ್ರಣೀತಾ ಶಿಷ್ಟಪರಿಗೃಹೀತಾ । ಅನ್ಯಾಶ್ಚ

---

1. 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಿಂದ ಹಿಡಿದು ಜಗಜ್ಜನ್ಮಾದಿಕಾರಣವು ಬ್ರಹ್ಮವೇ ಎಂದು ತಿಳಿಸಲಾಯಿತು. ಗತಿಸಾಮಾನ್ಯವನ್ನು ತೋರಿಸುವ ಸೂತ್ರಗಳೂ ಚೇತನಕಾರಣವಾದವೇ ಶ್ರುತಿಸಿದ್ಧವೆಂದು ತಿಳಿಸಿಕೊಟ್ಟವೆ. ಬೇರೆಬೇರೆಯ ಅಧಿಕರಣಗಳಲ್ಲಿ ಅಲ್ಲಲ್ಲಿ 'ಆತ್ಮಾ' ಎಂಬ ಬ್ರಹ್ಮವಿಶೇಷಣವನ್ನು ತೋರಿಸಿದೆ. ಶಾಸ್ತ್ರದೃಷ್ಟಿಯಿಂದ ಬ್ರಹ್ಮವೇ ನಮ್ಮ ಆತ್ಮನೆಂದು ಪ್ರತರ್ದನಾಧಿಕರಣದಲ್ಲಿ ಸ್ಪಷ್ಟವಾಗಿ ಹೇಳಿದೆ.

ತದನುಸಾರಿಣ್ಯಃ ಸ್ಮೃತಯಃ, ಏವಂ ಸತಿ ಅನವಕಾಶಾಃ ಪ್ರಸಜ್ಯೇರನ್ । ತಾಸು ಹಿ ಅಚೇತನಂ ಪ್ರಧಾನಂ ಸ್ವತನ್ತ್ರಂ ಜಗತಃ ಕಾರಣಮ್ ಉಪನಿಬಧ್ಯತೇ । ಮನ್ವಾದಿಸ್ಮೃತಯಸ್ತಾವತ್ ಚೋದನಾಲಕ್ಷಣೇನ ಅಗ್ನಿಹೋತ್ರಾದಿನಾ ಧರ್ಮಜಾತೇನ ಅಪೇಕ್ಷಿತಮ್ ಅರ್ಥಂ ಸಮರ್ಪಯನ್ತ್ಯಃ ಸಾವಕಾಶಾ ಭವನ್ತಿ । ಅಸ್ಯ ವರ್ಣಸ್ಯ ಅಸ್ಮಿನ್ ಕಾಲೇ ಅನೇನ ವಿಧಾನೇನ ಉಪನಯನಮ್, ಈದೃಶಶ್ಚ ಆಚಾರಃ, ಇತ್ಥಂ ವೇದಾಧ್ಯಯನಮ್, ಇತ್ಥಂ ಸಮಾವರ್ತನಮ್, ಇತ್ಥಂ ಸಹಧರ್ಮಚಾರಿಣೀಸಂಯೋಗಃ ಇತಿ । ತಥಾ ಪುರುಷಾರ್ಥಾಂಶ್ಚ ವರ್ಣಾಶ್ರಮಧರ್ಮಾನ್ ನಾನಾವಿಧಾನ್ ವಿದಧತಿ । ನೈವಂ ಕಪಿಲಾದಿಸ್ಮೃತೀನಾಮ್ ಅನುಷ್ಠೇಯೇ ವಿಷಯೇ ಅವಕಾಶೋಽಸ್ತಿ । ಮೋಕ್ಷಸಾಧನಮೇವ ಹಿ ಸಮ್ಯಗ್ದರ್ಶನಮ್ ಅಧಿಕೃತ್ಯ ತಾಃ ಪ್ರಣೀತಾಃ । ಯದಿ ತತ್ರಾಪಿ ಅನವಕಾಶಾಃ ಸ್ಯುಃ, ಆನರ್ಥಕ್ಯಮೇವ ಆಸಾಂ ಪ್ರಸಜ್ಯೇತ । ತಸ್ಮಾತ್ ತದವಿರೋಧೇನ ವೇದಾನ್ತಾ ವ್ಯಾಖ್ಯಾತವ್ಯಾಃ ॥

( ಭಾಷ್ಯಾರ್ಥ )

ಇಲ್ಲಿ ಮೊದಲನೆಯದಾಗಿ ಸ್ಮೃತಿಯ ವಿರೋಧವನ್ನು ಹೇಳಿ ಅದನ್ನು ಪರಿಹರಿಸಿದೆ, ಸರ್ವಜ್ಞವಾದ ಬ್ರಹ್ಮವೇ ಜಗತ್ತಿಗೆ ಕಾರಣವಾದದ್ದು ಎಂದು (ಸಿದ್ಧಾಂತದಲ್ಲಿ) ಹೇಳಿತ್ತಲ್ಲ, ಅದು ಯುಕ್ತವಲ್ಲ. ಏಕೆ ? ಎಂದರೆ ಸ್ಮೃತಿಗೆ ಅವಕಾಶವಿಲ್ಲದೆಹೋಗುವದರಿಂದ. ಸ್ಮೃತಿಯು ಎಂದರೆ **ತಂತ್ರವೆಂಬ ಹೆಸರುಳ್ಳದ್ದಾಗಿ** ಪರಮರ್ಷಿ(ಯಾದ ಕಪಿಲನಿಂದ) ರಚಿತವಾಗಿರುವದೂ ಶಿಷ್ಯರು ಪರಿಗ್ರಹಿಸಿರುವದೂ ಆಗಿರುವ (ಸಾಂಖ್ಯಸ್ಮೃತಿಯೂ), ಮತ್ತು ಅದನ್ನನುಸರಿಸುವ ಬೇರೆಯ ಸ್ಮೃತಿಗಳೂ.[1] (ಇವುಗಳೆಲ್ಲ) ಹೀಗಾದರೆ ಅವಕಾಶವಿಲ್ಲದವುಗಳಾಗುತ್ತವೆ. ಏಕೆಂದರೆ ಅವುಗಳಲ್ಲಿ ಅಚೇತನವಾದ ಪ್ರಧಾನವು ಸ್ವತಂತ್ರವಾಗಿಯೇ ಜಗತ್ತಿಗೆ ಕಾರಣವೆಂದು ಹೇಳಿರುತ್ತದೆ.

ಮೊದಲನೆಯದಾಗಿ ಮನ್ವಾದಿಸ್ಮೃತಿಗಳು ಈ ವರ್ಣದವನಿಗೆ ಈ ಕಾಲದಲ್ಲಿ ಈ ಪ್ರಕಾರದಿಂದ ಉಪನಯನ(ವಾಗಬೇಕು), ಹೀಗೆ ಆಚಾರ(ವಿರಬೇಕು), ಹೀಗೆ ವೇದವನ್ನು ಅಧ್ಯಯನಮಾಡಬೇಕು, ಹೀಗೆ ಸಮಾವರ್ತನವಾಗಬೇಕು, ಹೀಗೆ (ತನ್ನೊಡನೆ) ಧರ್ಮವನ್ನಾಚರಿಸುವ (ಹೆಂಡತಿಯೊಡನೆ) ಬೆರೆಯಬೇಕು —ಎಂದು ಚೋದನಾಲಕ್ಷಣವಾದ[2] ಅಗ್ನಿಹೋತ್ರವೇ ಮುಂತಾದ ಧರ್ಮ

---

1 ಕಪಿಲರು ತಂತ್ರವೆಂಬ ಸಾಂಖ್ಯಸ್ಮೃತಿಯನ್ನು ರಚಿಸಿರುತ್ತಾರೆ. ಅವರನ್ನನುಸರಿಸಿ ಆಸುರಿಯೇ ಮುಂತಾದವರು ಗ್ರಂಥಗಳನ್ನು ರಚಿಸಿರುತ್ತಾರೆ. ತಂತ್ರವೆಂಬ ಗ್ರಂಥವು ಯಾವದೆಂಬುದು ಸ್ಪಷ್ಟವಾಗಿಲ್ಲ. ಪೀಠಿಕೆಯನ್ನು ನೋಡಿ.

2. ಶ್ರುತಿಪ್ರಮಾಣದಿಂದ ತಿಳಿಯಬರುವ ಶಾಸ್ತ್ರವು ಕರ್ಮವನ್ನೇ ತಿಳಿಸುತ್ತದೆ ಎಂಬ ಮೀಮಾಂಸಕರ ಮತವನ್ನು ಅನುಸರಿಸಿ ಹೇಳಿದ ಮಾತಿದು.

ಸಮೂಹಕ್ಕೆ ಬೇಕಾಗಿರುವ ವಿಷಯವನ್ನು ಸಮರ್ಪಿಸುವದರಿಂದ ಸಾವಕಾಶ ವಾಗಿರುತ್ತವೆ.[1] ಹೀಗೆಯೇ ಪುರುಷರಿಗೆ ಬೇಕಾಗಿರುವ[2] ಬಗೆಬಗೆಯ ವರ್ಣಾಶ್ರಮಧರ್ಮಗಳನ್ನೂ ವಿಧಿಸುತ್ತವೆ. (ಆದರೆ) ಹೀಗೆ ಕಪಿಲಾದಿಸ್ಮೃತಿಗಳಿಗೆ ಅನುಷ್ಠೇಯವಾದ (ಕರ್ಮದ) ವಿಷಯದಲ್ಲಿ ಅವಕಾಶವಿರುವದಿಲ್ಲ. ಏಕೆಂದರೆ ಮೋಕ್ಷಸಾಧನವಾಗಿರುವ ಸಮ್ಯಗ್ದರ್ಶನವನ್ನು ಕುರಿತೇ ಅವುಗಳನ್ನು ರಚಿಸಲಾಗಿರುತ್ತದೆ.[3] ಆ (ವಿಷಯದಲ್ಲಿ)ಯೂ (ಅವಕ್ಕೆ) ಅವಕಾಶವಿಲ್ಲದೆ ಹೋದರೆ ಅವಕ್ಕೆ ಆನರ್ಥಕ್ಯವೇ ಉಂಟಾದೀತು. ಆದ್ದರಿಂದ ಅವುಗಳಿಗೆ ವಿರೋಧವಾಗದಂತೆ ಉಪನಿಷತ್ತುಗಳಿಗೆ ವ್ಯಾಖ್ಯಾನವನ್ನು ಮಾಡಬೇಕು.

## ಶ್ರುತ್ಯರ್ಥವನ್ನು ಸ್ಮೃತ್ಯಾಶ್ರಯದಿಂದ ಆಕ್ಷೇಪಿಸಿರುವದಕ್ಕೆ ಕಾರಣ

(ಭಾಷ್ಯ)

೪೮೦. ಕಥಂ ಪುನಃ ಈಕ್ಷತ್ಯಾದಿಭ್ಯೋ ಹೇತುಭ್ಯೋ ಬ್ರಹ್ಮೈವ ಸರ್ವಜ್ಞಂ ಜಗತಃ ಕಾರಣಮ್ ಇತ್ಯವಧಾರಿತಃ ಶ್ರುತ್ಯರ್ಥಃ ಸ್ಮೃತ್ಯನವಕಾಶದೋಷಪ್ರಸಙ್ಗೇನ ಪುನರಾಕ್ಷಿಪ್ಯತೇ? ಭವೇದಯಮ್ ಅನಾಕ್ಷೇಪಃ ಸ್ವತನ್ತ್ರಪ್ರಜ್ಞಾನಾಮ್, ಪರತನ್ತ್ರಪ್ರಜ್ಞಾಸ್ತು ಪ್ರಾಯೇಣ ಜನಾಃ ಸ್ವಾತನ್ತ್ರ್ಯೇಣ ಶ್ರುತ್ಯರ್ಥಮ್ ಅವಧಾರಯಿತುಮ್ ಅಶಕ್ನುವನ್ತಃ ಪ್ರಖ್ಯಾತಪ್ರಣೇತೃಕಾಸು ಸ್ಮೃತಿಷು ಅವಲಮ್ಬೇರನ್ । ತದ್ಬಲೇನ ಚ ಶ್ರುತ್ಯರ್ಥಂ ಪ್ರತಿಪಿತ್ಸೇರನ್ । ಅಸ್ಮತ್ಕೃತೇ ಚ ವ್ಯಾಖ್ಯಾನೇ ನ ವಿಶ್ವಸ್ಯುಃ ಬಹುಮಾನಾತ್ ಸ್ಮೃತೀನಾಂ ಪ್ರಣೇತೃಷು । ಕಪಿಲಪ್ರಭೃತೀನಾಂ ಚ ಆರ್ಷಂ ಜ್ಞಾನಮ್ ಅಪ್ರತಿಹತಂ ಸ್ಮರ್ಯತೇ । ಶ್ರುತಿಶ್ಚ ಭವತಿ "ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್" (ಶ್ವೇ. ೫-೨) ಇತಿ ತಸ್ಮಾತ್ ನೈಷಾಂ ಮತಮ್ ಅಯಥಾರ್ಥಂ ಶಕ್ಯಂ ಸಂಭಾವಯಿತುಮ್ । ತರ್ಕಾವಷ್ಟಮ್ಭೇನ ಚ ಏತೇ ಅರ್ಥಂ ಪ್ರತಿಷ್ಠಾಪಯನ್ತಿ । ತಸ್ಮಾದಪಿ ಸ್ಮೃತಿಬಲೇನ ವೇದಾನ್ತಾ ವ್ಯಾಖ್ಯೇಯಾಃ ಇತಿ ಪುನರಾಕ್ಷೇಪಃ ॥

---

1. ಅವಕ್ಕೆ ಕರ್ಮವು ವಿಷಯವಾಗಿರುವದರಿಂದ ಅವುಗಳಲ್ಲಿ ಹೇಳಿರುವ ಜ್ಞಾನವಿಚಾರವನ್ನು ತಿರಸ್ಕರಿಸಿದರೂ ಅವುಗಳ ಪ್ರಾಮಾಣ್ಯಕ್ಕೆ ಹಾನಿಯಿಲ್ಲ ಎಂದರ್ಥ.

2. ಶ್ರುತ್ಯರ್ಥವಾದ ಧರ್ಮಗಳನ್ನಲ್ಲದೆ ಪುರುಷಾರ್ಥಧರ್ಮಗಳನ್ನೂ ಹೇಳುತ್ತವೆ ಎಂದರ್ಥ. ಇಲ್ಲಿ ಪುರುಷರೆಂದರೆ ಕರ್ಮಕ್ಕೆ ಅಧಿಕಾರಿಗಳು.

3. ಅವೂ ಉಪನಿಷತ್ತಿನಂತೆ ಭೂತವಸ್ತುವನ್ನೇ ಉಪದೇಶಿಸುತ್ತವೆ; ಕರ್ಮಗಳನ್ನು ಕುರಿತು ಹೇಳುವದೇ ಇಲ್ಲ.

(ಭಾಷ್ಯಾರ್ಥ)

(ಆಕ್ಷೇಪ) : – (ಆಲೋಚಿಸಿ) ನೋಡುವದು ಮುಂತಾದ ಕಾರಣಗಳಿಂದ ಸರ್ವಜ್ಞವಾದ ಬ್ರಹ್ಮವೇ ಜಗತ್ತಿಗೆ ಕಾರಣವೆಂದು ನಿಶ್ಚಯಿಸಿರುವ ಶ್ರುತ್ಯರ್ಥವನ್ನು ಸ್ಮೃತ್ಯನವಕಾಶವೆಂಬ ದೋಷವು ಬಂದೀತೆಂದು ಮತ್ತೆ ಆಕ್ಷೇಪಿಸುವದು ಹೇಗೆ[1] (ಸರಿ) ?

(ಪರಿಹಾರ) :– ಸ್ವತಂತ್ರವಾದ ತಿಳಿವಳಿಕೆಯುಳ್ಳವರಿಗೆ ಇದು ಆಕ್ಷೇಪವೆನಿಸಲಾರದು. ಆದರೆ ಬಹುಮಟ್ಟಿಗೆ ಜನರು ಮತ್ತೊಬ್ಬರ ವಶದಲ್ಲಿದ್ದುಕೊಂಡೇ ತಿಳಿಯುವವರಾ(ದ್ದರಿಂದ) ಸ್ವತಂತ್ರವಾಗಿ ಶ್ರುತಿಯ ಅರ್ಥವನ್ನು ಗೊತ್ತುಪಡಿಸಿಕೊಳ್ಳಲಾರರಾದ್ದರಿಂದ ಪ್ರಖ್ಯಾತರಾದ ಗ್ರಂಥಕರ್ತೃಗಳು ಮಾಡಿರುವ ಸ್ಮೃತಿಗಳನ್ನು ಆಶ್ರಯಿಸಬಹುದು ; ಅವುಗಳ ಬಲದಿಂದ ಶ್ರುತ್ಯರ್ಥವನ್ನು ತಿಳಿದುಕೊಳ್ಳುವದಕ್ಕಿಚ್ಛಿಸಲೂ ಬಹುದು. ಸ್ಮೃತಿಗಳನ್ನು ಮಾಡಿದವರಲ್ಲಿರುವ ಗೌರವದಿಂದ ನಾವು ಮಾಡಿರುವ (ಶ್ರುತಿಯ) ವ್ಯಾಖ್ಯಾನದಲ್ಲಿ ವಿಶ್ವಾಸವಿಡದೆಹೋಗಲೂ ಬಹುದು.[2] ಕಪಿಲನೇ ಮೊದಲಾದವರ ಆರ್ಷಜ್ಞಾನವು ಯಾವ ಅಡ್ಡಿಯೂ ಇಲ್ಲದ್ದು ಎಂದು ಸ್ಮೃತಿಗಳಲ್ಲಿ[3] ಹೇಳಿರುತ್ತದೆ "ಯಾವನು ಮೊದಲು ಹುಟ್ಟಿದ ಆ ಋಷಿಯಾದ ಕಪಿಲನನ್ನು ಜ್ಞಾನಗಳಿಂದ ಪೋಷಿಸುವನೋ, ಮತ್ತು (ಅವನು) ಹುಟ್ಟುವದನ್ನು ಕಾಣುವನೋ" (ಶ್ವೇ. ೫-೨) ಎಂದು ಶ್ರುತಿಯೂ (ಇದೆ).[4] ಆದ್ದರಿಂದ ಇವರ ಮತವು ಅಯಥಾರ್ಥವಾಗಿರಬೇಕೆಂದು ತಿಳಿಯುವದು ಆಗಲಾರದು. ಇದಲ್ಲದೆ ಇವರು ತರ್ಕವನ್ನು ಆಶ್ರಯಿಸಿಕೊಂಡು ವಿಷಯವನ್ನು ನಿಲ್ಲಿಸುತ್ತಾರೆ.[5] ಆದ್ದರಿಂದಲೂ (ಸಾಂಖ್ಯ)ಸ್ಮೃತಿಯ ಬಲದಿಂದ ವೇದಾಂತಗಳಿಗೆ ವ್ಯಾಖ್ಯಾನವನ್ನು ಮಾಡಬೇಕು – ಎಂದು ಮತ್ತೆ ಆಕ್ಷೇಪ(ವನ್ನು ಒಡ್ಡಿರುತ್ತದೆ).

---

1. ಶ್ರುತಿವಿರುದ್ಧವಾದ ಸ್ಮೃತಿಯೇ ತ್ಯಾಜ್ಯವೆಂದು ಏತಕ್ಕೆ ಎಣಿಸಬಾರದು ? ಎಂದು ಆಕ್ಷೇಪ.

2. ಕಪಿಲಾದಿಸ್ಮೃತಿಗಳಲ್ಲಿರುವದೇ ವೇದಾರ್ಥವೆಂದು ನಂಬುವವರು ಸೂತ್ರಕಾರರ ಸಿದ್ಧಾಂತವನ್ನು ನಂಬಲಾರದೆ ಹೋಗಬಹುದು , ಏಕೆಂದರೆ ಕಪಿಲರು ದೊಡ್ಡ ಋಷಿಗಳೆಂದು ಪ್ರಖ್ಯಾತರಾಗಿರುತ್ತಾರೆ.

3. ಸಾಂಖ್ಯರ ಗ್ರಂಥಗಳಲ್ಲಿ ಎಂದರ್ಥ.

4. ಪರಮೇಶ್ವರನೇ ಕಪಿಲನನ್ನು ಮೊದಲು ಸೃಷ್ಟಿಸುತ್ತಾನೆ, ಆ ಕಪಿಲನಿಗೆ ಎಲ್ಲಾ ಜ್ಞಾನಗಳನ್ನೂ ಕೊಡುತ್ತಾನೆ ಎಂದು ಅಭಿಪ್ರಾಯವೆಂದು ತೋರುತ್ತದೆ. ವ್ಯಾಖ್ಯಾನಗಳಲ್ಲಿ ಈ ವಾಕ್ಯದ ಯೋಜನೆಯು ಬೇರೆಯ ಪ್ರಕಾರದಲ್ಲಿರುತ್ತದೆ.

5 ಯುಕ್ತಿಯು ಶ್ರುತಿಗಿಂತಲೂ ಹೆಚ್ಚಿನದೆಂದು ಪೂರ್ವಪಕ್ಷಿಯ ಭಾವ.

# ಸಿದ್ಧಾಂತ: ಸಾಂಖ್ಯಸ್ಮೃತಿಯು ಬೇರೆಯ ಸ್ಮೃತಿಗಳಿಗೆ ವಿರುದ್ಧವಾಗಿದೆ

( ಭಾಷ್ಯ )

೪೦೧. ತಸ್ಯ ಸಮಾಧಿಃ "ನಾನ್ಯಸ್ಮೃತ್ಯನವಕಾಶದೋಷಪ್ರಸಙ್ಗಾತ್" ಇತಿ । ಯದಿ ಸ್ಮೃತ್ಯನವಕಾಶದೋಷಪ್ರಸಙ್ಗೇನ ಈಶ್ವರಕಾರಣವಾದಃ ಆಕ್ಷಿಪ್ಯೇತ, ಏವಮಪಿ ಅನ್ಯಾ ಈಶ್ವರಕಾರಣವಾದಿನ್ಯಃ ಸ್ಮೃತಯಃ ಅನವಕಾಶಾಃ ಪ್ರಸಜ್ಯೇರನ್ । ತಾ ಉದಾಹರಿಷ್ಯಾಮಃ । "ಯತ್ತತ್ ಸೂಕ್ಷ್ಮಮವಿಜ್ಞೇಯಮ್" ಇತಿ ಪರಂ ಬ್ರಹ್ಮ ಪ್ರಕೃತ್ಯ "ಸ ಹ್ಯನ್ತರಾತ್ಮಾ ಭೂತಾನಾಂ ಕ್ಷೇತ್ರಜ್ಞಶ್ಚೇತಿ ಕಥ್ಯತೇ" ಇತಿ ಚ ಉಕ್ತ್ವಾ "ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ"[1] (ಮೋ. ಧ. ೩೩೪-೨೯, ೩೦, ೩೧) ಇತ್ಯಾಹ । ತಥಾ ಅನ್ಯತ್ರಾಪಿ "ಅವ್ಯಕ್ತಂ ಪುರುಷೇ ಬ್ರಹ್ಮನ್ನಿರ್ಗುಣೇ ಸಂಪ್ರಲೀಯತೇ" (ಮೋ. ಧ. ೩೩೮-೩೧) ಇತ್ಯಾಹ । "ಅತಶ್ಚ ಸಂಕ್ಷೇಪಮಿಮಂ ಶೃಣುಧ್ವಂ ನಾರಾಯಣಃ ಸರ್ವಮಿದಂ ಪುರಾಣಃ । ಸ ಸರ್ಗಕಾಲೇ ಚ ಕರೋತಿ ಸರ್ವಂ ಸಂಹಾರಕಾಲೇ ಚ ತದತ್ತಿ ಭೂಯಃ"[2] (?) ಇತಿ ಪುರಾಣೇ । ಭಗವದ್ಗೀತಾಸು ಚ "ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ" (ಗೀ. ೭-೬) ಇತಿ । ಪರಮಾತ್ಮಾನಮೇವ ಚ ಪ್ರಕೃತ್ಯ ಆಪಸ್ತಮ್ಬಃ ಪಠತಿ- "ತಸ್ಮಾತ್ ಕಾಯಾಃ ಪ್ರಭವನ್ತಿ ಸರ್ವೇ ಸ ಮೂಲಂ ಶಾಶ್ವತಿಕಃ ಸ ನಿತ್ಯಃ" (ಆ. ಧ. ೮-೨೩-೨) ಇತಿ । ಏವಮ್ ಅನೇಕಶಃ ಸ್ಮೃತಿಷ್ವಪಿ ಈಶ್ವರಃ ಕಾರಣತ್ವೇನ ಉಪಾದಾನತ್ವೇನ ಚ ಪ್ರಕಾಶ್ಯತೇ ॥

---

1. ಅಧ್ಯಾಯ ಮೋಕ್ಷಧರ್ಮದಲ್ಲಿ ಈ ಶ್ಲೋಕಗಳು ಹೀಗಿವೆ:
ಯತ್ತತ್ ಸೂಕ್ಷ್ಮಮವಿಜ್ಞೇಯಮವ್ಯಕ್ತಮಚಲಂ ಧ್ರುವಮ್ ।
ಇನ್ದ್ರಿಯೈರಿನ್ದ್ರಿಯಾರ್ಥೈಶ್ಚ ಸರ್ವಭೂತೈಶ್ಚ ವರ್ಜಿತಮ್ ॥ ೨೯ ॥
ಸ ಹ್ಯನ್ತರಾತ್ಮಾ ಭೂತಾನಾಂ ಕ್ಷೇತ್ರಜ್ಞಶ್ಚೇತಿ ಕಥ್ಯತೇ ।
ತ್ರಿಗುಣವ್ಯತಿರಿಕ್ತೋ ವೈ ಪುರುಷಶ್ಚೇತಿ ಕಲ್ಪಿತಃ ॥ ೩೦ ॥
ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ ।
ಅವ್ಯಕ್ತಾ ವ್ಯಕ್ತಭಾವಸ್ಥಾ ಯಾ ಸಾ ಪ್ರಕೃತಿರವ್ಯಯಾ ॥ ೩೧ ॥

2. ಮೋಕ್ಷಧರ್ಮದಲ್ಲಿ ಒಂದು ಶ್ಲೋಕವು ಹೀಗೆ ಇದೆ:
ಏತನ್ಮಯೋಕ್ತಂ ನರದೇವ ತತ್ತ್ವಂ ನಾರಾಯಣೋ ವಿಶ್ವಮಿದಂ ಪುರಾಣಮ್ ।
ಸ ಸರ್ಗಕಾಲೇ ಚ ಕರೋತಿ ಸರ್ವಂ ಸಂಹಾರಕಾಲೇ ಚ ತದತ್ತಿ ಭೂಯಃ ॥
(೩೦೨-೧೨)

(ಭಾಷ್ಯಾರ್ಥ)

ಈ (ಆಕ್ಷೇಪಕ್ಕೆ) ಸಮಾಧಾನವೇನೆಂದರೆ, ''ಹಾಗಲ್ಲ. ಏಕೆಂದರೆ ಬೇರೆಯ ಸ್ಮೃತಿಗಳಿಗೆ ಅವಕಾಶವಿಲ್ಲದೆ ಹೋಗುವದೆಂಬ ದೋಷವು ಪ್ರಸಕ್ತವಾಗುವದು.'' (ಸಾಂಖ್ಯ)ಸ್ಮೃತಿಗೆ ಅವಕಾಶವಿಲ್ಲದೆ ಹೋಗುವದೆಂಬ ದೋಷವು ಪ್ರಸಕ್ತವಾಗುವದೆಂಬ (ಕಾರಣ)ದಿಂದ ಈಶ್ವರಕಾರಣವಾದವನ್ನು ಆಕ್ಷೇಪಿಸುವದಾದರೆ, ಹೀಗೂ ಈಶ್ವರಕಾರಣವನ್ನು ಹೇಳುವ ಬೇರೆಯ ಸ್ಮೃತಿಗಳಿಗೆ ಅವಕಾಶವಿಲ್ಲದೆ ಹೋಗುವದು. ಅವುಗಳನ್ನು ಇಲ್ಲಿ ಉದಾಹರಿಸುವೆವು· ''ಸೂಕ್ಷ್ಮವೂ ಅರಿಯುವದಕ್ಕೆ ಆಗದ್ದೂ ಇರುವ ಆ (ತತ್ತ್ವ)ವಿದೆಯಲ್ಲ," ಎಂದು ಪರಬ್ರಹ್ಮವನ್ನು (ಹೇಳುವದಕ್ಕೆ) ಪ್ರಾರಂಭಿಸಿ "ಅವನೇ ಭೂತಗಳಿಗೆ ಅಂತರಾತ್ಮನೆಂದೂ ಕ್ಷೇತ್ರಜ್ಞನೆಂದೂ ಹೇಳುವರು" ಎಂದು ಹೇಳಿ "ಎಲೈ ದ್ವಿಜೋತ್ತಮನೆ, ಅವನಿಂದ ತ್ರಿಗುಣವಾದ ಅವ್ಯಕ್ತವು ಉತ್ಪನ್ನವಾಯಿತು"[1] (ಮೋ· ೩೩೪–೨೯,೩೦,೩೧) ಎಂದು ಹೇಳಿರುತ್ತದೆ. ಹೀಗೆಯೇ ಮತ್ತೊಂದು ಕಡೆಯಲ್ಲಿಯೂ "ಎಲೈ ಬ್ರಾಹ್ಮಣನೆ, ಅವ್ಯಕ್ತವು ನಿರ್ಗುಣನಾದ ಪುರುಷನಲ್ಲಿ ಅಡಗುತ್ತದೆ" (ಮೋ.ಧ ೩೩೮–೩೧) ಎಂದು ಹೇಳಿರುತ್ತದೆ. "ಆದ್ದರಿಂದ ಈ ಸಂಗ್ರಹ(ವಾಕ್ಯವನ್ನು) ಕೇಳಿರಿ: ಪುರಾಣನಾದ ನಾರಾಯಣನೇ ಇದೆಲ್ಲವೂ ಆಗಿರುತ್ತಾನೆ. ಆತನು ಸೃಷ್ಟಿಕಾಲದಲ್ಲಿ ಎಲ್ಲವನ್ನೂ ಮಾಡುತ್ತಾನೆ; ಸಂಹಾರಕಾಲದಲ್ಲಿ ಮತ್ತೆ ಅದನ್ನು ತಿಂದುಬಿಡುತ್ತಾನೆ"(?) ಎಂದು **ಪುರಾಣದಲ್ಲಿದೆ. ಭಗವದ್ಗೀತೆಗಳಲ್ಲಿಯೂ**[2] "ನಾನು ಇಡಿಯ ಜಗತ್ತಿಗೆ ಹುಟ್ಟುವ ಮತ್ತು ಅಡಗುವ (ಕಾರಣವು)'' (ಗೀ. ೭–೬) ಎಂದಿದೆ. ಪರಮಾತ್ಮನನ್ನೇ (ಕುರಿತು ಹೇಳುವದಕ್ಕೆ) ಪ್ರಾರಂಭಿಸಿ **ಆಪಸ್ತಂಬನು** ''ಅವನಿಂದ ಎಲ್ಲಾ ಶರೀರಗಳೂ ಉಂಟಾಗು

---

1. ಇಲ್ಲಿ ತ್ರಿಗುಣಾತ್ಮಕವಾದ ಅವ್ಯಕ್ತವು ಎಂದು ಪ್ರಧಾನವನ್ನೇ ಹೇಳಿದಂತಾಗಲಿಲ್ಲವೆ ?- ಎಂದು ಶಂಕಿಸಬಾರದು. ಪರಮಾತ್ಮನಿಂದ ಅವ್ಯಕ್ತವು ಹುಟ್ಟುತ್ತವೆ ಎಂದು ಹೇಳಿರುವದರಿಂದ ಇದು ಪ್ರಧಾನಕಾರಣವಾದಕ್ಕೆ ವಿರುದ್ಧವಾಗಿರುತ್ತದೆ. ಅವ್ಯಾಕೃತವು ವ್ಯಾಕೃತವಾಗಿರುವ ಅವಸ್ಥೆಗೆ ಸಿದ್ಧವಾಗುವದನ್ನೇ ಇಲ್ಲಿ ಅವ್ಯಕ್ತದ ಉತ್ಪತ್ತಿ ಎಂದು ಹೇಳಿದೆ ಎಂದು ಭಾವಿಸಿದರೆ ಸಿದ್ಧಾಂತಕ್ಕೆ ಸಮ್ಮತವಾಗುತ್ತದೆ. ಮುಂ. ಭಾ. ೧-೧-೮ (ಭಾ. ಭಾ. ೨೩)ನೋಡಿ. ತ್ರಿಗುಣಾತ್ಮಕತತ್ತ್ವವನ್ನು ಖಂಡಿಸುವವರಲ್ಲಿ ಅಷ್ಟು ತಾತ್ಪರ್ಯವಿಲ್ಲ, ಸ್ವತಂತ್ರವಾಗಿ ಪ್ರಧಾನವು ತಾನೇ ಜಗದ್ರೂಪವಾಗಿ ಪರಿಣಮಿಸುವದೆಂಬ ಅನೀಶ್ವರವಾದವನ್ನು ಖಂಡಿಸುವದರಲ್ಲಿ ಮುಖ್ಯತಾತ್ಪರ್ಯವಿದೆ. ಗೀ. ಭಾ. ೧೮-೧೯ (ಭಾ. ಭಾ. ೫೦೦)ರನ್ನೂ ಸೂ. ಭಾ. ೧-೪-೩೭ ಭಾಷ್ಯವನ್ನೂ ನೋಡಿ.

2. ಭಗವದ್ಗೀತೆಯನ್ನು ಭಾಷ್ಯದಲ್ಲಿ ಏಕವಚನದಿಂದ ಕರೆದಿರುವದು ಎಲ್ಲಿಯೂ ಕಂಡುಬರುವದಿಲ್ಲ. ಅದರಲ್ಲಿರುವ ಏಳುನೂರು ಶ್ಲೋಕಗಳಿಗೆ ಗೀತೆಗಳು ಎಂದೇ ಹೆಸರೆಂದು ಆಚಾರ್ಯರು ಭಾವಿಸಿರುತ್ತಾರೆ. ಗೀ.ಭಾ. ಅವತರಣಿಕೆಯನ್ನು ನೋಡಿ.

ತ್ರವೆ ; ಅವನೇ ಮೂಲವು, ಶಾಶ್ವತನು, ಅವನೇ ನಿತ್ಯನು" (ಆ.ಧ.ಸೂ. ೮-೨೩-೨) ಎಂದು ಹೇಳಿರುತ್ತಾನೆ. ಹೀಗೆ ಅನೇಕವಾಗಿ ಸ್ಮೃತಿಗಳಲ್ಲಿಯೂ ಈಶ್ವರನನ್ನು ಕಾರಣನೆಂದೂ ಉಪಾದಾನ(ಕಾರಣ)ವೆಂದೂ ತಿಳಿಸಿರುತ್ತದೆ.

## ಈಶ್ವರಕಾರಣಸ್ಮೃತಿಗಳನ್ನು ಉದಾಹರಿಸಿರುವದರ ಉದ್ದೇಶ

( ಭಾಷ್ಯ )

೪೦೨. ಸ್ಮೃತಿಬಲೇನ ಪ್ರತ್ಯವತಿಷ್ಠಮಾನಸ್ಯ ಸ್ಮೃತಿಬಲೇನೈವ ಉತ್ತರಂ ವಕ್ಷ್ಯಾಮಿ ಇತ್ಯತೋಽಯಮ್ ಅನ್ಯಸ್ಮೃತ್ಯನವಕಾಶದೋಷೋಪನ್ಯಾಸಃ । ದರ್ಶಿತಂ ತು ಶ್ರುತೀನಾಮ್ ಈಶ್ವರಕಾರಣವಾದಂ ಪ್ರತಿ ತಾತ್ಪರ್ಯಮ್ । ವಿಪ್ರತಿಪತ್ತೌ ಚ ಸ್ಮೃತೀನಾಮ್ ಅವಶ್ಯಕರ್ತವ್ಯೇ ಅನ್ಯತರಪರಿಗ್ರಹೇ ಅನ್ಯತರಪರಿತ್ಯಾಗೇ ಚ ಶ್ರುತ್ಯನುಸಾರಿಣ್ಯಃ ಸ್ಮೃತಯಃ ಪ್ರಮಾಣಮ್, ಅನಪೇಕ್ಷ್ಯಾ ಇತರಾಃ । ತದುಕ್ತಂ ಪ್ರಮಾಣಲಕ್ಷಣೇ ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಮ್" (ಜೈ.ಸೂ. ೧-೩-೩) ಇತಿ । ನ ಚ ಅತೀನ್ದ್ರಿಯಾನ್ ಅರ್ಥಾನ್ ಶ್ರುತಿಮನ್ತರೇಣ ಕಶ್ಚಿತ್ ಉಪಲಭತೇ ಇತಿ ಶಕ್ಯಂ ಸಂಭಾವಯಿತುಮ್ । ನಿಮಿತ್ತಾಭಾವಾತ್ । ಶಕ್ಯಂ ಕಪಿಲಾದೀನಾಂ ಸಿದ್ಧಾನಾಮ್ ಅಪ್ರತಿಹತಜ್ಞಾನತ್ವಾತ್ ಇತಿ ಚೇತ್ । ನ । ಸಿದ್ಧೇರಪಿ ಸಾಪೇಕ್ಷತ್ವಾತ್ । ಧರ್ಮಾನುಷ್ಠಾನಾಪೇಕ್ಷಾ ಹಿ ಸಿದ್ಧಿಃ । ಸ ಚ ಧರ್ಮಃ, ಚೋದನಾಲಕ್ಷಣಃ । ತತಶ್ಚ ಪೂರ್ವಸಿದ್ಧಾಯಾಃ ಚೋದನಾಯಾಃ ಅರ್ಥೋ ನ ಪಶ್ಚಿಮಸಿದ್ಧಪುರುಷವಚನೇ ಅತಿಶಙ್ಕಿತುಂ ಶಕ್ಯತೇ । ಸಿದ್ಧವ್ಯಪಾಶ್ರಯಕಲ್ಪನಾಯಾಮಪಿ ಬಹುತ್ವಾತ್ ಸಿದ್ಧಾನಾಂ ಪ್ರದರ್ಶಿತೇನ ಪ್ರಕಾರೇಣ ಸ್ಮೃತಿವಿಪ್ರತಿಪತ್ತೌ ಸತ್ಯಾಂ ನ ಶ್ರುತಿವ್ಯಪಾಶ್ರಯಾತ್ ಅನ್ಯತ್ ನಿರ್ಣಯಕಾರಣಮ್ ಅಸ್ತಿ । ಪರತನ್ತ್ರಪ್ರಜ್ಞಸ್ಯಾಪಿ ನ ಅಕಸ್ಮಾತ್ ಸ್ಮೃತಿವಿಶೇಷವಿಷಯಃ ಪಕ್ಷಪಾತೋ ಯುಕ್ತಃ । ಕಸ್ಯಚಿತ್ ಕ್ವಚಿತ್ ಪಕ್ಷಪಾತೇ ಸತಿ ಪುರುಷಮತಿವೈಶ್ವರೂಪ್ಯೇಣ ತತ್ತ್ವಾವ್ಯವಸ್ಥಾನಪ್ರಸಙ್ಗಾತ್ । ತಸ್ಮಾತ್ ತಸ್ಯಾಪಿ ಸ್ಮೃತಿವಿಪ್ರತಿಪತ್ತ್ಯುಪನ್ಯಾಸೇನ ಶ್ರುತ್ಯನುಸಾರಾನನುಸಾರವಿಷಯವಿವೇಚನೇನ ಚ ಸನ್ಮಾರ್ಗೇ ಪ್ರಜ್ಞಾ ಸಂಗ್ರಹಣೀಯಾ ॥

(ಭಾಷ್ಯಾರ್ಥ)

ಸ್ಮೃತಿಬಲದಿಂದ ಎದುರಿಸುವಾತನಿಗೆ ಸ್ಮೃತಿಬಲದಿಂದಲೇ ಉತ್ತರವನ್ನು ಹೇಳೋಣವೆಂದು ಈ ಅನ್ಯಸ್ಮೃತ್ಯನವಕಾಶದೋಷವನ್ನು ಹೇಳಿರುತ್ತದೆ. ಆದರೆ (ಹಿಂದೆ) ಶ್ರುತಿಗಳಿಗೆ ಈಶ್ವರಕಾರಣವಾದದಲ್ಲಿಯೇ ತಾತ್ಪರ್ಯವಿದೆ

ಎಂಬುದನ್ನು ತೋರಿಸಿಕೊಟ್ಟದ್ದಾಗಿದೆ. ಸ್ಮೃತಿಗಳಿಗೆ (ಒಂದಕ್ಕೊಂದಕ್ಕೆ) ವಿರುದ್ಧಾಭಿಪ್ರಾಯವಿರುವಲ್ಲಿ ಎರಡರಲ್ಲೊಂದನ್ನು ತೆಗೆದುಕೊಂಡು ಮತ್ತೊಂದನ್ನು ಬಿಡಲೇಬೇಕಾಗುವದರಿಂದ ಶ್ರುತ್ಯನುಸಾರಿಯಾದ ಸ್ಮೃತಿಗಳು ಪ್ರಮಾಣ (ವಾಗುವವು), ಮಿಕ್ಕವನ್ನು ಬಿಡಬೇಕಾಗುವದು. ಇದನ್ನು **ಪ್ರಮಾಣ ಲಕ್ಷಣದಲ್ಲಿ**[1] "(ಶ್ರುತಿ)ವಿರೋಧವಾಗುವಲ್ಲಿ (ಸ್ಮೃತಿಯು) ಬೇಡದೆ ಹೋಗುವದು ; ಏಕೆಂದರೆ (ವಿರೋಧ)ವಿಲ್ಲದಿದ್ದರೇ (ಮೂಲಶ್ರುತಿಯನ್ನು ಸ್ಮೃತಿಯಿಂದ) ಅನುಮಾನಿಸಬಹುದು"[2] (ಜೈ. ಸೂ. ೧-೩-೩) ಎಂದು ಹೇಳಿದೆ. **ಅತೀಂದ್ರಿಯವಾದ ವಿಷಯಗಳನ್ನು ಶ್ರುತಿಯಿಲ್ಲದೆ ಯಾವನೂ ಅರಿತುಕೊಳ್ಳಬಲ್ಲನೆಂದು ಹೇಳುವದಕ್ಕೆ ಆಗುವದಿಲ್ಲ ; ಏಕೆಂದರೆ (ಹಾಗೆ ಅರಿತುಕೊಳ್ಳುವದಕ್ಕೆ) ನಿಮಿತ್ತವಿರುವದಿಲ್ಲ.**[3] ಕಪಿಲಾದಿ ಸಿದ್ಧರಿಗೆ ಅಡ್ಡಿಯಿಲ್ಲದ ಜ್ಞಾನವಿರುವದರಿಂದ (ಅವರಿಗೆ ಇದು) ಶಕ್ಯವಾಗಿರುತ್ತದೆ[4] ಎಂದರೆ ಹಾಗಲ್ಲ; ಏಕೆಂದರೆ ಸಿದ್ಧಿಯೂ ಸಾಪೇಕ್ಷವಾಗಿರುತ್ತದೆ. **ಧರ್ಮವನ್ನು ಅನುಷ್ಠಾನಮಾಡುವದರಿಂದಲ್ಲವೆ, ಸಿದ್ಧಿಯು ಆಗತಕ್ಕದ್ದು ? ಆ ಧರ್ಮವು ಚೋದನಾ(ರೂಪವಾದ ವೇದ)ಪ್ರಮಾಣ(ದಿಂದ ತಿಳಿಯಬರತಕ್ಕದ್ದು).** ಆದ್ದರಿಂದ ಮೊದಲು ಸಿದ್ಧವಾಗಿರುವ ಚೋದನೆಯ ಅರ್ಥವನ್ನು ಆಮೇಲೆ ಸಿದ್ಧವಾಗುವ ಪುರುಷನ ವಚನದ ವಶದಿಂದ ಮೀರಿ ಶಂಕಿಸುವದಕ್ಕೆ ಆಗುವದಿಲ್ಲ.[5] ಸಿದ್ಧರನ್ನು ಆಶ್ರಯಿಸುತ್ತವೆಂದು ಕಲ್ಪಿಸಿದರೂ ಸಿದ್ಧರು ಬಹಳವಾಗಿರುವದರಿಂದ, (ನಾವು) ತೋರಿಸಿಕೊಟ್ಟಿರುವ ಪ್ರಕಾರದಿಂದ ಸ್ಮೃತಿಗಳಿಗೆ ವಿರುದ್ಧಾಭಿಪ್ರಾಯವಿರುವದರಿಂದ ಶ್ರುತಿಯನ್ನು ಆಶ್ರಯಿಸು

---

1. ಪೂರ್ವಮೀಮಾಂಸಾಶಾಸ್ತ್ರಕ್ಕೆ ಇದೊಂದು ಭಾಗ. ಶ್ರುತಿಪ್ರಮಾಣವನ್ನು ಕುರಿತು ವಿಚಾರಮಾಡುವದರಿಂದ ಈ ಹೆಸರು ಬಂದಿರಬಹುದೆಂದು ತೋರುತ್ತದೆ.

2. ಸ್ಮೃತಿಯು ಶ್ರುತಿಯ ಆಧಾರದಿಂದಲೇ ಹುಟ್ಟಿರುವದರಿಂದ ಸ್ಮೃತಿವಚನಕ್ಕೆ ಅನುಗುಣವಾಗಿ ಪ್ರತ್ಯಕ್ಷಶ್ರುತಿಯಿಲ್ಲದಿದ್ದರೂ ಅದನ್ನು ಅನುಮಾನದಿಂದ ಕಲ್ಪಿಸಬೇಕು ಎಂಬುದು ಒಂದು ನ್ಯಾಯ. ಆದರೆ ಶ್ರುತಿವಿರುದ್ಧವಾದ ಸ್ಮೃತಿವಚನಕ್ಕೆ ಇದು ಅನ್ವಯಿಸುವದಿಲ್ಲ ; ಆಗ ಸ್ಮೃತಿಯು ಅಪ್ರಮಾಣವೇ ಆಗುತ್ತದೆ- ಎಂಬುದು ಈ ಸೂತ್ರದ ತಾತ್ಪರ್ಯ.

3. ವೇದವೇ ಅತೀಂದ್ರಿಯಜ್ಞಾನಕ್ಕೆ ನಿಮಿತ್ತವು ; ವೇದವಿರುದ್ಧವಾದದ್ದು ನಿಜವಾದ ಅತೀಂದ್ರಿಯಜ್ಞಾನವಾಗಲಾರದು ಎಂದರ್ಥ.

4. ಯೋಗಿಪ್ರತ್ಯಕ್ಷದಿಂದ ಅತೀಂದ್ರಿಯಜ್ಞಾನವಾಗಬಹುದು- ಎಂದು ಭಾವ.

5. ಈ ಜನ್ಮದಲ್ಲಿ ಅಥವಾ ಹಿಂದಿನ ಜನ್ಮದಲ್ಲಿ ವೇದೋಕ್ತಧರ್ಮಾನುಷ್ಠಾನವನ್ನು ಮಾಡಿದ್ದರಿಂದಲೇ ಯಾರಿಗಾದರೂ ಸಿದ್ಧಿಯಾಗಬೇಕು ; ಆದ್ದರಿಂದ ಸಿದ್ಧಿಯನ್ನು ಆಶ್ರಯಿಸಿ ವೇದವಿರುದ್ಧವಾಗಿ ಶಂಕಿಸುವದು ಸರಿಯಲ್ಲ ಎಂದರ್ಥ.

ವದಕ್ಕಿಂತ ಬೇರೆಯಾದ (ಅರ್ಥ) ನಿರ್ಣಯಪ್ರಕಾರವಿರುವದಿಲ್ಲ.[1] (ಇದಲ್ಲದೆ) ಪರತಂತ್ರಪ್ರಜ್ಞನಾದವನಿಗೆ ಅಕಸ್ಮಾತ್ತಾಗಿ (ಒಂದಾನೊಂದು) ಗೊತ್ತಾದ ಸ್ಮೃತಿಯಲ್ಲಿ ಪಕ್ಷಪಾತವಿರುವದು ಸರಿಯಲ್ಲ.[2] ಏಕೆಂದರೆ ಒಬ್ಬೊಬ್ಬರಿಗೆ ಒಂದೊಂದರಲ್ಲಿ ಪಕ್ಷಪಾತವುಂಟಾದರೆ ಪುರುಷರ ಮತಿಯು ಎಲ್ಲಾ ಬಗೆಯದೂ ಆಗಿರುವದರಿಂದ ತತ್ತ್ವವು ನಿಲುಗಡೆಗೆ ಬಾರದೆ ಇರಬೇಕಾದೀತು.[3] ಆದ್ದರಿಂದ ಅವನೂ ಸ್ಮೃತಿಗಳ ವಿರುದ್ಧಾಭಿಪ್ರಾಯಗಳನ್ನು ಮುಂದಿಡುವದರಿಂದಲೂ ಶ್ರುತಿಗೆ ಅನುಸಾರವಾದದ್ದು, ಅನನುಸಾರವಾದದ್ದು- ಎಂಬ ವಿಷಯಗಳನ್ನು ವಿಂಗಡಿಸುವದರಿಂದಲೂ ಸರಿಯಾದ ಮಾರ್ಗದಲ್ಲಿಯೇ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಬೇಕು.

## ಕಾಪಿಲಮತವು ಆತ್ಮಭೇದವನ್ನು ಹೇಳುವದರಿಂದ ಶ್ರುತಿಸ್ಮೃತಿವಿರುದ್ಧ

(ಭಾಷ್ಯ)

೪೦೩. ಯಾ ತು ಶ್ರುತಿಃ ಕಪಿಲಸ್ಯ ಜ್ಞಾನಾತಿಶಯಂ ಪ್ರದರ್ಶಯನ್ತೀ ಪ್ರದರ್ಶಿತಾ ನ ತಯಾ ಶ್ರುತಿವಿರುದ್ಧಮಪಿ ಕಾಪಿಲಂ ಮತಂ ಶ್ರದ್ಧಾತುಂ ಶಕ್ಯಮ್ । ಕಪಿಲಮ್ ಇತಿ ಶ್ರುತಿಸಾಮಾನ್ಯಮಾತ್ರತ್ವಾತ್ । ಅನ್ಯಸ್ಯ ಚ ಕಪಿಲಸ್ಯ ಸಗರಪುತ್ರಾಣಾಂ ಪ್ರತಪ್ತುಃ ವಾಸುದೇವನಾಮ್ನಃ ಸ್ಮರಣಾತ್ । ಅನ್ಯಾರ್ಥದರ್ಶನಸ್ಯ ಚ ಪ್ರಾಪ್ತಿರಹಿತಸ್ಯ ಅಸಾಧಕತ್ವಾತ್ । ಭವತಿ ಚ ಅನ್ಯಾ ಮನೋರ್ಮಾಹಾತ್ಮ್ಯಂ ಪ್ರಖ್ಯಾಪಯನ್ತೀ ಶ್ರುತಿಃ "ಯದ್ವೈ ಕಿಂ ಚ ಮನುರವದತ್ ತದ್ಭೇಷಜಮ್" (ತೈ. ಸಂ. ೨-೨-೧೦-೨) ಇತಿ । ಮನುನಾ ಚ "ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ । ಸಂಪಶ್ಯನ್ನಾತ್ಮಯಾಜೀ ವೈ ಸ್ವಾರಾಜ್ಯಮಧಿಗಚ್ಛತಿ ॥" (ಮನು. ೧೨-೯೧) ಇತಿ ಸರ್ವಾತ್ಮದರ್ಶನಂ ಪ್ರಶಂಸತಾ ಕಾಪಿಲಂ ಮತಂ ನಿನ್ದ್ಯತೇ ಇತಿ ಗಮ್ಯತೇ । ಕಪಿಲೋ ಹಿ ನ ಸರ್ವಾತ್ಮತ್ವ

---

1. ಕಪಿಲ, ಕಣಾದ - ಮುಂತಾದವರ ಅನುಯಾಯಿಗಳು ಅವರನ್ನು ಸಿದ್ಧರೆಂದೇ ಎಣಿಸುತ್ತಾರೆ. ಆದರೆ ಆ ಸಿದ್ಧರ ಮತಗಳು ಪರಸ್ಪರವಿರುದ್ಧವಾಗಿರುವದರಿಂದ ಯಾರು ನಿಜವಾಗಿ ಸಿದ್ಧರು, ಯಾರು ಅಲ್ಲ ? -ಎಂಬುದನ್ನು ನಿರ್ಣಯಿಸುವದಕ್ಕೆ ವೇದಾನುಸಾರಿಯಾದ ಅಭಿಪ್ರಾಯದವರೇ ನಿಜವಾದ ಸಿದ್ಧರೆಂದು ಹೇಳಬೇಕಾಗುತ್ತದೆ ಎಂದರ್ಥ.

2. ತಾನೇ ವೇದದ ಅರ್ಥವನ್ನು ನೇರಾಗಿ ನಿರ್ಣಯಿಸಲಾರದವನು ಇಂಥವನೊಬ್ಬನ ಪಕ್ಷವು - ಉದಾಹರಣೆಗೆ ಕಪಿಲನ ಪಕ್ಷವು- ಸರಿ ಎನ್ನುವದಕ್ಕೆ ಕಾರಣವಿಲ್ಲ.

3. ಒಬ್ಬೊಬ್ಬರೂ ತಮ್ಮತಮ್ಮ ಮತವೇ ಸರಿ ಎಂದು ಪಟ್ಟುಹಿಡಿದರೆ ತತ್ತ್ವನಿರ್ಣಯವೇ ಆಗುವದಿಲ್ಲ.

ದರ್ಶನಮ್ ಅನುಮನ್ಯತೇ । ಆತ್ಮಭೇದಾಭ್ಯುಪಗಮಾತ್ । ಮಹಾಭಾರತೇऽಪಿ ಚ "ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು" (ಮೋ. ಧ. ೩೫೦-೧) ಇತಿ ವಿಚಾರ್ಯ "ಬಹವಃ ಪುರುಷಾ ರಾಜನ್ ಸಾಂಖ್ಯಯೋಗವಿಚಾರಿಣಾಮ್"[1] (ಮೋ. ಧ. ೩೫೦-೨) ಇತಿ ಪರಪಕ್ಷಮ್ ಉಪನ್ಯಸ್ಯ ತದ್ವ್ಯುದಾಸೇನ "ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ । ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ[2] ಗುಣಾಧಿಕಮ್" (ಮೋ. ಧ. ೩೫೦-೩) ಇತ್ಯುಪಕ್ರಮ್ಯ "ಮಮಾನ್ತರಾತ್ಮಾ ತವ ಚ ಯೇ ಚಾನ್ಯೇ ದೇಹಸಂಸ್ಥಿತಾಃ । ಸರ್ವೇಷಾಂ ಸಾಕ್ಷಿಭೂತೋऽಸೌ ನ ಗ್ರಾಹ್ಯಃ ಕೇನಚಿತ್ ಕ್ವಚಿತ್ ॥ ವಿಶ್ವಮೂರ್ಧಾ ವಿಶ್ವಭುಜೋ ವಿಶ್ವಪಾದಾಕ್ಷಿನಾಸಿಕಃ । ಏಕಶ್ಚರತಿ ಭೂತೇಷು ಸ್ವೈರಚಾರೀ ಯಥಾಸುಖಮ್ ॥[3]" (ಮೋ. ಧ. ೩೫೧-೪, ೫) ಇತಿ ಸರ್ವಾತ್ಮತೈವ ನಿರ್ಧಾರಿತಾ । ಶ್ರುತಿಶ್ಚ ಸರ್ವಾತ್ಮತಾಯಾಂ ಭವತಿ "ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ । ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭) ಇತ್ಯೇವಂವಿಧಾ । ಅತಶ್ಚ ಸಿದ್ಧಮ್ ಆತ್ಮಭೇದಕಲ್ಪನಯಾಪಿ ಕಪಿಲಸ್ಯ ತನ್ತ್ರಂ ವೇದವಿರುದ್ಧಂ ವೇದಾನುಸಾರಿಮನುವಚನವಿರುದ್ಧಂ ಚ ನ ಕೇವಲಂ ಸ್ವತನ್ತ್ರಪ್ರಕೃತಿಕಲ್ಪನಯೈವೇತಿ । ವೇದಸ್ಯ ಹಿ ನಿರಪೇಕ್ಷಂ ಸ್ವಾರ್ಥೇ ಪ್ರಾಮಾಣ್ಯಂ ರವೇರಿವ ರೂಪವಿಷಯೇ । ಪುರುಷವಚಸಾಂ ತು ಮೂಲಾನ್ತರಾಪೇಕ್ಷಂ ವಕ್ತೃಸ್ಮೃತಿವ್ಯವಹಿತಂ ಚ ಇತಿ ವಿಪ್ರಕರ್ಷಃ । ತಸ್ಮಾತ್ ವೇದವಿರುದ್ಧೇ ವಿಷಯೇ ಸ್ಮೃತ್ಯನವಕಾಶಪ್ರಸಙ್ಗೋ ನ ದೋಷಃ ॥

(ಭಾಷ್ಯಾರ್ಥ)

ಇನ್ನು ಕಪಿಲನಿಗೆ ಹೆಚ್ಚಿನ ಜ್ಞಾನ(ವುಂಟೆಂಬುದನ್ನು) ತಿಳಿಸುವ ಶ್ರುತಿಯನ್ನು (ನೀವು) ಉದಾಹರಿಸಿದಿರಷ್ಟೆ, ಆ (ಶ್ರುತಿ)ಯಿಂದ ಶ್ರುತಿವಿರುದ್ಧವಾದ ಕಾಪಿಲಮತವನ್ನು ಕೂಡ ನಂಬುವದಕ್ಕೆ ಸಾಧ್ಯವಿಲ್ಲ. ಏಕೆಂದರೆ (ಅದರಲ್ಲಿ) 'ಕಪಿಲನನ್ನು' ಎಂದು ಶ್ರುತಿಮಾನ್ಯ(ವೊಂದೇ ಇರುತ್ತದೆ). ನಗರಪುತ್ರರನ್ನು ಸುಟ್ಟ **ವಾಸುದೇವ**ನೆಂಬ ಮತ್ತೊಬ್ಬ ಕಪಿಲನನ್ನು **ಸ್ಮೃತಿಯಲ್ಲಿ**[4] **(ಹೇಳಿರುವದರಿಂದ)**ಲೂ (ಹೀಗೆಂದು ತಿಳಿಯಬೇಕು. ಪ್ರಮಾಣದ) ಪ್ರಾಪ್ತಿಯಿಲ್ಲದಿರುವ ಮತ್ತೊಂದಕ್ಕಾಗಿ ಬಂದಿರುವ ಶ್ರುತಿಯು (ವಿಶೇಷವಾದ ವಿಷಯಕ್ಕೆ)

---

1. "ಸಾಂಖ್ಯಯೋಗವಿಚಾರಣೇ" ಎಂದು ಅಚ್ಚಿನ ಪುಸ್ತಕದ ಪಾಠ.
2. "ವಿಶ್ವಂ ವ್ಯಾಖ್ಯಾಸ್ಯಾಮಿ" ಎಂದು ಅಚ್ಚಿನ ಪುಸ್ತಕದ ಪಾಠ.
3. ಅಚ್ಚಿನ ಪುಸ್ತಕದಲ್ಲಿ 'ಭೂತೇಷು' ಎಂಬುದಕ್ಕೆ 'ಕ್ಷೇತ್ರೇಷು' ಎಂದಿದೆ.
4. ರಾಮಾಯಣ ಬಾಲಕಾಂಡ ೨೮ನೆಯ ಸರ್ಗವನ್ನೂ ಭಾರತ ವನಪರ್ವದ ೧೦೭ನೆಯ ಅಧ್ಯಾಯವನ್ನೂ ನೋಡಿ.

ಸಾಧಕವಾಗಲಾರದು.[1] ಮನುವಿನ ಮಾಹಾತ್ಮ್ಯವನ್ನು ಹೊರಪಡಿಸುವ "ಮನುವು ಏನೇನು ಹೇಳಿರುವನೋ ಅದು ವೈದ್ಯವು" (ತೈ. ಸಂ. ೨-೧೦-೨) ಎಂಬ ಮತ್ತೊಂದು ಶ್ರುತಿಯೂ ಇದೆ. ಅಪರೆ ಮನುವು "ಸರ್ವಭೂತಗಳಲ್ಲಿ ತನ್ನನ್ನೂ ತನ್ನಲ್ಲಿ ಸರ್ವಭೂತಗಳನ್ನೂ ಕಂಡುಕೊಂಡ ಆತ್ಮಯಾಜಿಯು ಸ್ವಾರಾಜ್ಯವನ್ನು ಹೊಂದುತ್ತಾನೆ" (ಮನು. ೧೨-೯೧) ಎಂದು ಸರ್ವಾತ್ಮತ್ವ ದರ್ಶನವನ್ನು ಹೊಗಳುವದರಿಂದ ಕಾಪಿಲಮತವನ್ನು ನಿಂದಿಸಿರುತ್ತಾನೆಂದು ಗೊತ್ತಾಗುತ್ತದೆ. **ಕಪಿಲನು** ಆತ್ಮಭೇದವನ್ನು ಒಪ್ಪುವದರಿಂದ ಸರ್ವಾತ್ಮತ್ವ ದರ್ಶನವನ್ನು[2] ಒಪ್ಪುವದೇ ಇಲ್ಲ. **ಮಹಾಭಾರತದಲ್ಲಿಯೂ** "ಬ್ರಾಹ್ಮಣನೇ, ಪುರುಷರು ಅನೇಕರೊ ಅಥವಾ ಒಬ್ಬನೊ?"[3] (ಮೋ. ಧ. ೩೫೦-೧) ಎಂದು ವಿಚಾರಿಸಿ "ರಾಜನೆ, ಸಾಂಖ್ಯಯೋಗವಿಚಾರಿಗಳಿಗೆ ಪುರುಷರು ಅನೇಕರು"[4] (ಮೋ. ಧ. ೩೫೦-೨) ಎಂದು ಮತ್ತೊಬ್ಬರ ಪಕ್ಷವನ್ನು ಹೇಳಿ ಅದನ್ನು ತಿರಸ್ಕರಿಸುವದಕ್ಕಾಗಿ "ಬಹುಪುರುಷರಿಗೆ ಒಂದೇ ಯೋನಿ ಎಂದು ಹೇಗೆ ಹೇಳುವರೋ ಹಾಗೆ ಆ ಗುಣಾಧಿಕನಾದ[5] ವಿಶ್ವಪುರುಷನನ್ನು (ನಿನಗೆ) ಹೇಳುವೆನು" (೩೫೦-೩) ಎಂದು ಉಪಕ್ರಮಿಸಿ "ನನಗೂ ಅಂತರಾತ್ಮನು ನಿನಗೂ (ಅಂತರಾತ್ಮನು) ಇನ್ನೂ ಯಾರುಯಾರು ದೇಹವುಳ್ಳವರಾಗಿರುವರೋ (ಅವರಿಗೆಲ್ಲ ಅಂತರಾತ್ಮನು). ಈತನು ಎಲ್ಲರಿಗೂ ಸಾಕ್ಷಿಯು, ಯಾರಿಂದಲೂ ಎಂದಿಗೂ ಗ್ರಾಹ್ಯನಲ್ಲ. ವಿಶ್ವಮೂರ್ಧನೂ ವಿಶ್ವಭುಜನೂ ವಿಶ್ವಪಾದಾಕ್ಷಿ ನಾಸಿಕನೂ (ಆಗಿ) ತಾನೊಬ್ಬನೇ ಭೂತಗಳಲ್ಲಿ ಸ್ವತಂತ್ರನಾಗಿ ತನಗೆ ಅನುಕೂಲ ವಾದಂತೆ ನಡೆಯುತ್ತಿರುವನು" –ಎಂದು ಸರ್ವಾತ್ಮತ್ವವನ್ನೇ ನಿಶ್ಚಯಿಸಿರುತ್ತದೆ. ಸರ್ವಾತ್ಮತ್ವವಿಷಯದಲ್ಲಿ "ಎಲ್ಲಿ ಅರಿತವನಿಗೆ ಸರ್ವಭೂತಗಳೂ ಆತ್ಮನೇ

---

1. ೧-೩-೩೩ರ ಭಾಷ್ಯ ( ಭಾ. ಭಾ. ೩೦೩ )ದಲ್ಲಿ ಪ್ರಮಾಣಾಂತರಗೋಚರವೂ ಅಲ್ಲದ, ಪ್ರಮಾಣಾಂತರವಿರುದ್ಧವೂ ಅಲ್ಲದ, ಅರ್ಥವಾದವು ಇರುವ ವಿಷಯವನ್ನೇ ಲವಾಂತರತಾತ್ಪರ್ಯದಿಂದ ಹೇಳುತ್ತದೆ ಎಂದು ತಿಳಿಸಿತ್ತು. ಇಲ್ಲಿ ಸಾಂಖ್ಯಕಾಪಿಲನೆಂಬ ವಿಶೇಷವಿಲ್ಲದ್ದರಿಂದ ಈ ಕಪಿಲನನ್ನೇ ಶ್ರುತಿಯು ಹೇಳುವವೆಂಬುದಕ್ಕ ಪ್ರಮಾಣವಿಲ್ಲ. ಶ್ರುತಿಯು ವಾಸುದೇವಕಪಿಲನನ್ನು ಹೇಳುತ್ತದೆ ಎಂಬುದಕ್ಕೆ ಸಂಭಾವನಾಯುಕ್ತಿಯೂ ಇದೆ ಎಂದು ಹೇಳಿದೆ.

2. ಎಲ್ಲರಿಗೂ ಒಬ್ಬನೇ ಆತ್ಮನೆಂಬ ದರ್ಶನವು.

3. ಇದು ಜನಮೇಜಯನ ಪ್ರಶ್ನೆ.

4. ಇದು ವೈಶಂಪಾಯನನ ಉತ್ತರ.

5. ಸರ್ವಜ್ಞತ್ವಾದಿಗುಣಗಳಿಂದ ಎಲ್ಲರಿಗಿಂತಲೂ ಅಧಿಕನಾದ, ಅಥವಾ ಉಪಾಧಿಗಳ ಮೂಲಕವಾದ ಅನೇಕ ಗುಣಗಳುಳ್ಳವನಾಗಿ ಎಲ್ಲರಿಗಿಂತಲೂ ಮಿಗಿಲಾಗಿ ಗುಣಗಳಿಂದ ಕೂಡಿದ ಎಂದರ್ಥ.

ಆಯಿತೋ, ಏಕತ್ವವನ್ನು ಕಂಡುಕೊಂಡವನಿಗೆ ಅಲ್ಲಿ ಯಾವ ಶೋಕವು, ಯಾವ ಮೋಹವು ?" (ಈ. ೭) ಎಂದೀ ಪರಿಯಾಗಿ ಶ್ರುತಿಯೂ ಇದೆ. **ಆದ್ದರಿಂದಲೂ ಕಪಿಲನ ತಂತ್ರವು, ಸ್ವತಂತ್ರಪ್ರಕೃತಿಯನ್ನು ಕಲ್ಪಿಸಿರುವದರಿಂದ ಮಾತ್ರವೇ ಅಲ್ಲ, ಆತ್ಮಭೇದವನ್ನು ಕಲ್ಪಿಸಿರುವದರಿಂದಲೂ ವೇದವಿರುದ್ಧ(ವಾಗಿರುತ್ತದೆ), ವೇದಾನುಸಾರಿಯಾದ ಮನುವಚನಕ್ಕೆ ವಿರುದ್ಧವೂ (ಆಗಿರುತ್ತದೆ) ಎಂದು ಸಿದ್ಧವಾಯಿತು. ಸೂರ್ಯನಿಗೆ ಹೇಗೆ ರೂಪದ ವಿಷಯದಲ್ಲಿ (ಸ್ವತಂತ್ರಪ್ರಾಮಾಣ್ಯವಿದೆಯೋ) ಹಾಗೆ ವೇದಕ್ಕೆ ಮತ್ತೆ ಯಾವದೊಂದರ ಅಪೇಕ್ಷೆಯೂ ಇಲ್ಲದೆ ತನ್ನ ಅರ್ಥದಲ್ಲಿ ಪ್ರಾಮಾಣ್ಯ(ವಿರುತ್ತದೆ)ಯಲ್ಲವೆ ? ಆದರೆ ಪುರುಷರ ವಚನಗಳಿಗೋ[1] ಎಂದರೆ ಮತ್ತೊಂದು ಮೂಲದ ಅಪೇಕ್ಷೆಯಿಂದಲೂ ಹೇಳುವವರ ಸ್ಮೃತಿಯ ವ್ಯವಧಾನದಿಂದಲೂ (ಪ್ರಮಾಣತ್ವವು ಬರುವದು); ಆದ್ದರಿಂದ ಅದಕ್ಕೆ (ಪ್ರಾಮಾಣ್ಯವು ಸ್ವಲ್ಪ) ದೂರವಾಗಿರುತ್ತದೆ.[2]** ಆದ್ದರಿಂದ[3] ವೇದವಿರುದ್ಧವಾದ ವಿಷಯದಲ್ಲಿ ಸ್ಮೃತ್ಯನವಕಾಶವಾಗುವದೆಂಬುದು ದೋಷವಲ್ಲ.

## ಮಹದಾದಿತತ್ತ್ವಗಳು ಎಲ್ಲಿಯೂ ಕಾಣಬರುವದಿಲ್ಲ

**ಇತರೇಷಾಂ ಚಾನುಪಲಬ್ಧೇಃ ॥ ೨ ॥**

೨. ಮಿಕ್ಕ (ಮಹದಾದಿಗಳು) ಕಾಣಬರುವದಿಲ್ಲವಾದ್ದರಿಂದಲೂ (ದೋಷವಿಲ್ಲ).

(ಭಾಷ್ಯ)

೪೦೪. ಕುತಶ್ಚ ಸ್ಮೃತ್ಯನವಕಾಶಪ್ರಸಙ್ಗೋ ನ ದೋಷಃ ? (ಇತರೇಷಾಂ ಚಾನುಪಲಬ್ಧೇಃ) । ಪ್ರಧಾನಾತ್ ಇತರಾಣಿ ಯಾನಿ ಪ್ರಧಾನಪರಿಣಾಮತ್ವೇನ ಸ್ಮೃತೌ ಕಲ್ಪಿತಾನಿ ಮಹದಾದೀನಿ ನ ತಾನಿ ವೇದೇ

---

1. ವೇದವು ನಿತ್ಯವಾಗಿ ಅಪೌರುಷೇಯವೂ ಆಗಿರುವದರಿಂದ ತಾನೇ ಪ್ರಮಾಣವಾಗಿರುತ್ತದೆ. ಪರಮಾತ್ಮನು ಶಾಸ್ತ್ರಯೋನಿಯಾದರೂ ಕಪಿಲಾದಿಗಳಂತೆ ಅದನ್ನು ರಚಿಸಿರುವದಿಲ್ಲ, ಇದ್ದ ವೇದವನ್ನೇ ಹೊರಗೆಡಹಿರುತ್ತಾನೆ.

2. ಕಪಿಲಾದಿಗಳ ವಚನಕ್ಕೆ ಮೂಲವಾಗಿ ವೇದವಿರಬೇಕು; ಕಪಿಲಾದಿಗಳ ಸ್ಮೃತಿಯು ವೇದಕ್ಕೂ ನಮಗೂ ನಡುವೆಯಿರುವದರಿಂದ ಅವರ ಪ್ರಾಮಾಣ್ಯಕ್ಕೆ ಮತ್ತೊಂದರ ಅವಲಂಬನೆಯಿದೆ.

3. ಕಪಿಲಸ್ಮೃತಿಯು ಶ್ರುತಿವಿರುದ್ಧವೂ ಶ್ರುತ್ಯನುಸಾರಿಸ್ಮೃತಿವಿರುದ್ಧವೂ ಆಗಿರುವದರಿಂದ.

ಲೋಕೇ ವಾ ಉಪಲಭ್ಯನ್ತೇ | ಭೂತೇನ್ದ್ರಿಯಾಣಿ ತಾವತ್ ಲೋಕವೇದ ಪ್ರಸಿದ್ಧತ್ವಾತ್ ಶಕ್ಯನ್ತೇ ಸ್ಮರ್ತುಮ್ । ಅಲೋಕವೇದಪ್ರಸಿದ್ಧತ್ವಾತ್ ತು ಮಹದಾದೀನಾಂ ಷಷ್ಠಸ್ಯೇವ ಇನ್ದ್ರಿಯಾರ್ಥಸ್ಯ ನ ಸ್ಮೃತಿಃ ಅವಕಲ್ಪತೇ । ಯದಪಿ ಕ್ವಚಿತ್ ತತ್ಪರಮಿವ ಶ್ರವಣಮ್ ಅವಭಾಸತೇ ತದಪಿ ಅತತ್ಪರಂ ವ್ಯಾಖ್ಯಾತಮ್ "ಆನುಮಾನಿಕಮಪ್ಯೇಕೇಷಾಮ್" (೧-೪-೧) ಇತ್ಯತ್ರ । ಕಾರ್ಯಸ್ಮೃತೇಃ ಅಪ್ರಾಮಾಣ್ಯಾತ್ ಕಾರಣಸ್ಮೃತೇರಪಿ ಅಪ್ರಾಮಾಣ್ಯಂ ಯುಕ್ತಮ್ ಇತಿ ಅಭಿಪ್ರಾಯಃ | ತಸ್ಮಾದಪಿ ನ ಸ್ಮೃತ್ಯನವಕಾಶಪ್ರಸಙ್ಗೋ ದೋಷಃ | ತರ್ಕಾವಷ್ಟಮ್ಭಂ ತು "ನ ವಿಲಕ್ಷಣತ್ವಾತ್" (೨-೧-೪) ಇತ್ಯಾ ರಭ್ಯ ಉನ್ಮಥಿಷ್ಯತಿ ||

( ಭಾಷ್ಯಾರ್ಥ )

(ಸಾಂಖ್ಯ)ಸ್ಮೃತಿಗೆ ಅನವಕಾಶವುಂಟಾಗುವದೆಂಬುದು ಮತ್ತೂ ಏತರಿಂದ ದೋಷವಲ್ಲ? ಎಂದರೆ ( ಮಿಕ್ಕವು ಕಾಣದೆ ಇರುವದರಿಂದ ). ಪ್ರಧಾನ ಕ್ಕಿಂತ ಬೇರೆಯಾಗಿ ಪ್ರಧಾನದ ಪರಿಣಾಮವೆಂದು ( ಸಾಂಖ್ಯ )ಸ್ಮೃತಿಯಲ್ಲಿ ಕಲ್ಪಿಸಿರುವ ಮಹದಾದಿಗಳಿವೆಯಲ್ಲ, ಅವು ವೇದದಲ್ಲಾಗಲಿ ಲೋಕದಲ್ಲಾ ಗಲಿ ಕಾಣುವದಿಲ್ಲ. ಭೂತೇಂದ್ರಿಯಗಳೇನೋ ಲೋಕದಲ್ಲಿಯೂ ವೇದದಲ್ಲಿ ಯೂ ಪ್ರಸಿದ್ಧವಾಗಿರುವದರಿಂದ ( ಅವುಗಳನ್ನು ) ಸ್ಮರಿಸಿಕೊಂಡು ಹೇಳು ವದು ಆದೀತು. ಆದರೆ ಮಹದಾದಿಗಳು ಲೋಕದಲ್ಲಾಗಲಿ ವೇದದಲ್ಲಾಗಲಿ ಪ್ರಸಿದ್ಧವಾಗಿಲ್ಲವಾದ್ದರಿಂದ ಆರನೆಯ ಇಂದ್ರಿಯಾರ್ಥದಂತೆ[1] (ಅವನ್ನು) ಸ್ಮರಿಸು ವದು ಆಗಲಾರದು.[2] ಕೆಲವು (ಶ್ರುತಿವಾಕ್ಯಗಳಲ್ಲಿ) ಅವುಗಳನ್ನು ತಾತ್ಪರ್ಯ ದಿಂದ ಹೇಳಿರುವಂತೆ ಕಂಡುಬರುತ್ತದೆಯಲ್ಲ, ಅದೂ ಬೇರೆಯ (ಅರ್ಥದಲ್ಲಿ) ತಾತ್ಪರ್ಯವುಳ್ಳದ್ದೆಂದು 'ಆನುಮಾನಿಕಮಪ್ಯೇಕೇಷಾಮ್' (೧-೪-೧) ಎಂಬಲ್ಲಿ ವಿವರಿಸಿದ್ದಾಗಿದೆ. (ಹೀಗೆ) ಕಾರ್ಯಸ್ಮರಣವು ಅಪ್ರಮಾಣವಾಗಿರುವದರಿಂದ ಕಾರಣಸ್ಮರಣವೂ[3] ಅಪ್ರಮಾಣವು ಎಂಬುದು ಯುಕ್ತವು ಎಂದು ಅಭಿಪ್ರಾಯ. ಸ್ಮೃತ್ಯನವಕಾಶವುಂಟಾದೀತು ಎಂಬುದು ಈ (ಕಾರಣ)ದಿಂದಲೂ ದೋಷವಲ್ಲ.

---

1. ಜ್ಞಾನೇಂದ್ರಿಯಗಳಿಗೆ ವಿಷಯವಾಗಿರುವ ಶಬ್ದಾದಿಗಳಲ್ಲದೆ ಆರನೆಯದೊಂದು ಇಂದ್ರಿಯಾರ್ಥವಿರುವದೆಂದು ಕಲ್ಪಿಸುವದಕ್ಕೂ ಹೇಗೆ ಆಗುವಂತಿಲ್ಲವೋ ಹಾಗೆಯೇ.

2. ಅತ್ಯಂತ ಅಪ್ರಸಿದ್ಧವಾಗಿರುವ ಮಹದಾದಿಗಳನ್ನು ಕಪಿಲರು ಸರ್ವಜ್ಞ ರಾದ್ದರಿಂದ ವೇದದಿಂದ ಕಂಡುಹಿಡಿದು ತಮ್ಮ ತಂತ್ರದಲ್ಲಿ ಸೇರಿಸಿದ್ದಾರೆನ್ನುವದು ಆಗಲಾರದು.

3. ಕಾರಣವಾದ ಪ್ರಧಾನವನ್ನು ಕಲ್ಪಿಸಿರುವದೂ.

ತರ್ಕವನ್ನಾಶ್ರಯಿಸಿ (ಸಾಂಖ್ಯವಾದವನ್ನು ಸಾಧಿಸುವುದ)ನ್ನಾದರೋ (ಸೂತ್ರಕಾರರು) "ನ ವಿಲಕ್ಷಣತ್ವಾತ್" (೨-೧-೪) ಎಂಬುದರಿಂದ ಹಿಡಿದು ಖಂಡಿಸುತ್ತಾರೆ.[1]

## ೨. ಯೋಗಪ್ರತ್ಯುಕ್ತ್ಯಧಿಕರಣ

(ವೇದಾಂತವು ಯೋಗಸ್ಮೃತಿಗೆ ವಿರುದ್ಧವಾದ್ದರಿಂದ
ತ್ಯಾಜ್ಯವೆಂಬುದು ಸರಿಯಲ್ಲ)

**ಏತೇನ ಯೋಗಃ ಪ್ರತ್ಯುಕ್ತಃ ॥ ೩ ॥**

೩. ಇದರಿಂದ ಯೋಗವನ್ನೂ ತಿರಸ್ಕರಿಸಿದಂತೆ ಆಯಿತು.

## ಯೋಗಸ್ಮೃತಿಯೂ ವೇದವಿರುದ್ಧ

೪೦೫. ಏತೇನ ಸಾಂಖ್ಯಸ್ಮೃತಿಪ್ರತ್ಯಾಖ್ಯಾನೇನ ಯೋಗಸ್ಮೃತಿರಪಿ ಪ್ರತ್ಯಾಖ್ಯಾತಾ ದ್ರಷ್ಟವ್ಯಾ ಇತಿ ಅತಿದಿಶತಿ । ತತ್ರಾಪಿ ಶ್ರುತಿವಿರೋಧೇನ ಪ್ರಧಾನಂ ಸ್ವತನ್ತ್ರಮೇವ ಕಾರಣಮ್, ಮಹದಾದೀನಿ ಚ ಕಾರ್ಯಾಣಿ ಅಲೋಕವೇದಪ್ರಸಿದ್ಧಾನಿ ಕಲ್ಪ್ಯನ್ತೇ ॥

( ಭಾಷ್ಯಾರ್ಥ )

ಇದರಿಂದ ಎಂದರೆ (ಈ) ಸಾಂಖ್ಯಸ್ಮೃತಿಯ ನಿರಾಕರಣೆಯಿಂದ ಯೋಗಸ್ಮೃತಿಯನ್ನೂ ನಿರಾಕರಿಸಿದಂತೆ ಆಯಿತು –ಎಂದು ಅತಿದೇಶಮಾಡಿರುತ್ತಾರೆ. ಆ (ಸ್ಮೃತಿ)ಯಲ್ಲಿಯೂ ಶ್ರುತಿಗೆ ವಿರುದ್ಧವಾಗಿರುವ ಪ್ರಧಾನವೆಂಬ ಸ್ವತಂತ್ರ ಕಾರಣವನ್ನೇ (ಕಲ್ಪಿಸಿರುತ್ತದೆ) ; ಲೋಕವೇದಪ್ರಸಿದ್ಧವಲ್ಲದ ಮಹದಾದಿಗಳೆಂಬ ಕಾರ್ಯಗಳನ್ನೂ ಕಲ್ಪಿಸಿರುತ್ತದೆ.

## ಯೋಗಪಕ್ಷದಲ್ಲಿರುವ ಹೆಚ್ಚಿನ ಶಂಕೆ

( ಭಾಷ್ಯ )

೪೦೬. ನನು ಏವಂ ಸತಿ ಸಮಾನನ್ಯಾಯತ್ವಾತ್ ಪೂರ್ವೇಣೈವ ಏತದ್ ಗತಮ್ । ಕಿಮರ್ಥಂ ಪುನರತಿದಿಶ್ಯತೇ ? ಅಸ್ತಿ ಹಿ ಅತ್ರ ಅಭ್ಯಧಿಕಾ

1. ತರ್ಕಸಿದ್ಧವಾದದ್ದನ್ನು ವೇದವಿರುದ್ಧವೆಂದು ತಳ್ಳಬಹುದೆ ? ಎಂಬ ಶಂಕೆಗೆ ಪರಿಹಾರವು.

ಆಶಙ್ಕಾ । ಸಮ್ಯಗ್ದರ್ಶನಾಭ್ಯುಪಾಯೋ ಹಿ ಯೋಗೋ ವೇದೇ ವಿಹಿತಃ "ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (ಬೃ. ೨-೪-೫) ಇತಿ | "ತ್ರ್ಯುನ್ನತಂ[1] ಸ್ಥಾಪ್ಯ ಸಮಂ ಶರೀರಮ್" (ಶ್ವೇ. ೨-೮) ಇತ್ಯಾದಿನಾ ಚ ಆಸನಾದಿಕಲ್ಪನಾಪುರಸ್ಸರಂ ಬಹುಪ್ರಪಞ್ಚಂ ಯೋಗವಿಧಾನಂ ಶ್ವೇತಾಶ್ವತರೋಪನಿಷದಿ ದೃಶ್ಯತೇ । ಲಿಙ್ಗಾನಿ ಚ ವೈದಿಕಾನಿ ಯೋಗವಿಷಯಾಣಿ ಸಹಸ್ರಶ ಉಪಲಭ್ಯನ್ತೇ । "ತಾಂ ಯೋಗಮಿತಿ ಮನ್ಯನ್ತೇ ಸ್ಥಿರಾಮಿನ್ದ್ರಿಯಧಾರಣಾಮ್" (ಕ. ೨-೩-೧೧) ಇತಿ "ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್" (ಕ. ೨-೩-೧೮), ಇತಿ ಚೈವಮಾದೀನಿ | ಯೋಗಶಾಸ್ತ್ರೇಽಪಿ "ಅಥ ತತ್ತ್ವದರ್ಶನೋಪಾಯೋ ಯೋಗಃ" (?) ಇತಿ ಸಮ್ಯಗ್ದರ್ಶನಾಭ್ಯುಪಾಯತ್ವೇನೈವ ಯೋಗೋಽಙ್ಗೀಕ್ರಿಯತೇ । ಅತಃ ಸಂಪ್ರತಿಪನ್ನಾರ್ಥೈಕದೇಶತ್ವಾತ್ ಅಷ್ಟಕಾದಿಸ್ಮೃತಿವತ್ ಯೋಗಸ್ಮೃತಿರಪಿ ಅನಪವದನೀಯಾ ಭವಿಷ್ಯತಿ ಇತಿ | ಇಯಮ್ ಅಭ್ಯಧಿಕಾ ಆಶಙ್ಕಾ ಅತಿದೇಶೇನ ನಿವರ್ತ್ಯತೇ । ಅರ್ಥೈಕದೇಶಸಂಪ್ರತಿಪತ್ತಾವಪಿ ಅರ್ಥೈಕದೇಶವಿಪ್ರತಿಪತ್ತೇಃ ಪೂರ್ವೋಕ್ತಾಯಾಃ ದರ್ಶನಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :– ಹೀಗಾದರೆ (ಎರಡಕ್ಕೂ) ಸಮಾನಯುಕ್ತಿ ಇರುವದರಿಂದ ಹಿಂದಿನ (ಅಧಿಕರಣದಿಂದಲೇ) ಇದೂ ಆಗಿಹೋಯಿತಲ್ಲ ! ಮತ್ತೇಕೆ ಅತಿದೇಶಮಾಡಿದೆ ?

(ಸಮಾಧಾನ) :– ಇಲ್ಲಿ ಹೆಚ್ಚಿನ ಆಶಂಕೆಯೂ ಇದೆ. ಹೇಗೆಂದರೆ, "ಶ್ರವಣಮಾಡತಕ್ಕದ್ದು, ಮನನಮಾಡತಕ್ಕದ್ದು, ನಿದಿಧ್ಯಾಸಮಾಡತಕ್ಕದ್ದು" (ಬೃ. ೨-೪-೫) ಎಂದು ವೇದದಲ್ಲಿ ಸಮ್ಯಗ್ದರ್ಶನಕ್ಕೆ ಉಪಾಯವಾಗಿ **ಯೋಗ**ವನ್ನು[2] ವಿಧಿಸಿರುತ್ತದೆ. ಇದಲ್ಲದೆ "ಶರೀರವನ್ನು ಮೂರು ಭಾಗಗಳೂ (ಒಂದೇ) ಉನ್ನತವಾಗಿರುವಂತೆ ಸಮವಾಗಿ ಇಟ್ಟುಕೊಂಡು" (ಶ್ವೇ ೨-೮) ಮುಂತಾದ (ಗ್ರಂಥಭಾಗದಲ್ಲಿ) ಆಸನವೇ ಮುಂತಾದದ್ದನ್ನು ಕಲ್ಪಿಸಿಕೊಳ್ಳುವದರ ಮೂಲಕ ಬಹಳ ವಿವರವಾಗಿ ಯೋಗವನ್ನು ವಿಧಿಸಿರುವದು ಶ್ವೇತಾಶ್ವತರೋಪನಿಷತ್ತಿನಲ್ಲಿ ಕಂಡುಬರುತ್ತದೆ. ಮತ್ತು "ಸ್ಥಿರವಾಗಿ ಇಂದ್ರಿಯಗಳನ್ನು ಹಿಡಿದಿರುವದಿದೆಯಲ್ಲ, ಅದನ್ನು ಯೋಗವೆಂದು ತಿಳಿಯುವರು" (ಕ. ೨-೩-೧೧), "ಈ ವಿದ್ಯೆಯನ್ನೂ ಸಂಪೂರ್ಣವಾದ ಯೋಗವಿಧಿಯನ್ನೂ"

---

1. ಅಚ್ಚಿನ ಪುಸ್ತಕದಲ್ಲಿ 'ತ್ರಿರುನ್ನತಮ್' ಎಂದಿದೆ.
2. ನಿದಿಧ್ಯಾಸಶಬ್ದದಿಂದ ಚಿತ್ತವೃತ್ತಿನಿರೋಧರೂಪವಾದ ಯೋಗವನ್ನೇ

(ಕ ೨-೩-೧೮) ಇವೇ ಮುಂತಾದ ಯೋಗವಿಷಯಕವಾದ ಸಾವಿರಾರು ವೈದಿಕಲಿಂಗಗಳೂ ಕಂಡುಬರುತ್ತವೆ.[1] **ಯೋಗಶಾಸ್ತ್ರ**ದಲ್ಲಿಯೂ "ಇನ್ನು ತತ್ತ್ವದರ್ಶನಕ್ಕೆ ಉಪಾಯವಾದ ಯೋಗ(ವನ್ನು ಹೇಳುತ್ತೇವೆ)" (?) ಎಂದು ಸಮ್ಯಗ್ದರ್ಶನಕ್ಕೆ ಉಪಾಯವಾಗಿಯೇ ಯೋಗವನ್ನು ಅಂಗೀಕರಿಸಿರುತ್ತದೆ.[2] ಆದ್ದರಿಂದ (ತನ್ನ) ವಿಷಯದಲ್ಲಿ ಒಂದಂಶವು[3] (ವೇದಕ್ಕೂ) ಒಪ್ಪಿಗೆಯಾಗಿರುವದರಿಂದ ಅಷ್ಟಕಾದಿಸ್ಮೃತಿಗಳಂತೆ[4] ಯೋಗಸ್ಮೃತಿಯನ್ನು ಅಲ್ಲಗಳೆಯುವದು ಆಗಲಾರದು –ಎಂಬುದು (ಇಲ್ಲಿ ಹೆಚ್ಚಿನ ಆಶಂಕೆಯು). ಈ ಹೆಚ್ಚಿನ ಆಶಂಕೆಯನ್ನು (ಈ) ಅತಿದೇಶದಿಂದ ತೊಲಗಿಸಿರುತ್ತದೆ. ವಿಷಯದಲ್ಲಿ ಒಂದಂಶಕ್ಕೆ ಒಪ್ಪಿಗೆಯಾಗಿದ್ದರೂ ಹಿಂದೆ ಹೇಳಿರುವ ಇನ್ನೊಂದು ಅಂಶದ ವಿಷಯದಲ್ಲಿ[5] ವಿರುದ್ಧಾಭಿಪ್ರಾಯವು ಕಂಡುಬಂದಿರುವದರಿಂದ (ಹೀಗೆ ಖಂಡಿಸಿರುತ್ತದೆ)

## ಸಾಂಖ್ಯಯೋಗಗಳನ್ನೇ ವಿಶೇಷವಾಗಿ ಖಂಡಿಸಿರುವದೇಕೆ ?

( ಭಾಷ್ಯ )

೪೦೭. ಸತೀಷ್ವಪಿ ಅಧ್ಯಾತ್ಮವಿಷಯಾಸು ಬಹ್ವೀಷು ಸ್ಮೃತಿಷು ಸಾಂಖ್ಯಯೋಗಸ್ಮೃತ್ಯೋರೇವ ನಿರಾಕರಣೇ ಯತ್ನಃ ಕೃತಃ । ಸಾಂಖ್ಯಯೋಗೌ ಹಿ ಪರಮಪುರುಷಾರ್ಥಸಾಧನತ್ವೇನ ಲೋಕೇ ಪ್ರಖ್ಯಾತೌ, ಶಿಷ್ಟೈಶ್ಚ ಪರಿಗೃಹೀತೌ, ಲಿಙ್ಗೇನ ಚ ಶ್ರೌತೇನ ಉಪಬೃಂಹಿತೌ "ತತ್ಕಾರಣಂ ಸಾಂಖ್ಯಯೋಗಾಭಿಪನ್ನಂ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ" (ಶ್ವೇ. ೬-೧೩) ಇತಿ । ನಿರಾಕರಣಂ ತು ನ ಸಾಂಖ್ಯಜ್ಞಾನೇನ ವೇದನಿರಪೇಕ್ಷೇಣ ಯೋಗಮಾರ್ಗೇಣ ವಾ ನಿಃಶ್ರೇಯಸಮ್ ಅಧಿಗಮ್ಯತೇ ಇತಿ । ಶ್ರುತಿರ್ಹಿ ವೈದಿಕಾತ್ ಆತ್ಮೈಕತ್ವವಿಜ್ಞಾನಾದ್ ಅನ್ಯತ್ ನಿಃಶ್ರೇಯಸಸಾಧನಂ ವಾರಯತಿ "ತಮೇವ

---

1. ಯೋಗದ ವಿವರವನ್ನು ಹೇಳಿರುವದು, ಯೋಗವೆಂಬ ಶಬ್ದವನ್ನು ಪ್ರಯೋಗಿಸಿರುವದು –ಇವೆಲ್ಲ ವೇದಾಂತಜ್ಞಾನಕ್ಕೆ ಯೋಗವು ಬೇಕೆಂಬುದಕ್ಕೆ ಸಾಧಕ ಎಂದು ಭಾವ.

2. ಪಾತಂಜಲಯೋಗಶಾಸ್ತ್ರದಲ್ಲಿ ಈ ಅರ್ಥದ ಸೂತ್ರವಿಲ್ಲ; ಅಥ ಯೋಗಾನುಶಾಸನಮ್ ಎಂಬುದು ಅಲ್ಲಿ ಮೊಟ್ಟಮೊದಲನೆಯ ಸೂತ್ರ.

3. ಯೋಗದಿಂದ ಸಮ್ಯಗ್ಜ್ಞಾನವುಂಟಾಗುತ್ತದೆ ಎಂಬ ಅಂಶವು.

4. ಹೇಮಂತಶಿಶಿರಗಳಲ್ಲಿ ಹುಣ್ಣಿವೆಯಾದ ಬಳಿಕ ಅಷ್ಟಮಿಯಲ್ಲಿ ಮಾಡುವ ಯಾಗವಿಶೇಷವು 'ಅಷ್ಟಕಾ' ಎನಿಸುವದು. ಅಷ್ಟಕಾದಿಗಳನ್ನು ಹೇಳುವ ಸ್ಮೃತಿಯು ಪ್ರಮಾಣವೆಂದು ಪೂರ್ವಮೀಮಾಂಸದಲ್ಲಿ ತೋರಿಸಿಕೊಟ್ಟಿದೆ.

೫. ಪ್ರಧಾನವು ಸ್ವತಂತ್ರವಾಗಿ ಜಗತ್ಕಾರಣವಾಗಿದೆ; ಅದರಿಂದ ಮಹದಾದಿಗಳು ಹುಟ್ಟುತ್ತವೆ -ಎಂಬ ಅಂಶದಲ್ಲಿ.

*

ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ" (ಶ್ವೇ. ೩-೮) ಇತಿ | ದ್ವೈತಿನೋ ಹಿ ತೇ ಸಾಂಖ್ಯಾ ಯೋಗಾಶ್ಚ ನಾತ್ಮೈಕತ್ವದರ್ಶಿನಃ । ಯತ್ತು ದರ್ಶನಮ್ ಉಕ್ತಮ್ "ತತ್ಕಾರಣಂ ಸಾಂಖ್ಯಯೋಗಾಭಿಪನ್ನಮ್" ಇತಿ ವೈದಿಕಮೇವ ತತ್ರ ಜ್ಞಾನಂ ಧ್ಯಾನಂ ಚ ಸಾಂಖ್ಯಯೋಗಶಬ್ದಾಭ್ಯಾಮ್ ಅಭಿಲಪ್ಯತೇ ಪ್ರತ್ಯಾಸತ್ತೇಃ ಇತ್ಯವಗನ್ತವ್ಯಮ್ | ಯೇನ ತು ಅಂಶೇನ ನ ವಿರುಧ್ಯೇತೇ ತೇನ ಇಷ್ಟಮೇವ ಸಾಂಖ್ಯಯೋಗಸ್ಮೃತ್ಯೋಃ ಸಾವಕಾಶತ್ವಮ್। ತದ್ ಯಥಾ—"ಅಸಙ್ಗೋ ಹ್ಯಯಂ ಪುರುಷಃ" (ಬೃ. ೪-೩-೧೬) ಇತ್ಯೇವಮಾದಿಶ್ರುತಿಪ್ರಸಿದ್ಧಮೇವ ಪುರುಷಸ್ಯ ವಿಶುದ್ಧತ್ವಂ ನಿರ್ಗುಣಪುರುಷನಿರೂಪಣೇನ ಸಾಂಖ್ಯೈಃ ಅಭ್ಯುಪಗಮ್ಯತೇ| ತಥಾ ಚ ಯೋಗೈರಪಿ "ಅಥ ಪರಿವ್ರಾಡ್ವಿವರ್ಣವಾಸಾ ಮುಣ್ಡೋಽಪರಿಗ್ರಹಃ"(ಜಾ. ೫) ಇತ್ಯೇವಮಾದಿಶ್ರುತಿಪ್ರಸಿದ್ಧಮೇವ ನಿವೃತ್ತಿನಿಷ್ಠತ್ವಂ ಪ್ರವ್ರಜ್ಯಾದ್ಯುಪದೇಶೇನ ಅನುಗಮ್ಯತೇ ||

( ಭಾಷ್ಯಾರ್ಥ )

ಅಧ್ಯಾತ್ಮವಿಷಯವಾದ ಸ್ಮೃತಿಗಳು ಬಹಳವಾಗಿದ್ದರೂ ಸಾಂಖ್ಯಯೋಗ ಸ್ಮೃತಿಗಳನ್ನೇ ನಿರಾಕರಿಸುವದರಲ್ಲಿ (ವಿಶೇಷವಾದ) ಯತ್ನವನ್ನು ಮಾಡಿರುತ್ತದೆ. ಏಕೆಂದರೆ ಸಾಂಖ್ಯಯೋಗಗಳು ಪರಮಪುರುಷಾರ್ಥಕ್ಕೆ ಸಾಧನವೆಂದು ಲೋಕದಲ್ಲಿ ಪ್ರಸಿದ್ಧವಾಗಿರುತ್ತವೆ; ಶಿಷ್ಟರೂ ಅವನ್ನು ಪರಿಗ್ರಹಿಸಿರುತ್ತಾರೆ.[1] "ಸಾಂಖ್ಯಯೋಗಗಳಿಂದ ಪ್ರಾಪ್ತವಾಗುವ ಆ (ಜಗತ್ತಿಗೆ) ಕಾರಣನಾಗಿರುವ ದೇವನನ್ನು ಅರಿತುಕೊಂಡರೆ ಸರ್ವಪಾಶಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ" (ಶ್ವೇ. ೬-೧೩) ಎಂಬ ಶ್ರುತಿಯ ಲಿಂಗದ ಬೆಂಬಲವುಳ್ಳವೂ (ಆಗಿರುತ್ತವೆ).[2]

ಆದರೆ (ಇವುಗಳನ್ನು) ನಿರಾಕರಿಸಿರುವದೇಕೆಂದರೆ ವೇದವನ್ನು ಬಿಟ್ಟ ಸಾಂಖ್ಯಜ್ಞಾನದಿಂದಲಾಗಲಿ ಯೋಗಮಾರ್ಗದಿಂದಲಾಗಲಿ ನಿಃಶ್ರೇಯಸವು ಸಿಕ್ಕುವದಿಲ್ಲ. ಏಕೆಂದರೆ "ಅವನನ್ನೇ ಅರಿತುಕೊಂಡರೆ ಅತಿಮೃತ್ಯುವನ್ನು ಹೊಂದುತ್ತಾನೆ, (ಅದನ್ನು) ಹೊಂದುವದಕ್ಕೆ ಇನ್ನೊಂದು ಹಾದಿಯಿಲ್ಲ" (ಶ್ವೇ. ೩-೮) ಎಂದು ವೈದಿಕವಾದ ಆತ್ಮೈಕತ್ವವಿಜ್ಞಾನಕ್ಕಿಂತ ಮತ್ತೆ ಯಾವದೂ ನಿಃಶ್ರೇಯಸಕ್ಕೆ ಸಾಧನವು ಇಲ್ಲವೆನ್ನುತ್ತದೆ. ಆ ಸಾಂಖ್ಯರೂ ಯೋಗಿಗಳೂ

---

1. ಭಾರತಾದಿಗಳಲ್ಲಿ ಸಾಂಖ್ಯಯೋಗಗಳನ್ನು ಒಪ್ಪಿ ತತ್ತ್ವವನ್ನು ಪ್ರತಿಪಾದಿಸಿರುವದು ಕಂಡುಬರುತ್ತದೆ.

2. ಇಲ್ಲಿ ಪರಮೇಶ್ವರನು ಜಗತ್ಕಾರಣನೆಂದು ಹೇಳಿರುವದರಿಂದ ನಿರೀಶ್ವರಸಾಂಖ್ಯರಿಗೆ ಇದು ಅನುಗುಣವಾಗಿಲ್ಲವಾದರೂ ಸೇಶ್ವರಸಾಂಖ್ಯರಿಗೆ ಹೊಂದುತ್ತದೆ ಎಂಬ ಕಾರಣದಿಂದ ಇವನ್ನು ಉದಾಹರಿಸಿರಬಹುದು.

ದ್ವೈತಿಗಳೇ, ಆತ್ಮೈಕತ್ವದರ್ಶಿಗಳಲ್ಲ.[1] ಇನ್ನು "ಸಾಂಖ್ಯಯೋಗಗಳಿಂದ ಪ್ರಾಪ್ತವಾಗುವ ಆ ಕಾರಣವನ್ನು ..." (ಶ್ವೇ. ೬-೧೩) ಎಂಬ ಶ್ರುತಿಯನ್ನು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅಲ್ಲಿ ವೈದಿಕವಾದ ಜ್ಞಾನವನ್ನೇ ಮತ್ತು ಧ್ಯಾನವನ್ನೇ ಸಾಂಖ್ಯಯೋಗಶಬ್ದಗಳಿಂದ ಹೇಳಿರುತ್ತದೆ. ಏಕೆಂದರೆ (ಅವೇ ಅದಕ್ಕೆ) ಹತ್ತಿರವಾಗಿರುತ್ತವೆ[2] ಎಂದು ತಿಳಿಯಬೇಕು.

ಆದರೆ **ಯಾವ ಅಂಶದಲ್ಲಿ (ವೇದಕ್ಕೆ) ವಿರುದ್ಧವಾಗಿಲ್ಲವೋ ಆ (ಅಂಶದಲ್ಲಿ) ಸಾಂಖ್ಯಯೋಗಸ್ಮೃತಿಗಳು ಸಾವಕಾಶವೆಂಬುದು ನಮಗೆ ಇಷ್ಟವೇ.**[3] ಅದು ಹೇಗೆಂದರೆ "ಈ ಪುರುಷನು ಅಸಂಗನಲ್ಲವೆ ?" (ಬೃ. ೪-೩-೧೬) ಎಂಬಿವೇ ಮುಂತಾದ ಶ್ರುತಿಪ್ರಸಿದ್ಧವೇ ಆಗಿರುವ ಪುರುಷನ ಶುದ್ಧತ್ವವನ್ನೇ ನಿರ್ಗುಣಪುರುಷನನ್ನು ಗೊತ್ತುಮಾಡುವದರ ಮೂಲಕ ಸಾಂಖ್ಯರು ಒಪ್ಪಿರುತ್ತಾರೆ. ಮತ್ತು ಹಾಗೆಯೇ ' ಇನ್ನು ಪರಿವ್ರಾಜಕನ (ವಿಷಯ) : ವಿವರ್ಣವಾದ ಬಟ್ಟೆಯನ್ನುಟ್ಟು, ತಲೆಬೋಳಿಸಿಕೊಂಡು, ತನ್ನದೆಂಬುದಿಲ್ಲದೆ" (ಜಾ. ೫) ಎಂದು ಮುಂತಾಗಿರುವ ಶ್ರುತಿಪ್ರಸಿದ್ಧವೇ ಆಗಿರುವ ನಿವೃತ್ತಿನಿಷ್ಠೆಯಾದ ಪ್ರವ್ರಜ್ಯವೇ ಮುಂತಾದದ್ದನ್ನೇ ಯೋಗಿಗಳೂ ಅಂಗೀಕರಿಸಿರುತ್ತಾರೆ.[4]

## ಮಿಕ್ಕ ಸ್ಮೃತಿಗಳೂ ಅವಿರುದ್ಧಾಂಶದಲ್ಲಿ ಸಾವಕಾಶ

(ಭಾಷ್ಯ)

೪೦೮. ಏತೇನ ಸರ್ವಾಣಿ ತರ್ಕಸ್ಮರಣಾನಿ ಪ್ರತಿವಕ್ತವ್ಯಾನಿ । ತಾನ್ಯಪಿ ತರ್ಕೋಪಪತ್ತಿಭ್ಯಾಂ ತತ್ತ್ವಜ್ಞಾನಾಯ ಉಪಕುರ್ವನ್ತಿ ಇತಿ ಚೇತ್ ಉಪಕುರ್ವನ್ತು ನಾಮ। ತತ್ತ್ವಜ್ಞಾನಂ ತು ವೇದಾನ್ತವಾಕ್ಯೇಭ್ಯ ಏವ ಭವತಿ।

---

1. ಸೂತ್ರಕಾರರು ಏಕತ್ವವಾದಿಗಳಾದದ್ದರಿಂದಲೇ ದ್ವೈತಿಗಳಾದ ಸಾಂಖ್ಯಯೋಗಸ್ಮೃತಿಗಳನ್ನು ಖಂಡಿಸಿರುತ್ತಾರೆಂದು ಹೇಳಿದಂತೆ ಆಯಿತು. ಪೀಠಿಕೆಯನ್ನು ನೋಡಿ.

2. ವೇದದಲ್ಲಿ ಹೇಳಿರುವ ಏಕತ್ವಜ್ಞಾನವೇ ಸಾಂಖ್ಯವು, ಅದಕ್ಕೆ ಅಂತರಂಗವಾದ ವೈದಿಕನಿದಿಧ್ಯಾಸನವೇ ಯೋಗವು - ಎಂದು ಅರ್ಥಮಾಡುವದು ಶ್ರುತಿಗೆ ಹತ್ತಿರವಾಗುತ್ತದೆ. ಸಾಂಖ್ಯಸ್ಮೃತಿಯಲ್ಲಿ ಹೇಳಿರುವ 'ಪ್ರಕೃತಿಪುರುಷವಿವೇಕವೇ ಜ್ಞಾನವು' ಯೋಗಶಾಸ್ತ್ರದಲ್ಲಿ ಹೇಳಿರುವ ಚಿತ್ತವೃತ್ತಿನಿರೋಧವೇ ಯೋಗವು ಎಂದರೆ ಸ್ಮೃತಿವ್ಯವಹಿತವಾಗುವದರಿಂದ ದೂರವಾಗುತ್ತದೆ- ಎಂದರ್ಥ.

3. ವೇದವಿರುದ್ಧವಲ್ಲದ್ದನ್ನು ಒಪ್ಪುವೆವೆಂಬುದು ಮಿಕ್ಕ ಸಿದ್ಧಾಂತಗಳಿಗೂ ಹೊಂದುತ್ತದೆ.- ಎಂಬುದನ್ನು ಮುಂದೆ ಈ ಸೂತ್ರದ ಭಾಷ್ಯದಲ್ಲಿಯೇ ತಿಳಿಸುತ್ತಾರೆ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿ.

4 ಯೋಗಸೂತ್ರದಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ಹೇಳಿರುವಂತೆ ಕಾಣುವದಿಲ್ಲ.

"ನಾವೇದವಿನ್ಮನುತೇ ತಂ ಬೃಹನ್ತಮ್" (ತೈ ಬ್ರಾ. ೩-೧೨-೯-೭), "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" (ಬೃ. ೩-೯-೨೬) ಇತ್ಯೇವಮಾದಿಶ್ರುತಿಭ್ಯಃ ॥

(ಭಾಷ್ಯಾರ್ಥ)

ಇದರಿಂದ ಮಿಕ್ಕ ತರ್ಕಸ್ಮೃತಿಗಳನ್ನೂ ತಿರಸ್ಕರಿಸಿದಂತೆ ಆಯಿತು. ಅವುಗಳೂ ತರ್ಕೋಪಪತ್ತಿಗಳಿಂದ ತತ್ತ್ವಜ್ಞಾನಕ್ಕೆ ಉಪಕಾರಗಳಾಗಿವೆ ಎಂದರೆ, ಉಪಕಾರಕವಾಗಿದ್ದರೂ ಇರಲಿ; ತತ್ತ್ವಜ್ಞಾನವಾದರೋ ವೇದಾಂತ ವಾಕ್ಯಗಳಿಂದಲೇ ಆಗುತ್ತದೆ.[1] "ವೇದವಿದನಲ್ಲದವನು ಆ ದೊಡ್ಡ (ಆತ್ಮನನ್ನು) ಅರಿತುಕೊಳ್ಳಲಾರನು (ತೈ. ಭಾ. ೩-೧೨-೯-೭), "ಆ ಔಪನಿಷದಪುರುಷನನ್ನು (ಕುರಿತು) ನಿನ್ನನ್ನು ಕೇಳುತ್ತಿದ್ದೇನೆ'' (ಬೃ. ೩-೯-೨೬) -ಎಂದು ಮುಂತಾಗಿರುವ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ).

## ೩. ವಿಲಕ್ಷಣತ್ವಾಧಿಕರಣ (ಸೂ. ೪-೧೨)

(ಬ್ರಹ್ಮಕಾರಣವಾದಕ್ಕೆ ತರ್ಕನಿಮಿತ್ತವಾದ ಆಕ್ಷೇಪವೂ ಇಲ್ಲ)

### ಪೂರ್ವಪಕ್ಷ:
### ತರ್ಕನಿಮಿತ್ತವಾದ ಆಕ್ಷೇಪವನ್ನೂ ಇಲ್ಲಿ ಮಾಡಬಹುದು

(ಭಾಷ್ಯ)

೪೮೯. ಬ್ರಹ್ಮ ಅಸ್ಯ ಜಗತೋ ನಿಮಿತ್ತಕಾರಣಂ ಪ್ರಕೃತಿಶ್ಚ ಇತ್ಯಸ್ಯ ಪಕ್ಷಸ್ಯ ಆಕ್ಷೇಪಃ ಸ್ಮೃತಿನಿಮಿತ್ತಃ ಪರಿಹೃತಃ । ತರ್ಕನಿಮಿತ್ತಃ ಇದಾನೀಮ್ ಆಕ್ಷೇಪಃ ಪರಿಹ್ರಿಯತೇ । ಕುತಃ ಪುನಃ ಅಸ್ಮಿನ್ ಅವಧಾರಿತೇ ಆಗಮಾರ್ಥೇ ತರ್ಕನಿಮಿತ್ತಸ್ಯ ಆಕ್ಷೇಪಸ್ಯ ಅವಕಾಶಃ? ನನು ಧರ್ಮೇ ಇವ ಬ್ರಹ್ಮಣ್ಯಪಿ ಅನಪೇಕ್ಷಃ ಆಗಮೋ ಭವಿತುಮರ್ಹತಿ । ಭವೇತ್ ಅಯಮ್ ಅವಷ್ಟಮ್ಭಃ ಯದಿ ಪ್ರಮಾಣಾನ್ತರಾನವಗಾಹ್ಯಃ ಆಗಮಮಾತ್ರಪ್ರಮೇಯಃ ಅಯಮರ್ಥಃ ಸ್ಯಾತ್ ಅನುಷ್ಠೇಯರೂಪ ಇವ ಧರ್ಮಃ । ಪರಿನಿಷ್ಪನ್ನರೂಪಂ ತು ಬ್ರಹ್ಮ ಅವಗಮ್ಯತೇ । ಪರಿನಿಷ್ಪನ್ನೇ ಚ ವಸ್ತುನಿ ಪ್ರಮಾಣಾನ್ತರಾಣಾಮ್ ಅಸ್ತಿ

1. ತರ್ಕೋಪಪತ್ತಿಗಳು ಉಪಕರಣವಾದರೆ ಆಗಲಿ, ಪ್ರಮಾಣವು ಮಾತ್ರ ವೇದಾಂತವಾಕ್ಯವೇ. ಆದ್ದರಿಂದ ಬ್ರಹ್ಮವು ಶಾಸ್ತ್ರಯೋನಿ ಎಂದು ಹಿಂದೆ (೧-೧-೩) ಹೇಳಿದೆ ಎಂದು ಭಾವ. ಇಲ್ಲಿ ತರ್ಕವೆಂದರೆ ವೇದಾಂತಾನುಗುಣವಾದ ಸಂಭಾವನಾಯುಕ್ತಿರೂಪವಾದ ಅನುಮಾನವು, ಉಪಪತ್ತಿ ಎಂದರೆ ಹೊಂದಿಕೆಯಾದ ಮಿಕ್ಕ ಯುಕ್ತಿಗಳು ಎಂದು ವಿವೇಚನೆಮಾಡಿಕೊಳ್ಳಬೇಕು

ಅವಕಾಶಃ ಯಥಾ ಪೃಥಿವ್ಯಾದಿಷು । ಯಥಾ ಚ ಶ್ರುತೀನಾಂ ಪರಸ್ಪರ ವಿರೋಧೇ ಸತಿ ಏಕವಶೇನ ಇತರಾ ನೀಯನ್ತೇ, ಏವಂ ಪ್ರಮಾಣಾಂತರ ವಿರೋಧೇಽಪಿ ತದ್ವಶೇನೈವ ಶ್ರುತಿಃ ನೀಯೇತ| ದೃಷ್ಟಸಾಮ್ಯೇನ ಚ ಅದೃಷ್ಟಮ್ ಅರ್ಥಂ ಸಮರ್ಥಯನ್ತೀ ಯುಕ್ತಿಃ ಅನುಭವಸ್ಯ ಸಂನಿಕೃಷ್ಯತೇ | ವಿಪ್ರ ಕೃಷ್ಯತೇ ತು ಶ್ರುತಿಃ ಐತಿಹ್ಯಮಾತ್ರೇಣ ಸ್ವಾರ್ಥಾಭಿಧಾನಾತ್ | ಅನು ಭವಾವಸಾನಂ ಚ ಬ್ರಹ್ಮವಿಜ್ಞಾನಮ್ ಅವಿದ್ಯಾಯಾ ನಿವರ್ತಕಂ ಮೋಕ್ಷ ಸಾಧನಂ ಚ ದೃಷ್ಟಫಲತಯಾ ಇಷ್ಯತೇ | ಶ್ರುತಿರಪಿ "ಶ್ರೋತವ್ಯೋ ಮನ್ತವ್ಯಃ" (ಬೃ. ೨–೪–೫) ಇತಿ ಶ್ರವಣವ್ಯತಿರೇಕೇಣ ಮನನಂ ವಿದಧತೀ ತರ್ಕಮಪಿ ಆದರ್ತವ್ಯಂ ದರ್ಶಯತಿ | ಅತಃ ತರ್ಕನಿಮಿತ್ತಂ ಪುನಃ ಆಕ್ಷೇಪಃ ಕ್ರಿಯತೇ 'ನ ವಿಲಕ್ಷಣತ್ವಾತ್' ಇತಿ ||

(ಭಾಷ್ಯಾರ್ಥ)

ಬ್ರಹ್ಮವು ಈ ಜಗತ್ತಿಗೆ ನಿಮಿತ್ತಕಾರಣವೂ ಪ್ರಕೃತಿಯೂ ಆಗಿದೆ ಎಂಬ ಪಕ್ಷಕ್ಕೆ ಸ್ಮೃತಿನಿಮಿತ್ತವಾದ ಆಕ್ಷೇಪವನ್ನು ಪರಿಹರಿಸಿದ್ದಾಯಿತು. ತರ್ಕ ನಿಮಿತ್ತವಾದ ಆಕ್ಷೇಪವನ್ನು ಈಗ ಪರಿಹರಿಸಲಾಗುತ್ತದೆ.

(ಆಕ್ಷೇಪ) :– ಆದರೆ ಈ ಆಗಮಾರ್ಥವನ್ನು[1] ನಿಶ್ಚಯಿಸಿದ ಬಳಿಕ ತರ್ಕನಿಮಿತ್ತವಾದ ಆಕ್ಷೇಪಕ್ಕೆ ಅವಕಾಶವು ಎಲ್ಲಿಂದ (ಬರುತ್ತದೆ) ? ಧರ್ಮದ ವಿಷಯದಲ್ಲಿ (ಹೇಗೋ) ಹಾಗೆ ಬ್ರಹ್ಮವಿಷಯದಲ್ಲಿಯೂ ಆಗಮವು ಅನಪೇಕ್ಷ ವೇ[2] ಆಗಿರಬೇಕಲ್ಲವೆ ?

(ಸಮಾಧಾನ):– ಅನುಷ್ಠೇಯರೂಪವಾದ ಧರ್ಮದಂತೆ ಈ ವಿಷಯವು ಮತ್ತೊಂದು ಪ್ರಮಾಣದಿಂದ ಅರಿಯಲಾರದೆ ಆಗಮಮಾತ್ರದಿಂದ ಅರಿತು ಕೊಳ್ಳಬೇಕಾದದ್ದಾಗಿದ್ದರೆ ಈ (ದೃಷ್ಟಾಂತವನ್ನು) ಆಶ್ರಯಿಸಬಹುದಾಗಿತ್ತು. ಆದರೆ ಬ್ರಹ್ಮವು ಪರಿನಿಷ್ಪನ್ನರೂಪವೆಂದು[3] ಗೊತ್ತಾಗಿರುತ್ತದೆ. ಪರಿನಿಷ್ಪನ್ನ ವಾದ ವಸ್ತುವಿನಲ್ಲಿ ಬೇರೆ ಪ್ರಮಾಣಗಳಿಗೂ ಅವಕಾಶವಿರುತ್ತದೆ : ಉದಾಹರಣೆಗೆ (ಪರಿನಿಷ್ಪನ್ನವಾದ) ಪೃಥಿವ್ಯಾದಿಗಳಲ್ಲಿ (ಬೇರೆಯ ಪ್ರಮಾಣ

---

1. ವೇದಾರ್ಥವಾದ ಜಗತ್ಕಾರಣಬ್ರಹ್ಮವನ್ನು.
2. ಮತ್ತೊಂದು ಪ್ರಮಾಣದ ಹಂಗಿಲ್ಲದ್ದೇ.
3. ಭೂತವಸ್ತುವೆಂದು.

ಗಳಿಗೆ ಅವಕಾಶವುಂಟು).[1] ಮತ್ತು ಶ್ರುತಿಗಳು ಒಂದಕ್ಕೊಂದು ವಿರುದ್ಧವಾಗಿದ್ದರೆ ಒಂದಕ್ಕೆ ವಶವಾಗಿ ಮಿಕ್ಕವುಗಳನ್ನು ಹೇಗೆ ಎಳೆದು (ಅರ್ಥ)ಮಾಡುತ್ತಾರೋ[2] ಹಾಗೆಯೇ (ಶ್ರುತಿಯು) ಪ್ರಮಾಣಾಂತರಕ್ಕೆ ವಿರುದ್ಧವಾಗಿದ್ದರೆ ಶ್ರುತಿಯನ್ನು ಆ (ಪ್ರಮಾಣಾಂತರಕ್ಕೆ) ತಕ್ಕಂತೆಯೇ ಎಳೆದು (ಅರ್ಥ)ಮಾಡಬೇಕು.[3] ದೃಷ್ಟವಾದದ್ದರ ಹೋಲಿಕೆಯಿಂದ ಅದೃಷ್ಟವಾದ ವಿಷಯವನ್ನು ಸಾಧಿಸುವ ಯುಕ್ತಿಯು ಅನುಭವಕ್ಕೆ ಹತ್ತಿರವಾಗಿರುತ್ತದೆ ; ಆದರೆ ಶ್ರುತಿಯು ಐತಿಹ್ಯಮಾತ್ರದಿಂದ ತನ್ನ ಅರ್ಥವನ್ನು ಹೇಳುವದರಿಂದ (ಅನುಭವಕ್ಕೆ) ದೂರವಾಗಿರುತ್ತದೆ[4] ಬ್ರಹ್ಮವಿಜ್ಞಾನವು ಅನುಭವದಲ್ಲಿ ಕೊನೆಗಾಣತಕ್ಕದ್ದಾಗಿ ಅವಿದ್ಯೆಯನ್ನು ತೊಲಗಿಸುತ್ತದೆ ಎಂದೂ[5] ದೃಷ್ಟಫಲವುಳ್ಳದ್ದಾಗಿ ಮೋಕ್ಷಸಾಧನವೆಂದೂ (ಸಿದ್ಧಾಂತದಲ್ಲಿ) ಒಪ್ಪಲಾಗಿದೆ. ''(ಆತ್ಮನನ್ನು) ಶ್ರವಣಮಾಡತಕ್ಕದ್ದು ಮನನಮಾಡತಕ್ಕದ್ದು'' (ಬೃ. ೨-೪-೫) ಎಂದು ಶ್ರವಣಕ್ಕಿಂತ ಬೇರೆಯಾಗಿ ಮನನವನ್ನೂ ಶ್ರುತಿಯು ವಿಧಿಸಿರುವದರಿಂದ ತರ್ಕವನ್ನೂ ಆದರಿಸಬೇಕೆಂದು ತಿಳಿಸಿರುತ್ತದೆ.[6] ಆದ್ದರಿಂದ 'ನ ವಿಲಕ್ಷಣತ್ವಾತ್' ಎಂದು (ಈ) ತರ್ಕನಿಮಿತ್ತವಾದ ಆಕ್ಷೇಪವನ್ನು ಮತ್ತು ಇಲ್ಲಿ ಮಾಡಿರುತ್ತದೆ.

---

1. ಪೃಥಿವ್ಯಾದಿಗಳು ಇಂದ್ರಿಯಗಳಿಗೆ ವಿಷಯವಾಗಿರುವದರಿಂದ ಪ್ರತ್ಯಕ್ಷಾದಿಗೋಚರವಾಗಿರುವವು ; ಆದರೆ ಬ್ರಹ್ಮವು ಇಂದ್ರಿಯಕ್ಕೆ ವಿಷಯವಲ್ಲ ಎಂದು ಆಗಲೆ (೧-೨-೨, ಭಾ ಭಾ. ೨೯ರಲ್ಲಿ) ತಿಳಿಸಿದ್ದಾಗಿದೆ ಆದರೂ ಭೂತವಸ್ತುವು ಪ್ರಮಾಣಾಂತರಗೋಚರವಾಗಿಯೇ ಇರಬೇಕೆಂದು ಪ್ರಧಾನವಾದಿಯು ಪಟ್ಟುಹಿಡಿದಿರುತ್ತಾನೆ. ಇದರ ವಿಮರ್ಶೆಗಾಗಿಯೇ ಈ ಪೂರ್ವಪಕ್ಷವನ್ನು ಮತ್ತೆ ತೆಗೆದಿದೆ.

2. ತತ್ಪರವಾದ ಶ್ರುತಿಗಳಿಗಿಂತ ಅತತ್ಪರಶ್ರುತಿಗಳು ದುರ್ಬಲ ; ವಿಶೇಷಶ್ರುತಿಗಿಂತ ಸಾಮಾನ್ಯಶ್ರುತಿ ದುರ್ಬಲ –ಎಂದು ಮುಂತಾಗಿ ಶ್ರುತಿಗಳಲ್ಲಿ ಬಲಾಬಲಗಳನ್ನು ನಿರ್ಣಯಿಸುತ್ತಾರೆ.

3 ನಿಜವಾಗಿ ಶ್ರುತಿಯು ಪ್ರಮಾಣಾಂತರಕ್ಕೆ ವಿಷಯವಾದದ್ದನ್ನು ಪ್ರತಿಪಾದನೆ ಮಾಡುವವೇ ಇಲ್ಲ , ತಮ್ಮ ತಮ್ಮ ವಿಷಯಗಳನ್ನು ತಿಳಿಸುವ ಪ್ರಮಾಣಗಳಿಗೆ ಒಂದಕ್ಕೊಂದಕ್ಕೆ ವಿರೋಧವೂ ಇಲ್ಲ. ಆದರೆ ಪೂರ್ವಪಕ್ಷಿಯು ಒಂದೇ ವಿಷಯದಲ್ಲಿ ಎರಡು ಮೂರು ಪ್ರಮಾಣಗಳಿರುವವೆಂದು ಇಟ್ಟುಕೊಂಡು ಹೀಗೆ ಆಕ್ಷೇಪಿಸಿರುತ್ತಾನೆ.

4. ಶಬ್ದವು ವಸ್ತು ಇದೆ ಎಂದು ಹೇಳುತ್ತದೆ ; ನೇರಾಗಿ ಅನುಭವಕ್ಕೆ ತರುವದಿಲ್ಲ ಎಂದು ಭಾವ. ದಶಮವಾಕ್ಯದಿಂದಾಗುವದೆಂದು ಸಿದ್ಧಾಂತಿಯು ಒಪ್ಪಿರುವ ಅನುಭವವನ್ನು ಇಲ್ಲಿ ಕಡೆಗಣಿಸಿದೆ.

5. ಬ್ರಹ್ಮವಿದ್ಯೆಯು ಅನುಭವಾವಸಾನವೆಂದು ೧-೧-೨ರ ಭಾಷ್ಯದಲ್ಲಿ (ಭಾ. ಭಾ. ೨೮ರಲ್ಲಿ) ಹೇಳಿದೆ.

6. ಶ್ರವಣಮಾತ್ರದಿಂದಲೂ ಜ್ಞಾನವಾಗಬಹುದೆಂಬ ಸಿದ್ಧಾಂತವನ್ನು ಇಲ್ಲಿ ಪೂರ್ವಪಕ್ಷಿಯು ಕಡೆಗಣಿಸಿರುತ್ತಾನೆ.

**ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ॥ ೪ ॥**

೪. (ಬ್ರಹ್ಮವು ಜಗತ್ತಿಗೆ ಕಾರಣ)ವಲ್ಲ, ಏಕೆಂದರೆ ಈ (ಜಗತ್ತು ಬ್ರಹ್ಮಕ್ಕಿಂತ) ವಿಲಕ್ಷಣವಾಗಿರುತ್ತದೆ. ಮತ್ತು ಹಾಗಿರುವದು ಶಬ್ದದಿಂದ ಗೊತ್ತಾಗುತ್ತದೆ.

## ಪೂರ್ವಪಕ್ಷ: ಬ್ರಹ್ಮಜಗತ್ತುಗಳಿಗೆ ವೈಲಕ್ಷಣ್ಯವಿರುವದರಿಂದ ಅವಕ್ಕೆ ಕಾರ್ಯಕಾರಣತ್ವವಿಲ್ಲ

(ಭಾಷ್ಯ)

೪೧೧. ಯದುಕ್ತಮ್ – ಚೇತನಂ ಬ್ರಹ್ಮ ಜಗತಃ ಕಾರಣಂ ಪ್ರಕೃತಿಃ ಇತಿ । ತನ್ನೋಪಪದ್ಯತೇ । ಕಸ್ಮಾತ್ ? ವಿಲಕ್ಷಣತ್ವಾತ್ ಅಸ್ಯ ವಿಕಾರಸ್ಯ ಪ್ರಕೃತ್ಯಾ । ಇದಂ ಹಿ ಬ್ರಹ್ಮಕಾರ್ಯತ್ವೇನ ಅಭಿಪ್ರೇಯಮಾಣಂ ಜಗತ್ ಬ್ರಹ್ಮವಿಲಕ್ಷಣಮ್ ಅಚೇತನಮ್ ಅಶುದ್ಧಂ ಚ ದೃಶ್ಯತೇ । ನ ಚ ವಿಲಕ್ಷಣತ್ವೇ ಪ್ರಕೃತಿವಿಕಾರಭಾವೋ ದೃಷ್ಟಃ । ನ ಹಿ ರುಚಕಾದಯೋ ವಿಕಾರಾಃ ಮೃತ್ಪ್ರಕೃತಿಕಾ ಭವನ್ತಿ, ಶರಾವಾದಯೋ ವಾ ಸುವರ್ಣಪ್ರಕೃತಿಕಾಃ । ಮೃದೈವ ತು ಮೃದನ್ವಿತಾ ವಿಕಾರಾಃ ಕ್ರಿಯನ್ತೇ ಸುವರ್ಣೇನ ಚ ಸುವರ್ಣಾನ್ವಿತಾಃ । ತಥಾ ಇದಮಪಿ ಜಗತ್ ಅಚೇತನಂ ಸುಖದುಃಖಮೋಹಾನ್ವಿತಂ ಸತ್ ಅಚೇತನಸ್ಯೈವ ಸುಖದುಃಖಮೋಹಾತ್ಮಕಸ್ಯ ಕಾರಣಸ್ಯ ಕಾರ್ಯಂ ಭವಿತುಮರ್ಹತಿ, ನ ವಿಲಕ್ಷಣಸ್ಯ ಬ್ರಹ್ಮಣಃ ॥

(ಭಾಷ್ಯಾರ್ಥ)

ಚೇತನವಾದ ಬ್ರಹ್ಮವು ಜಗತ್ತಿಗೆ ಪ್ರಕೃತಿರೂಪವಾದ[1] ಕಾರಣವೆಂದು ಹೇಳಿದಿರಲ್ಲ ; ಅದು ಹೊಂದುವದಿಲ್ಲ. ಏಕೆ ? ಎಂದರೆ ಈ (ಜಗದ್ರೂಪವಾದ) ಕಾರ್ಯವು ಪ್ರಕೃತಿಗಿಂತ[2] ವಿಲಕ್ಷಣವಾಗಿರುವದರಿಂದ. ಹೇಗೆಂದರೆ ಬ್ರಹ್ಮಕಾರ್ಯವೆಂದು (ನೀವು) ಅಭಿಪ್ರಾಯಪಟ್ಟಿರುವ ಈ ಜಗತ್ತು ಬ್ರಹ್ಮಕ್ಕಿಂತ ವಿಲಕ್ಷಣವಾಗಿ — ಅಚೇತನವೂ ಅಶುದ್ಧವೂ - (ಆಗಿರುವದು) ಕಂಡುಬರುತ್ತದೆ. ಆದರೆ ಬ್ರಹ್ಮವು ಜಗತ್ತಿಗಿಂತ ವಿಲಕ್ಷಣವಾಗಿ ಚೇತನವೂ

---

1. ಪ್ರಕೃತಿ ಎಂದರೆ ಉಪಾದಾನಕಾರಣವು. ಈ ಪ್ರಕರಣದಲ್ಲೆಲ್ಲ ಕಾರಣವೆಂಬ ಮಾತಿಗೆ ಬದಲು ಪ್ರಕೃತಿ ಎಂದೂ ಕಾರ್ಯವೆಂಬ ಮಾತಿಗೆ ಬದಲು ವಿಕಾರವೆಂದೂ ಪ್ರತಿಶಬ್ದವನ್ನುಪಯೋಗಿಸಿರುವದಕ್ಕೆ ಉಪದಾನಕಾರಣವಿಷಯದ ಚರ್ಚೆಯಿದೆಂದು ತಿಳಿಸುವದೇ ಉದ್ದೇಶ.

2. ಕಾರಣವಾದ ಬ್ರಹ್ಮಕ್ಕಿಂತ ಎಂದರ್ಥ.

ಶುದ್ಧವೂ ಆಗಿರುವದೆಂದು ಶ್ರುತಿಯಲ್ಲಿದೆ. (ಹೀಗೆ) ವಿಲಕ್ಷಣವಾಗಿರುವಲ್ಲಿ ಕಾರ್ಯಕಾರಣಭಾವವು ಕಂಡುಬರುವದಿಲ್ಲ. ಏಕೆಂದರೆ ಅಸಲಿ ಮುಂತಾದ ಕಾರ್ಯಗಳು ಮಣ್ಣೆಂಬ ಪ್ರಕೃತಿಯುಳ್ಳವಾಗಿರುವದಿಲ್ಲ; ಅಥವಾ ಶ್ರಾವೆ ಮುಂತಾದವುಗಳು ಚಿನ್ನವೆಂಬ ಪ್ರಕೃತಿಯುಳ್ಳವಾಗಿಯೂ ಇರುವದಿಲ್ಲ. ಮೃದನ್ವಿತವಾದ[1] ಕಾರ್ಯಗಳು ಮಣ್ಣಿನಿಂದಲೇ ಆಗುತ್ತವೆ, ಸುವರ್ಣಾನ್ವಿತವಾಗಿರುವವು ಚಿನ್ನದಿಂದಲೇ ಆಗುತ್ತವೆ. ಅದರಂತೆ ಈ ಜಗತ್ತು ಅಚೇತನವೂ ಸುಖದುಃಖಮೋಹಾನ್ವಿತವೂ ಆಗಿರುವದರಿಂದ ಅಚೇತನವೇ ಆಗಿರುವ ಸುಖದುಃಖಮೋಹಾತ್ಮಕವಾಗಿರುವ ಕಾರಣದ[2] ಕಾರ್ಯವಾಗಿದ್ದೀತೇ ಹೊರತು ವಿಲಕ್ಷಣವಾದ ಬ್ರಹ್ಮದ (ಕಾರ್ಯವಾಗಿರ)ಲಾರದು.

## ಪೂರ್ವಪಕ್ಷ: ಜಗತ್ತು ಬ್ರಹ್ಮಕ್ಕಿಂತ ವಿಲಕ್ಷಣವಾಗಿದೆ.

(ಭಾಷ್ಯ)

೪೧೧. ಬ್ರಹ್ಮವಿಲಕ್ಷಣತ್ವಂ ಚ ಅಸ್ಯ ಜಗತಃ ಅಶುದ್ಧ್ಯಚೇತನತ್ವದರ್ಶನಾತ್ ಅವಗನ್ತವ್ಯಮ್ । ಅಶುದ್ಧಂ ಹಿ ಜಗತ್ । ಸುಖದುಃಖಮೋಹಾತ್ಮಕತಯಾ ಪ್ರೀತಿಪರಿತಾಪವಿಷಾದಾದಿಹೇತುತ್ವಾತ್ ಸ್ವರ್ಗನರಕಾದ್ಯುಚ್ಚಾವಚಪ್ರಪಞ್ಚತ್ವಾಚ್ಚ । ಅಚೇತನಂ ಚ ಇದಂ ಜಗತ್ । ಚೇತನಂ ಪ್ರತಿ ಕಾರ್ಯಕಾರಣಭಾವೇನ ಉಪಕರಣಭಾವೋಪಗಮಾತ್ । ನ ಹಿ ಸಾಮ್ಯೇ ಸತಿ ಉಪಕಾರ್ಯೋಪಕಾರಕಭಾವೋ ಭವತಿ । ನ ಹಿ ಪ್ರದೀಪೌ ಪರಸ್ಪರಸ್ಯ ಉಪಕುರುತಃ । ನನು ಚೇತನಮಪಿ ಕಾರ್ಯಕಾರಣಂ (?) ಸ್ವಾಮಿಭೃತ್ಯನ್ಯಾಯೇನ ಭೋಕ್ತುಃ ಉಪಕರಿಷ್ಯತಿ । ನ ಸ್ವಾಮಿಭೃತ್ಯಯೋರಪಿ ಅಚೇತನಾಂಶಸ್ಯೈವ ಚೇತನಂ ಪ್ರತಿ ಉಪಕಾರಕತ್ವಾತ್ । ಯೋ ಹಿ ಏಕಸ್ಯ ಚೇತನಸ್ಯ ಪರಿಗ್ರಹಃ ಬುದ್ಧ್ಯಾದಿಃ ಅಚೇತನಭಾಗಃ, ಸ ಏವ ಅನ್ಯಸ್ಯ ಚೇತನಸ್ಯ ಉಪಕರೋತಿ ನ ತು ಸ್ವಯಮೇವ ಚೇತನಃ ಚೇತನಾನ್ತರಸ್ಯ ಉಪಕರೋತಿ ಅಪಕರೋತಿ ವಾ । ನಿರತಿಶಯಾ ಹಿ ಅಕರ್ತಾರಃ ಚೇತನಾಃ ಇತಿ ಸಾಂಖ್ಯಾ ಮನ್ಯನ್ತೇ । ತಸ್ಮಾತ್ ಅಚೇತನಂ ಕಾರ್ಯಕಾರಣಮ್ । ನ ಚ ಕಾಷ್ಠಲೋಷ್ಟಾದೀನಾಂ ಚೇತನತ್ವೇ ಕಿಂಚಿತ್

---

1. ಯಾವದರಿಂದ ಯಾವ ಕಾರ್ಯವು ಆಗಿರುವದೋ ಅದು ಆ ಕಾರ್ಯದಲ್ಲಿಯೂ ಅನುಗತವಾಗಿ, ಅದರಲ್ಲಿ ಸೇರಿಕೊಂಡೇ, ಇರುವದು– ಎಂಬುದನ್ನು ಈ ವಿಶೇಷಣವು ಸೂಚಿಸುತ್ತದೆ.

2. ಪ್ರಧಾನದ ಎಂದರ್ಥ. ಬ್ರಹ್ಮದ ಕಾರ್ಯವಾಗಿದ್ದರೆ ಸಚ್ಚಿದಾನಂದ ಸ್ವರೂಪವು ಅದರಲ್ಲಿ ಅನುಗತವಾಗಿರಬೇಕಾಗಿತ್ತು ಎಂಬ ಅಭಿಪ್ರಾಯವು ಇದರಲ್ಲಿ ಅಡಕವಾಗಿರುತ್ತದೆ.

ಪ್ರಮಾಣಮ್ ಅಸ್ತಿ । ಪ್ರಸಿದ್ಧಶ್ಚ ಅಯಂ ಚೇತನಾಚೇತನವಿಭಾಗೋ ಲೋಕೇ। ತಸ್ಮಾತ್ ಬ್ರಹ್ಮವಿಲಕ್ಷಣತ್ವಾತ್ ನೇದಂ ಜಗತ್ ತತ್ಪ್ರಕೃತಿಕಮ್ ॥

(ಭಾಷ್ಯಾರ್ಥ)

ಈ ಜಗತ್ತು ಬ್ರಹ್ಮಕ್ಕಿಂತ ವಿಲಕ್ಷಣವೆಂಬುದನ್ನು (ಅದರಲ್ಲಿ) ಅಶುದ್ಧ್ಯ ಚೇತನತ್ವಗಳು ಕಂಡುಬರುವದರಿಂದ ನಿಶ್ಚಯಿಸಬೇಕು. ಜಗತ್ತು ಅಶುದ್ಧ ವಾಗಿರುತ್ತದೆ; ಏಕೆಂದರೆ (ಅದು) ಸುಖದುಃಖಮೋಹಾತ್ಮಕವಾಗಿರುವ ದರಿಂದ ಪ್ರೇಮ, ಸಂಕಟ, ವಿಷಾದ – ಮುಂತಾದವುಗಳಿಗೆ ಕಾರಣವಾಗಿರು ತ್ತದೆ. ಸ್ವರ್ಗನರಕವೇ ಮುಂತಾದ ಮೇಲುಕೀಳಿನ ಪ್ರಪಂಚವಾಗಿರು ತ್ತದೆ ಈ ಜಗತ್ತು ಅಚೇತನವೂ ಆಗಿರುತ್ತದೆ; ಏಕೆಂದರೆ ಚೇತನಕ್ಕೀಸ್ಕರ ಕಾರ್ಯಕರಣರೂಪದಿಂದ[1] ಉಪಕರಣವಾಗಿದೆ ಎಂದು ತಿಳಿಯುಬರುತ್ತದೆ. (ಎರಡು ವಸ್ತುಗಳೂ) ಸಮಾನವಾಗಿದ್ದರೆ ಒಂದಕ್ಕೊಂದಕ್ಕೆ ಉಪಕಾರ್ಯೋಪ ಕಾರಕಭಾವವಿರುವದೇ ಇಲ್ಲ; ಉದಾಹರಣೆಗೆ ಎರಡು ದೀಪಗಳು ಒಂದ ಕ್ಕೊಂದು ಉಪಕಾರಕವಾಗಿರುವದಿಲ್ಲ.[2]

(ಆಕ್ಷೇಪ) :— ಚೇತನವಾದ ಕಾರ್ಯಕರಣವು[3] ಸ್ವಾಮಿಭೃತ್ಯರಂತೆ ಭೋಕ್ತೃವಾದ ಜೀವನಿಗೆ ಉಪಕಾರಕವಾಗಿರಬಹುದಲ್ಲ!

(ಪರಿಹಾರ) :— ಹಾಗಲ್ಲ ಏಕೆಂದರೆ ಸ್ವಾಮಿಭೃತ್ಯರಲ್ಲಿಯೂ ಅಚೇತನಾಂಶವೇ ಚೇತನಕ್ಕೆ ಉಪಕಾರಕವಾಗಿರುತ್ತದೆ. ಹೇಗೆಂದರೆ ಒಬ್ಬ ಚೇತನನ ಸ್ವತ್ತಾದ ಬುದ್ಧ್ಯಾದಿಗಳೆಂಬ ಅಚೇತನಭಾಗವಿರುತ್ತದೆಯಲ್ಲ, ಅದೇ ಮತ್ತೊಬ್ಬ ಚೇತನನಿಗೆ ಉಪಕಾರಕವಾಗಿರುತ್ತದೆಯೇ ಹೊರತು (ಒಂದು)

1. ಕಾರ್ಯಕಾರಣಭಾವೇನ ಎಂದೇ ಮೂಲದಲ್ಲಿದೆಯಾದರೂ ಕಾರ್ಯ ಕರಣವೆಂಬರ್ಥದಲ್ಲಿಯೇ ಇದನ್ನು ಪ್ರಯೋಗಿಸಿದೆ ಎಂದು ಇಟ್ಟುಕೊಂಡಿವೆ.

2. ಒಂದನ್ನೊಂದು ಬೆಳಗಿ ತೋರಿಸಬೇಕಾದ ಆವಶ್ಯಕತೆಯೇ ಇರುವದಿಲ್ಲ ಎಂದರ್ಥ.

3. ಕಾರ್ಯಕರಣವೆಂಬರ್ಥದಲ್ಲಿಯೇ ಇಲ್ಲಿ 'ಕಾರ್ಯಕಾರಣ' ಎಂಬ ಮಾತನ್ನು ಪ್ರಯೋಗಿಸಿರುತ್ತದೆ ಎಂಬುದು ಸ್ಪಷ್ಟ. ಕಾರ್ಯಕಾರಣರೂಪದಲ್ಲಿರುವ ಪ್ರಕೃತಿಯೇ ಶರೀರೇಂದ್ರಿಯಗಳ ರೂಪವಾಗಿ ಪರಿಣಮಿಸುತ್ತವೆ ಎಂಬುದನ್ನು ತಿಳಿಸು ವದಕ್ಕೆ ಹೀಗೆ ಪ್ರಯೋಗಿಸಿದ್ದರೂ ಇರಬಹುದು; ಅಥವಾ, ಕಾರ್ಯಕರಣವೆಂದೇ ಭಾಷ್ಯಕಾರರು ಬರೆದಿದ್ದು ಲೇಖಕರು ಹೀಗೆ ಈ ಶಬ್ದವನ್ನು ಮಾರ್ಪಡಿಸಿಕೊಂಡಿರುವರೋ ಏನೋ ತಿಳಿಯದು. ಭಾಮತೀವ್ಯಾಖ್ಯಾನದಲ್ಲಿ 'ಕಾರ್ಯಕರಣ'ವೆಂದೇ ಇದೆ. ಕಾರ್ಯ ಕಾರಣವೆಂಬ ಶಬ್ದವನ್ನು ಈ ಅರ್ಥದಲ್ಲಿ ಪ್ರಸ್ಥಾನತ್ರಯಭಾಷ್ಯದಲ್ಲಿ ಪ್ರಚುರವಾಗಿ ಪ್ರಯೋಗಿಸಿರುವದು ಕಂಡುಬರುವದಿಲ್ಲ.

ಚೇತನವು ಮತ್ತೊಂದು ಚೇತನಕ್ಕೆ ತಾನೇ ಉಪಕಾರಕವೂ ಆಗಿರುವದಿಲ್ಲ, ಅಪಕಾರಕವೂ ಆಗಿರುವದಿಲ್ಲ. **ಚೇತನದಲ್ಲಿ ಯಾವ ಹೆಚ್ಚುಕಡಿಮೆಯೂ ಇರುವದಿಲ್ಲ, (ಅವರು) ಅಕರ್ತರು ಎಂದೇ ಸಾಂಖ್ಯರ ಮತವು.**[1] ಆದ್ದರಿಂದ ಕಾರ್ಯಕರಣವು ಅಚೇತನವಾಗಿರುತ್ತದೆ. ಕಟ್ಟಿಗೆ, ಮಣ್ಣು, ಹೆಂಟೆ-ಮುಂತಾದವುಗಳು ಚೇತನವೆಂಬುದಕ್ಕೆ ಯಾವ ಪ್ರಮಾಣವೂ ಇರುವದಿಲ್ಲ. ಲೋಕದಲ್ಲಿ ಚೇತನ, ಅಚೇತನ – ಎಂಬ ವಿಭಾಗವು ಪ್ರಸಿದ್ಧವೂ[2] ಆಗಿರುತ್ತದೆ. ಆದ್ದರಿಂದ ಬ್ರಹ್ಮಕ್ಕಿಂತ ವಿಲಕ್ಷಣವಾಗಿರುವದರಿಂದ ಜಗತ್ತು ಆ (ಬ್ರಹ್ಮವೆಂಬ) ಪ್ರಕೃತಿಯುಳ್ಳದ್ದಲ್ಲ.[3]

## ಪೂರ್ವಪಕ್ಷ: ಜಗತ್ತೆಲ್ಲವೂ ಜೇತನವೆಂಬುದು ಶ್ರುತಿವಿರುದ್ಧ

(ಭಾಷ್ಯ)

೬೧೨. ಯೋಽಪಿ ಕಶ್ಚಿತ್ ಆಚಕ್ಷೀತ—ಶ್ರುತ್ವಾ ಜಗತಶ್ಚೇತನಪ್ರಕೃತಿಕತಾಂ ತದ್ಬಲೇನೈವ ಸಮಸ್ತಂ ಜಗತ್ ಚೇತನಮ್ ಅವಗಮಯಿಷ್ಯಾಮಿ । ಪ್ರಕೃತಿರೂಪಸ್ಯ ವಿಕಾರೇ ಅನ್ವಯದರ್ಶನಾತ್ । ಅವಿಭಾವನಂ ತು ಚೈತನ್ಯಸ್ಯ ಪರಿಣಾಮವಿಶೇಷಾತ್ ಭವಿಷ್ಯತಿ । ಯಥಾ ಸ್ಪಷ್ಟಚೈತನ್ಯಾನಾಮಪಿ ಆತ್ಮನಾಂ ಸ್ವಾಪಮೂರ್ಛಾದ್ಯವಸ್ಥಾಸು ಚೈತನ್ಯಂ ನ ವಿಭಾವ್ಯತೇ, ಏವಂ ಕಾಷ್ಠಲೋಷ್ಟಾದೀನಾಮಪಿ ಚೈತನ್ಯಂ ನ ವಿಭಾವಯಿಷ್ಯತೇ । ಏತಸ್ಮಾದೇವ ಚ ವಿಭಾವಿತಾವಿಭಾವಿತತ್ವಕೃತಾತ್ ವಿಶೇಷಾತ್ ರೂಪಾದಿಭಾವಾಭಾವಾಭ್ಯಾಂ ಚ ಕಾರ್ಯಕಾರಣಾನಾಮ್ ಆತ್ಮನಾಂ ಚ ಚೇತನತ್ವಾವಿಶೇಷೇಽಪಿ ಗುಣಪ್ರಧಾನಭಾವೋ ನ ವಿರೋತ್ಸ್ಯತೇ, ಯಥಾ ಚ ಪಾರ್ಥಿವತ್ವಾವಿಶೇಷೇಽಪಿ ಮಾಂಸಸೂಪೌದನಾದೀನಾಂ ಪ್ರತ್ಯಾತ್ಮವರ್ತಿನೋ ವಿಶೇಷಾತ್ ಪರಸ್ಪರೋಪಕಾರಿತ್ವಂ ಭವತಿ । ಏವಮ್ ಇಹಾಪಿ ಭವಿಷ್ಯತಿ । ಪ್ರವಿಭಾಗಪ್ರಸಿದ್ಧಿರಪಿ ಅತ ಏವ ನ ವಿರೋತ್ಸ್ಯತೇ ಇತಿ । ತೇನಾಪಿ ಕಥಂಚಿತ್ ಚೇತನಾಚೇತನತ್ವಲಕ್ಷಣಂ ವಿಲಕ್ಷಣತ್ವಂ ಪರಿಹ್ರಿಯೇತ । ಶುದ್ಧ್ಯಶುದ್ಧಿತ್ವಲಕ್ಷಣಂ ತು ವಿಲಕ್ಷಣತ್ವಂ ನೈವ ಪರಿಹ್ರಿಯತೇ । ನ ಚ ಇತರದಪಿ ವಿಲಕ್ಷಣತ್ವಂ ಪರಿಹರ್ತುಂ ಶಕ್ಯತೇ ಇತ್ಯಾಹ—"ತಥಾತ್ವಂ ಚ ಶಬ್ದಾತ್"

1. ಸಮಾನವಾಗಿರುವ ಚೇತನರಿಗೆ ಒಬ್ಬರಿಂದೊಬ್ಬರಿಗೆ ಆಗಬೇಕಾದ ಉಪಕಾರ ವೇನೂ ಇರುವದಿಲ್ಲ ಎಂದು ಭಾವ.

2. ಈ ಪ್ರಸಿದ್ಧಿಯನ್ನು ಅಲ್ಲಗಳೆದು ಎಲ್ಲವೂ ಚೇತನವೆಂಬುದು ಯುಕ್ತವಲ್ಲವೆಂದು ಭಾವ.

3. ಬ್ರಹ್ಮವು ಜಗತ್ತಿಗೆ ಉಪಾದಾನಕಾರಣವಲ್ಲ ಎಂದರ್ಥ.

ಇತಿ | ಅನವಗಮ್ಯಮಾನಮೇವ ಹಿ ಇದಂ ಲೋಕೋ ಸಮಸ್ತಸ್ಯ ವಸ್ತುನಃ ಚೇತನತ್ವಂ ಚೇತನಪ್ರಕೃತಿತ್ವಶ್ರವಣಾತ್ ಶಬ್ದಶರಣತಯಾ ಕೇವಲಯಾ ಉತ್ಪ್ರೇಕ್ಷ್ಯೇತ, ತಚ್ಚ ಶಬ್ದೇನೈವ ವಿರುಧ್ಯತೇ ಯತಃ ಶಬ್ದಾದಪಿ ತಥಾತ್ವಮ್ ಅವಗಮ್ಯತೇ | 'ತಥಾತ್ವಮ್' ಇತಿ ಪ್ರಕೃತಿವಿಲಕ್ಷಣತ್ವಂ ಕಥಯತಿ। ಶಬ್ದ ಏವ "ವಿಜ್ಞಾನಂ ಚಾವಿಜ್ಞಾನಂ ಚ" (ತೈ. ೨-೬) ಇತಿ ಕಸ್ಯಚಿತ್ ವಿಭಾಗಸ್ಯ ಅಚೇತನತಾಂ ಶ್ರಾವಯನ್ ಚೇತನಾತ್ ಬ್ರಹ್ಮಣಃ ವಿಲಕ್ಷಣಮ್ ಅಚೇತನಂ ಜಗತ್ ಶ್ರಾವಯತಿ ||

( ಭಾಷ್ಯಾರ್ಥ )

ಯಾವನಾದರೊಬ್ಬನು (ಹೀಗೆಂದು) ಹೇಳಬಹುದು : ಜಗತ್ತಿಗೆ ಚೇತನವೇ ಪ್ರಕೃತಿ ಎಂದು ಶ್ರುತಿಯಲ್ಲಿರುವದರಿಂದ ಅದರ ಬಲದಿಂದಲೇ ಜಗತ್ತೆಲ್ಲವೂ ಚೇತನವೆಂದು ತೋರಿಸಿಕೊಡುವೆನು. ಏಕೆಂದರೆ ಪ್ರಕೃತಿಯ ರೂಪವು ವಿಕಾರದಲ್ಲಿ ಅನುಸರಿಸಿಕೊಂಡುಬರುವದು ಕಂಡಿರುತ್ತದೆ.[1] ಚೈತನ್ಯವು (ಜಗತ್ತಿನಲ್ಲಿ ಕೆಲವು ಕಡೆ) ಕಾಣದೆ ಇರುವದೋ ಎಂದರೆ ಪರಿಣಾಮವಿಶೇಷದಿಂದ[2] ಎಂದಾಗಬಹುದು. ಹೇಗೆ ಚೈತನ್ಯವು ಸ್ಪಷ್ಟವಾಗಿರುವ ಆತ್ಮರುಗಳಲ್ಲಿ ಕೂಡ ನಿದ್ರೆ, ಮೂರ್ಛೆ –ಮುಂತಾದ ಅವಸ್ಥೆಗಳಲ್ಲಿ ಚೈತನ್ಯವು ತೋರಿಬರುವದಿಲ್ಲವೋ ಹಾಗೆಯೇ ಕಟ್ಟಿಗೆ, ಮಣ್ಣುಹೆಂಟೆ ಮುಂತಾದವುಗಳಲ್ಲಿಯೂ ಚೈತನ್ಯವು ತೋರದೆ ಇರಬಹುದಾಗಿದೆ. ಕಾಣಬರುವದು, ಕಾಣದೆ ಇರುವದು –ಎಂಬ ಈ ವಿಶೇಷದಿಂದಲೇ, ಮತ್ತು ರೂಪಾದಿಗಳು ಇರುವದು, ಇಲ್ಲದಿರುವದು (ಎಂಬ ಕಾರಣ)ದಿಂದಲೇ, ಕಾರ್ಯಕರಣಗಳೂ ಆತ್ಮರುಗಳೂ ಚೇತನರೆಂಬುದು ಸಮಾನವೇ ಆದರೂ (ಅವುಗಳು ಒಂದೊಂದಕ್ಕೆ) ಗುಣಪ್ರಧಾನಭಾವವಿರುವದು[3] ವಿರುದ್ಧವಾಗುವದಿಲ್ಲ. ಮತ್ತು ಹೇಗೆ ಮಾಂಸ, ತೊವ್ವೆ, ಅನ್ನ –ಮುಂತಾದವುಗಳು ಪಾರ್ಥಿವವೇ ಆದರೂ ಒಂದೊಂದು (ವಸ್ತುವಿನ) ರೂಪದಲ್ಲಿಯೂ ಇರುವ ವಿಶೇಷದಿಂದ (ಅವು) ಒಂದಕ್ಕೊಂದು ಉಪಕಾರಿ

---

1. ಆದ್ದರಿಂದ ಜಗತ್ತೆಲ್ಲವೂ ಚೇತನವೇ ಎಂದು ತರ್ಕಿಸಬಹುದು ಎಂದು ಭಾವ. ತರ್ಕಪ್ರಧಾನನಾಗಿರುವ ಸಾಂಖ್ಯನಿಗೆ ತರ್ಕದಿಂದಲೇ ಉತ್ತರವನ್ನು ಕೊಡುವದಕ್ಕಾಗಿ ಹೀಗೆಂದು ಹೇಳಿದೆ.

2. ಅಂತಃಕರಣವ್ಯಾಪಾರರೂಪವಾದ ಪರಿಣಾಮವಿದ್ದಾಗ ಅದರ ಸಂಬಂಧದಿಂದ ಚೈತನ್ಯವು ತೋರುತ್ತದೆ, ಇಲ್ಲದಿದ್ದರೆ ಇಲ್ಲ ಎಂದು ಭಾವ.

3. ಕಾರ್ಯಕರಣಗಳು ಗುಣ – ಅಧೀನ, ಪರಾರ್ಥ –ಎಂಬುದೂ ಆತ್ಮರು ಪ್ರಧಾನ–ಸ್ವತಂತ್ರರು ಎಂಬುದೂ ಎಂದರ್ಥ.

ಾಗಿರುವದು ಹೊಂದುತ್ತದೆಯೋ ಹಾಗೆಯೇ ಇಲ್ಲಿಯೂ ಆಗಬಹುದಾಗಿದೆ.[1] (ಕಾರಣದಿಂದಲೇ ಚೇತನಾಚೇತನವಿಭಾಗದ ಪ್ರಸಿದ್ಧಿಗೂ (ನಮ್ಮ ವಾದವು) ೋಧವಾಗುವದಿಲ್ಲ.

(ಹೀಗೆಂದು ಹೇಳುವನಲ್ಲ), ಆ (ವಾದಿಯೂ) ಚೇತನಾಚೇತನತ್ವರೂಪ ದ ವಿಲಕ್ಷಣತ್ವವನ್ನು ಹೇಗೋ ಪರಿಹಾರಮಾಡಿಕೊಂಡಾನು.[2] ಶುದ್ಧಾ ದ್ಧತ್ವರೂಪವಾದ ವಿಲಕ್ಷಣತ್ವವನ್ನಂತೂ ಪರಿಹರಿಸುವದು (ಅವನಿಂದಲೂ) ಲಾರದು.[3] (ಸರಿಯಾಗಿ ನೋಡಿದರೆ) ಇನ್ನೊಂದು ವಿಲಕ್ಷಣತ್ವವನ್ನೂ ಹರಿಸಿಕೊಳ್ಳುವದಕ್ಕೆ ಆಗುವದೇ ಇಲ್ಲ ಎಂದು 'ತಥಾತ್ವಂ ಚ ಶಬ್ದಾತ್' ಬ (ಸೂತ್ರಭಾಗದಲ್ಲಿ) ಹೇಳಿರುತ್ತದೆ. ಪ್ರತಿಯೊಂದು ವಸ್ತುವೂ ಚೇತನವೇ ಬಿದು ಲೋಕದಲ್ಲಿ ನಿಶ್ಚಯವಾಗದೆಯೇ ಇದ್ದರೂ (ಜಗತ್ತು) ಚೇತನ ಕೃತಿಕವಾಗಿದೆ ಎಂದು ಶ್ರುತಿಯಿರುವದರಿಂದ ಸುಮ್ಮನೆ ಶಬ್ದಶರಣರಾಗಿ ಹಿಸಬೇಕಾಗಿರುತ್ತದೆಯಷ್ಟೆ ; ಆದರೆ ಆ (ಊಹೆಯು) ಶಬ್ದಕ್ಕೇ ವಿರುದ್ಧ ಗಿರುತ್ತದೆ. ಏಕೆಂದರೆ ಶಬ್ದದಿಂದಲೂ ತಥಾತ್ವವೇ ನಿಶ್ಚಿತವಾಗಿರುತ್ತದೆ. ಲ್ಲಿ ತಥಾತ್ವ (ಹಾಗಿರುವದು) ಎಂಬ ಮಾತಿನಿಂದ ಪ್ರಕೃತಿವಿಲಕ್ಷಣತ್ವವನ್ನು ಳಿರುತ್ತದೆ. ಶಬ್ದವೇ "ವಿಜ್ಞಾನವೂ ಅವಿಜ್ಞಾನವೂ (ಆಯಿತು)" . ೨-೬) ಎಂದು ಒಂದು ವಿಭಾಗವು ಅಚೇತನವೆಂದು ಹೇಳುವದರಿಂದ ತನವಾದ ಬ್ರಹ್ಮಕ್ಕಿಂತ ಜಗತ್ತು ವಿಲಕ್ಷಣವು, ಅಚೇತನವು ಎಂದು ಳುತ್ತದೆ.

## ೋರ್ವಪಕ್ಷ: ಮೃದಾದಿಗಳು ಚೇತನವೆಂಬ ಶ್ರುತಿಗೆ ಗತಿ

( ಭಾಷ್ಯ )

೪೧೩. ನನು ಚೇತನತ್ವಮಪಿ ಕ್ವಚಿತ್ ಅಚೇತನತ್ವಾಭಿಮತಾನಾಂ ತೇನ್ದ್ರಿಯಾಣಾಂ ಶ್ರೂಯತೇ । ಯಥಾ "ಮೃದಬ್ರವೀತ್" (ಶತ. ಬ್ರಾ.

---

1. ಎಲ್ಲವೂ ಪಾರ್ಥಿವವೇ ಆದರೂ ಮಾಂಸವು ಉಪಕಾರ್ಯ, ತೊವ್ವೆ ಅನ್ನ ಂತಾದವು ಉಪಕಾರಕ. ಈ ವಿಭಾಗಕ್ಕೆ ತೊವ್ವೆ, ಅನ್ನ, ಮಾಂಸ -ಎಂಬ ವಿಶೇಷ ಣಾಮವೇ ಕಾರಣ.

2. ಎಲ್ಲವೂ ಚೇತನವೆಂದು ಯುಕ್ತಿಯಿಂದ ತೋರಿಸಿದ್ದರಿಂದ ಹೇಗೋ ಪರಿ ಸಿಕೊಂಡಂತೆ ಆದೀತು.

3. ಶುದ್ಧವಾದ ಬ್ರಹ್ಮವು ಜಗತ್ಕಾರಣವಾದರೆ ಜಗತ್ತಿನಲ್ಲಿ ಅಶುದ್ಧಿ ಎಲ್ಲಿಂದ ಬೇಕು ? ಅಶುದ್ಧಿಯೇ ಇಲ್ಲವೆನ್ನುವದಾಗುವದಿಲ್ಲ ; ಏಕೆಂದರೆ ಅದು ಪ್ರತ್ಯಕ್ಷ ದ್ಧವಾಗುತ್ತದೆ ಎಂದು ಭಾವ.

೬-೧-೩-೨) "ಆಪೋಽಬ್ರುವನ್" (ಶತ. ಬ್ರಾ. ೬-೧-೩-೪) ಇತಿ | "ತತ್ತೇಜ ಐಕ್ಷತ" (ಛಾ. ೬-೨-೩), "ತಾ ಆಪ ಐಕ್ಷನ್ತ" (ಛಾಂ. ೬-೨-೪) ಇತಿ ಚೈವಮಾದ್ಯಾ ಭೂತವಿಷಯಾ ಚೇತನತ್ವಶ್ರುತಿಃ । ಇನ್ದ್ರಿಯವಿಷಯಾಪಿ "ತೇ ಹೇಮೇ ಪ್ರಾಣಾ ಅಹಂಶ್ರೇಯಸೇ ವಿವದಮಾನಾ ಬ್ರಹ್ಮ ಜಗ್ಮುಃ" (ಬೃ. ೬-೧-೭) ಇತಿ, "ತೇ ಹ ವಾಚಮೂಚುಸ್ತ್ವಂ ನ ಉದ್ಗಾಯೇತಿ" (ಬೃ. ೧-೩-೨) ಇತಿ ಚೈವಮಾದ್ಯಾ ಇತಿ |[1] ಅತ ಉತ್ತರಂ ಪಠತಿ—

(ಭಾಷ್ಯಾರ್ಥ)

(ಆಕ್ಷೇಪ) :– ಅಚೇತನವೆಂದು (ಜನರು) ತಿಳಿದಿರುವ ಭೂತಗಳೂ ಇಂದ್ರಿಯಗಳೂ ಚೇತನವೆಂದೂ (ಶ್ರುತಿಯಲ್ಲಿದೆಯಲ್ಲ) ! ಹೇಗೆಂದರೆ, "ಮಣ್ಣು ಹೀಗೆಂದಿತು" (ಶತ. ಬ್ರಾ. ೬-೧-೩-೨), "ನೀರು ಹೀಗೆಂದಿತು" (ಶತ. ಬ್ರಾ. ೬-೧-೩-೨), "ನೀರು ಹೀಗೆಂದಿತು" (ಶತ. ಬ್ರಾ. ೬-೧-೩-೪) ಎಂದೂ "ಆ ತೇಜವು (ಯೋಚಿಸಿನೋಡಿತು".(ಛಾಂ. ೬-೨-೩), "ಆ ಅಪ್ಪು(ಯೋಚಿಸಿ) ನೋಡಿತು" (ಛಾಂ. ೬-೨-೪) ಎಂದು ಮುಂತಾಗಿರುವದು ಭೂತಗಳ ವಿಷಯದ ಚೇತನತ್ವಶ್ರುತಿಯು. ಹೀಗೆಯೇ ಇಂದ್ರಿಯಗಳ ವಿಷಯದಲ್ಲಿ "ಆ ಈ ಪ್ರಾಣಗಳು ನಾನು ಹೆಚ್ಚು, (ನಾನು ಹೆಚ್ಚು ಎಂದು) ವಿವಾದಮಾಡುತ್ತಾ ಬ್ರಹ್ಮನ ಬಳಿಗೆ ಹೋದವು" (ಬೃ. ೬-೧-೬) ಎಂದೂ ಮತ್ತು "ಅವರು ವಾಕ್ಕನ್ನು ಕುರಿತು ನೀನು ನನಗೆ ಉದ್ಗಾನಮಾಡು ? ಎಂದವು" (ಬೃ. ೧-೩-೨) ಎಂದೂ ಮುಂತಾಗಿರುವ (ಚೇತನತ್ವಶ್ರುತಿಯಿದೆಯಲ್ಲ) !

ಇದಕ್ಕೆ ಉತ್ತರವನ್ನು ಹೇಳುತ್ತಾರೆ :—

**ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ ॥ ೫ ॥**

೫. (ಶ್ರುತಿಯಲ್ಲಿರುವದು) ಅಭಿಮಾನಿವ್ಯಪದೇಶವೇ ; ಏಕೆಂದರೆ ವಿಶೇಷಾನುಗತಿಗಳಿವೆ.

(ಭಾಷ್ಯ)

೪೧೪. ತುಶಬ್ದಃ ಆಶಙ್ಕಾಮ್ ಅಪನುದತಿ । ನ ಖಲು "ಮೃದಬ್ರವೀತ್" ಇತ್ಯೇವಂಜಾತೀಯಕಯಾ ಶ್ರುತ್ಯಾ ಭೂತೇನ್ದ್ರಿಯಾಣಾಂ ಚೇತನತ್ವಮ್ ಆಶಙ್ಕನೀಯಮ್ | ಯತಃ ಅಭಿಮಾನಿವ್ಯಪದೇಶ ಏಷಃ |

---

1. ಇಲ್ಲಿ ಭಾಷ್ಯಪಾಠವು ಅಚ್ಚಿನ ಪುಸ್ತಕಗಳಲ್ಲಿ ಹೀಗಿದೆ : "ಇನ್ದ್ರಿಯವಿಷಯಾಪಿ ..............ಇತ್ಯೇವಮಾದ್ಯಾ ಇನ್ದ್ರಿಯವಿಷಯಾ ಇತಿ ||" ಈ ಪಾಠದಲ್ಲಿ ಪುನರುಕ್ತಿಯಿದೆ ; ಅಪೇಕ್ಷಿತವಾದ ಚಕಾರವೂ ಬಿಟ್ಟುಹೋಗಿದೆ. ಆದ್ದರಿಂದ ನಾವು ಮೇಲೆ ಕಂಡಂತೆ ತಿದ್ದಿಕೊಂಡು ಬರೆದುಕೊಂಡಿದೇವೆ.

ಮೃದಾದ್ಯಭಿಮಾನಿನ್ಯೋ ವಾಗಾದ್ಯಭಿಮಾನಿನ್ಯಶ್ಚ ಚೇತನಾ ದೇವತಾಃ ವದನ ಸಂವದನಾದಿಷು ಚೇತನೋಚಿತೇಷು ವ್ಯವಹಾರೇಷು ವ್ಯಪದಿಶ್ಯನ್ತೇ, ನ ಭೂತೇನ್ದ್ರಿಯಮಾತ್ರಮ್ । ಕಸ್ಮಾತ್ ? ವಿಶೇಷಾನುಗತಿಭ್ಯಾಮ್ । ವಿಶೇಷೋ ಹಿ ಭೋಕ್ತೄಣಾಂ ಭೂತೇನ್ದ್ರಿಯಾಣಾಂ ಚ ಚೇತನಾಚೇತನಪ್ರವಿಭಾಗಲಕ್ಷಣಃ ಪ್ರಾಗಭಿಹಿತಃ । ಸರ್ವಚೇತನತಾಯಾಂ ಚ ಅಸೌ ನೋಪಪದ್ಯೇತ । ಅಪಿ ಚ ಕೌಷೀತಕಿನಃ ಪ್ರಾಣಸಂವಾದೇ ಕರಣಮಾತ್ರಾಶಙ್ಕಾವಿನಿವೃತ್ತಯೇ ಅಧಿಷ್ಠಾತೃಚೇತನಪರಿಗ್ರಹಾಯ ದೇವತಾಶಬ್ದೇನ ವಿಶಿಂಷನ್ತಿ—"ಏತಾ ಹ ವೈ ದೇವತಾ ಅಹಂಶ್ರೇಯಸೇ ವಿವದಮಾನಾಃ" (ಕೌ. ೨–೧೪) "ತಾ ವಾ ಏತಾಃ ಸರ್ವಾ ದೇವತಾಃ ಪ್ರಾಣೇ ನಿಃಶ್ರೇಯಸಂ ವಿದಿತ್ವಾ"[1] (ಕೌ. ೨–೧೪) ಇತಿ ಚ । ಅನುಗತಾಶ್ಚ ಸರ್ವತ್ರಾಭಿಮಾನಿನ್ಯಶ್ಚೇತನಾ ದೇವತಾಃ ಮನ್ತ್ರಾರ್ಥವಾದೇತಿಹಾಸಪುರಾಣಾದಿಭ್ಯೋಽವಗಮ್ಯನ್ತೇ। "ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್" (ಐ. ೧–೨) ಇತ್ಯೇವಮಾದಿಕಾ ಚ ಶ್ರುತಿಃ ಕರಣೇಷು ಅನುಗ್ರಾಹಿಕಾಂ ದೇವತಾಮ್ ಅನುಗತಾಂ ದರ್ಶಯತಿ। ಪ್ರಾಣಸಂವಾದವಾಕ್ಯಶೇಷೇ ಚ "ತೇ ಹ ಪ್ರಾಣಾಃ ಪ್ರಜಾಪತಿಂ ಪಿತರಮೇತ್ಯೋಚುಃ'' (ಛಾಂ. ೫–೧–೭) ಇತಿ ಶ್ರೇಷ್ಠತ್ವನಿರ್ಧಾರಣಾಯ ಪ್ರಜಾಪತಿಗಮನಮ್, ತದ್ವಚನಾಚ್ಚ ಏಕೈಕೋತ್ಕ್ರಮಣೇನ ಅನ್ವಯವ್ಯತಿರೇಕಾಭ್ಯಾಂ ಪ್ರಾಣಶ್ರೈಷ್ಠ್ಯಪ್ರತಿಪತ್ತಿಃ, ತಸ್ಮೈ ಬಲಿಹರಣಮ್, (ಬೃ. ೬–೧–೧೩) ಇತಿ ಚೈವಂಜಾತೀಯಕಃ ಅಸ್ಮದಾದಿಷ್ವಿವ ವ್ಯವಹಾರಃ ಅನುಗಮ್ಯಮಾನಃ ಅಭಿಮಾನಿವ್ಯಪದೇಶಂ ದ್ರಢಯತಿ । ''ತತ್ತೇಜ ಐಕ್ಷತ" (ಛಾಂ. ೬–೨–೩) ಇತ್ಯಪಿ ಪರಸ್ಯಾ ಏವ ದೇವತಾಯಾ ಅಧಿಷ್ಠಾತ್ರ್ಯಾಃ ಸ್ವವಿಕಾರೇಷು ಅನುಗತಾಯಾ ಇಯಮ್ ಈಕ್ಷಾ ವ್ಯಪದಿಶ್ಯತೇ ಇತಿ ದ್ರಷ್ಟವ್ಯಮ್ । ತಸ್ಮಾತ್ ವಿಲಕ್ಷಣತ್ವಾಚ್ಚ ನ ಬ್ರಹ್ಮಪ್ರಕೃತಿಕಮ್ ॥

( ಭಾಷ್ಯಾರ್ಥ )

(ಸೂತ್ರದಲ್ಲಿರುವ) ತು ಶಬ್ದವು (ಈ) ಆಶಂಕೆಯನ್ನು ತೊಲಗಿಸುತ್ತದೆ. "ಮಣ್ಣು ಹೀಗೆಂದಿತು" ಎಂಬೀ ಜಾತಿಯ ಶ್ರುತಿಯಿಂದ ಭೂತೇಂದ್ರಿಯಗಳು ಚೇತನವೆಂದು ಆಶಂಕೆಮಾಡತಕ್ಕದ್ದಲ್ಲ. ಏಕೆಂದರೆ ಇದು ಅಭಿಮಾನಿವ್ಯಪದೇಶವು. ಮಾತಾಡುವದು, ಸಂಭಾಷಣೆಮಾಡುವದು –ಮುಂತಾದ ಚೇತನಗಳಿಗೆ ಉಚಿತವಾದ ವ್ಯವಹಾರಗಳಲ್ಲಿ ಮಣ್ಣು ಮುಂತಾದವುಗಳಿಗೆ ಅಭಿಮಾನಿಗಳಾದ, ಮತ್ತು ವಾಕ್ಕು ಮುಂತಾದವುಗಳಿಗೆ ಅಭಿಮಾನಿಗಳಾದ ಚೇತನರಾದ

1. ಇದು ಆ॥ (೪–೧೪)ರ ಪಾಠ ; ಸಿ॥ ಪಾಠದಲ್ಲಿ "ತದ್ದೇವಾಃ ಪ್ರಾಣೇ ನಿಃಶ್ರೇಯಸಂ ವಿಚಿನ್ತ್ಯ" (೨–೧೪) ಎಂದೇ ಇದೆ.

ದೇವತೆಗಳನ್ನು ಹೇಳಿದೆಯೇ ಹೊರೆತು ಬರಿಯ ಭೂತೇಂದ್ರಿಯಗಳನ್ನು ಹೇಳಿರುವದಿಲ್ಲ. (ಇದು) ಏತರಿಂದ.(ಗೊತ್ತಾಗುತ್ತದೆ) ? ಎಂದರೆ, ವಿಶೇಷಾನುಗತಿಗಳಿಂದ. ಭೋಕ್ತೃಗಳಿಗೂ ಭೂತೇಂದ್ರಿಯಗಳಿಗೂ ಚೇತನ, ಅಚೇತನ –ಎಂಬ ವಿಭಾಗರೂಪವಾದ ವಿಶೇಷವನ್ನು ಹಿಂದೆ (ಭಾ. ಭಾ. ೪೧೧ರಲ್ಲಿ) ಹೇಳಿದ್ದಾಯಿತು. ಎಲ್ಲವೂ ಚೇತನವೆಂದಾದರೆ ಇದು ಹೊಂದಲಾರದು. ಇದಲ್ಲದೆ **ಕೌಷೀತಕಿಗಳು** ಪ್ರಾಣಸಂವಾದದಲ್ಲಿ ಕರಣಮಾತ್ರವೇ ಎಂಬ ಆಶಂಕೆಯನ್ನು ತೊಲಗಿಸುವದಕ್ಕಾಗಿ ಅಧಿಷ್ಠಾತೃಚೇತನಗಳನ್ನು ತೆಗೆದುಕೊಳ್ಳಬೇಕೆಂದು "ಈ ದೇವತೆಗಳು ನಾನು ಹೆಚ್ಚು (ನಾನು ಹೆಚ್ಚೆಂದು) ತೋರಿಸುವದಕ್ಕೆ ವಿವಾದಮಾಡುತ್ತಾ...." (ಕೌ. ೨-೧೪) ಎಂದೂ "ಆ ಈ ಎಲ್ಲಾ ದೇವತೆಗಳೂ ಪ್ರಾಣನಲ್ಲಿಯೇ ಹೆಚ್ಚುಗಾರಿಕೆಯನ್ನು ಅರಿತುಕೊಂಡು'' (ಕೌ. ೨–೧೪) ಎಂದೂ ದೇವತಾಶಬ್ದದಿಂದ ವಿಶೇಷಣವನ್ನು ಹಾಕಿರುತ್ತಾರೆ.[1]

ಎಲ್ಲಾ (ವಸ್ತು)ಗಳಲ್ಲಿಯೂ ಅನುಗತವಾಗಿರುವ ಚೇತನವಾದ ದೇವತೆಗಳು (ಉಂಟೆಂದು) ಮಂತ್ರ, ಅರ್ಥವಾದ, ಇತಿಹಾಸ, ಪುರಾಣ – ಇವೇ ಮುಂತಾದವುಗಳಿಂದ[2] ನಿಶ್ಚಯಿಸಬಹುದಾಗಿದೆ. ''ಅಗ್ನಿಯು ವಾಕ್ಕಾಗಿ ಮುಖವನ್ನು ಹೊಕ್ಕನು'' (ಐ. ೧–೨) ಎಂದು ಮುಂತಾಗಿರುವ ಶ್ರುತಿಯು ಕರಣಗಳಲ್ಲಿ ಅನುಗ್ರಾಹಕದೇವತೆಯು ಅನುಗತವಾಗಿರುವದೆಂದು ತಿಳಿಸುತ್ತದೆ.[3] ಪ್ರಾಣಸಂವಾದದ ವಾಕ್ಯಶೇಷದಲ್ಲಿ "ಆ ಪ್ರಾಣಗಳು ಪಿತೃವಾದ ಪ್ರಜಾಪತಿಯ ಬಳಿಗೆ ಹೋಗಿ ಇಂತೆಂದರು" (ಛಾಂ. ೫–೧-೭) ಎಂದು ಶ್ರೇಷ್ಠತ್ವವನ್ನು ಗೊತ್ತುಪಡಿಸಿಕೊಳ್ಳುವದಕ್ಕಾಗಿ ಪ್ರಜಾಪತಿಯ ಬಳಿಗೆ ಹೋದದ್ದು, ಆತನ ಮಾತಿನಂತೆ ಒಬ್ಬೊಬ್ಬರೇ (ಶರೀರವನ್ನು) ಬಿಟ್ಟು ತೆರಳುವದರಿಂದ ಅನ್ವಯವ್ಯತಿರೇಕದಿಂದ ಪ್ರಾಣನೇ ಶ್ರೇಷ್ಠನೆಂದು ಅರಿತುಕೊಂಡದ್ದು, ಮತ್ತು ಅವನಿಗೆ ಕಾಣಿಕೆಯನ್ನು ಒಪ್ಪಿಸಿದ್ದು (ಬೃ. ೬–೧–೧೩) ಎಂಬೀ ಜಾತಿಯ ನಮ್ಮಂಥವರ ವ್ಯವಹಾರವು ಅನುಗತವಾಗಿರುವದರಿಂದ[4] ಅಭಿಮಾನವ್ಯಪದೇಶವೇ (ಇದು)

1. ಭೋಕ್ತೃಗಳು ಚೇತನ, ಭೂತೇಂದ್ರಿಯಗಳು ಅಚೇತನ –ಎಂಬ ವಿಶೇಷವಿರುವದರಿಂದ ಬರಿಯ ಭೂತೇಂದ್ರಿಯಗಳನ್ನು ಶ್ರುತಿಯಲ್ಲಿ ಹೇಳಿಲ್ಲ. ಶ್ರುತಿಯಲ್ಲಿ ಇಂದ್ರಿಯಗಳಿಗೆ ಚೇತನವ್ಯವಹಾರವನ್ನು ಹೇಳುವಾಗ ದೇವತೆಗಳೆಂಬ ವಿಶೇಷಣವನ್ನು ಹಾಕಿರುವದರಿಂದಲೂ ಹೀಗೆ-ಎಂದು ಸೂತ್ರದ 'ವಿಶೇಷ' –ಎಂಬ ಮಾತನ್ನು ವಿವರಿಸಿದ್ದಾಯಿತು.

2. ದೇವತಾಧಿಕರಣ (ಭಾ. ಭಾ. ೨೮೧)ವನ್ನು ನೋಡಿ.

3. 'ಅನುಗಮ' ಎಂಬ ಮಾತನ್ನು ವಿವರಿಸುವ ಪ್ರಕಾರವಿದು.

4. ನಮ್ಮಂಥ ಚೇತನರ ವ್ಯವಹಾರವು ಪ್ರಾಣಗಳ ಆಖ್ಯಾನದಲ್ಲಿ ಅನುಗತವಾಗಿರುವದರಿಂದ ಪ್ರಾಣಗಳು ಅಭಿಮಾನಿದೇವತೆಗಳ ರೂಪದ ಚೇತನವೆಂದಾಯಿತು ಎಂದಭಿಪ್ರಾಯ.

ಎಂಬುದನ್ನು ಗಟ್ಟಿಗೊಳಿಸುತ್ತದೆ, "ಆ ತೇಜಸ್ಸು ನೋಡಿತು" (ಛಾಂ. ೬-೨-೩) ಎಂಬಲ್ಲಿಯೂ ತನ್ನ ವಿಕಾರಗಳಲ್ಲಿ ಅನುಗತವಾಗಿರುವ ಅಧಿಷ್ಠಾತೃವಾದ ಪರ ದೇವತೆಯ ಈಕ್ಷಣವನ್ನೇ ಹೇಳಿರುತ್ತದೆ ಎಂದು ತಿಳಿಯಬೇಕು [1]

ಆದ್ದರಿಂದ ಈ ಜಗತ್ತು ಬ್ರಹ್ಮಕ್ಕಿಂತ ವಿಲಕ್ಷಣವೇ ; ಮತ್ತು (ಹೀಗೆ) ವಿಲಕ್ಷಣವಾಗಿರುವದರಿಂದ (ಅದು) ಬ್ರಹ್ಮಪ್ರಕೃತಿಕವಲ್ಲ.

## ಸಿದ್ಧಾಂತ: ಪ್ರಕೃತಿಗಿಂತ ವಿಕಾರವು ವಿಲಕ್ಷಣವಾಗಿರಬಹುದು

**ದೃಶ್ಯತೇ ತು ॥ ೬ ॥**

೬. ಆದರೆ ಕಂಡುಬರುತ್ತದೆ.

( ಭಾಷ್ಯ )

೪೧೫. ಇತ್ಯಾಕ್ಷಿಪ್ತೇ..ಪ್ರತಿವಿಧತ್ತೇ । ('ದೃಶ್ಯತೇ ತು') । ತುಶಬ್ದಃ ಪಕ್ಷಂ ವ್ಯಾವರ್ತಯತಿ । ಯದುಕ್ತಂ ವಿಲಕ್ಷಣತ್ವಾತ್ ನೇದಂ ಜಗತ್ ಬ್ರಹ್ಮಪ್ರಕೃತಿಕಮ್ ಇತಿ । ನಾಯಮ್ ಏಕಾನ್ತಃ । ದೃಶ್ಯತೇ ಹಿ ಲೋಕೇ ಚೇತನತ್ವೇನ ಪ್ರಸಿದ್ಧೇಭ್ಯಃ ಪುರುಷಾದಿಭ್ಯೋ ವಿಲಕ್ಷಣಾನಾಂ ಕೇಶನಖಾದೀನಾಮ್ ಉತ್ಪತ್ತಿಃ । ಅಚೇತನತ್ವೇನ ಚ ಪ್ರಸಿದ್ಧೇಭ್ಯೋ ಗೋಮಯಾದಿಭ್ಯೋ ವೃಶ್ಚಿಕಾದೀನಾಮ್ । ನನು ಅಚೇತನಾನ್ಯೇವ ಪುರುಷಾದಿಶರೀರಾಣಿ ಅಚೇತನಾನಾಂ ಕೇಶನಖಾದೀನಾಂ ಕಾರಣಾನಿ । ಅಚೇತನಾನ್ಯೇವ ಚ ವೃಶ್ಚಿಕಾದಿ ಶರೀರಾಣಿ ಇತಿ । ಉಚ್ಯತೇ । ಏವಮಪಿ ಕಿಂಚಿತ್ ಅಚೇತನಂ ಚೇತನಸ್ಯ ಆಯತನಭಾವಮ್ ಉಪಗಚ್ಛತಿ ಕಿಂಚಿನ್ನ ಇತಿ ಅಸ್ತ್ಯೇವ ವೈಲಕ್ಷಣ್ಯಮ್ । ಮಹಾಂಶ್ಚಾಯಂ ಪಾರಿಣಾಮಿಕಃ ಸ್ವಭಾವವಿಪ್ರಕರ್ಷಃ ಪುರುಷಾದೀನಾಂ ಕೇಶನಖಾದೀನಾಂ ಚ ಸ್ವರೂಪಾದಿಭೇದಾತ್ । ತಥಾ ಗೋಮಯಾದೀನಾಂ ವೃಶ್ಚಿಕಾದೀನಾಂ ಚ । ಅತ್ಯನ್ತಸಾರೂಪ್ಯೇ ಚ ಪ್ರಕೃತಿವಿಕಾರಭಾವ ಏವ ಪ್ರಲೀಯೇತ ॥

1. ತೇಜಸ್ಸು ಮುಂತಾದ ಭೂತಗಳೂ ಯೋಚಿಸಿನೋಡಿದವು ಎಂದಿರುವದೂ ಅವು ಚೇತನವೆಂಬುದಕ್ಕೆ ಗುರುತಲ್ಲ. ಚೇತನನಾದ ಪರಮೇಶ್ವರನೇ ಅವುಗಳ ಮೂಲಕ ಆಲೋಚಿಸಿದನು ಎಂದು ಶ್ರುತಿಯ ಅಭಿಪ್ರಾಯ ಎಂದು ಭಾವ. ಇಲ್ಲಿಯವರೆಗೆ 'ಅನುಗತಿ' ಎಂಬ ಹೇತುವನ್ನು ನಾಲ್ಕು ಬಗೆಯಿಂದ ವಿವರಿಸಿದಂತೆ ಆಯಿತು. ಅಭಿಮಾನಿ ದೇವತೆಗಳನ್ನು ಸಿದ್ಧಾಂತಿಯೂ ಒಪ್ಪುತ್ತಾನೆ. ಆದ್ದರಿಂದಲೇ ಮುಂದೆ ಈ ವಾದವನ್ನು ಖಂಡಿಸಿಲ್ಲ. ಛಾಂ, ಭಾ. ೫-೧-೧೫ರ ಭಾಷ್ಯವನ್ನು ನೋಡಿ.

( ಭಾಷ್ಯಾರ್ಥ )

ಹೀಗೆಂದು ಆಕ್ಷೇಪಿಸಲಾಗಿ (ಇದಕ್ಕೆ) ಸಮಾಧಾನವನ್ನು ಕೊಡುತ್ತಾರೆ : ವಿಲಕ್ಷಣವಾಗಿರುವದರಿಂದ ಈ ಜಗತ್ತು ಬ್ರಹ್ಮಪ್ರಕೃತಿಕವಲ್ಲ ಎಂದು ಪೂರ್ವ ಪಕ್ಷದಲ್ಲಿ ಹೇಳಿತ್ತಷ್ಟೆ ; ಇದೇನೂ ನಿಯಮವಲ್ಲ. ಏಕೆಂದರೆ ಚೇತನವೆಂದು ಪ್ರಸಿದ್ಧವಾಗಿರುವ ಮನುಷ್ಯಾದಿಗಳಿಂದ (ಅವಕ್ಕಿಂತ) ವಿಲಕ್ಷಣವಾಗಿರುವ ಕೂದಲು, ಉಗುರು –ಮುಂತಾದವುಗಳು ಹುಟ್ಟುವದೂ ಅಚೇತನವೆಂದು ಪ್ರಸಿದ್ಧವಾಗಿರುವ ಸಗಣಿ ಮುಂತಾದವುಗಳಿಂದ ಚೇಳು ಮುಂತಾದವುಗಳು (ಹುಟ್ಟುವದೂ) ಲೋಕದಲ್ಲಿ ಕಂಡುಬರುತ್ತದೆ.

(ಆಕ್ಷೇಪ) :– ಅಚೇತನವೇ ಆಗಿರುವ ಮನುಷ್ಯಾದಿಶರೀರಗಳು ಅಚೇತನ ವಾಗಿರುವ ಕೂದಲು, ಉಗುರು, ಮುಂತಾದವುಗಳಿಗೆ ಕಾರಣವಾಗಿರುತ್ತವೆ ಅಚೇತನವೇ ಆಗಿರುವ ಚೇಳು ಮುಂತಾದವುಗಳ ಶರೀರಗಳು ಅಚೇತನವಾದ ಸಗಣಿಯೇ ಮುಂತಾದ ಕಾರ್ಯಗಳಾಗಿರುತ್ತವೆಯಲ್ಲ !

(ಪರಿಹಾರ) :– ಇದಕ್ಕೆ ಹೇಳುತ್ತೇವೆ. ಹೀಗಿದ್ದರೂ ಒಂದೊಂದು ಅಚೇತನವು ಚೇತನಕ್ಕೆ ಆಯತನಭಾವವನ್ನು ಹೊಂದುತ್ತದೆ, ಮತ್ತೊಂದು (ಹೊಂದುವ)ದಿಲ್ಲ[1] ಎಂಬ ವೈಲಕ್ಷಣ್ಯವು ಇದ್ದೇ ಇರುತ್ತದೆ ಮನುಷ್ಯರಿಗೂ ಕೂದಲು ಉಗುರು –ಮುಂತಾದವುಗಳಿಗೂ ಸ್ವರೂಪವೇ ಮುಂತಾದವು ಬೇರೆ ಬೇರೆಯಾಗಿರುವದರಿಂದ ಪರಿಣಾಮದ ಸ್ವಭಾವವಿಪ್ರಕರ್ಷವು ಬಹಳವಾಗಿರು ತ್ತದೆ.[2] ಸಗಣಿ ಮುಂತಾದವುಗಳಿಗೂ ಚೇಳು ಮುಂತಾದವುಗಳಿಗೂ ಹೀಗೆಯೇ (ಪರಿಣಾಮದ ಸ್ವಭಾವವಿಪ್ರಕರ್ಷವಿದೆ). ಅತ್ಯಂತವಾಗಿ (ಎರಡಕ್ಕೂ) ಸಾದೃಶ್ಯವೇ ಇದ್ದರೆ ಕಾರ್ಯಕಾರಣಭಾವವೇ ಇಲ್ಲವಾಗಿಬಿಟ್ಟೀತು.

## ಕಾರ್ಯಕಾರಣಗಳಿಗೆ ಇರಬೇಕಾದ ಸಾಲಕ್ಷಣ್ಯ ಎಂಥದ್ದು?

( ಭಾಷ್ಯ )

೪೧೬. ಅಥೋಚ್ಯೇತ ಅಸ್ತಿ ಕಶ್ಚಿತ್ ಪಾರ್ಥಿವತ್ವಾದಿಸ್ವಭಾವಃ ಪುರುಷಾ ದೀನಾಂ ಕೇಶನಖಾದಿಷು ಅನುವರ್ತಮಾನಃ, ಗೋಮಯಾದೀನಾಂ (ಚ)[3]

1. ಶರೀರವು ಚೇತನಕ್ಕೆ ಆಶ್ರಯವಾಗಿದೆ, ಗೋಮಯಾದಿಗಳು ಅಲ್ಲ.

2. ಶರೀರ, ಕೂದಲು, ಉಗುರು –ಇವುಗಳೆಲ್ಲವೂ ಅಚೇತನವೇ ಆದರೂ ಒಂದೊಂದೂ ಬೇರೆಬೇರೆಯ ಸ್ವರೂಪವಾಗಿ ಕಾಣುತ್ತವೆ. ಪರಿಣಾಮದ ದೃಷ್ಟಿಯಿಂದ ನೋಡಿದರೆ ಇವೆಲ್ಲ ಒಂದೇ ಎಂದು ಹೇಳುವದಕ್ಕೆ ಆಗುವಂತೆಯೇ ಇಲ್ಲ. ಆದ್ದರಿಂದ ಕಾರ್ಯವೂ ಕಾರಣವೂ ಅಚೇತನವೇ ಆದರೂ ವೈಲಕ್ಷಣ್ಯವೂ ಇದೆ ಎಂದರ್ಥ. ಇಲ್ಲಿ 'ರೂಪವೇ ಮುಂತಾದ' ಎಂದರೆ ಪರಿಣಾಮ ಮುಂತಾದದ್ದು ಎಂದು ಆ|| ಟೀ||; ಆ ಟೀಕೆ ಯಂತೆ '–ರೂಪಾದಿಭೇದಾತ್' ಎಂದೇ ಪಾಠವಿರಬಹುದು.

3 ಇಲ್ಲಿ ಒಂದು 'ಚ' ಬಿಟ್ಟುಹೋಗಿದೆ ಎಂದು ತೋರುತ್ತದೆ.

ವೃಶ್ಚಿಕಾದಿಷು ಇತಿ | ಬ್ರಹ್ಮಣೋಽಪಿ ತರ್ಹಿ ಸತ್ತಾಲಕ್ಷಣಃ ಸ್ವಭಾವಃ ಆಕಾಶಾದಿಷು ಅನುವರ್ತಮಾನೋ ದೃಶ್ಯತೇ | ವಿಲಕ್ಷಣತ್ವೇನ ಚ ಕಾರಣೇನ ಬ್ರಹ್ಮಪ್ರಕೃತಿಕತ್ವಂ ಜಗತೋ ದೂಷಯತಾ ಕಿಮ್ ಅಶೇಷಸ್ಯ ಬ್ರಹ್ಮಸ್ವಭಾವಸ್ಯ ಅನನುವರ್ತನಂ ವಿಲಕ್ಷಣತ್ವಮ್ ಅಭಿಪ್ರೇಯತೇ, ಉತ ಯಸ್ಯ ಕಸ್ಯಚಿತ್, ಅಥ ಚೈತನ್ಯಸ್ಯ ಇತಿ ವಕ್ತವ್ಯಮ್ | ಪ್ರಥಮೇ ವಿಕಲ್ಪೇ ಸಮಸ್ತಪ್ರಕೃತಿ ವಿಕಾರೋಚ್ಛೇದಪ್ರಸಙ್ಗಃ | ನ ಹಿ ಅಸತಿ ಅತಿಶಯೇ ಪ್ರಕೃತಿವಿಕಾರಃ[1] ಇತಿ ಭವತಿ, ದ್ವಿತೀಯೇ ಚ ಅಸಿದ್ಧತ್ವಮ್ | ದೃಶ್ಯತೇ ಹಿ ಸತ್ತಾಲಕ್ಷಣೋ ಬ್ರಹ್ಮ ಸ್ವಭಾವಃ ಆಕಾಶಾದಿಷು ಅನುವರ್ತಮಾನಃ ಇತ್ಯುಕ್ತಮ್ | ತೃತೀಯೇ ತು ದೃಷ್ಟಾನ್ತಾಭಾವಃ | ಕಿಂ ಹಿ ಯತ್ ಚೈತನ್ಯೇನ ಅನನ್ವಿತಮ್ ತತ್ ಅಬ್ರಹ್ಮ ಪ್ರಕೃತಿಕಂ ದೃಷ್ಟಮ್ ಇತಿ ಬ್ರಹ್ಮವಾದಿನಂ ಪ್ರತಿ ಉದಾಹ್ರಿಯೇತ ? ಸಮಸ್ತಸ್ಯ ವಸ್ತುಜಾತಸ್ಯ ಬ್ರಹ್ಮಪ್ರಕೃತಿಕತ್ವಾಭ್ಯುಪಗಮಾತ್ । ಆಗಮ ವಿರೋಧಸ್ತು ಪ್ರಸಿದ್ಧ ಏವ । ಚೇತನಂ ಬ್ರಹ್ಮ ಜಗತಃ ಕಾರಣಂ ಪ್ರಕೃತಿಶ್ಚ ಇತಿ ಆಗಮತಾತ್ಪರ್ಯಸ್ಯ ಪ್ರಸಾಧಿತತ್ವಾತ್ ||

( ಭಾಷ್ಯಾರ್ಥ )

ಇನ್ನು (ಪೂರ್ವಪಕ್ಷಿಯು) ಪಾರ್ಥಿವತ್ವವೇ ಮುಂತಾದ ಪುರುಷಾದಿಗಳ ಸ್ವಭಾವವು ಕೂದಲು ಉಗುರು ಮುಂತಾದವುಗಳಲ್ಲಿಯೂ ಸಗಣಿಯೇ ಮುಂತಾದದ್ದರ (ಸ್ವಭಾವವು) ಚೇಳು ಮುಂತಾದವುಗಳಲ್ಲಿಯೂ ಯಾವದಾದ ರೊಂದು ಅನುಸರಿಸಿಕೊಂಡು ಬಂದೇ ಇರುತ್ತದೆಯಲ್ಲ! –ಎನ್ನಬಹುದು. ಹಾಗಾದರೆ ಬ್ರಹ್ಮದ ಸತ್ತಾರೂಪವಾದ ಸ್ವಭಾವವೂ ಆಕಾಶಾದಿಗಳಲ್ಲಿಯೂ ಅನುಸರಿಸಿಕೊಂಡು ಬಂದಿರುವದು ಕಾಣುತ್ತದೆ. ವೈಲಕ್ಷಣ್ಯವೆಂಬ ಕಾರಣ ದಿಂದ ಜಗತ್ತು ಬ್ರಹ್ಮಪ್ರಕೃತಿಕ(ವೆಂಬ ಪಕ್ಷದಲ್ಲಿ) ದೋಷವನ್ನು ಹೇಳುವ ವಾದಿಯು), ಬ್ರಹ್ಮಸ್ವಭಾವವೆಲ್ಲವೂ (ಜಗತ್ತಿನಲ್ಲಿ) ಅನುಸರಿಸಿಕೊಂಡು ಬಂದಿಲ್ಲ ವೆಂಬುದೇ ವೈಲಕ್ಷಣ್ಯವೆಂದು ಅಭಿಪ್ರಾಯಪಡುತ್ತಾನೆಯೆ, ಅಥವಾ ಯಾವ ವಾದರೊಂದು (ಸ್ವಭಾವವು ಅನುಸರಿಸಿಕೊಂಡುಬಂದಿಲ್ಲವೆಬುಂದೇ ವೈಲಕ್ಷಣ್ಯ ವೆನ್ನುತ್ತಾನೆಯೆ), ಅಥವಾ ಚೈತನ್ಯವು (ಅನುಸರಿಸಿಕೊಂಡು ಬರದೆ ಇರುವದು ವೈಲಕ್ಷಣ್ಯವೆನ್ನುತ್ತಾನೆಯೆ), ಎಂಬುದನ್ನು ಹೇಳಬೇಕಾಗುವದು. ಮೊದಲನೆಯ ವಿಕಲ್ಪವಾದರೆ, ಕಾರ್ಯಕಾರಣವೆಂಬುದೆಲ್ಲವೂ ನಾಶವಾಗಬೇಕಾಗುವದು ಏಕೆಂದರೆ (ಕಾರ್ಯದಲ್ಲಿ) ಹೆಚ್ಚುಗಾರಿಕೆಯೇ ಇಲ್ಲದಿದ್ದರೆ ಪ್ರಕೃತಿ, ವಿಕಾರ ಎಂದು (ವ್ಯವಹಾರವೇ) ಆಗುವದಿಲ್ಲ. ಎರಡನೆಯ (ವಿಕಲ್ಪವಾದರೆ ಅದು) ಅಸಿದ್ಧವು. ಏಕೆಂದರೆ ಸತ್ತಾರೂಪವಾದ ಬ್ರಹ್ಮಸ್ವಭಾವವು ಆಕಾಶಾದಿಗಳಲ್ಲಿ

1. 'ಪ್ರಕೃತಿರ್ವಿಕಾರಃ' ಎಂದಿದ್ದರೆ ಚೆನ್ನಾಗಿತ್ತು.

ಅನುಸರಿಸಿಕೊಂಡು ಬಂದಿದೆ ಎಂದು (ಆಗಲೆ) ಹೇಳಿದ್ದಾಗಿದೆ. ಮೂರನೆಯ ವಿಕಲ್ಪವಾದರೆ (ಅದಕ್ಕೆ) ದೃಷ್ಟಾಂತವಿರುವದಿಲ್ಲ, ಏಕೆಂದರೆ ಯಾವದು ಚೈತನ್ಯದಿಂದ ಅನನ್ವಿತವಾಗಿರುತ್ತದೆಯೋ ಅದು ಬ್ರಹ್ಮಪ್ರಕೃತಿಕವಾಗಿರುವದು ಕಂಡಿಲ್ಲ ಎಂದು ಬ್ರಹ್ಮವಾದಿಯನ್ನು ಕುರಿತು ಯಾವದನ್ನು ಉದಾಹರಿಸಬೇಕು ?[1] (ಬ್ರಹ್ಮವಾದಿಯು) ಎಲ್ಲಾ ವಸ್ತುಸಮೂಹವೂ ಬ್ರಹ್ಮಪ್ರಕೃತಿಕವೆಂದು ಒಪ್ಪಿರುವವರಿಂದ (ಅಂಥ ಯಾವ ಉದಾಹರಣೆಯನ್ನೂ ಹೇಳುವದಕ್ಕೆ ಬರುವದಿಲ್ಲ). ಆಗಮವಿರೋಧವಂತೂ (ಈ ಅನುಮಾನದಲ್ಲಿ) ಪ್ರಸಿದ್ಧವೇ ಆಗಿರುತ್ತದೆ. ಏಕೆಂದರೆ ಚೇತನವಾದ ಬ್ರಹ್ಮವು ಜಗತ್ತಿಗೆ (ನಿಮಿತ್ತ) ಕಾರಣವೂ ಪ್ರಕೃತಿಯೂ ಆಗಿದೆ ಎಂಬುದಕ್ಕೆ ಆಗಮತಾತ್ಪರ್ಯವನ್ನು ಆಗಲೇ ಸಾಧಿಸಿದ್ದಾಗಿರುತ್ತದೆ.

## ಬ್ರಹ್ಮವು ಪ್ರಮಾಣಾಂತರಗೋಚರವಲ್ಲ

( ಭಾಷ್ಯ )

೪೧೭. ಯತ್ತು ಉಕ್ತಮ್ ಪರಿನಿಷ್ಪನ್ನತ್ವಾತ್ ಬ್ರಹ್ಮಣಿ ಪ್ರಮಾಣಾಂತರಾಣಿ ಸಂಭವೇಯುಃ ಇತಿ । ತದಪಿ ಮನೋರಥಮಾತ್ರಮ್ । ರೂಪಾದ್ಯಭಾವಾದ್ ಹಿ ನಾಯಮರ್ಥಃ ಪ್ರತ್ಯಕ್ಷಸ್ಯ ಗೋಚರಃ । ಲಿಂಗಾದ್ಯಭಾವಾಚ್ಚ ನಾನುಮಾನಾದೀನಾಮ್ । ಆಗಮಮಾತ್ರಸಮಧಿಗಮ್ಯ ಏವ ತು ಅಯಮರ್ಥಃ, ಧರ್ಮವತ್ । ತಥಾ ಚ ಶ್ರುತಿಃ "ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ" (ಕಾ. ೧-೨-೯), "ಕೋ ಅದ್ಧಾ ವೇದ ಕ ಇಹ ಪ್ರವೋಚತ್" (ಋ. ಸಂ. ೧೦-೧೨೯-೬) 'ಇಯಂ ವಿಸೃಷ್ಟಿರ್ಯತ ಆಬಭೂವ" (ಋ.ಸಂ. ೧೦-೧೨೯-೭) ಇತಿ ಚೈತೇ ಋಚೌ ಸಿದ್ಧಾನಾಮಪಿ ಈಶ್ವರಾಣಾಂ ದುರ್ಬೋಧತಾಂ ಜಗತ್ಕಾರಣಸ್ಯ ದರ್ಶಯತಃ । ಸ್ಮೃತಿರಪಿ ಭವತಿ— ಅಚಿನ್ತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇತ್[2] " (ಭೀಷ್ಮ. ೫-೧೨) ಇತಿ । " ಅವ್ಯಕ್ತೋಽಯಮಚಿನ್ತ್ಯೋಽಯಮವಿಕಾರ್ಯೋಽಯಮುಚ್ಯತೇ " (ಗೀ. ೨-೨೫) ಇತಿ ಚ । "ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ। ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ" (ಗೀ. ೧೦-೨) ಇತಿ ಚೈವಂಜಾತೀಯಕಾ ॥

---

1. ದೃಷ್ಟಾಂತವಿಲ್ಲದೆ ಅನುಮಾನವಿಲ್ಲ. ಉಭಯಸಮ್ಮತವಾದ ದೃಷ್ಟಾಂತವೇ ಪ್ರಕೃತದಲ್ಲಿಲ್ಲ ಎಂದು ಭಾವ. "ಜಗತ್ತು ಬ್ರಹ್ಮಪ್ರಕೃತಿಕವಲ್ಲ; ಏಕೆಂದರೆ ಅದು ಚೈತನ್ಯಾನ್ವಿತವಾಗಿಲ್ಲ. ಯಾವಯಾವದು ಚೈತನ್ಯಾನ್ವಿತವಲ್ಲವೋ ಅದು ಬ್ರಹ್ಮಪ್ರಕೃತಿಕವಲ್ಲ; ಉದಾಹರಣೆಗೆ ಇಂಥವೆಂದು ಅಬ್ರಹ್ಮಪ್ರಕೃತಿಕವು" –ಎಂದು ಅನುಮಾನವನ್ನು ಮಾಡುವಹಾಗಿಲ್ಲ.

2. "ಸಾಧಯೇತ್" ಎಂದು ಅಚ್ಚಿನ ಪುಸ್ತಕದ ಪಾಠ.

(ಭಾಷ್ಯಾರ್ಥ)

ಇನ್ನು ಪರಿನಿಷ್ಪನ್ನ(ವಸ್ತು)ವಾಗಿರುವದರಿಂದ ಬ್ರಹ್ಮ(ವಿಷಯ)ದಲ್ಲಿ ಪ್ರಮಾಣಾಂತರಗಳೂ ಆಗಬಹುದು ಎಂದು (ಪೂರ್ವಪಕ್ಷದಲ್ಲಿ ಭಾ. ಭಾ. ೪೯೯ರಲ್ಲಿ) ಹೇಳಿತ್ತಷ್ಟೆ. ಅದೂ ಬರಿಯ ಮನಸ್ಸಿನ ಕಲ್ಪನೆ ಏಕೆಂದರೆ ರೂಪಾದಿಗಳಿಲ್ಲದ್ದರಿಂದ ಈ ವಸ್ತು ಪ್ರತ್ಯಕ್ಷಕ್ಕೆ ಗೋಚರವಲ್ಲ; ಮತ್ತು ಲಿಂಗಾದಿಗಳಿಲ್ಲದ್ದರಿಂದ ಅನುಮಾನಾದಿಗಳಿಗೂ (ಗೋಚರ)ವಲ್ಲ. ಮತ್ತೇನೆಂದರೆ **ಈ ವಸ್ತು ಧರ್ಮದಂತೆ ಬರಿಯ ಆಗಮದಿಂದಲೇ ತಿಳಿಯಬರತಕ್ಕದ್ದಾಗಿರುತ್ತದೆ.**[1] ಆದ್ದರಿಂದಲೇ ಶ್ರುತಿಯು "ಎಲೈ ಪ್ರಿಯತಮನೆ, ಈ ಮತಿಯು ತರ್ಕದಿಂದ ದೊರೆಯತಕ್ಕದ್ದಲ್ಲ; ಮತ್ತೊಬ್ಬರು ಹೇಳಿದರೇ ಸುಲಭವಾಗಿ ಜ್ಞಾನವನ್ನು (ಕೊಡುವ ಕಾರಣವಾಗುವದು." (ಕ. ೧-೨-೯) ಎಂದು ಹೇಳುತ್ತಿದೆ. "ಯಾವನು ಸ್ಪಷ್ಟವಾಗಿ ತಿಳಿದಿರುತ್ತಾನೆ, ಯಾವನು ಇಲ್ಲಿ ಹೇಳಿಯಾನು ?" (ಋ. ೧೦-೧೨೯-೬), "ಈ ವಿವಿಧಸೃಷ್ಟಿ ಏತರಿಂದ ಆಯಿತೋ" (ಋ. ೧೦-೧೨೯-೭) ಎಂಬೀ (ಎರಡು) ಋಕ್ಕುಗಳು ಈಶ್ವರರಾದ ಸಿದ್ಧರುಗಳಿಗೂ[2] ಜಗತ್ಕಾರಣವು ತಿಳಿಯುವದಕ್ಕೆ ಕಷ್ಟ ಎಂಬುದನ್ನು ತಿಳಿಸುತ್ತಿವೆ. "ಯಾವ ಪದಾರ್ಥಗಳು ಅಚಿಂತ್ಯವಾಗಿರುವವೋ[3] ಅವನ್ನು ತರ್ಕಕ್ಕೆ ಹೊಂದಿಸಬಾರದು" (ಭೀ. ೫-೧೨) ಎಂದು ಸ್ಮೃತಿಯೂ ಇದೆ. "ಇವನು ಅವ್ಯಕ್ತನು, ಇವನು ಅಚಿಂತ್ಯನು, ಇವನು ಅವಿಕಾರ್ಯನೆನಿಸುವನು" (ಗೀ. ೨-೨೫), ಮತ್ತು "ನನ್ನ ಉತ್ಪತ್ತಿಯನ್ನು ದೇವತೆಗಳಾಗಲಿ ಮಹರ್ಷಿಗಳಾಗಲಿ ಅರಿಯರು; ಏಕೆಂದರೆ ಎಲ್ಲಾ ದೇವತೆಗಳಿಗೂ ಮಹರ್ಷಿಗಳಿಗೂ ನಾನು ಆದಿಯು'' (ಗೀ. ೧೦-೨) ಎಂಬೀ ಜಾತಿಯ (ಸ್ಮೃತಿಯೂ ಇದೆ).

## ಅನುಭವಕ್ಕೆ ಅಂಗವಾಗಿ ಶ್ರೌತತರ್ಕವು ಬೇಕು

( ಭಾಷ್ಯ )

೪೧೮. ಯದಪಿ ಶ್ರವಣವ್ಯತಿರೇಕೇಣ ಮನನಂ ವಿದಧತ್ ಶಬ್ದ ಏವ ತರ್ಕಮಪಿ ಆದರ್ತವ್ಯಂ ದರ್ಶಯತಿ ಇತ್ಯುಕ್ತಮ್ । ನಾನೇನ ಮಿಷೇಣ

1. ಧರ್ಮಬ್ರಹ್ಮಗಳೆರಡೂ ಶಾಸ್ತ್ರಗಮ್ಯಗಳೇ ಆದರೂ ಅನುಭವಾದಿಗಳೂ ಬ್ರಹ್ಮವನ್ನು ತಿಳಿಸಿಕೊಡುವದಕ್ಕೆ ಪ್ರಮಾಣವೆಂದು ಭಾ. ಭಾ. ೨೮ರಲ್ಲಿ ಹೇಳಿರುವದನು ಮರೆಯಬಾರದು.

2. ಸ್ವತಂತ್ರರೂ ಸ್ವಭಾವದಿಂದಲೇ ಧರ್ಮಜ್ಞಾನಾದಿಗಳುಂಟಾಗಿರುವ ಮಹಾತ್ಮರೂ ಆದವರಿಗೂ ಎಂದರ್ಥ.

3. ಮನಸ್ಸಿನಿಂದ ಊಹಿಸಿ ತಿಳಿಯಲಶಕ್ಯವೋ.

ಶುಷ್ಕತರ್ಕಸ್ಯ ಅತ್ರ ಆತ್ಮಲಾಭಃ ಸಂಭವತಿ। ಶ್ರುತ್ಯನುಗೃಹೀತ ಏವ ಹಿ ಅತ್ರ ತರ್ಕಃ ಅನುಭವಾಙ್ಗತ್ವೇನ ಆಶ್ರೀಯತೇ ಸ್ವಪ್ನಾನ್ತಬುದ್ಧಾನ್ತಯೋರುಭಯೋಃ ಇತರೇತರವ್ಯಭಿಚಾರಾತ್ ಆತ್ಮನಃ ಅನನ್ವಾಗತತ್ವಮ್, ಸಂಪ್ರಸಾದೇ ಚ ಪ್ರಪಞ್ಚಪರಿತ್ಯಾಗೇನ ಸದಾತ್ಮನಾ ಸಂಪತ್ತೇಃ ನಿಷ್ಪ್ರಪಞ್ಚಸದಾತ್ಮತ್ವಮ್, ಪ್ರಪಞ್ಚಸ್ಯ ಬ್ರಹ್ಮಪ್ರಭವತ್ವಾತ್ ಕಾರ್ಯಕಾರಣಾನನ್ಯನ್ಯಾಯೇನ ಬ್ರಹ್ಮಾವ್ಯತಿರೇಕಃ ಇತ್ಯೇವಂಜಾತೀಯಕಃ। "ತರ್ಕಾಪ್ರತಿಷ್ಠಾನಾತ್" (೨-೧-೧೧) ಇತಿ ಚ ಕೇವಲಸ್ಯ ತರ್ಕಸ್ಯ ವಿಪ್ರಲಮ್ಭಕತ್ವಂ ದರ್ಶಯಿಷ್ಯತಿ॥

( ಭಾಷ್ಯಾರ್ಥ )

**ಶ್ರವಣಕ್ಕಿಂತ ಬೇರೆಯಾಗಿ ಮನನವನ್ನು ವಿಧಿಸುವ[1] ಶಬ್ದವೇ ತರ್ಕವನ್ನೂ ಸ್ವೀಕರಿಸಬೇಕೆಂದು ತಿಳಿಸುತ್ತದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಈ ನೆಪದಿಂದ ಒಣತರ್ಕಕ್ಕೂ[2] ಇಲ್ಲಿ ಜನ್ಮವುಂಟಾಗಲಾರದು. ಏಕೆಂದರೆ ಕನಸು, ಎಚ್ಚರ –ಇವುಗಳು ಒಂದನ್ನೊಂದು ಬಿಟ್ಟುಹೋಗುತ್ತಿರುವದರಿಂದ ಆತ್ಮನು (ಅವುಗಳ ದೋಷದಿಂದ) ಅನನ್ವಾಗತನೆಂಬುದು,[3] ಸುಷುಪ್ತಿಯಲ್ಲಿ ಪ್ರಪಂಚವನ್ನು ಬಿಟ್ಟು ಸದ್ರೂಪನಾದ ಆತ್ಮನಲ್ಲಿ ಸೇರಿಹೋಗುವದರಿಂದ ನಿಷ್ಪ್ರಪಂಚನಾದ ಸದ್ರೂಪ ಆತ್ಮನಾಗಿರುವದು[4] ಪ್ರಪಂಚವು ಬ್ರಹ್ಮದಿಂದ ಉಂಟಾಗಿರುವದರಿಂದ ಕಾರ್ಯಕಾರಣಗಳು ಬೇರೆಯಲ್ಲ ಎಂಬ ನ್ಯಾಯದಿಂದ ಬ್ರಹ್ಮಕ್ಕಿಂತ ಬೇರೆಯಲ್ಲದೆ ಇರುವದು[5] –ಎಂಬೀ ಜಾತಿಯ ಶ್ರುತ್ಯನುಗೃಹೀತತರ್ಕವನ್ನೇ[6] ಇಲ್ಲಿ ಅನುಭವಾಂಗವಾಗಿ ಆಶ್ರಯಿಸಿರುತ್ತದೆ.** "ತರ್ಕಾಪ್ರತಿಷ್ಠಾನಾತ್" (೨-೧-೧೧) ಎಂಬಲ್ಲಿ ಬರಿಯ ತರ್ಕವು ಮೋಸ ಮಾಡುತ್ತದೆ ಎಂದು ಮುಂದೆ (ಸೂತ್ರಕಾರರು) ತಿಳಿಸಿಯೂ ಇರುತ್ತಾರೆ.

---

1. ಮನನವನ್ನೂ ವಿಧಿಸಿರುವದರಿಂದ ಶ್ರುತಿಯುಷ್ಟೇ ತರ್ಕವೂ ಅವಶ್ಯವೆಂದು ಪೂರ್ವಪಕ್ಷಿಯ ಭಾವ. ಶ್ರವಣಾದಿಗಳು ಆತ್ಮನ ಕಡೆಗೆ ತಿರುಗಿಸುವದರಿಂದ ಮಾತ್ರ ವಿಧಿಯಂತಿರುವವೆಂಬೂ ನಿತ್ಯಸಿದ್ಧನಾದ ಆತ್ಮನನ್ನೇ ಶ್ರುತಿಯು ತಿಳಿಸುವದೆಂದೂ ಸಿದ್ಧಾಂತಿಯ ಮತ.

2. ಪ್ರಮಾಣರಹಿತತರ್ಕವನ್ನು ಇಲ್ಲಿ 'ಒಣತರ್ಕ', 'ಬರಿಯ ತರ್ಕ', ಎಂದು ಕರೆದಿದೆ

3 ಬೃ. ೪-೩-೨೨ರ ಸೂಚನೆ.

4. ಛಾಂ. ೬-೮-೧ರ ಸೂಚನೆ 5. ಛಾಂ. ೬-೧-೪ರ ಸೂಚನೆ.

6. ಶ್ರುತಿಯು ತಿಳಿಸಿಕೊಟ್ಟಿರುವ ಮತ್ತು ಶ್ರುತಿಪ್ರಮಾಣಕ್ಕೆ ಅನುಗುಣವಾದ ತರ್ಕವನ್ನೇ.

## ಚೇತನಾಚೇತನವಿಭಾಗಶ್ರುತಿಗೆ ಗತಿ

(ಭಾಷ್ಯ)

೪೮೯. ಯೋಽಪಿ ಚೇತನಕಾರಣಶ್ರವಣಬಲೇನೈವ ಸಮಸ್ತಸ್ಯ ಜಗತಃ ಚೇತನತಾಮ್ ಉತ್ಪ್ರೇಕ್ಷತೇ, ತಸ್ಯಾಪಿ "ವಿಜ್ಞಾನಂ ಚಾವಿಜ್ಞಾನಂ ಚ" (ತೈ. ೨-೬) ಇತಿ ಚೇತನಾಚೇತನವಿಭಾಗಶ್ರವಣಂ ವಿಭಾವನಾವಿಭಾವನಾಭ್ಯಾಂ ಚೈತನ್ಯಸ್ಯ ಶಕ್ಯತ ಏವ ಯೋಜಯಿತುಮ್ | ಪರಸ್ಯೈವ ತು ಇದಮಪಿ ವಿಭಾಗ ಶ್ರವಣಂ ನ ಯುಜ್ಯತೇ । ಕಥಮ್ ? ಪರಮಕಾರಣಸ್ಯ ಹಿ ಅತ್ರ ಸಮಸ್ತ ಜಗದಾತ್ಮನಾ ಸಮವಸ್ಥಾನಂ ಶ್ರಾವ್ಯತೇ 'ವಿಜ್ಞಾನಂ ಚಾವಿಜ್ಞಾನಂ ಚ' ಅಭವತ್ ಇತಿ | ತತ್ರ ಯಥಾ ಚೇತನಸ್ಯ ಅಚೇತನಭಾವೋ ನೋಪಪದ್ಯತೇ ವಿಲಕ್ಷಣತ್ವಾತ್, ಏವಮ್ ಅಚೇತನಸ್ಯಾಪಿ ಚೇತನಭಾವಃ ನೋಪಪದ್ಯತೇ | ಪ್ರತ್ಯುಕ್ತತ್ವಾತ್ ತು ವಿಲಕ್ಷಣತ್ವಸ್ಯ ಯಥಾಶ್ರುತ್ಯೈವ ಚೇತನಂ ಕಾರಣಂ ಗ್ರಹೀತವ್ಯಂ ಭವತಿ ||

(ಭಾಷ್ಯಾರ್ಥ)

ಯಾವನು ಚೇತನವೇ (ಜಗತ್ತಿಗೆ) ಕಾರಣವೆಂದು ಶ್ರುತಿಯಲ್ಲಿರುವದರ ಬಲದಿಂದಲೇ ಇಡಿಯ ಜಗತ್ತು ಚೇತನವೇ ಎಂದು ಊಹಿಸುತ್ತಾನೋ ಅವನ (ಪಕ್ಷದಲ್ಲಿಯೂ) "ವಿಜ್ಞಾನವೂ ಅವಿಜ್ಞಾನವೂ" (ತೈ. ೨-೬) ಎಂದು ಚೇತನಾ ಚೇತನವಿಭಾಗಶ್ರುತಿಯನ್ನೂ ಚೈತನ್ಯವು ಹೊರತೋರುವದು, ತೋರದಿರು ವದು -ಎಂಬ (ವಿಶೇಷ)ಗಳಿಗೆ (ಅನುಗುಣವಾಗಿ) ಹೊಂದಿಸುವದಕ್ಕೆ ಬಂದೇ ಬರುತ್ತದೆ ಆದರೆ ಈ ವಿಭಾಗಶ್ರುತಿಯೂ ಪರ(ವಾದಿಯಾದ ಸಾಂಖ್ಯ)ನಿಗೆ ಹೊಂದುವದಿಲ್ಲ. ಹೇಗೆ? ಎಂದರೆ ಪರಮಕಾರಣವೇ ಸಮಸ್ತಜಗದ್ರೂಪದಿಂದ ಇದೆ ಎಂದಲ್ಲವೆ, 'ವಿಜ್ಞಾನವೂ ಅವಿಜ್ಞಾನವೂ' ಆಯಿತು ಎಂದು ಇಲ್ಲಿ ಶ್ರುತಿ ಯಲ್ಲಿ ಹೇಳಿದೆ? ಇಲ್ಲಿ ಹೇಗೆ ಚೇತನವು ಅಚೇತನವಾಗುವದೆಂಬುದು (ಕಾರ್ಯವು) ವಿಲಕ್ಷಣವಾಗಿರುವದರಿಂದ (ಯುಕ್ತಿಗೆ) ಹೊಂದುವದಿಲ್ಲವೋ[1] ಹಾಗೆಯೇ ಅಚೇತನವು ಚೇತನವಾಗುವದೂ ಹೊಂದುವದಿಲ್ಲ.[2] ಆದರೆ ವೈಲಕ್ಷಣ್ಯವನ್ನು (ನಾವು) ತಿರಸ್ಕರಿಸಿರುವದರಿಂದ[3] ಶ್ರುತಿಗೆ ಅನುಗಣವಾಗಿಯೇ ಚೇತನವು ಕಾರಣವೆಂದು ತೆಗೆದುಕೊಳ್ಳಬೇಕಾಗುತ್ತದೆ.

---

1 ಹೊಂದುವದಿಲ್ಲವೆಂದು ಸಾಂಖ್ಯನು ಅಭಿಪ್ರಾಯಪಡುತ್ತಾನೋ ಎಂದರ್ಥ.

2 ಏಕೆಂದರೆ ಚೇತನವಾದ ಕಾರ್ಯವು ಅಚೇತನವಾದ ಪ್ರಧಾನವೆಂಬ ಕಾರಣ ಕ್ಕಿಂತ ವಿಲಕ್ಷಣವಾಗಿರುವದರಿಂದ ಅದು ಪ್ರಧಾನದಿಂದ ಹುಟ್ಟಿದೆ ಎಂಬ ಸಾಂಖ್ಯವಾದವೂ ಇದೇ ತರ್ಕಕ್ಕೆ ವಿರುದ್ಧವಾಗುತ್ತದೆ.

3. ಸತ್ತಾಲಕ್ಷಣವಾದ ಬ್ರಹ್ಮಸ್ವಭಾವವು ಜಗತ್ತಿನಲ್ಲಿ ಅನುಗತವಾಗಿದೆ ಎಂದು ತೋರಿಸಿಕೊಟ್ಟಿರುವದರಿಂದ.

# ಬ್ರಹ್ಮಕಾರಣವಾದವು ಅಸತ್ಕಾರ್ಯವಾದವಲ್ಲ

## ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ॥ ೭ ॥

೭. (ಕಾರ್ಯವು) ಅಸತ್ತು (ಎಂದಾಗುವದು) ಎಂದರೆ ಹಾಗಲ್ಲ ; ಏಕೆಂದರೆ (ಇದು) ಬರಿಯ ಪ್ರತಿಷೇಧವಾಗಿದೆ.

(ಭಾಷ್ಯ)

೪೨೦. ಯದಿ ಚೇತನಂ ಶುದ್ಧಂ ಶಬ್ದಾದಿಹೀನಂ ಚ ಬ್ರಹ್ಮ ತದ್ವಿಪರೀತಸ್ಯ ಅಚೇತನಸ್ಯ ಅಶುದ್ಧಸ್ಯ ಶಬ್ದಾದಿಮತಶ್ಚ ಕಾರ್ಯಸ್ಯ ಕಾರಣಮ್ ಇಷ್ಯೇತ, ಅಸತ್ ತರ್ಹಿ ಕಾರ್ಯಂ ಪ್ರಾಗುತ್ಪತ್ತೇಃ ಇತಿ ಪ್ರಸಜ್ಯೇತ । ಅನಿಷ್ಟಂ ಚೈತತ್ ಸತ್ಕಾರ್ಯವಾದಿನಸ್ತವ ಇತಿ ಚೇತ್ । ನೈಷ ದೋಷಃ । ಪ್ರತಿಷೇಧಮಾತ್ರತ್ವಾತ್ । ಪ್ರತಿಷೇಧಮಾತ್ರಂ ಹಿ ಇದಮ್ । ನಾಸ್ಯ ಪ್ರತಿಷೇಧಸ್ಯ ಪ್ರತಿಷೇಧ್ಯಮ್ ಅಸ್ತಿ। ನ ಹಿ ಅಯಂ ಪ್ರತಿಷೇಧಃ ಪ್ರಾಗುತ್ಪತ್ತೇಃ ಸತ್ತ್ವಂ ಕಾರ್ಯಸ್ಯ ಪ್ರತಿಷೇದ್ಧುಂ ಶಕ್ನೋತಿ । ಕಥಮ್ ? ಯಥೈವ ಹಿ ಇದಾನೀಮಪಿ ಇದಂ ಕಾರ್ಯಂ ಕಾರಣಾತ್ಮನಾ ಸತ್, ಏವಂ ಪ್ರಾಗುತ್ಪತ್ತೇರಪಿ ಇತಿ ಗಮ್ಯತೇ । ನ ಹಿ ಇದಾನೀಮಪಿ ಇದಂ ಕಾರ್ಯಂ ಕಾರಣಾತ್ಮಾನಮ್ ಅನ್ತರೇಣ ಸ್ವತನ್ತ್ರಮೇವ ಅಸ್ತಿ । "ಸರ್ವಂ ತಂ ಪರಾದಾದ್ಯೋಽನ್ಯತ್ರಾತ್ಮನಃ ಸರ್ವಂ ವೇದ" (ಬೃ. ೨-೪-೬) ಇತ್ಯಾದಿಶ್ರವಣಾತ್ । ಕಾರಣಾತ್ಮನಾ ತು ಸತ್ತ್ವಂ ಕಾರ್ಯಸ್ಯ ಪ್ರಾಗುತ್ಪತ್ತೇಃ ಅವಿಶಿಷ್ಟಮ್ । ನನು ಶಬ್ದಾದಿಹೀನಂ ಬ್ರಹ್ಮ ಜಗತಃ ಕಾರಣಮ್ । ಬಾಢಮ್ । ನ ತು ಶಬ್ದಾದಿಮತ್ ಕಾರ್ಯಂ ಕಾರಣಾತ್ಮನಾ ಹೀನಂ ಪ್ರಾಗುತ್ಪತ್ತೇಃ ಅಸತ್ ಕಾರ್ಯಮ್ ಇತಿ। ವಿಸ್ತರೇಣ ಚ ಏತತ್ ಕಾರ್ಯಕಾರಣಾನನ್ಯತ್ವವಾದೇ ವಕ್ಷ್ಯಾಮಃ ॥

(ಭಾಷ್ಯಾರ್ಥ)

(ಆಕ್ಷೇಪ) :- ಚೇತನವೂ ಶುದ್ಧವೂ ಶಬ್ದಾದಿಗಳಿಲ್ಲದ್ದೂ ಆಗಿರುವ ಬ್ರಹ್ಮವು ಅದಕ್ಕೆ ವಿಪರೀತವಾಗಿರುವ, ಅಚೇತನವೂ ಅಶುದ್ಧವೂ ಶಬ್ದಾದಿಗಳುಳ್ಳದ್ದೂ ಆಗಿರುವ ಕಾರ್ಯಕ್ಕೆ ಕಾರಣವೆಂದು ಒಪ್ಪಿದರೆ ಕಾರ್ಯವು ಹುಟ್ಟುವದಕ್ಕಿಂತ ಮುಂಚೆ ಅಸತ್ತು ಎಂದಾಗುವದು. ಇದು **ಸತ್ಕಾರ್ಯವಾದಿ**ಯಾದ ನಿನಗೆ ಇಷ್ಟವಲ್ಲವಲ್ಲ[1] !

---

1. ಸಾಂಖ್ಯರೂ ವೇದಾಂತಿಗಳೂ ಸತ್ಕಾರ್ಯವಾದಿಗಳು, ಕಾರ್ಯವು ಹುಟ್ಟುವದಕ್ಕಿಂತ ಮೊದಲೂ ಇರುವದೆಂದು ಹೇಳುವವರು. ವೈಶೇಷಿಕರು **ಅಸತ್ಕಾರ್ಯವಾದಿಗಳು**, ಕಾರ್ಯವು ಹುಟ್ಟುವದಕ್ಕಿಂತ ಮುಂಚೆ ಇರುವದಿಲ್ಲ ಎನ್ನುವವರು. **ಶೂನ್ಯವಾದಿಗಳು** ಕಾರ್ಯಕಾರಣಗಳೆರಡೂ ಅಸತ್ತು ಎಂಬ ಅಸತ್ಕಾರ್ಯವಾದಿಗಳು.

(ಸಮಾಧಾನ) :– ಇದು ತಪ್ಪಲ್ಲ. ಏಕೆಂದರೆ (ಇದು) ಬರಿಯ ಪ್ರತಿಷೇಧವೇ ಹೊರತು ಈ ಪ್ರತಿಷೇಧಕ್ಕೆ ಪ್ರತಿಷೇಧ್ಯವಾದದ್ದು ಇರುವದಿಲ್ಲ. ಈ ಪ್ರತಿಷೇಧವು ಉತ್ಪತ್ತಿಗಿಂತ ಮುಂಚೆ ಕಾರ್ಯವು ಇಲ್ಲವೆನ್ನಲಾರದು. (ಅದು) ಹೇಗೆ ? ಎಂದರೆ, **ಈಗಲೂ ಹೇಗೆ ಕಾರ್ಯವು ಕಾರಣರೂಪದಿಂದಲೇ ಸತ್ತಾಗಿರುವದೋ ಹಾಗೆಯೇ ಉತ್ಪತ್ತಿಗಿಂತ ಮುಂಚೆಯೂ (ಸತ್ತಾಗಿರುವದು) ಎಂದು ನಿಶ್ಚಯಿಸಬೇಕು. ಈಗಲಾದರೂ ಈ ಕಾರ್ಯವು ಕಾರಣರೂಪವನ್ನು ಬಿಟ್ಟು ಸ್ವತಂತ್ರವಾಗಿಯೇ ಇರುವದಿಲ್ಲ.** ಏಕೆಂದರೆ "ಯಾವನು ಎಲ್ಲವನ್ನೂ ಆತ್ಮನಿಗಿಂತ ಬೇರೆಯಾಗಿ(ದೆ ಎಂದು) ತಿಳಿಯುವನೋ (ಅವನನ್ನು) ಎಲ್ಲವೂ ತಿರಸ್ಕರಿಸುತ್ತದೆ" (ಬೃ. ೨-೪-೬)ಎಂದು ಮುಂತಾಗಿ ಶ್ರುತಿಯಿದೆ. ಕಾರಣರೂಪದಿಂದ ಕಾರ್ಯವು ಇದೆ ಎಂಬುದಾದರೋ ಉತ್ಪತ್ತಿಗೆ ಮುಂಚೆಯೂ ಸಮಾನವಾಗಿರುತ್ತದೆ.

(ಆಕ್ಷೇಪ) :– ಶಬ್ದಾದಿಗಳಿಲ್ಲದ ಬ್ರಹ್ಮವು ಜಗತ್ತಿಗೆ ಕಾರಣವಲ್ಲವೆ[1] ?

(ಪರಿಹಾರ) :– ನಿಜ. ಆದರೆ ಶಬ್ದಾದಿಗಳಿಂದ ಕೂಡಿರುವ ಕಾರ್ಯವು ಕಾರಣರೂಪದಿಂದಲ್ಲದೆ ಉತ್ಪತ್ತಿಗೆ ಮುಂಚೆಯಾಗಲಿ ಈಗಲಾಗಲಿ ಇರುವದೇ ಇಲ್ಲ. ಆದ್ದರಿಂದ ಹುಟ್ಟುವದಕ್ಕಿಂತ ಮುಂಚೆ ಕಾರ್ಯವು ಅಸತ್ತು ಎಂದು ಹೇಳುವದಕ್ಕೆ ಆಗುವದಿಲ್ಲ.[2] ಕಾರ್ಯಕಾರಣಾನನ್ಯತ್ವವಾದದಲ್ಲಿಯೂ ಇದನ್ನು ವಿಸ್ತಾರವಾಗಿ ತಿಳಿಸುವೆವು.

## ಆಕ್ಷೇಪ : ಪ್ರಲಯದಲ್ಲಿ ಕಾರ್ಯಧರ್ಮವು ಕಾರಣಕ್ಕೆ ಅಂಟುವದು

**ಅಪೀತೌ ತದ್ವತ್ಪ್ರಸಙ್ಗಾದಸಮಞ್ಜಸಮ್ ॥ ೮ ॥**

೮. ಅಪೀತಿಯಲ್ಲಿ ಅದರಂತಾಗಬೇಕಾಗುವದರಿಂದ (ಇದು) ಅಸಮಂಜಸವು.

( ಭಾಷ್ಯ )

೪೨೧. ಅತ್ರಾಹ–ಯದಿ ಸ್ಥೌಲ್ಯಸಾವಯವತ್ವಾಚೇತನತ್ವಪರಿಚ್ಛಿನ್ನತ್ವಾ

1. ಹಾಗೆಂದು ನೀವು ಒಪ್ಪಿಲ್ಲವೆ ?

2. ಕಾರ್ಯವು ಸತ್ತೆಂದರೆ ಕಾರಣರೂಪದಿಂದಿರುವದು ; ಆದ್ದರಿಂದ ಈಗಲೂ ಹುಟ್ಟುವ ಮುಂಚೆಯೂ ಜಗತ್ತು ಬ್ರಹ್ಮರೂಪದಿಂದಲೇ ಇರುತ್ತದೆ. ತನ್ನ ರೂಪದಿಂದ ಎಂದರೆ ಶಬ್ದಾದಿಗಳ ರೂಪವುಳ್ಳದ್ದಾಗಿ ಈಗಲೂ ಇಲ್ಲ, ಹುಟ್ಟುವ ಮುಂಚೆಯೂ ಇಲ್ಲ. ಈ ಅರ್ಥದಲ್ಲಿ ನಮ್ಮನ್ನು ಅಸತ್ಕಾರ್ಯವಾದಿಗಳೆಂದು ಕರೆದರೆ ಕರೆಯಬಹುದು. ಆದರೆ ಸದ್ರೂಪವಾದ ಕಾರಣವೇ ಕಾರ್ಯವಾಗಿ ತೋರುತ್ತಿರುವದೆಂಬ ನಮ್ಮ ಸಿದ್ಧಾಂತಕ್ಕೆ ಇದರಿಂದ ಯಾವ ಹಾನಿಯೂ ಆಗುವದಿಲ್ಲ ಎಂದು ಭಾವ.

ಶುದ್ಧ್ಯಾದಿಧರ್ಮಕಂ ಕಾರ್ಯಂ ಬ್ರಹ್ಮಕಾರಣಮ್ ಅಭ್ಯುಪಗಮ್ಯೇತ, ತತ ಅಪೀತೌ ಪ್ರಲಯೇ ಪ್ರತಿಸಂಸೃಜ್ಯಮಾನಂ ಕಾರ್ಯಂ ಕಾರಣಾವಿಭಾಗನ ಆಪದ್ಯಮಾನಂ ಕಾರಣಮ್ ಆತ್ಮೀಯೇನ ಧರ್ಮೇಣ ದೂಷಯೇತ್ ಇ ಅಪೀತೌ ಕಾರಣಸ್ಯಾಪಿ ಬ್ರಹ್ಮಣಃ ಕಾರ್ಯಸ್ಯೇವ ಅಶುದ್ಧ್ಯಾದಿರೂ ಪ್ರಸಜ್ಗಾತ್ ಸರ್ವಜ್ಞಂ ಬ್ರಹ್ಮ ಜಗತ್ಕಾರಣಮ್ ಇತಿ ಅಸಮಞ್ಜಸಮ್ ಇದವ ಔಪನಿಷದಂ ದರ್ಶನಮ್ । ಅಪಿ ಚ ಸಮಸ್ತಸ್ಯ ವಿಭಾಗಸ್ಯ ಅವಿಭಾಗಪ್ರಾಪ್ತೇ ಪುನರುತ್ಪತ್ತೌ ನಿಯಮಕಾರಣಾಭಾವಾತ್ ಭೋಕ್ತೃಭೋಗ್ಯಾದಿವಿಭಾಗೇ ಉತ್ಪತ್ತಿಃ ನ ಪ್ರಾಪ್ನೋತಿ ಇತಿ ಅಸಮಞ್ಜಸಮ್ । ಅಪಿ ಚ ಭೋಕ್ತೄಣಾ ಪರೇಣ ಬ್ರಹ್ಮಣಾ ಅವಿಭಾಗಂ ಗತಾನಾಂ ಕರ್ಮಾದಿನಿಮಿತ್ತಪ್ರಲಯೇ ಪುನರುತ್ಪತ್ತೌ ಅಭ್ಯುಪಗಮ್ಯಮಾನಾಯಾಂ ಮುಕ್ತಾನಾಮಪಿ ಪುನರುತ್ಪತ್ತಿ ಪ್ರಸಜ್ಗಾತ್ ಅಸಮಞ್ಜಸಮ್। ಅಥ ಇದಂ ಜಗತ್ ಅಪೀತಾವಪಿ ವಿಭಕ್ತಮೇ ಪರೇಣ ಬ್ರಹ್ಮಣಾ ಅವತಿಷ್ಠೇತ ಏವಮಪಿ ಅಪೀತಿಶ್ಚ ನ ಸಂಭವತಿ, ಕಾರಣ ವ್ಯತಿರಿಕ್ತಂ ಚ ಕಾರ್ಯಂ ನ ಸಂಭವತಿ ಇತಿ ಅಸಮಞ್ಜಸಮೇವ ಇತಿ ॥

(ಭಾಷ್ಯಾರ್ಥ)

ಇಲ್ಲಿ (ಆಕ್ಷೇಪಕನು) ಹೇಳುತ್ತಾನೇನೆಂದರೆ, ಸ್ಥೂಲವಾಗಿರುವದು ಸಾವಯವವಾಗಿರುವದು, ಅಚೇತನವಾಗಿರುವದು, ಪರಿಚ್ಛಿನ್ನವಾಗಿರುವದು ಅಶುದ್ಧವಾಗಿರುವದು – ಮುಂತಾದ ಧರ್ಮಗಳುಳ್ಳ ಕಾರ್ಯಕ್ಕೆ ಬ್ರಹ್ಮ ಕಾರಣವೆಂದು ಒಪ್ಪಿದರೆ, ಆಗ ಅಪೀತಿಯಲ್ಲಿ ಎಂದರೆ ಪ್ರಲಯದಲ್ಲಿ ಸಂಬಂ ವಾಗಿ ಕಾರಣದೊಡನೆ ಅವಿಭಾಗವನ್ನು ಪಡೆಯುವ ಕಾರ್ಯವು ಕಾರಣವನ್ನು ತನ್ನ ಧರ್ಮದಿಂದ ಕೆಡಿಸೀತು. ಆದ್ದರಿಂದ ಅಪೀತಿಯಲ್ಲಿ ಕಾರಣವಾ ಬ್ರಹ್ಮವೂ ಕಾರ್ಯದಂತೆ ಅಶುದ್ಧಿಯೇ ಮುಂತಾದ ರೂಪವನ್ನು (ಪಡೆಯ ಬೇಕಾಗುವದರಿಂದ ಸರ್ವಜ್ಞವಾದ ಬ್ರಹ್ಮವು ಜಗತ್ತಿಗೆ ಕಾರಣವು ಎಂಬ ಔಪನಿಷದರ ದರ್ಶನವು ಅಸಮಂಜಸವು.

ಇದಲ್ಲದೆ ಎಲ್ಲಾ ವಿಭಾಗವೂ ಅವಿಭಾಗವನ್ನು ಹೊಂದುವದರಿಂದ ಮತ್ತೆ ಹುಟ್ಟುವದಕ್ಕೆ ನಿಯಮಿಸುವ ಕಾರಣವಿಲ್ಲವಾದ್ದರಿಂದ ಭೋಕ್ತೃ, ಭೋಗ –ಮುಂತಾದ ವಿಭಾಗದಿಂದ (ಕೂಡಿದ) ಉತ್ಪತ್ತಿಯು ಆಗದೆ ಹೋಗಬೇಕಾಗ ವದರಿಂದ (ಈ ದರ್ಶನವು) ಅಸಮಂಜಸವು. ಇದಲ್ಲದೆ ಭೋಕ್ತೃಗಳ ಪರಬ್ರಹ್ಮದಲ್ಲಿ ಅವಿಭಾಗವನ್ನು ಪಡೆಯುವದರಿಂದ, ಕರ್ಮವೇ ಮುಂತಾ ನಿಮಿತ್ತವು ಪ್ರಲಯವಾದರೂ ಮತ್ತೆ ಉತ್ಪತ್ತಿಯಾಗುವದೆಂದು ಒಪ್ಪಿದ ಮುಕ್ತರು ಕೂಡ ಮತ್ತೆ ಹುಟ್ಟಬೇಕಾಗುವದರಿಂದ (ಇದು) ಅಸಮಂಜಸವು

ಹಾಗಲ್ಲದೆ ಈ ಜಗತ್ತು ಅಪೀತಿಯಲ್ಲಿಯೂ ಬ್ರಹ್ಮಕ್ಕಿಂತ ಬೇರೆಯಾಗಿಯೇ ಇರುತ್ತದೆ ಎಂದರೆ, ಹಾಗಾದರೂ ಪ್ರಲಯವೆಂಬುದೇ ಆಗುವಹಾಗಿಲ್ಲ; ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ ಎಂಬುದೂ ಆಗುವಹಾಗಿಲ್ಲ; ಆದ್ದರಿಂದ (ಈ ದರ್ಶನವು) ಅಸಮಂಜಸವೇ.

## ಪರಿಹಾರ: ಕಾರ್ಯಧರ್ಮವು ಕಾರಣಕ್ಕೆ ಅಂಟದಿರುವದಕ್ಕೆ ದೃಷ್ಟಾಂತಗಳಿವೆ

**ನ ತು ದೃಷ್ಟಾನ್ತಭಾವಾತ್ ॥ ೯ ॥**

೯. ಹಾಗಲ್ಲ. ಏಕೆಂದರೆ ದೃಷ್ಟಾಂತಗಳಿವೆ.

(ಭಾಷ್ಯ)

೪೨೨. ಅತ್ರೋಚ್ಯತೇ। ನೈವ ಅಸ್ಮದೀಯೇ ದರ್ಶನೇ ಕಿಂಚಿತ್ ಅಸಾಮಞ್ಜಸ್ಯಮ್ ಅಸ್ತಿ। ಯತ್ ತಾವತ್ ಅಭಿಹಿತಮ್—ಕಾರಣಮ್ ಅಪಿಗಚ್ಛತ್ ಕಾರ್ಯಂ ಕಾರಣಮ್ ಆತ್ಮೀಯೇನ ಧರ್ಮೇಣ ದೂಷಯೇತ್ ಇತಿ, ತತ್ ಅದೂಷಣಮ್। ಕಸ್ಮಾತ್? ದೃಷ್ಟಾನ್ತಭಾವಾದ್। ಸನ್ತಿ ಹಿ ದೃಷ್ಟಾನ್ತಾಃ ಯಥಾ ಕಾರಣಮ್ ಅಪಿಗಚ್ಛತ್ ಕಾರ್ಯಂ ಕಾರಣಮ್ ಆತ್ಮೀಯೇನ ಧರ್ಮೇಣ ನ ದೂಷಯತಿ। ತದ್ ಯಥಾ ಶರಾವಾದಯೋ ಮೃತ್ಪ್ರಕೃತಿಕಾ ವಿಕಾರಾಃ ವಿಭಾಗಾವಸ್ಥಾಯಾಮ್ ಉಚ್ಚಾವಚಮಧ್ಯಮಪ್ರಭೇದಾಃ ಸನ್ತಃ ಪುನಃ ಪ್ರಕೃತಿಮ್ ಅಪಿಗಚ್ಛನ್ತಃ ನ ತಾಮ್ ಆತ್ಮೀಯೇನ ಧರ್ಮೇಣ ಸಂಸೃಜನ್ತಿ। ರುಚಕಾದಯಶ್ಚ ಸುವರ್ಣವಿಕಾರಾಃ ಅಪೀತೌ ನ ಸುವರ್ಣಮ್ ಆತ್ಮೀಯೇನ ಧರ್ಮೇಣ ಸಂಸೃಜನ್ತಿ। ಪೃಥಿವೀವಿಕಾರಃ ಚತುರ್ವಿಧೋ ಭೂತಗ್ರಾಮಃ ನ ಪೃಥಿವೀಮ್ ಅಪೀತೌ ಆತ್ಮೀಯೇನ ಧರ್ಮೇಣ ಸಂಸೃಜತಿ। ತ್ವತ್ಪಕ್ಷಸ್ಯ ತು ನ ಕಶ್ಚಿತ್ ದೃಷ್ಟಾನ್ತೋಽಸ್ತಿ। ಅಪೀತಿರೇವ ಹಿ ನ ಸಂಭವೇತ್ ಯದಿ ಕಾರಣೇ ಕಾರ್ಯಂ ಸ್ವಧರ್ಮೇಣೈವ ಅವತಿಷ್ಠೇತ। ಅನನ್ಯತ್ವೇಽಪಿ ಕಾರ್ಯಕಾರಣಯೋಃ ಕಾರ್ಯಸ್ಯ ಕಾರಣಾತ್ಮತ್ವಮ್, ನ ತು ಕಾರಣಸ್ಯ ಕಾರ್ಯಾತ್ಮತ್ವಮ್ ಆರಮ್ಭಣಶಬ್ದಾದಿಭ್ಯಃ ಇತಿ (೨-೧-೧೪) ವಕ್ಷ್ಯಾಮಃ॥

(ಭಾಷ್ಯಾರ್ಥ)

ಇದಕ್ಕೆ (ಪರಿಹಾರವನ್ನು) ಹೇಳುತ್ತೇವೆ: ನಮ್ಮ ದರ್ಶನದಲ್ಲಿ ಯಾವ ಅಸಾಮಂಜಸ್ಯವೂ ಇರುವದೇ ಇಲ್ಲ. ಮೊದಲನೆಯದಾಗಿ ಕಾರಣದಲ್ಲಿ ಲಯವಾಗುವ ಕಾರ್ಯವು ಕಾರಣವನ್ನು ತನ್ನ ಧರ್ಮದಿಂದ ಕೆಡಿಸೀತು ಎಂದು

(ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದು ದೂಷಣವಲ್ಲ. ಏಕೆ ? ಎಂದರೆ ದೃಷ್ಟಾಂತಗಳಿರುವದರಿಂದ (ಇದರ ವಿವರ) : ಕಾರಣದಲ್ಲಿ ಲಯವಾದ ಕಾರ್ಯವು ಕಾರಣವನ್ನು ತನ್ನ ಧರ್ಮದಿಂದ ಕೆಡಿಸದೆ ಇರುವ ದೃಷ್ಟಾಂತಗಳು ಉಂಟು. ಅದು ಹೇಗೆಂದರೆ, ಮಣ್ಣೆಂಬ ಪ್ರಕೃತಿಯಿಂದಾದ[1] ಶ್ರಾವೆಯೇ ಮುಂತಾದ ಕಾರ್ಯಗಳು ವಿಭಾಗಾವಸ್ಥೆಯಲ್ಲಿ ಮೇಲು, ಕೀಳು, ನಡುತರ –ಎಂಬ ಒಳಭೇದಗಳುಳ್ಳವಾಗಿದ್ದು ಮತ್ತೆ (ಆ) ಪ್ರಕೃತಿಯನ್ನೇ ಸೇರಿಕೊಂಡರೆ ಆ (ಪ್ರಕೃತಿಗೆ) ತಮ್ಮ ಧರ್ಮವನ್ನು ಸೋಂಕಿಸುವದಿಲ್ಲ. ಅಸಲಿಯೇ ಮುಂತಾದ ಚಿನ್ನದ ಕಾರ್ಯಗಳು ಪ್ರಲಯದಲ್ಲಿ ಚಿನ್ನಕ್ಕೆ ತನ್ನ ಧರ್ಮವನ್ನು ಸೋಂಕಿಸುವದಿಲ್ಲ. ಪೃಥಿವಿಯ ಕಾರ್ಯವಾದ ನಾಲ್ಬಗೆಯ ಭೂತಗ್ರಾಮವು ಪ್ರಲಯದಲ್ಲಿ ಪೃಥಿವಿಗೆ ತನ್ನ ಧರ್ಮವನ್ನು ಸೋಕಿಸುವದಿಲ್ಲ. (ಪೂರ್ವಪಕ್ಷಿಯಾದ) ನಿನ್ನ ಪಕ್ಷಕ್ಕಾದರೋ ಯಾವ ದೃಷ್ಟಾಂತವೂ ಇರುವದಿಲ್ಲ.[2] ಏಕೆಂದರೆ ಕಾರ್ಯವು ಕಾರಣದಲ್ಲಿ ತನ್ನ ಧರ್ಮದೊಡನೆಯೂ ಇದ್ದುಕೊಂಡಿದ್ದರೆ ಪ್ರಲಯವೆಂಬುದೇ ಹೊಂದುವದಿಲ್ಲ. **ಕಾರ್ಯಕಾರಣಗಳು ಅನನ್ಯವಾದರೂ[3] ಕಾರ್ಯವು ಕಾರಣರೂಪವಾಗಿರುವದೇ ಹೊರತು ಕಾರಣವು ಕಾರ್ಯರೂಪವಾಗಿರುವದಿಲ್ಲ;** ಏಕೆಂದರೆ (ಈ ವಿಷಯದಲ್ಲಿ) ಆರಂಭಣಶಬ್ದವೇ ಮುಂತಾದವುಗಳಿರುತ್ತವೆ ಎಂದು ಮುಂದೆ (೨–೧–೧೪) ಹೇಳುವೆವು.

## ಮೂರು ಕಾಲದಲ್ಲಿಯೂ ಕಾರ್ಯವು ಕಲ್ಪಿತವೇ

(ಭಾಷ್ಯ)

**೪೨೩. ಅತ್ಯಲ್ಪಂ ಚೇದಮ್ ಉಚ್ಯತೇ ಕಾರ್ಯಮ್ ಅಪೀತೌ ಆತ್ಮೀಯೇನ ಧರ್ಮೇಣ ಕಾರಣಂ ಸಂಸೃಜೇತ್ ಇತಿ । ಸ್ಥಿತಾವಪಿ ಸಮಾನೋಽಯಂ**

---

1. ಉಪಾದಾನಕಾರಣದಿಂದಾದ.

2. ಅನುಮಾನಕ್ಕೆ ದೃಷ್ಟಾಂತವು ಮುಖ್ಯ. ಕಾರ್ಯವಾದ ಜಗತ್ತು ಪ್ರಲಯದಲ್ಲಿ ಕಾರಣವಾದ ಬ್ರಹ್ಮಕ್ಕೆ ತನ್ನ ಧರ್ಮವನ್ನು ಅಂಟಿಸುವದೆಂದಾಗುವದು. ಏಕೆಂದರೆ ಎಲ್ಲಾ ಕಾರ್ಯಗಳೂ ಹಾಗೆ ಅಂಟಿಸುತ್ತವೆ; ಉದಾಹರಣೆಗೆ ಇಂಥ ಕಾರ್ಯವು ಹಾಗೆ ಅಂಟಿಸುವದು ಕಂಡುಬಂದಿದೆ –ಎಂದಲ್ಲವೆ, ಅನುಮಾನವನ್ನು ಹೇಳಬೇಕು? ಆದರೆ ಅಲ್ಲಿ ದೃಷ್ಟಾಂತವೇ ಇಲ್ಲ.

3. ಕಾರ್ಯಕಾರಣಗಳು ಬೇರೆಬೇರೆಯಲ್ಲ ಎಂಬಿದು ಸಾಂಖ್ಯರಿಗೂ ವೇದಾಂತಿಗಳಿಗೂ ಒಪ್ಪಾಗಿದೆ. ಆದ್ದರಿಂದ ಪ್ರಲಯದಲ್ಲಿಯೂ ಕಾರ್ಯವಿರಬೇಕಲ್ಲವೆ? ಎಂಬ ಶಂಕೆಗೆ ಸಮಾಧಾನವಿದು. ಆಗ ಕಾರಣರೂಪದಿಂದಲೇ ಕಾರ್ಯವಿರುತ್ತದೆ; ಕಾರ್ಯರೂಪದಿಂದ ಇರುವದಿಲ್ಲ, ಕಾರ್ಯದ ಧರ್ಮಗಳೂ ಇರುವದಿಲ್ಲ –ಎಂದು ಭಾವ.

ಪ್ರಸಙ್ಗಃ | ಕಾರ್ಯಕಾರಣಯೋಃ ಅನನ್ಯತ್ವಾಭ್ಯುಪಗಮಾತ್ । "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬), "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ಬ್ರಹ್ಮೈವೇದಮಮೃತಂ ಪುರಸ್ತಾತ್" (ಮುಂ. ೨-೨-೧೧), "ಸರ್ವಂ ಖಲ್ವಿದಂ ಬ್ರಹ್ಮ" (ಛಾಂ. ೩-೧೪-೧) ಇತ್ಯೇವಮಾದ್ಯಾಭಿರ್ಹಿ ಶ್ರುತಿಭಿಃ ಅವಿಶೇಷೇಣ ತ್ರಿಷ್ವಪಿ ಕಾಲೇಷು ಕಾರ್ಯಸ್ಯ ಕಾರಣಾನನ್ಯತ್ವಂ ಶ್ರಾವ್ಯತೇ | ತತ್ರ ಯಃ ಪರಿಹಾರಃ ಕಾರ್ಯಸ್ಯ ತದ್ಧರ್ಮಾಣಾಂ ಚ ಅವಿದ್ಯಾಧ್ಯಾರೋಪಿತತ್ವಾತ್ ನ ತೈಃ ಕಾರಣಂ ಸಂಸೃಜ್ಯತೇ ಇತಿ, ಅಪೀತಾವಪಿ ಸ ಸಮಾನಃ ||

(ಭಾಷ್ಯಾರ್ಥ)

ಇದಲ್ಲದೆ ಕಾರ್ಯವು ಅಪೀತಿಯಲ್ಲಿ ತನ್ನ ಧರ್ಮವನ್ನು ಕಾರಣಕ್ಕೆ ಸೋಂಕಿಸುವದೆಂದಾಗುವದು ಎಂದು ಹೇಳಿದಿರಲ್ಲ, ಇದು ಅತ್ಯಲ್ಪವು. (ಹೇಗೆಂದರೆ) ಸ್ಥಿತಿಯಲ್ಲಿಯೂ ಈ ಪ್ರಸಕ್ತಿಯು ಸಮಾನವಾಗಿರುತ್ತದೆ; ಏಕೆಂದರೆ ಕಾರ್ಯಕಾರಣಗಳಿಗೆ ಅನನ್ಯತ್ವವನ್ನು (ನಾವು) ಒಪ್ಪಿರುತ್ತೇವೆ. "ಇವೆಲ್ಲ ಈ ಆತ್ಮನೆಂಬವನೇ" (ಬೃ. ೨-೪-೬), "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) "ಈ ಮುಂದುಗಡೆ(ಯಲ್ಲಿರುವದು) ಅಮೃತವಾದ ಬ್ರಹ್ಮವೇ" (ಮುಂ. ೨-೨-೧೧) "ಇದೆಲ್ಲವೂ ಬ್ರಹ್ಮವೇ ಅಲ್ಲವೆ ?" (ಛಾಂ. ೩-೧೪-೧) ಇವೇ ಮುಂತಾದ ಶ್ರುತಿಗಳಿಂದ ಮೂರು ಕಾಲಗಳಲ್ಲಿಯೂ ಸಮಾನವಾಗಿಯೇ ಕಾರ್ಯವು ಕಾರಣಕ್ಕಿಂತ ಅನನ್ಯವೆಂದು ಹೇಳಿರುತ್ತದೆಯಷ್ಟೆ. ಅಲ್ಲಿ **ಕಾರ್ಯವೂ ಅದರ ಧರ್ಮಗಳೂ ಅವಿದ್ಯಾಧ್ಯಾರೋಪಿತವಾಗಿರುವದರಿಂದ ಅವುಗಳು ಕಾರಣವನ್ನು ಸೋಂಕಲಾರವು** ಎಂಬ ಯಾವ ಪರಿಹಾರವನ್ನು (ಹೇಳಬೇಕೋ) ಅದು ಅಪೀತಿಯ (ವಿಷಯ)ದಲ್ಲಿಯೂ ಸಮಾನವಾಗಿರುತ್ತದೆ.

## ಆತ್ಮನಿಗೆ ಸಂಸಾರದ ಸೋಂಕಿಲ್ಲವೆಂಬುದಕ್ಕೆ ಮಾಯೆಯ ದೃಷ್ಟಾಂತ

(ಭಾಷ್ಯ)

೪೨೪. ಅಸ್ತಿ ಚ ಅಯಮ್ ಅಪರೋ ದೃಷ್ಟಾನ್ತಃ— ಯಥಾ ಸ್ವಯಂ ಪ್ರಸಾರಿತಯಾ ಮಾಯಯಾ ಮಾಯಾವೀ ತ್ರಿಷ್ವಪಿ ಕಾಲೇಷು ನ ಸಂಸ್ಪೃಶ್ಯತೇ ಅವಸ್ತುತ್ವಾತ್, ಏವಂ ಪರಮಾತ್ಮಾಪಿ ಸಂಸಾರಮಾಯಯಾ ನ ಸಂಸ್ಪೃಶ್ಯತೇ ಇತಿ| ಯಥಾ ಚ ಸ್ವಪ್ನದೃಗೇಕಃ ಸ್ವಪ್ನದರ್ಶನಮಾಯಯಾ ನ ಸಂಸ್ಪೃಶ್ಯತೇ[1]

1. ಇಲ್ಲಿ ಅಚ್ಚಿನ ಪುಸ್ತಕದಲ್ಲಿ ಒಂದು 'ಇತಿ' ಹೆಚ್ಚಾಗಿದೆ.

ಪ್ರಬೋಧಸಂಪ್ರಸಾದಯೋಃ ಅನನ್ವಾಗತತ್ವಾತ್ ಏವಮ್ ಅವಸ್ಥಾತ್ರಯಸಾಕ್ಷೀ ಏಕೋಽವ್ಯಭಿಚಾರೀ ಅವಸ್ಥಾತ್ರಯೇಣ ವ್ಯಭಿಚಾರಿಣಾ ನ ಸಂಸ್ಪೃಶ್ಯತೇ । ಮಾಯಾಮಾತ್ರಂ ಹ್ಯೇತತ್ ಯತ್ ಪರಮಾತ್ಮನೋಽವಸ್ಥಾತ್ರಯಾತ್ಮನಾ ಅವಭಾಸನಂ ರಜ್ಜ್ವಾ ಇವ ಸರ್ಪಾದಿಭಾವೇನ ಇತಿ । ಅತ್ರೋಕ್ತಂ ವೇದಾನ್ತಾರ್ಥಸಂಪ್ರದಾಯವಿದ್ಭಿರಾಚಾರ್ಯೈಃ – “ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ । ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ” (ಮಾಂ. ಕಾ. ೧-೧೬) ಇತಿ । ತತ್ರ ಯದುಕ್ತಮ್ ಅಪೀತೌ ಕಾರಣಸ್ಯಾಪಿ ಕಾರ್ಯಸ್ಯೇವ ಸ್ಥೌಲ್ಯಾದಿದೋಷಪ್ರಸಙ್ಗಃ ಇತಿ । ಏತತ್ ಅಯುಕ್ತಮ್ ॥

(ಭಾಷ್ಯಾರ್ಥ)

ಈ ಇನ್ನೊಂದು ದೃಷ್ಟಾಂತವೂ ಇದೆ: ಮಾಯಾವಿಯಾದವನು ತಾನೇ ಹರಡಿರುವ ಮಾಯೆಯು ವಸ್ತುವಲ್ಲದೆ ಇರುವದರಿಂದ ಹೇಗೆ ಮೂರು ಕಾಲದಲ್ಲಿಯೂ (ಅದರ) ಸ್ಪರ್ಶವಿಲ್ಲದೆ ಇರುವನೋ, ಇದರಂತೆ ಪರಮಾತ್ಮನೂ ಸಂಸಾರಮಾಯೆಯ ಸ್ಪರ್ಶವಿಲ್ಲದೆ ಇರುವನು. ಮತ್ತು ಹೇಗೆ ಸ್ವಪ್ನವನ್ನು ಕಾಣುವವನು ತಾನು ಒಬ್ಬನೇ ಆಗಿದ್ದು, ಎಚ್ಚರನಿದ್ರೆಗಳಲ್ಲಿ (ಕನಸಿನ ದರ್ಶನವು) ಹಿಂಬಾಲಿಸದೆ ಇರುವದರಿಂದ, ಸ್ವಪ್ನದರ್ಶನವೆಂಬ ಮಾಯೆಯ ಸ್ಪರ್ಶವಿಲ್ಲದೆ ಇರುವನೋ,[1] ಹೀಗೆಯೇ ಅವಸ್ಥಾತ್ರಯಸಾಕ್ಷಿಯಾದವನು ತಾನು ಒಬ್ಬನೇ ಅವ್ಯಭಿಚಾರಿಯಾಗಿರುವದರಿಂದ ವ್ಯಭಿಚಾರಿಯಾದ ಅವಸ್ಥಾತ್ರಯದ ಸ್ಪರ್ಶವಿಲ್ಲದೆ ಇರುತ್ತಾನೆ.[2] ಏಕೆಂದರೆ ಪರಮಾತ್ಮನು ಅವಸ್ಥಾತ್ರಯರೂಪದಿಂದ ತೋರುತ್ತಿರುವನೆಂಬುದು ಹಗ್ಗವು ಹಾವಾಗಿ ತೋರುವಂತೆ ಮಾಯಾಮಾತ್ರವಾಗಿರುತ್ತದೆ.[3] **ಈ ವಿಷಯದಲ್ಲಿ ವೇದಾಂತಾರ್ಥಸಂಪ್ರದಾಯವನ್ನು ಬಲ್ಲ ಆಚಾರ್ಯರು**[4] ಹೇಳಿರುವದೇನೆಂದರೆ “ಅನಾದಿ ಮಾಯೆಯಿಂದ ನಿದ್ರಿಸುತ್ತಿರುವ ಜೀವನು ಯಾವಾಗ ಎಚ್ಚರುವನೋ[5]

---

1. ಕನಸುಕಾಣುವವನು ಎಚ್ಚತ್ತರೆ ಅಥವಾ ನಿದ್ರಿಸಿದರೆ ಕನಸು ಅವನಿಗೆ ಅಂಟಿಕೊಂಡು ಬಂದಿರುವದಿಲ್ಲವಾದ್ದರಿಂದ ಕನಸು ನಿಜವಾಗಿ ಅವನಿಗೆ ಸೇರಿದ್ದಲ್ಲ. ಇದು ಅವಸ್ಥೆಗಳನ್ನು ಅನುಭವಿಸುವ ಜೀವನ ವಿಷಯವಾದದ್ದರಿಂದ ದೃಷ್ಟಾಂತವು.

2. ಇದು ಚಿನ್ಮಾತ್ರನಾಗಿ ಅವಸ್ಥಾತ್ರಯವನ್ನು ಬೆಳಗುವ ಸಾಕ್ಷಿಯ ವಿಷಯವಾಗಿರುವದರಿಂದ ದಾರ್ಷ್ಟಾಂತಿಕವು. ಇಲ್ಲಿ ಅವಸ್ಥಾತ್ರಯವೆಂದರೆ ಸೃಷ್ಟಿಸ್ಥಿತಿಲಯಗಳನ್ನು ತೆಗೆದುಕೊಳ್ಳಬೇಕು. ಏಕೆಂದರೆ ಪ್ರಲಯವೇ ಪ್ರಕೃತವಿವಾದಕ್ಕೆ ವಿಷಯವಾಗಿದೆ.

3. ಬರಿಯ ಹುಸಿತೋರಿಕೆಯಾಗಿದೆ; ನಿಜವಾಗಿ ಸೃಷ್ಟ್ಯಾದಿಗಳಿಲ್ಲ.

4. ಗೌಡಪಾದರವರು. ಆಗಮಪ್ರಕರಣವು ಗೌಡಪಾದರದಲ್ಲವೆನ್ನುವವರ ವಾದದ ಜೊಳ್ಳುತನವು ಈ ವಿಶೇಷಣದಿಂದ ಸ್ಫುಟವಾಗಿರುತ್ತದೆ. ಪೀಠಿಕೆಯನ್ನು ನೋಡಿ.

5. ಅರಿತುಕೊಳ್ಳುವನೋ ಎಂದರ್ಥ. ಅಜ್ಞಾನವೇ ನಿದ್ರೆ, ಜ್ಞಾನವೇ ಎಚ್ಚರ.

ಆಗ ಅಜವೂ ಅನಿದ್ರವೂ ಅಸ್ವಪ್ನವೂ ಆಗಿರುವ ಅದ್ವೈತವನ್ನು ಅರಿತುಕೊಳ್ಳು ವನು."[1] (ಮಾಂ. ಕಾ. ೮-೧೬) ಹೀಗಿರುವಲ್ಲಿ ಅಪೀತಿಯಲ್ಲಿ ಕಾರಣಕ್ಕೂ ಕಾರ್ಯಕ್ಕೂ ಇರುವಂಥ ಸ್ಥೂಲತ್ವವೇ ಮುಂತಾದ ದೋಷಗಳು ಬಂದೊದಗು ವವು ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಲ್ಲ, ಅದು ಅಯುಕ್ತ(ವೆಂದು ನಿಶ್ಚಯವಾಗುತ್ತದೆ).[2]

## ಪ್ರಲಯವಿಷಯಕವಾದ ಉಳಿದ ಆಕ್ಷೇಪಗಳ ಪರಿಹಾರ

( ಭಾಷ್ಯ )

೪೨೫. ಯತ್ಪುನಃ ಏತದುಕ್ತಮ್— ಸಮಸ್ತಸ್ಯ ವಿಭಾಗಸ್ಯ ಅವಿಭಾಗಪ್ರಾಪ್ತೇಃ ಪುನರ್ವಿಭಾಗೇನ ಉತ್ಪತ್ತೌ ನಿಯಮಕಾರಣಂ ನೋಪ ಪದ್ಯತೇ ಇತಿ । ಅಯಮಪಿ ಅದೋಷಃ | ದೃಷ್ಟಾನ್ತಭಾವಾದೇವ । ಯಥಾ ಹಿ ಸುಷುಪ್ತಿಸಮಾಧ್ಯಾದಾವಪಿ ಸತ್ಯಾಂ ಸ್ವಾಭಾವಿಕ್ಯಾಮ್ ಅವಿಭಾಗಪ್ರಾಪ್ತೌ ಮಿಥ್ಯಾಜ್ಞಾನಸ್ಯ ಅನಪೋದಿತತ್ವಾತ್ ಪೂರ್ವವತ್ ಪುನಃ ಪ್ರಬೋಧೇ ವಿಭಾಗೋ ಭವತಿ ಏವಮ್ ಇಹಾಪಿ ಭವಿಷ್ಯತಿ । ಶ್ರುತಿಶ್ಚಾತ್ರ ಭವತಿ— "ಇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಙ್ಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವನ್ತಿ ತದಾ ಭವನ್ತಿ" (ಛಾಂ. ೬-೯-೨, ೩) ಇತಿ । ಯಥಾ ಹಿ ಅವಿಭಾಗೇಽಪಿ ಪರಮಾತ್ಮನಿ ಮಿಥ್ಯಾಜ್ಞಾನಪ್ರತಿಬದ್ಧೋ ವಿಭಾಗವ್ಯವಹಾರಃ ಸ್ವಪ್ನವತ್ ಅವ್ಯಾಹತಃ ಸ್ಥಿತೌ[3] ದೃಶ್ಯತೇ, ಏವಮ್ ಅಪೀತಾವಪಿ ಮಿಥ್ಯಾಜ್ಞಾನಪ್ರತಿ ಬದ್ಧೈವ ವಿಭಾಗಶಕ್ತಿಃ ಅನುಮಾಸ್ಯತೇ | ಏತೇನ ಮುಕ್ತಾನಾಂ ಪುನರುತ್ಪತ್ತಿ ಪ್ರಸಙ್ಗಃ ಪ್ರತ್ಯುಕ್ತಃ । ಸಮ್ಯಗ್ಜ್ಞಾನೇನ ಮಿಥ್ಯಾಜ್ಞಾನಸ್ಯ ಅಪೋದಿತತ್ವಾತ್ | ಯಃ ಪುನರಯಮ್ ಅನ್ತೇ ಅಪರೋ ವಿಕಲ್ಪಃ ಉತ್ಪ್ರೇಕ್ಷಿತಃ, ಅಥ ಇದಂ ಜಗತ್ ಅಪೀತಾವಪಿ ವಿಭಕ್ತಮೇವ ಪರೇಣ ಬ್ರಹ್ಮಣಾ ಅವತಿಷ್ಠೇತ ಇತಿ, ಸೋಽಪಿ ಅನಭ್ಯುಪಗಮಾದೇವ ಪ್ರತಿಷಿದ್ಧಃ । ತಸ್ಮಾತ್ ಸಮಞ್ಜಸಮ್ ಇದಮೌಪನಿಷದಂ ದರ್ಶನಮ್ ||

---

1. ಸೃಷ್ಟ್ಯಾದಿರಹಿತನಾದ ಪರಮಾತ್ಮನನ್ನು ಅರಿತುಕೊಳ್ಳುವನು ಎಂದು ಅಭಿಪ್ರಾಯ. ಇಲ್ಲಿ ಸುಷುಪ್ತ್ಯಾದಿಗಳನ್ನೂ ಪ್ರಲಯಗಳನ್ನೂ ಏಕೀಕರಣಮಾಡಿ ಅರ್ಥಮಾಡಿಕೊಳ್ಳಬೇಕು.

2. ಸೃಷ್ಟಿಸ್ಥಿತಿಪ್ರಲಯಗಳೇ ಮಿಥ್ಯೆಯಾಗಿರುವಾಗ ಸ್ಥಿತಿಕಾಲದ ದೋಷಗಳು ಪ್ರಲಯದಲ್ಲಿ ಪರಮಾತ್ಮನಿಗೆ ಅಂಟುವವು ಎಂಬ ಶಂಕೆಗೆ ಅವಕಾಶವೆಲ್ಲಿ ?

3. 'ಸ್ಥಿತೋ' ಎಂಬ ಅಚ್ಚಿನ ಪಾಠವನ್ನು ಹೀಗೆ ಸಂದರ್ಭಕ್ಕನುಗುಣವಾಗಿ ತಿದ್ದಿಕೊಂಡಿದೆ.

( ಭಾಷ್ಯಾರ್ಥ )

ಇನ್ನು (ಪ್ರಲಯದಲ್ಲಿ) ಎಲ್ಲಾ ವಿಭಾಗವೂ ಅವಿಭಾಗವಾಗಿಬಿಡುವ ದರಿಂದ ಮತ್ತೆ ವಿಭಕ್ತವಾಗಿ ಹುಟ್ಟುವದಕ್ಕೆ ನಿಯಮಕಾರಣವಿರಲಾರದು ಎಂದು (ಆಕ್ಷೇಪವನ್ನು) ಹೇಳಿತ್ತಷ್ಟೆ, ಅದೂ ದೋಷವಲ್ಲ. ಏಕೆಂದರೆ (ಅದಕ್ಕೂ) ದೃಷ್ಟಾಂತವಿದ್ದೇ ಇದೆ. **ಹೇಗೆ ಸುಷುಪ್ತಿ, ಸಮಾಧಿ- ಮುಂತಾದ (ಅವಸ್ಥೆ)ಗಳಲ್ಲಿಯೂ ಸ್ವಾಭಾವಿಕವಾಗಿ ಅವಿಭಾಗವೇ ಬಂದೊದಗಿದರೂ ಮಿಥ್ಯಾಜ್ಞಾನವು (ಇನ್ನೂ) ಹೋಗದೆ ಇರುವದರಿಂದ ಮುನ್ನಿನಂತೆಯೇ ಮತ್ತೆ ಎಚ್ಚರದಲ್ಲಿ ವಿಭಾಗವಾಗುತ್ತದೆಯೋ ಹಾಗೆಯೇ ಇಲ್ಲಿಯೂ ಆಗಬಹುದಾಗಿದೆ.**[1] ಈ (ವಿಷಯಕ್ಕೆ) "ಈ ಪ್ರಜೆಗಳೆಲ್ಲರೂ ಸತ್ತಿನಲ್ಲಿ ಸೇರಿಕೊಂಡಿದ್ದರೂ ಸತ್ತಿನಲ್ಲಿ ಸೇರಿಕೊಂಡಿರುತ್ತೇವೆಂಬುದನ್ನು ಅರಿಯದೆ ಇರುವರು" (ಛಾಂ. ೬-೯-೨); "ಅವರು ಇಲ್ಲಿ ಹುಲಿಯಾಗಲಿ ಸಿಂಹವಾಗಲಿ ತೋಳನಾಗಲಿ ಕಾಡುಹಂದಿಯಾಗಲಿ ಹುಳುವಾಗಲಿ ಪತಂಗವಾಗಲಿ ಕಣಜವಾಗಲಿ ಸೊಳ್ಳೆಯಾಗಲಿ ಯಾವಯಾವದಾಗಿರುವವೋ ಅದೇ ಆಗುವವು" (ಛಾಂ. ೬-೯-೩) ಎಂದು ಶ್ರುತಿಯೂ ಇರುವದು. ಯಾವ ವಿಭಾಗವೂ ಇಲ್ಲದ ಪರಮಾತ್ಮನಲ್ಲಿ ಹೇಗೆ ಮಿಥ್ಯಾಜ್ಞಾನನಿಮಿತ್ತವಾದ ವಿಭಾಗವ್ಯವಹಾರವು ಕನಸಿನಲ್ಲಿರುವಂತೆ ಯಾವ ಅಡ್ಡಿಯೂ ಇಲ್ಲದೆ ಸ್ಥಿತಿಕಾಲದಲ್ಲಿ[2] ಕಾಣಬರುತ್ತಿರುವದೋ ಹೀಗೆಯೇ ಅಪೀತಿಯಲ್ಲಿಯೂ ಮಿಥ್ಯಾಜ್ಞಾನನಿಮಿತ್ತವಾಗಿಯೇ ಇರುವ ವಿಭಾಗಶಕ್ತಿಯನ್ನು ಅನುಮಾನದಿಂದ ಕಲ್ಪಿಸಬಹುದಾಗಿದೆ.[3]

1. ಸುಷುಪ್ತಿ, ಸಮಾಧಿ, ಮದ, ಮೂರ್ಛೆ- ಮುಂತಾದ ಅವಸ್ಥೆಗಳಲ್ಲಿ ಆತ್ಮನೊಬ್ಬನೇ ಉಳಿದುಕೊಂಡಿರುತ್ತಾನೆ, ಎಚ್ಚರವಾಗುತ್ತಲೂ ವಿಭಾಗವು ಕಾಣುತ್ತದೆ ಎಂಬುದು ದೃಷ್ಟಾಂತ; ಪ್ರಲಯದಲ್ಲಿ ಆತ್ಮನೊಬ್ಬನೇ ಇರುತ್ತಾನೆ, ಸ್ಥಿತಿಕಾಲದಲ್ಲಿ ವಿಭಾಗವು ಕಾಣುತ್ತದೆ- ಎಂಬುದು ದಾರ್ಷ್ಟಾಂತಿಕ.

2. ಪರಮಾತ್ಮನಲ್ಲಿ ನಿಜವಾಗಿ ಯಾವ ವಿಭಾಗವೂ ಇಲ್ಲ. ಆದರೂ ಸ್ಥಿತಿಕಾಲದಲ್ಲಿ ಮಿಥ್ಯಾಜ್ಞಾನದಿಂದ ವಿಭಾಗವು ಅಬಾಧಿತವಾಗಿ ತೋರುತ್ತಿರುತ್ತದೆ. ಕನಸಿನಲ್ಲಿ ತೋರುವಂತೆಯೇ ಈ ವಿಭಾಗವು ಕಲ್ಪಿತವಾಗಿರುತ್ತದೆ.

3. ಮಿಥ್ಯಾಜ್ಞಾನದಿಂದ ಸ್ಥಿತಿಯಲ್ಲಿ ತೋರುವ ವಿಭಾಗರೂಪವಾದ ಕಾರ್ಯಕ್ಕೆ ಮಿಥ್ಯಾಜ್ಞಾನದಿಂದಾಗಿರುವ ಕಾರಣವಾದ ವಿಭಾಗಶಕ್ತಿಯು ಪ್ರಲಯಕಾಲದಲ್ಲಿರುವದೆಂದು ಅನುಮಾನದಿಂದ ಕಲ್ಪಿಸಬಹುದಾಗಿದೆ. ಈ ವಿಭಾಗವೂ ವಿಭಾಗಶಕ್ತಿಯೂ ಮಿಥ್ಯಾಜ್ಞಾನದಿಂದಾಗಿರುವದರಿಂದ ಅದ್ವೈತಕ್ಕೆ ಹಾನಿಯಿಲ್ಲ. ಪ್ರಲಯದಲ್ಲಿ ವಿಭಾಗಶಕ್ತಿಯಿರುವದರಿಂದ ಸ್ಥಿತಿಕಾಲದಲ್ಲಿ ಮತ್ತೆ ವಿಭಾಗವು ತೋರಿಕೊಳ್ಳಬಹುದಾಗಿದೆ. ಆದ್ದರಿಂದ ನಿಯಮಕಾರಣವಿಲ್ಲ ಎಂಬುದು ಸುಳ್ಳು ಎಂದು ಅಭಿಪ್ರಾಯ. ಈ ಗ್ರಂಥಭಾಗದಲ್ಲಿರುವ ಮಿಥ್ಯಾಜ್ಞಾನ ಎಂಬ ಶಬ್ದವನ್ನು ತಿರಿಚಿ ಅನಿರ್ವಚನೀಯವಾದ ಮೂಲಾವಿದ್ಯೆ ಎಂಬ ಅರ್ಥವನ್ನು ತೆಗೆಯುವದಕ್ಕೆ ಕೆಲವರು ಮಾಡಿರುವ ಪ್ರಯತ್ನವು ಪ್ರಕರಣಕ್ಕೆ ಹೊಂದುವದಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ.

ಇದರಿಂದ ಮುಕ್ತರೂ ಮತ್ತೆ ಹುಟ್ಟುವ ಪ್ರಸಕ್ತಿಯಿದೆ (ಎಂಬುದನ್ನೂ) ತಿರಸ್ಕರಿಸಿದಂತೆ ಆಯಿತು ಏಕೆಂದರೆ (ಅವರಿಗೆ) ಸಮ್ಯಗ್ಜ್ಞಾನದಿಂದ ಮಿಥ್ಯಾಜ್ಞಾನವು ಹೋಗಿಬಿಟ್ಟಿರುತ್ತದೆ. ಇನ್ನು ಕೊನೆಯಲ್ಲಿ "ಹಾಗಿಲ್ಲದೆ ಈ ಜಗತ್ತು ಅಪೀತಿಯಲ್ಲಿಯೂ ಪರಬ್ರಹ್ಮಕ್ಕಿಂತ ವಿಭಕ್ತವಾಗಿಯೇ ಇದ್ದುಕೊಂಡಿರುವದಾದರೆ" ಎಂದು ಮತ್ತೊಂದು ವಿಕಲ್ಪವನ್ನು ಉತ್ಪ್ರೇಕ್ಷಿಸಿದ್ದಿರಲ್ಲ, ಅದನ್ನಂತೂ ನಾವು ಒಪ್ಪುವದಿಲ್ಲವೆಂಬುದರಿಂದಲೇ ಅಲ್ಲಗಳೆದಂತೆ ಆಯಿತು. ಆದ್ದರಿಂದ ಈ ಔಪನಿಷದದರ್ಶನವು ಸಮಂಜಸ(ವಾಗಿದೆ).

## ಸ್ವಪಕ್ಷದೋಷಾಚ್ಚ ॥ ೧೦ ॥

೧೦. ತನ್ನ ಪಕ್ಷದಲ್ಲಿಯೂ ದೋಷವಿರುವದರಿಂದಲೂ (ಈ ಆಕ್ಷೇಪವು ಸರಿಯಲ್ಲ).

## ಸಾಂಖ್ಯಪಕ್ಷದಲ್ಲಿ ಈ ದೋಷಗಳಿವೆ

(ಭಾಷ್ಯ)

೪೨೬. ಸ್ವಪಕ್ಷೇ ಚ ಏತೇ ಪ್ರತಿವಾದಿನಃ ಸಾಧಾರಣಾ ದೋಷಾಃ ಪ್ರಾದುಃ ಷ್ಯುಃ । ಕಥಮಿತಿ ? ಉಚ್ಯತೇ । ಯತ್ ತಾವದಭಿಹಿತಮ್ —ವಿಲಕ್ಷಣತ್ವಾತ್ ನೇದಂ ಜಗತ್ ಬ್ರಹ್ಮಪ್ರಕೃತಿಕಮ್ ಇತಿ । ಪ್ರಧಾನ ಪ್ರಕೃತಿಕತಾಯಾಮಪಿ ಸಮಾನಮ್ ಏತತ್ । ಶಬ್ದಾದಿಹೀನಾತ್ ಪ್ರಧಾನಾತ್ ಶಬ್ದಾದಿಮತೋ ಜಗತಃ ಉತ್ಪತ್ತ್ಯಭ್ಯುಪಗಮಾತ್ । ಅತ ಏವ ಚ ವಿಲಕ್ಷಣಕಾರ್ಯೋತ್ಪತ್ತ್ಯಭ್ಯುಗಮಾತ್ ಸಮಾನಃ ಪ್ರಾಗುತ್ಪತ್ತೇಃ ಅಸತ್ಕಾರ್ಯವಾದ ಪ್ರಸಙ್ಗಃ । ತಥಾ ಅಪೀತೌ ಕಾರ್ಯಸ್ಯ ಕಾರಣಾವಿಭಾಗಾಭ್ಯುಪಗಮಾತ್ ತದ್ವತ್ಪ್ರಸಙ್ಗೋಽಪಿ ಸಮಾನಃ । ತಥಾ ಮೃದಿತಸರ್ವವಿಶೇಷೇಷು ವಿಕಾರೇಷು ಅಪೀತೌ ಅವಿಭಾಗಾತ್ಮತಾಂ ಗತೇಷು ಇದಮ್ ಅಸ್ಯ ಪುರುಷಸ್ಯ ಉಪಾದಾನಮ್ ಇದಮ್ ಅಸ್ಯ ಇತಿ ಪ್ರಾಕ್‌ಪ್ರಲಯಾತ್ ಪ್ರತಿಪುರುಷಂ ಯೇ ನಿಯತಾ ಭೇದಾಃ ನ ತೇ ತಥೈವ ಪುನರುತ್ಪತ್ತೌ ನಿಯನ್ತುಂ ಶಕ್ಯನ್ತೇ । ಕಾರಣಾಭಾವಾತ್ । ವಿನೈವ ಕಾರಣೇನ ನಿಯಮೇ ಅಭ್ಯುಪಗಮ್ಯಮಾನೇ ಕಾರಣಾಭಾವಸಾಮ್ಯಾತ್ ಮುಕ್ತಾನಾಮಪಿ ಪುನರ್ಬನ್ಧಪ್ರಸಙ್ಗಃ । ಅಥ ಕೇಚಿತ್ ಭೇದಾಃ ಅಪೀತೌ ಅವಿಭಾಗಮ್ ಆಪದ್ಯನ್ತೇ ಕೇಚಿನ್ನ ಇತಿ ಚೇತ್ । ಯೇ ನಾಪದ್ಯನ್ತೇ ತೇಷಾಂ ಪ್ರಧಾನಕಾರ್ಯತ್ವಂ ನ ಪ್ರಾಪ್ನೋತಿ ಇತ್ಯೇವಮ್ ಏತೇ ದೋಷಾಃ ಸಾಧಾರಣತ್ವಾತ್ ನಾನ್ಯತರಸ್ಮಿನ್ ಪಕ್ಷೇ ಚೋದಯಿತವ್ಯಾ

ಭವನ್ತಿ ಇತಿ ಅದೋಷತಾಮೇವ ಏಷಾಂ ದ್ರಢಯತಿ। ಅವಶ್ಯಾಶ್ರಯಿತವ್ಯತ್ವಾತ್ ॥

(ಭಾಷ್ಯಾರ್ಥ)

ಪ್ರತಿವಾದಿಗೆ ತನ್ನ ಪಕ್ಷದಲ್ಲಿಯೂ ಈ ದೋಷಗಳು ಸಮಾನವಾಗಿಯೇ ತೋರಿಕೊಳ್ಳುವವು. ಹೇಗೆಂದರೆ ತಿಳಿಸುವೆವು. ಮೊದಲನೆಯದಾಗಿ ವಿಲಕ್ಷಣವಾಗಿರುವದರಿಂದ ಜಗತ್ತು ಬ್ರಹ್ಮಪ್ರಕೃತಿಕವಲ್ಲ ಎಂದು (ಪೂರ್ವಪಕ್ಷಿ) ಹೇಳಿದನಷ್ಟೆ. ಇದು (ಜಗತ್ತು) ಪ್ರಧಾನಪ್ರಕೃತಿಕವೆಂಬ (ಪಕ್ಷ)ದಲ್ಲಿಯೂ ಸಮಾನವಾಗಿರುತ್ತದೆ. ಏಕೆಂದರೆ ಶಬ್ದಾದಿಗಳಿಲ್ಲದ ಪ್ರಧಾನದಿಂದ ಶಬ್ದಾದಿಗಳುಳ್ಳ ಜಗತ್ತು ಉಂಟಾಗುತ್ತದೆ ಎಂದು (ಸಾಂಖ್ಯನು) ಒಪ್ಪಿರುತ್ತಾನೆ ಆದ್ದರಿಂದಲೇ, ಎಂದರೆ (ಕಾರಣ)ವಿಲಕ್ಷಣವಾದ ಕಾರ್ಯವು ಹುಟ್ಟುವದೆಂದು ಒಪ್ಪಿರುವದರಿಂದಲೇ, ಹುಟ್ಟುವ ಮುಂಚೆ ಕಾರ್ಯವು ಅಸತ್ತಾಗಿರುವದೆಂಬ ಪ್ರಸಕ್ತಿಯೂ ಸಮಾನವಾಗಿರುತ್ತದೆ. ಇದರಂತೆ ಅಪೀತಿಯಲ್ಲಿ ಕಾರ್ಯವು ಕಾರಣಕ್ಕಿಂತ ವಿಭಕ್ತವಾಗಿರುವದಿಲ್ಲವಾದ್ದರಿಂದ ಆ (ಕಾರ್ಯ)ದಂತೆ (ಕಾರಣವೂ ಆಗುವ)ದೆಂಬ ಪ್ರಸಕ್ತಿಯೂ ಸಮಾನವು

ಹೀಗೆಯೇ ಅಪೀತಿಯಲ್ಲಿ ಎಲ್ಲಾ ವಿಶೇಷಗಳೂ ನಾಶವಾಗಲು ವಿಕಾರಗಳು ಅವಿಭಾಗಾವಸ್ಥೆಯನ್ನು ಹೊಂದಲಾಗಿ ಇದು ಈ ಪುರುಷನಿಗೆ ಉಪಾದಾನವು[1] ಇದು ಇವನಿಗೆ (ಉಪಾದಾನವು) ಎಂದು ಪ್ರಲಯವಾಗುವ ಮುಂಚೆ ಒಬ್ಬೊಬ್ಬನಿಗೆ ಯಾವ ಭೇದಗಳು ಗೊತ್ತಾಗಿದ್ದವೋ ಅವು ಮತ್ತೆ ಉತ್ಪತ್ತಿಯಲ್ಲಿ ಹಾಗೆಯೇ (ಇರಬೇಕೆಂದು) ಗೊತ್ತುಮಾಡುವದಕ್ಕೆ ಆಗಲಾರದು. ಏಕೆಂದರೆ (ಹಾಗೆ ಗೊತ್ತುಮಾಡುವ) ಕಾರಣವಿರದಿಲ್ಲ. ಯಾವ ಕಾರಣವೂ ಇಲ್ಲದೆ ನಿಯಮವನ್ನು ಒಪ್ಪಿದರೆ ಕಾರಣವಿಲ್ಲವೆಂಬುದು ಸಮಾನವಾಗುವದರಿಂದ ಮುಕ್ತರಿಗೂ ಮತ್ತೆ ಬಂಧವಾಗಬಹುದಾಗುವದು. ಹಾಗಿಲ್ಲದೆ ಕೆಲವು ಭೇದಗಳು ಅಪೀತಿಯಲ್ಲಿ ಅವಿಭಾಗವನ್ನು ಹೊಂದುತ್ತವೆ, ಕೆಲವು ಹೊಂದುವದಿಲ್ಲ— ಎನ್ನುವದಾದರೆ ಯಾವವು ಹೊಂದುವದಿಲ್ಲವೋ ಅವು ಪ್ರಧಾನದ ಕಾರ್ಯವೆಂಬುದೇ (ಸರಿ)ಯಾಗುವದಿಲ್ಲ.

ಈ ರೀತಿಯಲ್ಲಿ ಈ ದೋಷಗಳು (ಇಬ್ಬರಿಗೂ) ಸಮಾನವಾಗಿರುವದರಿಂದ ಒಬ್ಬರ ಪಕ್ಷದಲ್ಲಿಯೇ (ಇವನ್ನು) ಹೇಳತಕ್ಕವಾಗಿರುವದಿಲ್ಲ ಎಂಬುದು ಇವು ದೋಷಗಳಲ್ಲವೆಂಬುವನ್ನೇ ಗಟ್ಟಿಗೊಳಿಸುತ್ತದೆ. ಏಕೆಂದರೆ (ಇವನ್ನು ಎಲ್ಲರೂ) ಅವಶ್ಯವಾಗಿ ಇಟ್ಟುಕೊಳ್ಳಬೇಕಾಗಿರುತ್ತದೆ.

---

1. ಸುಖದುಃಖಕ್ಕೆ ಕಾರಣವು.

**ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವ ಮಪ್ಯವಿಮೋಕ್ಷಪ್ರಸಙ್ಗಃ ॥ ೧೧ ॥**

೧೧. ತರ್ಕವು ನಿಲ್ಲುವದಲ್ಲವಾದ್ದರಿಂದಲೂ (ಹೀಗೆ). ಬೇರೆಯ ಪ್ರಕಾರವಾಗಿ ಅನುಮಾನಿಸಬೇಕು ಎಂದರೆ ಹಾಗೂ ಅವಿಮೋಕ್ಷದ ಪ್ರಸಕ್ತಿ(ಯುಂಟು).

## ತರ್ಕಕ್ಕೆ ನಿಲುಗಡೆಯಿಲ್ಲ

(ಭಾಷ್ಯ)

೪೨೭. **ಇತಶ್ಚ ನಾಗಮಗಮ್ಯೇ ಅರ್ಥೇ ಕೇವಲೇನ ತರ್ಕೇಣ ಪ್ರತ್ಯವಸ್ಥಾತವ್ಯಮ್ । ಯಸ್ಮಾತ್ ನಿರಾಗಮಾಃ ಪುರುಷೋತ್ಪ್ರೇಕ್ಷಾಮಾತ್ರ ನಿಬನ್ಧನಾಃ ತರ್ಕಾಃ ಅಪ್ರತಿಷ್ಠಿತಾ ಭವನ್ತಿ। ಉತ್ಪ್ರೇಕ್ಷಾಯಾ ನಿರಙ್ಕುಶತ್ವಾತ್। ತಥಾ ಹಿ ಕೈಶ್ಚಿತ್ ಅಭಿಯುಕ್ತೈಃ ಯತ್ನೇನ ಉತ್ಪ್ರೇಕ್ಷಿತಾಸ್ತರ್ಕಾಃ ಅಭಿಯುಕ್ತ ತರೈರನ್ಯೈಃ ಆಭಾಸ್ಯಮಾನಾ ದೃಶ್ಯನ್ತೇ। ತೈರಪಿ ಉತ್ಪ್ರೇಕ್ಷಿತಾಃ ಸನ್ತಃ ತತೋಽನ್ಯೈಃ ಆಭಾಸ್ಯನ್ತೇ ಇತಿ ನ ಪ್ರತಿಷ್ಠಿತತ್ವಂ ತರ್ಕಾಣಾಂ ಶಕ್ಯಮ್ ಆಶ್ರಯಿತುಮ್ । ಪುರುಷಮತಿವೈರೂಪ್ಯಾತ್ । ಅಥ ಕಸ್ಯಚಿತ್ ಪ್ರಸಿದ್ಧ ಮಾಹಾತ್ಮ್ಯಸ್ಯ ಕಪಿಲಸ್ಯ ಚ ಅನ್ಯಸ್ಯ ವಾ ಸಂಮತಸ್ತರ್ಕಃ ಪ್ರತಿಷ್ಠಿತಃ ಇತ್ಯಾಶ್ರೀಯೇತ। ಏವಮಪಿ ಅಪ್ರತಿಷ್ಠಿತತ್ವಮೇವ। ಪ್ರಸಿದ್ಧಮಾಹಾತ್ಮ್ಯಾನುಮತಾನಾಮಪಿ ತೀರ್ಥಕರಾಣಾಂ ಕಪಿಲಕಣಭುಕ್ಪ್ರಭೃತೀನಾಂ ಪರಸ್ಪರ ವಿಪ್ರತಿಪತ್ತಿದರ್ಶನಾತ್ ॥**

(ಭಾಷ್ಯಾರ್ಥ)

**ಈ** (ಕಾರಣ)ದಿಂದಲೂ (ಕೇವಲ) ಆಗಮಗಮ್ಯವಾದ ವಿಷಯದಲ್ಲಿ ಬರಿಯ ತರ್ಕ(ಬಲ)ದಿಂದ ಎದುರುನಿಲ್ಲಬಾರದು. ಏಕೆಂದರೆ ಆಗಮವಿಲ್ಲದೆ ಬರಿಯ ಪುರುಷರ ಉತ್ಪ್ರೇಕ್ಷೆಯ ನಿಮಿತ್ತದಿಂದುಂಟಾಗಿರುವ ತರ್ಕಗಳು ಉತ್ಪ್ರೇಕ್ಷೆಗೆ (ಯಾವ) ತಡೆಯೂ ಇಲ್ಲದಿರುವದರಿಂದ ನಿಲುಗಡೆಯಿಲ್ಲದವಾಗಿರುತ್ತವೆ. ಆದ್ದರಿಂದಲೇ ಕೆಲವರು ಬಲ್ಲವರು ಪ್ರಯತ್ನಪೂರ್ವಕವಾಗಿ ಉತ್ಪ್ರೇಕ್ಷಿಸಿರುವ ತರ್ಕಗಳನ್ನು ಇನ್ನೂ ಬಲ್ಲವರಾದ ಮಿಕ್ಕವರು ಆಭಾಸವೆಂದು ತೋರಿಸುತ್ತಿರುವದು ಕಂಡುಬರುತ್ತದೆ; ಅವರು ಉತ್ಪ್ರೇಕ್ಷಿಸಿರುವ ವಾದ(ತರ್ಕ)ಗಳನ್ನು ಅವರಿಗಿಂತ ಬೇರೆಯವರು ಆಭಾಸವೆಂದು ತೋರಿಸಿಕೊಡುತ್ತಾರೆ. ಆದ್ದರಿಂದ ತರ್ಕಗಳಿಗೆ ನಿಲುಗಡೆಯಿರುವದೆಂದು ಇಟ್ಟುಕೊಳ್ಳುವದಕ್ಕೆ ಆಗು

ವದೇ ಇಲ್ಲ. ಏಕೆಂದರೆ ಪುರುಷರ ಮತಿಗಳು ವಿವಿಧರೂಪವಾಗಿರುತ್ತವೆ[1]. ಇನ್ನು ಪ್ರಸಿದ್ಧಮಹಿಮೆಯುಳ್ಳ ಕಪಿಲನೋ ಅಥವಾ ಮತ್ತೆ ಯಾವನಾದರೊಬ್ಬನೋ ಒಪ್ಪಿರುವ ತರ್ಕಕ್ಕೆ ನಿಲುಗಡೆಯಿರುವದೆಂದು ಇಟ್ಟುಕೊಳ್ಳಬಹುದು; ಹೀಗಾದರೂ (ತರ್ಕವು) ನಿಲುಗಡೆಯಿಲ್ಲದ್ದಾಗಿಯೇ ಇರುವದು. ಏಕೆಂದರೆ ಪ್ರಸಿದ್ಧಮಹಿಮೆಯುಳ್ಳವರೆಂದು (ಜನರು) ಒಪ್ಪಿರುವ ಕಪಿಲಕಣಾದರೇ ಮುಂತಾದ ಶಾಸ್ತ್ರಕಾರರಿಗೂ ಒಬ್ಬರೊಬ್ಬರಿಗೆ ವೈಮತ್ಯವಿರುವದು ಕಂಡುಬರುತ್ತದೆ[2].

## ಬ್ರಹ್ಮಸ್ವರೂಪವು ತರ್ಕಗೋಚರವಲ್ಲ

### (ಭಾಷ್ಯ)

೪೨೮. ಅಥೋಚ್ಯೇತ — ಅನ್ಯಥಾ ವಯಮ್ ಅನುಮಾಸ್ಯಾಮಹೇ ಯಥಾ ನಾಪ್ರತಿಷ್ಠಾದೋಷೋ ಭವಿಷ್ಯತಿ । ನ ಹಿ ಪ್ರತಿಷ್ಠಿತಸ್ತರ್ಕ ಏವ ನಾಸ್ತಿ ಇತಿ ಶಕ್ಯತೇ ವಕ್ತುಮ್ । ಏತದಪಿ ಹಿ ತರ್ಕಾಣಾಮ್ ಅಪ್ರತಿಷ್ಠಿತತ್ವಂ ತರ್ಕೇಣೈವ ಪ್ರತಿಷ್ಠಾಪ್ಯತೇ । ಕೇಷಾಂಚಿತ್ ತರ್ಕಾಣಾಮ್ ಅಪ್ರತಿಷ್ಠಿತತ್ವದರ್ಶನೇನ ಅನ್ಯೇಷಾಮಪಿ ತಜ್ಜಾತೀಯಕಾನಾಂ ತರ್ಕಾಣಾಮ್ ಅಪ್ರತಿಷ್ಠಿತತ್ವಕಲ್ಪನಾತ್ । ಸರ್ವತರ್ಕಾಪ್ರತಿಷ್ಠಾಯಾಂ ಚ ಲೋಕವ್ಯವಹಾರೋಚ್ಛೇದಪ್ರಸಙ್ಗಃ । ಅತೀತವರ್ತಮಾನಾಧ್ವಸಾಮ್ಯೇನ ಹಿ ಅನಾಗತೇಽಪಿ ಅಧ್ವನಿ ಸುಖದುಃಖಪ್ರಾಪ್ತಿಪರಿಹಾರಾಯ ಪ್ರವರ್ತಮಾನೋ ಲೋಕೋ ದೃಶ್ಯತೇ । ಶ್ರುತ್ಯರ್ಥವಿಪ್ರತಿಪತ್ತೌ ಚ ಅರ್ಥಾಭಾಸನಿರಾಕರಣೇನ ಸಮ್ಯಗರ್ಥನಿರ್ಧಾರಣಂ ತರ್ಕೇಣೈವ ವಾಕ್ಯವೃತ್ತಿನಿರೂಪಣರೂಪೇಣ ಕ್ರಿಯತೇ । ಮನುರಪಿ ಚ ಏವಂ ಮನ್ಯತೇ—"ಪ್ರತ್ಯಕ್ಷಮನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಮ್। ತ್ರಯಂ ಸುವಿದಿತಂ ಕಾರ್ಯಂ ಧರ್ಮಶುದ್ಧಿಮಭೀಪ್ಸತಾ ॥" (ಮನು. ೧೨-೧೦೫) ಇತಿ, "ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ । ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ" (ಮನು. ೧೨-೧೦೬) ಇತಿ ಚ ಬ್ರುವನ್ । ಅಯಮೇವ ತರ್ಕಸ್ಯಾಲಙ್ಕಾರೋ ಯತ್ ಅಪ್ರತಿಷ್ಠಿತತ್ವಂ ನಾಮ । ಏವಂ ಹಿ ಸಾವದ್ಯತರ್ಕಪರಿತ್ಯಾಗೇನ ನಿರವದ್ಯಸ್ತರ್ಕಃ ಪ್ರತಿಪತ್ತವ್ಯೋ ಭವತಿ । ನ ಹಿ ಪೂರ್ವಜೋ ಮೂಢ ಆಸೀದಿತಿ ಆತ್ಮನಾಪಿ ಮೂಢೇನ ಭವಿತವ್ಯಮಿತಿ ಕಿಂಚಿದಸ್ತಿ ಪ್ರಮಾಣಮ್ । ತಸ್ಮಾತ್ ನ ತರ್ಕಾಪ್ರತಿಷ್ಠಾನಂ

---

1. ತರ್ಕಮಾತ್ರದಿಂದ ಸ್ಥಾಪಿಸಿರುವ ದರ್ಶನಗಳು ಈಗ ನಿರ್ದುಷ್ಟವಾಗಿ ಕಂಡರೂ ಮುಂದೆ ಅವನ್ನು ಖಂಡಿಸುವ ಯುಕ್ತಿಗಳು ಹುಟ್ಟಲಾರವೆಂದು ಹೇಳುವದಕ್ಕೆ ಬರುವದಿಲ್ಲ.

2. ಸಿದ್ಧಿ, ಯೋಗಮಹಿಮೆ - ಮುಂತಾದವುಗಳ ಮೇಲೆ ಪ್ರಾಮಾಣ್ಯವನ್ನು ಕಲ್ಪಿಸುವದು ಸರಿಯಲ್ಲವೆಂಬುದಕ್ಕೆ ಇದೂ ಒಂದು ಕಾರಣ.

ದೋಷ ಇತಿ ಚೇತ್[1] | ಏವಮಪಿ ಅವಿಮೋಕ್ಷಪ್ರಸಙ್ಗಃ | ಯದ್ಯಪಿ ಕ್ವಚಿದ್ವಿಷಯೇ ತರ್ಕಸ್ಯ ಪ್ರತಿಷ್ಠಿತತ್ವಮ್ ಉಪಲಕ್ಷ್ಯತೇ ತಥಾಪಿ ಪ್ರಕೃತೇ ತಾವದ್ ವಿಷಯೇ ಪ್ರಸಜ್ಯತ ಏವ ಅಪ್ರತಿಷ್ಠಿತತ್ವದೋಷಾತ್ ಅನಿರ್ಮೋಕ್ಷಸ್ತರ್ಕಸ್ಯ । ನ ಹಿ ಇದಮ್ ಅತಿಗಮ್ಭೀರಂ ಭಾವಯಾಥಾತ್ಮ್ಯಂ ಮುಕ್ತಿನಿಬನ್ಧನಮ್ ಆಗಮಮನ್ತರೇಣ ಉತ್ಪ್ರೇಕ್ಷಿತುಮಪಿ ಶಕ್ಯಮ್ | ರೂಪಾದ್ಯಭಾವಾದ್ ಹಿ ನಾಯಮರ್ಥಃ ಪ್ರತ್ಯಕ್ಷಗೋಚರಃ, ಲಿಙ್ಗಾದ್ಯಭಾವಾಚ್ಚ ನಾನುಮಾನಾದೀನಾಮ್ ಇತಿ ಚ ಅವೋಚಾಮ ||

(ಭಾಷ್ಯಾರ್ಥ)

ಇನ್ನು (ಪೂರ್ವಪಕ್ಷಿಯು) ಹೀಗೆನ್ನಬಹುದು : ಹೇಗಾದರೆ ನಿಲುಗಡೆಯಿಲ್ಲವೆಂಬ ದೋಷವು ಆಗದಿರುವದೋ ಹಾಗೆ ಬೇರೆಯ ರೀತಿಯಿಂದ ಅನುಮಾನಮಾಡುವೆವು. ನಿಲುಗಡೆಯಿರುವ ತರ್ಕವೇ ಇಲ್ಲವೆಂದು ಹೇಳುವದಕ್ಕೆ ಆಗಲಾರದಷ್ಟೆ. ತರ್ಕಗಳಿಗೆ ನಿಲುಗಡೆ ಇಲ್ಲವೆಂಬುದನ್ನೂ ತರ್ಕದಿಂದಲೇ ಅಲ್ಲವೆ, (ನೀವು) ನಿಲ್ಲಿಸಿರುವದು? ಏಕೆಂದರೆ (ನೀವೂ) ಕೆಲವು ತರ್ಕಗಳಿಗೆ ನಿಲುಗಡೆಯಿಲ್ಲವೆಂಬುದನ್ನು ಕಂಡು ಅದೇ ಜಾತಿಯ ಬೇರೆಯ ತರ್ಕಗಳಿಗೂ ನಿಲುಗಡೆಯಿಲ್ಲವೆಂದು ಕಲ್ಪಿಸುತ್ತೀರಿ. ಯಾವ ತರ್ಕಕ್ಕೂ ನಿಲುಗಡೆಯಿಲ್ಲದೆ ಹೋದರೆ ಲೋಕವ್ಯವಹಾರವೇ ಇಲ್ಲವಾಗಬೇಕಾಗುವದು. ಕಳೆದ ಮತ್ತು ಈಗಿನ ಕಾಲದ ಹೋಲಿಕೆಯಿಂದಲ್ಲವೆ, ಮುಂದಿನ ಕಾಲದಲ್ಲಿಯೂ ಸುಖದುಃಖಗಳನ್ನು ದೊರಕಿಸಿಕೊಳ್ಳುವದಕ್ಕೂ ಪರಿಹರಿಸಿಕೊಳ್ಳುವದಕ್ಕೂ ಜನವು ತೊಡಗುತ್ತಿರುವದು ಕಂಡುಬರುತ್ತದೆ? ಶ್ರುತಿಯ ಅರ್ಥದ (ವಿಷಯದಲ್ಲಿ) ವಿರುದ್ಧಾಭಿಪ್ರಾಯವುಂಟಾದರೂ ಅರ್ಥಾಭಾಸವನ್ನು ತಳ್ಳಿಹಾಕಿ ಸರಿಯಾದ ಅರ್ಥವನ್ನು ಗೊತ್ತುಮಾಡುವದೂ ವಾಕ್ಯವ್ಯಾಪಾರವನ್ನು ಪರೀಕ್ಷಿಸುವ ರೂಪದ ತರ್ಕದಿಂದಲೇ ಮಾಡತಕ್ಕದ್ದಾಗಿದೆ. **ಮನುವು** ಕೂಡ "ಪ್ರತ್ಯಕ್ಷ, ಅನುಮಾನ, ಬಗೆಬಗೆಯ ಆಗಮಗಳುಳ್ಳ[2] ಶಾಸ್ತ್ರ –(ಈ) ಮೂರನ್ನೂ ಧರ್ಮಶುದ್ಧಿಯನ್ನು ಬಯಸುವಾತನು[3] ಚೆನ್ನಾಗಿ ತಿಳಿದುಕೊಳ್ಳಬೇಕು." (ಮನು. ೧೨–೧೦೫), "ಆರ್ಷವಾದ ಧರ್ಮೋಪದೇಶವನ್ನೂ ವೇದಶಾಸ್ತ್ರಗಳಿಗೆ ವಿರೋಧವಿಲ್ಲದ ತರ್ಕಕ್ಕೆ ಯಾವನು ಹೊಂದಿಸಿಕೊಳ್ಳುವನೋ ಅವನೇ ಧರ್ಮವನ್ನು ಬಲ್ಲನು, ಮತ್ತೊಬ್ಬನಲ್ಲ" (ಮನು. ೧೨–೧೦೬) ಎಂದು ಹೇಳುವದರಿಂದ ಹೀಗೆಂದೇ ಅಭಿಪ್ರಾಯಪಟ್ಟಿರುತ್ತಾನೆ. ತರ್ಕಕ್ಕೆ ನಿಲುಗಡೆ ಇಲ್ಲ ಎಂಬಿದೇ ತರ್ಕಕ್ಕೆ ಅಲಂಕಾರವು.

---

1. 'ಚೇತ್' ಎಂಬ ಮಾತು ಇಲ್ಲಿ ಹೆಚ್ಚೆಂದು ತೋರುತ್ತದೆ.
2. ಬೇರೆಬೇರೆಯ ಆಚಾರ್ಯರ ಮೂಲಕ ಬಂದ ಸಂಪ್ರದಾಯವುಳ್ಳ ಎಂದರ್ಥ.
3. ಅಧರ್ಮವನ್ನು ತಳ್ಳಿಹಾಕಿ ಧರ್ಮವನ್ನೇ ಸ್ವೀಕರಿಸಬೇಕೆನ್ನುವವನು.

ಏಕೆಂದರೆ ಹೀಗಾದರೇ ತಪ್ಪಾಗಿರುವ ತರ್ಕವನ್ನು ಬಿಟ್ಟು ತಪ್ಪಿಲ್ಲದ ತರ್ಕವನ್ನು ಸಂಪಾದಿಸಿಕೊಳ್ಳಬಹುದಾಗುವದು. (ತಮ್ಮ) ಹಿಂದಿನವನು ಮೂಢನಾಗಿದ್ದ ನಾದ್ದರಿಂದ ತಾನೂ ಮೂಢನಾಗಿರಬೇಕೆಂಬುದಕ್ಕೆ ಯಾವ ಪ್ರಮಾಣವೂ ಇರುವದಿಲ್ಲವಷ್ಟೆ. ಆದ್ದರಿಂದ ತರ್ಕಕ್ಕೆ ನಿಲುಗಡೆಯಿಲ್ಲವೆಂಬುದು ದೋಷವಲ್ಲ. ಹೀಗಾದರೂ ಅವಿಮೋಕ್ಷದ ಪ್ರಸಕ್ತಿ(ಯುಂಟಾಗುವದು). ಹೇಗೆಂದರೆ ಯಾವ ದಾದರೊಂದು ವಿಷಯದಲ್ಲಿ ತರ್ಕವು ನಿಲುಗಡೆಯುಳ್ಳದ್ದೆಂದು ಕಾಣಬರ ಬಹುದು ; ಆದರೆ ಪ್ರಕೃತವಾಗಿರುವ ವಿಷಯದಲ್ಲಂತೂ ತರ್ಕಕ್ಕೆ ನಿಲುಗಡೆ ಯಿಲ್ಲವೆಂಬ ದೋಷದಿಂದ ಅನಿರ್ಮೋಕ್ಷವೇ ಬಂದೊದಗುತ್ತದೆ. ಹೇಗೆಂದರೆ ಈ ಅತಿಗಂಭೀರವಾದ ಮುಕ್ತಿಕಾರಣವಾದ ವಸ್ತುಯಾಥಾತ್ಮ್ಯವು ಆಗಮವಿಲ್ಲದೆ ಉತ್ಪ್ರೇಕ್ಷಿಸುವದಕ್ಕೂ ಆಗುವದಿಲ್ಲ. ಏಕೆಂದರೆ ಈ ವಸ್ತುವಿಗೆ ರೂಪಾದಿ ಗಳಿಲ್ಲದ್ದರಿಂದ (ಇದು) ಪ್ರತ್ಯಕ್ಷಕ್ಕೆ ವಿಷಯುವಲ್ಲ ; ಲಿಂಗಾದಿಗಳಿಲ್ಲದ್ದರಿಂದ ಅನುಮಾನಾದಿಗಳಿಗೂ (ವಿಷಯು)ವಲ್ಲ ಎಂದು ಹಿಂದೆ[1] ಹೇಳಿರುತ್ತೇವೆ.

## ತರ್ಕದಿಂದ ಮೋಕ್ಷಪ್ರಾಪ್ತಿಯಿಲ್ಲ

( ಭಾಷ್ಯ )

೪೨೯. ಅಪಿ ಚ ಸಮ್ಯಗ್ಜ್ಞಾನಾತ್ ಮೋಕ್ಷಃ ಇತಿ ಸರ್ವೇಷಾಂ ಮೋಕ್ಷವಾದಿನಾಮ್ ಅಭ್ಯುಪಗಮಃ | ತಚ್ಚ ಸಮ್ಯಗ್ಜ್ಞಾನಮ್ ಏಕ ರೂಪಮ್। ವಸ್ತುತನ್ತ್ರತ್ವಾತ್ | ಏಕರೂಪೇಣ ಹಿ ಅವಸ್ಥಿತೋ ಯೋಽರ್ಥಃ ಸ ಪರಮಾರ್ಥಃ | ಲೋಕೇ ತದ್ವಿಷಯಂ ಜ್ಞಾನಂ ಸಮ್ಯಗ್ಜ್ಞಾನಮ್ ಇತ್ಯುಚ್ಯತೇ | ಯಥಾ ಅಗ್ನಿರುಷ್ಣಃ ಇತಿ । ತತ್ರ ಏವಂ ಸತಿ ಸಮ್ಯಗ್ಜ್ಞಾನೇ ಪುರುಷಾಣಾಂ ವಿಪ್ರತಿಪತ್ತಿಃ ಅನುಪಪನ್ನಾ । ತರ್ಕಜ್ಞಾನಾನಾಂ ತು ಅನ್ಯೋನ್ಯವಿರೋಧಾತ್ ಪ್ರಸಿದ್ಧಾ ವಿಪ್ರತಿಪತ್ತಿಃ | ಯದ್ ಹಿ ಕೇನಚಿತ್ ತಾರ್ಕಿಕೇಣ ಇದಮೇವ ಸಮ್ಯಗ್ಜ್ಞಾನಮ್ ಇತಿ ಪ್ರತಿಪಾದಿತಮ್ ತತ್ ಅಪರೇಣ ವ್ಯುತ್ಥಾಪ್ಯತೇ । ತೇನಾಪಿ ಪ್ರತಿಷ್ಠಾಪಿತಂ ತತೋಽಪರೇಣ ವ್ಯುತ್ಥಾಪ್ಯತೇ ಇತಿ ಪ್ರಸಿದ್ಧಂ ಲೋಕೇ । ಕಥಮ್ ಏಕರೂಪಾನವಸ್ಥಿತ ವಿಷಯಂ ತರ್ಕಪ್ರಭವಂ ಸಮ್ಯಗ್ಜ್ಞಾನಂ ಭವೇತ್ ? ನ ಚ ಪ್ರಧಾನವಾದೀ ತರ್ಕವಿದಾಮ್ ಉತ್ತಮಃ ಇತಿ ಸರ್ವೈಸ್ತಾರ್ಕಿಕೈಃ ಪರಿಗೃಹೀತಃ, ಯೇನ ತದೀಯಂ ಮತಂ ಸಮ್ಯಗ್ಜ್ಞಾನಮ್ ಇತಿ ಪ್ರತಿಪದ್ಯೇಮಹಿ | ನ ಚ ಶಕ್ಯನ್ತೇ ಅತೀತಾನಾಗತವರ್ತಮಾನಾಸ್ತಾರ್ಕಿಕಾಃ ಏಕಸ್ಮಿನ್ ದೇಶೇ ಕಾಲೇ ಚ ಸಮಾಹರ್ತುಮ್ | ಯೇನ ತನ್ಮತಿಃ ಏಕರೂಪಾ ಏಕಾರ್ಥವಿಷಯಾ

1. ಭಾ. ಭಾ ೪೧೭ರಲ್ಲಿ

ಸಮ್ಯಜ್ಞಾನಮ್ ಇತಿ ಸ್ಯಾತ್ । ವೇದಸ್ಯ ತು ನಿತ್ಯತ್ವೇ ವಿಜ್ಞಾನೋತ್ಪತ್ತಿಹೇತುತ್ವೇ ಚ ಸತಿ ವ್ಯವಸ್ಥಿತಾರ್ಥವಿಷಯತ್ವೋಪಪತ್ತೇಃ ತಜ್ಜನಿತಸ್ಯ ಜ್ಞಾನಸ್ಯ ಸಮ್ಯಕ್ತ್ವಮ್ ಅತೀತಾನಾಗತವರ್ತಮಾನೈಃ ಸರ್ವೈರಪಿ ತಾರ್ಕಿಕೈಃ ಅಪಹ್ನೋತುಮ್ ಅಶಕ್ಯಮ್ । ಅತಃ ಸಿದ್ಧಮ್ ಅಸ್ಯೈವ ಔಪನಿಷದಸ್ಯ ಜ್ಞಾನಸ್ಯ ಸಮ್ಯಗ್ಜ್ಞಾನತ್ವಮ್। ಅತೋಽನ್ಯತ್ರ ಸಮ್ಯಗ್ಜ್ಞಾನತ್ವಾನುಪಪತ್ತೇಃ ಸಂಸಾರಾವಿಮೋಕ್ಷ ಏವ ಪ್ರಸಜ್ಯೇತ । ಅತಃ ಆಗಮವಶೇನ ಆಗಮಾನುಸಾರಿತರ್ಕವಶೇನ ಚ ಚೇತನಂ ಬ್ರಹ್ಮ ಜಗತಃ ಕಾರಣಂ ಪ್ರಕೃತಿಶ್ಚ ಇತಿ ಸ್ಥಿತಮ್ ॥

(ಭಾಷ್ಯಾರ್ಥ)

**ಇದಲ್ಲದೆ ಸಮ್ಯಗ್ಜ್ಞಾನದಿಂದ ಮೋಕ್ಷವಾಗುವದೆಂದು ಎಲ್ಲಾ ಮೋಕ್ಷವಾದಿಗಳಿಗೂ[1] ಒಪ್ಪಾಗಿರುತ್ತದೆ. ಆ ಸಮ್ಯಗ್ಜ್ಞಾನವು ಒಂದೇ ರೂಪವಾಗಿರಬೇಕು; ಏಕೆಂದರೆ (ಅದು) ವಸ್ತುತಂತ್ರವಾಗಿರುತ್ತದೆ. ಒಂದೇ ರೂಪದಿಂದಿರುವ ಅರ್ಥವು ಯಾವದೋ ಅದೇ ಪರಮಾರ್ಥವು; ಲೋಕದಲ್ಲಿ ಅದರ ವಿಷಯದ ಜ್ಞಾನವೇ ಸಮ್ಯಗ್ಜ್ಞಾನವೆನಿಸುತ್ತದೆ. ಉದಾಹರಣೆಗೆ ಬೆಂಕಿಯು ಬಿಸಿಯಾಗಿರುತ್ತದೆ ಎಂಬ (ತಿಳಿವಳಿಕೆಯು) ಅಂಥ ಸಮ್ಯಗ್ಜ್ಞಾನವು.[2] ಇದು ಹೀಗಿರುವಲ್ಲಿ ಸಮ್ಯಗ್ಜ್ಞಾನದ ವಿಷಯಕ್ಕೆ ಪುರುಷರಿಗೆ ವಿರುದ್ಧಾಭಿಪ್ರಾಯವಾಗಿರುವದರಿಂದ (ಅವುಗಳ ವಿಷಯಕ್ಕೆ) ವಿರುದ್ಧಾಭಿಪ್ರಾಯವಿರುವದು ಪ್ರಸಿದ್ಧವಾಗಿರುತ್ತದೆ.[3]** ಯಾವದನ್ನು ಒಬ್ಬ ತಾರ್ಕಿಕನು ಇದೇ ಸಮ್ಯಗ್ಜ್ಞಾನವು ಎಂದು ಪ್ರತಿಪಾದಿಸುತ್ತಾನೋ ಅದನ್ನು ಮತ್ತೊಬ್ಬರು ಎತ್ತಿಹಾಕುತ್ತಾನೆ, ಅವನು ನಿಲ್ಲಿಸಿದ (ಜ್ಞಾನವನ್ನು) ಅವನಿಗಿಂತ ಬೇರೆಯಾದ (ತಾರ್ಕಿಕನೊಬ್ಬನು) ಎತ್ತಿಹಾಕುತ್ತಾನೆ ಎಂದು ಲೋಕದಲ್ಲಿ ಪ್ರಸಿದ್ಧವಾಗಿರು

---

1. ಜ್ಞಾನದಿಂದ ಮೋಕ್ಷವೆಂದು ಒಪ್ಪಿರುವವರೆಲ್ಲರೂ ಸಮ್ಯಗ್ಜ್ಞಾನದಿಂದಲೆ ಮೋಕ್ಷವಾಗುವದೆಂದು ಒಪ್ಪಿರುತ್ತಾರೆ ಎಂದು ಈ ವಾಕ್ಯಕ್ಕೆ ಅರ್ಥಮಾಡಬೇಕು. ಹಾಗಿಲ್ಲದಿದ್ದರೆ ಕರ್ಮದಿಂದಲೇ ಮೋಕ್ಷ, ಚಿತ್ತವೃತ್ತಿನಿರೋಧದಿಂದ ಮೋಕ್ಷ – ಎಂಬ ವಾದಗಳನ್ನು ಕೈಬಿಟ್ಟಂತೆ ಆಗುತ್ತದೆ.

2. ಒಬ್ಬನಿಗೆ ಮಾತ್ರ ಆಗುವ ಅನುಭವವು ಸಮ್ಯಗ್ಜ್ಞಾನವಲ್ಲವೆಂಬ ಅಭಿಪ್ರಾಯವು ಇದರಲ್ಲಿ ಅಡಗಿರುತ್ತದೆ.

3. ಅದ್ವೈತವೊಂದು ಹೊರತು ಮಿಕ್ಕ ಮತಗಳೆಲ್ಲ ಒಂದಕ್ಕೊಂದು ವಿರುದ್ಧವಾಗಿರುತ್ತವೆ; ಅವುಗಳಲ್ಲಿ ವಿರೋಧವೂ ವಿವಾದವೂ ಅಪರಿಹಾರ್ಯ. ಮಾಂ. ಕಾ. ಭಾ. ೩–೧೭, ೪–೨ ಇವನ್ನು ನೋಡಿ.

ತ್ತದೆ (ಹೀಗೆ) ಒಂದೇ ರೂಪದಲ್ಲಿ ನಿಲುಗಡೆಯಿಲ್ಲದ ವಿಷಯವುಳ್ಳ ತರ್ಕಜನ್ಯ ಜ್ಞಾನವು ಹೇಗೆ ಸಮ್ಯಗ್ಜ್ಞಾನವಾದೀತು ? ಪ್ರಧಾನವಾದಿಯೇ ತರ್ಕವಾದಿಗಳಲ್ಲಿ ಉತ್ತಮನೆಂದು ತಾರ್ಕಿಕರೆಲ್ಲರೂ ಸ್ವೀಕರಿಸಿರುವದೂ ಇಲ್ಲ; ಹಾಗಿದ್ದರೆ ಅವನ ಮತವನ್ನು ಸಮ್ಯಗ್ಜ್ಞಾನವೆಂದು (ನಾವು) ತಿಳಿಯಬೇಕಾಗಿತ್ತು. **(ಹಿಂದೆ) ಆಗಿಹೋಗಿರುವ, (ಮುಂದೆ) ಬರಲಿರುವ, (ಈಗ) ಇರುವ ತಾರ್ಕಿಕರನ್ನೆಲ್ಲ ಒಂದೇ ದೇಶದಲ್ಲಿ(ಒಂದೇ) ಕಾಲದಲ್ಲಿ ಕೂಡಿಸುವದೂ ಆಗುವದಿಲ್ಲ; ಹಾಗಿದ್ದರೆ ಅವರ ಮತಿಯು (ಒಂದೇ) ರೂಪವಾದ ಒಂದೇ ಅರ್ಥವನ್ನು ವಿಷಯೀಕರಿಸುವದರಿಂದ ಸರಿಯಾದ ತಿಳಿವಳಿಕೆ ಎಂದು ಆಗಬಹುದಾಗಿತ್ತು. ವೇದವಾದರೋ ನಿತ್ಯವಾಗಿರುವದರಿಂದಲೂ ವಿಜ್ಞಾನವುಂಟಾಗುವದಕ್ಕೆ ಕಾರಣವಾಗಿರುವದರಿಂದಲೂ (ಒಂದೇ ಸಮನಾಗಿ) ನಿಲ್ಲುವ ಅರ್ಥದ ವಿಷಯು(ವದು) ಎಂದಾಗುವದರಿಂದ ಅದರಿಂದುಂಟಾಗುವ ಜ್ಞಾನವು ಸಮ್ಯಗ್ಜ್ಞಾನವೆಂಬುದನ್ನು ಹಿಂದಿನ ಮುಂದಿನ ಈಗಿನ ಯಾವ ತಾರ್ಕಿಕರೂ ಇಲ್ಲವೆನ್ನುವದಕ್ಕೆ ಆಗಲಾರದು.**[1] ಆದ್ದರಿಂದ ಈ ಔಪನಿಷದಜ್ಞಾನವೇ ಸಮ್ಯಗ್ಜ್ಞಾನವೆಂದು ಸಿದ್ಧವಾಯಿತು. ಆದ್ದರಿಂದ ಇನ್ನೊಂದು ಸಮ್ಯಗ್ಜ್ಞಾನವೆಂದಾಗುವಂತಿಲ್ಲವಾದ್ದರಿಂದ (ಅದರಿಂದ) ಸಂಸಾರದಿಂದ ಮೋಕ್ಷವಾಗುವದಿಲ್ಲವೆಂಬ ಪ್ರಸಕ್ತಿಯುಂಟಾಗುತ್ತದೆ.[2]

ಆದ್ದರಿಂದ ಆಗಮವಶದಿಂದಲೂ ಆಗಮಾನುಸಾರಿಯಾದ ತರ್ಕದ ವಶದಿಂದಲೂ[3] ಚೇತನವಾದ ಬ್ರಹ್ಮವೇ ಜಗತ್ತಿಗೆ (ನಿಮಿತ್ತ)ಕಾರಣವೂ ಪ್ರಕೃತಿಯೂ ಆಗಿದೆ ಎಂದು ಸ್ಥಿತವಾಯಿತು.

---

1. ವೇದದಲ್ಲಿಯೂ ಬೇರೆಬೇರೆ ಭಾಷ್ಯಕಾರರಿಗೆ ಬೇರೆಬೇರೆಯ ಅರ್ಥವಾಗುವದರಿಂದ ಇಲ್ಲಿಯೂ ವಿರೋಧವಿದೆ ಎಂಬ ಆಕ್ಷೇಪಕ್ಕೆ ಸಮಾಧಾನವಿದು. ಪೀಠಿಕೆಯನ್ನು ನೋಡಿ.

2. 'ಅವಿಮೋಕ್ಷಪ್ರಸಙ್ಗಃ' ಎಂಬುದಕ್ಕೆ ದೋಷದಿಂದ ಬಿಡುಗಡೆಯಿಲ್ಲ ಎಂದು ಹಿಂದೆ ವ್ಯಾಖ್ಯಾನಮಾಡಿತ್ತು ; ತರ್ಕಜ್ಞಾನಮಾತ್ರದಿಂದ ಸಂಸಾರದಿಂದ ಬಿಡುಗಡೆಯಿಲ್ಲ ಎಂದು ಈಗ ವ್ಯಾಖ್ಯಾನಮಾಡಿದೆ.

3. ಆಗಮಾನುಸಾರಿಯಾದ ತರ್ಕವನ್ನು [illegible] ಉದಾಹರಿಸಿದೆ

## ೪. ಶಿಷ್ಟಾಪರಿಗ್ರಹಾಧಿಕರಣ

(ಅಣ್ವಾದಿವಾದಗಳ ಆಕ್ಷೇಪವೂ ಸಲ್ಲದು)

**ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ ॥ ೧೨ ॥**

೧೨. ಇದರಿಂದ ಶಿಷ್ಟಾಪರಿಗ್ರಹಗಳನ್ನೂ ವ್ಯಾಖ್ಯಾನಮಾಡಿದಂತೆ ಆಯಿತು.

## ಪ್ರಧಾನವಾದ ನಿರಾಕರಣವು ಮಿಕ್ಕವರಿಗೂ ಅನ್ವಯಿಸುತ್ತದೆ

( ಭಾಷ್ಯ )

೪೩೦. ವೈದಿಕಸ್ಯ ದರ್ಶನಸ್ಯ ಪ್ರತ್ಯಾಸನ್ನತ್ವಾತ್, ಗುರುತರತರ್ಕಬಲೋಪೇತತ್ವಾತ್, ವೇದಾನುಸಾರಿಭಿಶ್ಚ ಕೈಶ್ಚಿತ್ ಶಿಷ್ಟೈಃ ಕೇನಚಿದಂಶೇನ ಪರಿಗೃಹೀತತ್ವಾತ್ ಪ್ರಧಾನಕಾರಣವಾದಂ ತಾವತ್ ವ್ಯಪಾಶ್ರಿತ್ಯ ಯಸ್ತರ್ಕನಿಮಿತ್ತ ಆಕ್ಷೇಪೋ ವೇದಾನ್ತವಾಕ್ಯೇಷು ಉದ್ಭಾವಿತಃ ಸ ಪರಿಹೃತಃ । ಇದಾನೀಮ್ ಅಣ್ವಾದಿವಾದವ್ಯಪಾಶ್ರಯೇಣಾಪಿ ಕೈಶ್ಚಿತ್ ಮನ್ದಮತಿಭಿಃ ವೇದಾನ್ತವಾಕ್ಯೇಷು ಪುನಸ್ತರ್ಕನಿಮಿತ್ತ ಆಕ್ಷೇಪಃ ಆಶಙ್ಕ್ಯೇತ ಇತ್ಯತಃ ಪ್ರಧಾನಮಲ್ಲನಿಬರ್ಹಣನ್ಯಾಯೇನ ಅತಿದಿಶತಿ । ಪರಿಗೃಹ್ಯನ್ತೇ ಇತಿ ಪರಿಗ್ರಹಾಃ । ನ ಪರಿಗ್ರಹಾಃ ಅಪರಿಗ್ರಹಾಃ । ಶಿಷ್ಟಾನಾಮ್ ಅಪರಿಗ್ರಹಾಃ ಶಿಷ್ಟಾಪರಿಗ್ರಹಾಃ । ಏತೇನ ಪ್ರಕೃತೇನ ಪ್ರಧಾನಕಾರಣವಾದನಿರಾಕರಣಕಾರಣೇನ ಶಿಷ್ಟೈಃ ಮನುವ್ಯಾಸಪ್ರಭೃತಿಭಿಃ ಕೇನಚಿತ್ ಅಂಶೇನ ಅಪರಿಗೃಹೀತಾ ಯೇ ಅಣ್ವಾದಿಕಾರಣವಾದಾಃ ತೇಽಪಿ ಪ್ರತಿಷಿದ್ಧತಯಾ ವ್ಯಾಖ್ಯಾತಾ ನಿರಾಕೃತಾ ದ್ರಷ್ಟವ್ಯಾಃ । ತುಲ್ಯತ್ವಾತ್ ನಿರಾಕರಣಕಾರಣಸ್ಯ ನಾತ್ರ ಪುನರಾಶಙ್ಕಿತವ್ಯಂ ಕಿಂಚಿದಸ್ತಿ । ತುಲ್ಯಮತ್ರಾಪಿ ಪರಮಗಮ್ಭೀರಸ್ಯ ಜಗತ್ಕಾರಣಸ್ಯ ತರ್ಕಾನವಗಾಹ್ಯತ್ವಮ್, ತರ್ಕಸ್ಯ ಅಪ್ರತಿಷ್ಠಿತತ್ವಮ್, ಅನ್ಯಥಾನುಮಾನೇಽಪಿ ಅವಿಮೋಕ್ಷಃ, ಆಗಮವಿರೋಧಶ್ಚ ಇತ್ಯೇವಂಜಾತೀಯಕಂ ನಿರಾಕರಣಕಾರಣಮ್ ॥

( ಭಾಷ್ಯಾರ್ಥ )

ವೈದಿಕದರ್ಶನಕ್ಕೆ ಹತ್ತಿರವಾಗಿರುವದರಿಂದಲೂ ಬಹಳ ತೂಕವಾದ ತರ್ಕದ ಬಲದಿಂದ ಕೂಡಿರುವದರಿಂದಲೂ ವೇದಾನುಸಾರಿಗಳಾದ ಕೆಲವರು ಶಿಷ್ಟರು ಕೆಲವು ಅಂಶಗಳಲ್ಲಿ ಪರಿಗ್ರಹಿಸಿರುವದರಿಂದಲೂ ಪ್ರಧಾನಕಾರಣವಾದ್ದವನ್ನು ಮೊದಲು ಆಶ್ರಯಿಸಿಕೊಂಡು ತರ್ಕನಿಮಿತ್ತವಾದ ಆಕ್ಷೇಪವನು

ವೇದಾಂತವಾಕ್ಯಗಳ (ವಿಷಯದಲ್ಲಿ) ಎಬ್ಬಿಸಿತ್ತಷ್ಟೆ, ಅದನ್ನು ಪರಿಹರಿಸಿದ್ದಾಯಿತು. ಈಗ ಅಣ್ವಾದಿವಾದಗಳನ್ನು ಆಶ್ರಯಿಸಿರುವದರಿಂದಲೂ ಕೆಲವರು ಅಲ್ಪಬುದ್ಧಿಯವರು ವೇದಾಂತವಾಕ್ಯಗಳಲ್ಲಿ ಮತ್ತೆ ತರ್ಕನಿಮಿತ್ತವಾದ ಆಕ್ಷೇಪವನ್ನು ಆಶಂಕಿಸಬಹುದಾದ್ದರಿಂದ **ಪ್ರಧಾನಮಲ್ಲನಿಬರ್ಹಣನ್ಯಾಯದಿಂದ**[1] ಅತಿದೇಶಮಾಡಲಾಗುತ್ತದೆ.

(ಶಿಷ್ಟರು) ಪರಿಗ್ರಹಿಸಿರುವವು ಪರಿಗ್ರಹಗಳೆನಿಸುವವು; ಪರಿಗ್ರಹಗಳಲ್ಲದವು ಅಪರಿಗ್ರಹಗಳು. ಶಿಷ್ಟರಿಗೆ ಅಪರಿಗ್ರಹವಾದವು ಶಿಷ್ಟಾಪರಿಗ್ರಹಗಳು. ಈ ಪ್ರಕೃತವಾದ ಪ್ರಧಾನಕಾರಣವಾದನಿರಾಕರಣವೆಂಬ ಕಾರಣದಿಂದ ಶಿಷ್ಟರಾದ ಮನು, ವ್ಯಾಸ– ಮುಂತಾದವರು ಯಾವ ಅಂಶದಲ್ಲಿಯೂ ಪರಿಗ್ರಹಿಸದೆ ಇರುವ ಅಣ್ವಾದಿಕಾರಣವಾದಗಳಿವೆಯಲ್ಲ, ಅವನ್ನೂ ಅಲ್ಲಗಳೆದು ವ್ಯಾಖ್ಯಾನಮಾಡಿದಂತೆ ಆಯಿತು, ತಳ್ಳಿಹಾಕಿದಂತೆ ಆಯಿತೆಂದು ತಿಳಿಯಬೇಕು. ಏಕೆಂದರೆ ತಳ್ಳಿಹಾಕುವದಕ್ಕೆ ಕಾರಣವು ಸಮಾನವಾಗಿರುತ್ತದೆ; ಮತ್ತೆ ಇಲ್ಲಿ ಆಶಂಕೆಮಾಡತಕ್ಕದ್ದು ಸ್ವಲ್ಪವೂ ಇರುವದಿಲ್ಲ. ಪರಮಗಂಭೀರವಾದ ಜಗತ್ಕಾರಣವು ತರ್ಕಕ್ಕೆ ನಿಲುಕತಕ್ಕದ್ದಲ್ಲವೆಂಬುದು, ತರ್ಕವು ನಿಲುಗಡೆಯಿಲ್ಲದ್ದೆಂಬುದು, ಬೇರೊಂದು ವಿಧವಾಗಿ ಅನುಮಾನಮಾಡಿದರೂ ವಿಮೋಕ್ಷವಿಲ್ಲದಿರುವದು, ಮತ್ತು ಆಗಮಕ್ಕೆ ವಿರೋಧವಾಗಿರುವದು– ಎಂಬೀ ಜಾತಿಯ ನಿರಾಕರಣಕಾರಣವು ಇಲ್ಲಿಯೂ ಸಮಾನವಾಗಿರುತ್ತದೆ.

## ೫. ಭೋಕ್ತ್ರಾಪತ್ತ್ಯಧಿಕರಣ

(ಸಿದ್ಧಾಂತದಲ್ಲಿ ಭೋಕ್ತೃಭೋಗ್ಯವಿಭಾಗದ ಲೋಪವಾಗುವದಿಲ್ಲ)

**ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ॥ ೧೩ ॥**

೧೩. ಭೋಕ್ತ್ರಾಪತ್ತಿಯಿರುವದರಿಂದ ವಿಭಾಗವಿಲ್ಲವಾಗುವದು, ಎಂದರೆ ಲೋಕದಂತೆ ಇರಬಹುದು.

### ಆಕ್ಷೇಪ: ಭೋಕ್ತೃಭೋಗ್ಯವಿಭಾಗಕ್ಕೆ ಏನು ಗತಿ?

(ಭಾಷ್ಯ)

೪೩೧. ಅನ್ಯಥಾ ಪುನರ್ಬ್ರಹ್ಮಕಾರಣವಾದಃ ತರ್ಕಬಲೇನೈವ ಆಕ್ಷಿಪ್ಯತೇ। ಯದ್ಯಪಿ ಶ್ರುತಿಃ ಪ್ರಮಾಣಂ ಸ್ವವಿಷಯೇ ಭವತಿ, ತಥಾಪಿ ಪ್ರಮಾಣಾನ್ತ

1. ಜಟ್ಟಿಗಳಲ್ಲಿ ಪ್ರಧಾನವಾದ ವಸ್ತಾದಿಯನ್ನು ಗೆದ್ದರೆ ಅವನ ಹಿಂಬಾಲಕರನ್ನು ಗೆದ್ದಂತೆಯೇ ಆಗುವಂತೆ. ಪ್ರಧಾನವಾದಿಯೆಂಬ ತಾರ್ಕಿಕನನ್ನು ಗೆದ್ದರೆ ಮಿಕ್ಕ ತಾರ್ಕಿಕರನ್ನೂ ಗೆದ್ದಂತೆಯೇ ಎಂದರ್ಥ.

ರೇಣ ವಿಷಯಾಪಹಾರೇ ಅನ್ಯಪರಾ ಭವಿತುಮರ್ಹತಿ । ಯಥಾ ಮನ್ತ್ರಾರ್ಥವಾದೌ । ತರ್ಕೋಽಪಿ ಸ್ವವಿಷಯಾತ್ ಅನ್ಯತ್ರ ಅಪ್ರತಿಷ್ಠಿತಃ ಸ್ಯಾತ್, ಯಥಾ ಧರ್ಮಾಧರ್ಮಯೋಃ । ಕಿಮತೋ ಯದ್ಯೇವಮ್ ? ಅತ ಇದಮ್ ಅಯುಕ್ತಂ ಯತ್ ಪ್ರಮಾಣಾನ್ತರಪ್ರಸಿದ್ಧಾರ್ಥಬಾಧನಂ ಶ್ರುತೇಃ । ಕಥಂ ಪುನಃ ಪ್ರಮಾಣಾನ್ತರಪ್ರಸಿದ್ಧೋಽರ್ಥಃ ಶ್ರುತ್ಯಾ ಬಾಧ್ಯತೇ ಇತಿ? ಅತ್ರೋಚ್ಯತೇ । ಪ್ರಸಿದ್ಧೋ ಹಿ ಅಯಂ ಭೋಕ್ತೃಭೋಗ್ಯವಿಭಾಗೋ ಲೋಕೇ ಭೋಕ್ತಾ ಚೇತನಃ ಶಾರೀರಃ, ಭೋಗ್ಯಾಃ ಶಬ್ದಾದಯೋ ವಿಷಯಾಃ ಇತಿ । ಯಥಾ ಭೋಕ್ತಾ ದೇವದತ್ತಃ, ಭೋಜ್ಯ ಓದನಃ ಇತಿ । ತಸ್ಯ ಚ ವಿಭಾಗಸ್ಯ ಅಭಾವಃ ಪ್ರಸಜ್ಯೇತ ಯದಿ ಭೋಕ್ತಾ ಭೋಗ್ಯಭಾವಮ್ ಆಪದ್ಯೇತ । ಭೋಗ್ಯಂ ವಾ ಭೋಕ್ತೃಭಾವಮ್ ಆಪದ್ಯೇತ । ತಯೋಶ್ಚ ಇತರೇತರಭಾವಾಪತ್ತಿಃ ಪರಮಕಾರಣಾತ್ ಬ್ರಹ್ಮಣೋಽನನ್ಯತ್ವಾತ್ ಪ್ರಸಜ್ಯೇತ । ನ ಚ ಅಸ್ಯ ಪ್ರಸಿದ್ಧಸ್ಯ ವಿಭಾಗಸ್ಯ ಬಾಧನಂ ಯುಕ್ತಮ್ । ಯಥಾ ತು ಅದ್ಯತ್ವೇ ಭೋಕ್ತೃಭೋಗ್ಯಯೋರ್ವಿಭಾಗೋ ದೃಷ್ಟಃ ತಥಾ ಅತೀತಾನಾಗತಯೋರಪಿ ಕಲ್ಪಯಿತವ್ಯಃ । ತಸ್ಮಾತ್ ಪ್ರಸಿದ್ಧಸ್ಯ ಅಸ್ಯ ಭೋಕ್ತೃಭೋಗ್ಯವಿಭಾಗಸ್ಯ ಅಭಾವಪ್ರಸಙ್ಗಾತ್ ಅಯುಕ್ತಮಿದಂ ಬ್ರಹ್ಮಕಾರಣತಾವಧಾರಣಮ್ ಇತಿ ಚೇತ್ ಕಶ್ಚಿತ್ ಚೋದಯೇತ್ ॥

(ಭಾಷ್ಯಾರ್ಥ)

ಬ್ರಹ್ಮಕಾರಣವಾದವನ್ನು ಮತ್ತೊಂದು ರೀತಿಯಲ್ಲಿ ತರ್ಕಬಲದಿಂದಲೇ ಮತ್ತೂ ಆಕ್ಷೇಪಿಸಲಾಗುತ್ತದೆ: ಶ್ರುತಿಯು ತನ್ನ ವಿಷಯದಲ್ಲಿ ಪ್ರಮಾಣವಾದರೂ ಮತ್ತೊಂದು ಪ್ರಮಾಣವು (ಯಾವದಾದರೊಂದು) ವಿಷಯವನ್ನು ಅಪಹರಿಸುವದಾದರೆ (ಶ್ರುತಿಯು) ಮತ್ತೊಂದರಲ್ಲಿ ತಾತ್ಪರ್ಯವುಳ್ಳದ್ದು ಎನ್ನಬೇಕಾಗುವದು, ಮಂತ್ರಾರ್ಥವಾದಗಳಂತೆಯೇ (ಇದನ್ನು ತಿಳಿಯಬೇಕು.[1] ತರ್ಕವೂ ತನ್ನ ವಿಷಯವನ್ನು ಬಿಟ್ಟು ಮಿಕ್ಕ ಕಡೆಯಲ್ಲಿ ನಿಲುಗಡೆಯಿಲ್ಲದ್ದೆಂದಾಗಬಹುದು ; ಉದಾಹರಣೆಗೆ ಧರ್ಮಾಧರ್ಮಗಳ ವಿಷಯಕ್ಕೆ (ಅದು ನಿಲುಗಡೆಯಿಲ್ಲದ್ದಾಗಬಹುದು).[2]

(ಪ್ರಶ್ನೆ) ;– ಹೀಗಾದರೆ ಇದರಿಂದ ಏನು (ಫಲಿಸುವದು) ?

1. ಮಂತ್ರಗಳೂ ಅರ್ಥವಾದಗಳೂ ಹೇಳುವ ಅರ್ಥವು ಪ್ರಮಾಣಾಂತರ ವಿರುದ್ಧವಾದರೆ ಅವಕ್ಕೆ ಬೇರೊಂದು ಅರ್ಥದಲ್ಲಿ ತಾತ್ಪರ್ಯವನ್ನು ಕಲ್ಪಿಸಬೇಕಷ್ಟೆ. ಇದರಂತೆ ಇಲ್ಲಿಯೂ ಬ್ರಹ್ಮಕಾರಣವಾದಿಯಾದ ವಚನಕ್ಕೆ ಮತ್ತೊಂದರಲ್ಲಿ ತಾತ್ಪರ್ಯವನ್ನು ಕಲ್ಪಿಸಬೇಕು ಎಂದರ್ಥ.

2. ಏಕೆಂದರೆ ಧರ್ಮಾಧರ್ಮಗಳು ಅತೀಂದ್ರಿಯವಾದ್ದರಿಂದ ಅವು ತರ್ಕಕ್ಕೆ ವಿಷಯವಲ್ಲ.

(ಉತ್ತರ) :– ಇದರಿಂದ ಪ್ರಮಾಣಾಂತರದಿಂದ ಸಿದ್ಧವಾಗುವ ಅರ್ಥವನ್ನು ಶ್ರುತಿಯು ಬಾಧಿಸುವದೆಂಬುದು ಸರಿಯಲ್ಲ(ವೆಂದಾಗುವದು).

(ಪ್ರಶ್ನೆ) :– ಇನ್ನು ಪ್ರಮಾಣಾಂತರದಿಂದ ಸಿದ್ಧವಾಗಿರುವ ಅರ್ಥವನ್ನು ಶ್ರುತಿಯು[1] ಬಾಧಿಸುತ್ತದೆ ಎಂಬುದು ಹೇಗೆ?

(ಉತ್ತರ) :– ಇದಕ್ಕೆ ಹೇಳುತ್ತೇವೆ. ಭೋಕ್ತೃವೆಂದರೆ ಚೇತನನಾದ ಶಾರೀರನು, ಭೋಗ್ಯಗಳೆಂದರೆ ಶಬ್ದಾದಿವಿಷಯಗಳು ಎಂಬೀ ಭೋಕ್ತೃಭೋಗ್ಯವಿಭಾಗವು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಉದಾಹರಣೆಗೆ ಭೋಕ್ತೃವು ದೇವದತ್ತನು, ಭೋಜ್ಯವು ಅನ್ನವು ಎಂದು (ಪ್ರಸಿದ್ಧ). ಆದರೆ ಭೋಕ್ತೃವು ಭೋಗ್ಯತ್ವವನ್ನು ಹೊಂದಿದರೆ, ಅಥವಾ ಭೋಗ್ಯವು ಭೋಕ್ತೃತ್ವವನ್ನು ಹೊಂದಿದರೆ[2] ಆ ವಿಭಾಗವು ಇಲ್ಲವಾಗುವದು ಮತ್ತು ಪರಮಕಾರಣವಾದ ಬ್ರಹ್ಮಕ್ಕಿಂತ ಅವು ಅನನ್ಯವಾಗಿರುವದರಿಂದ ಆವೆರಡಕ್ಕೂ ಒಂದಕ್ಕೊಂದರ ಸ್ವರೂಪವುಂಟಾಗುವದೆಂದು ಆದೀತು. ಆದರೆ ಈ ಪ್ರಸಿದ್ಧವಾದ ವಿಭಾಗವನ್ನು ಬಾಧಿಸುವದು ಯುಕ್ತವಲ್ಲ. ಹೇಗೆ ಈಗ ಭೋಕ್ತೃಭೋಗ್ಯಗಳ ವಿಭಾಗವು ಕಂಡುಬರುತ್ತಿರುವದೋ ಹಾಗೆಯೇ ಹಿಂದಿನ ಮುಂದಿನ (ಕಾಲ)ಗಳಲ್ಲಿಯೂ (ಇರುವದೆಂದು) ಕಲ್ಪಿಸಬೇಕು. ಆದ್ದರಿಂದ ಪ್ರಸಿದ್ಧವಾಗಿರುವ ಈ ಭೋಕ್ತೃಭೋಗ್ಯವಿಭಾಗವು ಇಲ್ಲವೆಂಬ ಪ್ರಸಂಗವು ಬರುವದರಿಂದ ಬ್ರಹ್ಮವೇ ಕಾರಣವೆಂದು ನಿಶ್ಚಯಿಸುವದೆಂಬುದು ಸರಿಯಲ್ಲ ಎಂದು ಯಾವನಾದರೂ ಆಕ್ಷೇಪಿಸಬಹುದು.

## ಬ್ರಹ್ಮಕ್ಕೆ ಅನನ್ಯವಾದರೂ ಭೋಕ್ತೃಭೋಗ್ಯಗಳ ವಿಭಾಗವಿರಬಹುದು

(ಭಾಷ್ಯ)

೪೩೨. ತಂ ಪ್ರತಿಬ್ರೂಯಾತ್—'ಸ್ಯಾಲ್ಲೋಕವತ್' ಇತಿ । ಉಪಪದ್ಯತೇ ಏವ ಅಯಮ್ ಅಸ್ಮತ್ಪಕ್ಷೇಽಪಿ ವಿಭಾಗಃ । ಏವಂ ಲೋಕೇ ದೃಷ್ಟತ್ವಾತ್ । ತಥಾ ಹಿ । ಸಮುದ್ರಾತ್ ಉದಕಾತ್ಮನೋಽನನ್ಯತ್ವೇಽಪಿ ತದ್ವಿಕಾರಾಣಾಂ ಫೇನವೀಚೀತರಙ್ಗಬುದ್ಬುದಾದೀನಾಮ್ ಇತರೇತರವಿಭಾಗಃ ಇತರೇತರಸಂಶ್ಲೇಷಾದಿಲಕ್ಷಣಶ್ಚ ವ್ಯವಹಾರಃ ಉಪಲಭ್ಯತೇ । ನ ಚ ಸಮುದ್ರಾತ್ ಉದಕಾತ್ಮನೋಽನನ್ಯತ್ವೇಽಪಿ ತದ್ವಿಕಾರಾಣಾಂ ಫೇನತರಙ್ಗಾದೀನಾಮ್ ಇತರೇತರಭಾವಾಪತ್ತಿರ್ಭವತಿ । ನ ಚ ತೇಷಾಮ್ ಇತರೇತರಭಾವಾನಾಪತ್ತಾವಪಿ ಸಮುದ್ರಾತ್ಮನೋಽನನ್ಯತ್ವಂ ಭವತಿ । ಏವಮ್ ಇಹಾಪಿ

1. ಬ್ರಹ್ಮಕಾರಣಶ್ರುತಿಯು.
2. 'ಭೋಕ್ತ್ರಾಪತ್ತೇಃ' ಎಂಬುದಕ್ಕೆ ಇವೆರಡೂ ಅರ್ಥವು

ನ ಚ ಭೋಕ್ತೃಭೋಗ್ಯಯೋಃ ಇತರೇತರಭಾವಾಪತ್ತಿಃ, ನ ಚ ಪರಸ್ಮಾದ್ ಬ್ರಹ್ಮಣೋಽನ್ಯತ್ವಂ ಭವಿಷ್ಯತಿ। ಯದ್ಯಪಿ ಭೋಕ್ತಾ ನ ಬ್ರಹ್ಮಣೋ ವಿಕಾರಃ। "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨-೬) ಇತಿ ಸ್ರಷ್ಟುರೇವ ಅವಿಕೃತಸ್ಯ ಕಾರ್ಯಾನುಪ್ರವೇಶೇನ ಭೋಕ್ತೃತ್ವಶ್ರವಣಾತ್। ತಥಾಪಿ ಕಾರ್ಯಮ್ ಅನುಪ್ರವಿಷ್ಟಸ್ಯ ಅಸ್ತ್ಯುಪಾಧಿನಿಮಿತ್ತೋ ವಿಭಾಗಃ ಆಕಾಶಸ್ಯೇವ ಘಟಾದ್ಯುಪಾಧಿನಿಮಿತ್ತಃ ಪರಮಕಾರಣಾತ್ ಬ್ರಹ್ಮಣೋಽನನ್ಯತ್ವೇಽಪಿ ಉಪಪದ್ಯತೇ ಭೋಕ್ತ್ರಭೋಗ್ಯಲಕ್ಷಣೋ ವಿಭಾಗಃ ಸಮುದ್ರತರಙ್ಗಾದಿ ನ್ಯಾಯೇನ ಇತ್ಯುಕ್ತಮ್ ॥

(ಭಾಷ್ಯಾರ್ಥ)

ಅವನಿಗೆ ಉತ್ತರವನ್ನು ಹೇಳತಕ್ಕದ್ದೇನೆಂದರೆ: "ಲೋಕದಂತೆ ಇರಬಹುದು." ನಮ್ಮ ಪಕ್ಷದಲ್ಲಿಯೂ ಈ ವಿಭಾಗವು ಹೊಂದುತ್ತದೆ. ಏಕೆಂದರೆ ಹೀಗೆ ಲೋಕದಲ್ಲಿ ಕಂಡುಬರುತ್ತದೆ. ಹೇಗೆಂದರೆ, ನೀರಿನ ಸ್ವರೂಪವಾಗಿರುವ ಸಮುದ್ರಕ್ಕೆ ಅನ್ಯವಲ್ಲವಾದರೂ ಅದರ ವಿಕಾರಗಳಾದ ನೊರೆ, ತೆರೆ, ಅಲೆ, ಗುಳ್ಳೆ- ಮುಂತಾದವುಗಳಲ್ಲಿ ಒಂದೊಂದಕ್ಕೆ ವಿಭಾಗವೂ ಒಂದೊಂದಕ್ಕೆ ಸಂಬಂಧಪಟ್ಟಿರುವದೇ ಮುಂತಾದ ರೂಪದ ವ್ಯವಹಾರವೂ ಕಂಡುಬರುತ್ತದೆ. ನೀರಿನ ಸ್ವರೂಪವಾಗಿರುವ ಸಮುದ್ರಕ್ಕಿಂತ ಅನ್ಯವಲ್ಲದಿದ್ದರೂ ಅದರ ವಿಕಾರವಾದ ನೊರೆ, ಅಲೆ, ಮುಂತಾದವು ಒಂದು ಮತ್ತೊಂದಾಗುವವೆಂಬುದೇನೂ ಇರುವದಿಲ್ಲ. ಅವು ಒಂದು ಇನ್ನೊಂದಾಗದೆ ಇದ್ದರೂ ಸಮುದ್ರಸ್ವರೂಪಕ್ಕಿಂತ ಅನ್ಯವಾಗಿರುವದೂ ಇಲ್ಲ. (ಅಲ್ಲವೆ ?) ಇದರಂತೆ ಇಲ್ಲಿಯೂ ಭೋಕ್ತೃಭೋಗ್ಯಗಳು ಒಂದು ಮತ್ತೊಂದಾಗುವದಿಲ್ಲ. ಪರಬ್ರಹ್ಮಕ್ಕಿಂತ ಅನ್ಯವೂ ಆಗಿರುವದಿಲ್ಲ

(ಸರಿಯಾಗಿ ನೋಡಿದರೆ) ಭೋಕ್ತೃ(ವೇನೂ) ಬ್ರಹ್ಮದ ವಿಕಾರವಲ್ಲ ; ಏಕೆಂದರೆ "ಅದನ್ನು ಸೃಷ್ಟಿಸಿ ಅದೇ ಪ್ರವೇಶಮಾಡಿತು" (ತೈ. ೨-೬) ಎಂದು ಸ್ರಷ್ಟೃವಾದ ಬ್ರಹ್ಮವೇ ಯಾವ ವಿಕಾರವೂ ಇಲ್ಲದೆ ಕಾರ್ಯದಲ್ಲಿ ಒಳಹೊಕ್ಕು ಭೋಕ್ತೃವಾಗಿದೆ ಎಂದು ಶ್ರುತಿಯಲ್ಲಿದೆ. ಆದರೂ ಕಾರ್ಯದೊಳಗೆ ಹೊಕ್ಕಿರುವ (ಬ್ರಹ್ಮಕ್ಕೆ)- ಆಕಾಶಕ್ಕೆ ಗಡಿಗೆಯೇ ಮುಂತಾದ ಉಪಾಧಿಗಳ ನಿಮಿತ್ತದಿಂದಾಗಿರುವ (ವಿಭಾಗ)ದಂತೆ ಉಪಾಧಿನಿಮಿತ್ತದಿಂದಾಗಿರುವ ವಿಭಾಗವು ಉಂಟು- ಎಂಬೀ ಕಾರಣದಿಂದ ಪರಮಕಾರಣವಾದ ಬ್ರಹ್ಮಕ್ಕಿಂತ ಅನ್ಯವಲ್ಲದಿದ್ದರೂ ಭೋಕ್ತೃಭೋಗ್ಯಸ್ವರೂಪವಾದ ವಿಭಾಗವು ಸಮುದ್ರತರಂಗಾದಿನ್ಯಾಯದಿಂದ ಹೊಂದುತ್ತದೆ ಎಂದು ಹೇಳಿರುತ್ತದೆ.

## ೬. ಆರಂಭಣಾಧಿಕರಣ (ಸೂ. ೧೪-೨೦)

(ಕಾರ್ಯಕಾರಣಗಳಿಗೆ ಅನನ್ಯತ್ವವಿದೆ)

**ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ ॥ ೧೪ ॥**

೧೪. ಅವುಗಳ ಅನನ್ಯತ್ವವು ಆರಂಭಣಶಬ್ದಾದಿಗಳಿಂದ (ಸಿದ್ಧವಾಗುತ್ತದೆ).

### ಆರಂಭಣಶ್ರುತಿಯಿಂದ ಕಾರ್ಯಕಾರಣಾನನ್ಯತ್ವ

(ಭಾಷ್ಯ)

೪೩೬. ಅಭ್ಯುಪಗಮ್ಯ ಚ ಇಮಂ ವ್ಯಾವಹಾರಿಕಂ ಭೋಕ್ತೃಭೋಗ್ಯ ಲಕ್ಷಣಂ ವಿಭಾಗಂ 'ಸ್ಯಾಲ್ಲೋಕವತ್' ಇತಿ ಪರಿಹಾರೋಽಭಿಹಿತಃ । ನ ತು ಅಯಂ ವಿಭಾಗಃ ಪರಮಾರ್ಥತೋಽಸ್ತಿ । ಯಸ್ಮಾತ್ ತಯೋಃ ಕಾರ್ಯ ಕಾರಣಯೋಃ ಅನನ್ಯತ್ವಮ್ ಅವಗಮ್ಯತೇ । ಕಾರ್ಯಮ್ ಆಕಾಶಾದಿಕಂ ಬಹುಪ್ರಪಞ್ಚಂ ಜಗತ್, ಕಾರಣಂ ಪರಂ ಬ್ರಹ್ಮ । ತಸ್ಮಾತ್ ಕಾರಣಾತ್ ಪರಮಾರ್ಥತೋಽನನ್ಯತ್ವಮ್, ವ್ಯತಿರೇಕೇಣ ಅಭಾವಃ ಕಾರ್ಯಸ್ಯ ಅವ ಗಮ್ಯತೇ । ಕುತಃ ? ಆರಮ್ಭಣಶಬ್ದಾದಿಭ್ಯಃ । ಆರಮ್ಭಣಶಬ್ದಸ್ತಾವತ್ । ಏಕವಿಜ್ಞಾನೇನ ಸರ್ವವಿಜ್ಞಾನಂ ಪ್ರತಿಜ್ಞಾಯ ದೃಷ್ಟಾನ್ತಾಪೇಕ್ಷಾಯಾಮ್ ಉಚ್ಯತೇ "ಯಥಾ ಸೋಮ್ಯೈಕೇನ ಮೃತ್ಪಿಣ್ಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" (ಛಾಂ. ೬-೧-೧) ಇತಿ । ಏತದುಕ್ತಂ ಭವತಿ । ಏಕೇನ ಮೃತ್ಪಿಣ್ಡೇನ ಪರಮಾರ್ಥತೋ ಮೃದಾತ್ಮನಾ ವಿಜ್ಞಾತೇನ ಸರ್ವಂ ಮೃನ್ಮಯಂ ಘಟ ಶರಾವೋದಞ್ಚನಾದಿಕಂ ಮೃದಾತ್ಮಕತ್ವಾವಿಶೇಷಾತ್ ವಿಜ್ಞಾತಂ ಭವೇತ್ । ಯತೋ ವಾಚಾರಮ್ಭಣಂ ವಿಕಾರೋ ನಾಮಧೇಯಮ್ । ವಾಚೈವ ಕೇವಲಮ್ ಅಸ್ತೀತಿ ಆರಭ್ಯತೇ ವಿಕಾರೋ ಘಟಃ ಶರಾವಃ ಉದಞ್ಚನಂ ಚ ಇತಿ । ನ ತು ವಸ್ತುವೃತ್ತೇನ ವಿಕಾರೋ ನಾಮ ಕಶ್ಚಿತ್ ಅಸ್ತಿ । ನಾಮ ಧೇಯಮಾತ್ರಂ ಹಿ ಏತತ್ ಅನೃತಮ್, ಮೃತ್ತಿಕೇತ್ಯೇವ ಸತ್ಯಮ್ ಇತಿ । ಏಷ ಬ್ರಹ್ಮಣೋ ದೃಷ್ಟಾನ್ತಃ ಆಮ್ನಾತಃ । ತತ್ರ ಶ್ರುತಾತ್ ವಾಚಾರಮ್ಭಣ ಶಬ್ದಾತ್ ದಾರ್ಷ್ಟಾನ್ತಿಕೇಽಪಿ ಬ್ರಹ್ಮವ್ಯತಿರೇಕೇಣ ಕಾರ್ಯಜಾತಸ್ಯ ಅಭಾವಃ ಇತಿ ಗಮ್ಯತೇ । ಪುನಶ್ಚ ತೇಜೋಽಬನ್ನಾನಾಂ ಬ್ರಹ್ಮಕಾರ್ಯತಾಮ್ ಉಕ್ತ್ವಾ ತೇಜೋಽಬನ್ನಕಾರ್ಯಾಣಾಂ ತೇಜೋಽಬನ್ನವ್ಯತಿರೇಕೇಣ ಅಭಾವಂ ಬ್ರವೀತಿ–

"ಅಪಾಗಾದಗ್ನೇರಗ್ನಿತ್ವಂ ವಾಚಾರಮ್ಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಮ್" (ಛಾಂ. ೬-೪-೨) ಇತ್ಯಾದಿನಾ ॥

(ಭಾಷ್ಯಾರ್ಥ)

ಈ ವ್ಯಾವಹಾರಿಕವಾದ ಭೋಕ್ತೃಭೋಗ್ಯರೂಪವಾದ ವಿಭಾಗವನ್ನು ಒಪ್ಪಿಕೊಂಡು 'ಲೋಕದಂತೆ ಇರಬಹುದು' ಎಂಬ ಪರಿಹಾರವನ್ನು ಹೇಳಿದ್ದಾಯಿತು ಆದರೆ ಈ ವಿಭಾಗವು ಪರಮಾರ್ಥವಾಗಿ ಇರುವದಿಲ್ಲ. ಏಕೆಂದರೆ ಅವುಗಳಿಗೆ ಎಂದರೆ ಕಾರ್ಯಕಾರಣಗಳಿಗೆ ಅನನ್ಯತ್ವ(ವಿದೆ ಎಂದು) ನಿಶ್ಚಯವಾಗುತ್ತದೆ. ಕಾರ್ಯವೆಂದರೆ ಆಕಾಶವೇ ಮುಂತಾದ ಅನೇಕಪ್ರಕಾರವಾದ ಜಗತ್ತು ; ಕಾರಣವೆಂದರೆ ಪರಬ್ರಹ್ಮವು. ಆ ಕಾರಣಕ್ಕಿಂತ ಕಾರ್ಯವು ಪರಮಾರ್ಥವಾಗಿ ಅನನ್ಯವು, ಎಂದರೆ (ಅದಕ್ಕಿಂತ) ಬೇರೆಯಾಗಿ ಇಲ್ಲ ಎಂದು ನಿಶ್ಚಯವಾಗುತ್ತದೆ. ಏತರಿಂದ ? ಎಂದರೆ, ಆರಂಭಣಶಬ್ದವೇ ಮುಂತಾದವುಗಳಿಂದ.

ಮೊದಲನೆಯದಾಗಿ ಆರಂಭಣಶಬ್ದವನ್ನು (ತಿಳಿಸುತ್ತೇವೆ). ಒಂದನ್ನು ಅರಿತುಕೊಂಡದ್ದರಿಂದ ಎಲ್ಲವನ್ನೂ ಅರಿತಂತಾಗುವದೆಂದು ಪ್ರತಿಜ್ಞೆಮಾಡಿ ಅದಕ್ಕೆ ದೃಷ್ಟಾಂತವು ಬೇಕಾಗಲು "ಸೋಮ್ಯನೆ, ಹೇಗೆ ಒಂದು ಮಣ್ಣಿನ ಮುದ್ದೆಯಿಂದ ಮಣ್ಣಿನಿಂದಾದದ್ದೆಲ್ಲವೂ ಅರಿಯಲ್ಪಟ್ಟದ್ದಾಗುವದೋ, ವಿಕಾರವು ವಾಚರಂಭಣವಾದ ನಾಮಧೇಯವೋ, ಮಣ್ಣೆಂಬುದೇ ಸತ್ಯವೋ" (ಛಾಂ. ೬-೧-೧) ಎಂದು (ಶ್ರುತಿ) ಹೇಳಿರುತ್ತದೆ. (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ. **ಒಂದು ಮಣ್ಣಿನ ಮುದ್ದೆಯು ನಿಜವಾಗಿ (ಅದು) ಮಣ್ಣೇ ಎಂದು ಅರಿತುಕೊಂಡರೆ ಮಣ್ಣಿನಿಂದಾಗಿರುವ ಗಡಿಗೆ, ಶ್ರಾವೆ, ಹರವಿ – ಮುಂತಾದದ್ದೆಲ್ಲವೂ ಮಣ್ಣಿನದೆಂದು ಸಮಾನವಾಗಿರುವದರಿಂದ ಅರಿಯಲ್ಪಟ್ಟದ್ದಾಗುತ್ತದೆ. ಏಕೆಂದರೆ ವಿಕಾರವು ವಾಚಾರಂಭಣವಾದ ನಾಮಧೇಯವಾಗಿದೆ. ಇದೆ ಎಂಬ ಬರಿಯ ವಾಕ್ಕಿನಿಂದಲೇ ಗಡಿಗೆ, ಶ್ರಾವೆ, ಹರವಿ ಎಂಬ ವಿಕಾರವು ಉಂಟಾಗಿರುತ್ತದೆಯೇ ಹೊರತು ನಿಜವಾಗಿ ವಸ್ತುಸ್ವಭಾವದಿಂದ ವಿಕಾರವೆಂಬುದು ಯಾವದೂ ಇರುವದಿಲ್ಲ ; ಏಕೆಂದರೆ ಅದು ಬರಿಯ ನಾಮಧೇಯವಾಗಿರುತ್ತದೆ, ಅನೃತವಾಗಿರುತ್ತದೆ, ಮಣ್ಣೆಂಬುದೇ ಸತ್ಯವು.** ಇದು ಬ್ರಹ್ಮಕ್ಕೆ ಹೇಳಿರುವ ದೃಷ್ಟಾಂತವು. ಅದರಲ್ಲಿ ಶ್ರುತಿಯು ಹೇಳಿರುವ ವಾಚಾರಂಭಣಶಬ್ದದಿಂದ ದಾರ್ಷ್ಟಾಂತಿಕದಲ್ಲಿಯೂ ಬ್ರಹ್ಮಕ್ಕಿಂತ ಬೇರೆಯಾಗಿ ಕಾರ್ಯಸಮೂಹವು ಇರುವದಿಲ್ಲ ಎಂದು ನಿಶ್ಚಯವಾಗುತ್ತದೆ. ಮತ್ತೆ ತೇಜೋಽಬನ್ನಗಳ ಕಾರ್ಯಗಳೂ ತೇಜೋಽಬನ್ನ

ಗಳಿಗಿಂತ ಬೇರೆಯಾಗಿಲ್ಲವೆಂದು "ಅಗ್ನಿಯ ಅಗ್ನಿತ್ವವು ಹೊರಟು ಹೋಯಿತು ; ವಿಕಾರವು ವಾಚಾರಂಭಣವಾದ ನಾಮಧೇಯವು. ಮೂರು ರೂಪಗಳೆಂಬುದೇ ಸತ್ಯವು" (ಛಾಂ. ೬-೪-೧) ಮುಂತಾದ (ವಾಕ್ಯದಿಂದ) ಹೇಳಿರುತ್ತದೆ.

## ಆತ್ಮೈಕತ್ವವಚನಗಳಿಂದಲೂ ಕಾರ್ಯಕಾರಣಾನನ್ಯತ್ವ

(ಭಾಷ್ಯ)

೪೩೪. ಆರಮ್ಭಣಶಬ್ದಾದಿಭ್ಯಃ ಇತಿ ಆದಿಶಬ್ದಾತ್ "ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ" (ಛಾಂ. ೬-೮-೭) "ಇದಂ ಸರ್ವಂ ಯದಯಮಾತ್ಮಾ" "(ಬೃ. ೨-೪-೬), "ಬ್ರಹ್ಮೈವೇದಂ ಸರ್ವಮ್" (?)[1] "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ನೇಹ ನಾನಾಸ್ತಿ ಕಿಂಚನ" (ಬೃ. ೪-೪-೧೯) ಇತ್ಯೇವಮಾದ್ಯಪಿ ಆತ್ಮೈಕತ್ವಪ್ರತಿಪಾದನಪರಂ ವಚನಜಾತಮ್ ಉದಾಹರ್ತವ್ಯಮ್ । ನ ಚ ಅನ್ಯಥಾ ಏಕವಿಜ್ಞಾನೇನ ಸರ್ವವಿಜ್ಞಾನಂ ಸಂಪದ್ಯತೇ । ತಸ್ಮಾತ್ ಯಥಾ ಘಟಕರಕಾದ್ಯಾಕಾಶಾನಾಂ ಮಹಾಕಾಶಾನನ್ಯತ್ವಮ್, ಯಥಾ ಚ ಮೃಗತೃಷ್ಣಿಕೋದಕಾದೀನಾಮ್ ಊಷರಾದಿಭ್ಯೋಽನನ್ಯತ್ವಮ್ । ದೃಷ್ಟನಷ್ಟಸ್ವರೂಪತ್ವಾತ್, ಸ್ವರೂಪೇಣಾನುಪಾಖ್ಯತ್ವಾತ್, ಏವಮ್ ಅಸ್ಯ ಭೋಕ್ತ್ರಾದಿಪ್ರಪಞ್ಚಜಾತಸ್ಯ ಬ್ರಹ್ಮವ್ಯತಿರೇಕೇಣ ಅಭಾವಃ ಇತಿ ದ್ರಷ್ಟವ್ಯಮ್ ॥

(ಭಾಷ್ಯಾರ್ಥ)

'ಆರಂಭಣಶಬ್ದವೇ ಮುಂತಾದವುಗಳಿಂದ' ಎಂಬಲ್ಲಿ 'ಮುಂತಾದ' ಎಂಬ ಶಬ್ದದಿಂದ "ಇದೆಲ್ಲವೂ ಈ (ಸತ್ತನ್ನೇ) ಆತ್ಮವಾಗುಳ್ಳದ್ದು ಅದೇ ಸತ್ಯವು, ಅದೇ ಆತ್ಮನು, ಅದೇ ನೀನಾಗಿರುವೆ" (ಛಾಂ. ೬-೮-೭) "ಇದೆಲ್ಲವೂ ಈ ಆತ್ಮನೆಂಬುದೇ" (ಬೃ. ೨-೪-೬), "ಇದೆಲ್ಲವೂ ಬ್ರಹ್ಮವೇ" (?), "ಇದೆಲ್ಲವೂ ಆತ್ಮನೇ" (ಛಾಂ ೭-೨೫-೨), "ಇಲ್ಲಿ ಸ್ವಲ್ಪವೂ ನಾನಾತ್ವವಿರುವದಿಲ್ಲ" (ಬೃ. ೪-೪-೧೯)- ಇಂತಿವೇ ಮುಂತಾದ ಆತ್ಮೈಕತ್ವವನ್ನು ತಿಳಿಸುವದರಲ್ಲಿ ತಾತ್ಪರ್ಯವುಳ್ಳ ವಚನಸಮೂಹವನ್ನು ಉದಾಹರಿಸಬೇಕು. ಹೀಗಲ್ಲದೆ ಹೋದರೆ[2] ಒಂದನ್ನು ಅರಿತುಕೊಂಡರೆ ಎಲ್ಲದರ ಅರಿವೂ ಉಂಟಾಗಲಾರದು.

---

1. ಈ ಶ್ರುತಿಯನ್ನು ೧-೪-೨೨ರ ಭಾಷ್ಯದಲ್ಲಿಯೂ ಉದಾಹರಿಸಿವೆ ; ಭಾ. ಭಾ. ೩೪೪ರ ಕೆಳಗಿನ ಟಿಪ್ಪಣಿಯನ್ನು ನೋಡಿರಿ.

2. ಕಾರ್ಯವು ಕಾರಣಕ್ಕಿಂತ ಅನನ್ಯವೆಂಬುದಿಲ್ಲದಿದ್ದರೆ.

ಆದ್ದರಿಂದ ಹೇಗೆ ಗಡಿಗೆ, ಕುಡಿಕೆ –ಮುಂತಾದವುಗಳ ಆಕಾಶವು ಮಹಾಕಾಶಕ್ಕಿಂತ ಅನ್ಯವಲ್ಲವೋ ಮತ್ತು ಹೇಗೆ ಬಿಸಿಲುಕುದುರೆಯ ನೀರೇ ಮುಂತಾದವುಗಳು ತೋರಿಹಾರುವ ಸ್ವರೂಪದವಾಗಿರುವದರಿಂದಲೂ ತಮ್ಮ ಸ್ವರೂಪದಿಂದ **ಅನುಪಾಖ್ಯ**[1]ವಾಗಿರುವದರಿಂದಲೂ ಚೌಳುನೆಲವೇ ಮುಂತಾದವುಗಳಿಗಿಂತ ಅನ್ಯವಲ್ಲವೋ ಹಾಗೆಯೇ ಈ ಭೋಗ್ಯ, ಭೋಕ್ತೃ– ಮುಂತಾದ ಪ್ರಪಂಚಸಮೂಹವು ಬ್ರಹ್ಮಕ್ಕಿಂತ ಬೇರೆಯಾಗಿ ಇರುವದಿಲ್ಲ ಎಂದು ತಿಳಿಯಬೇಕು.

## ಏಕಾನೇಕಾತ್ಮಕಬ್ರಹ್ಮವಾದದ ಖಂಡನೆ

(ಭಾಷ್ಯ)

೪೩೫. ನನು ಅನೇಕಾತ್ಮಕಂ ಬ್ರಹ್ಮ । ಯಥಾ ವೃಕ್ಷಃ ಅನೇಕಶಾಖಃ ಏವಮ್ ಅನೇಕಶಕ್ತಿಪ್ರವೃತ್ತಿಯುಕ್ತಂ ಬ್ರಹ್ಮ । ಅತಃ ಏಕತ್ವಂ ನಾನಾತ್ವಂ ಚ ಉಭಯಮಪಿ ಸತ್ಯಮೇವ । ಯಥಾ ವೃಕ್ಷ ಇತಿ ಏಕತ್ವಮ್, ಶಾಖಾ ಇತಿ ನಾನಾತ್ವಮ್ । ಯಥಾ ಚ ಸಮುದ್ರಾತ್ಮನಾ ಏಕತ್ವಮ್, ಫೇನತರಙ್ಗಾದ್ಯಾತ್ಮನಾ ನಾನಾತ್ವಮ್ । ಯಥಾ ಚ ಮೃದಾತ್ಮನಾ ಏಕತ್ವಮ್, ಘಟಶರಾವಾದ್ಯಾತ್ಮನಾ ನಾನಾತ್ವಮ್ । ತತ್ರ ಏಕತ್ವಾಂಶೇನ ಜ್ಞಾನಾತ್ ಮೋಕ್ಷವ್ಯವಹಾರಃ ಸೇತ್ಸ್ಯತಿ । ನಾನಾತ್ವಾಂಶೇನ ತು ಕರ್ಮಕಾಣ್ಡಾಶ್ರಯೌ ಲೌಕಿಕವೈದಿಕವ್ಯವಹಾರೌ ಸೇತ್ಸ್ಯತಃ ಇತಿ । ಏವಂ ಚ ಮೃದಾದಿದೃಷ್ಟಾನ್ತಾ ಅನುರೂಪಾ ಭವಿಷ್ಯನ್ತಿ ಇತಿ । ನೈವಂ ಸ್ಯಾತ್ । "ಮೃತ್ತಿಕೇತ್ಯೇವ ಸತ್ಯಮ್" (ಛಾಂ. ೬-೧-೪) ಇತಿ ಪ್ರಕೃತಿಮಾತ್ರಸ್ಯ ದೃಷ್ಟಾನ್ತೇ ಸತ್ಯತ್ವಾವಧಾರಣಾತ್ । ವಾಚಾರಮ್ಭಣಶಬ್ದೇನ ಚ ವಿಕಾರಜಾತಸ್ಯ ಅನೃತತ್ವಾಭಿಧಾನಾತ್ । ದಾರ್ಷ್ಟಾನ್ತಿಕೇಽಪಿ "ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಮ್" (ಛಾಂ ೬-೮-೭) ಇತಿ ಚ ಪರಮಕಾರಣಸ್ಯೈವ ಏಕಸ್ಯ ಸತ್ಯತ್ವಾವಧಾರಣಾತ್ । "ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" (ಛಾಂ. ೬-೮-೭) ಇತಿ ಚ ಶಾರೀರಸ್ಯ ಬ್ರಹ್ಮಭಾವೋಪದೇಶಾತ್ । ಸ್ವಯಂಪ್ರಸಿದ್ಧಂ ಹಿ ಏತತ್ ಶಾರೀರಸ್ಯ ಬ್ರಹ್ಮಾತ್ಮತ್ವಮ್ ಉಪದಿಶ್ಯತೇ, ನ ಯತ್ನಾನ್ತರಪ್ರಸಾಧ್ಯಮ್ । ಅತಶ್ಚ ಇದಂ ಶಾಸ್ತ್ರೀಯಂ ಬ್ರಹ್ಮಾತ್ಮತ್ವಮ್ ಅವಗಮ್ಯಮಾನಂ ಸ್ವಾಭಾವಿಕಸ್ಯ ಶಾರೀರಾತ್ಮತ್ವಸ್ಯ ಬಾಧಕಂ ಸಂಪದ್ಯತೇ ರಜ್ಜ್ವಾದಿಬುದ್ಧಯ ಇವ ಸರ್ಪಾದಿಬುದ್ಧೀನಾಮ್ । ಬಾಧಿತೇ ಚ ಶಾರೀರಾತ್ಮತ್ವೇ ತದಾಶ್ರಯಃ ಸಮಸ್ತಃ ಸ್ವಾಭಾವಿಕೋ ವ್ಯವಹಾರೋ ಬಾಧಿತೋ ಭವತಿ ಯತ್ಪ್ರಸಿದ್ಧಯೇ ನಾನಾತ್ವಾಂಶೋಽಪರೋ ಬ್ರಹ್ಮಣಃ ಕಲ್ಪ್ಯೇತ ।

1. ಯಾವ ಶಬ್ದದಿಂದಲೂ ಹೇಳುವದಕ್ಕೆ ಬಾರದ ಸ್ವರೂಪವಾಗಿರುತ್ತವೆ.

ದರ್ಶಯತಿ ಚ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿನಾ ಬ್ರಹ್ಮಾತ್ಮತ್ವದರ್ಶಿನಂ ಪ್ರತಿ ಸಮಸ್ತಸ್ಯ ಕ್ರಿಯಾಕಾರಕಫಲಲಕ್ಷಣಸ್ಯ ವ್ಯವಹಾರಸ್ಯ ಅಭಾವಮ್ | ನ ಚ ಅಯಂ ವ್ಯವಹಾರಾಭಾವಃ ಅವಸ್ಥಾವಿಶೇಷನಿಬದ್ಧೋಽಭಿಧೀಯತೇ ಇತಿ ಯುಕ್ತಂ ವಕ್ತುಮ್ | "ತತ್ತ್ವಮಸಿ" ಇತಿ ಬ್ರಹ್ಮಾತ್ಮಭಾವಸ್ಯ ಅನವಸ್ಥಾ ವಿಶೇಷನಿಬನ್ಧನತ್ವಾತ್ | ತಸ್ಕರದೃಷ್ಟಾನ್ತೇನ ಚ ಅನೃತಾಭಿಸನ್ಧಸ್ಯ ಬನ್ಧನಂ ಸತ್ಯಾಭಿಸನ್ಧಸ್ಯ ಚ ಮೋಕ್ಷಂ ದರ್ಶಯನ್ ಏಕತ್ವಮೇವ ಏಕಂ ಪಾರ ಮಾರ್ಥಿಕಂ ದರ್ಶಯತಿ | ಮಿಥ್ಯಾಜ್ಞಾನವಿಜೃಮ್ಭಿತಂ ಚ ನಾನಾತ್ವಮ್ | ಉಭಯಸತ್ಯತಾಯಾಂ ಹಿ ಕಥಂ ವ್ಯವಹಾರಗೋಚರೋಽಪಿ ಜನ್ತುಃ ಅನೃತಾಭಿಸನ್ಧಃ ಇತ್ಯುಚ್ಯೇತ ? "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಬೃ. ೪-೪-೧೯) ಇತಿ ಚ ಭೇದದೃಷ್ಟಿಮ್ ಅಪವದ ನ್ನೇವ ಏತದ್ ದರ್ಶಯತಿ | ನ ಚ ಅಸ್ಮಿನ್ ದರ್ಶನೇ ಜ್ಞಾನಾತ್ ಮೋಕ್ಷಃ ಇತಿ ಉಪಪದ್ಯತೇ, ಸಮ್ಯಗ್ಜ್ಞಾನಾಪನೋದ್ಯಸ್ಯ ಕಸ್ಯಚಿತ್ ಮಿಥ್ಯಾ ಜ್ಞಾನಸ್ಯ ಸಂಸಾರಕಾರಣತ್ವೇನ ಅನಭ್ಯುಪಗಮಾತ್ | ಉಭಯಸತ್ಯ ತಾಯಾಂ ಹಿ ಕಥಮ್ ಏಕತ್ವಜ್ಞಾನೇನ ನಾನಾತ್ವಜ್ಞಾನಮ್ ಅಪನುದ್ಯತೇ ಇತ್ಯುಚ್ಯತೇ ?

(ಭಾಷ್ಯಾರ್ಥ)

(ಆಕ್ಷೇಪ):— ಬ್ರಹ್ಮವು ಅನೇಕಾತ್ಮಕವಾಗಿದೆ.[1] ಹೇಗೆ ಮರವು ಅನೇಕ ಶಾಖೆಗಳುಳ್ಳದಾಗಿರುವದೋ ಹಾಗೆ ಬ್ರಹ್ಮವು ಅನೇಕ ಶಕ್ತಿಗಳೂ ಪ್ರವೃತ್ತಿಗಳೂ ಉಳ್ಳದ್ದಾಗಿರುತ್ತದೆ.[2] ಆದ್ದರಿಂದ ಏಕತ್ವವೂ ನಾನಾತ್ವವೂ ಎರಡೂ ಸತ್ಯವೇ. ಹೇಗೆ (ಒಂದೇ ವಸ್ತುವು) ಮರವಾಗಿ ಒಂದಾಗಿರುವದೋ ಕೊಂಬೆಗಳಿಂದಾಗಿ ಅನೇಕವಾಗಿರುವದೋ, ಹೇಗೆ ಸಮುದ್ರವಾಗಿ ಒಂದಾ ಗಿರುವದೋ ನೊರೆತೆರೆ ಮುಂತಾದವುಗಳಾಗಿ ಅನೇಕವಾಗಿರುವದೋ, ಮತ್ತು ಹೇಗೆ ಮಣ್ಣಾಗಿ ಒಂದಾಗಿರುವದೋ ಗಡಿಗೆ ಶ್ರಾವೆ ಮುಂತಾದದ್ದಾಗಿ ಅನೇಕವಾಗಿರುವದೋ (ಹಾಗೆ ಒಂದೂ ಅನೇಕವೂ ಎರಡೂ ಸತ್ಯವಾಗಿರ ಬಹುದು). **ಇವುಗಳಲ್ಲಿ ಒಂದೆಂಬ ಅಂಶದಿಂದ ಜ್ಞಾನದಿಂದ ಮೋಕ್ಷ**

---

1. ಇದು ಭರ್ತೃಪ್ರಪಂಚರೇ ಮುಂತಾದ ಭೇದಾಭೇದವಾದಿಗಳ ಮತವು ಪೀಠಿಕೆಯನ್ನು ನೋಡಿ.

2. ಅವಯವಿ, ಅಂಶಿ, ಕಾರಣ – ಮುಂತಾದ ರೂಪಗಳಿಂದ ಏಕತ್ವವೂ ಅವಯವಗಳು, ಅಂಶಗಳು, ಕಾರ್ಯಗಳು ಮುಂತಾದ ರೂಪಗಳಿಂದ ನಾನಾತ್ವವೂ ಸಿದ್ಧವಾಗುವವು ಎಂದು ಉದಾಹರಣೆಗಳಿಂದ ತಿಳಿಯತಕ್ಕದ್ದು.

ವೆಂಬ ವ್ಯವಹಾರವು ಸಿದ್ಧವಾಗುವದು; ಅನೇಕವೆಂಬ ಅಂಶದಿಂದಲೋ ಎಂದರೆ ಕರ್ಮಕಾಂಡವನ್ನು ಆಶ್ರಯಿಸುವ ಲೌಕಿಕವೈದಿಕವ್ಯವಹಾರ ಗಳು ಸಿದ್ಧಿಸುವವು. ಹೀಗಾದರೆ ಮಣ್ಣು ಮುಂತಾದ ದೃಷ್ಟಾಂತ ಗಳೂ[1] ಅನುರೂಪವಾಗಿರುವವಲ್ಲ!

(ಪರಿಹಾರ) :— ಹೀಗಾಗಲಾರದು. ಏಕೆಂದರೆ "ಮಣ್ಣೆಂಬುದೇ ಸತ್ಯವು" (ಛಾಂ. ೬-೧-೧) ಎಂದು ದೃಷ್ಟಾಂತದಲ್ಲಿ ಪ್ರಕೃತಿಯೊಂದನ್ನೇ ಸತ್ಯವೆಂದು ಒತ್ತಿ ಹೇಳಿರುತ್ತದೆ. 'ವಾಚಾರಂಭಣ'ವೆಂಬ ಶಬ್ದದಿಂದ ವಿಕಾರಸಮೂಹವೆಲ್ಲವೂ ಅನೃತವೆಂದೂ ಹೇಳಿದೆ. ದಾರ್ಷ್ಟಾಂತಿಕದಲ್ಲಿಯೂ "ಇದೆಲ್ಲವೂ ಈ (ಸತ್ತನ್ನು) ಆತ್ಮನಾಗುಳ್ಳದ್ದು, ಅದೇ ಸತ್ಯವು" (ಛಾಂ. ೬-೮-೭) ಎಂದು ಪರಮಕಾರಣವೊಂದನ್ನೇ ಸತ್ಯವೆಂದೂ ಒತ್ತಿ ಹೇಳಿದೆ. "ಅದೇ ಆತ್ಮನು, ಶ್ವೇತಕೇತುವೆ, ಅದೇ ನೀನಾಗಿರುವೆ" (ಛಾಂ. ೬-೮-೭) ಎಂದು ಶಾರೀರನಿಗೆ ಬ್ರಹ್ಮಭಾವವನ್ನು ಉಪದೇಶ ಮಾಡಿರುತ್ತದೆ. ಶಾರೀರನಿಗೆ ತಾನೇ ಸಿದ್ಧವಾಗಿರುವ ಈ ಬ್ರಹ್ಮಾತ್ಮತ್ವ ವನ್ನು ಉಪದೇಶಮಾಡಿದೆಯೋ ಹೊರತು ಮತ್ತೊಂದು ಪ್ರಯತ್ನದಿಂದ[2] ಸಾಧಿಸಿಕೊಳ್ಳಬೇಕಾದದ್ದನ್ನು (ಹೇಳಿ)ಲ್ಲ. ಆದ್ದರಿಂದ ಈ ಶಾಸ್ತ್ರೀಯವಾದ ಬ್ರಹ್ಮಾತ್ಮತ್ವವನ್ನು ಅರಿತು ಕೊಂಡರೆ (ಇದು) ಸ್ವಾಭಾವಿಕವಾಗಿರುವ[3] ಶಾರೀರಾತ್ಮತ್ವಕ್ಕೆ, ಹಗ್ಗದ ಬುದ್ಧಿಯೇ ಮುಂತಾದವುಗಳು ಹಾವಿನ ಬುದ್ಧಿಯೇ ಮುಂತಾದವು ಗಳು (ಬಾಧಕವಾಗುವಂತೆ), ಬಾಧಕವಾಗುತ್ತವೆ. ಶಾರೀರಾತ್ಮತ್ವವು ಬಾಧಿತವಾದರೆ ಅದನ್ನು ಆಶ್ರಯಿಸಿಕೊಂಡಿರುವ ಸ್ವಾಭಾವಿಕವಾದ ವ್ಯವಹಾರವೆಲ್ಲವೂ ಬಾಧಿತವಾಗಿಬಿಡುತ್ತದೆ. ಆ (ವ್ಯವಹಾರದ) ಸಿದ್ಧಿಗಾಗಿಯಲ್ಲವೆ, ಬ್ರಹ್ಮಕ್ಕೆ ನಾನಾತ್ಮವೆಂಬ ಮತ್ತೊಂದು ಅಂಶ ವನ್ನು (ನೀವು) ಕಲ್ಪಿಸಬೇಕಾಗಿರುವದು?

---

1. ಈ ಶ್ರುತ್ಯುಕ್ತದೃಷ್ಟಾಂತಗಳಲ್ಲಿಯೂ ಏಕತ್ವನಾನಾತ್ವಗಳು ಕಾಣಬರುತ್ತವೆ ಎಂದು ಅಭಿಪ್ರಾಯ. ಭೇದವನ್ನು ತಿರಸ್ಕರಿಸಿ ಬರಿಯ ಅಭೇದವನ್ನು ಅಥವಾ ಅಭೇದ ವನ್ನು ತಿರಸ್ಕರಿಸಿ ಬರಿಯ ಭೇದವನ್ನು ಒಪ್ಪಿದರೆ ಶ್ರುತಿಯನ್ನು ಪೂರ್ಣವಾಗಿ ಗ್ರಹಿಸಿದಂತೆ ಆಗುವದಿಲ್ಲ - ಎಂಬ ಭಾವವು ಈ ವಾದದಲ್ಲಿ ಅಡಕವಾಗಿರುತ್ತದೆ.

2. ಕರ್ಮಾದಿಗಳಿಂದ ಎಂದರ್ಥ. ಬ್ರಹ್ಮಾತ್ಮತ್ವವು ಸಾಧ್ಯವಾದರಲ್ಲವೆ, ಕರ್ಮಾದಿಸಾಧನಗಳೂ ಬೇಕೆಂಬ ವಾದವು ಹುಟ್ಟುವದು?

3. ಅವಿಚಾರದಶೆಯಲ್ಲಿ ಅವಿದ್ಯಾಸ್ವಭಾವದಿಂದ ತಿಳಿಯಬರುವ.

"ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಯಾರನ್ನು ಕಂಡಾನು ?" (ಬೃ. ೪-೫-೧೫) ಎಂದು ಮುಂತಾಗಿರುವ ವಾಕ್ಯ ದಿಂದ ಬ್ರಹ್ಮಾತ್ಮತ್ವವನ್ನು ಕಂಡುಕೊಂಡವನಿಗೆ ಯಾವ ಕ್ರಿಯಾಕಾರಕಫಲ ರೂಪವಾದ ವ್ಯವಹಾರವೂ ಇರುವದಿಲ್ಲವೆಂದು (ಶ್ರುತಿಯು) ತಿಳಿಸುತ್ತಿದೆ. **ಈ ವ್ಯವಹಾರಾಭಾವವು ಒಂದಾನೊಂದು ಅವಸ್ಥೆಯ ನಿಮಿತ್ತವಾಗಿ ಹೇಳಿರುತ್ತದೆ ಎಂದು ಹೇಳುವದು ಸರಿಯಲ್ಲ; ಏಕೆಂದರೆ "ಅದು ನೀನಾಗಿರುವೆ" (ಛಾಂ. ೬-೮-೭) ಎಂಬ ಬ್ರಹ್ಮಾತ್ಮಭಾವವು ಯಾವ ದೊಂದು ಅವಸ್ಥೆಯ ನಿಮಿತ್ತದಿಂದಲೂ ಆಗಿರುವದಲ್ಲ.** ಕಳ್ಳನ ದೃಷ್ಟಾಂತದಿಂದ ಅನೃತದಲ್ಲಿ ಅಭಿಪ್ರಾಯವುಳ್ಳವನಿಗೆ ಬಂಧವನ್ನೂ ಸತ್ಯದಲ್ಲಿ ಅಭಿಪ್ರಾಯವುಳ್ಳವನಿಗೆ ಮೋಕ್ಷವನ್ನೂ ತಿಳಿಸುವ (ವೇದವು ಛಾಂ. ೬-೧೬) ಏಕತ್ವವೊಂದೇ ಪರಮಾರ್ಥವೆಂದೂ ಅನೇಕತ್ವವು ಮಿಥ್ಯಾಜ್ಞಾನದಿಂದ ಹರಡಿ ಕೊಂಡಿರುವದೆಂದೂ ತಿಳಿಸುತ್ತದೆ (ಎನ್ನಬೇಕು). ಏಕೆಂದರೆ ಎರಡೂ ಸತ್ಯ ವಾಗಿದ್ದರೆ ವ್ಯವಹಾರವಿಷಯದಲ್ಲಿರುವವನಾದರೂ ಜೀವನು ಅನೃತಾಭಿಸಂಧನು ಎಂದು ಹೇಗೆತಾನೆ ಹೇಳಬಹುದು[1] ? "ಯಾವನು ಇಲ್ಲಿ ನಾನಾತ್ವವಿರುವಂತೆ ತಿಳಿಯುತ್ತಾನೋ ಅವನು ಸಾವಿನಮೇಲೆ ಸಾವನ್ನು ಹೊಂದುತ್ತಿರುತ್ತಾನೆ" (ಬೃ ೪-೪-೧೯) ಎಂದು ಭೇದದೃಷ್ಟಿಯನ್ನು ನಿಂದಿಸುವದರಿಂದಲೂ (ವೇದವು) ಇದನ್ನೇ ತಿಳಿಸುತ್ತದೆ.

ಈ (ಏಕಾನೇಕಾತ್ಮಕಬ್ರಹ್ಮ)ದರ್ಶನದಲ್ಲಿ ಜ್ಞಾನದಿಂದ ಮೋಕ್ಷವೆಂಬುದು ಹೊಂದುವದೂ ಇಲ್ಲ. ಏಕೆಂದರೆ ಸಮ್ಯಗ್ಜ್ಞಾನದಿಂದ ತೊಲಗಿಸಬೇಕಾಗಿ ರುವ ಯಾವ ಮಿಥ್ಯಾಜ್ಞಾನವನ್ನೂ ಸಂಸಾರಕ್ಕೆ ಕಾರಣವೆಂದು (ಈ ದರ್ಶನ ದಲ್ಲಿ) ಒಪ್ಪಿರುವದಿಲ್ಲ. ಏಕೆಂದರೆ ಎರಡೂ ಸತ್ಯವಾಗಿದ್ದರೆ ಏಕತ್ವಜ್ಞಾನದಿಂದ ನಾನಾತ್ವಜ್ಞಾನವು ತೊಲಗುವದೆಂದು ಹೇಗೆತಾನೆ ಹೇಳಲಾದೀತು ?

## ಏಕತ್ವದರ್ಶನದಲ್ಲಿ ಶಾಸ್ತ್ರಪ್ರಮಾಣಗಳಿಗೆ ಗತಿ

(ಭಾಷ್ಯ)

೪೩೬. ನನು ಏಕತ್ವೈಕಾನ್ತ್ಯಾಭ್ಯುಪಗಮೇ ನಾನಾತ್ವಾಭಾವಾತ್ ಪ್ರತ್ಯಕ್ಷಾದೀನಿ ಲೌಕಿಕಾನಿ ಪ್ರಮಾಣಾನಿ ವ್ಯಾಹನ್ಯೇರನ್ । ನಿರ್ವಿಷಯತ್ವಾತ್ ಸ್ಥಾಣ್ವಾದಿಷ್ವಿವ ಪುರುಷಾದಿಜ್ಞಾನಾನಿ। ತಥಾ ವಿಧಿಪ್ರತಿಷೇಧಶಾಸ್ತ್ರಮಪಿ ಭೇದಾ ಪೇಕ್ಷತ್ವಾತ್ ತದಭಾವೇ ವ್ಯಾಹನ್ಯೇತ । ಮೋಕ್ಷಶಾಸ್ತ್ರಸ್ಯಾಪಿ ಶಿಷ್ಯಶಾಸಿತ್ರಾದಿ ಭೇದಾಪೇಕ್ಷತ್ವಾತ್ ತದಭಾವೇ ವ್ಯಾಘಾತಃ ಸ್ಯಾತ್ । ಕಥಂ ಚಾನೃತೇನ

---

1. ವ್ಯವಹಾರವೂ ಸತ್ಯವಾಗಿರುವಲ್ಲಿ ಅದನ್ನು ನಂಬಿರುವವನು ಅನೃತಾಭಿಸಂಧನ ಎನ್ನುವದು ಯುಕ್ತವಾಗುವದಿಲ್ಲ ಎಂದರ್ಥ.

ಮೋಕ್ಷಶಾಸ್ತ್ರೇಣ ಪ್ರತಿಪಾದಿತಸ್ಯ ಆತ್ಮೈಕತ್ವಸ್ಯ ಸತ್ಯತ್ವಮ್ ಉಪಪದ್ಯೇತ ? ಇತಿ | ಅತ್ರೋಚ್ಯತೇ | ನೈಷ ದೋಷಃ | ಸರ್ವವ್ಯವಹಾರಾಣಾಮೇವ ಪ್ರಾಗ್ ಬ್ರಹ್ಮಾತ್ಮತಾವಿಜ್ಞಾನಾತ್ ಸತ್ಯತ್ವೋಪಪತ್ತೇಃ | ಸ್ವಪ್ನವ್ಯವಹಾರಸ್ಯೇವ ಪ್ರಾಕ್ ಪ್ರಬೋಧಾತ್ | ಯಾವದ್ ಹಿ ನ ಸತ್ಯಾತ್ಮೈಕತ್ವಪ್ರತಿಪತ್ತಿಃ ತಾವತ್ ಪ್ರಮಾಣಪ್ರಮೇಯಫಲಲಕ್ಷಣೇಷು ವಿಕಾರೇಷು ಅನೃತತ್ವಬುದ್ಧಿಃ ನ ಕಸ್ಯಚಿತ್ ಉತ್ಪದ್ಯತೇ | ವಿಕಾರಾನೇವ ತು 'ಅಹಂ' 'ಮಮ' ಇತಿ ಅವಿದ್ಯಯಾ ಆತ್ಮಾತ್ಮೀಯೇನ ಭಾವೇನ ಸರ್ವೋ ಜನ್ತುಃ ಪ್ರತಿಪದ್ಯತೇ ಸ್ವಾಭಾವಿಕೀಂ ಬ್ರಹ್ಮಾತ್ಮತಾಂ ಹಿತ್ವಾ | ತಸ್ಮಾತ್ ಪ್ರಾಗ್ ಬ್ರಹ್ಮಾತ್ಮತಾಪ್ರತಿಬೋಧಾತ್ ಉಪಪನ್ನಃ ಸರ್ವೋ ಲೌಕಿಕೋ ವೈದಿಕಶ್ಚ ವ್ಯವಹಾರಃ | ಯಥಾ ಸುಪ್ತಸ್ಯ ಪ್ರಾಕೃತಸ್ಯ ಜನಸ್ಯ ಸ್ವಪ್ನೇ ಉಚ್ಚಾವಚಾನ್ ಭಾವಾನ್ ಪಶ್ಯತಃ ನಿಶ್ಚಿತಮೇವ ಪ್ರತ್ಯಕ್ಷಾಭಿಮತಂ ವಿಜ್ಞಾನಂ ಭವತಿ ಪ್ರಾಕ್ ಪ್ರಬೋಧಾತ್ | ನ ಚ ಪ್ರತ್ಯಕ್ಷಾಭಾಸಾಭಿಪ್ರಾಯಃ ತತ್ಕಾಲೇ ಭವತಿ ತದ್ವತ್ ||

( ಭಾಷ್ಯಾರ್ಥ )

(ಆಕ್ಷೇಪ) :– ಏಕತ್ವವನ್ನೇ ನಿಯಮದಿಂದ ಒಪ್ಪಿದರೆ ನಾನಾತ್ವವು ಇರುವದಿಲ್ಲವಾದ್ದರಿಂದ ಪ್ರತ್ಯಕ್ಷವೇ ಮುಂತಾದ ಲೌಕಿಕಪ್ರಮಾಣಗಳು, ಮೋಟುಮರವೇ ಮುಂತಾದವುಗಳಲ್ಲಿ ಮನುಷ್ಯನೆಂದು ಮುಂತಾಗಿ ಆಗುವ ಜ್ಞಾನಗಳಂತೆ, ಬಾಧಿತವಾಗಬೇಕಾಗುವದು. ಏಕೆಂದರೆ (ಈ ಪಕ್ಷದಲ್ಲಿ) ಅವಕ್ಕೆ ವಿಷಯವಿರುವದಿಲ್ಲ. ಇದರಂತೆ ವಿಧಿಪ್ರತಿಷೇಧಶಾಸ್ತ್ರವುಕೂಡ ಭೇದಾಪೇಕ್ಷವಾಗಿರುವದರಿಂದ ಆ (ಭೇದ)ವಿಲ್ಲದಿದ್ದರೆ ಬಾಧಿತವಾಗಬೇಕಾಗುವದು. ಮೋಕ್ಷಶಾಸ್ತ್ರವುಕೂಡ ಶಿಷ್ಯ, ಕಲಿಸುವ (ಗುರು) ಮುಂತಾದ ಭೇದವನ್ನೇ ಅಪೇಕ್ಷಿಸುವದರಿಂದ ಅದಿಲ್ಲವಾದರೆ ಬಾಧಿತವಾಗುವದು. ಮತ್ತು ಅನೃತವಾದ ಮೋಕ್ಷಶಾಸ್ತ್ರವು ಪ್ರತಿಪಾದಿಸುವ ಆತ್ಮೈಕತ್ವವು ಸತ್ಯವೆಂಬುದು ಹೇಗೆ ತಾನೆ ಯುಕ್ತವಾದೀತು ?

(ಸಮಾಧಾನ) :– ಇದಕ್ಕೆ (ಪರಿಹಾರವನ್ನು) ಹೇಳುತ್ತೇವೆ. **ಇದು ದೋಷವಲ್ಲ. ಏಕೆಂದರೆ ಸರ್ವವ್ಯವಹಾರಗಳೂ ಬ್ರಹ್ಮಾತ್ಮತ್ವವನ್ನು ಅರಿತುಕೊಳ್ಳುವ ಮುಂಚೆ –ಎಚ್ಚರವಾಗುವದಕ್ಕಿಂತ ಮುಂಚೆ ಸ್ವಪ್ನವ್ಯವಹಾರವು (ಸತ್ಯವಾಗಿರುವಂತೆ) –ಸತ್ಯವಾಗಿರಬಹುದಾಗಿದೆ.**[1] **ಎಲ್ಲಿಯವರೆಗೆ ಸತ್ಯವಾದ ಆತ್ಮೈಕತ್ವಜ್ಞಾನವಾಗಿಲ್ಲವೋ ಅಲ್ಲಿಯವರೆಗೂ ಪ್ರಮಾಣ, ಪ್ರಮೇಯ, ಫಲ–ಎಂಬ ವಿಕಾರಗಳಲ್ಲಿ (ಅವು) ಅನೃತ**

1. ಅಧ್ಯಾಸಭಾಷ್ಯದಲ್ಲಿ ವರ್ಣಿಸಿರುವ ವಿಷಯವೇ ಇದು. ಸಮನ್ವಯಸೂತ್ರಭಾಷ್ಯದ ಕೊನೆಯಲ್ಲಿ ಉದಾಹರಿಸಿರುವ ಶ್ಲೋಕದಲ್ಲಿಯೂ ಈ ಅಭಿಪ್ರಾಯವಿದೆ.

ವೆಂಬ ಬುದ್ಧಿಯು ಯಾರಿಗೂ ಹುಟ್ಟುವದಿಲ್ಲ. ಮತ್ತೇನೆಂದರೆ ಸ್ವಾಭಾವಿಕವಾಗಿರುವ ಬ್ರಹ್ಮಾತ್ಮತ್ವವನ್ನು ಬಿಟ್ಟು ವಿಕಾರಗಳನ್ನೇ ನಾನು, ನನ್ನದು-ಎಂದು ಅವಿದ್ಯೆಯಿಂದ (ಅವನ್ನು) ಆತ್ಮಾತ್ಮೀಯ ಭಾವದಿಂದ ಪ್ರತಿಯೊಬ್ಬ ಜೀವನೂ ತಿಳಿದುಕೊಂಡಿರುತ್ತಾನೆ. ಆದ್ದರಿಂದ ಬ್ರಹ್ಮಾತ್ಮತ್ವವನ್ನು ಅರಿತುಕೊಳ್ಳುವಮುಂಚೆ ಎಲ್ಲಾ ಲೌಕಿಕ ವೈದಿಕವ್ಯವಹಾರವೂ ಇರಬಹುದಾಗಿದೆ. ಹೇಗೆ ನಿದ್ರಿಸಿರುವ ಸಾಮಾನ್ಯ ಮನುಷ್ಯನಿಗೆ ಸ್ವಪ್ನದಲ್ಲಿ ಉಚ್ಚನೀಚಪದಾರ್ಥಗಳನ್ನು ಕಂಡರೆ ಎಚ್ಚರವಾಗುವವರೆಗೂ ನಿಶ್ಚಿತವಾಗಿಯೇ ಪ್ರತ್ಯಕ್ಷವಿದೆಂಬ ಅಭಿಮಾನದ ತಿಳಿವಳಿಕೆಯೇ ಉಂಟಾಗುವದೇ ಹೊರತು ಆ ಕಾಲದಲ್ಲಿ (ಅದು) ಪ್ರತ್ಯಕ್ಷಾಭಾಸವೆಂಬ ಅಭಿಪ್ರಾಯವುಂಟಾಗುವದಿಲ್ಲವೋ, ಅದರಂತೆ.

## ಅಸತ್ಯವಾಕ್ಯದಿಂದ ಸತ್ಯವಾದ ಬ್ರಹ್ಮಜ್ಞಾನವಾಗಬಹುದು

( ಭಾಷ್ಯ )

೪೩೭. ಕಥಂ ತು ಅಸತ್ಯೇನ ವೇದಾನ್ತವಾಕ್ಯೇನ ಸತ್ಯಸ್ಯ ಬ್ರಹ್ಮಾತ್ಮತ್ವಸ್ಯ ಪ್ರತಿಪತ್ತಿರುಪಪದ್ಯೇತ ? ನ ಹಿ ರಜ್ಜುಸರ್ಪೇಣ ದಷ್ಟೋ ಮ್ರಿಯತೇ | ನಾಪಿ ಮೃಗತೃಷ್ಣಿಕಾಮ್ಭಸಾ ಪಾನಾವಗಾಹನಾದಿಪ್ರಯೋಜನಂ ಕ್ರಿಯತೇ ಇತಿ| ನೈಷ ದೋಷಃ| ಶಙ್ಕಾವಿಷಾದಾದಿನಿಮಿತ್ತಮರಣಾದಿಕಾರ್ಯೋಪಲಬ್ಧೇಃ| ಸ್ವಪ್ನದರ್ಶನಾವಸ್ಥಸ್ಯ ಚ ಸರ್ಪದಂಶನೋದಕಸ್ನಾನಾದಿಕಾರ್ಯದರ್ಶನಾತ್| ತತ್ಕಾರ್ಯಮಪಿ ಅನೃತಮೇವ ಇತಿ ಚೇತ್ ಬ್ರೂಯಾತ್ । ತತ್ರ ಬ್ರೂಮಃ| ಯದ್ಯಪಿ ಸ್ವಪ್ನದರ್ಶನಾವಸ್ಥಸ್ಯ ಸರ್ಪದಂಶನೋದಕಸ್ನಾನಾದಿ ಕಾರ್ಯಮ್ ಅನೃತಮ್, ತಥಾಪಿ ತದವಗತಿಃ ಸತ್ಯಮೇವ ಫಲಮ್ | ಪ್ರತಿಬುದ್ಧಸ್ಯಾಪಿ ಅಬಾಧ್ಯಮಾನತ್ವಾತ್। ನ ಹಿ ಸ್ವಪ್ನಾತ್ ಉತ್ಥಿತಃ ಸ್ವಪ್ನದೃಷ್ಟಂ ಸರ್ಪದಂಶನೋದಕಸ್ನಾನಾದಿಕಾರ್ಯಂ ಮಿಥ್ಯಾ ಇತಿ ಮನ್ಯಮಾನಃ, ತದವಗತಿಮಪಿ ಮಿಥ್ಯಾ ಇತಿ ಮನ್ಯತೇ ಕಶ್ಚಿತ್। ಏತೇನ ಸ್ವಪ್ನದೃಶೋಽವಗತ್ಯಬಾಧನೇನ ದೇಹಮಾತ್ರಾತ್ಮವಾದೋ ದೂಷಿತೋ ವೇದಿತವ್ಯಃ | ತಥಾ ಚ ಶ್ರುತಿಃ "ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಷು ಪಶ್ಯತಿ | ಸಮೃದ್ಧಿಂ ತತ್ರ ಜಾನೀಯಾತ್ ತಸ್ಮಿನ್ ಸ್ವಪ್ನನಿದರ್ಶನೇ" (ಛಾಂ. ೫-೨-೯) ಇತಿ ಅಸತ್ಯೇನ ಸ್ವಪ್ನದರ್ಶನೇನ ಸತ್ಯಾಯಾಃ ಸಮೃದ್ಧೇಃ ಪ್ರತಿಪತ್ತಿಂ ದರ್ಶಯತಿ ತಥಾ ಪ್ರತ್ಯಕ್ಷದರ್ಶನೇಷು ಕೇಷುಚಿತ್ ಅರಿಷ್ಟೇಷು ಜಾತೇಷು "ನ ಚಿರಮಿವ ಜೀವಿಷ್ಯತೀತಿ ವಿದ್ಯಾತ್" (ಐ. ಆ. ೩-೨-೪-೧೦) ಇತ್ಯುಕ್ತ್ವಾ "ಅಥ ಸ್ವಪ್ನಾಃ ಪುರುಷಂ ಕೃಷ್ಣಂ ಕೃಷ್ಣದನ್ತಂ ಪಶ್ಯತಿ ಸ ಏನಂ ಹನ್ತಿ" (ಐ. ಆ. ೩-೨-೪-೧೦) ಇತ್ಯಾದಿನಾ ತೇನ ತೇನ ಅಸತ್ಯೇನೈವ ಸ್ವಪ್ನದರ್ಶನೇನ ಸತ್ಯ

ಮರಣಂ ಸೂಚ್ಯತೇ ಇತಿ ದರ್ಶಯತಿ । ಪ್ರಸಿದ್ಧಂ ಚ ಇದಂ ಲೋಕೇ ಅನ್ವಯವ್ಯತಿರೇಕಕುಶಲಾನಾಮ್ ಈದೃಶೇನ ಸ್ವಪ್ನದರ್ಶನೇನ ಸಾಧ್ವಾಗಮಃ ಸೂಚ್ಯತೇ, ಈದೃಶೇನ ಅಸಾಧ್ವಾಗಮಃ ಇತಿ । ತಥಾ ಅಕಾರಾದಿಸತ್ಯಾಕ್ಷರ ಪ್ರತಿಪತ್ತಿಃ ದೃಷ್ಟಾ ರೇಖಾನೃತಾಕ್ಷರಪ್ರತಿಪತ್ತೇಃ ॥

(ಭಾಷ್ಯಾರ್ಥ)

(ಆಕ್ಷೇಪ) :– ಆದರೆ ಅಸತ್ಯವಾದ ವೇದಾಂತವಾಕ್ಯದಿಂದ ಸತ್ಯವಾದ ಬ್ರಹ್ಮಾತ್ಮತ್ವದ ಜ್ಞಾನವಾಗುವದು ಹೇಗೆ ಯುಕ್ತವಾದೀತು ?[1] ಹಗ್ಗದ ಹಾವು ಕಡಿದವನು ಸಾಯುವದಿಲ್ಲ; ಬಿಸಿಲುಕುದುರೆಯ ನೀರಿನಿಂದ ಕುಡಿಯುವದು, ಸ್ನಾನಮಾಡುವದು– ಮುಂತಾದ ಪ್ರಯೋಜನವೂ ಆಗುವಂತಿಲ್ಲವಲ್ಲ !

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಶಂಕಾವಿಷವೇ ಮುಂತಾದ ನಿಮಿತ್ತದಿಂದ ಸಾವು ಮುಂತಾದ ಕಾರ್ಯವಾಗುವದು ಕಂಡು ಬಂದಿದೆ[2]. ಮತ್ತು ಕನಸುಕಾಣುವ ಅವಸ್ಥೆಯಲ್ಲಿರುವಾತನಿಗೆ ಹಾವು ಕಡಿಯುವದು, ನೀರಿನಲ್ಲಿ ಸ್ನಾನ– ಮುಂತಾದ ಕಾರ್ಯವಾಗುವದೂ ಕಂಡಿದೆ. ಅದರ ಕಾರ್ಯವೂ ಅನೃತವೇ ಎಂದು (ಪೂರ್ವಪಕ್ಷಿ) ಹೇಳಿದರೆ ಅದಕ್ಕೆ (ಈ ಉತ್ತರವನ್ನು) ಹೇಳುತ್ತೇವೆ : ಕನಸುಕಾಣುವ ಅವಸ್ಥೆಯಲ್ಲಿರುವಾತನಿಗೆ ಹಾವು ಕಡಿದದ್ದು, ನೀರಿನ ಸ್ನಾನ– ಮುಂತಾದ ಕಾರ್ಯವೇನೋ ಅನೃತವೇ ; ಆದರೂ ಅದರ ಅರಿವು ಎಂಬುದು ಸತ್ಯವಾದ ಫಲವೇ. ಏಕೆಂದರೆ ಎಚ್ಚತ್ತವ

---

1. ಬ್ರಹ್ಮಜ್ಞಾನವೆಂಬುದು ವೃತ್ತಿಯಾದರೆ ಅದೂ ಅನೃತವೇ ಆಗಿರುತ್ತದೆ ; ಚೈತನ್ಯವಾದರೆ ಅದು ಹುಟ್ಟುವದೇ ಇಲ್ಲ. ಆದ್ದರಿಂದ ಈ ಆಕ್ಷೇಪಕ್ಕೇ ಎಡೆಯಿಲ್ಲ. ಆದರೂ ವೃತ್ತಿಜ್ಞಾನವು ಪಾರಮಾರ್ಥಿಕಸತ್ಯವೆಂದು ಇಟ್ಟುಕೊಂಡು ಆಕ್ಷೇಪಿಸಿದೆ ಎಂದು ಭಾಮತೀ ವ್ಯಾ ॥ ಬಾಧಿತವಾಗುವ ಸಾಧನವು ಅಬಾಧಿತವಾದ ಕಾರ್ಯವನ್ನುಂಟು ಮಾಡಬಹುದೆ ? ಬ್ರಹ್ಮಜ್ಞಾನವು ಬಾಧಿತವಲ್ಲ; ವಾಕ್ಯಪ್ರಾಮಾಣ್ಯವು ಬಾಧಿತವಾಗ ತಕ್ಕದ್ದು. ಹೀಗಿರುವಲ್ಲಿ ವಾಕ್ಯದಿಂದ ಜ್ಞಾನವು ಹೇಗೆ ಉಂಟಾದೀತು ?– ಎಂಬುದು ಆಕ್ಷೇಪಕನ ಭಾವವೆಂದಿಟ್ಟುಕೊಂಡರೆ ಸಾಕಾಗಿದೆ.

2. ವಿಷದ ಶಂಕೆಯಿಂದಾದ ಭಯವೂ ಸತ್ಯ, ಮರಣವೂ ಸತ್ಯ ; ಆದ್ದರಿಂದ ಅದು ದೃಷ್ಟಾಂತವಲ್ಲ ಎನ್ನಬಾರದು. ಏಕೆಂದರೆ ಭಯಕ್ಕೆ ಹೇತುವಾದ ಸರ್ಪವು ಅಥವಾ ಅದರ ಜ್ಞಾನವು ಅಸತ್ಯ– ಎಂದು ಭಾಮತೀ. ಹಾವಿಲ್ಲದಿದ್ದರೂ ಅದರ ಜ್ಞಾನ, ವಿಷವಿಲ್ಲದಿದ್ದರೂ ಅದರ ಶಂಕೆ– ಎಂಬ ಕಾರ್ಯವೂ ಅದರಿಂದ ಮರಣವೂ ಆಗುವದೆಂಬುದೇ ದೃಷ್ಟಾಂತವು ಎಂದಿಟ್ಟುಕೊಂಡರೆ ಸಾಕೆಂದು ತೋರುತ್ತದೆ.

ನಿಗೂ ಅದು ಬಾಧಿತವಾಗುವದಿಲ್ಲ[1]. ಕನಸಿನಿಂದ ಎದ್ದವನು ಕನಸಿನಲ್ಲಿ ಕಂಡ ಹಾವು ಕಡಿದದ್ದು, ನೀರಿನಲ್ಲಿ ಸ್ನಾನಮಾಡಿದ್ದು –ಮುಂತಾದ ಕಾರ್ಯವು ಮಿಥ್ಯೆ ಎಂದು ಭಾವಿಸಿದರೂ ಅದರ ಅರಿವನ್ನೂ ಮಿಥ್ಯೆ ಎಂದು ಯಾವನೂ ತಿಳಿಯುವದಿಲ್ಲವಷ್ಟೆ[2]. **ಹೀಗೆ ಕನಸುಕಾಣುವವನ ಜ್ಞಾನವು ಬಾಧಿತವಾಗುವದಿಲ್ಲವಾದ್ದರಿಂದ ದೇಹವೇ ಆತ್ಮನೆಂಬ (ಚಾರ್ವಾಕ)ವಾದದಲ್ಲಿಯೂ ದೋಷವನ್ನು ತೋರಿಸಿದಂತೆ ಆಯಿತು.** ಆದ್ದರಿಂದಲೇ ಶ್ರುತಿಯು "ಯಾವಾಗ ಕಾಮ್ಯಕರ್ಮಗಳನ್ನು ಮಾಡುತ್ತಿರುವಲ್ಲಿ ಕನಸುಗಳಲ್ಲಿ ಸ್ತ್ರೀಯನ್ನು ಕಾಣುತ್ತಾನೋ ಆಗ ಆ ಸ್ವಪ್ನವನ್ನು ಕಂಡದ್ದರಿಂದ ಸಮೃದ್ಧಿಯಾಗುವದೆಂದು ತಿಳಿಯಬೇಕು" (ಛಾಂ. ೫–೨–೯) ಎಂದು ಅಸತ್ಯವಾದ ಸ್ವಪ್ನದರ್ಶನದಿಂದ ಸತ್ಯವಾದ ಸಮೃದ್ಧಿಪ್ರಾಪ್ತಿಯನ್ನು ತಿಳಿಸುತ್ತದೆ[3]. ಹಾಗೆಯೇ ಪ್ರತ್ಯಕ್ಷವಾಗಿ ನೋಡುವ ಕೆಲವು ಅರಿಷ್ಟ(ದರ್ಶನ)ಗಳು ಉಂಟಾದರೆ[4] "ಬಹುಕಾಲ ಬದುಕಿರುವದಿಲ್ಲವೆಂದು ತಿಳಿಯಬೇಕು" (ಐ. ಆ. ೩–೨–೪) ಎಂದು ಹೇಳಿ[5] "ಇನ್ನು ಸ್ವಪ್ನಗಳು : ಕಪ್ಪಗಿರುವ ಕರಿಯಹಲ್ಲಿನ ಪುರುಷನನ್ನು ಕಾಣುತ್ತಾನೆ ; ಅವನು ಇವನನ್ನು (ಕನಸಿನಲ್ಲಿ) ಹೊಡೆಯುತ್ತಾನಾದರೆ...." (ಐ. ಆ. ೩–೨–೪) ಎಂದು ಆಯಾ ಅಸತ್ಯವಾಗಿರುವ ಸ್ವಪ್ನದರ್ಶನದಿಂದಲೇ ಸತ್ಯವಾದ

---

1. ಕನಸಿನಲ್ಲಿ ನೀರಿನಲ್ಲಿ ಸ್ನಾನಮಾಡಿದೆನು ಎಂದರೆ ಸ್ನಾನಮಾಡಿದಂತೆ ಅರಿವಾಯಿತು ಎಂದೇ ಎಚ್ಚತ್ತವನೂ ತಿಳಿಯುತ್ತಾನೆ ಎಂದರ್ಥ.

2. ಅನಿರ್ವಾಚ್ಯರೂಪಿತನಾದ ಜ್ಞಾನವೂ ಅನಿರ್ವಾಚ್ಯವೆನ್ನುವದು ಯುಕ್ತವಾದರೂ ಲೋಕದ ಜನರ ಅಭಿಪ್ರಾಯದಿಂದ ಇದನ್ನು ಹೇಳಿದೆ ಎಂದು ಭಾಮತೀ ವ್ಯಾ॥ ಹಾವು ಕಚ್ಚಿದ ಜ್ಞಾನ, ಸ್ನಾನಮಾಡಿದ ಜ್ಞಾನ– ಇವು ಎಚ್ಚರದಲ್ಲಿಯೂ ಬಾಧಿತವಾಗುವದಿಲ್ಲವೆಂದಿಷ್ಟೇ ಇಲ್ಲಿ ಅಭಿಪ್ರೇತವಾಗಿದೆ.

3. ಎಚ್ಚರದಲ್ಲಿ ಆಗುವ ಸಮೃದ್ಧಿಯನ್ನು ಸ್ವಪ್ನಾಪೇಕ್ಷೆಯಿಂದ ಸತ್ಯವೆಂದು ಕರೆದಿದೆ.

4. ಸೂರ್ಯನು ಚಂದ್ರನಂತೆ ಕಾಣುವದು, ಅಂತರಿಕ್ಷವು ಹುರಿಮಂಜಿನಂತೆ ಕೆಂಪಾಗಿ ತೋರುವದು, ಪಾಯುದ್ವಾರವು ವಿವೃತವಾದದ್ದು ಸಂಕೋಚವಾಗದಿರುವದು, ತಲೆಯೆಲ್ಲ ದುರ್ಗಂಧಯುಕ್ತವಾಗುವದು– ಇವೇ ಮುಂತಾದ ದರ್ಶನಗಳು ಉಂಟಾದರೆ.

5. "ಇತಿ ಪ್ರತ್ಯಕ್ಷದರ್ಶನಾನಿ" ಎಂಬ ವಾಕ್ಯದವರೆಗೆ ಹೇಳಿರುವ ಅರಿಷ್ಟದರ್ಶನಗಳು ಮರಣಸೂಚನೆಗಳು ಎಂಬುದು ಐತರೇಯಾರಣ್ಯಕದ ಅಭಿಪ್ರಾಯ. ಈ ಸೂಚನೆಗಳ ಕಾರ್ಯವು ಸತ್ಯವಾದರೂ ಸೂಚಕಗಳೆಲ್ಲ ಸತ್ಯವಾಗಿರುವದಿಲ್ಲ. ಭಾಷ್ಯದ ಈ ಪ್ರಘಟ್ಟದಲ್ಲಿ ಕೊಟ್ಟಿರುವ ದೃಷ್ಟಾಂತಗಳಲ್ಲೆಲ್ಲ ವ್ಯಾವಹಾರಿಕಸತ್ಯಾನೃತಗಳನ್ನೇ ಕೊಟ್ಟು ಅನೃತದಿಂದಲೂ ಸತ್ಯವು ಆಗಬಹುದು– ಎಂಬುದನ್ನು ಉಪಪಾದಿಸಿದೆ ಎಂಬುದನ್ನು ಹೇಳಬೇಕಾದದ್ದೇ ಇಲ್ಲ.

ಸಾವು ಸೂಚಿತವಾಗುತ್ತದೆ[1] ಎಂದು ತಿಳಿಸಿರುತ್ತದೆ. ಇಂಥ ಸ್ವಪ್ನದರ್ಶನದಿಂದ ಒಳ್ಳೆಯದಾಗುವದೆಂದು ಸೂಚಿತವಾಗುತ್ತದೆ, ಇಂಥದ್ದರಿಂದ ಕೆಟ್ಟದ್ದಾಗುವದೆಂದು (ಸೂಚಿತವಾಗುತ್ತದೆ) ಎಂಬುದು ಲೋಕದಲ್ಲಿ ಅನ್ವಯವ್ಯತಿರೇಕಗಳಲ್ಲಿ ಕುಶಲರಾದವರಿಗೆ ಪ್ರಸಿದ್ಧವೇ ಆಗಿರುತ್ತದೆ. ಇವರಂತೆ ಅಕಾರಾದಿಯಾದ ಸತ್ಯಾಕ್ಷರದ ಜ್ಞಾನವು ಅನೃತವಾದ ರೇಖಾತ್ಮಕವಾದ ಅಕ್ಷರದ ಜ್ಞಾನದಿಂದಾಗುವದೂ ಕಂಡುಬರುತ್ತದೆ[2].

## ಏಕತ್ವಜ್ಞಾನವಾದ ಬಳಿಕ ನಾನಾತ್ವವ್ಯವಹಾರಕ್ಕೆ ಅವಕಾಶವಿರುವದಿಲ್ಲ

(ಭಾಷ್ಯ)

೪೩೮. ಅಪಿ ಚ ಅನ್ತ್ಯಮಿದಂ ಪ್ರಮಾಣಮ್ ಆತ್ಮೈಕತ್ವಸ್ಯ ಪ್ರತಿಪಾದಕಂ ನ ಅತಃಪರಂ ಕಿಂಚಿತ್ ಆಕಾಙ್ಕ್ಷ್ಯಮ್ ಅಸ್ತಿ। ಯಥಾ ಹಿ ಲೋಕೇ 'ಯಜೇತ' ಇತ್ಯುಕ್ತೇ ಕಿಮ್, ಕೇನ, ಕಥಮ್ ? – ಇತಿ ಆಕಾಙ್ಕ್ಷ್ಯತೇ ನೈವಂ 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ' ಇತ್ಯುಕ್ತೇ ಕಿಂಚಿತ್ ಅನ್ಯತ್ ಆಕಾಙ್ಕ್ಷ್ಯಮ್ ಅಸ್ತಿ। ಸರ್ವಾತ್ಮೈಕತ್ವವಿಷಯತ್ವಾವಗತೇಃ। ಸತಿ ಹಿ ಅನ್ಯಸ್ಮಿನ್ ಅವಶಿಷ್ಯಮಾಣೇ ಅರ್ಥೇ ಆಕಾಙ್ಕ್ಷಾ ಸ್ಯಾತ್। ನ ತು ಆತ್ಮೈಕತ್ವವ್ಯತಿರೇಕೇಣ ಅವಶಿಷ್ಯಮಾಣಃ ಅನ್ಯೋಽರ್ಥೋಽಸ್ತಿ ಯ ಆಕಾಙ್ಕ್ಷ್ಯೇತ। ನ ಚ ಇಯಮ್ ಅವಗತಿರ್ನೋತ್ಪದ್ಯತೇ ಇತಿ ಶಕ್ಯಂ ವಕ್ತುಮ್। "ತದ್ಧಾಸ್ಯ ವಿಜಜ್ಞೌ" (ಛಾಂ. ೬–೧೬–೩) ಇತ್ಯಾದಿಶ್ರುತಿಭ್ಯಃ। ಅವಗತಿಸಾಧನಾನಾಂ ಚ ಶ್ರವಣಾದೀನಾಂ ವೇದಾನುವಚನಾದೀನಾಂ ಚ ವಿಧಾನಾತ್। ನ ಚ ಇಯಮ್ ಅವಗತಿಃ ಅನರ್ಥಿಕಾ, ಭ್ರಾನ್ತಿರ್ವಾ ಇತಿ ಶಕ್ಯಂ ವಕ್ತುಮ್। ಅವಿದ್ಯಾನಿವೃತ್ತಿಫಲದರ್ಶನಾತ್। ಬಾಧಕಜ್ಞಾನಾನ್ತರಾಭಾವಾಚ್ಚ। ಪ್ರಾಕ್ಚ ಆತ್ಮೈಕತ್ವಾವಗತೇಃ ಅವ್ಯಾಹತಃ ಸರ್ವಃ ಸತ್ಯಾನೃತವ್ಯವಹಾರಃ ಲೌಕಿಕೋ ವೈದಿಕಶ್ಚ ಇತಿ ಅವೋಚಾಮ। ತಸ್ಮಾತ್ ಅನ್ತ್ಯೇನ ಪ್ರಮಾಣೇನ ಪ್ರತಿಪಾದಿತೇ ಆತ್ಮೈಕತ್ವೇ ಸಮಸ್ತಸ್ಯ ಪ್ರಾಚೀನಸ್ಯ ಭೇದವ್ಯವಹಾರಸ್ಯ ಬಾಧಿತತ್ವಾತ್ ನಾನೇಕಾತ್ಮಕಬ್ರಹ್ಮಕಲ್ಪನಾವಕಾಶೋಽಸ್ತಿ ॥

1. ಕನಸಿನಲ್ಲಿ ಕಾಣುವ ಹತ್ತು ಮರಣಸೂಚಕವಾದ ಅರಿಷ್ಟಗಳನ್ನು ಈ ಪ್ರಕರಣದಲ್ಲಿ ಹೇಳಿರುತ್ತದೆ.

2. ವರ್ಣವು ಶಬ್ದಾತ್ಮಕವಾಗಿರುವದರಿಂದ ರೇಖೆಯನ್ನು ವರ್ಣವೆಂದು ತಿಳಿಯುವದು ತಪ್ಪೇ; ಅದ್ದರಿಂದ ರೇಖಾತ್ಮಕವಾದದ್ದು ಅನೃತಾಕ್ಷರವು.

(ಭಾಷ್ಯಾರ್ಥ)

ಇದಲ್ಲದೆ ಆತ್ಮನು ಒಬ್ಬನೇ ಎಂಬುದನ್ನು ತಿಳಿಸುವ ಈ ಪ್ರಮಾಣವು ಕೊನೆಯದು, ಇದರ ಮುಂದೆ ಕೇಳತಕ್ಕದ್ದು ಯಾವದೂ ಇರುವದಿಲ್ಲ. ಹೇಗೆ ಲೋಕದಲ್ಲಿ 'ಯಾಗಮಾಡಬೇಕು' ಎಂದು ಹೇಳಿದರೆ 'ಏನನ್ನು?' 'ಏತರಿಂದ?' 'ಹೇಗೆ'? ಎಂದು ಕೇಳುತ್ತಾರೋ ಹಾಗೆ 'ಅದು ನೀನಾಗಿರುವೆ' (ಛಾಂ. ೬-೮-೭), 'ನಾನು ಬ್ರಹ್ಮವಾಗಿರುವೆನು' (ಬೃ. ೪-೧-೧೦) ಎಂದು ಹೇಳಿದರೆ ಮತ್ತೆ ಯಾವದೂ ಕೇಳತಕ್ಕದ್ದು ಇರುವದಿಲ್ಲ. ಏಕೆಂದರೆ ಈ ಜ್ಞಾನವು ಎಲ್ಲರ ಆತ್ಮನೂ ಒಬ್ಬನೇ ಎಂಬ ವಿಷಯದ್ದಾಗಿರುತ್ತದೆ. ಮತ್ತೊಂದು ವಿಷಯವು ಉಳಿದುಕೊಂಡಿದ್ದರಲ್ಲವೆ, ಕೇಳುವದೆಂಬುದು ಆಗಬಹುದು? ಆದರೆ ಆತ್ಮೈಕತ್ವಕ್ಕಿಂತ ಬೇರೆಯಾಗಿ ಉಳಿಯುವ ಮತ್ತೊಂದು ವಿಷಯ ವಿರುವದಿಲ್ಲ; ಹಾಗಿರುವದಾಗಿದ್ದರೆ (ಅದನ್ನು) ಕೇಳಬಹುದಾಗಿತ್ತು.

**ಈ ಅರಿವು ಉಂಟಾಗುವದಿಲ್ಲ ಎಂದು ಹೇಳುವದಕ್ಕೂ ಆಗು ವದಿಲ್ಲ; ಏಕೆಂದರೆ "ಇವನ (ಉಪದೇಶವನ್ನು) ಅರಿತುಕೊಂಡನು" (ಛಾಂ. ೬-೧೬-೩) ಮುಂತಾದ ಶ್ರುತಿಗಳಿವೆ ಮತ್ತು ಅರಿವಿಗೆ ಸಾಧನಗಳಾದ ಶ್ರವಣಾದಿಗಳನ್ನೂ (ಬೃ. ೨-೪೫) ವೇದಾನುವಚನ ಗಳನ್ನೂ (ಬೃ. ೪-೪-೨೨) ವಿವರಿಸಿರುತ್ತದೆ. ಈ ಅರಿವು ವ್ಯರ್ಥ ವೆಂದಾಗಲಿ ಭ್ರಾಂತಿಯೆಂದಾಗಲಿ ಹೇಳುವದಕ್ಕೂ ಬರುವದಿಲ್ಲ. ಏಕೆಂದರೆ ಅವಿದ್ಯೆಯು ತೊಲಗುವದೆಂಬ ಫಲವು ಕಂಡುಬರುತ್ತದೆ, (ಇದನ್ನು) ಬಾಧಿಸುವ ಮತ್ತೊಂದು ಜ್ಞಾನವೂ ಇರುವದಿಲ್ಲ.** ಆತ್ಮನು ಒಬ್ಬನೇ ಎಂದು ತಿಳಿದುಕೊಳ್ಳುವವರೆಗೂ ಸತ್ಯ, ಅನೃತ- ಎಂಬ ಲೌಕಿಕ ಮತ್ತು ವೈದಿಕವ್ಯವಹಾರವೆಲ್ಲವೂ ಅಡ್ಡಿಯಿಲ್ಲದೆ (ಇರುತ್ತದೆ) ಎಂದು (ಹಿಂದೆ) ಹೇಳಿರುತ್ತೇವೆ.

ಆದ್ದರಿಂದ (ಈ) **ಅಂತ್ಯಪ್ರಮಾಣವು**[1]. ಆತ್ಮೈಕತ್ವವನ್ನು ಪ್ರತಿ ಪಾದಿಸಿದ ಬಳಿಕ ಹಿಂದಿನ ಭೇದವ್ಯವಹಾರವೆಲ್ಲವೂ ಬಾಧಿತವಾಗುವದರಿಂದ ಅನೇಕಾತ್ಮಕಬ್ರಹ್ಮವನ್ನು ಕಲ್ಪಿಸುವದಕ್ಕೆ ಅವಕಾಶವಿರುವದಿಲ್ಲ.

---

1. ಪ್ರಮಾತೃ, ಪ್ರಮಾಣ, ಪ್ರಮೇಯ- ಎಂಬ ವಿಭಾಗವನ್ನು ಕಳೆಯುವ ಆತ್ಮೈಕತ್ವವನ್ನು ತಿಳಿಸುವದರಿಂದ 'ತತ್ತ್ವಮಸಿ' ಮುಂತಾದ ವಾಕ್ಯಜನ್ಯಜ್ಞಾನವು ಕೊನೆಯ ಜ್ಞಾನವು. ಆದ್ದರಿಂದ ಈ ವಾಕ್ಯವು ಅಂತ್ಯಪ್ರಮಾಣವು.

## ಪರಿಣಾಮಿಬ್ರಹ್ಮವಾದವು ಶ್ರುತಿಸಮ್ಮತವಲ್ಲ

(ಭಾಷ್ಯ)

೪೩೯. ನನು ಮೃದಾದಿದೃಷ್ಟಾನ್ತಪ್ರಣಯನಾತ್ ಪರಿಣಾಮವದ್ ಬ್ರಹ್ಮ ಶಾಸ್ತ್ರಸ್ಯ ಅಭಿಮತಮ್ ಇತಿ ಗಮ್ಯತೇ | ಪರಣಾಮಿನೋ ಹಿ ಮೃದಾದಯೋಽರ್ಥಾಃ ಲೋಕೇ ಸಮಧಿಗತಾಃ ಇತಿ । ನೇತ್ಯುಚ್ಯತೇ । "ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ" (ಬೃ. ೪-೪-೨೫), "ಸ ಏಷ ನೇತಿ ನೇತ್ಯಾತ್ಮಾ" (ಬೃ. ೩-೯-೨೬) "ಅಸ್ಥೂಲಮನಣು" (ಬೃ. ೩-೮-೮) ಇತ್ಯಾದ್ಯಾಭ್ಯಃ ಸರ್ವವಿಕ್ರಿಯಾಪ್ರತಿಷೇಧಶ್ರುತಿಭ್ಯೋ ಬ್ರಹ್ಮಣಃ ಕೂಟಸ್ಥತ್ವಾವಗಮಾತ್ | ನ ಹಿ ಏಕಸ್ಯ ಬ್ರಹ್ಮಣಃ ಪರಿಣಾಮಧರ್ಮತ್ವಂ ತದ್ರಹಿತತ್ವಂ ಚ ಶಕ್ಯಂ ಪ್ರತಿಪತ್ತುಮ್ । ಸ್ಥಿತಿಗತಿವತ್ ಸ್ಯಾತ್ ಇತಿ ಚೇತ್। ನ । ಕೂಟಸ್ಥಸ್ಯ ಇತಿ ವಿಶೇಷಣಾತ್ | ನ ಹಿ ಕೂಟಸ್ಥಸ್ಯ ಬ್ರಹ್ಮಣಃ ಸ್ಥಿತಿಗತಿವತ್ ಅನೇಕಧರ್ಮಾಶ್ರಯತ್ವಂ ಸಂಭವತಿ | ಕೂಟಸ್ಥಂ ಚ ನಿತ್ಯಂ ಬ್ರಹ್ಮ ಸರ್ವವಿಕ್ರಿಯಾಪ್ರತಿಷೇಧಾತ್ ಇತ್ಯವೋಚಾಮ। ನ ಚ ಯಥಾ ಬ್ರಹ್ಮಣಃ ಆತ್ಮೈಕತ್ವದರ್ಶನಂ ಮೋಕ್ಷಸಾಧನಮ್, ಏವಂ ಜಗದಾಕಾರಪರಿಣಾಮಿತ್ವದರ್ಶನಮಪಿ ಸ್ವತನ್ತ್ರಮೇವ ಕಸ್ಮೈಚಿತ್ ಫಲಾಯ ಅಭಿಪ್ರೇಯತೇ। ಪ್ರಮಾಣಾಭಾವಾತ್ | ಕೂಟಸ್ಥಬ್ರಹ್ಮಾತ್ಮತ್ವವಿಜ್ಞಾನಾದೇವ ಹಿ ಫಲಂ ದರ್ಶಯತಿ ಶಾಸ್ತ್ರಮ್ "ಸ ಏಷ ನೇತಿ ನೇತ್ಯಾತ್ಮಾ" ಇತ್ಯುಪಕ್ರಮ್ಯ "ಅಭಯಂ ವೈ ಜನಕ ಪ್ರಾಪ್ತೋಽಸಿ"(ಬೃ. ೪-೨-೪)ಇತ್ಯೇವಂಜಾತೀಯಕಮ್ | ತತ್ರ ಏತತ್ ಸಿದ್ಧಂ ಭವತಿ ಬ್ರಹ್ಮಪ್ರಕರಣೇ ಸರ್ವಧರ್ಮವಿಶೇಷರಹಿತಬ್ರಹ್ಮದರ್ಶನಾದೇವ ಫಲಸಿದ್ಧೌ ಸತ್ಯಾಂ ಯತ್ ತತ್ರ ಅಫಲಂ ಶ್ರೂಯತೇ ಬ್ರಹ್ಮಣೋ ಜಗದಾಕಾರಪರಿಣಾಮಿತ್ವಾದಿ ತದ್ ಬ್ರಹ್ಮದರ್ಶನೋಪಾಯತ್ವೇನೈವ ವಿನಿಯುಜ್ಯತೇ ಫಲವತ್ಸಂನಿಧೌ ಅಫಲಂ ತದಙ್ಗಮ್ ಇತಿವತ್, ನ ತು ಸ್ವತನ್ತ್ರಂ ಫಲಾಯ ಕಲ್ಪತೇ ಇತಿ । ನ ಹಿ ಪರಿಣಾಮವತ್ತ್ವವಿಜ್ಞಾನಾತ್ ಪರಿಣಾಮವತ್ತ್ವಮ್ ಆತ್ಮನಃ ಫಲಂ ಸ್ಯಾತ್ ಇತಿ ವಕ್ತುಂ ಯುಕ್ತಮ್ | ಕೂಟಸ್ಥನಿತ್ಯತ್ವಾನ್ಮೋಕ್ಷಸ್ಯ ||

(ಭಾಷ್ಯಾರ್ಥ)

(ಆಕ್ಷೇಪ) :- ಮಣ್ಣು ಮುಂತಾದ ದೃಷ್ಟಾಂತವನ್ನು ಕೊಟ್ಟಿರುವದರಿಂದ ಪರಿಣಾಮವುಳ್ಳ ಬ್ರಹ್ಮವೇ ಶಾಸ್ತ್ರಕ್ಕೆ ಸಮ್ಮತವಾಗಿದೆ ಎಂದು ಗೊತ್ತಾಗುವದಿಲ್ಲವೆ ? ಮಣ್ಣು ಮುಂತಾದ ವಸ್ತುಗಳು ಪರಿಣಾಮಿಗಳೆಂದಲ್ಲವೆ, ಲೋಕದಲ್ಲಿ ಗೊತ್ತಾಗಿರುವದು ?

(ಪರಿಹಾರ) :– ಹಾಗಲ್ಲ, ಎನ್ನುತ್ತೇವೆ. "ಆ ಈ ದೊಡ್ಡವನೂ ಅಜನೂ ಆದ ಆತ್ಮನು ಮುಪ್ಪಿಲ್ಲದವನು, ಸಾವಿಲ್ಲದವನು, ಅಮೃತಸ್ವಭಾವನು, ಅಭಯವು, ಬ್ರಹ್ಮವು" (ಬೃ. ೪–೪–೨೫), "ಆ ಇವನು ನೇತಿನೇತಿ ಎಂದ ಆತ್ಮನು" (ಬೃ. ೩–೯–೨೬), "ಸ್ಥೂಲವಲ್ಲ, ಅಣುವಲ್ಲ" (ಬೃ. ೩–೮–೮) –ಇವೇ ಮುಂತಾದ **ಎಲ್ಲಾ ವಿಕಾರಗಳನ್ನೂ ಅಲ್ಲಗಳೆಯುವ ಶ್ರುತಿಗಳಿಂದ ಬ್ರಹ್ಮವು ಕೂಟಸ್ಥವೆಂದು ನಿಶ್ಚಯವಾಗುತ್ತದೆ.** ಒಂದೇ ಬ್ರಹ್ಮವು ಪರಿಣಾಮವೆಂಬ ಧರ್ಮವುಳ್ಳದ್ದೂ, ಆ (ಪರಿಣಾಮ) ವಿಲ್ಲದ್ದೂ (ಆಗಿದೆ) ಎಂದು ತಿಳಿಯುವದು ಆಗಲಾರದಷ್ಟೆ.

(ಆಕ್ಷೇಪ) :– ಸ್ಥಿತಿಗತಿಗಳಂತೆ (ಪರಿಣಾಮವೂ ಅಪರಿಣಾಮವೂ) ಇರಬಹುದಲ್ಲ ![1]

(ಪರಿಹಾರ) :– ಹಾಗಲ್ಲ. ಏಕೆಂದರೆ ಕೂಟಸ್ಥವಾದ (ಬ್ರಹ್ಮಕ್ಕೆ ಅದಿಲ್ಲ) ಎಂದು ವಿಶೇಷಣವನ್ನು (ಕೊಟ್ಟಿರುತ್ತೇವೆ. ಇದರ ವಿವರ) : ಕೂಟಸ್ಥವಾದ ಬ್ರಹ್ಮಕ್ಕೆ ಸ್ಥಿತಿಗತಿಗಳಂತೆ ಅನೇಕ ಧರ್ಮಗಳಿಗೆ ಆಶ್ರಯವಾಗಿರುವದೆಂಬುದು ಸಂಭವಿಸಲಾರದಷ್ಟೆ. ಎಲ್ಲಾ ಮಾರ್ಪಾಡುಗಳನ್ನೂ (ಶ್ರುತಿಯಲ್ಲಿ) ಅಲ್ಲಗಳೆದಿರುವದರಿಂದ ಬ್ರಹ್ಮವು ಕೂಟಸ್ಥವೂ ನಿತ್ಯವೂ ಆಗಿದೆ ಎಂದು ಹೇಳಿರುತ್ತೇವೆ.

ಬ್ರಹ್ಮವು ಒಂದೇ ಆತ್ಮನೆಂಬ ದರ್ಶನವು ಹೇಗೆ ಮೋಕ್ಷಕ್ಕೆ ಸಾಧನವೋ ಹಾಗೆ (ಅದು) ಜಗದಾಕಾರವಾಗಿ ಪರಿಣಮಿಸುವದೆಂಬ ದರ್ಶನವೂ ಸ್ವತಂತ್ರವಾಗಿಯೇ ಯಾವದಾದರೊಂದು ಫಲಕ್ಕಾಗಿ (ಹೇಳಿದ್ದೆಂದು ಶ್ರುತಿಯ) ಅಭಿಪ್ರಾಯವಿರುವದಿಲ್ಲ ಏಕೆಂದರೆ (ಆ ವಿಷಯದಲ್ಲಿ ಯಾವ) ಪ್ರಮಾಣವೂ ಇರುವದಿಲ್ಲ. ಕೂಟಸ್ಥಬ್ರಹ್ಮವೇ (ಎಲ್ಲರ) ಆತ್ಮನೆಂಬ ವಿಜ್ಞಾನದಿಂದಲೇ ಫಲ(ವಾಗುವದೆಂದಲ್ಲವೆ,) "ಆ ಈತನು ನೇತಿನೇತಿ ಎಂದ ಆತ್ಮನು" ಎಂದು ಉಪಕ್ರಮಿಸಿ "ಜನಕನೆ, ಅಭಯವನ್ನೇ ಪಡೆದುಕೊಂಡಿರುವೆ" (ಬೃ. ೪–೨–೪) ಎಂಬೀ ಜಾತಿಯ ಶಾಸ್ತ್ರವು ತಿಳಿಸುತ್ತದೆ ? ಇಲ್ಲಿ ಇಷ್ಟು ಸಿದ್ಧವಾಗುತ್ತದೆ : ಬ್ರಹ್ಮಪ್ರಕರಣದಲ್ಲಿ ಯಾವ ವಿಶೇಷಧರ್ಮವೂ ಇಲ್ಲದ ಬ್ರಹ್ಮದರ್ಶನದಿಂದಲೇ ಫಲವು ಸಿದ್ಧವಾಗುತ್ತಿರುವಲ್ಲಿ, ಅಲ್ಲಿ ಬ್ರಹ್ಮವು ಜಗದಾಕಾರವಾಗಿ ಪರಿಣಮಿಸುವದು ಎಂದು ಮುಂತಾಗಿ ಫಲರಹಿತವಾಗಿ ಯಾವದನ್ನು ಹೇಳಿದೆಯೋ ಅದು ಬ್ರಹ್ಮದರ್ಶನಕ್ಕೆ ಉಪಾಯವಾಗಿಯೇ ವಿನಿಯೋಗವಾಗಿರುತ್ತದೆ. ಫಲವುಳ್ಳದ್ದರ ಸನ್ನಿಧಿಯಲ್ಲಿ (ಹೇಳಿರುವ) ಅಫಲ(ವಿಷಯವು) ಅದರ ಅಂಗವು

1. ನಿಂತಿರುವಾಗ ಹೋಗುತ್ತಿರುವದಿಲ್ಲ, ಹೋಗುತ್ತಿರುವಾಗ ನಿಂತಿರುವದಿಲ್ಲ ; ಹೀಗೆಯೇ ಈಗ ಅಪರಿಣಾಮಿ, ಆಮೇಲೆ ಪರಿಣಾಮಿ, ಹೀಗಿರಬಹುದಲ್ಲ ! –ಎಂದು ಶಂಕೆ.

ಎಂಬಂತೆ (ಇದು). ಇಷ್ಟೇ ಹೊರತು ಅದು ಸ್ವತಂತ್ರವಾಗಿ (ಯಾವ) ಫಲಕ್ಕೂ (ಸಾಧನ)ವಾಗಲಾರದು. (ಬ್ರಹ್ಮವು) ಪರಿಣಾಮವುಳ್ಳದ್ದೆಂದು ಅರಿತುಕೊಂಡದ್ದರಿಂದ ತನಗೆ ಪರಿಣಾಮ(ವನ್ನು ಪಡೆಯುವದೆಂಬ) ಫಲವು ಆಗುವದೆಂದು ಹೇಳುವದು ಸರಿಯಾಗಲಾರದಷ್ಟೆ. ಏಕೆಂದರೆ ಮೋಕ್ಷವೆಂಬುದು ಕೂಟಸ್ಥ ನಿತ್ಯವಾಗಿರುತ್ತದೆ.

## ಕೂಟಸ್ಥಬ್ರಹ್ಮವಾದದಲ್ಲಿ ಈಶ್ವರೇಶಿತವ್ಯಭಾವ ಹೇಗೆ?

(ಭಾಷ್ಯ)

೪೪೦. ಕೂಟಸ್ಥಬ್ರಹ್ಮಾತ್ಮವಾದಿನಃ, ಏಕತ್ವೈಕಾನ್ತ್ಯಾತ್ ಈಶಿತ್ರೀಶಿತವ್ಯಾಭಾವೇ ಈಶ್ವರಕಾರಣಪ್ರತಿಜ್ಞಾವಿರೋಧಃ ಇತಿ ಚೇತ್ । ಅವಿದ್ಯಾತ್ಮಕನಾಮರೂಪಬೀಜವ್ಯಾಕರಣಾಪೇಕ್ಷತ್ವಾತ್ ಸರ್ವಜ್ಞತ್ವಸ್ಯ । "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧) ಇತ್ಯಾದಿವಾಕ್ಯೇಭ್ಯೋ ನಿತ್ಯಶುದ್ಧಬುದ್ಧಮುಕ್ತಸ್ವರೂಪಾತ್ ಸರ್ವಜ್ಞಾತ್ ಸರ್ವಶಕ್ತೇಃ ಈಶ್ವರಾತ್ ಜಗಜ್ಜನಿಸ್ಥಿತಿಪ್ರಲಯಾಃ ನಾಚೇತನಾತ್ ಪ್ರಧಾನಾತ್ ಅನ್ಯಸ್ಮಾದ್ ವಾ ಇತ್ಯೇಷೋಽರ್ಥಃ ಪ್ರತಿಜ್ಞಾತಃ 'ಜನ್ಮಾದ್ಯಸ್ಯ ಯತಃ' (೧-೧-೨) ಇತಿ । ಸಾ ಪ್ರತಿಜ್ಞಾ ತದವಸ್ಥೈವ ನ ತದ್ವಿರುದ್ಧೋಽರ್ಥಃ ಪುನರಿಹ ಉಚ್ಯತೇ । ಕಥಂ ನೋಚ್ಯತೇ ಅತ್ಯನ್ತಮ್ ಆತ್ಮನ ಏಕತ್ವಮ್ ಅದ್ವಿತೀಯತ್ವಂ ಚ ಬ್ರುವತಾ ? ಶೃಣು ಯಥಾ ನೋಚ್ಯತೇ । ಸರ್ವಜ್ಞಸ್ಯ ಈಶ್ವರಸ್ಯ ಆತ್ಮಭೂತೇ ಇವ ಅವಿದ್ಯಾಕಲ್ಪಿತೇ ನಾಮರೂಪೇ ತತ್ತ್ವಾನ್ಯತ್ವಾಭ್ಯಾಮ್ ಅನಿರ್ವಚನೀಯೇ ಸಂಸಾರಪ್ರಪಞ್ಚಬೀಜಭೂತೇ ಸರ್ವಜ್ಞಸ್ಯ ಈಶ್ವರಸ್ಯ ಮಾಯಾ, ಶಕ್ತಿಃ, ಪ್ರಕೃತಿಃ ಇತಿ ಚ ಶ್ರುತಿಸ್ಮೃತ್ಯೋರಭಿಲಪ್ಯೇತೇ । ತಾಭ್ಯಾಮ್ ಅನ್ಯಃ ಸರ್ವಜ್ಞ ಈಶ್ವರಃ "ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ ಬ್ರಹ್ಮ" (ಛಾಂ. ೮-೧೪-೧) ಇತಿ ಶ್ರುತೇಃ । "ನಾಮರೂಪೇ ವ್ಯಾಕರವಾಣಿ" (ಛಾಂ. ೬-೩-೨), "ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಭಿವದನ್ ಯದಾಸ್ತೇ" (ತೈ. ಆ. ೩-೧೨) "ಏಕಂ ಬೀಜಂ ಬಹುಧಾ ಯಃ ಕರೋತಿ" (ಶ್ವೇ. ೬-೧೨) ಇತ್ಯಾದಿಶ್ರುತಿಭ್ಯಶ್ಚ । ಏವಮ್ ಅವಿದ್ಯಾಕೃತನಾಮರೂಪೋಪಾಧ್ಯನುರೋಧೀ ಈಶ್ವರೋ ಭವತಿ, ವ್ಯೋಮೇವ ಘಟಕರಕಾದ್ಯುಪಾಧ್ಯನುರೋಧಿ । ಸ ಚ ಸ್ವಾತ್ಮಭೂತಾನೇವ ಘಟಾಕಾಶಸ್ಥಾನೀಯಾನ್ ಅವಿದ್ಯಾಪ್ರತ್ಯುಪಸ್ಥಾಪಿತನಾಮರೂಪಕೃತಕಾರ್ಯಕರಣಸಙ್ಘಾತಾನುರೋಧಿನೋ ಜೀವಾಖ್ಯಾನ್ ವಿಜ್ಞಾನಾತ್ಮನಃ ಪ್ರತಿ ಈಷ್ಟೇ ವ್ಯವಹಾರವಿಷಯೇ । ತದೇವಮ್

ಅವಿದ್ಯಾತ್ಮಕೋಪಾಧಿಪರಿಚ್ಛೇದಾಪೇಕ್ಷಮೇವ ಈಶ್ವರಸ್ಯ ಈಶ್ವರತ್ವಮ್, ಸರ್ವಜ್ಞತ್ವಮ್, ಸರ್ವಶಕ್ತಿತ್ವಂ ಚ । ನ ಪರಮಾರ್ಥತೋ ವಿದ್ಯಯಾ ಅಪಾಸ್ತಸರ್ವೋಪಾಧಿಸ್ವರೂಪೇ ಆತ್ಮನಿ ಈಶಿತ್ರೀಶಿತವ್ಯಸರ್ವಜ್ಞತ್ವಾದಿ ವ್ಯವಹಾರಃ ಉಪಪದ್ಯತೇ । ತಥಾ ಚೋಕ್ತಮ್ "ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ" (ಛಾಂ. ೭-೨೪-೧) ಇತಿ । "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿನಾ ಚ ॥

(ಭಾಷ್ಯಾರ್ಥ)

(ಆಕ್ಷೇಪ):- ಕೂಟಸ್ಥಬ್ರಹ್ಮಾತ್ಮವಾದಿಯ (ಮತದಲ್ಲಿ) ಏಕತ್ವವು ನಿಯಮವಾಗಿರುವದರಿಂದ ಈಶ್ವರ, ಈಶಿತವ್ಯ (ಯಾವ ದೂ) ಇಲ್ಲದ್ದರಿಂದ ಈಶ್ವರನು (ಜಗತ್ತಿಗೆ) ಕಾರಣನೆಂಬ ಪ್ರತಿಜ್ಞೆಗೆ ವಿರೋಧವಾಗುವದಲ್ಲ !

(ಪರಿಹಾರ):- ಹಾಗಲ್ಲ. ಏಕೆಂದರೆ ಅವಿದ್ಯಾತ್ಮಕವಾದ ನಾಮರೂಪಗಳೆಂಬ ಬೀಜವನ್ನು ವ್ಯಾಕರಣಮಾಡುವದರ ಅಪೇಕ್ಷೆಯಿಂದ ಸರ್ವಜ್ಞತ್ವವನ್ನು (ಹೇಳಿದೆ[1]. ಇದರ ವಿವರ): "ಆ ಈ ಆತ್ಮನಿಂದಲೇ ಆಕಾಶವು ಉಂಟಾಗಿದೆ" (ತೈ. ೨-೧) ಮುಂತಾದ ವಾಕ್ಯಗಳಿಂದ ನಿತ್ಯಶುದ್ಧ ಬುದ್ಧಮುಕ್ತಸ್ವರೂಪನೂ ಸರ್ವಜ್ಞನೂ ಸರ್ವಶಕ್ತಿಯುಳ್ಳವನೂ ಆದ ಈಶ್ವರನಿಂದ ಜನ್ಮಸ್ಥಿತಿಲಯಗಳಾಗುವವೇ ಹೊರತು ಅಚೇತನವಾದ ಪ್ರಧಾನದಿಂದಲಾಗಲಿ, ಮತ್ತೆ ಬೇರೆ (ಯಾವದಾದದೊಂದರಿಂದ)ಲಾಗಲಿ (ಆಗುವದಿಲ್ಲ) ಎಂಬೀ ಅರ್ಥವನ್ನು "ಜನ್ಮಾದ್ಯಸ್ಯ ಯತಃ" (೧-೧-೨) ಎಂಬಲ್ಲಿ ಹೇಳಿರುತ್ತದೆ(ಯಷ್ಟೆ). ಆ ಹೇಳಿಕೆಯು ಹಾಗೆಯೇ ಇದೆಯೇ ಹೊರತು ಅದಕ್ಕೆ ವಿರುದ್ಧವಾದ ಅರ್ಥವನ್ನು ಇಲ್ಲಿ ಹೇಳಿರುವದಿಲ್ಲ.

(ಆಕ್ಷೇಪ): - ಹೇಳಿರುವದಿಲ್ಲವೆಂಬುದು ಹೇಗೆ ? ಆತ್ಮನು ಅತ್ಯಂತವಾಗಿ ಒಬ್ಬನೇ ಎರಡನೆಯದಿಲ್ಲದವನೂ (ಆಗಿರುತ್ತಾನೆ) ಎಂದು ಹೇಳುತ್ತಿರುವೆಯಲ್ಲ !

(ಪರಿಹಾರ) :- ಹೇಳಿರುವದಿಲ್ಲವೆಂಬುದು ಹೇಗೆಂಬುದನ್ನು (ತಿಳಿಸುತ್ತೇವೆ), ಕೇಳು. **ಸರ್ವಜ್ಞನಾದ ಈಶ್ವರನ ಸ್ವರೂಪವೇ ಆಗಿದ್ದಂತೆ**

---

1. ಸರ್ವಜ್ಞನಾದ ಈಶ್ವರನು ಅವಿದ್ಯಾತ್ಮಕವಾದ ಜಗತ್ತಿಗೆ ಕಾರಣನು ಎಂಬುದೇ ಸಿದ್ಧಾಂತವು ಎಂದು ಅಭಿಪ್ರಾಯ.

**ಅವಿದ್ಯೆಯಿಂದ ಕಲ್ಪಿತವಾದ[1]. ಅವನೆಂದಾಗಲಿ (ಅವನಿಗಿಂತ) ಬೇರೆಯೆಂದಾಗಲಿ ಹೇಳಲಿಕ್ಕಾಗದಿರುವ ಸಂಸಾರಪ್ರಪಂಚಕ್ಕೆ ಬೀಜವಾಗಿದ್ದುಕೊಂಡಿರುವ ನಾಮರೂಪಗಳನ್ನು ಸರ್ವಜ್ಞನಾದ ಈಶ್ವರನ ಮಾಯೆ, ಶಕ್ತಿ, ಪ್ರಕೃತಿ – ಎಂದು ಶ್ರುತಿಸ್ಮೃತಿಗಳಲ್ಲಿ ಕರೆದಿರುತ್ತದೆ[2]. ಸರ್ವಜ್ಞನಾದ ಈಶ್ವರನು ಅವುಗಳಿಗಿಂತ ಅನ್ಯನು ;** ಏಕೆಂದರೆ "ಆಕಾಶನೆಂಬವನು ನಾಮರೂಪಗಳನ್ನು ನಿರ್ವಹಿಸುವವನು. ಅವುಗಳ ಒಳಗೆ ಯಾವದಿದೆಯೋ ಅದೇ ಬ್ರಹ್ಮವು" (ಛಾಂ. ೮–೧೪–೧) ಎಂದು ಶ್ರುತಿಯು ( ಹಾಗೆಂದು ಹೇಳುತ್ತದೆ ). "ನಾಮರೂಪಗಳನ್ನು ವಿಂಗಡಿಸುವೆನು" (ಛಾಂ. ೬–೩–೨), "ಎಲ್ಲಾ ರೂಪಗಳನ್ನೂ ಸೃಜಿಸಿ (ಆ) ಧೀರನು (ಅವುಗಳಿಗೆ) ನಾಮಗಳನ್ನು ಗೊತ್ತುಮಾಡಿ ಕರೆಯುತ್ತಿರುವನಲ್ಲವೆ?" (ತೈ. ಆ. ೩–೧೨), "ಒಂದೇ ಬೀಜವನ್ನು ಯಾವನು ಬಹುಪ್ರಕಾರವಾಗಿ ಮಾಡುವನೋ" ( ಶ್ವೇ. ೬–೧೨ ) ಇತ್ಯಾದಿಶ್ರುತಿಗಳಿಂದಲೂ (ಹೀಗೆಂದು ಸಿದ್ಧವಾಗುತ್ತದೆ). **ಹೀಗೆ ಅವಿದ್ಯಾಕೃತವಾದ ನಾಮರೂಪಗಳೆಂಬ ಉಪಾಧಿಗಳನ್ನು– ಗಡಿಗೆ, ಕುಡಿಕೆ ಮುಂತಾದವನ್ನು ಆಕಾಶವು ಅನುಸರಿಸುವಂತೆ– ಅನುಸರಿಸುವವನು ಈಶ್ವರನಾಗಿರುತ್ತಾನೆ. ಮತ್ತು ಅವನು ತನ್ನ ಸ್ವರೂಪವೇ ಆಗಿರುವ ಘಟಾಕಾಶಸ್ಥಾನದಲ್ಲಿರುವ ಅವಿದ್ಯಾಪ್ರತ್ಯುಪಸ್ಥಾಪಿತವಾದ ನಾಮರೂಪಗಳಿಂದಾಗಿರುವ ಕಾರ್ಯಕರಣಸಂಘಾತಗಳನ್ನು ಅನುಸರಿಸುವ ಜೀವರೆಂಬ ಹೆಸರಿನ ವಿಜ್ಞಾನಾತ್ಮರುಗಳನ್ನು ವ್ಯವಹಾರವಿಷಯದಲ್ಲಿ ಆಳುತ್ತಿರುವನು[3].** ಅಂತು ಹೀಗೆ ಅವಿದ್ಯಾತ್ಮಕವಾದ ಉಪಾಧಿಯ ಪರಿಚ್ಛೇದದ ಅಪೇಕ್ಷೆಯಿಂದಲೇ ಈಶ್ವರನು 'ಈಶ್ವರನೂ', 'ಸರ್ವಜ್ಞನೂ', 'ಸರ್ವಶಕ್ತನೂ' ಆಗಿರುವನೇ

---

1. ಅವಿದ್ಯಾತ್ಮಕ, ಅವಿದ್ಯಾಕೃತ, ಅವಿದ್ಯಾಪ್ರತ್ಯುಪಸ್ಥಾಪಿತ– ಈ ಎಲ್ಲಾ ಶಬ್ದಗಳನ್ನೂ ಅವಿದ್ಯಾಕಲ್ಪಿತ ಎಂಬರ್ಥದಲ್ಲಿಯೇ ಪ್ರಯೋಗಿಸಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು.

2. ಅವ್ಯಕ್ತ, ಅವ್ಯಾಕೃತ, ಅಕ್ಷರ– ಮುಂತಾದವುಗಳೂ ಮಾಯೆಯ ಹೆಸರುಗಳೇ. ಈ ಮಾಯೆಯು ಅವಿದ್ಯಾಕಲ್ಪಿತವೆಂದಿರುವದನ್ನು ಲಕ್ಷಿಸಬೇಕು.

3. ಆಕಾಶವು ಆಕಾಶವೇ ಆಗಿದ್ದರೂ ಗಡಿಗೆಯ ಆಕಾಶದ ಅಪೇಕ್ಷೆಯಿಂದ ಮಹಾಕಾಶವೆನಿಸಿರುವಂತೆ, ಜೀವರ ಅಪೇಕ್ಷೆಯಿಂದ ಪರಮಾತ್ಮನು ಈಶ್ವರನೆನಿಸುತ್ತಾನೆ ಎಂದರ್ಥ. ಇಲ್ಲಿ ನಾಮರೂಪಗಳು ಈಶ್ವರನಿಗೆ ಉಪಾಧಿ, ಜೀವರಿಗೆ ನಾಮರೂಪಕೃತ ಕಾರ್ಯಕರಣಸಂಘಾತಗಳು ಉಪಾಧಿ ಎಂದಿರುವದರಿಂದ ಮಾಯೋಪಾಧಿಕನಾಗಿ ಈಶ್ವರನೆನಿಸುತ್ತಾನೆ ಎಂದು ಹೇಳಿದಂತೆ ಆಯಿತು. ಬ್ರಹ್ಮವನ್ನು ಜಗತ್ಕಾರಣನಾದ ಈಶ್ವರನೆಂದು ವ್ಯವಹರಿಸುವದಕ್ಕೆ ಇದೇ ಕಾರಣವೆಂದು ಭಾವ.

ಹೊರತು ಪರಮಾರ್ಥವಾಗಿ ವಿದ್ಯೆಯಿಂದ ಎಲ್ಲಾ ಉಪಾಧಿಗಳನ್ನೂ ತಿರಸ್ಕರಿಸಿರುವ ಸ್ವರೂಪದಲ್ಲಿ 'ಈಶಿತೃ', 'ಈಶಿತವ್ಯ' 'ಸರ್ವಜ್ಞ'- ಮುಂತಾದ ವ್ಯವಹಾರವು ಹೊಂದುವದಿಲ್ಲ[1]. ಆದ್ದರಿಂದಲೇ "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ ಮತ್ತೊಂದನ್ನು ಕೇಳುವದಿಲ್ಲವೋ ಮತ್ತೊಂದನ್ನು ಅರಿಯುವದಿಲ್ಲವೋ ಅದು **ಭೂಮವು**" (ಛಾಂ. ೭-೨೪-೧) ಎಂದು ಹೇಳಿರುತ್ತದೆ. "ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ಕಂಡಾನು?" (ಬೃ ೪-೫-೧೫) ಮುಂತಾದ ಶ್ರುತಿಯಲ್ಲಿಯೂ (ಹಾಗೆಂದು ಹೇಳಿರುತ್ತದೆ).

## ಪರಮಾರ್ಥಾವಸ್ಥೆಯಲ್ಲಿ ಯಾವ ವ್ಯವಹಾರವೂ ಇಲ್ಲ

( ಭಾಷ್ಯ )

೪೪೧. ಏವಂ ಪರಮಾರ್ಥಾವಸ್ಥಾಯಾಂ ಸರ್ವವ್ಯವಹಾರಾಭಾವಂ ವದನ್ತಿ ವೇದಾನ್ತಾಃ ಸರ್ವೇ । ತಥಾ ಈಶ್ವರಗೀತಾಸ್ವಪಿ "ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ। ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ । ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥" (ಗೀ. ೫-೧೪,೧೫) ಇತಿ ಪರಮಾರ್ಥಾವಸ್ಥಾಯಾಮ್ ಈಶಿತ್ರೀಶಿತವ್ಯಾದಿವ್ಯವಹಾರಾಭಾವಃ ಪ್ರದರ್ಶ್ಯತೇ । ವ್ಯವಹಾರಾವಸ್ಥಾಯಾಂ ತು ಉಕ್ತಃ ಶ್ರುತಾವಪಿ ಈಶ್ವರಾದಿವ್ಯವಹಾರಃ "ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ (ಬೃ. ೪-೪-೨೨) ಇತಿ। ತಥಾ ಚ ಈಶ್ವರಗೀತಾಸ್ವಪಿ "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥" (ಗೀ. ೧೮-೬೧) ಇತಿ । ಸೂತ್ರಕಾರೋಽಪಿ ಪರಮಾರ್ಥಾಭಿಪ್ರಾಯೇಣ "ತದನನ್ಯತ್ವಮ್" ಇತ್ಯಾಹ । ವ್ಯವಹಾರಾಭಿಪ್ರಾಯೇಣ "ಸ್ಯಾಲ್ಲೋಕವತ್" (೨-೧-೧೩) ಇತಿ ಮಹಾಸಮುದ್ರಸ್ಥಾನೀಯತಾಂ ಬ್ರಹ್ಮಣಃ ಕಥಯತಿ । ಅಪ್ರತ್ಯಾಖ್ಯಾಯೈವ ಕಾರ್ಯಪ್ರಪಞ್ಚಂ ಪರಿಣಾಮಪ್ರಕ್ರಿಯಾಂ ಚ ಆಶ್ರಯತಿ ಸಗುಣೇಷು ಉಪಾಸನೇಷು ಉಪಯೋಕ್ಷ್ಯತೇ ಇತಿ ॥

---

1. ಅವಿದ್ಯಾಕೃತವಾದ ಉಪಾಧಿಗಳಿಂದಲೇ ಈ ವ್ಯವಹಾರಗಳು ಆಗಿರುತ್ತವೆ ಎಂದರ್ಥ.

(ಭಾಷ್ಯಾರ್ಥ)

ಹೀಗೆ **ಪರಮಾರ್ಥಾವಸ್ಥೆಯಲ್ಲಿ**[1] ಯಾವ ವ್ಯವಹಾರವೂ ಇಲ್ಲವೆಂದು ಎಲ್ಲಾ ವೇದಾಂತಗಳೂ ಹೇಳುತ್ತಿರುವವು. ಹಾಗೆಯೇ **ಈಶ್ವರಗೀತೆಗಳಲ್ಲಿಯೂ** "ಪ್ರಭುವು ಜನಕ್ಕೆ ಕರ್ತೃತ್ವವನ್ನಾಗಲಿ ಕರ್ಮಗಳನ್ನಾಗಲಿ ಸೃಜಿಸಿರುವದಿಲ್ಲ ; ಕರ್ಮಫಲಸಂಯೋಗವನ್ನೂ ( ಸೃಜಿಸಿ )ರುವದಿಲ್ಲ. ಆದರೆ ಸ್ವಭಾವವು ಪ್ರವರ್ತಿಸುತ್ತದೆ. ವಿಭುವು ಯಾರ ಪಾಪವನ್ನೂ ಸ್ವೀಕರಿಸುವದಿಲ್ಲ, ಸುಕೃತವನ್ನೂ (ಸ್ವೀಕರಿಸು)ವದಿಲ್ಲ. ಅಜ್ಞಾನದಿಂದ ಜ್ಞಾನವು ಮರೆಯಾಗಿರುವದು ; ಅದರಿಂದ ಜೀವರುಗಳು ಮೋಹಿತರಾಗುತ್ತಿರುವರು" (ಗೀ. ೫–೧೪,೧೫) ಎಂದು ಪರಮಾರ್ಥಾವಸ್ಥೆಯಲ್ಲಿ[1] ಈಶಿತೃ, ಈಶಿತವ್ಯ –ಮುಂತಾದ (ಯಾವ) ವ್ಯವಹಾರವೂ ಇರುವದಿಲ್ಲವೆಂದು ತಿಳಿಸಿರುತ್ತದೆ: ವ್ಯವಹಾರಾವಸ್ಥೆಯಲ್ಲಾದರೋ ಶ್ರುತಿಯಲ್ಲಿಯೂ ಈಶ್ವರಾದಿವ್ಯವಹಾರವನ್ನು "ಇವನೇ ಸರ್ವೇಶ್ವರನು, ಇವನೇ ಭೂತಾಧಿಪತಿಯು, ಇವನೇ ಭೂತಪಾಲನು, ಇವನೇ ಈ ಲೋಕಗಳು ಸಂಕರವಾಗದಂತೆ ತಡೆದಿಟ್ಟಿರುವ ಸೇತು" (ಬೃ. ೪–೪–೨೨) ಎಂದು ಹೇಳಿದೆ. ಮತ್ತು ಹಾಗೆಯೇ ಈಶ್ವರಗೀತೆಯಲ್ಲಿಯೂ "ಅರ್ಜುನನೆ, ಈಶ್ವರನು ಯಂತ್ರಾರೂಢವಾದ ಭೂತಗಳನ್ನು ಮಾಯೆಯಿಂದ ಸುತ್ತಿಸುತ್ತಾ, ಸರ್ವಭೂತಗಳ ಹೃದ್ದೇಶದಲ್ಲಿಯೂ ಇದ್ದುಕೊಂಡಿರುತ್ತಾನೆ" (ಗೀ. ೧೮–೬೧) ಎಂದಿದೆ. ಸೂತ್ರಕಾರರೂ ಪರಮಾರ್ಥದ ಅಭಿಪ್ರಾಯದಿಂದ "ತದನನ್ಯತ್ವಮ್" (ಆ ಕಾರ್ಯಕಾರಣಗಳಿಗೆ) ಅನನ್ಯತ್ವ(ವಿದೆ) –ಎಂದು ಹೇಳಿರುತ್ತಾರೆ. ಆದರೆ ವ್ಯವಹಾರದ ಅಭಿಪ್ರಾಯದಿಂದ "ಸ್ಯಾಲ್ಲೋಕವತ್" (೨–೧–೧೩) ಲೋಕದಲ್ಲಿ (ಕಂಡಿರು)ವಂತೆ ಇರಬಹುದು –ಎಂದು ಬ್ರಹ್ಮವು ಮಹಾಸಮುದ್ರಸ್ಥಾನದಲ್ಲಿರುತ್ತದೆ ಎಂದು ಹೇಳಿರುತ್ತಾರೆ. ಮತ್ತು **ಕಾರ್ಯಪ್ರಪಂಚವನ್ನು ತಿರಸ್ಕರಿಸದೆಯೇ ಸಗುಣೋಪಾಸನೆಗಳಲ್ಲಿ ಉಪಯೋಗವಾಗಲೆಂದು ಪರಿಣಾಮಪ್ರಕ್ರಿಯೆಯನ್ನೂ ಆಶ್ರಯಿಸಿರುತ್ತಾರೆ**[2].

---

1. 'ಪರಮಾರ್ಥಾವಸ್ಥೆ' ಎಂದರೆ ಜ್ಞಾನದೃಷ್ಟಿಯ ಸ್ಥಿತಿ. ಇದು ಒಂದು ಅವಸ್ಥೆ ಎಂಬುದು ಲೋಕದೃಷ್ಟಿಯಿಂದ ಹೇಳಿರುವದೇ ಹೊರತು ಪರಮಾರ್ಥಾವಸ್ಥೆ ಎಂಬ ಒಂದಾನೊಂದು ಅವಸ್ಥೆಯು ಮುಂದೆ ಬರುವದೆಂದು ತಿಳಿಯಬಾರದು. ವ್ಯವಹಾರಾಭಾವವು ಅವಸ್ಥಾನಿಮಿತ್ತವಾಗಿ ಆಗತಕ್ಕದ್ದಲ್ಲವೆಂದು ಭಾ. ಭಾ. ೪೩೫ರಲ್ಲಿ ಹೇಳಿದೆ.

2. ಪರಿಣಾಮಪ್ರಕ್ರಿಯೆ ಎಂದರೆ ಬ್ರಹ್ಮವು ಜಗತ್ತಾಗಿ ಪರಿಣಮಿಸಿದೆ ಎಂಬ ವಾದ. ಬ್ರಹ್ಮವು ಕೂಟಸ್ಥವಾಗಿರುವದರಿಂದ ಈ ಪ್ರಕ್ರಿಯೆಯು ಸರಿಯಲ್ಲವಾದರೂ ವ್ಯವಹಾರದೃಷ್ಟಿಯಿಂದ ಸತ್ಯವಾಗಿ ತೋರುವ ಪ್ರಪಂಚವು ಬ್ರಹ್ಮಕ್ಕಿಂತ ಬೇರೆಯಲ್ಲವೆಂದು ತಿಳಿಸುವದಕ್ಕೆ ಶ್ರುತಿಯು ಸೃಷ್ಟಿಯನ್ನು ಹೇಳಿರುತ್ತದೆ ಈ ಪ್ರಕ್ರಿಯೆಯನ್ನು ಒಪ್ಪಿ ಕಾರ್ಯದ ಕೆಲವು ಉತ್ತಮಗುಣಗಳನ್ನು ಈಶ್ವರನಲ್ಲಿ ಅಧ್ಯಾರೋಪಿಸಿ ಉಪಾಸನೆಯನ್ನು ವಿಧಿಸಿರುತ್ತದೆ. ಮಧ್ಯಮಾಧಿಕಾರಿಗಳಿಗೆ ಆ ಉಪಾಸನೆಗಳು ಬೇಕಾಗುವವು.

## ಭಾವೇ ಚೋಪಲಬ್ಧೇಃ ॥ ೧೫ ॥

೧೫. (ಕಾರಣವು) ಇದ್ದರೇ ಕಾಣಬರುವದರಿಂದಲೂ (ಹೀಗೆ)·

## ಕಾರಣವಿದ್ದರೇ ಕಾರ್ಯವು ಕಾಣಬರುತ್ತದೆ

(ಭಾಷ್ಯ)

೪೮೨. ಇತಶ್ಚ ಕಾರಣಾತ್ ಅನನ್ಯತ್ವಂ ಕಾರ್ಯಸ್ಯ । ಯತ್ಕಾರಣಂ ಭಾವೇ·ಏವ ಕಾರಣಸ್ಯ ಕಾರ್ಯಮ್ ಉಪಲಭ್ಯತೇ ನಾಭಾವೇ । ತದ್ ಯಥಾ । ಸತ್ಯಾಂ ಮೃದಿ ಘಟಃ ಉಪಲಭ್ಯತೇ ಸತ್ಸು ಚ ತನ್ತುಷು ಪಟಃ । ನ ಚ ನಿಯಮೇನ ಅನ್ಯಭಾವೇ ಅನ್ಯಸ್ಯ ಉಪಲಬ್ಧಿರ್ದೃಷ್ಟಾ । ನ ಹಿ ಅಶ್ವೋ ಗೋರನ್ಯಃ ಸನ್ ಗೋರ್ಭಾವೇ ಏವ ಉಪಲಭ್ಯತೇ । ನ ಚ ಕುಲಾಲಾ ಭಾವೇ ಏವ ಘಟಃ ಉಪಲಭ್ಯತೇ । ಸತ್ಯಪಿ ನಿಮಿತ್ತನೈಮಿತ್ತಿಕಭಾವೇ ಅನ್ಯತ್ವಾತ್ । ನನು ಅನ್ಯಸ್ಯ ಭಾವೇಽಪಿ ಅನ್ಯಸ್ಯ ಉಪಲಬ್ಧಿಃ ನಿಯತಾ ದೃಶ್ಯತೇ । ಯಥಾ ಅಗ್ನಿಭಾವೇ ಧೂಮಸ್ಯ ಇತಿ । ನೇತ್ಯುಚ್ಯತೇ । ಉದ್ವಾಪಿತೇಽಪಿ ಅಗ್ನೌ ಗೋಪಾಲಘುಟಿಕಾದಿಧಾರಿತಸ್ಯ ಧೂಮಸ್ಯ ದೃಶ್ಯಮಾನತ್ವಾತ್ । ಅಥ ಧೂಮಂ ಕಯಾಚಿದವಸ್ಥಯಾ ವಿಶಿಂಷ್ಯಾತ್ 'ಈದೃಶೋ ಧೂಮಃ ನಾಸತಿ ಅಗ್ನೌ ಭವತಿ' ಇತಿ । ನೈವಮಪಿ ಕಶ್ಚಿದ್ ದೋಷಃ । ತದ್ಭಾವಾನುರಕ್ತಾಂ ಹಿ ಬುದ್ಧಿಂ ಕಾರ್ಯಕಾರಣಯೋಃ ಅನನ್ಯತ್ವೇ ಹೇತುಂ ವಯಂ ವದಾಮಃ । ನ ಚಾಸೌ ಅಗ್ನಿಧೂಮಯೋಃ ವಿದ್ಯತೇ ॥

(ಭಾಷ್ಯಾರ್ಥ)

ಇದರಿಂದಲೂ ಕಾರ್ಯವು ಕಾರಣಕ್ಕಿಂತ ಅನನ್ಯ(ವಾಗಿರುತ್ತದೆ ಎನ್ನಬೇಕು). ಏಕೆಂದರೆ ಕಾರಣವಿದ್ದರೇ ಕಾರ್ಯವು ಕಾಣಬರುತ್ತದೆಯೇ ಹೊರತು (ಅದು) ಇಲ್ಲದಿದ್ದರೆ (ಕಾಣಬರುವ)ದಿಲ್ಲ[1].

ಅದು ಹೇಗೆಂದರೆ ಮಣ್ಣು ಇದ್ದರೇ ಗಡಿಗೆಯು ಕಾಣಬರುತ್ತದೆ, ಮತ್ತು ನೂಲುಗಳು ಇದ್ದರೇ ಬಟ್ಟೆಯು (ಕಾಣಬರುತ್ತದೆ). ಆದರೆ ಒಂದು (ವಸ್ತು ವಿದ್ದರೆ) ಮತ್ತೊಂದು ಗೊತ್ತಾಗಿ[2] ಕಾಣಬರುವದು ಅನುಭವದಲ್ಲಿಲ್ಲ.

---

1. ಕಾರಣವಿದ್ದರೇ ಕಾರ್ಯವಿರುವದರಿಂದ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ ಎಂಬುದು ಪರಮಾರ್ಥದೃಷ್ಟಿಯಿಂದಲೇ ; ವ್ಯವಹಾರದೃಷ್ಟಿಯಲ್ಲಿ ಕಾಣುವ ಕಾರ್ಯಕಾರಣಭಾವವು ಇಲ್ಲವೆಂದೇನೂ ಇಲ್ಲಿ ಹೇಳಿಲ್ಲ.

2. ಕಾಕತಾಲೀಯವಾಗಿ ಎರಡೂ ಜೊತೆಯಲ್ಲಿರಬಹುದು ; ನಿಯತವಾಗಿ ಕಾಣುವದಿಲ್ಲ.

ಎತ್ತಿಗಿಂತ ಬೇರೆಯಾಗಿರುವ ಕುದುರೆಯು ಎತ್ತು ಇದ್ದರೇ ಕಾಣಬರುತ್ತದೆ ಎಂಬುದಿಲ್ಲವಷ್ಟೆ; ಕುಂಬಾರನು ಇದ್ದರೇ ಗಡಿಗೆಯು ಕಾಣಬರುತ್ತದೆ ಎಂಬುದೂ ಇಲ್ಲವಷ್ಟೆ? ಏಕೆಂದರೆ (ಈ ದೃಷ್ಟಾಂತದಲ್ಲಿ)' ನಿಮಿತ್ತನೈಮಿತ್ತಿಕ ಭಾವವಿದ್ದರೂ[1] (ಗಡಿಗೆಯು ಕುಂಬಾರನಿಗಿಂತ) ಬೇರೆಯಾಗಿರುತ್ತದೆ.

(ಆಕ್ಷೇಪ):— (ತನಗಿಂತ) ಅನ್ಯವಾದ (ವಸ್ತು)ವಿದ್ದರೂ ಅನ್ಯ (ವಸ್ತುವು) ನಿಯಮದಿಂದ ಕಾಣಬರುತ್ತದೆಯಲ್ಲ! ಉದಾಹರಣೆಗೆ ಬೆಂಕಿಯಿದ್ದರೆ ಹೊಗೆ ಇರುತ್ತದೆಯಲ್ಲ![2]

(ಪರಿಹಾರ):— ಹಾಗಿಲ್ಲ, ಎನ್ನುತ್ತೇವೆ. ಏಕೆಂದರೆ ಬೆಂಕಿಯನ್ನು ಆರಿಸಿದಮೇಲೂ ದನಕಾಯುವವರ ಚಿಲುಮೆಯೇ ಮುಂತಾದವುಗಳಲ್ಲಿರುವ ಹೊಗೆಯು ಕಾಣಬರುತ್ತದೆ[3]. ಇನ್ನು 'ಇಂಥ ಹೊಗೆಯು ಬೆಂಕಿಯಿಲ್ಲದಿದ್ದರೆ ಬರಲಾರದು' ಎಂದು ಹೊಗೆಗೆ ಯಾವದಾದರೊಂದು ಅವಸ್ಥೆಯ ವಿಶೇಷಣವನ್ನು ಕೊಟ್ಟು ಹೇಳುತ್ತೇವೆ[4] ಎಂದರೆ ಹಾಗೂ ಯಾವ ದೋಷವೂ ಇಲ್ಲ. ಏಕೆಂದರೆ ತದ್ಭಾವಾನುರಕ್ತವಾದ ಬುದ್ಧಿಯೇ[5] ಕಾರ್ಯಕಾರಣಗಳು ಬೇರೆಯಲ್ಲ ಎಂಬುದಕ್ಕೆ ಕಾರಣವೆಂದು ನಾವು ಹೇಳುತ್ತಿದ್ದೇವೆ. ಆದರೆ ಬೆಂಕಿಹೊಗೆಗಳಿಗೆ ಇದು ಇರುವದಿಲ್ಲ[6].

---

1. ಕುಂಬಾರನು ಗಡಿಗೆಗೆ ನಿಮಿತ್ತಕಾರಣನಾದರೂ ಗಡಿಗೆಯು ಬೇರೆಯ ಪದಾರ್ಥವಾಗಿರುವದರಿಂದ ಕುಂಬಾರನಿಲ್ಲದಿದ್ದರೂ ಕಾಣಬರುತ್ತದೆ.

2. ಬೆಂಕಿಯು ಕಾರಣ, ಹೊಗೆ ಕಾರ್ಯ, ಆದರೂ ಬೆಂಕಿಯೇ ಹೊಗೆಯಲ್ಲ. ಹೀಗಿದ್ದರೂ ಬೆಂಕಿಯಿದ್ದರೇ ಹೊಗೆ ಕಾಣಬರುತ್ತದೆ ಎಂಬ ನಿಯಮವಿದೆ.

3. ಹೊಗೆ ಕುಡಿಯುವ ಕೊಳವಿ ('ಚಿಲವ್') ಗುಡಿಗುಡಿ ಮುಂತಾದದ್ದರಲ್ಲಿದ್ದ ಬೆಂಕಿಯು ಆರಿದಮೇಲೂ ಹೊಗೆ ಬರುತ್ತಿರುತ್ತದೆ ಎಂಬರ್ಥವನ್ನು ಇಟ್ಟುಕೊಂಡಿದೆ. ವ್ಯಾಖ್ಯಾನಕಾರರು ದೃಷ್ಟಾಂತವನ್ನು ಸ್ಪಷ್ಟವಾಗಿ ವಿವರಿಸಿಲ್ಲ.

4. 'ಇಂಥ' ಎಂದರೆ ದೊಡ್ಡದಾಗಿ ಮೇಲಕ್ಕೆ ಹಬ್ಬುತ್ತಿರುವದು ಎಂದು ನ್ಯಾ॥ ನಿ॥ ವ್ಯಾಖ್ಯಾನದಲ್ಲಿದೆ. ಈ ಹೊಗೆಯು ಈಗಲ್ಲದಿದ್ದರೆ ಹಿಂದಾದರೂ ಬೆಂಕಿಯಿಲ್ಲದೆ ಇದ್ದರೆ ಬರುತ್ತಿರಲಿಲ್ಲ ಎಂಬ ನಿಯಮವನ್ನು ಅಂಗೀಕರಿಸಿ ಪೂರ್ವಪಕ್ಷಿ ಶಂಕಿಸಿರುತ್ತಾನೆಂದು ತೋರುತ್ತದೆ. ಈ ಶಂಕೆಯನ್ನು ಒಪ್ಪಿಯೇ ಮುಂದಿನ ಪರಿಹಾರವನ್ನು ಹೇಳಿದೆ.

5. ಮಡಕೆಯಲ್ಲಿ ಮೃದ್ಭಾವಾನುರಕ್ತಬುದ್ಧಿಯಿದೆ, ಇದು ಮಣ್ಣೇ ಎಂಬ ಬುದ್ಧಿಯು ಸೇರಿಕೊಂಡು ಬಂದಿರುತ್ತದೆ. ಈ ಬುದ್ಧಿಯೇ ಇಲ್ಲಿ ಹೇತು, ಬರಿಯ ಮಣ್ಣಿನ ಇರವನ್ನು ನಾವು ಹೇತುವೆಂದಿಲ್ಲ.

6. ಇದು ಬೆಂಕಿಯೇ ಎಂಬ ಬುದ್ಧಿಯೇನೂ ಹೊಗೆಯಲ್ಲಿರುವದಿಲ್ಲ; ಬೆಂಕಿಯು ಹೊಗೆಗೆ ಉಪಾದಾನಕಾರಣವೂ ಅಲ್ಲ.

## ಕಾರಣವೇ ಕಾರ್ಯದಲ್ಲಿ ಕಾಣುತ್ತದೆ

(ಭಾಷ್ಯ)

೪೪೩. 'ಭಾವಾಚ್ಚೋಪಲಬ್ಧೇಃ' ಇತಿ ವಾ ಸೂತ್ರಮ್ । ನ ಕೇವಲಂ ಶಬ್ದಾದೇವ ಕಾರ್ಯಕಾರಣಯೋರನನ್ಯತ್ವಮ್, ಪ್ರತ್ಯಕ್ಷೋಪಲಬ್ಧಿ ಭಾವಾಚ್ಚ ತಯೋರನನ್ಯತ್ವಮ್ ಇತ್ಯರ್ಥಃ । ಭವತಿ ಹಿ ಪ್ರತ್ಯಕ್ಷೋಪಲಬ್ಧಿಃ ಕಾರ್ಯಕಾರಣಯೋರನನ್ಯತ್ವೇ । ತದ್ಯಥಾ – ತನ್ತುಸಂಸ್ಥಾನೇ ಪಟೇ ತನ್ತುವ್ಯತಿರೇಕೇಣ ಪಟೋ ನಾಮ ಕಾರ್ಯಂ ನೈವ ಉಪಲಭ್ಯತೇ । ಕೇವಲಾಸ್ತು ತನ್ತವಃ ಆತಾನವಿತಾನವನ್ತಃ ಪ್ರತ್ಯಕ್ಷಮ್ ಉಪಲಭ್ಯನ್ತೇ । ತಥಾ ತನ್ತುಷು ಅಂಶವಃ, ಅಂಶುಷು ತದವಯವಾಃ । ಅನಯಾ ಪ್ರತ್ಯಕ್ಷೋಪಲಬ್ಧ್ಯಾ ಲೋಹಿತಶುಕ್ಲಕೃಷ್ಣಾನಿ ತ್ರೀಣಿ ರೂಪಾಣಿ, ತತೋ ವಾಯುಮಾತ್ರಮ್, ಆಕಾಶಮಾತ್ರಂ ಚ ಇತ್ಯನುಮೇಯಮ್ । ತತಃ ಪರಂ ಬ್ರಹ್ಮ ಏಕಮೇವಾದ್ವಿತೀಯಮ್ । ತತ್ರ ಸರ್ವಪ್ರಮಾಣಾನಾಂ ನಿಷ್ಠಾಮ್ ಅವೋಚಾಮ ॥

(ಭಾಷ್ಯಾರ್ಥ)

ಅಥವಾ **"ಭಾವಾಚ್ಚೋಪಲಬ್ಧೇಃ"** (ಉಪಲಬ್ಧಿಯು ಇರುವದರಿಂದಲೂ) **ಎಂದು ಸೂತ್ರ(ಪಾಠವಿದೆ ಎಂದಾದರೂ ಕಲ್ಪಿಸಬಹುದು).** ಬರಿಯ ಶಬ್ದದಿಂದಲೇ ಕಾರ್ಯಕಾರಣಗಳಿಗೆ ಅನನ್ಯತ್ವ(ವಿದೆ) ಎಂದಲ್ಲ; ಪ್ರತ್ಯಕ್ಷವಾದ ಅರಿವು ಇರುವದರಿಂದಲೂ ಅವೆರಡಕ್ಕೂ ಅನನ್ಯತ್ವವು (ಇದೆ) ಎಂದರ್ಥ. ಏಕೆಂದರೆ ಕಾರ್ಯಕಾರಣಗಳು ಅನನ್ಯವೆಂಬುದಕ್ಕೆ ಪ್ರತ್ಯಕ್ಷವಾದ ಅರಿವೇ ಇರುತ್ತದೆ. ಅದು ಹೇಗೆಂದರೆ ನೂಲುಗಳ ಆಕಾರ(ವಿಶೇಷ)ವಾದ ಬಟ್ಟೆಯಲ್ಲಿ ನೂಲುಗಳನ್ನು ಬಿಟ್ಟರೆ ಬಟ್ಟೆ ಎಂಬ ಕಾರ್ಯವು ಕಾಣಬರುವದೇ ಇಲ್ಲ; ಹಾಸುಹೊಕ್ಕಾಗಿರುವ ಬರಿಯ ನೂಲುಗಳೇ ಪ್ರತ್ಯಕ್ಷವಾಗಿ ಕಾಣಬರುತ್ತವೆ. ಹೀಗೆಯೇ ನೂಲುಗಳಲ್ಲಿ (ಅರಳೆಯ) ಹಂಜಿಗಳು, ಹಂಜಿಗಳಲ್ಲಿ ಅದರ ಅವಯವಗಳು (ಕಾಣಬರುತ್ತವೆ). ಈ ಪ್ರತ್ಯಕ್ಷಾನುಭವದಿಂದ ಕೆಂಪು, ಬಿಳುಪು, ಕಪ್ಪು –ಎಂಬ ಮೂರು ರೂಪಗಳು, ಅವುಗಳಿಂದ ವಾಯುಮಾತ್ರವು, ಮತ್ತು ಆಕಾಶಮಾತ್ರವು –ಹೀಗೆ ಅನುಮಾನಿಸಬಹುದು. **ಅದರಿಂದ ತನಗೆರಡನೆಯ**

ದಿಲ್ಲದೆ ಒಂದೇ ಆಗಿರುವ ಪರಬ್ರಹ್ಮವು (ಸಿದ್ಧವಾಗುವದು). ಅದರಲ್ಲಿ ಸರ್ವಪ್ರಮಾಣಗಳೂ ಕೊನೆಗಾಣುವವು ಎಂದು ಹೇಳಿರುತ್ತೇವೆ[1].

ಸತ್ತ್ವಾಚ್ಚಾವರಸ್ಯ ॥ ೧೬ ॥

೧೬. ಈಚಿನದು ಇರುವದರಿಂದಲೂ (ಹೀಗೆ).

## ಕಾರ್ಯವು ಹುಟ್ಟುವ ಮುಂಚೆ ಕಾರಣದಲ್ಲಿರುತ್ತದೆ

(ಭಾಷ್ಯ)

೪೪೪. ಇತಶ್ಚ ಕಾರಣಾತ್ ಕಾರ್ಯಸ್ಯ ಅನನ್ಯತ್ವಮ್ । ಯತ್ಕಾರಣಂ ಪ್ರಾಗುತ್ಪತ್ತೇಃ ಕಾರಣಾತ್ಮನೈವ ಕಾರಣೇ ಸತ್ತ್ವಮ್ ಅವರಕಾಲೀನಸ್ಯ ಕಾರ್ಯಸ್ಯ ಶ್ರೂಯತೇ । "ಸದೇವ ಸೋಮ್ಯೇದಮಗ್ರ ಆಸೀತ್" (ಛಾಂ. ೬-೨-೧), "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್" (ಐ. ಆ. ೨-೪-೧) ಇತ್ಯಾದೌ ಇದಂಶಬ್ದಗೃಹೀತಸ್ಯ ಕಾರ್ಯಸ್ಯ ಕಾರಣೇನ ಸಾಮಾನಾಧಿಕರಣ್ಯಾತ್ । ಯಚ್ಚ ಯದಾತ್ಮನಾ ಯತ್ರ ನ ವರ್ತತೇ ನ ತತ್ ತತ ಉತ್ಪದ್ಯತೇ । ಯಥಾ ಸಿಕತಾಭ್ಯಸ್ತೈಲಮ್ । ತಸ್ಮಾತ್ ಪ್ರಾಗುತ್ಪತ್ತೇರನನ್ಯತ್ವಾತ್ ಉತ್ಪನ್ನಮಪಿ ಅನನ್ಯದೇವ ಕಾರಣಾತ್ ಕಾರ್ಯಮ್ ಇತಿ ಅವಗಮ್ಯತೇ । ಯಥಾ ಚ ಕಾರಣಂ ಬ್ರಹ್ಮ ತ್ರಿಷು ಕಾಲೇಷು ಸತ್ತ್ವಂ ನ ವ್ಯಭಿಚರತಿ, ಏವಂ ಕಾರ್ಯಮಪಿ ಜಗತ್ ತ್ರಿಷು ಕಾಲೇಷು ಸತ್ತ್ವಂ ನ ವ್ಯಭಿಚರತಿ । ಏಕಂ ಚ ಪುನಃ ಸತ್ತ್ವಮ್ ಅತೋಽಪಿ ಅನನ್ಯತ್ವಂ ಕಾರಣಾತ್ ಕಾರ್ಯಸ್ಯ ॥

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ. ಏಕೆಂದರೆ ಈಚಿನ ಕಾಲದ್ದಾದ ಕಾರ್ಯವು ಹುಟ್ಟುವದಕ್ಕೆ ಮುಂಚೆ ಕಾರಣರೂಪದಿಂದಲೇ

---

1. ಪ್ರತ್ಯಕ್ಷಾನುಮಾನಗಳಿಂದ ಆದರದರ ಕಾರಣವು ಮಾತ್ರ ಸಿದ್ಧಿಯಾಗುವದರಿಂದ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ ಎಂದು ಏರ್ಪಡುತ್ತದೆ. ಈ ಕ್ರಮದಲ್ಲಿ ಆಕಾಶದವರೆಗೂ ಹೋಗಬಹುದು ; ಆಕಾಶವು ಬ್ರಹ್ಮಮಾತ್ರವೆಂದು ಶ್ರುತಿಯ ಬಲದಿಂದ ಗೊತ್ತು ಮಾಡಿಕೊಳ್ಳಬಹುದು. ಅದರ ಮುಂದಕ್ಕೂ ಒಂದು ತತ್ತ್ವವಿದೆ ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಶ್ರುತಿಯಿಂದಾಗುವ ಬ್ರಹ್ಮಜ್ಞಾನವು ಆದರೆ ಆಕಾಂಕ್ಷೆಯೇ ಉಂಟಾಗುವದಿಲ್ಲವಾದ್ದರಿಂದ ಅದೇ ಕೊನೆಯ ಜ್ಞಾನವು ಎಂದು ಭಾ. ಭಾ. ೪೩೪ರಲ್ಲಿ ತಿಳಿಸಿಕೊಟ್ಟಿದೆ. ಇಲ್ಲಿರುವ ಯುಕ್ತಿಯನ್ನು ಮಾಂ. ಕಾ. ೪-೨೫ರ ಭಾಷ್ಯದಲ್ಲಿರುವದಕ್ಕೆ (ಭಾ. ಭಾ. ೨೬೦) ಹೋಲಿಸಿರಿ.

ಕಾರಣದಲ್ಲಿರುವದೆಂದು ಶ್ರುತಿಯಲ್ಲಿದೆ. ಏಕೆಂದರೆ "ಸೋಮ್ಯನೆ, ಇದು ಮೊದಲು ಸತ್ತೇ ಆಗಿತ್ತು" (ಛಾಂ. ೬-೨-೧), "ಇದು ಮೊದಲು ಆತ್ಮನೊಬ್ಬನೇ ಆಗಿತ್ತು" (ಐ. ೧-೧) ಎಂದು ಮುಂತಾಗಿರುವ (ಶ್ರುತಿಯಲ್ಲಿ) ಇದು ಎಂಬ ಶಬ್ದದಿಂದ ತಿಳಿಯಬರುವ ಕಾರ್ಯಕ್ಕೆ ಕಾರಣದೊಡನೆ ಸಾಮಾನಾಧಿಕರಣ್ಯವನ್ನು ಹೇಳಿರುತ್ತದೆ[1]. **ಯಾವದು ಯಾವದರ ರೂಪದಿಂದ ಯಾವದರಲ್ಲಿ ಇರುವದಿಲ್ಲವೋ, ಅದು ಅದರಿಂದ ಹುಟ್ಟುವದಿಲ್ಲ. ಉದಾಹರಣೆಗೆ ಮರಳಿನಿಂದ ಎಣ್ಣೆ (ಹುಟ್ಟುವದಿಲ್ಲ)[2]. ಆದ್ದರಿಂದ ಹುಟ್ಟುವ ಮುಂಚೆ (ಕಾರಣಕ್ಕಿಂತ) ಅನನ್ಯವಾಗಿರುವದರಿಂದ, ಕಾರ್ಯವು ಹುಟ್ಟಿದ ಮೇಲೂ ಕಾರಣಕ್ಕೆ ಅನನ್ಯವೇ ಎಂದು ನಿಶ್ಚಯವಾಗುತ್ತದೆ. ಕಾರಣವಾದ ಬ್ರಹ್ಮವು ಹೇಗೆ ಮೂರು ಕಾಲಗಳಲ್ಲಿಯೂ ಸತ್ತ್ವವನ್ನು ಬಿಟ್ಟುಹೋಗುವದಿಲ್ಲವೋ ಹಾಗೆಯೇ ಕಾರ್ಯವಾದ ಜಗತ್ತೂ ಮೂರು ಕಾಲಗಳಲ್ಲಿಯೂ ಸತ್ತ್ವವನ್ನು ಬಿಟ್ಟುಹೋಗುವದಿಲ್ಲ. ಆದರೆ ಸತ್ತ್ವವು ಒಂದೇ; ಆದ್ದರಿಂದಲೂ ಕಾರಣಕ್ಕೆ ಕಾರ್ಯವು ಅನನ್ಯವಾಗಿರುತ್ತದೆ[3].**

**ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾನ್ತರೇಣ ವಾಕ್ಯಶೇಷಾತ್ ॥**

೧೭. ಅಸತ್ತೆಂದು ಹೇಳಿರುವದರಿಂದ (ಇದು ಸರಿ)ಯಲ್ಲವಲ್ಲ! ಎಂದರೆ ಹಾಗಲ್ಲ; ಏಕೆಂದರೆ ಧರ್ಮಾಂತರದಿಂದ (ಹೇಳಿದೆ. ಇದು) ವಾಕ್ಯಶೇಷದಿಂದ ಗೊತ್ತಾಗುತ್ತದೆ.

## ಕಾರ್ಯವು ಹುಟ್ಟುವ ಮುಂಚೆ ಅಸತ್ತು ಎಂಬ ಶ್ರುತಿಗೆ ಗತಿ

**( ಭಾಷ್ಯ )**

೪೪೫. ನನು ಕ್ವಚಿತ್ ಅಸತ್ತ್ವಮಪಿ ಪ್ರಾಗುತ್ಪತ್ತೇಃ ಕಾರ್ಯಸ್ಯ ವ್ಯಪದಿಶತಿ ಶ್ರುತಿಃ – "ಅಸದೇವೇದಮಗ್ರ ಆಸೀತ್" (ಛಾಂ. ೩-೧೯-೧)

---

1. ಇದು ಎಂದರೆ ಈ ಜಗತ್ತು, ಸತ್ತೇ ಅಥವಾ ಆತ್ಮನೇ ಆಗಿತ್ತು –ಎಂದು ಕಾರಣನಾದ ಆತ್ಮನೇ ಆಗಿತ್ತು ಎಂದು ಹೇಳಿರುತ್ತದೆ.

2. ಏಕೆಂದರೆ ಎಣ್ಣೆಯು ಹುಟ್ಟುವ ಮುಂಚೆ ಮರಳಿನ ರೂಪದಲ್ಲಿರುವದಿಲ್ಲ.

3. ಜಗತ್ತೆಲ್ಲವೂ ಸತ್ (ಇರುವದು) ಎಂದು ಸದನ್ವಿತವಾಗಿಯೇ ಕಾಣುತ್ತದೆ. ಸತ್ತಿಗಿಂತ ಬೇರೆಯಾಗಿರುವದಿಲ್ಲ. ಬ್ರಹ್ಮವು ಸತ್ತೆಂವೇ ಶ್ರುತಿಯಲ್ಲಿದೆ. ಆದ್ದರಿಂದ ಜಗತ್ತು ಬ್ರಹ್ಮಕ್ಕಿಂತ ಬೇರೆಯಲ್ಲ. ಗೀ. ಭಾ. ೨-೧೧, ಛಾ. ಭಾ. ೨-೨.

ಇತಿ, "ಅಸದ್ವಾ ಇದಮಗ್ರ ಆಸೀತ್" (ತೈ. ೨-೭) ಇತಿ ಚ । ತಸ್ಮಾತ್ ಅಸದ್ವ್ಯಪದೇಶಾತ್ ನ ಪ್ರಾಗುತ್ಪತ್ತೇಃ ಕಾರ್ಯಸ್ಯ ಸತ್ತ್ವಮ್ ಇತಿ ಚೇತ್। ನೇತಿ ಬ್ರೂಮಃ । ನ ಹಿ ಅಯಮ್ ಅತ್ಯನ್ತಾಸತ್ತ್ವಾಭಿಪ್ರಾಯೇಣ ಪ್ರಾಗುತ್ಪತ್ತೇಃ ಕಾರ್ಯಸ್ಯ ಅಸದ್ವ್ಯಪದೇಶಃ । ಕಿಂ ತರ್ಹಿ, ವ್ಯಾಕೃತನಾಮರೂಪತ್ವಾತ್ ಧರ್ಮಾತ್ ಅವ್ಯಾಕೃತನಾಮರೂಪತ್ವಂ ಧರ್ಮಾನ್ತರಮ್, ತೇನ ಧರ್ಮಾನ್ತರೇಣ ಅಯಮ್ ಅಸದ್ವ್ಯಪದೇಶಃ ಪ್ರಾಗುತ್ಪತ್ತೇಃ ಸತ ಏವ ಕಾರ್ಯಸ್ಯ ಕಾರಣರೂಪೇಣಾನನ್ಯಸ್ಯ । ಕಥಮೇತತ್ ಅವಗಮ್ಯತೇ ? ವಾಕ್ಯಶೇಷಾತ್ । ಯತ್ ಉಪಕ್ರಮೇ ಸಂದಿಗ್ಧಾರ್ಥಂ ವಾಕ್ಯಮ್, ತತ್ ಶೇಷಾತ್ ನಿಶ್ಚೀಯತೇ। ಇಹ ಚ ತಾವತ್ "ಅಸದೇವೇದಮಗ್ರ ಆಸೀತ್" ಇತಿ ಅಸಚ್ಛಬ್ದೇನ ಉಪಕ್ರಮೇ ನಿರ್ದಿಷ್ಟಂ ಯತ್ ತದೇವ ಪುನಃ ತಚ್ಛಬ್ದೇನ ಪರಾಮೃಶ್ಯ ಸದಿತಿ ವಿಶಿನಷ್ಟಿ "ತತ್ ಸದಾಸೀತ್" (ಛಾಂ. ೩-೧೯-೧) ಇತಿ । ಅಸತಶ್ಚ ಪೂರ್ವಾಪರಕಾಲಾಸಂಬನ್ಧಾತ್, ಆಸೀಚ್ಛಬ್ದಾನುಪಪತ್ತೇಶ್ಚ । "ಅಸದ್ವಾ ಇದಮಗ್ರ ಆಸೀತ್" (ತೈ.) ಇತ್ಯತ್ರಾಪಿ "ತದಾತ್ಮಾನಂ ಸ್ವಯಮಕುರುತ" ಇತಿ ವಾಕ್ಯಶೇಷೇ ವಿಶೇಷಣಾತ್ ನಾತ್ಯನ್ತಾಸತ್ತ್ವಮ್ । ತಸ್ಮಾತ್ ಧರ್ಮಾನ್ತರೇಣೈವ ಅಯಮ್ ಅಸದ್ವ್ಯಪದೇಶಃ ಪ್ರಾಗುತ್ಪತ್ತೇಃ ಕಾರ್ಯಸ್ಯ । ನಾಮರೂಪವ್ಯಾಕೃತಂ ಹಿ ವಸ್ತು ಸಚ್ಛಬ್ದಾರ್ಹಂ ಲೋಕೇ ಪ್ರಸಿದ್ಧಮ್ । ಅತಃ ಪ್ರಾಙ್ನಾಮರೂಪವ್ಯಾಕರಣಾತ್ ಅಸದಿವ ಆಸೀತ್ ಇತ್ಯುಪಚರ್ಯತೇ ॥ ೧೭ ॥

(ಭಾಷ್ಯಾರ್ಥ)

(ಆಕ್ಷೇಪ) :- ಕೆಲವು ಕಡೆಗಳಲ್ಲಿ ಹುಟ್ಟುವ ಮುಂಚೆ ಕಾರ್ಯವು ಅಸತ್ತೂ ಆಗಿತ್ತೆಂದು ಶ್ರುತಿಯು ಹೇಳುತ್ತದೆಯಲ್ಲ ! "ಅಸದೇವೇದಮಗ್ರ ಆಸೀತ್" (ಇದು ಮೊದಲು ಅಸತ್ತೇ ಆಗಿತ್ತು ಛಾಂ. ೩-೧೯-೧) ಎಂದೂ "ಅಸದ್ವಾ ಇದಮಗ್ರ ಆಸೀತ್" (ಇದು ಮೊದಲು ಅಸತ್ತೇ ಆಗಿತ್ತು ತೈ. ೨-೭) ಎಂದೂ ಹೇಳಿದೆಯಲ್ಲವೆ ? ಆದ್ದರಿಂದ ಅಸತ್ತು ಎಂದು ಹೇಳಿರುವದರಿಂದ ಹುಟ್ಟುವದಕ್ಕೆ ಮುಂಚೆ ಕಾರ್ಯವು ಸತ್ತಲ್ಲ.

(ಪರಿಹಾರ) :- ಹೀಗಲ್ಲ, ಎನ್ನುತ್ತೇವೆ. ಏಕೆಂದರೆ ಕಾರ್ಯವು ಅಸತ್ತೆಂದು ಇಲ್ಲಿ ಹೇಳಿರುವದು (ಅದು) ಅತ್ಯಂತವಾಗಿ ಅಸತ್ತೇ ಆಗಿತ್ತೆಂಬ ಅಭಿಪ್ರಾಯದಿಂದ (ಹೇಳಿ)ದ್ದಲ್ಲ ; ಮತ್ತೇನೆಂದರೆ ವಾಕೃತನಾಮರೂಪತ್ವವೆಂಬ ಧರ್ಮಕ್ಕಿಂತ ಅವ್ಯಾಕೃತನಾಮರೂಪತ್ವವೆಂಬುದು ಬೇರೆಯೊಂದು ಧರ್ಮವು ; ಆ ಧರ್ಮಾಂತರದಿಂದ ಇಲ್ಲಿ – ಹುಟ್ಟುವದಕ್ಕೆ ಮುಂಚೆ ಇದ್ದುಕೊಂಡೇ

ಕಾರಣರೂಪಕ್ಕೆ ಅನನ್ಯವಾಗಿರುವ ಕಾರ್ಯವನ್ನು – ಅಸತ್ತೆಂದು ಹೇಳಿರುತ್ತದೆ. ಇದು ಹೇಗೆ ಗೊತ್ತು ? ಎಂದರೆ ವಾಕ್ಯಶೇಷದಿಂದ ಯಾವ ವಾಕ್ಯದ ಅರ್ಥವು ಉಪಕ್ರಮದಲ್ಲಿ ಸಂದೇಹದಿಂದ ಕೂಡಿರುವದೋ ಅದನ್ನು ಉಳಿದಿರುವ ವಾಕ್ಯ (ಭಾಗ)ದಿಂದ ನಿಶ್ಚಯಿಸಬೇಕಾಗುತ್ತದೆ. ಇಲ್ಲಿ ಮೊದಲನೆಯದಾಗಿ "ಅಸದೇ ವೇದಮಗ್ರ ಆಸೀತ್" (ಇದು ಮೊದಲು ಅಸತ್ತೇ ಆಗಿತ್ತು) ಎಂದು ಉಪಕ್ರಮ ದಲ್ಲಿ ಯಾವದನ್ನು ಅಸಚ್ಛಬ್ದದಿಂದ ತಿಳಿಸಿದೆಯೋ ಅದನ್ನೇ (ಮುಂದೆ) ಮತ್ತೆ ಅದು ಎಂಬ ಶಬ್ದದಿಂದ ಪರಾಮರ್ಶಿಸಿ "ತತ್ ಸದಾಸೀತ್" (ಅದು ಸತ್ತಾ ಯಿತು, ಛಾಂ. ೩-೧೯-೧) ಎಂದು ಸತ್ತೆಂಬ ವಿಶೇಷಣದಿಂದ ತಿಳಿಸಿರುತ್ತದೆ. ಆದರೆ ಅಸತ್ತಿಗೆ ಹಿಂದಿನ ಮುಂದಿನ ಕಾಲಗಳ ಸಂಬಂಧವು ಇಲ್ಲವಾದ್ದರಿಂದಲೂ 'ಆಸೀತ್' (ಇತ್ತು) ಎಂಬ ಶಬ್ದವು (ಅದಕ್ಕೆ) ಹೊಂದದೆ ಇರುವದರಿಂದಲೂ (ಇದು ಹೀಗೆಂದು ನಿಶ್ಚಯವಾಗುತ್ತದೆ). "ಅಸದ್ವಾ ಇದಮಗ್ರ ಆಸೀತ್" (ತೈ.) ಎಂಬಲ್ಲಿಯೂ "ಅದು ತನ್ನನ್ನು ತಾನೇ ಮಾಡಿಕೊಂಡಿತು" ಎಂದು ವಾಕ್ಯಶೇಷದಲ್ಲಿ ವಿಶೇಷಣವನ್ನು ಕೊಟ್ಟಿರುವದರಿಂದಲೂ (ಅದು) ಅತ್ಯಂತವಾಗಿ ಅಸತ್ತೆಂದು ಹೇಳಲಾಗುವದಿಲ್ಲ. ಆದ್ದರಿಂದ ಹುಟ್ಟುವದಕ್ಕಿಂತ ಮುಂಚೆ ಕಾರ್ಯವನ್ನು ಅಸತ್ತೆಂದು ಧರ್ಮಾಂತರದಿಂದ ಹೇಳಿರುವದೇ (ಸರಿ ಎಂದು ನಿಶ್ಚಯಿಸಬೇಕು). ನಾಮರೂಪಗಳಿಂದ ವ್ಯಾಕೃತವಾದ ವಸ್ತು ಸಚ್ಛಬ್ದಕ್ಕೆ ತಕ್ಕದ್ದೆಂದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆಯಷ್ಟೆ[1] ; ಆದ್ದರಿಂದ ನಾಮ ರೂಪಗಳ ವ್ಯಾಕರಣವಾಗುವದಕ್ಕೆ ಮುಂಚೆ (ಅದು) ಅಸತ್ತಿನಂತೆ ಇತ್ತು ಎಂದು ಉಪಚಾರಕ್ಕಾಗಿ ಹೇಳಿರುತ್ತದೆ.

**ಯುಕ್ತೇಃ ಶಬ್ದಾನ್ತರಾಚ್ಚ ॥ ೧೮ ॥**

೧೮. ಯುಕ್ತಿಯಿಂದಲೂ ಶಬ್ದಾಂತರದಿಂದಲೂ (ಹೀಗೆಂದು ತಿಳಿಯಬೇಕು).

## ಕಾರ್ಯವು ಸತ್ತು, ಕಾರಣಕ್ಕೆ ಅನನ್ಯ ಎಂಬುದಕ್ಕೆಯುಕ್ತಿ

(ಭಾಷ್ಯ)

**೪೪೬.** ಯುಕ್ತೇಶ್ಚ ಪ್ರಾಗುತ್ಪತ್ತೇಃ ಕಾರ್ಯಸ್ಯ ಸತ್ತ್ವಮ್ ಅನನ್ಯತ್ವಂ ಚ ಕಾರಣಾತ್ ಅವಗಮ್ಯತೇ। ಶಬ್ದಾನ್ತರಾಚ್ಚ । ಯುಕ್ತಿಸ್ತಾವದ್ ವರ್ಣ್ಯತೇ।

---

1. ಹಿಂದೆ ೧-೪-೧೫ (ಭಾ. ಭಾ. ೩೬೮)ರಲ್ಲಿ ಇದನ್ನು ಹೇಳಿದೆ. ಗೀ. ಭಾ. ೯-೧೭, ತೈ. ಭಾ. ೨-೯ (ಭಾ. ಭಾ. ೧೮೭) ಇದನ್ನು ನೋಡಿ.

ದಧಿಘಟರುಚಕಾದ್ಯರ್ಥಿಭಿಃ ಪ್ರತಿನಿಯತಾನಿ ಕಾರಣಾನಿ ಕ್ಷೀರಮೃತ್ತಿಕಾಸುವರ್ಣಾದೀನಿ ಉಪಾದೀಯಮಾನಾನಿ ಲೋಕೇ ದೃಶ್ಯನ್ತೇ । ನ ಹಿ ದಧ್ಯರ್ಥಿಭಿಃ ಮೃತ್ತಿಕಾ ಉಪಾದೀಯತೇ ನ ಘಟಾರ್ಥಿಭಿಃ ಕ್ಷೀರಮ್ । ತತ್ ಅಸತ್ಕಾರ್ಯವಾದೇ ನೋಪಪದ್ಯೇತ । ಅವಿಶಿಷ್ಟೇ ಹಿ ಪ್ರಾಗುತ್ಪತ್ತೇಃ ಸರ್ವಸ್ಯ ಸರ್ವತ್ರ ಅಸತ್ತ್ವೇ ಕಸ್ಮಾತ್ ಕ್ಷೀರಾದೇವ ದಧಿ ಉತ್ಪದ್ಯತೇ ನ ಮೃತ್ತಿಕಾಯಾಃ, ಮೃತ್ತಿಕಾಯಾ ಏವ ಚ ಘಟಃ ಉತ್ಪದ್ಯತೇ ನ ಕ್ಷೀರಾತ್ ? ಅಥ ಅವಿಶಿಷ್ಟೇಽಪಿ ಪ್ರಾಗಸತ್ತ್ವೇ ಕ್ಷೀರೇ ಏವ ದಧ್ನಃ ಕಶ್ಚಿತ್ ಅತಿಶಯಃ, ನ ಮೃತ್ತಿಕಾಯಾಮ್। ಮೃತ್ತಿಕಾಯಾಮೇವ ಚ ಘಟಸ್ಯ ಕಶ್ಚಿತ್ ಅತಿಶಯಃ, ನ ಕ್ಷೀರೇ ಇತಿ ಉಚ್ಯೇತ । ತರ್ಹಿ ಅತಿಶಯವತ್ತ್ವಾತ್ ಪ್ರಾಗವಸ್ಥಾಯಾಃ ಅಸತ್ಕಾರ್ಯವಾದಹಾನಿಃ ಸತ್ಕಾರ್ಯವಾದಸಿದ್ಧಿಶ್ಚ । ಶಕ್ತಿಶ್ಚ ಕಾರಣಸ್ಯ ಕಾರ್ಯನಿಯಮಾರ್ಥಾ ಕಲ್ಪ್ಯಮಾನಾ ನ ಅನ್ಯಾ ಅಸತೀ ವಾ ಕಾರ್ಯಂ ನಿಯಚ್ಛೇತ್ । ಅಸತ್ತ್ವಾವಿಶೇಷಾತ್, ಅನ್ಯತ್ವಾವಿಶೇಷಾಚ್ಚ । ತಸ್ಮಾತ್ ಕಾರಣಸ್ಯ ಆತ್ಮಭೂತಾ ಶಕ್ತಿಃ, ಶಕ್ತೇಶ್ಚ ಆತ್ಮಭೂತಂ ಕಾರ್ಯಮ್ ॥

( ಭಾಷ್ಯಾರ್ಥ )

ಯುಕ್ತಿಯಿಂದಲೂ ಹುಟ್ಟುವದಕ್ಕಿಂತ ಮುಂಚೆ ಕಾರ್ಯವು ಇರುವದೆಂತಲೂ ಕಾರಣಕ್ಕೆ ಅನನ್ಯವಾಗಿರುವದೆಂತಲೂ (ಗೊತ್ತಾಗುತ್ತದೆ). ಶಬ್ದಾಂತರದಿಂದಲೂ ಗೊತ್ತಾಗುತ್ತದೆ. (ಇವುಗಳಲ್ಲಿ) ಮೊದಲು ಯುಕ್ತಿಯನ್ನು ವರ್ಣಿಸುತ್ತೇವೆ. ಮೊಸರು, ಗಡಿಗೆ, ಅಸಲಿ –ಮುಂತಾದವುಗಳನ್ನು ಬಯಸುವವರು ಹಾಲು, ಮಣ್ಣು, ಚಿನ್ನ– ಮುಂತಾದ ಗೊತ್ತಾದ ಕಾರಣಗಳನ್ನೇ ತೆಗೆದುಕೊಳ್ಳುವದು ಲೋಕದಲ್ಲಿ ಕಂಡುಬರುತ್ತದೆ. ಮೊಸರು ಬೇಕಾದವರು (ಅದಕ್ಕಾಗಿ) ಮಣ್ಣನ್ನು ತೆಗೆದುಕೊಳ್ಳುವದಿಲ್ಲ; ಗಡಿಗೆಯು ಬೇಕಾದವರು ಹಾಲನ್ನು ತೆಗೆದುಕೊಳ್ಳುವದಿಲ್ಲ ಅಲ್ಲವೆ? (ಆದರೆ) ಇದು ಅಸತ್ಕಾರ್ಯವಾದಕ್ಕೆ ಹೊಂದುವದಿಲ್ಲ. ಏಕೆಂದರೆ ಕಾರ್ಯವು ಇಲ್ಲವೆಂಬುದು ಎಲ್ಲೆಲ್ಲಿಯೂ ಸಮಾನವಾಗಿರುವಲ್ಲಿ ಹಾಲಿನಿಂದಲೇ ಏಕೆ ಮೊಸರು ಹುಟ್ಟುತ್ತದೆ, ಮಣ್ಣಿಂದ (ಏಕೆ) ಹುಟ್ಟುವದಿಲ್ಲ ? ಮಣ್ಣಿಂದಲೇ ಗಡಿಗೆ ಏಕೆ ಹುಟ್ಟುತ್ತದೆ, ಹಾಲಿನಿಂದ (ಏಕೆ ಹುಟ್ಟುವ)ದಿಲ್ಲ ?[1] ಇನ್ನು **ಮೊದಲು (ಅದು) ಇಲ್ಲವೆಂಬುದು (ಎಲ್ಲೆಲ್ಲಿಯೂ) ಸಮಾನವಾಗಿದ್ದರೂ ಹಾಲಿನಲ್ಲಿಯೇ ಮೊಸರಿನ ಒಂದಾನೊಂದು 'ಅತಿಶಯ'ವಿರುತ್ತದೆ, ಅದು ಮಣ್ಣಿನಲ್ಲಿರುವದಿಲ್ಲ ;**

1. ಈ ಆಕ್ಷೇಪಕ್ಕೆ ಅಸತ್ಕಾರ್ಯವಾದದಲ್ಲಿ ಪರಿಹಾರವಿಲ್ಲ ಎಂದು ವಾಕ್ಯಶೇಷವನ್ನು ಸೇರಿಸಿಕೊಳ್ಳಬೇಕು.

**ಮಣ್ಣಿನಲ್ಲಿಯೇ ಗಡಿಗೆಯ ಒಂದಾನೊಂದು ಅತಿಶಯವು (ಇರುತ್ತದೆ), ಹಾಲಿನಲ್ಲಿ (ಇರುವ)ದಿಲ್ಲ ಎನ್ನುವದಾದರೆ ಆಗ ಹಿಂದಿನ ಅವಸ್ಥೆಯಲ್ಲಿ (ಕಾರ್ಯದ) ಅತಿಶಯವಿರುವದರಿಂದ ಅಸತ್ಕಾರ್ಯವಾದವು ಹೋಯಿತು, ಸತ್ಕಾರ್ಯವಾದವು ಸಿದ್ಧವಾಯಿತು (ಎಂದಾಗುವದು)[1].** ಕಾರ್ಯವನ್ನು ಗೊತ್ತಾಗಿ (ಉಂಟುಮಾಡುವದಕ್ಕೆಂದು) ಕಾರಣದಲ್ಲಿ (ಒಂದಾನೊಂದು) ಶಕ್ತಿಯನ್ನು ಕಲ್ಪಿಸಿದರೂ (ಆ ಶಕ್ತಿಯು ಕಾರ್ಯಕ್ಕಿಂತ) ಬೇರೆಯಾದರೂ ಅಸತ್ತಾದರೂ (ಆಯಾ) ಕಾರ್ಯವನ್ನು ಗೊತ್ತುಪಡಿಸಲಾರದು. ಏಕೆಂದರೆ (ಹಾಗೆ) ಅಸತ್ತೆಂಬುದೂ (ಎಲ್ಲಕ್ಕೂ) ಸಮಾನವಾಗಿರುತ್ತದೆ; (ಕಾರ್ಯಕ್ಕಿಂತ) ಬೇರೆ ಎನ್ನುವದೂ (ಎಲ್ಲಕ್ಕೂ) ಸಮಾನವಾಗಿರುತ್ತದೆ[2]. **ಆದ್ದರಿಂದ ಶಕ್ತಿಯು ಕಾರಣದ ಸ್ವರೂಪವೇ, ಕಾರ್ಯವು ಶಕ್ತಿಯ ಸ್ವರೂಪವೇ ಎಂದಾಯಿತು[3].**

## ಕಾರ್ಯಕಾರಣಗಳಲ್ಲಿ ಭೇದಬುದ್ಧಿಯುಂಟಾಗುವದಿಲ್ಲ

(ಭಾಷ್ಯ)

೪೪೭. ಅಪಿ ಚ ಕಾರ್ಯಕಾರಣಯೋಃ ದ್ರವ್ಯಗುಣಾದೀನಾಂ ಚ ಅಶ್ವಮಹಿಷವತ್ ಭೇದಬುದ್ಧ್ಯಭಾವಾತ್ ತಾದಾತ್ಮ್ಯಮ್ ಅಭ್ಯುಪಗನ್ತವ್ಯಮ್ । ಸಮವಾಯಕಲ್ಪನಾಯಾಮಪಿ ಸಮವಾಯಸ್ಯ ಸಮವಾಯಿಭಿಃ ಸಂಬನ್ಧೇ ಅಭ್ಯುಪಗಮ್ಯಮಾನೇ ತಸ್ಯ ತಸ್ಯ ಅನ್ಯೋಽನ್ಯಃ ಸಂಬನ್ಧಃ

---

1. ಏಕೆಂದರೆ ಕಾರ್ಯದ ಅತಿಶಯವಿದ್ದರೆ ಆ ರೂಪದಲ್ಲಿ ಕಾರ್ಯವೇ ಇದ್ದಂತೆ ಆಯಿತು.

2. ಕಾರ್ಯಕ್ಕಿಂತ ಬೇರೆಯಾದ ಶಕ್ತಿಯು ಕಾರ್ಯವನ್ನುಂಟುಮಾಡುವದಾದರೆ ಕಾರ್ಯಕ್ಕಿಂತ ಬೇರೆಯಾದ ಮತ್ತೊಂದು ವಸ್ತು ಅಥವಾ ಅದರ ಶಕ್ತಿಯು ಏತಕ್ಕೆ ಕಾರ್ಯವನ್ನುಂಟುಮಾಡುವದಿಲ್ಲ; ಕಾರಣವೇ ಅಥವಾ ಅದರ ಶಕ್ತಿಯೇ ಇರಬೇಕೆನ್ನುವದೇಕೆ ?- ಎಂಬ ಆಕ್ಷೇಪಕ್ಕೆ ಪ್ರತಿವಾದಿಗಳಲ್ಲಿ ಉತ್ತರವಿಲ್ಲ. ಹೀಗೆಯೇ ಅಸತ್ತಾದ ಶಕ್ತಿಯು ಕಾರ್ಯವನ್ನುಂಟುಮಾಡುವದಾದರೆ ಅಸತ್ತಾದ ಮತ್ತೆ ಯಾವದಾದರೊಂದು ವಸ್ತು ಅಥವಾ ಅದರಲ್ಲಿರುವದೆಂದು ಕಲ್ಪಿಸುವ ಅಸತ್ತಾದ ಶಕ್ತಿಯೂ ಕಾರ್ಯವನ್ನುಂಟುಮಾಡಬಹುದೆಂಬ ಆಕ್ಷೇಪಕ್ಕೆ ಪರಿಹಾರವೂ ಇರುವದಿಲ್ಲ. ಆದ್ದರಿಂದ ಕಾರ್ಯವೇ ಮೊದಲು ಶಕ್ತಿರೂಪದಲ್ಲಿರುವದೆಂದು ಒಪ್ಪಬೇಕು.

3. ಕಾರಣವೇ, 'ಶಕ್ತಿ', 'ಕಾರ್ಯ'- ಎಂಬ ವ್ಯವಹಾರಕ್ಕೆ ವಿಷಯವಾಗುವದೇ ಹೊರತು ಕಾರಣಕ್ಕಿಂತ ಬೇರೆಯಾದ ಶಕ್ತಿಯಾಗಲಿ ಕಾರ್ಯವಾಗಲಿ ಇರುವದಕ್ಕೆ ಪ್ರಮಾಣವಿಲ್ಲ ಎಂದು ಅಭಿಪ್ರಾಯ. ಮಾಯಾಶಕ್ತಿಯು ಈಶ್ವರಾಧೀನವೆಂಬ ವಾದಕ್ಕೆ ಇದೇ ಅರ್ಥ.

ಕಲ್ಪಯಿತವ್ಯಃ ಇತಿ ಅನವಸ್ಥಾಪ್ರಸಙ್ಗಃ । ಅನಭ್ಯುಪಗಮ್ಯಮಾನೇ ಚ ವಿಚ್ಛೇದಪ್ರಸಙ್ಗಃ । ಅಥ ಸಮವಾಯಃ ಸ್ವಯಂ ಸಂಬನ್ಧರೂಪತ್ವಾತ್ ಅನಪೇಕ್ಷ್ಯೈವ ಅಪರಂ ಸಂಬನ್ಧಂ ಸಂಬಧ್ಯತೇ, ಸಂಯೋಗೋಽಪಿ ತರ್ಹಿ ಸ್ವಯಂ ಸಂಬನ್ಧರೂಪತ್ವಾತ್ ಅನಪೇಕ್ಷ್ಯೈವ ಸಮವಾಯಂ ಸಂಬಧ್ಯೇತ । ತಾದಾತ್ಮ್ಯಪ್ರತೀತೇಶ್ಚ ದ್ರವ್ಯಗುಣಾದೀನಾಂ ಸಮವಾಯಕಲ್ಪನಾನರ್ಥಕ್ಯಮ್ ॥

(ಭಾಷ್ಯಾರ್ಥ)

ಇದಲ್ಲದೆ ಕಾರ್ಯಕಾರಣಗಳಿಗೂ ದ್ರವ್ಯಗುಣಾದಿಗಳಿಗೂ ಕುದುರೆ ಕೋಣಗಳಂತೆ ಭೇದಬುದ್ಧಿಯುಂಟಾಗದಿರುವದರಿಂದ[1] (ಅವುಗಳಿಗೆ) **ತಾದಾತ್ಮ್ಯವನ್ನು**[2] ಒಪ್ಪಬೇಕು. **ಸಮವಾಯವನ್ನು**[3] ಕಲ್ಪಿಸಿದರೂ ಸಮವಾಯಕ್ಕೂ ಸಮವಾಯಿಗಳಿಗೂ ಸಂಬಂಧವನ್ನು ಒಪ್ಪಿದರೆ ಅದಕ್ಕೆ ಅದಕ್ಕೆ ಮತ್ತೊಂದು ಮತ್ತೊಂದು ಸಂಬಂಧವನ್ನು ಕಲ್ಪಿಸಬೇಕಾಗಿ ಬಂದು ಅನವಸ್ಥೆಯಾಗಿಬಿಡುತ್ತದೆ[4]. ಅದನ್ನು ಒಪ್ಪದೆ ಇದ್ದರೆ (ಅವೆರಡಕ್ಕೂ) ವಿಚ್ಛೇದವು ಪ್ರಸಕ್ತವಾಗುತ್ತದೆ. ಹಾಗಿಲ್ಲದೆ ಸಮವಾಯವು ತಾನೇ ಸಂಬಂಧವಾಗಿರುವದರಿಂದ ಮತ್ತೊಂದು ಸಂಬಂಧವನ್ನು ಬಯಸದೆಯೇ ಸಂಬದ್ಧವಾಗುತ್ತದೆ– ಎನ್ನುವದಾದರೆ[5] ಆಗ ಸಂಯೋಗವೂ ತಾನೇ ಸಂಬಂಧವಾಗಿರು

1. ಕಾರ್ಯವು ಕಾರಣಕ್ಕಿಂತ ಬೇರೆ ಎಂದಾಗಲಿ ದ್ರವ್ಯಕ್ಕಿಂತ ಗುಣಕರ್ಮಾದಿಗಳು ಬೇರೆ ಎಂದಾಗಲಿ ಬುದ್ಧಿಯುಂಟಾಗದೆ ಇರುವದರಿಂದ ಎಂದರ್ಥ.

2. ತಾದಾತ್ಮ್ಯವೆಂದರೆ ಭೇದಸಹಿಷ್ಣುವಾದ ಅಭೇದ- ಎಂಬ ಮತವನ್ನು ಇಲ್ಲಿ ತೆಗೆದುಕೊಳ್ಳಬಾರದು. ಎರಡೂ ಒಂದೇ ಎಂದರೆ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ, ಕಾರಣದ ರೂಪವೇ ; ಗುಣಾದಿಗಳು ದ್ರವ್ಯರೂಪವೇ– ಎಂಬುದೇ ತಾದಾತ್ಮ್ಯವು.

3. ದ್ರವ್ಯ, ಗುಣ ; ಕಾರ್ಯ, ಕಾರಣ ; ಕ್ರಿಯೆ, ಕ್ರಿಯಾವದ್ದ್ರವ್ಯ- ಇವುಗಳಿಗೆ ಇರುವ ನಿತ್ಯಸಂಬಂಧಕ್ಕೆ ಸಮವಾಯವೆಂದು ಹೆಸರು ಎಂದು ವೈಶೇಷಿಕರು ಹೇಳುತ್ತಾರೆ. ಕಾರಣದಲ್ಲಿ ಕಾರ್ಯವು ಸಮವಾಯಸಂಬಂಧದಿಂದ ಇರುತ್ತದೆ; ಗುಣಾದಿಗಳು ದ್ರವ್ಯದಲ್ಲಿ ಅದೇ ಸಮವಾಯವೆಂಬ ಸಂಬಂಧದಿಂದ ಇರುತ್ತವೆ ಎಂಬುದು ಅವರ ಮತವು. ಆ ಮತವನ್ನು ಖಂಡಿಸಿ ಇಲ್ಲಿ ತಾದಾತ್ಮ್ಯವನ್ನು ಪ್ರತಿಪಾದಿಸಿರುತ್ತದೆ.

4. ಸಮವಾಯಕ್ಕೂ ಸಮವಾಯಿಗಳಾದ ಕಾರ್ಯಕಾರಣಗಳಿಗೂ ಮತ್ತೊಂದು ಸಂಬಂಧವನ್ನು ಕಲ್ಪಿಸಿದರೆ ಆ ಸಂಬಂಧಕ್ಕೂ ಅದೇ ಸಮವಾಯಿಗಳಿಗೂ ಮತ್ತೊಂದು ಸಂಬಂಧವನ್ನು ಕಲ್ಪಿಸಬೇಕಾಗುವದು. ಹೀಗೆಯೇ ಅನಂತಸಂಬಂಧಗಳನ್ನು ಕಲ್ಪಿಸಬೇಕಾಗಿಬರುವದರಿಂದ ಅಂಥ ಸಂಬಂಧಗಳಿಗೆ ಇಷ್ಟೆಂಬ ನಿಲುಗಡೆಯಿಲ್ಲವಾಗುವದು.

5. ಎರಡು ಸಂಬಂಧಿಗಳಿಗೆ ಅವನ್ನು ಕೂಡಿಸುವ ಸಂಬಂಧವು ಬೇಕು. ಒಂದು ಸಂಬಂಧವನ್ನು ಒಂದು ಸಂಬಂಧಿಗೆ ಕೂಡಿಸುವದಕ್ಕೆ ಮತ್ತೊಂದು ಸಂಬಂಧವು ಬೇಡ ; ಅಂಟಿನಿಂದ ಎರಡು ವಸ್ತುಗಳನ್ನು ಕೂಡಿಸುವಾಗ ಅಂಟಿಗೆ ಮತ್ತೊಂದು ಅಂಟ ಬೇಕಾಗುವದಿಲ್ಲವಲ್ಲ ! –ಎನ್ನುವದಾದರೆ ಎಂದರ್ಥ.

ವದರಿಂದ ಸಮವಾಯವನ್ನು ಬಯಸದೆಯೇ ಸಂಬದ್ಧವಾಗಬಹುದಾಗುವದು[1]. ದ್ರವ್ಯಗುಣಾದಿಗಳಿಗೆ ತಾದಾತ್ಮ್ಯವು ಕಾಣುತ್ತಿರುವದರಿಂದಲೂ ಸಮವಾಯವನ್ನು ಕಲ್ಪಿಸುವದು ವ್ಯರ್ಥವು[2].

## ಕಾರ್ಯವು ಬೇರೆಯಾಗಿದ್ದರೆ ಕಾರಣದಲ್ಲಿದೆ ಎಂಬುದು ಅಯುಕ್ತ

(ಭಾಷ್ಯ)

೪೪೮. ಕಥಂ ಚ ಕಾರ್ಯಮ್ ಅವಯವಿದ್ರವ್ಯಂ ಕಾರಣೇಷು ಅವಯವದ್ರವ್ಯೇಷು ವರ್ತಮಾನಂ ವರ್ತೇತ? ಕಿಂ ಸಮಸ್ತೇಷು ಅವಯವೇಷು ವರ್ತೇತ, ಉತ ಪ್ರತ್ಯವಯವಮ್? ಯದಿ ತಾವತ್ ಸಮಸ್ತೇಷು ವರ್ತೇತ, ತತೋಽವಯವ್ಯನುಪಲಬ್ಧಿಃ ಪ್ರಸಜ್ಯೇತ। ಸಮಸ್ತಾವಯವಸಂನಿಕರ್ಷಸ್ಯ ಅಶಕ್ಯತ್ವಾತ್। ನ ಹಿ ಬಹುತ್ವಂ ಸಮಸ್ತೇಷು ಆಶ್ರಯೇಷು ವರ್ತಮಾನಂ ವ್ಯಸ್ತಾಶ್ರಯಗ್ರಹಣೇನ ಗೃಹ್ಯತೇ। ಅಥ ಅವಯವಶಃ ಸಮಸ್ತೇಷು ವರ್ತೇತ, ತದಾಪಿ ಆರಮ್ಭಕಾವಯವವ್ಯತಿರೇಕೇಣ ಅವಯವಿನೋಽವಯವಾಃ ಕಲ್ಪ್ಯೇರನ್ ಯೈಃ ಆರಮ್ಭಕೇಷು ಅವಯವೇಷು ಅವಯವಶಃ ಅವಯವೀ ವರ್ತೇತ। ಕೋಶಾವಯವವ್ಯತಿರಿಕ್ತೈರ್ಹಿ ಅವಯವೈಃ ಅಸಿಃ ಕೋಶಂ ವ್ಯಾಪ್ನೋತಿ। ಅನವಸ್ಥಾ ಚ ಏವಂ ಪ್ರಸಜ್ಯೇತ। ತೇಷು ತೇಷು ಅವಯವೇಷು ವರ್ತಯಿತುಮ್ ಅನ್ಯೇಷಾಮ್ ಅನ್ಯೇಷಾಮ್ ಅವಯವಾನಾಂ ಕಲ್ಪನೀಯತ್ವಾತ್। ಅಥ ಪ್ರತ್ಯವಯವಂ ವರ್ತೇತ, ತದಾ ಏಕತ್ರ ವ್ಯಾಪಾರೇ ಅನ್ಯತ್ರ ಅವ್ಯಾಪಾರಃ ಸ್ಯಾತ್। ನ ಹಿ ದೇವದತ್ತಃ ಸ್ರುಘ್ನೇ ಸಂನಿಧೀಯಮಾನಃ ತದಹರೇವ ಪಾಟಲಿಪುತ್ರೇಽಪಿ ಸಂನಿಧೀಯೇತ। ಯುಗಪತ್ ಅನೇಕತ್ರ ವೃತ್ತೌ ಅನೇಕತ್ವಪ್ರಸಙ್ಗಃ ಸ್ಯಾತ್। ದೇವದತ್ತಯಜ್ಞದತ್ತಯೋರಿವ ಸ್ರುಘ್ನಪಾಟಲಿಪುತ್ರನಿವಾಸಿನೋಃ। ಗೋತ್ವಾದಿವತ್ ಪ್ರತ್ಯೇಕಂ ಪರಿಸಮಾಪ್ತೇಃ ನ ದೋಷಃ ಇತಿ ಚೇತ್। ನ। ತಥಾ ಪ್ರತೀತ್ಯಭಾವಾತ್। ಯದಿ ಗೋತ್ವಾದಿವತ್ ಪ್ರತ್ಯೇಕಂ ಪರಿಸಮಾಪ್ತೋಽವಯವೀ ಸ್ಯಾತ್,

---

1. ಆದರೆ ವೈಶೇಷಿಕರು ಇದನ್ನು ಒಪ್ಪಿಲ್ಲ; ಸಂಯೋಗವು ಒಂದು ಗುಣವಾದ್ದರಿಂದ ಆ ಗುಣಕ್ಕೂ ಗುಣಿಗೂ ಸಮವಾಯಸಂಬಂಧವು ಬೇಕು – ಎನ್ನುತ್ತಾರೆ.

2. ಗುಣವು ದ್ರವ್ಯರೂಪವಾಗಿಯೇ ಇದೆ ಎಂಬ ಪ್ರತ್ಯಕ್ಷವಿರುವಲ್ಲಿ ಗುಣಕ್ಕೂ ದ್ರವ್ಯಕ್ಕೂ ಸಮವಾಯವೆಂಬ ನಿತ್ಯಸಂಬಂಧವಿದೆ ಎಂದು ಕಲ್ಪಿಸುವದು ಗೌರವದೋಷವಾಗುವದು.

ಯಥಾ ಗೋತ್ವಂ ಪ್ರತಿವ್ಯಕ್ತಿ ಪ್ರತ್ಯಕ್ಷಮ್ ಗೃಹ್ಯತೇ, ಏವಮ್ ಅವಯವ್ಯಪಿ ಪ್ರತ್ಯವಯವಂ ಪ್ರತ್ಯಕ್ಷಂ ಗೃಹ್ಯೇತ । ನ ಚ್ಯೈವಂ ನಿಯತಂ ಗೃಹ್ಯತೇ । ಪ್ರತ್ಯೇಕ ಪರಿಸಮಾಪ್ತೌ ಚ ಅವಯವಿನಃ ಕಾರ್ಯೇಣ ಅಧಿಕಾರಾತ್, ತಸ್ಯ ಚ ಏಕತ್ವಾತ್, ಶೃಙ್ಗೇಣಾಪಿ ಸ್ತನಕಾರ್ಯಂ ಕುರ್ಯಾತ್, ಉರಸಾ ಚ ಪೃಷ್ಠಕಾರ್ಯಮ್ । ನ ಚ್ಯೈವಂ ದೃಶ್ಯತೇ ॥

(ಭಾಷ್ಯಾರ್ಥ)

ಮತ್ತು ಕಾರ್ಯವೆಂಬ ಅವಯವಿದ್ರವ್ಯವು ಕಾರಣವಾಗಿರುವ ಅವಯವ ದ್ರವ್ಯಗಳಲ್ಲಿರುವದಾದರೂ ಹೇಗೆ ಇರುತ್ತದೆ? ಎಲ್ಲಾ ಅವಯವಗಳಲ್ಲಿಯೂ ಇರುತ್ತದೆಯೆ, ಅಥವಾ ಒಂದೊಂದು ಅವಯವದಲ್ಲಿಯೂ ಇರುತ್ತದೆಯೆ? ಮೊದಲನೆಯದಾಗಿ ಎಲ್ಲಾ ಅವಯವಗಳಲ್ಲಿಯೂ ಇದೆ ಎನ್ನುವದಾದರೆ ಅವಯವಿಯು ಕಾಣಬಾರದಾಗುವದು. ಏಕೆಂದರೆ ಎಲ್ಲಾ ಅವಯವಗಳಿಗೂ (ಇಂದ್ರಿಯ)ಸಂನಿಕರ್ಷವಾಗುವದು ಶಕ್ಯವಲ್ಲ[1]. ಬಹುತ್ವವೆಂಬುದು ಎಲ್ಲಾ ಆಶ್ರಯಗಳಲ್ಲಿಯೂ ಇರುವದರಿಂದ (ಅದನ್ನು) ವ್ಯಸ್ತವಾದ ಆಶ್ರಯಗಳನ್ನು ಗ್ರಹಿಸಿದಮಾತ್ರದಿಂದ ಗ್ರಹಿಸುವದು ಆಗಲಾರದಲ್ಲವೆ[2]? ಹೀಗಲ್ಲದೆ (ತನ್ನ) ಅವಯವಗಳಿಂದ ಎಲ್ಲಾ (ಅವಯವಗಳಲ್ಲಿಯೂ) ಇರುವದೆಂದರೆ,[3] ಆಗಲೂ ಆರಂಭಕವಾಗಿರುವ[4] ಅವಯವಗಳಲ್ಲದೆ ಬೇರೆಯ ಅವಯವಗಳನ್ನೂ ಅವಯವಿಗೆ ಕಲ್ಪಿಸಬೇಕಾಗುವದು; ಆ ಅವಯವಗಳಿಂದ ಆರಂಭಕವಾದ ಅವಯವಗಳಲ್ಲಿ (ಇಷ್ಟಿಷ್ಟಾಗಿ) ಅವಯವಿಯು ಇದೆ ಎಂದು (ಹೇಳ)ಬೇಕಾಗು ವದು. ಒರೆಯ ಅವಯವಗಳಿಗಿಂತ ಬೇರೆಯಾದ ಅವಯವಗಳಿಂದಲ್ಲವೆ,

---

1. ಮಡಿಸಿಟ್ಟಿರುವ ಬಟ್ಟೆಯ ಎಲ್ಲಾ ಅವಯವಗಳೂ ಇಂದ್ರಿಯಸಂನಿಕೃಷ್ಟ ವಾಗುವ ಸಂಭವವಿಲ್ಲ; ಎಲ್ಲಾ ಅವಯವಗಳಲ್ಲಿಯೂ ಅವಯವಿಯು ಇದೆ ಎನ್ನುವ ಪಕ್ಷದಲ್ಲಿ ಆ ಎಲ್ಲಾ ಅವಯವಗಳನ್ನೂ ಕಂಡಹೊರತು ಅವಯವಿಯು ಕಾಣ ಬಾರದಾಗುವದು.

2. ಬಹುತ್ವವು – ಉದಾಹರಣೆಗೆ ತ್ರಿತ್ವವು – ಒಂದೊಂದು ಅವಯವವನ್ನು ಕಂಡ ಮಾತ್ರದಿಂದ ನಮಗೆ ಅರಿಯಬರುವದಿಲ್ಲ. ಬಹುತ್ವದಂತೆ ಅವಯವಿಯು ಸ್ವರೂಪ ದಿಂದಲೇ ಎಲ್ಲಾ ಅವಯವಗಳಲ್ಲಿದೆ ಎನ್ನುವದಾದರೆ ಅವಯವಗಳೆಲ್ಲಕ್ಕೂ ಇಂದ್ರಿಯ ಸಂನಿಕರ್ಷವಾದ ಹೊರತು ಅವಯವಿಪ್ರತ್ಯಕ್ಷವು ಆಗಬಾರದಾಗುವದು –ಎಂದು ಅಭಿಪ್ರಾಯ.

3. ಒಂದೊಂದು ಅವಯದಲ್ಲಿಯೂ ಸ್ವಲ್ಪ ಅವಯವವಿಯ ಅಂಶವು ಇರುತ್ತದೆ; ಅದ್ದರಿಂದ ಕೆಲವು ಅವಯವಗಳನ್ನು ಕಂಡರೂ ಅವಯವಿಯನ್ನು ಕಾಣಬಹುದು ವೆಂದರೆ.

4. - ಕಾರಣವಾಗಿರುವ.

ಕತ್ತಿಯು ಒರೆಯನ್ನು ವ್ಯಾಪಿಸಿಕೊಂಡಿರುವದು ? ಹಾಗಾದರೆ ಅನವಸ್ಥೆಯೂ ಬಂದೊದಗುವದು. ಏಕೆಂದರೆ ಆಯಾ ಅವಯವಗಳಲ್ಲಿರುವವಕ್ಕೆ ಬೇರೆಬೇರೆಯ ಅವಯವಗಳನ್ನು ಕಲ್ಪಿಸಬೇಕಾಗುವದು[1].

ಹೀಗಿಲ್ಲದೆ ಪ್ರತಿಯೊಂದು ಅವಯವದಲ್ಲಿಯೂ (ಅವಯವಿಯು) ಇರುವದು (ಎನ್ನುವದಾದರೆ) ಆಗ ಒಂದು ಕಡೆಯಲ್ಲಿ ವ್ಯಾಪಾರವಿರುವಾಗ ಮತ್ತೊಂದು ಕಡೆಯಲ್ಲಿ ವ್ಯಾಪಾರವಿರಬಾರದಾಗುವದು[2]. ಏಕೆಂದರೆ ದೇವದತ್ತನು **ಸ್ರುಘ್ನ**ದಲ್ಲಿ ಇದ್ದುಕೊಂಡಿರುವಲ್ಲಿ ಆ ದಿನವೇ **ಪಾಟಲಿಪುತ್ರ**ದಲ್ಲಿಯೂ ಇರುವದಕ್ಕೆ ಆಗಲಾರದು. ಒಂದೇ ಕಾಲದಲ್ಲಿ ಹಲವು ಕಡೆಗಳಲ್ಲಿ ಇರುವದಾದರೆ ಸ್ರುಘ್ನಪಾಟಲಿಪುತ್ರಗಳಲ್ಲಿರುವ ದೇವದತ್ತಯಜ್ಞದತ್ತರಂತೆ ಅನೇಕತ್ವವೇ ಬಂದೊದಗುವದು[3].

(ಆಕ್ಷೇಪ) :- ಗೋತ್ವವೇ ಮುಂತಾದವುಗಳಂತೆ ಒಂದೊಂದರಲ್ಲಿಯೂ ಪರಿಸಮಾಪ್ತವಾಗಿರುವದರಿಂದ[4] ಇದು ದೋಷವಲ್ಲ.

(ಪರಿಹಾರ):— ಹಾಗಲ್ಲ. ಏಕೆಂದರೆ ಹಾಗೆ ಪ್ರತೀತಿಯಿರುವದಿಲ್ಲ. ಗೋತ್ವಾದಿಗಳಂತೆ ಅವಯವಿಯು ಪ್ರತಿಯೊಂದು (ಅವಯವ)ದಲ್ಲಿಯೂ ಪರಿಸಮಾಪ್ತವಾಗಿದ್ದರೆ,(ಆಗ) ಹೇಗೆ ಗೋತ್ವವು ಒಂದೊಂದು ವ್ಯಕ್ತಿಯಲ್ಲಿಯೂ ಪ್ರತ್ಯಕ್ಷವಾಗಿ ಕಾಣುತ್ತದೆಯೋ ಹಾಗೆ ಅವಯವಿಯೂ ಒಂದೊಂದು ಅವಯವದಲ್ಲಿಯೂ ಪ್ರತ್ಯಕ್ಷವಾಗಿ ಕಾಣಬೇಕಾಗುವದು. (ಆದರೆ) ಹಾಗೆ ಗೊತ್ತಾಗಿ ಕಾಣಬರುವದಿಲ್ಲ. ಅವಯವಿಯು ಪ್ರತ್ಯೇಕವಾಗಿ ಅವಯವಗಳಲ್ಲಿ

---

1. ಕತ್ತಿಯ ಅವಯವಗಳೂ ಒರೆಯ ಅವಯವಗಳೂ ಬೇರೆಯಾಗಿರುವವೆಂಬುದು ಪ್ರತ್ಯಕ್ಷ. ಆದರೆ ಆವಯವಿಯೂ ತನ್ನ ಅವಯವಗಳಿಗಿಂತ ಬೇರೆಯಾದ ಅವಯವಗಳುಳ್ಳದ್ದೆಂಬುದಾಗಲಿ ಆ ಅವಯವಗಳಿಂದ ಮೂಲ ಅವಯವಗಳಲ್ಲಿ ಇಷ್ಟಿಷ್ಟಾಗಿ ಇರುವದೆಂಬುದಾಗಲಿ ಪ್ರತ್ಯಕ್ಷವಲ್ಲ. ಅಂಥ ಅವಯವಗಳು ಇವೆ ಎಂದು ಪ್ರತ್ಯಕ್ಷವಿರುದ್ಧವಾಗಿ ಕಲ್ಪಿಸಿದರೂ ಅನವಸ್ಥೆ ಎಂಬ ತರ್ಕದೋಷವು ಗಂಟುಬೀಳುವದು ಎಂದರ್ಥ.

2. ಒಂದು ಅವಯವದಲ್ಲಿ ಗಡಿಗೆಯ ಕಾರ್ಯವಾಗುತ್ತಿರುವಾಗ ಮತ್ತೊಂದರಲ್ಲಿ ಆಗಬಾರದಾಗುವದು.

3. ಆಗ ಅವಯವಗಳೆಷ್ಟಿವೆಯೋ ಅಷ್ಟು ಅವಯವಿಗಳನ್ನು ಕಲ್ಪಿಸಬೇಕಾಗುವದು.

4. ಒಂದು ಗೋವಿನಲ್ಲಿ ಪೂರ್ತಿಯಾಗಿಯೇ ಗೋತ್ವವಿರುತ್ತದೆ; ಅಷ್ಟುಮಾತ್ರದಿಂದ ಮತ್ತೊಂದು ಗೋವಿನಲ್ಲಿ ಗೋತ್ವವಿರಬಾರದೆಂದು ನಿಯಮಿಸುವದಕ್ಕೆ ಆಗುವದಿಲ್ಲ. ಇದರಂತೆ ಅವಯವಿಗೂ ಆಗಲಿ ಎಂದು ಪೂರ್ವಪಕ್ಷಿಯ ಆಶಯ

ಪರಿಸಮಾಪ್ತವಾಗಿದ್ದರೆ, ಅವಯವಿಯೇ ಕಾರ್ಯಕ್ಕೆ ಬೇಕಾಗಿರುವದರಿಂದಲೂ (ಆ ಅವಯವಿಯು) ಒಂದೇ ಆಗಿರುವದರಿಂದಲೂ, ಕೋಡಿನಿಂದಲೂ ಸ್ತನದ ಕಾರ್ಯವನ್ನು ಮಾಡಿಕೊಳ್ಳಬಹುದಾಗುವದು[1]; ಎದೆಯಿಂದಲೂ ಬೆನ್ನಿನ ಕಾರ್ಯವನ್ನು ಮಾಡಿಕೊಳ್ಳಬಹುದಾಗುವದು[2]. ಆದರೆ ಹೀಗೆ (ಆಗುವದು) ಕಂಡುಬಂದಿರುವದಿಲ್ಲ

## ಅಸತ್ಕಾರ್ಯವಾದದಲ್ಲಿ ಉತ್ಪತ್ತಿಯೇ ಹೊಂದುವದಿಲ್ಲ

( ಭಾಷ್ಯ )

೪೪೯. ಪ್ರಾಗುತ್ಪತ್ತೇಶ್ಚ ಕಾರ್ಯಸ್ಯ ಅಸತ್ತ್ವೇ ಉತ್ಪತ್ತಿಃ ಅಕರ್ತೃಕಾ ನಿರಾತ್ಮಿಕಾ ಚ ಸ್ಯಾತ್ । ಉತ್ಪತ್ತಿಶ್ಚ ನಾಮ ಕ್ರಿಯಾ । ಸಾ ಸಕರ್ತೃಕೈವ ಭವಿತುಮರ್ಹತಿ, ಗತ್ಯಾದಿವತ್ । ಕ್ರಿಯಾ ಚ ನಾಮ ಸ್ಯಾತ್ ಅಕರ್ತೃಕಾ ಚ ಇತಿ ವಿಪ್ರತಿಷಿಧ್ಯೇತ । ಘಟಸ್ಯ ಚ ಉತ್ಪತ್ತಿಃ ಉಚ್ಯಮಾನಾ ನ ಘಟಕರ್ತೃಕಾ, ಕಿಂ ತರ್ಹಿ ಅನ್ಯಕರ್ತೃಕಾ ಇತಿ ಕಲ್ಪ್ಯಾ ಸ್ಯಾತ್ । ತಥಾ ಕಪಾಲಾದೀನಾಮಪಿ ಉತ್ಪತ್ತಿಃ ಉಚ್ಯಮಾನಾ ಅನ್ಯ ಕರ್ತೃಕೈವ ಕಲ್ಪ್ಯೇತ । ತಥಾ ಚ ಸತಿ ಘಟಃ ಉತ್ಪದ್ಯತೇ ಇತ್ಯುಕ್ತೇ ಕುಲಾಲಾದೀನಿ ಕಾರಣಾನಿ ಉತ್ಪದ್ಯನ್ತೇ ಇತ್ಯುಕ್ತಂ ಸ್ಯಾತ್ । ನ ಚ ಲೋಕೇ 'ಘಟೋತ್ಪತ್ತಿಃ' ಇತ್ಯುಕ್ತೇ ಕುಲಾಲಾದೀನಾಮಪಿ ಉತ್ಪದ್ಯ ಮಾನತಾ ಪ್ರತೀಯತೇ । ಉತ್ಪನ್ನತಾಪ್ರತೀತೇಶ್ಚ । ಅಥ ಸ್ವಕಾರಣಸತ್ತಾ ಸಂಬನ್ಧ ಏವ ಉತ್ಪತ್ತಿಃ ಆತ್ಮಲಾಭಶ್ಚ ಕಾರ್ಯಸ್ಯ ಇತಿ ಚೇತ್, ಕಥಮ್ ಅಲಬ್ಧಾತ್ಮಕಂ ಸಂಬಧ್ಯೇತ ಇತಿ ವಕ್ತವ್ಯಮ್ । ಸತೋರ್ಹಿ ದ್ವಯೋಃ ಸಂಬನ್ಧಃ ಸಂಭವತಿ ನ ಸದಸತೋಃ ಅಸತೋರ್ವಾ । ಅಭಾವಸ್ಯ ಚ ನಿರುಪಾಖ್ಯತ್ವಾತ್ .'ಪ್ರಾಗುತ್ಪತ್ತೇಃ' ಇತಿ ಮರ್ಯಾದಾಕರಣಮ್ ಅನುಪಪನ್ನಮ್ । ಸತಾಂ ಹಿ ಲೋಕೇ ಕ್ಷೇತ್ರಗೃಹಾದೀನಾಂ ಮರ್ಯಾದಾ ದೃಷ್ಟಾ ನ ಅಭಾವಸ್ಯ । ನ ಹಿ ವನ್ಧ್ಯಾಪುತ್ರೋ ರಾಜಾ ಬಭೂವ ಪ್ರಾಕ್ ಪೂರ್ಣವರ್ಮಣೋಽಭಿಷೇಕಾತ್ ಇತ್ಯೇವಂಜಾತೀಯಕೇನ ಮರ್ಯಾದಾ ಕರಣೇನ ನಿರುಪಾಖ್ಯೋ ವನ್ಧ್ಯಾಪುತ್ರಃ ರಾಜಾ ಬಭೂವ, ಭವತಿ, ಭವಿಷ್ಯತಿ ಇತಿ ವಾ ವಿಶೇಷ್ಯತೇ। ಯದಿ ಚ ವನ್ಧ್ಯಾಪುತ್ರೋಽಪಿ ಕಾರಕವ್ಯಾಪಾರಾತ್ ಊರ್ಧ್ವಮ್ ಅಭವಿಷ್ಯತ್ ತತ ಇದಮಪಿ ಉಪಾಪತ್ಸ್ಯತ ಕಾರ್ಯಾ

---

1. ಹಾಲನ್ನು ಕರೆದುಕೊಳ್ಳಬಹುದಾಗುವದು ಎಂದರ್ಥ.
2. ಸವಾರಿಯೇ ಮುಂತಾದದ್ದನ್ನು ಮಾಡಬಹುದಾಗುವದು ಎಂದರ್ಥ.

ಭಾವೋಽಪಿ ಕಾರಕವ್ಯಾಪಾರಾಗೂರ್ಧ್ವಂ ಭವಿಷ್ಯತೀತಿ, ನಯಂ ತು ಪಶ್ಯಾಮಃ ವನ್ಧ್ಯಾಪುತ್ರಸ್ಯ ಕಾರ್ಯಾಭಾವಸ್ಯ ಚ ಅಭಾವತ್ವಾವಿಶೇಷಾತ್ ಯಥಾ ವನ್ಧ್ಯಾಪುತ್ರಃ ಕಾರಕವ್ಯಾಪಾರಾದೂರ್ಧ್ವಂ ನ ಭವಿಷ್ಯತಿ, ಏವಂ ಕಾರ್ಯಾಭಾವೋಽಪಿ ಕಾರಕವ್ಯಾಪಾರಾದೂರ್ಧ್ವಂ ನ ಭವಿಷ್ಯತಿ ಇತಿ ॥

(ಭಾಷ್ಯಾರ್ಥ)

ಹುಟ್ಟುವದಕ್ಕಿಂತ ಮುಂಚೆ ಕಾರ್ಯವು ಇಲ್ಲವೆಂದರೆ ಉತ್ಪತ್ತಿಗೆ ಕರ್ತೃವಿಲ್ಲವೆಂದೂ ಸ್ವರೂಪವಿಲ್ಲವೆಂದೂ ಆಗುವದು. (ಹೇಗೆಂದರೆ): ಉತ್ಪತ್ತಿ ಎಂಬುದು (ಒಂದು) ಕ್ರಿಯೆ. ಅದು ನಡೆಯುವದೇ ಮುಂತಾದವುಗಳಂತೆ ಸಕರ್ತೃಕವಾಗಿಯೇ ಇರಬೇಕು[1]; ಕ್ರಿಯೆಯೆಂತಲೂ ಆಗಿರುವದು. ಆ ಕರ್ತೃಕವೂ (ಆಗಿರುವದು) –ಎಂಬುದು ವಿಪ್ರತಿಷಿದ್ಧವಾಗಿರುತ್ತದೆ. ‘ಗಡಿಗೆಯ ಉತ್ಪತ್ತಿ’ ಎಂದು ಹೇಳುವದು ಘಟಕರ್ತೃಕವಲ್ಲ, ಮತ್ತೇನೆಂದರೆ ಮತ್ತೊಂದು ಕರ್ತೃವಿನದು ಎಂದು ಕಲ್ಪಿಸಬೇಕಾಗುವದು. (ಹೀಗೆಯೇ) ‘ಕಪಾಲಗಳೇ[2] ಮುಂತಾದವುಗಳ ಉತ್ಪತ್ತಿ’ ಎಂದು ಹೇಳುವದೂ ಮತ್ತೊಂದು ಕರ್ತೃವಿನದೇ ಎಂದಾಗುವದು. ಹಾಗಾದರೆ ಗಡಿಗೆಯು ಹುಟ್ಟುತ್ತದೆ ಎಂದರೆ ಕುಂಬಾರನೇ ಮುಂತಾದ ಕಾರಣಗಳು ಹುಟ್ಟುತ್ತವೆ ಎಂದು ಕಲ್ಪಿಸಬೇಕಾಗುವದು. ಲೋಕದಲ್ಲಿ ‘ಗಡಿಗೆಯ ಉತ್ಪತ್ತಿ’ ಎಂದರೆ ಕುಂಬಾರನೇ ಮುಂತಾದ (ಕಾರಣ)ಗಳೂ ಹುಟ್ಟುವವೆಂದು (ನಮಗೆ) ತೋರುವದಿಲ್ಲ. (ಗಡಿಗೆಯೇ) ಹುಟ್ಟುತ್ತದೆ ಎಂದು ಪ್ರತೀತಿಯಾಗುವದರಿಂದಲೂ (ಹೀಗೆಂದು ತಿಳಿಯಬೇಕು)[3].

(ತಾರ್ಕಿಕ):– ಇನ್ನು ಸ್ವಕಾರಣಸತ್ತಾಸಂಬಂಧವೇ ಕಾರ್ಯದ ಉತ್ಪತ್ತಿ ಮತ್ತು ಸ್ವರೂಪಲಾಭ ಎಂದರೊ ?[4]

---

1. ನಡೆಯುವದೆಂಬ ಕ್ರಿಯೆಗೆ ನಡೆಯುವವನೆಂಬ ಕರ್ತೃವಿರುವಂತೆ ಹುಟ್ಟುವದೆಂಬ ಕ್ರಿಯೆಗೆ ಹುಟ್ಟುವವನೆಂಬ ಕರ್ತೃವಿರಬೇಕು; ಇಲ್ಲದಿದ್ದರೆ ಅದು ಕ್ರಿಯೆಯೇ ಆಗಲಾರದು ಎಂದರ್ಥ.

2 ಗಡಿಗೆಯಾಗುವದಕ್ಕೆ ಬೇಕಾದ ಎರಡು ಅರ್ಧ ಹೋಳುಗಳು.

3. ಗಡಿಗೆಯ ಉತ್ಪತ್ತಿಗೆ ಕುಂಬಾರನೇ ಮುಂತಾದವುಗಳು ಕರ್ತೃವೆಂದು ಹೇಳುವದಕ್ಕೆ ಬರುವದಿಲ್ಲ; ಏಕೆಂದರೆ ಅವರು ಗಡಿಗೆಯನ್ನು ಹುಟ್ಟಿಸುವಿಕೆಗೆ ಕರ್ತೃವಾಗಿರುತ್ತಾರೆ. ‘ಗಡಿಗೆಯು ಹುಟ್ಟಿತು’ ಎಂದೇ ನಮಗೆಲ್ಲ ಪ್ರತೀತಿಯಾಗುತ್ತದೆ.

4. ತನ್ನ ಕಾರಣದೊಡನೆಯೂ ಸತ್ತೆಯೊಡನೆಯೂ ಸಮವಾಯುಸಂಬಂಧದಿಂದ ಸೇರಿಕೊಳ್ಳುವದೇ ಕಾರ್ಯದ ಉತ್ಪತ್ತಿ ಎಂಬುದು ವೈಶೇಷಿಕನ ಮತವು. ಈ ಮತದ ಖಂಡನೆಯನ್ನು ಗೀ. ಭಾ. ೧೮–೪೮ (ಭಾ. ಭಾ. ೫೪೫ರಿಂದ ೫೪೬)ರಲ್ಲಿ ಮಾಡಿದೆ.

(ಸಿದ್ಧಾಂತಿ):– ಸ್ವರೂಪವನ್ನೇ ಪಡೆದುಕೊಳ್ಳದೆ ಇರುವ (ಕಾರ್ಯವು ಮತ್ತೊಂದರೊಡನೆ) ಸಂಬದ್ಧವಾಗುವದು ಹೇಗೆ ಎಂಬುದನ್ನು (ನೀನು) ಹೇಳಬೇಕು. ಇರತಕ್ಕ ಎರಡು ವಸ್ತುಗಳಿಗೇ ಸಂಬಂಧವಾದೀತೇ ಹೊರತು ಸದಸತ್ತುಗಳಿಗಾಗಲಿ, (ಎರಡು) ಅಸತ್ತುಗಳಿಗಾಗಲಿ (ಆಗ)ಲಾರದು. ಅಲ್ಲವೆ ? ಇದಲ್ಲದೆ ಅಭಾವವು ನಿರುಪಾಖ್ಯವಾಗಿರುವದರಿಂದ[1] (ಅದಕ್ಕೆ) 'ಹುಟ್ಟುವದಕ್ಕಿಂತ ಮುಂಚೆ' ಎಂಬ ಎಲ್ಲೆಕಟ್ಟನ್ನು ಮಾಡಿ (ಹೇಳುವದು) ಅಯುಕ್ತವು. ಹೊಲ, ಮನೆ– ಮುಂತಾದ ಇರುವ (ವಸ್ತು)ಗಳಿಗಲ್ಲವೆ, ಲೋಕದಲ್ಲಿ ಎಲ್ಲೆಕಟ್ಟು (ಇರುವದು) ಕಂಡುಬರುತ್ತದೆ? ಬಂಜೆಯ ಮಗನು **ಪೂರ್ಣವರ್ಮನ** ಅಭಿಷೇಕಕ್ಕಿಂತ ಮುಂಚೆ ರಾಜನಾಗಿದ್ದನು ಎಂಬೀ ಜಾತಿಯ ಎಲ್ಲೆಕಟ್ಟನ್ನು ಮಾಡುವ (ವಾಕ್ಯ)ದಿಂದ ನಿರುಪಾಖ್ಯನಾದ ಬಂಜೆಯ ಮಗನು ರಾಜನಾಗಿದ್ದನು, ಆಗಿದ್ದಾನೆ ಅಥವಾ ಆಗುವನು ಎಂಬ ವಿಶೇಷವುಂಟಾಗಲಾರದಷ್ಟೆ ? ಬಂಜೆಯ ಮಗನೂ ಕಾರಕವ್ಯಾಪಾರವಾದ ಬಳಿಕ ಉಂಟಾಗುವಂತಿದ್ದರೆ ಆಗ ಕಾರ್ಯದ ಅಭಾವವೂ ಕಾರಕವ್ಯಾಪಾರವಾದ ಬಳಿಕ ಉಂಟಾಗುವದು ಎಂಬುದೂ ಹೊಂದುತ್ತಿತ್ತು. ನಮಗಂತೂ ತೋರುವದೇನೆಂದರೆ, ಬಂಜೆಯ ಮಗನಾಗಲಿ ಕಾರ್ಯಾಭಾವವಾಗಲಿ (ಎರಡಕ್ಕೂ) ಅಭಾವವಾಗಿರುವದೆಂಬುದು ಸಮಾನವಾಗಿರುವದರಿಂದ ಹೇಗೆ ಬಂಜೆಯ ಮಗನು ಕಾರಕವ್ಯಾಪಾರದ ಬಳಿಕ ಉಂಟಾಗಲಾರನೋ ಹಾಗೆಯೇ ಕಾರ್ಯಾಭಾವವೂ ಕಾರಕವ್ಯಾಪಾರವಾದ ಬಳಿಕ ಉಂಟಾಗಲಾರದು.

## ಕಾರಕವ್ಯಾಪಾರದ ಸಾರ್ಥಕ್ಯ

( ಭಾಷ್ಯ )

೮೫೦. ನನ್ವೇವಂ ಸತಿ ಕಾರಕವ್ಯಾಪಾರೋಽನರ್ಥಕಃ ಪ್ರಸಜ್ಯೇತ । ಯಥೈವ ಹಿ ಪ್ರಾಕ್‌ಸಿದ್ಧತ್ವಾತ್ ಕಾರಣಸ್ವರೂಪಸಿದ್ಧಯೇ ನ ಕಶ್ಚಿತ್ ವ್ಯಾಪ್ರಿಯತೇ । ಏವಂ ಪ್ರಾಕ್‌ಸಿದ್ಧತ್ವಾತ್ ತದನನ್ಯತ್ವಾಚ್ಚ ಕಾರ್ಯಸ್ಯ ಸ್ವರೂಪಸಿದ್ಧಯೇಽಪಿ ನ ಕಶ್ಚಿತ್ ವ್ಯಾಪ್ರಿಯೇತ । ವ್ಯಾಪ್ರಿಯತೇ ಚ । ಅತಃ ಕಾರಕವ್ಯಾಪಾರಾರ್ಥವತ್ತ್ವಾಯ ಮನ್ಯಾಮಹೇ ಪ್ರಾಗುತ್ಪತ್ತೇಃ ಅಭಾವಃ ಕಾರ್ಯಸ್ಯ ಇತಿ । ನೈಷ ದೋಷಃ । ಯತಃ ಕಾರ್ಯಾಕಾರೇಣ ಕಾರಣಂ ವ್ಯವಸ್ಥಾಪಯತಃ ಕಾರಕವ್ಯಾಪಾರಸ್ಯ ಅರ್ಥವತ್ತ್ವಮ್ ಉಪಪದ್ಯತೇ । ಕಾರ್ಯಾಕಾರೋಽಪಿ ಕಾರಣಸ್ಯ ಆತ್ಮಭೂತ ಏವ, ಅನಾತ್ಮಭೂತಸ್ಯ

---

1. ಹೀಗೆಂದು ನಿಶ್ಚಯಿಸಿ ಹೇಳುವದಕ್ಕೆ ಬಾರದ ವಿಕಲ್ಪಮಾತ್ರವಾದ್ದರಿಂದ.

ಅನಾರಭ್ಯತ್ವಾತ್ ಇತ್ಯಭಾಣಿ। ನ ಚ ವಿಶೇಷದರ್ಶನಮಾತ್ರೇಣ ವಸ್ತ್ವನ್ಯತ್ವಂ ಭವತಿ। ನ ಹಿ ದೇವದತ್ತಃ ಸಂಕೋಚಿತಹಸ್ತಪಾದಃ ಪ್ರಸಾರಿತಹಸ್ತಪಾದಶ್ಚ ವಿಶೇಷೇಣ ದೃಶ್ಯಮಾನೋಽಪಿ ವಸ್ತ್ವನ್ಯತ್ವಂ ಗಚ್ಛತಿ। ಸ ಏವ ಇತಿ ಪ್ರತ್ಯಭಿಜ್ಞಾನಾತ್। ತಥಾ ಪ್ರತಿದಿನಮ್ ಅನೇಕಸಂಸ್ಥಾನಾನಾಮಪಿ ಪಿತ್ರಾದೀನಾಂ ನ ವಸ್ತ್ವನ್ಯತ್ವಂ ಭವತಿ। 'ಮಮ ಪಿತಾ', 'ಮಮ ಭ್ರಾತಾ', 'ಮಮ ಪುತ್ರಃ' ಇತಿ ಪ್ರತ್ಯಭಿಜ್ಞಾನಾತ್। ಜನ್ಮೋಚ್ಛೇದಾನನ್ತರಿತತ್ವಾತ್ ತತ್ರ ಯುಕ್ತಮ್, ನಾನ್ಯತ್ರ ಇತಿ ಚೇತ್। ನ। ಕ್ಷೀರಾದೀನಾಮಪಿ ದಧ್ಯಾದ್ಯಾಕಾರಸಂಸ್ಥಾನಸ್ಯ ಪ್ರತ್ಯಕ್ಷತ್ವಾತ್। ಅದೃಶ್ಯಮಾನಾನಾಮಪಿ ವಟಧಾನಾದೀನಾಂ ಸಮಾನಜಾತೀಯಾವಯವಾನ್ತರೋಪಚಿತಾನಾಮ್ ಅಙ್ಕುರಾದಿಭಾವೇನ ದರ್ಶನಗೋಚರತಾಪತ್ತೌ ಜನ್ಮಸಂಜ್ಞಾ' ತೇಷಾಮೇವ ಅವಯವಾನಾಮ್ ಅಪಚಯವಶಾತ್ ಉಚ್ಛೇದಸಂಜ್ಞಾ। ತತ್ರ ಈದೃಗ್ಜನ್ಮೋಚ್ಛೇದಾನ್ತರಿತತ್ವಾತ್ ಚೇತ್ ಅಸತಃ ಸತ್ತ್ವಾಪತ್ತಿಃ ತಥಾಸತಿ ಗರ್ಭವಾಸಿನಃ ಉತ್ತಾನಶಾಯಿನಶ್ಚ ಭೇದಪ್ರಸಙ್ಗಃ। ತಥಾ ಚ ಬಾಲ್ಯಯೌವನಸ್ಥಾವರೇಷ್ವಪಿ ಭೇದಪ್ರಸಙ್ಗಃ, ಪಿತ್ರಾದಿವ್ಯವಹಾರಲೋಪಪ್ರಸಙ್ಗಶ್ಚ॥ ಏತೇನ ಕ್ಷಣಭಙ್ಗವಾದಃ ಪ್ರತಿವದಿತವ್ಯಃ। ಯಸ್ಯ ಪುನಃ ಪ್ರಾಗುತ್ಪತ್ತೇಃ ಅಸತ್ ಕಾರ್ಯಮ್, ತಸ್ಯ ನಿರ್ವಿಷಯಃ ಕಾರಕವ್ಯಾಪಾರಃ ಸ್ಯಾತ್। ಅಭಾವಸ್ಯ ವಿಷಯತ್ವಾನುಪಪತ್ತೇಃ, ಆಕಾಶಹನನಪ್ರಯೋಜನಖಡ್ಗಾದ್ಯನೇಕಾಯುಧಪ್ರಯುಕ್ತಿವತ್। ಸಮವಾಯಿಕಾರಣವಿಷಯಃ ಕಾರಕವ್ಯಾಪಾರಃ ಸ್ಯಾತ್ ಇತಿ ಚೇತ್। ನ। ಅನ್ಯವಿಷಯೇಣ ಕಾರಕವ್ಯಾಪಾರೇಣ ಅನ್ಯನಿಷ್ಪತ್ತೇರತಿಪ್ರಸಙ್ಗಾತ್। ಸಮವಾಯಿಕಾರಣಸ್ಯೈವ ಆತ್ಮಾತಿಶಯಃ ಕಾರ್ಯಮ್ ಇತಿ ಚೇತ್। ನ। ಸತ್ಕಾರ್ಯತಾಪತ್ತೇಃ। ತಸ್ಮಾತ್ ಕ್ಷೀರಾದೀನ್ಯೇವ ದ್ರವ್ಯಾಣಿ ದಧ್ಯಾದಿಭಾವೇನ ಅವತಿಷ್ಠಮಾನಾನಿ ಕಾರ್ಯಾಖ್ಯಾಂ ಲಭನ್ತೇ ಇತಿ ನ ಕಾರಣಾತ್ ಅನ್ಯತ್ ಕಾರ್ಯಂ ವರ್ಷಶತೇನಾಪಿ ಶಕ್ಯಂ ನಿಶ್ಚೇತುಮ್। ತಥಾ ಮೂಲಕಾರಣಮೇವ ಆ ಅನ್ತ್ಯಾತ್ ಕಾರ್ಯಾತ್ ತೇನ ತೇನ ಕಾರ್ಯಾಕಾರೇಣ ನಟವತ್ ಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ। ಏವಂ ಯುಕ್ತೇಃ ಕಾರ್ಯಸ್ಯ ಪ್ರಾಗುತ್ಪತ್ತೇಃ ಸತ್ತ್ವಮ್ ಅನನ್ಯತ್ವಂ ಚ ಕಾರಣಾತ್ ಅವಗಮ್ಯತೇ॥

(ಭಾಷ್ಯಾರ್ಥ)

(ಆಕ್ಷೇಪ) :– ಹೀಗಾದರೆ ಕಾರಕವ್ಯಾಪಾರವು ವ್ಯರ್ಥವಾಗುವದಲ್ಲ! ಏಕೆಂದರೆ ಹೇಗೆ ಕಾರಣವು ಮೊದಲೇ ಸಿದ್ಧವಾಗಿರುವದರಿಂದ (ಅದರ) ಸ್ವರೂಪದ ಸಿದ್ಧಿಗಾಗಿ ಯಾವನೂ ವ್ಯಾಪಾರಮಾಡುವದಿಲ್ಲವೋ ಹಾಗೆಯೇ ಕಾರ್ಯವೂ ಮೊದಲೇ ಸಿದ್ಧವಾಗಿರುವದರಿಂದಲೂ ಆ (ಕಾರಣಕ್ಕಿಂತ) ಅನನ್ಯವಾಗಿರುವದ

ರಿಂದಲೂ ಅದರ ಸ್ವರೂಪದ ಸಿದ್ಧಿಗಾಗಿ ಯಾರೊಬ್ಬರೂ ವ್ಯಾಪಾರಮಾಡದೆ ಹೋಗಬೇಕಾಗುವದು. ಆದರೆ (ಅದಕ್ಕಾಗಿ) ವ್ಯಾಪಾರಮಾಡುತ್ತಾರೆ. ಆದ್ದರಿಂದ ಕಾರಕವ್ಯಾಪಾರವು ಸಾರ್ಥಕವಾಗುವದಕ್ಕಾಗಿ ಹುಟ್ಟುವ ಮುಂಚೆ ಕಾರ್ಯವು ಇರುವದಿಲ್ಲ ಎಂದೇ ನಮ್ಮ ಮತವು.

(ಸಿದ್ಧಾಂತಿ) :– ಇದೇನೂ ದೋಷವಲ್ಲ. ಏಕೆಂದರೆ ಕಾರಣವನ್ನು ಕಾರ್ಯಾಕಾರದಲ್ಲಿ ನಿಲ್ಲಿಸುವದಕ್ಕಾಗಿ ಕಾರಕವ್ಯಾಪಾರವು ಸಾರ್ಥಕವಾಗಬಹುದಾಗಿದೆ. **ಕಾರ್ಯಾಕಾರವೂ ಕೂಡ ಕಾರಣದ ಸ್ವರೂಪವೇ ಆಗಿರುತ್ತದೆ ; ಏಕೆಂದರೆ (ಅದರ) ಸ್ವರೂಪವಲ್ಲದ್ದು ಉಂಟಾಗಲೇ ಆರದು ಎಂದು ಹೇಳಿದ್ದಾಗಿದೆ**[1]**.** ವಿಶೇಷವನ್ನು ಕಂಡಮಾತ್ರದಿಂದ ವಸ್ತುವೇ ಬೇರೆ ಎಂದಾಗುವದಿಲ್ಲ. ದೇವದತ್ತನು ಕೈಕಾಲುಗಳನ್ನು ಮುಡಿಸಿಕೊಂಡಿದ್ದವನು ಕೈಕಾಲುಗಳನ್ನು ನೀಡಿಕೊಂಡು ವಿಶೇಷರೂಪದಿಂದ ಕಂಡುಬಂದರೂ ಮತ್ತೊಂದು ವಸ್ತುವೆಂದಾಗುವದಿಲ್ಲವಷ್ಟೆ. ಏಕೆಂದರೆ (ಆಗಲೂ) ಅವನೇ (ಇವನು) ಎಂಬ ಪ್ರತ್ಯಭಿಜ್ಞಾನವಾಗುತ್ತದೆ. ಇದರಂತೆ ಪ್ರತಿದಿನವೂ ಬೇರೆ ಬೇರೆಯ ಆಕಾರವಾಗುತ್ತಿದ್ದರೂ ತಂದೆಯೇ ಮುಂತಾದವರು ಮತ್ತೊಂದು ವಸ್ತುವಾಗುವದಿಲ್ಲ. ಏಕೆಂದರೆ 'ನನ್ನ ತಂದೆ', 'ನನ್ನ ತಮ್ಮ', 'ನನ್ನ ಮಗ' ಎಂದೇ ಪ್ರತ್ಯಭಿಜ್ಞಾನವಿರುತ್ತದೆ.

(ಆಕ್ಷೇಪ) :– ಹುಟ್ಟುಸಾವು ಮುಂತಾದವುಗಳ ವ್ಯವಧಾನವಿಲ್ಲದಿರುವದರಿಂದ ಅಲ್ಲಿ (ಅದೇ ವಸ್ತುವೆಂಬುದು) ಯುಕ್ತ ; ಮಿಕ್ಕ ಕಡೆಯಲ್ಲಿ ಹಾಗಲ್ಲ.

(ಪರಿಹಾರ) : ಹಾಗಲ್ಲ. ಏಕೆಂದರೆ ಹಾಲು ಮುಂತಾದವುಗಳು ಕೂಡ ಮೊಸರು ಮುಂತಾದ ರೂಪದ ಆಕಾರವನ್ನು (ಪಡೆಯುವದು) ಪ್ರತ್ಯಕ್ಷವಾಗಿರುತ್ತದೆ. ಕಾಣದೆ ಇರುವ ಆಲದ ಬೀಜವೇ ಮುಂತಾದವುಗಳಿಗೂ ಸಮಾನ ಜಾತೀಯವಾದ ಬೇರೆಯ ಅವಯವಗಳು ಸೇರಿಕೊಂಡು ಬೆಳೆದು ಮೊಳಕೆಯೇ ಮುಂತಾದ ರೂಪದಿಂದ ಕಣ್ಣಿಗೆ ಗೋಚರವಾದರೆ 'ಹುಟ್ಟಿತು' ಎಂಬ ಹೆಸರು, ಅದೇ ಅವಯವಗಳು ಕಡಿಮೆಯಾಗುವ ಕಾರಣದಿಂದ ಕಾಣದೆಹೋದರೆ 'ನಾಶವಾಯಿತು' ಎಂಬ ಹೆಸರು. ಇಲ್ಲಿ ಇಂಥ ಹುಟ್ಟುಹೊಂದುಗಳಿಂದ ಅಸತ್ತೇ ಸತ್ತಾಗುವದೆಂದಾದರೆ, ಹಾಗಾದಪಕ್ಷದಲ್ಲಿ ಗರ್ಭದಲ್ಲಿರುವ (ಮಗುವೂ) ಹೊರಗೆ ಕೈಕಾಲುನೀಡಿಕೊಂಡು ಮಲಗಿರುವ (ಮಗುವೂ) ಬೇರೆಬೇರೆ ಎಂದಾದೀತು. ಹಾಗೂ ಬಾಲ್ಯ, ಯೌವನ, ವಾರ್ಧಕಗಳಲ್ಲಿ (ಒಬ್ಬನಲ್ಲಿಯೇ)

---

1. ನಿಜವಾಗಿ ಕಾರಣವು ಕಾರ್ಯವಾಗಿ ಪರಿಣಮಿಸುವದೆಂಬ ಸಾಂಖ್ಯಪಕ್ಷವೂ ಅಶಕ್ಯಾರ್ಯವಾದವೇ. ಗೀ. ಭಾ. ೧೮-೪೮ (ಭಾ. ಭಾ. ೫೪೮) ನೋಡಿ.

ಭೇದವೂ ಆದೀತು[1]. ತಂದೆ ಮುಂತಾದ ವ್ಯವಹಾರವೂ ಲೋಪವಾಗಬೇಕಾದೀತು[2]. ಇದರಿಂದ ಕ್ಷಣಭಂಗವಾದವನ್ನೂ ತಿರಸ್ಕರಿಸಬಹುದು[3].

ಆದರೆ ಯಾವನ (ಮತದಲ್ಲಿ) ಹುಟ್ಟುವ-ಮುಂಚೆ ಕಾರ್ಯವು ಅಸತ್ತಾಗಿರುವದೋ ಅವನ (ಮತದಲ್ಲಿ) ಕಾರಕವ್ಯಾಪಾರಕ್ಕೆ ವಿಷಯವಿಲ್ಲವೆಂದೇ ಆಗುವದು. ಏಕೆಂದರೆ ಅಭಾವವು ವಿಷಯವಾಗಲಾರದಾದ್ದರಿಂದ (ಕಾರಕವ್ಯಾಪಾರವು ಆಗ) ಆಕಾಶವನ್ನು ಹೊಡೆಯುವದಕ್ಕೆ ಉಪಯೋಗಿಸುವ ಕತ್ತಿಯೇ ಮುಂತಾದ ಅನೇಕಾಯುಧಗಳ ಪ್ರಯೋಗದಂತೆ (ವ್ಯರ್ಥವಾಗುವದು).

(ತಾರ್ಕಿಕ) :– ಸಮವಾಯಿಕಾರಣವಿಷಯದಲ್ಲಿ ಕಾರಕವ್ಯಾಪಾರವು ಆಗಬಹುದಲ್ಲ !

(ಸಿದ್ಧಾಂತಿ) :– ಆಗದು. ಏಕೆಂದರೆ ಒಂದು ವಿಷಯದಲ್ಲಿ (ಆದ) ಕಾರಕವ್ಯಾಪಾರದಿಂದ ಮತ್ತೊಂದು ಹುಟ್ಟುವದಾದರೆ ಅತಿಪ್ರಸಂಗವಾದೀತು[4].

(ತಾರ್ಕಿಕ) :– ಸಮವಾಯಿಕಾರಣದ ಸ್ವರೂಪದ (ಒಂದಾನೊಂದು) ಅತಿಶಯವೇ ಕಾರ್ಯವು ಎಂದರೊ ?

(ಸಿದ್ಧಾಂತಿ) :– ಹಾಗಾಗದು. ಏಕೆಂದರೆ (ಹಾಗೆಂದರೆ) ಸತ್ಕಾರ್ಯವು ಗಂಟುಬೀಳುವದು[5]. ಆದ್ದರಿಂದ ಹಾಲೇ ಮುಂತಾದ ದ್ರವ್ಯಗಳೇ ಮೊಸರು ಮುಂತಾದವುಗಳ ರೂಪದಲ್ಲಿ ನಿಂತರೆ 'ಕಾರ್ಯ'ವೆಂಬ ಹೆಸರನ್ನು ಪಡೆಯುತ್ತವೆಯಾದ್ದರಿಂದ ಕಾರ್ಯವು ಕಾರಣಕ್ಕಿಂತ ಬೇರೆ ಎಂದು ನಿಶ್ಚಯಿಸುವದು ನೂರು ವರ್ಷಗಳಲ್ಲಿಯೂ ಆಗಲಾರದು. ಹೀಗೆ **ಮೂಲಕಾರಣವೇ ಕೊನೆಯ ಕಾರ್ಯದವರೆಗೂ ಆಯಾ ಕಾರ್ಯಾಕಾರವನ್ನು ಹೊಂದಿ ನಟ**

---

1. ಬಾಲ್ಯವು ಹೋದರೆ ಬಾಲಕನು ಹೋದನೆಂದೂ ಯೌವನವು ಬಂದರೆ ಬೇರೊಬ್ಬ ಯುವಕನು ಹುಟ್ಟಿದನೆಂದೂ ಹೇಳಬೇಕಾದೀತು. ಇದು ಯಾರಿಗೂ ಇಷ್ಟವಲ್ಲ– ಎಂದರ್ಥ.

2. ಏಕೆಂದರೆ ಅವಸ್ಥೆಯು ಬದಲಾಯಿಸಿದರೆ ತಂದೆಯು ತಂದೆಯಿಲ್ಲದೆ ಹೋಗಬೇಕಾಗುವದು.

3. ಏಕೆಂದರೆ ಆ ವಾದದಲ್ಲಿ ಕ್ಷಣಕ್ಷಣಕ್ಕೂ ಹೊಸ ವಸ್ತುವೇ ಹುಟ್ಟುವದೆಂದಾಗಿ 'ಅದೇ ಇದು' ಎಂಬ ಪ್ರತ್ಯಭಿಜ್ಞೆಯು ಇಲ್ಲವಾಗಬೇಕಾದೀತು.

4. ಕಾರಣದ ವಿಷಯದ ವ್ಯಾಪಾರವು ಕಾರ್ಯವು ಹುಟ್ಟುವದೆಂದರೆ ಗಾಳಿಯ ವಿಷಯದ ವ್ಯಾಪಾರದಿಂದಲೂ ಬಟ್ಟೆಯುಂಟಾಗಬೇಕಾದೀತು.

5. ಕಾರಣರೂಪದಲ್ಲಿದ್ದದ್ದೇ ಕಾರ್ಯದ ಆಕಾರವನ್ನು ತಳೆಯುವದೆಂಬುದೇ ಸತ್ಕಾರ್ಯವಾದವು. ಸಮವಾಯಿಕಾರಣವೇ ಕಾರ್ಯವಾಗುವದೆಂದು ಒಪ್ಪಿದರೆ ವೈಶೇಷಿಕನೂ ಸತ್ಕಾರ್ಯವಾದಿಯಾಗಿ ಅಸತ್ಕಾರ್ಯವಾದವನ್ನು ಕೈಬಿಟ್ಟಂತಾಗುವದು ಎಂದು ಅಭಿಪ್ರಾಯ.

ನೆಂತೆ ಎಲ್ಲಾ ವ್ಯವಹಾರಗಳಿಗೂ ಆಸ್ಪದವಾಗುತ್ತದೆ (ಎಂದಾಯಿತು). ಹೀಗೆ ಕಾರ್ಯವು ಹುಟ್ಟುವ ಮುಂಚೆ ಇರುವದೆಂದೂ ಕಾರಣಕ್ಕಿಂತ ಅನನ್ಯವಾಗಿರುವದೆಂದೂ ನಿಶ್ಚಯಿಸಬಹುದು.

## ಕಾರ್ಯವು ಹುಟ್ಟುವ ಮುಂಚೆ ಇರುವದೆಂಬುದಕ್ಕೆ ಶ್ರುತಿ

(ಭಾಷ್ಯ)

೪೫೧. ಶಬ್ದಾನ್ತರಾಚ್ಚ ಏತದವಗಮ್ಯತೇ । ಪೂರ್ವಸೂತ್ರೇ ಅಸದ್ ವ್ಯಪದೇಶಿನಃ ಶಬ್ದಸ್ಯ ಉದಾಹೃತತ್ವಾತ್ ತತೋಽನ್ಯಃ ಸದ್ವ್ಯಪದೇಶೀ ಶಬ್ದಃ ಶಬ್ದಾನ್ತರಮ್ । "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" ಇತ್ಯಾದಿ। "ತದ್ಧೈಕ ಆಹುರಸದೇವೇದಮಗ್ರ ಆಸೀತ್" ಇತಿ ಚ ಅಸತ್ಪಕ್ಷಮ್ ಉಪಕ್ಷಿಪ್ಯ (ಛಾಂ. ೬-೨-೧), "ಕಥಮಸತಃ ಸಜ್ಜಾಯೇತ" (ಛಾಂ. ೬-೨-೨) ಇತ್ಯಾಕ್ಷಿಪ್ಯ "ಸತ್ತ್ವೇವ ಸೋಮ್ಯೇದಮಗ್ರ ಆಸೀತ್" (ಛಾಂ. ೬-೨-೨) ಇತಿ ಅವಧಾರಯತಿ । ತತ್ರ ಇದಂಶಬ್ದವಾಚ್ಯಸ್ಯ ಕಾರ್ಯಸ್ಯ ಪ್ರಾಗುತ್ಪತ್ತೇಃ ಸಚ್ಛಬ್ದವಾಚ್ಯೇನ ಕಾರಣೇನ ಸಾಮಾನಾಧಿಕರಣ್ಯಸ್ಯ ಶ್ರೂಯಮಾಣತ್ವಾತ್ ಸತ್ತ್ವಾನನ್ಯತ್ವೇ ಪ್ರಸಿಧ್ಯತಃ । ಯದಿ ತು ಪ್ರಾಗುತ್ಪತ್ತೇಃ ಅಸತ್ ಕಾರ್ಯಂ ಸ್ಯಾತ್, ಪಶ್ಚಾಚ್ಚ ಉತ್ಪದ್ಯಮಾನಂ ಕಾರಣೇ ಸಮವೇಯಾತ್ । ತದಾ ಅನ್ಯತ್ ಕಾರಣಾತ್ ಸ್ಯಾತ್ । ತತ್ರ "ಯೇನಾಶ್ರುತಂ ಶ್ರುತಂ ಭವತಿ" (ಛಾಂ. ೬-೧-೩) ಇತೀಯಂ ಪ್ರತಿಜ್ಞಾ ಪೀಡ್ಯೇತ । ಸತ್ತ್ವಾನನ್ಯತ್ವಾವ ಗತೇಸ್ತು ಇಯಂ ಪ್ರತಿಜ್ಞಾ ಸಮರ್ಥ್ಯತೇ ॥

(ಭಾಷ್ಯಾರ್ಥ)

ಶಬ್ದಾಂತರದಿಂದಲೂ ಇದನ್ನು ನಿಶ್ಚಯಿಸಬಹುದು. ಹಿಂದಿನ ಸೂತ್ರದಲ್ಲಿ ಅಸತ್ತನ್ನು ಹೇಳುವ ಶಬ್ದವನ್ನು ಉದಾಹರಿಸಿರುವದರಿಂದ ಅದಕ್ಕಿಂತ ಬೇರೆಯಾಗಿ ಸತ್ತನ್ನು ಹೇಳುವ "ಸೋಮ್ಯನೆ, ಇದು ಮೊದಲು ತನಗೆರಡನೆಯದಿಲ್ಲದ ಸತ್ತೊಂದೇ ಆಗಿದ್ದಿತು" ಮುಂತಾದ ಶಬ್ದವು ಶಬ್ದಾಂತರವು. (ಇದು) "ಇಲ್ಲಿ ಕೆಲವರು ಇದು ಮೊದಲು ಅಸತ್ತೇ ಆಗಿತ್ತೆಂದು ಹೇಳುವರು" ಎಂದು ಅಸತ್ಪಕ್ಷವನ್ನು ಮುಂದಿಟ್ಟು "ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು ?" ಎಂದು ಆಕ್ಷೇಪಿಸಿ "ಸೋಮ್ಯನೆ, ಇದು ಮೊದಲು ಸತ್ತೇ ಆಗಿದ್ದಿತು" (ಛಾಂ. ೬-೨-೨) ಎಂದು ಒತ್ತಿ ಹೇಳಿರುತ್ತದೆ. ಇಲ್ಲಿ 'ಇದು' ಎಂಬ ಶಬ್ದಕ್ಕೆ ವಾಚ್ಯವಾದ ಕಾರ್ಯಕ್ಕೆ (ಅದು) ಹುಟ್ಟುವ ಮುಂಚೆ ಸಚ್ಛಬ್ದವಾಚ್ಯವಾದ ಕಾರಣದೊಡನೆ ಸಾಮಾನಾಧಿಕರಣ್ಯವನ್ನು ಶ್ರುತಿಯಲ್ಲಿ ಹೇಳಿರುವದರಿಂದ

ಸತ್ತ್ವಾನನ್ಯತ್ವಗಳು ಸಿದ್ಧವಾಗುತ್ತವೆ. ಹುಟ್ಟುವ ಮುಂಚೆ ಕಾರ್ಯವು ಅಸತ್ತಾಗಿದ್ದರೆ, ಆ ಬಳಿಕ ಹುಟ್ಟಿ ಕಾರಣದೊಡನೆ ಸಮವಾಯಸಂಬಂಧದಿಂದ ಸೇರಿಕೊಳ್ಳುವದಾಗಿದ್ದರೆ, ಆಗ ಕಾರಣಕ್ಕಿಂತ ಬೇರೆ ಎಂದಾಗುವದು. ಆ ಪಕ್ಷದಲ್ಲಿ "ಯಾವದರಿಂದ ಅಶ್ರುತವಾದದ್ದು ಶ್ರುತವಾಗುವದೋ" (ಛಾಂ.೬-೧-೩) ಎಂಬೀ ಪ್ರತಿಜ್ಞೆಗೆ ವಿರೋಧವಾಗುವದು. ಆದರೆ ಸತ್ತ್ವ, ಅನನ್ಯತ್ವ- ಇವುಗಳನ್ನು ನಿಶ್ಚಯಿಸಿದರೆ ಈ ಪ್ರತಿಜ್ಞೆಯನ್ನು ಸಮರ್ಥನೆಮಾಡಿದಂತೆ ಆಗುತ್ತದೆ.

## ಪಟವಚ್ಚ ॥ ೧೯ ॥

೧೯. ಬಟ್ಟೆಯಂತೆಯೂ.

## ಬಟ್ಟೆಯ ದೃಷ್ಟಾಂತದಿಂದ ಕಾರ್ಯಾನನ್ಯತ್ವ

(ಭಾಷ್ಯ)

೪೫೨. ಯಥಾ ಚ ಸಂವೇಷ್ಟಿತಃ ಪಟಃ ನ ವ್ಯಕ್ತಂ ಗೃಹ್ಯತೇ ಕಿಮಯಂ ಪಟಃ, ಕಿಂ ವಾ ಅನ್ಯದ್ ದ್ರವ್ಯಮ್ ಇತಿ। ಸ ಏವ ಪ್ರಸಾರಿತಃ 'ಯತ್ ಸಂವೇಷ್ಟಿತಂ ದ್ರವ್ಯಮ್ ತತ್ ಪಟ ಏವ' ಇತಿ ಪ್ರಸಾರಣೇನ ಅಭಿವ್ಯಕ್ತೋ ಗೃಹ್ಯತೇ। ಯಥಾ ಚ ಸಂವೇಷ್ಟನಸಮಯೇ 'ಪಟಃ' ಇತಿ ಗೃಹ್ಯಮಾಣೋಽಪಿ ನ ವಿಶಿಷ್ಟಾಯಾಮವಿಸ್ತಾರೋ ಗೃಹ್ಯತೇ, ಸ ಏವ ಪ್ರಸಾರಣಸಮಯೇ ವಿಶಿಷ್ಟಾಯಾಮವಿಸ್ತಾರೋ ಗೃಹ್ಯತೇ ನ 'ಸಂವೇಷ್ಟಿತರೂಪಾತ್ ಅನ್ಯೋಽಯಂ ಭಿನ್ನಃ ಪಟಃ' ಇತಿ। ಏವಂ ತನ್ತ್ವಾದಿಕಾರಣಾವಸ್ಥಂ ಪಟಾದಿಕಾರ್ಯಮ್ ಅಸ್ಪಷ್ಟಂ ಸತ್ ತುರೀವೇಮಕುವಿನ್ದಾದಿಕಾರಕವ್ಯಾಪಾರಾದಿಭಿಃ ವ್ಯಕ್ತಂ ಸ್ಪಷ್ಟಂ ಗೃಹ್ಯತೇ। ಅತಃ ಸಂವೇಷ್ಟಿತಪ್ರಸಾರಿತಪಟನ್ಯಾಯೇನೈವ ಅನನ್ಯತ್ ಕಾರಣಾತ್ ಕಾರ್ಯಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಮತ್ತು ಹೇಗೆ ಮಡಿಸಿದ ಬಟ್ಟೆಯು 'ಇದೇನು ಬಟ್ಟೆಯೊ, ಅಥವಾ ಮತ್ತೊಂದು ವಸ್ತುವೊ?'- ಎಂದು ವ್ಯಕ್ತವಾಗಿ ತಿಳಿಯಬರುವದಿಲ್ಲವೋ ಅದೇ (ಬಟ್ಟೆಯನ್ನು) ಬಿಚ್ಚಿದರೆ 'ಮಡಿಸಿತ್ತಲ್ಲ' ಆ ದ್ರವ್ಯವು ಬಟ್ಟೆಯೇ' ಎಂದು ಬಿಚ್ಚಿದ್ದರಿಂದ ಅಭಿವ್ಯಕ್ತವಾಗಿ ತಿಳಿಯಬರುವದೋ, ಮತ್ತು ಹೇಗೆ ಮಡಿಸಿಟ್ಟ ಕಾಲದಲ್ಲಿ ಬಟ್ಟೆ ಎಂದು ತಿಳಿದುಬಂದರೂ ಇಷ್ಟು ಉದ್ದ (ಇಷ್ಟು) ಅಗಲ ಎಂದು ಗೊತ್ತಾಗುವದಿಲ್ಲವೋ ಅದೇ ಬಿಚ್ಚಿಟ್ಟಕಾಲದಲ್ಲಿ ಇಷ್ಟು ಉದ್ದ (ಇಷ್ಟು) ಅಗಲ ಎಂದು ಗೊತ್ತಾಗುವದೋ, (ಇಷ್ಟೇ ಹೊರತು) ಮಡಿಸಿಟ್ಟರೂಪದಲ್ಲಿ

ದ್ದದ್ದಕ್ಕಿಂತ ಈ ಬಟ್ಟೆಯು ಬೇರೆ ಎಂದೇನೂ ತಿಳಿಯುಬರುವದಿಲ್ಲವೋ,[1] ಇದರಂತೆಯೇ ನೂಲು ಮುಂತಾದ ಕಾರಣಾವಸ್ಥೆಯಲ್ಲಿರುವ ಬಟ್ಟೆಯೇ ಮುಂತಾದ ಕಾರ್ಯವು ಅಸ್ಪಷ್ಟವಾಗಿದ್ದೂ ಮಗ್ಗ, ಲಾಳಿ, ನೇಯ್ಗೆಯವ– ಮುಂತಾದ ಕಾರಕವ್ಯಾಪಾರಾದಿಗಳಿಂದ ತೋರಿಕೊಂಡು ಸ್ಪಷ್ಟವಾಗಿ ತಿಳಿಯ ಬರುತ್ತದೆ. ಆದ್ದರಿಂದ ಮಡಿಸಿಬಿಚ್ಚಿದ ಬಟ್ಟೆಯಂತೆಯೇ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ ಎಂದರ್ಥ.

**ಯಥಾ ಚ ಪ್ರಾಣಾದಿ ॥ ೨೦ ॥**

೨೦. ಮತ್ತು ಪ್ರಾಣಾದಿಗಳು ಹೇಗೋ ಹಾಗೆ.

## ಪ್ರಾಣಾಪಾನಾದಿಗಳ ದೃಷ್ಟಾಂತದಿಂದ ಕಾರ್ಯಾನನ್ಯತ್ವ

(ಭಾಷ್ಯ)

೪೫೩. ಯಥಾ ಚ ಲೋಕೇ ಪ್ರಾಣಾಪಾನಾದಿಷು ಪ್ರಾಣಭೇದೇಷು ಪ್ರಾಣಾಯಾಮೇನ ನಿರುದ್ಧೇಷು ಕಾರಣಮಾತ್ರೇಣ ರೂಪೇಣ ವರ್ತ ಮಾನೇಷು ಜೀವನಮಾತ್ರಂ ನಿರ್ವರ್ತ್ಯತೇ ನ ಆಕುಞ್ಚನಪ್ರಸಾರಣಾದಿಕಂ ಕಾರ್ಯಾನ್ತರಮ್ । ತೇಷ್ವೇವ ಪ್ರಾಣಭೇದೇಷು ಪುನಃ ಪ್ರವೃತ್ತೇಷು ಜೀವನಾತ್ ಅಧಿಕಮ್ ಆಕುಞ್ಚನಪ್ರಸಾರಣಾದಿಕಮಪಿ ಕಾರ್ಯಾನ್ತರಂ ನಿರ್ವರ್ತ್ಯತೇ । ನ ಚ ಪ್ರಾಣಭೇದಾನಾಂ ಪ್ರಭೇದವತಃ ಪ್ರಾಣಾತ್ ಅನ್ಯತ್ವಮ್ । ಸಮೀರಣಸ್ವಭಾವಾವಿಶೇಷಾತ್ । ಏವಂ ಕಾರ್ಯಸ್ಯ ಕಾರಣಾತ್ ಅನನ್ಯತ್ವಮ್ । ಅತಶ್ಚ ಕೃತ್ಸ್ನಸ್ಯ ಜಗತಃ ಬ್ರಹ್ಮಕಾರ್ಯತ್ವಾತ್ ತದನನ್ಯ ತ್ವಾಚ್ಚ ಸಿದ್ಧಾ ಏಷಾ ಶ್ರೌತೀ ಪ್ರತಿಜ್ಞಾ "ಯೇನಾಶ್ರುತಂ ಶ್ರುತಂ ಭವತ್ಯ ಮತಂ ಮತಮವಿಜ್ಞಾತಂ ವಿಜ್ಞಾತಂ" (ಛಾಂ. ೬–೧–೩) ಇತಿ ॥

(ಭಾಷ್ಯಾರ್ಥ)

ಮತ್ತು ಹೇಗೆ ಲೋಕದಲ್ಲಿ ಪ್ರಾಣ, ಅಪಾನ– ಮುಂತಾದ ಬೇರೆಬೇರೆಯ ಪ್ರಾಣಗಳು **ಪ್ರಾಣಾಯಾಮ**ದಿಂದ ತಡೆದಿಟ್ಟಿರುವ ಬರಿಯ ಕಾರಣರೂಪ ದಿಂದ ಇರುವಾಗ ಬದುಕಿರುವದೆಂಬ ಕಾರ್ಯವು ಮಾತ್ರ ಆಗುವದೋ, (ಕೈಕಾಲುಗಳನ್ನು) ಮಡಿಸಿಕೊಳ್ಳುವದು, ನೀಡುವದು– ಮುಂತಾದ ಬೇರೆಯ ಕಾರ್ಯವು (ಆಗುವ)ದಿಲ್ಲವೋ (ಆದರೆ) ಅದೇ ಪ್ರಾಣವಿಶೇಷಗಳು ಮತ್ತೆ

1. ಒಂದೇ ವಸ್ತು ರೂಪಾಂತರವನ್ನು ತಾಳಿದರೆ ಬೇರೊಂದು ವಸ್ತುವಲ್ಲವೆನ್ನು ವದಕ್ಕೆ ದೃಷ್ಟಾಂತಗಳಿವು.

(ತಮ್ಮತಮ್ಮ ವ್ಯಾಪಾರದಲ್ಲಿ) ತೊಡಗಲಾಗಿ ಬದುಕಿರುವದಕ್ಕಿಂತ ಹೆಚ್ಚಿನದಾದ ಮಡಿಸಿಕೊಳ್ಳುವದು, ನೀಡುವದು– ಮುಂತಾದ ಬೇರೆಯ ಕಾರ್ಯವೂ ಆಗುವದೋ[1], ಆದರೆ (ಅಷ್ಟುಮಾತ್ರದಿಂದ) ಆ ಪ್ರಾಣಭೇದಗಳು, ವಾಯುಸ್ವಭಾವವುಳ್ಳವಾಗಿಯೇ ಇರುವದರಿಂದ, ಪ್ರಭೇದವುಳ್ಳ ಪ್ರಾಣಕ್ಕಿಂತ ಬೇರೆಯಲ್ಲವೋ, ಹೀಗೆಯೇ (ಕಾರ್ಯವು) ಕಾರಣಕ್ಕಿಂತ ಬೇರೆಯಲ್ಲ. ಆದ್ದರಿಂದಲೇ ಇಡಿಯ ಜಗತ್ತು ಬ್ರಹ್ಮದ ಕಾರ್ಯವಾಗಿರುವದರಿಂದಲೂ ಅದಕ್ಕಿಂತ ಬೇರೆಯಲ್ಲವಾದ್ದರಿಂದಲೂ "ಯಾವ (ಆದೇಶ)ದಿಂದ ಕೇಳದೆ ಇದ್ದದ್ದು ಕೇಳಿದ್ದಾಗುವದೋ, ಮನನಮಾಡದೆ ಇದ್ದದ್ದು ಮನನಮಾಡಿದ್ದಾಗುವದೋ ಅರಿಯದೆ ಇದ್ದದ್ದು ಅರಿತದ್ದಾಗುವದೋ" (ಛಾಂ. ೬–೧–೩) ಎಂಬೀ ಶ್ರುತಿಯ ಪ್ರತಿಜ್ಞೆಯು ಸಿದ್ಧವಾಗುತ್ತದೆ.

## ೭. ಇತರವ್ಯಪದೇಶಾಧಿಕರಣ (ಸೂ. ೨೧–೨೩)

(ಬ್ರಹ್ಮಕ್ಕೆ ಹಿತಾಕರಣವೇ ಮುಂತಾದ ದೋಷವಿಲ್ಲ)

**ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ॥ ೨೧ ॥**

೨೧. ಇತರವ್ಯಪದೇಶವಿರುವದರಿಂದ ಹಿತಾಕರಣವೇ ಮುಂತಾದ ದೋಷಗಳ ಪ್ರಸಕ್ತಿ(ಯಾಗುವದು).

### ಆಕ್ಷೇಪ: ಬ್ರಹ್ಮಕಾರಣವಾದದಲ್ಲಿ ದೋಷಗಳಿವೆ

(ಭಾಷ್ಯ)

೪೫೪. ಅನ್ಯಥಾ ಪುನಶ್ಚೇತನಕಾರಣವಾದಃ ಆಕ್ಷಿಪ್ಯತೇ। ಚೇತನಾದ್ ಹಿ ಜಗತ್ಪ್ರಕ್ರಿಯಾಯಾಮ್ ಆಶ್ರೀಯಮಾಣಾಯಾಂ ಹಿತಾಕರಣಾದಯೋ ದೋಷಾಃ ಪ್ರಸಜ್ಯನ್ತೇ। ಕುತಃ? ಇತರವ್ಯಪದೇಶಾತ್ । ಇತರಸ್ಯ ಶಾರೀರಸ್ಯ ಬ್ರಹ್ಮಾತ್ಮತ್ವಂ ವ್ಯಪದಿಶತಿ ಶ್ರುತಿಃ "ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" (ಛಾಂ. ೬–೮–೭) ಇತಿ ಪ್ರತಿಬೋಧನಾತ್ । ಯದ್ ವಾ, ಇತರಸ್ಯ ಚ ಬ್ರಹ್ಮಣಃ ಶಾರೀರಾತ್ಮತ್ವಂ ವ್ಯಪದಿಶತಿ, "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ೨–೬) ಇತಿ ಸ್ರಷ್ಟುರೇವ ಅವಿಕೃತಸ್ಯ ಬ್ರಹ್ಮಣಃ ಕಾರ್ಯಾನುಪ್ರ

1. ಕಾರ್ಯಾಂತರವನ್ನುಂಟುಮಾಡಿದ ಮಾತ್ರದಿಂದ ಕಾರ್ಯವು ಕಾರಣಕ್ಕಿಂತ ಭಿನ್ನವಲ್ಲವೆಂಬುದಕ್ಕೆ ದೃಷ್ಟಾಂತವಿದು.

ವೇಶೇನ ಶಾರೀರಾತ್ಮತ್ವಪ್ರದರ್ಶನಾತ್ । "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" (ಛಾಂ. ೬-೩-೨) ಇತಿ ಚ ಪರಾ ದೇವತಾ ಜೀವಮ್ ಆತ್ಮಶಬ್ದೇನ ವ್ಯಪದಿಶನ್ತೀ ನ ಬ್ರಹ್ಮಣೋ ಭಿನ್ನಃ ಶಾರೀರಃ ಇತಿ ದರ್ಶಯತಿ। ತಸ್ಮಾತ್ ಯದ್ ಬ್ರಹ್ಮಣಃ ಸ್ರಷ್ಟೃತ್ವಮ್, ತತ್ ಶಾರೀರಸ್ಯೈವ ಇತ್ಯತಃ ಸ ಸ್ವತನ್ತ್ರಃ ಕರ್ತಾ ಸನ್ ಹಿತಮೇವ ಆತ್ಮನಃ ಸೌಮನಸ್ಯಕರಂ ಕುರ್ಯಾತ್ ನ ಅಹಿತಂ ಜನ್ಮಮರಣಜರಾರೋಗಾದ್ಯನೇಕಾನರ್ಥಜಾಲಮ್। ನ ಹಿ ಕಶ್ಚಿತ್ ಅಪರತನ್ತ್ರಃ ಬನ್ಧನಾಗಾರಮ್ ಆತ್ಮನಃ ಕೃತ್ವಾ ಅನುಪ್ರವಿಶತಿ। ನ ಚ ಸ್ವಯಮ್ ಅತ್ಯನ್ತನಿರ್ಮಲಃ ಸನ್ ಅತ್ಯನ್ತಮಲಿನಂ ದೇಹಮ್ ಆತ್ಮತ್ವೇನ ಉಪೇಯಾತ್, ಕೃತಮಪಿ ಕಥಂಚಿತ್ ಯದ್ ದುಃಖಕರಂ ತತ್ ಇಚ್ಛಯಾ ಜಹ್ಯಾತ್ । ಸುಖಕರಂ ಚ ಉಪಾದದೀತ। ಸ್ಮರೇಚ್ಚ 'ಮಯಾ ಇದಂ ಜಗದ್ಬಿಮ್ಬಂ ವಿಚಿತ್ರಂ ವಿರಚಿತಮ್ ಇತಿ। ಸರ್ವೋ ಹಿ ಲೋಕಃ ಸ್ಪಷ್ಟಂ ಕಾರ್ಯಂ ಕೃತ್ವಾ ಸ್ಮರತಿ 'ಮಯಾ ಇದಂ ಕೃತಮ್' ಇತಿ। ಯಥಾ ಚ ಮಾಯಾವೀ ಸ್ವಯಂಪ್ರಸಾರಿತಾಂ ಮಾಯಾಮ್ ಇಚ್ಛಯಾ ಅನಾಯಾಸೇನೈವ ಉಪಸಂಹರತಿ, ಏವಂ ಶಾರೀರೋಽಪಿ ಇಮಾಂ ಸೃಷ್ಟಿಮ್ ಉಪಸಂಹರೇತ್ । ಸ್ವಮಪಿ ತಾವತ್ ಶರೀರಂ ಶಾರೀರೋ ನ ಶಕ್ನೋತಿ ಅನಾಯಾಸೇನ ಉಪಸಂಹರ್ತುಮ್ । ಏವಂ ಹಿತಕ್ರಿಯಾದ್ಯದರ್ಶನಾತ್ ಅನ್ಯಾಯ್ಯಾ ಚೇತನಾತ್ ಜಗತ್ಪ್ರಕ್ರಿಯಾ ಇತಿ ಗಮ್ಯತೇ ॥

(ಭಾಷ್ಯ)

ಚೇತನವೇ (ಜಗತ್ತಿಗೆ) ಕಾರಣವೆಂಬ ವಾದವನ್ನು ಮತ್ತೊಂದು ಬಗೆಯಿಂದ ಆಕ್ಷೇಪಿಸಲಾಗುತ್ತದೆ. ಹೇಗೆಂದರೆ, ಚೇತನದಿಂದ ಜಗತ್ತು ಉಂಟಾಗುವದೆಂದು ಇಟ್ಟುಕೊಂಡರೆ ಹಿತಾಕರಣವೇ ಮುಂತಾದ ದೋಷಗಳು ಅಂಟಿಕೊಳ್ಳುತ್ತವೆ. ಏಕೆ? ಎಂದರೆ ಇತರವ್ಯಪದೇಶವಿರುವದರಿಂದ. (ಇದರ ವಿವರ): ಇತರ (ಇನ್ನೊಬ್ಬ)ನಾದ ಶಾರೀರನಿಗೆ ಬ್ರಹ್ಮಸ್ವರೂಪವನ್ನು ಶ್ರುತಿಯು ಹೇಳುತ್ತದೆ. ಹೇಗೆಂದರೆ "ಅದೇ ಆತ್ಮನು, ಶ್ವೇತಕೇತುವೆ, ಅದೇ ನೀನಾಗಿರುವೆ" (ಛಾಂ. ೬-೮-೭) ಎಂದು ತಿಳಿಸಿಕೊಟ್ಟಿರುತ್ತದೆ. ಅಥವಾ[1] ಇತರವಾದ (ಇನ್ನೊಂದಾದ) ಬ್ರಹ್ಮಕ್ಕೆ ಶಾರೀರಾತ್ಮತ್ವವನ್ನು ಹೇಳುತ್ತದೆ; ಹೇಗೆಂದರೆ "ಅದನ್ನು ಸೃಷ್ಟಿಸಿ ಅದನ್ನೇ ಒಳಹೊಕ್ಕಿತು" (ತೈ. ೨-೬) ಎಂದು ಸೃಷ್ಟಿ ಮಾಡಿದ ಬ್ರಹ್ಮವೇ (ಯಾವ) ವಿಕಾರವನ್ನೂ ಪಡೆಯದೆ ಕಾರ್ಯವನ್ನು ಒಳ

1 ಇದು ಸೂತ್ರಕ್ಕೆ ಇನ್ನೊಂದರ್ಥ.

ಹೊಕ್ಕಿರುವದರಿಂದ ಶಾರೀರಾತ್ಮ(ನಾಗಿರುವದೆಂದು) ತಿಳಿಸಿರುತ್ತದೆ[1]. ಮತ್ತು "ಈ ಜೀವನೆಂಬ ಆತ್ಮರೂಪದಿಂದ ಒಳಹೊಕ್ಕು ನಾಮರೂಪಗಳನ್ನು ವಿಂಗಡಿಸುವೆನು" (ಛಾಂ. ೬-೩-೨) ಎಂದು ಪರದೇವತೆಯು ಪರಮೇಶ್ವರನು ಜೀವನನ್ನು ಆತ್ಮ (ತಾನು) ಎಂಬ ಶಬ್ದದಿಂದ ತಿಳಿಸಿರುವದರಿಂದ ಶಾರೀರನು ಬ್ರಹ್ಮಕ್ಕಿಂತ ಬೇರೆಯಲ್ಲ ಎಂದು ತಿಳಿಸುತ್ತದೆ.

ಆದ್ದರಿಂದ ಬ್ರಹ್ಮದ ಸ್ರಷ್ಟೃತ್ವವೆಂಬುದಿದೆಯಲ್ಲ, ಅದು ಶಾರೀರನದೇ ಆದ್ದರಿಂದ ಅವನು ಸ್ವತಂತ್ರನಾದ ಕರ್ತೃವಾಗಿದ್ದುಕೊಂಡು ತನಗೆ ಸುಮ್ಮಾನವನ್ನುಂಟುಮಾಡುವ ಹಿತವನ್ನೇ ಮಾಡಿಕೊಂಡಾನೇ ಹೊರತು ಅಹಿತವಾದ ಹುಟ್ಟು, ಹೊಂದು, ಮುಪ್ಪು, ರೋಗ- ಮುಂತಾದ ಅನೇಕ ಅನರ್ಥಗಳ ಬಲೆಯನ್ನು (ಕಟ್ಟಿ)ಕೊಳ್ಳಲಾರನು. ಪರತಂತ್ರನಲ್ಲದವನು ಯಾವನೊಬ್ಬನೂ ತನಗೋಸ್ಕರ ಬಂದಿಯ ಮನೆಯನ್ನು ಮಾಡಿಕೊಂಡು ಒಳಹೊಗಲಾರನಷ್ಟೆ; ತಾನು ಅತ್ಯಂತನಿರ್ಮಲನಾಗಿದ್ದುಕೊಂಡು ಅತ್ಯಂತಮಲಿನವಾದ ದೇಹವನ್ನು ತಾನೆಂದು ಒಪ್ಪಿಕೊಳ್ಳಲೂ ಆರನು. ಹೇಗೋ (ಅಂಥದ್ದನ್ನು) ಮಾಡಿಕೊಂಡರೂ ದುಃಖಕರವಾಗಿರುವದೆಂದು ಅದನ್ನು (ತನ್ನ) ಇಚ್ಛೆಯಿಂದ ಬಿಟ್ಟುಬಿಡುವನು, ಮತ್ತು ಸುಖಕರವಾದದ್ದನ್ನು ಸ್ವೀಕರಿಸುವನು[2]. ಮತ್ತು (ಅವನು) 'ಈ ವಿಚಿತ್ರವಾದ ಜಗದ್ಬಿಂಬವನ್ನು ನಾನು ಮಾಡಿರುವೆನು' ಎಂದು ನೆನಪಿಗೆ ತಂದುಕೊಳ್ಳಲೂ ಬಲ್ಲವನಾಗಿರಬೇಕು. ಏಕೆಂದರೆ ಯಾವ ಮನುಷ್ಯನಾದರೂ ಕಾರ್ಯವನ್ನು ಮಾಡಿದರೆ 'ನಾನು ಇದನ್ನು ಮಾಡಿದೆನು' ಎಂದು ಸ್ಪಷ್ಟವಾಗಿ ಸ್ಮರಿಸಿಕೊಳ್ಳುತ್ತಾನೆ[3]. ಮತ್ತು ಹೇಗೆ ಮಾಯಾವಿಯಾದವನು ತಾನೇ ಹರಡಿರುವ ಮಾಯೆಯನ್ನು (ತನ್ನ) ಇಚ್ಛೆಯಿಂದ (ಯಾವ) ಆಯಾಸವೂ ಇಲ್ಲದೆ ಒಳಗೆಳೆದುಕೊಳ್ಳಬಲ್ಲನೋ ಹಾಗೆಯೇ ಶಾರೀರನೂ ಈ ಸೃಷ್ಟಿಯನ್ನು ಉಪಸಂಹಾರಮಾಡಿಕೊಳ್ಳಲು ಶಕ್ತನಾಗಿರಬೇಕಾಗಿತ್ತು. (ಆದರೆ) ಮೊದಲನೆಯ

---

1. ಶಾರೀರನು ಪರಮಾರ್ಥವಾದ ಬ್ರಹ್ಮವೇ ಎಂದು ವೇದಾಂತದಲ್ಲಿ ಹೇಳಿರುವದು ನಿಜ. ಆದರೆ ಬ್ರಹ್ಮವು ಶಾರೀರನೇ, ಸಂಸಾರಿಯೇ- ಎಂದು ಹೇಳಿರುವದಿಲ್ಲ. ಪೂರ್ವಪಕ್ಷಿಯು ಇದನ್ನು ಲೆಕ್ಕಕ್ಕೆ ತೆಗೆದುಕೊಂಡಿರುವದಿಲ್ಲ.

2. "ಹಿತಾಕರಣವೇ ಮುಂತಾದ ದೋಷಗಳು'' ಎಂಬಲ್ಲಿ ಮುಂತಾದ ಎಂದು ಹೇಳಿದ್ದ ದೋಷಗಳನ್ನು ಈಗ ಹೇಳುತ್ತಾರೆ.

3. ಹಿಂದೆ ಮಾಡಿದ್ದೆಲ್ಲವೂ ಈಗ ಸ್ಮರಣೆಯುಂಟಾಗಬೇಕೆಂಬ ನಿಯಮವಿಲ್ಲ; ಆದರೂ ಸ್ಪಷ್ಟವಾಗಿ ದೊಡ್ಡಕಾರ್ಯವನ್ನು ಮಾಡಿದವನಿಗೆ ಅದರ ನೆನಪು ಅವಶ್ಯವಾಗಿ ಬರಬೇಕು. ಸರ್ವಜ್ಞನಾದ ಈಶ್ವರನಿಗೆ ಸ್ಮರಣೆಯಿದೆಯಲ್ಲ! ಎಂದರೆ ಅವನಿಗಿಂತ ಅಭಿನ್ನನಾದ ಜೀವನಿಗೂ ಸ್ಮರಣೆ ಬರಬೇಕು ಎಂದು ಭಾವ. ನ್ಯಾ. ನಿ.

ದಾಗಿ ತನ್ನ ಶರೀರವನ್ನೇ ಶಾರೀರನು (ಯಾವ) ಆಯಾಸವೂ ಇಲ್ಲದೆ ಉಪಸಂಹಾರಮಾಡಿಕೊಳ್ಳಲಾರನು. ಹೀಗೆ ಹಿತವಾದದ್ದನ್ನು ಮಾಡಿಕೊಳ್ಳುವದೇ ಮುಂತಾದದ್ದು ಕಾಣದೆ ಇರುವದರಿಂದ ಚೇತನದಿಂದ ಜಗತ್ತು ಉಂಟಾಗಿದೆ ಎಂಬುದು ನ್ಯಾಯುವಲ್ಲ ಎಂದು ತಿಳಿಯಬೇಕು.

**ಅಧಿಕಂ ತು ಭೇದನಿರ್ದೇಶಾತ್ ॥ ೨೨ ॥**

೨೨. ಆದರೆ ಅಧಿಕವಾದ (ಬ್ರಹ್ಮವು ಸ್ರಷ್ಟೃವಾಗಿರುತ್ತದೆ). ಏಕೆಂದರೆ ಭೇದನಿರ್ದೇಶವಿರುತ್ತದೆ.

## ಬ್ರಹ್ಮವು ಜೀವನಿಗಿಂತ ಬೇರೆ

(ಭಾಷ್ಯ)

೪೫೫. ತುಶಬ್ದಃ ಪಕ್ಷಂ ವ್ಯಾವರ್ತಯತಿ । ಯತ್ ಸರ್ವಜ್ಞಂ ಸರ್ವಶಕ್ತಿ ಬ್ರಹ್ಮ ನಿತ್ಯಶುದ್ಧಬುದ್ಧಮುಕ್ತಸ್ವಭಾವಂ ಶಾರೀರಾತ್ ಅಧಿಕಮ್ ಅನ್ಯತ್, ತದ್ ವಯಂ ಜಗತಃ ಸ್ರಷ್ಟೃ ಬ್ರೂಮಃ । ನ ತಸ್ಮಿನ್ ಹಿತಾಕರಣಾದಯೋ ದೋಷಾಃ ಪ್ರಸಜ್ಯನ್ತೇ । ನ ಹಿ ತಸ್ಯ ಹಿತಂ ಕಿಂಚಿತ್ ಕರ್ತವ್ಯಮ್ ಅಸ್ತಿ ಅಹಿತಂ ವಾ ಪರಿಹರ್ತವ್ಯಮ್ । ನಿತ್ಯಮುಕ್ತಸ್ವಭಾವತ್ವಾತ್ । ನ ಚ ತಸ್ಯ ಜ್ಞಾನಪ್ರತಿಬನ್ಧಃ ಶಕ್ತಿಪ್ರತಿಬನ್ಧೋ ವಾ ಕ್ವಚಿದಪಿ ಅಸ್ತಿ । ಸರ್ವಜ್ಞತ್ವಾತ್, ಸರ್ವಶಕ್ತಿತ್ವಾಚ್ಚ । ಶಾರೀರಸ್ತು ಅನೇವಂವಿಧಃ । ತಸ್ಮಿನ್ ಪ್ರಸಜ್ಯನ್ತೇ ಹಿತಾಕರಣಾದಯೋ ದೋಷಾಃ । ನ ತು ತಂ ವಯಂ ಜಗತಃ ಸ್ರಷ್ಟಾರಂ ಬ್ರೂಮಃ । ಕುತ ಏತತ್ ? ಭೇದನಿರ್ದೇಶಾತ್ । "ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (ಛಾಂ. ೨-೪-೫) 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' (ಛಾಂ. ೮-೭-೧) "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ. ೬-೮-೧), "ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾನ್ವಾರೂಢಃ" (ಬೃ. ೪-೩-೩೫) ಇತ್ಯೇವಂಜಾತೀಯಕಃ ಕರ್ತೃಕರ್ಮಾದಿಭೇದನಿರ್ದೇಶೋ ಜೀವಾತ್ ಅಧಿಕಂ ಬ್ರಹ್ಮ ದರ್ಶಯತಿ ॥

(ಭಾಷ್ಯಾರ್ಥ)

ತು ಎಂಬ ಶಬ್ದವು (ಈ ಪೂರ್ವ)ಪಕ್ಷವನ್ನು ತಳ್ಳಿಹಾಕುತ್ತದೆ. ಸರ್ವಜ್ಞವೂ ಸರ್ವಶಕ್ತಿಯೂ ನಿತ್ಯಶುದ್ಧಬುದ್ಧಮುಕ್ತಸ್ವಭಾವವುಳ್ಳದ್ದೂ ಆಗಿರುವ ಶಾರೀರನಿಗಿಂತ ಅಧಿಕವಾದ ಎಂದರೆ ಬೇರೆಯಾದ ಬ್ರಹ್ಮವಿದೆಯಲ್ಲ, ಅದನ್ನು ನಾವು

ಜಗತ್ತಿನ ಸ್ರಷ್ಟೃ ಎಂದು ಹೇಳುತ್ತೇವೆ. ಅದರಲ್ಲಿ ಹಿತವನ್ನು ಮಾಡಿಕೊಳ್ಳದಿರುವದೇ ಮುಂತಾದ ದೋಷಗಳು ಅಂಟುವದಿಲ್ಲ, ಏಕೆಂದರೆ ಅದಕ್ಕೆ ಮಾಡಿಕೊಳ್ಳಬೇಕಾದ ಯಾವದೊಂದು ಹಿತವೂ ಇರುವದಿಲ್ಲ, ತೊಲಗಿಸಿಕೊಳ್ಳಬೇಕಾದ ಅಹಿತವೂ (ಇರುವ)ದಿಲ್ಲ; ಏಕೆಂದರೆ (ಅದು) ನಿತ್ಯಮುಕ್ತವಾದ ಸ್ವಭಾವವುಳ್ಳದ್ದಾಗಿದೆ. ಅದಕ್ಕೆ ಜ್ಞಾನಪ್ರತಿಬನ್ಧವಾಗಲಿ ಶಕ್ತಿಪ್ರತಿಬನ್ಧವಾಗಲಿ ಎಲ್ಲಿಯೂ ಇರುವದಿಲ್ಲ; ಏಕೆಂದರೆ (ಅದು) ಸರ್ವಜ್ಞವೂ ಸರ್ವಶಕ್ತಿಗಳುಳ್ಳದ್ದೂ (ಆಗಿದೆ).

ಆದರೆ ಶಾರೀರನು ಇಂಥವನಲ್ಲ; ಅವನಿಗೆ ಹಿತಾಕರಣವೇ ಮುಂತಾದ ದೋಷಗಳು ಅಂಟಬಹುದು. ಆದರೆ ಇವನು ಜಗತ್ತಿನ ಸ್ರಷ್ಟೃವೆಂದು ನಾವು ಹೇಳುವದಿಲ್ಲ. ಇದು ಹೇಗೆ? ಎಂದರೆ ಭೇದನಿರ್ದೇಶವಿರುವದರಿಂದ. "ಎಲೆ, ಆತ್ಮನನ್ನು ಕಂಡುಕೊಳ್ಳಬೇಕು, ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು" (ಬೃ. ೨-೪-೫), "ಅವನನ್ನೇ ಹುಡುಕಬೇಕು, ಅವನನ್ನೇ ಅರಿತುಕೊಳ್ಳಬೇಕು" (ಛಾಂ. ೮-೭-೧), "ಆಗ, ಸೋಮ್ಯನೆ, ಸತ್ತಿನೊಡನೆ ಸೇರಿಕೊಂಡವನಾಗುತ್ತಾನೆ" (ಛಾಂ. ೬-೮-೧), "ಶಾರೀರ ಆತ್ಮನು ಪ್ರಾಜ್ಞನಾದ ಆತ್ಮನಿಂದ ಅನ್ವಾರೂಢನಾಗಿ...." (ಬೃ. ೪-೩-೩೫)- ಎಂಬೀ ಜಾತಿಯ ಕರ್ತೃಕರ್ಮತ್ವವೇ ಮುಂತಾದ ಭೇದನಿರ್ದೇಶವು ಜೀವನಿಗಿಂತ ಬ್ರಹ್ಮವು ಅಧಿಕವು ಎಂದು ತಿಳಿಸುತ್ತದೆ[1].

## ಭೇದಾಭೇದವ್ಯವಹಾರವು ವಿರುದ್ಧವಲ್ಲ

(ಭಾಷ್ಯ)

೪೫೭. ನನು ಅಭೇದನಿರ್ದೇಶೋಽಪಿ ದರ್ಶಿತಃ, 'ತತ್ತ್ವಮಸಿ' (ಛಾಂ. ೬-೮-೭) ಇತ್ಯೇವಂಜಾತೀಯಕಃ । ಕಥಂ ಭೇದಾಭೇದೌ ವಿರುದ್ಧೌ ಸಂಭವೇಯಾತಾಮ್ ? ನೈಷ ದೋಷಃ । ಆಕಾಶಘಟಾಕಾಶನ್ಯಾಯೇನ ಉಭಯಸಂಭವಸ್ಯ ತತ್ರ ತತ್ರ ಪ್ರತಿಷ್ಠಾಪಿತತ್ವಾತ್ । ಅಪಿ ಚ ಯದಾ 'ತತ್ತ್ವಮಸಿ' ಇತ್ಯೇವಂಜಾತೀಯಕೇನ ಅಭೇದನಿರ್ದೇಶೇನ ಅಭೇದಃ ಪ್ರತಿಬೋಧಿತೋ ಭವತಿ ಅಪಗತಂ ಭವತಿ ತದಾ ಜೀವಸ್ಯ ಸಂಸಾರಿತ್ವಮ್,

---

1. ಶ್ರವಣಾದಿಗಳ ಕರ್ತೃ ಜೀವನು, ಕರ್ಮವು ಪರಮಾತ್ಮನು; ಸಾಯುವಾಗ ಶರೀರವನ್ನು ಬಿಟ್ಟಗಲುವವನು ಜೀವನು, ಅವನ ಮೇಲಿದ್ದು ನೋಡಿಕೊಳ್ಳುವವನು ಪರಮಾತ್ಮನು- ಹೀಗೆ ಬ್ರಹ್ಮವು ಜೀವನಿಗಿಂತ ಬೇರೆ ಎಂದು ಶ್ರುತಿಯಲ್ಲಿ ತಿಳಿಸಿದೆ.

ಬ್ರಹ್ಮಣಶ್ಚ ಸ್ರಷ್ಟೃತ್ವಮ್ । ಸಮಸ್ತಸ್ಯ ಮಿಥ್ಯಾಜ್ಞಾನವಿಜೃಮ್ಭಿತಸ್ಯ ಭೇದ ವ್ಯವಹಾರಸ್ಯ ಸಮ್ಯಗ್ಜ್ಞಾನೇನ ಬಾಧಿತತ್ವಾತ್ । ತತ್ರ ಕುತ ಏವ ಸೃಷ್ಟಿಃ, ಕುತೋ ವಾ ಹಿತಾಕರಣಾದಯೋ ದೋಷಾಃ? ಅವಿದ್ಯಾಪ್ರತ್ಯುಪಸ್ಥಾಪಿತ ನಾಮರೂಪಕೃತಕಾರ್ಯಕರಣಸಂಘಾತೋಪಾಧ್ಯವಿವೇಕಕೃತಾ ಹಿ ಭ್ರಾನ್ತಿಃ ಹಿತಾಕರಣಾದಿಲಕ್ಷಣಃ ಸಂಸಾರಃ, ನ ತು ಪರಮಾರ್ಥತೋಽಸ್ತಿ ಇತಿ ಅಸಕೃತ್ ಅವೋಚಾಮ । ಜನ್ಮಮರಣಚ್ಛೇದನಾದ್ಯಭಿಮಾನವತ್ । ಅಬಾಧಿತೇ ತು ಭೇದವ್ಯವಹಾರೇ "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" (ಛಾಂ. ೮-೭-೧) ಇತ್ಯೇವಂಜಾತೀಯಕೇನ ಭೇದನಿರ್ದೇಶೇನ ಅವಗಮ್ಯಮಾನಂ ಬ್ರಹ್ಮಣೋಽಧಿಕತ್ವಂ ಹಿತಾಕರಣಾದಿದೋಷಪ್ರಸಕ್ತಿಂ ನಿರುಣದ್ಧಿ ॥

(ಭಾಷ್ಯಾರ್ಥ)

(ಆಕ್ಷೇಪ):- "ಅದೇ ನೀನು" (ಛಾಂ.೬-೮-೭) ಎಂಬೀ ಜಾತಿಯ ಅಭೇದನಿರ್ದೇಶನವನ್ನೂ (ನಾವು) ತೋರಿಸಿದ್ದೇವಲ್ಲ! (ಒಂದಕ್ಕೊಂದು) ವಿರುದ್ಧವಾದ ಭೇದಾಭೇದಗಳು ಹೇಗೆ (ಒಂದೇ ಕಡೆಯಲ್ಲಿ) ಇದ್ದಾವು?

(ಪರಿಹಾರ):-ಇದು ದೋಷವಲ್ಲ. ಏಕೆಂದರೆ **ಆಕಾಶ, ಘಟಾಕಾಶ- ಇವುಗಳ ದೃಷ್ಟಾಂತದಿಂದ (ಭೇದ, ಅಭೇದ) ಎರಡೂ ಇರಬಹುದೆಂಬು ದನ್ನೂ, ಅಲ್ಲಲ್ಲಿ ಸಾಧಿಸಿಕೊಟ್ಟಿರುತ್ತೇವೆ**[1]. **ಇದಲ್ಲದೆ ಯಾವಾಗ 'ಅದೇ ನೀನು' ಎಂಬೀ ಜಾತಿಯ ಅಭೇದನಿರ್ದೇಶದಿಂದ ಅಭೇದವನ್ನು ತಿಳಿಸ ಲಾಗುವದೋ ಆಗ ಜೀವನ ಸಂಸಾರಿತ್ವವೂ ಬ್ರಹ್ಮದ ಸ್ರಷ್ಟೃತ್ವವೂ ಹೋಗಿಬಿಟ್ಟಿರುತ್ತದೆ. ಏಕೆಂದರೆ ಮಿಥ್ಯಾಜ್ಞಾನದಿಂದ ಹರಡಿಕೊಂಡಿ ರುವ ಎಲ್ಲಾ ಭೇದವ್ಯವಹಾರವೂ (ಆಗ) ಸಮ್ಯಗ್ಜ್ಞಾನದಿಂದ ಬಾಧಿತ ವಾಗಿಬಿಟ್ಟಿರುತ್ತದೆ. ಆಗ ಸೃಷ್ಟಿಯೆಲ್ಲಿಯದು? ಹಿತಾಕರಣವೇ ಮುಂತಾದ ದೋಷಗಳಾದರೂ ಎಲ್ಲಿ?**[2] **ಅವಿದ್ಯೆಯು ತಂದೊಡ್ಡಿರುವ ನಾಮರೂಪಗಳಿಂದಾದ ಕಾರ್ಯಕರಣಸಂಘಾತವೆಂಬ ಉಪಾಧಿ ಯಿಂದ ವಿಂಗಡಿಸಿಕೊಳ್ಳದೆ ಇರುವದರಿಂದ ಆದ ಭ್ರಾಂತಿಯೇ ಹಿತ ಕರಣಾದಿರೂಪದ ಸಂಸಾರವೇ ಹೊರತು (ಅದು) ಪರಮಾರ್ಥವಾಗಿರು ವದಿಲ್ಲ ಎಂದು ಹಲವು ಸಾರಿ ಹೇಳಿರುತ್ತೇವೆ. ಹುಟ್ಟುವದು,**

---

1. ಭೇದವು ಅಪರಮಾರ್ಥವಾಗಿರುವದರಿಂದ ಭೇದಾಭೇದವಿರೋಧವಿಲ್ಲ. ಪೀಠಿಕೆ ಯನ್ನು ನೋಡಿ.

2. ಭೇದವ್ಯವಹಾರವೇ ಬಾಧಿತವಾಗಿರುವಾಗ ಸಂಸಾರಿತ್ವ, ಹಿತಾಕರಣ- ಮುಂತಾದ ಭೇದಗಳು ಇರುವದಕ್ಕೆ ಕಾರಣವಿಲ್ಲ ಎಂದು ಭಾವ.

**ಸಾಯುವದು, ಕತ್ತರಿಸಲ್ಪಡುವದು, ಸೀಳಲ್ಪಡುವದು– ಮುಂತಾದ ಅಭಿಮಾನಗಳಂತೆಯೇ ಇದು**[1]. ಆದರೆ ಭೇದವ್ಯವಹಾರವು ಬಾಧಿತವಲ್ಲದೆ ಇರುವಾಗ "ಅವನನ್ನು ಹುಡುಕಬೇಕು, ಅವನನ್ನೇ ಅರಿತುಕೊಳ್ಳಬೇಕು" ( ಛಾಂ. ೮–೭–೧ ) ಎಂಬೀ ಜಾತಿಯ ಭೇದನಿರ್ದೇಶದಿಂದ ಬ್ರಹ್ಮವು ಬೇರೆ ಎಂದು ಗೊತ್ತಾಗುವದರಿಂದ (ಆ ಭೇದವು) ಹಿತಾಕರಣಾದಿದೋಷಗಳು ಅಂಟದಂತೆ ತಡೆಗಟ್ಟುತ್ತದೆ.

**ಅಶ್ಮಾದಿವಚ್ಚ ತದನುಪಪತ್ತಿಃ ॥ ೨೩ ॥**

೨೩. (ಇದು) ಕಲ್ಲು ಮುಂತಾದವುಗಳಂತೆ ; (ಆದ್ದರಿಂದ) ಲೂ ಅದು ಹೊಂದುವದಿಲ್ಲ.

## ಒಂದೇ ಬ್ರಹ್ಮದಲ್ಲಿ ಭೇದವಿರಬಹುದು

(ಭಾಷ್ಯ)

೪೫೭. ಯಥಾ ಚ ಲೋಕೇ ಪೃಥಿವೀತ್ವಸಾಮಾನ್ಯಾನ್ವಿತಾನಾಮಪಿ ಅಶ್ಮನಾಂ ಕೇಚಿತ್ ಮಹಾರ್ಹಾ ಮಣಯೋ ವಜ್ರವೈಡೂರ್ಯಾದಯಃ, ಅನ್ಯೇ ಮಧ್ಯಮವೀರ್ಯಾಃ ಸೂರ್ಯಕಾನ್ತಾದಯಃ, ಅನ್ಯೇ ಪ್ರಹೀಣಾಃ ಶ್ವವಾಯಸಪ್ರಕ್ಷೇಪಣಾರ್ಹಾಃ ಪಾಷಾಣಾಃ ಇತಿ ಅನೇಕವಿಧಂ ವೈಚಿತ್ರ್ಯಂ ದೃಶ್ಯತೇ। ಯಥಾ ಚ ಏಕಪೃಥಿವೀವ್ಯಪಾಶ್ರಯಾಣಾಮಪಿ ಬೀಜಾನಾಂ ಬಹುವಿಧಂ ಪತ್ರಪುಷ್ಪಫಲಗನ್ಧರಸಾದಿವೈಚಿತ್ರ್ಯಂ ಚನ್ದನಕಿಮ್ಪಾಕಾದಿಷು ಉಪಲಕ್ಷ್ಯತೇ। ಯಥಾ ಚ ಏಕಸ್ಯಾಪಿ ಅನ್ನರಸಸ್ಯ ಲೋಹಿತಾದೀನಿ ಕೇಶಲೋಮಾದೀನಿ ಚ ವಿಚಿತ್ರಾಣಿ ಕಾರ್ಯಾಣಿ ಭವನ್ತಿ। ಏವಮ್ ಏಕಸ್ಯಾಪಿ ಬ್ರಹ್ಮಣಃ ಜೀವಪ್ರಾಜ್ಞಪೃಥಕ್ತ್ವಂ ಕಾರ್ಯವೈಚಿತ್ರ್ಯಂ ಚ ಉಪಪದ್ಯತೇ ಇತ್ಯತಃ ತದನುಪಪತ್ತಿಃ। ಪರಪರಿಕಲ್ಪಿತದೋಷಾನುಪಪತ್ತಿಃ ಇತ್ಯರ್ಥಃ ಶ್ರುತೇಶ್ಚ ಪ್ರಾಮಾಣ್ಯಾತ್, ವಿಕಾರಸ್ಯ ಚ ವಾಚಾರಮ್ಭಣಮಾತ್ರತ್ವಾತ್ ಸ್ವಪ್ನದೃಶ್ಯಭಾವವೈಚಿತ್ರ್ಯವಚ್ಚ ಇತ್ಯಭ್ಯುಚ್ಚಯಃ ॥

---

1. ದೇಹಾಭಿಮಾನದಿಂದ ಜನನಮರಣಾದಿಗಳ ವ್ಯವಹಾರವಾಗುವಂತೆ ಕಾಯಕರಣಸಂಘಾತಾಭಿಮಾನದಿಂದಲೇ ಸೃಷ್ಟಿ, ಹಿತಾಕರಣ– ಮುಂತಾದ ವ್ಯವಹಾರವಾಗುವದು –ಎಂದು ಅಭಿಪ್ರಾಯ. ಮೊದಲನೆಯದು ಭ್ರಾಂತಿಜನ್ಯವೆಂಬುದನ್ನು ಪೂರ್ವಪಕ್ಷಿಯು ಒಪ್ಪುತ್ತಾನೆ. ಅದರಂತೆಯೇ ಸೃಷ್ಟ್ಯಾದಿವ್ಯವಹಾರವೂ ಭ್ರಾಂತಿಯಾಗಬಹುದಾಗಿ ಎಂದು ಭಾವ.

(ಭಾಷ್ಯಾರ್ಥ)

ಮತ್ತು ಹೇಗೆ ಲೋಕದಲ್ಲಿ ಕಲ್ಲುಗಳಲ್ಲಿ ಪೃಥಿವೀತ್ವಸಾಮಾನ್ಯವು ಅನುಗತವಾಗಿದ್ದರೂ (ಅವುಗಳಲ್ಲಿ) ಕೆಲವು ಬಹಳ ಬೆಲೆಯುಳ್ಳ ವಜ್ರ, ವೈಡೂರ್ಯ ಮುಂತಾದ ರತ್ನಗಳು; ಇನ್ನು ಕೆಲವು ಸೂರ್ಯಕಾಂತವೇ ಮುಂತಾದ ಯೋಗ್ಯತೆಯುಳ್ಳವು; ಮತ್ತೂ ಕೆಲವು ನಾಯಿ, ಕಾಗೆ-ಮುಂತಾದವನ್ನು (ಹೊಡೆಯುವದಕ್ಕಾಗಿ) ಎಸೆಯತಕ್ಕ ಕೀಳ್ತರದ ಕಲ್ಲುಗಳು –ಎಂದು ಅನೇಕವಿಧವಾದ ವೈಚಿತ್ರ್ಯವು ಕಂಡುಬರುತ್ತದೆಯೋ; ಮತ್ತು ಹೇಗೆ ಬೀಜಗಳೆಲ್ಲ ಒಂದೇ ಭೂಮಿಯನ್ನು ಆಶ್ರಯಿಸಿಕೊಂಡಿರುವವಾದರೂ ಚಂದನ, ಕಿಂಪಾಕ- ಮುಂತಾದವುಗಳಲ್ಲಿ ಎಲೆ, ಹೂ, ಹಣ್ಣು, ವಾಸನೆ, ಸವಿ- ಮುಂತಾದ ಬಹುವಿಧವಾಗಿರುವ ವೈಚಿತ್ರ್ಯವು ಕಾಣುತ್ತಿರುವದೋ; ಮತ್ತು ಹೇಗೆ ಒಂದೇ ಅನ್ನರಸಕ್ಕೆ ರಕ್ತವೇ ಮುಂತಾದ ಮತ್ತು ತಲೆಗೂದಲು, ಮೈಗೂದಲು ಮುಂತಾದ ವಿಚಿತ್ರವಾದ ಕಾರ್ಯಗಳು ಆಗುವವೋ, ಅದರಂತೆ ಒಂದೇ ಬ್ರಹ್ಮದಲ್ಲಿ ಜೀವ, ಪ್ರಾಜ್ಞ- ಎಂಬ ವಿಂಗಡವೂ ಕಾರ್ಯವೈಚಿತ್ರ್ಯವೂ ಆಗಬಹುದಾಗಿದೆ. ಆದ್ದರಿಂದ ಅದು ಹೊಂದುವದಿಲ್ಲ; ಎಂದರೆ ಬೇರೆಯ ವಾದಿಯು ಕಲ್ಪಿಸಿದ ದೋಷವು ಹೊಂದುವದಿಲ್ಲ ಎಂದರ್ಥ. ಶ್ರುತಿಯು ಪ್ರಮಾಣವಾಗಿರುವದರಿಂದಲೂ[1] ವಿಕಾರವು ವಾಚರಂಭಣಮಾತ್ರವಾಗಿರುವದರಿಂದಲೂ[2] ಸ್ವಪ್ನದಲ್ಲಿ ಕಾಣುವ (ಪದಾರ್ಥಗಳ) ವೈಚಿತ್ರ್ಯದಂತೆ (ಇದೂ ಇರಬಹುದಾದ್ದರಿಂದಲೂ[3] ದೋಷವು ಹೊಂದುವದಿಲ್ಲ) ಎಂದು ಅಭ್ಯುಚ್ಚಯವು[4].

## ೮. ಉಪಸಂಹಾರದರ್ಶನಾಧಿಕರಣ (ಸೂ. ೨೪-೨೫)

(ಬ್ರಹ್ಮಕ್ಕೆ ಕಾರಕಗಳು ಬೇಕಿಲ್ಲ)

**ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ ॥ ೨೪ ॥**

೨೪. ಉಪಸಂಹಾರವು ಕಂಡುಬರುವದರಿಂದ (ಇದು ಸರಿ)

---

1. ಶ್ರುತಿವಿರುದ್ಧವಾದ ತರ್ಕವು ಸರಿಯಾದ ತರ್ಕವಲ್ಲವೆಂದು ೨-೧-೧೧ರಲ್ಲಿ ತೋರಿಸಿಕೊಟ್ಟಿದೆ.

2. ಕಾರ್ಯವು ಬರಿಯ ಮಾತಿನಿಂದ ಹೇಳಿದ್ದೇ ಹೊರತು, ನಿಜವಾಗಿ ಕಾರಣಕ್ಕಿಂತ ಬೇರೆಯಾಗಿರುವ ವಸ್ತುವಲ್ಲವೆಂದು ೨-೧-೧೪ರಲ್ಲಿ ಹೇಳಿದೆ.

3. ಕನಸಿನ ವೈಚಿತ್ರ್ಯದಂತೆ ಇದು ಮಿಥ್ಯೆಯಾಗಿರುವದರಿಂದ ಇದರಲ್ಲಿ ಯಾವ ಅನುಪಪತ್ತಿಯನ್ನೂ ಹೇಳುವದಕ್ಕೆ ಬರುವದಿಲ್ಲ.

4. ಸೂತ್ರದ ಚಕಾರಕ್ಕೆ ಅರ್ಥವಾಗಿ ಈ ಹೆಚ್ಚಿನ ಯುಕ್ತಿಯನ್ನೂ ಸೇರಿಸಿಕೊಳ್ಳಬೇಕು ಎಂದು ಅಭಿಪ್ರಾಯ.

ಯಲ್ಲ, ಎಂದರೆ ಹಾಗಲ್ಲ; ಏಕೆಂದರೆ ಹಾಲಿನಂತೆ (ಪರಿಣಮಿಸ ಬಹುದು).

## ಪೂರ್ವಪಕ್ಷ: ಕಾರಕಗಳಿಲ್ಲದ್ದರಿಂದ ಬ್ರಹ್ಮಕಾರಣವಲ್ಲ

(ಭಾಷ್ಯ)

೪೫೮. ಚೇತನಂ ಬ್ರಹ್ಮ ಏಕಮ್ ಅದ್ವಿತೀಯಂ ಜಗತಃ ಕಾರಣಮ್ ಇತಿ ಯದುಕ್ತಮ್ ತನ್ನೋಪಪದ್ಯತೇ। ಕಸ್ಮಾತ್? ಉಪಸಂಹಾರದರ್ಶನಾತ್। ಇಹ ಹಿ ಲೋಕೇ ಕುಲಾಲಾದಯೋ ಘಟಪಟಾದೀನಾಂ ಕರ್ತಾರಃ ಮೃದ್ದಣ್ಡಚಕ್ರಸೂತ್ರಾದ್ಯನೇಕಕಾರಕೋಪಸಂಹಾರೇಣ ಸಂಗೃಹೀತಸಾಧನಾಃ ಸನ್ತಃ, ತತ್ತತ್ಕಾರ್ಯಂ ಕುರ್ವಾಣಾ ದೃಶ್ಯನ್ತೇ। ಬ್ರಹ್ಮ ಚ ಅಸಹಾಯಂ ತವ ಅಭಿಪ್ರೇತಮ್। ತಸ್ಯ ಸಾಧನಾನ್ತರಾನುಪಸಂಗ್ರಹೇ ಸತಿ ಕಥಂ ಸ್ರಷ್ಟೃತ್ವಮ್ ಉಪಪದ್ಯೇತ? ತಸ್ಮಾತ್ ನ ಬ್ರಹ್ಮ ಜಗತ್ಕಾರಣಮ್ ||

(ಭಾಷ್ಯಾರ್ಥ)

ಚೇತನನಾದ ತನಗೆರಡನೆಯದಿಲ್ಲದ ಬ್ರಹ್ಮವೊಂದೇ ಜಗತ್ತಿಗೆ ಕಾರಣವು ಎಂದು ಹೇಳಿತ್ತಷ್ಟೆ, ಅದು ಹೊಂದುವದಿಲ್ಲ. ಏಕೆ? ಎಂದರೆ ಉಪಸಂಹಾರವು ಕಂಡುಬರುವದರಿಂದ. ಹೇಗೆಂದರೆ ಈ ಲೋಕದಲ್ಲಿ ಗಡಿಗೆ, ಬಟ್ಟೆ ಮುಂತಾದವುಗಳನ್ನು ಮಾಡುವ ಕುಂಬಾರನೇ ಮುಂತಾದವರು ಮಣ್ಣು, ಕೋಲು, ತಿಗುರಿ, ನೂಲು –ಮುಂತಾದ ಅನೇಕಕಾರಕಗಳನ್ನು ಉಪಸಂಹಾರಮಾಡಿಕೊಂಡು, ಸಾಧನಗಳನ್ನು ಕೂಡಿಟ್ಟುಕೊಂಡವರಾಗಿ, ಆಯಾ ಕಾರ್ಯವನ್ನು ಮಾಡುವದು ಕಂಡುಬರುತ್ತದೆ. ಆದರೆ ಬ್ರಹ್ಮಕ್ಕೆ ಯಾವ ಸಹಾಯವೂ ಇಲ್ಲವೆಂದು ನಿನ್ನ ಅಭಿಪ್ರಾಯ. ಮತ್ತೆ ಯಾವ ಸಾಧನವನ್ನೂ ಕೂಡಿಟ್ಟುಕೊಳ್ಳದೆ ಇದ್ದರೆ ಹೇಗೆತಾನೆ ಅದಕ್ಕೆ ಸ್ರಷ್ಟೃತ್ವವು ಹೊಂದೀತು? ಆದ್ದರಿಂದ ಬ್ರಹ್ಮವು ಜಗತ್ಕಾರಣವಲ್ಲ.

## ಸಿದ್ಧಾಂತ: ಹಾಲಿನಂತೆ ಬ್ರಹ್ಮವು ಕಾರಣವಾಗಬಹುದು

(ಭಾಷ್ಯ)

೪೫೯. ಇತಿ ಚೇತ್। ನೈಷ ದೋಷಃ। ಯತಃ ಕ್ಷೀರವತ್ ದ್ರವ್ಯಸ್ವಭಾವವಿಶೇಷಾತ್ ಉಪಪದ್ಯತೇ। ಯಥಾ ಹಿ ಲೋಕೇ ಕ್ಷೀರಂ ಜಲಂ ವಾ ಸ್ವಯಮೇವ ದಧಿಹಿಮಭಾವೇನ ಪರಿಣಮತೇ ಅನಪೇಕ್ಷ್ಯ

ಬಾಹ್ಯಂ ಸಾಧನಮ್ ತಥಾ ಇಹಾಪಿ ಭವಿಷ್ಯತಿ । ನನು ಕ್ಷೀರಾದ್ಯಪಿ ದಧ್ಯಾದಿ ಭಾವೇನ ಪರಿಣಮಮಾನಮ್ ಅಪೇಕ್ಷತ ಏವ ಬಾಹ್ಯಂ ಸಾಧನಮ್ ಔಷ್ಣ್ಯಾದಿಕಮ್ । ಕಥಮ್ ಉಚ್ಯತೇ 'ಕ್ಷೀರವದ್ಧಿ' ಇತಿ? ನೈಷ ದೋಷಃ । ಸ್ವಯಮಪಿ ಹಿ ಕ್ಷೀರಂ ಯಾಂ ಚ ಯಾವತೀಂ ಚ ಪರಿಣಾಮಮಾತ್ರಾಮ್ ಅನುಭವತಿ ತಾವತ್ಯೇವ ತ್ವಾರ್ಯತೇ ತು ಔಷ್ಣ್ಯಾದಿನಾ ದಧಿಭಾವಾಯ । ಯದಿ ಚ ಸ್ವಯಂ ದಧಿಭಾವಶೀಲತಾ ನ ಸ್ಯಾತ್, ನೈವ ಔಷ್ಣ್ಯಾದಿನಾಪಿ ಬಲಾತ್ ದಧಿಭಾವಮ್ ಆಪದ್ಯೇತ[1] । ನ ಹಿ ವಾಯುಃ ಆಕಾಶೋ ವಾ ಔಷ್ಣ್ಯಾದಿನಾ ಬಲಾತ್ ದಧಿಭಾವಮ್ ಆಪದ್ಯತೇ[1]। ಸಾಧನಸಾಮಗ್ರ್ಯಾ ಚ ತಸ್ಯ ಪೂರ್ಣತಾ ಸಂಪಾದ್ಯತೇ । ಪರಿಪೂರ್ಣಶಕ್ತಿಕಂ ತು ಬ್ರಹ್ಮ । ನ ತಸ್ಯ ಅನ್ಯೇನ ಕೇನಚಿತ್ ಪೂರ್ಣತಾ ಸಂಪಾದಯಿತವ್ಯಾ । ಶ್ರುತಿಶ್ಚ ಭವತಿ — "ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ । ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ ॥" (ಶ್ವೇ. ೬–೨) ಇತಿ । ತಸ್ಮಾತ್ ಏಕಸ್ಯಾಪಿ ಬ್ರಹ್ಮಣಃ ವಿಚಿತ್ರಶಕ್ತಿಯೋಗಾತ್ ಕ್ಷೀರಾದಿವತ್ ವಿಚಿತ್ರಪರಿಣಾಮಃ ಉಪಪದ್ಯತೇ ॥

(ಭಾಷ್ಯಾರ್ಥ)

ಹೀಗೆಂದರೆ ಇದು ದೋಷವಲ್ಲ (ಎನ್ನುತ್ತೇವೆ). ಏಕೆಂದರೆ ಹಾಲಿನಂತೆ ದ್ರವ್ಯದ (ಒಂದಾನೊಂದು) ಗೊತ್ತಾದ ಸ್ವಭಾವದಿಂದ (ಕಾರಣತ್ವವು) ಹೊಂದುತ್ತದೆ. ಹೇಗೆಂದರೆ, ಲೋಕದಲ್ಲಿ ಹಾಲು ಅಥವಾ ನೀರು ತಾನೇ ಹೊರಗಿನ ಸಾಧನವನ್ನು ಬಯಸದೆಯೇ ಹೇಗೆ ಮೊಸರಾಗಿ ಅಥವಾ ಮಂಜುಗಡ್ಡೆಯಾಗಿ ಪರಿಣಮಿಸುತ್ತವೆಯೋ ಹಾಗೆಯೇ ಇಲ್ಲಿಯೂ ಆಗಬಹುದು.

(ಆಕ್ಷೇಪ) :— ಹಾಲು ಮುಂತಾದದ್ದು ಕೂಡ ಮೊಸರು ಮುಂತಾದ ರೂಪದಲ್ಲಿ ಪರಿಣಮಿಸುವದಕ್ಕೆ ಬಿಸಿಯೇ ಮುಂತಾದ ಹೊರಗಿನ ಸಾಧನವನ್ನು ಬಯಸಿಯೇ ತೀರುತ್ತದೆಯಲ್ಲ! 'ಹಾಲಿನಂತೆಯೇ (ಆಗಬಹುದು)' ಎಂದು ಹೇಳಿದ್ದು ಹೇಗೆ (ಸರಿ) ?

(ಪರಿಹಾರ):— ಇದೇನೂ ದೋಷವಲ್ಲ. ಏಕೆಂದರೆ ಹಾಲು ತಾನೇ ಯಾವ ಪರಿಣಾಮಾಂಶವನ್ನು ಎಷ್ಟರಮಟ್ಟಿಗೆ ಹೊಂದುತ್ತದೆಯೋ ಅಷ್ಟರ ಮಟ್ಟಿಗೇ ಬಿಸಿಯೇ ಮುಂತಾದದ್ದು (ಅದನ್ನು) ಮೊಸರಾಗುವದಕ್ಕೆ ತ್ವರೆ

---

1 ಆಪದ್ಯೇತ, ಆಪದ್ಯತೇ – ಇವು ಕ್ರಮವಾಗಿ ಅಪಾದ್ಯೇತ, ಅಪಾದ್ಯತೇ ಎಂದಿದ್ದರೆ ಚೆನ್ನಾಗಿರುವದೆಂದು ತೋರುತ್ತದೆ.

ಗೊಳಿಸುತ್ತದೆ[1]. (ಅದಕ್ಕೆ) ತನ್ನಲ್ಲಿಯೇ ಮೊಸರಾಗುವ ಸ್ವಭಾವವು ಇಲ್ಲದೆ ಇದ್ದಿದ್ದರೆ ಬಿಸಿ ಮುಂತಾದದ್ದರಿಂದಲೂ (ಅದನ್ನು) ಬಲಾತ್ಕಾರದಿಂದ ಮೊಸರಾಗಿ ಮಾಡುವದು ಆಗಲಾರದು. ಗಾಳಿಯನ್ನಾಗಲಿ ಆಕಾಶವನ್ನಾಗಲಿ ಬಿಸಿ ಮುಂತಾದದ್ದರಿಂದ ಬಲಾತ್ಕಾರದಿಂದ ಮೊಸರಾಗಿ ಮಾಡುವದಾಗಲಾರದಷ್ಟೆ. ಸಾಧನಸಾಮಗ್ರಿಯೋ, ಅದಕ್ಕೆ ಪೂರ್ಣತೆಯನ್ನು ಮಾಡಿಕೊಡುತ್ತದೆ. ಆದರೆ ಬ್ರಹ್ಮವು ಪರಿಪೂರ್ಣಶಕ್ತಿಯುಳ್ಳದ್ದು ; ಅದಕ್ಕೆ ಮತ್ತೊಂದು ಪೂರ್ಣತ್ವವನ್ನು ಉಂಟುಮಾಡಿಕೊಡಬೇಕಾದದ್ದೇನೂ ಇರುವದಿಲ್ಲ. "ಅವನಿಗೆ ಕಾರ್ಯವಿಲ್ಲ, ಕರಣವೂ ಇಲ್ಲ. ಅವನಿಗೆ ಸರಿಯಾದವನಾಗಲಿ ಹೆಚ್ಚಿನವನಾಗಲಿ ಕಾಣುವದಿಲ್ಲ. ಅವನ ಪರಶಕ್ತಿಯು ವಿವಿಧವಾಗಿರುವದೆಂದೇ ಕೇಳಬರುತ್ತದೆ." (ಶ್ವೇ. ೬-೮) ಎಂದು ಶ್ರುತಿಯೂ ಇದೆ. ಆದ್ದರಿಂದ **ಬ್ರಹ್ಮವು ಒಂದೇ ಆದರೂ ಬಗೆಬಗೆಯಾದ ಶಕ್ತಿಗಳುಳ್ಳದ್ದಾದ್ದರಿಂದ (ಅದಕ್ಕೆ) ಕ್ಷೀರಾದಿಗಳಂತೆ ಬಗೆಬಗೆಯ ಪರಿಣಾಮವಾಗುವದೆಂಬುದು ಯುಕ್ತವಾಗಿದೆ**[2].

**ದೇವಾದಿವದಪಿ ಲೋಕೇ ॥ ೨೫ ॥**

೨೫. ಲೋಕದಲ್ಲಿ ದೇವತೆಗಳೇ ಮುಂತಾದವುಗಳಂತೆ (ಆಗಬಹುದು).

## ಪೂರ್ವಪಕ್ಷ: ಚೇತನರಿಗೆ ಸಾಧನವೂ ಬೇಕು

(ಭಾಷ್ಯ)

೪೬೦. ಸ್ಯಾದೇತತ್ । ಉಪಪದ್ಯತೇ ಕ್ಷೀರಾದೀನಾಮ್ ಅಚೇತನಾನಾಮ್ ಅನಪೇಕ್ಷ್ಯಾಪಿ ಬಾಹ್ಯಂ ಸಾಧನಂ ದಧ್ಯಾದಿಭಾವಃ । ದೃಷ್ಟತ್ವಾತ್ । ಚೇತನಾಃ ಪುನಃ ಕುಲಾಲಾದಯಃ ಸಾಧನಸಾಮಗ್ರೀಮ್ ಅಪೇಕ್ಷ್ಯೈವ

---

1. ಹಾಲಿಗೆ ಇಷ್ಟರಮಟ್ಟಿಗೆ ಮೊಸರಾಗಬಹುದೆಂಬ ಯೋಗ್ಯತೆಯಿದೆ. ಅಷ್ಟರಮಟ್ಟಿಗೆ ಮೊಸರಾಗುವದಕ್ಕೇ ಹೆಚ್ಚು ಉಪಯೋಗವಾಗುತ್ತದೆ.

2. ಹಿಂದೆ ಭಾ. ಭಾ. ೪೩೫ರಲ್ಲಿ ಹೇಳಿರುವ ಭರ್ತೃಪ್ರಪಂಚಾದಿಗಳ ಮತವಿದಲ್ಲ. ಬ್ರಹ್ಮದಲ್ಲಿ ವಿಚಿತ್ರಶಕ್ತಿಗಳಿರುವವೆಂಬುದು ಅವಿದ್ಯಾವ್ಯವಹಾರವೆಂಬುದನ್ನು ಮರೆಯಬೇಕು. ಭಾ. ಭಾ. ೪೪೦ನ್ನೂ ಭಾ. ಭಾ. ೪೭೭ರಲ್ಲಿ 'ಮಹಾಮಾಯಮ್' ಎಂಬ ವಿಶೇಷಣದ ಟಿಪ್ಪಣಿಯನ್ನು ನೋಡಿರಿ.

ತಸ್ಮೈತಸ್ಮೈ ಕಾರ್ಯಾಯ ಪ್ರವರ್ತಮಾನಾ ದೃಶ್ಯನ್ತೇ। ಕಥಂ ಬ್ರಹ್ಮ ಚೇತನಂ ಸತ್ ಅಸಹಾಯಂ ಪ್ರವರ್ತೇತ ಇತಿ ?

( ಭಾಷ್ಯಾರ್ಥ )

(ಪೂರ್ವಪಕ್ಷಿಗೆ) ಈ (ಅಭಿಪ್ರಾಯ)ವಿರಬಹುದು : ಹಾಲು ಮುಂತಾದ ಅಚೇತನಗಳು ಹೊರಗಿನ ಸಾಧನವಿಲ್ಲದೇಯೇ ಮೊಸರು ಮುಂತಾದವುಗಳಾಗಬಹುದು ; ಏಕೆಂದರೆ ಹಾಗೆ ಕಂಡುಬರುತ್ತದೆ. ಆದರೆ ಕುಂಬಾರನೇ ಮುಂತಾದ ಚೇತನರು ಸಾಧನಸಾಮಗ್ರಿಯನ್ನು ಬಯಸಿಯೇ ಆಯಾ ಕಾರ್ಯವನ್ನು ಮಾಡುವದಕ್ಕೆ ತೊಡಗುವದು ಕಂಡುಬರುತ್ತದೆ. ಬ್ರಹ್ಮವು ಚೇತನವಾಗಿದ್ದು ಯಾವ ಸಹಾಯವೂ ಇಲ್ಲದೆ (ಕಾರ್ಯವನ್ನು ಮಾಡುವದಕ್ಕೆ) ಹೇಗೆ ತೊಡಗೀತು ?

## ಸಿದ್ಧಾಂತ: ಚೇತನರೂ ಸಹಾಯಾಪೇಕ್ಷೆಯಿಲ್ಲದೆ ಕಾರಣರಾಗಬಹುದು

(ಭಾಷ್ಯ)

೪೬೧. ದೇವಾದಿವತ್ ಇತಿ ಬ್ರೂಮಃ। ಯಥಾ ಲೋಕೇ ದೇವಾಃ ಪಿತರಃ ಋಷಯಃ ಇತ್ಯೇವಮಾದಯೋ ಮಹಾಪ್ರಭಾವಾಃ ಚೇತನಾ ಅಪಿ ಸನ್ತಃ, ಅನಪೇಕ್ಷ್ಯೈವ ಕಿಂಚಿದ್ ಬಾಹ್ಯಂ ಸಾಧನಮ್ ಐಶ್ವರ್ಯವಿಶೇಷಯೋಗಾತ್ ಅಭಿಧ್ಯಾನಮಾತ್ರೇಣ ಸ್ವತ ಏವ ಬಹೂನಿ ನಾನಾಸಂಸ್ಥಾನಾನಿ ಶರೀರಾಣಿ ಪ್ರಾಸಾದಾದೀನಿ ಚ ರಥಾದೀನಿ ಚ ನಿರ್ಮಿಮಾಣಾ ಉಪಲಭ್ಯನ್ತೇ ಮನ್ತ್ರಾರ್ಥವಾದೇತಿಹಾಸಪುರಾಣಪ್ರಾಮಾಣ್ಯಾತ್। ತನ್ತುನಾಭಶ್ಚ ಸ್ವತ ಏವ ತನ್ತೂನ್ ಸೃಜತಿ। ಬಲಾಕಾ ಚ ಅನ್ತರೇಣೈವ ಶುಕ್ರಂ ಗರ್ಭಂ ಧತ್ತೇ। ಪದ್ಮಿನೀ ಚ ಅನಪೇಕ್ಷ್ಯ ಕಿಂಚಿತ್ ಪ್ರಸ್ಥಾನಸಾಧನಂ ಸರೋಽನ್ತರಾತ್ ಸರೋಽನ್ತರಂ ಪ್ರತಿಷ್ಠತೇ। ಏವಂ ಚೇತನಮಪಿ ಬ್ರಹ್ಮ ಅನಪೇಕ್ಷ್ಯ ಬಾಹ್ಯಂ ಸಾಧನಂ ಸ್ವತ ಏವ ಜಗತ್ ಸ್ರಕ್ಷ್ಯತಿ। ಸ ಯದಿ ಬ್ರೂಯಾತ್ ಯ ಏತೇ ದೇವಾದಯಃ ಬ್ರಹ್ಮಣೋ ದೃಷ್ಟಾನ್ತಾ ಉಪಾತ್ತಾಃ ತೇ ದಾರ್ಷ್ಟಾನ್ತಿಕೇನ ಬ್ರಹ್ಮಣಾ ನ ಸಮಾನಾ ಭವನ್ತಿ। ಶರೀರಮೇವ ಹಿ ಅಚೇತನಂ ದೇವಾದೀನಾಂ ಶರೀರಾನ್ತರಾದಿ ವಿಭೂತ್ಯುತ್ಪಾದನೇ ಉಪಾದಾನಮ್, ನ ತು ಚೇತನ ಆತ್ಮಾ। ತನ್ತುನಾಭಸ್ಯ ಚ ಕ್ಷುದ್ರತರಜನ್ತುಭಕ್ಷಣಾತ್ ಲಾಲಾ ಕಠಿನತಾಮ್ ಆಪದ್ಯಮಾನಾ ತನ್ತುರ್ಭವತಿ। ಬಲಾಕಾ ಚ ಸ್ತನಯಿತ್ನುರವಶ್ರವಣಾತ್ ಗರ್ಭಂ ಧತ್ತೇ। ಪದ್ಮಿನೀ ಚ ಚೇತನಪ್ರಯುಕ್ತಾ ಸತೀ ಅಚೇತನೇನೈವ ಶರೀರೇಣ ಸರೋಽನ್ತರಾತ್ ಸರೋಽನ್ತ

ರಮ್ ಉಪಸರ್ಪತಿ ವಲ್ಲೀವ ವೃಕ್ಷಮ್, ನ ತು ಸ್ವಯಮೇವ ಚೇತನಾ[1] ಸರೋಽನ್ತರೋಪಸರ್ಪಣೇ ವ್ಯಾಪ್ರಿಯತೇ । ತಸ್ಮಾನ್ನೈತೇ ಬ್ರಹ್ಮಣೋ ದೃಷ್ಟಾನ್ತಾ ಇತಿ । ತಂ ಪ್ರತಿ ಬ್ರೂಯಾತ್ – ನಾಯಂ ದೋಷಃ । ಕುಲಾಲಾದಿ ದೃಷ್ಟಾನ್ತವೈಲಕ್ಷಣ್ಯಮಾತ್ರಸ್ಯ ವಿವಕ್ಷಿತತ್ವಾತ್ ಇತಿ । ಯಥಾ ಹಿ ಕುಲಾಲಾದೀನಾಂ ದೇವಾದೀನಾಂ ಚ ಸಮಾನತ್ವೇ ಚೇತನತ್ವೇ ಕುಲಾಲಾದಯಃ ಕಾರ್ಯಾರಮ್ಭೇ ಬಾಹ್ಯಂ ಸಾಧನಮ್ ಅಪೇಕ್ಷನ್ತೇ ನ ದೇವಾದಯಃ, ತಥಾ ಬ್ರಹ್ಮ ಚೇತನಮಪಿ ನ ಬಾಹ್ಯಂ ಸಾಧನಮ್ ಅಪೇಕ್ಷಿಷ್ಯತೇ ಇತ್ಯೇತಾವದ್ ವಯಂ ದೇವಾದ್ಯುದಾಹರಣೇನ ವಿವಕ್ಷಾಮಃ । ತಸ್ಮಾತ್ ಯಥಾ ಏಕಸ್ಯ ಸಾಮರ್ಥ್ಯಂ ದೃಷ್ಟಮ್, ತಥಾ ಸರ್ವೇಷಾಮೇವ ಭವಿತುಮರ್ಹತಿ ಇತಿ ನಾಸ್ತ್ಯೇಕಾನ್ತಃ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ದೇವಾದಿಗಳಂತೆ (ಆಗಬಹುದು) ಎನ್ನುತ್ತೇವೆ. ಹೇಗೆ ಲೋಕದಲ್ಲಿ[2] **ದೇವತೆಗಳು, ಪಿತೃಗಳು, ಋಷಿಗಳು**– ಇವರೇ ಮುಂತಾದ ಹೆಚ್ಚಿನ ಪ್ರಭಾವವುಳ್ಳವರು ಚೇತನರಾಗಿದ್ದರೂ ಯಾವದೊಂದು ಹೊರಗಿನ ಸಾಧನವನ್ನೂ ಬಯಸದಿದ್ದರೂ ಆಯಾ ಐಶ್ವರ್ಯದ ಸಂಬಂಧವಿದ್ದದ್ದರಿಂದ ಸಂಕಲ್ಪಮಾತ್ರದಿಂದ ತಾವೇ ಬಹಳ ನಾನಾ ಆಕಾರವುಳ್ಳ ಶರೀರಗಳನ್ನೂ ಉಪ್ಪರಿಗೆಯ ಮನೆಯೇ ಮುಂತಾದವುಗಳನ್ನೂ ರಥಗಳೇ ಮುಂತಾದವುಗಳನ್ನೂ ನಿರ್ಮಿಸುತ್ತಾರೆಂದು ಮಂತ್ರ, ಅರ್ಥವಾದ, ಇತಿಹಾಸ, ಪುರಾಣಗಳು– ಇವುಗಳ ಪ್ರಾಮಾಣ್ಯದಿಂದ ತಿಳಿಯಬರುತ್ತದೆಯೋ[3], (ಹೇಗೆ) ಜೇಡರಹುಳು ತನ್ನಿಂದಲೇ ನೂಲುಗಳನ್ನು ಸೃಜಿಸುತ್ತದೆಯೋ, ಬೆಳ್ಳಕ್ಕಿಯು ಶುಕ್ರ(ಸಂಯೋಗ)ವಿಲ್ಲದೆಯೇ ಗರ್ಭವನ್ನು ಧರಿಸುತ್ತದೆಯೋ, ಮತ್ತು ಪದ್ಮಿನಿಯು[4] ಮತ್ತೊಂದು ಸಂಚಾರಸಾಧನವನ್ನು ಬಯಸದೆಯೇ ಒಂದು ಸರೋವರದಿಂದ ಮತ್ತೊಂದು ಸರೋವರಕ್ಕೆ ಹೋಗುತ್ತದೆಯೋ ಹಾಗೆಯೇ ಬ್ರಹ್ಮವು ಚೇತನವಾದರೂ ಹೊರಗಿನ ಸಾಧನವನ್ನು ಬಯಸದೆ ಜಗತ್ತನ್ನು ಸೃಜಿಸಬಹುದಾಗಿದೆ.

---

1. 'ಸ್ವಯಮೇವಾಚೇತನಾ' ಎಂಬುದು ಅಚ್ಚಿನ ತಪ್ಪು ಅಥವಾ ಲೇಖಕಪ್ರಮಾದ.

2. ಇಲ್ಲಿ ಲೋಕದಲ್ಲಿ ಎಂಬ ಮಾತಿನಲ್ಲಿ ಶ್ರುತ್ಯಾದಿಗಳನ್ನು ಹೇಗೆ ಸೇರಿಸಿಕೊಂಡಿರುತ್ತಾರೆಂಬುದು ತಿಳಿಯಲಿಲ್ಲ. 'ಲೋಕ್ಯತೇ ಅನೇನ ಇತಿ ಲೋಕಃ ಶಬ್ದ ಏವ' ಎಂದು ಭಾಮತೀವ್ಯಾಖ್ಯಾನ.

3. ದೇವತಾಧಿಕರಣ ೧–೩–೩೩ (ಭಾ. ಭಾ. ೩೦೨) ದಲ್ಲಿ ಇದನ್ನು ಪ್ರತಿಪಾದಿಸಿದೆ.

4. ಕಮಲವೂ ಚೇತನವೇ.

ಆ (ಪೂರ್ವಪಕ್ಷಿಯು ಹೀಗೆ)ನ್ನಬಹುದು: ಬ್ರಹ್ಮಕ್ಕೆ **ದೃಷ್ಟಾಂತ**ವಾಗಿ ಯಾವ ಈ ದೇವಾದಿಗಳನ್ನು ತೆಗೆದುಕೊಂಡಿರುವಿರೋ ಅವು ದಾರ್ಷ್ಟಾಂತಿಕವಾದ ಬ್ರಹ್ಮಕ್ಕೆ ಸಮಾನವಾಗಿರುವದಿಲ್ಲ. ಏಕೆಂದರೆ (ದೃಷ್ಟಾಂತಗಳಲ್ಲಿ) ದೇವಾದಿಗಳ ಅಚೇತನವಾದ ಶರೀರವೇ ಬೇರೆಯ ಶರೀರಗಳೇ ಮುಂತಾದ **ವಿಭೂತಿ**ಗಳನ್ನು ಉಂಟುಮಾಡುವದಕ್ಕೆ ಉಪಾದಾನವೇ ಹೊರತು ಚೇತನನಾದ ಆತ್ಮನಲ್ಲ. ಜೇಡರಹುಳು ಬಲು ಸಣ್ಣದಾಗಿರುವ ಪ್ರಾಣಿಗಳನ್ನು ತಿನ್ನುವದರಿಂದ (ಅವರ) ಜೊಲ್ಲು ಗಟ್ಟಿಯಾಗಿ ನೂಲಾಗುತ್ತದೆ. ಬೆಳ್ಳಕ್ಕಿಯೂ ಗುಡುಗಿನ ಶಬ್ದವನ್ನು ಕೇಳುವದರಿಂದ ಗರ್ಭವನ್ನು ಧರಿಸುತ್ತದೆ. ಪದ್ಮಿನಿಯೂ ಚೇತನದಿಂದ ಪ್ರೇರಿತವಾಗಿ ಅಚೇತನವಾದ ಶರೀರದಿಂದಲೇ ಒಂದು ಸರೋವರದಿಂದ ಮತ್ತೊಂದು ಸರೋವರಕ್ಕೆ– ಬಳ್ಳಿಯು ಮರಕ್ಕೆ (ಹತ್ತಿಕೊಳ್ಳುವಂತೆ) ಬಳಿಸಾರುತ್ತದೆಯೇ ಹೊರತು ಚೇತನವಾದ ತಾನೇ ಮತ್ತೊಂದು ಸರೋವರದ ಬಳಿಗೆ ಹೋಗುವ ವ್ಯಾಪಾರವನ್ನು ಮಾಡುವದಿಲ್ಲ. ಆದ್ದರಿಂದ ಇವು ಬ್ರಹ್ಮಕ್ಕೆ ದೃಷ್ಟಾಂತಗಳಲ್ಲ.

ಆ (ಪೂರ್ವಪಕ್ಷಿಗೆ) ಉತ್ತರವನ್ನು ಹೇಳಬೇಕಾದದ್ದೇನೆಂದರೆ: ಇದು ದೋಷವಲ್ಲ. ಏಕೆಂದರೆ ಕುಂಬಾರನೇ ಮುಂತಾದ ದೃಷ್ಟಾಂತಕ್ಕಿಂತ (ಇವುಗಳಲ್ಲಿ) ವೈಲಕ್ಷಣ್ಯವಿದೆ ಎಂಬುದಿಷ್ಟನ್ನೇ ತಿಳಿಸಬೇಕೆಂದು ಇಲ್ಲಿ ಹೊರಟಿರುತ್ತದೆ. ಹೇಗೆಂದರೆ ಕುಂಬಾರನೇ ಮುಂತಾದವರಿಗೂ ದೇವತೆಗಳೇ ಮುಂತಾದವರಿಗೂ ಚೇತನತ್ವವು ಸಮಾನವಾದರೂ ಹೇಗೆ ಕುಂಬಾರನೇ ಮುಂತಾದವರಿಗೆ ಕಾರ್ಯವನ್ನುಂಟುಮಾಡುವದಕ್ಕೆ ಹೊರಗಿನ ಸಾಧನವು ಬೇಕಾಗಿದ್ದು ದೇವತಾದಿಗಳಿಗೆ ಬೇಕಾಗಿರುವದಿಲ್ಲವೋ ಹಾಗೆ ಬ್ರಹ್ಮವು ಚೇತನವಾಗಿದ್ದರೂ (ಅದಕ್ಕೆ) ಹೊರಗಿನ ಸಾಧನವು ಬೇಕಿರದೆ ಇರಬಹುದು– ಎಂಬಿದಿಷ್ಟೇ ದೇವಾದಿಗಳ ಉದಾಹರಣೆಯಿಂದ ನಮಗೆ ವಿವಕ್ಷಿತವಾಗಿರುವದು. ಆದ್ದರಿಂದ ಒಬ್ಬನಿಗೆ ಎಂಥ ಸಾಮರ್ಥ್ಯವು ಕಂಡಿದೆಯೋ ಅಂಥ (ಸಾಮರ್ಥ್ಯವೇ) ಎಲ್ಲರಿಗೂ ಇರಬೇಕೆಂಬುದೇನೂ ನಿಯಮವಿಲ್ಲ ಎಂದು ಅಭಿಪ್ರಾಯ.

## ೯. ಕೃತ್ಸ್ನಪ್ರಸಕ್ತ್ಯಧಿಕರಣ (ಸೂ. ೨೬–೨೯)

(ಬ್ರಹ್ಮವೆಲ್ಲವೂ ಜಗತ್ತಾಗಬೇಕೆಂಬ ಅಥವಾ ಸಾವಯವವಾಗಿರಬೇಕೆಂಬ ದೋಷವಿಲ್ಲ)

**ಕೃತ್ಸ್ನಪ್ರಸಕ್ತಿರ್ನಿರವಯವಶಬ್ದಕೋಪೋ ವಾ ॥ ೨೬ ॥**

೨೬. ಎಲ್ಲ ಆಗಬೇಕಾಗುವದು, ಅಥವಾ ನಿರವಯವಶಬ್ದಕ್ಕೆ ವಿರೋಧವಾಗುವದು.

## ಪೂರ್ವಪಕ್ಷ: ಬ್ರಹ್ಮವೇ ಜಗತ್ತಾಗಬೇಕು, ಅಥವಾ ಸಾವಯವವಾಗಬೇಕು

(ಭಾಷ್ಯ)

೪೬೨. ಚೇತನಮ್ ಏಕಮದ್ವಿತೀಯಂ ಬ್ರಹ್ಮ ಕ್ಷೀರಾದಿವತ್ ದೇವಾದಿವಚ್ಚ ಅನಪೇಕ್ಷ್ಯ ಬಾಹ್ಯಸಾಧನಂ ಸ್ವಯಂ ಪರಿಣಮಮಾನಂ ಜಗತಃ ಕಾರಣಮ್ ಇತಿ ಸ್ಥಿತಮ್ । ಶಾಸ್ತ್ರಾರ್ಥಪರಿಶುದ್ಧಯೇ ತು ಪುನರಾಕ್ಷಿಪತಿ । ಕೃತ್ಸ್ನಪ್ರಸಕ್ತಿಃ ಕೃತ್ಸ್ನಸ್ಯ ಬ್ರಹ್ಮಣಃ ಕಾರ್ಯರೂಪೇಣ ಪರಿಣಾಮಃ ಪ್ರಾಪ್ನೋತಿ ನಿರಯವತ್ವಾತ್। ಯದಿ ಬ್ರಹ್ಮ ಪೃಥಿವ್ಯಾದಿವತ್ ಸಾವಯವಮ್ ಅಭವಿಷ್ಯತ್, ತತೋಽಸ್ಯ ಏಕದೇಶಃ ಪರ್ಯಣಂಸ್ಯತ್, ಏಕದೇಶಶ್ಚ ಅವಾಸ್ಥಾಸ್ಯತ । ನಿರವಯವಂ ತು ಬ್ರಹ್ಮ ಶ್ರುತಿಭ್ಯೋಽವಗಮ್ಯತೇ । "ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್" (ಶ್ವೇ. ೬–೧೧), "ದಿವ್ಯೋ ಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯನ್ತರೋ ಹ್ಯಜಃ" (ಮುಂ.೨–೧–೨) "ಇದಂ ಮಹದ್ಭೂತ ಮನನ್ತಮಪಾರಂ ವಿಜ್ಞಾನಘನ ಏವ" (ಬೃ. ೨–೪–೧೨) "ಸ ಏಷ ನೇತಿ ನೇ ತ್ಯಾತ್ಮಾ" (ಬೃ. ೩–೯–೨೬), "ಅಸ್ಥೂಲಮನಣು" (ಬೃ. ೩–೮–೮) ಇತ್ಯಾದ್ಯಾಭ್ಯಃ ಸರ್ವವಿಶೇಷಪ್ರತಿಷೇಧಿನೀಭ್ಯಃ । ತತಶ್ಚ ಏಕದೇಶಪರಿಣಾಮಾಸಂಭವಾತ್ ಕೃತ್ಸ್ನಪರಿಣಾಮಪ್ರಸಕ್ತೌ ಸತ್ಯಾಂ ಮೂಲೋಚ್ಛೇದಃ ಪ್ರಸಜ್ಯೇತ। ದ್ರಷ್ಟವ್ಯ ತೋಪದೇಶಾನರ್ಥಕ್ಯಂ ಚ ಆಪನ್ನಮ್ । ಅಯತ್ನದೃಷ್ಟತ್ವಾತ್ ಕಾರ್ಯಸ್ಯ, ತದ್ವ್ಯತಿರಿಕ್ತಸ್ಯ ಚ ಬ್ರಹ್ಮಣೋಽಸಂಭವಾತ್ । ಅಜತ್ವಾದಿಶಬ್ದಕೋಪಶ್ಚ । ಅಥ ಏತದ್ದೋಷಪರಿಜಿಹೀರ್ಷಯಾ ಸಾವಯವಮೇವ ಬ್ರಹ್ಮ ಅಭ್ಯುಪ ಗಮ್ಯೇತ, ತಥಾಪಿ ಯೇ ನಿರವಯವತ್ವಸ್ಯ ಪ್ರತಿಪಾದಕಾಃ ಶಬ್ದಾಃ ಉದಾ ಹೃತಾಃ, ತೇ ಪ್ರಕುಪ್ಯೇಯುಃ । ಸಾವಯವತ್ವೇ ಚ ಅನಿತ್ಯತ್ವಪ್ರಸಙ್ಗಃ ಇತಿ। ಸರ್ವಥಾ ಅಯಂ ಪಕ್ಷೋ ನ ಘಟಯಿತುಂ ಶಕ್ಯತೇ ಇತ್ಯಾಕ್ಷಿಪತಿ ॥

(ಭಾಷ್ಯಾರ್ಥ)

ಚೇತನವಾದ ತನಗೆರಡನೆಯದಿಲ್ಲದ ಒಂದೇ ಒಂದಾದ ಬ್ರಹ್ಮವು ಹಾಲು ಮುಂತಾದವುಗಳಂತೆಯೂ ದೇವತೆಗಳು ಮುಂತಾದವರಂತೆಯೂ ಹೊರಗಿನ ಸಾಧನವನ್ನು ಬಯಸದೆ ತಾನೇ ಪರಿಣಮಿಸಿ[1] ಜಗತ್ತಿಗೆ ಕಾರಣವಾಗಿರುತ್ತದೆ– ಎಂಬುದು ನಿಂತಿತಷ್ಟೆ. ಆದರೂ ಶಾಸ್ತ್ರಾರ್ಥವನ್ನು ಪರಿಶುದ್ಧಿಗೊಳಿಸುವದ ಕ್ಕಾಗಿ ಮತ್ತೆ (ಹೀಗೆಂದು) ಆಕ್ಷೇಪಿಸಿರುತ್ತದೆ :

1. ಇಲ್ಲಿ ಬ್ರಹ್ಮವು ಪರಿಣಮಿಸಿರುವದೆಂದು ಒಪ್ಪಿರುವದು ವ್ಯವಹಾರದೃಷ್ಟಿಯಿಂದಲೇ. ೨–೧–೧೪ (ಭಾ. ಭಾ. ೪೪೧) ನೋಡಿ.

ಎಲ್ಲವೂ ಆಗಬೇಕು, ಎಂದರೆ ಬ್ರಹ್ಮವೆಲ್ಲವೂ ಕಾರ್ಯರೂಪವಾಗಿ ಪರಿಣಮಿಸಿದೆ ಎಂದಾಗಬೇಕು; ಏಕೆಂದರೆ (ಬ್ರಹ್ಮವು) ನಿರವಯವವಾಗಿರುತ್ತದೆ. ಬ್ರಹ್ಮವು ಪೃಥಿವಿಯೇ ಮುಂತಾದವುಗಳಂತೆ ಸಾವಯವವಾಗಿದ್ದರೆ ಆಗ ಅದರ ಒಂದು ಭಾಗವು ಪರಿಣಮಿಸಬಹುದಾಗಿತ್ತು, ಮತ್ತೊಂದು ಭಾಗವು ಹಾಗೆಯೇ ಇದ್ದುಕೊಂಡಿರಬಹುದಾಗಿತ್ತು. ಆದರೆ ಬ್ರಹ್ಮವು ನಿರವಯವವೆಂದು "ನಿಷ್ಕಲವು, ನಿಷ್ಕ್ರಿಯವು, ಶಾಂತವು, ನಿರವದ್ಯವು, ನಿರಂಜನವು" (ಶ್ವೇ. ೬-೧೧), "ಪುರುಷನು ದಿವ್ಯನು, ಅಮೂರ್ತನು; ಏಕೆಂದರೆ ಹೊರಗೂ ಒಳಗೂ ಜನ್ಮರಹಿತನಾಗಿರುತ್ತಾನೆ" (ಮುಂ. ೨-೧-೨), "ಈ ಮಹಾಭೂತವು ಅನಂತವು, ಅಪಾರವು, ವಿಜ್ಞಾನಘನವೇ ಆಗಿರುತ್ತದೆ" (ಬೃ. ೨-೪-೧೨) "ಆ ಇವನು 'ನೇತಿ, ನೇತಿ' ಎಂದ ಆತ್ಮನು" (ಬೃ. ೩-೯-೨೬), "ಸ್ಥೂಲವಲ್ಲ, ಅಣುವಲ್ಲ" (ಬೃ. ೩-೮-೮) -ಮುಂತಾದ ಎಲ್ಲಾ ವಿಶೇಷಗಳನ್ನೂ ಅಲ್ಲಗಳೆಯುವ ಶ್ರುತಿಗಳಿಂದ ನಿಶ್ಚಿತವಾಗಿರುತ್ತದೆ. ಆದ್ದರಿಂದಲೇ ಒಂದು ಭಾಗವು (ಮಾತ್ರ) ಪರಿಣಮಿಸುತ್ತದೆ ಎಂದು ಆಗುವಹಾಗಿಲ್ಲವಾದ್ದರಿಂದ (ಪೂರ್ಣವಾಗಿ) ಎಲ್ಲವೂ ಪರಿಣಮಿಸಬೇಕಾದ ಪ್ರಸಂಗವು ಬರುವದರಿಂದ ಮೂಲವೇ ನಾಶವಾಗಬೇಕಾಗಿಬರುವದು[1]. (ಆತ್ಮನನ್ನು) ಕಂಡುಕೊಳ್ಳಬೇಕು ಎಂದು (ಶ್ರುತಿಯಲ್ಲಿ) ಉಪದೇಶಿಸಿರುವದು ವ್ಯರ್ಥವೆಂದೂ ಆಗುತ್ತದೆ; ಏಕೆಂದರೆ ಕಾರ್ಯವು ಯಾವ ಪ್ರಯತ್ನವೂ ಇಲ್ಲದೆ ಕಂಡುಬರುತ್ತಿದೆ, ಅದಕ್ಕಿಂತ ಬೇರೆಯಾದ ಬ್ರಹ್ಮವು ಇರುವಂತೆಯೂ ಇಲ್ಲ[2]. ಮತ್ತು 'ಹುಟ್ಟುವದಿಲ್ಲ' ಎಂಬ ಶಬ್ದಕ್ಕೂ (ಈ ಪಕ್ಷವು) ವಿರುದ್ಧವಾಗಿರುತ್ತದೆ.

ಇನ್ನು ಈ ದೋಷಗಳನ್ನು ಪರಿಹರಿಸುವದಕ್ಕಾಗಿ ಬ್ರಹ್ಮವು ಸಾವಯವವೆಂದೇ ಅಂಗೀಕರಿಸುವದಾದರೆ[3] ಆಗಲೂ (ಬ್ರಹ್ಮವು) ನಿರವಯವವೆಂದು ಪ್ರತಿಪಾದಿಸುವ ಶಬ್ದಗಳನ್ನು (ಮೇಲೆ) ಉದಾಹರಿಸಿರುವೆವಷ್ಟೆ, ಆ (ಶಬ್ದ)

---

1. ಬ್ರಹ್ಮವು ನಿರ್ವಿಶೇಷವೆಂದಾದರೆ ಅದಕ್ಕೆ ಪರಿಣಾಮವೆಂಬ ವಿಶೇಷವೂ ಇಲ್ಲವೆಂದೇ ಆಗುವದರಿಂದ ಬ್ರಹ್ಮವೆಲ್ಲವೂ ಜಗತ್ತಾಗಬೇಕೆಂಬ ತೀರ್ಮಾನವು ಹೇಗೆ ಬರುತ್ತದೆ? -ಎಂಬುದನ್ನು ಪೂರ್ವಪಕ್ಷಿ ಹೇಳಿಲ್ಲ. ಬ್ರಹ್ಮವು ಜಗತ್ತಾಗುವದೆಂದು ಸಿದ್ಧಾಂತಿ ಒಪ್ಪಿರುವದರಿಂದ ಒಂದು ಭಾಗವು ಪರಿಣಮಿಸುವಂತಿಲ್ಲವಾದ್ದರಿಂದ ಈ ತೀರ್ಮಾನವನ್ನು ಮಾಡಬೇಕೆಂದು ಅವನ ಆಶಯವಿರಬೇಕು.

2. ಏಕೆಂದರೆ ಎಲ್ಲವೂ ಬ್ರಹ್ಮವಾಗಿಬಿಟ್ಟಿರುತ್ತದೆ.

3. ಬ್ರಹ್ಮವು ಎಲ್ಲವೂ ಪರಿಣಮಿಸುತ್ತದೆಯೊ, ಅದರ ಏಕದೇಶವು ಪರಿಣಮಿಸುತ್ತದೆಯೊ? -ಎಂಬ ಪ್ರಶ್ನೆಯಲ್ಲಿಯೇ ಸಾವಯವತ್ವವನ್ನು ಒಪ್ಪಿದಂತಾಗಿದೆ ಎಂಬುದನ್ನು ಲಕ್ಷಿಸಬೇಕು.

ಗಳಿಗೆ ವಿರೋಧವಾಗುತ್ತದೆ. ಸಾವಯುವವಾದರೆ ಅನಿತ್ಯವೆಂಬ (ದೋಷವೂ) ಗಂಟುಬೀಳುವದು. ಹೇಗೂ ಈ (ಬ್ರಹ್ಮಕಾರಣವಾದವೆಂಬ) ಪಕ್ಷವನ್ನು ಹೊಂದಿಸುವದಾಗುವದಿಲ್ಲ –ಎಂದು (ಪೂರ್ವಪಕ್ಷಿಯು) ಆಕ್ಷೇಪಿಸಿರುತ್ತಾನೆ.

**ಶ್ರುತೇಸ್ತು ಶಬ್ದಮೂಲತ್ವಾತ್ ॥ ೨೭ ॥**

೨೭. ಆದರೆ ಶ್ರುತಿಯಿರುವದರಿಂದ (ಹೀಗಲ್ಲ) ; ಏಕೆಂದರೆ (ಬ್ರಹ್ಮವು) ಶಬ್ದಮೂಲವಾಗಿರುತ್ತದೆ.

## ಬ್ರಹ್ಮಕಾರಣವಾದವು ನಿರ್ದುಷ್ಟವೆಂಬುದಕ್ಕೆ ಶ್ರುತಿ

(ಭಾಷ್ಯ)

೪೬೩. ತುಶಬ್ದೇನ ಆಕ್ಷೇಪಂ ಪರಿಹರತಿ। ನ ಖಲು ಅಸ್ಮತ್ಪಕ್ಷೇ ಕಶ್ಚಿದಪಿ ದೋಷೋಽಸ್ತಿ। ನ ತಾವತ್ ಕೃತ್ಸ್ನಪ್ರಸಕ್ತಿರಸ್ತಿ। ಕುತಃ ? ಶ್ರುತೇಃ। ಯಥೈವ ಹಿ ಬ್ರಹ್ಮಣೋ ಜಗದುತ್ಪತ್ತಿಃ ಶ್ರೂಯತೇ, ಏವಂ ವಿಕಾರ ವ್ಯತಿರೇಕೇಣಾಪಿ ಬ್ರಹ್ಮಣೋಽವಸ್ಥಾನಂ ಶ್ರೂಯತೇ। ಪ್ರಕೃತಿವಿಕಾರಯೋ ರ್ಭೇದೇನ ವ್ಯಪದೇಶಾತ್ । "ಸೇಯಂ ದೇವತೈಕ್ಷತ ಹನ್ತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" (ಛಾಂ. ೬-೩-೨) ಇತಿ, "ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ। ಪಾದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" (ಛಾಂ. ೩-೧೨-೬) ಇತಿ ಚೈವಂಜಾತೀಯಕಾತ್। ತಥಾ ಹೃದಯಾಯತನತ್ವವಚನಾತ್ ಸತ್ಸಂಪತ್ತಿವಚನಾಚ್ಚ। ಯದಿ ಚ ಕೃತ್ಸ್ನಂ ಬ್ರಹ್ಮ ಕಾರ್ಯಭಾವೇನ ಉಪ ಯುಕ್ತಂ ಸ್ಯಾತ್, "ಸತಾ ಸೋಮ್ಯ ತದಾ ಸಂಪನ್ನೋ ಭವತಿ" (ಛಾಂ. ೬-೮-೧) ಇತಿ ಸುಷುಪ್ತಿಗತಂ ವಿಶೇಷಣಮ್ ಅನುಪಪನ್ನಂ ಸ್ಯಾತ್ ವಿಕೃತೇನ ಬ್ರಹ್ಮಣಾ ನಿತ್ಯಸಂಪನ್ನತ್ವಾತ್, ಅವಿಕೃತಸ್ಯ ಚ ಬ್ರಹ್ಮಣೋಽ ಭಾವಾತ್ । ತಥಾ ಇನ್ದ್ರಿಯಗೋಚರತ್ವಪ್ರತಿಷೇಧಾತ್ ಬ್ರಹ್ಮಣಃ ವಿಕಾರಸ್ಯ ಚ ಇನ್ದ್ರಿಯಗೋಚರತ್ವೋಪಪತ್ತೇಃ । ತಸ್ಮಾತ್ ಅಸ್ತಿ ಅವಿಕೃತಂ ಬ್ರಹ್ಮ । ನ ಚ ನಿರವಯವಶಬ್ದಕೋಪೋಽಸ್ತಿ। ಶ್ರೂಯಮಾಣ ತ್ವಾದೇವ ನಿರವಯವತ್ವಸ್ಯಾಪಿ ಅಭ್ಯುಪಗಮ್ಯಮಾನತ್ವಾತ್ । ಶಬ್ದ ಮೂಲಂ ಚ ಬ್ರಹ್ಮ ಶಬ್ದಪ್ರಮಾಣಕಂ ನೇನ್ದ್ರಿಯಾದಿಪ್ರಮಾಣಕಮ್ । ತತ್ ಯಥಾಶಬ್ದಮ್ ಅಭ್ಯುಪಗನ್ತವ್ಯಮ್ । ಶಬ್ದಶ್ಚ ಉಭಯಮಪಿ ಬ್ರಹ್ಮಣಃ ಪ್ರತಿಪಾದಯತಿ . ಅಕೃತ್ಸ್ನಪ್ರಸಕ್ತಿಂ ನಿರವಯವತ್ವಂ ಚ । ಲೌಕಿಕಾನಾಮಪಿ ಮಣಿಮನ್ತ್ರೌಷಧಿಪ್ರಭೃತೀನಾಂ ದೇಶಕಾಲನಿಮಿತ್ತ

ವೈಚಿತ್ರ್ಯವಶಾತ್ ಶಕ್ತಯೋ ವಿರುದ್ಧಾನೇಕಕಾರ್ಯವಿಷಯಾ ದೃಶ್ಯನ್ತೇ। ತಾ ಅಪಿ ತಾವತ್ ನೋಪದೇಶಮನ್ತರೇಣ ಕೇವಲೇನ ತರ್ಕೇಣ ಅವಗನ್ತುಂ ಶಕ್ಯನ್ತೇ ಅಸ್ಯ ವಸ್ತುನಃ ಏತಾವತ್ಯಃ ಏತತ್ಸಹಾಯಾಃ ಏತದ್ವಿಷಯಾಃ ಏತತ್ಪ್ರಯೋಜನಾಶ್ಚ ಶಕ್ತಯಃ ಇತಿ। ಕಿಮುತ ಅಚಿನ್ತ್ಯಸ್ವಭಾವಸ್ಯ ಬ್ರಹ್ಮಣಃ ರೂಪಂ ವಿನಾಶಬ್ದೇನ ನ ನಿರೂಪ್ಯೇತ। ತಥಾ ಚಾಹುಃ ಪೌರಾಣಿಕಾಃ — "ಅಚಿನ್ತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇತ್[1]। ಪ್ರಕೃತಿಭ್ಯಃ ಪರಂ ಯಚ್ಚ[2] ತದಚಿನ್ತ್ಯಸ್ಯ ಲಕ್ಷಣಮ್" (ಭೀ. ೫–೧೨) ಇತಿ। ತಸ್ಮಾತ್ ಶಬ್ದಮೂಲ ಏವ ಅತೀನ್ದ್ರಿಯಾರ್ಥಯಾಥಾತ್ಮ್ಯಾಧಿಗಮಃ ॥

(ಭಾಷ್ಯಾರ್ಥ)

ತುಶಬ್ದದಿಂದ (ಸೂತ್ರವು ಮೇಲಿನ) ಆಕ್ಷೇಪವನ್ನು ಪರಿಹರಿಸಿರುತ್ತದೆ. ನಮ್ಮ ಪಕ್ಷದಲ್ಲಿ ಯಾವ ದೋಷವೂ ಇರುವದಿಲ್ಲ. ಮೊದಲನೆಯದಾಗಿ ಎಲ್ಲವೂ ಪರಿಣಮಿಸುವ(ದೆಂಬ ದೋಷದ) ಪ್ರಸಕ್ತಿಯಿರುವದಿಲ್ಲ. ಏಕೆ ? ಎಂದರೆ ಶ್ರುತಿಯಿದೆ. ಬ್ರಹ್ಮದಿಂದ ಜಗತ್ತು ಉತ್ಪತ್ತಿಯಾಗುವದೆಂದು ಹೇಗೆ ಶ್ರುತಿಗಳು (ಹೇಳುತ್ತವೆಯೋ) ಹಾಗೆಯೇ ವಿಕಾರಕ್ಕಿಂತ ಬೇರೆಯಾಗಿಯೂ ಬ್ರಹ್ಮವಿದೆ ಎಂದೂ ಶ್ರುತಿಗಳಲ್ಲಿದೆ. (ಹೇಗೆಂದರೆ), ಆ ಈ ದೇವತೆಯು 'ಒಳ್ಳೆಯದು, ಈ ಮೂರು ದೇವತೆಗಳನ್ನು ಈ ಜೀವರೂಪದಿಂದ ಒಳಹೊಕ್ಕು ನಾಮರೂಪಗಳನ್ನು ವ್ಯಾಕರಣಮಾಡುವೇನು' ಎಂದು ಆಲೋಚಿಸಿಕೊಂಡಿತು" (ಛಾಂ. ೬–೩–೨). "ಅಷ್ಟು ಈತನ ಮಹಿಮೆಯು, (ಈ) ಪುರುಷನು ಅದಕ್ಕಿಂತ ದೊಡ್ಡವನು. ಸರ್ವಭೂತಗಳೂ ಇವನ ಪಾದಗಳು ; ಇವನ ಅಮೃತವಾದ ಮೂರು ಪಾದವು ದ್ಯು(ಲೋಕ)ದಲ್ಲಿರುವದು" (ಛಾಂ. ೩–೧೨–೬) ಎಂಬೀ ಜಾತೀಯ (ಶ್ರುತಿಯು) ಪ್ರಕೃತಿವಿಕಾರಗಳನ್ನು ಬೇರೆ ಬೇರೆಯಾಗಿ ತಿಳಿಸಿರುತ್ತದೆ. ಹೀಗೆಯೇ ಹೃದಯವು (ಬ್ರಹ್ಮದ) ಸ್ಥಾನವೆಂದು ಹೇಳಿರುವದರಿಂದಲೂ (ಸುಷುಪ್ತಿಯಲ್ಲಿ ಜೀವನು) ಸತ್ತನ್ನು ಸೇರಿಕೊಳ್ಳುತ್ತಾನೆಂದು ಹೇಳಿರುವದರಿಂದಲೂ (ಹೀಗೆಂದು ನಿಶ್ಚಯಿಸಬಹುದಾಗಿದೆ). ಬ್ರಹ್ಮವು ಎಲ್ಲವೂ ಕಾರ್ಯರೂಪವಾಗಿ ವಿನಿಯೋಗವಾಗಿಬಿಟ್ಟಿದ್ದರೆ ಆಗ "ಸತ್ತಿನಲ್ಲಿ ಒಂದಾಗುತ್ತಾನೆ" (ಛಾಂ. ೬–೮–೧) ಎಂದು ಸುಷುಪ್ತಿಯ ಸಂಬಂಧವಾದ ವಿಶೇಷಣವನ್ನು (ಹೇಳಿರುವದು) ಹೊಂದದೆ ಹೋಗುವದು ; ಏಕೆಂದರೆ (ಆ ಪಕ್ಷದಲ್ಲಿ ಜೀವನು) ವಿಕಾರವಾಗಿರುವ

1. 'ಸಾಧಯೇತ್' ಎಂದು ಅಚ್ಚಿನ ಪುಸ್ತಕದಲ್ಲಿದೆ.
2. 'ಯತ್ತು' ಎಂದು ಅಚ್ಚಿನ ಪಾಠ.

(ಜಗದ್ರೂಪ)ಬ್ರಹ್ಮದಲ್ಲಿ ಎಂದೆಂದಿಗೂ ಒಂದಾಗಿಯೇ ಇರುತ್ತಾನೆ ; ವಿಕಾರವಾಗದಿರುವ ಬ್ರಹ್ಮವು ಇರುವಧೂ ಇಲ್ಲ[1]. ಮತ್ತು ಬ್ರಹ್ಮವು ಇಂದ್ರಿಯಕ್ಕೆ ಗೋಚರವಲ್ಲವೆಂದು ಹೇಳಿರುವದರಿಂದಲೂ ವಿಕಾರವು ಇಂದ್ರಿಯಗೋಚರವಾಗಿರುವದೆಂಬುದು ಯುಕ್ತವಾಗಿರುವದರಿಂದಲೂ (ಹೀಗೆಂದು ತಿಳಿಯಬೇಕು), ಆದ್ದರಿಂದ ವಿಕಾರವಾಗದಿರುವ ಬ್ರಹ್ಮವು ಇದೆ. ಬ್ರಹ್ಮವು ನಿರವಯವವೆಂಬ ಶಬ್ದಕ್ಕೆ ವಿರೋಧವೂ ಇಲ್ಲ ; ಏಕೆಂದರೆ ಶ್ರುತಿಯಲ್ಲಿ ಹೇಳಿರುವದರಿಂದಲೇ ಬ್ರಹ್ಮವು ನಿರವಯವವೆಂಬುದನ್ನು (ನಾವು) ಒಪ್ಪುತ್ತೇವೆ.

ಮತ್ತು **ಬ್ರಹ್ಮವು ಶಬ್ದಮೂಲವಾಗಿರುತ್ತದೆ, ಎಂದರೆ ಶಬ್ದವೇ (ಅದಕ್ಕೆ) ಪ್ರಮಾಣವು, ಇಂದ್ರಿಯಾದಿಗಳು ಪ್ರಮಾಣವಲ್ಲ ; ಆದ್ದರಿಂದ ಶಬ್ದಾನುಗುಣವಾಗಿ (ಅದನ್ನು) ಒಪ್ಪಬೇಕು.** (ಆ) ಶಬ್ದವು (ಬ್ರಹ್ಮ)ವೆಲ್ಲವೂ (ಜಗತ್ತಾ)ಗುವದೂ ಇಲ್ಲ, ನಿರವಯವವೂ (ಆಗಿದೆ) ಎಂದು ಎರಡನ್ನೂ ಬ್ರಹ್ಮಕ್ಕೆ ಹೇಳುತ್ತಿದೆ. **ಲೋಕದಲ್ಲಿರುವ ರತ್ನ, ಮಂತ್ರ, ಔಷಧಿ- ಮುಂತಾದವುಗಳ ಶಕ್ತಿಗಳುಕೂಡ ದೇಶ, ಕಾಲ, ನಿಮಿತ್ತ (ಇವು) ಬಗೆಬಗೆಯಾಗಿರುವದರಿಂದ (ಒಂದಕ್ಕೊಂದು) ವಿರುದ್ಧವಾಗಿರುವ ಅನೇಕ ಕಾರ್ಯಗಳನ್ನುಂಟುಮಾಡುವದು ಕಂಡುಬರುತ್ತದೆ. ಅವುಕೂಡ ( ಮತ್ತೊಬ್ಬರ ) ಉಪದೇಶವಿಲ್ಲದೆ ಇಂಥ ವಸ್ತುವಿಗೆ ಇಂತಿಷ್ಟು ಶಕ್ತಿಗಳು, ಇಂಥ ಸಹಾಯವುಳ್ಳವು ಇಂಥ ವಿಷಯವುಳ್ಳವು ಇಂಥ ಪ್ರಯೋಜನವುಳ್ಳವು ಎಂದು ಬರಿಯ ತರ್ಕದಿಂದ ನಿಶ್ಚಯಿಸುವದಕ್ಕೆ ಆಗುವಂತಿಲ್ಲ. ಇನ್ನು ಅಚಿಂತ್ಯಸ್ವಭಾವವುಳ್ಳ[2] ಬ್ರಹ್ಮದ ರೂಪವು ಶಬ್ದವಿಲ್ಲದೆ ಗೊತ್ತುಪಡಿಸುವದಕ್ಕೆ ಆಗಲಾರದೆಂಬು ಹೇಳುವದೇನು ?** ಆದ್ದರಿಂದಲೇ **ಪೌರಾಣಿಕರು** "ಯಾವ ವಸ್ತುಗಳು ಅಚಿಂತ್ಯವಾಗಿರುತ್ತವೆಯೋ ಅವುಗಳನ್ನು ತರ್ಕಕ್ಕೆ ಹೊಂದಿಸಿ ನೋಡಬಾರದು. ಯಾವದು ಪ್ರಕೃತಿಗಳಿಗಿಂತ[3] ಬೇರೆಯಾಗಿರುವದೋ ಅದೇ ಅಚಿಂತ್ಯದ

---

1. ಹೃದಯವು ಬ್ರಹ್ಮದ ಸ್ಥಾನವೆಂದದ್ದರಿಂದ ಸೃಷ್ಟಿಯಾದ ಬಳಿಕವೂ ಅವಿಕೃತಬ್ರಹ್ಮವು ಇರುತ್ತದೆ ಎಂದಂತಾಯಿತು. ವಿಕಾರವಾಗದೆ ಇರುವ ಬ್ರಹ್ಮವು ಇದ್ದರಲ್ಲವೆ, ಅದರಲ್ಲಿ ಒಂದಾಗಬೇಕಾದದ್ದು ಇರುತ್ತದೆ ? ಆದ್ದರಿಂದ 'ಸುಷುಪ್ತಿಯಲ್ಲಿ ಒಂದಾಗುತ್ತಾನೆ' ಎಂಬ ವಿಶೇಷವಚನದಿಂದ ವಿಕಾರವಾಗಿರುವ ಬ್ರಹ್ಮವಲ್ಲದೆ ಅವಿಕೃತಬ್ರಹ್ಮವೂ ಇದೆ ಎಂದಾಯಿತು.

2. ಅಚಿಂತ್ಯಸ್ವಭಾವವುಳ್ಳದ್ದು ಎಂದರೆ ತರ್ಕಮಾತ್ರದಿಂದ ನಿಶ್ಚಯಿಸುವದಕ್ಕೆ ಬರತಕ್ಕದ್ದಲ್ಲದ್ದು.

3. ಪ್ರತ್ಯಕ್ಷಾದಿಗೋಚರವಸ್ತುಗಳ ಸ್ವಭಾವಗಳಿಗಿಂತ.

ಲಕ್ಷಣವು" (ಭೀ. ೫-೧೨) ಎಂದು ಹೇಳುತ್ತಾರೆ. ಆದ್ದರಿಂದ ಅತೀಂದ್ರಿಯ ವಸ್ತುಗಳ ಯಾಥಾತ್ಮ್ಯವನ್ನು ಶಬ್ದಪ್ರಮಾಣದಿಂದಲೇ ಅಱಿತುಕೊಳ್ಳಬೇಕಾಗಿರುತ್ತದೆ.

## ಶಬ್ದವು ವಿರುದ್ಧಾರ್ಥವನ್ನು ಹೇಳುವದಿಲ್ಲ

( ಭಾಷ್ಯ )

೪೬೪. ನನು ಶಬ್ದೇನಾಪಿ ನ ಶಕ್ಯತೇ ವಿರುದ್ಧೋಽರ್ಥಃ ಪ್ರತ್ಯಾಯಯಿತುಮ್, 'ನಿರವಯವಂ ಚ ಬ್ರಹ್ಮ ಪರಿಣಮತೇ, ನ ಚ ಕೃತ್ಸ್ನಮ್' ಇತಿ । ಯದಿ ನಿರವಯವಂ ಬ್ರಹ್ಮ ಸ್ಯಾತ್ ನೈವ ಪರಿಣಮೇತ । ಕೃತ್ಸ್ನಮೇವ ವಾ ಪರಿಣಮೇತ । ಅಥ ಕೇನಚಿತ್ ರೂಪೇಣ ಪರಿಣಮೇತ, ಕೇನಚಿಚ್ಚ ಅವತಿಷ್ಠೇತ ಇತಿ ರೂಪಭೇದಕಲ್ಪನಾತ್ ಸಾವಯವಮೇವ ಪ್ರಸಜ್ಯೇತ । ಕ್ರಿಯಾವಿಷಯೇ ಹಿ 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ,' 'ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' ಇತ್ಯೇವಂಜಾತೀಯಕಾಯಾಂ ವಿರೋಧಪ್ರತೀತಾವಪಿ ವಿಕಲ್ಪಾಶ್ರಯಣಂ ವಿರೋಧಪರಿಹಾರಕಾರಣಂ ಭವತಿ ಪುರುಷತನ್ತ್ರತ್ವಾಚ್ಚ ಅನುಷ್ಠಾನಸ್ಯ । ಇಹ ತು ವಿಕಲ್ಪಾಶ್ರಯಣೇನಾಪಿ ನ ವಿರೋಧಪರಿಹಾರಃ ಸಂಭವತಿ ಅಪುರುಷತನ್ತ್ರತ್ವಾತ್ ವಸ್ತುನಃ । ತಸ್ಮಾತ್ ದುರ್ಘಟಮೇತತ್ ಇತಿ । ನೈಷ ದೋಷಃ । ಅವಿದ್ಯಾಕಲ್ಪಿತರೂಪಭೇದಾಭ್ಯುಪಗಮಾತ್ । ನ ಹಿ ಅವಿದ್ಯಾಕಲ್ಪಿತೇನ ರೂಪಭೇದೇನ ಸಾವಯವಂ ವಸ್ತು ಸಂಪದ್ಯತೇ । ನ ಹಿ ತಿಮಿರೋಪಹತನಯನೇನ ಅನೇಕ ಇವ ದೃಶ್ಯಮಾನಃ ಅನೇಕ ಏವ ಭವತಿ । ಅವಿದ್ಯಾಕಲ್ಪಿತೇನ ಚ ನಾಮರೂಪಲಕ್ಷಣೇನ ರೂಪಭೇದೇನ ವ್ಯಾಕೃತಾವ್ಯಾಕೃತಾತ್ಮಕೇನ ತತ್ತ್ವಾನ್ಯತ್ವಾಭ್ಯಾಮ್ ಅನಿರ್ವಚನೀಯೇನ ಬ್ರಹ್ಮ ಪರಿಣಾಮಾದಿಸರ್ವವ್ಯವಹಾರಾಸ್ಪದತ್ವಂ ಪ್ರತಿಪದ್ಯತೇ । ಪಾರಮಾರ್ಥಿಕೇನ ಚ ರೂಪೇಣ ಸರ್ವವ್ಯವಹಾರಾತೀತಮ್ ಅಪರಿಣತಮ್ ಅವತಿಷ್ಠತೇ । ವಾಚಾರಮ್ಭಣಮಾತ್ರತ್ವಾಚ್ಚ ಅವಿದ್ಯಾಕಲ್ಪಿತಸ್ಯ ನಾಮರೂಪಭೇದಸ್ಯ ಇತಿ ನ ನಿರವಯವತ್ವಂ ಬ್ರಹ್ಮಣಃ ಕುಪ್ಯತಿ । ನ ಚೇಯಂ ಪರಿಣಾಮಶ್ರುತಿಃ ಪರಿಣಾಮಪ್ರತಿಪಾದನಾರ್ಥಾ । ತತ್ಪ್ರತಿಪತ್ತೌ ಫಲಾನವಗಮಾತ್ । ಸರ್ವವ್ಯವಹಾರಹೀನಬ್ರಹ್ಮಾತ್ಮಭಾವಪ್ರತಿಪಾದನಾರ್ಥಾ ತು ಏಷಾ । ತತ್ಪ್ರತಿಪತ್ತೌ ಫಲಾವಗಮಾತ್ । "ಸ ಏಷ ನೇತಿ ನೇತ್ಯಾತ್ಮಾ" ಇತ್ಯುಪಕ್ರಮ್ಯ ಆಹ — "ಅಭಯಂ ವೈ ಜನಕ ಪ್ರಾಪ್ತೋಽಸಿ" (ಬೃ. ೪-೨-೪) ಇತಿ । ತಸ್ಮಾತ್ ಅಸ್ಮತ್ಪಕ್ಷೇ ನ ಕಶ್ಚಿದಪಿ ದೋಷಪ್ರಸಙ್ಗೋಽಸ್ತಿ ॥

(ಭಾಷ್ಯಾರ್ಥ)

(ಆಕ್ಷೇಪ) :– 'ಬ್ರಹ್ಮವು ನಿರವಯುವವಾಗಿದ್ದು ಪರಿಣಮಿಸುತ್ತಲೂ ಇದೆ, ಪೂರ್ಣವಾಗಿ (ಪರಿಣಮಿಸುವದೂ) ಇಲ್ಲ' ಎಂದು ವಿರುದ್ಧವಾದ ಅರ್ಥವನ್ನು ಶಬ್ದವುಕೂಡ ತಿಳಿಸುವದಕ್ಕೆ ಆಗುವದಿಲ್ಲವಲ್ಲ! ಏಕೆಂದರೆ ಬ್ರಹ್ಮವು ನಿರವಯುವವಾಗಿದ್ದರೆ ಪರಿಣಮಿಸುವದೇ ಇಲ್ಲವೆನ್ನಬೇಕು, ಅಥವಾ ಎಲ್ಲವೂ ಪರಿಣಮಿಸುತ್ತದೆ ಎನ್ನಬೇಕು. ಹಾಗಿಲ್ಲದೆ ಒಂದಾನೊಂದು ರೂಪದಿಂದ ಪರಿಣಮಿಸುವದು, ಮತ್ತೊಂದು ರೂಪದಿಂದ (ಹಾಗೆಯೇ) ಇದ್ದುಕೊಂಡೂ ಇರುವದು –ಎನ್ನುವದಾದರೆ (ಅದಕ್ಕೆ) ಬೇರೆಬೇರೆಯ ರೂಪಭೇದಗಳನ್ನು ಕಲ್ಪಿಸಬೇಕಾಗುವದರಿಂದ ಸಾವಯುವವೆಂದೇ ಆಗುವದು. ಏಕೆಂದರೆ 'ಅತಿರಾತ್ರದಲ್ಲಿ ಷೋಡಶಿಯನ್ನು ತೆಗೆದುಕೊಳ್ಳಬೇಕು' (?) 'ಅತಿರಾತ್ರದಲ್ಲಿ ಷೋಡಶಿಯನ್ನು ತೆಗೆದುಕೊಳ್ಳಬಾರದು '– ಎಂಬೀಜಾತಿಯ **ಕ್ರಿಯಾವಿಷಯದಲ್ಲಾದರೆ ವಿರೋಧವು ತೋರಿದರೂ ವಿಕಲ್ಪವನ್ನು ಆಶ್ರಯಿಸುವದು ವಿರೋಧಪರಿಹಾರಕ್ಕೆ ಕಾರಣವಾಗುತ್ತದೆ; ಅನುಷ್ಠಾನವು ಪುರುಷತಂತ್ರವಾಗಿರುವದರಿಂದ (ಹೀಗಾಗಬಹುದು). ಇಲ್ಲಿಯಾದರೆ ವಿಕಲ್ಪವನ್ನು ಆಶ್ರಯಿಸುವದರಿಂದಲೂ ವಿರೋಧವನ್ನು ಪರಿಹರಿಸಿಕೊಳ್ಳುವದು ಆಗುವಂತಿಲ್ಲ; ಏಕೆಂದರೆ ವಸ್ತುವು ಪುರುಷತಂತ್ರವಲ್ಲ**[1]. ಆದ್ದರಿಂದ ಇದು ಹೇಗೂ ಹೊಂದುವಂತಿಲ್ಲವಲ್ಲ!

(ಸಮಾಧಾನ) :– ಏಕೆಂದರೆ ಅವಿದ್ಯಾಕಲ್ಪಿತರೂಪಭೇದವನ್ನು ಅಂಗೀಕರಿಸಿರುತ್ತೇವೆ. ಅವಿದ್ಯಾಕಲ್ಪಿತವಾದ ರೂಪಭೇದದಿಂದ ವಸ್ತುವು ಸಾವಯುವವಾಗುವದಿಲ್ಲವಷ್ಟೆ. ಪರೆಯ ದೋಷವಿರುವ ಕಣ್ಣಿನವನಿಗೆ ಚಂದ್ರನು ಅನೇಕನಾಗಿರುವಂತೆ ಕಂಡರೂ (ನಿಜವಾಗಿ) ಅನೇಕನೇ ಆಗಿರುವದಿಲ್ಲವಷ್ಟೆ. **ಆ (ಬ್ರಹ್ಮ)ವೆಂದಾಗಲಿ ಬೇರೆಯೆಂದಾಗಲಿ ಗೊತ್ತುಮಾಡಿ ಹೇಳುವದಕ್ಕಾಗದೆ ಇರುವ ಅವಿದ್ಯಾಕಲ್ಪಿತವಾದ ವ್ಯಾಕೃತಾವ್ಯಾಕೃತಾತ್ಮಕವಾದ ನಾಮರೂಪಗಳೆಂಬ ರೂಪಭೇದದಿಂದ ಬ್ರಹ್ಮವು ಪರಿಣಾಮವೇ ಮುಂತಾದ ಎಲ್ಲಾ ವ್ಯವಹಾರಕ್ಕೂ ಆಶ್ರಯವಾಗಿರುತ್ತದೆ. ಆದರೆ ಪಾರಮಾರ್ಥಿಕವಾದ ರೂಪದಿಂದ ಎಲ್ಲಾ ವ್ಯವಹಾರಗಳನ್ನೂ**

1. ಕ್ರಿಯೆಯಂತೆ ವಸ್ತುವಿನಲ್ಲಿ ವಿಕಲ್ಪವು ಆಗುವದಿಲ್ಲ; ಕ್ರಿಯೆಯಂತೆ ವಸ್ತುವು ಪುರುಷತಂತ್ರವೂ ಅಲ್ಲ – ಎಂದು ಆಚಾರ್ಯರು ಮತ್ತೆ ಮತ್ತೆ ಹೇಳಿರುತ್ತಾರೆ. ಇದು ಸಿದ್ಧಾಂತಕ್ಕೆ ಬಹಳ ಮುಖ್ಯವಾಗಿರುವ ತತ್ತ್ವವಾಗಿರುತ್ತದೆ.

**ವಿಾರಿ ಪರಿಣಾಮವೇ ಆಗದೆ (ಹಾಗೆಯೇ) ಇದ್ದುಕೊಂಡಿರುತ್ತದೆ[1].** ಅವಿದ್ಯಾಕಲ್ಪಿತವಾದ ನಾಮರೂಪಭೇದವು ವಾಚಾರಂಭಣಮಾತ್ರವಾಗಿರುವದರಿಂದ ಬ್ರಹ್ಮವು ನಿರವಯವವೆಂಬುದಕ್ಕೆ ( ಅದರಿಂದ ) ವಿರೋಧವಾಗುವದಿಲ್ಲ. ಈ ಪರಿಣಾಮಶ್ರುತಿಯು ಪರಿಣಾಮವನ್ನು ಹೇಳುವದಕ್ಕಾಗಿಯೇ (ಬಂದಿರುವದೂ ಇಲ್ಲ). ಏಕೆಂದರೆ ಆ (ಪರಿಣಾಮದ) ಜ್ಞಾನದಿಂದ (ಇಂಥ) ಫಲವಿದೆಯೆಂದು ಗೊತ್ತಾಗುವದಿಲ್ಲ. ಮತ್ತೇನೆಂದರೆ ಯಾವ ವ್ಯವಹಾರವೂ ಇಲ್ಲದ ಬ್ರಹ್ಮಾತ್ಮಭಾವವನ್ನು ಪ್ರತಿಪಾದಿಸುವದಕ್ಕಾಗಿಯೇ ಈ (ಶ್ರುತಿ ಬಂದಿರುತ್ತದೆ) ; ಏಕೆಂದರೆ ಅದನ್ನು ಅರಿತುಕೊಂಡರೆ ಫಲವುಂಟೆಂದು ಗೊತ್ತಾಗಿರುತ್ತದೆ. (ಹೇಗೆಂದರೆ) "ಇವನು ನೇತಿ ನೇತಿ ಎಂದ ಆತ್ಮನು" ಎಂದು ಉಪಕ್ರಮಿಸಿ "ಜನಕನೆ, ಅಭಯವನ್ನೇ ಪಡೆದಿರುತ್ತೀಯೆ" (ಬೃ. ೪-೨-೪) ಎಂದು (ಶ್ರುತಿ) ಹೇಳುತ್ತದೆ. ಆದ್ದರಿಂದ ನಮ್ಮ ಪಕ್ಷದಲ್ಲಿ ಯಾವ ದೋಷದ ಪ್ರಸಕ್ತಿಯೂ ಇರುವದಿಲ್ಲ.

**ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ॥ ೨೮ ॥**

೨೮. ಮತ್ತು ಆತ್ಮನಲ್ಲಿಯೂ ಹೀಗೆ ವಿಚಿತ್ರಗಳಾದ (ಸೃಷ್ಟಿಗಳು) ಇರುತ್ತವೆ.

## ಜೀವಾತ್ಮನಲ್ಲಿಯೂ ಇಂಥ ಸೃಷ್ಟಿಯು ಕಂಡಿದೆ

(ಭಾಷ್ಯ)

೪೬೫. ಅಪಿ ಚ ನೈವಾತ್ರ ವಿವದಿತವ್ಯಮ್ 'ಕಥಮೇಕಸ್ಮಿನ್ ಬ್ರಹ್ಮಣಿ ಸ್ವರೂಪಾನುಪಮರ್ದೇನೈವ ಅನೇಕಾಕಾರಾ ಸೃಷ್ಟಿಃ ಸ್ಯಾತ್' ಇತಿ। ಯತಃ ಆತ್ಮನ್ಯಪಿ ಏಕಸ್ಮಿನ್ ಸ್ವಪ್ನದೃಶಿ ಸ್ವರೂಪಾನುಪಮರ್ದೇನೈವ ಅನೇಕಾಕಾರಾ ಸೃಷ್ಟಿಃ ಪಠ್ಯತೇ "ನ ತತ್ರ ರಥಾ ನ ರಥಯೋಗಾ ನ ಪನ್ಥಾನೋ ಭವನ್ತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ" (ಬೃ. ೪-೩-೧೦) ಇತ್ಯಾದಿನಾ। ಲೋಕೇಽಪಿ ದೇವಾದಿಷು ಮಾಯಾವ್ಯಾದಿಷು ಚ ಸ್ವರೂಪಾನುಪಮರ್ದೇನೈವ ವಿಚಿತ್ರಾ ಹಸ್ತ್ಯಶ್ವಾದಿಸೃಷ್ಟಯೋ

---

1. ವ್ಯಾಕೃತಾವ್ಯಾಕೃತಗಳೆರಡೂ ಅವಿದ್ಯಾಕಲ್ಪಿತವೆಂದು ಹೇಳಿರುವದನ್ನು ಲಕ್ಷಿಸಬೇಕು. ಅವ್ಯಾಕೃತವು ಮೂಲಾವಿದ್ಯೆಯೆಂದೂ ಅಧ್ಯಾಸಕ್ಕೆ ಉಪಾದಾನಕಾರಣವೆಂದೂ ಹೇಳುವವರ ಪಕ್ಷವು ಈ ಭಾಷ್ಯಕ್ಕೆ ವಿರುದ್ಧವಾಗಿರುತ್ತದೆ. ೨-೧-೧೪ (ಭಾ. ಭಾ. ೪೪೦) ೨-೧-೩೧ (ಭಾ. ಭಾ. ೪೬೯) ಈ ಭಾಷ್ಯಗಳನ್ನು ನೋಡಿ.

ದೃಶ್ಯನ್ತೇ । ತಥಾ ಏಕಸ್ಮಿನ್ನಪಿ ಬ್ರಹ್ಮಣಿ ಸ್ವರೂಪಾನುಪಮರ್ದೇನೈವ ಅನೇಕಾಕಾರಾ ಸೃಷ್ಟಿರ್ಭವಿಷ್ಯತಿ ಇತಿ ॥

(ಭಾಷ್ಯಾರ್ಥ)

ಮತ್ತು ಒಂದೇ ಬ್ರಹ್ಮದಲ್ಲಿ ಸ್ವರೂಪವು ನಾಶವಾಗದೆಯೇ ಅನೇಕಾಕಾರವಾದ ಸೃಷ್ಟಿ ಹೇಗೆ ಆದೀತು ? ಎಂಬೀ (ವಿಷಯ)ದಲ್ಲಿ ವಿವಾದಮಾಡುವಂತೆಯೂ ಇಲ್ಲ. ಏಕೆಂದರೆ **ಕನಸುಕಾಣುವ ಆತ್ಮನು** ಒಬ್ಬನೇ ಆದರೂ (ಅವನಲ್ಲಿ) ಸ್ವರೂಪವು ನಾಶವಾಗದೆಯೇ ಅನೇಕಾಕಾರವಾದ ಸೃಷ್ಟಿಯಾಗುವದೆಂದು "ಅಲ್ಲಿ ರಥಗಳೂ ಇರುವದಿಲ್ಲ, ರಥಕ್ಕೆ ಕಟ್ಟಿದ (ಕುದುರೆ)ಗಳೂ (ಇರುವ)ದಿಲ್ಲ, ದಾರಿಗಳೂ ಇರುವದಿಲ್ಲ ; ಆದರೂ ರಥಗಳನ್ನೂ ರಥಕ್ಕೆ ಕಟ್ಟಿದ (ಕುದುರೆ)ಗಳನ್ನೂ ದಾರಿಗಳನ್ನೂ ಸೃಜಿಸಿಕೊಳ್ಳುತ್ತಾನೆ" (ಬೃ. ೪-೩-೧೦) ಎಂದು ಮುಂತಾಗಿರುವ (ವಾಕ್ಯದಲ್ಲಿ) ಹೇಳಿರುತ್ತದೆ. ಲೋಕದಲ್ಲಿ **ದೇವಾದಿಗಳಲ್ಲಿಯೂ ಮಾಯಾವ್ಯಾದಿಗಳಲ್ಲಿಯೂ** ಸ್ವರೂಪವನ್ನು ನಾಶಪಡಿಸಿಕೊಳ್ಳದೆ ಬಗೆಬಗೆಯಾದ ಆನೆ, ಕುದುರೆ ಮುಂತಾದ ಸೃಷ್ಟಿಗಳು (ಆಗುವದು) ಕಂಡಿರುತ್ತದೆ. ಹಾಗೆಯೇ ಒಂದೇ ಬ್ರಹ್ಮದಲ್ಲಿ ಸ್ವರೂಪವು ನಾಶವಾಗದೆಯೇ ಅನೇಕಾಕಾರವಾದ ಸೃಷ್ಟಿಯು ಆಗಬಹುದಾಗಿದೆ.

## ಸ್ವಪಕ್ಷದೋಷಾಚ್ಚ ॥ ೨೯ ॥

೨೯. ಸ್ವಪಕ್ಷದಲ್ಲಿರುವ ದೋಷ(ವಾಗಿರು)ವದರಿಂದಲೂ (ಹೀಗೆ).

## ಸಾಂಖ್ಯಪಕ್ಷದಲ್ಲಿಯೂ ಕೃತ್ಸ್ನಪ್ರಸಕ್ತಿದೋಷ

(ಭಾಷ್ಯ)

೪೬೬. ಪರೇಷಾಮಪಿ ಏಷ ಸಮಾನಃ ಸ್ವಪಕ್ಷೇ ದೋಷಃ । ಪ್ರಧಾನವಾದಿನೋಽಪಿ ಹಿ ನಿರವಯವಮ್, ಅಪರಿಚ್ಛಿನ್ನಮ್ ಶಬ್ದಾದಿಹೀನಂ ಪ್ರಧಾನಂ ಸಾವಯವಸ್ಯ ಪರಿಚ್ಛಿನ್ನಸ್ಯ ಶಬ್ದಾದಿಮತಃ ಕಾರ್ಯಸ್ಯ ಕಾರಣಮ್ ಇತಿ ಸ್ವಪಕ್ಷಃ । ತತ್ರಾಪಿ ಕೃತ್ಸ್ನಪ್ರಸಕ್ತಿರ್ನಿರವಯವತ್ವಾತ್ ಪ್ರಧಾನಸ್ಯ ಪ್ರಾಪ್ನೋತಿ, ನಿರವಯವತ್ವಾಭ್ಯುಪಗಮಕೋಪೋ ವಾ । ನನು ನೈವ ತೈಃ ನಿರವಯವಂ ಪ್ರಧಾನಮ್ ಅಭ್ಯುಪಗಮ್ಯತೇ । ಸತ್ತ್ವರಜಸ್ತಮಾಂಸಿ ತ್ರಯೋ ಗುಣಾ ನಿತ್ಯಾಃ, ತೇಷಾಂ ಸಾಮ್ಯಾವಸ್ಥಾ ಪ್ರಧಾನಮ್, ತೈರೇವಾ

ವಯವೈಃ ತತ್ ಸಾವಯವಮಿತಿ । ನೈವಂಜಾತೀಯಕೇನ ಸಾವಯವತ್ವೇನ ಪ್ರಕೃತೋ ದೋಷಃ ಪರಿಹರ್ತುಂ ಪಾರ್ಯತೇ । ಯತಃ ಸತ್ತ್ವರಜಸ್ತಮಸಾಮಪಿ ಏಕೈಕಸ್ಯ ಸಮಾನಂ ನಿರವಯವತ್ವಮ್ । ಏಕೈಕಮೇವ ಚ ಇತರದ್ವಯಾನುಗೃಹೀತಂ ಸಜಾತೀಯಸ್ಯ ಪ್ರಪಞ್ಚಸ್ಯ ಉಪಾದಾನಮ್ ಇತಿ ಸಮಾನತ್ವಾತ್ ಸ್ವಪಕ್ಷದೋಷಪ್ರಸಙ್ಗಸ್ಯ । ತರ್ಕಾಪ್ರತಿಷ್ಠಾನಾತ್ ಸಾವಯವತ್ವಮೇವ ಇತಿ ಚೇತ್ । ಏವಮಪಿ ಅನಿತ್ಯತ್ವಾದಿದೋಷಪ್ರಸಙ್ಗಃ । ಅಥ ಶಕ್ತಯ ಏವ ಕಾರ್ಯವೈಚಿತ್ರ್ಯಸೂಚಿತಾ ಅವಯವಾ ಇತ್ಯಭಿಪ್ರಾಯಃ, ತಾಸ್ತು ಬ್ರಹ್ಮವಾದಿನೋಽಪಿ ಅವಿಶಿಷ್ಟಾಃ ॥

(ಭಾಷ್ಯಾರ್ಥ)

ಮಿಕ್ಕವರಿಗೂ ತಮ್ಮ ಪಕ್ಷದಲ್ಲಿ ಈ ದೋಷವು ಸಮಾನವಾಗಿರುತ್ತದೆ. ಹೇಗೆಂದರೆ **ಪ್ರಧಾನವಾದಿಯು** (ಮತದಲ್ಲಿ)ಯೂ ನಿರವಯವವೂ ಅಪರಿಚ್ಛಿನ್ನವೂ ಶಬ್ದಾದಿಗಳಿಲ್ಲದ್ದೂ ಆಗಿರುವ ಪ್ರಧಾನವು ಸಾವಯವವೂ ಪರಿಚ್ಛಿನ್ನವೂ ಶಬ್ದಾದಿಗಳುಳ್ಳದ್ದೂ ಆದ ಕಾರ್ಯಕ್ಕೆ ಕಾರಣವು ಎಂಬಿದು ಸ್ವಪಕ್ಷವು. ಆದರಲ್ಲಿಯೂ ಪ್ರಧಾನವು ನಿರವಯವವಾಗಿರುವದರಿಂದ ಎಲ್ಲವೂ (ಕಾರ್ಯ)ವಾಗುವದೆಂಬ ಪ್ರಸಕ್ತಿಯಿದೆ. ಅಥವಾ (ಪ್ರಧಾನವು) ನಿರವಯವವೆಂಬ ಅಂಗೀಕಾರಕ್ಕೆ ವಿರೋಧವಾಗುತ್ತದೆ.

(ಆಕ್ಷೇಪ) :– ಅವರು ಪ್ರಧಾನವು ನಿರವಯವವೆಂದು ಒಪ್ಪುವದೇ ಇಲ್ಲವಲ್ಲ ! ಸತ್ತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳು ನಿತ್ಯ ; ಅವುಗಳ ಸಾಮ್ಯಾವಸ್ಥೆಯು ಪ್ರಧಾನವು. ಆ ಅವಯವಗಳಿಂದ (ಕೂಡಿರುವದರಿಂದ)ಲೇ ಪ್ರಧಾನವು ಸಾವಯವವಲ್ಲವೆ ?

(ಪರಿಹಾರ) :– ಈ ಬಗೆಯ ಸಾವಯವತ್ವದಿಂದ ಪ್ರಕೃತದೋಷವನ್ನು ಪರಿಹರಿಸುವದಕ್ಕೆ ಆಗಲಾರದು. ಏಕೆಂದರೆ ಸತ್ತ್ವರಜಸ್ತಮಸ್ಸುಗಳಲ್ಲಿ ಒಂದೊಂದೂ ನಿರವಯವವಾಗಿರುವದೆಂಬುದು ಸಮಾನವಾಗಿದೆ. ಮತ್ತು ಒಂದೊಂದೂ ಉಳಿದೆರಡು (ಗುಣ)ಗಳ ಸಹಾಯದಿಂದ ಸಜಾತೀಯವಾದ ಪ್ರಪಂಚಕ್ಕೆ ಉಪಾದಾನ(ವಾಗುತ್ತದೆ)ಯಾದ್ದರಿಂದ ಸ್ವಪಕ್ಷದಲ್ಲಿಯೂ (ಈ) ದೋಷದ ಪ್ರಸಕ್ತಿಯು ಸಮಾನವಾಗಿರುತ್ತದೆ. ತರ್ಕಕ್ಕೆ ನಿಲುಗಡೆಯಿಲ್ಲದಿರುವದರಿಂದ[1] (ಪ್ರಧಾನವು) ಸಾವಯವವೇ (ಆಗಲಿ) ಎನ್ನುವದಾದರೆ, ಹಾಗೂ

1. ಪ್ರಧಾನವಾದಿಗಳು ಪ್ರಧಾನವು ಸಾವಯವವೆಂದು ಒಪ್ಪಿರುವಲ್ಲಿ ಅದು ನಿರವಯವವೆಂದು ಸಾಧಿಸುವ ತರ್ಕವು ಆಭಾಸವಾಗಿದೆ ಎಂದು ಭಾವ. ಅಥವಾ ನಿಮ್ಮ ತರ್ಕದಂತೆ ಪ್ರಧಾನವು ನಿರವಯವವಾದರೂ ಪ್ರಧಾನವಾದಿಯು ಅದನ್ನು ಸಾವಯವವೆಂದು ಸಾಧಿಸಬಾರದೇಕೆ ?– ಎಂದು ಭಾವ.

(ಪ್ರಧಾನವು) ಅನಿತ್ಯವು ಎಂಬುದೇ ಮುಂತಾದ[1] ದೋಷಗಳು ಬಂದೊದಗುವವು. ಹೀಗಲ್ಲದೆ ಕಾರ್ಯವು ಬಗೆಬಗೆಯಾಗಿರುವದರಿಂದ ಸೂಚಿತವಾಗುವ ಶಕ್ತಿಗಳೇ (ಪ್ರಧಾನದ) ಅವಯವಗಳು[2] ಎಂದು ಅಭಿಪ್ರಾಯವಾದರೆ ಅವು ಬ್ರಹ್ಮವಾದಿಗೂ ಸಮಾನವಾಗಿರುತ್ತವೆ[3].

## ಅಣುವಾದಕ್ಕೂ ಈ ದೋಷವು ಸಮಾನ

( ಭಾಷ್ಯ )

೪೬೭. ತಥಾ ಅಣುವಾದಿನೋಽಪಿ ಅಣುಃ ಅಣ್ವನ್ತರೇಣ ಸಂಯುಜ್ಯಮಾನೋ ನಿರವಯವತ್ವಾತ್ ಯದಿ ಕಾರ್ತ್ಸ್ನ್ಯೇನ ಸಂಯುಜ್ಯೇತ, ತತಃ ಪ್ರಥಿಮಾನುಪಪತ್ತೇಃ ಅಣುಮಾತ್ರತ್ವಪ್ರಸಙ್ಗಃ । ಅಥ ಏಕದೇಶೇನ ಸಂಯುಜ್ಯೇತ, ತಥಾಪಿ ನಿರವಯುತ್ವಾಭ್ಯುಪಗಮಕೋಪಃ ಇತಿ ಸ್ವಪಕ್ಷೇಽಪಿ ಸಮಾನ ಏಷ ದೋಷಃ । ಸಮಾನತ್ವಾಚ್ಚ ನಾನ್ಯತರಸ್ಮಿನ್ನೇವ ಪಕ್ಷ ಉಪಕ್ಷೇಪ್ತವ್ಯೋ ಭವತಿ । ಪರಿಹೃತಸ್ತು ಬ್ರಹ್ಮವಾದಿನಾ ಸ್ವಪಕ್ಷೇ ದೋಷಃ ॥

( ಭಾಷ್ಯಾರ್ಥ )

ಹೀಗೆಯೇ ಅಣುವಾದದಲ್ಲಿಯೂ (ಒಂದು) ಅಣುವು ಮತ್ತೊಂದು ಅಣುವಿನೊಡನೆ ಸಂಯೋಗವಾಗುವಾಗ[4] (ಅದು) ನಿರವಯವವಾದ್ದರಿಂದ ಎಲ್ಲವೂ ಸಂಯುಕ್ತವಾಗಬೇಕು ; ಆಗ ದಪ್ಪವಾಗಲಾರದುದ್ದರಿಂದ[5] ಅಣುಮಾತ್ರವೇ (ಉಳಿದುಕೊಳ್ಳಬೇಕಾಗುವದು). ಹಾಗಿಲ್ಲದೆ (ಅಣುವು ತನ್ನ) ಒಂದು ಭಾಗದಲ್ಲಿ ಸಂಯುಕ್ತವಾಗುವದೆಂದರೆ ಹಾಗೂ (ಅಣುವು) ನಿರವಯವ

---

1. ಸಾವಯವವಾದ ಪ್ರಧಾನವು ಮೂಲಕಾರಣವಾಗಲಾರದು, ಅವಯವಗಳೇ ಕಾರಣವಾಗುವವು ; ಆ ಅವಯವಗಳೂ ಸಾವಯವವೆಂದರೆ ಅನವಸ್ಥೆಯುಂಟಾಗುವದು— ಎಂಬುದನ್ನು 'ಮುಂತಾದ' ಎಂಬ ಮಾತು ಸೂಚಿಸುವದು.

2. ಕಾರ್ಯವಾದ ಮಹದಾದಿಜಗತ್ತು ಬಗೆಬಗೆಯಾಗಿರುವದರಿಂದ ಪ್ರಧಾನದಲ್ಲಿ ಬಗೆಬಗೆಯಾದ ಶಕ್ತಿಗಳಿವೆ ಎಂದು ಅನುಮಾನದಿಂದ ಕಲ್ಪಿಸುತ್ತೇವೆ. ಆ ಶಕ್ತಿಗಳೇ ಅವಯವಗಳು ಎಂದರ್ಥ.

3. ಶಕ್ತಿರೂಪವಾದ ಕಲ್ಪಿತಾವಯವಗಳು ನಮ್ಮ ಪಕ್ಷದಲ್ಲಿಯೂ ಇವೆ. ಇವು ಅವಿದ್ಯಾಕಲ್ಪಿತವಾಗಿರುವದರಿಂದ ಪೂರ್ವಪಕ್ಷಿ ಹೇಳಿದ ದೋಷವೂ ತಾಕುವದಿಲ್ಲ ಎಂದು ಭಾವ. ಛಾಂ. ೬–೨–೨ ನೋಡಿ.

4. ಎರಡು ಪರಮಾಣುಗಳು ಒಂದಕ್ಕೊಂದು ಸಂಯೋಗವಾದರೆ ದ್ವ್ಯಣುಕವೆಂಬ ದೊಡ್ಡ ಅಣುವಾಗುವದೆಂದು ವೈಶೇಷಿಕರ ಮತ, ಮುಂದೆ ೨–೨–೧೧ರ ಭಾಷ್ಯದಲ್ಲಿ ಇದು ಸ್ಪಷ್ಟವಾಗುವದು.

5. ಒಂದೊಂದು ಅಣುವೂ ಪೂರ್ಣವಾಗಿ ಮತ್ತೊಂದರಲ್ಲಿ ಸೇರಿಕೊಂಡರೆ ಗಾತ್ರವು ಹೆಚ್ಚಲು ಕಾರಣವಿರುವದಿಲ್ಲ.

ವೆಂದು ಒಪ್ಪಿದ್ದಕ್ಕೆ ವಿರೋಧವಾಗುವದು. ಆದ್ದರಿಂದ ಸ್ವಪಕ್ಷದಲ್ಲಿಯೂ ಈ ದೋಷವು ಸಮಾನವಾಗಿರುತ್ತದೆ.

(ಎರಡು ಪಕ್ಷಗಳಿಗೂ) ಸಮಾನವಾಗಿರುವದರಿಂದ ಈ ದೋಷವನ್ನು ಒಂದೇ ಪಕ್ಷದಮೇಲೆ ಹಾಕುವದು ಸರಿಯಲ್ಲ[1]. ಆದರೆ ಬ್ರಹ್ಮವಾದಿಯು ತನ್ನ ಪಕ್ಷದಲ್ಲಿ (ಈ) ದೋಷವನ್ನು ಪರಿಹರಿಸಿಕೊಂಡೂ ಇರುತ್ತಾನೆ[2].

## ೧೦. ಸರ್ವೋಪೇತಾಧಿಕರಣ (ಸೂ. ೩೦-೩೧)

(ಬ್ರಹ್ಮದಲ್ಲಿ ಎಲ್ಲಾ ಶಕ್ತಿಗಳೂ ಇರುವವು)

**ಸರ್ವೋಪೇತಾ ಚ ತದ್ದರ್ಶನಾತ್ ॥ ೩೦ ॥**

೩೦. ಮತ್ತು (ಆ ದೇವತೆಯು) ಎಲ್ಲಾ (ಶಕ್ತಿ)ಗಳಿಂದೊಡಗೂಡಿದೆ; ಏಕೆಂದರೆ ಅದು ಕಂಡುಬರುತ್ತದೆ.

### ಬ್ರಹ್ಮವು ಸರ್ವಶಕ್ತಿಯುಕ್ತವೆಂಬುದಕ್ಕೆ ಶ್ರುತಿ

(ಭಾಷ್ಯ)

೪೬೮. ಏಕಸ್ಯಾಪಿ ಬ್ರಹ್ಮಣೋ ವಿಚಿತ್ರಶಕ್ತಿಯೋಗಾತ್ ಉಪಪದ್ಯತೇ ವಿಚಿತ್ರೋ ವಿಕಾರಪ್ರಪಞ್ಚಃ ಇತ್ಯುಕ್ತಮ್ । ತತ್ ಪುನಃ ಕಥಮ್ ಅವಗಮ್ಯತೇ ವಿಚಿತ್ರಶಕ್ತಿಯುಕ್ತಂ ಪರಂ ಬ್ರಹ್ಮ ಇತಿ । ತದುಚ್ಯತೇ । ಸರ್ವೋಪೇತಾ ಚ ತದ್ದರ್ಶನಾತ್। ಸರ್ವಶಕ್ತಿಯುಕ್ತಾ ಚ ಪರಾ ದೇವತಾ ಇತಿ ಅಭ್ಯುಪಗನ್ತವ್ಯಮ್ । ಕುತಃ? ತದ್ದರ್ಶನಾತ್ । ತಥಾ ಹಿ ದರ್ಶಯತಿ ಶ್ರುತಿಃ ಸರ್ವಶಕ್ತಿಯೋಗಂ ಪರಸ್ಯಾ ದೇವತಾಯಾಃ "ಸರ್ವಕರ್ಮಾ ಸರ್ವಕಾಮಃ ಸರ್ವಗನ್ಧಃ ಸರ್ವಮಿದಮಭ್ಯಾತ್ತೋಽವಾಕ್ಯನಾದರಃ" (ಛಾಂ. ೩-೧೪-೪), "ಸತ್ಯಕಾಮಃ ಸತ್ಯಸಂಕಲ್ಪಃ" (ಛಾಂ. ೮-೭-೧), "ಯಃ ಸರ್ವಜ್ಞಃ ಸರ್ವವಿತ್" (ಮುಂ. ೧-೧-೯) "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚನ್ದ್ರಮಸೌ ವಿಧೃತೌ ತಿಷ್ಠತಃ" (ಬೃ. ೩-೮-೯) ಇತ್ಯೇವಂಜಾತೀಯಕಾ ॥

---

1. ಎಲ್ಲರಿಗೂ ಸಮಾನವಾಗಿರುವದೆಂಬ ದೋಷವು ದೋಷವಲ್ಲ ಎಂದು ಶ್ಲೋಕವಾರ್ತಿಕಕಾರರು ಹೇಳುತ್ತಾರೆ.

2. ಪರಿಣಾಮವು ಅವಿದ್ಯಾಕಲ್ಪಿತವೆಂದು ಹೇಳಿದ್ದರಿಂದ ಬ್ರಹ್ಮವಾದದಲ್ಲಿ ದೋಷವಿಲ್ಲ; ಮಿಕ್ಕ ವಾದಿಗಳ ಪಕ್ಷದಲ್ಲಿ ಈ ದೋಷವು ನಿಜವಾಗಿ ಉಳಿದುಕೊಳ್ಳುತ್ತದೆ ಎಂದು ಭಾವ.

(ಭಾಷ್ಯಾರ್ಥ)

ಬಗೆಬಗೆಯ ಶಕ್ತಿಗಳ ಸಂಬಂಧವಿರುವದರಿಂದ ಒಂದೇ ಬ್ರಹ್ಮದಿಂದಲೇ ಬಗೆಬಗೆಯ ವಿಕಾರಪ್ರಪಂಚವು ಉಂಟಾಗಬಹುದು ಎಂದು ಹೇಳಿದ್ದಾಯಿತು. ಆ ಪರಬ್ರಹ್ಮವು ಬಗೆಬಗೆಯ ಶಕ್ತಿಗಳುಳ್ಳದ್ದೆಂಬುದು ಹೇಗೆ ಗೊತ್ತು ? ಎಂದರೆ ಅದನ್ನು ಇಲ್ಲಿ ಹೇಳಿರುತ್ತದೆ.

'ಸರ್ವೋಪೇತಾ ಚ ತದ್ದರ್ಶನಾತ್' (ಆ) ಪರದೇವತೆಯು[1] ಎಲ್ಲಾ ಶಕ್ತಿಗಳಿಂದಲೂ ಕೂಡಿರುತ್ತದೆ ಎಂದು ಒಪ್ಪಬೇಕು. ಏಕೆಂದರೆ ಹಾಗೆಂದು ಕಂಡಿದೆ. ಹಾಗಲ್ಲವೆ, ಪರದೇವತೆಗೆ ಸರ್ವಶಕ್ತಿಗಳ ಸಂಬಂಧ(ವಿದೆಯೆಂದೇ) "ಸರ್ವಕರ್ಮಗಳುಳ್ಳವನು, ಸರ್ವಗಂಧನು, ಸರ್ವಕಾಮನು, ಸರ್ವರಸನು ; ಇದೆಲ್ಲವನ್ನೂ ವ್ಯಾಪಿಸಿಕೊಂಡಿರುವವನು. ವಾಗ್ರಹಿತನು, ಸಂಭ್ರಮರಹಿತನು" (ಛಾಂ. ೩–೧೪–೪), "ಸತ್ಯಕಾಮನು, ಸತ್ಯಸಂಕಲ್ಪನು" (ಛಾಂ ೮–೭–೧)[2] "ಯಾವನು ಸರ್ವಜ್ಞನೂ ಸರ್ವವಿತ್ತೂ ಆಗಿರುವನೋ" (ಮುಂ. ೧–೧–೯), "ಈ ಅಕ್ಷರದ ಕಟ್ಟಪ್ಪಣೆಯಿಂದ, ಎಲೌ ಗಾರ್ಗಿಯೆ, ಸೂರ್ಯಚಂದ್ರರು ವಿಧೃತರಾಗಿ[3] ನಿಂತಿರುತ್ತಾರೆ" (ಬೃ. ೩–೮–೯) ಎಂಬೀಜಾತಿಯ ಶ್ರುತಿಯು ತಿಳಿಸುತ್ತದೆ ?

**ವಿಕರಣತ್ವಾನ್ನೇತಿ ಚೇತ್ತದುಕ್ತಮ್ ॥ ೩೧ ॥**

೩೧. ಕರಣವಿಲ್ಲದ್ದರಿಂದ ಆಗಲಾರದು ಎಂದರೆ ಅದನ್ನು ಹೇಳಿದ್ದಾಗಿದೆ.

## ಕರಣವಿಲ್ಲದಿದ್ದರೂ ಬ್ರಹ್ಮಕ್ಕೆ ಸೃಷ್ಟಿಸಾಮರ್ಥ್ಯವುಂಟು

(ಭಾಷ್ಯ)

೪೬೯. ಸ್ಯಾದೇತತ್ । ವಿಕರಣಾಂ ಪರಾಂ ದೇವತಾಂ ಶಾಸ್ತಿ ಶಾಸ್ತ್ರಮ್ — "ಅಚಕ್ಷುಷ್ಕಮಶ್ರೋತ್ರಮವಾಗಮನಃ" (ಬೃ. ೩–೮–೮)

---

1. ಬ್ರಹ್ಮವನ್ನು ಶ್ರುತಿಯಲ್ಲಿ ಎಲ್ಲಾ ಲಿಂಗಗಳ ಶಬ್ದಗಳಿಂದಲೂ ಕರೆದಿದೆ. "ದೇವತಾ" ಎಂಬ ಸ್ತ್ರೀಲಿಂಗಶಬ್ದದಿಂದ ಛಾಂ. ೬–೩–೨ರಲ್ಲಿ ಕರೆದಿದೆ.

2. ಈ ಎರಡು ಶ್ರುತಿಗಳೂ ಸಗುಣಬ್ರಹ್ಮವನ್ನು ತಿಳಿಸುತ್ತವೆಯಾದರೂ ನಿರ್ಗುಣ ಬ್ರಹ್ಮವೇ ಉಪಾಸನೆಗಾಗಿ ಸಗುಣವೆಂದು ಭಾವಿಸಲ್ಪಟ್ಟಿರುತ್ತದೆಯಾದ್ದರಿಂದ (೧–೧–೧೨, ಭಾ.ಭಾ. ೯೦, ೯೧ ; ೪–೩–೧೪) ಕಾರಣಬ್ರಹ್ಮಕ್ಕೂ ಅವಿದ್ಯಾಕಲ್ಪಿತವಾದ ಸರ್ವಶಕ್ತಿಗಳು ಇವೆ ಎಂದು ಹೇಳುವದಕ್ಕಾಗಿ ಇದನ್ನು ಉದಾಹರಿಸಿದೆ.

3. ಆಕಾಶದಲ್ಲಿಯೇ ನಿಲ್ಲುವಂತೆ ಹಿಡಿಯಲ್ಪಟ್ಟು.

ಇತ್ಯೇವಂಜಾತೀಯಕಮ್ । ಕಥಂ ಸಾ ಸರ್ವಶಕ್ತಿಯುಕ್ತಾಪಿ ಸತೀ ಕಾರ್ಯಾಯ ಪ್ರಭವೇತ್ ? ದೇವಾದಯೋ ಹಿ ಚೇತನಾಃ ಸರ್ವಶಕ್ತಿಯುಕ್ತಾ ಅಪಿ ಸನ್ತಃ ಆಧ್ಯಾತ್ಮಿಕಕಾರ್ಯಕರಣಸಂಪನ್ನಾ ಏವ ತಸ್ಮೈ ತಸ್ಮೈ ಕಾರ್ಯಾಯ ಪ್ರಭವನ್ತೋ ವಿಜ್ಞಾಯನ್ತೇ । ಕಥಂ ಚ "ನೇತಿ ನೇತಿ" (ಬೃ. ೩-೯-೨೬) ಇತಿ ಪ್ರತಿಷಿದ್ಧಸರ್ವವಿಶೇಷಾಯಾ ದೇವತಾಯಾಃ ಸರ್ವಶಕ್ತಿಯೋಗಃ ಸಂಭವೇತ್ ಇತಿ[1] ? ಯದತ್ರ ವಕ್ತವ್ಯಮ್, ತತ್ ಪುರಸ್ತಾದೇವ ಉಕ್ತಮ್ । ಶ್ರುತ್ಯವಗಾಹ್ಯಮೇವೇದಮತಿಗಮ್ಭೀರಂ ಬ್ರಹ್ಮ ನ ತರ್ಕಾವಗಾಹ್ಯಮ್ । ನ ಚ ಯಥೈಕಸ್ಯ ಸಾಮರ್ಥ್ಯಂ ದೃಷ್ಟಂ ತಥಾ ಅನ್ಯಸ್ಯಾಪಿ ಸಾಮರ್ಥ್ಯೇನ ಭವಿತವ್ಯಮಿತಿ ನಿಯಮೋಽಸ್ತಿ ಇತಿ । ಪ್ರತಿಷಿದ್ಧಸರ್ವವಿಶೇಷಸ್ಯಾಪಿ ಬ್ರಹ್ಮಣಃ ಸರ್ವಶಕ್ತಿಯೋಗಃ ಸಂಭವತಿ ಇತ್ಯೇತದಪಿ ಅವಿದ್ಯಾಕಲ್ಪಿತರೂಪಭೇದೋಪನ್ಯಾಸೇನ ಉಕ್ತಮೇವ । ತಥಾ ಚ ಶಾಸ್ತ್ರಮ್–"ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ" (ಶ್ವೇ. ೩-೧೯) ಇತಿ ಅಕರಣಸ್ಯಾಪಿ ಬ್ರಹ್ಮಣಃ ಸರ್ವಸಾಮರ್ಥ್ಯಯೋಗಂ ದರ್ಶಯತಿ ॥

(ಭಾಷ್ಯಾರ್ಥ)

(ಪೂರ್ವಪಕ್ಷಿಯ ಅಭಿಪ್ರಾಯವು) ಇದಾಗಿರಬಹುದು : ಪರದೇವತೆಗೆ ಕರಣಗಳಿಲ್ಲವೆಂದು "ಚಕ್ಷುವಿಲ್ಲದ್ದು, ಶ್ರೋತ್ರವಿಲ್ಲದ್ದು, ವಾಕ್ಕಿಲ್ಲದ್ದು, ಮನಸ್ಸಿಲ್ಲದ್ದು" (ಬೃ. ೩-೮-೮) ಎಂಬೀ ಜಾತಿಯ ಶಾಸ್ತ್ರವು ತಿಳಿಸುತ್ತದೆ. ಆ ದೇವತೆಗೆ ಎಲ್ಲಾ ಶಕ್ತಿಗಳೂ ಇದ್ದರೆತಾನೆ (ಅದು) ಹೇಗೆ ಕಾರ್ಯವನ್ನು ಮಾಡಬಲ್ಲದು ? ಚೇತನದ ದೇವತೆಗಳು ಎಲ್ಲಾ ಶಕ್ತಿಗಳುಳ್ಳವರಾಗಿದ್ದರೂ ಆಧ್ಯಾತ್ಮಿಕವಾದ ಕಾರ್ಯಕರಣಗಳಿಂದೊಡಗೂಡಿರುವದರಿಂದಲೇ ಆಯಾ ಕಾರ್ಯವನ್ನು ಮಾಡಬಲ್ಲವರಾಗಿರುವರೆಂದು (ಮಂತ್ರಾದಿಗಳಿಂದ) ತಿಳಿಯಬರುತ್ತದೆ. ಇದಲ್ಲದೆ 'ಹೀಗಲ್ಲ, ಹೀಗಲ್ಲ' (ಬೃ. ೩-೯-೨೬) ಎಂದು ಎಲ್ಲಾ ವಿಶೇಷಗಳನ್ನೂ ಅಲ್ಲಗಳೆದಿರುವ ದೇವತೆಗೆ ಸರ್ವಶಕ್ತಿಗಳ ಸಂಬಂಧವು ಇದೆ ಎಂಬುದು ಹೇಗೆ ಹೊಂದೀತು ?

(ಸಮಾಧಾನ) :– ಇಲ್ಲಿ ಏನು ಹೇಳಬೇಕೋ ಅದನ್ನು ಮೊದಲೇ ಹೇಳಿದ್ದಾಗಿದೆ ; ಅತಿಗಂಭೀರವಾದ ಈ ಬ್ರಹ್ಮವು ಶ್ರುತಿಯಿಂದ ತಿಳಿಯತಕ್ಕದ್ದೇ ಹೊರತು ತರ್ಕದಿಂದ ಗೊತ್ತುಪಡಿಸತಕ್ಕದ್ದಲ್ಲ[2]. ಒಬ್ಬನಿಗೆ ಎಂಥ ಸಾಮರ್ಥ್ಯ

1. ಈ ಮಾತಿನ ಮುಂದೆ ಇರುವ 'ಚೇತ್' ಅನವಶ್ಯವೆಂದು ತೋರುತ್ತದೆ.

2. ಇದನ್ನು ೨-೧-೨೭ರ ಭಾಷ್ಯದಲ್ಲಿ (ಭಾ. ಭಾ. ೬೬೩) ಹೇಳಿದೆ. ಅದ್ದರಿಂದ ಬರಿಯ ತರ್ಕದಿಂದ ಇಲ್ಲಿ ಆಕ್ಷೇಪಿಸಿರುವದು ಸರಿಯಲ್ಲ ಎಂದು ಭಾವ.

ವಿರುವದು ಕಂಡಿದೆಯೋ ಮತ್ತೊಬ್ಬನಿಗೂ ಅಂಥ ಸಾಮರ್ಥ್ಯವೇ ಇರಬೇಕೆಂಬ ನಿಯಮವೇನೂ ಇಲ್ಲ[1] ಎಂದು (ಹೇಳಿದ್ದಾಗಿದೆ). ಎಲ್ಲಾ ವಿಶೇಷಗಳನ್ನೂ ಅಲ್ಲಗಳೆದಿರುವ ಬ್ರಹ್ಮಕ್ಕೂ ಸರ್ವಶಕ್ತಿಗಳ ಸಂಬಂಧವು ಹೊಂದುತ್ತದೆ ಎಂಬಿದನ್ನೂ ಅವಿದ್ಯಾಕಲ್ಪಿತವಾದ ರೂಪಭೇದವನ್ನು ತಿಳಿಸುವದರ ಮೂಲಕ (ಮೊದಲೇ) ಹೇಳಿಯೇ ಇದೆ[2]. ಆದ್ದರಿಂದಲೇ ಶಾಸ್ತ್ರವು "ಕೈಕಾಲುಗಳಿಲ್ಲದೆ ಇದ್ದರೂ ವೇಗವಾಗಿಹೋಗುವನು ಹಿಡಿದುಕೊಳ್ಳುವನು, ಕಣ್ಣುಗಳಿಲ್ಲದಿದ್ದರೂ ನೋಡುವನು, ಅವನು ಕಿವಿಗಳಿಲ್ಲದಿದ್ದರೂ ಕೇಳುವನು" (ಶ್ವೇ. ೩-೧೯) ಎಂದು ಕರಣಗಳಿಲ್ಲದಿದ್ದರೂ ಬ್ರಹ್ಮಕ್ಕೆ ಸರ್ವಶಕ್ತಿಗಳ ಸಂಬಂಧವನ್ನು ಹೇಳುತ್ತಿದೆ[3].

## ೧೧. ಪ್ರಯೋಜನವತ್ತ್ವಾಧಿಕರಣ (ಸೂ. ೩೨-೩೩)

(ಸೃಷ್ಟಿಗೆ ಪ್ರಯೋಜನವೇನೂ ಇರಬೇಕಾದದ್ದಿಲ್ಲ)

**ನ ಪ್ರಯೋಜನವತ್ತ್ವಾತ್ ॥ ೩೨ ॥**

೩೨. (ಇದು ಸರಿ)ಯಲ್ಲ; ಏಕೆಂದರೆ (ಪ್ರವೃತ್ತಿಗಳಿಗೆ) ಪ್ರಯೋಜನವಿರುತ್ತದೆ.

## ಪೂರ್ವಪಕ್ಷ: ಏಕತ್ವವಾದದಲ್ಲಿ ಸೃಷ್ಟಿಗೆ ಪ್ರಯೋಜನವಿಲ್ಲ

(ಭಾಷ್ಯ)

೪೭೦. ಅನ್ಯಥಾ ಪುನಶ್ಚೇತನಕರ್ತೃಕತ್ವಂ ಜಗತ ಆಕ್ಷಿಪತಿ। ನ ಖಲು ಚೇತನಃ ಪರಮಾತ್ಮಾ ಇದಂ ಜಗದ್ಬಿಂಬಂ ವಿರಚಯಿತುಮರ್ಹತಿ। ಕುತಃ ?

1. ಇದನ್ನು ೨-೧ ೨೫ರ ಭಾಷ್ಯದಲ್ಲಿ (ಭಾ. ಭಾ. ೪೬೧) ಹೇಳಿದೆ. ಆದ್ದರಿಂದ ದೇವಾದಿಗಳಿಗಿರುವಷ್ಟು ಸಾಮರ್ಥ್ಯವೇ ಬ್ರಹ್ಮಕ್ಕೆ ಇರುವದೆಂದು ತರ್ಕದಿಂದ ನಿಯಮಿಸುವದಕ್ಕೆ ಬರುವದಿಲ್ಲ ಎಂದು ಭಾವ. ೨೪ನೆಯ ಸೂತ್ರದಲ್ಲಿ ಕಾರಕಗಳಿಲ್ಲದೆ ಬ್ರಹ್ಮವು ಸೃಷ್ಟಿ ಮಾಡುವದು ಹೇಗೆ ಎಂದು ಆಕ್ಷೇಪಿಸಿತ್ತು; ಇಲ್ಲಿ ಕಾರ್ಯಕರಣಗಳಿಲ್ಲದ ಬ್ರಹ್ಮವು ಸೃಷ್ಟಿಸುವದು ಹೇಗೆ ಎಂದು ಆಕ್ಷೇಪಿಸಿದೆ.

2. ಇದನ್ನು ೨-೧-೨೭ರಲ್ಲಿ (ಭಾ. ಭಾ. ೪೬೪) ಹೇಳಿದೆ; ಆದ್ದರಿಂದ ಅವಿದ್ಯಾಕಲ್ಪಿತವಾದ ಸರ್ವಶಕ್ತಿಸಂಬಂಧಕ್ಕೂ ಪರಮಾರ್ಥವಾದ ನಿರ್ವಿಶೇಷತ್ವಕ್ಕೂ ಯಾವ ವಿರೋಧವೂ ಇಲ್ಲ ಎಂದು ಭಾವ

3 ಆದ್ದರಿಂದ ಕರಣಗಳಿದ್ದರೇ ಕರಣಗಳಿಂದಾಗುವ ಕೆಲಸವಾಗಬೇಕೆಂಬ ನಿಯಮವೇನೂ ಇರುವದಿಲ್ಲ ಎಂದು ಭಾವ.

ಪ್ರಯೋಜನವತ್ತ್ವಾತ್ ಪ್ರವೃತ್ತೀನಾಮ್ । ಚೇತನೋ ಹಿ ಲೋಕೇ ಬುದ್ಧಿ ಪೂರ್ವಕಾರೀ ಪುರುಷಃ ಪ್ರವರ್ತಮಾನೋ ನ ಮನ್ದೋಪಕ್ರಮಾಮಪಿ ತಾವತ್ ಪ್ರವೃತ್ತಿಮ್ ಆತ್ಮಪ್ರಯೋಜನಾನುಪಯೋಗಿನೀಮ್ ಆರಭಮಾಣೋ ದೃಷ್ಟಃ । ಕಿಮುತ ಗುರುತರಸಂರಮ್ಭಾಮ್ । ಭವತಿ ಚ ಲೋಕಪ್ರಸಿದ್ಧ್ಯನುವಾದಿನೀ ಶ್ರುತಿಃ—"ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ" (ಬೃ. ೨-೪-೫) ಇತಿ । ಗುರುತರಸಂರಮ್ಭಾ ಚೇಯಂ ಪ್ರವೃತ್ತಿಃ ಯದುಚ್ಚಾವಚಪ್ರಪಞ್ಚಂ ಜಗದ್ಬಿಮ್ಬಂ ವಿರಚಯಿತವ್ಯಮ್ । ಯದಿ ಇಯಮಪಿ ಪ್ರವೃತ್ತಿಃ ಚೇತನಸ್ಯ ಪರಮಾತ್ಮನಃ ಆತ್ಮಪ್ರಯೋಜನೋಪಯೋಗಿನೀ ಪರಿಕಲ್ಪ್ಯೇತ, ಪರಿತೃಪ್ತತ್ವಂ ಪರಮಾತ್ಮನಃ ಶ್ರೂಯಮಾಣಂ ಬಾಧ್ಯೇತ । ಪ್ರಯೋಜನಾಭಾವೇ ವಾ ಪ್ರವೃತ್ತ್ಯಭಾವೋಽಪಿ ಸ್ಯಾತ್ । ಅಥ ಚೇತನೋಽಪಿ ಸನ್ ಉನ್ಮತ್ತೋ ಬುದ್ಧ್ಯಪರಾಧಾತ್ ಅನ್ತರೇಣೈವ ಆತ್ಮಪ್ರಯೋಜನಂ ಪ್ರವೃತ್ತಮಾನೋ ದೃಷ್ಟಃ, ತಥಾ ಪರಮಾತ್ಮಾಪಿ ಪ್ರವರ್ತಿಷ್ಯತೇ ಇತ್ಯುಚ್ಯೇತ । ತಥಾ ಸತಿ ಸರ್ವಜ್ಞತ್ವಂ ಪರಮಾತ್ಮನಃ ಶ್ರೂಯಮಾಣಂ ಬಾಧ್ಯೇತ । ತಸ್ಮಾತ್ ಅಶ್ಲಿಷ್ಟಾ ಚೇತನಾತ್ ಸೃಷ್ಟಿಃ ಇತಿ ॥

(ಭಾಷ್ಯಾರ್ಥ)

ಜಗತ್ತಿಗೆ ಚೇತನವೇ ಕರ್ತನೆಂಬ (ಸಿದ್ಧಾಂತವನ್ನು ಪೂರ್ವಪಕ್ಷಿಯು) ಮತ್ತೊಮ್ಮೆ ಬೇರೊಂದು ರೀತಿಯಿಂದ ಆಕ್ಷೇಪಿಸುತ್ತಾನೆ: ಚೇತನನಾದ ಪರಮಾತ್ಮನು ಈ ಜಗದ್ಬಿಂಬವನ್ನು ವಿರಚಿಸಿರಲಾರನು. ಏಕೆ? ಎಂದರೆ ಪ್ರವೃತ್ತಿಗಳಿಗೆ ಪ್ರಯೋಜನವಿರಬೇಕಾದ್ದರಿಂದ. ಹೇಗೆಂದರೆ ಲೋಕವಲ್ಲಿ ಬುದ್ಧಿಪೂರ್ವಕವಾಗಿ ಕೆಲಸಮಾಡುವ ಚೇತನನು (ಕಾರ್ಯದಲ್ಲಿ) ತೊಡಗುವಾಗ ಅಲ್ಪಾಯಾಸದ ಕೆಲಸವನ್ನು ಕೂಡ ತನ್ನ ಪ್ರಯೋಜನಕ್ಕೇ ಉಪಯೋಗವಾಗುವಂತಿಲ್ಲವಾದರೆ ಪ್ರಾರಂಭಿಸುವದಿಲ್ಲವೆಂದು ಕಂಡಿರುತ್ತದೆ; (ಹೀಗಿರುವಲ್ಲಿ) ಬಹುಕಷ್ಟಸಾಧ್ಯವಾದ (ಕೆಲಸವನ್ನು ನಿಷ್ಪ್ರಯೋಜನವಾಗಿ ಪ್ರಾರಂಭಿಸುವದಿಲ್ಲವೆಂದು) ಹೇಳುವದೇನು? "ಎಲೆ, ಯಾವದೇ ಆಗಲಿ ಅದರ ಕಾಮಕ್ಕಾಗಿ (ಅದು) ಪ್ರಿಯವಾಗಿರುವದಿಲ್ಲ; ಮತ್ತೇನೆಂದರೆ ತನ್ನ ಕಾಮಕ್ಕಾಗಿಯೇ ಎಲ್ಲವೂ ಪ್ರಿಯವಾಗಿರುತ್ತದೆ" (ಬೃ. ೨-೪-೫) ಎಂದು ಲೋಕಪ್ರಸಿದ್ಧಿಯನ್ನು ಅನುವಾದಮಾಡುತ್ತಿರುವ ಶ್ರುತಿಯೂ ಇದೆ[1]. ಮೇಲುಕೀಳುಗಳೆಂಬ (ಬಗೆ

---

1. ಲೋಕದಲ್ಲಿ ಎಲ್ಲವೂ ತನಗಾಗಿಯೇ ಪ್ರಿಯವಾಗಿರುವದೆಂದು ಪ್ರಸಿದ್ಧವಾಗಿರುವದನ್ನೇ ಆತ್ಮನು ಎಲ್ಲಕ್ಕಿಂತಲೂ ಪ್ರಿಯನು ಎಂದು ತಿಳಿಸಿ ಆತ್ಮದರ್ಶನವನ್ನು ವಿಧಿಸುವದಕ್ಕಾಗಿ ಶ್ರುತಿಯು ಅನುವಾದಮಾಡಿಕೊಂಡಿರುತ್ತದೆ.

ಬಗೆಯ) ವಿವರವುಳ್ಳ ಜಗದ್ಬಿಂಬವನ್ನು ವಿರಚಿಸುವದೆಂಬುದು ಬಹುಕಷ್ಟಸಾಧ್ಯವಾದ ಕೆಲಸ.[1] (ಇನ್ನು) ಈ ಪ್ರವೃತ್ತಿಯೂ ಚೇತನನಾಗಿರುವ ಪರಮಾತ್ಮನಿಗೆ ಸ್ವಪ್ರಯೋಜನಕ್ಕೆ ಉಪಯೋಗವಾಗತಕ್ಕದ್ದೇ ಎಂದು ಕಲ್ಪಿಸುವದಾದರೆ, ಪರಮಾತ್ಮನು ಪರಿತೃಪ್ತನೆಂದು ಶ್ರುತಿಯಲ್ಲಿರುವದಕ್ಕೆ[2] ಬಾಧೆಯಾಗುವದು. ಅಥವಾ (ಸ್ವ)ಪ್ರಯೋಜನವಿಲ್ಲ ಎಂದರೆ, (ಸೃಷ್ಟಿಯಲ್ಲಿ) ತೊಡಗುವದಿಲ್ಲವೆಂದೂ ಆಗಬಹುದು. ಇನ್ನು ಚೇತನನಾಗಿದ್ದರೂ ಹುಚ್ಚನು ಬುದ್ಧಿಯು ಕೆಟ್ಟಿರುವದರಿಂದ ಮಾಡಿದ ಕೆಲಸಕ್ಕೆ (ಯಾವ) ಪ್ರಯೋಜನವೂ ಇಲ್ಲದೆ ತೊಡಗುವದು ಕಂಡಿದೆ(ಯಷ್ಟೆ) ; ಅದರಂತೆ ಪರಮಾತ್ಮನೂ ತೊಡಗಬಹುದಲ್ಲ, ಎನ್ನಬಹುದು. ಹಾಗಾದರೆ ಪರಮಾತ್ಮನು ಸರ್ವಜ್ಞನೆಂದು ಶ್ರುತಿಯಲ್ಲಿರುವದು ಬಾಧಿತವಾಗುತ್ತದೆ. ಆದ್ದರಿಂದ ಚೇತನ(ಕಾರಣ)ದಿಂದ ಸೃಷ್ಟಿಯಾಗಿದೆ ಎಂಬುದು ಯುಕ್ತವಲ್ಲ ಎಂದು (ಆಕ್ಷೇಪ).

**ಲೋಕವತ್ತು ಲೀಲಾಕೈವಲ್ಯಮ್ ॥ ೩೩ ॥**

೩೩. ಆದರೆ ಲೋಕದಂತೆ ಕೇವಲ ಲೀಲೆಯಾಗಿರುತ್ತದೆ.

## ಸೃಷ್ಟಿಯು ಲೀಲಾಮಾತ್ರ

(ಭಾಷ್ಯ)

೪೭೧. ತುಶಬ್ದೇನ ಆಕ್ಷೇಪಂ ಪರಿಹರತಿ । ಯಥಾ ಲೋಕೇ ಕಸ್ಯಚಿತ್ ಆಪ್ತೈಷಣಸ್ಯ ರಾಜ್ಞಃ ರಾಜಾಮಾತ್ಯಸ್ಯ ವಾ ವ್ಯತಿರಿಕ್ತಂ ಕಿಂಚಿತ್ ಪ್ರಯೋಜನಮ್ ಅನಭಿಸನ್ಧಾಯ ಕೇವಲಂ ಲೀಲಾರೂಪಾಃ ಪ್ರವೃತ್ತಯಃ ಕ್ರೀಡಾವಿಹಾರೇಷು ಭವನ್ತಿ, ಯಥಾ ಚ ಉಚ್ಛ್ವಾಸಪ್ರಶ್ವಾಸಾದಯಃ ಅನಭಿಸನ್ಧಾಯ ಬಾಹ್ಯಂ ಕಿಂಚಿತ್ ಪ್ರಯೋಜನಂ ಸ್ವಭಾವಾದೇವ ಸಂಭವನ್ತಿ, ಏವಮ್ ಈಶ್ವರಸ್ಯಾಪಿ ಅನಪೇಕ್ಷ್ಯ ಕಿಂಚಿತ್ ಪ್ರಯೋಜನಾನ್ತರಂ ಸ್ವಭಾವಾದೇವ ಕೇವಲಂ ಲೀಲಾರೂಪಾ ಪ್ರವೃತ್ತಿರ್ಭವಿಷ್ಯತಿ । ನ ಹಿ ಈಶ್ವರಸ್ಯ ಪ್ರಯೋಜನಾನ್ತರಂ ನಿರೂಪ್ಯಮಾಣಂ ನ್ಯಾಯತಃ ಶ್ರುತಿತೋ ವಾ ಸಂಭವತಿ। ನ ಚ ಸ್ವಭಾವಃ ಪರ್ಯನುಯೋಕ್ತುಂ ಶಕ್ಯತೇ। ಯದ್ಯಪಿ ಅಸ್ಮಾಕಮ್ ಇಯಂ ಜಗದ್ಬಿಮ್ಬರಚನಾ ಗುರುತರಸಂರಮ್ಭೇವಾಭಾತಿ, ತಥಾ ಪಿ

1. ಆದ್ದರಿಂದ ಯಾವ ಪ್ರಯೋಜನವೂ ಇಲ್ಲದೆ ಸರ್ವಜ್ಞನಾದ ಪರಮಾತ್ಮನು ಈ ಕೆಲಸದಲ್ಲಿ ತೊಡಗಲಾರನು – ಎಂದು ಭಾವ.

2. ಯಾವ ಶ್ರುತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಈ ವಾಕ್ಯವನ್ನು ಬರೆದಿದೆ ಎಂಬುದು ಗೊತ್ತಾಗಿಲ್ಲ.

ಪರಮೇಶ್ವರಸ್ಯ ಲೀಲೈವ ಕೇವಲಾ ಇಯಮ್ । ಅಪರಿಮಿತಶಕ್ತಿತ್ವಾತ್ । ಯದಿ ನಾಮ ಲೋಕೇ ಲೀಲಾಸ್ವಪಿ ಕಿಂಚಿತ್ ಸೂಕ್ಷ್ಮಂ ಪ್ರಯೋಜನಮ್ ಉತ್ಪ್ರೇಕ್ಷ್ಯೇತ, ತಥಾಪಿ ನೈವಾತ್ರ ಕಿಂಚಿತ್ ಪ್ರಯೋಜನಮ್ ಉತ್ಪ್ರೇಕ್ಷಿತುಂ ಶಕ್ಯತೇ । ಆಪ್ತಕಾಮಶ್ರುತೇಃ । ನಾಪಿ ಅಪ್ರವೃತ್ತಿಃ, ಉನ್ಮತ್ತಪ್ರವೃತ್ತಿರ್ವಾ । ಸೃಷ್ಟಿಶ್ರುತೇಃ, ಸರ್ವಜ್ಞಶ್ರುತೇಶ್ಚ । ನ ಚ ಇಯಂ ಪರಮಾರ್ಥವಿಷಯಾ ಸೃಷ್ಟಿಶ್ರುತಿಃ । ಅವಿದ್ಯಾಕಲ್ಪಿತನಾಮರೂಪವ್ಯವಹಾರಗೋಚರತ್ವಾತ್ । ಬ್ರಹ್ಮಾತ್ಮಭಾವಪ್ರತಿಪಾದನಪರತ್ವಾಚ್ಚ ಇತ್ಯೇತದಪಿ ನೈವ ವಿಸ್ಮರ್ತವ್ಯಮ್ ॥

(ಭಾಷ್ಯಾರ್ಥ)

(ಇಲ್ಲಿರುವ) ತು ಶಬ್ದದಿಂದ ಆಕ್ಷೇಪವನ್ನು ತಳ್ಳಿಹಾಕಿರುತ್ತದೆ. ಲೋಕದಲ್ಲಿ ಇಚ್ಛೆಯೆಲ್ಲ ಪೂರ್ತಿಗೊಳಿಸಿಕೊಂಡಿರುವ ಯಾವನಾದರೊಬ್ಬ ಅರಸನಿಗೆ ಅಥವಾ ಅರಸನ ಮುಖ್ಯಮಂತ್ರಿಗೆ ಹೇಗೆ ಮತ್ತೆ ಯಾವದೊಂದು ಪ್ರಯೋಜನದ ಇಚ್ಛೆಯೂ ಇಲ್ಲದೆ ಕ್ರೀಡಾರ್ಥವಾದ ವಿಹಾರಗಳಲ್ಲಿ ಕೇವಲ ಲೀಲಾರೂಪವಾದ[1] ಪ್ರವೃತ್ತಿಗಳು ಉಂಟಾಗುತ್ತಿರುವವೋ, ಮತ್ತು ಹೇಗೆ ಉಸಿರು ತೆಗೆದುಕೊಳ್ಳುವದು, ಬಿಡುವದು–ಮುಂತಾದವು ಹೊರಗಿನ ಯಾವದೊಂದು ಪ್ರಯೋಜನವೂ ಇಲ್ಲದೆ ಸ್ವಭಾವದಿಂದಲೇ[2] ಆಗುತ್ತಿರುವವೋ, ಹಾಗೆಯೇ ಈಶ್ವರನಿಗೂ ಯಾವದೊಂದು ಪ್ರಯೋಜನವನ್ನೂ ಬಯಸದೆ ಸ್ವಭಾವದಿಂದಲೇ ಕೇವಲ ಲೀಲಾರೂಪವಾದ ಪ್ರವೃತ್ತಿಯು ಆಗಬಹುದು. ಏಕೆಂದರೆ ಈಶ್ವರನಿಗೆ ನ್ಯಾಯದಿಂದಲಾಗಲಿ ಶ್ರುತಿಯಿಂದಾಗಲಿ ಸರಿಯಾಗಿ ನೋಡಿದರೆ ಮತ್ತೊಂದು ಪ್ರಯೋಜನವು ಹೊಂದುವದಿಲ್ಲ. ಸ್ವಭಾವವನ್ನು ಆಕ್ಷೇಪಿಸುವದಕ್ಕೂ ಆಗುವಂತಿಲ್ಲ.[3] ನಮ್ಮಗಳಿಗೇನೂ ಈ ಜಗದ್ಬಿಂಬವನ್ನು ವಿರಚಿಸುವದು ಬಹುಕಷ್ಟಸಾಧ್ಯವೆಂಬಂತೆ ತೋರುತ್ತಿದೆ; ಆದರೂ ಇದು ಪರಮೇಶ್ವರನಿಗೆ ಬರಿಯ ಲೀಲೆಯೇ ಆಗಿರುತ್ತದೆ[4] ; ಏಕೆಂದರೆ (ಅವನಿಗೆ) ಅಪರಿಮಿತಶಕ್ತಿಗಳಿರುತ್ತವೆ.

---

1. ವಿನೋದಾರ್ಥವಾದ.

2. ಲೀಲೆ ಎಂಬುದಕ್ಕೆ ಇಲ್ಲಿ ಸ್ವಭಾವವೆಂದು ಅರ್ಥವನ್ನು ಮಾಡಿದೆ; ಇದರಿಂದ ವಿನೋದವೆಂಬ ಪ್ರಯೋಜನವೂ ಇಲ್ಲವೆಂದಂತೆ ಆಯಿತು.

3. ಬೆಂಕಿಯು ಏತಕ್ಕೆ ಸುಡುತ್ತದೆ? –ಎಂದು ಮುಂತಾಗಿ ಯಾರೂ ಆಕ್ಷೇಪಿಸುವದಿಲ್ಲ. ಅನಿಮಿತ್ತವಾಗಿ ನಡೆಯುತ್ತಿರುವದೇ ಸ್ವಭಾವವು. ಹೀಗೆಯೇ ಜಗತ್ತಿನ ಸೃಷ್ಟಿಸ್ಥಿತಿಲಯಗಳೂ ಪರಮಾತ್ಮನ ಸ್ವಭಾವವು ಎಂದು ಭಾವ. ಅನಿರ್ವಾಚ್ಯಾವಿದ್ಯೆಯೇ ಪರಮೇಶ್ವರನ ಲೀಲೆ ಮತ್ತು ಸ್ವಭಾವ ಎಂಬ ನ್ಯಾ॥ ನಿ॥ ಟೀಕೆಗೆ ಭಾಷ್ಯದ ಆಧಾರವಿಲ್ಲ. ಕಾಲಾದಿಗಳಿರುವಲ್ಲಿ ಈಶ್ವರನು ಸೃಷ್ಟಿಸಲೇಬೇಕಾಗುತ್ತದೆ ಎಂಬ ರ॥ ಪ್ರ॥ ಟೀಕೆಯಲ್ಲಿ ಕಾಲಾದಿಗಳೂ ಕಾರ್ಯವೆಂಬುವನ್ನು ಕೈಬಿಟ್ಟಂತಾಗಿದೆ

4. ಅನಾಯಾಸವಾದ ಪ್ರವೃತ್ತಿ ಎಂಬರ್ಥದಲ್ಲಿ ಲೀಲಾಶಬ್ದವನ್ನು ಪ್ರಯೋಗಿಸಿದೆ ಎಂದಭಿಪ್ರಾಯ.

ಒಂದುವೇಳೆ ಲೋಕದಲ್ಲಿ (ಆಗುವ) ಲೀಲೆಗಳಲ್ಲಿಕೂಡ ಯಾವದಾದರೊಂದು ಸೂಕ್ಷ್ಮವಾದ ಪ್ರಯೋಜನವು ಇದ್ದೇ ಇರುತ್ತದೆ ಎಂದು ಊಹಿಸಬಹುದು[1] : ಆದರೂ ಇಲ್ಲಿ ಯಾವ ಪ್ರಯೋಜನವನ್ನೂ ಊಹಿಸಿ (ಕಲ್ಪಿಸು)ವದಕ್ಕೆ ಆಗುವಂತಿಲ್ಲ ; ಏಕೆಂದರೆ ಈಶ್ವರನು ಆಪ್ತಕಾಮನೆಂದು ಶ್ರುತಿಯುಳ್ಳದೆ.[2] ಪ್ರವೃತ್ತಿಯೇ ಆಗದಿರಲಿ ಅಥವಾ ಹುಚ್ಚನಂತೆ (ಅನಿಯತ)ಪ್ರವೃತ್ತಿಯಾಗಲಿ[3] (ಎಂದೂ ಆಕ್ಷೇಪಿಸುವ)ಹಾಗಿಲ್ಲ ; ಏಕೆಂದರೆ ಸೃಷ್ಟಿಸಿದನೆಂದು ಶ್ರುತಿಯುಳ್ಳದೆ, (ಅವನು) ಸರ್ವಜ್ಞನೆಂದೂ ಶ್ರುತಿಯುಳ್ಳದೆ.[4] ಇದಲ್ಲದೆ **ಈ ಸೃಷ್ಟಿಶ್ರುತಿಯು ಪರಮಾರ್ಥವಿಷಯವಲ್ಲ ; ಏಕೆಂದರೆ (ಇದು) ಅವಿದ್ಯಾಕಲ್ಪಿತವಾದ ನಾಮರೂಪವ್ಯವಹಾರವನ್ನು ಕುರಿತದ್ದಾಗಿದೆ, ಮತ್ತು ಬ್ರಹ್ಮಾತ್ಮಭಾವವನ್ನು ಪ್ರತಿಪಾದಿಸುವದರಲ್ಲಿ ತಾತ್ಪರ್ಯವುಳ್ಳದ್ದಾಗಿರುತ್ತದೆ -ಎಂಬುದನ್ನು ಮರೆಯಲೇಬಾರದು.**[5]

## ೧೨. ವೈಷಮ್ಯನೈರ್ಘೃಣ್ಯಾಧಿಕರಣ (ಸೂ. ೩೪–೩೬)

(ಈಶ್ವರನಲ್ಲಿ ವೈಷಮ್ಯನೈರ್ಘೃಣ್ಯಗಳಿಲ್ಲ)

**ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ ॥ ೩೪ ॥**

೩೪. (ಈಶ್ವರನಿಗ) ವೈಷಮ್ಯನೈರ್ಘೃಣ್ಯಗಳಿಲ್ಲ ; ಏಕೆಂದರೆ

---

1. ಕ್ರೀಡಾವಿಹಾರಕ್ಕೆ ಬೇಸರವನ್ನು ಕಳೆದುಕೊಳ್ಳುವದು, ಉಸಿರಾಡುವದಕ್ಕೆ ಬದುಕಿರುವದು – ಮುಂತಾದ ಸೂಕ್ಷ್ಮಪ್ರಯೋಜನಗಳಿರುವವು ಎಂದು ಕಲ್ಪಿಸಬಹುದು.

2. ಈಶ್ವರನು ಆಪ್ತಕಾಮನು ಎಂದೇ ನೇರಾಗಿ ಹೇಳುವ ಶ್ರುತಿವಾಕ್ಯವು ಕಾಣುವದಿಲ್ಲ ; ಈಶ್ವರನು ಆಪ್ತಕಾಮನೆಂದು ಅರ್ಥಿಕವಾಗಿ ಸೂಚಿಸುವ ಶ್ರುತಿವಾಕ್ಯಗಳು ಹೇರಳವಾಗಿವೆ.

3. ಈಶ್ವರನು ಸೃಷ್ಟಿಸದೆಯೇ ಇರಲಿ ! ಅಥವಾ ಮನಬಂದಂತೆ ಸೃಷ್ಟಿಪ್ರಲಯಗಳನ್ನು ಮಾಡಲಿ ! –ಎಂದು ಮುಂತಾಗಿ ಆಕ್ಷೇಪಿಸಬಾರದು ಎಂದಭಿಪ್ರಾಯ.

4. ಶ್ರುತಿಯಲ್ಲಿ ಸೃಷ್ಟಿಸುತ್ತಾನೆ ಎಂದು ಹೇಳಿರುವಲ್ಲಿ ಸೃಷ್ಟಿಸದೆಯೂ ಇರಬಹುದು ಎಂದು ತರ್ಕವನ್ನವಲಂಬಿಸಿ ಆಕ್ಷೇಪಿಸುವದು ಸರಿಯಲ್ಲ. ಶ್ರುತಿಯಲ್ಲಿ ಸರ್ವಜ್ಞನೆಂದು ಹೇಳಿರುವಾಗ ಈಶ್ವರನು ಹುಚ್ಚನಂತೆ ವರ್ತಿಸಲಿ ಎಂದು ಆಕ್ಷೇಪಿಸುವದೂ ಸರಿಯಲ್ಲ ; ಏಕೆಂದರೆ ಸೃಷ್ಟ್ಯಾದಿಗಳು ಶ್ರುತಿಮಾತ್ರಗೋಚರವಾಗಿವೆ– ಎಂದಭಿಪ್ರಾಯ.

5. ಸೃಷ್ಟ್ಯಾದಿಗಳು ಪರಮಾರ್ಥವೆಂದು ಒಪ್ಪಿ ಸಮಾಧಾನವನ್ನು ಹೇಳಿದ್ದಾಯಿತು. ಆದರೆ ಅವು ಪರಮಾರ್ಥವೆಂಬುದು ಸಿದ್ಧಾಂತವಲ್ಲ. ಸೃಷ್ಟಿಶ್ರುತಿಯು ಸೃಷ್ಟಿಪ್ರತಿಪಾದನಪರವೆಂದರೆ ಈ ಆಕ್ಷೇಪಗಳು ಹುಟ್ಟಿದರೂ ಹುಟ್ಟಬಹುದು. ಆದರೆ ಆ ಶ್ರುತಿಯು ಸೃಷ್ಟಿಯನ್ನು ಬ್ರಹ್ಮಾತ್ಮೈಕತ್ವಜ್ಞಾನಕ್ಕೆ ಅಂಗವಾಗಿ ಹೇಳಿವೆ ಎಂದು ೨–೧–೧೪ (ಭಾ. ಭಾ.೪೩೯) ರಲ್ಲಿ ಹೇಳಿದೆ. ಆದ್ದರಿಂದ ಪರಮಾರ್ಥದೃಷ್ಟಿಯಿಂದ ಆಕ್ಷೇಪವೇ ಇಲ್ಲ ಎಂದು ಭಾವ.

ಸಾಪೇಕ್ಷನಾಗಿರುತ್ತಾನೆ. ಹಾಗೆಂಬಲ್ಲವೆ, (ಶ್ರುತಿ ತಿಳಿಸುತ್ತದೆ)?

## ಪೂರ್ವಪಕ್ಷ: ಈಶ್ವರನಿಗೆ ವೈಷಮ್ಯಾದಿದೋಷ

(ಭಾಷ್ಯ)

೪೭೨. ಪುನಶ್ಚ ಜಗಜ್ಜನ್ಮಾದಿಹೇತುತ್ವಮೀಶ್ವರಸ್ಯ ಆಕ್ಷಿಪ್ಯತೇ ಸ್ಥೂಣಾನಿಖನನನ್ಯಾಯೇನ ಪ್ರತಿಜ್ಞಾತಸ್ಯ ಅರ್ಥಸ್ಯ ದೃಢೀಕರಣಾಯ । ನೇಶ್ವರೋ ಜಗತಃ ಕಾರಣಮ್ ಉಪಪದ್ಯತೇ । ಕುತಃ? ವೈಷಮ್ಯನೈರ್ಘೃಣ್ಯಪ್ರಸಙ್ಗಾತ್ । ಕಾಂಶ್ಚಿತ್ ಅತ್ಯನ್ತಸುಖಭಾಜಃ ಕರೋತಿ ದೇವಾದೀನ್ ಕಾಂಶ್ಚಿತ್ ಅತ್ಯನ್ತದುಃಖಭಾಜಃ ಪಶ್ವಾದೀನ್, ಕಾಂಶ್ಚಿತ್ ಮಧ್ಯಮಭೋಗಭಾಜಃ ಮನುಷ್ಯಾದೀನ್ ಇತ್ಯೇವಂ ವಿಷಮಾಂ ಸೃಷ್ಟಿಂ ನಿರ್ಮಿಮಾಣಸ್ಯ ಈಶ್ವರಸ್ಯ ಪೃಥಗ್ಜನಸ್ಯೇವ ರಾಗದ್ವೇಷೋಪಪತ್ತೇಃ ಶ್ರುತಿಸ್ಮೃತ್ಯವಧಾರಿತಸ್ವಚ್ಛತ್ವಾದಿ ಈಶ್ವರಸ್ವಭಾವವಿಲೋಪಃ ಪ್ರಸಜ್ಯೇತ। ತಥಾ ಖಲಜನೈರಪಿ ಜುಗುಪ್ಸಿತಂ ನಿರ್ಘೃಣತ್ವಮ್ ಅತಿಕ್ರೂರತ್ವಂ ದುಃಖಯೋಗವಿಧಾನಾತ್ ಸರ್ವಪ್ರಜೋಪಸಂಹಾರಾಚ್ಚ ಪ್ರಸಜ್ಯೇತ। ತಸ್ಮಾತ್ ವೈಷಮ್ಯನೈರ್ಘೃಣ್ಯಪ್ರಸಙ್ಗಾತ್ ನೇಶ್ವರಃ ಕಾರಣಮ್ ಇತಿ ॥

(ಭಾಷ್ಯಾರ್ಥ)

ಪ್ರತಿಜ್ಞೆಮಾಡಿದ ಅರ್ಥವನ್ನು ಗೂಟಕ್ಕೆ ಕೂಲಿರಿದಂತೆ ಗಟ್ಟಿಗೊಳಿಸುವದಕ್ಕಾಗಿ ಈಶ್ವರನು ಜಗತ್ತಿನ ಜನ್ಮಾದಿಗಳಿಗೆ ಕಾರಣನೆಂಬುದನ್ನು ಮತ್ತೂ ಆಕ್ಷೇಪಿಸಲಾಗುತ್ತದೆ.

ಈಶ್ವರನು ಜಗತ್ತಿಗೆ ಕಾರಣನೆಂಬುದು ಹೊಂದುವದಿಲ್ಲ; ಏಕೆಂದರೆ (ಅವನಿಗೆ) ವೈಷಮ್ಯನೈರ್ಘೃಣ್ಯಗಳು ಬಂದೊದಗುವವು. ದೇವತೆಗಳೇ ಮುಂತಾದ ಕೆಲವರನ್ನು ಅತ್ಯಂತಸುಖಭಾಜನರನ್ನಾಗಿ ಮಾಡುತ್ತಾನೆ, ಪಶುಗಳೇ ಮುಂತಾದ ಕೆಲವರನ್ನು ಅತ್ಯಂತಸುಖಭಾಜನರನ್ನಾಗಿ ಮಾಡುತ್ತಾನೆ; ಮನುಷ್ಯರೇ ಮುಂತಾದ ಕೆಲವರನ್ನು ನಡುತರದ ಭೋಗವುಳ್ಳವರನ್ನಾಗಿ ಮಾಡಿರುತ್ತಾನೆ – ಎಂದಿಂತು ಬೇರೆಬೇರೆ ತರದ ಸೃಷ್ಟಿಯನ್ನು ನಿರ್ಮಿಸಿರುವ ಈಶ್ವರನಿಗೆ ಸಾಮಾನ್ಯಜನರಂತೆ ರಾಗದ್ವೇಷಗಳಿವೆಯೆಂದಾಗುವದರಿಂದ ಶ್ರುತಿಸ್ಮೃತಿಗಳಿಂದ ಸ್ವಚ್ಛನೆಂದು ನಿಶ್ಚಿತವಾಗಿರುವ ಈಶ್ವರಸ್ವಭಾವವೇ ನಾಶವಾಗಬೇಕಾಗುವದು. ಹೀಗೆಯೇ (ಪ್ರಜೆಗಳಿಗೆ) ದುಃಖಸಂಬಂಧವನ್ನು ಉಂಟುಮಾಡುವದರಿಂದಲೂ ಎಲ್ಲಾ ಪ್ರಜೆಗಳನ್ನೂ ಸಂಹಾರಮಾಡುವದರಿಂದಲೂ ದುಷ್ಟಜನರುಕೂಡ ಅಸಹ್ಯಪಡುವಂಥ ನಿರ್ಘೃಣತ್ವವು, ಅತಿಕ್ರೂರತ್ವವು, ಬಂದೊದಗು

ವದು. ಆದ್ದರಿಂದ (ಹೀಗೆ) ವೈಷಮ್ಯನೈರ್ಘೃಣ್ಯಗಳು ಬಂದೊದಗುವವರಿಂದ ಈಶ್ವರನು (ಜಗತ್ತಿಗೆ) ಕಾರಣನಲ್ಲ.

## ಸಿದ್ಧಾಂತ : ಈಶ್ವರನು ಕರ್ಮಸಾಪೇಕ್ಷನಾಗಿ ಸೃಜಿಸುತ್ತಾನೆ

(ಭಾಷ್ಯ)

೪೭೩. ಏವಂ ಪ್ರಾಪ್ತೇ ಬ್ರೂಮಃ । ವೈಷಮ್ಯನೈರ್ಘೃಣ್ಯೇ ನೇಶ್ವರಸ್ಯ ಪ್ರಸಜ್ಯೇತೇ । ಕಸ್ಮಾತ್ ? ಸಾಪೇಕ್ಷತ್ವಾತ್ । ಯದಿ ಹಿ ನಿರಪೇಕ್ಷಃ ಕೇವಲ ಈಶ್ವರೋ ವಿಷಮಾಂ ಸೃಷ್ಟಿಂ ನಿರ್ಮಿಮೀತೇ ಸ್ಯಾತಾಮ್ ಏತೌ ದೋಷೌ ವೈಷಮ್ಯಂ ನೈರ್ಘೃಣ್ಯಂ ಚ । ನ ತು ನಿರಪೇಕ್ಷಸ್ಯ ನಿರ್ಮಾತೃತ್ವಮಸ್ತಿ । ಸಾಪೇಕ್ಷೋ ಹಿ ಈಶ್ವರಃ ವಿಷಮಾಂ ಸೃಷ್ಟಿಂ ನಿರ್ಮಿಮೀತೇ । ಕಿಮ್ ಅಪೇಕ್ಷತೇ ಇತಿ ಚೇತ್ । ಧರ್ಮಾಧರ್ಮೌ ಅಪೇಕ್ಷತೇ ಇತಿ ವದಾಮಃ । ಅತಃ ಸೃಜ್ಯಮಾನಪ್ರಾಣಿಧರ್ಮಾಧರ್ಮಾಪೇಕ್ಷಾ ವಿಷಮಾ ಸೃಷ್ಟಿಃ ಇತಿ ನಾಯಮ್ ಈಶ್ವರಸ್ಯ ಅಪರಾಧಃ । ಈಶ್ವರಸ್ತು ಪರ್ಜನ್ಯವತ್ ದ್ರಷ್ಟವ್ಯಃ । ಯಥಾ ಹಿ ಪರ್ಜನ್ಯೋ ವ್ರೀಹಿಯವಾದಿಸೃಷ್ಟೌ ಸಾಧಾರಣಂ ಕಾರಣಂ ಭವತಿ । ವ್ರೀಹಿಯವಾದಿವೈಷಮ್ಯೇ ತು ತತ್ತದ್ಬೀಜಗತಾನ್ಯೇವ ಅಸಾಧಾರಣಾನಿ ಸಾಮರ್ಥ್ಯಾನಿ ಕಾರಣಾನಿ ಭವನ್ತಿ । ಏವಮ್ ಈಶ್ವರಃ ದೇವಮನುಷ್ಯಾದಿ ಸೃಷ್ಟೌ ಸಾಧಾರಣಂ ಕಾರಣಂ ಭವತಿ । ದೇವಮನುಷ್ಯಾದಿವೈಷಮ್ಯೇ ತು ತತ್ತಜ್ಜೀವಗತಾನ್ಯೇವ ಅಸಾಧಾರಣಾನಿ ಕರ್ಮಾಣಿ ಕಾರಣಾನಿ ಭವನ್ತಿ । ಏವಮ್ ಈಶ್ವರಃ ಸಾಪೇಕ್ಷತ್ವಾತ್ ನ ವೈಷಮ್ಯನೈರ್ಘೃಣ್ಯಾಭ್ಯಾಂ ದುಷ್ಯತಿ । ಕಥಂ ಪುನರವಗಮ್ಯತೇ ಸಾಪೇಕ್ಷ ಈಶ್ವರೋ ನೀಚಮಧ್ಯಮೋತ್ತಮಂ ಸಂಸಾರಂ ನಿರ್ಮಿಮೀತೇ ಇತಿ ? ತಥಾ ಹಿ ದರ್ಶಯತಿ ಶ್ರುತಿಃ—"ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತ ಏಷ ಉ ಏವಾಸಾಧು ಕರ್ಮ ಕಾರಯತಿ ತಂ ಯಮಧೋ ನಿನೀಷತೇ" (ಕೌ. ಬ್ರಾ. ೩–೮) ಇತಿ । "ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ" (ಬೃ. ೩–೨–೧೩) ಇತಿ ಚ । ಸ್ಮೃತಿರಪಿ ಪ್ರಾಣಿಕರ್ಮ ವಿಶೇಷಾಪೇಕ್ಷಮೇವ ಈಶ್ವರಸ್ಯ ಅನುಗೃಹೀತೃತ್ವಂ ನಿಗೃಹೀತೃತ್ವಂ ಚ ದರ್ಶಯತಿ "ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ (ಗೀ. ೪–೧೧) ಇತ್ಯೇವಂಜಾತೀಯಕಾ ॥

(ಭಾಷ್ಯಾರ್ಥ)

ಹೀಗೆಂಬ (ಪೂರ್ವಪಕ್ಷವು) ಬಂದೊದಗಲಾಗಿ ಹೇಳುತ್ತೇವೆ. ಈಶ್ವರನಿಗೆ ವೈಷಮ್ಯನೈರ್ಘೃಣ್ಯಗಳು ಪ್ರಸಕ್ತವಾಗುವದಿಲ್ಲ. ಏಕೆ ? ಎಂದರೆ ಸಾಪೇಕ್ಷನಾಗಿ

ರುವದರಿಂದ. (ಇದರ ವಿವರ) : ಈಶ್ವರನು ಮತ್ತೇತರ ಅಪೇಕ್ಷೆಯೂ ಇಲ್ಲದೆ ತಾನೊಬ್ಬನೇ ವಿಷಮವಾದ ಸೃಷ್ಟಿಯನ್ನು ನಿರ್ಮಿಸುವನೆಂದರೆ ವೈಷಮ್ಯ, ನೈರ್ಘೃಣ್ಯ - ಎಂಬೀ ದೋಷಗಳು ಉಂಟಾಗಬಹುದು. ಆದರೆ ಮತ್ತೇನನ್ನೂ ಬಯಸದೆ (ಈಶ್ವರನಿಗೆ) ಪ್ರಷ್ಟೃತ್ವವುಂಟಾಗುವದಿಲ್ಲ. ಏಕೆಂದರೆ ಈಶ್ವರನು ಸಾಪೇಕ್ಷನಾಗಿಯೇ ವಿಷಮಸೃಷ್ಟಿಯನ್ನು ನಿರ್ಮಿಸುತ್ತಾನೆ. ಏನನ್ನು ಅಪೇಕ್ಷಿಸುತ್ತಾನೆ ? ಎಂದರೆ ಧರ್ಮಾಧರ್ಮಗಳನ್ನು (ಅಪೇಕ್ಷಿಸುತ್ತಾನೆ) ಎನ್ನುತ್ತೇವೆ. ಆದಕಾರಣ ಹೆಚ್ಚುಕಡಿಮೆಯಾಗಿರುವ ಸೃಷ್ಟಿಯು ಸೃಜಿಸಬೇಕಾಗಿರುವ ಪ್ರಾಣಿಗಳ ಧರ್ಮಾಧರ್ಮಗಳ ಅಪೇಕ್ಷೆಯಿಂದ (ಆದದ್ದಾ)ಗಿರುವದರಿಂದ ಇದು ಈಶ್ವರನ ತಪ್ಪಲ್ಲ. ಈಶ್ವರನಾದರೋ ಮಳೆಯಂತೆ ಎಂದು ತಿಳಿಯಬೇಕು. ಹೇಗೆ ಮಳೆಯು ಬತ್ತ, ಜವೆಗೋಧಿ –ಮುಂತಾದವುಗಳ ಸೃಷ್ಟಿಗೆ ಸಾಧಾರಣ ಕಾರಣವಾಗಿರುತ್ತದೆಯೋ, ಬತ್ತ, ಜವೆಗೋಧಿ – ಮುಂತಾದವುಗಳ ತಾರತಮ್ಯಕ್ಕೆ ಮಾತ್ರ ಆಯಾ ಬೀಜಗಳಲ್ಲಿರುವ ಅಸಾಧಾರಣಶಕ್ತಿಗಳೇ ಕಾರಣವಾಗಿರುವವೋ, ಹಾಗೆಯೇ ಈಶ್ವರನು ದೇವತೆಗಳು, ಮನುಷ್ಯರು– ಮುಂತಾದವರ ಸೃಷ್ಟಿಗೆ ಸಾಧಾರಣಕಾರಣನು. ದೇವತೆಗಳು, ಮನುಷ್ಯರು– ಮುಂತಾದ ತಾರತಮ್ಯಕ್ಕೋ ಎಂದರೆ ಆಯಾ ಜೀವರುಗಳಲ್ಲಿರುವ ಅಸಾಧಾರಣಕರ್ಮಗಳೇ ಕಾರಣವಾಗಿರುತ್ತವೆ. ಹೀಗೆ ಈಶ್ವರನು ಸಾಪೇಕ್ಷನಾಗಿರುವದರಿಂದ ವೈಷಮ್ಯ ನೈರ್ಘೃಣ್ಯಗಳಿಂದ (ಅವನಲ್ಲಿ) ದೋಷವುಂಟಾಗುವದಿಲ್ಲ.

(ಪ್ರಶ್ನೆ) :– ಈಶ್ವರನು (ಕರ್ಮ)ಸಾಪೇಕ್ಷನಾಗಿ ಕೀಳು, ನಡುತರ, ಮೇಲ್ತರದ್ದು ಎಂಬ (ವಿಭಾಗದ) ಸಂಸಾರವನ್ನು ನಿರ್ಮಿಸುತ್ತಾನೆಂದು ಹೇಗೆ ಗೊತ್ತಾಗುತ್ತದೆ ?

(ಪರಿಹಾರ) :– ಹಾಗೆಂದೇ "ಯಾವನನ್ನು ಈ ಲೋಕಗಳಿಂದ ಮೇಲಕ್ಕೇರಿಸಲಿಚ್ಛಿಸುವನೋ ಅವನಿಂದ ಇವನೇ ಒಳ್ಳೆಯ ಕರ್ಮವನ್ನು ಮಾಡಿಸುತ್ತಾನೆ; ಯಾವನನ್ನು ಕೆಳಕ್ಕಿಳಿಸಲಿಚ್ಛಿಸುತ್ತಾನೋ ಅವನಿಂದ ಇವನೇ ಕೆಟ್ಟ ಕರ್ಮವನ್ನು ಮಾಡಿಸುತ್ತಾನೆ" (ಕೌ. ೩–೮) ಎಂದು ಶ್ರುತಿ ಹೇಳುತ್ತದೆ. "ಪುಣ್ಯಕರ್ಮದಿಂದ ಪುಣ್ಯವೇ ಆಗುತ್ತದೆ, ಪಾಪ(ಕರ್ಮ)ದಿಂದ ಪಾಪವಾಗುತ್ತದೆ" (ಬೃ. ೩–೨–೧೩) ಎಂದೂ (ಹೇಳುತ್ತದೆ)[1]. "ಯಾರು ನನ್ನನ್ನು ಹೇಗೆ ಭಜಿಸುತ್ತಾರೋ ಅವರಿಗೆ ಹಾಗೆಯೇ ಫಲವನ್ನು ಕೊಡುವೆನು" (ಗೀ. ೪–೧೧) ಎಂಬೀ ಜಾತಿಯ ಸ್ಮೃತಿಯೂ ಜೀವರ ಆಯಾ ಕರ್ಮವನ್ನು

1. ಈಶ್ವರನು ಕರ್ಮಕ್ಕೆ ಸಾಧಾರಣಕಾರಣವಾದರೂ ಅಸಾಧಾರಣಕಾರಣಗಳಿಂದ ಆಯಾ ಕರ್ಮವನ್ನು ಮಾಡಿ ಆಯಾ ಕರ್ಮಕ್ಕೆ ಈಶ್ವರನು ಕೊಡುವ ಫಲವನ್ನು ಅನುಭವಿಸುತ್ತಾರೆ ಎಂದು ಶ್ರುತಿಗಳ ಅರ್ಥ. ಈಶ್ವರನು ಮಾಡಿಸುತ್ತಾನೆಂಬದರ ಅಭಿಪ್ರಾಯವನ್ನು ೨–೩–೪೨ರ ಭಾಷ್ಯದಲ್ಲಿ ವಿವರಿಸಿದೆ.

ಅಪೇಕ್ಷಿಸಿಯೇ ಈಶ್ವರನು ಅನುಗ್ರಹಮಾಡುತ್ತಾನೆ, ಮತ್ತು ನಿಗ್ರಹವನ್ನು ಮಾಡುತ್ತಾನೆ ಎಂದು ತಿಳಿಸುತ್ತದೆ.

**ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್ ॥ ೩೫ ॥**

೩೫. ಅವಿಭಾಗವಿರುವದರಿಂದ ಕರ್ಮವಿಲ್ಲ ಎಂದರೆ ಹಾಗಲ್ಲ; ಏಕೆಂದರೆ ಅನಾದಿಯಾಗಿರುತ್ತದೆ.

## ಸಂಸಾರವು ಅನಾದಿಯಾದ್ದರಿಂದ ಹಿಂದಿನ ಕರ್ಮವು ಇದ್ದೇ ಇರುತ್ತದೆ

(ಭಾಷ್ಯ)

೪೭೪. "ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್" (ಛಾಂ. ೬-೨-೧) ಇತಿ ಪ್ರಾಕ್ ಸೃಷ್ಟೇಃ ಅವಿಭಾಗಾವಧಾರಣಾತ್ ನಾಸ್ತಿ ಕರ್ಮ ಯತ್ ಅಪೇಕ್ಷ್ಯ ವಿಷಮಾ ಸೃಷ್ಟಿಃ ಸ್ಯಾತ್। ಸೃಷ್ಟ್ಯುತ್ತರಕಾಲಂ ಹಿ ಶರೀರಾದಿವಿಭಾಗಾಪೇಕ್ಷಂ ಕರ್ಮ ಕರ್ಮಾಪೇಕ್ಷಶ್ಚ ಶರೀರಾದಿವಿಭಾಗಃ ಇತಿ ಇತರೇತರಾಶ್ರಯತ್ವಂ ಪ್ರಸಜ್ಯೇತ। ಅತಃ ವಿಭಾಗಾತ್ ಊರ್ಧ್ವಂ ಕರ್ಮಾಪೇಕ್ಷ ಈಶ್ವರಃ ಪ್ರವರ್ತತಾಂ ನಾಮ। ಪ್ರಾಗ್ ವಿಭಾಗಾತ್ ವೈಚಿತ್ರ್ಯನಿಮಿತ್ತಸ್ಯ ಕರ್ಮಣಃ ಅಭಾವಾತ್ ತುಲ್ಯೈವ ಆದ್ಯಾ ಸೃಷ್ಟಿಃ ಪ್ರಾಪ್ನೋತಿ ಇತಿ ಚೇತ್। ನೈಷ ದೋಷಃ। ಅನಾದಿತ್ವಾತ್ ಸಂಸಾರಸ್ಯ। ಭವೇತ್ ಏಷ ದೋಷಃ ಯದಿ ಆದಿಮಾನ್ ಸಂಸಾರಃ ಸ್ಯಾತ್। ಅನಾದೌ ತು ಸಂಸಾರೇ ಬೀಜಾಙ್ಕುರವತ್ ಹೇತುಹೇತುಮದ್ಭಾವೇನ ಕರ್ಮಣಃ ಸರ್ಗವೈಷಮ್ಯಸ್ಯ ಚ ಪ್ರವೃತ್ತಿರ್ನ ವಿರುಧ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :- "ಇದು ಮೊದಲು ತನಗೆರಡನೆಯದಿಲ್ಲದ ಸತ್ತೊಂದೇ ಆಗಿತ್ತು" (ಛಾಂ. ೬-೨-೧) ಎಂದು ಸೃಷ್ಟಿಯಾಗುವ ಮುಂಚೆ ಅವಿಭಾಗವನ್ನು ಒತ್ತಿಹೇಳುವದರಿಂದ (ಆಗ) ಕರ್ಮವೇ ಇರುವದಿಲ್ಲ; ಇದ್ದರಲ್ಲವೆ, ಅದರ ಅಪೇಕ್ಷೆಯಿಂದ ಬೇರೆಬೇರೆಯ ತರದ ಸೃಷ್ಟಿಯಾಗಬಹುದಾಗುವದು ? ಏಕೆಂದರೆ ಸೃಷ್ಟಿಯಾದ ಮೇಲಿನ ಕಾಲದಲ್ಲಿಯೇ, ಶರೀರಾದಿವಿಭಾಗಗಳನ್ನು ಅಪೇಕ್ಷಿಸಿ ಕರ್ಮ, ಕರ್ಮವನ್ನು ಅಪೇಕ್ಷಿಸಿಯೇ ಶರೀರಾದಿವಿಭಾಗ -ಎಂದು ಅನ್ಯೋನ್ಯಾಶ್ರಯವು ಪ್ರಸಕ್ತವಾಗುತ್ತದೆ.[1] ಆದ್ದರಿಂದ (ಈ) ವಿಭಾಗವುಂಟಾದ

1. ಸೃಷ್ಟಿಯಾದ ಬಳಿಕ ಕರ್ಮವಾಗಬೇಕು, ಆ ಕರ್ಮಕ್ಕೆ ಮೊದಲು ಶರೀರವಿರಬೇಕು. ಆದರೆ ಸೃಷ್ಟಿಯ ಆದಿಯಲ್ಲಿ ಮೊದಲು ಶರೀರವು ಇನ್ನೂ ಉಂಟಾಗದಿರುವಾಗ ಕರ್ಮವು ಹೇಗಾಗಬೇಕು ? ಕರ್ಮವಿಲ್ಲದೆ ಶರೀರವುಂಟಾಗುವವಾದರೂ ಹೇಗೆ ?

ಮೇಲೆ[1] ಕರ್ಮಾಪೇಕ್ಷನಾಗಿ ಈಶ್ವರನು (ಫಲವನ್ನು ಕೊಡುವದಕ್ಕೆ) ತೊಡಗಿದರೆ ತೊಡಗಲಿ! ವಿಭಾಗವಾಗುವದಕೆ ಮೊದಲು ವೈಚಿತ್ರ್ಯಕ್ಕೆ ಕಾರಣವಾದ ಕರ್ಮವೇ ಇಲ್ಲದ್ದರಿಂದ ಮೊದಲನೆಯ ಸೃಷ್ಟಿಯು ಸಮಾನವೇ (ಆಗಿರುತ್ತದೆ) ಎಂದಾಗುವದಲ್ಲ[2]!

(ಸಮಾಧಾನ) :- ಇದು ದೋಷವಲ್ಲ. ಏಕೆಂದರೆ ಸಂಸಾರವು ಅನಾದಿಯಾಗಿರುತ್ತದೆ (ಇದರ ವಿವರ). ಸಂಸಾರವು ಆದಿಯುಳ್ಳದ್ದು ಎಂದಾದರೆ ಈ ದೋಷವುಂಟಾಗುತ್ತಿತ್ತು. ಆದರೆ ಸಂಸಾರವು ಅನಾದಿಯಾಗಿರುವಲ್ಲಿ ಬೀಜಾಂಕುರಗಳಂತೆ ಒಂದಕ್ಕೊಂದು ಹೇತುವೂ ಫಲವೂ ಆಗಿರುವದರಿಂದ ಕರ್ಮವೂ ಸೃಷ್ಟಿವೈಷಮ್ಯವೂ ಪ್ರವರ್ತಿಸುತ್ತಿರುವದು ವಿರುದ್ಧವಾಗಿರುವದಿಲ್ಲ.[3]

**ಉಪಪದ್ಯತೇ ಚಾಪ್ಯುಪಲಭ್ಯತೇ ಚ ॥ ೩೬ ॥**

೩೬. ಯುಕ್ತವಾಗಿಯೂ ಇರುತ್ತದೆ, ಕಂಡೂಬರುತ್ತಿದೆ.

## ಸಂಸಾರವು ಅನಾದಿ ಎಂಬುದಕ್ಕೆ ಯುಕ್ತಿ

(ಭಾಷ್ಯ)

೪೭೫. ಕಥಂ ಪುನರವಗಮ್ಯತೇ ಅನಾದಿರೇಷ ಸಂಸಾರ ಇತಿ? ಅತ ಉತ್ತರಂ ಪಠತಿ (ಉಪಪದ್ಯತೇ ಚಾಪ್ಯುಪಲಭ್ಯತೇ ಚ।) ಉಪಪದ್ಯತೇ ಚ ಸಂಸಾರಸ್ಯ ಅನಾದಿತ್ವಮ್। ಆದಿಮತ್ತ್ವೇ ಹಿ ಸಂಸಾರಸ್ಯ ಅಕಸ್ಮಾತ್ ಉದ್ಭೂತೇಃ ಮುಕ್ತಾನಾಮಪಿ ಪುನಃ ಸಂಸಾರೋದ್ಭೂತಿಪ್ರಸಙ್ಗಃ, ಅಕೃತಾಭ್ಯಾಗಮಪ್ರಸಙ್ಗಶ್ಚ। ಸುಖದುಃಖಾದಿವೈಷಮ್ಯಸ್ಯ ನಿರ್ನಿಮಿತ್ತತ್ವಾತ್। ನ ಚ ಈಶ್ವರೋ ವೈಷಮ್ಯಹೇತುಃ ಇತ್ಯುಕ್ತಮ್। ನ ಚ ಅವಿದ್ಯಾ ಕೇವಲಾ ವೈಷಮ್ಯಸ್ಯ ಕಾರಣಮ್। ಏಕರೂಪತ್ವಾತ್। ರಾಗಾದಿಕ್ಲೇಶವಾಸನಾಕ್ಷಿಪ್ತಕರ್ಮಾಪೇಕ್ಷಾ ತು ಅವಿದ್ಯಾ ವೈಷಮ್ಯಕರೀ ಸ್ಯಾತ್। ನ ಚ ಕರ್ಮ ಅನ್ತರೇಣ ಶರೀರಂ

1. ಒಂದು ಸೃಷ್ಟಿಯು ಆಗಿ ಶರೀರೇಂದ್ರಿಯಗಳೆಂಬ ವಿಭಾಗವಾದ ಮೇಲೆ.

2. ಮೊದಲನೆಯ ಸೃಷ್ಟಿಯಲ್ಲಿ ವೈಚಿತ್ರ್ಯವಿರುವದಕ್ಕೆ ಕಾರಣವಾಗಿ ಅದರ ಹಿಂದೆ ಯಾವ ಕರ್ಮವೂ ಇರುವದಿಲ್ಲ. ಆದ್ದರಿಂದ ಆ ಸೃಷ್ಟಿಯಲ್ಲಿ ಎಲ್ಲವೂ ಏಕರೂಪವಾಗಿರಬೇಕಾಗುವದು. ಆದ್ದರಿಂದ ಮುಂದಿನ ಸೃಷ್ಟಿಯಲ್ಲಿಯೂ ಹಾಗೆಯೇ ಇರಬೇಕಾಗುವದು ಎಂದು ಅಭಿಪ್ರಾಯ.

೩. ಈ ಸೃಷ್ಟಿಯ ಹಿಂದೆ ಅನೇಕ ಸೃಷ್ಟಿಗಳಾಗಿರುತ್ತವೆ, ಇನ್ನು ಮುಂದೆಯೂ ಆಗುವವು. ಆದ್ದರಿಂದ ಈ ಸೃಷ್ಟಿಯಲ್ಲಿ ಉಂಟಾಗುವ ಶರೀರಗಳಿಗೆ ಹಿಂದಿನ ಕರ್ಮವು ಕಾರಣ; ಮುಂದಿನ ಶರೀರಗಳಿಗೆ ಈಗಿನ ಕರ್ಮವು ಕಾರಣ; ಆ ಮುಂದೆ ಬರುವ ಶರೀರಗಳಿಗೆ ಆಗಿನ ಕರ್ಮವು ಕಾರಣ ಎನ್ನಬಹುದು ಎಂದು ಭಾವ.

ಸಂಭವತಿ, ನ ಚ ಶರೀರಮನ್ತರೇಣ ಕರ್ಮ ಸಂಭವತಿ ಇತಿ ಇತರೇತರಾಶ್ರಯತ್ವ ಪ್ರಸಙ್ಗಃ । ಅನಾದಿತ್ವೇ ತು ಬೀಜಾಙ್ಕುರನ್ಯಾಯೇನ ಉಪಪತ್ತೇಃ ನ ಕಶ್ಚಿದ್ ದೋಷೋ ಭವತಿ ॥

(ಭಾಷ್ಯಾರ್ಥ)

(ಪ್ರಶ್ನೆ) :– ಈ ಸಂಸಾರವು ಅನಾದಿ ಎಂಬುದು ಹೇಗೆ ಗೊತ್ತಾಗುತ್ತದೆ?

(ಉತ್ತರ) :– ಇದಕ್ಕೆ (ಸೂತ್ರಕಾರರು) ಉತ್ತರವನ್ನು ಹೇಳುತ್ತಾರೆ. (ಉಪಪದ್ಯತೇ ಚಾಪ್ಯುಪಲಭ್ಯತೇ ಚ।) ಸಂಸಾರವು ಅನಾದಿ ಎಂಬುದು ಯುಕ್ತವೂ ಆಗಿರುತ್ತದೆ ಹೇಗೆಂದರೆ, ಸಂಸಾರವು ಆದಿಯುಳ್ಳದ್ದಾಗಿದ್ದರೆ ಯಾವ ಕಾರಣವೂ ಇಲ್ಲದೆ ಹುಟ್ಟಬಹುದಾದ್ದರಿಂದ ಮುಕ್ತರಾದವರೂ ಮತ್ತೆ ಹುಟ್ಟಬಹುದೆಂದಾಗುವದು, ಮಾಡದೆ ಇರುವ (ಕರ್ಮದ ಫಲವು) ಬರುವ ಪ್ರಸಕ್ತಿಯೂ[1] ಉಂಟು. ಏಕೆಂದರೆ (ಆಗ) ಸುಖದುಃಖಾದಿಗಳ ವೈಚಿತ್ರ್ಯಕ್ಕೆ ಯಾವ ನಿಮಿತ್ತವೂ ಇಲ್ಲ(ವೆಂದಾಗುತ್ತದೆ). ಈಶ್ವರನು (ಈ) ವೈಷಮ್ಯಕ್ಕೆ ಕಾರಣನಲ್ಲ ಎಂದು (ಹಿಂದೆಯೇ) ಹೇಳಿದ್ದಾಗಿದೆ. **ಬರಿಯ ಅವಿದ್ಯೆಯೂ (ಈ) ವೈಷಮ್ಯಕ್ಕೆ ಕಾರಣವಲ್ಲ; ಏಕೆಂದರೆ (ಅದು) ಒಂದೇ ರೂಪವಾಗಿರುತ್ತದೆ. ರಾಗಾದಿಕ್ಲೇಶಗಳ ವಾಸನೆಯಿಂದ ಆಕ್ಷಿಪ್ತವಾದ ಕರ್ಮದ ಅಪೇಕ್ಷೆಯುಳ್ಳದ್ದಾಗಿ ಅವಿದ್ಯೆಯು ವೈಷಮ್ಯಕ್ಕೆ ಕಾರಣವಾಗಬಹುದು[2].** (ಆಗ) ಕರ್ಮವು ಶರೀರವಿಲ್ಲದೆ ಉಂಟಾಗುವದು, ಶರೀರವಿಲ್ಲದೆ ಕರ್ಮವೂ ಉಂಟಾಗುವಹಾಗಿಲ್ಲ ಎಂದು ಅನ್ಯೋನ್ಯಾಶ್ರಯತ್ವವು ಪ್ರಸಕ್ತವಾಗುವದು[3]. ಆದರೆ ಸಂಸಾರವು ಅನಾದಿ (ಎಂಬ ಪಕ್ಷದಲ್ಲಿ ಈ) ಯಾವ ದೋಷವೂ ಉಂಟಾಗುವದಿಲ್ಲ[4].

---

1. ಗೀ. ಭಾ. ೮–೧೯ರ ಅವತರಣಿಕೆಯನ್ನು ನೋಡಿ.

2. ಅವಿದ್ಯೆಯಿಂದ ರಾಗದ್ವೇಷಗಳು, ರಾಗದ್ವೇಷಗಳಿಂದ ಕರ್ಮಗಳು, ಅವುಗಳು ವೈಷಮ್ಯಕ್ಕೆ ಹೇತು – ಎಂದು ಅವಿದ್ಯೆಯು ಪರಂಪರೆಯಿಂದ ಕಾರಣವಾಗಬಹುದು ಎಂದರ್ಥ. ಬೃ ೧–೪–೧೭ರ ಅವತರಣಿಕೆಯನ್ನು ನೋಡಿ.

3. ಇದನ್ನು ಹಿಂದಿನ ಸೂತ್ರದ ಭಾಷ್ಯದಲ್ಲಿಯೇ ತಿಳಿಸಿದೆ.

4. ಏಕೆಂದರೆ ಸಂಸಾರವು ಅನಾದಿಯಾಗಿರುವದರಿಂದ ಕಾರಣವಿಲ್ಲದೆ ಹುಟ್ಟುವದೆಂಬ ದೋಷವಿಲ್ಲ ; ಮುಕ್ತರಿಗೆ ಅವಿದ್ಯೆಯು ನಾಶವಾಗಿರುವದರಿಂದ ಪುನರಾವೃತ್ತಿಯಿಲ್ಲ. ಕರ್ಮಗಳ ಪರಂಪರೆಯು ಇದ್ದೇ ಇರುವದರಿಂದ ಅಕೃತಾಭ್ಯಾಗಮದೋಷವಿಲ್ಲ ; ಸುಖದುಃಖವೈಚಿತ್ರ್ಯಕ್ಕೆ ಕಾರಣವಿಲ್ಲವೆಂಬುದೂ ಇಲ್ಲ. ಹಿಂದುಹಿಂದಿನ ಶರೀರವು ಮುಂದುಮುಂದಿನ ಶರೀರವನ್ನು ಕೊಡುವ ಕರ್ಮಕ್ಕೆ ಆಶ್ರಯವಾಗಿರುವದರಿಂದ ಅನ್ಯೋನ್ಯಾಶ್ರಯತ್ವಾದಿದೋಷವಿಲ್ಲ. ಅನಾದಿತ್ವವು ವ್ಯಾವಹಾರಿಕವಾಗಿರುವದರಿಂದ ವಿದ್ಯೆಯಿಂದ ಸಂಸಾರಬಂಧವು ನಾಶವಾಗಲೂ ಬಹುದಾಗಿದೆ – ಎಂದರ್ಥ.

# ಸಂಸಾರಾನಾದಿತ್ವವು ಶ್ರುತಿಸ್ಮೃತಿಗಳಲ್ಲಿ ಕಂಡಿದೆ

(ಭಾಷ್ಯ)

೪೭೬. ಉಪಲಭ್ಯತೇ ಚ ಸಂಸಾರಸ್ಯ ಅನಾದಿತ್ವಂ ಶ್ರುತಿಸ್ಮೃತ್ಯೋಃ। ಶ್ರುತೌ ತಾವತ್ "ಅನೇನ ಜೀವೇನಾತ್ಮನಾ" (ಛಾಂ. ೬-೩-೨) ಇತಿ ಸರ್ಗಪ್ರಮುಖೇ ಶಾರೀರಮ್ ಆತ್ಮಾನಂ ಜೀವಶಬ್ದೇನ ಪ್ರಾಣಧಾರಣನಿಮಿತ್ತೇನ ಅಭಿಲಪನ್ ಅನಾದಿಃ ಸಂಸಾರ ಇತಿ ದರ್ಶಯತಿ। ಆದಿಮತ್ತ್ವೇ ತು ಪ್ರಾಕ್ ಅನವಧಾರಿತಪ್ರಾಣಃ ಸನ್ ಕಥಂ ಪ್ರಾಣಧಾರಣನಿಮಿತ್ತೇನ ಜೀವಶಬ್ದೇನ ಸರ್ಗಪ್ರಮುಖೇ ಅಭಿಲಪ್ಯೇತ ? ನ ಚ ಧಾರಯಿಷ್ಯತಿ ಇತ್ಯತಃ ಅಭಿಲಪ್ಯೇತ। ಅನಾಗತಾದ್ ಹಿ ಸಂಬನ್ಧಾತ್ ಅತೀತಃ ಸಂಬನ್ಧೋ ಬಲವಾನ್ ಭವತಿ। ಅಭಿನಿಷ್ಪನ್ನತ್ವಾತ್। "ಸೂರ್ಯಾಚನ್ದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್" (ಋ. ಸಂ. ೧೦-೧೯೦-೩) ಇತಿ ಚ ಮನ್ತ್ರವರ್ಣಃ ಪೂರ್ವಕಲ್ಪಸದ್ಭಾವಂ ದರ್ಶಯತಿ। ಸ್ಮೃತಾವಪಿ ಅನಾದಿತ್ವಂ ಸಂಸಾರಸ್ಯ ಉಪಲಭ್ಯತೇ — "ನ ರೂಪಮಸ್ಯೇಹ ತಥೋಪಲಭ್ಯತೇ ನಾನ್ತೋ ನ ಚಾದಿರ್ನ ಚ ಸಂಪ್ರತಿಷ್ಠಾ" (ಗೀ. ೧೫-೩) ಇತಿ। ಪುರಾಣೇ ಚ ಅತೀತಾನಾಗತಾನಾಂ ಚ ಕಲ್ಪಾನಾಂ ನ ಪರಿಮಾಣಮ್ ಅಸ್ತಿ ಇತಿ ಸ್ಥಾಪಿತಮ್ ॥

(ಭಾಷ್ಯಾರ್ಥ)

ಸಂಸಾರವು ಅನಾದಿ ಎಂಬುದು ಶ್ರುತಿಸ್ಮೃತಿಗಳಲ್ಲಿ ಕಂಡುಬರುತ್ತಿದೆ. ಮೊದಲನೆಯದಾಗಿ ಶ್ರುತಿಯಲ್ಲಿ "ಈ ಜೀವನೆಂಬ ಆತ್ಮನಿಂದ" (ಛಾಂ. ೬-೩-೨) ಎಂದು ಸೃಷ್ಟಿಯ ಪ್ರಾರಂಭದಲ್ಲಿ ಶಾರೀರಾತ್ಮನನ್ನು ಪ್ರಾಣಧಾರಣವೆಂಬ ನಿಮಿತ್ತವುಳ್ಳ ಜೀವಶಬ್ದದಿಂದ[1] ಹೇಳಿರುವದರಿಂದ ಸಂಸಾರವು ಅನಾದಿಯೆಂದು ಹೇಳಿದಂತಾಗಿದೆ.[2] ಆದಿಯುಳ್ಳದ್ದೆಂಬ (ಪಕ್ಷ)ದಲ್ಲಿಯಾದರೆ ಮೊದಲೇ ಪ್ರಾಣ(ವಿರುವದನ್ನು) ನಿಶ್ಚಯಿಸಿಲ್ಲವಾದ್ದರಿಂದ ಪ್ರಾಣಧಾರಣವೆಂಬ ನಿಮಿತ್ತವುಳ್ಳ ಜೀವಶಬ್ದದಿಂದ ಸೃಷ್ಟಿಯ ಪ್ರಾರಂಭದಲ್ಲಿ ಹೇಗೆ ತಾನೆ ಹೇಳಬಹುದು ? ಮುಂದೆ (ಪ್ರಾಣವನ್ನು) ಧರಿಸುವನೆಂಬ ಕಾರಣದಿಂದ ಹೇಳಬಹುದು ಎಂಬುದು ಸರಿಯಲ್ಲ ; ಏಕೆಂದರೆ ಮುಂದೆ ಆಗುವ ಸಂಬಂಧಕ್ಕಿಂತಲೂ ಆಗಿಹೋಗಿರುವ ಸಂಬಂಧವು ಬಲವತ್ತರವಾಗಿರುತ್ತದೆ ; ಏಕೆಂದರೆ

1. ಜೀವ್ ಎಂಬ ಧಾತುವಿಗೆ ಪ್ರಾಣವನ್ನು ಧರಿಸುವದು ಎಂಬುದು ಅರ್ಥವು.

2. ಏಕೆಂದರೆ ಸೃಷ್ಟಿಯ ಆರಂಭದಲ್ಲಿ ಪ್ರಾಣವಿಲ್ಲದಿದ್ದರೂ ಹಿಂದಿನ ಕಲ್ಪದಲ್ಲಿ ಆತ್ಮನು ಪ್ರಾಣವನ್ನು ಧರಿಸಿದ್ದನು.

(ಅತೀತಸಂಬಂಧವು) ಸಿದ್ಧವಾಗಿರುತ್ತದೆ.[1] "ಧಾತೃವು ಸೂರ್ಯಚಂದ್ರರನ್ನು ಮೊದಲಿನಂತೆಯೇ ಕಲ್ಪಿಸಿದನು" (ಋ. ಸಂ. ೧೦-೧೯೦-೩) ಎಂಬ ಮಂತ್ರವರ್ಣವೂ ಹಿಂದಿನ ಕಲ್ಪವು ಉಂಟೆಂಬುದನ್ನು ತಿಳಿಸುತ್ತದೆ.[2] **ಸ್ಮೃತಿಯಲ್ಲಿಯೂ** "ಇದಕ್ಕೆ ಇಲ್ಲಿ ಹಾಗಿರುವ ರೂಪವೂ ಕಾಣಬರುವದಿಲ್ಲ; ಅಂತವಾದರೂ ಇಲ್ಲ, ಆದಿಯೂ ಇಲ್ಲ, (ಈಗ್ಗೆ) ಸ್ಥಿತಿಯೂ (ಕಾಣುಬರುವದಿಲ್ಲ'' (ಗೀ. ೧೫-೩) ಎಂದು ಸಂಸಾರವು ಅನಾದಿಯು (ಎಂದು ಹೇಳಿರುವದು) ಕಂಡುಬರುತ್ತದೆ.[3] **ಪುರಾಣದಲ್ಲಿಯೂ** ಆಗಿಹೋಗಿರುವ ಮತ್ತು ಮುಂದೆ ಬರುವ **ಕಲ್ಪಗಳಿಗೆ** ಪರಿಮಿತಿಯಿಲ್ಲವೆಂದೇ ಸ್ಥಾಪಿಸಿರುತ್ತದೆ.[4]

## ೧೩. ಸರ್ವಧರ್ಮೋಪಪತ್ತ್ಯಧಿಕರಣ

(ಬ್ರಹ್ಮಕ್ಕೆ ಕಾರಣಧರ್ಮಗಳು ಹೊಂದುತ್ತವೆ)

**ಸರ್ವಧರ್ಮೋಪಪತ್ತೇಶ್ಚ ॥ ೩೭ ॥**

೩೭. ಎಲ್ಲಾ ಧರ್ಮಗಳೂ ಹೊಂದುವದರಿಂದಲೂ (ಹೀಗೆ).

## ಬ್ರಹ್ಮಕ್ಕೆ ಕಾರಣಧರ್ಮಗಳೆಲ್ಲ ಹೊಂದುತ್ತವೆ

(ಭಾಷ್ಯ)

೪೭೭. ಚೇತನಂ ಬ್ರಹ್ಮ ಜಗತಃ ಕಾರಣಂ ಪ್ರಕೃತಿಶ್ಚ ಇತ್ಯಸ್ಮಿನ್ ಅವಧಾರಿತೇ ವೇದಾರ್ಥೇ ಪರೈರುಪಕ್ಷಿಪ್ತಾನ್ ವಿಲಕ್ಷಣತ್ವಾದೀನ್ ದೋಷಾನ್ ಪರ್ಯಹಾರ್ಷೀತ್ ಆಚಾರ್ಯಃ । ಇದಾನೀಂ ಪರಪಕ್ಷಪ್ರತಿಷೇಧಪ್ರಧಾನಂ ಪ್ರಕರಣಂ ಪ್ರಾರಿಪ್ಸಮಾಣಃ ಸ್ವಪಕ್ಷಪರಿಗ್ರಹಪ್ರಧಾನಂ ಪ್ರಕರಣಮ್ ಉಪಸಂಹರತಿ । ಯಸ್ಮಾತ್ ಅಸ್ಮಿನ್ ಬ್ರಹ್ಮಣೇ ಕಾರಣೇ ಪರಿಗೃಹ್ಯಮಾಣೇ ಪ್ರದರ್ಶಿತೇನ ಪ್ರಕಾರೇಣ ಸರ್ವೇ ಕಾರಣಧರ್ಮಾಃ ಉಪಪದ್ಯನ್ತೇ ಸರ್ವಜ್ಞಂ ಸರ್ವಶಕ್ತಿಮಹಾಮಾಯಂ ಚ ಬ್ರಹ್ಮ ಇತಿ, ತಸ್ಮಾತ್ ಅನತಿಶಙ್ಕನೀಯಮ್ ಔಪನಿಷದಂ ದರ್ಶನಮ್ ಇತಿ ॥

---

1. ಹೊಸದಾಗಿ ಆಗಬೇಕಾದದ್ದಕ್ಕಿಂತ ಆಗಲೆ ಆಗಿರುವದು ಹೆಚ್ಚಿನ ಸಂಬಂಧವು.

2. ಈ ಸೃಷ್ಟಿಯೇ ಮೊದಲನೆಯದಲ್ಲವೆಂದು ಈ ಮಂತ್ರವು ಹೇಳುವದರಿಂದ ಅನಾದಿತ್ವವು ಏರ್ಪಡುತ್ತದೆ.

3. ಆದ್ಯಂತಗಳು ಕಾಣುವದಿಲ್ಲ ಎಂದದ್ದರಿಂದ ಅನಾದ್ಯನಂತವೆಂದಾಯಿತು. ವ್ಯವಹಾರದೃಷ್ಟಿಯಿಂದ ಅನಂತವಾದರೂ ಜ್ಞಾನದಿಂದ ಬಾಧಿತವಾಗಬಹುದೆಂಬುದನ್ನು ಇಲ್ಲಿ ನೆನಪಿಡಬೇಕು.

4. ಆದ್ದರಿಂದ ಶಬ್ದಪ್ರಮಾಣದಿಂದಲೂ ಯುಕ್ತಿಯಿಂದಲೂ ಸಂಸಾರಕ್ಕೆ ಅನಾದಿತ್ವವು ಸಿದ್ಧವಾಗುವದರಿಂದ ಕರ್ಮಾಪೇಕ್ಷನಾಗಿ ಜಗತ್ತನ್ನು ಸೃಜಿಸುವ ಈಶ್ವರನಿಗೆ ವೈಷಮ್ಯನೈರ್ಘೃಣ್ಯಗಳು ಇಲ್ಲ ಎಂದು ಉಪಸಂಹಾರ.

(ಭಾಷ್ಯಾರ್ಥ)

ಚೇತನವಾದ ಬ್ರಹ್ಮವು ಜಗತ್ತಿಗೆ ಕಾರಣವು, (ಅದು ಜಗತ್ತಿಗೆ) ಪ್ರಕೃತಿಯೂ ಆಗಿರುತ್ತದೆ ಎಂದು ವೇದಾರ್ಥವನ್ನು ನಿಶ್ಚಯಿಸಲಾಗಿ ಪರ(ವಾದಿ)ಗಳು ಹಾಕಿದ ವಿಲಕ್ಷಣತ್ವವೇ ಮುಂತಾದ ದೋಷಗಳನ್ನು **ಆಚಾರ್ಯರು** ಪರಿಹರಿಸಿರುತ್ತಾರೆ. ಇನ್ನು ಮತ್ತೊಬ್ಬರ ಪಕ್ಷವನ್ನು ಅಲ್ಲಗಳೆಯುವದೇ ಪ್ರಧಾನವಾಗಿರುವ ಪ್ರಕರಣವನ್ನು ಪ್ರಾರಂಭಿಸಬೇಕಾಗಿರುವದರಿಂದ ತಮ್ಮ ಪಕ್ಷವನ್ನು ಸ್ವೀಕರಿಸಬೇಕೆಂದು (ತಿಳಿಸುವದೇ) ಪ್ರಧಾನವಾಗಿರುವ (ಈ) ಪ್ರಕರಣವನ್ನು ಉಪಸಂಹಾರಮಾಡುತ್ತಿದಾರೆ :

ಈ ಬ್ರಹ್ಮವು ಕಾರಣವೆಂದು ಇಟ್ಟುಕೊಂಡರೆ (ಈವರೆಗೆ) ತೋರಿಸಿಕೊಟ್ಟಿರುವ ಪ್ರಕಾರದಿಂದ—ಬ್ರಹ್ಮವು ಸರ್ವಜ್ಞವೂ ಸರ್ವಶಕ್ತಿಯುಕ್ತವೂ ಮಹಾಮಾಯವೂ ಆಗಿರುವದರಿಂದ[1] —ಎಲ್ಲಾ ಕಾರಣಧರ್ಮಗಳೂ ಹೊಂದುತ್ತಿರುವವಲ್ಲವೆ ? ಈ ಕಾರಣದಿಂದ ಈ ಔಪನಿಷದದರ್ಶನ(ದ ವಿಷಯದಲ್ಲಿ ಯಾವ) ಅತಿಶಂಕೆಯನ್ನೂ ಮಾಡುವ ಹಾಗಿಲ್ಲ ಎಂದು ಅಭಿಪ್ರಾಯ.

ಇತಿ ಶ್ರೀ ಗೋವಿನ್ದಭಗವತ್ಪೂಜ್ಯಪಾದಶಿಷ್ಯ
ಶಂಕರಭಗವತ್ಪಾದಕೃತೌ ಶಾರೀರಕಮೀಮಾಂಸಾಭಾಷ್ಯೇ
ದ್ವಿತೀಯಾಧ್ಯಾಯಸ್ಯ ಪ್ರಥಮಃ ಪಾದಃ
ಸಮಾಪ್ತಃ[2]



1. ಸರ್ವಜ್ಞ, ಸರ್ವಶಕ್ತಿ, ಮಹಾಮಾಯ –ಎಂಬ ವಿಶೇಷಣಗಳು ಲೋಕಸಿದ್ಧವಾದ ಧರ್ಮಗಳಲ್ಲ ; ಇವುಗಳಿರುವದರಿಂದ ಕಾರಣಧರ್ಮಗಳೆಲ್ಲ ಹೊಂದುತ್ತವೆ ಎಂದು ಅಭಿಪ್ರಾಯ. ಅವಿದ್ಯಾಕಲ್ಪಿತನಾಮರೂಪಗಳೆಂಬ ಮಾಯೆಯಿಂದಲೇ ಬ್ರಹ್ಮವು ಜಗತ್ಕಾರಣವೆನಿಸಿರುತ್ತದೆ ಎಂಬುದೇ ಸಿದ್ಧಾಂತವಾಗಿರುವದರಿಂದ 'ಮಹಾಮಾಯಮ್' ಎಂಬಿದು ಬಹುಮುಖ್ಯವಿಶೇಷಣವು.

೨. ಈ ಸಮಾಪ್ತಿವಾಕ್ಯವು ಎಲ್ಲಾ ಪುಸ್ತಕಗಳಲ್ಲಿಯೂ ಒಂದೇ ಸಮನಾಗಿಲ್ಲ ; ಪೀಠಿಕೆಯನ್ನು ನೋಡಿ.

# ಅಧಿಕರಣಗಳ ಸಾರ

ಒಂದನೆಯ ಅಧ್ಯಾಯದ ಕೊನೆಯ ಪಾದದಲ್ಲಿ ಸಾಂಖ್ಯಾದಿದರ್ಶನಗಳು ಅವೈದಿಕವೆಂಬುದನ್ನು ತೋರಿಸಿಕೊಟ್ಟಿದೆ. ಎರಡನೆಯ ಅಧ್ಯಾಯದ ಈ ಮೊದಲನೆಯ ಪಾದದಲ್ಲಿ ವೇದಾಂತದರ್ಶನವು ಸಾಂಖ್ಯಾದಿಸ್ಮೃತಿಗಳಿಗೂ ಅವರ ನ್ಯಾಯಗಳಿಗೂ ವಿರುದ್ಧವಾಗಿದೆ ಎಂಬ ಆಕ್ಷೇಪವನ್ನು ಪರಿಹರಿಸಲಾಗಿರುತ್ತದೆ.

## ೧. ಸ್ಮೃತ್ಯಧಿಕರಣ

**ಸಂಶಯವೂ ಪೂರ್ವಪಕ್ಷವೂ :** ಬ್ರಹ್ಮಕಾರಣವಾದವು ಸ್ಮೃತಿವಿರುದ್ಧವೆ, ಅಲ್ಲವೆ? ಎಂಬ ಸಂಶಯವು ಬರಲಾಗಿ ಪೂರ್ವಪಕ್ಷವೇನೆಂದರೆ, ಕಪಿಲಪ್ರಣೀತವಾದ ತಂತ್ರವೆಂಬ ಸ್ಮೃತಿಗೂ ಅದಕ್ಕನುಗುಣವಾಗಿರುವ ಸ್ಮೃತಿಗಳಿಗೂ ಈ ವಾದವು ವಿರುದ್ಧವಾಗಿರುತ್ತದೆ. ಮನ್ವಾದಿಸ್ಮೃತಿಗಳು ಈ ವಾದಕ್ಕೆ ಅನುಗುಣವಾಗಿರುವದು ನಿಜ; ಆದರೆ ಅವಕ್ಕೆ ಕರ್ಮವೂ ವಿಷಯವಾಗಿವೆ. ಆದ್ದರಿಂದ ಅವುಗಳಲ್ಲಿರುವ ಜಗತ್ಕಾರಣವಾದವನ್ನು ತಳ್ಳಿಹಾಕಿದರೂ ಕರ್ಮವಿಷಯದಲ್ಲಿ ಅವು ಪ್ರಮಾಣವಾಗುವದಕ್ಕೆ ಅವಕಾಶವಿದೆ. ಕಪಿಲಾದಿಸ್ಮೃತಿಗಳಿಗೆ ಮೋಕ್ಷಸಾಧನವನ್ನು ತಿಳಿಸುವದೊಂದೇ ಕೆಲಸವಾದ್ದರಿಂದ ಅವುಗಳನ್ನು ಅಪ್ರಮಾಣವಾಗಿ ಮಾಡದೆ ಬ್ರಹ್ಮವಾದವನ್ನು ಒಪ್ಪುವದಕ್ಕೆ ಆಗುವದೇ ಇಲ್ಲ. ಆದ್ದರಿಂದ ಆ ಸ್ಮೃತಿಗಳು ನಿರವಕಾಶವಾಗದೆ ಇರುವದಕ್ಕಾಗಿ ಪರಮರ್ಷಿಗಳಾದ ಕಪಿಲಾದಿಗಳು ಮಾಡಿರುವ ಶ್ರುತ್ಯರ್ಥವು ತರ್ಕಯುಕ್ತವೂ ಆಗಿರುವದರಿಂದ ಆ ಸ್ಮೃತಿಗಳಿಗೆ ಅನುಗುಣವಾಗಿಯೇ ಶ್ರುತಿಗಳಿಗೆ ಅರ್ಥವನ್ನು ಮಾಡಬೇಕು. ಬ್ರಹ್ಮವು ಜಗತ್ಕಾರಣವೆಂಬ ವಾದವನ್ನು ಬಿಡಬೇಕು.

**ಸಿದ್ಧಾಂತ :** ಬ್ರಹ್ಮವು ಜಗತ್ಕಾರಣವೆಂಬ ವಾದವು ಸ್ಮೃತಿವಿರುದ್ಧವಲ್ಲ. ಏಕೆಂದರೆ ಮಹಾಭಾರತ, ಪುರಾಣಗಳು, ಭಗವದ್ಗೀತೆ, ಆಪಸ್ತಂಬಾದಿಸ್ಮೃತಿಗಳು –ಇವೆಲ್ಲವೂ ಈಶ್ವರನೇ ಜಗತ್ಕಾರಣವೆಂದು ಹೇಳುತ್ತಿವೆ. ಶ್ರುತಿಯಿಂದ ಸಿದ್ಧವಾಗಿರುವ ಸಿದ್ಧಾಂತವನ್ನು ಶ್ರುತಿವಿರುದ್ಧವಾದ ಸ್ಮೃತಿಗಳಿಂದ ತಳ್ಳಿಹಾಕುವದು ಸರಿಯಲ್ಲ. ಶ್ರುತಿಯಿಂದಲೇ ಧರ್ಮವೂ ಸರ್ವಜ್ಞತ್ವಾದಿಗಳ ಸಿದ್ಧಿಯೂ ಸಿಕ್ಕಬೇಕಾಗಿರುವದರಿಂದ ಶ್ರುತಿವಿರುದ್ಧವಾಗಿ ಹೇಳುವ ಯಾವನೂ ಪ್ರಮಾಣವಾಗಲಾರನು. ಆದ್ದರಿಂದ ಶ್ರುತಿಪ್ರಸಿದ್ಧಮಹಾತ್ಮರಾದ ಮನ್ವಾದಿಗಳ ಮತಕ್ಕೆ ವಿರುದ್ಧವಾಗಿ ಅನೇಕಾತ್ಮರನ್ನೂ ಸ್ವತಂತ್ರವಾದ ಪ್ರಧಾನವೆಂಬ ಜಗತ್ಕಾರಣವನ್ನೂ ಕಲ್ಪಿಸುವ ಕಾಪಿಲತಂತ್ರವು ವೇದವಿರುದ್ಧವೆಂಬ ಕಾರಣದಿಂದ ತಿರಸ್ಕರಿಸತಕ್ಕದ್ದು. ಅದರಲ್ಲಿ ಹೇಳಿರುವ ಮಹದಾದಿಗಳೂ ಶ್ರುತಿಸ್ಮೃತಿಗಳಲ್ಲಿ ಕಂಡುಬರುವದಿಲ್ಲ. ಆದ್ದರಿಂದ ಸಾಂಖ್ಯಸ್ಮೃತಿಯು ಪ್ರಮಾಣಾಭಾಸವಾಗಿವೆ. ಆದ್ದರಿಂದ ಬ್ರಹ್ಮಕಾರಣವಾದವು ಅವಕ್ಕೆ ವಿರುದ್ಧವಾಗಿದೆ ಎಂಬುದು ದೋಷವಲ್ಲ.

## ೨. ಯೋಗಪ್ರತ್ಯುಕ್ತ್ಯಧಿಕರಣ

**ಸಂಶಯವೂ ಪೂರ್ವಪಕ್ಷವೂ :** ಯೋಗಸ್ಮೃತಿಗೆ ವಿರುದ್ಧವಾಗಿರುವದರಿಂದಾದರೂ ಬ್ರಹ್ಮಕಾರಣವಾದವು ಸ್ಮೃತಿವಿರುದ್ಧವಾಗುವದೋ, ಇಲ್ಲವೊ –ಎಂಬ ಸಂಶಯಕ್ಕೆ ಪೂರ್ವಪಕ್ಷವೇನೆಂದರೆ ಸಮ್ಯಗ್ದರ್ಶನಕ್ಕೆ ಯೋಗವು ಉಪಾಯವೆಂದು ವೇದದಲ್ಲಿ ಹೇಳಿರುವದರಿಂದಲೂ ಯೋಗಶಾಸ್ತ್ರದಲ್ಲಿಯೂ ಹಾಗೆಂದೇ ಹೇಳಿವೆಯಾದ್ದರಿಂದಲೂ ಅಷ್ಟಕಾದಿ ಸ್ಮೃತಿಗಳಂತೆ ಯೋಗಸ್ಮೃತಿಯೂ ಪ್ರಮಾಣವು. ಅದಕ್ಕೆ ವಿರುದ್ಧವಾಗಿರುವದರಿಂದ ಬ್ರಹ್ಮವಾದವು ಸರಿಯಲ್ಲ.

**ಸಿದ್ಧಾಂತ :** ಒಂದು ಭಾಗವು ವೇದಸಮ್ಮತವಾಗಿದ್ದರೂ ಜಗತ್ಕಾರಣವಾದವು ವೇದವಿರುದ್ಧವಾದ ಸಾಂಖ್ಯಕ್ಕೆ ಅನುಗುಣವಾಗಿರುವ ಈ ಸ್ಮೃತಿಯೂ ಅಪ್ರಮಾಣವೇ. ಆದ್ದರಿಂದ ಇದಕ್ಕೆ ವಿರುದ್ಧವಾಗಿರುವದೂ ಬ್ರಹ್ಮವಾದದ ದೋಷವಲ್ಲ. ಸಾಂಖ್ಯಜ್ಞಾನವಾಗಲಿ ವೇದವಿರುದ್ಧವಾದ ಯೋಗವಾಗಲಿ ಮೋಕ್ಷಕ್ಕೆ ಕಾರಣವೆಂದು ಒಪ್ಪುವದಾಗುವದಿಲ್ಲ ; ವೇದಕ್ಕೆ ಅನುಗುಣವಾದಷ್ಟುಮಟ್ಟಿಗೆ ಈ ಸ್ಮೃತಿಗಳನ್ನು ಪ್ರಮಾಣವೆನ್ನುವದಕ್ಕೆ ಅಡ್ಡಿಯಿಲ್ಲ.

## ೩. ವಿಲಕ್ಷಣತ್ವಾಧಿಕರಣ

**ಸಂಶಯವೂ ಪೂರ್ವಪಕ್ಷವೂ :** ಬ್ರಹ್ಮಕಾರಣವಾದವು ಸಾಂಖ್ಯತರ್ಕವಿರುದ್ಧವೊ, ಅಲ್ಲವೊ ? –ಎಂಬ ಸಂಶಯಕ್ಕೆ ಪೂರ್ವಪಕ್ಷವೇನೆಂದರೆ ಬ್ರಹ್ಮವು ಜಗತ್ಕಾರಣವಾಗಲಾರದು. ಏಕೆಂದರೆ ಇದು ಜಗತ್ತಿಗೆ ವಿಲಕ್ಷಣವಾಗಿ ಚೇತನವೂ ಶುದ್ಧವೂ ಆಗಿದೆ. ಲೋಕದಲ್ಲಿ ಕಾರ್ಯವು ಕಾರಣಧರ್ಮದಿಂದ ಅನ್ವಿತವಾಗಿರುತ್ತದೆ ; ಈ ಜಗತ್ತು ಅಚೇತನವೂ ಸುಖದುಃಖಮೋಹಗಳಿಂದ ಅನ್ವಿತವೂ ಆಗಿರುವದರಿಂದ ಇದಕ್ಕೆ ಅನುಗುಣವಾದ ಪ್ರಧಾನವೇ ಕಾರಣವಾಗಿರಬೇಕು. ಜಗತ್ತು ಬ್ರಹ್ಮವಿಲಕ್ಷಣವಾಗಿದೆ ಎಂದು ಶ್ರುತಿಯು ಹೇಳುತ್ತದೆ. ಅಚೇತನವಾದ ಭೂತಗಳೂ ಇಂದ್ರಿಯಗಳೂ ಚೇತನವೆಂಬಂತೆ ಶ್ರುತಿಯಲ್ಲಿ ಹೇಳಿರುವದುಂಟು ; ಆದರೆ ಅಲ್ಲಿ ಅಭಿಮಾನಿದೇವತೆಗಳನ್ನು ಹೇಳಿರುತ್ತದೆ. ಆದ್ದರಿಂದ ಬ್ರಹ್ಮಕಾರಣವಾದವು ತರ್ಕವಿರುದ್ಧ.

**ಸಿದ್ಧಾಂತ :** ಈ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಚೇತನರಾದ ಪುರುಷರಿಂದ ವಿಲಕ್ಷಣವಾದ ಕೇಶನಖಾದಿಗಳೂ ಅಚೇತನವಾದ ಗೋಮಯಾದಿಗಳಿಂದ ವೃಶ್ಚಿಕಾದಿಗಳೂ ಹುಟ್ಟುವದು ಕಂಡುಬರುತ್ತದೆ. ಹಾಗೆಯೇ ಬ್ರಹ್ಮದಿಂದ ವಿಲಕ್ಷಣವಾಗಿರುವ ಜಗತ್ತು ಉಂಟಾಗಬಹುದು. ಕಾರಣಧರ್ಮವು ಯಾವದಾದರೊಂದು ಕಾರ್ಯದಲ್ಲಿರಬೇಕೆಂದು ಹೇಳಿದರೆ ಆಕಾಶಾದಿಕಾರ್ಯಗಳಲ್ಲಿಯೂ ಸತ್ತಾರೂಪವಾದ ಬ್ರಹ್ಮಸ್ವಭಾವವು ಅನುಗತವಾಗಿ ಕಾಣುತ್ತಿರುತ್ತದೆ. ಎಲ್ಲಾ ಕಾರಣಧರ್ಮಗಳೂ ಅನುಗತವಾಗಿರಬೇಕೆಂದು ಹೇಳಿದರೆ ಕಾರ್ಯಕಾರಣಭಾವವೇ ಇಲ್ಲವಾಗುತ್ತದೆ. ಚೇತನದಿಂದ ಅನ್ವಿತವಾಗದೆ ಇರುವದು ಬ್ರಹ್ಮಪ್ರಕೃತಿಕವಲ್ಲ ಎಂಬ ತರ್ಕಕ್ಕೆ ಉಭಯಸಮ್ಮತವಾದ ದೃಷ್ಟಾಂತವಿಲ್ಲ. ಈ ತರ್ಕವು ಆಗಮವಿರುದ್ಧವೂ ಆಗಿದೆ ; ಏಕೆಂದರೆ ಚೇತನವಾದ ಬ್ರಹ್ಮವೇ ಜಗತ್ಕಾರಣವೆಂದು ಶ್ರುತಿಗಳು ಹೇಳುತ್ತಿವೆ. ಶಬ್ದಾದಿಗಳಿಲ್ಲದ ಚೇತನವಾದ ಬ್ರಹ್ಮವು ಶಬ್ದಾದಿ

ಗಳಿಂದೊಡಗೂಡಿದ ಅಚೇತನವಾದ ಜಗತ್ತಿಗೆ ಕಾರಣವೆಂದರೆ ಅಸತ್ಕಾರ್ಯವಾದವು ಪ್ರಸಕ್ತವಾಗುವದಿಲ್ಲ; ಏಕೆಂದರೆ ಶಬ್ದಾದಿಗಳುಳ್ಳ ಜಗತ್ತೆಂಬುದು ಯಾವಾಗಲೂ ಶಬ್ದಾದಿಹೀನವಾದ ಬ್ರಹ್ಮರೂಪವಾಗಿಯೇ ಇರುತ್ತದೆ. ಪ್ರಲಯದಲ್ಲಿ ಕಾರ್ಯದ ಧರ್ಮಗಳು ಕಾರಣವಾದ ಬ್ರಹ್ಮಕ್ಕೆ ಅಂಟಿಯಾವೆಂಬ ಅಂಜಿಕೆಯೇನೂ ಇಲ್ಲ; ಏಕೆಂದರೆ ಕಾರಣದಲ್ಲಿ ಲಯವಾಗುವ ಯಾವ ಕಾರ್ಯವೂ ತನ್ನ ಧರ್ಮವನ್ನು ಕಾರಣಕ್ಕೆ ಅಂಟಿಸುವದಿಲ್ಲ. ಸ್ಥಿತಿಯಲ್ಲಿ ಮಿಥ್ಯಾಜ್ಞಾನದಿಂದ ಆತ್ಮನಲ್ಲಿ ವಿಭಾಗವು ತೋರುವಂತೆ ಪ್ರಲಯದಲ್ಲಿಯೂ ಮಿಥ್ಯಾಜ್ಞಾನದಿಂದ ಅನುಮಿತವಾದ ವಿಭಾಗಶಕ್ತಿಯು ಇರಬಹುದಾಗಿದೆ; ಅದರಿಂದ ಬ್ರಹ್ಮಕ್ಕೆ ಯಾವ ಹಾನಿಯೂ ಇಲ್ಲ. ಬ್ರಹ್ಮಕಾರಣವಾದದಲ್ಲಿ ಹೇಳುವ ದೋಷಗಳು ಎಲ್ಲವೂ ಸಾಂಖ್ಯಪಕ್ಷಕ್ಕೂ ಅಂಟುತ್ತವೆ; ಆದ್ದರಿಂದ ಅವು ವೇದಾಂತದ ದೋಷಗಳಾಗುವದೂ ಇಲ್ಲ. ಶುಷ್ಕತರ್ಕವು ನಿಲುಗಡೆಗೆ ಬರದೆ ಇರುವದರಿಂದಲೂ ವೇದೋಕ್ತವಾದ ತರ್ಕವು ಬ್ರಹ್ಮಕಾರಣವಾದಕ್ಕೆ ಅನುಗುಣವಾಗಿರುವದರಿಂದಲೂ ವೇದಪ್ರಮಾಣದಿಂದ ಸಿದ್ಧವಾಗುವ ಬ್ರಹ್ಮಕಾರಣವಾದವನ್ನು ಶುಷ್ಕತರ್ಕದಿಂದ ಎದುರಿಸುವದು ಸರಿಯೇ ಅಲ್ಲ.

## ೪. ಶಿಷ್ಟಾಪರಿಗ್ರಹಾಧಿಕರಣ

**ಸಂಶಯವೂ ಪೂರ್ವಪಕ್ಷವೂ:** ಪ್ರಧಾನಕಾರಣವಾದಿಗಳ ತರ್ಕಕ್ಕೆ ವಿರುದ್ಧವಾಗದೆ ಇದ್ದರೂ ಅಣ್ವಾದಿವಾದಿಗಳ ತರ್ಕಕ್ಕೆ ಬ್ರಹ್ಮಕಾರಣವಾದವು ವಿರುದ್ಧವೆನ್ನಬಹುದೊ, ಇಲ್ಲವೊ? ಎಂಬ ಸಂಶಯವುಂಟಾಗಲಾಗಿ ಪೂರ್ವಪಕ್ಷವೇನೆಂದರೆ ಗುರುತರತರ್ಕಸಂದೃಬ್ಧವಾಗಿರುವದರಿಂದಲೂ ಸರ್ವಜ್ಞರಾದ ಕಣಾದಾದಿಗಳಿಂದ ಪ್ರಣೀತವಾಗಿರುವದರಿಂದಲೂ ಕಣಾದಾದಿಗಳ ದರ್ಶನಕ್ಕೆ ವಿರುದ್ಧವಾಗಿರುವ ಬ್ರಹ್ಮವಾದವು ಸರಿಯಲ್ಲ.

**ಸಿದ್ಧಾಂತ:** ಹೀಗೆನ್ನಕೂಡದು. ಶಿಷ್ಟರು ಪರಿಗ್ರಹಿಸಿರುವ ಸಾಂಖ್ಯಸ್ಮೃತಿಯೇ ಅಪ್ರಮಾಣವಾಗಿರುವಾಗ ಯಾರೂ ಪರಿಗ್ರಹಿಸದ ಕಣಾದರ ದರ್ಶನವು ಪ್ರಮಾಣವಾಗುವ ಸಂಭವವೇ ಇಲ್ಲ. ಇನ್ನು ಸಾಂಖ್ಯರ ತರ್ಕಕ್ಕೆ ಯಾವ ಪರಿಹಾರವನ್ನು ಹೇಳಿದೆಯೋ ಅದೇ ಪರಿಹಾರವನ್ನೇ ಕಾಣಾದರ ತರ್ಕಕ್ಕೂ ಹೇಳಬಹುದಾದ್ದರಿಂದ ಈ ತರ್ಕವು ಬ್ರಹ್ಮವಾದಕ್ಕೆ ಯಾವ ಅಡ್ಡಿಯನ್ನೂ ತರಲಾರದು.

## ೫. ಭೋಕ್ತ್ರಾಪತ್ತ್ಯಧಿಕರಣ

**ಪೂರ್ವಪಕ್ಷ:** ಬ್ರಹ್ಮಕಾರಣವಾದವು ತರ್ಕವಿರುದ್ಧ. ಏಕೆಂದರೆ ಲೋಕಪ್ರಸಿದ್ಧವಾದ ಭೋಕ್ತೃಭೋಗ್ಯವಿಭಾಗವನ್ನು ಅದು ಅಲ್ಲಗಳೆಯುತ್ತದೆ. ಭೋಕ್ತೃ, ಭೋಗ್ಯ–ಎರಡೂ ಬ್ರಹ್ಮಕ್ಕಿಂತ ಅನನ್ಯವೆಂದರೆ ಅವುಗಳಲ್ಲಿ ಒಂದು ಇನ್ನೊಂದಾಗಬೇಕಾಗುವದು; ಇದು ಪ್ರಸಿದ್ಧವಾದ ವಿಭಾಗಕ್ಕೆ ವಿರುದ್ಧವು. ಆದ್ದರಿಂದ ತರ್ಕವಿರುದ್ಧವಾಗಿರುವ ಈ ಸಿದ್ಧಾಂತವು ಸರಿಯಲ್ಲ.

**ಸಿದ್ಧಾಂತ:** ಇದೇನೂ ದೋಷವಲ್ಲ. ಏಕೆಂದರೆ ಲೋಕದಲ್ಲಿ ಸಮುದ್ರದ ವಿಕಾರಗಳಾಗಿರುವ ನೊರೆ, ತೆರೆ, ಅಲೆ, ಗುಳ್ಳೆ ಮುಂತಾದವುಗಳು ಒಂದಕ್ಕಿಂತ ಬೇರೆ ಬೇರೆಯಾಗಿರುವದು ಕಂಡುಬಂದಿದೆ. ಸಮುದ್ರಕ್ಕಿಂತ ಅವು ಅನನ್ಯವೆಂಬ ಕಾರಣದಿಂದ ಅವು ಒಂದು ಮತ್ತೊಂದಾಗುವದಿಲ್ಲ. ಹೀಗೆಯೇ ಇಲ್ಲಿಯೂ ಆಗಬಹುದಾಗಿದೆ.

## ೬. ಆರಂಭಣಾಧಿಕರಣ

**ಪೂರ್ವಪಕ್ಷ:** ಬ್ರಹ್ಮಕಾರಣವು ತರ್ಕವಿರುದ್ಧ. ಏಕೆಂದರೆ ಕಾರ್ಯವಾದ ಜಗತ್ತು ಕಾರಣವಾದ ಬ್ರಹ್ಮಕ್ಕಿಂತ ಭಿನ್ನವೆಂದರೆ ಅದ್ವೈತಹಾನಿ; ಬ್ರಹ್ಮವೊಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಯಿತೆಂಬುದೂ ಸಿದ್ಧವಾಗುವದಿಲ್ಲ. ಅಭಿನ್ನವೆಂದರೆ ಕಾರ್ಯವೇ ಇಲ್ಲವೆಂದಂತೆ ಆಗುವದು. ಆಗ ಬ್ರಹ್ಮವು ಜಗತ್ಕಾರಣವೆಂಬ ವಾದವು ತಪ್ಪಾಗುವದು.

**ಸಿದ್ಧಾಂತ:** ಕಾರಣಕ್ಕಿಂತ ಕಾರ್ಯವು ಅನನ್ಯವು. ಬ್ರಹ್ಮಕ್ಕಿಂತ ಜಗತ್ತು ಬೇರೆಯಲ್ಲ ಎಂಬುದೇ ಸಿದ್ಧಾಂತವು. ಅನನ್ಯವೆಂದರೆ ಬೇರೆಯಾಗಿಲ್ಲವೆಂದೇ ಅರ್ಥ. ಕಾರ್ಯವೆಲ್ಲ ಬರಿಯ ಮಾತಿನಿಂದ ಆಗಿರುವದು, ಬರಿಯ ಹೆಸರು- ಎಂದು ಶ್ರುತಿಯು ಹೇಳುತ್ತದೆ, ಬ್ರಹ್ಮವೊಂದೇ ಸತ್ಯವು ಎಂದೂ ಹೇಳುತ್ತದೆ. ಹೀಗಿದ್ದರೂ ಜಗತ್ಕಾರಣವು ಬ್ರಹ್ಮವೆಂಬ ವಾದಕ್ಕೆ ವಿರೋಧವೇನೂ ಇಲ್ಲ. ಏಕೆಂದರೆ ನಾಮರೂಪಾತ್ಮಕವಾದ ಜಗತ್ತು ಅವಿದ್ಯಾಕಲ್ಪಿತವಾಗಿದ್ದುಕೊಂಡು ಬ್ರಹ್ಮರೂಪವೆಂದಾಗಲಿ ಅದಕ್ಕಿಂತ ಭಿನ್ನವೆಂದಾಗಲಿ ಹೇಳುವದಕ್ಕೆ ಬರುವಹಾಗಿಲ್ಲ. ಭೇದವ್ಯವಹಾರವೆಲ್ಲ ಈ ಅವಿದ್ಯಾಕೃತ ನಾಮರೂಪಗಳಿಂದ ಆಗಿರುತ್ತದೆ. ಕಾರಣವಿದ್ದರೇ ಲೋಕದಲ್ಲಿ ಕಾರ್ಯವು ಕಂಡು ಬರುವದರಿಂದಲೂ, ಉತ್ಪತ್ತಿಗಿಂತ ಪೂರ್ವದಲ್ಲಿ ಕಾರಣರೂಪದಿಂದಲೇ ಕಾರ್ಯವು ಇದ್ದಿತೆಂದು ಶ್ರುತಿಯು ಹೇಳುವದರಿಂದಲೂ ಅಸತ್ತಾಗಿತ್ತೆಂದು ಹೇಳುವ ಶ್ರುತಿಗಳು ಅವ್ಯಾಕೃತರೂಪವಾಗಿತ್ತೆಂಬ ಅಭಿಪ್ರಾಯದಿಂದ ಹಾಗೆ ಹೇಳುವದರಿಂದಲೂ ಅಸತ್ಕಾರ್ಯ ವಾದವು ಯುಕ್ತಿವಿರುದ್ಧವಾಗಿರುವದರಿಂದಲೂ ಜಗತ್ತು ಸೃಷ್ಟಿಗಿಂತ ಪೂರ್ವದಲ್ಲಿ ಸತ್ತೇ ಆಗಿತ್ತೆಂದು ಒತ್ತಿ ಹೇಳುತ್ತಿರುವದರಿಂದಲೂ ಬಟ್ಟೆಯಂತೆಯೂ ಪ್ರಾಣಾದಿಗಳಂತೆಯೂ ಜಗತ್ತು ತನ್ನ ಕಾರಣವಾದ ಬ್ರಹ್ಮಕ್ಕಿಂತ ಬೇರೆಯಾಗಿರುವದಿಲ್ಲವೆಂಬುದು ಯುಕ್ತವಾದದ್ದರಿಂದ ಕಾರ್ಯವು ಕಾರಣವಾದ ಬ್ರಹ್ಮಕ್ಕಿಂತ ಅನನ್ಯವೇ. ಅದ್ದರಿಂದ ಇಲ್ಲಿ ಯಾವ ತರ್ಕವಿರೋಧವೂ ಇಲ್ಲ.

## ೭. ಇತರವ್ಯಪದೇಶಾಧಿಕರಣ

**ಪೂರ್ವಪಕ್ಷ:** ಬ್ರಹ್ಮಕಾರಣವಾದವು ತರ್ಕವಿರುದ್ಧ. ಏಕೆಂದರೆ ಶ್ರುತಿಯಲ್ಲಿ ಶಾರೀರನೇ ಬ್ರಹ್ಮವೆಂದು ಹೇಳಿರುವದರಿಂದಲೂ ಬ್ರಹ್ಮವೇ ಶಾರೀರರೂಪದಿಂದ ಜಗತ್ತಿನಲ್ಲಿ ಪ್ರವೇಶಿಸಿರುತ್ತಾನೆಂದು ಹೇಳಿರುವದರಿಂದಲೂ ಜೀವನೇ ತನಗೆ ಅಹಿತವಾದ ಬಂಧವನ್ನು ಸೃಷ್ಟಿಸಿಕೊಂಡಿದಾನೆಂದಾಗುತ್ತದೆ. ಜೀವನೇ ಸ್ರಷ್ಟೃವಾದರೆ ತನಗೆ ಅಹಿತವಾದ ಸೃಷ್ಟಿಯನ್ನು ತಾನೇ ಸೃಜಿಸಿರುವೆನೆಂದು ಸ್ಮರಿಸಬೇಕು, ಅದನ್ನು ತಪ್ಪಿಸಿಕೊಳ್ಳುವದಕ್ಕೆ ಶಕ್ತನಾಗಿರಬೇಕು. ಆದರೆ ಹಾಗಿಲ್ಲ.

**ಸಿದ್ಧಾಂತ:** ಜಗತ್ಕಾರಣವು ಜೀವನೆಂಬುದು ಸಿದ್ಧಾಂತವಲ್ಲ; ಜೀವನಿಗಿಂತ ವಿಲಕ್ಷಣವಾಗಿರುವ ಬ್ರಹ್ಮವೇ ಜಗತ್ಕಾರಣವು. ಬ್ರಹ್ಮವು ಸರ್ವಜ್ಞವೂ ಸರ್ವಶಕ್ತಿಯುತವೂ ನಿತ್ಯಶುದ್ಧಬುದ್ಧಮುಕ್ತಸ್ವರೂಪವುಳ್ಳದ್ದೂ ಆಗಿರುವದರಿಂದ ಅದರಲ್ಲಿ ಯಾವ ಹಿತಾಕರಣಾದಿದೋಷಗಳೂ ಇರುವದಿಲ್ಲ. ಜೀವರು ಬ್ರಹ್ಮಗಳಿಗೆ ಅಭೇದವನ್ನೇ ಶ್ರುತಿಯಲ್ಲಿ ಹೇಳಿದೆಯಾದರೂ ಘಟಾಕಾಶವು ಉಪಾಧಿವಶದಿಂದ ಭಿನ್ನವಾಗಿರುವಂತೆ ಜೀವನು

ಬ್ರಹ್ಮಕ್ಕಿಂತ ಭಿನ್ನನೂ ಆಗಿರುತ್ತಾರೆ ಶ್ರುತಿಯಿಂದ ಅಭೇದವು ಗೊತ್ತಾದರೆ ಬ್ರಹ್ಮವು ಸ್ರಷ್ಟೃವೇ ಆಗಿರುವದಿಲ್ಲವಾದ್ದರಿಂದ ಸೃಷ್ಟಿಯಾಗಲಿ ಅಹಿತಾಕರಣಾದಿದೋಷಗಳಾಗಲಿ ಆಗ ಪ್ರಸಕ್ತವಾಗುವವೇ ಇಲ್ಲ. ಬ್ರಹ್ಮವು ಒಂದೇ ಆದರೂ ಅದರಲ್ಲಿ ಜೀವಪ್ರಾಜ್ಞರೆಂಬ ಭೇದವೂ ಕಾರ್ಯವೈಚಿತ್ರ್ಯವೂ ಇರಬಹುದಾಗಿದೆ. ಒಂದೇ ಕಲ್ಲಿನಲ್ಲಿ ವಜ್ರ ವೈಡೂರ್ಯಾದಿಗಳು, ಸೂರ್ಯಕಾಂತಾದಿಗಳು, ಸಾಧಾರಣವಾದ ಕಲ್ಲುಗಳು- ಎಂದು ಭೇದವಿರುವಂತೆಯೂ ಒಂದೇ ಪೃಥಿವಿಯಲ್ಲಿ ಹಾಕಿದ ಬೀಜಗಳಿಂದ ಬಗೆಬಗೆಯ ಎಲೆ, ಹೂ, ಹಣ್ಣು, ವಾಸನೆ, ಸವಿ- ಮುಂತಾದ ಭೇದವುಳ್ಳ ಗಿಡಮರಗಳು ಉಂಟಾಗುವಂತೆಯೂ ಈ ಭೇದವು ಇರಬಹುದೆಂದು ಊಹಿಸಬೇಕು. ಆದ್ದರಿಂದ ಶ್ರುತಿಬೋಧಿತವಾದ ಬ್ರಹ್ಮಕಾರಣವಾದದಲ್ಲಿ ತರ್ಕನಿಮಿತ್ತವಾದ ದೋಷಕ್ಕೆ ಅವಕಾಶವಿಲ್ಲ.

## ೮. ಉಪಸಂಹಾರದರ್ಶನಾಧಿಕರಣ

**ಪೂರ್ವಪಕ್ಷ:** ಬ್ರಹ್ಮಕಾರಣವಾದವು ತರ್ಕವಿರುದ್ಧ. ಏಕೆಂದರೆ ಕುಂಬಾರನೇ ಮುಂತಾದವರು ಸಾಮಗ್ರಿಗಳನ್ನಿಟ್ಟುಕೊಂಡೇ ಗಡಿಗೆಯೇ ಮುಂತಾದ ಕಾರ್ಯಗಳನ್ನು ಮಾಡುತ್ತಾರೆ. ಈ ದೃಷ್ಟಾಂತದಿಂದ ಯಾವ ಸಹಾಯವೂ ಇಲ್ಲದೆ ಬ್ರಹ್ಮವೊಂದೇ ಜಗತ್ತನ್ನು ಸೃಜಿಸಲಾರದೆಂದು ಸಿದ್ಧವಾಗುತ್ತದೆ.

**ಸಿದ್ಧಾಂತ:** ಕಾರಣಕ್ಕೆ ಸಾಮಗ್ರಿಯಿದ್ದರೇ ಕಾರ್ಯವುಂಟಾಗುವದೆಂಬ ನಿಯಮವಿಲ್ಲ. ಏಕೆಂದರೆ ಹಾಲು, ನೀರು- ಮುಂತಾದದ್ದು ಮತ್ತೇನನ್ನೂ ಬಯಸದೆ ಮೊಸರು, ಹಿಮ- ಆಗುವದು ಕಂಡಿದೆ. ಹಾಲಿಗೆ ಹೆಪ್ಪು ಬೇಕಾಗುವದು ನಿಜವಾದರೂ ಹೆಪ್ಪು ಅದನ್ನು ಮೊಸರಾಗುವಂತೆ ತ್ವರೆಗೊಳಿಸೀತೇ ಹೊರತು ಮೊಸರಾಗುವ ಯೋಗ್ಯತೆಯನ್ನೇನೂ ಅದಕ್ಕೆ ಕೊಡುವದಿಲ್ಲ. ಆದ್ದರಿಂದ ಪರಿಪೂರ್ಣಶಕ್ತಿಯಾಗಿರುವ ಬ್ರಹ್ಮವು ಸ್ವತಃ ಮತ್ತೇನನ್ನೂ ಬಯಸದೆ ಜಗತ್ತಾಗುವದು ತರ್ಕವಿರುದ್ಧವಲ್ಲ. ದೇವತೆಗಳೇ ಮುಂತಾದ ಚೇತನರು ಸಾಮಗ್ರಿಯನ್ನು ಬಯಸದೆ ತಾವೇ ಕಾರ್ಯವನ್ನುಂಟುಮಾಡುವದು ಕಂಡಿರುತ್ತದೆ. ಆದ್ದರಿಂದ ಒಂದು ಕಾರಣಕ್ಕೆ ಸಾಮಗ್ರಿ ಬೇಕಾದರೆ ಮತ್ತೊಂದಕ್ಕೂ ಬೇಕೆಂದು ತರ್ಕಿಸುವದು ಯುಕ್ತವಲ್ಲ.

## ೯. ಕೃತ್ಸ್ನಪ್ರಸಕ್ತ್ಯಧಿಕರಣ

**ಪೂರ್ವಪಕ್ಷ:** ಬ್ರಹ್ಮವು ಜಗತ್ಕಾರಣವೆಂದರೆ ಬ್ರಹ್ಮವೆಲ್ಲವೂ ಜಗತ್ತಾಗುವದೆನ್ನಬೇಕಾಗುತ್ತದೆ; ಇಲ್ಲದಿದ್ದರೆ ಅದು ಸಾವಯವವೆಂದೂ ಅದರ ಒಂದು ಭಾಗವು ಮಾತ್ರ ಜಗತ್ತಾಗಿ ಇನ್ನೊಂದು ಭಾಗವು ಹಾಗೇ ಉಳಿದುಕೊಳ್ಳುವದೆಂದೂ ಒಪ್ಪಬೇಕಾಗುತ್ತದೆ. ಆದ್ದರಿಂದ ಈ ವಾದವು ತರ್ಕವಿರುದ್ಧವು.

**ಸಿದ್ಧಾಂತ:** ಬ್ರಹ್ಮವು ಜಗತ್ತಾಗುವದೆಂದೂ ವಿಕಾರವಾಗದೆಯೂ ಇರುವದೆಂದೂ ಶ್ರುತಿಯು ಹೇಳುವದರಿಂದ ಶಬ್ದಪ್ರಮಾಣಕವಾದ ಬ್ರಹ್ಮವನ್ನು ಹಾಗೆಂದೇ ಒಪ್ಪಬೇಕು. ವಸ್ತುವಿನಲ್ಲಿ ವಿಕಲ್ಪವಿರಲಾರದಾದ್ದರಿಂದಲೂ ವಿಕಾರವೂ ಆಗುವದು ವಿಕಾರವಾಗದೆಯೂ ಇರುವದು- ಇವು ಒಂದಕ್ಕೊಂದು ವಿರುದ್ಧವಾಗಿರುವದರಿಂದಲೂ ಈ ಪಕ್ಷವು ಅಯುಕ್ತವು ಎನ್ನಕೂಡದು. ಏಕೆಂದರೆ ಅವಿದ್ಯಾಕಲ್ಪಿತವಾದ ನಾಮರೂಪವೆಂಬ ರೂಪಭೇದ

ದಿಂದ ಬ್ರಹ್ಮವು ಜಗದ್ರೂಪವಾಗಿ ಪರಿಣಮಿಸುತ್ತದೆ ಎನ್ನುತ್ತೇವೆ; ಪಾರಮಾರ್ಥಿಕವಾದ ತನ್ನ ರೂಪದಿಂದ ಸರ್ವವ್ಯವಹಾರಾತೀತವಾಗಿ ತಾನು ಇದ್ದಂತೆಯೇ ಇರುತ್ತದೆ ಎನ್ನುತ್ತೇವೆ. ಪರಿಣಾಮಶ್ರುತಿಯು ಆತ್ಮೈಕತ್ವಜ್ಞಾನವನ್ನುಂಟುಮಾಡಿಕೊಡುವದಕ್ಕಾಗಿ ಬಂದಿರುವದರಿಂದಲೂ ಈ ಪಕ್ಷದಲ್ಲಿ ದೋಷವಿಲ್ಲ. ಸ್ವಪ್ನದಲ್ಲಿ ಒಬ್ಬನೇ ಆತ್ಮನಲ್ಲಿ ಅನೇಕಾಕಾರವಾದ ಸೃಷ್ಟಿಯಾದರೂ ಆತ್ಮನು ಇದ್ದಂತೆಯೇ ಇರುತ್ತಾನೆಂಬುದು ಕಂಡಿರುತ್ತದೆಯಾದ್ದರಿಂದಲೂ ಇದು ತರ್ಕವಿರುದ್ಧವಲ್ಲ. ಪ್ರಧಾನವಾದವೇ ಮುಂತಾದವುಗಳಲ್ಲಿಯೂ ಈ ಕೃತ್ಸ್ನಪ್ರಸಕ್ತಿ ಅಥವಾ ನಿರವಯವತ್ವಾಂಗೀಕಾರವಿರೋಧ- ಎಂಬ ದೋಷಗಳಿರುತ್ತವೆ. ಈ ಎಲ್ಲಾ ಕಾರಣದಿಂದ ಬ್ರಹ್ಮವು ಜಗತ್ಕಾರಣವೆಂಬ ವಾದವು ತರ್ಕವಿರುದ್ಧವಲ್ಲ.

## ೧೦. ಸರ್ವೋಪೇತಾಧಿಕರಣ

**ಪೂರ್ವಪಕ್ಷ:** ಒಂದೇ ಬ್ರಹ್ಮವು ವಿಚಿತ್ರವಾದ ವಿಕಾರಪ್ರಪಂಚವಾಗುವದೆಂಬುದು ತರ್ಕವಿರುದ್ಧ; ಹಾಗೆ ಆಗುವದೆಂಬುದಕ್ಕೆ ಪ್ರಮಾಣವೇನೂ ಇಲ್ಲ. ಯಾವ ಕರಣವೂ ಇಲ್ಲದೆ ಅದು ಸೃಜಿಸಲೂ ಆರದು.

**ಸಿದ್ಧಾಂತ:** ಬ್ರಹ್ಮದಲ್ಲಿ ವಿಚಿತ್ರಶಕ್ತಿಗಳು ಇರುತ್ತವೆ. ಹಾಗೆಂದು ಶ್ರುತಿಯಲ್ಲಿ ಹೇಳಿದೆ. ಶ್ರುತಿಪ್ರಮಾಣಕವಾದ ಬ್ರಹ್ಮದ ವಿಷಯದಲ್ಲಿ ಅದು ಮತ್ತೊಂದು ದೃಷ್ಟಕಾರಣದಂತೆ ಇರಬೇಕೆಂದು ತರ್ಕದಿಂದ ಕಲ್ಪಿಸುವದು ಸರಿಯಲ್ಲ. ಯಾವ ಕರಣವೂ ಇಲ್ಲದೆಯೇ ಬ್ರಹ್ಮವು ಎಲ್ಲಾ ಕರಣಗಳ ಶಕ್ತಿಯಿಂದಲೂ ಕೂಡಿರುವದೆಂದು ಶ್ರುತಿಯಲ್ಲಿ ಹೇಳಿಯೂ ಇರುತ್ತದೆ. ಆದ್ದರಿಂದ ಇಲ್ಲಿ ಯಾವ ತರ್ಕವಿರೋಧವೂ ಇಲ್ಲ.

## ೧೧. ಪ್ರಯೋಜನವತ್ತ್ವಾಧಿಕರಣ

**ಪೂರ್ವಪಕ್ಷ:** ಬ್ರಹ್ಮಕಾರಣವಾದವು ತರ್ಕವಿರುದ್ಧ. ಏಕೆಂದರೆ ಬ್ರಹ್ಮಕ್ಕೆ ಜಗತ್ತಿನ ಸೃಷ್ಟಿಯಿಂದ ಯಾವ ಪ್ರಯೋಜನವೂ ಇಲ್ಲ; ಯಾವದಾದರೊಂದು ಪ್ರಯೋಜನವನ್ನು ಕಲ್ಪಿಸಿದರೆ ನಿತ್ಯತೃಪ್ತವೆಂಬ ಶ್ರುತಿಗೆ ವಿರುದ್ಧವಾಗುತ್ತದೆ. ಪ್ರಯೋಜನವನ್ನು ಬಯಸದೆ ಬಹಳ ಆಯಾಸದ ಸೃಷ್ಟಿಕರ್ಮದಲ್ಲಿ ಹುಚ್ಚನಂತೆ ಪ್ರವರ್ತಿಸುತ್ತಾನೆಂದರೆ ಪರಮಾತ್ಮನು ಸರ್ವಜ್ಞನೆಂಬ ಶ್ರುತಿಗೆ ವಿರುದ್ಧವಾಗುತ್ತದೆ.

**ಸಿದ್ಧಾಂತ:** ರಾಜಾಮಾತ್ಯಾದಿಗಳು ಲೀಲಾರೂಪವಾದ ಪ್ರವೃತ್ತಿಗಳಲ್ಲಿ ತೊಡಗುವಂತೆಯೂ ಉಸಿರುಬಿಡುವದೇ ಮುಂತಾದ ಕರ್ಮಗಳು ಪ್ರಯೋಜನವನ್ನು ಬಯಸದೆ ಸ್ವಾಭಾವಿಕವಾಗಿ ನಡೆಯುವಂತೆಯೂ ಪರಮೇಶ್ವರನು ಸೃಷ್ಟಿಯಲ್ಲಿ ತೊಡಗಬಹುದು. ನಮ್ಮಂಥವರಿಗೆ ಬಹಳ ಆಯಾಸಕರವಾಗಿದ್ದರೂ ಪರಮೇಶ್ವರನಿಗೆ ಇದು ಲೀಲಾಮಾತ್ರವಾಗಿರುತ್ತದೆ. ಆಪ್ತಕಾಮನಾದ್ದರಿಂದ ಪರಮಾತ್ಮನಿಗೆ ಪ್ರಯೋಜನದ ಅಪೇಕ್ಷೆಯಿಲ್ಲ; ಸರ್ವಜ್ಞನೆಂದು ಶ್ರುತಿ ಹೇಳುವದರಿಂದ ಅಪ್ರವೃತ್ತಿಯಾಗಲಿ ಉನ್ಮತ್ತಪ್ರವೃತ್ತಿಯಾಗಲಿ ಆಗುವದಿಲ್ಲ. ಸೃಷ್ಟಿಯು ಪರಮಾರ್ಥವಲ್ಲವಾದ್ದರಿಂದ ಅದು ಪ್ರಯೋಜನಾದಿಗಳನ್ನು ಬಯಸುವದೂ ಇಲ್ಲ. ಆದ್ದರಿಂದ ಯಾವ ತರ್ಕವಿರೋಧವೂ ಇಲ್ಲಿಲ್ಲ.

# ೧೨. ವೈಷಮ್ಯನೈರ್ಘೃಣ್ಯಾಧಿಕರಣ

**ಪೂರ್ವಪಕ್ಷ:** ಈಶ್ವರನು ಜಗತ್ಕಾರಣನೆಂಬ ವಾದವು ತರ್ಕವಿರುದ್ಧ. ಏಕೆಂದರೆ ಜೀವರಿಗೆ ಸುಖದುಃಖತಾರತಮ್ಯವನ್ನು ಸೃಜಿಸಿರುವದರಿಂದ ಈಶ್ವರನಿಗೆ ವೈಷಮ್ಯ ವುಂಟೆಂದಾಗುತ್ತದೆ. ದುಃಖವನ್ನು ಜೀವರಿಗೆ ಕೊಡುವದರಿಂದಲೂ ಪ್ರಲಯದಲ್ಲಿ ಎಲ್ಲರನ್ನೂ ಸಂಹರಿಸುವದರಿಂದಲೂ ನೈರ್ಘೃಣ್ಯವುಂಟೆಂದಾಗುತ್ತದೆ.

**ಸಿದ್ಧಾಂತ:** ಈಶ್ವರನಿಗೆ ವೈಷಮ್ಯನೈರ್ಘೃಣ್ಯಗಳಿಲ್ಲ, ಏಕೆಂದರೆ ಜೀವರ ಕರ್ಮಗಳನ್ನು ಅಪೇಕ್ಷಿಸಿ ಅವಕ್ಕೆ ತಕ್ಕಂತೆ ಫಲವನ್ನು ಕೊಡುತ್ತಾನೆ. ಕರ್ಮಾನು ಗುಣವಾಗಿಯೇ ಫಲವನ್ನು ಕೊಡುತ್ತಾನೆಂಬುದಕ್ಕೆ' ಶ್ರುತಿಪ್ರಮಾಣವಿದೆ. ಸೃಷ್ಟಿಗೆ ಪೂರ್ವದಲ್ಲಿ ಕರ್ಮವಿಲ್ಲವಲ್ಲ !– ಎಂದು ಶಂಕಿಸಬಾರದು; ಏಕೆಂದರೆ ಸಂಸಾರವು ಅನಾದಿಯೆಂಬುದು ಶ್ರುತಿಯುಕ್ತಿಗಳಿಂದ ಸಿದ್ಧವಾಗುತ್ತದೆ. ಆದ್ದರಿಂದ ಹಿಂದಿನ ಕಲ್ಪದ ಕರ್ಮವು ಇದ್ದೇ ಇರುತ್ತದೆ. ಅದಕ್ಕೆ ತಕ್ಕಂತೆ ಫಲವನ್ನು ಕೊಡುವ ಈಶ್ವರನಿಗೆ ಯಾವ ವೈಷಮ್ಯನೈರ್ಘೃಣ್ಯಗಳೂ ಇರುವದಿಲ್ಲ. ಆದ್ದರಿಂದ ಹೀಗೂ ಕರ್ಮವಿರೋಧವಿಲ್ಲ.

# ೧೩. ಸರ್ವಧರ್ಮೋಪಪತ್ತ್ಯಧಿಕರಣ

**ಪೂರ್ವಪಕ್ಷ:** ಬ್ರಹ್ಮದಲ್ಲಿ ಕಾರಣದ ಧರ್ಮಗಳಿರಲಾರವು. ಆದ್ದರಿಂದ ಅದು ಜಗತ್ಕಾರಣವೆಂಬುದು ತರ್ಕವಿರುದ್ಧ.

**ಸಿದ್ಧಾಂತ:** ಬ್ರಹ್ಮವು 'ಸರ್ವಜ್ಞ, ಸರ್ವಶಕ್ತಿಗಳುಳ್ಳದ್ದು,' ಮಹಾಮಾಯೆ ಯುಳ್ಳದ್ದು. ಆದ್ದರಿಂದ ಅದರಲ್ಲಿ ಎಲ್ಲಾ ಕಾರಣಧರ್ಮಗಳೂ ಇರಬಹುದಾಗಿದೆ. ಆದ್ದರಿಂದ ಈ ಸಿದ್ಧಾಂತದಲ್ಲಿ ಯಾವ ವಿರೋಧವೂ ಇರುವದಿಲ್ಲ.

---

## ಪರಿಶಿಷ್ಟ

# ಬಾದರಾಯಣಕೃತವೇದಾನ್ತಸೂತ್ರಪಾಠಃ

## ಅಥ ಪ್ರಥಮಾಧ್ಯಾಯೇ ಪ್ರಥಮಃ ಪಾದಃ

೧. **ಅಥಾತೋ ಬ್ರಹ್ಮಜಿಜ್ಞಾಸಾ** ೨. **ಜನ್ಮಾದ್ಯಸ್ಯ ಯತಃ** ೩. **ಶಾಸ್ತ್ರಯೋನಿತ್ವಾತ್** ೪. **ತತ್ತು ಸಮನ್ವಯಾತ್** ೫. **ಈಕ್ಷತೇರ್ನಾಶಬ್ದಮ್** ೬. ಗೌಣಶ್ಚೇನ್ನಾತ್ಮಶಬ್ದಾತ್ ೭. ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ೮. ಹೇಯತ್ವಾವಚನಾಚ್ಚ ೯. ಸ್ವಾಪ್ಯಯಾತ್ ೧೦. ಗತಿಸಾಮಾನ್ಯಾತ್ ೧೧. ಶ್ರುತತ್ವಾಚ್ಚ ೧೨. **ಆನನ್ದಮಯೋಽಭ್ಯಾಸಾತ್** ೧೩. ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ೧೪. ತದ್ಧೇತುವ್ಯಪದೇಶಾಚ್ಚ ೧೫. ಮಾನ್ತ್ರವರ್ಣಿಕಮೇವ ಚ ಗೀಯತೇ ೧೬. ನೇತರೋಽನುಪಪತ್ತೇಃ ೧೭. ಭೇದವ್ಯಪದೇಶಾಚ್ಚ ೧೮. ಕಾಮಾಚ್ಚ ನಾನುಮಾನಾಪೇಕ್ಷಾ ೧೯. ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ೨೦. **ಅನ್ತದ್ಧರ್ಮೋಪದೇಶಾತ್** ೨೧. ಭೇದವ್ಯಪದೇಶಾಚ್ಚಾನ್ಯಃ ೨೨. **ಆಕಾಶಸ್ತಲ್ಲಿಙ್ಗಾತ್** ೨೩. **ಅತ ಏವ ಪ್ರಾಣಃ** ೨೪. **ಜ್ಯೋತಿಶ್ಚರಣಾಭಿಧಾನಾತ್** ೨೫. ಛನ್ದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಮ್ ೨೬. ಭೂತಾದಿವ್ಯಪದೇಶೋಪಪತ್ತೇಶ್ಚೈವಮ್ ೨೭. ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ೨೮. **ಪ್ರಾಣಸ್ತಥಾನುಗಮಾತ್** ೨೯. ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮಸಂಬನ್ಧಭೂಮಾಹ್ಯಸ್ಮಿನ್ ೩೦. ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ೩೧. ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್

**ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯೇ ಪ್ರಥಮಃ ಪಾದಃ**

## ಅಥ ಪ್ರಥಮಾಧ್ಯಾಯೇ ದ್ವಿತೀಯಃ ಪಾದಃ

೧. **ಸರ್ವತ್ರ ಪ್ರಸಿದ್ಧೋಪದೇಶಾತ್**. ೨. ವಿವಕ್ಷಿತಗುಣೋಪಪತ್ತೇಶ್ಚ ೩. ಅನುಪಪತ್ತೇಶ್ಚ ನ ಶಾರೀರಃ ೪. ಕರ್ಮಕರ್ತೃವ್ಯಪದೇಶಾಚ್ಚ ೫. ಶಬ್ದವಿಶೇಷಾತ್ ೬. ಸ್ಮೃತೇಶ್ಚ ೭. ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ೮. ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ೯. **ಅತ್ತಾ ಚರಾಚರಗ್ರಹಣಾತ್**

೧೦. ಪ್ರಕರಣಾಚ್ಚ ೧೧. **ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್** ೧೨. ವಿಶೇಷಣಾಚ್ಚ ೧೩. **ಅನ್ತರ ಉಪಪತ್ತೇಃ** ೧೪. ಸ್ಥಾನಾದಿ ವ್ಯಪದೇಶಾಚ್ಚ ೧೫. ಸುಖವಿಶಿಷ್ಟಾಭಿಧಾನಾದೇವ ಚ ೧೬. ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ೧೭. ಅನವಸ್ಥಿತೇರಸಂಭವಾಚ್ಚ ನೇತರಃ ೧೮. **ಅನ್ತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್** ೧೯. ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ೨೦. ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ೨೧. **ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ** ೨೨. ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ೨೩. ರೂಪೋಪನ್ಯಾಸಾಚ್ಚ ೨೪. **ವೈಶ್ವಾನರಃ ಸಾಧಾರಣಶಬ್ದವಿಶೇಷಾತ್** ೨೫. ಸ್ಮರ್ಯಮಾಣಮನುಮಾನಂ ಸ್ಯಾದಿತಿ ೨೬. ಶಬ್ದಾದಿಭ್ಯೋಽನ್ತಃಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ ಪುರುಷಮಪಿ* ಚೈನಮಧೀಯತೇ ೨೭. ಅತ ಏವ ನ ದೇವತಾ ಭೂತಂ ಚ ೨೮. ಸಾಕ್ಷಾದಪ್ಯವಿರೋಧಂ ಜೈಮಿನಿಃ ೨೯. ಅಭಿವ್ಯಕ್ತೇರಿತ್ಯಾಶ್ಮರಥ್ಯಃ ೩೦. ಅನುಸ್ಮೃತೇರ್ಬಾದರಿಃ ೩೧. ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ೩೨. ಆಮನನ್ತಿ ಚೈನಮಸ್ಮಿನ್ ॥

**ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ**

## ಅಥ ಪ್ರಥಮಾಧ್ಯಾಯೇ ತೃತೀಯಃ ಪಾದಃ

೧. **ದ್ಯುಭ್ವಾದ್ಯಾಯತನಂ ಸ್ವಶಬ್ದಾತ್** ೨. ಮುಕ್ತೋಪಸೃಪ್ಯವ್ಯಪದೇಶಾತ್ ೩. ನಾನುಮಾನಮತಚ್ಛಬ್ದಾತ್ ೪. ಪ್ರಾಣಭೃಚ್ಚ ೫. ಭೇದವ್ಯಪದೇಶಾತ್ ೬. ಪ್ರಕರಣಾತ್ ೭. ಸ್ಥಿತ್ಯದನಾಭ್ಯಾಂ ಚ ೮. **ಭೂಮಾ ಸಂಪ್ರಸಾದದಧ್ಯುಪದೇಶಾತ್** ೯. ಧರ್ಮೋಪಪತ್ತೇಶ್ಚ ೧೦. **ಅಕ್ಷರಮಂಬರಾನ್ತಧೃತೇಃ** ೧೧. ಸಾ ಚ ಪ್ರಶಾಸನಾತ್ ೧೨. ಅನ್ಯಭಾವವ್ಯಾವೃತ್ತೇಶ್ಚ ೧೩. **ಈಕ್ಷತಿಕರ್ಮವ್ಯಪದೇಶಾತ್ ಸಃ** ೧೪. **ದಹರ ಉತ್ತರೇಭ್ಯಃ** ೧೫. ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಙ್ಗಂ ಚ ೧೬. ಧೃತೇಶ್ಚ ಮಹಿಮ್ನೋಽಸ್ಯಾಸ್ಮಿನ್ನುಪಲಬ್ಧೇಃ ೧೭. ಪ್ರಸಿದ್ಧೇಶ್ಚ ೧೮. ಇತರಪರಾಮರ್ಶಾತ್ ಸ ಇತಿ ಚೇನ್ನಾಸಂಭವಾತ್ ೧೯. ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ೨೦. ಅನ್ಯಾರ್ಥಶ್ಚ ಪರಾಮರ್ಶಃ ೨೧. ಅಲ್ಪಶ್ರುತೇರಿತಿ ಚೇತ್ ತದುಕ್ತಮ್ ೨೨. **ಅನುಕೃತೇಸ್ತಸ್ಯ ಚ** ೨೩. ಅಪಿ ಚ ಸ್ಮರ್ಯತೇ ೨೪. **ಶಬ್ದಾದೇವ ಪ್ರಮಿತಃ** ೨೫. ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರ

* **ಪುರುಷವಿಧಮಪಿ ಪಾ॥**

ತ್ವಾತ್ ೨೬. ತದುಪರ್ಯಪಿ ಬಾದರಾಯಣಃ ಸಂಭವಾತ್ ೨೭. ವಿರೋಧಃ ಕರ್ಮಣೀತಿ ಚೇನ್ನಾನೇಕಪ್ರತಿಪತ್ತೇರ್ದರ್ಶನಾತ್ ೨೮. ಶಬ್ದ ಇತಿ ಚೇನ್ನಾತಃ ಪ್ರಭವಾತ್ಪ್ರತ್ಯಕ್ಷಾನುಮಾನಾಭ್ಯಾಮ್ ೨೯. ಅತ ಏವ ಚ ನಿತ್ಯತ್ವಮ್ ೩೦. ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯವಿರೋಧೋ ದರ್ಶನಾತ್ ಸ್ಮೃತೇಶ್ಚ ೩೧. ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ೩೨. ಜ್ಯೋತಿಷಿ ಭಾವಾಚ್ಚ ೩೩. ಭಾವಂ ತು ಬಾದರಾಯಣೋಽಸ್ತಿ ಹಿ ೩೪. ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ ೩೫. ಕ್ಷತ್ರಿಯತ್ವಗತೇಶ್ಚೋತ್ತರತ್ರ ಚೈತ್ರರಥೇನ ಲಿಙ್ಗಾತ್ ೩೬. ಸಂಸ್ಕಾರ ಪರಾಮರ್ಶಾತ್ತದಭಾವಾಭಿಲಾಪಾಚ್ಚ ೩೭. ತದಭಾವನಿರ್ಧಾರಣೇ ಚ ಪ್ರವೃತ್ತೇಃ ೩೮. ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ ೩೯. ಕಮ್ಪನಾತ್ ೪೦. ಜ್ಯೋತಿರ್ದರ್ಶನಾತ್ ೪೧. ಆಕಾಶೋಽರ್ಥಾನ್ತರತ್ವಾದಿವ್ಯಪದೇಶಾತ್ ೪೨. ಸುಷುಪ್ತ್ಯುತ್ಕ್ರಾನ್ತ್ಯೋರ್ಭೇದೇನ ೪೩. ಪತ್ಯಾದಿಶಬ್ದೇಭ್ಯಃ ॥

ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ

## ಅಥ ಪ್ರಥಮಾಧ್ಯಾಯೇ ಚತುರ್ಥಃ ಪಾದಃ

೧. ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ ೨. ಸೂಕ್ಷ್ಮಂ ತು ತದರ್ಹತ್ವಾತ್ ೩. ತದಧೀನತ್ವಾದರ್ಥವತ್ ೪. ಜ್ಞೇಯತ್ವಾವಚನಾಚ್ಚ ೫. ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್ ೬. ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ ೭. ಮಹದ್ವಚ್ಚ ೮. ಚಮಸವದವಿಶೇಷಾತ್ ೯. ಜ್ಯೋತಿರುಪಕ್ರಮಾ ತು ತಥಾ ಹ್ಯಧೀಯತ ಏಕೇ ೧೦. ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ೧೧. ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ೧೨. ಪ್ರಾಣಾದಯೋ ವಾಕ್ಯಶೇಷಾತ್ ೧೩. ಜ್ಯೋತಿಷೈಕೇಷಾಮಸತ್ಯನ್ನೇ ೧೪. ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ೧೫. ಸಮಾಕರ್ಷಾತ್ ೧೬. ಜಗದ್ವಾಚಿತ್ವಾತ್ ೧೭. ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇತ್ತದ್ವ್ಯಾಖ್ಯಾತಮ್ ೧೮. ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ೧೯. ವಾಕ್ಯಾನ್ವಯಾತ್ ೨೦. ಪ್ರತಿಜ್ಞಾಸಿದ್ಧೇರ್ಲಿಙ್ಗಮಾಶ್ಮರಥ್ಯಃ ೨೧. ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ ೨೨. ಅವಸ್ಥಿತೇರಿತಿ ಕಾಶಕೃತ್ಸ್ನಃ ೨೩. ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್

೨೪. ಅಭಿಧ್ಯೋಪದೇಶಾಚ್ಚ ೨೫. ಸಾಕ್ಷಾಚ್ಚೋಭಯಾಮ್ನಾನಾತ್ ೨೬. ಆತ್ಮಕೃತೇಃ ಪರಿಣಾಮಾತ್* ೨೭. ಯೋನಿಶ್ಚ ಹಿ ಗೀಯತೇ. ೨೮. **ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ** ॥

**ಇತಿ ವೇದಾನ್ತಸೂತ್ರಪಾಠೇ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ**

**ಇತಿ ಪ್ರಥಮೋಽಧ್ಯಾಯಃ**

## ಅಥ ದ್ವಿತೀಯಾಧ್ಯಾಯೇ ಪ್ರಥಮಃ ಪಾದಃ

೧. **ಸ್ಮೃತ್ಯನವಕಾಶದೋಷಪ್ರಸಙ್ಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಙ್ಗಾತ್** ೨. ಇತರೇಷಾಂ ಚಾನುಪಲಬ್ಧೇಃ ೩. **ಏತೇನ ಯೋಗಃ ಪ್ರತ್ಯುಕ್ತಃ** ೪. **ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್** ೫. ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ ೬. ದೃಶ್ಯತೇ ತು ೭. ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ೮. ಅಪೀತೌ ತದ್ವತ್ಪ್ರಸಙ್ಗಾದಸಮಞ್ಜಸಮ್ ೯. ನ ತು ದೃಷ್ಟಾನ್ತಭಾವಾತ್ ೧೦. ಸ್ವಪಕ್ಷದೋಷಾಚ್ಚ ೧೧. ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯವಿಮೋಕ್ಷಪ್ರಸಙ್ಗಃ ೧೨. **ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ** ೧೩. ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ೧೪. **ತದನನ್ಯತ್ವಮಾರಮ್ಭಣಶಬ್ದಾದಿಭ್ಯಃ** ೧೫. ಭಾವೇ ಚೋಪಲಬ್ಧೇಃ‡ ೧೬. ಸತ್ತ್ವಾಚ್ಚಾವರಸ್ಯ ೧೭. ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾನ್ತರೇಣ ವಾಕ್ಯಶೇಷಾತ್ ೧೮. ಯುಕ್ತೇಃ ಶಬ್ದಾನ್ತರಾಚ್ಚ ೧೯. ಪಟವಚ್ಚ ೨೦. ಯಥಾ ಚ ಪ್ರಾಣಾದಿ ೨೧. **ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ** ೨೨. ಅಧಿಕಂ ತು ಭೇದನಿರ್ದೇಶಾತ್ ೨೩. ಅಶ್ಮಾದಿವಚ್ಚ ತದನುಪಪತ್ತಿಃ ೨೪. **ಉಪಸಂಹಾರದರ್ಶನಾನ್ನೇತಿ ಚೇನ್ನ ಕ್ಷೀರವದ್ಧಿ** ೨೫. ದೇವಾದಿವದಪಿ ಲೋಕೇ ೨೬. **ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ** ೨೭. ಶ್ರುತೇಸ್ತು ಶಬ್ದಮೂಲತ್ವಾತ್ ೨೮. ಆತ್ಮನಿ ಚೈವಂ ವಿಚಿತ್ರಾಶ್ಚ ಹಿ ೨೯. ಸ್ವಪಕ್ಷದೋಷಾಚ್ಚ ೩೦. **ಸರ್ವೋಪೇತಾ ಚ ತದ್ದರ್ಶನಾತ್** ೩೧. ವಿಕರಣತ್ವಾನ್ನೇತಿ ಚೇತ್ ತದುಕ್ತಮ್ ೩೨. **ನ ಪ್ರಯೋಜನವತ್ತ್ವಾತ್** ೩೩. ಲೋಕವತ್ತು ಲೀಲಾಕೈವಲ್ಯಮ್ ೩೪. **ವೈಷಮ್ಯ**

---

* ಇಲ್ಲಿ 'ಪರಿಣಾಮಾತ್' ಎಂಬುದಿಷ್ಟೇ ಬೇರೊಂದು ಸೂತ್ರವೆಂಬ ಮತವನ್ನು ಚಾರ್ಯರು ಸೂಚಿಸಿರುತ್ತಾರೆ.

‡ 'ಭಾಬಾಚ್ಚೋಪಲಬ್ಧೇಃ' ಪಾ॥

**ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ** ೩೫. ನ ಕರ್ಮವಿಭಾಗಾದಿತಿ ಚೇನ್ನಾನಾದಿತ್ವಾತ್ ೩೬. ಉಪಪದ್ಯತೇ ಚಾಪ್ಯುಪಲಭ್ಯತೇ ಚ ೩೭. **ಸರ್ವಧರ್ಮೋಪಪತ್ತೇಶ್ಚ** ॥

ಇತಿ ವೇದಾನ್ತಸೂತ್ರಪಾಠೇ ದ್ವಿತೀಯಾಧ್ಯಾಯಸ್ಯ ಪ್ರಥಮಃ ಪಾದಃ

## ಅಥ ದ್ವಿತೀಯಾಧ್ಯಾಯೇ ದ್ವಿತೀಯಃ ಪಾದಃ

೧. **ರಚನಾನುಪಪತ್ತೇಶ್ಚ ನಾನುಮಾನಮ್** ೨. ಪ್ರವೃತ್ತೇಶ್ಚ ೩. ಪಯೋಽಮ್ಬುವಚ್ಚೇತ್ ತತ್ರಾಪಿ ೪. ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ೫. ಅನ್ಯತ್ರಾಭಾವಾಚ್ಚ ನ ತೃಣಾದಿವತ್ ೬. ಅಭ್ಯುಪಗಮೇಽಪ್ಯರ್ಥಾಭಾವಾತ್ ೭. ಪುರುಷಾಶ್ಮವದಿತಿ ಚೇತ್ ತಥಾಪಿ ೮. ಅಙ್ಗಿತ್ವಾನುಪಪತ್ತೇಶ್ಚ ೯. ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್ ೧೦. ವಿಪ್ರತಿಷೇಧಾಚ್ಚಾಸಮಞ್ಜಸಮ್ ೧೧. **ಮಹದ್ದೀರ್ಘವದ್ವಾ ಹ್ರಸ್ವಪರಿಮಣ್ಡಲಾಭ್ಯಾಮ್** ೧೨. **ಉಭಯಥಾಪಿ ಚ ನ ಕರ್ಮಾತಸ್ತದಭಾವಃ** ೧೩. ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ೧೪. ನಿತ್ಯಮೇವ ಚ ಭಾವಾತ್ ೧೫. ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ೧೬. ಉಭಯಥಾ ಚ ದೋಷಾತ್ ೧೭. ಅಪರಿಗ್ರಹಾಚ್ಚಾತ್ಯನ್ತಮನಪೇಕ್ಷಾ ೧೮. **ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ** ೧೯. ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್ ೨೦. ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ೨೧. ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ೨೨. ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ೨೩. ಉಭಯಥಾ ಚ ದೋಷಾತ್ ೨೪. ಆಕಾಶೇ ಚಾವಿಶೇಷಾತ್ ೨೫. ಅನುಸ್ಮೃತೇಶ್ಚ ೨೬ ನಾಸತೋಽದೃಷ್ಟತ್ವಾತ್ ೨೭. ಉದಾಸೀನಾನಾಮಪಿ ಚೈವಂ ಸಿದ್ಧಿಃ ೨೮. **ನಾಭಾವ ಉಪಲಬ್ಧೇಃ** ೨೯. ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ೩೦. ನ ಭಾವೋಽನುಪಲಬ್ಧೇಃ ೩೧. ಕ್ಷಣಿಕತ್ವಾಚ್ಚ ೩೨. ಸರ್ವಥಾನುಪಪತ್ತೇಶ್ಚ ೩೩. **ನೈಕಸ್ಮಿನ್ನಸಂಭವಾತ್** ೩೪. ಏವಂ ಚಾತ್ಮಾಕಾರ್ತ್ಸ್ನ್ಯಮ್ ೩೫. ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ೩೬. ಅನ್ತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಃ ೩೭. **ಪತ್ಯುರಸಾಮಞ್ಜಸ್ಯಾತ್** ೩೮. ಸಂಬನ್ಧಾನುಪಪತ್ತೇಶ್ಚ ೩೯. ಅಧಿಷ್ಠಾನಾನುಪಪತ್ತೇಶ್ಚ ೪೦. ಕರಣವಚ್ಚೇನ್ನ ಭೋಗಾದಿಭ್ಯಃ ೪೧. ಅನ್ತವತ್ತ್ವಮಸರ್ವಜ್ಞತಾ ವಾ ೪೨. **ಉತ್ಪತ್ತ್ಯಸಂಭವಾತ್** ೪೩. ನ ಚ ಕರ್ತುಃ ಕರಣಮ್

**ಮಪಿ ಚ ಶ್ರುತಮ್** ೧೩. ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ೧೪. ಸ್ಮರನ್ತಿ **ಚ** ೧೫. **ಅಪಿ ಚ** ಸಪ್ತ ೧೬. ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ೧೭. ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ೧೮. ನ ತೃತೀಯೇ ತಥೋಪಲಬ್ಧೇಃ ೧೯. ಸ್ಮರ್ಯತೇಽಪಿ ಚ ಲೋಕೇ ೨೦. ದರ್ಶನಾಚ್ಚ ೨೧. ತೃತೀಯಶಬ್ದಾವರೋಧಃ ಸಂಶೋಕಜಸ್ಯ ೨೨. **ಸಾಭಾವ್ಯಾಪತ್ತಿರುಪಪತ್ತೇಃ** ೨೩. **ನಾತಿಚಿರೇಣ ವಿಶೇಷಾತ್** ೨೪. **ಅನ್ಯಾಧಿಷ್ಠಿತೇಷು ಪೂರ್ವವದಭಿಲಾಪಾತ್** ೨೫. ಅಶುದ್ಧಮಿತಿ ಚೇನ್ನ ಶಬ್ದಾತ್ ೨೬. ರೇತಃಸಿಗ್ಯೋಗೋಽಥ ೨೭. ಯೋನೇಃ ಶರೀರಮ್ ॥

**ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ**

## ಅಥ ತೃತೀಯಾಧ್ಯಾಯೇ ದ್ವಿತೀಯಃ ಪಾದಃ

೧. **ಸನ್ಧ್ಯೇ ಸೃಷ್ಟಿರಾಹ ಹಿ** ೨. ನಿರ್ಮಾತರಂ ಚೈಕೇ ಪುತ್ರಾದಯಶ್ಚ ೩. ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ೪. ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ೫. ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬನ್ಧವಿಪರ್ಯಯೌ ೬. ದೇಹಯೋಗಾದ್ವಾ ಸೋಽಪಿ ೭. **ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಚ** ೮. ಅತಃ ಪ್ರಬೋಧೋಽಸ್ಮಾತ್ ೯. **ಸ ಏವ ತು ಕರ್ಮಾನುಸ್ಮೃತಿಶಬ್ದವಿಧಿಭ್ಯಃ** ೧೦. **ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್** ೧೧. **ನ ಸ್ಥಾನತೋಽಪಿ ಪರಸ್ಯೋಭಯಲಿಙ್ಗಂ ಸರ್ವತ್ರ ಹಿ** ೧೨. ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ೧೩. ಅಪಿ ಚೈವಮೇಕೇ ೧೪. ಅರೂಪವದೇವ ಹಿ ತತ್ಪ್ರಧಾನತ್ವಾತ್ ೧೫. ಪ್ರಕಾಶವಚ್ಚಾವೈಯರ್ಥ್ಯಾತ್ ೧೬. ಆಹ ಚ ತನ್ಮಾತ್ರಮ್ ೧೭. ದರ್ಶಯತಿ ಚಾಥೋ ಅಪಿ ಸ್ಮರ್ಯತೇ ೧೮. ಅತ ಏವ ಚೋಪಮಾ ಸೂರ್ಯಕಾದಿವತ್ ೧೯. ಅಮ್ಬುವದಗ್ರಹಣಾತ್ತು ನ ತಥಾತ್ವಮ್ ೨೦. ವೃದ್ಧಿಹ್ರಾಸಭಾಕ್ತ್ವಮನ್ತರ್ಭಾವಾದುಭಯಸಾಮಞ್ಜಸ್ಯಾದೇವಮ್ ೨೧. ದರ್ಶನಾಚ್ಚ ೨೨. **ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ** ೨೩. ತದವ್ಯಕ್ತಮಾಹ ಹಿ ೨೪. ಅಪಿ ಚ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ೨೫. ಪ್ರಕಾಶಾದಿವಚ್ಚಾವೈಶೇಷ್ಯಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ೨೬. ಅತೋಽನನ್ತೇನ ತಥಾ ಹಿ ಲಿಙ್ಗಮ್ ೨೭. ಉಭಯವ್ಯಪದೇಶಾತ್ತ್ವಹಿಕುಣ್ಡಲವತ್ ೨೮. ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ೨೯. ಪೂರ್ವವದ್ವಾ

೩೦. ಪ್ರತಿಷೇಧಾಚ್ಚ ೩೧. **ಪರಮತಃ ಸೇತೂನ್ಮಾನಸಂಬನ್ಧಭೇದವ್ಯಪದೇಶೇಭ್ಯಃ** ೩೨. ಸಾಮಾನ್ಯಾತ್ತು ೩೩. ಬುದ್ಧ್ಯರ್ಥಃ ಪಾದವತ್ ೩೪ ಸ್ಥಾನವಿಶೇಷಾತ್ ಪ್ರಕಾಶಾದಿವತ್ ೩೫. ಉಪಪತ್ತೇಶ್ಚ ೩೬. ತಥಾನ್ಯಪ್ರತಿಷೇಧಾತ್ ೩೭. ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ ೩೮. **ಫಲಮತ ಉಪಪತ್ತೇಃ** ೩೯. ಶ್ರುತತ್ವಾಚ್ಚ ೪೦. ಧರ್ಮಂ **ಜೈಮಿನಿರತ ಏವ** ೪೧. ಪೂರ್ವಂ ತು ಬಾದರಾಯಣೋ ಹೇತು ವ್ಯಪದೇಶಾತ್ ॥

**ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದಃ**

## ಅಥ ತೃತೀಯಾಧ್ಯಾಯೇ ತೃತೀಯಃ ಪಾದಃ

೧. **ಸರ್ವವೇದಾನ್ತಪ್ರತ್ಯಯಂ ಚೋದನಾದ್ಯವಿಶೇಷಾತ್** ೨. ಭೇದಾನ್ನೇತಿ ಚೇನ್ನೈಕಸ್ಯಾಮಪಿ ೩. ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಸವವಚ್ಚ ತನ್ನಿಯಮಃ ೪. ದರ್ಶಯತಿ ಚ ೫. **ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ ಸಮಾನೇ ಚ** ೬. **ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್** ೭. ನ ವಾ ಪ್ರಕರಣಭೇದಾತ್ ಪರೋವರೀಯಸ್ತ್ವಾದಿವತ್ ೮. ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ೯. **ವ್ಯಾಪ್ತೇಶ್ಚ ಸಮಞ್ಜಸಮ್** ೧೦. **ಸರ್ವಾಭೇದಾದನ್ಯತ್ರೇಮೇ** ೧೧. **ಆನನ್ದಾದಯಃ ಪ್ರಧಾನಸ್ಯ** ೧೨. ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ೧೩. ಇತರೇ ತ್ವರ್ಥಸಾಮಾನ್ಯಾತ್ ೧೪. **ಆಧ್ಯಾನಾಯ ಪ್ರಯೋಜನಾಭಾವಾತ್** ೧೫ ಆತ್ಮಶಬ್ದಾಚ್ಚ ೧೬. **ಆತ್ಮಗೃಹೀತಿರಿತರವದುತ್ತರಾತ್** ೧೭ ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ೧೮. **ಕಾರ್ಯಾಖ್ಯಾನಾದಪೂರ್ವಮ್** ೧೯. **ಸಮಾನ ಏವಂ ಚಾಭೇದಾತ್** ೨೦. ಸಂಬನ್ಧಾದೇವಮನ್ಯತ್ರಾಪಿ ೨೧. ನ ವಾ ವಿಶೇಷಾತ್ ೨೨. ದರ್ಶಯತಿ ಚ ೨೩. **ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ** ೨೪. **ಪುರುಷವಿದ್ಯಾಯಾಮಿವ ಚೇತರೇಷಾಮನಾಮ್ನಾನಾತ್** ೨೫. **ವೇಧಾದ್ಯರ್ಥಭೇದಾತ್** ೨೬. **ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛನ್ದಸ್ತುತ್ಯುಪಗಾನವತ್ ತದುಕ್ತಮ್** ೨೭. **ಸಾಂಪರಾಯೇ ಕರ್ತವ್ಯಾಭಾವಾತ್ತಥಾ ಹ್ಯನ್ಯೇ** ೨೮. ಛನ್ದತ ಉಭಯಾವಿರೋಧಾತ್ ೨೯. **ಗತೇರರ್ಥವತ್ತ್ವಮುಭಯಥಾನ್ಯಥಾ ಹಿ ವಿರೋಧಃ** ೩೦. ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ೩೧ **ಅನಿಯಮಃ ಸರ್ವಾಸಾಮವಿರೋಧಃ ಶಬ್ದಾನುಮಾನಾಭ್ಯಾಮ್** ೩೨. **ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್** ೩೩. **ಅಕ್ಷರ**

**ಧಿಯಾಂ ತ್ವವರೋಧಃ ಸಾಮಾನ್ಯತದ್ಭಾವಾಭ್ಯಾಮೌಪಸದವತ್ ತದುಕ್ತಮ್** ೩೪. ಇಯದಾಮನನಾತ್ ೩೫. **ಅನ್ತರಾ ಭೂತಗ್ರಾಮವತ್ ಸ್ವಾತ್ಮನಃ** ೩೬. ಅನ್ಯಥಾ ಭೇದಾಽನುಪಪತ್ತಿರಿತಿ ಚೇನ್ನೋಪದೇಶಾನ್ತರವತ್ ೩೭. **ವ್ಯತಿಹಾರೋ ವಿಶಿಂಷನ್ತಿ ಹೀತರವತ್** ೩೮. **ಸೈವ ಹಿ ಸತ್ಯಾದಯಃ** ೩೯. **ಕಾಮಾದೀತರತ್ರ ತತ್ರ ಚಾಯತನಾದಿಭ್ಯಃ** ೪೦. **ಆದರಾದಲೋಪಃ** ೪೧. ಉಪಸ್ಥಿತೇಽತಸ್ತದ್ವಚನಾತ್ ೪೨. **ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬನ್ಧಃ ಫಲಮ್** ೪೩. **ಪ್ರದಾನವದೇವ ತದುಕ್ತಮ್** ೪೪. **ಲಿಙ್ಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ** ೪೫ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್ ೪೬. ಅತಿದೇಶಾಚ್ಚ ೪೭. ವಿದ್ಯೈವ ತು ನಿರ್ಧಾರಣಾತ್ ೪೮. ದರ್ಶನಾಚ್ಚ ೪೯. ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ೫೦. ಅನುಬನ್ಧಾದಿಭ್ಯಃ ಪ್ರಜ್ಞಾನ್ತರಪೃಥಕ್ತ್ವವತ್ ದೃಷ್ಟಶ್ಚ ತದುಕ್ತಮ್ ೫೧. ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ **ಲೋಕಾಪತ್ತಿಃ** ೫೨. ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬನ್ಧಃ ೫೩. **ಏಕ ಆತ್ಮನಃ ಶರೀರೇ ಭಾವಾತ್** ೫೪. ವ್ಯತಿರೇಕಸ್ತದ್ಭಾವಾಭಾವಿತ್ವಾನ್ನ ತೂಪಲಬ್ಧಿವತ್ ೫೫. ಅಙ್ಗಾವಬದ್ಧಾಸ್ತು **ನ ಶಾಖಾಸು ಹಿ ಪ್ರತಿವೇದಮ್** ೫೬. ಮನ್ತ್ರಾದಿವದ್ವಾವಿರೋಧಃ ೫೭. **ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶಯತಿ** ೫೮. **ನಾನಾಶಬ್ದಾದಿಭೇದಾತ್** ೫೯. **ವಿಕಲ್ಪೋಽವಿಶಿಷ್ಟಫಲತ್ವಾತ್** ೬೦. **ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ ವಾ ಪೂರ್ವಹೇತ್ವಭಾವಾತ್** ೬೧. **ಅಙ್ಗೇಷು ಯಥಾಶ್ರಯಭಾವಃ** ೬೨. ಶಿಷ್ಟೇಶ್ಚ ೬೩. ಸಮಾಹಾರಾತ್ ೬೪. ಗುಣಸಾಧಾರಣ್ಯಶ್ರುತೇಶ್ಚ ೬೫ ನ ವಾ ತತ್ಸಹಭಾವಾಶ್ರುತೇಃ ೬೬. ದರ್ಶನಾಚ್ಚ ॥

**ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ**

## ಅಥ ತೃತೀಯಾಧ್ಯಾಯೇ ಚತುರ್ಥಃ ಪಾದಃ

೧. **ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ** ೨. ಶೇಷತ್ವಾತ್ ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ ೩. ಆಚಾರದರ್ಶನಾತ್ ೪. ತಚ್ಛ್ರುತೇಃ ೫. ಸಮನ್ವಾರಮ್ಭಣಾತ್ ೬. ತದ್ವತೋ ವಿಧಾನಾತ್ ೭. ನಿಯಮಾಚ್ಚ ೮. ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ೯. ತುಲ್ಯಂ ತು ದರ್ಶನಮ್ ೧೦. ಅಸಾರ್ವತ್ರಿಕೀ ೧೧. ವಿಭಾಗಃ ಶತವತ್ ೧೨. ಅಧ್ಯಯನಮಾತ್ರವತಃ ೧೩. ನಾವಿ

ಶೇಷಾತ್ ೧೪. ಸ್ತುತಯೇಽನುಮತಿರ್ವಾ ೧೫. ಕಾಮಕಾರೇಣ ಚೈಕೇ ೧೬. ಉಪಮರ್ದಂ ಚ ೧೭. ಊರ್ಧ್ವರೇತಃಸು ಚ ಶಬ್ದೇ ಹಿ ೧೮. **ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ** ೧೯. ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ೨೦. ವಿಧಿರ್ವಾ ಧಾರಣವತ್ ೨೧. **ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್** ೨೨. ಭಾವಶಬ್ದಾಚ್ಚ ೨೩. **ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್** ೨೪. ತಥಾ ಚೈಕವಾಕ್ಯತೋಪಬನ್ಧಾತ್ ೨೫. **ಅತ ಏವ ಚಾಗ್ನೀನ್ಧನಾದ್ಯನಪೇಕ್ಷಾ** ೨೬. **ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್** ೨೭. ಶಮದಮಾದ್ಯುಪೇತಃ ಸ್ಯಾತ್ ತಥಾಪಿ ತು ತದ್ವಿಧೇಸ್ತದಙ್ಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ೨೮. **ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್** ೨೯. ಅಬಾಧಾಚ್ಚ ೩೦. ಅಪಿ ಚ ಸ್ಮರ್ಯತೇ ೩೧. ಶಬ್ದಶ್ಚಾತೋಽಕಾಮಕಾರೇ ೩೨ **ವಿಹಿತತ್ವಾಚ್ಚಾಶ್ರಮಕರ್ಮಾಪಿ** ೩೩. ಸಹಕಾರಿತ್ವೇನ ಚ ೩೪. ಸರ್ವಥಾಪಿ ತ ಏವೋಭಯಲಿಙ್ಗಾತ್ ೩೫. ಅನಭಿಭವಂ ಚ ದರ್ಶಯತಿ ೩೬. **ಅನ್ತರಾ ಚಾಪಿ ತು ತದ್ದೃಷ್ಟೇಃ** ೩೭. ಅಪಿ ಚ ಸ್ಮರ್ಯತೇ ೩೮. ವಿಶೇಷಾನುಗ್ರಹಶ್ಚ ೩೯. ಅತಸ್ತ್ವಿತರಜ್ಜ್ಯಾಯೋ ಲಿಙ್ಗಾಚ್ಚ ೪೦. **ತದ್ಭೂತಸ್ಯ ತು ನಾತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ** ೪೧. **ನ ಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್** ೪೨. ಉಪಪೂರ್ವಮಪಿ ತ್ವೇಕೇ ಭಾವಮಶನವತ್ ತದುಕ್ತಮ್ ೪೩. **ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ** ೪೪ **ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ** ೪೫. ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರೀಯತೇ ೪೬. ಶ್ರುತೇಶ್ಚ ೪೭. **ಸಹಕಾರ್ಯನ್ತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್** ೪೮. ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ೪೯. ಮೌನವದಿತರೇಷಾಮಪ್ಯುಪದೇಶಾತ್ ೫೦. **ಅನಾವಿಷ್ಕುರ್ವನ್ನನ್ವಯಾತ್** ೫೧. **ಐಹಿಕಮಪ್ಯಪ್ರಸ್ತುತಪ್ರತಿಬನ್ಧೇ ತದ್ದರ್ಶನಾತ್** ೫೨. **ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ** ||

**ಇತಿ ವೇದಾನ್ತಸೂತ್ರಪಾಠೇ ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ**

**ಇತಿ ತೃತೀಯೋಽಧ್ಯಾಯಃ**

## ಅಥ ಚತುರ್ಥೋಽಧ್ಯಾಯೇ ಪ್ರಥಮಃ ಪಾದಃ

೧ **ಆವೃತ್ತಿರಸಕೃದುಪದೇಶಾತ್** ೨. ಲಿಙ್ಗಾಚ್ಚ ೩. **ಆತ್ಮೇತಿ ತೂಪಗಚ್ಛನ್ತಿ ಗ್ರಾಹಯನ್ತಿ ಚ** ೪. **ನ ಪ್ರತೀಕೇ ನ ಹಿ ಸಃ**

೫. ಬ್ರಹ್ಮದೃಷ್ಟಿರುತ್ಕರ್ಷಾತ್ ೬. ಆದಿತ್ಯಾದಿಮತಯಶ್ಚಾಙ್ಗ ಉಪಪತ್ತೇಃ ೭. ಆಸೀನಃ ಸಂಭವಾತ್ ೮. ಧ್ಯಾನಾಚ್ಚ ೯. ಅಚಲತ್ವಂ ಚಾಪೇಕ್ಷ್ಯ ೧೦. ಸ್ಮರನ್ತಿ ಚ ೧೧ ಯತ್ರೈಕಾಗ್ರತಾ ತತ್ರಾವಿಶೇಷಾತ್ ೧೨. ಆ ಪ್ರಾಯಣಾದ್ ತತ್ರಾಪಿ ಹಿ ದೃಷ್ಟಮ್ ೧೩. ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ೧೪. ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ೧೫. ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ೧೬. ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ೧೭. ಅತೋಽನ್ಯಾಪಿ ಹ್ಯೇಕೇಷಾಮುಭಯೋಃ ೧೮. ಯದೇವ ವಿದ್ಯಯೇತಿ ಹಿ ೧೯. ಭೋಗೇನ ತ್ವಿತರೇ ಕ್ಷಪಯಿತ್ವಾ ಸಂಪದ್ಯತೇ ॥

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ಪ್ರಥಮಃ ಪಾದಃ

## ಅಥ ಚತುರ್ಥಾಧ್ಯಾಯೇ ದ್ವಿತೀಯಃ ಪಾದಃ

೧. ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ೨. ಅತ ಏವ ಚ ಸರ್ವಾಣ್ಯನು ೩. ತನ್ಮನಃ ಪ್ರಾಣ ಉತ್ತರಾತ್ ೪. ಸೋಽಧ್ಯಕ್ಷೇ ತದುಪಗಮಾದಿಭ್ಯಃ ೫. ಭೂತೇಷು ತಚ್ಛ್ರುತೇಃ ೬. ನೈಕಸ್ಮಿನ್ ದರ್ಶಯತೋ ಹಿ ೭. ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ೮. ತದಾಪೀತೇಃ ಸಂಸಾರವ್ಯಪದೇಶಾತ್ ೯. ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ೧೦. ನೋಪಮರ್ದೇನಾತಃ ೧೧. ಅಸ್ಯೈವ ಚೋಪಪತ್ತೇರೇಷ ಊಷ್ಮಾ ೧೨. ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ೧೩. ಸ್ಪಷ್ಟೋ ಹ್ಯೇಕೇಷಾಮ್ ೧೪. ಸ್ಮರ್ಯತೇ ಚ ೧೫. ತಾನಿ ಪರೇ ತಥಾ ಹ್ಯಾಹ ೧೬. ಅವಿಭಾಗೋ ವಚನಾತ್ ೧೭. ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ೧೮. ರಶ್ಮ್ಯನುಸಾರೀ ೧೯. ನಿಶಿ ನೇತಿ ಚೇನ್ನ ಸಂಬನ್ಧಸ್ಯ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ೨೦. ಅತಶ್ಚಾಯನೇಽಪಿ ಹಿ ದಕ್ಷಿಣೇ ೨೧. ಯೋಗಿನಃ ಪ್ರತಿ ಚ ಸ್ಮರ್ಯತೇ ಸ್ಮಾರ್ತೇ ಚೈತೇ ॥

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ

## ಅಥ ಚತುರ್ಥಾಧ್ಯಾಯೇ ತೃತೀಯಃ ಪಾದಃ

೧. ಅರ್ಚಿರಾದಿನಾ ತತ್ಪ್ರಥಿತೇಃ ೨. ವಾಯುಮಬ್ದಾದವಿಶೇಷವಿಶೇಷಾಭ್ಯಾಮ್ ೩. ತಡಿತೋಽಪಿ ವರುಣಃ ಸಂಬನ್ಧಾತ್

**೪. ಆತಿವಾಹಿಕಾಸ್ತಲ್ಲಿಙ್ಗಾತ್** ೫. ಉಭಯವ್ಯಾಮೋಹಾತ್ ತತ್ಸಿದ್ಧೇಃ ೬. ವೈದ್ಯುತೇನೈವ ತತಸ್ತಚ್ಛ್ರುತೇಃ **೭. ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ** ೮. ವಿಶೇಷಿತತ್ವಾಚ್ಚ ೯. ಸಾಮೀಪ್ಯಾತ್ತು ತದ್ವ್ಯಪದೇಶಃ ೧೦. ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃಪರಮಭಿಧಾನಾತ್ ೧೧. ಸ್ಮೃತೇಶ್ಚ ೧೨. ಪರಂ ಜೈಮಿನಿರ್ಮುಖ್ಯತ್ವಾತ್ ೧೩. ದರ್ಶನಾಚ್ಚ ೧೪. ನ ಚ ಕಾರ್ಯೇ ಪ್ರತಿಪತ್ತ್ಯಭಿಸನ್ಧಿಃ ೧೫. **ಅಪ್ರತೀಕಾಲಮ್ಬನಾನ್ನಯತೀತಿ ಬಾದರಾಯಣ ಉಭಯಥಾ ದೋಷಾತ್ ತತ್ಕ್ರತುಶ್ಚ** ೧೬. ವಿಶೇಷಂ ಚ ದರ್ಶಯತಿ ॥

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ

## ಅಥ ಚತುರ್ಥಾಧ್ಯಾಯೇ ಚತುರ್ಥಃ ಪಾದಃ

೧. **ಸಂಪದ್ಯಾವಿರ್ಭಾವಃ ಸ್ವೇನ ಶಬ್ದಾತ್** ೨. ಮುಕ್ತಃ ಪ್ರತಿಜ್ಞಾನಾತ್ ೩. ಆತ್ಮಾ ಪ್ರಕರಣಾತ್ **೪. ಅವಿಭಾಗೇನ ದೃಷ್ಟತ್ವಾತ್ ೫. ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ೬. ಚಿತಿತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ** ೭. ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ **೮. ಸಂಕಲ್ಪಾದೇವ ತು ತಚ್ಛ್ರುತೇಃ** ೯. ಅತ ಏವ ಚಾನನ್ಯಾಧಿಪತಿಃ **೧೦. ಅಭಾವಂ ಬಾದರಿರಾಹ ಹ್ಯೇವಮ್** ೧೧. ಭಾವಂ ಜೈಮಿನಿರ್ವಿಕಲ್ಪಾಮನನಾತ್ ೧೨. ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ೧೩. ತನ್ವಭಾವೇ ಸನ್ಧ್ಯವದುಪಪತ್ತೇಃ ೧೪. ಭಾವೇ ಜಾಗ್ರದ್ವತ್ **೧೫. ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ** ೧೬. ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ೧೭. **ಜಗದ್ವ್ಯಾಪಾರವರ್ಜಂ ಪ್ರಕರಣಾದಸಂನಿಹಿತತ್ವಾಚ್ಚ** ೧೮. ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕಮಣ್ಡಲಸ್ಥೋಕ್ತೇಃ ೧೯. ವಿಕಾರಾವರ್ತಿ ಚ ತಥಾ ಹಿ ಸ್ಥಿತಿಮಾಹ ೨೦. ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ೨೧. ಭೋಗಮಾತ್ರಸಾಮ್ಯಲಿಙ್ಗಾಚ್ಚ ೨೨. ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ॥

ಇತಿ ವೇದಾನ್ತಸೂತ್ರಪಾಠೇ ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ

**ಇತಿ ಚತುರ್ಥೋಽಧ್ಯಾಯಃ**

**ಇತಿ ಶ್ರೀ ಬಾದರಾಯಣೀಯವೇದಾನ್ತಸೂತ್ರಪಾಠಃ ಸಮಾಪ್ತಃ**



# ಸೂತ್ರಗಳ ಅಕ್ಷರಾನುಕ್ರಮಣಿಕೆ

**ವಿಶೇಷ:** ಈ ಸಂಪುಟದಲ್ಲಿ ಬಂದಿರುವ ಸೂತ್ರಗಳಿಗೆ ಮಾತ್ರ ಇಲ್ಲಿ ವರ್ಣಾನುಕ್ರಮಣಿಕೆಯನ್ನು ಕೊಟ್ಟಿದೆ. ಅಧ್ಯಾಯ, ಪಾದ, ಸೂತ್ರ -ಇವುಗಳ ಸಂಖ್ಯೆಯನ್ನು ಕೊಟ್ಟು, ಕಡೆಯಲ್ಲಿ ಪುಟದ ಸಂಖ್ಯೆಯನ್ನು ಹಾಕಿದೆ.

# ಶಬ್ದಾನುಕ್ರಮಣಿಕೆ

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯಭಾಗದ ಸಂಖ್ಯೆಗಳು. ಬಹಳ ಸಂಖ್ಯೆಗಳಿರುವಲ್ಲಿ ಕೆಲವನ್ನು ಮಾತ್ರ ಕೊಟ್ಟಿದೆ.

**೧೪. ಅಧಿಕಾರಃ—**
(೧) ಪ್ರಕರಣದ ಆರಂಭ, ಪ್ರಕರಣ, ೧೧, ೧೦೩; (೨) ಅನುಷ್ಠಾನಕ್ಕೆ ಅಥವಾ ಜ್ಞಾನಕ್ಕೆ ತಕ್ಕ ಯೋಗ್ಯತೆ, ೨೭೯, ೨೮೧, ೨೮೨, ೩೦೦, ೩೦೫, ೩೦೬, ೩೦೭, ೩೦೯, ೩೧೦, ೩೧೧, ೩೧೨, ೩೧೩.

**೧೫. ಅಧಿಕಾರಿತಾರತಮ್ಯಮ್—**
ಅಧಿಕಾರಿಗಳಲ್ಲಿರುವ ಯೋಗ್ಯತೆಯ ಹೆಚ್ಚುಕಡಿಮೆ, ೪೨

**೧೬. ಅಧಿಕೃತಾಧಿಕಾರಃ—**
ಒಂದು ಅನುಷ್ಠಾನಕ್ಕೆ ಅಧಿಕಾರವಿರುವವನಿಗೆ, ಮತ್ತೊಂದರಲ್ಲಿ ಅಧಿಕಾರವಿರುವಿಕೆ, ೧೨.

**೧೭. ಅಧಿದೈವ, ಅಧಿದೈವತ—**
ದೇವತೆಗಳಾದ ಸೂರ್ಯಾದಿಗಳ ವಿಷಯದ್ದು, ೧೧೨, ೧೮೮, ೨೧೦, ೨೧೨,

**೧೮. ಅಧಿಭೂತ—**
ಪೃಥಿವ್ಯಾದಿಭೂತಗಳ ವಿಷಯದ್ದು, ೧೮೮.

**೧೯. ಅಧಿಷ್ಠಾನಮ್—**
ಆಶ್ರಯ, ಭೋಗಕ್ಕೆ ಆಶ್ರಯವಾಗಿರುವ ಶರೀರ, ೫.

**೨೦. ಅಧಿಷ್ಠಾತೃ, ಅಧ್ಯಕ್ಷಃ—**
ಆಳುವ, ಮೇಲೆ ನೋಡಿಕೊಳ್ಳುವ (ಕರ್ತೃ, ಯಜಮಾನ, ದೇವತೆ ಇತ್ಯಾದಿ), ೧೭೬, ೩೦೨, ೩೬೯. ೩೯೧, ೪೧೪.

**೨೧. ಅಧ್ಯಾತ್ಮ—**
(೧) ಆತ್ಮನಿಗೆ ಸಂಬಂಧಪಟ್ಟ. ೧೩೯, ೪೦೭. (೨) ಶರೀರದ ಒಳಗಿರುವ, ೧೧೨, ೧೮೮, ೨೧೦, ೨೧೨.

**೨೨. ಅಧ್ಯಾತ್ಮಾದಿಭೇದಭಿನ್ನ—**
ಅಧ್ಯಾತ್ಮ, ಅಧಿಭೂತ, ಅಧಿದೈವ– ಹೀಗೆ ವಿಂಗಡಿಸಿಕೊಂಡಿರುವ, ೨೬೦.

**೨೩. ಅಧ್ವಾ—**
ಭೂತಭವಿಷ್ಯದ್ವರ್ತಮಾನಕಾಲ, ೪೨೮.

**೨೪. ಅನನ್ಯಶೇಷಃ—**
ಮತ್ತೊಂದಕ್ಕೆ ಅಧೀನವಾಗಿಲ್ಲದ (ಪರಮಾತ್ಮ), ೫೪.

**೨೫. ಅನನ್ತಃ—**
(೧) ಕಾಲಗಳಲ್ಲಿ ಕೊನೆಗಾಣದೆ ಇರುವ (ಅಧ್ಯಾಸ), ೯; (೨) ಪರಿಚ್ಛೇದವಿಲ್ಲದ (ಬ್ರಹ್ಮ), ೧೧೯, ೩೬೬.

**೨೬. ಅನಾತ್ಮಾ—**
ಆತ್ಮನಲ್ಲದ್ದು, ಆತ್ಮನಲ್ಲಿ ಕಲ್ಪಿತವಾಗಿರುವದು, ೩, ೮೩; ಸ್ವರೂಪವಲ್ಲದ್ದು, ೪೫೦.

**೨೭. ಅನಾದಿಃ—**
ಯಾವಾಗ ಮೊದಲಾಯಿತೆಂಬುದು ತಿಳಿಯದ (ಅಧ್ಯಾಸ), ೯, (ಜೀವನ ಶರೀರಕ್ಕೂ ಧರ್ಮಗಳಿಗೂ ಸಂಬಂಧ) ೫೮, (ಸಂಸಾರ) ೨೯೩, ೪೭೪, ೪೭೫, ೪೭೬.

**೨೮. ಅನುಭವಃ—**
ವೇದಾಂತಪ್ರಮಾಣದ ಕೊನೆಯಲ್ಲಾಗುವ ಅರಿವು, ೨೮, ೪೦೪, ೪೧೮..

**೨೯. ಅನುಮಾನಮ್—**
(೧) ಪ್ರತ್ಯಕ್ಷವಾಗಿರುವ ಗುರುತಿನಿಂದ ಅದರ ವ್ಯಾಪಕವಾದ ಪರೋಕ್ಷವಸ್ತುವನ್ನು ಗೊತ್ತುಪಡಿಸುವ ಪ್ರಮಾಣ, ೨೭, ೨೮, ೨೯, ೩೪, ೩೮; (೨) ವೇದಾಂತಾವಿರೋಧಿ ತರ್ಕ, ೨೮,೪೧೮; (೩) ಅನುಮಾನಪ್ರಮಾಣಗಮ್ಯವಾದ ಪ್ರಧಾನ, ೧೦೫, ೨೨೬; (೪) ಸ್ಮೃತಿ. ೨೮೭; (೫) ತಿಳಿಸುವ ಗುರುತು, ೨೦೮.

**೩೦. ಅನುಮಾನಗಮ್ಯ, ತರ್ಕಾವಗಾಹ್ಯ—**
ಅನುಮಾನದಿಂದ ತಿಳಿಯುವದಕ್ಕೆ ಶಕ್ಯವಾದ, ೩೯೬, ೪೬೯.

**೫೪. ಅನಭಿವ್ಯಕ್ತನಾಮರೂಪಮ್—**
ನಾಮರೂಪಗಳು ಹೊರತೋರಿಕೊಳ್ಳದ (ಪ್ರಪಂಚ), ೩೩೯.

**೫೫. ಅಭ್ಯುಚ್ಚಯಃ—**
ಹಿಂದೆ ಹೇಳಿದ್ದಕ್ಕೆ ಇನ್ನೂ ಒಂದನ್ನು ಸೇರಿಸಿ ಹೇಳಿದ ಯುಕ್ತಿ, ೩೭೭, ೩೯೩, ೪೫೭.

**೫೬. ಅಭ್ಯುದಯಃ—**
ಕರ್ಮದಿಂದಾಗುವ ಶ್ರೇಯಸ್ಸು, ೧೨, ೯೧, ೩೫೦, ೩೮೮, ೩೮೯.

**೫೭. ಅಮುಖ್ಯ ಆತ್ಮಾ, ಅಮುಖ್ಯಂ ಬ್ರಹ್ಮ—**
ಮುಖ್ಯಾರ್ಥದಲ್ಲಿ ಆತ್ಮನಲ್ಲದ, ಬ್ರಹ್ಮವಲ್ಲದ, ೯೫, ೯೭, ೩೭೨.

**೫೮. ಅಮೃತತ್ವಮ್—**
ನಾಶವಿಲ್ಲದ ಮುಕ್ತಿ, ೩೮೦, ೩೮೫.

**೫೯. ಅಯಃಪಿಣ್ಡಃ—**
(ಬೆಂಕಿಯ ಬಿಸಿಯ ನಿಮಿತ್ತದಿಂದ ಸುಡುವ) ಕಬ್ಬಿಣದ ಗಟ್ಟಿ, ೬೮.

**೬೦. ಅರುನ್ಧತೀ—**
ಒಂದು ನಕ್ಷತ್ರ. ಬಲುಸೂಕ್ಷ್ಮವಾಗಿರುವದನ್ನು ತಿಳಿಸುವದಕ್ಕೆ ಅದಕ್ಕೆ ಸಮಿಪವಾಗಿರುವ ಸ್ಥೂಲವಸ್ತುವನ್ನು ತಿಳಿಸುವದಕ್ಕೆ ಇದರ ದೃಷ್ಟಾಂತವನ್ನು ಕೊಡುವರು. (ಇದನ್ನು 'ಅರುಂಧತೀನ್ಯಾಯ' ಅಥವಾ 'ಸ್ಥೂಲಾರುಂಧತೀನ್ಯಾಯ' ಎಂದು ಕರೆಯುತ್ತಾರೆ), ೮೩, ೯೭.

**೬೧. ಅರ್ಥವಾದಃ—**
ವಿಹಿತವಾದದ್ದನ್ನು ಹೊಗಳುವ ವಾಕ್ಯ ಅಥವಾ ನಿಷಿದ್ಧವಾದದ್ದನ್ನು ನಿಂದಿಸುವ ವಾಕ್ಯ, ೫೬, ೨೮೧, ೨೮೬, ೨೯೯, ೩೦೨, ೩೯೩.

**೬೨. ಅರ್ಥಾನರ್ಥೌ—**
ಒಳ್ಳೆಯ ಕರ್ಮದಿಂದಾಗುವ ಪುರುಷಾರ್ಥ, ನಿಷಿದ್ಧಕರ್ಮದಿಂದಾಗುವ ಅನರ್ಥ– ಇವುಗಳು, ೪೨.

**೬೩. ಅರ್ಥಿತ್ವಾದಿ—**
ಪುರುಷಾರ್ಥವನ್ನು ಬಯಸುವದು, ಅನುಷ್ಠಾನಕ್ಕೆ ಯೋಗ್ಯನಾಗಿರುವದು, ಕರ್ಮವಿಚಾರವನ್ನು ತಿಳಿದಿರುವದು, ಕರ್ಮವನ್ನು ಮಾಡಕೂಡದೆಂದು ನಿಷಿದ್ಧನಾಗದೆ ಇರುವದು ಎಂಬ ಕರ್ಮಾಧಿಕಾರಲಕ್ಷಣಗಳು, ೨೮೧, ೩೦೫.

**೬೪. ಅರ್ಧಜರತೀಯಮ್—**
ಹೇಂಟೆಯ ಅರ್ಧವನ್ನು ಅಡಿಗೆಮಾಡಿ ಉಳಿದ ಅರ್ಧವನ್ನು ಮೊಟ್ಟೆಹಾಕುವದಕ್ಕೆ ಇಟ್ಟುಕೊಳ್ಳುವ ರೀತಿಯ ಅಭಿಪ್ರಾಯ, ೧೦೭, ೧೬೮.

**೬೫. ಅಲೌಕಿಕ—**
ಲೋಕಪ್ರಸಿದ್ಧವಲ್ಲದ, ಶಾಸ್ತ್ರಸಿದ್ಧವಾದ (ಯೂಪಾದಿ), ೩೯.

**೬೬. ಅವಗತಬ್ರಹ್ಮಾತ್ಮಭಾವಃ—**
ಬ್ರಹ್ಮವು ತನ್ನ ಸ್ವರೂಪವೆಂಬ ಅನುಭವವನ್ನು ಹೊಂದಿರುವಾತನು, ೫೭, ೬೦.

**೬೭. ಅವಗತಿಃ—**
ಫಲರೂಪವಾಗಿರುವಜ್ಞಾನ, (ಶಾಸ್ತ್ರದಿಂದಾಗುವ ಮೋಕ್ಷಕಾರಣಜ್ಞಾನ), ೧೪, ೧೮, ೬೧, ೬೪, ೪೩೮.

**೬೮. ಅವಗತಿಸಾಧನಾನಿ—**
ಶ್ರವಣಮನನಾದಿಗಳು, ವೇದಾನುವಚನ–ಮುಂತಾದವುಗಳು, ೪೩೮.

**೬೯. ಅವನಿಃ—**
ಭೂಮಿ (ಉಪಸಂಹಾರಕಾರಣಕ್ಕೆ ದೃಷ್ಟಾಂತ), ೩೯೮.

**೭೦. ಅವಸ್ಥಾಃ—**
(೧) ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅವಸ್ಥೆಗಳು, ಸೃಷ್ಟ್ಯಾದ್ಯವಸ್ಥೆಗಳು, ೪೨೪; (೨) ಯಾವದಾದರೊಂದು ಸ್ಥಿತಿ, ೪೩೫.

**೮೬. ಅವ್ಯಾಕೃತ–**
ಬೇರೆಬೇರೆಯಾಗಿ ವಿಂಗಡಿಸಿಕೊಳ್ಳದ (ನಾಮರೂಪ) ೨೦೧, ೩೫೭.

**೮೭ ಅಷ್ಟಕಾದಿಸ್ಮೃತಿಃ–**
ಅಷ್ಟಮಿಯಲ್ಲಿ ಮಾಡುವ ಯಾಗವೇ ಮುಂತಾದವುಗಳ ಸ್ಮೃತಿ. ಮೂಲ ಶ್ರುತಿಯಿಲ್ಲದಿದ್ದರೂ ಇದು ಪ್ರಮಾಣವೆಂದು ಜೈ. ೧–೩–೧೦ರಲ್ಲಿ ಹೇಳಿದೆ. (ಯೋಗಸ್ಮೃತಿಗೆ ದೃಷ್ಟಾಂತ),೪೦೬.

**೮೮. ಅಶರೀರತಾ, ಅಶರೀರತ್ವಮ್-**
ಪರಮಾರ್ಥವಾಗಿ ಶರೀರವಿಲ್ಲದವನಾಗಿರುವ ಮುಕ್ತಿ, ೪೨, ೫೮, ೩೨೧.

**೮೯. ಅಸಂಹತ–**
ಮತ್ತೊಂದರೊಡನೆ ಕೂಡಿಕೊಂಡು ಮತ್ತೊಂದಕ್ಕಾಗಿರುವ ಸ್ವಭಾವದವನಲ್ಲದ (ಆತ್ಮ), ೬೬, ೭೨.

**೯೦. ಅಶ್ಮಾನಿ–**
ಬಗೆಬಗೆಯ ಬೆಲೆಯುಳ್ಳ ಕಲ್ಲುಗಳು (ಬ್ರಹ್ಮಕ್ಕೆ ವಿಚಿತ್ರಶಕ್ತಿಯಿರಬೇಕೆಂಬುದಕ್ಕೆ ದೃಷ್ಟಾಂತ), ೪೫೭.

**೯೧. ಅಸಙ್ಗ–**
ಮತ್ತೊಂದರ ಅಂಟಿಲ್ಲದ (ಆತ್ಮ), ೫, ೨೬೯.

**೯೨. ಅಸತ್–**
ಇಲ್ಲದಂತಿರುವ (ಅವ್ಯಾಕೃತನಾಮರೂಪ) ೪೪೫, (ನಿರಾತ್ಮಕವಾದ ಶೂನ್ಯ) ೩೬೮.

**೯೩. ಅಸತ್ಕಾರ್ಯವಾದ–**
ಕಾರ್ಯವು ಹುಟ್ಟುವ ಮುಂಚೆ– ಇರುವದೇಇಲ್ಲವೆಂಬ ವೈಶೇಷಿಕರ ಮತ್ತು ಬೌದ್ಧರ ವಾದ, ೪೨೬, ೪೪೬.

**೯೪. ಅಸತ್ಯ–**
ಪರಮಾರ್ಥವಲ್ಲದ, ಹುಸಿತೋರಿಕೆ, ೪೩೭.

**೯೫. ಅಸ್ಮತ್ಪ್ರತ್ಯಯಗೋಚರ, ಅಸ್ಮತ್ಪ್ರತ್ಯಯವಿಷಯ–**
ನಾನೆಂಬ ಅರಿವಿಗೆ ವಿಷಯನಾದ (ಆತ್ಮ) ೧, ೩.

**೯೬. ಅಹಂಪ್ರತ್ಯಯವಿಷಯಃ–**
ನಾನೆಂಬ ಅರಿವಿಗೆ ವಿಷಯನಾದ (ಕಲ್ಪಿತಾತ್ಮ, ಸಾಕ್ಷಿಯಲ್ಲ) ೪೯, ೫೪, ೫೮.

**೯೭. ಅಹಂಪ್ರತ್ಯಯೀ–**
ನಾನೆಂಬ ಪ್ರತ್ಯಯಕ್ಕೆ ಆಶ್ರಯವಿಷಯನಾಗಿರುವ ಜೀವ, 'ಅಹಂಕರ್ತೃ'; ವೇದಾಂತದಲ್ಲಿ ಹೇಳಿರುವ ಸಾಕ್ಷಿರೂಪನಾದ ಆತ್ಮನಲ್ಲ, ೮, ೪೯, ೫೪.

**೯೮. ಅಹೇಯಾನುಪಾದೇಯ, ಹೇಯೋಪಾದೇಯರಹಿತ–**
ಬಿಡುವದಕ್ಕಾಗಲಿ ತೆಗೆದುಕೊಳ್ಳುವದಕ್ಕಾಗಲಿ ಆಗದ (ಆತ್ಮವಸ್ತು, ೩೮, ೫೧, ೫೨, ೬೩.

**೯೯. ಆಕಾಶಃ–**
ಪ್ರತ್ಯಕ್ಷವಲ್ಲದಿದ್ದರೂ ಅದರಲ್ಲಿ ಅಧ್ಯಾಸ ಮಾಡುವರೆಂಬುದಕ್ಕೆ ದೃಷ್ಟಾಂತ ೩; ಒಂದೇ ಆಗಿದ್ದರೂ ಘಟಾಕಾಶ ಕರಕಾಕಾಶವೆಂಬ ಭೇದವ್ಯವಹಾರವು ಅಥವಾ ವಿಭಾಗವು ಇರಬಹುದು, ೭೧, ೪೩೨. ಇವನ್ನು ಆಕಾಶ ಘಟಾಕಾಶನ್ಯಾಯ (ಜೀವೇಶ್ವರವಿಭಾಗಕ್ಕೆ ದೃಷ್ಟಾಂತ)ವೆನ್ನುವರು, ೪೫೬.

**೧೦೦. ಆಕೃತಿಃ–**
ಸಾಮಾನ್ಯ, ವ್ಯಕ್ತಿಯಲ್ಲ, ೨೮೬.

**೧೦೧. ಆಚಾರ್ಯಃ–**
ಶಾಸ್ತ್ರವನ್ನು ಬೋಧಿಸುವ ಬಾದರಾಯಣ, ಗೌತಮ– ಮೊದಲಾದವರು, ೪೫, ೨೧೫, ೨೧೬, ೨೯೭, ೩೬೩, ೩೮೨, ೩೮೩, ೩೮೪, ೩೮೬.

**೧೦೨. ಆಗಮಃ–**
ವೇದಾಂತಶಾಸ್ತ್ರ, ೪೧೬, ೪೨೮, ೪೨೯, ೪೩೦.

